# AYURVĒDASARA

## PART II. (Vol. 1.)

BY


**P RAMAKRISHNAIYA, B. A,**

*Retired District Registrar*




# ಆಯುರ್ವೇದಸಾರ

## ದ್ವಿತೀಯ ಭಾಗ (ಪೂರ್ವಖಂಡ)

(ನಿದಾನ ಮತ್ತು ಚಿಕಿತ್ಸೆ)

ಮಾಜಿ ಜಿಲ್ಲಾ ರಜಿಸ್ತ್ರಾರರಾದ

**ಪ ರಾಮಕೃಷ್ಣಯ್ಯ, ಬಿ ಎ,**

ಇವರಿಂದ ರಚಿತವಾದದ್ದು




PUBLISHED BY THE AUTHOR

MANGALORE

1933


**Price: Rs. 6-8-0]**  [ಕ್ರಯ ರೂ ೬-೮-೦

Copies can be had of

*The Author,*

1951

or



*The Basel Mission Book and Tract Depository,*
*MANGALORE*

ಪ್ರತಿ ಬೇಕಾದವರು ಗ್ರಂಥಕರ್ತರಿಗಾಗಲಿ,

ಮಂಗಳೂರಲ್ಲಿರುವ 'ಬಾಸೆಲ್ ಮಿಶ್ಯನ್ ಬುಕ್ ಎಂಡ್ ಟ್ರೆಕ್ಟ್ ಡಿಪೋ'ದ ಮನೆಜರರಿಗಾಗಲಿ

ಬರಕೊಳ್ಳಬೇಕು.




PRINTED BY F H RAULEDER AT THE BASEL MISSION PRESS, MANGALORE S K

# ಪ್ರಸ್ತಾವನೆ

ಈ ದಕ್ಷಿಣಕನ್ನಡ ಜಿಲ್ಲೆಯ ತೌಳವ ಬ್ರಾಹ್ಮಣರಲ್ಲಿ ಆಂಗ್ಲಭಾಷಾವಿದ್ಯೆಯನ್ನು ಸಂಪಾದಿಸುವ ಇಚ್ಛೆಯು ಮೂಡಿ ಬಹು ಬಾಲ್ಯಾವಸ್ಥೆಯಲ್ಲಿರುವಾಗ್ಗೆ (ಆ ಜಾತಿಯವರಲ್ಲಿ ನನಗಿಂತ ಮುಂಚೆ ಒಬ್ಬರು ಮಾತ್ರ ಬಿ. ಎ. ಪರೀಕ್ಷೆಯನ್ನು ಕೊಟ್ಟು ತೇರುಗಡೆಪಟ್ಟಿದ್ದರಷ್ಟೆ), ಅನಾದಿಯಿಂದ ಬ್ರಾಹ್ಮಣಜಾತಿಯವರಿಗೆ ಉತ್ಕೃಷ್ಟವಾದ ವೃತ್ತಿ ಎನ್ನಿಸಿಕೊಂಡಿದ್ದ ಪೌರೋಹಿತ್ಯ ಮುಂತಾದ ವೈದಿಕವೃತ್ತಿಯನ್ನು ಅವಲಂಬಿಸಿಕೊಂಡು, ಸಾತ್ವಿಕಮಾರ್ಗದಲ್ಲಿ ಕಷ್ಟದಿಂದ ಜೀವನ ಕಳೆಯುತ್ತಿದ್ದ ನನ್ನ ತೀರ್ಥರೂಪ ತಂದೆ (ಸ್ವರ್ಗತ) ರಾಮಚಂದ್ರ ಉಪಾಧ್ಯಾಯರಲ್ಲಿ ನನಗೆ ಆ ನವೀನ ವಿದ್ಯೆಯನ್ನು ಅಭ್ಯಾಸಮಾಡಿಸುವ ಹಾಗೆ ಭಗವಂತನು ("ಧಿಯೋ ಯೋ ನಃ ಪ್ರಚೋದಯಾತ್") ಬುದ್ಧಿಪ್ರಚೋದನವನ್ನು ಮಾಡಿ, ಅನಂತರ ಅವರ ಆ ಉದ್ಯಮವು ಸಫಲವಾಗುವಂತೆ ನಾನಾ ವಿಧಗಳಿಂದ ಅನುಕೂಲತೆಗಳನ್ನು ಒದಗಿಸಿಕೊಟ್ಟದರಿಂದ, ಅದರ ಪರಿಣಾಮವಾಗಿ ನಾನು ಸರಕಾರಿ ಉದ್ಯೋಗವನ್ನು ಹೊಂದಿ, ಆ ಪದವಿಯ ಕಾರ್ಯಗಳನ್ನು ಸರ್ವಶಃ ಸಮರ್ಪಕವಾಗಿ ನಡಿಸುವದಕ್ಕೆ ಬೇಕಾದ ಶ್ರಮಗಳನ್ನೆಲ್ಲ ತೆಗೆದುಕೊಳ್ಳುತ್ತಿರುವ ಕಾಲದಲ್ಲಿ, ಹೆಚ್ಚುಳಿದ ನನ್ನ ಸಮಯಗಳನ್ನು ಆಯುರ್ವೇದೀಯ ವೈದ್ಯದ ಪರಿಚಯವನ್ನು ಮಾಡಿಕೊಳ್ಳಲು ಉಪಯೋಗಿಸುವದಕ್ಕೆ ಒದಗಿದ ಪ್ರಸಂಗವನ್ನೂ, 'ಆಯುರ್ವೇದಸಾರ' ಎಂಬ ಗ್ರಂಥವನ್ನು ರಚಿಸುವದಕ್ಕೆ ಉಂಟಾದ ಹೇತುಗಳನ್ನೂ, ಆ ಗ್ರಂಥದ ಪ್ರಥಮ ಭಾಗದ ಪ್ರಸ್ತಾವನೆಯಲ್ಲಿ ಸೂಚಿಸಿರುತ್ತೇನೆ.

ಆ ಪುಸ್ತಕವನ್ನು ಮುದ್ರಿಸಿ ಪ್ರಕಟಿಸುವದಕ್ಕೆ ನನಗೆ ತಗಲಿದ ಖರ್ಚು ಅದರ ಪ್ರತಿಗಳ ವಿಕ್ರಯದಿಂದ ನನಗೆ ಹುಟ್ಟಿಬಂದಲ್ಲಿ, ಆ ಗ್ರಂಥದ ಎರಡನೆಯ ಭಾಗವನ್ನು ಪ್ರಕಟಿಸುವೆನಾಗಿ ನಾನು ಆ ಸಂದರ್ಭದಲ್ಲಿ ಹೇಳಿದುದಕ್ಕೆ ಅನುಗುಣವಾಗಿ, ಆ ಭಾಗವನ್ನು ಬರೆಯುವದಕ್ಕೆ ನಾನು ಬೇಗನೆ ತೊಡಗಿದಾಗ್ಯೂ, ಅದನ್ನು ಮುಗಿಸುವದಕ್ಕೆ ಬಹು ವರ್ಷಗಳು ಬೇಕಾದವು. ಅದನ್ನು ಮುದ್ರಿಸಿ ಪ್ರಕಟಿಸುವ ಆಲೋಚನೆ ಮಾಡುವಾಗ್ಗೆ, ಆರುನೂರೇ ಪ್ರತಿಗಳನ್ನು ಮಾಡಿಸುವದಾದರೂ, ಅದರ ಮುದ್ರಣಕ್ಕೇನೇ ಸುಮಾರು 6300 ರೂಪಾಯಿಯಷ್ಟು ಖರ್ಚು ತಗಲಬಹುದೆಂತ ಕಂಡಿತು. ಒಂದನೇ ಭಾಗವನ್ನು ಹೊರಡಿಸುವದಕ್ಕೆ ನನಗೆ ತಗಲಿದ ಖರ್ಚನ್ನೂ ಅದರ ಪ್ರತಿಗಳ ವಿಕ್ರಯದಿಂದ ನನಗೆ ಕೂಡಿಬಂದ ಹಣದ ಮೊತ್ತವನ್ನೂ ನೋಡಿದ್ದಲ್ಲಿ, ಖರ್ಚು ಭರ್ತಿಯಾಗುವದಕ್ಕೆ ರೂಪಾಯಿ 974ರಷ್ಟು ಬಾಕಿ ಇದೆ ಎಂತಲೂ ತೋರಿತು. ಈ ಸಂಗತಿಯನ್ನೂ, ಕನ್ನಡ ವೈದ್ಯಮಂಡಲದ ಅಥವಾ ಬೇರೆ ಶ್ರೀಮಂತರ ದ್ರವ್ಯಸಹಾಯ ಸಾಕಷ್ಟು ದೊರೆಯುವ ಪ್ರತೀಕ್ಷೆ ತೋರಿದ ವಿನಾ ಎರಡನೆಯ ಭಾಗವನ್ನು ಅಚ್ಚುಹಾಕಿಸುವದು ಸಾಧ್ಯವಲ್ಲ ಎಂಬ ವಿದ್ಯಮಾನವನ್ನೂ, 1928ನೇ ಇಸವಿಯಲ್ಲಿ ಪ್ರಕಟಿಸಿದೆ. ಆದರೆ ಅದರಿಂದ ನಾನು ನಿರೀಕ್ಷಿಸಿದ್ದ ಅಭಯ ದೊರೆಯಲಿಲ್ಲ.

1923ನೇ ಇಸವಿಯಲ್ಲಿ ಮಾನ್ಯಗೃಹಸ್ಥರಾಗಿ ಈ ಊರಲ್ಲಿದ್ದ ಉಳ್ಳಾಲ ಬಾಬುರಾಯರ ಪರಿಚಯ ನನಗೆ ಉಂಟಾಯಿತು. ಅವರು ನನ್ನ ನಡತೆಗೂ, ನಾನು ಆಯುರ್ವೇದಜ್ಞಾನದ

ಪ್ರಚಾರಕ್ಕಾಗಿ ಮಾಡುತ್ತಿದ್ದ ಸಾಹಸಕ್ಕೂ ಮೆಚ್ಚಿ, ನನ್ನಲ್ಲಿ ವಿಶೇಷವಾದ ಅಭಿಮಾನವನ್ನಿಡುವವರಾದರು; ಮತ್ತು ನನ್ನ ಸ್ಥಿತಿಗತಿಗಳನ್ನು ಆಲೋಚಿಸಿ, ನನ್ನ ಚಿಕಿತ್ಸೆಯಿಂದ ಗುಣಹೊಂದಿದವರೊಳಗೆ ಯಾರಾದರು ತಾವಾಗಿ ನನಗೆ ದ್ರವ್ಯಸಹಾಯ ಮಾಡಲು ಇಚ್ಛಿಸಿದರೆ ನಾನು ಅವರ ಆ ಸಹಾಯವನ್ನು ನಿರಾಕರಿಸಬಾರದೆಂತ ನನಗೆ ಬೋಧಿಸಿದರು. ಆ ಆಲೋಚನೆಯು ಆರಂಭದಲ್ಲಿ ನನಗೆ ಎಷ್ಟಕ್ಕೂ ಹಿತವಾಗಿ ಕಾಣದಿದ್ದರೂ, ನನಗಿಂತಲೂ ವಯೋವೃದ್ಧರೂ ವಿದ್ಯಾವಂತರೂ ಆಗಿದ್ದ (ಅವರು ಬಿ ಎಲ್. ಪರೀಕ್ಷೆ ಪಾಸಾಗಿ, 'ಮುನ್ಸಿಫ' ಪದವಿಯಲ್ಲಿದ್ದು, ಪೆನ್ಶನಿನ ಮೇಲೆ ಕೆಲಸದಿಂದ ನಿವೃತ್ತರಾದವರಾಗಿದ್ದರು) ಆ ಮಹಾಶಯರ ನಿಷ್ಕಪಟವಾದ ಬೋಧನ ಸಹ ಹರಿಪ್ರೇರಿತವಾಗಿರಬಹುದೆಂಬ ಭಾವನೆ ನನ್ನಲ್ಲಿ ಕ್ರಮೇಣ ಮೂಡಿತು ಆದ್ದರಿಂದ, ನಾನು "ಆಯುರ್ವೇದೀಯ ಚಿಕಿತ್ಸೆಯನ್ನು ಧರ್ಮಾರ್ಥವಾಗಿ ನಡಿಸಿ, ಆ ವೈದ್ಯದ ಜ್ಞಾನವನ್ನು ಲೋಕದಲ್ಲಿ ಹಬ್ಬಿಸುವದಕ್ಕೆ ಮಾಡುವ ಪ್ರಯತ್ನವು ಸಫಲವಾಗುವಂತೆ ಯಥಾಶಕ್ತಿ ಸಹಾಯ ಮಾಡಿ ಉತ್ತೇಜನ ಕೊಡುವದು ಪುಣ್ಯ ಕೆಲಸ ಎಂಬ ಭಾವನೆಯಿಂದ ನಾವು ಈ ಕೆಳಗೆ ಕಾಣಿಸುವ ಸಹಾಯವನ್ನು ಮಾಡಲು ಪ್ರೇರಿತರಾಗಿದ್ದೇವೆ" ಎಂಬ ಶಿರೋಲೇಖವನ್ನು ವಂತಿಗೆ ಪಟ್ಟಿಯಲ್ಲಿ ಬರೆದು, ಅದನ್ನು ದಾತೃಗಳಾಗಲುಳ್ಳವರಿಗೆ ಓದಿ ತಿಳಿಸಿದ್ದಲ್ಲಿ, ಅವರು ಆ ಭಾವನೆಯಿಂದಲ್ಲದೆ ನಾನು ಮಾಡಿದ ಚಿಕಿತ್ಸೆಯ ಪ್ರತಿಫಲವಾಗಿ ಹಣ ಕೊಡುವದಲ್ಲ ಎಂತ ತೋರಿದರೆ ಮಾತ್ರ, ಅವರ ಸಹಾಯವನ್ನು ನಾನು ಪಡಯುವನೆಂದು ಕೊನೆಗೆ ಹೇಳಿದೆ ಹೀಗೆ ಒಂದು ವಂತಿಗೆಪಟ್ಟಿಯು ತೆರೆಯಲ್ಪಡಲಾಯಿತು. ಆ ಪಟ್ಟಿಯಲ್ಲಿ ಆ ಉದಾರಪುರುಷರೇ ಒಂದನೇ ದಾತೃಗಳಾಗಿ ರೂಪಾಯಿ 250ನ್ನು ಒಡನೆ ಕೊಟ್ಟು ತನಗೆ ಮುಂದೆ ಸಿಕ್ಕುವ ಪ್ರತಿ ತಿಂಗಳ ಪೆನ್ಶನ್ ಐವಜಿಯಿಂದ ರೂಪಾಯಿ 30ರಂತೆ ನನಗೆ ಕೊಡುತ್ತಾ ಬರುತ್ತೇನಾಗಿ ವಾಗ್ದಾನ ಮಾಡಿದರು. ಇಷ್ಟಲ್ಲದೆ ನನಗೆ ಸಹಾಯ ಮಾಡುವ ಉದ್ದೇಶದಿಂದ ರೂ 70 ಕ್ರಯ ಬಾಳುವಷ್ಟು ನನ್ನ ಪುಸ್ತಕಗಳ ಪ್ರತಿಗಳನ್ನು ಮೊದಲೇ ಕೊಂಡುಕೊಂಡಿದ್ದರು. ಅವರ ಆ ವಾಗ್ದಾನ ಪ್ರಕಾರ ಅನಂತರದ ಒಂದು ತಿಂಗಳ ಪನ್ಶನ್‌ನಿಂದ ರೂಪಾಯಿ 30ನ್ನು ನನಗೆ ಕೊಟ್ಟರು. ಆ ಮೇಲೆ ಒಂದು ತಿಂಗಳ ಕಾಲ ಕಳೆಯುವದರೊಳಗೆ, ಹೃದಯದ ವ್ಯಾಪಾರ ನಿಂತು, ಅಕಸ್ಮಾತ್ ಎಂಬ ಹಾಗೆ, ಅವರು ಸ್ವರ್ಗಸ್ಥರಾದ್ದರಿಂದ, ಅವರು ಕೊಡಲು ಸಂಕಲ್ಪಿಸಿದ ಮುಂದಿನ ಕಂತುಗಳ ಸಹಾಯದ್ರವ್ಯಾಂಶಗಳನ್ನು ಪಡೆಯುವದಕ್ಕೆ, ಕಾಲಮಹತ್ತ್ವದಿಂದ ನನಗೆ ಯೋಗ್ಯತೆ ಇಲ್ಲವಾಯಿತು. ಆದಾಗ್ಯೂ ಆ ಪಟ್ಟಿಯಮುಖವಾಗಿ ನನಗೆ ಈ ವರಗೆ ಒಟ್ಟು ರೂಪಾಯಿ 1280 ಕೂಡಿಬಂತು. ಅದರಿಂದ ನನ್ನ ಆಯುರ್ವೇದಸಾರದ ಪ್ರಥಮ ಭಾಗವನ್ನು ಪ್ರಕಟಿಸುವದಕ್ಕೆ ನನಗೆ ತಗಲಿದ ಖರ್ಚು ಭರ್ತಿಯಾದ ಹಾಗೆ ಆಯಿತು. ಸಾತ್ತ್ವಿಕಸುಖವು ಆರಂಭದಲ್ಲಿ ಕಹಿಯಾಗಿ ಕಂಡರೂ ಕೊನೆಗೆ ಅಮೃತಪ್ರಾಯವಾಗುವದು ಎಂಬ ಭಗವಂತನ ಗೀತಾವಚನಕ್ಕೆ ನನಗೊಂದು ಸಾದೃಶ್ಯವಿದು ಎಂತ ತಿಳಿದೆ. ಸತ್ತ್ವಗುಣಾಢ್ಯರಾದ ಆ ಮಹಾಶಯರ ಆತ್ಮಕ್ಕೆ ಚಿರಶಾಂತಿ ಇರಲಿ ಎಂದು ನನ್ನಂತೆ, ನನ್ನ ಈ ಪುಸ್ತಕ ಸಾಕಷ್ಟು ಪ್ರಯೋಜನವುಳ್ಳದ್ದೆಂತ ತಿಳಿಯುವ ಅದರ ವಾಚಕರು ಸಹ, ಭಗವಂತನನ್ನು ಪ್ರಾರ್ಥಿಸುವದು ಯುಕ್ತ ಕಾಣುತ್ತದೆ. ಯಾಕೆಂದರೆ, ಅವರ ಆ ಪ್ರವೃತ್ತಿ ಉಂಟಾಗದಿದ್ದದ್ದರೆ, ಈ ಪುಸ್ತಕ ಪ್ರಕಟವಾಗುವ ಸಂಭವ ಇರುತ್ತಿರಲಿಲ್ಲ.

ಈ ಸಂಬಂಧವಾಗಿ ನನಗೆ ದ್ರವ್ಯಸಹಾಯವನ್ನಿತ್ತ ಬೇರೆ ಗೃಹಸ್ಥರೊಳಗೆ ಒಬ್ಬರು

115 ರೂಪಾಯಿ, ಮತ್ತು ಮೂವರು ಒಂದು ನೂರು ರೂಪಾಯಿ ಪ್ರಕಾರ, ನನಗೆ ಕೊಟ್ಟಿದ್ದಾರೆ. ಅವರ ಹೆಸರುಗಳನ್ನು ಇಲ್ಲಿ ಕಾಣಿಸುವದಕ್ಕೆ ಅವರ ಸಮ್ಮತಿ ಇಲ್ಲದರಿಂದ ಬಿಡಬೇಕಾಯಿತು. ಇವರೇ ಮೊದಲಾದ ಎಲ್ಲಾ ದಾತೃಗಳಿಗೂ ಅವರ ಈ ಪ್ರವರ್ತನೆಯಿಂದ ಭಗವಂತನು ಸಂತುಷ್ಟನಾಗಿ ಅವರ ಇಷ್ಟಾರ್ಥಗಳನ್ನು ದಯಪಾಲಿಸುವವನಾಗಲಿ ಎಂದು ಪ್ರಾರ್ಥಿಸುತ್ತೇನೆ.

ನನ್ನ 'ಆಯುರ್ವೇದಸಾರ'ದ ಪ್ರಥಮ ಭಾಗವನ್ನು ಮುದ್ರಿಸಿ ಹೊರಡಿಸಿದ ಮೇಲೆ, ಎರಡನೇ ಭಾಗವು ಸಿದ್ಧವಾಯಿತೋ? ಅದರ ಒಂದು ಪ್ರತಿಯನ್ನು ತನಗೆ ಕಳುಹಿಸಿಕೊಡಬೇಕು, ಎಂಬ ಅರ್ಥದ ಪತ್ರಗಳು ನನಗೆ ಬಹಳವಾಗಿ ಬರುತ್ತಿರುವದನ್ನು ಆಲೋಚಿಸಿದರೆ, ಒಂದನ್ನೇ ಭಾಗವನ್ನು ಕೊಂಡುಕೊಂಡವರೊಳಗೆ ಬಹು ಮಂದಿ ಎರಡನೆಯ ಭಾಗವನ್ನು ನೋಡುವ ಕುತೂಹಲದಲ್ಲಿದ್ದಾರೆ ಎಂತ ಕಾಣುತ್ತದೆ. ಅದಲ್ಲದೆ ಎರಡನೆಯ ಭಾಗವನ್ನು ಅಚ್ಚು ಹಾಕಿಸದೆ ಬಿಟ್ಟರೆ, ಅದನ್ನು ಬರೆಯುವದಕ್ಕೆ ನಾನು ತೆಗೆದುಕೊಂಡ ಹತ್ತು ವರ್ಷಗಳ ಶ್ರಮ ವ್ಯರ್ಥವಾಗುತ್ತದೆ, ಮತ್ತು ಸುಮಾರು 42 ವರ್ಷಗಳಲ್ಲಿ ವೈದ್ಯವನ್ನು ಸೂಕ್ಷ್ಮರೀತಿಯಿಂದ ನಡಿಸಿ ಪಡೆದ ಅನುಭವದ ಮೇಲೆ ನನ್ನಿಂದ ನವೀನವಾಗಿ ಕಲ್ಪಿಸಲ್ಪಟ್ಟು, ಬಹು ಫಲಕಾರಿಯಾಗಿ ಕಂಡುಬಂದ ಮಾತ್ರೆ, ಲೇಹ, ತೈಲ, ಷರಬತ್ತು ಮುಂತಾದ ಔಷಧಗಳ ಯೋಗಗಳು ಲೋಕಕ್ಕೆ ನಷ್ಟಪ್ರಾಯವಾಗುವದಾಗುತ್ತದೆ. ಇಷ್ಟು ಮಾತ್ರವಲ್ಲ, ಆದರಣೀಯವಾದ ವೈದ್ಯಗ್ರಂಥಗಳಲ್ಲಿ ಕಾಣುವ ರೋಗಗಳ ವರ್ಣನಗಳಿಗಾಗಲಿ, ಪರಿಹಾರಗಳಿಗಾಗಲಿ, ವಿಶೇಷ ಗಮನಕೊಡದೆ, ಚಿಕಿತ್ಸೆಮಾಡಬೇಕಾದ ರೋಗದ ಹೇತುಗಳು, ಅದಕ್ಕೆ ಕಾರಣವಾದ ದೋಷಗಳು, ಮುಂತಾದವುಗಳ ವಿಚಾರದ ಮೇಲೆ ಸುಲಭವಾಗಿ ಸಿಕ್ಕುವ ಔಷಧದ್ರವ್ಯಗಳೊಳಗೆ ಚನ್ನಾಗಿ ಪರಿಚಯವುಳ್ಳವುಗಳನ್ನೇ, ಬೇರೆ ಬೇರೆಯಾಗಿಯೋ, ಯೋಜಿಸಿಯೋ, ಉಪಯೋಗಿಸಿ, ಆ ರೋಗವನ್ನು ಹೇಗೆ ಗುಣಮಾಡಬಹುದೆಂಬದಕ್ಕ ದೃಷ್ಟಾಂತಗಳನ್ನು ಕೊಟ್ಟು ವರ್ಣಿಸುವ ಎರಡನೆಯ ಭಾಗವು ಒಂದನೇ ಭಾಗದಲ್ಲಿ ಅಡಗಿದ ಸೂತ್ರಗಳ ಸಾರವನ್ನು ಗ್ರಹಿಸಿ ಸ್ಪಷ್ಟವಾಗಿ ತಿಳಿಯುವದಕ್ಕೆ ಬಹಳ ಸಹಾಯಕರವಾಗಬೇಕು. ಇದನ್ನೆಲ್ಲ ಆಲೋಚಿಸಿ, ವಂತಿಗೆಪಟ್ಟಿಯ ಮೂಲಕ ದೊರೆತ ಹಣ ಸೇರಿಯೂ, ನನ್ನ ದ್ರವ್ಯಾನುಕೂಲವು ಎರಡನೇ ಭಾಗವನ್ನು ಪೂರ್ಣವಾಗಿ ಅಚ್ಚುಹಾಕಿಸುವದಕ್ಕೆ ಸಾಲದಾದ್ದರಿಂದ, ಅದನ್ನು ಮೂರು ಖಂಡಗಳಾಗಿ ವಿಭಾಗಿಸಿ, ಪ್ರಥಮದ ಒಂದು ಖಂಡವನ್ನು ಮುದ್ರಿಸುವದಕ್ಕ ನಾನು ಉದ್ಯುಕ್ತನಾದ್ದಾಗಿರುತ್ತದೆ.

ಬಾಸೆಲ್ ಮಿಶ್ಯನ್ ಪ್ರೆಸ್ಸಿನವರು ಇಂಥಾ ಪುಸ್ತಕವನ್ನು ಮುದ್ರಿಸಿ ಬೇಕಾದಷ್ಟು ಪ್ರತಿಗಳನ್ನು ಒದಗಿಸಿಕೊಡುವ ಕೆಲಸಕ್ಕೆ ಸಾಧಾರಣವಾಗಿ ಕೇಳುವ ಪ್ರತಿಫಲದ ದರಗಳನ್ನು, ನನ್ನ ಅವಸ್ಥ ನೋಡಿ, ಬಹಳ ಮಟ್ಟಿಗೆ ತಗ್ಗಿಸಿದುದಕ್ಕಾಗಿ ನಾನು ಅವರಿಗೆ ತುಂಬ ಕೃತಜ್ಞನಾಗಿರುತ್ತೇನೆ ಅವರ ಈ ಪ್ರವರ್ತನದಿಂದ ನನಗೆ ಬಹಳ ಉತ್ತೇಜನವಾಯಿತು.

ಮುದ್ರಣ-ಯಂತ್ರಾಲಯದಿಂದ ನನ್ನ ಶೋಧನೆಗೆ ಬಂದ ಮುದ್ರಿತವಾದ ಕಾಗದಗಳನ್ನು ಓದಿ ನೋಡುವದಕ್ಕೆ ಸಹ ಜನಸಹಾಯ ದೊರೆಯದೆ, ಈ ಪುಸ್ತಕವನ್ನು ನಾನೇ ಬರೆದು ಶೋಧಿಸಬೇಕಾಗಿ ಬಂದ ಅವಸ್ಥೆಯನ್ನೂ, ನನ್ನ ವಾರ್ಧಿಕ್ಯದ (ನನ್ನ ಪ್ರಾಯದ 72ನೇ ವರ್ಷ ಅಂತ್ಯವಾಗುವದಕ್ಕೆ ಸಮೀಪಿಸಿತು.) ಸ್ವಾಭಾವಿಕವಾದ ಕುಂದುಕೊರತೆಗಳನ್ನೂ, ಆಲೋಚಿ

ಸುವಾಗ್ಗೆ, ನಾನು ಎಷ್ಟು ಶ್ರಮಪಟ್ಟಾಗ್ಯೂ, ಇದರಲ್ಲಿ ದೋಷಗಳು ಇಲ್ಲದಿರವು ಎಂತ ತೋರುತ್ತದೆ. ಆದರೆ ಸ್ವಾರ್ಥವಿಲ್ಲದೆ ಜನೋಪಕಾರದ ದೃಷ್ಟಿಯಿಂದಲೇ ತೊಡಗಿ ಪೂರಯಿಸಿದ ನನ್ನ ಈ ಉದ್ಯಮವನ್ನು ಭಗವಂತನು ಸಾರ್ಥಕಗೊಳಿಸದಿರಲಾರನು ಎಂತ ನಂಬಿದ್ದೇನೆ.

"ಹರಿಪ್ರೀತಿರಸ್ತು! ಸರ್ವೇ ಜನಾಃ ಸುಖಿನೋ ಭವನ್ತು!"
ದೇವರು ಪ್ರೀತನಾಗಲಿ! ಸರ್ವ ಜನರು ಸುಖವಂತರಾಗಿರಲಿ'

ಮಂಗಳೂರು,
(ಕಂಬಳದ ಹೊಸ ರಸ್ತೆ)
ತಾ 17ನೇ ಜನವರಿ 193[illegible]

*P. Ramakrishnaiya.*

# ಆಯುರ್ವೇದಸಾರ - ದ್ವಿತೀಯ ಭಾಗದ
# ವಿಷಯಾನುಕ್ರಮಣಿಕೆ.

ವಿಷಯ. ಪುಟ

## 1ನೇ ಪರಿಶಿಷ್ಟ — ದ್ರವ್ಯಗಣಗಳು.



ವಿಷಯ ಪುಟ

## 2ನೇ ಪರಿಶಿಷ್ಟ — ಪ್ರತಿನಿಧಿ ದ್ರವ್ಯಗಳು.

ಆ. ದ್ವಿತೀಯ ಭಾಗದ ಪೂರ್ವಖಂಡ

## ಅಧ್ಯಾಯ I.

### ಉನ್ಮಾದ (ಹುಚ್ಚು).

## ಅಧ್ಯಾಯ II

### ಅಪಸ್ಮಾರ ಮತ್ತು ಅತತ್ವಾಭಿನಿವೇಶ.



## ಅಧ್ಯಾಯ III.

### ಮೂರ್ಛಾ (ಮೂರ್ಛೆ).—(ಭ್ರಮ, ನಿದ್ರಾ, ತನ್ದ್ರಾ, ಕ್ಲಮ, ಸನ್ನ್ಯಾಸ, ಮದ, ಮದ್ಯಜ ಮದ.)

## ಅಧ್ಯಾಯ IV

### ಪಾನಾತ್ಯಯ.

## ಅಧ್ಯಾಯ V

### ರಾಜಯಕ್ಷ್ಮ (ಶೋಷ, ಕ್ಷಯ).

## ಅಧ್ಯಾಯ VI.

### ಬಿಕ್ಕಟ್ಟು (ಬಿಕ್ಕಳಿಕೆ).

## ಅಧ್ಯಾಯ VII

### ಉಬ್ಬಸ (ಶ್ವಾಸ).

| ವಿಷಯ. | ಪುಟ |
|---|---|

## ಅಧ್ಯಾಯ IX.

### ಸ್ವರಭೇದ (ಸ್ವರಸಾದ, ಸ್ವರೋಪಘಾತ, ಸ್ವರಭಂಗ, ಸ್ವರಾಮಯ).

## ಅಧ್ಯಾಯ X.

ಬಾಯಾರಿಕೆ (ತೃಷ್ಣಾ, ತೃಷಾ, ಪಿಪಾಸಾ)



## ಅಧ್ಯಾಯ XI

ಅರುಚಿ (ಅರೋಚಕ, ಭಕ್ತೋಪಘಾತ, ಭಕ್ತದ್ವೇಷ, ಸಭಕ್ತಚ್ಛಂದ, ಅಭಕ್ತಚ್ಛಂದ)

## ಅಧ್ಯಾಯ XII.

### ದಾಹ (ಉರಿ, ಸುಡುತ, ಜ್ವಾಲೆ).

## ಅಧ್ಯಾಯ XIII
## ಹೃದ್ರೋಗ.



## ಅಧ್ಯಾಯ XIV.
## ಕ್ಷತಕ್ಷೀಣ (ಉರಃಕ್ಷತ).

## ಅಧ್ಯಾಯ XV

### ವಾಂತಿ (ಛರ್ದಿ, ವಮಿ).



## ಅಧ್ಯಾಯ XVI

### ಜ್ವರ.

## ಅಧ್ಯಾಯ XVII

### ಅತಿಸಾರ

## ಅಧ್ಯಾಯ XVIII

### ಜ್ವರಾತಿಸಾರ



## ಅಧ್ಯಾಯ XIX.

### 'ಗ್ರಹಣೀ' ರೋಗ

## ಅಧ್ಯಾಯ XX

## ಅಗ್ನಿಮಾಂದ್ಯಾಜೀರ್ಣ.

### (a) ಅಗ್ನಿಮಾಂದ್ಯ.



### (b) ಅಜೀರ್ಣ

# ಈ ಗ್ರಂಥವಿಭಾಗದಲ್ಲಿ ಉಪಯೋಗಿಸಲ್ಪಟ್ಟ ಸಂಕ್ಷಿಪ್ತ ಪದಗಳ ವ್ಯಾಖ್ಯೆ.

## *(a)* ಗ್ರಂಥಗಳ ಹೆಸರುಗಳನ್ನು ಸೂಚಿಸುವಂಥವು.

**ಅ.** (ಅರುಣದತ್ತ),—**ಚ.** (ಚರಕಸಂಹಿತೆ ಅಥವಾ ಚರಕ),—**ಚಿ. ಸಾ. ಸಂ.** (ಚಿಕಿತ್ಸಾಸಾರ ಸಂಗ್ರಹ),—**ಧ.** (ಧನ್ವಂತರಿ),—**ಧ. ನಿ.** (ಧನ್ವಂತರಿ ನಿಘಂಟು) ಮತ್ತು **ರಾ. ನಿ.** (ರಾಜನಿಘಂಟು),—**ನಿ. ರ.,** ಅಥವಾ **ನಿ. ರತ್ನಾಕರ** (ನಿಘಂಟು ರತ್ನಾಕರ),—**ನಿ ಸಂ. ವ್ಯಾ.** ಅಥವಾ **ನಿ. ಸಂ.** (ನಿಬಂಧಸಂಗ್ರಹ ವ್ಯಾಖ್ಯಾನ),—**ಬೃ. ನಿ.** (ಬೃಹನ್ನಿಘಂಟು),—**ಭಾ. ಪ್ರ.** (ಭಾವಪ್ರಕಾಶ),—**ಭಾ. ಪ್ರ. ವ್ಯಾ.** (ಭಾವಪ್ರಕಾಶದ ವ್ಯಾಖ್ಯಾನ),—**ಭೈ. ರ.** (ಭೈಷಜ್ಯರತ್ನಾವಳಿ),—**ರಾ. ವ.,** ಅಥವಾ **ರಾ.,** ಅಥವಾ **ರಾಜ ವಲ್ಲಭ** (ರಾಜವಲ್ಲಭ ನಿಘಂಟು),—**ವಾ** (ವಾಗ್ಭಟನ ಅಷ್ಟಾಂಗ ಹೃದಯಸಂಹಿತೆ, ಅಥವಾ ವಾಗ್ಭಟ),—**ವೈ. ಸಾ. ಸಂ.** (ವೈದ್ಯಸಾರಸಂಗ್ರಹ),—**ಶಾ** (ಶಾರ್ಙ್ಗಧರ ಸಂಹಿತಾ, ಅಥವಾ ಶಾರ್ಙ್ಗಧರ),—**ಸ. ವೃ. ವ.** (ಸಹಸ್ರಾರ್ಧವೃಕ್ಷಗಳ ವರ್ಣನೆ),—**ಸು** (ಸುಶ್ರುತ ಎಂಬ ಸಂಹಿತಾ, ಅಥವಾ ಸುಶ್ರುತ),—**ಹಾ.** (ಹಾರೀತಸಂಹಿತಾ ಎಂಬ ಹೆಸರುಳ್ಳ ಪುಸ್ತಕ),—ಇವುಗಳ ವ್ಯಾಖ್ಯೆಯು 1ನೇ ಭಾಗದ XXXII-XXXIIIನೇ ಪುಟಗಳಲ್ಲಿ ತೋರುತ್ತದೆ.

**ಅ ಸಂ.—ಅಷ್ಟಾಂಗ ಸಂಗ್ರಹ** ತ್ರಿಚ್ಚೂರಲ್ಲಿ 1913ನೇ ಇಸವಿಯಲ್ಲಿ ಪ್ರಕಟಿಸಲ್ಪಟ್ಟ 'ಇಂದು ವ್ಯಾಖ್ಯಾ' ಎಂಬ ವ್ಯಾಖ್ಯಾನದಿಂದ ಒಡಗೂಡಿದ, ಮೂರು ಭಾಗಗಳುಳ್ಳ ಗ್ರಂಥ. "ಅ. ಸಂ. II-134" ಎಂತ ಇದ್ದರೆ, ಆ ಅಷ್ಟಾಂಗ ಸಂಗ್ರಹದ ಎರಡನೆಯ ಭಾಗದ 134ನೇ ಪುಟ, ಎಂದು ಅರ್ಥ, ಹೀಗೆ ತಿಳಿಯಬೇಕು.

**ಆ. ದೀ —'ಆಯುರ್ವೇದದೀಪಿಕಾ' ಎಂಬ ಚರಕಸಂಹಿತೆಯ ವ್ಯಾಖ್ಯಾನ.** 1922ನೇ ಇಸವಿಯಲ್ಲಿ ಬೊಂಬಾಯಿಯಲ್ಲಿ ಪಾಂಡುರಂಗಜೀವಾಜಿ ಎಂಬವರು ಮುದ್ರಿಸಿ ಪ್ರಕಟಿಸಿದ 'ಚರಕಸಂಹಿತಾ' ಎಂಬ ಪುಸ್ತಕದಲ್ಲಿ ಅಡಗಿರುವಂಥಾದ್ದು.

**ಇಂ. ವ್ಯಾ.—ಇಂದು ವ್ಯಾಖ್ಯೆ.** 'ಅ. ಸಂ.' ಎದುರಿಗೆ ಬರೆದ ವಿವರ ನೋಡಿ.

**ಕೃ. ನಿ.—ಕೃಷ್ಣ ನಿಘಂಟು.** ಕೃಷ್ಣ ಎಂಬವರು ಮಲಯಾಳ ಭಾಷೆಯಲ್ಲಿ ರಚಿಸಿ ಪ್ರಕಟಿಸಿದ ಆಯುರ್ವೇದೀಯ ನಿಘಂಟು.

**ಗೂ. ದೀ.—ಗೂಢಾರ್ಥದೀಪಿಕಾ.** ಶಾರ್ಙ್ಗಧರಸಂಹಿತೆಯ ವ್ಯಾಖ್ಯಾನಗಳೊಳಗೆ ಒಂದು. 1920ನೇ ಇಸವಿಯಲ್ಲಿ ಬೊಂಬಾಯಿ ಪಾಂಡುರಂಗಜೀವಾಜಿಯವರು ಮುದ್ರಿಸಿ ಪ್ರಕಟಿಸಿದ 'ಶಾರ್ಙ್ಗಧರ ಸಂಹಿತಾ' ಎಂಬ ಪುಸ್ತಕದಲ್ಲಿ ತೋರುವಂಥಾದ್ದು.

**ದೀ.—ದೀಪಿಕಾ** ಶಾರ್ಙ್ಗಧರ ಸಂಹಿತೆಯ ಎರಡನೆಯ ವ್ಯಾಖ್ಯಾನ. ಮೇಲೆ 'ಗೂ. ದೀ.' ಎದುರಿಗೆ ವಿವರಿಸಲ್ಪಟ್ಟ ಪುಸ್ತಕದಲ್ಲಿ ಇರುವಂಥಾದ್ದು.

**ನಾ. ನಿ.—ನಾಡಕರ್ಣಿಯವರ ನಿಘಂಟು.** ಕೆ. ಎಮ್. ನಾಡಕರ್ಣಿಯವರು 1927ನೇ ಇಸವಿಯಲ್ಲಿ ರಚಿಸಿ ಪ್ರಕಟಿಸಿದ 'ಇಂಡ್ಯನ್ ಮೆಟೀರಿಯ ಮೆಡಿಕಾ' (Indian Materia Medica) ಎಂಬ ಹೆಸರಿನ ಇಂಗ್ಲಭಾಷೆಯಲ್ಲಿರುವ ನಿಘಂಟು.

**ಮ. ನಿ.— ಮದನಪಾಲ ನಿಘಂಟು.** ಮದನಪಾಲ ಎಂಬ ರಾಜರು ರಚಿಸಿ 'ಮದನ ವಿನೋದ' ಎಂಬ ಹೆಸರನ್ನಿಟ್ಟಿರುವ ಸರ್ವ ಔಷಧಗಳ ನಾಮಗುಣಗಳ ನಿಘಂಟು. ಕಲ್ಕತ್ತೆಯಲ್ಲಿ ಜೀವಾನಂದ ವಿದ್ಯಾಸಾಗರ ಭಟ್ಟಾಚಾರ್ಯರು ಮುದ್ರಿಸಿ ಪ್ರಕಟಿಸಿರುವ ಪುಸ್ತಕದ ಪ್ರತಿ.

**ಮ. ವ್ಯಾ. (ಅಥವಾ ಮಾ. ನಿ. ಮ ವ್ಯಾ.) — ಮಧುಕೋಶ ವ್ಯಾಖ್ಯಾನ.** 'ಮಾಧವ ನಿದಾನ' ಎಂಬ ಗ್ರಂಥದ ವ್ಯಾಖ್ಯಾನ. 'ಮಾ ನಿ' ಎದುರಿಗೆ ಬರೆಯಲ್ಪಟ್ಟ ವಿವರ ನೋಡಿ.

**ಮಾ ನಿ.— ಮಾಧವ ನಿದಾನ.** ಈ ಹೆಸರಿನ ಪ್ರಸಿದ್ಧ ಗ್ರಂಥ 1912ನೇ ಇಸವಿಯಲ್ಲಿ ಬೊಂಬಾಯಿ 'ನಿರ್ಣಯಸಾಗರ' ಎಂಬ ಹೆಸರಿನ ಮುದ್ರಣಾಲಯದಲ್ಲಿ ಮುದ್ರಿತವಾಗಿ ಪ್ರಕಟಿಸಲ್ಪಟ್ಟ, 'ಮಧುಕೋಶ' ಎಂಬ ವ್ಯಾಖ್ಯಾನಸಹಿತವಾಗಿರುವ, ಪುಸ್ತಕದ ಪ್ರತಿ.

**ರ. ಚಿ — ರಸೇಂದ್ರ ಚಿಂತಾಮಣಿ**
**ರ. ರ. — ರಸರತ್ನಾಕರ.**
ಇವೆರಡು ಗ್ರಂಥಗಳನ್ನು ಒಟ್ಟಾಗಿ ಕಲ್ಕತ್ತೆಯಲ್ಲಿ ಜೀವಾನಂದ ವಿದ್ಯಾಸಾಗರ ಭಟ್ಟಾಚಾರ್ಯರು ಮುದ್ರಿಸಿ ಪ್ರಕಟಿಸಿದ ಪುಸ್ತಕದ ಪ್ರತಿ.

**ವೈ ಜೀ. ದೀ — ವೈದ್ಯ ಜೀವನ ದೀಪಿಕೆ.** ಈ ಹಸರಿನಿಂದ ಮೈಸೂರು ಪುಟ್ಟಸಾಮಯ್ಯರ 'ದೀಪಿಕೆ' ಎಂಬ ಕನ್ನಡಾರ್ಥದೊಂದಿಗೆ ಮುದ್ರಿಸಿ ಪ್ರಕಟಿಸಲ್ಪಟ್ಟಿರುವ ಲೋಲಂಬರಾಜರ 'ವೈದ್ಯಜೀವನ' ಎಂಬ ಗ್ರಂಥದ ಪ್ರತಿ.

**ಶಾ ನಿ.— ಶಾಲಿಗ್ರಾಮ ನಿಘಂಟು** ಲಾಲಾಶಾಲಿಗ್ರಾಮಜೀಯವರ 'ಶಾಲಿಗ್ರಾಮೌಷಧ ಶಬ್ದಸಾಗರ' ಎಂಬ ಹೆಸರುಳ್ಳ ಹಿಂದೀ ಅರ್ಥದ ನಿಘಂಟು, ಬೊಂಬಾಯಿ "ಶ್ರೀ ವೆಂಕಟೇಶ್ವರ ಛಾಪಖಾನಾ" ಎಂಬ ಮುದ್ರಣಾಲಯದಲ್ಲಿ ವಿಕ್ರಮಾದಿತ್ಯ ವರ್ಷ 1952ನೇ ಮಾಘಮಾಸ ಬ. 2ನೇ ತಿಥಿಯಲ್ಲಿ ಮುದ್ರಿತವಾಗಿ ಪ್ರಕಟಿಸಲ್ಪಟ್ಟದ್ದೆಂತ ತೋರುವ ಪುಸ್ತಕ.

**ಹಾ ಸಂ — ಹಾರೀತ ಸಂಹಿತಾ.** ಈ ಗ್ರಂಥದ ವಿವರ 1ನೇ ಭಾಗದಲ್ಲಿ 'ಹಾ.'ದ ಎದುರಿಗೆ ಕೊಡಲ್ಪಟ್ಟದೆ.

## (b) ಔಷಧಗಳನ್ನು ಸೂಚಿಸುವಂಥವು.

ಅ, ಅಥವಾ ಅ. ಸೂ.— ಅಗಸ್ತ್ಯಸೂತರಾಜ ಮಾತ್ರೆ.

ಅತಿ., ಅಥವಾ ಅತಿಸಾರ., ಅಥವಾ ಅತಿಸಾರಮೂಲ.— ಅತಿಸಾರಮೂಲಘ್ನ ಮಾತ್ರೆ.

ಅ. ಶರ್ಕರಾ., ಅಥವಾ ಅ ಸ.— ಅಮೃತಬಳ್ಳಿಯ ಶಕ್ಕರೆ ಅಥವಾ ಸತ್ವ.

ಅ. ಸೂ. — ಮೇಲೆ 'ಅ.' ನೋಡಿ.

ಆ — ಆನಂದಭೈರವಿ ಮಾತ್ರೆ.

ಕ.— ಕರ್ಪೂರಾದಿ ಮಾತ್ರೆ.

ಕಾ. ಮುಲಾಂ.— ಕಾಚಿನ ಮುಲಾಮು

**ಕಾ. ವಟಕ.**— ಕಾಸೀಸಾದಿ ವಟಿಕ.

**ಕಾ. ಷರಬತ್.**— ಕಾಸೀಸ ಮಿಶ್ರ ಷರಬತ್ತು.

**ಕಸ್ತೂರಿ.**— ಕಸ್ತೂರ್ಯಾದಿ ಮಾತ್ರೆ.

**ಗು. ವಟಕ.**— ಗುಗ್ಗುಳ ವಟಕ.

**ಘೋ.**— ಘೋಟಾಚೂಳಿ ಮಾತ್ರೆ.

**ಜಾ. ಘೃತ.**— ಜಾತ್ಯಾದಿ ಘೃತ.

ಜ್ವ.— ಜ್ವರಭೈರವ ಮಾತ್ರೆ.

ತ್ರಿ.— ತ್ರಿಫಲಾಂಜನ ವಟಕ.

**ತ್ರ್ಯೂ.**— ತ್ರ್ಯೂಷಣಾದಿ ವಟಕ.

ದಾ. **ಷರಬತ್**— ದಾಳಿಂಬದ ಷರಬತ್.

ಧಾ. **ತೈಲ.**— ಧಾತ್ರ್ಯಾದಿ ತೈಲ.

ಪ್ರ. ಭಸ್ಮ.— ಪ್ರವಾಳ ಭಸ್ಮ

ಬ. **ಘೃತ.**— ಬಲಾದಿ ಘೃತ.

ಬಿ. **ಲೇಹ.**— ಬಿಲ್ವಾದಿ ಲೇಹ.

ಭಂ.— ಭಂಗುರಾದಿ ವಟಕ.

ಭಾ.— ಭಾಂಗ್ಯಾದಿ ವಟಕ.

ಮ. ಜ್ವ.— ಮಹಾಜ್ವರಾಂಕುಶ ಮಾತ್ರೆ.

ಮಾ. ರಸಾಯನ— ಮಾತುಳಂಗ ರಸಾಯನ.

ಮಾ. **ಲೇಹ**— ಮಾರ್ಕವಾವಲೇಹ.

ವ.— ವಚಾದಿ ಮಾತ್ರೆ

ವಾ.— ವಾತಾರಿ ಮಾತ್ರೆ.

ವಾ. ಗ.— ವಾತಗಜಾಂಕುಶ ಮಾತ್ರೆ

ಸಂ.— ಸನ್ನಿಪಾತಭೈರವಿ ಮಾತ್ರೆ.

## (c) ಇತರ ಸಂಕ್ಷಿಪ್ತ ಪದಗಳು

ಅ.— ಅಧ್ಯಾಯ.

ಉ.— (ಇದರಲ್ಲಿಯ) ಉಪೋದ್ಘಾತ.

ಉ. ಪ.— ,, ಉಪೋದ್ಘಾತದ ಪರಿಶಿಷ್ಟ.

ಪು.— ಪುಟ.

ಮಲ.— ಮಲಯಾಳ ಭಾಷೆ.

ಸಂ.— (ಇದರ ಅಧ್ಯಾಯಗಳೊಳಗಿನ) ವಿಷಯವಿಭಾಗದ ಸಂಖ್ಯೆ.

## ತೂಕಳತೆಗಳು ಮತ್ತು ಅವುಗಳಿಗೆ ಸಂಬಂಧಪಟ್ಟ ಸಂಕೇತಗಳು

### (*a*) ತೂಕ.

#### (1) ದೇಶೀಯ.

ಉದ್ದಿನ ತೂಕ = ೧ ಗ್ರೈನ್.
ಗುಲುಗುಂಜಿ ತೂಕ = ೧|| ಗ್ರೈನ್.
ಮಂಜಟ್ಟಿ ತೂಕ = ೨ ಗುಲುಗುಂಜಿ ತೂಕ, ೩ ಗ್ರೈನ್.
ಹಣ ತೂಕ (ಹ. ತೂ.) = ೨ ಮಂಜಟ್ಟಿ ತೂಕ; ೬ ಗ್ರೈನ್.
ವರಹ ತೂಕ (ವ. ತೂ.) ಅಥವಾ ತೂಕ = ೯ ಹಣ ತೂಕ; ೫೪ ಗ್ರೈನ್.
ತೊಲೆ (ತೊ.), ಅಥವಾ ರೂಪಾಯಿ ತೂಕ = ೩$\frac{1}{3}$ ತೂಕ, ೩೦ ಹ. ತೂ.; ೧೮೦ ಗ್ರೈನ್.
ಪಾವು, ಅಥವಾ ಕಾಲು ಸೇರು (ಸೇ. |) = ೬ ತೊಲೆ.
ಸೇರು (ಸೇ. ೧) = ೨೪ ತೊಲೆ.
ರಾತ್ಲು (ರಾ ೧) = ೪೦ ತೊಲೆ } ತೋರಮಟ್ಟಿಗೆ.
ಮಣ (ಮ. ೧) = ೪೬$\frac{2}{3}$ ಸೇರು. } ತೋರಮಟ್ಟಿಗೆ.

ಕೆಳಗೆ ಪಾಶ್ಚಾತ್ಯ ತೂಕ(2)ದ ವಿವರಣದ ಅಡಿ ಬರೆದ ಷರಾ ನೋಡಿ.

#### (2) ಪಾಶ್ಚಾತ್ಯ

ಗ್ರೈನ್ = ಒಂದು ಉದ್ದಿನ ತೂಕ.
ಡ್ರಾಂ = ೬೦ ಗ್ರೈನ್.

ಔನ್ಸ್ = ೮ ಡ್ರಾಂ; ಎರಡೂವರೆ ತೊಲೆಯೂ ಅರ್ಧ ಡ್ರಾಂ, (ತೋರಮಟ್ಟಿನಲ್ಲಿ ಎರಡೂವರೆ ತೊಲೆ).

ರಾತ್ಲು (ಪೌಣ್ಡು) = ೧೨ ಔನ್ಸ್ (ಔಷಧಗಳ ತೂಕಕ್ಕೆ); ೧೬ ಔನ್ಸ್ (ಇತರ ಸಾಮಾನ್ಯ ಪದಾರ್ಥಗಳಿಗೆ).

ಮಣ (ಮೋಣ್ಡು) = ೭೮ ಪೌಣ್ಡು (ರಾತ್ಲು).

ಷರಾ ಔನ್ಸ್ ಎಂಬದು ಔಷಧಗಳ ಮಟ್ಟಿಗೆ 480 ಗ್ರೈನ್ ಮತ್ತು ಇತರ ಸಂಗತಿಯಲ್ಲಿ 437½ ಗ್ರೈನ್ ಎಂತ ಕಾಣುತ್ತದೆ ಅದರ ಪ್ರಕಾರ ಮಣ ಎಂಬದು 45½ ಅಥವಾ 49¾ ಸೇರು ಆಗುತ್ತದೆ ತೋರವಟ್ಟಾಗಿ ಔನ್ ಎಂಬದು 2½ ತೊಲೆ (450 ಗ್ರೈನ್) ಮಾತ್ರ ಎಂತ ಎಣಿಸಿ, ಮಣ ಎಂದರೆ, ಮೇಲೆ ಬರದಂತೆ, 46⅔ ಸೇರು ಎನ್ನುವದಾಗಿರುತ್ತದೆ ಮಣ ಎಂಬ ತೂಕ ವಿಲಾಯತಿಯಲ್ಲಿ ವಾಡಿಕೆ ಇಲ್ಲವಂತೆ

### (*b*) ಅಳತೆ.

#### (1) ದೇಶೀಯ.

(i) ನೀರಳತೆ — (ದ್ರವಪದಾರ್ಥಗಳಿಗೆ).

ಕುಡತೆ = ಕುತ್ತಿಯ $\frac{1}{?}$; ತೊಲೆ ೧೬$\frac{?}{?}$.
ಸೇರು (ಸೇ. ೧) = ೨ ಕುಡತೆ.
ಕುತ್ತಿ = ೯ ಕುಡತೆ. ೪|| ಸೇರು.
ಮಣ = ೧೦ ಕುತ್ತಿ.

(ii) (ಧಾನ್ಯಾದಿ)ಶುಷ್ಕದ್ರವ್ಯಗಳಿಗೆ

ಕುಡತೆ, ಅಥವಾ ಪಾವು = ೨೦ ತೊಲೆ.
ಸೇರು, ಅಥವಾ ಹಾನೆ = ೪ ಪಾವು.
ಕಳಸಿಗೆ = ೧೪ ಸೇರು.
ಮುಡಿ = ೩ ಕಳಸಿಗೆ, ೪೨ ಸೇರು.

### (2) ಪಾಶ್ಚಾತ್ಯ.

ಮಿನಿಂ = ಬಿಂದು, ತಟಕು.

ಡ್ರಾಂ = ೬೦ ಮಿನಿಂ; ೧ ಚಾಚಮಚೆ.

ಔನ್ಸ್ = ೮ ಡ್ರಾಂ (ಕಾಲು ಕುಡತೆಗೆ ೧೨/೩ ಡ್ರಾಂ ಕಡಿಮೆ).

ಪ್ಯಾಂಟ್ ಬಾಟ್ಲಿ = ೨೦ ಔನ್ಸ್.

ಬಾಟ್ಲಿ (ಸಾಧಾರಣವಾಗಿ) = ೨೪ ಔನ್ಸ್.

### (c) ಭಾಗಸೂಚಕ ಸಂಕೇತಗಳು.

· — = ವೀಸ, ೧/೧೬ ಅಂಶ; ತೊ. — ಎಂದರೆ ೧ ತೊಲೆಯ ೧/೧೬, ೧೧|. ಗ್ರೈನ್.

· = = ಬೇಳೆ, ೧/೮ ಅಂಶ; ತೊ. = ಎಂದರೆ ೨ ಆಣೆ ಪಾವಲಿಯ ತೂಕ; ೨೨||. ಗ್ರೈನ್.

· ≡ = ಮುವೀಸ, ೩/೧೬ ಅಂಶ; ತೊ. ≡ ಎಂದರೆ (೩ ಆಣೆ ತೂಕ), ೩೩|||. ಗ್ರೈನ್

·|· = ಹಾಗ, ಕಾಲುಭಾಗ; ತೊ. ·|·, ಎಂದರೆ ಕಾಲು ತೊಲೆ, ೪ ಆಣೆ ಪಾವಲಿಯ ತೂಕ, ೪೫ ಗ್ರೈನ್.

·||· = ಅಡ್ಡ, ಅರ್ಧಭಾಗ; ತೊ. ·||· ಎಂದರೆ ಅರ್ಧ ತೊಲೆ, ೯೦ ಗ್ರೈನ್.

·|||· = ಮುಪ್ಪಾಗ, ೩/೪ (ಮುಕ್ಕಾಲು)ಭಾಗ; ತೊ. ||| ಎಂದರೆ ಮುಕ್ಕಾಲು ತೊಲೆ, ೧೩೫ ಗ್ರೈನ್.

ತೊ. ೧ = ಒಂದು ರೂಪಾಯಿಯ ತೂಕ; ೧೮೦ ಗ್ರೈನ್.

# ಆಯುರ್ವೇದಸಾರ—ದ್ವಿತೀಯ ಭಾಗ

(ಪೂರ್ವಖಂಡ)

## ಉಪೋದ್ಘಾತ.

ಓಂ ಲಕ್ಷ್ಮೀನರಸಿಂಹಾಯ ನಮಃ ।

ಶುಕ್ಲಾಮ್ಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್ ।
ಪ್ರಸನ್ನವದನಂ ಧ್ಯಾಯೇತ್ಸರ್ವವಿಘ್ನೋಪಶಾನ್ತಯೇ

ಚಿನ್ತಾಶ್ರೇಣಿತರಂಗಸಂಕುಲಭವಾಂಭೋದಸ್ಥತ್ರಸನ್ನಾ ಜನಾಃ ।
ತಸ್ಮುಕ್ತ್ಯೈ ಬಹುಭೂತದೈವತಗಣಾನರ್ಚನ್ತಿ ತೇಽಜ್ಞಾ ನ ಕಿಮ್ ॥
ಏಭ್ಯೋಽನ್ಯಾಃ ಪ್ರಭವನ್ತಿ ಸಂಹತತಯಾ ಲೀಯೇತ ಕಾಚಿದ್ಯದಿ ।
ಲಕ್ಷ್ಮೀಕಾನ್ತಕೃಪಾಂ ಪ್ರಸಕ್ತಶಮದಾಂ ಭಕ್ತ್ಯೇಕಸಾಧ್ಯಾಂ ವರೇ ॥

ಸಂಸಾರಸಾಗರದಲ್ಲಿ ಬಿದ್ದ ಜನರನ್ನು ಚಿಂತೆಯ ಸಾಲುಗಳು, ಸಮುದ್ರದ ತೆರಗಳಂತೆ ಪೀಡಿಸುತ್ತಿರುತ್ತವೆ. ಅವುಗಳ ವಿಮೋಚನಕ್ಕಾಗಿ, ಬೇರೆ ಬೇರೆ ಅನೇಕ ದೇವತೆಗಳನ್ನೋ ಭೂತಗಳನ್ನೋ ಅರ್ಚಿಸುವವರು ಅಜ್ಞಾನಿಗಳಲ್ಲವೇ? ಹಾಗೆ ಮಾಡುವದರಿಂದ ಕೆಲವು ಪರಿಹಾರವಾದರೂ, ಬೇರೆ ಚಿಂತೆಗಳು ಗುಂಪುಗುಂಪಾಗಿ ಹೊರಡುತ್ತವಷ್ಟೇ? ಆದ್ದರಿಂದ ನಿತ್ಯ ಶಾಂತತೆಯನ್ನು ದಯಪಾಲಿಸತಕ್ಕ ಮತ್ತು ಭಕ್ತಿಯಿಂದಲೇ ಲಭ್ಯವಾದ ಲಕ್ಷ್ಮೀವಲ್ಲಭನ ಕೃಪೆಯನ್ನು ಪ್ರಾರ್ಥಿಸುತ್ತೇನೆ.

1 ತ ಏವಾಪರಿಸಂಖ್ಯೇಯಾ ಭಿದ್ಯಮಾನಾ ಭವನ್ತಿ ಹಿ ।
ನಿದಾನವೇದನಾವರ್ಣಸ್ಥಾನಸಂಸ್ಥಾನನಾಮಭಿಃ ॥
ವ್ಯವಸ್ಥಾಕಾರಣಂ ತೇಷಾಂ ಯಥಾ ಸ್ಥೂಲೇಷು ಸಂಗ್ರಹಃ ।
ತಥಾ ಪ್ರಕೃತಿಸಾಮಾನ್ಯಂ ವಿಕಾರೇಷೂಪದಿಶ್ಯತೇ ॥
ವಿಕಾರನಾಮಾಕುಶಲೋ ನ ಜಿಹ್ರೀಯಾತ್ ಕದಾಚನ ।
ರೋಗದ ಹೆಸರು ಮುಖ್ಯವಾದದ್ದಲ್ಲ — ನ ಹಿ ಸರ್ವವಿಕಾರಾಣಾಂ ನಾಮತೋಽಸ್ತಿ ಧ್ರುವಾ ಗತಿಃ ॥
ಸ ಏವ ಕುಪಿತೋ ದೋಷಃ ಸಮುತ್ಥಾನವಿಶೇಷತಃ ।
ಸ್ಥಾನಾನ್ತರಗತಶ್ಚೈವ ಜನಯತ್ಯಾಮಯಾನ್ ಬಹೂನ್ ॥
ತಸ್ಮಾದ್ವಿಕಾರಪ್ರಕೃತೀರಧಿಷ್ಠಾನಾನ್ತರಾಣಿ ಚ ।
ಸಮುತ್ಥಾನವಿಶೇಷಾಂಶ್ಚ ಬುದ್ಧ್ವಾ ಕರ್ಮ ಸಮಾಚರೇತ್ ॥
ಯೋ ಹ್ಯೇತತ್ತ್ರಿವಿಧಂ ಜ್ಞಾತ್ವಾ ಕರ್ಮಾಣ್ಯಾರಭತೇ ಭಿಷಕ್ ।
ಜ್ಞಾನಪೂರ್ವಂ ಯಥಾನ್ಯಾಯಂ ಸ ಕರ್ಮಸು ನ ಮುಹ್ಯತಿ ॥ (ಚ. 105)

ನಿದಾನ, ವೇದನೆ, ವರ್ಣ, ಸ್ಥಾನ, ಆಕಾರ ಮತ್ತು ಹೆಸರುಗಳ ಮೇಲೆ ವಿಭಾಗಿಸಲ್ಪಟ್ಟರೆ, ರೋಗಗಳು ಲೆಕ್ಕಮಾಡಕೂಡದಷ್ಟು ಹೆಚ್ಚು ಆಗುತ್ತವೆ. ಚಿಕಿತ್ಸೆ ಬಗ್ಗಾಗಿ ತೋರಮಟ್ಟಿನ ವಿಭಾಗದಿಂದ ಕಂಡುಬರುವ ರೋಗಗಳನ್ನು ಸಂಗ್ರಹಿಸಿ, ಅವುಗಳು ಮತ್ತು ಸರ್ವವಿಕಾರ ಗಳಲ್ಲಿಯೂ ಸಾಮಾನ್ಯವಾಗಿ ಕಾಣುವ ಹೇತುಗಳು ಯಾವವು ಇದ್ದಾವೋ ಅವುಗಳು, ಉಪದೇಶಮಾಡಲ್ಪಡುತ್ತವೆ. ವ್ಯಾಧಿಯ ಹೆಸರನ್ನು ನಿಶ್ಚಯಿಸುವಲ್ಲಿ ಕುಶಲತೆಯಿಲ್ಲದ ವೈದ್ಯನು ಅದಕ್ಕಾಗಿ ಯಾವಾಗಲಾದರೂ ನಾಚಿಕೆಪಡಬಾರದು. ಯಾಕೆಂದರೆ ಸರ್ವ ವಿಕಾರಗಳ ನಿಶ್ಚಯವಾದ ಜ್ಞಾನವು ಹೆಸರಿನಿಂದ ಉಂಟಾಗುವದು ಸಾಧ್ಯವಲ್ಲ ಕೋಪ ಗೊಂಡ ಒಂದೇ ದೋಷವು ಹೇತುವಿಶೇಷದಿಂದಲೂ, ನಾನಾ ಸ್ಥಾನಗಳನ್ನು ಸೇರಿಕೊಳ್ಳು ವದರಿಂದಲೂ, ಬಹಳ ವ್ಯಾಧಿಗಳನ್ನು ಉಂಟುಮಾಡುತ್ತದೆ ಆದ್ದರಿಂದ ವಿಕಾರದ ಹೇತು ಗಳನ್ನೂ, ದೋಷಗಳು ಆಶ್ರಯಿಸಿಕೊಂಡ ಸ್ಥಾನಭೇದಗಳನ್ನೂ, ವಿಕಾರದ ಲಕ್ಷಣಗಳನ್ನೂ ತಿಳಿದು ವೈದ್ಯನು ಚಿಕಿತ್ಸೆಯನ್ನು ನಡಿಸತಕ್ಕದ್ದು. ಯಾವನು ಹೀಗೆ ಮೂರು ವಿಧದಿಂದ ರೋಗವನ್ನು ತಿಳಿದು, ಶಾಸ್ತ್ರರೀತ್ಯಾ ಜ್ಞಾನಪೂರ್ವಕವಾಗಿ ಚಿಕಿತ್ಸೋಪಚಾರಗಳನ್ನು ಆರಂಭಿಸುತ್ತಾನೋ, ಅವನು ಆ ಕೆಲಸಗಳಲ್ಲಿ ಕಂಗೆಡುವದಿಲ್ಲ

ದೋಷಗಳಿಗೂ, ದೂಷ್ಯಗಳಿಗೂ (ರಸಾದ್ಯಧಿಷ್ಠಾನಗಳಲ್ಲಿ ಸಂಭವಿಸಿದ ಕೆಡಕು ಗಳಿಗೂ), ನಿದಾನಗಳಿಗೂ ಪ್ರತಿವಿರುದ್ಧವಾದದ್ದು ಯಾವದು ಉಂಟೋ, ಅದನ್ನು ಸಮರ್ಪಕ ವಾದ ಯುಕ್ತಿಯಿಂದ ಉಪಯೋಗಿಸಿದ್ದಲ್ಲಿ, ವರ್ಣಿಸಲ್ಪಟ್ಟ ರೋಗಗಳು ಹೇಗೋ, ಹಾಗೆಯೇ ಇತರ ವರ್ಣಿಸಲ್ಪಡದ ರೋಗಗಳೂ ಪರಿಹಾರವಾಗುತ್ತವೆ. (1ನೇ ಭಾಗದ XIX—91)

2. ಔಷಧವಲ್ಲದ ದ್ರವ್ಯವಿಲ್ಲ

ಅನೇನ ನಿದರ್ಶನೇನ ನಾನೌಷಧೀಭೂತಂ ಜಗತಿ ಕಿಂಚಿದ್ದ್ರವ್ಯಮಸ್ತೀತಿ ಕೃತ್ವಾ ತಂ ತಂ ಯುಕ್ತಿವಿಶೇಷಮರ್ಥಂ ವಾಭಿಸಮೀಕ್ಷ್ಯ ಸ್ವವೀರ್ಯ ಗುಣಯುಕ್ತಾನಿ ದ್ರವ್ಯಾಣಿ ಕರ್ಮುಕರಾಣಿ ಭವನ್ತಿ (ಪು. 152—3.)

ಆಯುರ್ವೇದದ ಪ್ರಕಾರ ಈ ಜಗತ್ತಿನಲ್ಲಿ (ಸರ್ವ ಸ್ಥಾವರಜಂಗಮ ವಸ್ತುಗಳು ಪಂಚ ಭೂತಗಳ ಸಮುದಾಯದಿಂದ ಸೃಷ್ಟಿಸಲ್ಪಟ್ಟವಾದದರಿಂದ) ಯಾವ ದ್ರವ್ಯವಾದರೂ ಔಷಧೋಪಯೋಗಕ್ಕೆ ಬಾರದ್ದು ಇಲ್ಲ ಎಂತ ತಿಳಿದು, ಯಾವ ದ್ರವ್ಯವನ್ನು ಯಾವ ವಿಧದಿಂದ ಉಪಯೋಗಿಸಿದರೆ ಯಾವ ಪ್ರಯೋಜನ ಉಂಟಾಗುವದು ಎಂಬದನ್ನು ಗೊತ್ತು ಮಾಡಿಕೊಂಡು, ತಮ್ಮ ವೀರ್ಯದಿಂದಲೂ ಗುಣಗಳಿಂದಲೂ ಭರಿತವಾದ ದ್ರವ್ಯಗಳನ್ನು ಆ ಪ್ರಕಾರ ಉಪಯೋಗಿಸಿದರೆ, ಅವು ಫಲಕಾರಿಯಾಗುತ್ತವೆ.

3. ಆಯುರ್ವೇದದ ಮಹತ್ತ್ವ

ಮೇಲಿನ ವಚನಗಳಲ್ಲಿ ಅಡಗಿರುವ ತತ್ತ್ವಗಳನ್ನು ಗ್ರಹಿಸಿದರೆ, ಆಯುರ್ವೇ ದದ ಮಹತ್ತ್ವವು ಯಾರ ದೃಷ್ಟಿಗಾದರೂ ಹೊಳೆಯದಿರದು ಪಾಶ್ಚಾತ್ಯ ವೈದ್ಯಪದ್ಧತಿಯಂತೆ ಚಿಕಿತ್ಸೆಮಾಡಬೇಕಾದ ರೋಗವು ತಮ್ಮ ವೈದ್ಯಗ್ರಂಥ ಗಳಲ್ಲಿ ವರ್ಣಿಸಲ್ಪಟ್ಟ ರೋಗಗಳೊಳಗೆ ಯಾವದಕ್ಕೆ ಹೋಲುವಂಥಾದ್ದು ಮತ್ತು ಅದಕ್ಕೆ ಆ ಗ್ರಂಥಗಳಲ್ಲಿ ಯಾವ ಚಿಕಿತ್ಸೆ ಹೇಳಲ್ಪಟ್ಟದೆ ಎಂಬದನ್ನು ಮುಂದಾಗಿ ತಿಳಿ ಯುವದು ಮತ್ತು ಯಾವ ದೇಶದಲ್ಲಿಯೋ ಯಾರೋ ವೃತ್ತ್ಯರ್ಥವಾಗಿ ತಯಾರಿಸಿಟ್ಟ

ಔಷಧಗಳನ್ನು ವಿಶ್ವಾಸದ ಮೇಲೆ ಉಪಯೋಗಿಸುವದು ಆಯುರ್ವೇದೀಯ ಚಿಕಿತ್ಸೆಗೆ ಅಗತ್ಯವಲ್ಲ. ಅಲ್ಲಲ್ಲಿಯೇ ಸುಲಭವಾಗಿ ದೊರೆಯುವ ಪದಾರ್ಥಗಳೊಳಗೆ ಸಾಕಷ್ಟು ದ್ರವ್ಯಗಳ ರಸ-ವೀರ್ಯ-ವಿಪಾಕಾದಿ ಔಷಧೋಪಯುಕ್ತ ಗುಣಗಳನ್ನು ಅಲ್ಪ ಶ್ರಮದಿಂದ ತಿಳಿಯುವುದಕ್ಕೂ, ಆ ದ್ರವ್ಯಗಳನ್ನು ಔಷಧಗಳಾಗಿ ಪ್ರಯೋಗಿಸುವ ಯುಕ್ತಿಗಳನ್ನು ಕಲಿಯುವದಕ್ಕೂ, ಗ್ರಂಥಗಳಲ್ಲಿ ವರ್ಣಿಸಲ್ಪಡದ ರೋಗವಾದರೂ, ಅದರ ಲಕ್ಷಣ, ಹೇತು, ಅಧಿಷ್ಠಾನಾದಿಗಳ ಮೇಲೆ, ದೋಷಭೇದ ನೋಡಿಕೊಂಡು, ತಕ್ಕ ಔಷಧವನ್ನು ಸಮರ್ಪಕವಾಗಿ ಉಪಯೋಗಿಸಿ, ಆ ರೋಗವನ್ನು ಸಾಧ್ಯವಾಗಿದ್ದರೆ ಪರಿಹರಿಸುವದಕ್ಕೂ, ಅಸಾಧ್ಯವಾಗಿದ್ದಲ್ಲಿ ಸಹ ರೋಗಿಯ ಸಂಕಷ್ಟಗಳನ್ನು ಕಡಿಮೆ ಮಾಡುವದಕ್ಕೂ, ಆಯುರ್ವೇದದಲ್ಲಿ ಸರ್ವರು ಅಲ್ಪ ಪ್ರಯತ್ನದಿಂದ ತಿಳಿಯಬಹುದಾದಷ್ಟು ಸುಲಭ ರೀತಿಯಿಂದ ಉಪದೇಶ ಮಾಡಲ್ಪಟ್ಟಿರುತ್ತದೆ. ಆದ್ದರಿಂದಲೇ ಅಮೃತಗಳೊಳಗೆ ಪ್ರಧಾನವಾದದ್ದು ಆಯುರ್ವೇದ ಎಂತ ಚರಕಾಚಾರ್ಯರು ಹೇಳಿರುವದು (ಕೆಳಗೆ 27ನೇ ಸಂಖ್ಯೆ ನೋಡಿ).

4　ಆಯುರ್ವೇದದ ಉದ್ಧಾರಕರೂ ಖ್ಯಾಪಕರೂ ಪ್ರಚಾರಕರೂ ಆದ ನಮ್ಮ ಪೂರ್ವಿಕ ಮಹಾಪುರುಷರು ಪ್ರಾಯಶಃ ಆಸ್ತಿಕರಾಗಿದ್ದರು.

ದೈವ-ಪುರುಷಕಾರ ಎಂಬವುಗಳ ವಿಚಾರ

ತತ್ರ ಬುದ್ಧಿಮಾನ್ ನಾಸ್ತಿಕ್ಯಬುದ್ಧಿಂ ಜಹ್ಯಾತ್ ವಿಚಿಕಿತ್ಸಾಂ ಚ |
ಕಸ್ಮಾತ್ ಪ್ರತ್ಯಕ್ಷಂ ಹ್ಯಲ್ಪಮನಲ್ಪಮಪ್ರತ್ಯಕ್ಷಮಸ್ತಿ ಯದಾಗಮಾನುಮಾನ ಯುಕ್ತಿಭಿರುಪಲಭ್ಯತೇ (ಚ. 56)

ಬುದ್ಧಿವಂತನಾದವನು ನಾಸ್ತಿಕನ ಬುದ್ಧಿಯನ್ನೂ, ತನಗೆ ಪೂರ್ವ ಜನ್ಮಗಳು ಇದ್ದವೋ ಮತ್ತು ಪುನರ್ಜನ್ಮಗಳು ಇರಬಹುದೊ ಎಂಬ ಸಂಶಯವನ್ನೂ, ಬಿಟ್ಟುಬಿಡಬೇಕು. ಯಾಕಂದರ ಪ್ರತ್ಯಕ್ಷವಾದದ್ದು ಅಲ್ಪ, ಪ್ರತ್ಯಕ್ಷವಲ್ಲದ್ದು ಬಹಳ ಉಂಟು, ಎಂಬದು ಶಾಸ್ತ್ರದಿಂದಲೂ ಊಹೆಯಿಂದಲೂ (inference) ಯುಕ್ತಿ (reasoning) ಯಿಂದಲೂ ಕಂಡು ಬರುತ್ತದೆ.

ನ ಹಿ ಕರ್ಮ ಮಹತ್ ಕಿಂಚಿತ್ ಫಲಂ ಯಸ್ಯ ನ ಭುಜ್ಯತೇ |
ಕ್ರಿಯಾಘ್ನಾಃ ಕರ್ಮಜಾ ರೋಗಾಃ ಪ್ರಶಮಂ ಯಾಂತಿ ತತ್‌ಕ್ಷಯಾತ್ ||
(ಚ. 317.)

(ಪುಣ್ಯಕರ್ಮವಾಗಲಿ ಪಾಪಕರ್ಮವಾಗಲಿ) ಸ್ವಲ್ಪ ಮಹತ್ತಾದ ಕರ್ಮ ಯಾವದಾದರೂ ಅದರ ಫಲವನ್ನು ಅದನ್ನು ಮಾಡಿದವನು ಉಣ್ಣದಿರಲಾರ (ಪಾಪ) ಕರ್ಮಗಳ ಫಲವಾಗಿ ಸಂಭವಿಸಿದ ರೋಗಗಳು ಚಿಕಿತ್ಸೋಪಚಾರಗಳನ್ನು ಕೆಡಿಸುತ್ತಾ ಇದ್ದು, (ಪ್ರಾಯಶ್ಚಿತ್ತಗಳಿಂದಾಗಲಿ, ಪುಣ್ಯಕರ್ಮಮಾಡಿಯಾಗಲಿ, ಕಾಲ ಕಳೆದದರಿಂದಾಗಲಿ) ಆ ಪಾಪವು ಕ್ಷಯವಾದ ಕೂಡಲೆ, ಉಪಶಮನವಾಗುತ್ತವೆ.

ಆಯುಃಪ್ರಮಾಣದ ವಿಚಾರದಲ್ಲಿ ಚರಕನು ಹೀಗೆ ಹೇಳಿರುತ್ತಾನೆ —

ದೈವಮಾತ್ಮಕೃತಂ ವಿದ್ಯಾತ್ ಕರ್ಮ ಯತ್ ಪೂರ್ವದೈಹಿಕಮ್ |
ಸ್ಮೃತಃ ಪುರುಷಕಾರಸ್ತು ಕ್ರಿಯತೇ ಯದಿಹಾಪರಮ್ ||

ದೈವಂ ಪುರುಷಕಾರೇಣ ದುರ್ಬಲಂ ಹ್ಯುಪಹನ್ಯತೇ ।
ದೈವೇನ ಚೇತರತ್ ಕರ್ಮ ವಿಶಿಷ್ಟೇನೋಪಹನ್ಯತೇ ॥
ಕರ್ಮ ಕಿಂಚಿತ್ ಕ್ವಚಿತ್ ಕಾಲೇ ವಿಪಾಕೇ ನಿಯತಂ ಮಹತ್ ।
ಕಿಂಚಿತ್ತ್ವಕಾಲನಿಯತಂ ಪ್ರತ್ಯಯೈಃ ಪ್ರತಿಬೋಧ್ಯತೇ ॥ (ಪು. 253)

"ಪೂರ್ವಜನ್ಮಗಳಲ್ಲಿ ತಾನು ಮಾಡಿದ (ಕಿಂಚಿತ್ ಮಹತ್ತಾದ) ಕರ್ಮ ಯಾವದುಂಟೋ ಅದು ದೈವ, (ಅದಕ್ಕೇನೇ ಅದೃಷ್ಟ ಎನ್ನುವದು). ಈ ಜನ್ಮದಲ್ಲಿ ಮಾಡಲ್ಪಡುವದು ಯಾವದೋ ಅದು ಪುರುಷಕಾರವೆನಿಸುತ್ತದೆ. ದುರ್ದೈವವು ಬಲಹೀನವಾದದ್ದಾದರೆ, ಅದು ಪುರುಷಕಾರದಿಂದ (ಸದ್ಧರ್ಮ ಕರ್ಮಗಳನ್ನು ನಡಿಸುವದರಿಂದ) ನಾಶವಾಗುತ್ತದೆ. ಆ ದುರ್ದೈವವು ಹೆಚ್ಚು ಬಲವಂತವಾಗಿದ್ದರೆ ಪುರುಷಕಾರವು ನಿಷ್ಫಲವಾಗುತ್ತದೆ (ಅಂದರೆ ದುರ್ದೈವದ ಫಲವನ್ನು ಪರಿಹರಿಸುವದಿಲ್ಲ). ಕೆಲವು ಮಹತ್ತಾದ ಕರ್ಮಗಳು ಇಂತಿಷ್ಟೇ ಕಾಲದಲ್ಲಿ ವಿಪಾಕವಾಗತಕ್ಕವು (ಫಲ ಕೊಡತಕ್ಕವು) ಎಂತ ನಿಯಮವಿರುತ್ತದೆ. ಹಾಗೆ ಕಾಲ ನಿಯಮವಿಲ್ಲದ ಕೆಲವು ಕರ್ಮಗಳು ತಮಗೆ ಸಹಾಯಕರವಾದ ಪುರುಷಕಾರಗಳಿಂದ ಎಚ್ಚರಿಸಲ್ಪಡುತ್ತವೆ (ಫಲಕಾರಿಯಾಗಿ ಮಾಡಲ್ಪಡುತ್ತವೆ).' ಹೀಗೆ ನಾವು ಪೂರ್ವಜನ್ಮಗಳಲ್ಲಿ ಮಾಡಿದ ಕೆಲವು ಪುಣ್ಯ ಪಾಪ ಕರ್ಮಗಳ ಫಲಗಳನ್ನು ಈ ಜನ್ಮದಲ್ಲಿ ಮತ್ತು ಈ ಜನ್ಮದಲ್ಲಿ ಮಾಡುವ ಕೆಲವು ಪುಣ್ಯ ಪಾಪ ಕರ್ಮಗಳ ಫಲಗಳನ್ನು ಮುಂದಿನ ಜನ್ಮದಲ್ಲಿ ಅನುಭವಿಸಬೇಕಾಗುತ್ತದಾದ್ದರಿಂದ, ಇಹಪರ ಸುಖಗಳ ಚಿಂತನೆಯುಳ್ಳವರು ಪ್ರಾಣರಕ್ಷಣೆಗೂ ಧನ ಸಂಪಾದನಕ್ಕೂ ಪ್ರಯತ್ನಪಡುವಂತೆ, ಪರಲೋಕದ ಹಿತವನ್ನು ಸಹ ಬಯಸಿ, ಪಾಪಕ್ಷಯ ಕರವಾದ ಮತ್ತು ಪುಣ್ಯಸಂಚಯಕರವಾದ ಸತ್ಕರ್ಮಗಳನ್ನು ಮಾಡುತ್ತಾ ಬರಬೇಕೆಂಬದರಿಂದ ಮನುಷ್ಯರಿಗೆ ಪರಲೋಕೈಷಣವನ್ನು ಸೇರಿಸಿ ಮೂರು ಏಷಣಗಳು ಹೇಳಲ್ಪಟ್ಟದ್ದಾಗಿರುತ್ತದೆ. (1ನೇ ಭಾಗದ I — 1 ನೋಡಿ)

5. ಸುಖಾರ್ಥಾಃ ಸರ್ವಭೂತಾನಾಂ ಮತಾಃ ಸರ್ವಾಃ ಪ್ರವೃತ್ತಯಃ ।
ಜ್ಞಾನಾಜ್ಞಾನವಿಶೇಷಾತ್ತು ಮಾರ್ಗಾಮಾರ್ಗಪ್ರವೃತ್ತಯಃ ॥
ಹಿತಮೇವಾನುರುಧ್ಯನ್ತೇ ಪ್ರಪರೀಕ್ಷ್ಯ ಪರೀಕ್ಷಕಾಃ ।
ರಜೋಮೋಹಾವೃತಾತ್ಮಾನಃ ಪ್ರಿಯಮೇವ ತು ಲೌಕಿಕಾಃ ॥
ಶ್ರುತಂ ಬುದ್ಧಿಃ ಸ್ಮೃತಿರ್ದಾಕ್ಷ್ಯಂ ಧೃತಿರ್ಹಿತನಿಷೇವಣಮ್ ।
ವಾಕ್ಶುದ್ಧಿಃ ಶಮೋ ಧೈರ್ಯಮಾಶ್ರಯನ್ತಿ ಪರೀಕ್ಷಕಮ್ ॥
ಲೌಕಿಕಂ ನಾಶ್ರಯನ್ತ್ಯೇತೇ ಗುಣಾ ಮೋಹರಜಃಶ್ರಿತಮ್ ।
ತನ್ಮೂಲಾ ಬಹುಲಾಶ್ಚೈವ ರೋಗಾಃ ಶಾರೀರಮಾನಸಾಃ ॥ (ಚ. 188)

ಹಿತವನ್ನು ಬಿಟ್ಟು ಪ್ರಿಯವನ್ನವಲಂಬಿಸಬಾರದು

ಸರ್ವ ಪ್ರಾಣಿಗಳ ಸರ್ವ ಪ್ರವೃತ್ತಿಗಳು, (ಅಂದರೆ ಯತ್ನಗಳು, ಕರ್ಮಾಭಿಯೋಗಗಳು) ಸುಖಾಪೇಕ್ಷೆಯಿಂದಲೇ ಉಂಟಾಗುವವು ಎಂತ ತಿಳಿದಿದ್ದಾರೆ, ಆದರೆ ಅವುಗಳು ಜ್ಞಾನದ ದೆಸೆಯಿಂದ ಸರಿಯಾದ ಮಾರ್ಗವಾಗಿಯೂ, ಅಜ್ಞಾನದಿಂದ ಮಾರ್ಗ ಬಿಟ್ಟೂ ನಡೆಯುತ್ತವೆ. ಪರೀಕ್ಷೆಯುಳ್ಳವರು ಚನ್ನಾಗಿ ಯೋಚಿಸಿಕೊಂಡು ಹಿತವಾದದ್ದನ್ನೇ ಅವಲಂಬಿಸುತ್ತಾರೆ; ಲೌಕಿಕರು (ಪರೀಕ್ಷೆಯಿಲ್ಲದ ಸಾಧಾರಣ ಜನರು) ರಜೋಗುಣಕ್ಕೂ ಮೋಹಕ್ಕೂ ಒಳಪಟ್ಟ ಜ್ಞಾನ

ದಿಂದ ಪ್ರಿಯವಾದದ್ದನ್ನೇ ಅವಲಂಬಿಸುತ್ತಾರೆ. ಶಾಸ್ತ್ರಜ್ಞಾನ, ಬುದ್ಧಿ, ಸೆನಪು, ದೃಢತ್ವ, ಧಾರಣ ಶಕ್ತಿ, ಹಿತವಾದದ್ದನ್ನೇ ಸೇವಿಸುವಿಕೆ, ಮಾತಿನ ಶುದ್ಧತ್ವ, ಶಾಂತತೆ, ಧೈರ್ಯ, ಈ ಗುಣಗಳು ಪರೀಕ್ಷಕನನ್ನು ಆಶ್ರಯಿಸುತ್ತವೆ. ಲೌಕಿಕನಲ್ಲಿ ಈ ಗುಣಗಳು ಆಶ್ರಯಮಾಡಿಕೊಂಡಿರುವ ದಿಲ್ಲ, ಮೋಹವೂ ತಮೋಗುಣವೂ ಅವನನ್ನು ಸ್ವಾಧೀನಮಾಡಿಕೊಳ್ಳುತ್ತವ ಮತ್ತು ಅವು ಗಳೇ ಬಹಳವಾದ ಕಾಯಿಕ-ಮಾನಸಿಕ ವ್ಯಾಧಿಗಳಿಗೆ ಮೂಲ.

ಯೇ ಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವ ತೇ |
ಆದ್ಯನ್ತವನ್ತಃ ಕೌನ್ತೇಯ! ನ ತೇಷು ರಮತೇ ಬುಧಃ ||
ಶಕ್ನೋತೀಹೈವ ಯಃ ಸೋಢುಂ ಪ್ರಾಕ್ಶರೀರವಿಮೋಕ್ಷಣಾತ್ |
ಕಾಮಕ್ರೋಧೋದ್ಭವಂ ವೇಗಂ ಸ ಯುಕ್ತಃ ಸ ಸುಖೀ ನರಃ ||
(ಭಗವದ್ಗೀತಾ ಅ. ೫-೨೨-೨೩.)

ಇಂದ್ರಿಯಗಳಿಗೆ ಇಂದ್ರಿಯಾರ್ಥವಾದ ವಿಷಯಗಳ ಸ್ಪರ್ಶವಾಗಿ ಯಾವ ಸುಖಗಳು ಉಂಟಾಗುತ್ತವೋ ಅವು ಆದ್ಯಂತವುಳ್ಳವು (ಕ್ಷಣಿಕ), ಮತ್ತು ದುಃಖಕ್ಕನೇ ಹೇತುಗಳಾಗು ತ್ತವೆ, ಆದ್ದರಿಂದ ಅವುಗಳಲ್ಲಿ ಬುದ್ಧಿವಂತನು ವಿನೋದಪಡುವದಿಲ್ಲ. "ಯಾವನು ಈ ಜನ್ಮದ ಲ್ಲಿಯೇ ಶರೀರತ್ಯಾಗಕ್ಕೆ ಮೊದಲು ಆಶೆಯಿಂದಾಗಲಿ ಸಿಟ್ಟಿನಿಂದಾಗಲಿ ಉಂಟಾಗುವ ವೇಗ ವನ್ನು ಸಹಿಸುವದಕ್ಕೆ (ನಿವಾರಿಸುವದಕ್ಕೆ) ಶಕ್ತನಾಗುತ್ತಾನೋ ಆ ಮನುಷ್ಯನು ಯೋಗಿ, ಅವನೇ ಸುಖೀ" ಎಂತ ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ಬೋಧಿಸಿರುತ್ತಾನೆ.

ಈ ವಿಧವಾದ ಉಪದೇಶಗಳು ನಮ್ಮವರಲ್ಲಿ ನೆಟ್ಟುಕೊಂಡದ್ದರಿಂದ, ಅವರು ವಿಷಯ ಸುಖಗಳಲ್ಲಿ ವಿಶೇಷ ಆಸಕ್ತಿ ಇಡದೆ, ತಮ್ಮತಮ್ಮ ಕರ್ತವ್ಯಗಳನ್ನು ಸಾಹಸದಿಂದ ನಡಿಸುತ್ತಾ, ಹಿಂದಿನ ಪಾಪಕ್ಷಯಾರ್ಥವಾಗಿಯೂ ಮುಂದಿನ ಸದ್ಗತಿಗಾಗಿಯೂ ಸತ್ಕರ್ಮಗಳನ್ನು ಯಥಾ ಶಕ್ತಿ ಮತ್ತು ಯಥೋಚಿತವಾಗಿ ಮಾಡುತ್ತಾ, ವ್ಯಸನಗಳು ಮನುಷ್ಯರಿಗೆ ತಪ್ಪುವಂಥವಲ್ಲ ಎಂತ ತಿಳಿದು, ಅವುಗಳನ್ನು ತಾಳ್ಮೆಯಿಂದ ಸಹಿಸುತ್ತಾ, ಶಾಂತರಾಗಿರುವದಕ್ಕೆ ಪ್ರಯತ್ನಿಸು ವವರಾಗಿದ್ದರು.

6. ಕಾಲಮಹಿಮೆ ಬಹು ವಿಧದಿಂದ ಯಶಸ್ವಿಗಳಾದ ಪಾಶ್ಚಾತ್ಯರ ಸಂಪರ್ಕವೂ ಅವರ ಕ್ರಮದ ವಿದ್ಯಾಪ್ರಸಾರವೂ ಈ ದೇಶದಲ್ಲಿ ಅಧಿಕವಾಗುತ್ತಾ ಬಂದು, ಅವರು ನವೀನ ವಾದ ಯಂತ್ರ, ತಂತ್ರ, ಶಸ್ತ್ರಾದಿಗಳನ್ನು ನಿರ್ಮಾಣಮಾಡಿ, ಅವುಗಳ ಸಹಾಯ ದಿಂದ ಮಾಡುತ್ತಾ ಬಂದ ಪರಿಶೋಧನಗಳ ಫಲಗಳನ್ನೂ ಅನುಭವವನ್ನೂ ಗರ್ಭೀಕರಿಸಿ ಬರೆದ ಪುಸ್ತಕಗಳು ಸಾವಿರಾರು ವರ್ಷಗಳಿಗೆ ಹಿಂದೆ ಬರೆದ ನಮ್ಮ ಶಾಸ್ತ್ರಗಳಿಗಿಂತ ಹೆಚ್ಚು ಆದರ ಣೀಯವೆಂಬ ಭ್ರಮೆಯು ನಮ್ಮವರಲ್ಲಿ ಹಬ್ಬುತ್ತಾ ಬಂದುದರಿಂದ, ನಮ್ಮ ಸಚ್ಛಾಸ್ತ್ರಗಳು ಅಡಿಗೆ ಬಿದ್ದು, ಮೇಲೆ ವರ್ಣಿಸಿದ ಲೌಕಿಕ ವರ್ಗವೇ ಅಧಿಕವಾಗುವದಾಯಿತು, ಪರೀಕ್ಷಕರ ಸಾಲು ಕ್ಷಯಿಸುತ್ತಾ ಬಂತು. ಕ್ಷಣಿಕ ವಿಷಯಸುಖಾಪೇಕ್ಷೆಯು ಪಶ್ವಾದಿ ನೀಚವರ್ಗದ ಪ್ರಾಣಿ ಗಳಿಗೆ ಸಹ ಇರುವಂಥಾದ್ದು, ಪಾರತ್ರಿಕ ಸುಖದ ಮೇಲೆ ಸಹ ದೃಷ್ಟಿಯಿಟ್ಟು, ಹಿತವಲ್ಲದ ಪ್ರಿಯವನ್ನು ಬಿಟ್ಟು ವರ್ತಿಸುವದು ಮನುಷ್ಯಜನ್ಮ ಪಡೆದವರಿಗೆ ಮಾತ್ರ ಸಾಧ್ಯ ಮತ್ತು ಮುಂದೆ ಇದೇ ಮನುಷ್ಯಜನ್ಮವು ನಮಗೆ ದೊರೆಯುವದು ಸಂದೇಹಾಸ್ಪದ, ಎಂಬ ಜ್ಞಾನ

ಅಸ್ತವಾಗುತ್ತಾ ಬಂತು. ಈಗಿನ ಜನರು ಸಾಧಾರಣವಾಗಿ ಪ್ರತ್ಯಕ್ಷವಾದ ಐಹಿಕಸುಖಕ್ಕಲ್ಲ ವಾದರೆ ಶ್ರಮಪಡರು. ರೋಗ ಸಂಭವಿಸಿದರೆ, ಶ್ರಮವಿಲ್ಲದೆ ಅದನ್ನು ಪರಿಹರಿಸುವ ಮಾರ್ಗ ಯಾವದುಂಟೆಂಬದನ್ನೇ ಹುಡುಕುತ್ತಾರೆ. ಆ ರೋಗಿಗೆ ಒಬ್ಬ ಆಯುರ್ವೇದೀಯ ಪಂಡಿತನು, 'ಸಹದೇವಿರಸ 1 ಚಾಚಮಚೆ, ಶುಂಠೀರಸ $\frac{1}{2}$ ಚಮಚೆ, ಜೇನು $\frac{1}{4}$ ಚಮಚೆ, ಇವುಗಳನ್ನು ಬೆರಸಿ, ಅದರಲ್ಲಿ ಒಂದು ಮಾತ್ರೆಯನ್ನು ತೇದಿ ಸೇವಿಸು' ಎಂದರೆ, ರೋಗಿಯು ಹೀಗೆ ಯೋಚಿಸುತ್ತಾನೆ. "ಸಹದೇವಿ ಎಂಬದು ಯಾವ ಗಿಡ? ಅದು ಎಲ್ಲಿ ಸಿಕ್ಕುತ್ತದೆ? ಶುಂಠಿಗೂ, ಜೇನಿಗೂ ಪೇಟೆಗೆ ಹೋಗಬೇಕು, ಅಂಗಡಿಯವ ಎಂಥಾ ಜೇನನ್ನು ಕೊಡುತ್ತಾನೋ? ಹಸಿ ಶುಂಠಿಯನ್ನು ಸಿಪ್ಪೆ ತೆಗೆದು ಜಜ್ಜಿ, ಅದರ ರಸವನ್ನು ತೆಗೆದು ಹನಿಸಿ, ಅಡಿಯಲ್ಲಿ ನಿಲ್ಲುವ ಸುಣ್ಣವನ್ನು ತೆಗೆದು, ಮೇಲಿನ ರಸವನ್ನೇ ಕೂಡಬೇಕಂತೆ, ಈ ಪ್ರಕಾರ ದಿನಕ್ಕೆ ಎರಡು ಸರ್ತಿಯಾದರೂ ಮಾಡಬೇಕು. ನಮ್ಮಲ್ಲಿರುವ ಚಮಚೆ ಚಾಚಮಚೆಗೆ ದೊಡ್ಡದೋ, ಸಣ್ಣದೋ ನೋಡಬೇಕು. ಈ ಕೆಲಸಗಳನ್ನು ಮಾಡಲಿಕ್ಕೂ ರಸಗಳನ್ನು ತಕ್ಕ ಪ್ರಮಾಣದಲ್ಲಿ ಸೇರಿಸುವದಕ್ಕೂ ತಕ್ಕ ಜನಸಹಾಯ ನಮ್ಮಲ್ಲಿ ಎಲ್ಲಿದೆ?" ಈ ವಿಧವಾಗಿ ಚಿಂತಿಸಿ, ಆ ಚಿಕಿತ್ಸೆಯನ್ನು ಬಿಟ್ಟು ಅಂಥಾ ಶ್ರಮವಿಲ್ಲದ ಚಿಕಿತ್ಸೆಯ ಕಡಗೇನೇ ದೃಷ್ಟಿ ಇಡುತ್ತಾನೆ ಅದಲ್ಲದೆ ದಿನ 1ರ 100-150 ರೋಗಿಗಳಿಗೆ ಚಿಕಿತ್ಸೆ ವಿಧಿಸಬೇಕಾದ ಧರ್ಮಾಸ್ಪತ್ರೆಗಳಲ್ಲಿ ಆಯುರ್ವೇದದ ಪ್ರಕಾರ ಸೂಕ್ಷ್ಮವಾಗಿ ಚಿಕಿತ್ಸೆ ನಡಿಸುವದು ಪೂರ್ಣ ಅಸಾಧ್ಯ. ಇಂಥಾ ಅವಸ್ಥೆಗಳಲ್ಲಿ ಆಯುರ್ವೇದೀಯ ಪಂಡಿತರು ಸಹ ಪಾಶ್ಚಾತ್ಯ ಡಾಕ್ಟರರಂತೆ ವರ್ತಿಸಿ, ಸ್ಥೂಲರೂಪದಿಂದ ಚಿಕಿತ್ಸೆ ವಿಧಿಸಿ, ಜನರಲ್ಲಿ ತಾತ್ಕಾಲಿಕ ತೃಪ್ತಿಯನ್ನುಂಟುಮಾಡುವದಾದರೆ ಅವರ ತಪ್ಪೇನು?

ಆದರೆ ಹೀಗೆ ಕಾಲಮಹಿಮೆಯಿಂದ ಇತ್ತಲಾಗಿ ರೂಢಿಗೆ ಬಂದಿರುವ ರೋಗಗಳಿಗೆ ಸ್ಥೂಲಮಾರ್ಗವಾಗಿ ಚಿಕಿತ್ಸೆಮಾಡುವ ಕ್ರಮವು ಹಲವು ವಿಧಗಳಿಂದ ಆಯುರ್ವೇದದ ಉಪದೇಶಕ್ಕೆ ವಿರುದ್ಧವಾದದ್ದೆಂಬದು ಇದೇ ಉಪೋದ್ಘಾತದಲ್ಲಿ ಮುಂದೆ ವಿವರಿಸುವ ತತ್ತ್ವಗಳಿಂದ ಸ್ಪಷ್ಟವಾಗುವದು.

"ಏವಮವಯವೇನ ಜ್ಞಾನಸ್ಯ ಕೃತ್ಸ್ನೇ ಜ್ಞೇಯೇ ಜ್ಞಾನಮಿತಿ ಮನ್ಯಮಾನಾಃ ಸ್ಖಲನ್ತಿ ವಿದಿತವೇದಿತವ್ಯಾಸ್ತು ಭಿಷಜಃ ಸರ್ವಂ ಸರ್ವಥಾ ಯಥಾಸಮ್ಭವಂ ಪರೀಕ್ಷ್ಯಂ ಪರೀಕ್ಷ್ಯಾಧ್ಯವಸ್ಯನ್ತೋ ನ ಕ್ವಚನ ವಿಪ್ರತಿಪದ್ಯನ್ತೇ, ಯಥೇಷ್ಟಮರ್ಥಮಭಿನಿರ್ವರ್ತ್ತಯನ್ತಿ" ಚ. (ಚ. 268-269.)

ತಿಳಿಯಬೇಕಾದದ್ದನ್ನು ಸಂಪೂರ್ಣವಾಗಿ ತಿಳಿಯಬೇಕಾಗಿರುತ್ತಾ, ಅದರ ಒಂದು ಅವಯವವನ್ನು ಮಾತ್ರ ತಿಳಿದದರಿಂದ ತಮಗೆಲ್ಲಾ ತಿಳಿಯಿತೆಂತ ಭಾವಿಸಿಕೊಳ್ಳುವವರು ತಪ್ಪಿಬೀಳುತ್ತಾರೆ. ತಿಳಿಯಬೇಕಾದದ್ದನ್ನೆಲ್ಲಾ ತಿಳಿದ ವೈದ್ಯರು ಪರೀಕ್ಷಿಸಬೇಕಾದ ಸರ್ವಲಕ್ಷಣಗಳನ್ನು ಅವು ಸಂಭವಿಸಿದ ಹಾಗೆ ಸರ್ವ ವಿಧದಿಂದ ಪರೀಕ್ಷಿಸಿ ಚಿಕಿತ್ಸೆ ನಡಿಸುತ್ತಾ ಬರುವದರಿಂದ, ಅವರು ಎಲ್ಲಿಯಾದರೂ ಕಂಗೆಡುವದಿಲ್ಲ ಮತ್ತು ಅಭೀಪ್ಸಿತ ಫಲಸಿದ್ಧಿಯನ್ನುಂಟುಮಾಡುತ್ತಾರೆ.

ಹೀಗೆ ರೋಗಿಯ ಅವಸ್ಥೆಯಲ್ಲಿ ನಾನಾ ಕಾರಣಗಳಿಂದ ಪದೇ ಪದೇ ಉಂಟಾಗಬಹು

ದಾದ ಭೇದಗಳಿಗೆ ತಕ್ಕಂತೆ ಚಿಕಿತ್ಸೋಪಚಾರಗಳಲ್ಲಿ ಮಾರ್ಪಾಟ ಮಾಡುತ್ತಾ ಬರುವದಕ್ಕೆ ಈಗಿನ ಸ್ಥೂಲಮಾರ್ಗದ ಚಿಕಿತ್ಸಾಕ್ರಮದಲ್ಲಿ ಎಡೆಯಿಲ್ಲ ಎಂಬದು ಅದಕ್ಕೆ ಮುಖ್ಯವಾದ ದ್ದೊಂದು ಆಕ್ಷೇಪ. ಇದು ಶಾಸ್ತ್ರೋಕ್ತವಾದ ಲೇಹ, ಆಸವ, ಅರಿಷ್ಟ, ಅರ್ಕ, ಘೃತ, ತೈಲ, ರಸಾಯನಾದಿಗಳ ವಿಷಯ. ಇದಕ್ಕಿಂತಲೂ ಹೆಚ್ಚು ಆಕ್ಷೇಪಕರವಾದದ್ದು ಪಾಶ್ಚಾತ್ಯರ ವ್ಯವ ಹಾರಕ್ರಮವನ್ನು ಆದರ್ಶವಾಗಿಟ್ಟುಕೊಂಡು ನಮ್ಮವರು ಪ್ರಚಾರಕ್ಕೆ ತರುತ್ತಿರುವ ಅನನ್ಯ ಯುಕ್ತಿಕ ಔಷಧಗಳ (patent medicines—ಪೇಟೆಂಟ್ ಮೆಡಿಸಿನ್ಸ್) ಉಪಯೋಗ. ಅದೇನೆಂದರೆ· ದ್ರವ್ಯಾರ್ಜನಕ್ಕಾಗಿ ಹೆಚ್ಚು ಜನರಿಗೆ ಬಹು ಸಂದರ್ಭಗಳಲ್ಲಿ ಪ್ರಯೋಜನಕಾರಿ ಯಾಗಬಹುದೆಂಬ ಹಾಗಿನ ಒಂದು ಔಷಧಯೋಗವನ್ನು ತಯಾರಿಸಿಯೋ, ಸಂಪಾದಿಸಿಯೋ ಗುಪ್ತವಾಗಿಟ್ಟುಕೊಂಡು, ಆ ಯೋಗದಂತೆ ಜನರು ಹಿತವಾಗಿಯೂ ಸುಲಭವಾಗಿಯೂ ಉಪ ಯೋಗಿಸಬಹುದಾದ ರೀತಿಯಲ್ಲಿ ಅರ್ಕ, ಗುಳಿಗೆ, ಚೂರ್ಣ, ಲೇಪ, ತೈಲ ಮುಂತಾದ ಯಾವ ದಾದರೊಂದು ರೂಪದ ಔಷಧವನ್ನು ಬಹುಸಂಖ್ಯೆಯಿಂದ ಅಥವಾ ಹೆಚ್ಚು ಪ್ರಮಾಣದಲ್ಲಿ ಖರ್ಚು ಕಡಿಮೆಯಾಗುವ ಹಾಗೆ ತಯಾರಿಸಿ, ಆ ಔಷಧವು ವಿಶೇಷಗುಣವುಳ್ಳದ್ದಾಗಿ ಅನು ಭವಸಿದ್ಧವಾಗಿದೆ ಎಂಬಿತ್ಯಾದಿ ಸ್ತುತಿಯುಕ್ತವಾದ ಪ್ರಮಾಣಪತ್ರಗಳನ್ನು ಉಪಾಯಾಂತರ ಗಳಿಂದ ಡಾಕ್ಟರರು, ವೈದ್ಯರು ಮುಂತಾದ ಪ್ರಸಿದ್ಧ ಪುರುಷಾನೇಕರಿಂದ ಪಡೆದು, ಅವುಗಳ ಬಲದಿಂದ ಆ ಔಷಧವು ಮಹತ್ತ್ವವುಳ್ಳದ್ದೆಂತ ಹಳ್ಳಿಪಳ್ಳಿ ಜನರು ಸಹ ಮರುಳಾಗುವಂತೆ ನಾನಾ ವಿಧವಾಗಿ ಪ್ರಕಟನಪತ್ರಗಳನ್ನು ಊರೂರಲ್ಲೆಲ್ಲಾ ಹರಡಿಸಿ, ವ್ಯಾಪಾರ ಮಾಡುವ ದಾಗಿರುತ್ತದೆ. ಇಂಥಾ ವ್ಯಾಪಾರದಿಂದ ಅದೃಷ್ಟಬಲವುಳ್ಳ ಅನೇಕರು ಹೆಚ್ಚು ಹಣವನ್ನು ಸಂಪಾದಿಸಬಹುದು. ಶಾಸ್ತ್ರೋಕ್ತ ಲೇಹಾದಿಗಳಾದರೆ, ಗ್ರಂಥಗಳಿಂದ ಅವುಗಳ ಯೋಗ ಗಳನ್ನು ತಿಳಿದು, ಅವುಗಳ ಗುಣವೀರ್ಯಾದಿಗಳು ಹೀಗೆ ಇರಬೇಕು ಮತ್ತು ಅವು ಇಂಥಾ ವ್ಯಾಧಿಯಲ್ಲಿ, ಇಂಥಾ ಸಂದರ್ಭದಲ್ಲಿ, ಉಪಯೋಗಿಸಲ್ಪಡುವದಕ್ಕೆ ಯುಕ್ತವಾದವು ಎಂಬ ದನ್ನಾದರೂ ಊಹಿಸುವದು ಸಾಧ್ಯವಾಗುತ್ತದೆ. ಅನನ್ಯಯುಕ್ತಿಕ ಯೋಗಗಳು ಗುಪ್ತ ವಾದದರಿಂದ, ಅವುಗಳ ಗುಣದೋಷಗಳನ್ನು ಹಾಗೆ ಊಹಿಸುವದಕ್ಕೂ ಉಪಾಯವಿಲ್ಲ. ಅವು ಕಲವು ಸಂದರ್ಭಗಳಲ್ಲಿಯಾದರೂ ಅಪಾಯಕರವಾಗಿ ಪರಿಣಮಿಸದೆ ಇರಲಾರವು. ಅದಲ್ಲದೆ ಅನ್ಯರು ತಯಾರಿಸಿ ವಿಕ್ರಯಿಸುವ ಔಷಧವು ಯಾವದೇ ಆಗಲಿ, ಸರಿಯಾದ ಮತ್ತು ವೀರ್ಯವುಳ್ಳ ದ್ರವ್ಯಗಳ ಯೋಜನದಿಂದಲೇ ಕ್ರಮವಾಗಿ ಸಿದ್ಧವಾಗಿದ ಎಂತಾಗಲಿ, ಸುರಕ್ಷಿತವಾಗಿ ಇರಿಸಲ್ಪಟ್ಟಂಥಾದ್ದೆಂತಾಗಲಿ, ಕಾಲ ಕಳೆದು ಅಥವಾ ಬೇರೆ ಹೇತುಗಳಿಂದ ಕಟ್ಟು ವೀರ್ಯಹೀನವಾಗಿ ಅಥವಾ ದೋಷಕರವಾಗಿ ಪರಿವರ್ತಿಸಿರುವದಿಲ್ಲ ಎಂತಾಗಲಿ, ನಿಶ್ಚಿತವಾಗಿ ತಿಳಿಯುವ ಬಗೆ ಹೇಗೆ?

ರೋಗಿಗಳಿಗೆ ಅವರ ಅವಸ್ಥೆಗೆ ತಕ್ಕ ಹಾಗೆ ಕಷಾಯ, ಚೂರ್ಣ, ತೈಲ, ಘೃತ, ಲೇಹ, ಲೇಪಾದಿಗಳನ್ನು ಪ್ರತ್ಯೇಕವಾಗಿ ತಯಾರಿಸಿ ಉಪಯೋಗಿಸಿ ಚಿಕಿತ್ಸೆಮಾಡುವ ವೈದ್ಯರು ಈಗಲೂ ಅಲ್ಲಲ್ಲಿ ವಿರಳವಾಗಿ ಇದ್ದಾರೆ ಆದರ ಅವರು ಉಪಯೋಗಿಸುವ ಕಷಾಯಾದಿ ಗಳ ಯೋಗಗಳು ಸಾಧಾರಣವಾಗಿ ವೈದ್ಯಗ್ರಂಥಗಳಲ್ಲಿ ಹೇಳಲ್ಪಟ್ಟವುಗಳೇ ಆಗಿರುತ್ತವೆ. ರೋಗದ ಮತ್ತು ರೋಗಿಯ ಅವಸ್ಥಾಭೇದದ ಮೇಲೆ ಯೋಗಗಳಲ್ಲಿ ಭೇದಮಾಡುವಷ್ಟು ಬುದ್ಧಿಚಾತುರ್ಯವುಳ್ಳವರು ಅವರೊಳಗೆ ಕಡಿಮೆ.

ಶಸ್ತ್ರಂ ಶಾಸ್ತ್ರಾಣಿ ಸಲಿಲಂ ಗುಣದೋಷಪ್ರವೃತ್ತಯೇ |
ಪಾತ್ರಾಪೇಕ್ಷೀಣ್ಯತಃ ಪ್ರಜ್ಞಾಂ ಚಿಕಿತ್ಸಾರ್ಥಂ ವಿಶೋಧಯೇತ್ |
ಶಾಸ್ತ್ರಂ ಜ್ಯೋತಿಃ ಪ್ರಕಾಶಾರ್ಥಂ ದರ್ಶನಂ ಬುದ್ಧಿರಾತ್ಮನಃ |
ತಾಭ್ಯಾಂ ಭಿಷಕ್ ಸುಯುಕ್ತಾಭ್ಯಾಂ ಚಿಕಿತ್ಸನ್ ನಾಪರಾಧ್ಯತಿ || (ಚ. 51.)

(ಕತ್ತಿ, ಚೂರಿ, ಸೂಜಿ ಮುಂತಾದ) ಶಸ್ತ್ರಗಳು, ಶಾಸ್ತ್ರಗಳು, ನೀರು, ಇವು ಪಾತ್ರದ ಅವಸ್ಥಾಭೇದದ ಮೇಲೆ ಗುಣಕರ ಅಥವಾ ದೋಷಕರ ಆಗುತ್ತವೆ, (ಅಂದರೆ ಪಾತ್ರದಲ್ಲಿ ಕಲ್ಮಷವಿದ್ದರೆ ಅದರಲ್ಲಿ ತುಂಬಿದ್ದ ನೀರು ಹೇಗೆ ದೋಷಕರವಾಗುತ್ತದೋ, ಹಾಗೆ ಶಸ್ತ್ರವನ್ನಾಗಲಿ ಶಾಸ್ತ್ರವನ್ನಾಗಲಿ ಪ್ರಯೋಗಿಸುವ ಜನವು ದುಷ್ಟವಾಗಿದ್ದರೆ, ಅಥವಾ ಮಂದಬುದ್ಧಿಯಾದರೆ ಅವು ದೋಷಕರವಾಗಿ ಪರಿಣಮಿಸುತ್ತವೆ). ಆದ್ದರಿಂದ ವೈದ್ಯನು ತನ್ನ ಜ್ಞಾನವನ್ನು (ಸಚ್ಛಾಸ್ತ್ರಗಳನ್ನು ಓದಿ ಮತ್ತು ಸದ್ಗುರುಸೇವೆ ಮಾಡಿ) ಶುದ್ಧಮಾಡಿಕೊಳ್ಳಬೇಕು. (ಜ್ಞಾನದೃಷ್ಟಿ) ಪ್ರಕಾಶಕ್ಕೆ ಬೇಕಾದ ಬೆಳಕು ಶಾಸ್ತ್ರ, ಕಣ್ಣು ಸ್ವಬುದ್ಧಿ — ಇವೆರಡು ಸರಿಯಾಗಿ ಕೂಡಿಕೊಂಡಿದ್ದು, ಅವುಗಳನ್ನು ಉಪಯೋಗಿಸಿ, ಚಿಕಿತ್ಸೆಮಾಡುವ ವೈದ್ಯನು ತಪ್ಪಿಬೀಳುವುದಿಲ್ಲ

ವಿದ್ಯಾ ವಿತರ್ಕೋ ವಿಜ್ಞಾನಂ ಸ್ಮೃತಿಸ್ತತ್ಪರತಾ ಕ್ರಿಯಾ |
ಯಸ್ಯೈತೇ ಷಡ್ಗುಣಾಸ್ತಸ್ಯ ನ ಸಾಧ್ಯಮತಿವರ್ತತೇ || (ಚ. 51.)

ವಿದ್ಯೆ, ವಿಚಾರಶಕ್ತಿ, ಶಾಸ್ತ್ರಜ್ಞಾನ, ನೆನಪು, ವೈದ್ಯದಲ್ಲಿಯೇ ಮನಸ್ಸು, ಚಿಕಿತ್ಸೆ ನಡಿಸಿ ಪಡೆದ ಅನುಭವ, ಈ ಆರು ಗುಣಗಳು ಯಾರಲ್ಲಿ ಇರುತ್ತವೋ, ಅವನಿಗೆ ಸಾಧ್ಯವಾದ ಯಾವ ರೋಗವಾದರೂ ಅಸಾಧ್ಯವಾಗುವದಿಲ್ಲ.

ಪಾಶ್ಚಾತ್ಯ ವೈದ್ಯಕ್ರಮದಲ್ಲಿ ಔಷಧಜ್ಞಾನ ಸಂಪಾದನೆಯ ಪರಿಶ್ರಮವನ್ನೇ ಮುಖ್ಯವಾಗಿ ವಹಿಸಿಕೊಂಡ ಡಾಕ್ಟರರು ಬೇರೆ ಇದ್ದಾರೆ. ಅವರು ಒಂದೊಂದು ದ್ರವ್ಯವನ್ನು ಬಹು ವಿಧವಾಗಿ ಪರಿಶೋಧಿಸಿ, ಅದರ ಗುಣವನ್ನೂ ಪ್ರಭಾವವನ್ನೂ, ಅವರ ವೈದ್ಯಕ್ರಮಕ್ಕೆ ಬೇಕಾದಷ್ಟರ ಮಟ್ಟಿಗೆ, ಕಂಡುಹಿಡಿದು, ಅದು ಯಾವ ರೋಗದ ಪರಿಹಾರಕ್ಕೆ ಅಥವಾ ನಿವಾರಣಕ್ಕೆ ಉಪಯುಕ್ತ ಎಂತ ಆ ಶೋಧನದಿಂದ ಕಾಣುತ್ತದೋ ಅದನ್ನು ಆ ಉದ್ದೇಶಕ್ಕಾಗಿ ಎಲ್ಲಾ ಡಾಕ್ಟರರು ಉಪಯೋಗಿಸುತ್ತಾರೆ. ಆಯುರ್ವೇದ ಕ್ರಮದಲ್ಲಿ ಬಾಹ್ಯಾಂತರ ಚಿಕಿತ್ಸೆಗಳ ಸಾಫಲ್ಯಕ್ಕೆ ಹೆಚ್ಚಾಗಿ ಬೇರೆ ಬೇರೆ ದ್ರವ್ಯಗಳ ಯೋಜನೆಯೇ ಮುಖ್ಯವಾದದ್ದರಿಂದ, ಮೇಲೆ ವಿವರಿಸಲ್ಪಟ್ಟ ಷಡ್ಗುಣಗಳುಳ್ಳ ನಿಪುಣ ವೈದ್ಯರ ವರ್ಗವು ಬೆಳೆದೇ ಆಯುರ್ವೇದವು ಉದ್ಧಾರವಾಗಬೇಕಲ್ಲದೆ, ಅನ್ಯಗತಿ ಕಾಣುವದಿಲ್ಲ

ಹೀಗೆ ಕಾಲಪರಿವರ್ತನದಿಂದ ಆಯುರ್ವೇದೀಯ ಚಿಕಿತ್ಸಾಕ್ರಮದಲ್ಲಿ ಉತ್ಪನ್ನವಾಗಿರುವ ದೋಷಗಳನ್ನು ಬೇಗನೇ ಪರಿಹರಿಸುವದಕ್ಕೆ ಯತ್ನಿಸದೆ ಉಪೇಕ್ಷೆ ಮಾಡುತ್ತಾ ಹೋದರೆ, ಆಯುರ್ವೇದಚಿಕಿತ್ಸೆಯು ನಿಷ್ಫಲವಾಗಿ ಅಥವಾ ಅನರ್ಥವಾಗಿ ಪರಿಣಮಿಸಿದ ದೃಷ್ಟಾಂತಗಳು ಅಧಿಕವಾಗುತ್ತಾ ಬಂದು, ಆಯುರ್ವೇದದ ಮಹತ್ತ್ವವು ಪೂರ್ಣಿಮಾಚಂದ್ರನಂತೆ ಪ್ರಕಾಶಿಸುವದರ ಬದಲಾಗಿ, ಕೃಷ್ಣಪಕ್ಷದ ಚಂದ್ರನಂತೆ ದಿನೇ ದಿನೇ ಕಲಾಹೀನವಾಗುತ್ತಾ, ಕ್ರಮೇಣ ಅದಕ್ಕೆ ಅಮಾವಾಸ್ಯೆಯೇ ತಗಲುವದು. ದಿನೇ ದಿನೇ ಅಭಿವೃದ್ಧಿಗೊಳುತ್ತಿರುವ ಪಾಶ್ಚಾತ್ಯ ವೈದ್ಯಕ್ಕೆ ಈಗಿನ ಅಶುದ್ಧವಾದ ಆಯುರ್ವೇದೀಯ ಚಿಕಿತ್ಸಾ

ಕ್ರಮವು ಎದುರು ನಿಲ್ಲಲಾರದು. ಹಾಗೆ ಆಯುರ್ವೇದವನ್ನು ಕ್ಷಯಿಸುವದಕ್ಕೆ ಬಿಟ್ಟರೆ, ನಮ್ಮ ಪೂರ್ವಿಕರು ನಮಗೆ ಸುರಕ್ಷಿತವಾಗಿಟ್ಟುಕೊಂಡು ಕ್ರಮವಾಗಿ ಉಪಯೋಗಿಸಿ ಪ್ರಯೋಜನ ಪಡೆಯುವದಕ್ಕಾಗಿ ಕೊಟ್ಟಿರುವ, ಅವರು ಅತಿಶ್ರಮದಿಂದ ಗಳಿಸಿದ, ಅಮೌಲ್ಯವಾದ ನಿಧಿಯನ್ನು ನಾವು ನಮ್ಮ ಮೂಢತನದಿಂದಲೋ, ಅಸಡ್ಡೆಯಿಂದಲೋ, ಕಳೆದುಕೊಂಡ ಹಾಗೆ ಆಗುವದು. ಅದು ನಮಗೆ ನಾಚಿಕೆ ಮತ್ತು ಅದರಿಂದ ಈ ಜನನಿಬಿಡವಾದ ಭರತಖಂಡಕ್ಕೆ ಹೇರಳ ನಷ್ಟ.

7. ಆಯುರ್ವೇದಸಾರದ ಮುಖ್ಯ ಉದ್ದೇಶ

7. ಇಂಥಾ ವಿಚಾರಗಳೇ ನಾನು ಆಯುರ್ವೇದಸಾರ ಎಂಬ ಗ್ರಂಥವನ್ನು ಬರೆದು ಪ್ರಕಟಿಸಲು ಯತ್ನಿಸುವದಕ್ಕೆ ಮುಖ್ಯೋದ್ದೇಶ ಎಂಬದನ್ನು ಅದರ ಒಂದನೇ ಭಾಗದ ಉಪೋದ್ಘಾತವನ್ನು ಓದಿದವರು ತಿಳಿದಿರಬಹುದು. ಅಲ್ಲಿ ಬರೆದಿರುವ ವಿಷಯಗಳು ಕೆಲಮಟ್ಟಿಗೆ ಇಲ್ಲಿಯೂ ಇರುವದನ್ನು ಕಂಡು ನನ್ನಲ್ಲಿ ಪುನರುಕ್ತಿ ದೋಷವನ್ನು ಕೆಲವರು ಆರೋಪಿಸಬಹುದು. ಆದರೆ ನಮಗೆ ಕಾಲಮಹಿಮೆಯಿಂದ ಒದಗಿರುವ ದುರವಸ್ಥೆಯು ಬಹಳವಾಗಿ ಜನರ ಮನಸ್ಸಿನಲ್ಲಿ ನೆಟ್ಟುಕೊಳ್ಳದ ವಿನಾ, ಅದರ ಪರಿಹಾರದ ಶ್ರಮವನ್ನು ಯಾರೂ ವಹಿಸಿಕೊಳ್ಳುವ ಸಂಭವ ಕಾಣದ್ದರಿಂದ, ಅಂಥಾ ಪುನರುಕ್ತಿಯು ಅಗತ್ಯ ಎಂತಲೇ ನೆನಸುತ್ತೇನೆ.

"ಇತ್ಯೇತೇ ಷಡಾಸ್ಥಾಪನಸ್ಕನ್ಧಾ ರಸತೋಽನುವಿಭಜ್ಯ ವ್ಯಾಖ್ಯಾತಾಃ | ತೇಭ್ಯೋ ಭಿಷಗ್ಬುದ್ಧಿಮಾನ್ ಪರಿಸಂಖ್ಯಾತಮಪಿ ಯದ್ದ್ರವ್ಯಮಯೌಗಿಕಂ ಮನ್ಯೇತ ತದಪಕರ್ಷಯೇತ್ | ಯದ್ ಯಚ್ಚಾನುಕ್ತಮಪಿ ಯೌಗಿಕಂ ವಾ ಮನ್ಯೇತ ತತ್ ತದ್ದದ್ಯಾತ್ | ವರ್ಗಮಪಿ ವರ್ಗೇಣೋಪಸಂಸೃಜೇದೇಕಮೇಕೇನ ಅನೇಕೇನ ವಾ ಯುಕ್ತಿಂ ಪ್ರಮಾಣೀಕೃತ್ಯ | ಪ್ರಚರಣಮಿವ ಭಿಕ್ಷುಕಸ್ಯ ಬೀಜಮುಪಕರ್ಷಕಸ್ಯ ಸೂತ್ರಂ ಬುದ್ಧಿಮತಾಮಲ್ಪಮಪಿ ಅನಲ್ಪಜ್ಞಾನಾಯ ಭವತಿ | ತಸ್ಮಾತ್ ಬುದ್ಧಿಮತಾಮೂಹಾಪೋಹವಿತರ್ಕಾಃ ಮನ್ದಬುದ್ಧೇಸ್ತು ಯಥೋಕ್ತಾನುಗಮನಮೇವ ಶ್ರೇಯಃ | ಯಥೋಕ್ತಂ ಹಿ ಮಾರ್ಗಮನುಗಚ್ಛನ್ ಭಿಷಕ್ ಸಂಸಾಧಯತಿ ವಾ ಕಾರ್ಯ್ಯಮನತಿಮಹತ್ತ್ವಾದನತಿಹ್ರಸ್ವತ್ವಾದುದಾಹರಣಸ್ಯೇತಿ | "

(ಚ. 307.)

"ಹೀಗೆ ಆಸ್ಥಾಪನೋಪಯುಕ್ತವಾದ ದ್ರವ್ಯಸಮೂಹವನ್ನು ರಸಭೇದದ ಮೇಲೆ ಒಳವಿಭಾಗಗಳನ್ನಾಗಿ ವಿಂಗಡಿಸಿ, ಆರು ವರ್ಗಗಳು ಹೇಳಲ್ಪಟ್ಟವು. ಈ ವರ್ಗಗಳಿಂದ ಬುದ್ಧಿವಂತನಾದ ವೈದ್ಯನು ಯಾವ ದ್ರವ್ಯವು (ರೋಗಿಯ ಅವಸ್ಥಾಲಕ್ಷ್ಯದಿಂದ) ಯುಕ್ತವಾದ್ದಲ್ಲ ಎಂತ ತಿಳಿಯುತ್ತಾನೋ ಅದನ್ನು ಗಣದಲ್ಲಿ ಉಕ್ತವಾಗಿದೆ ಎಂಬದರಿಂದ ಇಡದೆ ತೆಗೆದು ಬಿಡಬೇಕು, ಗಣದಲ್ಲಿ ಹೇಳಲ್ಪಡದ ಯಾವ ಯಾವ ದ್ರವ್ಯವು ಯೋಗದಲ್ಲಿ ಸೇರಿಸುವದಕ್ಕ ಯುಕ್ತವಾದದ್ದೆಂತ ತಿಳಿಯುತ್ತಾನೋ ಅದನ್ನು ಹಾಕಬೇಕು, ಅಥವಾ ಯುಕ್ತಾಯುಕ್ತತೆಯ ವಿಚಾರದ ಮೇಲೆ ಒಂದು ಗಣಕ್ಕೆ ಇನ್ನೊಂದು ಗಣವನ್ನು, ಅಥವಾ ಒಂದು ದ್ರವ್ಯದ ಒದಲಾಗಿ ಬೇರೆ ಒಂದು ಅಥವಾ ಹೆಚ್ಚು ದ್ರವ್ಯಗಳನ್ನು ಕೂಡಿಸತಕ್ಕದ್ದು. ಭಿಕ್ಷುಕನಿಗೆ ಕೊಟ್ಟ ಒಂದು ಮುಷ್ಟಿ ಅಕ್ಕಿಯಂತೆ, (ಅಥವಾ) ಕೃಷಿಗಾರನಿಗೆ ಕೊಟ್ಟ ಬೀಜದಂತೆ, ಸೂತ್ರವು ಅಲ್ಪ

ವಾದಾಗ್ಯೂ ಬುದ್ಧಿಮಂತನಿಗೆ ಅಲ್ಪವಲ್ಲದ (ವಿಪುಲವಾದ) ಜ್ಞಾನಕ್ಕೆ ಸಾಧನವಾಗುತ್ತದೆ. ಆದದರಿಂದ ಬುದ್ಧಿಮಂತರಿಗೆ ಊಹೆ. ಆಲೋಚಿಸಿ ಸಂಶಯನಿವೃತ್ತಿಮಾಡುವ ಶಕ್ತಿ ಮತ್ತು ವಿಚಾರ ಮುಖ್ಯವಾದದ್ದು; ಆದರೆ ಮಂದಬುದ್ಧಿಯವನಿಗೆ ಹೇಳಿದ್ದನ್ನೇ (ಹೆಚ್ಚು ಕಡಿಮೆ ಮಾಡದೆ) ಅನುಸರಿಸುವದು ಶ್ರೇಯಸ್ಸು. ಉದಾಹರಣವು ಅತಿಮಹತ್ವದ್ದಾಗಲೀ ಅತಿಸಂಕ್ಷೇಪದ್ದಾಗಲೀ ಆಗಿರುವದಿಲ್ಲವಾದ್ದರಿಂದ, ವೈದ್ಯನು ತೋರಿಸಿಕೊಟ್ಟ ಮಾರ್ಗದಲ್ಲಿಯೇ ಹೋಗುವದರಿಂದ ಮಾಡಬೇಕಾದ ಕೆಲಸವನ್ನು ನೆರವೇರಿಸಿಯಾನು."

ಈ ಉಪದೇಶವು ಆಸ್ಥಾಪನೌಷಧವರ್ಗಗಳನ್ನು ಕುರಿತು ಹೇಳಲ್ಪಟ್ಟದ್ದಾದಾಗ್ಯೂ, ಅದು ಚಿಕಿತ್ಸಾಭಾಗಗಳಲ್ಲಿ ಉಕ್ತವಾದ ಎಲ್ಲಾ ಔಷಧಯೋಗಗಳಿಗೂ ಒಪ್ಪುವಂಥಾದ್ದು ಒಟ್ಟಾರೆ, ಆಯುರ್ವೇದದ ತತ್ತ್ವಗಳನ್ನು ಚನ್ನಾಗಿ ತಿಳಿದು ಗ್ರಹಿಸಿ, ಪೂರ್ವಿಕರಿಂದ ಬರೆಯಲ್ಪಟ್ಟ ಔಷಧನಿಘಂಟುಗಳಲ್ಲಿರುವ ವರ್ಣನದಿಂದಲೂ ತನ್ನ ಸ್ವಂತ ಅನುಭವದಿಂದಲೂ ಸುಲಭಸಂಪಾದ್ಯವಾದ ದ್ರವ್ಯಗಳೊಳಗೆ ಯಾವಯಾವದರ ಗುಣದೋಷಗಳ ಪರಿಚಯವು ತನಗೆ ಚನ್ನಾಗಿ ಉಂಟಾಗಿದೆಯೋ, ಅವುಗಳನ್ನೇ ಆ ತತ್ತ್ವಗಳ ಆಧಾರದ ಮೇಲೆ ಸ್ವಬುದ್ಧಿಕಲ್ಪನದಿಂದ ಯೋಜಿಸಿ, ರೋಗಗಳಿಗೆ ಸ್ವತಂತ್ರವಾಗಿ ಚಿಕಿತ್ಸೆ ನಡಿಸುವದೇ ಆಯುರ್ವೇದಕ್ಕೆ ಸಮ್ಮತವಾದದ್ದು ಎಂಬದು ಸ್ಪಷ್ಟ ಕಾಣುತ್ತದೆ. ಹಾಗೆ ಚಿಕಿತ್ಸೆ ನಡಿಸಿ ಇಷ್ಟಾರ್ಥವನ್ನು ಗಳಿಸುವದು ಸಾಧ್ಯ ಎಂಬದು ನನ್ನ ಅನುಭವದಿಂದ ಸಿದ್ಧವಾಗಿದೆ ಹತ್ತು ಹನ್ನೆರಡು ವಿಧವಾದ ಮಾತ್ರೆಗಳು, ಆರೇಳು ವಿಧದ ಲೇಹಗಳು, ನಾಲ್ಕೈದು ವಿಧದ ತೈಲಗಳು, ಮೂರುನಾಲ್ಕು ಘೃತವಿಶೇಷಗಳು, ಎಂಟು ಹತ್ತು ಬಗೆ ಚೂರ್ಣ, ಷರಬತ್ತು ಮುಂತಾದವು, ಇವುಗಳನ್ನು ಅನುಪಾನಭೇದದಿಂದ ಉಪಯೋಗಿಸಿ ಸುಮಾರು ನಾಲ್ವತ್ತು ವರ್ಷಗಳಿಂದ ಎಲ್ಲಾ ರೋಗಗಳಿಗೂ ಚಿಕಿತ್ಸೆಮಾಡುತ್ತಾ ಬಂದದರಿಂದ ಪ್ರಖ್ಯಾತಿಗೆ ಬರುವಷ್ಟು ಸಾಫಲ್ಯ ಉಂಟಾಗಿದೆ ಅಸಾಧ್ಯ ರೋಗಗಳಲ್ಲಿ ಸಹ ನನ್ನ ಚಿಕಿತ್ಸಾಕ್ರಮದಿಂದ ರೋಗಿಯ ಸಂಕಷ್ಟಗಳು ಬಹಳ ಮಟ್ಟಿಗೆ ಕಡಿಮೆಯಾಗುತ್ತವೆ ಎಂತಲೂ ಬಹು ಜನರಿಗೆ ಗೊತ್ತಾಗಿದೆ. ನಾನು ಉಪಯೋಗಿಸುತ್ತಾ ಬಂದ ಮಾತ್ರೆ, ಲೇಹ, ತೈಲಾದಿಗಳ ಯೋಗಗಳು ಪ್ರಾಯಶಃ ನನ್ನ ಸ್ವಬುದ್ಧಿಕಲ್ಪನದಿಂದ ನಿರ್ಮಿತವಾದವು. ಹಾಗೆ ಸೂಕ್ಷ್ಮ ರೀತಿಯ ಆಯುರ್ವೇದಚಿಕಿತ್ಸೆಯನ್ನು ಸಾರ್ಥಕವಾಗಿ ನಡಿಸುವ ಶಕ್ತಿಯನ್ನು ನಮ್ಮವರಲ್ಲ, ವಿಶೇಷವಾಗಿ ನಮ್ಮ ವೈದ್ಯರಲ್ಲಿ, ಬೆಳಿಸಬೇಕೆಂಬದೇ ಈ ಆಯುರ್ವೇದಸಾರ ಎಂಬ ಗ್ರಂಥದ ಮುಖ್ಯ ಉದ್ದೇಶವಾಗಿರುತ್ತದೆ.

ಈ ಚಿಕಿತ್ಸಾಭಾಗ ದ ಪರಿಗ್ರಹ (ಅಡಕ)

8. ಆಯುರ್ವೇದದಲ್ಲಿ ಚಿಕಿತ್ಸಾಸ್ಥಾನವು ಪ್ರತಿ ರೋಗದ ಹೆಸರನ್ನೂ, ಆ ರೋಗವನ್ನು ತಿಳಿಯುವದಕ್ಕೆ ಅವಶ್ಯವಾದ ನಿದಾನ, ಪೂರ್ವರೂಪ, ಲಿಂಗ, ಉಪಶಯಗಳನ್ನೂ, ಸಂಖ್ಯಾ-ಪ್ರಾಧಾನ್ಯ-ವಿಧಿ-ವಿಕಲ್ಪ-ಬಲ-ಕಾಲವಿಶೇಷ ಎಂಬ ಭೇದಗಳುಳ್ಳ ಸಂಪ್ರಾಪ್ತಿಯನ್ನೂ, ಅದಕ್ಕೆ ತಕ್ಕ ಪರಿಹಾರಗಳನ್ನೂ, ಪಥ್ಯಾಪಥ್ಯಗಳನ್ನೂ, ಆ ರೋಗದಲ್ಲಿ ಹೆಚ್ಚಿಗೆ ಉಪದ್ರವಗಳಾಗಿ ಒದಗುವ ಅನ್ಯವಿಕಾರಗಳನ್ನೂ, ಅವುಗಳಿಗೆ ಉಪಶಮನಗಳನ್ನೂ ವರ್ಣಿಸತಕ್ಕಂಥಾದ್ದು (1ನೇ ಭಾಗದ XVII—11 ನೋಡಿ) ರೋಗಗಳು ಅಸಂಖ್ಯೇಯ, ಔಷಧಗಳು ಅಸಂಖ್ಯೇಯ; ಔಷಧಗಳನ್ನು ಉಪಯೋಗಿಸುವ ವಿಧಾನಗಳು ಅಸಂಖ್ಯೇಯ, ಹಾಗಂದ ಮೇಲೆ ಚಿಕಿತ್ಸಾಭಾಗ

ವನ್ನು ಎಷ್ಟು ವಿಸ್ತಾರವಾಗಿ ಬರೆದರೂ ಅದನ್ನು ಸಂಪೂರ್ಣ ಮಾಡುವದು ಶಕ್ಯವಲ್ಲ; ಚಿಕಿತ್ಸಾ ಭಾಗವು ಪ್ರಾಯಶಃ ಆಯುರ್ವೇದದ ತತ್ತ್ವೋಪದೇಶ (ಸೂತ್ರ)ಗಳಿಗೆ ವ್ಯಾಖ್ಯೆ ಅಥವಾ ಉದಾಹರಣವಾದದ್ದರಿಂದಲೂ, ಆ ತತ್ತ್ವಗಳನ್ನು ಸಂಗ್ರಹಿಸಿ ವಿವರವಾಗಿ ಒಂದನೇ ಭಾಗದಲ್ಲಿ ವರ್ಣಿಸಿರುವದರಿಂದಲೂ, ಚಿಕಿತ್ಸಾಭಾಗವನ್ನು ಸಂಕ್ಷೇಪವಾಗಿ ಬರೆದರೆ ಸಾಕೆಂತ ಯೋಚಿಸಿದ್ದೆನು. ಆದರೆ ಎರಡನೇ ಭಾಗ ಹೊರಡದ ವಿನಾ ಆಯುರ್ವೇದಸಾರದ ಒಂದನೇ ಭಾಗದಿಂದ ಪ್ರಯೋಜನವಿಲ್ಲ ಎಂತ ಅನೇಕರು ಹೇಳುತ್ತಲೂ ಬರೆಯುತ್ತಲೂ ಇರುವದನ್ನು ಆಲೋಚಿಸಿದರೆ, ಚರಕನಿಂದ ನಿರ್ದಿಷ್ಟವಾದ ಸ್ವಬುದ್ಧಿಕಲ್ಪನದಿಂದ ರೋಗಪರಿಹಾರಕ್ಕೆ ತಕ್ಕ ಯೋಗಗಳನ್ನು ಮಾಡಿ ಚಿಕಿತ್ಸೆ ನಡಿಸುವ ಶಕ್ತಿಯಿಲ್ಲದ ಮಂದಬುದ್ಧಿಗಳು, ಅಥವಾ ಸಾಕಷ್ಟು ಉತ್ಸಾಹ ಮತ್ತು ವ್ಯವಸಾಯವಿಲ್ಲದವರು, ಈಗಿನ ವೈದ್ಯವರ್ಗದಲ್ಲಿ ಬಹಳವಾಗಿ ಕಾಣುತ್ತದೆ ಅಂಥವರಿಗೂ ಸಾಧಾರಣ ಜನರಿಗೂ ಪ್ರಯೋಜನಕರವಾಗುವಂತೆ ಇದನ್ನು ಸಾಕಷ್ಟು ವಿಸ್ತಾರವಾಗಿ ಬರೆಯುವರೆ ನಿಶ್ಚಯಿಸಿದ್ದಾಯಿತು ಅನೇಕ ಔಷಧಯೋಗಗಳು ಪುರಾತನದವು, ಮತ್ತು ಕಾಲಾಂತರಗಳಲ್ಲಿ ಪ್ರಸಿದ್ಧಿಗೆ ಬಂದು ವೈದ್ಯಗ್ರಂಥಗಳನ್ನು ರಚಿಸಿದ ಬೇರಬೇರೆ ವೈದ್ಯಶಿರೋಮಣಿಗಳಿಂದ ಅತ್ಯುಪಯುಕ್ತವಾಗಿ ಅನುಮೋದಿಸಲ್ಪಟ್ಟವು. ಅಂಥಾ ಪ್ರಾಜ್ಞರು ನವೀನವಾಗಿ ನಿರ್ಮಿಸಿದ ಯೋಗಗಳು ಬಹಳ ಇವೆ ಇವುಗಳೊಳಗೆ ಯುಕ್ತಿಯುಕ್ತವಾಗಿಯೂ ಸುಲಭಸಾಧ್ಯವಾಗಿಯೂ ಕಂಡ ಅನೇಕ ಯೋಗಗಳನ್ನು ಸರ್ವರಿಗೂ ಪ್ರಯೋಜನಕರವಾದವು ಎಂಬದರಿಂದ, ಆಯಾ ರೋಗಪ್ರಕರಣದಲ್ಲಿ ಉಲ್ಲೇಖಿಸಿಯದೆ. ಯಾವ ರೋಗದ ಚಿಕಿತ್ಸಾಪ್ರಕರಣದಲ್ಲಿಯಾದರೂ ವಿಶೇಷವಾದ ತತ್ತ್ವ ಅಡಗಿದ ಬೋಧೆ ಕಂಡಲ್ಲ ಅದನ್ನು ಸ್ಪಷ್ಟವಾಗಿ ವರ್ಣಿಸಲು ಯತ್ನಿಸಿಯದೆ.

9. ವೈದ್ಯನು ತನ್ನ ಕಿವಿ ಮುಂತಾದ ಪಂಚೇಂದ್ರಿಯಗಳ ಉಪಯೋಗದಿಂದಲೂ, ಪ್ರಶ್ನೆ ಮಾಡಿಯೂ, ರೋಗಿಯನ್ನು ಪರೀಕ್ಷಿಸುವ ಕ್ರಮವು, ಆ ಆರು ವಿಧಗಳಲ್ಲ ಯಾವದರಿಂದ ಯಾವ ಲಕ್ಷಣವಿಶೇಷಗಳನ್ನು ತಿಳಿಯತಕ್ಕದ್ದೆಂಬದು, ಆ ಲಕ್ಷಣಗಳಲ್ಲಿ ಪ್ರತ್ಯಕ್ಷದಿಂದ ತಿಳಿಯುವಂಥಾದ್ದು ಯಾವದು, ಅನುಮಾನದಿಂದ ತಿಳಿಯಬೇಕಾದದ್ದು ಯಾವದು ಎಂಬದು, ರೋಗಿಯ ನಾಡೀ, ಮೂತ್ರ, ಮಲ, ನಾಲಿಗ, ಸ್ವರ, ಸಂಸ್ಪರ್ಶನ, ರೂಪ, ದೃಷ್ಟಿ, ಇವುಗಳ ಮೂಲಕವಾಗಿ ಅಷ್ಟವಿಧ ಪರೀಕ್ಷೆ, ಅವುಗಳ ಸ್ವಸ್ಥಸ್ಥಿತಿಯ ಲಕ್ಷಣ, ಅವುಗಳಲ್ಲ ಯಾವ ದೋಷದಿಂದ ಅಥವಾ ಯಾವ ರೋಗದಿಂದ ಯಾವ ವಿಕಾರ ಉಂಟಾಗುತ್ತದೆಂಬದು, ಇವೇ ಮೊದಲಾದ ರೋಗಜ್ಞಾನವನ್ನು ಪಡಯುವ ಸಾಧನಗಳು ಒಂದನೇ ಭಾಗದ XVIIನೇ ಅಧ್ಯಾಯದಲ್ಲಿ ಸವಿಸ್ತಾರವಾಗಿ ವರ್ಣಿಸಲ್ಪಟ್ಟವೆ. ವಾತ-ಪಿತ್ತ-ಕಫಗಳೆಂಬ ಮೂರು ದೋಷಗಳ ನಿಜಸ್ವರೂಪ ಮತ್ತು ಕರ್ಮಗಳು, ಅವುಗಳ ಕೋಪ, ವೃದ್ಧಿ, ಕ್ಷಯಗಳಿಂದ ಉಂಟಾಗುವ ವಿಕಾರವಿಶೇಷಗಳು ಅವುಗಳ ಸಾಮಾನ್ಯ ಲಕ್ಷಣಗಳು, ಹಾಗೆಯೇ ರಸಾದಿ ಸಪ್ತಧಾತುಗಳ ನಿಜಸ್ವರೂಪ ವ ಕರ್ಮಗಳು, ಅವುಗಳು ಹೆಚ್ಚುಕಡಿಮೆಯಾದಾಗ್ಗೆ ಅಥವಾ ವಾತಾದಿ ದೋಷಗಳಿಂದ ಕೆಡಿಸಲ್ಪಟ್ಟಾಗ್ಗೆ ಸಂಭವಿಸುವ ವ್ಯಾಧಿಗಳು ಅಥವಾ ಅನಿಷ್ಟಲಕ್ಷಣಗಳು, ಅವುಗಳ ಪರಿಹಾರಕ್ಕೆ ಮಾರ್ಗಸೂಚನೆ, ಇವೇ ಮೊದಲಾದ ವಿವರಗಳು ಅದೇ ಭಾಗದ ಐದನೇ, ಆರನೇ ಅಧ್ಯಾಯಗಳಲ್ಲಿ ಸಂಗ್ರಹಿಸಲ್ಪಟ್ಟಿವೆ. ಈ ಮೂರು ಅಧ್ಯಾಯಗಳಲ್ಲಿ ಅಡಗಿರುವ ತತ್ತ್ವಗಳನ್ನು ಚನ್ನಾಗಿ ಅರಿತವನು ರೋಗ

ರೋಗದ ಪರೀಕ್ಷೆಗೆ ಆಗತ್ಯವಾದ ಮುಖ್ಯ ತತ್ತ್ವಗಳ ಸ್ಥಾನ

ಇಂಥಾದ್ದು, ಮತ್ತು ಅದರ ಚಿಕಿತ್ಸಾಮಾರ್ಗ ಇಂಥಾದ್ದು ಎಂಬದನ್ನು ನಿಃಸಂದೇಹವಾಗಿ ನಿರ್ಧಾರಮಾಡುವದಕ್ಕೆ ಶಕ್ತನಾಗುವನು ಎನ್ನುವದರಲ್ಲಿ ಸಂಶಯವಿಲ್ಲ. ನಾಡೀಪರೀಕ್ಷೆಯು ಅತಿ ಪ್ರಯೋಜನಕಾರಿಯಾದಾಗ್ಯೂ ಅದರಲ್ಲಿ ಕುಶಲತೆ ಪಡೆಯಲಾರದವನು ಆ ಅಧ್ಯಾಯಗಳಲ್ಲಿ ಅಡಗಿರುವ ಇತರ ತತ್ತ್ವಗಳನ್ನಾದರೂ ಸೂಕ್ಷ್ಮವಾಗಿ ಗ್ರಹಿಸಿ ಮನಸ್ಸಿನಲ್ಲಿ ಮುಂದಟ್ಟು ಮಾಡಿಕೊಳ್ಳದವನು ಆಯುರ್ವೇದಕ್ಕೆ ಸಮ್ಮತವಾದ ವ್ಯಾಧಿಪರೀಕ್ಷೆಯನ್ನಾಗಲಿ ಚಿಕಿತ್ಸೆಯನ್ನಾಗಲಿ ಮಾಡಲಾರನು.

ಒಂದೇ ಲಕ್ಷಣ ಎರಡು ದೋಷಗಳಿಗೆ ಉಕ್ತವಾಗಿರುವಲ್ಲಿ ದೋಷವನ್ನು ಗೊತ್ತುಮಾಡುವ ಉಪಾಯ

10. ಶೈತ್ಯ ಮತ್ತು ಸುಪ್ತಿ ವಾತದ ಗುಣಗಳಲ್ಲಿಯೂ, ಕಫದ ಗುಣಗಳಲ್ಲಿಯೂ ಕಾಣುತ್ತವೆ. ಶೀತವಾಗಿ ಅಥವಾ ನಿರ್ಜೀವವಾಗಿ ಇರುವ ಅಂಗಭಾಗವು ದೊರಗಾಗಿ, ಜಿಡ್ಡಿಲ್ಲದೆ ಒಣಗಿ, ಅಥವಾ ಅರುಣವರ್ಣವಾಗಿ ಇದ್ದರೆ, ಆ ಶೈತ್ಯ ಅಥವಾ ಸುಪ್ತಿ ವಾತದಿಂದ ಉಂಟಾದದ್ದೆಂತಲೂ, ಒದ್ದೆತರವಾಗಿ, ಜಿಡ್ಡುಳ್ಳದ್ದಾಗಿ, ಅಥವಾ ಬಿಳುಪುಳ್ಳದ್ದಾಗಿ ಇದ್ದರೆ, ಅದು ಕಫದ ಲಕ್ಷಣವೆಂತಲೂ ತಿಳಿಯಬೇಕು. ಸ್ತಂಭನವು ವಾತದ ಕರ್ಮಗಳೊಳಗೊಂದು, ಸ್ತಂಭವು ಕಫದ ಕರ್ಮಗಳಲ್ಲಿ ಸೇರಿದ್ದು, ಎಂತ ಹೇಳಲ್ಪಟ್ಟದ್ದರಿಂದ, ವಾಯು ತನ್ನ ಶಕ್ತಿಯಿಂದ ತಡೆಯುತ್ತದೆಂತಲೂ, ಕಫವು ಒಂದು ಗೋಡೆ ಅಥವಾ ಕಂಬದ ಹಾಗೆ ನಿಂತು ತಡೆಯಾಗಿ ಪರಿಣಮಿಸುತ್ತದೆಂತಲೂ ತಿಳಿಯತಕ್ಕದ್ದು ಪಿತ್ತವು ಅಗ್ನಿರೂಪವನ್ನು ಪಡೆದಾಗ್ಗ್ಯೆ ಸೂಕ್ಷ್ಮವಾಗಿ ಮೇಲಕ್ಕೇರುವ ಸ್ವಭಾವದ್ದಾಗುವದರಿಂದ ಅದಕ್ಕೂ ವಾತದ ಲಾಘವಗುಣವು ಹೇಳಲ್ಪಟ್ಟಿದೆ. ವಾತದ ಸ್ತಂಭನ ಉಂಟಾದ್ದಲ್ಲಿ ಸಿಡಿತ, ಶೂಲೆ ಮುಂತಾದ ವಾತದ ಇತರ ಲಕ್ಷಣಗಳು ಕಾಣುವದರಿಂದಲೂ, ಕಫದ ಸ್ತಬ್ಧತೆಯಲ್ಲಿ ವೇದನೆಯಿಲ್ಲದೆ ಅಥವಾ ಅಲ್ಪವಾಗಿರುವದು, ಕಲ್ಲುಕಟ್ಟಿದ ಹಾಗೆ ಗಟ್ಟಿಯಾಗಿರುವದು ಮುಂತಾದ ಕಫದ ಅನ್ಯ ಲಕ್ಷಣ ಕಾಣುವದರಿಂದಲೂ, ಭೇದವನ್ನು ಗೊತ್ತುಮಾಡತಕ್ಕದ್ದು. ಸ್ತಂಭನದಿಂದ ಬಾವು ಉಂಟಾಗಿದ್ದರೆ, ಆ ಬಾವನ್ನು ಬೆರಳಿನ ತುದಿಯಿಂದ ಒತ್ತಿದ ಗುಳಿಯು ಕೂಡಲೇ ಅದೃಶ್ಯವಾದರೆ ಅದು ವಾತದ್ದು, ಸಾವಕಾಶದಿಂದ ತುಂಬಿಕೊಳ್ಳುತ್ತದಾದರೆ, ಅದು ಕಫದ್ದು, ಅದಲ್ಲದೆ ಸಾಧಾರಣವಾಗಿ ವಾತದೋಷವಿರುವಲ್ಲಿ ಒತ್ತುವದರಿಂದ ಸುಖ ಕಾಣುತ್ತದೆ, ಕಫದ್ದಾದಲ್ಲಿ ಅದರಿಂದ ಪ್ರಯೋಜನವಿಲ್ಲ. ಕಫದ ಸ್ನೇಹಗುಣವು ಸ್ವಲ್ಪಕಡಿಮೆಯಾಗಿ ಪಿತ್ತದಲ್ಲಿಯೂ ಉಂಟಾದಾಗ್ಯೂ, ಪಿತ್ತದಿಂದ ಸ್ನೇಹ ಕಾಣುವಲ್ಲಿ ಬಿಸಿ, ಲಘುತ್ವ, ಶುಕ್ಲವೂ ಅರುಣವೂ ಅಲ್ಲದ ಇತರ ವರ್ಣ, ಮುಂತಾದ ಪಿತ್ತದ ಇತರ ಲಕ್ಷಣಗಳು ಇರುವದರಿಂದಲೂ, ಕಫದಿಂದ ಸ್ನೇಹ ಉಂಟಾಗಿರುವಲ್ಲಿ ಶೈತ್ಯ, ಗುರುತ್ವ, ಸ್ಥಿರತ್ವ, ಬಿಳೀವರ್ಣ, ಮುಂತಾದ ಕಫದ ಇತರ ಲಕ್ಷಣಗಳು ಕಾಣುವದರಿಂದಲೂ, ಭೇದವನ್ನು ಊಹಿಸತಕ್ಕದ್ದು. ಹಾಗೆಯೇ ಕ್ಲೇದವೂ ಕಫಪಿತ್ತಗಳೆರಡಕ್ಕೂ ಸಮಾನವಾದದ್ದು, ಕ್ಷಯಕ್ಕೆ ಪ್ರಧಾನ ಹೇತುವಾದ ವಾತದ ಲಕ್ಷಣಗಳಲ್ಲಿ ರೂಕ್ಷತೆಯು ಕಫಕ್ಷಯದಲ್ಲಿಯೂ ಕಾಣುವದು, ಈ ಸಂದರ್ಭಗಳಲ್ಲಿಯೂ ದೋಷದ ನಿರ್ಧಾರವನ್ನು ಇತರ ಲಕ್ಷಣಗಳನ್ನು ನೋಡಿಕೊಂಡು ಮಾಡತಕ್ಕದ್ದು.

11. ನಾಡೀಪರೀಕ್ಷೆಯ ವಿಷಯದಲ್ಲಿ ನಮ್ಮ ಮತವನ್ನು ಒಂದನೇ ಭಾಗದ ಉಪೋದ್ಘಾತದ 30—31—32ನೇ ಸಂಖ್ಯೆಗಳಲ್ಲಿ ಯುಕ್ತಿಯುಕ್ತವಾಗಿ ವರ್ಣಿಸಿದ್ದೇವೆ ಅಂದಿನಿಂದ ಈಗ ಸುಮಾರು ಹತ್ತು ವರ್ಷಕಾಲ ಕಳೆದಾಗ್ಯೂ, ಆ ಮತವು ಬಲ ಪಡುತ್ತಾ ಬಂದದೆ

ಅಲ್ಲದೆ, ಅದರಲ್ಲಿ ವ್ಯತ್ಯಾಸ ಮಾಡುವದಕ್ಕೆ ಹೇತುಗಳು ಸಂಭವಿಸಲಿಲ್ಲ. ಆದರೆ ಕಳೆದ ವರ್ಷ ಮೈಸೂರಲ್ಲಿ ಜರಗಿದ ನಿಖಿಲ ಭಾರತೀಯ ಆಯುರ್ವೇದ ಮಹಾಮಂಡಲದ ಸಮ್ಮೇಳನದಲ್ಲಿ ಅಧ್ಯಕ್ಷರಾಗಿದ್ದ ಕವಿರಾಜ ಗಣನಾಥಸೇನ್ ಸರಸ್ವತಿಯವರು ಆ ನಾಡೀ ಪರೀಕ್ಷೆಯನ್ನು ಕುರಿತು ಬಹಳ ತುಚ್ಛೀಕಾರದ ಮಾತುಗಳನ್ನು ಆಡಿದರೆಂಬ ಒಂದು ವಿಶೇಷ ಸಂಗತಿ ಸಂಭವಿಸಿಯದೆ. ಆ ಗೃಹಸ್ಥರಿಗೆ ಆಯುರ್ವೇದೀಯ ನಾಡೀಪರೀಕ್ಷಾಕ್ರಮದ ತಥ್ಯವನ್ನು ತಿಳಿಯುವ ಶಕ್ತಿಯನ್ನು ಮಾತ್ರ ಶ್ರೀದೇವರು ದಯಪಾಲಿಸಲಿಲ್ಲ ಎಂತ ಅವರ ಭಾಷಣವನ್ನು ಕೇಳಿದ ಸಭಿಕರು ಮತ್ತು ಅದರ ಮುದ್ರಿತ ಪ್ರತಿಯನ್ನು ಓದಿದವರು ತಿಳಿದುಕೊಂಡರೆ, ಆ ಭಾಷಣದಿಂದ ವಿಶೇಷ ಬಾಧಕ ವುಂಟಾಗಲಾರದು. ಆದರೆ ಆ ಗೃಹಸ್ಥರು ಆಯುರ್ವೇದಶಾಸ್ತ್ರದಲ್ಲಿ ಪ್ರವೀಣತೆ ಹೊಂದಿದವರೆಂಬ ಪ್ರಸಿದ್ಧಿಪಡೆದವರಾದ್ದರಿಂದಲೂ, ನಮ್ಮ ಆ ಉಪೋದ್ಘಾತದಲ್ಲಿ ಸೂಚಿಸಲ್ಪಟ್ಟಂತೆ ಆಯುರ್ವೇದೀಯ ಚಿಕಿತ್ಸಕರೊಳಗೆ ಬಹುಪಕ್ಷದವರು ಮೊದಲೇ ಶ್ರೀ ಸೇನರಂತೆ ಆಯುರ್ವೇದೀಯ ನಾಡೀಪರೀಕ್ಷೆಯು ಒಂದು ರಕ್ಕಿನ ಕಲ್ಪನೆ ಎಂಬ ಭಾವನೆಯುಳ್ಳವರಾಗಿದ್ದದರಿಂದಲೂ, ಆ ಭಾಷಣದ ಪರಿಣಾಮವು ಆಯುರ್ವೇದಾಭಿವೃದ್ಧಿಗೆ ಬಹು ಹಾನಿಕರವಾಗಬಹುದೆಂಬದು ಅತ್ಯಂತ ಶೋಚನೀಯ ನಾನು ತಿಂಗಳು 1ರ ರೂಪಾಯಿ 350 ತಲಬು ಸಿಕ್ಕುವ ಸರಕಾರಿ ಉದ್ಯೋಗದಿಂದ ನಿವೃತ್ತನಾಗಿ ಈಗ ತಿಂಗಳು 1ರ ರೂಪಾಯಿ 154ನ್ನು ಪೆನ್ಸನಾಗಿ ಪಡೆಯುತ್ತಿದ್ದೇನೆ ಸುಮಾರು ನಾಲ್ವತ್ತು ವರ್ಷಗಳಿಂದ ಆಯುರ್ವೇದ ಪ್ರಕಾರ ಚಿಕಿತ್ಸೆ ನಡಿಸುತ್ತಾ ಬರುವಲ್ಲ, ಯಾವಾಗಲಾದರೂ ಯಾರಿಂದಲೂ ನನ್ನ ಚಿಕಿತ್ಸೆಗೆ ಪ್ರತಿಫಲವನ್ನು ಬಯಸಿದ್ದಾಗಲಿ, ಪಡೆದದ್ದಾಗಲಿ, ಇಲ್ಲ ಸಾಧಾರಣವಾಗಿ ನನ್ನ ಔಷಧಗಳ ಖರ್ಚನ್ನು ಸಹ ನಾನೇ ಸಹಿಸಿಕೊಳ್ಳುತ್ತಿದ್ದೇನ. ಆ ನಾಡೀಪರೀಕ್ಷೆಯ ಕ್ರಮಕ್ಕೆ ನಾನು ಅವಲಂಬನವನ್ನು ಕೊಟ್ಟ ಕಾರಣದಿಂದ ನನ್ನ ಮೇಲೆ ಯಾವ ದೋಷಾರೋಪಣವನ್ನು ಶ್ರೀ ಸೇನರ ವರ್ಗದವರು ಮಾಡ್ಯಾರೋ ನಾನು ಊಹಿಸಲಾರೆ ನನಗಿಂತಲೂ ಚನ್ನಾಗಿ ಆ ನಾಡೀ ಪರೀಕ್ಷಾಕ್ರಮವನ್ನು ತಿಳಿದು, ಆ ಜ್ಞಾನದಿಂದ ಲೋಕೋಪಕಾರ ಮಾಡಿದವರು ಬಹು ಮಂದಿ ಮೊದಲು ಇದ್ದರೆಂತ ಕಾಣುತ್ತದೆ ಶ್ರೀ ಸೇನರ ಹಾಗ ಪ್ರಕಾಶಕ್ಕೆ ಬಾರದ ವೈದ್ಯರುಗಳಲ್ಲಿ ಆ ನಾಡೀಪರೀಕ್ಷೆ ಬಲ್ಲವರು ಅನೇಕರು ಇರುತ್ತಾರೆಂತ ನಂಬುತ್ತೇನೆ. ಅದು ಹೇಗಾದರೂ ಲೋಕದಲ್ಲಿ ಅತ್ಯುಪಯುಕ್ತವಾದ ಅನೇಕ ತತ್ತ್ವಗಳ ಜ್ಞಾನೋದ್ಭವವು (discovery). ಅಲ್ಪ ಕುಟುಂಬದಲ್ಲ ಜನ್ಮವೆತ್ತಿದ ಪುರುಷರಲ್ಲಿ ಉಂಟಾಗಿ, ಅವರು ಅವುಗಳನ್ನು ಸಾರಿದ್ದಾಗ್ಗೆ ಸಾಮಾನ್ಯ ಲೌಕಿಕರು, ಸರಕಾರ ಸಹ, ಅವರನ್ನು ಹುಚ್ಚರೆಂತ ಧಿಕ್ಕರಿಸಿದ ದೃಷ್ಟಾಂತಗಳನ್ನು ಪ್ರಾಜ್ಞರು ನೆನಪಿಗೆ ತಂದುಕೊಂಡು, ಮತದಾರರ ಪದವಿಗಳಿಗೆ ಲಕ್ಷ್ಯವಿಡದೆ, ಶುದ್ಧಾಂತಃಕರಣದಿಂದ ಈ ಪ್ರಮೇಯವನ್ನು ಪರಿಶೋಧಿಸುವರೆಂತ ಕೋರುತ್ತೇನೆ.

ನಾಡೀಪರೀಕ್ಷೆಯನ್ನು ಕುರಿತು ಮತಾಂತರ ವಿಚಾರ

12. ಮದ್ರಾಸ್ ಸರಕಾರಿ ಆಸ್ಪತ್ರೆಯಲ್ಲಿದ್ದ ರೋಗಿಗಳೊಳಗೆ ಇಬ್ಬರ ಹೆಬ್ಬೆಟ್ಟಿನ ಮೂಲದ ಕೆಳಗೆ ವಾತ-ಪಿತ್ತ-ಕಫ ಸ್ಥಾನಗಳಲ್ಲ (Sphygmograph) ಸ್ಫಿಗ್ಮೋಗ್ರಾಫ್ ಎಂಬ ನಾಡೀಗತ್ಯುಲ್ಲೇಖನ ಯಂತ್ರವನ್ನು ಇಟ್ಟು ತೆಗೆದ ರೇಖಾಮಾಲೆಗಳನ್ನು ಬಹು ಪ್ರಯಾಸದಿಂದ ಸಂಪಾದಿಸಿದೆ. ಒಬ್ಬನ ಕಫಸ್ಥಾನದಲ್ಲಿಯ ಗತಿಗಳನ್ನು ತೋರಿಸುವ ರೇಖಾಮಾಲೆ ಒಂದು, ವಾತ-ಪಿತ್ತ ಸ್ಥಾನಗಳಲ್ಲಿಯ ಗತಿಗಳನ್ನು ಪ್ರದರ್ಶಿಸುವ ರೇಖಾಮಾಲೆಗಳು ಎರ

ಡೆರಡು, ಹೀಗೆ ಐದು ರೇಖಾಮಾಲೆಗಳು, ಇನ್ನೊಬ್ಬನ ವಾತ-ಪಿತ್ತ ಸ್ಥಾನಗಳಿಗೆ ಸಂಬಂಧಪಟ್ಟ ರೇಖಾಮಾಲೆಗಳು ಒಂದೊಂದು, ಕಫಸ್ಥಾನದ್ದು ಎರಡು, ಹೀಗೆ ನಾಲ್ಕು ರೇಖಾಮಾಲೆಗಳು, ಒಟ್ಟು ಒಂಭತ್ತು ಇದ್ದವು. ಎರಡನೇಯವನ ಕಫಸ್ಥಾನದ ರೇಖಾಮಾಲೆ ಎರಡರಲ್ಲಿಯೂ ಮೇಲಿನ ಸಾಲಿನ ಮಸ್ತಕಗಳು (apex of the primary or percussive wave) ಇವೇ ನಾಡೀಬಡಿತ ಎಂಬ ರಕ್ತದ ತೆರೆಯಲ್ಲಿಯ ಕೋಟಿ ಅಥವಾ ಕೊನ ಒಂದರಲ್ಲಿ 18, ಮತ್ತೊಂದರಲ್ಲಿ 21 ಇದ್ದವಲ್ಲದೆ, ಅವುಗಳ ಏರಿಕೆ ವಾತಸ್ಥಾನದಲ್ಲಿಯವಕ್ಕಿಂತ ಬಹಳ ಕಡಿಮೆಯಾಗಿಯೂ, ಕೊನೆಗಳು ಬಹುಶಃ ಚಟ್ಟೆಯಾಗಿ ಒಂದೊಂದು ಮಾತ್ರ ಚೂಪಾಗಿಯೂ, ಒಂದರಿಂದೊಂದಕ್ಕೆ ಹೆಚ್ಚಾಗಿ ಸಮೀಪವಾಗಿ, ಕೆಲವು ದೂರವಾಗಿಯೂ ಇದ್ದವು. ವಾತಸ್ಥಾನದ ರೇಖಾಮಾಲೆಯಲ್ಲಿ ಮಸ್ತಕಗಳು ಹದಿನಾರೇ. ಈ ನಾಡಿಯು ನೆಟ್ಟಗಾಗಿ ಸಾಕಷ್ಟು ಎತ್ತರಕ್ಕೆ ಏರಿದ್ದು, ಒಂದರಿಂದೊಂದಕ್ಕೆ ಸಮದೂರದಲ್ಲಿ, ಅಂದರೆ ಕಾಲಾಂತರಭೇದವಿಲ್ಲದೆ, ಇದ್ದದರಿಂದ ರೋಗಿಯಲ್ಲಿ, ಯಂತ್ರವನ್ನಿಟ್ಟ ಸ್ಥಾನ ಸರಿಯಾಗಿದ್ದರೆ, ವಾತವು ಸ್ಥಾನದಲ್ಲಿಯೇ ಬಲವಾಗಿ ಬೇರೆ ದೋಷವಿಲ್ಲದ ಇತ್ತೆಂತ ಊಹಿಸಬಹುದಾಗಿ ಕಂಡಿತು. ಪಿತ್ತದಲ್ಲಿ ಮಸ್ತಕಗಳು 18, ಅವಲ್ಲಾ ಚೂಪಾಗಿಯೇ ಇದ್ದವು. ಮಿಕ್ಕ ಲಕ್ಷಣಗಳೆಲ್ಲ ಕಫನಾಡಿಯವಂತೆಯೇ ಒಂದನೆಯವನಿಗೆ ಸಂಬಂಧಿಸಿದ ರೇಖಾಮಾಲೆಗಳು ಐದರಲ್ಲಿಯೂ ಮಸ್ತಕಗಳು 16 ಅಥವಾ 17 ಇದ್ದವು ಪಿತ್ತನಾಡಿಯ ಏರಿಕೆಗಳು ನೆಟ್ಟಗಾಗಿದ್ದರೂ ಸಾಕಷ್ಟು ಎತ್ತರವಿರಲಿಲ್ಲ. ವಾತ-ಕಫಗಳ ಏರಿಕೆರೇಖೆಗಳು ನೆಟ್ಟಗಾಗಿರುವ ಬದಲಾಗಿ ಸ್ವಲ್ಪ ವಾಲಿಕೊಂಡಿದ್ದವು. ಈ ಭೇದಗಳು ದೋಷಗಳ ಯಾವ ಅವಸ್ಥಾಂತರಗಳನ್ನು ಸೂಚಿಸುತ್ತವೆ ಎಂಬ ವಿಚಾರ ಪ್ರಕೃತ ಅವಶ್ಯವಲ್ಲ ಯಂತ್ರವನ್ನು ವಾತಾದಿಗಳ ಸರಿಯಾದ ಸ್ಥಾನಗಳಲ್ಲಿಯೇ ಇಟ್ಟಿದ್ದರೆಂಬದು ನಿಶ್ಚಿತವಲ್ಲ. ಆದರ ಮೂರು ಸ್ಥಾನಗಳಲ್ಲ ಯಂತ್ರವನ್ನಿಟ್ಟು ತೆಗೆದ ರೇಖಾಮಾಲೆಗಳೊಳಗೆ ಒಂದಕ್ಕ ಸರಿಸಮಾನವಾದದ್ದು ಇನ್ನೊಂದು ಇಲ್ಲ ಎಂಬದು ಸ್ಪಷ್ಟವಾಗಿತ್ತು. ನಾಡೀ ಒಂದೇ, ಅದರ ಬಡಿತಗಳು ಹೃದಯದ ಬಡಿತವನ್ನನುಸರಿಸಿರತಕ್ಕಂಥವು, ಆದದರಿಂದ ಸ್ಥಾನಭೇದವಾದ್ದರಿಂದ ಬಡಿತಗಳಲ್ಲಿ ಭೇದ ಉಂಟಾಗಲಾರದು ಎಂಬದೊಂದೇ ನಮ್ಮ ವಿರುದ್ಧಪಕ್ಷದವರ ಯುಕ್ತಿವಾದ. ಅದು ಬರೀ ನೀರಿನ ಗುಳ್ಳೆಯಂತೆ ನಿಸ್ಸಾರವಾದದ್ದು ಎಂತ ಒಡೆದುತೋರಿಸಲಿಕ್ಕ ನಮಗೆ ದೊರೆತ ಒಂಭತ್ತು ನಾಡೀರೇಖಾಮಾಲೆಗಳ ರೂಪಾಂತರಗಳು ಸಾಕಾಗಿದ್ದವು ಎಂತ ನಮಗೆ ತೋರಿದರೂ, ಅವುಗಳನ್ನು ತೆಗೆದು ನಮಗೆ ಕಳುಹಿಸುವ ಶ್ರಮವನ್ನು ಪಡದ ಡಾಕ್ಟರರು ಆ ಭೇದಗಳೆಲ್ಲಾ ಯಂತ್ರದ ಒತ್ತುವಿಕೆ ವ್ಯತ್ಯಾಸದಿಂದ ಉಂಟಾದವು ಎಂಬ ಒಂದೇ ಮಾತಿನಿಂದ ಸಮಾಧಾನ ಹೇಳಿಬಿಟ್ಟರು. ಯಂತ್ರದ ಒತ್ತುವಿಕೆ ಹಚ್ಚುಕಡಿಮೆ ಆಗದಂತೆ ಅದನ್ನು ಇರಿಸುವದಕ್ಕೆ ಅದರಲ್ಲಿಯೇ ಉಪಾಯ ಕಲ್ಪಿಸಲ್ಪಟ್ಟದೆ ಎಂತ ಕಾಣುತ್ತದೆ. ಅದಲ್ಲದೆ, ಒತ್ತುವಿಕೆ ಹೆಚ್ಚಾದ ಹಾಗೆ ನಾಡೀಮಸ್ತಕಗಳ ಏರಿಕೆ ಕಡಿಮೆಯಾಗುತ್ತದೆ ಎಂತ ಪಾಶ್ಚಾತ್ಯ ವೈದ್ಯಗ್ರಂಥಗಳು ಹೇಳಿರುತ್ತಾ, ಎರಡನೇಯವನ ವಾತಸ್ಥಾನದಲ್ಲಿಯ ರೇಖೆಗಳ ಏರಿಕಯು ಇತರ ಎರಡು ಸ್ಥಾನಗಳಲ್ಲಿಯ ರೇಖೆಗಳ ಏರಿಕೆಗಿಂತಲೂ ಹೆಚ್ಚಾಗಲಿಕ್ಕೆ ಕಾರಣವೇನು? ವಾತಸ್ಥಾನದಲ್ಲಿ ನಾಡಿಯು ಇತರ ಎರಡು ಸ್ಥಾನಗಳಲ್ಲಿಯದಕ್ಕಿಂತ ಮೇಲಕ್ಕೆ ಇರಬೇಕಷ್ಟೆ. ಅಂದರ ನಾಡಿಗೂ ಯಂತ್ರಕ್ಕೂ

ನಾಡೀಗತ್ಯಕ್ಕಲ್ಲೀಖನ ಯಂತ್ರ ದ್ವಾರಾ ಮಾಡಿದ ಪರಿಶೋಧನ

ಮಧ್ಯದ ಮಾಂಸಾದಿಗಳ ಹಾಳೆ ತೆಳ್ಳಗಾಗಿರಬೇಕಷ್ಟೆ! ಇಂಥಾ ಪ್ರಶ್ನೆಗಳನ್ನು ಆಲೋಚಿಸು ವಷ್ಟು ಸಹ ಸಮಾಧಾನ ಅವರಿಗೆ ಇದ್ದ ಹಾಗೆ ಕಾಣಲಿಲ್ಲ. ಅದೇ ಡಾಕ್ಟರರು ಒಮ್ಮೆ ನನ್ನ ಲ್ಲಿಗೆ ಬಂದಿದ್ದರು. ಅವರ ನಾಡಿಯನ್ನು ನಾನು ಪರೀಕ್ಷಿಸಿ, ವಾತಾದಿಗತಿಗಳಲ್ಲಿ ಭೇದವಿದ್ದದ್ದನ್ನು ಕಂಡು, ಅವರನ್ನು ತಮ್ಮ ನಾಡಿಯನ್ನೇ ಪರೀಕ್ಷಿಸಬೇಕಾಗಿ ಕೇಳಿಕೊಂಡೆ. ಅವರು ಹಾಗೆ ಪರೀಕ್ಷಿಸಿ, ತಮಗೇನೂ ಭೇದ ಕಾಣುವದಿಲ್ಲ ಎಂದರು. ಬೇರೆಯವರು ಸಹ ನನಗೆ ಸ್ಪಷ್ಟ ವಾದ ಭೇದ ಕಾಣುವಲ್ಲಿ ತಮಗೆ ಆ ಭೇದಗಳು ಗೊತ್ತಾಗುವದಿಲ್ಲ ಎಂತ ಹೇಳಿದ್ದು ಉಂಟು. ಇದೆಲ್ಲ ನನಗೆ ಆಶ್ಚರ್ಯಕರವಾಗಿ ಕಂಡರೂ, ನಾಡಿಯನ್ನು ಅವರು ಒತ್ತುವದು ಬಹು ಕಡಿಮೆಯಾಗಿ ಅಥವಾ ಬಹು ಹೆಚ್ಚಾಗಿ, ನಾಡೀಗತಿಭೇದಗಳು ಅವರಿಗೆ ತಿಳಿಯದ ಹೋಗುವದಾಗಿರಬೇಕೆಂತ ಊಹಿಸುತ್ತೇನೆ

13. ಪ್ರಮಾಣ ಸಿಗಲಿಲ್ಲ ಎಂಬದರಿಂದ ಪ್ರತ್ಯಕ್ಷವನ್ನು ಮನ್ನಿಸದಿರುವದು ಹೇಗೆ? ಈ ಭಾಗವನ್ನು ಬರೆಯುವ ಸಮಯದಲ್ಲಿಯೇ ಒಬ್ಬ 13 ವರ್ಷ ಪ್ರಾಯದ ಹುಡುಗನು ನನ್ನ ಹತ್ತರ ಬಂದು, ತನ್ನ ಬಲದ ತೊಡೆಯ ಮಾಂಸಖಂಡದಲ್ಲಿ ಸಹಿಸಲು ಕಷ್ಟ ವಾದ ಸೋವು ಉಂಟು ಆ ನೋವು ಆರಂಭದಲ್ಲಿ ತೊಡಸಂದಿನಲ್ಲಿ ಇತ್ತು ಮತ್ತು ಇಲ್ಲಿಯ ಧತ್ತೂರಾದಿ ತೈಲವನ್ನು ಹಚ್ಚಿದರಿಂದ ಗುಣಕಾಣಲಿಲ್ಲ ಎಂತ ಹೇಳಿ ಔಷಧವನ್ನು ಕೇಳಿದ.—ಆ ತೈಲ ಮೊದಲು ಇಲ್ಲಿಂದ ಯಾವದಕ್ಕೋ ಕೊಂಡುಹೋದದ್ದ ರಲ್ಲಿ ಸ್ವಲ್ಪ ಉಳಿದಿತ್ತಂತೆ — ನೋವಿರುವ ಸ್ಥಳದಲ್ಲಿ ಬೇರೆ ಬಾವು ವಗೈರ ಲಕ್ಷಣಗಳು ಕಾಣ ಲಿಲ್ಲ ಅವನ ನಾಡಿಯನ್ನು ಪರೀಕ್ಷಿಸಲಾಗಿ, ಪಿತ್ತಸ್ತಬ್ಧ, ಕಫಸ್ಥಾನಚ್ಯುತ, ಮತ್ತು ವಾತ ಅಸ್ಥಿರವಾಗಿ ಕಂಡಿತು. "ಮೂರು ನಾಡಿಗಳಲ್ಲಿಯೂ ದೋಷ ಕಾಣುವಾಗ್ಗೆ ನೀನು ನೋವಿನ ಲಕ್ಷಣ ಒಂದನ್ನೇ ಹೇಳುತ್ತಿ. ನಿನ್ನಲ್ಲಿ ಕಾಹಿಲೆಯ ಲಕ್ಷಣಗಳು ಬೇರೆ ಕಾಣಬೇಕು" ಎಂತ ನಾನು ಹೇಳಿದ ಮೇಲೆ ತನಗೆ ಹಸಿವಯೇನೂ ಇಲ್ಲ ಎಂತಲೂ, ಶಾಲೆಯಲ್ಲಿ ತನ್ನನ್ನು ಡಾಕ್ಟ ರರು ಪರೀಕ್ಷಿಸಿದ್ದಾಗ್ಗೆ ತನ್ನ ಆರೋಗ್ಯ ಸರಿ ಇಲ್ಲ ಎಂತ ಹೇಳಿದ್ದರೆಂತಲೂ ಹೇಳಿದ. ಅವನಿಗೆ ದನದ ಹಾಲು 1 ಡ್ರಾಮ್, ಶುಂಠಿ ರಸ ½ ಡ್ರಾಮ್ ಬೆರಸಿ, ಅದರಲ್ಲಿ ಜ್ವರಭೈರವ ಮಾತ್ರೆ— ಅರ್ಧದ ಪ್ರಕಾರ ತೇದು, ಕಾಲು ಚಮಚೆ ಸಕ್ಕರೆ ಕೂಡಿಸಿ, ಸೇವಿಸ ಹೇಳಿ, ಎರಡು ಸರ್ತಿಗೆ ಮಾತ್ರೆ ಕೊಡಲ್ಪಟ್ಟಿತು. ಮಾರಣೆ ದಿನ ವಿಚಾರಿಸಿದ್ದಲ್ಲಿ ಹಾಗೆ ಎರಡು ಹೊತ್ತು ಮಾತ್ರೆ ಸೇವಿಸಿದ ರಿಂದಲೇ ಅವನಿಗೆ ನೋವು ಹೋಗಿ ಸೌಖ್ಯವಾಯಿತೆಂತ ತಿಳಿಯಿತು. ನಾಡೀಪರೀಕ್ಷೆ ಇಲ್ಲ ದವರು ಅವನಿಗೆ ಯಾವದಾದರೊಂದು ಲೇಪವನ್ನೋ, ವಿರೇಚನ ಔಷಧವನ್ನೋ ಕೊಡು ತ್ತಿದ್ದರಲ್ಲದೆ, ನಾನು ವಿಧಿಸಿದ ಪರಿಹಾರವನ್ನು ಹೇಳುತ್ತಿದ್ದಿಲ್ಲ ಎಂತ ನೆನಸುತ್ತೇನೆ. ಹೀಗೆ ರೋಗಿ ಹೇಳದ ಅನೇಕ ಲಕ್ಷಣಗಳನ್ನು ಅವನ ನಾಡೀಗತಿಗಳ ಆಧಾರದಿಂದ ಅವನಿಗೆ ಪ್ರಶ್ನೆ ಮಾಡಿ ಅವನ ಬಾಯಿಯಿಂದ ಹೊರಡಿಸುತ್ತಿದ್ದೇನೆ. ನನ್ನ ಚಿಕಿತ್ಸೆ ನಡೆಯುತ್ತಿರುವಾಗ್ಗೆ ರೋಗಿಯ ನಾಡೀಗತಿಗಳಲ್ಲಿ ಕಂಡ ಹೆಚ್ಚುಕಡಿಮೆಯ ಮೇಲೆ ಅವನು ಇಂಥಾ ವಿಧವಾಗಿ ಅಪಥ್ಯಮಾಡಿರಬೇಕೆಂತ ಊಹಿಸಿ ಹೇಳಿದ್ದು ಸಾಧಾರಣವಾಗಿ ಸರಿಬೀಳುತ್ತದೆ. ಕೆಲವು ಸಂದರ್ಭಗಳಲ್ಲಿ ನೀನು ಮುಳ್ಳುಸವತೆಕಾಯಿಯನ್ನು ತಿಂದಿರಬೇಕು, ನೀನು ಬಾಳೆಹಣ್ಣನ್ನು ತಿಂದಿರಬಹುದು, ನೀನು ಕೋಳಿಮಾಂಸವನ್ನು ತಿಂದಿರಬಹುದು, ನೀನು ಅವಲಕ್ಕಿಯನ್ನು ತಿಂದಿರಬೇಕು, ನೀನು ನಿದ್ರೆಕಟ್ಟಿದ್ದಿ, ನೀನು ಉಪವಾಸ ಮಾಡಿದ್ದಿ, ನೀನು ಹೇಳಿದಷ್ಟು ಹಾಲನ್ನು

ನಾಡೀಪರೀಕ್ಷಾ ಸಿದ್ಧಿಯ ಕೆಲವು ದೃಷ್ಟಾಂತಗಳು

ಸೇವಿಸಲಿಲ್ಲ ಎಂಬೀ ತರದ ಅಪಥ್ಯದ ವಿವರವನ್ನು ಊಹಿಸಿ ಹೇಳಿದ್ದು ಸಹ ಅನೇಕ ಸರ್ತಿ ಸರಿಬಿದ್ದದೆ. ಅಪಥ್ಯ ಮಾಡಿದರೆ, ಅದನ್ನು ನಾನು ನಾಡೀಪರೀಕ್ಷೆಯಿಂದ ಕಂಡು ಹಿಡಿಯುತ್ತೇನೆಂಬ ಭಯದಿಂದಲೇ ಅನೇಕರು ನನ್ನಲ್ಲಿಗೆ ಚಿಕಿತ್ಸೆಗೆ ಬರುವದಕ್ಕೆ ಹಿಂಜರಿಯುತ್ತಾರೆಂತ ಬಹು ಜನರು ನನ್ನ ಹತ್ತರ ಹೇಳಿದ್ದುಂಟು. ಶ್ರೀ ಧನ್ವಂತರಿಯು ನನಗೆ ಅನುಗ್ರಹಿಸಿದ ನಾಡೀಪರೀಕ್ಷಾಜ್ಞಾನವು ಬಹು ಅಲ್ಪವಾದಾಗ್ಯೂ, ಅದು ಎಷ್ಟರ ಮಟ್ಟಿಗೆ ಪ್ರಯೋಜನಕಾರಿಯಾಗಿದೆ ಎಂಬದನ್ನು ವಾಚಕರ ಗಮನಕ್ಕೆ ತರುವದಕ್ಕೋಸ್ಕರ ಇನ್ನೊಂದು ವಿಶೇಷವಾದ ದೃಷ್ಟಾಂತವನ್ನು ಕೊಡುತ್ತೇನೆ.

ಆಮಶಂಕೆ ರೋಗದಿಂದ ಪೀಡಿತನಾದ ಒಬ್ಬ ಕ್ರೈಸ್ತಮತದ ಗೃಹಸ್ಥನು ಇಲ್ಲಿಯ ಒಂದು ಆಸ್ಪತ್ರೆಯನ್ನು ಸೇರಿ, ಒಬ್ಬ ದೀರ್ಘಾನುಭವವುಳ್ಳ ಮತ್ತು ಪ್ರಸಿದ್ಧಿಪಡೆದ ಡಾಕ್ಟರರ ಚಿಕಿತ್ಸೆಯಲ್ಲಿ ಸುಮಾರು 20 ದಿನ ಇದ್ದನಂತೆ. ಆ ಡಾಕ್ಟರರು ಬಹು ವಿಧವಾಗಿ ಚಿಕಿತ್ಸೆ ನಡಿಸಿದರೂ, ಅವನ ರೋಗವು ಶಮನವಾಗುವದರ ಬದಲಾಗಿ ವೃದ್ಧಿಯಾಗುತ್ತಲೇ ಬಂದದ್ದನ್ನು ಕಂಡು, ಧೈರ್ಯಕೆಟ್ಟು, ತನ್ನ ಅಭಿಪ್ರಾಯವನ್ನು ರೋಗಿಯ ಆಪ್ತಬಂಧುಗಳಿಗೆ ಗುಪ್ತವಾಗಿ ಸೂಚಿಸಿದರು. ಆ ರೋಗಿಯನ್ನು ಆಸ್ಪತ್ರೆಯಲ್ಲಿಯೇ ಸಾಯುವದಕ್ಕೆ ಬಿಡುವದು ರೋಗಿಯ ಕಡೆಯವರಿಗೆ ಇಷ್ಟವಿಲ್ಲದ್ದರಿಂದ, ಅವರು ಅವನನ್ನು ಮನೆಗೆ ಕರತಂದರು. ಆ ಮೇಲೆ ನನ್ನನ್ನು ಕರಕೊಂಡು ಹೋಗಿ, ರೋಗಿಯನ್ನು ತೋರಿಸಿ, ನನ್ನ ಅಭಿಪ್ರಾಯವನ್ನು ಗುಪ್ತವಾಗಿ ತಿಳಿಯುವದಕ್ಕೆ ಒಂದು ಪ್ರತ್ಯೇಕ ಕೋಣೆಗೆ ಕರಕೊಂಡು ಹೋದರು. ಡಾಕ್ಟರರ ಅಭಿಪ್ರಾಯದಂತೆಯೇ ನನ್ನದೂ ಅಶುಭವಾಗಿರುವದೆಂತ ಅವರು ನೆನಸಿದ್ದರೆಂಬದು ಸ್ಪಷ್ಟ ಕಂಡಿತು. “ಆಯುರ್ವೇದಕ್ರಮದಿಂದ ಈ ರೋಗವನ್ನು ವಾಸಿಮಾಡುವದು ಸುಲಭ, ನೀವೆಲ್ಲ ನಾನು ಹೇಳುವಂತೆ ಸೂಕ್ಷ್ಮವಾಗಿ ಅನುಸರಿಸಿ ನಡದರೆ, ರೋಗಿಗೆ ಬೇಗನೇ ಗುಣವಾಗುತ್ತದ” ಎಂತ ನಾನು ಹೇಳಿದ್ದನ್ನು ಅವರು ನಂಬಲಿಲ್ಲ ಎಂತ ಅವರ ಚರ್ಯದಿಂದ ಕಂಡಿತು. ಆದಾಗ್ಯೂ ಬೇರೆ ಉಪಾಯವಿಲ್ಲದ್ದರಿಂದ ನನ್ನಿಂದ ಚಿಕಿತ್ಸೆ ಮಾಡಿಸುವದಕ್ಕೆ ಒಪ್ಪಿದರು. ನಾನು ಹೇಳಿದ ರೀತಿ ಪಥ್ಯವನ್ನು ಕೊಡಲಿಕ್ಕೆ ಅವರು ಅಂಜಿದರು. ಮೊಸರನ್ನವನ್ನು ರೋಗಿಗೆ ಉಣ್ಣಲಿಕ್ಕೆ ಕೊಡಿ ಎಂತ ನಾನು ಹೇಳಿದ ಪ್ರಕಾರ ಒಂದೆರಡು ದಿನ ಮಾಡಲಿಲ್ಲ. ನಾನು ನಾಡೀಪರೀಕ್ಷೆಯ ಆಧಾರದಿಂದ ಅವರು ಮೊಸರನ್ನವನ್ನು ರೋಗಿಗೆ ಕೊಡಲಿಲ್ಲ ಎಂತಲೂ, ನನ್ನಲ್ಲಿ ಪೂರ್ಣ ವಿಶ್ವಾಸವಿಲ್ಲದಿದ್ದರೆ ಅವರು ಬೇರೆಯವರಿಂದ ರೋಗಿಗೆ ಚಿಕಿತ್ಸೆ ಮಾಡಿಸಬೇಕೆಂತಲೂ ಹೇಳಿದೆ. ಅದರನಂತರ ಹೆದರಿ ಹೆದರಿ ಮೊಸರನ್ನವನ್ನು ರೋಗಿಗೆ ಉಣ್ಣಿಸಿದರು. ಬರೇ ಹಾಲನ್ನು ಕುಡಿಯಕೊಡಬಾರದೆಂತ ನಾನು ಹೇಳಿದ್ದಾಗ್ಯೂ ರಾತ್ರಿ ಒಂದು ಲೋಟಾ ಹಾಲನ್ನು ಕುಡಿಸುತ್ತಿದ್ದರೆಂತಲೂ, ನಾನು ನಾಡೀಪರೀಕ್ಷೆಯ ಮೇಲೆ ಮಾಡಿದ ಚರ್ಚೆಯಿಂದ ತಿಳಿಯಿತು. ಇದರಿಂದ ಚಿಕಿತ್ಸಾಸಾಫಲ್ಯಕ್ಕೆ ಅವಶ್ಯವಾದ ನಾಲ್ಕು ಪಾದಗಳಲ್ಲಿ ಪರಿಚಾರಕ ಮತ್ತು ರೋಗಿ ಎಂಬ ಎರಡು ಪಾದಗಳ ಸಹಕಾರ ಬೇಕಾದಷ್ಟು ಇರಲಿಲ್ಲ ಎಂತ ಗೊತ್ತಾಗುತ್ತದೆ. ಆದಾಗ್ಯೂ, ಎರಡೇ ದಿನಗಳ ಚಿಕಿತ್ಸೆಯಿಂದ ರಕ್ತ ಹೋಗುವದು ನಿಂತಿತು; ಮತ್ತು ಹನ್ನೆರಡು ದಿನಗಳಲ್ಲಿ ಮಲವು ದಿನಕ್ಕೊಮ್ಮೆ ನಿರ್ದೋಷವಾಗಿ ಹೋಗುವಷ್ಟರ ಮಟ್ಟಿಗೆ ರೋಗಿಯು ಸ್ವಸ್ಥನಾದ.

ನಾನು ಪ್ರಥಮತಃ ಪರೀಕ್ಷೆ ಮಾಡುವಾಗ ಕಂಡ ರೋಗಿಯ ನಾಡೀಗತಿಯನ್ನು ಕುರಿತು

"ವಾತಪಿತ್ತಗಳು ಸ್ಥಾನಚ್ಯುತ; ಕಫದ ತಲೆ ಸರಿಯಿಲ್ಲ" ಎಂತ ನನ್ನ ಚಿಕಿತ್ಸಾರಿಜಿಸ್ಟ್ರಿಯಲ್ಲಿ ಬರಕೊಂಡದ್ದು ಕಾಣುತ್ತದೆ ಅವನ ಮಲವನ್ನು ಕುರಿತು 'ರಕ್ತಮಾಂಸಮಿಶ್ರ' ಎಂತ ಅದ ರಲ್ಲಿ ಬರೆಯಲ್ಪಟ್ಟಿದೆ. ಇದರಿಂದ ವಾತಾನುಬಂಧವುಳ್ಳ ಪಿತ್ತವೇ ರೋಗಿಯ ಸ್ಥಿತಿಗೆ ಮುಖ್ಯ ಕಾರಣ ಎಂತಲೂ, ಕಫದ ದೋಷ ಅಲ್ಪ ಎಂತಲೂ ತಿಳಿಯಿತು. ಸಾಧಾರಣವಾಗಿ ಆಮಶಂಕೆಗೆ ಕೊಡುವ ನನ್ನ 'ಅತಿಸಾರಮೂಲ' ಮಾತ್ರೆಯನ್ನು ತಂಪಾದ ಅನುಪಾನದಲ್ಲಿ ಕೊಡುವದು ಮತ್ತು ಪಥ್ಯದಲ್ಲಿ ಹಾಲು, ಮೊಸರುಗಳನ್ನು ಉಪಯೋಗಿಸುವದು ಈ ರೋಗಿಗೆ ಹಿತವಾಗು ವದು ಮತ್ತು ಹಾಗೆ ಚಿಕಿತ್ಸೋಪಚಾರಗಳನ್ನು ನಡಿಸಿದ್ದಲ್ಲಿ ರೋಗಿಯ ಬಲವು ವೃದ್ಧಿ ಯಾಗುತ್ತಾ ಒರಬೇಕು, ಕಫದಲ್ಲಿ ದೋಷ ಹೆಚ್ಚಿಲ್ಲದ್ದರಿಂದ ಹಾಗಿನ ಚಿಕಿತ್ಸೋಪಚಾರ ಗಳಿಂದ ಅವಗುಣ ಉಂಟಾಗದು. ಹೀಗೆ ಯೋಚಿಸಿ, ನಾನು ರೋಗಿಯ ಕಡೆಯವರಿಗ ಧೈರ್ಯ ಕೊಟ್ಟದ್ದಾಗಿರುತ್ತದೆ. ನನ್ನ ಚಿಕಿತ್ಸಾರಂಭದಲ್ಲಿ ರಾತ್ರಿಹೊತ್ತಿನಲ್ಲಿಯೇ 15-20 ಸರ್ತಿ ಮಲವಿಸರ್ಜನವಾಗುತ್ತಿತ್ತಂತೆ ಮಲದಲ್ಲಿ ರಕ್ತ ಕಾಣುವದು ಮೂರನೇ ದಿನದೊಳಗೆ ನಿಂತಿತು. ಮತ್ತು ಮಲಪ್ರವೃತ್ತಿಯ ಸರ್ತಿ ದಿನೇ ದಿನೇ ಕಡಿಮೆಯಾಗುತ್ತಾ ಬಂತು ಐದನೇ ದಿನದಲ್ಲಿ ಮಧ್ಯಾಹ್ನ ಒಂದು ಹೊತ್ತು ಮಾತ್ರ ರೋಗಿಗೆ ಸೀ ಮೊಸರನ್ನು ಕೂಡಿಸಿ ಅನ್ನವನ್ನು ಉಣ್ಣಲಿಕ್ಕೆ ಕೂಡಿ ಎಂತ ನಾನು ಹೇಳಿದ್ದು. ಮಾರಣೇ ದಿನ ರೋಗಿಯನ್ನು ಪರೀ ಕ್ಷಿಸುವಾಗ್ಗೆ ಪಿತ್ತನಾಡಿಯು ಸ್ತಬ್ಧವಾಗಿಯೂ, ಕಫದ ತಲೆ ಸರಿಯಾಗಿರುವದು ಕಡಿಮೆ ಯಾಗಿಯೂ ಇತ್ತು. ತೆಳ್ಳಗಾದ ಮಲದ ಜೊತೆಯಲ್ಲಿ ಸ್ವಲ್ಪ ಸಿಂಬಳ ಇತ್ತು. ಮಲಪ್ರ ವೃತ್ತಿಕಾಲದಲ್ಲಿ ಸ್ವಲ್ಪ ಹೊಟ್ಟೆಶೂಲೆ ಇರುತ್ತದೆಂತಲೂ, ಹಿಂದಿನ ರಾತ್ರಿ ನಾಲ್ಕು ಸರ್ತಿ ಮಲ ಪ್ರವೃತ್ತಿಯಾಗಿತ್ತೆಂತಲೂ 'ಗೊತ್ತಾಯಿತು. ಮೊಸರನ್ನವನ್ನು ನಾನು ಹೇಳಿದಂತೆ ರೋಗಿಗೆ ಕೊಟ್ಟಿದ್ದರೆ, ಈ ಸ್ಥಿತಿ ಉಂಟಾಗಿರದು ಎಂತ ಊಹಿಸಿ ನಾನು ಸ್ವಲ್ಪ ಗದ್ದಲವನ್ನು ಎಬ್ಬಿಸಿ ದ್ದಾಗಿರುತ್ತದೆ. ಅದನ್ನು ರೋಗಿಯ ಕಡೆಯವರು ಒಪ್ಪಿಕೊಂಡು, ಮೊಸರನ್ನವನ್ನು ಕೊಡ ಲಾರಂಭಿಸಿದರು. ಅಂದಿನಿಂದ ಮಲ ಗಟ್ಟಿಯಾಗುತ್ತಾ ಬಂತು. ಆದ್ಯಂತದ ವರೆಗೂ ನಾನು ಹೇಳಿದಂತೆಯೇ ರೋಗಿಯ ರಕ್ಷಕರು ನಡಕೊಂಡಿದ್ದರೆ, ಆ ರೋಗವು ಇನ್ನಷ್ಟು ಬೇಗನೆ ವಾಸಿಯಾಗುತ್ತಿತ್ತೆಂಬದರಲ್ಲಿ ಸಂದೇಹವಿಲ್ಲ. ಡಾಕ್ಟರರು ಆಶ್ಚರ್ಯಪಟ್ಟು ನಾನು ಉಪ ಯೋಗಿಸಿದ ಮಾತ್ರೆಯು ಉತ್ತಮವಾದದ್ದೆಂತ ಕೊಂಡಾಡಿದರು. ನಾನು ಪ್ರಥಮ ಎರಡು ದಿನ ಅತಿಸಾರಮೂಲ ಮಾತ್ರೆಯನ್ನು ಮಾತ್ರ, ರಕ್ತಸ್ರಾವ ನಿಂತ ಮೇಲೆ, ನಾಲ್ಕು ದಿನ ಕರ್ಪೂ ರಾದಿ ಮಾತ್ರೆಯನ್ನೂ ಅತಿಸಾರಮೂಲ ಮಾತ್ರೆಯನ್ನೂ ಕಲಸಿ, ಅನಂತರ ಪುನಃ ಅತಿಸಾರ ಮೂಲ ಮಾತ್ರೆ ಒಂದನ್ನೇ, ರೋಗದ ಅವಸ್ಥಾಭೇದದ ಮೇಲೆ ಅನುಪಾನ ಭೇದಗಳನ್ನು ಮಾಡಿಕೊಂಡು, ಉಪಯೋಗಿಸಿದ್ದಲ್ಲದೆ ಒಂದೇ ಮಾತ್ರೆಯನ್ನು ಕೊಟ್ಟದ್ದಲ್ಲ. ಹಾಗಾದ ಮೇಲೆ ಮಾತ್ರೆ ಉತ್ತಮ ಎಂತ ಡಾಕ್ಟರರು ಎಣಿಸಿದ್ದು ಆಯುರ್ವೇದದ ಕ್ರಮ ಶಾಸ್ತ್ರೀಯ ವಲ್ಲ ಎಂಬ ಭ್ರಮೆ ಅವರ ಮನಸ್ಸಿನಲ್ಲಿ ನೆಟ್ಟುಕೊಂಡಿದ್ದರಿಂದಲೇ ಆಗಿರಬೇಕು. ಪ್ರಥಮ ಎರಡು ದಿನ ಸುಟ್ಟ ನೀರುಳ್ಳಿ ರಸ ಒಂದು ಡ್ರಾಮು, ಜೇನು ಅರ್ಧ ಡ್ರಾಮು, ಬೆರಸಿ ಅದರಲ್ಲಿ ಮಾತ್ರೆಯನ್ನು ಕೊಟ್ಟದ್ದು; ಮೂರನೇ ದಿನ ಆ ನೀರುಳ್ಳಿ ರಸವನ್ನು ಒಂದೂವರೆ ಡ್ರಾಮಿಗ ಏರಿಸಿ, ಜೇನನ್ನು ಕಾಲು ಡ್ರಾಮಿಗೆ ತಗ್ಗಿಸಿದೆ, ನಾಲ್ಕನೇ ದಿನ ನೀರುಳ್ಳಿ ರಸವನ್ನು ಬಿಟ್ಟು, ಅದರ ಸ್ಥಾನದಲ್ಲಿ ಸೀಮೊಸರು ಒಂದೂವರೆ ಚಮಚೆ (ಡ್ರಾಮು) ಕೂಡಿಸಿತು; ಐದನೇ ದಿನ

ಸೀಮೊಸರನ್ನು ಮೂರು ಡ್ರಾಮಿಗೆ ಏರಿಸಿ, ಸಕ್ಕರೆ ಒಂದೆರಡು ಚಿಮಿಟಿ ಕೂಡಿಸ ಹೇಳಿತು. ಹೀಗೆ ಅನುಪಾನದಲ್ಲಿ ಹೆಚ್ಚುಕಡಿಮೆ ಮಾಡುತ್ತಾ ಬಂದಿದ್ದೆ. ಮಾತ್ರೆ ಎಷ್ಟು ಒಳ್ಳೇದಾದರೂ ಯುಕ್ತವಾದ ಅನುಪಾನವಿಲ್ಲದೆ ಅದು ನಿರೀಕ್ಷಿಸಿದ ಫಲವನ್ನು ಕೊಡಲಾರದೆಂತ ನಿಸ್ಸಂದೇಹ ವಾಗಿ ಹೇಳಬಹುದು. ಅಂಥಾ ಅನುಪಾನವನ್ನು ನಿಶ್ಚಯಿಸುವದಕ್ಕೆ ತ್ರಿದೋಷನ್ಯಾಯದ ಜ್ಞಾನ ಅತ್ಯಗತ್ಯ. ತ್ರಿದೋಷಗಳ ಅವಸ್ಥಾಂತರಗಳನ್ನು ಗೊತ್ತುಮಾಡುವದಕ್ಕೆ ಆಯುರ್ವೇದೀಯ ನಾಡೀಪರೀಕ್ಷೆಯು ಅತ್ಯಂತ ಉಪಯುಕ್ತ. ಆಯುರ್ವೇದದ ತ್ರಿದೋಷನ್ಯಾಯವನ್ನೂ ನಾಡೀಪರೀಕ್ಷೆಯನ್ನೂ ಸಾಕಷ್ಟು ಅರಿಯದ ವೈದ್ಯನಿಗೆ ಅಷ್ಟು ಕಠಿನಾವಸ್ಥೆಗೆ ಬಂದಿದ್ದ ಆ ರೋಗವನ್ನು ಹಾಗೆ ಧೈರ್ಯದಿಂದ ಚಿಕಿತ್ಸೆಮಾಡಿ, ವಾಸಿಮಾಡುವದು ಸಾಧ್ಯವಾಗುತ್ತಿತ್ತೋ ಎಂಬದನ್ನು ವಾಚಕರೇ ಆಲೋಚಿಸಬಹುದು.

14. ನಾಡಿಯಲ್ಲಿಯ ವಾತ-ಪಿತ್ತ-ಕಫಸ್ಥಾನಗಳನ್ನು ಸೂಕ್ಷ್ಮವಾಗಿ ಕಂಡುಹಿಡಿದು, ಅಲ್ಲಲ್ಲಿ ಪರೀಕ್ಷಕನು ತನ್ನ ಬೆರಳುಗಳಿಂದ ಬೇಕಾದಷ್ಟೇ ಒತ್ತಿ, ದೋಷಗಳಲ್ಲಿಯ ಭೇದಗಳನ್ನು ಗೊತ್ತುಮಾಡುವದಕ್ಕೆ ಅಭ್ಯಾಸವೇ ಮುಖ್ಯವಾದದ್ದು. ಫಿಡಿಲನ್ನು ಬಾರಿಸುವ ಶಿಕ್ಷಾರಂಭದಲ್ಲಿ ವಿದ್ಯಾರ್ಥಿಯ ಸಹಾಯಕ್ಕಾಗಿ ಫಿಡಿಲಿನ ಆರೋಹಣಾವರೋಹಣದ ರಿ, ಗ, ಮ, ಪ, ಧ, ನಿ, ಸ ಎಂಬ ಸ್ವರಸ್ಥಾನಗಳಲ್ಲಿ ಹಾಕಿಕೊಟ್ಟ ಸುಣ್ಣದ ಬೊಟ್ಟುಗಳ ಮೇಲೆಯೇ ವಿದ್ಯಾರ್ಥಿಯು ತನ್ನ ಬೆರಳುಗಳನ್ನು ಇಟ್ಟು ಬಾರಿಸಿದಾಗ್ಯೂ, ಸರಿಯಾದ ಸ್ವರಗಳನ್ನು ಹೊರಡಿಸುವ ಶಕ್ತಿ ಅವನಿಗೆ ಬರುವದಕ್ಕೆ ಬಹಳ ದಿನಗಳ ಅಭ್ಯಾಸ ಬೇಕಾಗುತ್ತದೆ. ಸ್ಥಾನಗಳನ್ನು ಹಿಡಿಯುವದರಲ್ಲಿ ಮತ್ತು ಅಲ್ಲಿ ತಂತಿಯನ್ನು ಒತ್ತುವದರಲ್ಲಿ ಅವನು ಬಹು ಅಲ್ಪವಾಗಿ ತಪ್ಪಿದರೂ, ಅಪಸ್ವರವೇ ಉಂಟಾಗುತ್ತದೆ. ಕೈಯ ಮಣಿಗಂಟಿನ ಪೂರ್ವಪಾರ್ಶ್ವದ ಮೇಲೆ ಹೋಗುವ ಹಾಗೆ ಅಂಗೈ ಬುಡದ ರೇಖೆಗೆ ಸಮಾನಾಂತರರೇಖೆಯಾಗಿ ಒಂದು ದಾರವನ್ನು ಕೈಗೆ ಸುತ್ತಿದರೆ, ಆ ದಾರವು ಹೆಬ್ಬೆಟ್ಟಿನ ಮೂಲದಲ್ಲಿ ವಾತಸ್ಥಾನದ ಮೇಲೆ ನಿಲ್ಲುತ್ತದೆಂತ ಸಾಧಾರಣವಾಗಿ ಹೇಳಬಹುದು. ಆ ಸ್ಥಾನದಲ್ಲಿ ಪರೀಕ್ಷಕನು ತನ್ನ ತರ್ಜನೀ (ತೋರು ಬೆರಳಿನ) ತುದಿಯನ್ನೂ, ಆ ಬೆರಳಿಗೆ ತಗಲಿ ಪಶ್ಚಿಮಭಾಗದಲ್ಲಿ ತನ್ನ ಮಧ್ಯಮಾ (ನಡುಬೆರಳಿನ) ತುದಿಯನ್ನೂ, ಅದಕ್ಕೆ ತಗಲಿ ಪಶ್ಚಿಮಭಾಗದಲ್ಲಿ ತನ್ನ ಅನಾಮಿಕೆ (ಉಂಗುರದ ಬೆರಳಿನ) ತುದಿಯನ್ನೂ, (ಅಂದರೆ ಹೆಬ್ಬೆಟ್ಟಿನೊತ್ತಿಗೆ ಇರುವ ಒಂದನೇ, ಎರಡನೇ, ಮೂರನೇ, ಬೆರಳುಗಳ ತುದಿಗಳನ್ನೂ) ಇಟ್ಟು ಒತ್ತಿದರೆ, ಅವನಿಗೆ ಕ್ರಮವಾಗಿ ವಾತ-ಪಿತ್ತ-ಕಫಗಳ ಅವಸ್ಥೆ ಗೊತ್ತಾಗುವದು. ನಾಡಿಯಲ್ಲಿಯ ರಕ್ತದ ತೆರೆಯ ಮಸ್ತಕವನ್ನು ಮಾತ್ರ ತೊಡುವದರಿಂದ ವಾತಾದಿ ದೋಷಗಳ ಸ್ಥಿತಿ ಗೊತ್ತಾಗಲಾರದು. ಆ ತೆರೆಗಳಿಂದ ನಾಡಿಯಲ್ಲಿ ಉಂಟಾಗುವ ಏರಿಕೆ-ತಗ್ಗುವಿಕೆಗಳು ಸಹ ತಿಳಿಯಬೇಕಾದ್ದರಿಂದ, ಅದಕ್ಕೆ ಬೇಕಾದಷ್ಟು ತರ್ಜನೀ-ಮಧ್ಯಮಾ-ಅನಾಮಿಕೆ ಬೆರಳುಗಳ ತುದಿಯಿಂದ ಒತ್ತಬೇಕು. ಆ ಒತ್ತುವಿಕೆಯು ನಾಡಿಯೊಳಗಿನ ರಕ್ತಪ್ರವಾಹದ ಗತಿಯನ್ನು ತಡೆಯುವಷ್ಟು ಹೆಚ್ಚಾಗಬಾರದು. ದೋಷಗಳ ಸ್ಥಿತಿಯನ್ನು ತಿಳಿಯುವದಕ್ಕೆ ಈ ಒತ್ತುವಿಕೆಯು ಸ್ಥೂಲಶರೀರದವರಲ್ಲಿ ಸ್ವಲ್ಪ ಹೆಚ್ಚು, ಕೃಶರಲ್ಲಿ ಸ್ವಲ್ಪ ಕಡಿಮೆಯಾಗಬೇಕಾಗುತ್ತದೆ. ಹಾಗೆಯೇ ಪರೀಕ್ಷಕನು ಸ್ಥೂಲವಾಗಿದ್ದರೆ, ತನ್ನ ತರ್ಜನ್ಯಾದಿ ಮೂರು ಬೆರಳುಗಳ ತುದಿಗಳನ್ನು ಒಂದಕ್ಕೊಂದು ಸ್ವಲ್ಪ ಅಮರಿಸಿ ಇಡಬೇಕಾಗಬಹುದು. ಫಿಡಿಲು ಕಲಿಯುವ ವಿದ್ಯಾರ್ಥಿಯು ತನ್ನ ಬೆರಳುಗಳ ತುದಿಗಳನ್ನು ಇಟ್ಟದ್ದು

ನಾಡಿಯನ್ನು ಪರೀಕ್ಷಿಸುವ ವಿಧಾನ.

ಮತ್ತು ಅವುಗಳಿಂದ ಒತ್ತಿದ್ದು ಸರಿಯಾಯಿತೆಂಬದನ್ನು ಅವನು ಹೊರಡಿಸುವ ಸುಸ್ವರದಿಂದಲೇ ಹ್ಯಾಗೆ ನಿರ್ಧಾರವಮಾಡಬೇಕಾಗುತ್ತದೋ, ಹಾಗೆಯೇ ನಾಡೀಪರೀಕ್ಷಕನು ತನ್ನ ಬೆರಳುಗಳ ತುದಿಗಳನ್ನು ಇಟ್ಟ ಸ್ಥಾನಗಳು ಮತ್ತು ಅಲ್ಲಿ ಅವನು ಒತ್ತಿದ್ದು ಸರಿಯಾಯಿತೆಂಬದನ್ನು ಅವನಿಗೆ ಅದರಿಂದ ಗೊತ್ತಾಗುವ ದೋಷ ಭೇದಗಳು ಪರೀಕ್ಷಿಸಲ್ಪಟ್ಟವನಲ್ಲಿ ಕಾಣುವ ಇತರ ಲಕ್ಷಣಗಳಿಗೆ ತಾಳೆ ಬೀಳುತ್ತವೆ ಎಂಬದರಿಂದಲೇ ನಿಶ್ಚಯಿಸಬೇಕು. ಪಿಡಿಲು ಬಾರಿಸುವ ಅಭ್ಯಾಸ ಮಾಡಿದವನು ಕತ್ತಲೆಯಲ್ಲಿ ಸಹ ಸುಸ್ವರದಿಂದ ನಾನಾ ರಾಗಗಳನ್ನು ಬಾರಿಸುವದಕ್ಕೆ ಸಾಧ್ಯವಾಗುವಷ್ಟು ಚಮತ್ಕಾರದಿಂದ ಅವನ ಬೆರಳುಗಳು ಸ್ವಾಭಾವಿಕ ಎಂಬಂತೆ ಬೇಕಾದ ಸ್ಥಾನಗಳನ್ನು ಹಿಡಿದು ಬೇಕಾದಷ್ಟೇ ಒತ್ತುವ ಹಾಗೆ, ನಾಡೀಪರೀಕ್ಷಕನಿಗೆ ಸ್ವಲ್ಪ ಅಭ್ಯಾಸವಾದ ಮೇಲೆ ವಾತಾದಿ ಸ್ಥಾನಗಳನ್ನು ಹಿಡಿಯುವದರಲ್ಲಿಯಾಗಲಿ, ಅಲ್ಲಿ ಬೇಕಾದಷ್ಟೇ ಒತ್ತುವದರಲ್ಲಿಯಾಗಲಿ ಲೇಶವಾದರೂ ಕಷ್ಟವಾಗುವದಿಲ್ಲ. ಇದಕ್ಕೆ ಬೇಕಾದ ಅಭ್ಯಾಸವನ್ನು ಆರಂಭದಲ್ಲಿ ತನ್ನ ಸ್ವಂತ ಕೈಗಳನ್ನೂ ಹಿಡಿದೇ ಯಾವನಾದರೂ ಮಾಡಬಹುದು.

15. ಸೌಖ್ಯಸ್ಥಿತಿಯಲ್ಲಿರುವ ಒಬ್ಬ ಮನುಷ್ಯನಲ್ಲಿ ಹೆಬ್ಬೆಟ್ಟಿನ ಮೂಲದ ಹಿಂದಿರುವ ಮೇಲೆ ವರ್ಣಿಸಲ್ಪಟ್ಟ ವಾತಾದಿ ಮೂರು ಸ್ಥಾನಗಳೊಳಗೆ ಪ್ರತಿಯೊಂದರಲ್ಲಿ ಧಮನಿಯೊಳಗಿನ ರಕ್ತದ ತೆರೆಯು ನೆಟ್ಟಗಾಗಿ ಮೇಲಕ್ಕೇರಿ ಪರೀಕ್ಷಕನ ಬೆರಳಿನ ತುದಿಯ ಮಧ್ಯಕ್ಕೆ ಕ್ರಮವಾಗಿ, ಅಂದರೆ ಲೋಪವಿಲ್ಲದೆ, ಏಕತಾಳದಂತೆ, ಅಂದರೆ ಕಾಲಾಂತರಗಳಲ್ಲಿ ಹೆಚ್ಚು ಕಡಿಮೆಯಿಲ್ಲದೆ, ಮಿತವಾದ ಬಲದಿಂದ ಮತ್ತು ಮಿತವಾದ ವೇಗದಿಂದ, ಅಂದರೆ ಮಿನಿಟಿಗೆ ಸುಮಾರು 72 ಸರ್ತಿ, ಒತ್ತುತ್ತದೆ. ಈ ಏರಿಕೆಗಳಿಗೇನೇ ಸಾಧಾರಣವಾಗಿ ನಾಡಿಗಳೆನ್ನುವದು ನಾಡಿಯ ಮಸ್ತಕದ ಸ್ವಲ್ಪ ಅಂಶ ಕಡಿದುಹೋದ ಹಾಗೆ ತಲೆ ಚಟ್ಟೆಯಾಗಿರುವದಕ್ಕೆ ತಲೆ ಇಲ್ಲದ್ದು ಎನ್ನುವದಾಗಿರುತ್ತದೆ. ಮೇಲಿನ ಹೆಚ್ಚಿನ ಅಂಶ ಹೋಗಿ ಕೆಳಗಿನ ಭಾಗ ಪರೀಕ್ಷಕನ ಕೈ ಬೆರಳಿಗೆ ಸರಿಯಾಗಿ ತಗಲದಿರುವದಕ್ಕೆ ಸ್ತಬ್ಧ, ಏರಿಕೆ ಇಲ್ಲದ್ದು ಲೋಪ, ಸ್ವಸ್ಥಾನ ಬಿಟ್ಟು ಮೇಲಕ್ಕೆ, ಅಥವಾ ಕೆಳಕ್ಕೆ (ಅಂದರೆ ಹಿಂದಕ್ಕೆ ಅಥವಾ ಮುಂದಕ್ಕೆ) ಒತ್ತುವದಕ್ಕೆ ಸ್ಥಾನಚ್ಯುತ, ಒಮ್ಮೆ ಮೇಲಕ್ಕೆ ಒಮ್ಮೆ ಕೆಳಕ್ಕೆ ಉಯ್ಯಾಲೆಯಂತೆ ಇತ್ತಟ್ಟು ಒತ್ತುವದಕ್ಕೆ ದೋಲಾ, ಸಪೂರವಾಗಿಯೂ ಕಠಿನವಾಗಿಯೂ ಕಾಣುವದಕ್ಕೆ ತಾನ್ತ್ರೀ (ಸರಿಗೆಯ ಹಾಗಿರುವದು), ಸಪೂರವಾಗಿಯೂ ಮೃದುವಾಗಿಯೂ ಇರುವಂಥಾದ್ದಕ್ಕೆ ಕ್ಷೀಣ, ಎನ್ನುವದಾಗಿರುತ್ತದೆ. ನಾಡಿಯು ಸ್ವಸ್ಥಾನದ ಎಡಬಲದ ಪಕ್ಕಗಳಲ್ಲಿ ಅಥವಾ ಆಗ್ನೇಯಾದಿ ನಾಲ್ಕು ಮೂಲೆಗಳಲ್ಲಿ ಸ್ಪೃಶ್ಯವಾಗುವದುಂಟು. ಒಂದೇ ಸ್ಥಾನದಲ್ಲಿ ಕೆಲವು ನಾಡಿಗಳು ಪೂರ್ಣವಾಗಿ, ಕೆಲವು ತಲೆಯಿಲ್ಲದೆ, ಕೆಲವು ಸ್ತಬ್ಧವಾಗಿ, ಕೆಲವು ಸ್ಥಾನಚ್ಯುತವಾಗಿ ಇರುವದು, ಕೆಲವು ಸಾವಧಾನದಿಂದ, ಕೆಲವು ಬೇಗನೆ ದೃಶ್ಯವಾಗುವದು, ಕೆಲವು ಪಾಂಕ್ತವಾಗಿ ಸ್ಥಾನದಲ್ಲಿದ್ದು ಕೆಲವು ಪಾಂಕ್ತವಾಗಿ ಸ್ಥಾನಚ್ಯುತವಾಗಿರುವದು, ಸಹ ಉಂಟು. ಈ ವಿಕಾರಗಳೊಳಗೆ ಒಂದು ಸ್ಥಾನದಲ್ಲಿ ಕಾಣುವಂಥವು, ಇತರ ಸ್ಥಾನಗಳಲ್ಲಿ ಕಾಣಬೇಕೆಂತಿಲ್ಲ. ರೋಗಿಗಳಲ್ಲಿ ಆ ಮೂರು ಸ್ಥಾನಗಳ ನಾಡೀಗತಿಗಳು ಬೇರೆ ಬೇರೆಯಾಗಿರುವದೇ ಹೆಚ್ಚು. ಈ ನಾಡೀಗತಿವಿಶೇಷಗಳೊಳಗೆ ಯಾವಯಾವದು ಆಯಾ ದೋಷದ ಯಾವ ಯಾವ ವಿಶೇಷವನ್ನು ಸೂಚಿಸುತ್ತದೆ ಎಂಬದನ್ನು ಸಂಪೂರ್ಣವಾಗಿ ಕಂಡುಹಿಡಿಯಲು ನನಗೆ ಸಾಧ್ಯವಾಗಲಿಲ್ಲ. ನಾನು ಚಿಕಿತ್ಸೆಮಾಡಿ ಗುಣಮಾಡಿದ ರೋಗಿ

ನಾಡೀಗತಿಗಳಲ್ಲಿ ಸಾಧಾರಣವಾಗಿ ಕಾಣುವ ಭೇದಗಳು

ಗಳೊಳಗೆ ಯಾವ ಯಾವನಲ್ಲಿ ಯಾವ ಯಾವ ನಾಡೀಗತಿವಿಶೇಷಗಳು ಕಂಡಿದ್ದವು, ಅವು ಯಾವ ಯಾವ ಚಿಕಿತ್ಸೆಯಿಂದ ಯಾವ ಯಾವ ರೂಪಾಂತರಗಳನ್ನು ಪಡೆದಿದ್ದವು ಎಂಬ ದನ್ನೆಲ್ಲಾ ನನ್ನ ರೋಗಿಗಳ ರಿಜಿಸ್ತ್ರಿಯಿಂದ ಸಂಗ್ರಹಿಸಿ, ಅವುಗಳನ್ನು ಇದರಲ್ಲಿ ಮುಂದೆ ಪ್ರಸ್ತಾಪಿಸಲಿಕ್ಕಿರುವ ದೋಷಗಳ ಕ್ಷಯ-ವೃದ್ಧಿ-ಪ್ರಕೋಪಗಳ ಲಕ್ಷಣವಿಶೇಷಗಳಿಗೆ ದೃಷ್ಟಿ ಯಿಟ್ಟು ಯುಕ್ತ್ಯನುಮಾನಗಳೆಂಬ ಜ್ಞಾನಸಾಧನಗಳಿಂದ ಚನ್ನಾಗಿ ವಿಮರ್ಶೆಮಾಡಿ, ಈ ವಿಷಯದಲ್ಲಿ ಇನ್ನಷ್ಟು ಜ್ಞಾನವನ್ನು ಗಳಿಸುವದು ಸಾಧ್ಯವಾಗಿ ಕಂಡರೂ, ಹಾಗೆ ಮಾಡು ವದಕ್ಕೆ ಬೇಕಾದಷ್ಟು ಬೇರೆ ಅನುಕೂಲಗಳು ದೊರೆಯದ್ದಕ್ಕೆ ವ್ಯಸನಪಡಬೇಕಾಗಿದೆ. ಮೈಸೂರು ಹೊಸ ಪಂಡಿತ ಭೀಮರಾಯರು ತಮ್ಮ ಪುಸ್ತಕದಲ್ಲಿ ಹೆಸರು ಹೇಳಿದ ಹಾರೀತ ಸಂಹಿತೆಯಾಗಲಿ ದತ್ತಾತ್ರೇಯ ಸಂಹಿತೆಯಾಗಲಿ ನನಗೆ ದೊರೆಯಲಿಲ್ಲ. ವ್ಯಾಸ, ವಸಿಷ್ಠ ಮತ್ತು ಅಗಸ್ತ್ಯ ಎಂಬ ಋಷಿಗಳು ನಾಡೀನಿರ್ಣಯದ ಕುರಿತು ಗ್ರಂಥಗಳನ್ನು ಬರೆದಿಟ್ಟಿ ದ್ದಾರೆ ಎಂತ ಇನ್ನೊಬ್ಬರು ಹೇಳುತ್ತಾರೆ. ಆ ಗ್ರಂಥಗಳು ಸಹ ನನಗೆ ಸಿಕ್ಕಲಿಲ್ಲ. ನಾಡೀ ಪರೀಕ್ಷೆಯಲ್ಲಿ ಕುಶಲತೆಯುಳ್ಳ ಬೇರೆ ವೈದ್ಯರು ತಮ್ಮ ತಮ್ಮ ಅನುಭವಗಳನ್ನು ಲೋಕೋಪ ಕಾರದೃಷ್ಟಿಯಿಂದ ಹೀಗೆ ಪ್ರಕಟಿಸುತ್ತಾ ಬಂದರೆ ಮಾತ್ರ, ನಾಡೀಪರೀಕ್ಷಾ ಪ್ರಯೋಜನವು ಅಭಿ ವೃದ್ಧಿಗೊಂಡು, ಆಯುರ್ವೇದವು ನಿಸ್ಸಂದೇಹವಾಗಿ ಅನುಪಮ ಖ್ಯಾತಿಯನ್ನು ಪಡೆಯುವದು.

ಸಾಧಾರಣವಾಗಿ ವಾತಾದಿಗಳ ಆಯಾ ಸ್ಥಾನದಲ್ಲಿ ತೋರುವ ನಾಡಿಯ ರೂಪಾಂತರ ಗಳು ಆಯಾ ದೋಷದ ಅವಸ್ಥಾವಿಶೇಷಗಳನ್ನು ಸೂಚಿಸುತ್ತವೆ ಎಂತಲೂ, ನಾಡಿಯು ತನ್ನ ಸ್ಥಾನದಲ್ಲಿ ಕುಪಿತವಾದ ಅಥವಾ ಬಲಾಧಿಕ್ಯಪಡೆದ ದೋಷಕ್ಕಿಂತ ಅದಕ್ಕೆ ತಲೆಯಿಲ್ಲದಿರುವ ದೋಷ, ಅದಕ್ಕಿಂತ ನಾಡೀಸ್ತಬ್ಧವಾಗಿರುವಿಕೆ, ಅದಕ್ಕಿಂತ ಸ್ಥಾನಚ್ಯುತವಾಗಿರುವಿಕೆ, ಹೆಚ್ಚು ಕೆಟ್ಟದ್ದು ಎಂತ ಹೇಳಬಹುದು. ಆದರೆ ಸನ್ನಿಪಾತಜ್ವರದಲ್ಲಿ ರೋಗಿಯು ಸಾಯುವದಕ್ಕೆ ನಾಲ್ಕೈದು ತಾಸುಗಳಿಗೆ ಮುಂಚೆ ಅವನ ಮೂರು ನಾಡಿಗಳೂ ಸ್ಥಾನಗಳಲ್ಲಿಯೇ ಕುಪಿತ ವಾಗಿಯೂ, ಪುಷ್ಟವಾಗಿಯೂ, ವೇಗಾಧಿಕ್ಯವಿಶೇಷವಿಲ್ಲದೆ ಇದ್ದ ಒಂದು ದೃಷ್ಟಾಂತ ಕಂಡದೆ. ಅವನಿಗೆ ಡಾಕ್ಟರರು ಕೊಡುತ್ತಿದ್ದ ಬ್ರಾಂಡಿಯೂ, ನೀರ್ಗಲ್ಲಿನ (ice) ಮತ್ತು ತಣ್ಣೀರಿನ ಒತ್ತಡಗಳೂ, ನಾಡಿಗಳ ಆ ಅವಸ್ಥೆಗೆ ಕಾರಣವಾಗಿರಬಹುದೆಂತ ಊಹಿಸುತ್ತೇನೆ. ಅದು ರಕ್ತದ ಒತ್ತುವಿಕೆ (Blood pressure)ಯ ಲಕ್ಷಣ. ಅವನಲ್ಲಿ ಮರಣಸಾಮಿಪ್ಯ ಸೂಚಕವಾದ ಬೇರೆ ಲಕ್ಷಣಗಳು ಉಂಟಾಗಿದ್ದವು. ಯಾವ ನಾಡಿಯಾದರೂ ತನ್ನ ಸ್ಥಾನದಲ್ಲಿಯೇ ಅತಿ ಬಲವಂತವಾಗಿ ಕಂಡರೆ, ಅದಕ್ಕೆ ಅಧಿಷ್ಠಾತೃವಾದ ದೋಷವು ತನ್ನ ಸ್ಥಾನಗಳಲ್ಲಿ ವೃದ್ಧಿಗೊಂಡು ನಿಂತು ಉಪದ್ರವಕಾರಿಯಾಗಿದೆ ಎಂತಲೂ, ಸ್ಥಾನ ಚ್ಯುತವಾಗಿದ್ದರೆ ಆ ದೋಷವು ಕೋಪಗೊಂಡು ಪ್ರಸರಿಸಿ ಅನ್ಯಸ್ಥಾನಗಳಲ್ಲಿ ಸಹ ಉಪದ್ರವಕೊಡುತ್ತಿರುವದೆಂತಲೂ, ತನ್ನ ಸ್ಥಾನದಲ್ಲಿ ಮಸ್ತಕವಿಲ್ಲದೆ ಅಥವಾ ಸ್ತಬ್ಧವಾಗಿ ಇದ್ದರೆ, ಅದಕ್ಕೆ ಸಂಬಂಧಪಟ್ಟ ದೋಷವು ಕ್ಷಯಿಸಿ, ಅಥವಾ ಇತರ ದೋಷಗಳ ಆತಂಕ ದಿಂದ ತಡೆಯಲ್ಪಟ್ಟು, ತನ್ನ ಕಾರ್ಯಗಳನ್ನು ಕ್ರಮವಾಗಿ ನಡಿಸುವದಿಲ್ಲ ಎಂತಲೂ ಸಾಧಾರಣ ವಾಗಿ ಊಹಿಸಬಹುದಾಗಿ ಕಾಣುತ್ತದೆ. ಕೆಮ್ಮಿನಿಂದ ಪೀಡಿಸಲ್ಪಡುವ ರೋಗಿಯ ಕಫ ನಾಡಿಯು ಸ್ತಬ್ಧವಾಗಿದ್ದರೆ, ಅವನಲ್ಲಿ ಕಫವು ಸಡಿಲಾಗಿ ಹೋಗುವದಿಲ್ಲ ಎಂತ ಊಹಿಸಿ, ಅದು ಹೌದಾದರೆ ಅವನ ವಾತಪಿತ್ತಗಳಲ್ಲಿ ದೋಷ ಅಲ್ಪವಾಗಿದ್ದರೂ, ಅವನಿಗೆ ಆಡುಸೋಗೆ

ರಸ, ಕಲ್ಲುಸಕ್ಕರೆ ಮುಂತಾದ ತಂಪಾದ ಔಷಧವನ್ನು, ಅಲ್ಪ ಪ್ರಮಾಣದಲ್ಲಿ ಜೇನಸ್ನೂ ಹುರಿದ ಹಿಪ್ಪಲಿ ಪುಡಿಯನ್ನೂ ಕೂಡಿಸಿ, ಕೊಟ್ಟು ಕಫವನ್ನು ಸಡಿಲಿಸಿ ಹೊರಗೆ ತಳ್ಳ ಬೇಕಲ್ಲದೆ, ಶುಂಠೀರಸ ಮುಂತಾದ ಉಷ್ಣವೀರ್ಯದ ಔಷಧವನ್ನು ಕೊಡಬಾರದು. ಅಂಥವ ನಲ್ಲಿ ಉಷ್ಣದ ಔಷಧಗಳಿಂದ ಕಫವು ಇನ್ನಷ್ಟು ಗಟ್ಟಿಯಾಗಿ ಹಿಡಿದು ನಿಲ್ಲುತ್ತದಾದ್ದರಿಂದ, ಹೆಚ್ಚು ಉಪದ್ರವ ಉಂಟಾಗುತ್ತದೆ.

ದೋಷಗಳ ಕ್ಷಯ ವೃದ್ಧಿಗಳ ವಿಧಗಳು ಮತ್ತು ಅವುಗಳ ಲಕ್ಷಣಗಳು

16. ವಾತಾದಿ ದೋಷಗಳಲ್ಲಿ ಯಾವದು ದುಷ್ಟವಾಗಿದೆ ಎಂಬದನ್ನು ಮಾತ್ರ ತಿಳಿಯುವದು ಚಿಕಿತ್ಸೆಗೆ ಸಾಲದು. ಅವುಗಳಲ್ಲಿ ಯಾವ ವಿಧವಾದ ದೋಷ ಉಂಟಾಗಿದೆ ಎಂಬದನ್ನು ಸಹ ತಿಳಿಯುವದು ಅಗತ್ಯ. ದೋಷಗಳ ಕ್ಷಯ-ವೃದ್ಧಿಲಕ್ಷಣಗಳನ್ನು ಸಾಮಾನ್ಯವಾಗಿ ಚರಕನು ಹೀಗೆ ವರ್ಣಿಸಿದ್ದಾನೆ:

ಕರ್ಮಣಾಂ ಪ್ರಕೃತೇ*ಹಾರ್ನಿರ್ವೃದ್ಧಿರ್ವಾಪಿ ವಿರೋಧಿನಾಮ್ |
ದೋಷಪ್ರಕೃತಿವೈಶೇಷ್ಯಂ ನಿಯತಂ ವೃದ್ಧಿಲಕ್ಷಣಮ್ || (ಪು. 105.)

* 'ಕರ್ಮಣಃ ಪ್ರಾಕೃತಾದ್ಧಾನಿಃ' ಎಂಬದು ಪಾಠಾಂತರ

"ದೋಷದ ಸ್ವಾಭಾವಿಕವಾದ ಕರ್ಮಗಳು ಹಾನಿಯಾಗುವದು, ಅಥವಾ ಆ ದೋಷದ ಕರ್ಮಗಳಿಗೆ ಪ್ರತಿ ವಿರುದ್ಧವಾದ ಕರ್ಮಗಳು ವೃದ್ಧಿಯಾಗುವದು, ದೋಷಕ್ಷಯದ ಲಕ್ಷಣ. ದೋಷದ ಸ್ವಾಭಾವಿಕ ಕರ್ಮಗಳು ವಿಶೇಷವಾಗುವದು ವೃದ್ಧಿಲಕ್ಷಣದ ನಿಯಮ."

ಈ ವಚನದಿಂದ ದೋಷಕ್ಷಯದಲ್ಲಿ ಕ್ಷೀಣವಾದ ದೋಷದ ಸ್ವಂತ ಕರ್ಮಗಳು ಕಡಿಮೆಯಾಗದೆ, ಅವುಗಳಿಗೆ ಪ್ರತಿ ವಿರುದ್ಧವಾದ ಕರ್ಮಗಳು ವೃದ್ಧಿಯಾಗಬಹುದೆಂತ ಅರ್ಥವಾಗುತ್ತದೆ ಹಾಗೆಯೇ,

ದೋಷಾಃ ಪ್ರವೃದ್ಧಾಃ ಸ್ವಂ ಲಿಂಗಂ ದರ್ಶಯನ್ತಿ ಯಥಾಬಲಮ್ |
ಕ್ಷೀಣಾ ಜಹತಿ ಲಿಂಗಂ ಸ್ವಂ ಸಮಾಃ ಸ್ವಂ ಕರ್ಮ ಕುರ್ವತೇ || (ಸು. 96.)

ವಿಶೇಷವಾಗಿ ವೃದ್ಧಿಗೊಂಡ ದೋಷಗಳು ತಮ್ಮ ಲಕ್ಷಣಗಳನ್ನು ಯಥಾಬಲವಾಗಿ ತೋರಿಸುತ್ತವೆ. ಕ್ಷೀಣವಾದವು ತಮ್ಮ ಲಕ್ಷಣಗಳನ್ನು (ಕರ್ಮಗಳನ್ನು) ಬಿಟ್ಟುಬಿಡುತ್ತವ. ಸಮವಾದ ದೋಷಗಳು ತಮ್ಮ ಕರ್ಮಗಳನ್ನು ಮಾಡುತ್ತಿರುತ್ತವೆ.

ವಾತಾದಿ ದೋಷಗಳಲ್ಲಿ ಒಂದು ಬಲೀ ಅಥವಾ ಪ್ರವೃದ್ಧ, ಒಂದು ಕ್ಷೀಣ, ಮೂರನೇದು ಸಮ, ಆಗಿರುವದರಿಂದ ಉಂಟಾದ ಅವಸ್ಥೆಗಳು ಆರು, ಎರಡೆರಡು ಬಲೀಯಾಗಿ ಒಂದು ಕ್ಷೀಣವಾಗುವ ಅವಸ್ಥೆಗಳು ಮೂರು, ಎರಡೆರಡು ಕ್ಷೀಣವಾಗಿ ಒಂದು ಬಲೀಯಾಗಿರುವ ಅವಸ್ಥೆಗಳು ಮೂರು, ಹೀಗೆ ಹನ್ನೆರಡು ದೋಷಾವಸ್ಥಾಭೇದಗಳಿಂದ ಸಂಭವಿಸುವ ರೋಗಭೇದಗಳನ್ನು ಚರಕನು ಸೂತ್ರಸ್ಥಾನದ ಹದಿನೇಳನ ಅಧ್ಯಾಯದಲ್ಲಿ ವರ್ಣಿಸಿರುತ್ತಾನೆ. ಅದರ ತಾತ್ಪರ್ಯವನ್ನು, ಬಲೀಯಾದ್ದಕ್ಕೆ ∩, ಕ್ಷೀಣವಾದ್ದಕ್ಕೆ ∪, ಸಮವಾದ್ದೆಂಬದಕ್ಕೆ —, ಈ ಗುರ್ತುಗಳನ್ನಿಟ್ಟು ಈ ಕೆಳಗೆ ಕೊಡೋಣಾಗುತ್ತದೆ.—

| | ವಾತ | ಪಿತ್ತ | ಕಫ | ರೋಗ ಲಕ್ಷಣ. |
|---|---|---|---|---|
| 1. | ∩ | — | ∪ | ಪಿತ್ತವು ತನ್ನ ಸ್ಥಾನವನ್ನು ಬಿಟ್ಟು ಶರೀರದೊಳಗೆ ಹರಿದಾಡುತ್ತದೆ; ಅಲ್ಲಲ್ಲಿ ಅಸ್ಥಿರವಾಗಿ ಒಡೆತ ಮತ್ತು ಉರಿ ಕಾಣುತ್ತವೆ; ಶ್ರಮ ಮತ್ತು ದೌರ್ಬಲ್ಯ ಉಂಟಾಗುತ್ತವೆ. |
| 2. | ∩ | ∪ | — | ಶೂಲೆ, ಶೈತ್ಯ, ಸ್ತಬ್ಧತೆ ಮತ್ತು ಮೈಭಾರ ಸಂಭವಿಸುತ್ತವೆ. |
| 3. | — | ∩ | ∪ | ದಾಹ ಮತ್ತು ಶೂಲೆ. |
| 4. | ∪ | ∩ | — | ತಂದ್ರೆ, ಭಾರ ಮತ್ತು ಜ್ವರ. |
| 5. | — | ∪ | ∩ | ಶೀತಸಂಬಂಧವಾದ ಭಾರ, ಮತ್ತು ಜ್ವರ. |
| 6. | ∪ | — | ∩ | ಅಗ್ನಿಮಾಂದ್ಯ, ಶಿರೋಗ್ರಹ, ಪ್ರಲಾಪ, ಹೃದ್ರೋಗ, ಶರೀರ ಭಾರ, ಉಗುರು ಮುಂತಾದವು ಅರಸಿನವಾಗುವದು, ಕಫ-ಪಿತ್ತಗಳನ್ನು ಉಗುಳುತ್ತಿರುವಿಕೆ, ಈ ಲಕ್ಷಣಗಳು ಉಂಟಾಗುವವು. |
| 7. | ∪ | ∩ | ∩ | ಅರುಚಿ, ಅಜೀರ್ಣ, ಆಯಾಸ, ಭಾರ, ಬಿಕ್ಕಟ್ಟು, ಬಾಯಿಯಿಂದ ನೀರು ಸ್ರವಿಸುವದು, ನೋವು, ಬಿಳೀವರ್ಣ, ಮದ, ವಿಷಮವಾದ ಮಲಪ್ರವೃತ್ತಿ ಮತ್ತು ವಿಷಮವಾದ ಅಗ್ನಿ. |
| 8. | ∩ | ∪ | ∩ | ತಡೆ, ಶೈತ್ಯ, ಶೂಲೆ, ಭಾರ, ಅಗ್ನಿಮಾಂದ್ಯ, ಅನ್ನದಲ್ಲಿ ಅಶ್ರದ್ಧೆ, ನಡುಕು, ಈ ಲಕ್ಷಣಗಳು ಅಸ್ಥಿರವಾಗಿ ಕಾಣಿಸಿಕೊಳ್ಳುವವು, ಉಗುರು ಮುಂತಾದವುಗಳ ಶುಕ್ಲವರ್ಣ, ಮತ್ತು ಮೈದೊರಗಾಗುವದು (ಒರಟು) |
| 9. | ∩ | ∩ | ∪ | ಭ್ರಮೆ, ತಲೆಸುತ್ತುವಿಕೆ, ಶೂಲೆ, ಉರಿ, ಒಡೆತ, ನಡುಕು, ಅಂಗಗಳಲ್ಲಿ ಮರ್ದ (ಅರತ), ಸರ್ವಾಂಗ ಒಣಗುವದು, ನೋವು ಮತ್ತು ಹೊಗೆ ಬರುವದು. |
| 10. | ∪ | ∪ | ∩ | ಕಫವು ಸ್ರೋತಸ್ಸುಗಳನ್ನು ಹಿಡಿದು ನಿಂತು, ಅಂಗಚೇಷ್ಟೆಗಳ ನಾಶವನ್ನೂ, ಮೂರ್ಛೆಯನ್ನೂ, ಮಾತಿನ ತಡೆಯನ್ನೂ ಉಂಟು ಮಾಡುತ್ತದೆ. |
| 11. | ∪ | ∩ | ∪ | ಪಿತ್ತವು ಸರ್ವಾಂಗ ಸಂಚರಿಸಿ, ಗ್ಲಾನಿ (ಆಯಾಸ)ಯನ್ನೂ, ಇಂದ್ರಿಯಗಳ ದುರ್ಬಲತೆಯನ್ನೂ, ಬಾಯಾರಿಕೆಯನ್ನೂ, ಮೂರ್ಛೆಯನ್ನೂ, ಇಂದ್ರಿಯವ್ಯಾಪಾರಗಳ ಕ್ಷಯವನ್ನೂ ಉಂಟುಮಾಡುತ್ತದೆ. |
| 12. | ∩ | ∪ | ∪ | ವಾಯುವು ಮರ್ಮಸ್ಥಾನಗಳನ್ನು ಅತಿಯಾಗಿ ಪೀಡಿಸುತ್ತದೆ ಮತ್ತು ಸಂಜ್ಞೆಯನ್ನು ನಾಶಮಾಡುತ್ತದೆ, ಅಥವಾ ಮನುಷ್ಯನನ್ನು ನಡುಗಿಸುತ್ತದೆ. |

ಈ ವಿವರಣದ ಚಿಂತನದಿಂದ ದೋಷಗಳೊಳಗಿನ ಪರಸ್ಪರ ಸಂಬಂಧದ ಕುರಿತು ಅನೇಕ ತತ್ತ್ವಗಳು ಕಂಡುಬರುವವು. ಪಿತ್ತದ ಲಕ್ಷಣವಾದ ಉರಿದಾಹಗಳು, ಕಫ ಕ್ಷೀಣವಾದ್ದಲ್ಲಿ, ವಾತಾಧಿಕ್ಯದಿಂದಲೂ, ಪಿತ್ತಾಧಿಕ್ಯದಿಂದಲೂ, ವಾತಪಿತ್ತಾಧಿಕ್ಯದಿಂದಲೂ, ಉಂಟಾಗ

ಬಹುದು; ಕಫದೊಂದಿಗೆ ವಾತ ಕ್ಷೀಣವಾಗಿದ್ದರೆ, ಪಿತ್ತಾಧಿಕ್ಯವಿದ್ದರೂ, ಕಾಣಲಾರವು (ವಾತ-ಕಫಗಳ ಲಕ್ಷಣವಾದ) ಶೈತ್ಯವು ಪಿತ್ತ ಕ್ಷೀಣವಾಗಿದ್ದರೆ, ವಾತಾಧಿಕ್ಯದಿಂದಲೂ, ಕಫಾಧಿಕ್ಯದಿಂದಲೂ, ವಾತ-ಕಫಾಧಿಕ್ಯದಿಂದಲೂ ಉಂಟಾಗಬಹುದು. ಪಿತ್ತದೊಂದಿಗೆ ವಾತ ಕ್ಷೀಣವಾದರೆ ಕಫಾಧಿಕ್ಯವಿದ್ದರೂ ಶೈತ್ಯ ಕಾಣದಿರಬಹುದು. ಹಾಗೆಯೇ ಮೈಭಾರವು ಪಿತ್ತ ಕ್ಷೀಣವಾಗಿದ್ದರೆ ವಾತಾಧಿಕ್ಯದಿಂದಲೂ, ಕಫಾಧಿಕ್ಯದಿಂದಲೂ, ವಾತ-ಕಫಾಧಿಕ್ಯದಿಂದಲೂ ಶೈತ್ಯದಂತೆ ಉಂಟಾಗಬಹುದು ಮತ್ತು ವಾತ ಕ್ಷೀಣವಾದರೆ ಕಫಾಧಿಕ್ಯದಿಂದಲೂ, ಪಿತ್ತ ಕಫಾಧಿಕ್ಯದಿಂದಲೂ ಉಂಟಾಗುತ್ತದೆ. ಮೂರ್ಛೆಯು, (ತಲೆಯೊಳಗಿನ ರಕ್ತಸಂಚಾರಕ್ಕೆ ತಡೆಯುಂಟಾಗಿ ಸಂಭವಿಸುವಂಥಾದ್ದು) ವಾತ ಪಿತ್ತ ಕ್ಷೀಣವಾದರೆ ಕಫಾಧಿಕ್ಯದಿಂದ, ವಾತ ಕಫ ಕ್ಷೀಣವಾದರೆ ಪಿತ್ತಾಧಿಕ್ಯದಿಂದ ಉಂಟಾಗಬಹುದು. ಇಂಥಾ ಭೇದಗಳನ್ನು ಚನ್ನಾಗಿ ತಿಳಿದು ಧಾರಣಮಾಡಿಕೊಳ್ಳುವದು ಚಿಕಿತ್ಸಾಯೋಗನಿರ್ಮಾಣಕ್ಕೆ ಅತ್ಯುಪಯುಕ್ತ.

ಸುಶ್ರುತನು, "ದೋಷಗಳ ಸಂಚಯ, ಪ್ರಕೋಪ, ಪ್ರಸಾರ, ಸ್ಥಾನಗಳನ್ನು ಹಿಡಕೊಳ್ಳುವದು, ಕಾಣಿಸಿಕೊಳ್ಳುವದು, ಭೇದ, ಈ ಆರು ಅವಸ್ಥಾವಿಶೇಷಗಳನ್ನು ಯಾವನು ತಿಳಿಯುತ್ತಾನೋ, ಅವನು ವೈದ್ಯನಾಗುವನು" ಎಂತ ಹೇಳಿ, (ಪು. 87.) ಆ ಅವಸ್ಥೆಗಳನ್ನು (ಸೂತ್ರ 21, 'ವ್ರಣಪ್ರಶ್ನಂ' ಅಧ್ಯಾಯದಲ್ಲಿ) ವರ್ಣಿಸಿರುವದು ಹೇಗೆಂದರೆ: "ದೋಷಗಳು ತಮ್ಮ ತಮ್ಮ ಸ್ಥಾನಗಳಲ್ಲಿ ಹಿಂದೆ (1ನೇ ಭಾಗದ ಎಂಟನೇ ಅಧ್ಯಾಯ ನೋಡಿ) ಹೇಳಲ್ಪಟ್ಟ ಕಾರಣಗಳಿಂದ ಸಂಚಯವಾಗುತ್ತವೆ. ಹಾಗೆ ಸಂಚಯವಾದ ದೋಷಗಳಿಂದ ಹೊಟ್ಟೆತುಂಬಿಕೊಂಡು ಸ್ತಬ್ಧವಾಗಿರುವಿಕೆ (ವಾತದಿಂದ), ದೇಹದಲ್ಲಿ ಅರಸಿನ ಛಾಯೆ ಉಂಟಾಗುವದು ಮತ್ತು ಅಗ್ನಿಮಾಂದ್ಯ (ಪಿತ್ತದಿಂದ), ಅಂಗಗಳು ಭಾರವಾಗಿ ಕಾಣುವದು ಮತ್ತು ಆಲಸ್ಯ (ಕಫದಿಂದ), ಈ ಲಕ್ಷಣಗಳು ಮತ್ತು ಸಂಚಯದ ಕಾರಣಗಳಲ್ಲಿ ದ್ವೇಷ ಉಂಟಾಗುತ್ತವೆ. ಆಗ್ಗೆ ಚಿಕಿತ್ಸೆಗೆ ಪ್ರಥಮಕಾಲ.

ಬಲವಂತವಾದ ಯುದ್ಧ ಅಥವಾ ಕುಸ್ತಿ, ಅತಿಯಾದ ವ್ಯಾಯಾಮ ಮುಂತಾದ ವಾತ ಪ್ರಕೋಪ ಕಾರಣ (1ನೇ ಭಾಗದ V-14 ನೋಡಿ)ಗಳಿಂದ ವಾತವೂ, ಕ್ರೋಧ ಶೋಕಾದಿ ಪಿತ್ತಪ್ರಕೋಪಕಾರಣ (1ನೇ ಭಾಗದ V-22 ನೋಡಿ) ಗಳಿಂದ ಪಿತ್ತವೂ, ದಿವಾಸ್ವಪ್ನಾದಿ ಕಫಪ್ರಕೋಪಕಾರಣ (1ನೇ ಭಾಗದ V-30 ನೋಡಿ) ಗಳಿಂದ ಕಫವೂ, ಪ್ರಕೋಪಗೊಂಡು, ಹೊಟ್ಟೆಯಲ್ಲಿ ಶೂಲೆ ಮತ್ತು ಸಂಚಾರ (ವಾಯುವಿನಿಂದ), ಹುಳಿತೇಗು, ಬಾಯಾರಿಕೆ ಮತ್ತು ಸರ್ವಾಂಗ ಉರಿ (ಪಿತ್ತದಿಂದ), ಅನ್ನದಲ್ಲಿ ದ್ವೇಷ, ಎದೆಯಿಂದ ನೀರು ಮೇಲಕ್ಕೆ ಬರುವದು, ಅಂದರೆ ವಾಂತಿ ಬರುವ ಹಾಗಿನ ಸಂಕಟ (ಕಫದಿಂದ), ಈ ಲಕ್ಷಣಗಳನ್ನುಂಟುಮಾಡುತ್ತವ. ಆಗ್ಗೆ ಚಿಕಿತ್ಸೆಗೆ ಎರಡನೆ ಕಾಲ. (1ನೇ ಭಾಗದ V-46ನೇ ಸಂಖ್ಯೆಯಲ್ಲಿ ವರ್ಣಿಸಲ್ಪಟ್ಟ ದೋಷಗಳ ವೃದ್ಧಿಯು ಪ್ರಕೋಪಗೊಂಡ ದೋಷಗಳವೃದ್ಧಿ ಎಂತ ತಿಳಿಯಬೇಕು.)

(ಕೋಪಗೊಂಡ ದೋಷಗಳು ಪ್ರಸರಿಸಿ ಒಂದಕ್ಕೊಂದು ಕೂಡಿಕೊಳ್ಳುವದರಿಂದ ಉಂಟಾಗುವ ಭೇದಗಳು 1ನೇ ಭಾಗದ V-36ನೇ ಸಂಖ್ಯೆಯಲ್ಲಿ ವರ್ಣಿಸಲ್ಪಟ್ಟಿವೆ.) ದೋಷಗಳ ಪ್ರಸರಾವಸ್ಥೆಯಲ್ಲಿ ವಾತದಿಂದ ವಾಯುವು ಮಾರ್ಗಬಿಟ್ಟು ಹೋಗುವದು ಮತ್ತು ಶೂಲೆ ಕೂಡಿದ ಹೊಟ್ಟೆಯುಬ್ಬರ, ಪಿತ್ತದಿಂದ ಸುಡುತ, ಸೆಕೆ ಮತ್ತು ಮೈಯುರಿ ಮತ್ತು ಹೊಟ್ಟೆಯಿಂದ ಮೇಲಕ್ಕೆ ಹೊಗೆ ಬರುವದು ಮತ್ತು ಕಫದಿಂದ ಅರುಚಿ, ಅಜೀರ್ಣ, ಅಂಗಗಳಲ್ಲಿ

ದಣುವು (ಸಾದ) ಮತ್ತು ವಾಂತಿ, ಈ ಲಕ್ಷಣಗಳು ಉಂಟಾಗುತ್ತವೆ. ಆಗ್ಗೆ ಚಿಕಿತ್ಸೆಗೆ ಮೂರನೇ ಕಾಲ. ಹಾಗೆ ಅನ್ಯದೋಷದ ಸ್ಥಾನವನ್ನು ಪಡೆದ ದೋಷಕ್ಕೆ ಪ್ರತೀಕಾರ ಮಾಡುವ ವಿಧವು ಅದೇ ಅಧ್ಯಾಯದ 38ನೇ ಸಂಖ್ಯೆಯಲ್ಲಿ ಸೂಚಿಸಲ್ಪಟ್ಟಿದೆ.

ಕೋಪಗೊಂಡ ದೋಷಗಳು ಪ್ರಸರಿಸಿ, ಶರೀರದ ಬೇರೆ ಬೇರೆ ಸ್ಥಳಗಳಿಗೆ ಬಂದು ನಿಂತು, ಬೇರೆ ಬೇರೆ ವ್ಯಾಧಿಗಳನ್ನುಂಟುಮಾಡುತ್ತವೆ. (ಅವುಗಳ ವಿವರವು ಅದೇ ಅಧ್ಯಾಯದ 34ನೇ ಸಂಖ್ಯೆಯಲ್ಲಿ ಕಾಣುತ್ತದೆ.) ಹಾಗೆ ಸಂಭವಿಸುವ ರೋಗಗಳ ಪೂರ್ವರೂಪವು ಆಯಾ ರೋಗಪ್ರಕರಣದಲ್ಲಿ ಹೇಳಲ್ಪಡುತ್ತದೆ. ಅಂಥಾ ಪೂರ್ವರೂಪದ ಕಾಣುವಿಕೆಯು ಚಿಕಿತ್ಸೆಗೆ ನಾಲ್ಕನೇ ಕಾಲ.

ಅದರನಂತರ ಶೋಫ-ಅರ್ಬುದ-ಗ್ರಂಥಿ-ವಿದ್ರಧಿ-ವಿಸರ್ಪ ಮುಂತಾದ ಮತ್ತು ಜ್ವರ-ಅತಿ ಸಾರ ಮುಂತಾದ ರೋಗಗಳು ಪ್ರತ್ಯಕ್ಷ ಲಕ್ಷಣಯುಕ್ತವಾಗಿ ಕಾಣಿಸಿಕೊಳ್ಳುವವು— ಅದು ಚಿಕಿತ್ಸೆಗೆ ಐದನೇ ಕಾಲ.

ಆ ಮೇಲೆ ಆ ಶೋಫಾದಿಗಳು ಒಡೆದು ವ್ರಣ ರೂಪವನ್ನು ಪಡೆಯುವದು ಮತ್ತು ಜ್ವರ-ಅತಿಸಾರಾದಿಗಳ ದೀರ್ಘಕಾಲದ ಅನುಬಂಧ ಚಿಕಿತ್ಸೆಗೆ ಆರನೇ ಕಾಲ. ಆಗಲೂ ಚಿಕಿತ್ಸೆ ಮಾಡದೆ ಉಪೇಕ್ಷಿಸಿದರೆ ಆ ರೋಗಗಳು ಅಸಾಧ್ಯವಾಗುತ್ತವೆ.

(1ನೇ ಭಾಗದ XIX-30ರಲ್ಲಿ ವಿಧಿಸಲ್ಪಟ್ಟಂತೆ ದೋಷಗಳ ವೃದ್ಧಿಯನ್ನು ಶೋಧನದಿಂದ ಮತ್ತು ಪ್ರಕೋಪವನ್ನು ಶಮನದಿಂದ ಪರಿಹರಿಸುವದಕ್ಕೆ ಬೇಕಾದ ಯೋಗಗಳನ್ನು ಕಲ್ಪಿಸು ವದಕ್ಕೆ ಸಹಾಯಾರ್ಥವಾಗಿ ಸಂಶೋಧನ-ಸಂಶಮನ ದ್ರವ್ಯಗಳ ಪಟ್ಟಿಗಳು ಈ ಉಪೋದ್ಘಾ ತಕ್ಕೆ ನಾಲ್ಕನೇ ಪರಿಶಿಷ್ಟವಾಗಿ ಕೊಡಲ್ಪಟ್ಟಿವೆ)

ಅನ್ಯದೋಷಸ್ಥಾನ ಗತ ದೋಷಗಳಿಗೆ ಚಿಕಿತ್ಸೆ

17. ಮೇಲೆ ಪ್ರಸ್ತಾಪಿಸಿದ 1ನೇ ಭಾಗದ V-38ನೇ ವಿಧಿಯಂತೆ ಪಿತ್ತಸ್ಥಾನವನ್ನು ಹೊಕ್ಕು ನಿಂತ ವಾತಕ್ಕೆ (ವಾತಸ್ಥಾನವನ್ನು ಪಡೆದ ಪಿತ್ತಕ್ಕೆ ಸಹ) ಪಿತ್ತದಂತೆ, ಕಫಸ್ಥಾನ ವನ್ನು ಸೇರಿದ ಪಿತ್ತಕ್ಕೆ (ಪಿತ್ತಸ್ಥಾನವನ್ನು ಪಡೆದ ಕಫಕ್ಕೆ ಸಹ) ಕಫ ದಂತೆ, ವಾತಸ್ಥಾನಕ್ಕೆ ಹೋಗಿ ನಿಂತ ಕಫಕ್ಕೆ (ಕಫಸ್ಥಾನದಲ್ಲಿಯ ವಾತಕ್ಕೆ, ಸಹ) ವಾತದಂತೆ, ಚಿಕಿತ್ಸೆಮಾಡಬೇಕಾದದ್ದು ಎರಡು ದೋಷಗಳು ಸಮ ಬಲವಾಗಿರುವಾಗ್ಗೆ ಆಗಿರುತ್ತದೆ. ಒಂದು ದೋಷದ ಲಕ್ಷಣಗಳು ಇನ್ನೊಂದರ ಲಕ್ಷಣಗಳಿಗಿಂತ ಹೆಚ್ಚು ಬಲವಂತವಾಗಿದ್ದಲ್ಲಿ, ಅದೇ ಅಧ್ಯಾಯದ 40ನೇ ಸಂಖ್ಯೆ ಯ ಉಪದೇಶದಂತೆ ಬಲವಂತವಾದ ದೋಷಕ್ಕೆ, ಇತರ ದೋಷಕ್ಕೆ ವಿರೋಧವಿಲ್ಲದಂತೆ, ಚಿಕಿತ್ಸೆ ಮಾಡುವದೇ ಸರಿಯಾದದ್ದು.

ದೀರ್ಘಕಾಲದ ವ್ಯಾಧಿಗಳಲ್ಲಿ ಪಿತ್ತ ಕಫಗಳ ಪ್ರಕೋಪ

18. ಮೇಲೆ ಪ್ರಸ್ತಾಪಿಸಿದ ದೋಷಗಳ ಮೇಳನವು ಸಂಸರ್ಗ ವಿಷಯ, ಸಂಯೋಗ ಬೇರೆ ಇರುತ್ತದೆ. ಇವುಗಳ ಭೇದವನ್ನು ಮುಂದೆ ವರ್ಣಿಸಲಾಗುವದು (21ನೇ ಸಂಖ್ಯೆ ನೋಡಿ). ದೀರ್ಘಕಾಲಾನುಬಂಧಿಯಾದ ರೋಗಗಳಲ್ಲಿ ಸಾಧಾರಣವಾಗಿ ಪಿತ್ತಕಫಗಳು ಸಂಯೋಗವಾಗಿರುತ್ತವೆ. ಆಗ್ಗೆ ಸಂಸರ್ಗದೋಷಕ್ಕೆ ಹೇಳಲ್ಪಟ್ಟ ಪ್ರಕಾರ ಒಂದೇ ದೋಷಕ್ಕೆ ಚಿಕಿತ್ಸೆ ಮಾಡುವದು ಉಪಯುಕ್ತ ವಾಗುವದಿಲ್ಲ. ಪಿತ್ತಹರವಾದ ಔಷಧೋಪಚಾರಗಳು ಪ್ರಾಯಶಃ ಕಫಕ್ಕೆ ವಿರುದ್ಧ ಮತ್ತು ಕಫಹರವಾದವು ಪ್ರಾಯಶಃ ಪಿತ್ತಕ್ಕೆ ವಿರುದ್ಧ. ಅವೆರಡಕ್ಕೂ ಶಮನಕರ

ವಾದ ಚೊಗರು ರುಚಿಯ ದ್ರವ್ಯಗಳು ಪ್ರಾಯಶಃ ವಾತಪ್ರಕೋಪಕರ. ವಾತವು ಕ್ಷೀಣ ವಾಗಿದ್ದರೆ ಆ ವರ್ಗದ ಔಷಧಗಳನ್ನುಪಯೋಗಿಸಿ ರೋಗವನ್ನು ಬೇಗನೇ ಗುಣಮಾಡುವದು ಸಾಧ್ಯವಾಗಬಹುದು. ಆದರೆ ವಾತದಲ್ಲಿ ಅಸ್ಥಿರತೆ ದೋಷವಾದರೂ ಇಲ್ಲದಿರುವದು ಅಪ ರೂಪ. ವಾತವನ್ನು ಪ್ರಕೋಪಿಸಿದರೆ ವ್ಯಾಧಿಯು ಇನ್ನಷ್ಟು ಬಲವಂತವಾಗುವದು. ಗತಿ ಯಿಲ್ಲದ ಪಿತ್ತ ಕಫಗಳ ಪ್ರಸರಕ್ಕೆ ವಾತದ ಸಹಾಯ ಮುಖ್ಯವಾದದ್ದೆಂಬದನ್ನು ನೆನಪಿನಲ್ಲಿ ಟ್ಟುಕೊಳ್ಳಬೇಕು. ಆದ್ದರಿಂದ ದೀರ್ಘವ್ಯಾಧಿಗಳಲ್ಲಿ ಮಾಡುವ ಚಿಕಿತ್ಸೆಯು ವಾತಪ್ರಕೋಪ ಕರವಾಗದಂತೆ ಸಹ ನೋಡಿಕೊಳ್ಳಬೇಕು. ವಾತಪ್ರಕೋಪದ ಲಕ್ಷಣ ಸಹ ಕಂಡಲ್ಲಿ ಅದರ ಪರಿಹಾರಕ್ಕೆ ವಿಧಿಸುವ ಔಷಧಸಮುದಾಯದ ವೀರ್ಯವು, ಪಿತ್ತಪ್ರಕೋಪದ ಭಯ ಅಧಿಕವಾದಾಗ್ಗೆ ಸೌಮ್ಯವಾಗಿಯೂ, ಕಫಪ್ರಕೋಪದ ಭಯ ಅಧಿಕವಾದಾಗ್ಗೆ ಉಷ್ಣ ವಾಗಿಯೂ, ಇರಬೇಕಾಗುತ್ತದೆ. ಇದನ್ನೆಲ್ಲಾ ಆಲೋಚಿಸಿಕೊಂಡು ಅತಿ ಶೀತವಲ್ಲದ ಪಿತ್ತ ಹರವಾದ ದ್ರವ್ಯಗಳನ್ನೂ, ಅತ್ಯುಷ್ಣವಲ್ಲದ ಕಫಹರವಾದ ದ್ರವ್ಯಗಳನ್ನೂ, ದೋಷಗಳ ಬಲಾಬಲತ್ವದ ಮೇಲೂ ದ್ರವ್ಯಗಳ ಗುಣ ಮತ್ತು ಪ್ರಭಾವಗಳ ಮೇಲೂ ದೃಷ್ಟಿಯಿಟ್ಟು ಪ್ರಮಾಣದಲ್ಲಿ ಹೆಚ್ಚುಕಡಿಮೆ ಮಾಡಿ, ಸಮುದಾಯದ ವೀರ್ಯವು ಬೇಕಾದ ಹಾಗೆ ಉಷ್ಣವೋ ಶೀತವೋ ಆಗುವಂತೆ ಯೋಜಿಸಿ, ಕಷಾಯಾದಿಗಳನ್ನು ವಿಧಿಸಬೇಕಾಗುತ್ತದೆ. ಅನುಭವಶಾಲಿಯಾದ ನಿಪುಣ ವೈದ್ಯರು ಹಾಗೆ ಪ್ರಯತ್ನಪಟ್ಟು ವಿಧಿಸಿದ ಔಷಧಯೋಗವು ಒಡನೆ ಆಶ್ಚರ್ಯಕರವಾಗಿ ಅಭೀಪ್ಸಿತ ಫಲವನ್ನು ಕೊಡುವದು. ಅದು ರೋಗಿಯ ಸುದೈವ. ಸಾಧಾರಣವಾಗಿ ಮೂರು ನಾಲ್ಕು ದಿನಗಳಲ್ಲೊಮ್ಮೆಯಾದರೂ ರೋಗಿಯನ್ನು, ಮುಖ್ಯ ವಾಗಿ ಅವನ ನಾಡೀಗತಿಯನ್ನು, ಪರೀಕ್ಷಿಸಿ ಅವನಲ್ಲಿ ಅಷ್ಟರೊಳಗುಂಟಾದ ಲಕ್ಷಣಭೇದ ಗಳನ್ನು ಗೋಚರಕ್ಕೆ ತಂದುಕೊಂಡು, ವಿಚಾರದಿಂದ ಬೇಕಾದ ಹಾಗೆ ಯೋಗದಲ್ಲಿ ಹೆಚ್ಚು ಕಡಿಮೆ ಮಾಡುತ್ತಾ ಬರಬೇಕಾಗುತ್ತದೆ. ದೋಷಗಳ ಬಲಾಬಲತೆಯ ಪ್ರಮಾಣವಾಗಲಿ ದ್ರವ್ಯಗಳ ಪ್ರಭಾವಾದಿಗಳ ಪ್ರಮಾಣವಾಗಲಿ ಇಂತಿಷ್ಟೇ ಎಂದು ನಿರ್ಧಾರವಾಗಿ ಗೊತ್ತು ಮಾಡುವದು ಅಶಕ್ಯವಷ್ಟೆ.

19. ವಾತಾದಿ ದೋಷಗಳ ಸ್ಥಾನಭೇದದ ವಿಚಾರವಿಲ್ಲದೆ ನಾಡಿಯ ಸಾಮಾನ್ಯ ಗತಿಯಿಂದ ತಿಳಿಯಬಹುದಾಗಿ ಪಾಶ್ಚಾತ್ಯ ವೈದ್ಯರು ನಿಶ್ಚಯಿಸಿರುವ ಜ್ಞಾನವಿಶೇಷಗಳನ್ನು 1ನೇ ಭಾಗದ XVIIನೇ ಅಧ್ಯಾಯದಲ್ಲಿ ಸಂಕ್ಷಿಪ್ತವಾಗಿ ಬರೆದಿದೆ. ಆ ಅಂಶವನ್ನು ತಿಳಿಯುವದು ಆಯುರ್ವೇದೀಯ ಚಿಕಿತ್ಸಕರಿಗೂ ಬಹು ಪ್ರಯೋಜನಕರ. ಅದೇ ಅಧ್ಯಾಯದಲ್ಲಿ ಪೂರ್ವಿಕ ಆಯುರ್ವೇದೀಯ ಗ್ರಂಥಗಳಿಂದ ಸಂಗ್ರಹಿಸಿ ಕೊಡಲ್ಪಟ್ಟಿರುವ ನಾಡೀಪರೀಕ್ಷೆಯ ತತ್ತ್ವಗಳೆಲ್ಲಾ ಅಷ್ಟೇ ಪ್ರಯೋಜನವುಳ್ಳವೆಂತ ಹೇಳಲಾಗುವದಿಲ್ಲ. ವಾತಾದಿ ದೋಷ ಭೇದದಿಂದ ನಾಡಿಯ ಸಾಮಾನ್ಯಗತಿಯಲ್ಲಿ ಸಂಭವಿಸುವದಾಗಿ ಅಲ್ಲಿ ಹೇಳಲ್ಪಟ್ಟ ಸರ್ಪಗತಿ, ಹಂಸಗತಿ, ಕಪ್ಪೆಯ ಗತಿ, ಜಿಗಳಿಯ ಗತಿ, ಎಂಬೀ ತರದ ಭೇದಗಳನ್ನು ಗೊತ್ತುಮಾಡುವದು ಪ್ರಾಯಶಃ ಕಷ್ಟಸಾಧ್ಯವೆನ್ನಬೇಕು. ಕೆಲವು ರೋಗಗಳಿಗೆ ವಿಶೇಷವಾದದ್ದೆಂತ ಹೇಳಲ್ಪಟ್ಟ ನಾಡೀ ಗತಿಯ ವರ್ಣನವು ಆಯಾ ರೋಗವನ್ನು ತಿಳಿಯುವುದಕ್ಕೆ ಹೆಚ್ಚು ಪ್ರಯೋಜನಕಾರಿಯಾಗಿ ತೋರುವದಿಲ್ಲ. ದೃಷ್ಟಾಂತ: ನಾಡೀಸ್ಫುರಣವು ಪಾಂಡುರೋಗದಲ್ಲ ಮತ್ತು ನಾಡೀಶೀರ್ಣ

ವಾತಾದಿ ಸ್ಥಾನ ಭೇದವನ್ನು ಲಕ್ಷಿಸದೆ ಮಾಡುವ ನಾಡೀಪರೀಕ್ಷೆಯ ಪ್ರಯೋಜನ

ತೆಯು ಕಾಮಿಲಾರೋಗದಲ್ಲಿ ವಿಶೇಷವಾಗಿ ಹೇಳಲ್ಪಟ್ಟದೆ [1ನೇ ಭಾಗದ XVII-19 (s) (u)]. ಸಾಧಾರಣವಾಗಿ ಪಾಂಡುರೋಗದ ನಾಡಿಯು ಮೃದುವಾಗಿಯೂ, ಸ್ವಸ್ಥಸ್ಥಿತಿಯದಕ್ಕಿಂತ ಸ್ವಲ್ಪ ಹೆಚ್ಚು ವೇಗವುಳ್ಳದ್ದಾಗಿಯೂ ಇರುತ್ತದೆ ಮತ್ತು ಕಾಮಿಲೆಯಲ್ಲಿ ನಾಡೀಬಡಿತಗಳ ಸಂಖ್ಯೆಯು ಮಿನಿಟಿಗೆ 50 ಅಥವಾ 40 ರಷ್ಟು ಕಡಿಮೆಯಾಗುವದುಂಟು ಎಂತ ಒಬ್ಬ ಪಾಶ್ಚಾತ್ಯ ಡಾಕ್ಟರರು ಅವರ ಗ್ರಂಥದಲ್ಲಿ ಬರೆದದ್ದು ಕಾಣುತ್ತದೆ. ಆದರೆ ಒಬ್ಬ ದೀರ್ಘ ಕಾಲದ ರೋಗಿಯ ನಾಡಿಯು ಸಾಕಷ್ಟು ಬಲವಂತವಾಗಿದ್ದು ಅದರ ಬಡಿತಗಳ ಸಂಖ್ಯೆಯು ಬಹಳ ಕಡಿಮೆಯಾಗಿದ್ದಲ್ಲಿ, ನಾನು ಆ ರೋಗಿಯಲ್ಲಿ ಪಾಂಡುರೋಗವಿರಬೇಕೆಂತ ಊಹಿಸಿ, ಅವನ ಕಣ್ಣುಗಳ ರೆಪ್ಪೆಯ ಒಳಪಕ್ಕವನ್ನು ಪರೀಕ್ಷಿಸುತ್ತೇನೆ. ಹೆಚ್ಚಿನ ಪಕ್ಷ ಆ ನನ್ನ ಊಹೆಯು ಸರಿಯಾಗಿ ಕಂಡದೆ. ನಾಡಿಯು ಸೂಕ್ಷ್ಮ, ಕ್ಷೀಣ ಮತ್ತು ವೇಗಾಧಿಕ್ಯವುಳ್ಳದ್ದು ಆಗುವದು ಬಹಳವಾದ ಅಶಕ್ತಿಯಿಂದ. ಆ ಲಕ್ಷಣವು ಪ್ರಕೃತದಲ್ಲಿ ಕಾಣಿಸಿಕೊಂಡಿರುವ ರೋಗದಿಂದ ಸಂಭವಿಸಿದ್ದಲ್ಲವಾದರೆ, ರೋಗಿಯು ಹಿಂದಕ್ಕೆ ಕಠಿನವಾದ ಜ್ವರ, ರಕ್ತಾತಿಸಾರ, ರಕ್ತಪಿತ್ತ, ರಕ್ತಸ್ರಾವ ಮುಂತಾದ ಧಾತುಕ್ಷಯಕರವಾದ ರೋಗಗಳಲ್ಲಿ ಒಂದನ್ನು ಅನುಭವಿಸಿರಬೇಕು, ಅಥವಾ ಅವನಲ್ಲಿ ಮೇಹ, ಸ್ವಪ್ನೇಂದ್ರಿಯ, ಕ್ಷಯ ಮುಂತಾದ ರೋಗಗಳೊಳಗೆ ಒಂದು ಇರಬೇಕು ಎಂತ ಊಹಿಸಿ, ಅವನಿಗೆ ಪ್ರಶ್ನೆಮಾಡುವದು ಸಾಧಾರಣವಾಗಿ ಸಾರ್ಥಕವಾಗುತ್ತದೆ. ನಾಡೀಗತಿಗಳಲ್ಲಿ ಕಾಣಬಹುದಾದ ಅಸ್ಥಿರತೆಯು ಮತ್ತು ಒಂದೊಂದು ಲೋಪ ನರಗಳ ದುರ್ಬಲತೆಯನ್ನು ಸೂಚಿಸುತ್ತದೆ. ಲೋಪವು ವಾತಾದಿ ಮೂರು ಸ್ಥಾನಗಳಲ್ಲಿಯೂ ಕ್ರಮವಾಗಿ ಕಂಡರೆ, ಆ ರೋಗಿಯ ಹೃದಯದ ವ್ಯಾಪಾರದಲ್ಲಿ ದೋಷ ಉಂಟೆಂತ ಊಹಿಸಬಹುದು. ಅಂಥಾ ಸಂದರ್ಭದಲ್ಲಿ ರೋಗಿಗೆ ಕೊಡುವ ಕಷಾಯಕ್ಕೆ ಕಡೀರುಬೇರು, ಆನೆ ಕಡೀರುಬೇರು, ಜ್ಯೇಷ್ಠಮಧು, ಇವುಗಳನ್ನು ಪ್ರಮಾಣಭೇದದಿಂದ ಕೂಡಿಸಿ ಕೊಡುವದರಿಂದ ಅವನ ಹೃದಯವು ಬಲಪಟ್ಟು, ಆ ಲಕ್ಷಣ ಅಡಗುವದುಂಟು. ಹೃದ್ರೋಗವಿಲ್ಲದವನ ನಾಡೀಬಡಿತವು ಮಿನಿಟಿಗೆ ಅರುವತ್ತಕ್ಕೂ ಕಡಿಮೆಯಾಗಿದ್ದರೆ, ಅವನಿಗೆ ಪಿತ್ತವನ್ನು ಚುರುಕು ಮಾಡತಕ್ಕಂಥ ಮತ್ತು ಸ್ವಲ್ಪ ಉತ್ತೇಜಕವಾದ ಔಷಧವನ್ನು ಕೊಟ್ಟರೆ, ನಾಡಿಯ ವೇಗವು ಸಾಕಷ್ಟು ಏರುತ್ತದೆ. ಹೆಚ್ಚು ಹಸಿವು ಉಳ್ಳವನ ನಾಡಿಬಡಿತಗಳಲ್ಲಿ ಗಲಿಬಿಲಿ ಕಾಣುತ್ತದೆ. ಸಾಧಾರಣವಾಗಿ ನಾಡಿಯು ಪುಷ್ಟವಾಗಿಯೂ, ಬಲವಂತವಾಗಿಯೂ, ಮೆಲ್ಲಗೆ ನಡಯುವದು ಕಫಾಧಿಕ್ಯದಿಂದ, ವಿಶೇಷ ಪುಷ್ಟಿಯಾಗಲಿ ಕೃಶತೆಯಾಗಲಿ ಇಲ್ಲದೆ ವೇಗದಿಂದ ಚಲಿಸುವದು ಪಿತ್ತಾಧಿಕ್ಯದಿಂದ, ಕೃಶ (ಸಪೂರ)ವಾಗಿ ಮತ್ತು ಕಠಿನವಾಗಿ (ಮೃದುವಲ್ಲದೆ) ನಡೆಯುವದು ವಾತಾಧಿಕ್ಯದಿಂದ ಎನ್ನಬಹುದು. ಆದರೆ ಪುಷ್ಟತ್ವವು ಜ್ವರದ ಕಾಪಿನಿಂದಲೂ, ರಕ್ತಾಧಿಕ್ಯದಿಂದಲೂ, ಉಂಡಿರುವದು ಮುಂತಾದ ಹೇತುಗಳಿಂದಲೂ, ಉಂಟಾಗಬಹುದು. ವೇಗಾಧಿಕ್ಯವು ಜ್ವರದಿಂದಲೂ, ಆಯಾಸದಿಂದಲೂ, ವ್ಯಾಯಾಮ, ದಾರಿನಡಿಕೆ ಮುಂತಾದ್ದರ ಶ್ರಮದಿಂದಲೂ, ಅಶಕ್ತಿ ಮುಂತಾದ ಕಾರಣಗಳಿಂದಲೂ ಸಂಭವಿಸಿರಬಹುದು. ಕೃಶತೆ ನರಗಳ ದುರ್ಬಲತೆ, ಧಾತುಕ್ಷಯ, ರಕ್ತಸ್ರಾವ ಮುಂತಾದ ಹೇತುಗಳ ಲಕ್ಷಣವಾಗಿರಬಹುದು. ಸ್ಥೂಲಶರೀರದವರ ನಾಡಿ ಸ್ವಲ್ಪ ಕ್ಷೀಣ ವ ಕೃಶವಾಗಿ, ಕೃಶರಲ್ಲಿ ನಾಡಿ ಸ್ವಲ್ಪ ಪುಷ್ಟವಾಗಿ ವ ಬಲವಾಗಿ, ನಾಡಿಯ ಮೇಲಿನ ಮಾಂಸಾದಿಗಳ ಹೊದಿಕೆಯ ದಪ್ಪದ ಭೇದದಿಂದ, ಕಾಣಬಹುದು. ಆದದರಿಂದ ರೋಗ ಇಂಥಾದ್ದೆಂತ ವ್ಯವಸ್ಥೆಮಾಡುವಾಗ್ಗೆ ಆಲೋಚಿಸ

ಬೇಕಾದ ಅನೇಕ ಲಕ್ಷಣಗಳೊಳಗೆ ನಾಡೀಗತಿಯು ಮುಖ್ಯವಾದದ್ದಾಗ್ಯೂ, ನಾಡೀಗತಿಯಿಂದಲೇ ರೋಗವನ್ನು ನಿಶ್ಚಯಿಸುವದು ಸಾಧ್ಯವಾಗಿ ಕಾಣುವದಿಲ್ಲ. ನಾಡಿಯು ಅತಿ ಸೂಕ್ಷ್ಮವಾಗಿ ಅಥವಾ ಅತಿ ವೇಗವುಳ್ಳದ್ದಾಗಿ ಇರುವದು, ತಾತ್ಕಾಲಿಕ ಹೇತುವಿನಿಂದಲ್ಲದಿದ್ದರೆ, ಭಯಕ್ಕೆ ಕಾರಣ. ಹೀಗೆ ರೋಗಿಯ ಸ್ಥಿತಿಗತಿಗಳನ್ನು ಕುರಿತಾದ ಅನೇಕ ವಿಷಯಗಳನ್ನು ಅವನ ನಾಡಿಯ ಸಾಮಾನ್ಯ ಗತಿವಿಶೇಷದಿಂದ ತಿಳಿಯಬಹುದಾದರೂ, ಆಯುರ್ವೇದೀಯ ಚಿಕಿತ್ಸಾಸಾರ್ಥಕ್ಯಕ್ಕೆ ಅತ್ಯಾವಶ್ಯಕವಾದ ದೋಷವೈಷಮ್ಯ ಭೇದಗಳನ್ನು ತಿಳಿಯುವದಕ್ಕೆ ವಾತಾದಿಸ್ಥಾನಗಳಲ್ಲಿಯ ನಾಡೀಗತಿವಿಶೇಷವೇ ಮುಖ್ಯವಾದದ್ದು. ಯಾಕೆಂದರೆ, ರೋಗೋತ್ಪತ್ತಿಗೆ ಕಾರಣವಾದ ಪ್ರಧಾನ ದೋಷ ಯಾವದಾದರೂ, ಆ ರೋಗದಲ್ಲಿ ವಾತಜ, ಪಿತ್ತಜ, ಕಫಜ ಎಂಬ ಮೂರು ಭೇದಗಳಾದರೂ ಇಲ್ಲದೆ ಇರುವದು ಅಪರೂಪ. ಅವುಗಳಲ್ಲೆಲ್ಲಾ ವಾತಾದಿಗಳ ಸ್ಥಿತಿಗತಿಗಳು ಸಮಾನವಾಗಿರದು. ಆ ರೋಗಭೇದಗಳೊಳಗೆ ಯಾವದಕ್ಕೆ ಚಿಕಿತ್ಸೆಮಾಡಬೇಕಾದ ರೋಗವು ಸೇರಿದ್ದೆಂಬದನ್ನು ಗೊತ್ತುಮಾಡಿದರೂ, ಅದು ಸಮರ್ಪಕವಾದ ಚಿಕಿತ್ಸೆಗೆ ಸಾಕಾಗದು ದೋಷಗಳ ಪೀಡೆ ಚಿಕಿತ್ಸಾಕಾಲದಲ್ಲೆಲ್ಲ ಏಕರೀತಿಯಾಗಿ ಇರದೆ, ಹವಾಭೇದದಿಂದಲೂ, ಪಥ್ಯೋಪಚಾರಗಳಲ್ಲಿಯುಂಟಾದ ತಪ್ಪಿನಿಂದಲೂ, ಔಷಧದ ಪ್ರಭಾವದಿಂದಲೂ, ರೋಗದ ಪ್ರಭಾವದಿಂದಲೂ, ಬೇರೆ ಆಕಸ್ಮಾತ್ ಸಂಭವಿಸಿದ ಹೇತುವಿನಿಂದಲೂ, ಭಿನ್ನವಾಗುತ್ತಾ ಇರುತ್ತದೆ. ಹಾಗಿನ ಭೇದಗಳನ್ನು, ಸಂಭವಿಸಿದ ಹಾಗೆ ತಿಳಿದು, ಔಷಧೋಪಚಾರಗಳಲ್ಲಿ ಯಥಾಯುಕ್ತವಾಗಿ ಹೆಚ್ಚುಕಡಿಮೆ ಮಾಡುತ್ತಾ ಬರಬೇಕಾಗುತ್ತದೆ; ಹಾಗಿನ ಭೇದಗಳನ್ನು ವಾತಾದಿ ಮೂರು ಸ್ಥಾನಗಳಲ್ಲಿಯ ನಾಡೀಗತಿಗಳಿಂದ ತಿಳಿಯಬಹುದಾಗುತ್ತದೆಂಬದೇ ನಾಡೀಪರೀಕ್ಷೆಯ ವಿಶೇಷ ಪ್ರಯೋಜನ. ವಾತಾದಿ ಸ್ಥಾನಗಳಲ್ಲಿಯ ನಾಡೀಗತಿಗಳು ಬೇರೆಬೇರೆ ದೋಷವಿಶೇಷಗಳನ್ನು ಸೂಚಿಸುತ್ತವೆ ಎಂಬ ತತ್ತ್ವವನ್ನು ನಿರಾಕರಿಸುವ, ಅಥವಾ ಆ ನಾಡೀಗತಿಗಳಲ್ಲಿ ಕಾಣುವ ಭೇದಗಳನ್ನು ತಿಳಿಯುವಷ್ಟು ಸೂಕ್ಷ್ಮಬುದ್ಧಿ ಮತ್ತು ಅನುಭವ ಇಲ್ಲದ, ಆಯುರ್ವೇದೀಯ ಪಂಡಿತರು ಮಾಡುವ ನಾಡೀಪರೀಕ್ಷೆ ಮಾತ್ರ ಬರೇ ಜಂಬಕ್ಕಾಗಿ ಎನ್ನುವದು ತಪ್ಪಲ್ಲ.

20. ರೋಗವನ್ನು ಸಂಪೂರ್ಣವಾಗಿ ತಿಳಿದು, ಅದಕ್ಕೆ ತಕ್ಕ ಚಿಕಿತ್ಸೋಪಚಾರಗಳನ್ನು ನಿಶ್ಚಯಿಸುವದಕ್ಕೆ ದೋಷಗಳ ವೃದ್ಧಿ, ಕೋಪ, ಕ್ಷಯ ಎಂಬ ಅವಸ್ಥಾವಿಶೇಷವನ್ನೂ ಆ ದೋಷಗಳು ಶರೀರದ ಯಾವ ಅಂಗವಿಭಾಗವನ್ನು ಸೇರಿಕೊಂಡು ಪೀಡಿಸುತ್ತಿವೆ ಎಂಬದನ್ನೂ ಗೊತ್ತುಮಾಡುವದು ಎಷ್ಟು ಅಗತ್ಯವೋ, ಅಷ್ಟೇ ರಸಾದಿ ಸಪ್ತಧಾತುಗಳು, ಮಲ, ಮೂತ್ರ, ಬೆವರು, ರಜಸ್ಸು, ಸ್ತನ್ಯ, ಗರ್ಭ, ಇವುಗಳೊಳಗೆ ಯಾವದರಲ್ಲಿ ಕ್ಷಯ, ವೃದ್ಧಿ ಅಥವಾ ದುಷ್ಟತೆ ಉಂಟಾಗಿದೆ ಎಂಬದನ್ನು ಪರೀಕ್ಷಿಸಿ ತಿಳಯುವದು ಆವಶ್ಯಕ. ಯಾಕಂದರೆ ಬೇರೆಬೇರೆ ದ್ರವ್ಯಗಳಲ್ಲಿ ಸಾಧಾರಣವಾಗಿ ದೋಷಗಳನ್ನು ವೃದ್ಧಿಗೊಳಿಸುವ, ಕ್ಷಯಿಸುವ ಅಥವಾ ಶಮನ ಮಾಡುವ ಗುಣಗಳು ಮತ್ತು, ವಿಶೇಷವಾಗಿ, ಕೆಲವು ಅಂಗವಿಶೇಷಗಳನ್ನು ಆಕ್ರಮಿಸಿಕೊಂಡ ದೋಷಗಳನ್ನು ಪರಿಹರಿಸುವ ಶಕ್ತಿಯು ಹೆಚ್ಚುಕಡಿಮೆಯಾಗಿ ಇರುವಂತೆ, ರಸಾದಿ ಧಾತುಗಳನ್ನೂ ಮಲಾದಿಗಳನ್ನೂ ಹೆಚ್ಚಿಸುವ, ಕ್ಷಯಿಸುವ ಅಥವಾ ಶುದ್ಧಪಡಿಸುವ ಗುಣಗಳು ವ್ಯತ್ಯಸ್ತವಾಗಿ ಇರುತ್ತವೆ. ಆದ್ದರಿಂದ ಧಾತು ಮಲಾದಿಗಳಲ್ಲಿರಬಹುದಾದ ವೃದ್ಧಿ-ಕ್ಷಯ-

ಧಾತು ಮಲಾದಿಗಳ ಕ್ಷಯ-ವೃದ್ಧಿ-ದುಷ್ಟತೆಗಳ ಜ್ಞಾನ

ದುಷ್ಟತೆಗಳನ್ನು ಲಕ್ಷಿಸದೆ, ವಾತಾದಿ ದೋಷಗಳ ಸಾಮಾನ್ಯ ಪರಿಹಾರದ ದೃಷ್ಟಿಯಿಂದಲೇ ಕಲ್ಪಿಸಲ್ಪಟ್ಟ ಪರಿಹಾರವು ಸಫಲವಾಗುವದು ನಿಶ್ಚಯವಲ್ಲ. ಧಾತು ಮಲಾದಿಗಳಲ್ಲಿ ಉಂಟಾಗಿರುವ ವೃದ್ಧಿ-ಕ್ಷಯಗಳ ಬೇರೆಬೇರೆ ಲಕ್ಷಣಗಳು ಮತ್ತು ಅವುಗಳ ಪರಿಹಾರಮಾರ್ಗಗಳು 1ನೇ ಭಾಗದ Vನೇ ಅಧ್ಯಾಯದಲ್ಲಿ ವಿವರಿಸಲ್ಪಟ್ಟಿವೆ. ಅವುಗಳ ದುಷ್ಟತೆ (ಅಂದರೆ ವಾತಾದಿ ದೋಷಗಳು ಅವುಗಳಲ್ಲಿ ಉಂಟುಮಾಡಿದ ಅಶುದ್ಧತೆ)ಯಿಂದ ಸಂಭವಿಸುವ ರೋಗಗಳು ಅದೇ ಗ್ರಂಥದ VIನೇ ಅಧ್ಯಾಯದಲ್ಲಿ ಉದಾಹರಿಸಲ್ಪಟ್ಟಿವೆ. ಅದಲ್ಲದೆ ಇಂದ್ರಿಯಾಯತನ ವ್ಯಾಧಿಗಳ ಸಾಮಾನ್ಯ ಲಕ್ಷಣಗಳು ಅದೇ ಆರನೇ ಅಧ್ಯಾಯದಲ್ಲಿ ಸೂಚಿತವಾಗಿವೆ. ಈ ಭೇದಗಳನ್ನೆಲ್ಲಾ ಸೂಕ್ಷ್ಮವಾಗಿ ತಿಳಿದು ಗ್ರಹಿಸಿದ ವೈದ್ಯನು ಮಾತ್ರ ರೋಗಕ್ಕೆ ಯುಕ್ತವಾದ ಪರಿಹಾರವನ್ನು ವಿಧಿಸುವದಕ್ಕೂ, ಸ್ವತಂತ್ರವಾಗಿ ಸ್ವಬುದ್ಧಿಶಕ್ತಿಯಿಂದ ಕಲ್ಪಿಸುವದಕ್ಕೂ, ಶಕ್ತನಾಗುವನು.

ದೋಷಗಳ ಮತ್ತು ರಸಗಳ ಸಮವಾಯಭೇದಗಳು

21. ವಾತಾದಿ ಮೂರು ದೋಷಗಳು ಒಂದೊಂದಾಗಿ ವೃದ್ಧಿ, ಕ್ಷಯ, ಕೋಪ ಎಂಬ ಅವಸ್ಥಾಂತರವನ್ನು ಪಡೆದು, ಪರಸ್ಪರ ಸಂಸರ್ಗ ಅಥವಾ ಸಂಯೋಗವಾಗಿ, ಸಮತ್ವ, ವೃದ್ಧಿ, ಕ್ಷಯ ಎಂಬ ಭೇದಗಳಿಂದ ತಮ್ಮ ತಮ್ಮ ಸ್ಥಾನಗಳಲ್ಲಿಯೇ ನಿಂತು, ಅಥವಾ ಅನ್ಯೋನ್ಯಸ್ಥಾನಕ್ಕೆ ಹೋಗಿ, ಸಪ್ತಧಾತುಗಳಲ್ಲಿಯೂ ಮಲಮೂತ್ರಾದಿಗಳಲ್ಲಿಯೂ ವೃದ್ಧಿ, ಕ್ಷಯ, ದುಷ್ಟತೆ ಎಂಬ ದೋಷಗಳನ್ನುಂಟುಮಾಡಿ, ಇಡೀ ಶರೀರವನ್ನು ವ್ಯಾಪಿಸಿ, ಅಥವಾ ಯಾವದೊಂದು ಅಂಗವಿಭಾಗವನ್ನು, ಇಂದ್ರಿಯವನ್ನು ಅಥವಾ ಮನಸ್ಸನ್ನು ಪೀಡಿಸಿ ನಿಂತು, ಶರೀರಬಲವನ್ನು ಕೆಡಿಸಿ, ತಮ್ಮ ಬಲಾಬಲ ತಾರತಮ್ಯದಿಂದ (ಲೆಕ್ಕವಿಲ್ಲದಷ್ಟು) ನಾನಾ ವಿಧವಾದ, ವಿಕಾರಗಳನ್ನು ಹೇಗೆ ಉಂಟುಮಾಡುತ್ತವೋ, ಹಾಗೆಯೇ ದ್ರವ್ಯಗಳು ಒಂದೊಂದಾಗಿ ಅಥವಾ ಅನ್ಯದ್ರವ್ಯಗಳ ಸಂಸರ್ಗ ಅಥವಾ ಸಂಯೋಗದಿಂದ, ನಾನಾ ವಿಧವಾಗಿ ಮತ್ತು ಪ್ರಮಾಣವ್ಯತ್ಯಾಸದಿಂದ ಉಪಯೋಗಿಸಲ್ಪಟ್ಟಲ್ಲಿ, ತಮ್ಮ ಗುಣ, ವೀರ್ಯ, ವಿಪಾಕ, ಪ್ರಭಾವ ಎಂಬ ವಿಶೇಷಗಳ ತಾರತಮ್ಯದಿಂದ, ಅನಂತವಾದ ಕರ್ಮಗಳನ್ನು ಸಾಧಿಸುವ ಶಕ್ತಿಯುಳ್ಳವಾಗುತ್ತವೆ. ದೋಷಗಳು ಪರಸ್ಪರ ವೈಷಮ್ಯವಿಲ್ಲದೆ ಸಮವಾಗಿ ಕೂಡಿಕೊಂಡು ತಮ್ಮ ತಮ್ಮ ನಿಜಲಕ್ಷಣಗಳನ್ನೇ ಕಾಣಿಸುವಲ್ಲಿ ದೋಷಗಳು ಸಂಸರ್ಗವಾಗಿವೆ ಎನ್ನುವದು. ದೋಷಗಳು ವಿಷಮವಾಗಿ ಕೂಡಿಕೊಂಡು, ಅವುಗಳ ಸ್ವಾಭಾವಿಕ ಲಕ್ಷಣವಲ್ಲದ ಬೇರೆ ಲಕ್ಷಣಗಳನ್ನು ತೋರಿಸುವಲ್ಲಿ, ಆ ದೋಷಗಳು ಸಂಯೋಗವಾಗಿವೆ ಎನ್ನುವದಾಗಿರುತ್ತದೆ. ಸಂಸರ್ಗ ಎಂಬದೇ ಪ್ರಕೃತಿ-ಸಮ-ಸಮವಾಯ; ಸಂಯೋಗ ಎಂಬದು ವಿಕೃತಿ-ವಿಷಮ-ಸಮವಾಯ. ಬಿಳೀ ನೂಲಿನ ಎಳೆಗಳನ್ನು ಕ್ರಮವಾಗಿ ಜೋಡಿಸಿದ್ದರಿಂದ ಉಂಟಾಗುವ ವಸ್ತ್ರವು ಬಿಳೀದೇ ಇರುತ್ತದೆ. ಬಿಳೀದಾದ ಸುಣ್ಣಕ್ಕೆ ಅರಸಿನ ವರ್ಣದ ಅರಸಿನದ ಪುಡಿಯನ್ನು ಬೆರಸಿದರೆ, ಮಿಶ್ರವು ಕೆಂಪು ಆಗುತ್ತದೆ. ಇವುಗಳಲ್ಲಿ ಒಂದನೇದು ಸಂಸರ್ಗಮೇಳನ ಎರಡನೇದು ಸಂಯೋಗ. ಸಿಹಿಯಾದ ಕಿರುಕಸಾಲೆ (ಕೈಹರುವೆ, ಕೆಲವರ ಪಕ್ಷದಲ್ಲಿ ಮುಳ್ಳುಹರುವೆ)ಯಲ್ಲಿ ಸ್ನೇಹನ ವೃಷ್ಯತ್ವಾದಿಗಳು ಇಲ್ಲದಿರುವದು ವಿಕೃತಿಸಮವಾಯದಿಂದ ಎಂತಲೂ ಚೊಗರು, ಕಾರ, ಕಹಿ, ಮತ್ತು ಸೀ ರಸಗಳು ಎಳ್ಳಿನಲ್ಲಿ ಇದ್ದರೂ, ಅದು ಪಿತ್ತ ಕಫಹರ ಅಥವಾ ತ್ರಿದೋಷಹರವಾಗುವದರ ಬದಲಾಗಿ, ಪಿತ್ತ ಕಫಕಾರಕವಾಗಿರುವದು ವಿಷಮ

ಸಮವಾಯದಿಂದ ಎಂತಲೂ ಆ. ದೀ. (ಪು. 228). ಬದನೆಯಲ್ಲಿ ಕಾರ-ಕಹಿರಸವಿರುವದರಿಂದ ಅದು ವಾತವೃದ್ಧಿಕರವಾಗಬೇಕಾಗಿತ್ತು. ಹಾಗೆ ಆಗದೆ, ಅದು ವಾತಹರವಾಗಿರುವದು ವಿಕೃತಿ-ವಿಷಮ-ಸಮವಾಯದಿಂದ ಎಂತಲೂ ಅದೇ ಆ ದೀ. (ಪು. 232). ಇದು ಒಂದೊಂದು ದ್ರವ್ಯದೊಳಗಿನ ಗುಣಸಂಯೋಗದ ವಿಷಯ, ಹೀಗೆಯೇ ಬೇರೆಬೇರೆ ದ್ರವ್ಯಗಳನ್ನು ಕೂಡಿಸುವಲ್ಲಿ ಸಂಯೋಗದಿಂದ ಹೊಸ ಗುಣ ಉಂಟಾಗುವದುಂಟು. ಚರಕಾದಿಗಳ ಗ್ರಂಥಗಳಿಂದ ಸಂಗ್ರಹಿಸಿ ಒಂದನೇ ಭಾಗದ IV-42ನೇ ಸಂಖ್ಯೆಯಲ್ಲಿ ಕೊಟ್ಟಿರುವ ಒಟ್ಟಾಗಿ ಉಪಯೋಗಿಸಬಾರದ ದ್ರವ್ಯಗಳನ್ನು ಕುರಿತಾದ ಉಪದೇಶಗಳಲ್ಲಿ ಇದೇ ವಿಚಾರವು ಅಡಗಿರುತ್ತದೆಂತ ತಿಳಿಯಬೇಕು. ವೀರ್ಯ, ವಿಪಾಕ, ಪ್ರಭಾವ ವಿಶೇಷಗಳಿಂದ ರಸಗಳ ಸಾಧಾರಣ ಗುಣಗಳಿಗೆ ಬೇರೆಯಾದ ಗುಣಗಳನ್ನು ಪಡೆದಿರುವ ಅನೇಕ ವಸ್ತುಗಳ ಮತ್ತು ಯೋಗಗಳ ವಿವರವು ಅದೇ ಅಧ್ಯಾಯದಲ್ಲಿ ಕೊಡಲ್ಪಟ್ಟದೆ. ಒಟ್ಟಾರೆ, ಪ್ರತ್ಯೇಕ ದ್ರವ್ಯದಲ್ಲಿ ಆಗಲಿ ಅನೇಕ ದ್ರವ್ಯಗಳ ಸಮವಾಯಗಳಲ್ಲಿ ಆಗಲಿ ಸಾಮಾನ್ಯ ರಸಗುಣಕ್ಕೆ ವ್ಯತಿರಿಕ್ತವಾದ ಗುಣ ಇರುವ ಅಥವಾ ಸಂಭವಿಸುವ ವಿಷಯದ ಜ್ಞಾನವು ದೀರ್ಘಾನುಭವದಿಂದ, ವಿಶೇಷವಾಗಿ ಶಾಸ್ತ್ರದಿಂದ, ಲಭ್ಯ. ಆ ವಿಷಯದಲ್ಲಿ ಸಂದೇಹ ಉಂಟಾದ್ದಲ್ಲಿ ಚರಕಾದಿಗಳ ಆದರಣೀಯವಾದ ಗ್ರಂಥಗಳಲ್ಲಿ ಅಡಗಿರುವ ಅನೇಕಾನೇಕ ಔಷಧಯೋಗಗಳ ಪರಿಶೀಲನದಿಂದ ನಿವೃತ್ತಿಪಡಿಸಿಕೊಂಡು, ವೈದ್ಯನು ತನ್ನ ಆ ವಿಷಯದ ಜ್ಞಾನವನ್ನು ಪರಿಶೋಧಿಸಿ ವೃದ್ಧಿಗೊಳಿಸುತ್ತಾ ಬರತಕ್ಕದ್ದು.

ದೋಷಗಳಿಗೂ ರಸಗಳಿಗೂ ಇರುವ ಪರಸ್ಪರ ಮಿತ್ರತ್ವ ಶತ್ರುತ್ವ

22. ಷಡ್ರಸಗಳೊಳಗೆ, ಕಾರವು ಕಫವನ್ನು ಶಮನಮಾಡುತ್ತದೆ, ವಾತ-ಪಿತ್ತಗಳನ್ನು ಕೆದರಿಸುತ್ತದೆ, ಕಹಿಯು ಪಿತ್ತಕಫಗಳನ್ನು ಶಮನಮಾಡುತ್ತದೆ, ವಾತವನ್ನು ಕೆದರಿಸುತ್ತದೆ, ಚೊಗರು ಪಿತ್ತಕಫಗಳನ್ನು ಶಮನಮಾಡುತ್ತದೆ, ವಾತವನ್ನು ಕೆದರಿಸುತ್ತದೆ, ಸಿಹಿಯು ವಾತಪಿತ್ತಗಳನ್ನು ಶಮನಮಾಡುತ್ತದೆ, ಕಫವನ್ನು ಕೆದರಿಸುತ್ತದೆ. ಹುಳಿರಸವು ವಾತವನ್ನು ಶಮನಮಾಡುತ್ತದೆ, ಪಿತ್ತಕಫಗಳನ್ನು ಕೆದರಿಸುತ್ತದೆ, ಉಪ್ಪು ವಾತವನ್ನು ಶಮನಮಾಡುತ್ತದೆ, ಪಿತ್ತಕಫಗಳನ್ನು ಕೆದರಿಸುತ್ತದೆ. ಇದರಿಂದ ಕಾರದ ಶಮನಗುಣವು ಕಫಕ್ಕೆ ಮಾತ್ರ ಮತ್ತು ಹುಳಿ ಉಪ್ಪುಗಳ ಶಮನತ್ವವು ವಾತಕ್ಕೆ ಮಾತ್ರ, ಕಹಿ ಚೊಗರುಗಳೆರಡು ದೋಷಸಂಬಂಧದಲ್ಲಿ ಒಂದೇ ಗುಣವುಳ್ಳವು ಪಿತ್ತಕಫಹರ, ವಾತಕರ ಎಂತ ಕಂಡುಬರುತ್ತದೆ

ರಸಗಳಿಗೂ ದೋಷಗಳಿಗೂ ಇರುವ ಪರಸ್ಪರ ಮಿತ್ರತ್ವ-ಶತ್ರುತ್ವಗಳನ್ನು ಚರಕನು ವರ್ಣಿಸಿರುವದು ಹೇಗೆಂದರೆ —

ಕಟುತಿಕ್ತಕಷಾಯಾ ವಾತಂ ಜನಯನ್ತಿ । ಮಧುರಾಮ್ಲಲವಣಾಸ್ತ್ವೇನಂ ಶಮಯನ್ತಿ ।

ಕಟುಕಾಮ್ಲಲವಣಾಃ ಪಿತ್ತಂ ಜನಯನ್ತಿ । ಮಧುರತಿಕ್ತಕಷಾಯಾಃ ಪುನರೇನಂ ಶಮಯನ್ತಿ ।।

ಮಧುರಾಮ್ಲಲವಣಾಃ ಶ್ಲೇಷ್ಮಾಣಂ ಜನಯನ್ತಿ । ಕಟುಕಿತ್ತಕಷಾಯಾಸ್ತ್ವೇನಂ ಶಮಯನ್ತಿ ।।

ಅಂದರೆ: ಕಾರ-ಕಹಿ-ಜೊಗರುಗಳು ವಾತವನ್ನುಂಟುಮಾಡುತ್ತವೆ; ಸಿಹಿ-ಹುಳಿ-ಉಪ್ಪುಗಳು ವಾತವನ್ನು ಶಮನಮಾಡುತ್ತವೆ.

ಕಾರ-ಹುಳಿ-ಉಪ್ಪುಗಳು ಪಿತ್ತವನ್ನುಂಟುಮಾಡುತ್ತವೆ; ಸಿಹಿ-ಕಹಿ-ಜೊಗರುಗಳು ಪಿತ್ತವನ್ನು ಶಮನಮಾಡುತ್ತವೆ.

ಸಿಹಿ-ಉಪ್ಪು-ಹುಳಿಗಳು ಕಫವನ್ನು ಹುಟ್ಟಿಸುತ್ತವೆ; ಕಹಿ-ಕಾರ-ಜೊಗರುಗಳು ಕಫವನ್ನು ಶಮನಮಾಡುತ್ತವೆ.

ಇದರಿಂದ ವಾತವೃದ್ಧಿಕರವಾದ ಮೂರು ರಸಗಳು ಕಫವನ್ನು ಶಮನಮಾಡತಕ್ಕವೆಂತಲೂ, ವಾತವನ್ನು ಶಮನಮಾಡತಕ್ಕ ಮೂರು ರಸಗಳು ಕಫವನ್ನು ವೃದ್ಧಿಮಾಡತಕ್ಕಂಥವೆಂತಲೂ ಕಂಡುಬರುತ್ತದೆ. ಮಧುರಾಮ್ಲಲವಣಗಳಲ್ಲಿ ಸ್ನಿಗ್ಧತ್ವವೂ ಗುರುತ್ವವೂ ಇರುವದರಿಂದಲೂ, ಅಮ್ಲ-ಲವಣಗಳಲ್ಲಿ ಆಗ್ನೇಯಗುಣ (ಉಷ್ಣತೆ) ಇರುವದರಿಂದಲೂ ಅವು ವಾತಹರ ಎಂತಲೂ, ಮಧುರದಲ್ಲಿ ಸ್ನಿಗ್ಧತ್ವ-ಗುರುತ್ವವಲ್ಲದೆ ವಿಶೇಷವಾಗಿ ಸೌಮ್ಯಗುಣ ಇರುವದರಿಂದ ಅದು ವಿಶೇಷವಾಗಿ ಕಫವೃದ್ಧಿಕರ ಎಂತಲೂ, ಅಮ್ಲ-ಲವಣಗಳಲ್ಲಿರುವ ಅದೇ ಆಗ್ನೇಯ ಗುಣದ ದೆಸೆಯಿಂದ ಅವು ಪಿತ್ತವೃದ್ಧಿಕರ ಎಂತಲೂ ಹೇಳಲ್ಪಟ್ಟದ್ದಾಗಿ ತಿಳಿಯಬೇಕು. ಹಾಗೆಯೇ ಕಾರದಲ್ಲಿ ರೂಕ್ಷತೆ ಮತ್ತು ಲಘುತ್ವವಿರುವದರಿಂದ ಅದು ವಾತವೃದ್ಧಿಕರ ಎಂತಲೂ, ಆಗ್ನೇಯ ಗುಣವಿರುವದರಿಂದ ಅದು ಪಿತ್ತವೃದ್ಧಿಕರ ಎಂತಲೂ, ಆ ಮೂರು ಗುಣಗಳೂ ಕಫಕ್ಕೆ ವಿರುದ್ಧವಾದ್ದರಿಂದ ಕಾರವು ಕಫಹರ ಎಂತಲೂ ಬೋಧಿಸಿದ್ದಾಗಿರುತ್ತದೆ. ಹಾಗೆಯೇ ತಿಕ್ತ-ಕಷಾಯ ರುಚಿಗಳಲ್ಲಿ ರೂಕ್ಷತ್ವವೂ ಲಘುತ್ವವೂ ಇರುವದರಿಂದ, ಅವು ಕಫಹರ ಮತ್ತು ವಾತವೃದ್ಧಿಕರ ಎಂತಲೂ, ಸೌಮ್ಯಗುಣವಿರುವದರಿಂದ ಅವು ಪಿತ್ತಹರ ಎಂತಲೂ ವರ್ಣಿಸಲ್ಪಟ್ಟಿವೆ.

ಕಾರರುಚಿಯಲ್ಲಿಯ ವಿಶೇಷ ಗುಣ

23. ಕಾರದಲ್ಲಿರುವ ರೂಕ್ಷತೆ ಮತ್ತು ಲಘುತ್ವ ವಾತಕ್ಕೆ ವಿರುದ್ಧವಾದಾಗ್ಯೂ, ಅದರ ಆಗ್ನೇಯ ಗುಣವು ವಾತಕ್ಕೆ ಶಮನಕರವಾದದ್ದು. ಆದ್ದರಿಂದ ಕಾರವು ವಾತದ ಗತಿಯನ್ನು ಬಲಪಡಿಸಿ, ಅದು ತನ್ನ ಮಾರ್ಗದಲ್ಲಿ ಕಫಾದಿಗಳ ತಡೆ ಇದ್ದಲ್ಲಿ ಆ ತಡೆಯನ್ನು ಕಡಿದುಕೊಂಡು ಕ್ರಮವಾಗಿ ಸಂಚರಿಸುವ ಹಾಗೆ ಮಾಡುವ ಶಕ್ತಿಯುಳ್ಳದ್ದಾಗಿರುತ್ತದೆ ಈ ವಿಚಾರದಿಂದಲೂ, ಮಧುರಾಮ್ಲಲವಣಗಳ ಬಲ ಅಧಿಕವಾಗಿ ಕಫದೋಷ ಸಂಭವಿಸದ ಹಾಗೂ, ವಾತಹರವಾದ ಕಷಾಯಗಳಲ್ಲಿ ಶುಂಠ್ಯಾದಿ ಕಾರ ಪದಾರ್ಥಗಳನ್ನು ಅಲ್ಪಶಃ ಕೂಡಿಸಬೇಕಾಗುತ್ತದೆ ಪಿತ್ತಪ್ರಕೋಪಗೊಳ್ಳುವ ಭಯವಿದ್ದಲ್ಲಿ ಶುಂಠಿಯ ಬದಲಾಗಿ ಹಿಪ್ಪಲಿಯನ್ನೂ, ಪಿತ್ತದ ಉರಿತಾಪಗಳು ಅಂಗದ ಯಾವ ಭಾಗದಲ್ಲಿಯಾದರೂ ಮೊದಲೇ ಕಾಣುತ್ತಿವೆಯಾದರೆ ಜೀರಿಗೆಯನ್ನೂ, ಸಂದರ್ಭಾನುಸಾರವಾಗಿ ಉಪಯೋಗಿಸುವದು ಪ್ರಶಸ್ತ. ಕೆಲವು ಅವಸ್ಥೆಗಳಲ್ಲಿ ವಾತಹರ ಗುಣವುಳ್ಳ ಕಾಳುಮೆಣಸು ಈ ಉದ್ದೇಶವನ್ನು ಪೂರೈಸುತ್ತದೆ. ಕಷಾಯ ದ್ರವ್ಯಗಳೊಳಗೆ ದೇವದಾರು, ಅಗಿಲುಗಂಧ ಇತ್ಯಾದಿ ಕಟುಪಾಕಿ ದ್ರವ್ಯಗಳು ಸೇರಿರುತ್ತವಾದರೆ, ಶುಂಠ್ಯಾದಿಗಳನ್ನು ಕೂಡಿಸುವ ಆವಶ್ಯಕತೆ ಇಲ್ಲವಾಗಿರಬಹುದು. ಹೀಗಿನ ವಿಚಾರದಿಂದಲೇ ಸಾಮಾನ್ಯವಾಗಿ ಜ್ವರಕ್ಕೆ ಕೊಡಲ್ಪಡುವ ಷಡಂಗಕಷಾಯದಲ್ಲಿ ಶುಂಠಿ ಸೇರಿರುವದು ಎಂತ ತಿಳಿಯಬೇಕಾಗುತ್ತದೆ. ಈ ಕಷಾಯವು ಪಿತ್ತಜ್ವರಕ್ಕೆ ವಿಶೇಷವಾಗಿ ಉಪಯುಕ್ತವಾದ ತಿಕ್ತ (ಕಹಿ) ಕಷಾಯಗಳ ದೃಷ್ಟಾಂತವಾಗಿ ಚರಕಸಂಹಿತೆಯಲ್ಲಿಯೂ,

ಸುಶ್ರುತದಲ್ಲಿಯೂ ಹೇಳಲ್ಪಟ್ಟದೆ. ಶುಂಠಿಯು ಒಂದು ಕಹಿಪದಾರ್ಥವಲ್ಲ. ಅದರ ತೀಕ್ಷ್ಣತಾದಿ ಗುಣಗಳು ಪಿತ್ತಕ್ಕೆ ವಿರುದ್ಧ. ಹೀಗಿದ್ದರೂ, ಇತರ ಐದು ಕಹಿ-ಚೊಗರು ರುಚಿಯ ದ್ರವ್ಯಗಳು ಶೀತವೀರ್ಯವುಳ್ಳವಾಗಿ, ಅವುಗಳ ಬಲವು ದೋಷದ ಬಲಕ್ಕೆ ಅಧಿಕವಾದಲ್ಲಿ ಕಫ ಉಂಟಾದೀತು ಮತ್ತು ಅವುಗಳಲ್ಲಿ ಕಹಿರುಚಿ ವಿಶೇಷವಾಗಿದ್ದು, ಕಹಿಯ ವಾಯ್ವಾಕಾಶ ಗುಣಗಳಿಂದ, ಅವುಗಳ ಬಲ ಅಧಿಕವಾದ್ದಲ್ಲಿ, ವಾತ ಪ್ರಕೋಪಗೊಳ್ಳುವದು ಎಂಬ ಅನುಮಾನಗಳಿಂದ, ಆ ದೋಷಗಳು ಸಂಭವಿಸದಂತೆ, ಕಫ-ವಾತಹರವಾದ ಮತ್ತು ವಿಶೇಷವಾಗಿ ದೀಪನ ಪಾಚನ ಗುಣವುಳ್ಳ ಶುಂಠಿಯನ್ನು ಸೇರಿಸಿದ್ದಾರಾಗಿ ಊಹಿಸಬೇಕು. ಕಫವಾಗಲಿ ಆಮದೋಷವಾಗಲಿ ವಿಶೇಷವಿಲ್ಲದವರಿಗೆ ಈ ಕಷಾಯವನ್ನು ಕೊಡುವದಾದರೆ ಶುಂಠಿಯ ಪ್ರಮಾಣವನ್ನು ಇತರ ದ್ರವ್ಯಗಳ ಪ್ರಮಾಣಕ್ಕೆ ಕಡಿಮೆಯಾಗಿ ಉಪಯೋಗಿಸತಕ್ಕದ್ದು. ಆಮಪಾಚನಗುಣವುಳ್ಳ ಶುಂಠಿಯು ಈ ಕಷಾಯದ ಯೋಗದಲ್ಲಿ ಸೇರಿರುವದರಿಂದಲೇ ಈ ಕಷಾಯವನ್ನು ಸರ್ವ ಜ್ವರಗಳಲ್ಲಿಯೂ ಉಪಯೋಗಿಸಬಹುದೆಂತಲೂ, ನವಜ್ವರದಲ್ಲಿ ಸಹ ಬಾಯಾರಿಕೆಗೆ ಈ ಔಷಧಗಳಿಂದ ತಯಾರಿಸಲ್ಪಟ್ಟ ನೀರನ್ನು ಕೊಡಬಹುದೆಂತಲೂ ಹೇಳುವದಾಗಿರುತ್ತದೆ.

ರೋಗಿಗಳಿಗೆ ಔಷಧ ಕೊಡುವಲ್ಲಿ ವೈದ್ಯನು ಗಮನಿಸಬೇಕಾದ ವಿಷಯಗಳ ಸಂಕ್ಷಿಪ್ತ ಸಂಗ್ರಹ

24. ಈ ಔಷಧಗಳ ಯೋಗದ ವಿಚಾರವನ್ನು ಮುಂದರಿಸುವದಕ್ಕೆ ಮೊದಲು, ರೋಗಿಗೆ ಔಷಧವನ್ನು ಕೊಡುವ ವಿಚಾರದಲ್ಲಿ ವೈದ್ಯನು ಗಮನಿಸಬೇಕಾದ ಅನೇಕ ವಿಷಯಗಳು, ಅತಿ ವಿಸ್ತಾರವಾಗಲಿ ಅತಿ ಸಂಕ್ಷೇಪವಾಗಲಿ ಇಲ್ಲದ ರೀತಿಯಲ್ಲಿ, ಸಂಗ್ರಹಿಸಲ್ಪಟ್ಟಿರುವ ಅಷ್ಟಾಂಗಸಂಗ್ರಹದ ಸೂತ್ರಸ್ಥಾನದ 'ಭೇಷಜಾವಚರಣೀಯ' ಎಂಬ ಇಪ್ಪತ್ತಮೂರನೇ ಅಧ್ಯಾಯದ ಹೆಚ್ಚಿನ ಅಂಶವನ್ನು ಇಲ್ಲಿ ಭಾಷಾಂತರಿಸಿ ಕೊಡುವದು ವಾಚಕರಿಗೆ ಪ್ರಯೋಜನಕರ ಎಂತ ಆಲೋಚಿಸಿ, ಆ ಭಾಷಾಂತರವನ್ನು ಈ ಕೆಳಗೆ ಬರೆಯೋಣಾಗುತ್ತದೆ —

"ರೋಗಿಯ ಪರೀಕ್ಷೆಯಲ್ಲಿ ಅವನು ಯಾವ ದೇಶದಲ್ಲಿ ಹುಟ್ಟಿದವನು? ರೋಗವು ಉಂಟಾದದ್ದು ಎಲ್ಲಿ? ಅಲ್ಲಿ ಜನರಲ್ಲಿ ಆಹಾರವಿಹಾರ ಕ್ರಮಗಳು ಹೇಗೆ? ರೋಗಿಯ ಬಲ ಎಷ್ಟರ ಮಟ್ಟಿಗೆ ಅದೆ? ಸಾತ್ಮ್ಯ ಹೇಗೆ? ಭಕ್ತಿ ಹೇಗೆ? ವ್ಯಾಧಿಗಳು ಇಂಥವು, ಹಿತ ಇಂಥಾದ್ದು, ಅಹಿತ ಇಂಥಾದ್ದು ಎಂತ ತಿಳಿದುಕೊಂಡ ಮೇಲೆ, ದೋಷವು ಯಾವ ನಿದಾನದಿಂದ ಇವನಲ್ಲಿ ಕೋಪಗೊಂಡದ್ದು? ಎಂಬದನ್ನು ಗೊತ್ತುಮಾಡಬೇಕು. ಒಂದೇ ದೋಷದ ಕೋಪಕ್ಕಾದರೂ ಬಹಳ ಹೇತುಗಳು ಇರಬಹುದು. ಆದ್ದರಿಂದ ಆಯಾ ದೋಷದ ಲಕ್ಷಣ ವಿಶೇಷಗಳಿಂದಲೂ, ಕರ್ಮಗಳಿಂದಲೂ, ದೋಷವನ್ನು ತಿಳಿದು, ಅನಂತರ ವಿಚಾರಮಾಡಿ ತಿಳಿಯಬೇಕಾದದ್ದು ಹೇಗೆಂದರೆ — ವಾಯು ಕೋಪಗೊಂಡದ್ದಾದರೆ ಅದು ಯಾವ ಆಹಾರದಿಂದ ಯಾವ ವಿಹಾರದಿಂದ (ಆಟ-ತಿರುಗಾಟ ಮುಂತಾದ ವಿನೋದದಿಂದ)? ಹಾಗೆಯೇ, ರೂಕ್ಷಣದಿಂದಲೋ, ಲಘುತ್ವದಿಂದಲೋ, ಶೀತದಿಂದಲೋ, ಸಾಹಸದಿಂದಲೋ, ಮಲಮೂತ್ರಾದಿವೇಗಗಳ ತಡೆಯಿಂದಲೋ, ಭಯದಿಂದಲೋ, ಶೋಕದಿಂದಲೋ, ಎಂತ ವಿಚಾರಿಸಿ ಹೇತುವನ್ನು ತಿಳಿದ ಮೇಲೆ, ಆ ಹೇತುವಿಗೆ ಪ್ರತಿಪಕ್ಷವಾದ ಔಷಧವನ್ನು ಪ್ರಯೋಗಿಸುವದರಿಂದ ಸಿದ್ಧಿಯು ಬೇಗನೆ ಪ್ರಾಪ್ತವಾಗುತ್ತದೆ. ಆಗ್ಗೆ ಸೀ-ಹುಳಿ-ಉಪ್ಪುಗಳು ಮತ್ತು ಕಾರ-ಕಹಿ-ಚೊಗರುಗಳು

ಒಂದಕ್ಕೊಂದು ಪ್ರತಿಪಕ್ಷ ಎಂತ ತಿಳಿದಿರಬೇಕು. ತದನಂತರ ರೋಗಿಯು (ದೋಷದ) ನಿದಾನವನ್ನು ಸೇವಿಸಿದ್ದು ಮೃದುವಾಗಿಯೋ, ಸಾಧಾರಣವಾಗಿಯೋ, ಅತಿಯಾಗಿಯೋ ಎಂಬದನ್ನು ತಿಳಿಯಬೇಕು; ಯಾಕೆಂದರೆ ವ್ಯಾಧಿಯ ಹೇತು ಒಂದೇಯಾದರೂ ಅದರ ಮೃದ್ವಾದಿ ಭೇದಗಳಿಂದ ಒಂದೇ ದೋಷದಲ್ಲಿ ಅಥವಾ ದೋಷಸಮುದಾಯದಲ್ಲಿ ಅಂಶಾಂಶರೀತಿಯಿಂದ ಉಂಟಾಗುವ ಬಲ ಭೇದ ವಿಶೇಷದಿಂದ ರೋಗದ ಬಲಾಬಲವಿಶೇಷ ಉಂಟಾಗುತ್ತದೆ. ಆಗ್ಗೆ, ಅನೇಕ ದೋಷಗಳುಳ್ಳ ವ್ಯಾಧಿಗಳಲ್ಲಿಯೂ, ಅನೇಕ ರಸಗಳುಳ್ಳ ಔಷಧಗಳಲ್ಲಿಯೂ, ಒಂದೊಂದಾಗಿ ದೋಷದ ಅಥವಾ ರಸದ ಪ್ರಭಾವವನ್ನು ನೋಡಿಕೊಂಡು, (ಅದರ ಫಲಿತಾಂಶವಾಗಿ) ವ್ಯಾಧಿಯ ಮತ್ತು ಔಷಧದ ಪ್ರಭಾವವನ್ನು ನಿಶ್ಚಯಿಸಬೇಕು. ಹೀಗೆ ಸರ್ವತ್ರ ಅಲ್ಲ, ಯಾಕಂದರೆ: ವಿಷಮವಾಗಿ (ಹೆಚ್ಚುಕಡಿಮೆಯಾಗಿ) ಅಥವಾ ವಿಕೃತಿಯಿಂದ (ಸ್ವಾಭಾವಿಕವಲ್ಲದ ರೀತಿಯಲ್ಲಿ) ಕೂಡಿದಂಥ (ವಿಷಮ-ವಿಕೃತಿ-ಸಮವೇತಾನಾಂ), ಬಹುವಿಧವಾದ ಪರಸ್ಪರ ಪರತಂತ್ರವಾಗಿ ಹಿಡಿಯಲ್ಪಟ್ಟ (ಸಂಯೋಗವಾದ), (ಅಥವಾ) ಬೇರೆ (ದೇಶ, ಕಾಲ, ಸಂಸ್ಕಾರಾದಿ) ವಿಕಲ್ಪಗಳಿಂದ ಬದಲಾದ ಸ್ಥಿತಿಯಲ್ಲಿ (ಆ ದ್ರವ್ಯದ, ಔಷಧದ, ಅಥವಾ ರೋಗದ, ಅಥವಾ ದೋಷಗಳ) ಅವಯವಗಳ (ಒಂದೊಂದು ರಸದ ಒಂದೊಂದು ದ್ರವ್ಯದ ಅಥವಾ ಒಂದೊಂದು ದೋಷದ) ಪ್ರಭಾವದ ಮೇಲೆ ಊಹಿಸಿ ಸಮುದಾಯದ ಪ್ರಭಾವದ ತತ್ತ್ವವನ್ನು ನಿಶ್ಚಯಿಸುವದು ಶಕ್ಯವಲ್ಲ. ಅಂಥಾ ಸಮುದಾಯವಿರುವಲ್ಲಿ ಸಮುದಾಯದ ಶಕ್ತಿಯನ್ನೇ (ಶಾಸ್ತ್ರದಿಂದ ಅಥವಾ ಅನುಭವದಿಂದ) ತಿಳಿದು ವ್ಯಾಧಿಯ ಮತ್ತು ಔಷಧದ ಪ್ರಭಾವದ ತತ್ತ್ವವನ್ನು (ನಿಜಸ್ಥಿತಿಯನ್ನು) ಗೊತ್ತುಮಾಡಬೇಕು. ಹಾಗೆಯೇ (ದೋಷ-ಧಾತು-ಮಲ-ಇಂದ್ರಿಯಾದಿಗಳೊಳಗೆ) ಯಾವದರ ಸ್ಥಾನವನ್ನು ವಶಮಾಡಿಕೊಂಡು ಈ ವ್ಯಾಧಿಯು ನಿಂತದೆ ಎಂಬದನ್ನು ನೋಡಬೇಕು, ಯಾಕೆಂದರೆ, ಪ್ರಸಾರಹೊಂದಿದ ದೋಷವು ತನ್ನ ಸ್ಥಾನವನ್ನೇ ಅಥವಾ ಶಿರಸ್ಸು ಮುಂತಾದವುಗಳನ್ನು (ಅನ್ಯಸ್ಥಾನಗಳನ್ನು) ಉಪದ್ರವಕಾರಿಯಾಗಿ ಆದರಿಸಿ ನಿಂತು ನಾಶಮಾಡುವದಕ್ಕೆ ಕಷ್ಟವಾಗುತ್ತದೆ ಆದ್ದರಿಂದ ಸ್ಥಾನವಿಶೇಷವನ್ನು ತಿಳಿದು (ಅದಕ್ಕೆ ಯುಕ್ತವಾದ) ಔಷಧವಿಶೇಷವನ್ನು ಹುಡುಕಬೇಕು.

ಪರಾ ಆಯುರ್ವೇದದ ಗ್ರಂಥಗಳಲ್ಲಿ ಪ್ರತ್ಯೇಕವಾಗಿ ವರ್ಣಿಸಲ್ಪಡದ ನರಮಂಡಲ (nervous system)ದ ಸ್ಥಾನರೂಪ ಮತ್ತು ಕರ್ಮಗಳನ್ನು ಪಾಶ್ಚಾತ್ಯ ಶಾರೀರ ರಚನಾಶಾಸ್ತ್ರಗ್ರಂಥಗಳಿಂದ ಸಂಗ್ರಹಿಸಿ, ಆಯುರ್ವೇದೀಯ ಚಿಕಿತ್ಸೆಗೂ ಪ್ರಯೋಜನಕರವಾಗಬಹುದೆಂಬಷ್ಟರ ಮಟ್ಟಿಗೆ ಉಪೋದ್ಘಾತದ ಮೂರನೇ ಪರಿಶಿಷ್ಟವಾಗಿ, ವರ್ಣಿಸಿರುತ್ತದ

ಅನಂತರ ಹೀಗೆ ಆಲೋಚಿಸಬೇಕು ಯಾವ ಔಷಧಕ್ಕೆ ಮತ್ತು ಎಷ್ಟು ಪ್ರಮಾಣಕ್ಕೆ ಈ ರೋಗವೂ ಈ ರೋಗಿಯೂ ಯೋಗ್ಯ ಎಂತ, ಯಾಕಂದರೆ, ದೋಷಕ್ಕೆ ಅನುಗುಣವಾದ ಔಷಧದ ವೀರ್ಯವನ್ನೂ ಪ್ರಮಾಣವನ್ನೂ ಹೆಚ್ಚುಕಡಿಮೆ ಮಾಡುವದು ವ್ಯಾಧಿಯ ಮತ್ತು ರೋಗಿಯ ಬಲದ ಮೇಲೆ ಹೊಂದಿರುತ್ತದೆ (ಹೇಗೆಂದರೆ) ಒಡನೆಯೇ ಅತಿಬಲವಾದ ಒಳ್ಳೇ ಶೋಧನಕರವಾದ ಔಷಧಗಳನ್ನಾಗಲಿ, ಆಗ್ನೇಯ-ವಾಯವ್ಯ (ಉಷ್ಣ) ಗುಣವುಳ್ಳ ಔಷಧಗಳನ್ನಾಗಲಿ, ಅತಿ ಶೀತವಾದಂಥವುಗಳನ್ನಾಗಲಿ, ಅತಿಯಾದ ಪ್ರಮಾಣದಲ್ಲಿ ಕೊಟ್ಟರೆ, ಹಾಗೆಯೇ ಅಗ್ನಿ-ಕರ್ಮ (ಬೆಂಕಿಯಿಂದ ಸುಟ್ಟಿಡುವದು), ಕ್ಷಾರಕರ್ಮ (ಔಷಧದಿಂದ ಸುಡುವದು) ಶಸ್ತ್ರಕರ್ಮ, ಇವುಗಳನ್ನು ನಡಿಸಿದರೆ, ಅಲ್ಪ ಸತ್ವವುಳ್ಳ ಅಥವಾ ಅಲ್ಪಬಲವುಳ್ಳ ರೋಗಿಯನ್ನು ಅವು ಕೆಡವಿಹಾಕುವವು. ರೋಗದ ಬಲಕ್ಕೆ ಅಧಿಕವಾದ ಸಂಶಮನ ಔಷಧ

ಗಳು ಆ ವ್ಯಾಧಿಯನ್ನುಪಶಮನಮಾಡಿ, ವ್ಯಾಧಿಯಿಂದ ಕಂಗೆಟ್ಟ ರೋಗಿಯ ಶರೀರದಲ್ಲಿ ಬೇರೆ ವ್ಯಾಧಿಯನ್ನು ಬೇಗನೇ ತಂದೊಡ್ಡುವವು. ಶರೀರಬಲಕ್ಕೆ ಅಧಿಕವಾದವು (ಸಂಶಮನೌಷಧಗಳು), ಗ್ಲಾನಿ, ಮೂರ್ಛೆ, ಮದ, ಕಣ್ಣುಕತ್ತಲೆ ಮತ್ತು ಬಲಕ್ಷಯ, ಇವುಗಳನ್ನೂ, ಅಗ್ನಿಬಲಕ್ಕೆ ಅಧಿಕವಾದವು ಗ್ಲಾನಿಯನ್ನೂ ಅಗ್ನಿಮಾಂದ್ಯವನ್ನೂ ಉಂಟುಮಾಡುತ್ತವೆ. ಅದಲ್ಲದೆ ಅತಿಸ್ಥೂಲನಾದ, ಅತಿಕೃಶನಾದ, ದುರ್ಬಲನಾದ, ಮಾಂಸ-ರಕ್ತ-ಎಲುಬು-ಅಂಗ-ಅವಯವಗಳ ಜೋಡಣೆ ಸರಿಯಿಲ್ಲದ, ಅಲ್ಪಾಗ್ನಿಯುಳ್ಳ, ಅಲ್ಪ ಆಹಾರ ತೆಗೆದುಕೊಳ್ಳುವ, ಸಾತ್ಮ್ಯವಲ್ಲದ ಆಹಾರವನ್ನು ಭುಂಜಿಸುವ, ಕ್ಷೀಣನಾದ, ಅಥವಾ ಸಾರವಿಲ್ಲದ ರೋಗಿಯು ರೋಗದ ಬಲವನ್ನೇ ಸಹಿಸುವದಕ್ಕೆ ಸಾಮರ್ಥ್ಯಹೀನನಾಗುತ್ತಾನೆ, ಅಂಥವನಿಗೆ ಪುನಃ ಈ ತರದ ವೇಗವುಳ್ಳ ಔಷಧವನ್ನು ಸೇವಿಸುವದಕ್ಕೆ ಸಾಮರ್ಥ್ಯವಿರುವದು ಹೇಗೆ? ಆದ್ದರಿಂದ ಅಂಥವನನ್ನು, ವಿಶೇಷವಾಗಿ ಸ್ತ್ರೀಯರನ್ನು, ಸಂಕಟಕರವಲ್ಲದ, ಮೃದುವಾದ, ಸುಖವಾದ, ಕ್ರಮೇಣ (ಮುಂದೆ ಮುಂದೆ) ಗುರುವಾದ (ಅಂದರೆ ತೀಕ್ಷ್ಣವಾದ), ದೋಷಗಳನ್ನು ಕೆದರಿಸುವ ಗುಣವಿಲ್ಲದ ಔಷಧಗಳಿಂದ ಉಪಚರಿಸತಕ್ಕದ್ದು. ಸ್ತ್ರೀಯರು ಚಂಚಲವುಳ್ಳ, ಮೃದುವಾದ ಮತ್ತು ಗಾಬರಿಪಡತಕ್ಕ ಹೃದಯವುಳ್ಳವರು, ಹೆಚ್ಚಾಗಿ ಕೋಮಲಶರೀರವುಳ್ಳವರು ಮತ್ತು ಪರರನ್ನಾಧರಿಸಿಕೊಂಡಿರುವಂಥವರು. ಸ್ತ್ರೀಯರಿಗಿಂತಲೂ ಹೆಚ್ಚಾಗಿ ಶಿಶುಗಳು ಈ ಗುಣಗಳುಳ್ಳವು. ಹಾಗೆಯೇ ವ್ಯಾಧಿಯೂ ರೋಗಿಯೂ ಬಲವಂತವಾಗಿರುವಲ್ಲಿ, ಅಲ್ಪಬಲವುಳ್ಳ ಅಥವಾ ಅಲ್ಪಪ್ರಮಾಣದ ಔಷಧವು ಏನೂ (ಉಪಶಮನ) ಕೆಲಸವನ್ನು ಮಾಡಲಾರದು ಮಾತ್ರವಲ್ಲ, ದೋಷವನ್ನು ಮತ್ತಷ್ಟು ನೋಯಿಸಿ, ವ್ಯಾಧಿಯನ್ನು ಕೆದರಿಸೀತು.

“ಯೋಗ್ಯವಾದ ಔಷಧವನ್ನಾದರೂ ಹೀಗೆ ಪರೀಕ್ಷಿಸಬೇಕು ಇದು ಇಂಥ ರಸ-ವೀರ್ಯ-ವಿಪಾಕವುಳ್ಳದ್ದು, ಇಂಥ ಗುಣವುಳ್ಳದ್ದು, ಇಂಥ (ಪಂಚಭೂತವಿಚಾರದಿಂದ) ದ್ರವ್ಯ, ಇದರ ಕರ್ಮ ಹೀಗೆ, ಇದರ ಪ್ರಭಾವ ಇಂಥಾದ್ದು, ಇದು ಇಂಥಾ ದೇಶದಲ್ಲಿ ಹುಟ್ಟಿದ್ದು, ಇಂಥಾ ಋತುವಿನಲ್ಲಿ, ಇಂಥ ಪ್ರಕಾರ, ಇದನ್ನು ಸಂಗ್ರಹಿಸಿದ್ದು, ಹೀಗೆ ಇಡಲ್ಪಟ್ಟದ್ದು, ಇದರ ವಿಹಿತತ್ವ ಹೀಗೆ, ಇದರ ನಿಷಿದ್ಧತ್ವ ಹೀಗೆ, ಈ ಪ್ರಕಾರ ಇದಕ್ಕೆ (ಭಾವನಾದಿ) ಸಂಸ್ಕಾರ ಮಾಡಿದೆ, ಇದರ ಸಂಯೋಗ ಹೀಗೆ, ಇದನ್ನು ಇಂಥಾ ಪ್ರಮಾಣದಿಂದ ಇಂಥಾ ವಿಧದ ಪುರುಷನಿಗೆ ಇಂಥಾ ವಿಧದ ಕಾಲದಲ್ಲಿ ಕೊಟ್ಟರೆ ಇಷ್ಟರ ಮಟ್ಟಿನ ದೋಷವನ್ನು ತೆಗೆದುಬಿಡುತ್ತದೆ ಅಥವಾ ಶಮನಮಾಡುತ್ತದೆ, ಮತ್ತು ಬೇರೊಂದು ಇದೇ ವಿಧದ ಔಷಧವಿತ್ತು, ಅದನ್ನು ತಕ್ಕ ಪ್ರಮಾಣದಿಂದ ಅಥವಾ ಹೆಚ್ಚಾಗಿ ಕೊಟ್ಟಲ್ಲಿ ಅದು ಇಂಥ ಕೆಲಸವನ್ನು ಮಾಡಿಯದೆ, ಎಂತ ಯಾಕಂದರೆ ದೋಷ-ಔಷಧ-ದೂಷ್ಯ (ದೋಷಕ್ಕೊಳಪಟ್ಟ ರಸರಕ್ತಾದಿಗಳು,)-ದೇಶ-ಕಾಲ-(ದೋಷದ, ವ್ಯಾಧಿಯ, ಮತ್ತು ರೋಗಿಯ) ಬಲ, ಅಗ್ನಿಬಲ, ಆಹಾರ, ರಸ, ಸಾತ್ಮ್ಯ, ಸತ್ವ, ಪ್ರಕೃತಿ ಮತ್ತು ಪ್ರಾಯ, ಇವುಗಳ ಅವಸ್ಥಾಭೇದಗಳು ಸೂಕ್ಷ್ಮವಾಗಿರುತ್ತವೆ. ಅವುಗಳನ್ನೆಲ್ಲ ಆಲೋಚಿಸದೆ ಚಿಕಿತ್ಸೆಮಾಡಿದರೆ ಅದರಿಂದ ರೋಗಿಯು ಸಾಯುವನು. ಅವುಗಳನ್ನೆಲ್ಲ ಆಲೋಚಿಸುವಾಗ್ಗೆ ಬಹಳ ಬುದ್ಧಿಶಾಲಿಯಾದ ಚಿಕಿತ್ಸಕನಲ್ಲಿ ಸಹ (ಸಂದೇಹ ಹುಟ್ಟಿ) ಗಲಿಬಿಲಿ ಉಂಟಾಗುವದು ಅಲ್ಪ ಬುದ್ಧಿಯವನ ಪಾಡೇನು? ಆದ್ದರಿಂದ ಚಿಕಿತ್ಸಕನು ಪದೇಪದೇ ಶಾಸ್ತ್ರಾರ್ಥವನ್ನು ಚಿಂತನೆಮಾಡುವದರಿಂದಲೂ, ಕರ್ಮದ ಅಭ್ಯಾಸದಿಂದಲೂ (ಚಿಕಿತ್ಸೆ ನಡಿಸುತ್ತಾ ಪಡಯುವ ಅನುಭವದಿಂದಲೂ) ತನ್ನ ಜ್ಞಾನವನ್ನು

ಸಂಸ್ಕರಿಸಬೇಕು (ಅಂದರೆ ತಿದ್ದಿ ಪರಿಷ್ಕಾರ ಮಾಡಿಕೊಳ್ಳಬೇಕು). ಶಾಸ್ತ್ರದಲ್ಲಿ ಸೂತ್ರಕ್ಕೆ ಅಪವಾದ ಎಂತ ತೋರಿಸಿ ಚಿಕಿತ್ಸೆ ಹೇಳದೆ ಬಿಟ್ಟ ವ್ಯಾಧಿಗಳು ಇರುತ್ತವೆ. ಅವುಗಳಿಗೆ ಬೇಕಾದ ಇತರ ಚಿಕಿತ್ಸೆಯನ್ನು ದೋಷಾದಿಗಳ ಗುರುತ್ವ-ಲಘುತ್ವ ವಿಚಾರದ ಮೇಲೆ ಸರಿಯಾಗಿ ನಿಶ್ಚಯಿಸುವದಕ್ಕೆ ಪ್ರಾಜ್ಞನೇ ಶಕ್ತನಾಗುವನು.

"ರೋಗಿಯ ಇಂಥಾ ಅವಸ್ಥೆಯಲ್ಲಿ ಈ ಔಷಧವನ್ನು ಕೊಡುವದಕ್ಕೆ ಈ ಕಾಲವು ಯುಕ್ತವೊ ಅಲ್ಲವೊ ಎಂಬದನ್ನು ಆಲೋಚಿಸತಕ್ಕದ್ದು; ಯಾಕೆಂದರೆ ಯುಕ್ತಕಾಲ ಬಾರದೆ ಅಥವಾ ಆ ಕಾಲ ದಾಟಿದ ಮೇಲೆ ಕೊಡಲ್ಪಟ್ಟ ಔಷಧವು ಪ್ರಯೋಜನಕರವಾಗುವದಿಲ್ಲ. ಔಷಧ ಕೊಡುವದಕ್ಕೆ ಅಭಕ್ತ-ಪ್ರಾಗ್ಭಕ್ತ-ಮಧ್ಯಭಕ್ತ-ಅಧೋಭಕ್ತ-ಸಭಕ್ತ-ಅನನ್ತರಭಕ್ತ-ಸಾಮುದ್ಗ-ಮುಹುರ್ಮುಹು-ಸಗ್ರಾಸ-ಗ್ರಾಸಾನ್ತರ ಮತ್ತು ರಾತ್ರಿ, ಹೀಗೆ ಹನ್ನೊಂದು ಕಾಲ. (1ನೇ ಭಾಗದ XXVIIIನೇ ಅಧ್ಯಾಯ ನೋಡಿ. ಅಭಕ್ತ ಎಂದರೂ ನಿರ್ಭಕ್ತ ಎಂದರೂ ಒಂದೇ. ಸುಶ್ರುತ ಹೇಳಿದ ಹತ್ತು ಕಾಲಗಳಲ್ಲದೆ ರಾತ್ರಿ ಎಂಬ ಹನ್ನೊಂದನೇದು ಉಂಟೆಂಬದು ವಾಗ್ಭಟನ ಮತ ಎಂತ ಆದೇ ಅಧ್ಯಾಯದ 11ನೇ ಸಂಖ್ಯೆಯಿಂದ ವಾಚಕರು ತಿಳಿದಿರಬೇಕು.) * * * * * * * * *

"ಒಂದನೇ ಕಾಲ (ಅಭಕ್ತ)ದಲ್ಲಿ ಬಾಯಾರಿದ, ತಣ್ಣೀರನ್ನು ಕುಡಿದ, ಅಜೀರ್ತಿಯುಳ್ಳ, ಹಸಿದ ಮತ್ತು ಬಹಳ ಆಯಾಸವುಳ್ಳ ರೋಗಿಯು ಔಷಧವನ್ನು ಸೇವಿಸಬಾರದು. ಹಾಗೆಯೇ ಇತರ ಕಾಲಗಳಲ್ಲಿ ಮನಸ್ಸಿಗೆ ಅಹಿತವಾದ, ಸಾತ್ಮ್ಯವಲ್ಲದ, ಅತಿ ತೀಕ್ಷ್ಣವಾದ, ಅತಿ ಉಷ್ಣವಾದ, ತೀವ್ರ ವಾಸನೆಯುಳ್ಳ, ಮತ್ತು ಪ್ರಮಾಣದಲ್ಲಿ ಬಹಳವಾದ, ಔಷಧವನ್ನು ವರ್ಜಿಸತಕ್ಕದ್ದು.

ಷರಾ 'ಅಭಕ್ತ'ವನ್ನು ಬಲವಂತನಾದವನು ಪ್ರಾತಃಕಾಲದಲ್ಲಿ ಆಮಾಶಯದಲ್ಲಿಯು ಮತ್ತು ಸ್ರೋತಸ್ಸಿನ (ಅನ್ನನಾಳದಲ್ಲಿಯ) ಕೆದರಿದ ಕಫವನ್ನು ತೆಗೆದುಬಿಟ್ಟ ಮೇಲೆ ಉಪಯೋಗಿಸಬೇಕೆಂತ ಮೂಲದಲ್ಲಿರುವಲ್ಲಿ, 'ಪ್ರಾತಃಕಾಲ' ಎಂಬದಕ್ಕೆ 'ಸೂರ್ಯೋದಯವಾಗಿ ಒಂದು ಜಾಮದಲ್ಲಿ' ಎಂತ ವ್ಯಾಖ್ಯೆ ಕಾಣುತ್ತದೆ. ಸೂರ್ಯೋದಯಸಮಯದಲ್ಲಿ ಮುಖ ತೊಳೆದು, ಕಂಠಶೋಧನ ಮಾಡಿಕೊಂಡ ಮೇಲೆ 'ಅಭಕ್ತ' ಔಷಧವನ್ನು ಸೇವಿಸುವದೇ ಹಿತಕರ ಎಂತ ಕಾಣುತ್ತದೆ. ಇದರ ಪ್ರಸ್ತಾಪ ಪುನಃ ಕೆಳಗೆ ಬರಲಿಕ್ಕಿದೆ

"ಹೀಗೆ ಮೊದಲಾಗಿ ರೋಗವನ್ನು, ಅದರನಂತರ ಔಷಧವನ್ನು ಪರೀಕ್ಷಿಸಿ, ಆ ಮೇಲೆ ವೈದ್ಯನು ಚಿಕಿತ್ಸಾಕರ್ಮವನ್ನು ಜ್ಞಾನಪೂರ್ವಕವಾಗಿ ನಡಿಸತಕ್ಕದ್ದು.

"ವಾಸಿಯಾದ ಮೇಲೆಯೂ ವ್ಯಾಧಿಯು ಅಲ್ಪಕಾರಣದಿಂದ ಪುನಃ ಬರುತ್ತದೆ ದೋಷಗಳಿಂದ ಮಾರ್ಗಮಾಡಲ್ಪಟ್ಟ ರೋಗಿಯ ದೇಹದಲ್ಲಿ ಉಳಿದ ದೋಷಾಂಶವು ಸೂಕ್ಷ್ಮವಾದ ಬೆಂಕಿಯ ಹಾಗೆ (ಸಂದರ್ಭಾನುಸಾರ ಪುನಃ ವೃದ್ಧಿಗೊಳ್ಳುತ್ತದೆ). ಆದ್ದರಿಂದ, ರೋಗ ವಾಸಿಯಾದ ಮೇಲೆಯೂ ಅವನಿಗೆ ಹಿಂದೆ ಕೊಟ್ಟು ಹಿತಕಾರಿಯಾಗಿ ಸಿದ್ಧವಾದ ಪ್ರಯೋಗಗಳೊಳಗೆ ತಕ್ಕದ್ದಾದ ಒಂದು ಪ್ರಯೋಗವನ್ನು ದೃಢಮಾಡಿಕೊಂಡು ಕೆಲವು ಕಾಲ ಕೊಡಬೇಕು. . . .

"ಒಂದು ಚಿಕಿತ್ಸಾಕರ್ಮವನ್ನು (ಪ್ರಯೋಗವನ್ನು) ಏಳು ದಿನ ನಡಿಸಿದ್ದಲ್ಲಿಯೂ ಗುಣ ಸಿಕ್ಕದ್ದಲ್ಲಿ, ಬೇರೆ ಕರ್ಮವನ್ನು ಪ್ರಯೋಗಿಸಬೇಕು; ಆದರೆ ಮೊದಲಿನ ಕರ್ಮದ ವೇಗ ಶಾಂತ

ವಾಗಿರಬೇಕು. ಬೇರೆ ಬೇರೆ ಕರ್ಮಗಳನ್ನು ಬೆರೆಸುವದು (ಕ್ರಿಯಾಸಂಕರ) ಹಿತವಲ್ಲ. ಅಲ್ಪವಾದರೂ ಗುಣ ಸಿಕ್ಕಿದರೆ ಅದನ್ನೇ ವಿಶೇಷ ಗುಣಪ್ರಾಪ್ತಿಯಾಗುವದಕ್ಕಾಗಿ ಪ್ರಯೋಗಿಸಬೇಕು.

ಷರಾ—ಯಾವ ಲಕ್ಷಣದಿಂದಾದರೂ ಕೊಟ್ಟ ಔಷಧವು ಅವಗುಣ ಮಾಡುತ್ತದೆಂತ ಕಂಡಲ್ಲಿ ಅದನ್ನು ಕೂಡಲೆ ಬಿಡತಕ್ಕದ್ದು. ಆದರೆ ತಕ್ಕ ವಿಚಾರದಿಂದ ಮಾಡಿದ ಯೋಗದಿಂದ ಹಾಗೆ ವಿಶೇಷ ಅವಗುಣ ಆಗಲಾರದು ಅವಗುಣಾಂಶಕ್ಕೆ ದೃಷ್ಟಿಯನ್ನಿಟ್ಟು ಯೋಗದಲ್ಲಿ ಬೇಕಾಗಬಹುದಾದ ಅಲ್ಪ ವ್ಯತ್ಯಾಸವನ್ನು ಮಾಡಿದ್ದಲ್ಲಿ ಆ ಅವಗುಣಾಂಶ ಹೋಗಿ, ಯೋಗವು ಗುಣಕರವಾಗಿಯೇ ಪರಿಣಮಿಸದಿದ್ದರೆ, ಗುಣಾವಗುಣಗಳೆರಡೂ ಇಲ್ಲದ್ದಾಗುತ್ತದೆ. ಅಂಥಾ ಸಂದರ್ಭದಲ್ಲಿ ಏಳು ದಿನಗಳನಂತರ ಬೇರೆ ಪ್ರಯೋಗವನ್ನು ಉಪಯೋಗಿಸಿ ನೋಡಬೇಕು.

"ಯಾವ ರೋಗಿಗೆ ಯಾವ ದೇಶವು ಉಚಿತವಾಗಿದೆಯೋ ಅವನಿಗೆ ಅದೇ ದೇಶದಲ್ಲಿ ಹುಟ್ಟಿಬೆಳೆದ ಔಷಧವೇ ಹಿತವಾಗುತ್ತದೆ. ಅವನು ಬೇರೆ ದೇಶದಲ್ಲಿ ವಾಸಮಾಡಿಕೊಂಡಿರುವಾಗ್ಗೆ ಅಲ್ಲಿ ಆ ಔಷಧ ದೊರೆಯದಿದ್ದರೆ, ಅವನ ದೇಶಕ್ಕೆ ಸಮಾನ ಗುಣವುಳ್ಳ ಬೇರೆ ದೇಶದಲ್ಲಿ ಹುಟ್ಟಿದ ಔಷಧವನ್ನುಪಯೋಗಿಸುವದು ಹಿತ.

"ವೀರ್ಯವುಳ್ಳ, ಸ್ವರಸಗಳಿಂದ ಅನೇಕ ಸರ್ತಿ ಭಾವನೆಮಾಡಲ್ಪಟ್ಟ, ಲಘುವಾದ ಮತ್ತು ರಸ, ಗಂಧ ಮುಂತಾದ ಸಂಪತ್ತುಳ್ಳ ಔಷಧವು ತಕ್ಕ ಕಾಲದಲ್ಲಿ, ಜೀರ್ಣವಿರುವಾಗ್ಗೆ, ಯುಕ್ತಪ್ರಮಾಣದಲ್ಲಿ ಮತ್ತು ಏಕಾಗ್ರಚಿತ್ತದಿಂದ ಪ್ರಯೋಗಿಸಲ್ಪಟ್ಟಲ್ಲಿ ಅಮೃತವಾಗಿ ಪರಿಣಮಿಸುತ್ತದೆ"

25. ಕ್ಷಯ-ವೃದ್ಧಿ-ಪ್ರಕೋಪಗಳೆಂಬ ಭೇದದಿಂದ ವಿಕಾರ ಹೊಂದಿದ ವಾತಾದಿ ದೋಷಗಳು ರೋಗಕ್ಕೆ ಸನ್ನಿಕೃಷ್ಟ (ಸಮೀಪದ) ನಿದಾನ. ಆ ದೋಷವಿಕಾರಕ್ಕೆ ಕಾರಣವಾದ ಮಿಥ್ಯಾಹಾರವಿಹಾರ-ಋತುಭೇದ-ಮುಂತಾದವು ರೋಗಕ್ಕೆ ವಿಪ್ರಕೃಷ್ಟ (ದೂರದ) ನಿದಾನ, ಹೀಗೆ ದ್ವಿವಿಧವಾದ ನಿದಾನವನ್ನು ತಿಳಿಯುವದಲ್ಲದೆ, ರೋಗದ ಅಧಿಷ್ಠಾನ (ದೋಷಗಳು ಅಧಿಕಾರ ನಡಿಸುವ ಸ್ಥಾನ) ಮತ್ತು ಲಕ್ಷಣಗಳನ್ನು ಪರೀಕ್ಷಿಸಿ, ವೈದ್ಯನು ರೋಗಕ್ಕೆ ತಕ್ಕ ಚಿಕಿತ್ಸೆಯನ್ನು ವಿಧಿಸಬೇಕಾಗಿ ಆರಂಭದಲ್ಲಿ (ಹಿಂದೆ 1ನೇ ಸಂಖ್ಯೆಯಲ್ಲಿ)ಯೇ ಹೇಳಲಾಯಿತಷ್ಟೆ. ಅಧಿಷ್ಠಾನ ವಿಶೇಷದ ದೃಷ್ಟಿಯಿಂದ ಹೆಚ್ಚು ಉಪಯುಕ್ತವಾದ ದ್ರವ್ಯವಿಶೇಷಗಳು ಇವೆ ಎಂತಲೂ ಸೂಚಿತವಾಗಿದೆ. ಈ ಎಲ್ಲಾ ವಿಚಾರದ ಮೇಲೆ ರೋಗಕ್ಕೆ ತಕ್ಕದ್ದಾದ ಔಷಧವನ್ನು ಚುನಾಯಿಸುವದಕ್ಕೂ ಔಷಧಗಳ ಯೋಗವನ್ನು ಕಲ್ಪಿಸುವದಕ್ಕೂ ಸಹಾಯವಾಗುವಂತೆ ಚರಕನು ಔಷಧ ಉಪಯೋಗದಿಂದ ಉಂಟಾಗತಕ್ಕ ಕರ್ಮಗಳು ಸಾಧಾರಣವಾಗಿ

ಯೋಗಗಳ ಕಾರಿಕೆ (ಸ್ವಾಸ್ಥ್ಯಕರಣ ವಿಧಾನ)ಗಳು

ಜೀವನೀಯ-ಬೃಂಹಣೀಯ-ಲೇಖನೀಯ-ಭೇದನೀಯ-ಸಂಧಾನೀಯ-ದೀಪನೀಯ | ಬಲ್ಯ-ವರ್ಣ್ಯ-ಕಂಠ್ಯ-ಹೃದ್ಯ | ತೃಪ್ತಿಘ್ನ- ಅರ್ಶೋಘ್ನ- ಕುಷ್ಠಘ್ನ- ಕಂಡೂಘ್ನ-ಕೃಮಿಘ್ನ- ವಿಷಘ್ನ | ಸ್ತನ್ಯಜನನ-ಸ್ತನ್ಯಶೋಧನ-ಶುಕ್ರಜನನ-ಶುಕ್ರಶೋಧನ | ಸ್ನೇಹೋಪಗ - ಸ್ವೇದೋಪಗ - ವಮನೋಪಗ - ವಿರೇಚನೋಪಗ - ಆಸ್ಥಾಪನೋಪಗ - ಅನುವಾಸನೋಪಗ - ಶಿರೋವಿರೇಚನೋಪಗ | ಛರ್ದಿನಿಗ್ರಹ - ತೃಷ್ಣಾನಿಗ್ರಹ - ಹಿಕ್ಕಾನಿಗ್ರಹ | ಪುರೀಷಸಂಗ್ರಹಣೀಯ - ಪುರೀಷವಿರಜನೀಯ-ಮೂತ್ರಸಂಗ್ರಹಣೀಯ - ಮೂತ್ರ

ವಿರಜನೀಯ - ಮೂತ್ರವಿರೇಚನೀಯ | ಕಾಸಹರ-ಶ್ವಾಸಹರ - ಶೋಥಹರ -ಜ್ವರಹರ - ಶ್ರಮಹರ | ದಾಹಪ್ರಶಮನ - ಶೀತಪ್ರಶಮನ - ಉದರ್ದಪ್ರಶಮನ - ಅಂಗಮರ್ದಪ್ರಶಮನ-ಶೂಲಪ್ರಶಮನ | ಶೋಣಿತಾಸ್ಥಾಪನ-ವೇದನಾಸ್ಥಾಪನ-ಸಂಜ್ಞಾಸ್ಥಾಪನ-ಪ್ರಜ್ಞಾಸ್ಥಾಪನ - ವಯಃಸ್ಥಾಪನ | ಎಂತ

ಐವತ್ತು ವಿಧ ಎಂತ ತಿಳಿಸುವದಕ್ಕಾಗಿ ಮಹಾ ಕಷಾಯಗಳು ಐವತ್ತು ಎಂತ ಹೇಳಿ, ಅವುಗಳ ಉದಾಹರಣವಾಗಿ ಐವತ್ತು ಕಷಾಯ ಯೋಗಗಳನ್ನು ಕಲ್ಪಿಸಿ ಹೇಳಿರುತ್ತಾನೆ. ಇವುಗಳೆಲ್ಲ 1ನೇ ಭಾಗದ XIXನೇ ಅಧ್ಯಾಯದ 86-87ನೇ ಸಂಖ್ಯೆಗಳಲ್ಲಿ ವರ್ಣಿಸಲ್ಪಟ್ಟಿವೆ. ಈ ಐವತ್ತು ಮಹಾ ಕಷಾಯಗಳು ಮಹತ್ತಾದ ಕಷಾಯಗಳ ಲಕ್ಷಣಗಳ ಉದಾಹರಣವಾಗಿ ಹೇಳಲ್ಪಟ್ಟವು ಎಂತ ಚರಕನೇ ಹೇಳಿರುತ್ತಾನೆ. ಈ ಐವತ್ತು ಕಷಾಯಗಳು ಯಾವ ಯಾವ ವಿಶೇಷ ಗುಣವುಳ್ಳವಾಗಿ ಉಪದೇಶ ಮಾಡಲ್ಪಟ್ಟವೋ, ಆ ಗುಣಗಳು ವಾತಾದಿ ದೋಷಪರಿಹಾರದ ದೃಷ್ಟಿಯಿಂದಲೇ ಚುನಾಯಿಸಲ್ಪಟ್ಟ ದ್ರವ್ಯಗಳಲ್ಲಿ ಸಾಮಾನ್ಯವಾಗಿ ಇರತಕ್ಕಂಥವಲ್ಲ. ಅವು ದ್ರವ್ಯವಿಶೇಷಗಳಿಂದಲೂ ಯೋಗವಿಶೇಷಗಳಿಂದಲೂ ದೊರೆಯತಕ್ಕಂಥವು. ಸಾಧಾರಣವಾಗಿ ಯಾವ ವ್ಯಾಧಿಗೆ ಚಿಕಿತ್ಸೆಮಾಡುವವಾದರೂ, ಆ ಗುಣವಿಶೇಷಗಳೊಳಗೆ ಒಂದಲ್ಲದಿದ್ದರೆ ಒಂದು ವಿಧಿಸುವ ಔಷಧದಲ್ಲಿರಬೇಕಾದ ಆವಶ್ಯಕತೆ ಒದಗುತ್ತದೆ ಆದ್ದರಿಂದ ರೋಗಿಗೆ ಕೊಡುವದಕ್ಕ ಔಷಧವನ್ನು ನಿರ್ಣಯಿಸುವಾಗ್ಗೆ ರೋಗದ ನಿದಾನಕ್ಕೂ ವಾತಾದಿ ದೋಷಗಳ ಪರಿಹಾರಕ್ಕೂ ದೃಷ್ಟಿಯಿಟ್ಟ ಹಾಗೆ ಆ ಐವತ್ತು ಗುಣ ವಿಶೇಷಗಳೊಳಗೆ ಯಾವದು ಆ ಔಷಧದಲ್ಲಿರಬೇಕು ಎಂಬದಕ್ಕೂ ಮನಸ್ಸು ಕೊಡಬೇಕೆಂಬದೇ ಆ ಮಹಾ ಕಷಾಯಗಳ ಉಪದೇಶದ ಉದ್ದೇಶ ಎಂತ ಕಾಣುತ್ತದೆ ಅಲ್ಲಿ ಉಕ್ತವಾದ ಕಷಾಯಗಳೊಳಗೆ ಸೇರಿಸಲ್ಪಟ್ಟ ಪ್ರತಿ ದ್ರವ್ಯದಲ್ಲಿ ಯೋಗಕ್ಕೆ ಹೇಳಲ್ಪಟ್ಟ ಗುಣವನ್ನು ದೊರಕಿಸುವ ಶಕ್ತಿ ವಿಶೇಷವಾಗಿ ಇರುತ್ತದೆನ್ನುವದಕ್ಕ ಆಗುವದಿಲ್ಲ. ದೃಷ್ಟಾಂತವಾಗಿ ಸಕ್ಕರೆ, ದ್ರಾಕ್ಷೆ, ಅಣಿಲೆಕಾಯಿ, ತಾರೇಕಾಯಿ, ಮತ್ತು ನೆಲ್ಲಿ ಜ್ವರಹರವಾದ ಹತ್ತು ದ್ರವ್ಯಗಳೊಳಗೆ ಕಾಣುತ್ತವೆ ಇವುಗಳಲ್ಲಿ ಯಾವ ದ್ರವ್ಯವನ್ನಾದರೂ ಒಂದನ್ನಾಗಿಯೇ ಕಷಾಯ ಮಾಡಿ ಕೊಡುವದರಿಂದ ಜ್ವರ ಪರಿಹಾರವಾದೀತೆಂದರೆ ಅದನ್ನು ಸಾಧಾರಣವಾಗಿ ಯಾರೂ ಮನ್ನಿಸಲಾರರು. ಸಕ್ಕರೆಯಿಂದ ಕಫ, ದ್ರಾಕ್ಷೆಯಿಂದ ಅಗ್ನಿಮಾಂದ್ಯ, ಅಣಿಲೆಯಿಂದ ವಿರೇಚನ, ತಾರೆಕಾಯಿಯಿಂದ ತಲೆತಿರುಕು, ಮುಂತಾದ ದೋಷವೃದ್ಧಿಯಾಗುವ ಸಂಭವವಿರುತ್ತದೆ. ತಾರೆಕಾಯಿಯಲ್ಲಿ ಜ್ವರಹರ ಗುಣ ಉಂಟೆಂತ ಯಾವ ಔಷಧ ಸಿಘಂಟೂ ಹೇಳುವದಿಲ್ಲ. ಅಣಿಲೆ, ತಾರೆ ಮತ್ತು ನೆಲ್ಲಿ ಸೇರಿದ ತ್ರಿಫಲೆಯಲ್ಲ ವಿಷಮಜ್ವರಹರ ಗುಣವಿರುತ್ತದೆಂತ ಸುಶ್ರುತ ಹೇಳಿದ್ದಾನೆ ಅದಕ್ಕನುಸಾರವಾಗಿ ಜ್ವರಕ್ಕೆ ವಿಶೇಷವಾಗಿ ಉಪಯೋಗಿಸಲ್ಪಡುವ ಮಹಾಜ್ವರಾಂಕುಶ, ಜ್ವರಭೈರವ ಮುಂತಾದ ಮಾತ್ರೆಗಳ ಯೋಗಗಳಲ್ಲಿ ತ್ರಿಫಲೆಯು ಸೇರಿಸಲ್ಪಟ್ಟಿದೆ. ತ್ರಿಫಲೆಯು ನವಜ್ವರದಲ್ಲಿ ಹಿತವಲ್ಲವಾದರೂ, ಅದರ ದೋಷವನ್ನು ಆ ಮಾತ್ರೆಗಳ ಯೋಗಗಳಲ್ಲಿ ಸೇರಿದ ಇತರ ದ್ರವ್ಯಗಳೂ, ಅವುಗಳನ್ನು ತಯಾರಿಸುವದಕ್ಕೆ ಮತ್ತು ಕೊಡುವದಕ್ಕೆ ಉಪಯೋಗಿಸುವ ಲಿಂಬೆ ರಸ, ಶುಂಠಿ ರಸ ಮುಂತಾದವೂ ಗೆಲ್ಲುತ್ತವೆ ಎಂಬದರಿಂದ ಆ ಮಾತ್ರೆಗಳು ನವಜ್ವರದಲ್ಲಿಯೂ ಹಿತ ಎಂತ ಹೇಳಲ್ಪಟ್ಟದೆ. ಮಹಾಜ್ವರಾಂಕುಶ ಮಾತ್ರೆಯು ವಿಶೇಷವಾಗಿ ವಿಷಮಜ್ವರಗಳಲ್ಲಿ, ಹಳೇ ಜ್ವರಗಳಲ್ಲಿ ಮತ್ತು ಅನ್ಯವ್ಯಾಧಿಗನು

ಬಂಧವಾದ ಅಥವಾ ಲಕ್ಷಣವಾದ ಜ್ವರಗಳಲ್ಲಿ ಸಾರ್ಥಕವಾಗುತ್ತದೆ. ಜ್ವರಭೈರವ ಮಾತ್ರೆಯನ್ನು ಹೊಸ ಜ್ವರದಲ್ಲಿ ಕೊಡುವದಾದರೆ ಮಲಬದ್ಧತೆ ಅಥವಾ ಅಜೀರ್ತಿಯಿರಬೇಕು. ಒಟ್ಟಾರೆ ಜ್ವರಕ್ಕೆ ಆಮಾಶಯದ ದೋಷವೂ, ಪಿತ್ತವೃದ್ಧಿಯೂ, ಮುಖ್ಯ ಕಾರಣ ಎಂಬ ವಿಚಾರದ ಮೇಲೆ ವಿಶೇಷ ದೃಷ್ಟಿಯಿಟ್ಟು ಚರಕನ ಜ್ವರಹರ ಮಹಾಕಷಾಯದ ಯೋಗವು ಕಲ್ಪಿಸಲ್ಪಟ್ಟಿರಬೇಕು. ಆ ಯೋಗದ ಹತ್ತು ದ್ರವ್ಯಗಳಲ್ಲಿ ಪ್ರತಿಯೊಂದು ನಾನಾ ವಿಧವಾದ ಜ್ವರಗಳಿಗೆ ಕಲ್ಪಿಸುವ ಕಷಾಯಗಳಲ್ಲಿ ಅನ್ಯ ದ್ರವ್ಯಗಳೊಂದಿಗೆ ಪ್ರಮಾಣಭೇದದಿಂದ ಸೇರಬಹುದಾದದ್ದೆಂಬದು ಸಿದ್ಧವಾದ. ಆ ಹತ್ತು ಬಗೆಗಳನ್ನು ಸಮಪಾಲಾಗಿ ತೆಗೆದುಕೊಂಡು, ಒಟ್ಟು ಒಂದು ಪಲ ಔಷಧಗಳ ಕಷಾಯಮಾಡಿ ಕೊಡುವದೆಂದರ, ತ್ರಿಫಲೆಯು ಸುಮಾರು ಮೂರು ವರಹತೂಕವಾಗುವದರಿಂದ ಆ ಕಷಾಯವು ಮೃದುಶರೀರದವನಲ್ಲಿ ತೀವ್ರವಾದ ವಿರೇಚನ ಮಾಡಿಸುವದೆಂಬದರಲ್ಲಿ ಸಂದೇಹವಿಲ್ಲ ಸುಶ್ರುತನ ಗುಡೂಚ್ಯಾದಿ (1 ಅಮೃತ ಬಳ್ಳಿ, 2 ಕಹಿಬೇವು, 3 ಕೊತ್ತುಂಬರಿ, 4 ಶ್ರೀಗಂಧ, 5 ಪದ್ಮಕ) ಮತ್ತು ಆಮಲಕ್ಯಾದಿ (1 ನಲ್ಲಿ ಚಟ್ಟು, 2 ಅಣಿಲೆಕಾಯಿ ಸಿಪ್ಪೆ, 3 ಹಿಪ್ಪಲಿ, 4 ಹರಳು ಬೇರು) ಗಣಗಳಿಗೆ ಸರ್ವಜ್ವರಹರ ಗುಣ ಉಂಟೆಂತ ಹೇಳಲ್ಪಟ್ಟಿದೆ ಆ ಗಣಗಳಲ್ಲಿ ಅಡಗಿದ ಒಂಭತ್ತು ಬಗೆಗಳಲ್ಲಿ ನೆಲ್ಲಿ ಮತ್ತು ಅಣಿಲೆ ಅಲ್ಲದೆ, ಮಿಕ್ಕ ಯಾವದೂ ಚರಕನ ಜ್ವರಹರ ಮಹಾ ಕಷಾಯದಲ್ಲ ಸೇರಿರುವದಿಲ್ಲ. ಆ ಗುಡೂಚ್ಯಾದಿಯ ಐದು ದ್ರವ್ಯಗಳು ಜ್ವರಹರ ವರ್ಗದಲ್ಲಿ ಪ್ರಸಿದ್ಧವಾದವು. ಅದನ್ನು ಉಪಯೋಗಿಸುವದಾದರೂ ದ್ರವ್ಯಗಳ ಶಕ್ತಿ ಮೇಲೆ ಅವುಗಳ ಪ್ರಮಾಣಗಳನ್ನು ಹೆಚ್ಚು ಕಡಿಮೆ ಮಾಡಿಕೊಳ್ಳಬೇಕಾದೀತು. ತೋರಮುಟ್ಟಿಗೆ ಅಮೃತಬಳ್ಳಿ ತೊಲೆ 1, ಕೊತ್ತುಂಬರಿ ತೊಲೆ 1, ಕಹಿಬೇವಿನ ಸಾರು ತೊಲೆ $\frac{1}{2}$, ಶ್ರೀಗಂಧ ತೊಲೆ $\frac{1}{4}$, ಪದ್ಮಕ ತೊಲೆ $\frac{1}{4}$, ಈ ಪ್ರಮಾಣದಲ್ಲಿ ಸೇರಿಸಿ ಕಷಾಯ ಮಾಡಿ, ಅರ್ಧಾಂಶ ಪ್ರಕಾರ, ಎರಡು ಹೊತ್ತು ಕಲ್ಲು ಸಕ್ಕರ ಪುಡಿಯನ್ನೋ, ಸಕ್ಕರೆಯನ್ನೋ, ಜಲ್ಲವನ್ನೋ, ಸ್ವಲ್ಪ ಕೂಡಿಸಿ ಕೊಡುವದು ಹೆಚ್ಚು ಪಕ್ಷದ ಜ್ವರರೋಗಿಗಳಿಗೆ ಹಿತವಾದೀತು. ಹಾಗಯೇ ಆಮಲಕ್ಯಾದಿ ಯೋಗವನ್ನು ಉಪಯೋಗಿಸುವದಾದರ, ಹರಳುಬೇರು ಅರ್ಧಪಲ (ತೊ 1$\frac{1}{2}$), ನಲ್ಲಿಚಟ್ಟು ಕಾಲುಪಲ (ಕರ್ಷ), ಅಣಿಲೆಕಾಯಿಯ ಸಿಪ್ಪೆ ಅರ್ಧ ಕರ್ಷ, ಹಿಪ್ಪಲಿ ಅರ್ಧ ಕರ್ಷ, ಪ್ರಕಾರ ದ್ರವ್ಯಗಳನ್ನು ತೆಗೆದುಕೊಂಡು ಕಷಾಯ ಮಾಡಿ, ಅದೇ ಪ್ರಕಾರ ಕೊಡುವದು ಶೋಧನವಾಗಬೇಕಾದಲ್ಲಿ ಹಿತವಾಗಬಹುದು ಸಾರಾಂಶವೇನೆಂದರೆ - ವ್ಯಾಧಿಯ ದ್ವಿವಿಧವಾದ ನಿದಾನಕ್ಕೆ ಶತ್ರುವಾದ (ಅಂದರ ಅದನ್ನು ಗೆಲ್ಲತಕ್ಕ) ಅನಂತವಾದ ಔಷಧದ್ರವ್ಯಗಳಲ್ಲಿ ಬೇಕಾದ ಕಾರಿಕೆಯನ್ನು ಸಂಪಾದಿಸತಕ್ಕ ಶಕ್ತಿಯುಳ್ಳವುಗಳನ್ನೇ ಚುನಾಯಿಸಿ, ಯುಕ್ತವಾದ ಪ್ರಮಾಣದಲ್ಲಿ ಅವುಗಳನ್ನು ಯೋಜಿಸಿ, ಕಷಾಯಾದಿಗಳನ್ನು ಮಾಡಿ ಉಪಯೋಗಿಸತಕ್ಕದ್ದು

26. ಹಾಗೆ ಕಾರಿಕಗ ಸಹ ದೃಷ್ಟಿಯಿಟ್ಟು ಬೇಕಾದ ದ್ರವ್ಯಗಳನ್ನು ಆರಿಸುವದಕ್ಕೆ ಸುಶ್ರುತನು 'ದ್ರವ್ಯಸಂಗ್ರಹಣೀಯ' ಎಂಬ ಪ್ರಕರಣದಲ್ಲಿ ಕೊಟ್ಟಿರುವ 'ವಿದಾರಿಗನ್ಧಾದಿ' ಮೊದಲಾದ ಮೂವತ್ತೇಳು ಗಣಗಳು ಚರಕನ ಮಹಾ ಕಷಾಯಯೋಗಗಳಷ್ಟು ಅಥವಾ ಅದಕ್ಕಿಂತ ಹೆಚ್ಚು ಪ್ರಯೋಜನವುಳ್ಳವಾದ್ದರಿಂದ, ಅವುಗಳನ್ನು ಈ ಉಪೋದ್ಘಾತದ 1ನೇ ಪರಿಶಿಷ್ಟವಾಗಿ ವರ್ಣಿಸೋಣಾಗುತ್ತದೆ. ಶತಶ್ಲೋಕಿ ಎಂಬ ಗ್ರಂಥದಲ್ಲಿ ಪ್ರಧಾನವಾದ ರೋಗಗಳ ಹೆಸರುಗಳನ್ನು ನಮೂದಿಸಿ, ಆಯಾ ರೋಗದ ಪರಿಹಾರಕ್ಕೆ ಉಪಯುಕ್ತವಾದ ಔಷಧಗಳು

ನಾಮತಃ ಸಂಗ್ರಹಿಸಲ್ಪಟ್ಟು ಪ್ರತ್ಯಪ್ರತ್ಯೇಕವಾಗಿ ಬರೆಯಲ್ಪಟ್ಟಿವೆ. ಭಾವಪ್ರಕಾಶದಲ್ಲಿ ಅಡಗಿರುವ ಔಷಧನಿಘಂಟಿನಲ್ಲಿ ಯಾವ ದ್ರವ್ಯವು ಯಾವ ರೋಗಗಳನ್ನು ಪರಿಹರಿಸುವ ಶಕ್ತಿಯುಳ್ಳದ್ದಾಗಿ ಹೇಳಲ್ಪಟ್ಟದೊ, ಅದರ ಹೆಸರನ್ನು ಆ ರೋಗಗಳಲ್ಲಿ ಪ್ರತಿಯೊಂದರ ಹೆಸರಿನ ಕೆಳಗೆ ಉಲ್ಲೇಖಿಸಿ, ಶತಶ್ಲೋಕಿಯಲ್ಲಿರುವಂತೆ ಒಂದೇ ರೋಗವನ್ನು ಪರಿಹರಿಸಬಹುದಾದ ದ್ರವ್ಯಗಳೆಲ್ಲ ಒಟ್ಟಾಗಿ ಕಾಣುವಂತೆ ವರ್ಗ ಮಾಡಿ, ಆ ವರ್ಗಗಳಲ್ಲಿ ಅಧಿಕವಾಗಿ ಕಂಡ ದ್ರವ್ಯಗಳ ಹೆಸರುಗಳನ್ನು ಶತಶ್ಲೋಕಿಯಲ್ಲಿಯ ವರ್ಗಗಳೊಳಗೆ ಕೂಡಿಸಿ, ಹಾಗೆ ಪುಷ್ಟಿಗೊಂಡ ಪ್ರತಿ ವರ್ಗದಲ್ಲಿಯ ಹೆಸರುಗಳು ಅಕಾರಾದಿ ಕ್ರಮದಿಂದ ಆಯಾ ಅಧ್ಯಾಯದ ಕೊನೆಯಲ್ಲಿ ಬರೆಯಲ್ಪಟ್ಟಿವೆ. ಈ ಪಟ್ಟಿಗಳು ಸಹ ಸ್ವತಂತ್ರವಾದ ಯೋಗಕಲ್ಪನಗಳಿಂದ ಚಿಕಿತ್ಸೆಮಾಡುವವರಿಗೆ ಅತ್ಯುಪಯುಕ್ತವಾದವು.

ದ್ರವ್ಯ ಗುಣ ವಿಭಾಗ.

27. ಚರಕನು ಸೂತ್ರಸ್ಥಾನದ ಇಪ್ಪತ್ತೈದನೇ ಅಧ್ಯಾಯದಲ್ಲಿ ಆಹಾರವಾಗಿ ಉಪಯೋಗಿಸಲ್ಪಡುವ ವಸ್ತುಗಳೊಳಗೆ ಇಂಥಾ ವರ್ಗದಲ್ಲಿ ಇಂಥಾದ್ದು ಸ್ವಾಭಾವಿಕವಾಗಿ ಅತ್ಯಂತ ಹಿತ, ಇಂಥಾದ್ದು ಅತ್ಯಂತ ಅಹಿತ, ಔಷಧ ದ್ರವ್ಯಗಳಲ್ಲಿಯೂ ಚಿಕಿತ್ಸೋಪಚಾರಗಳಲ್ಲಿಯೂ ಇಂಥಾದ್ದು ಇಂಥಾ ಗುಣದಲ್ಲಿ ಅಥವಾ ಇಂಥಾ ದುರ್ಗುಣದಲ್ಲಿ ಶ್ರೇಷ್ಠ, ಎಂಬ ಹೀಗಿನ ವಿವರಗಳನ್ನು, ಪ್ರಧಾನವಾದವುಗಳ ಮಟ್ಟಿಗೆ ಎಂತ ಹೇಳಿ, ಸ್ವಲ್ಪ ವಿಸ್ತಾರವಾಗಿಯೇ ಉಪದೇಶಿಸಿರುತ್ತಾನೆ. ಉಪಯುಕ್ತತೆ ವಿಚಾರದ ಮೇಲೆ ಅವುಗಳೊಳಗೆ ಸ್ವಲ್ಪ ಅಂಶವನ್ನು ಮಾತ್ರ ಲೋಪಿಸಿ, ಮಿಕ್ಕವುಗಳನ್ನು ಈ ಕೆಳಗೆ ಭಾಷಾಂತರಿಸಿ ಉಲ್ಲೇಖಿಸಲಾಗುತ್ತದೆ.

ಆಹಾರವರ್ಗದಲ್ಲಿ, ಔಷಧ ವರ್ಗದಲ್ಲಿ, ಚಿಕಿತ್ಸಾಕರ್ಮಗಳಲ್ಲಿ ಮತ್ತು ಬೇರೆ ಕೆಲವು ಗುಣಕರ್ಮ ವಿಭಾಗಗಳಲ್ಲಿ ಅತ್ಯಂತ ಹಿತ, ಅತ್ಯಂತ ಅಹಿತ ಶ್ರೇಷ್ಠ ಎಂಬ ಭೇದಗಳನ್ನು ಕುರಿತು ಚರಕನ ಉಪದೇಶ

"ಶೂಕಧಾನ್ಯಗಳೊಳಗೆ ಕೆಂಪು ಶಾಲಿಗಳು ಅತ್ಯಂತ ಪಥ್ಯಗುಣದಲ್ಲಿ ಶ್ರೇಷ್ಠ, ಶಮೀ (ಕೋಡು) ಧಾನ್ಯಗಳೊಳಗೆ ಹೆಸರು, ನೀರುಗಳೊಳಗೆ ಆಕಾಶದ ನೀರು, ಉಪ್ಪುಗಳೊಳಗೆ ಸೈಂಧವ, ಶಾಕಗಳೊಳಗೆ ಜೀವಂತೀ, ಮೃಗಮಾಂಸಗಳೊಳಗೆ ಜಿಂಕದು, ಪಕ್ಷಿಗಳೊಳಗೆ ಲಾವ(ತಿತ್ತಿರಿ), ಬಿಲವಾಸಿಗಳೊಳಗೆ ಉಡು, ಮೀನುಗಳೊಳಗೆ ರೋಹಿತ, ತುಪ್ಪಗಳೊಳಗೆ ದನದ ತುಪ್ಪ, ಹಾಲುಗಳೊಳಗೆ ದನದ ಹಾಲು, ಸ್ಥಾವರ ಜಾತಿಯ ಎಣ್ಣೆಗಳೊಳಗೆ ಎಳ್ಳೆಣ್ಣೆ, ಗಡ್ಡೆಗಳೊಳಗೆ ಶುಂಠಿ, ಫಲಗಳೊಳಗೆ ದ್ರಾಕ್ಷೆ, ಕಬ್ಬಿನ ವಿಕಾರಗಳೊಳಗೆ ಸಕ್ಕರೆ, ಸಹ ಸ್ವಾಭಾವಿಕವಾಗಿ ಅತ್ಯಂತ ಹಿತವಾದ ಆಹಾರೋಪಯೋಗಿಕ ದ್ರವ್ಯಗಳಲ್ಲಿ ಪ್ರಧಾನವಾದವು.

"ಶೂಕಧಾನ್ಯಗಳೊಳಗೆ ಯವಕವು ಅಪಥ್ಯತ್ವದಲ್ಲಿ ಶ್ರೇಷ್ಠ; ಶಮೀಧಾನ್ಯಗಳೊಳಗೆ ಉದ್ದು, ನೀರುಗಳೊಳಗೆ ಮಳೆಗಾಲದ ನದೀದು, ಉಪ್ಪುಗಳೊಳಗೆ ಔಷರ (ಸವಳು ಭೂಮಿಯದು), ಶಾಕಗಳೊಳಗೆ ಸಾಸಿವ ಸೊಪ್ಪು, ಮೃಗಮಾಂಸಗಳೊಳಗೆ ಗೋಮಾಂಸ, ಪಕ್ಷಿಗಳೊಳಗೆ ಕರಿ ಪಾರಿವಾಳ, ಬಿಲವಾಸಿಗಳೊಳಗೆ ಕಪ್ಪೆ, ಮೀನುಗಳೊಳಗೆ ಚಿಲಿಚಿಮ, ತುಪ್ಪಗಳೊಳಗೆ ಕುರಿ ತುಪ್ಪ, ಹಾಲುಗಳೊಳಗೆ ಕುರಿಹಾಲು, ಸ್ಥಾವರಜಾತಿಯ ಎಣ್ಣೆಗಳೊಳಗೆ ಕುಸುಬಿ ಎಣ್ಣೆ, ಗಡ್ಡೆಗಳೊಳಗೆ ಮೂಲಂಗಿ, ಫಲಗಳೊಳಗೆ ಹೆಬ್ಬಲಸು, ಕಬ್ಬಿನ ವಿಕಾರಗಳೊಳಗೆ ರವೆಬೆಲ್ಲ, ಸಹ ಆಹಾರೋಪಯೋಗಿಕ ದ್ರವ್ಯಗಳಲ್ಲಿ ಸ್ವಾಭಾವಿಕವಾಗಿ ಅತ್ಯಂತ ಅಹಿತವಾದವುಗಳೊಳಗೆ ಅತಿ ನಿಕೃಷ್ಟವಾದವು.

"ಪುನಃ ಹಿತಾಹಿತಯುಕ್ತವಾದ ಆಹಾರವಿಕಾರಗಳೊಳಗೆ ಮತ್ತು ಚಿಕಿತ್ಸೋಪಯೋಗಿಕ ಪದಾರ್ಥಗಳೊಳಗೆ ಪ್ರಧಾನವಾದ ದ್ರವ್ಯಗಳು ಮತ್ತು ಅವುಗಳ ಪ್ರಯೋಜನ ವರ್ಣಿಸಲ್ಪಡುತ್ತವೆ:—ದೇಹರಕ್ಷಣಮಾಡುವಂಥವುಗಳಲ್ಲಿ ಅನ್ನವು (ಆಹಾರವು) ಶ್ರೇಷ್ಠ, ಆಶ್ವಾಸಕರವಾದವುಗಳೊಳಗೆ (ಶ್ವಾಸವನ್ನು ಸಮಾಧಾನ ಮಾಡುವಂಥವುಗಳಲ್ಲಿ) ನೀರು, ಶ್ರಮಪರಿಹರಿಸುವಂಥವುಗಳೊಳಗೆ ಸುರೆ(ಮದ್ಯ), ಜೀವನೀಯ(ಬದುಕಿಸುವಂಥವು)ಗಳೊಳಗೆ ಹಾಲು, ಪುಷ್ಟಿಕರವಾದವುಗಳೊಳಗೆ ಮಾಂಸ, ತೃಪ್ತಿಕರವಾದವುಗಳೊಳಗೆ (ಮಾಂಸ) ರಸ, ಆಹಾರದ್ರವ್ಯಕ್ಕೆ ರುಚಿಕೊಡುವಂಥವುಗಳೊಳಗೆ ಉಪ್ಪು, ಹೃದ್ಯವಾದ (ಮನಸ್ಸಿಗೊಪ್ಪುವ ಹಾಗೆ ಮಾಡುವಂಥ)ವುಗಳೊಳಗೆ ಹುಳಿ, ಬಲಕೊಡುವಂಥವುಗಳೊಳಗೆ ಕೋಳಿಮಾಂಸ, ವೃಷ್ಯಗುಣವುಳ್ಳವುಗಳೊಳಗೆ ಮೊಸಳೆಯ ರೇತಸ್ಸು, ಕಫಪಿತ್ತ ಶಮನ ಮಾಡುವಂಥವುಗಳೊಳಗೆ ಜೇನು, ವಾತಪಿತ್ತ ಶಮನಮಾಡುವಂಥವುಗಳೊಳಗೆ ತುಪ್ಪ, ವಾತಕಫ ಶಮನಮಾಡುವಂಥವುಗಳೊಳಗೆ ಎಳ್ಳೆಣ್ಣೆ (ತೈಲ), ಕಫ ಹೊರಗೆ ಹಾಕುವಂಥವುಗಳೊಳಗೆ ವಮನ, ಪಿತ್ತ ಹೊರಗೆ ಹಾಕುವಂಥವುಗಳೊಳಗೆ ವಿರೇಚನ, ವಾತಹರವಾದವುಗಳೊಳಗೆ ವಸ್ತಿಯ ಉಪಯೋಗ, ಮೃದು ಮಾಡುವಂಥವುಗಳೊಳಗೆ ಸ್ವೇದ (ಬೆವರಿಸುವದು), ಸ್ಥಿರತ್ವವನ್ನುಂಟುಮಾಡುವಂಥವುಗಳೊಳಗೆ ವ್ಯಾಯಾಮ (ಅಂಗಸಾಧನೆ) ಪುಂಸ್ತ್ವವನ್ನು ಕೆಡಿಸುವಂಥವುಗಳೊಳಗೆ ಕ್ಷಾರ, ಅನ್ನವಲ್ಲದ ದ್ರವ್ಯಗಳಿಗೆ ರುಚಿ ಕೊಡುವಂಥವುಗಳೊಳಗೆ ತಿಂದುಕ, ಕಂಠಕ್ಕೆ ಹಿತವಲ್ಲದವುಗಳೊಳಗೆ ಎಳೇ ಬೇಲದ ಕಾಯಿ, ಹೃದ್ಯವಲ್ಲದ(ಮನಸ್ಸಿಗೆ ಹಿತ ಕಾಣದ)ವುಗಳೊಳಗೆ ಕುರಿಯ ತುಪ್ಪ, ಶೋಷವನ್ನು ನಾಶಮಾಡತಕ್ಕ, ಮೊಲೆಹಾಲನ್ನು ವೃದ್ಧಿಪಡಿಸತಕ್ಕ, ಸಾತ್ಮ್ಯ (ಹಿತ)ವಾದ, ರಕ್ತವನ್ನು ಸಂಗ್ರಹಿಸತಕ್ಕ (ನಷ್ಟವಾಗದಂತೆ ಕಾಪಾಡತಕ್ಕ) ಮತ್ತು ರಕ್ತ-ಪಿತ್ತಶಮನಕರವಾದ ಗುಣವುಳ್ಳವುಗಳೊಳಗೆ ಆಡಿನ ಹಾಲು, ಕಫಪಿತ್ತಗಳನ್ನು ವೃದ್ಧಿಮಾಡುವಂಥವುಗಳೊಳಗೆ ಕುರಿಹಾಲು, ನಿದ್ರೆಯನ್ನು ಉಂಟುಮಾಡತಕ್ಕಂಥವುಗಳೊಳಗೆ ಎಮ್ಮೆ ಹಾಲು, ಅಭಿಷ್ಯಂದಕರವಾದವುಗಳೊಳಗ ಮಂದವಾದ (ಗಟ್ಟಿಯಾಗದ) ಮೊಸರು, ಕೃಶತೆಯನ್ನುಂಟುಮಾಡತಕ್ಕಂಥ(ಕರ್ಷಣೀಯ)ವುಗಳೊಳಗೆ ಗವೇಧುಕಾ ಎಂಬ ಧಾನ್ಯದ (ಕಾಡು ಗೋದಿಯ) ಅನ್ನ, ಜಿಡ್ಡನ್ನು ಒಣಗಿಸತಕ್ಕಂಥವುಗಳೊಳಗೆ ಉದ್ದಾಲಕ (ಕಾಡುಹಾರಕ) ಎಂಬ ಧಾನ್ಯದ ಅನ್ನ, ಮೂತ್ರಕಾರಿಗಳೊಳಗೆ ಕಬ್ಬು, ಮಲಕಾರಿಗಳೊಳಗೆ ಯವೆಗೋದಿ, ವಾತವನ್ನುಂಟುಮಾಡತಕ್ಕವುಗಳೊಳಗೆ ನೇರಳೆಹಣ್ಣು, ಕಫಪಿತ್ತಕರವಾದವುಗಳೊಳಗೆ ಶಷ್ಕುಲೀ (ಗೋದಿ ಸಜ್ಜಿಗೆಯ ಕರಿದ ರೊಟ್ಟಿ ಅಥವಾ ಪೂರಿ), ಅಮ್ಲಪಿತ್ತಕರವಾದವುಗಳೊಳಗೆ ಹುರುಳಿ, ಕಫಪಿತ್ತಕರವಾದವುಗಳೊಳಗೆ ಉದ್ದು, ವಮನಕ್ಕೂ, ಆಸ್ಥಾಪನವಸ್ತಿಗೂ, ಅನುವಾಸನವಸ್ತಿಗೂ, ಉಪಯೋಗಕರವಾದವುಗಳೊಳಗೆ ಮದನಫಲ (ಮಂಗಾರೆಕಾಯಿ), ಸುಖವಿರೇಚನಕರವಾದವುಗಳೊಳಗೆ ತಿಗಡೆ, ಮೃದುವಿರೇಚನ ಮಾಡಿಸುವಂಥವುಗಳೊಳಗೆ ಕಕ್ಕೆಕಾಯಿ, ತೀಕ್ಷ್ಣವಿರೇಚನಕಾರಿಗಳೊಳಗೆ ಕಳ್ಳಿಹಾಲು, ಶಿರೋವಿರೇಚನ ಮಾಡಿಸುವಂಥವುಗಳೊಳಗೆ ಉತ್ತರಣೆ, ಕ್ರಿಮಿನಾಶನಕಾರಿಗಳೊಳಗೆ ವಾಯುವಿಳಂಗ, ವಿಷನಾಶನಕಾರಿಗಳೊಳಗೆ ಬಾಗೆ ಮರ, ಕುಷ್ಠರೋಗ ನಾಶನಕಾರಿಗಳೊಳಗೆ ಖದಿರು (ಕಾಚಿನ ಮರ), ವಾತಹರವಾದವುಗಳೊಳಗೆ ರಾಸ್ನೆಗಡ್ಡೆ (ಅರತೆ), ಪ್ರಾಯವನ್ನು ಸ್ಥಾಪಿಸುವಂಥವು(ಮುದಿತನವನ್ನು ನಿವಾರಿಸುವಂಥವು)ಗಳೊಳಗೆ ನೆಲ್ಲಿ, ಪಥ್ಯವಾದ(ಔಷಧಗಳಲ್ಲಿ)ವುಗಳೊಳಗೆ

ಅಣಿಲೆ, ವೃಷ್ಯ ಮತ್ತು ವಾತಹರ ಗುಣವುಳ್ಳವುಗಳೊಳಗೆ ಹರಳುಬೇರು, ದೀಪನಪಾಚನಕರವಾಗಿ, ಹೊಟ್ಟೆಯುಬ್ಬರವನ್ನು ಶಮನಮಾಡತಕ್ಕಂಥವುಗಳೊಳಗೆ ಹಿಪ್ಪಲೀಮೂಲ, ದೀಪನಕಾರಿಯಾಗಿ ಗುದದ ಶೂಲೆಯನ್ನೂ ಶೋಫವನ್ನೂ ಪರಿಹರಿಸತಕ್ಕಂಥವುಗಳೊಳಗೆ ಚಿತ್ರ-ಮೂಲ, ಬಿಕ್ಕಳನ್ನೂ, ಉಬ್ಬಸವನ್ನೂ, ಕೆಮ್ಮನ್ನೂ, ಪಾರ್ಶ್ವಶೂಲೆಯನ್ನೂ ಪರಿಹರಿಸುವಂಥವುಗಳೊಳಗೆ ಪುಷ್ಕರಮೂಲ, (ಮಲವನ್ನು ಸಂಗ್ರಹಿಸುವ ಅಂದರೆ ಕಟ್ಟಿಸುವ) ಸಂಗ್ರಾಹಕ, ದೀಪನ, ಪಾಚನ ಗುಣವುಳ್ಳವುಗಳೊಳಗೆ ಭದ್ರಮುಷ್ಟಿ, ಜ್ವಾಲೆಯನ್ನು ನಿಲ್ಲಿಸುವ, ಅಗ್ನಿದೀಪನ ಮಾಡುವ, ಮತ್ತು ವಾಂತಿ - ಅತಿಸಾರಗಳನ್ನು ಪರಿಹರಿಸುವ ಗುಣವುಳ್ಳವುಗಳೊಳಗೆ ಲಾವಂಚ, ಸಂಗ್ರಾಹಕ-ದೀಪನ-ಪಾಚನಗುಣವುಳ್ಳವುಗಳೊಳಗೆ ಆನೆಮುಂಗು, ಸಂಗ್ರಾಹಕ-ದೀಪನ-ರಕ್ತಪಿತ್ತಪ್ರಶಮನಗುಣವುಳ್ಳವುಗಳೊಳಗೆ ದೂರ್ವೆ (ಕದಿಕೆ), ಸಂಗ್ರಾಹಕ-ವಾತಹರ-ದೀಪನ-ಕಫರಕ್ತಪ್ರಶಮನ ಮತ್ತು ಮಲಮೂತ್ರಗಳ ಕಟ್ಟನ್ನು ಶಮನಮಾಡುವ ಗುಣವುಳ್ಳವುಗಳೊಳಗೆ ಅಮೃತಬಳ್ಳಿ, ಸಂಗ್ರಾಹಿ-ದೀಪನ-ವಾತಕಫಪ್ರಶಮನಗುಣವುಳ್ಳವುಗಳೊಳಗೆ ಬಿಲ್ಲಪತ್ರೆಬೇರು, ದೀಪನ - ಪಾಚನ - ಸಂಗ್ರಾಹಿ - ಸರ್ವ(ತ್ರಿ)ದೋಷಹರಗುಣವುಳ್ಳವುಗಳೊಳಗೆ ಅತಿವಿಷಾ (ಅತಿವಿಡ), ಸಂಗ್ರಾಹಕ ಮತ್ತು ರಕ್ತಪಿತ್ತಪ್ರಶಮನ ಗುಣವುಳ್ಳವುಗಳೊಳಗೆ ಕೆಂದಾವರೆ, ನೈದಿಲೆ ಮತ್ತು ತಾವರೆ, ಇವುಗಳ ಎಸಳುಗಳು, ಪಿತ್ತ ಕಫಗಳನ್ನು ಆರಿಸುವಂಥವುಗಳೊಳಗೆ ಒಳ್ಳಿತುರಚನ ಬೇರು, ರಕ್ತಪಿತ್ತಗಳು ಅತಿಯಾಗಿ ಕೂಡಿಕೊಂಡದ್ದನ್ನು ಪ್ರಶಮನಮಾಡತಕ್ಕಂಥವುಗಳೊಳಗೆ ಗಂಧಪ್ರಿಯಂಗು, ಕಫಪಿತ್ತರಕ್ತಗಳನ್ನು ಸಂಗ್ರಹಿಸಿ (ಕಟ್ಟಿಸಿ) ಒಣಗಿಸುವ ಗುಣವುಳ್ಳವುಗಳೊಳಗೆ ಕೊಡಸಿಗನ ಚಕ್ಕೆ, ರಕ್ತವನ್ನು ಸಂಗ್ರಹಿಸು(ಕಟ್ಟಿಸು)ವ ಮತ್ತು ರಕ್ತಪಿತ್ತವನ್ನು ಶಮನಮಾಡತಕ್ಕಂಥವುಗಳೊಳಗೆ ಕಾಶ್ಮೀರ(ಶಿವನ್ನಿ—ಕುಲ ಕುಮಿಳ) ಹಣ್ಣು, ಸಂಗ್ರಾಹಕ-ವಾತಹರ-ದೀಪನಕರ ಮತ್ತು ವೃಷ್ಯ ಗುಣವುಳ್ಳವುಗಳೊಳಗೆ ಓರೆಲೆಬೇರು, ವೃಷ್ಯ ಮತ್ತು ಸರ್ವ(ತ್ರಿ)ದೋಷಹರಗುಣವುಳ್ಳವುಗಳೊಳಗೆ ಮೂವೆಲೆ ಬೇರು, ಸಂಗ್ರಾಹಕ-ಬಲಕರ ಮತ್ತು ವಾತಹರಗುಣವುಳ್ಳವುಗಳೊಳಗ ಕಲ್ಲಂಗಡಲೆ (ಕಡೀರು) ಬೇರು, ಮೂತ್ರಕೃಚ್ಛ್ರವನ್ನೂ ವಾಯುವನ್ನೂ ಪರಿಹರಿಸುವಂಥವುಗಳೊಳಗೆ ನೆಗ್ಗಿಲಮುಳ್ಳು, ಛೇದನ, ದೀಪನ, ಭೇದನ, ಅನುಲೋಮಕ ಮತ್ತು ವಾತಕಫ ಪ್ರಶಮನ ಗುಣವುಳ್ಳವುಗಳೊಳಗೆ ಹಿಂಗು, ಭೇದನ-ದೀಪನ-ಅನುಲೋಮಕ ಮತ್ತು ವಾತಕಫ ಪ್ರಶಮನಗುಣವುಳ್ಳವುಗಳೊಳಗೆ ಅಮ್ಲವೇತಸ (ಸುಕ್ಕೆಸೊಪ್ಪು?) ಎಂಬ ಹುಳಿದ್ರವ್ಯ, ಸ್ರಂಸನ-ಪಾಚನ ಮತ್ತು ಮೂಲವ್ಯಾಧಿನಾಶನ ಗುಣವುಳ್ಳವುಗಳೊಳಗೆ ಯವಕ್ಷಾರ, ಗ್ರಹಣೀದೋಷ, ಅರ್ಶಸ್ಸು ಮತ್ತು ಘೃತಪಾನದ ಆಪತ್ತು, ಇವುಗಳನ್ನು ಶಮನಮಾಡುವಂಥವುಗಳೊಳಗೆ ಮಜ್ಜಿಗೆಯ ಅಭ್ಯಾಸ, ಗ್ರಹಣೀದೋಷ. ಶೋಷ ಮತ್ತು ಅರ್ಶಸ್ಸುಗಳನ್ನು ನಾಶಮಾಡತಕ್ಕಂಥವುಗಳೊಳಗೆ ಮಾಂಸಾಶೀ ವರ್ಗದ ಪ್ರಾಣಿಗಳ ಮಾಂಸದ ಅಭ್ಯಾಸ, ರಸಾಯನಗುಣವುಳ್ಳವುಗಳೊಳಗೆ ತುಪ್ಪ-ಹಾಲುಗಳ ಅಭ್ಯಾಸ, ವೃಷ್ಯಗುಣವೂ ಉದಾವರ್ತರೋಗಹರ ಗುಣವೂ ಉಳ್ಳಂಥವುಗಳೊಳಗೆ ತುಪ್ಪವನ್ನೂ ಸಕ್ತುವನ್ನೂ (ಅರಳು ಭತ್ತದ ಅಕ್ಕಿಯ ಹುರಿದ ಹಿಟ್ಟು) ಸಮವಾಗಿ ಕೂಡಿಸಿ ಸೇವಿಸುವ ಅಭ್ಯಾಸ, ಹಲ್ಲುಗಳಿಗೆ ಬಲವನ್ನೂ ರುಚಿಯನ್ನೂ ಕೊಡತಕ್ಕಂಥವುಗಳೊಳಗೆ ಎಳ್ಳೆಣ್ಣೆಯ ಗಂಡೂಷದ ಅಭ್ಯಾಸ, ಉರಿಯನ್ನು ನೊಂದಿಸುವಂಥವುಗಳೊಳಗೆ ಶ್ರೀಗಂಧ ಮತ್ತು ಅತ್ತಿ, ಶೀತವನ್ನು ತೆಗೆದುಬಿಡುವ ಲೇಪ

ಗಳೊಳಗೆ ರಾಸ್ನೆ (ಅರತೆ) ಮತ್ತು ಅಗಿಲುಗಂಧ, ಉರಿಯನ್ನೂ, ಚರ್ಮದೋಷವನ್ನೂ, ಜ್ವರನ್ನೂ ಪರಿಹರಿಸುವ ಲೇಪಗಳೊಳಗೆ ಲಾಮಂಚ ಮತ್ತು ಮುಡಿವಾಳ, ವಾತಹರವಾಗಿ ಅಭ್ಯಂಗನಕ್ಕೂ ಉಪನಾಹಕ್ಕೂ ಉಪಯೋಗವುಳ್ಳವುಗಳೊಳಗೆ ಚಂಗಲಕೋಷ್ಠ, ಕಣ್ಣಿಗೆ ಹಿತ, ವೃಷ್ಯ, ತಲೆಕೂದಲಿಗೆ ಹಿತ, ಕಂಠಕ್ಕೆ ಹಿತ, ವರ್ಣಕ್ಕೆ ಹಿತ, ಬಲಕಾರಿ, ನಿರ್ಮಲ ಮಾಡುವ ರೋಪಣ, ಈ ಗುಣವುಳ್ಳವುಗಳೊಳಗೆ ಜ್ಯೇಷ್ಠಮಧು, ಪ್ರಾಣ(ಶ್ವಾಸ)ಕ್ಕೂ ಎಚ್ಚರಕ್ಕೂ ಪ್ರಧಾನ ಹೇತುಗಳೊಳಗೆ ವಾಯು, ಆಮ-ಸ್ತಂಭ(ತಡೆ)-ಶೀತ-ಶೂಲೆ-ನಡುಕು(ಅಥವಾ ಸಿಡಿತ)ಗಳನ್ನು ಪ್ರಶಮನಮಾಡತಕ್ಕಂಥವುಗಳೊಳಗೆ ಬೆಂಕಿ, ಸ್ತಂಭನ (ತಡಿಸುವ) ಗುಣವುಳ್ಳವುಗಳೊಳಗೆ ನೀರು, ಅತಿಯಾದ ಬಾಯಾರಿಕೆಯನ್ನು ಪ್ರಶಮನಮಾಡುವಂಥವುಗಳೊಳಗೆ ಸುಟ್ಟ ಮಣ್ಣಿನ ಹೆಂಟೆಯನ್ನು ಅದ್ದಿ ಹಸಿಸಿದ ನೀರು, ಆಮದ ವಿಶೇಷವಾದ ದೋಷಕ್ಕೆ ಹೇತುವಾದಂಥವುಗಳೊಳಗೆ ಅತಿಪ್ರಮಾಣದ ಊಟ, ಅಗ್ನಿಯನ್ನು ಚುರುಕಾಗಿಡುವಂಥವುಗಳೊಳಗೆ ಅಗ್ನಿಬಲಕ್ಕೆ ತಕ್ಕಷ್ಟೇ ಉಣ್ಣುವದು, ಸೇವಿಸಬೇಕಾದವುಗಳೊಳಗೆ ತನ್ನ ಆರೋಗ್ಯಕ್ಕ ಹಿತವಾಗಿ ಕಂಡಷ್ಟು ಅಂಗಚೇಷ್ಟೆಗಳನ್ನೂ ಆಹಾರವನ್ನೂ ಭೋಗಿಸುವದು, ಆರೋಗ್ಯಕರವಾದಂಥವುಗಳೊಳಗೆ ಸಕಾಲ ಭೋಜನ, ಆರೋಗ್ಯವನ್ನು ಕೆಡಿಸುವಂಥವುಗಳೊಳಗೆ (ಮೂತ್ರಾದಿಗಳ) ವೇಗವನ್ನು ತಡೆಯುವದು, ಆಹಾರದ ಗುಣಗಳೊಳಗೆ ತೃಪ್ತಿ, ಉಲ್ಲಾಸವನ್ನುಂಟುಮಾಡುವಂಥವುಗಳೊಳಗೆ ಮದ್ಯ, ಬುದ್ಧಿಯನ್ನೂ, ಧೃತಿ(ದೃಢತ್ವ)ಯನ್ನೂ, ನನಪನ್ನೂ ಅಪಹರಿಸುವಂಥವುಗಳೊಳಗೆ ಮದ್ಯದ ದುರುಪಯೋಗ, ಪಚನಕ್ಕೆ ಕಷ್ಟವಾದವುಗಳೊಳಗೆ ಗುರುಭೋಜನ, ಸುಖಪರಿಣಾಮವನ್ನುಂಟುಮಾಡುವಂಥವುಗಳೊಳಗೆ (ದಿನದಲ್ಲಿ) ಒಂದೇ ಊಟದ ನಿಯಮ, ಕ್ಷಯರೋಗವನ್ನುಂಟುಮಾಡುವಂಥವುಗಳೊಳಗೆ ಸ್ತ್ರೀಯರಲ್ಲಿ ಅತಿಯಾದ ಸಂಗ, ಷಂಡತನವನ್ನು (ನಪುಂಸಕತ್ವವನ್ನು) ಉಂಟುಮಾಡುವಂಥವುಗಳೊಗೆ ಶುಕ್ರವೇಗದ ನಿಗ್ರಹ, ಅಶ್ರದ್ಧೆಯನ್ನು ಹುಟ್ಟಿಸುವಂಥವುಗಳೊಳಗೆ ಪರಮನಯ ಅನ್ನ, ಆಯುಸ್ಸನ್ನು ಕಡಿಮೆ ಮಾಡುವಂಥವುಗಳೊಳಗೆ ಉಣ್ಣದಿರುವಿಕ, ಕೃಶತೆಯನ್ನುಂಟುಮಾಡುವಂಥವು(ಕರ್ಷಣೀಯ)ಗಳೊಳಗೆ ಬಹಳ ಮಿತವಾದ (ಕಡಿಮೆಯಾದ) ಅಶನ, ಗ್ರಹಣಿಯನ್ನು ಕೆಡಿಸುವಂಥವುಗಳೊಳಗೆ ಅಜೀರ್ತಿಕರವಾದ ಮತ್ತು ಉಂಡದ್ದು ಜೀರ್ಣವಾಗದಿರುವಾಗ ಮಾಡಿದ ಅಶನ, ಅಗ್ನಿಯ ವಿಷಮತ್ವವನ್ನುಂಟುಮಾಡುವಂಥವುಗಳೊಳಗೆ ವಿಷಮವಾದ ಅಶನ (1ನೇ ಭಾಗವ X—26 ನೋಡಿ), (ಕುಷ್ಠಾದಿ) ನಿಂದಿತ ವ್ಯಾಧಿಗಳನ್ನುಂಟುಮಾಡುವಂಥವುಗಳೊಳಗೆ ವಿರುದ್ಧ ವೀರ್ಯವುಳ್ಳವುಗಳ ಅಶನ, ಪಥ್ಯಗಳೊಳಗೆ ವಿಶೇಷವಾದ ಶಾಂತತೆ, ಸರ್ವ ಅಪಥ್ಯಗಳೊಳಗೆ ಆಯಾಸ, ವ್ಯಾಧಿಮೂಲಗಳೊಳಗೆ (ಆಹಾರ ವಿಹಾರಗಳ) ಮಿಥ್ಯಾಯೋಗ (ಅತಿಯಾಗಿ, ಕಡಿಮೆಯಾಗಿ ಅಥವಾ ವಿಷಮವಾಗಿ ಉಪಯೋಗಿಸುವಿಕೆ), ಅಲಕ್ಷ್ಮೀ(ದಾರಿದ್ರ್ಯ)ಕರವಾದವುಗಳೊಳಗೆ ರಜಸ್ವಲೆಯ ಸಂಗ, ಆಯುರ್ವೃದ್ಧಿಕರವಾದವುಗಳೊಳಗೆ ಬ್ರಹ್ಮಚರ್ಯ, ವೃಷ್ಯಗಳೊಳಗೆ ಮನಃಸಂಕಲ್ಪ, ವೃಷ್ಯವಲ್ಲದವುಗಳೊಳಗೆ ಮನಸ್ಸು ಕೆಡುವಿಕೆ, ಪ್ರಾಣವನ್ನು ತಡೆಯುವಂಥವುಗಳೊಳಗೆ (ಹ್ರಸ್ವಶ್ವಾಸವನ್ನು ಉಂಟುಮಾಡುವಂಥವುಗಳೊಳಗೆ) ಬಲಕ್ಕೆ ಮೀರಿದ ಪ್ರಾರಂಭ, ರೋಗವೃದ್ಧಿಕರವಾದವುಗಳೊಳಗೆ ವ್ಯಸನ, ಶ್ರಮಪರಿಹರಿಸುವಂಥವುಗಳೊಳಗೆ ಸ್ನಾನ, ಸಂತೋಷಪಡಿಸುವಂಥವುಗಳೊಳಗೆ ಹರ್ಷ, (ದೇಹವನ್ನು) ಒಣಗಿಸುವಂಥವುಗಳೊಳಗೆ ಶೋಕ, ಪುಷ್ಟಿಕರವಾದವುಗಳೊಳಗೆ ಸುಖ,

ತಂದ್ರೆ(ಜಾಡ್ಯ)ಕರವಾದವುಗಳೊಳಗೆ ಅತಿನಿದ್ರೆ, ಬಲಕರವಾದವುಗಳೊಳಗೆ (ಮಧುರಾದಿ) ಸರ್ವರಸಗಳ ಅಭ್ಯಾಸ, ದುರ್ಬಲತೆಯನ್ನುಂಟುಮಾಡುವಂಥವುಗಳೊಳಗೆ ಒಂದೇ ರಸದ ಅಭ್ಯಾಸ, ಮೃದುವಾದ ಔಷಧಕ್ಕೆ ಅರ್ಹರಾದವರೊಳಗೆ ಬಾಲಕ, ಯಾಪ್ಯ ಚಿಕಿತ್ಸೆಗೆ ಅರ್ಹರಾದವರೊಳಗೆ ಮುದುಕ, ತೀಕ್ಷ್ಣೌಷಧವನ್ನೂ ವ್ಯಾಯಾಮವನ್ನೂ ಬಿಟ್ಟಿರಬೇಕಾದವರೊಳಗೆ ಗರ್ಭಿಣೀ, ಗರ್ಭಧಾರಣಕರವಾದವುಗಳೊಳಗೆ ಒಳ್ಳೇ ಮನಸ್ಸು, ಚಿಕಿತ್ಸೆಗೆ ಕಷ್ಟವಾದವುಗಳೊಳಗೆ ಸನ್ನಿಪಾತ (ಮೂರು ದೋಷಗಳು ಸೇರಿರುವ ವ್ಯಾಧಿ), ಚಿಕಿತ್ಸೆಗೆ ವಿಷಮವಾದವುಗಳೊಳಗೆ ಆಮ, ರೋಗಗಳೊಳಗೆ ಜ್ವರ, ದೀರ್ಘರೋಗಗಳೊಳಗೆ ಕುಷ್ಠ, ರೋಗಗಳ ಸಮೂಹವುಳ್ಳವುಗಳೊಳಗೆ ರಾಜಯಕ್ಷ್ಮ, ಹಿಡಕೊಂಡಿರುವ ವ್ಯಾಧಿಗಳೊಳಗೆ ಪ್ರಮೇಹ, ಶಸ್ತ್ರಕ್ಕೆ ಸಮಾನವಾದವುಗಳೊಳಗೆ ಜಿಗಳೆಗಳು, ತಂತ್ರ (ಕರ್ಮ) ಗಳೊಳಗೆ ವಸ್ತಿ, ಔಷಧಭೂಮಿಗಳೊಳಗೆ ಹಿಮಾಚಲ, ಆರೋಗ್ಯದ ದೇಶಗಳೊಳಗೆ ಮರುಭೂಮಿ (ತಣಸು ಇಲ್ಲದ ಗುಡ್ಡಸ್ಥಳ), ಅಹಿತವಾದ ದೇಶ (ಸ್ಥಳ) ಗಳೊಳಗೆ ಅನೂಪ (ನೀರು ಹೆಚ್ಚಾದ ಕೆಸರು ಸ್ಥಳ), ರೋಗಿಯ ಗುಣಗಳೊಳಗೆ ಹೇಳಿದಂತೆ ಮಾಡುವಂಥಾದ್ದು, ಚಿಕಿತ್ಸೆಯ ಅಂಗಗಳೊಳಗೆ ವೈದ್ಯ, ವರ್ಜಿಸಲ್ಪಡತಕ್ಕವರೊಳಗೆ ನಾಸ್ತಿಕ, ಸಂಕಷ್ಟಕರವಾದವುಗಳೊಳಗೆ ಚಂಚಲಬುದ್ಧಿ, ಅನಿಷ್ಟಗಳೊಳಗೆ ಹೇಳಿದ ಹಾಗೆ (ರೋಗಿ) ಮಾಡದಿರುವದು, ಸಂಕಷ್ಟದಲ್ಲಿರುವವನ ಲಕ್ಷಣಗಳೊಳಗೆ ನಿರಾಶೆಯಾಗದಿರುವಿಕೆ (ವೈರಾಗ್ಯಕ್ಕೊಳಗಾಗದಿರುವಿಕೆ, ಅನಿರ್ವೇದ), ವೈದ್ಯನ ಗುಣಗಳೊಳಗೆ ಯೋಗ (ಯುಕ್ತಿ), ಔಷಧಗಳೊಳಗೆ (ಅವುಗಳ) ವಿಶೇಷ ಜ್ಞಾನ (ವಿಜ್ಞಾನ), ಸಾಧನಗಳೊಳಗೆ ಶಾಸ್ತ್ರಸಹಿತವಾದ ತರ್ಕ (ವಿಚಾರ), (ಋತ್ವಾದಿ) ಕಾಲಜ್ಞಾನದ ಪ್ರಯೋಜನಗಳೊಳಗೆ ಅದಕ್ಕ ತಕ್ಕ ಹಾಗೆ ನಡಕೊಳ್ಳುವದು, ಅನುಷ್ಠಾನಕಾಲವನ್ನು ಅತಿಕ್ರಮಿಸುವ ಹೇತುಗಳೊಳಗೆ ಉದ್ಯೋಗವಿಲ್ಲದಿರುವಿಕೆ, ಸಂಶಯಪರಿಹಾರಕರವಾದವುಗಳೊಳಗೆ ಸ್ವಾನುಭವ (ಚಿಕಿತ್ಸೆಮಾಡಿ ಸಂಪಾದಿಸಿದ ಅನುಭವ), ಭಯವನ್ನುಂಟುಮಾಡುವಂಥವುಗಳೊಳಗೆ (ತನಗೆ) ಸಾಮರ್ಥ್ಯವಿಲ್ಲದಿರುವಿಕೆ, ಬುದ್ಧಿಯನ್ನು ವೃದ್ಧಿಮಾಡತಕ್ಕಂಥವುಗಳೊಳಗೆ ಆಯಾ ವಿದ್ಯೆಯ ಕುರಿತಾದ ಸಂಭಾಷಣೆ, ಶಾಸ್ತ್ರ ತಿಳಿಯುವ ಹೇತುಗಳೊಳಗೆ ಆಚಾರ್ಯ (ಗುರು), ಅಮೃತ (ಜೀವವನ್ನು ಕಾಪಾಡುವಂಥವು) ಗಳೊಳಗೆ ಆಯುರ್ವೇದ, ಅನುಷ್ಠಾನಕ್ಕೆ ತರಬೇಕಾದವುಗಳೊಳಗೆ ಸದ್ವಚನ, ಸರ್ವವಿಧದಿಂದಲೂ ಅಹಿತವಾದವುಗಳೊಳಗೆ ಅಸಂಬದ್ಧ ಮಾತುಗಳನ್ನು ಸಂಗ್ರಹಿಸು(ಹಿಡಕೊಳ್ಳು)ವಿಕೆ ಮತ್ತು ಸುಖಗಳೊಳಗೆ ಸರ್ವಸನ್ಯಾಸ (ಸಕಾಮಕರ್ಮಗಳನ್ನು ಪೂರ್ಣವಾಗಿ ಬಿಡುವದು), ಶ್ರೇಷ್ಠವಾಗಿರುತ್ತದೆ. (ಚ. 134 — 138.)

28. ಔಷಧಗಳ ರಸ-ವಿಪಾಕ-ಗುಣ-ಕರ್ಮಾದಿ ವರ್ಣನವನ್ನು ಸಂಗ್ರಹಿಸುವದಕ್ಕಾಗಿಯೇ ರಚಿತವಾದ ಧನ್ವಂತರಿನಿಘಂಟು, ರಾಜನಿಘಂಟು, ಮದನಪಾಲನಿಘಂಟು ಮುಂತಾದ ಆದರಣೀಯವಾದ ಪುರಾತನ ಗ್ರಂಥಗಳಿವೆ. ಅವುಗಳೊಳಗೆ ಕೆಲವು ಪ್ರತಿದ್ರವ್ಯಕ್ಕೆ ಇರುವ ಬೇರೆಬೇರೆ ಹೆಸರು(ಪರ್ಯಾಯಪದ)ಗಳನ್ನು ನಿಃಶೇಷವಾಗಿ ಎಂಬಂತೆ ಸವಿಸ್ತಾರವಾಗಿ ಕೊಟ್ಟಿರುತ್ತವೆ. ಆ ಹೆಸರುಗಳೊಳಗೆ ಅನೇಕಪದಗಳು ಗುಣನಾಮಗಳಾದ್ದರಿಂದ ಅಂಥವುಗಳಿಂದ ಆಯಾ ವಸ್ತುವಿನ ಸ್ವಾಭಾವಿಕ ರೂಪ ಮತ್ತು ಎಲೆ, ಹೂವು, ಬೇರು ಮುಂತಾದವುಗಳ ವಿಶೇಷ ಲಕ್ಷಣಗಳು ಕೆಲಮಟ್ಟಿಗೆ ಗೊತ್ತಾಗುತ್ತವೆ. ಆ ನಿಘಂಟುಗಳು ಮುಂತಾದ ಆಧಾರದಿಂದಲೂ, ತನ್ನ

ಔಷಧಗಳ ಪರಿಚಿತಿ

ವಿಶಾಲವಾದ ಅನುಭವದಿಂದಲೂ ಸುಮಾರು ಎಂಟು ಶತಮಾನಕ್ಕೆ ಹಿಂದೆ ಸುಪ್ರಸಿದ್ಧ ವೈದ್ಯನಾಗಿದ್ದ ಭಾವಮಿತ್ರ ಎಂಬ ಮಹಾಪುರುಷನು ತಾನು ರಚಿಸಿದ ಭಾವಪ್ರಕಾಶ ಎಂಬ ಗ್ರಂಥದಲ್ಲಿ ಆಯುರ್ವೇದೀಯ ಚಿಕಿತ್ಸಕರಿಗೆ ಅಗತ್ಯವಾಗಬಹುದಾದ ನಾನಾ ವಿಧದ ಬಹು ದ್ರವ್ಯಗಳ ಗುಣಪಾರವನ್ನು ಸಮರ್ಪಕವಾಗಿ ಕೊಟ್ಟಿರುತ್ತಾನೆ. ಅದರಲ್ಲಿ ಕಾಣುವ ವಸ್ತುಗಳ ಪ್ರಧಾನ ಹೆಸರುಗಳನ್ನು ಅವುಗಳಿಂದ ಪರಿಹಾರವಾಗತಕ್ಕ ರೋಗವಿಭಾಗ ಪ್ರಕಾರ ವಿಂಗಡಿಸಿ, ಅವಧಾನಸರಸ್ವತೀ ಎಂಬ ಮಹಾ ಪಂಡಿತನಿಂದ ರಚಿತವಾದ ಶತಶ್ಲೋಕಿಯಲ್ಲಿ ಕಾಣುವ ಔಷಧನಾಮಗಳೊಂದಿಗೆ ಮಿಲಿತ ಮಾಡಿ, ಆಯಾ ರೋಗ ಪ್ರಕರಣದ ಕೊನೆಯಲ್ಲಿ ಅಕಾರಾದಿ ಅನುಕ್ರಮದಿಂದ ಕೊಡುತ್ತದೆ ಎಂತ ಹಿಂದೆ (26ನೆಯ ಸಂಖ್ಯೆಯಲ್ಲಿ) ಹೇಳಲಾಗಿದೆಯಷ್ಟೆ.

ಗೋಪಾಲಾಸ್ತಾಪಸಾ ವ್ಯಾಧಾ ಯೇ ಚಾನ್ಯೇ ವನಚಾರಿಣಃ ।
ಮೂಲಾಹಾರಾಶ್ಚ ಯೇ ತೇಭ್ಯೋ ಭೇಷಜವ್ಯಕ್ತಿರಿಷ್ಯತೇ ॥ (ಸು. 137-8.)

ಗೋವಳರು, ತಪಸ್ವಿಗಳು, ಬೇಡರು, ಮತ್ತು ಬೇರೆ ಕಾಡುಸಂಚಾರ ಮಾಡುತ್ತಿರುವವರು, ಬೇರು-ಗಡ್ಡೆಗಳನ್ನೇ ಆಹಾರವಾಗಿ ಉಪಯೋಗಿಸುವಂಥವರು, ಇವರಿಂದ ಔಷಧದ್ರವ್ಯಗಳ ಗುರುತು ಸಿಕ್ಕುತ್ತದೆ.

ಇಂಥಾ ವಸ್ತು ಹೆಚ್ಚಾಗಿ ಇಂಥಾ ಪ್ರಯೋಜನಕ್ಕೆ ಉಪಯೋಗಿಸಲ್ಪಡುತ್ತದೆ ಮತ್ತು ಅದರ ವಾಡಿಕೆಯ ಹೆಸರು ಇಂಥಾದ್ದೆಂಬದನ್ನುಗೋವಳರು ಮುಂತಾದವರಿಂದ ತಿಳಿಯಬಹುದು. ಮತ್ತು ಆ ದ್ರವ್ಯದ ಗುರುತಿಗೆ ಬೇಕಾದ ಆಕಾರ, ರುಚಿ ಮುಂತಾದ ಕೆಲವು ಲಕ್ಷಣಗಳನ್ನು ಸ್ವತಃ ಪರೀಕ್ಷಿಸಿ ಅರಿಯಬಹುದು. ಆದರೆ ಇಷ್ಟರ ಮಟ್ಟಿನ ಜ್ಞಾನ ವೈದ್ಯನಿಗೆ ಸಾಲದು.

ಔಷಧೀರ್ನಾಮರೂಪಾಭ್ಯಾಂ ಜಾನತೇ ಹ್ಯಜಪಾ ವನೇ ।
ಅವಿಪಾಶ್ಚೈವ ಗೋಪಾಶ್ಚ ಯೇ ಚಾನ್ಯೇ ವನವಾಸಿನಃ ।
ನ ನಾಮಜ್ಞಾನಮಾತ್ರೇಣ ರೂಪಜ್ಞಾನೇನ ವಾ ಪುನಃ ।
ಔಷಧೀನಾಂ ಪರಾಂ ಪ್ರಾಪ್ತಿಂ ಕಶ್ಚಿದ್ವೇದಿತುಮರ್ಹತಿ ॥
ಯೋಗಜ್ಞಸ್ತಸ್ಯ (?ವಿನ್ನಾಮ) ರೂಪಜ್ಞಸ್ತಾಸಾಂ ತತ್ತ್ವವಿದುಚ್ಯತೇ ।
ಕಿಂ ಪುನರ್ಯೋ ವಿಜಾನೀಯಾದೋಷಧೀಃ ಸರ್ವಥಾ ಭಿಷಕ್ ॥ (ಚ. 10.)

ಔಷಧಿಗಳನ್ನು ಹಸರಿನಿಂದಲೂ, ರೂಪಗಳಿಂದಲೂ, ಕಾಡಿನಲ್ಲಿ ಆಡು, ಕುರಿ, ಗೋವುಗಳನ್ನು ಸಾಕುವವರು, ಮತ್ತು ಬೇರೆ ವನವಾಸಿಗಳು ಯಾರು ಇದ್ದಾರೋ ಅವರು ತಿಳಿದಿರುತ್ತಾರೆ. ಆದರ (ಹಾಗೆ) ಹೆಸರುಗಳನ್ನಾಗಲೀ ರೂಪಗಳನ್ನಾಗಲೀ ತಿಳಿದ ಮಾತ್ರದಿಂದ ಅವುಗಳ ಉತ್ಕೃಷ್ಟವಾದ (ಯೋಗ)ಪ್ರಯೋಜನವನ್ನು ಗೊತ್ತುಮಾಡುವದಕ್ಕೆ ಯಾವನಾದರೊಬ್ಬ (ಅಪರೂಪವಾಗಿ) ಶಕ್ತನಾಗಬಹುದು. (ಸಾಧಾರಣವಾಗಿ ಹಾಗೆ ದ್ರವ್ಯಗಳ ಯೋಗವನ್ನು ತಿಳಿಯುವದು ಅಸಾಧ್ಯ ) ಅವುಗಳ ಹೆಸರು ಮತ್ತು ರೂಪಗಳೊಂದಿಗೆ ಯೋಗವನ್ನು ತಿಳಿದವನು ಅವುಗಳ ತತ್ತ್ವ ತಿಳಿದವ ಎನ್ನುತ್ತಾರೆ. ಹಾಗಿರುತ್ತಾ, ಔಷಧಿಗಳನ್ನು (ಗುಣಕರ್ಮಾದಿ ಯೋಗಕ್ಕೆ ಅವಶ್ಯವಾದ) ಸರ್ವ ವಿಧದಿಂದಲೂ ಯಾವ ವೈದ್ಯನು ತಿಳಿಯುವನೋ ಅವನಿಗೆ ಏನು ಹೇಳುವದು? (ಅದು ವೈದ್ಯನಿಗಿರಬೇಕಾದ ಶ್ರೇಷ್ಠ ಗುಣಗಳೊಳಗೊಂದಾಗಿರುತ್ತದೆ.)

ಮೇಲಿನ ವಚನಗಳಲ್ಲಿ ನಿರ್ದೇಶಿಸಲ್ಪಟ್ಟ ವರ್ಗದವರಲ್ಲದ ಗ್ರಾಮವಾಸಿಗಳಲ್ಲಿಯೂ, ಅನೇಕ ಪ್ರಸಿದ್ಧ ವೈದ್ಯರು ಉಪಯೋಗಿಸಿದ ಆಧಾರದ ಮೇಲೆ, ಅನೇಕ ಔಷಧವಸ್ತುಗಳ ಹೆಸರನ್ನೂ, ಕೆಲವು ಉಪಯೋಗಗಳನ್ನೂ ಹೇಳಿ ಆ ವಸ್ತುಗಳನ್ನು ತೋರಿಸಿಕೊಡುವ ಶಕ್ತಿಯುಳ್ಳ ಹಳೇ ಜನರು ಈಗಲೂ ಇರುತ್ತಾರೆ. ಆದರೆ ಇವರೆಲ್ಲರು ಹೇಳುವ ಹೆಸರುಗಳು ಯಾವದಾದರೊಂದು ದೇಶಭಾಷೆಯವು ಅಲ್ಲದೆ ಸಂಸ್ಕೃತ ಹೆಸರನ್ನು ಅವರು ಅರಿಯರು. ಆದ್ದರಿಂದ ಸಂಸ್ಕೃತಭಾಷೆಯಲ್ಲಿರುವ ಮೇಲೆ ಪ್ರಸ್ತಾಪಿಸಿದ ನಿಘಂಟುಗಳಲ್ಲಿ ಆ ವಸ್ತುಗಳ ಗುಣಕರ್ಮಗಳನ್ನು ಹೇಗೆ ವರ್ಣಿಸಿದ್ದಾರೆಂಬದನ್ನು ತಿಳಿಯಲಿಕ್ಕಾಗುವದಿಲ್ಲ. ಚರಕನು ಹೇಳಿದಂತೆ ವಸ್ತುಗಳನ್ನು ಸರ್ವಥಾ ತಿಳಿಯದೆ, ಶಾಸ್ತ್ರಜ್ಞರಲ್ಲದವರು ಹೇಳುವ ಅನುಭವದ ಮೇಲೆ, ಅವುಗಳನ್ನು ಯೋಗಗಳಲ್ಲಿ ಕೂಡಿಸಿದರೆ ಅಪಾಯ ಸಂಭವಿಸಬಹುದು; ಹಾಗೆ ಮಾಡುವದು ಶಾಸ್ತ್ರಸಮ್ಮತವಲ್ಲ. ಔಷಧಗಳ ನಾನಾ ಭಾಷೆಯ ಹೆಸರುಗಳನ್ನು ಒರೆದ ಬೃಹನ್ನಿಘಂಟು, ಸಹಸ್ರಾರ್ಧವೃಕ್ಷಾದಿಗಳ ವರ್ಣನೆ (ಕನ್ನಡ), ನಾಡಕರ್ಣಿಗಳಿಂದ ರಚಿಸಲ್ಪಟ್ಟ ಭಾರತೀಯ ಔಷಧನಿಘಂಟು (ಇಂಗ್ಲಿಷು), ಮುಂತಾದ ಅನೇಕ ಪುಸ್ತಕಗಳು ಇತ್ತಲಾಗೆ ಉಂಟಾಗಿವೆ ಇವುಗಳೊಳಗೆ ಯಾವದೇ ಆದರೂ ಆಧರಣೀಯ ಎನ್ನುವ ಹಾಗೆ ಇಲ್ಲವಾದರೂ, ಅವುಗಳೆಲ್ಲದರಿಂದಲೂ ರೂಢಿಯಾಗಿ ಉಪಯೋಗದಲ್ಲಿರುವ ಬಳ್ಳಿ, ಗಿಡ, ವೃಕ್ಷಾದಿ ಔಷಧವಸ್ತುಗಳಿಗೆ ಸಂಸ್ಕೃತದಲ್ಲಿ ಏನು ಹೆಸರುಗಳಿವೆ ಎಂಬದನ್ನು ಗೊತ್ತುಮಾಡುವದಕ್ಕೆ ಕೆಲಮಟ್ಟಿಗೆ ಸಹಾಯ ಸಿಗುತ್ತದೆ. ಆ ಸಂಸ್ಕೃತ ಹೆಸರುಗಳುಳ್ಳ ವಸ್ತುಗಳು ಆಧರಣೀಯವಾದ ಔಷಧನಿಘಂಟುಗಳಲ್ಲಿ ವರ್ಣಿಸಲ್ಪಟ್ಟವೋ, ಹಾಗೆ ಇದ್ದರ, ಅಲ್ಲಿ ಕಾಣುವ ಅವುಗಳ ವರ್ಣನವು ಅವುಗಳ ಪ್ರತ್ಯಕ್ಷ ಲಕ್ಷಣಗಳಿಗೆ ಒಪ್ಪುತ್ತದೋ, ಎಂಬದನ್ನು ಪರೀಕ್ಷಿಸಿ ನೋಡುವದರಿಂದ, ಔಷಧೋಪಯೋಗಕ್ಕೆ ಬೇಕಾದ ವಸ್ತುಗಳ ಪೂರ್ಣಜ್ಞಾನವು ಕಲ ಮಟ್ಟಿಗಾದರೂ ಲಭ್ಯವಾಗಬಹುದು.

ಪುರಾತನವಾದ ಆಯುರ್ವೇದೀಯ ಗ್ರಂಥಗಳಲ್ಲಿಯೂ, ನಿಘಂಟುಗಳಲ್ಲಿಯೂ ತೋರುವ ಔಷಧದ್ರವ್ಯಗಳೊಳಗೆ ಪ್ರತ್ಯಕ್ಷತಃ ಪರೀಕ್ಷಿಸಿ ಪರಿಚಿತಿ ಮಾಡಿಕೊಳ್ಳುವದಕ್ಕೆ ಶಕ್ಯವಲ್ಲದ ಅನೇಕ ಪದಾರ್ಥಗಳಿವೆ ಅಷ್ಟವರ್ಗ ಎಂಬ ಹೆಸರಿನ ಎಂಟು ದ್ರವ್ಯಗಳು ದೊರೆಯದರಿಂದ ಅವುಗಳಿಗೆ ಪ್ರತಿನಿಧಿಯಾಗಿ ಬೇರೆ ಔಷಧಗಳನ್ನು ಉಪಯೋಗಿಸುವ ವಾಡಿಕೆಯು ನಾಲ್ಕಾರು ವರ್ಷಗಳಿಂದ ಉಂಟೆಂತ ಕಾಣುತ್ತದೆ ಭಾವಮಿತ್ರನಿಗೂ ಹಿಂದಿನ ಗ್ರಂಥಕರ್ತನಾದ ವಂಗಸೇನನ ಕಾಲದಲ್ಲಿ ಸಹ ಅನೇಕ ವಸ್ತುಗಳನ್ನು ಕುರಿತು, ಅವುಗಳು ಸಿಕ್ಕದಿದ್ದಾಗ, ಅವುಗಳ ಪ್ರತಿನಿಧಿಯಾಗಿ ಇಂಥಿಂಥವುಗಳನ್ನು ಉಪಯೋಗಿಸಬೇಕಂತ ಉಪದೇಶಿಸುವದು ಅಗತ್ಯ ಕಂಡು, ಅದಕ್ಕಾಗಿಯೇ "ಪ್ರತಿನಿಧಿದ್ರವ್ಯಾಧಿಕಾರ" ಎಂಬ ಶಿರೋನಾಮದ ಒಂದು ಪ್ರತ್ಯೇಕ ಪ್ರಕರಣವು ಅವನಿಂದ ರಚಿಸಲ್ಪಟ್ಟ 'ಚಿಕಿತ್ಸಾಸಾರಸಂಗ್ರಹ' ಎಂಬ ಗ್ರಂಥದಲ್ಲಿ ಸೇರಿಸಲ್ಪಟ್ಟಿದ್ದು ಕಾಣುತ್ತದೆ.

ಅದಲ್ಲದೆ ನಮ್ಮ ಪುರಾತನ ವೈದ್ಯಗ್ರಂಥಗಳಲ್ಲಿ ಕಾಣುವ ಕೆಲವು ಔಷಧನಾಮಗಳು ಯಾವ ವಸ್ತುಗಳನ್ನು ನಿರ್ದೇಶಿಸುತ್ತವ ಎಂಬದನ್ನು ನಿಸ್ಸಂದೇಹವಾಗಿ ಹೇಳುವದು ಪ್ರಯಾಸದ ಸಂಗತಿಯಾಗಿದೆ. ಒಂದೇ ಹೆಸರಿನ ಸ್ಥಾನದಲ್ಲಿ ಬೇರೆ ಬೇರೆ ದೇಶವಿಭಾಗಗಳಲ್ಲಿ ಬೇರೆ ಬೇರೆ ವಸ್ತುವನ್ನು ಉಪಯೋಗಿಸುವ ರೂಢಿ ಇರುತ್ತದೆಂತ ಕಾಣುತ್ತದೆ. ದೃಷ್ಟಾಂತಕ್ಕೆ:

ಕಾಸೀಸ ಎಂಬದು ಹಿರಾಕಾಸು (ಅನ್ನಭೇದಿ) ಎಂತ ಉತ್ತರದೇಶದವರು ತಿಳಿಯುತ್ತಾರೆ. ಅನ್ನಭೇದಿಯಲ್ಲಿ ಕಬ್ಬಿಣ ಉಂಟು ಮತ್ತು ಪಾಂಡುರೋಗದಲ್ಲಿ ರಕ್ತವೃದ್ಧಿಗಾಗಿ ಹೊಟ್ಟೆಗೆ ಕೊಡುವದಕ್ಕೆ ಅದು ಉತ್ತಮವಾದದ್ದು ಎಂಬದು ಎಲ್ಲರೂ ತಿಳಿದ ಸಂಗತಿ ಎನ್ನಬಹುದು. ಆದರೆ ಇದು ಪುರಾತನದ ಗ್ರಂಥಗಳಲ್ಲಿ ಕಾಸೀಸಕ್ಕೆ ಉಕ್ತವಾಗಿಲ್ಲ ಮಾತ್ರವಲ್ಲ, ಮೂಲವ್ಯಾಧಿಯ ಮೊಳೆಗಳನ್ನು ಉದುರಿಸುವದಕ್ಕೆ, ಕುಷ್ಠದ ವ್ರಣಗಳಿಗೆ, ಭಗಂದರ ಮುಂತಾದ ದುಷ್ಟ ವ್ರಣಗಳಿಗೆ, ಪ್ರಶಸ್ತವಾಗಿ ಬರೆಯಲ್ಪಟ್ಟ ತೀಕ್ಷ್ಣವಾದ ಹೊರಗಿನ ಲೇಪಗಳಲ್ಲಿ ಅದು ಸೇರಿಸಲ್ಪಟ್ಟದ್ದು ಕಾಣುತ್ತದೆ, ಮತ್ತು ಅದರ ಗುಣವರ್ಣನವು ಸೀಸದ ಗುಣಗಳಿಗೆ ಹೆಚ್ಚಾಗಿ ಒಪ್ಪುವಂಥಾದ್ದು. ಆದ್ದರಿಂದ ದಕ್ಷಿಣ ದೇಶದ ವೈದ್ಯರೊಳಗೆ ಕೆಲವರು ಕಾಸೀಸ ಎಂದರೆ ಬಿಳೇಸೀಸ ಎನ್ನುವದು ನಿರಾಧಾರವಾದದ್ದೆಂತ ವ್ಯವಸ್ಥೆ ಮಾಡುವದು ಕಷ್ಟವೇ ಸರಿ. ಹಿರಾಕಾಸನ್ನು ಹೊಟ್ಟೆಗೆ ಕೊಡುವ ಪದ್ಧತಿಯು ಅನ್ಯ ವೈದ್ಯಕ್ರಮದಿಂದ ಇತ್ತೀಚೆ ನಮ್ಮಲ್ಲಿ ಬಂದು ಸೇರಿದ್ದೆಂತ ಎಣಿಸುವದೇ ಸರಿಯಾದದ್ದಾಗಿ ಕಾಣುತ್ತದೆ 'ಬಲಾ' ಎಂಬ ಹೆಸರಿನ ಸ್ಥಾನದಲ್ಲಿ ಇಲ್ಲಿ ಉಪಯೋಗಿಸಲ್ಪಡುವ ಕಲ್ಲಂಗಡಲೆ (ಕಡೀರು) ಗಿಡ ಬಳ್ಳಾರಿ ಜಿಲ್ಲೆಯಲ್ಲಿ ಇಲ್ಲ, ಅಥವಾ ಬಹು ಅಪರೂಪ ಆಗಿರಬೇಕು ' ಅದರ ಬದಲಾಗಿ ಯಾವದೋ ಬೇರೊಂದು ಬೇರನ್ನು ಆ ಜಿಲ್ಲೆಯಲ್ಲಿ ಉಪಯೋಗಿಸುತ್ತಾರೆಂಬದು ಹರ್ಪನಹಳ್ಳಿಯ ಒಬ್ಬ ವೈದ್ಯರಿಂದ ತಿಳಿಯಿತು. ಆ ವೈದ್ಯರು ತಾನು ಉಪಯೋಗಿಸುವ ಬೇರೇ 'ಬಲಾ' ಎಂತಲೂ, ಅದನ್ನೇ 'ಬಲಾ' ಸ್ಥಾನದಲ್ಲಿ ಅನಾದಿಯಿಂದ ಆ ಕಡೆಯವರು ಉಪಯೋಗಿಸುತ್ತಿದ್ದಾರೆಂತಲೂ ಸಾಧಿಸಿದ್ದಲ್ಲದೆ, ನನ್ನ ಆಕ್ಷೇಪಣೆಯು ನಿರಾಧಾರವಾದದ್ದೆಂತಲೇ ತಿಳಕೊಂಡರು. ದಕ್ಷಿಣ ದೇಶದಲ್ಲಿ ತಯಾರಾಗುವ ಶತಾವರ್ತನದ ಕ್ಷೀರಬಲಾದಿ ತೈಲವು ಅನೇಕ ವ್ಯಾಧಿಗಳಿಗೆ, ವಿಶೇಷವಾಗಿ ಪಕ್ಷಾಘಾತಕ್ಕೆ, ಅತ್ಯಂತ ಉಪಯುಕ್ತವಾದದ್ದೆಂತ ಬಹಳ ಪ್ರಸಿದ್ಧಿ ಪಡೆದದೆ. ಅದಕ್ಕೆ ಎಳ್ಳೆಣ್ಣೆ ಮತ್ತು ಹಾಲುಗಳಲ್ಲದೆ ಔಷಧವಾಗಿ ಉಪಯೋಗಿಸಲ್ಪಡುವದು ಕಲ್ಲಂಗಡಲೆ ಬೇರು ಮಾತ್ರ. ಹೀಗಿರುತ್ತಾ, 'ಬಲಾ' ಎನ್ನುವದು ಕಲ್ಲಂಗಡಲೆ (ಇಲ್ಲಿಯ ಕಡೀರಿ) ಗೆ ಅಲ್ಲ ಎಂದರೆ ಈ ಪ್ರಾಂತದವರು ನಂಬ್ಯಾರೇ? ಈ ಜಿಲ್ಲೆಯಲ್ಲಿ ವಿಶೇಷವಾಗಿ ಬೆಳೆಯುವ 'ಸಹದೇವಿ'ಯು, ಅದರ ಗುಣಕರ್ಮಗಳಿಂದ ಬಲಾಚತುಷ್ಟಯದಲ್ಲಿ ಸೇರಿದ್ದಾಗಿ ಕಾಣುತ್ತದೆ. ಅದರಲ್ಲಿ ಕಲ್ಲಂಗಡಲೆಯ ಗುಣ ಬಹಳ ಮಟ್ಟಿಗೆ ಇರುವದಲ್ಲದೆ, ವಿಶೇಷವಾಗಿ ಜ್ವರಹರಗುಣ ಇರುತ್ತದೆ. ಅದರ ಸೂಪ್ಪು ಸ್ವರಸವಾಗಿ ಉಪಯೋಗಿಸುವದಕ್ಕೆ ಬಹಳ ಅನುಕೂಲವಾದದ್ದು. ಆದರೆ ನಮ್ಮ ಔಷಧನಿಘಂಟುಗಳು 'ಮಹಾಬಲಾ' ಎಂಬದೇ ಸಹದೇವಿ ಎಂತಲೂ, ಅದರ ಹೂವು ಅರಸಿನವರ್ಣದ್ದೆಂತಲೂ ಹೇಳುತ್ತವೆ. ಇಲ್ಲಿ ಉಪಯೋಗಿಸುವ ಸಹದೇವಿಯ ಹೂವು ಕಪ್ಪೊತ್ತಿದ ಬಿಳೇ, ಅಥವಾ ಬೂದಿ ವರ್ಣದ್ದಾಗಿರುತ್ತದೆ. ಅರಸಿನ ಹೂವುಳ್ಳ ಕಲ್ಲಂಗಡಲೆಗಿಂತ ಸ್ವಲ್ಪ ದೊಡ್ಡದಾದ ಗಿಡವು ಹೆಗ್ಗಲ್ಲಂಗಡಲೆ. ಅದನ್ನೇ ಇಲ್ಲಿ 'ನಾಗಬಲಾ' (ಆನೆಕುರುಂತ್ತೊಟ್ಟಿ-ಮಲಯಾಳದಲ್ಲಿ) ಸ್ಥಾನದಲ್ಲಿ ಉಪಯೋಗಿಸುವದು ವಾಡಿಕೆಯಾಗಿರುತ್ತದೆ. ಹೆಗ್ಗಲ್ಲಂಗಡಲೆ ಎಂಬ ಕನ್ನಡ ಹೆಸರು 'ಮಹಾಬಲಾ'ಕ್ಕೆ ಹೆಚ್ಚಾಗಿ ಒಪ್ಪುತ್ತದಾದರೂ ಮತ್ತು ಆ ಅರಸಿನ ಹೂವಿನ ಗಿಡದಲ್ಲಿ 'ಮಹಾಬಲಾ'ದ ಗುಣವೇ ಹೆಚ್ಚಾಗಿರುತ್ತದೆನ್ನಬಹುದಾದರೂ, ಇಲ್ಲಿ ಸಹದೇವೀ ಎಂಬ ಹೆಸರನ್ನು ಪಡೆದಿರುವ ಗಿಡ ಪ್ರತ್ಯೇಕವಿರುವದರಿಂದ, 'ಮಹಾಬಲಾ' ಯಾವದು, 'ನಾಗಬಲಾ' ಯಾವದು ಎನ್ನುವದು ಸಂದೇಹಾಸ್ಪದವೇ ಸರಿ ಇಲ್ಲಿಯ ಸಹದೇವಿಯ ಬೇರನ್ನು ಕಷಾಯಾದಿಗಳಿಗೆ ಉಪ

ಯೋಗಿಸುವ ವಾಡಿಕೆ ಕಡಿಮೆ. ಹಾಗೆಯೇ ಆ ಅರಸಿನ ಹೂವುಳ್ಳ ಆನೆಕುರುಂತ್ರೊಟ್ಟಿ ಎಂಬ ಗಿಡದ ಸೊಪ್ಪನ್ನು ಸ್ವರಸಮುಖದಿಂದ ಉಪಯೋಗಿಸುವದಿಲ್ಲ. ಕೆಲವು ವರ್ಷಗಳ ಹಿಂದೆ ಮುದ್ರಿತವಾದ ಒಂದು ನಿಘಂಟಿನಲ್ಲಿ ಅಮೃತಬಳ್ಳಿಯ ನಕ್ಷೆ ಎಂಬ ನಿರ್ದೇಶದಿಂದ ಕೊಡಲ್ಪಟ್ಟ ಒಂದು ಚಿತ್ತಾರವನ್ನು ನೋಡಿದ ನೆನಪು ತೋರುತ್ತದೆ. ಅದು ಇಲ್ಲ ವಾಡಿಕೆ ಯಾಗಿ ಉಪಯೋಗಿಸಲ್ಪಡುವ ಅಮೃತಬಳ್ಳಿಯ ನಕ್ಷೆಯಾಗಿರಲಿಲ್ಲ. ಆದ್ದರಿಂದ 'ಗುಡೂಚೀ' (ಅಮೃತಬಳ್ಳಿ) ಸ್ಥಾನದಲ್ಲಿಯೂ ಬೇರೊಂದು ಬಳ್ಳಿಯನ್ನು ಉಪಯೋಗಿಸುವ ವಾಡಿಕೆ ಬೇರ ದೇಶವಿಭಾಗಗಳಲ್ಲಿ ಇರಬೇಕು ಎಂತ ಊಹಿಸಬೇಕಾಗುತ್ತದೆ. ಇಲ್ಲಿಯೂ ನಿಜವಾದ ಅಮೃತ ಬಳ್ಳಿಯ ಹಾಗಿನ ಮತ್ತು ಅದಕ್ಕಿಂತ ದೊಡ್ಡದಾಗಿ ಬೆಳೆಯುವ ಇನ್ನೊಂದು ಬಳ್ಳಿ ಇರುತ್ತದೆ. ಅದಕ್ಕೆ 'ಮರ ಅಮೃತಬಳ್ಳಿ' ಎನ್ನುತ್ತಾರೆ. ಅದರ ಎಲೆಗಳು ಅಮೃತಬಳ್ಳಿ ಎಲೆಗಿಂತ ಸ್ವಲ್ಪ ದಪ್ಪ ವಾಗಿರುವದಲ್ಲದೆ, ಅವುಗಳ ಅಡಿತಲದಲ್ಲಿ ಸೂಕ್ಷ್ಮವಾದ ರೋಮಗಳ ಆವರಣ ಇರುವದ ರಿಂದ, ಅವೆರಡರ ಭೇದವನ್ನು ತಿಳಿಯುವದು ಸುಲಭ. 'ಚವ್ಯಂ' ಅಥವಾ 'ಚವಿಕಾ' ಎಂಬ ವಸ್ತುವಿಗೆ 'ಕೋಲವಲ್ಲೀ' ಎಂಬ ಪರ್ಯಾಯಪದವಿರುವದರಿಂದಲೂ, ಕೋಲಂ ಅಥವಾ ಕೋಲಃ ಎಂಬ ಪದವು ಹೆಚ್ಚಾಗಿ ಮೆಣಸಿನ ಕಾಳಿಗೂ, ಗಂಧಮೆಣಸಿನಕಾಳಿಗೂ ಉಪಯೋಗಿ ಸಲ್ಪಡುವದರಿಂದಲೂ, ಚವ್ಯ ಎಂಬದು ಕಾಡುಮೆಣಸಿನ ಬಳ್ಳಿಯೇ ಆಗಿರಬೇಕೆನ್ನುವದಕ್ಕ ಕಾರಣವಿರುತ್ತದೆಂತ ಕಾಣುತ್ತದೆ. ಆದರೆ ಅದರ ಫಲವೇ ಗಜಹಿಪ್ಪಲಿ ಮತ್ತು ಅದರ ಬೇರೇ ಹಿಪ್ಪಲೀಮೂಲ ಎಂತ ನಿಘಂಟುಗಳು ಹೇಳುವದನ್ನು ಆಲೋಚಿಸುವಲ್ಲಿ, ಚವ್ಯವು ಒಂದು ವಿಧದ ಹಿಪ್ಪಲಿ ಜಾತಿಯ ಗಿಡ ಎಂತ ಊಹಿಸಬೇಕಾಗುತ್ತದೆ. ಅಂಗಡಿಗಳಲ್ಲಿ ಸಣ್ಣ ಹಿಪ್ಪಲಿ, ದೊಡ್ಡ ಹಿಪ್ಪಲಿ ಎಂಬ ಭೇದದಿಂದ ಎರಡು ವಿಧವಾದ ಹಿಪ್ಪಲಿಗಳು ವಿಕ್ರಯಿಸಲ್ಪಡುತ್ತವ ಸಾಧಾರಣವಾಗಿ ಔಷಧಯೋಗಗಳಲ್ಲಿ ಹಿಪ್ಪಲೀ ಎಂಬದಕ್ಕೆ ಸಣ್ಣ ಹಿಪ್ಪಲ, ಗಜಹಿಪ್ಪಲೀ ಎಂಬದಕ್ಕೆ ದೊಡ್ಡ ಹಿಪ್ಪಲಿ, ಚವ್ಯ ಎಂಬದಕ್ಕೆ ಕಾಡುಮೆಣಸಿನ ಬಳ್ಳಿ, ಈ ಪ್ರಾಂತದಲ್ಲಿ ಉಪ ಯೋಗಿಸಲ್ಪಡುತ್ತವೆ. ಹಾಗೆ ಮಾಡುವದರಿಂದ ಗುಣಕರ್ಮವಿಚಾರದ ಮೇಲೆ ದೋಷ ಕಾಣಲಿಲ್ಲ. ಹೀಗೆ ವಿಚಾರ ಮಾಡುತ್ತಾ ಹೋದರೆ, ನಿಘಂಟುಗಳಲ್ಲಿ ವರ್ಣಿತವಾದ ದ್ರವ್ಯ ಗಳೊಳಗೆ ಅನೇಕ ಪದಾರ್ಥಗಳ ವ್ಯಕ್ತಿ (ಇಂಥಾದ್ದೇ ಎಂಬದನ್ನು) ಕುರಿತು ಸಂದೇಹ ಉಂಟಾ ಗುತ್ತದೆ. ಅಂಥಾ ಸಂಗತಿಯಲ್ಲಿ ವೈದ್ಯನು ರಸ-ವೀರ್ಯ-ವಿಪಾಕ-ಪ್ರಭಾವಗಳ ವಿಚಾರದಿಂದ ನಿಶ್ಚಯಮಾಡಿಕೊಂಡ ದ್ರವ್ಯವನ್ನೇ ಉಪಯೋಗಿಸಬೇಕಲ್ಲದೆ, ಪೂರ್ಣವಾಗಿ ತಿಳಿಯದ ವಸ್ತು ವನ್ನು ಯಾವ ಸಂದರ್ಭದಲ್ಲಿಯೂ ಸೇರಿಸಬಾರದು ಯಾವದರ ಸ್ಥಾನದಲ್ಲಿ ಯಾವದನ್ನು ಉಪಯೋಗಿಸಬಹುದೆಂಬದನ್ನು ಸೂಚಿಸುವ ಪ್ರತಿನಿಧಿದ್ರವ್ಯಪ್ರಕರಣವನ್ನು ಈ ಉಪೋ ದ್ಘಾತದ ಎರಡನೇ ಪರಿಶಿಷ್ಟವಾಗಿ ಸೇರಿಸಿಯದೆ.

ಮೇಲೆ ಪ್ರಸ್ತಾಪಿಸಲ್ಪಟ್ಟವುಗಳ ಹಾಗಿನ ಸಂದೇಹಗಳಿಗೆ ಆಸ್ಪದವಿಲ್ಲದ ಔಷಧ ದ್ರವ್ಯ ಗಳೇ ಬಹಳವಾಗಿ ಇವೆ. ಅವುಗಳೊಳಗೆ ಸುಲಭವಾಗಿ ಒದಗಿಸಿಕೊಳ್ಳಬಹುದಾದ ಮತ್ತು ಬಹಳವಾಗಿ ಉಪಯೋಗಿಸಲ್ಪಡುವ ಕೆಲವು ದ್ರವ್ಯಗಳ ಕನ್ನಡ ಹೆಸರುಗಳನ್ನು, ಸಂಸ್ಕೃತ ಹೆಸರು ಸಮೇತ, ಈ ಕೆಳಗೆ ಬರೆಯೋಣಾಗುತ್ತದೆ.

1. ಅಮಟೆಮರ = ಆಮ್ರಾತಕಃ.
2. ಅಗಿಲುಗಂಧ = ಅಗರು.
3. ಅಜಮೋದ = ಅಜಮೋದಾ (ಕಾಡು ಓಮ).
4. ಅಣಿಲೆಕಾಯಿ = ಹರೀತಕೀ.
5. ಅತಿವಿಡೆ = ಅತಿವಿಷಾ.
6. ಅತ್ತಿಗಿಡ = ಉದುಮ್ಬರಃ.
7. ಅಫೀಮು = ಅಹಿಫೇನಂ.
8. ಅಮೃತಬಳ್ಳಿ = ಗುಡೂಚೀ.
9. ಅರಗು = ಲಾಕ್ಷಾ.
10. ಅರಳು = ಲಾಜಾಃ.
11. ಅಲಸಂಡೆ = ರಾಜಮಾಷಃ.
12. ಅಶ್ವಗಂಧಿ = ಅಶ್ವಗನ್ಧಾ.
13. ಅಶ್ವತ್ಥ = ಅಶ್ವತ್ಥಃ.
14. ಆಡುಸೋಗೆ = ವಾಸಕಃ.
15. ಆನೆಮುಂಗು = ಸ್ಯೋನಾಕಃ.
16. ಇಂಗು (ಹಿಂಗು) = ಹಿಙ್ಗು.
17. ಇಪ್ಪೆ - ಮಧೂಕಃ.
18. ಉತ್ತರಣೆ = ಅಪಾಮಾರ್ಗಃ
19 ಉದ್ದು = ಮಾಷಃ
20. ಉಪ್ಪು = ಸಮುದ್ರಲವಣಂ
21 ಉಮ್ಮತ್ತ = ಧತ್ತೂರಃ
22. ಎಕ್ಕೆ = ಅರ್ಕಃ.
23 ಎಳ್ಳು = ತಿಲಃ
24. ಎಳ್ಳೆಣ್ಣೆ = ತೈಲಂ.
25. ಏಲಕ್ಕಿ = ಏಲಾ.
26. ಒಂದೆಲಗ (ತಿಮರೆ) = ಮಂಡೂಕಪರ್ಣೀ.
27. ಓಮ = ಯವಾನಿಕಾ.
28. ಓರೆಲೆ = ಪೃಷ್ಠಿಪರ್ಣೀ.
29. ಕಕ್ಕೆಮರ = ಆರಗ್ವಧಃ.
30 ಕಜ್ಜೋರ = ಕರ್ಜೂರಃ.
31. ಕಟುಕರೋಹಿಣೀ = ಕಟುಕೀ.
32. ಕಬ್ಬು = ಇಕ್ಷುಃ.
33. ಕಲ್ಲುಸಕ್ಕರೆ = ಸಿತೋಪಲಾ.
34. ಕಹಿಬೇವು = ನಿಂಬಃ.
35. ಕಾಡುಅತ್ತಿ = ಕಾಕೋದುಂಬರಿಕಾ.
36 ಕಾಡು ಉದ್ದು = ಮಾಷಪರ್ಣೀ
37. ಕಾಡು ಹೆಸರು = ಮುದ್ಗಪರ್ಣೀ.
38. ಕಾಳುಮೆಣಸು = ಮರೀಚಂ.
39. ಕಿರಿಗುಳ್ಳ = ಕಂಟಕಾರೀ.
40. ಕೊಡಸಿಗ = ಕುಟಜಃ
41. ಕೊತ್ತುಂಬರಿ = ಧಾನ್ಯಕಂ.
42. ಖದಿರೇ (ಕಾಚು) = ಖದಿರಃ.
43. ಗರುಗ = ಭೃಂಗರಾಜಃ
44. ಗಿರಿಕರ್ಣಿಕೇ, ಶಂಖಪುಷ್ಪ = ಗಿರಿಕರ್ಣಿಕಾ, ಅಪರಾಜಿತಾ.
45. ಗುಳ್ಳ = ವಾರ್ತಾಕೀ.
46. ಗೋಳಿ = ವಟಃ.
47. ಚಗತೆ = ಚಕ್ರಮರ್ದಃ.
48. ಚಿತ್ರಮೂಲ = ಚಿತ್ರಕಃ.
49. ಚಿಲ್ಲಬೀಜ = ಕತಕಂ
50. ಜಾಯಿಕಾಯಿ = ಜಾತೀಫಲಂ
51. ಜೀರಿಗೆ = ಜೀರಕಃ
52. ಜೇನು = ಮಧು
53 ಜ್ಯೇಷ್ಟಮಧು = ಯಷ್ಟೀಮಧುಕಂ
54. ತಾರೆಕಾಯಿ - ವಿಭೀತಕಃ.
55. ತಾವರೆ = ಕಮಲಂ
56. ತಿಗಡ = ತ್ರಿವೃತ್.
57. ತುಪ್ಪ = ಘೃತಂ.
58 ತುಳಸೀ = ತುಳಸೀ.
59. ತೆಂಗಿನಮರ = ನಾರಿಕೇರಃ.
60. ತೊಂಡೆ = ಬಿಮ್ಬಾ.
61. ತೊಗರಿ = ಆಢಕೀ.
62. ದಾಳಿಂಬ = ದಾಡಿಮಃ.
63. ದೇವದಾರ = ದೇವದಾರು.
64. ದ್ರಾಕ್ಷೆ = ದ್ರಾಕ್ಷಾ.
65. ನರುವಲು = ಅಗ್ನಿಮನ್ಥಃ.

66. ನಾಗಕೇಸರ = ನಾಗಕೇಶರಃ.
67. ನಾಮದ ಬೇರು = ಶಾರಿವಾ (ಸುಗಂಧಿ ಬೇರು).
68. ನಿರ್ವಿಷ(ಗಂಟು ಭಾರಂಗಿ) = ಭಾರ್ಙ್ಗೀ.
69 ನೀರುಳ್ಳಿ = ಪಲಾಣ್ಡುಃ.
70. ನೀಲದೂರ್ವೆ (ಕದಿಕೆ) = ನೀಲದೂರ್ವಾ.
71. ನೀಲೀಗಿಡ = ನೀಲೀ.
72. ನುಗ್ಗೆ = ಶೌಭಾಂಜನಃ.
73. ನೆಕ್ಕಿ (ಕರೇ) = ನಿರ್ಗುಂಡೀ.
74 ,, (ಬಿಳೇ) = ಸಿಂಧುವಾರಃ.
75. ನೆಗ್ಗಿಲ ಮುಳ್ಳು = ಗೋಕ್ಷುರಃ.
76. ನೆಲಕುಂಬಳ = ವಿದಾರೀ
77. ನೆಲನೆಲ್ಲಿ = ಭೂಮ್ಯಾಮಲಕೀ.
78. ನೆಲಬೇವು = ಕಿರಾತತಿಕ್ತಃ.
79. ನೆಲ್ಲಿ = ಆಮಲಕೀ.
80. ನೇರಳು = ಜಮ್ಬೂಃ.
81. ಪಚ್ಚೆಕರ್ಪೂರ = ಕರ್ಪೂರಃ.
82. ಪಡುವಲು = ಪಟೋಲಃ.
83. ಪತ್ರೆ (ಜಾ) = ಜಾತೀ ಪತ್ರೀ.
84. ಪರ್ಪಾಟಕ = ಪರ್ಪಟಃ
85. ಪಾಡಾವಳಿಗಡ್ಡೆ = ಪಾಠಾ.
86. ಪಾದರಿಮರ = ಪಾಟಲಿಃ.
87. ಪಾಷಾಣಭೇದಿ (ಹಿಟ್ಟಳಿಕೆ) = ಪಾಷಾಣಭೇದಕಃ.
88. ಪುತ್ರಜೀವಿ = ಪುತ್ರಜೀವಃ.
89. ಪುನರ್ನವೀ = ಪುನರ್ನವಾ.
90. ಬಜೆ = ವಚಾ.
91. ಬದನೇ = ವೃನ್ತಾಕಂ.
92. ಬಸುರಿಮರ = ಪ್ಲಕ್ಷಃ.
93. ಬಳ್ಳಿತುರಿಚ = ದುರಾಲಭಾ (ಕೆಂಪು), ಯವಾಸ (ಬಿಳೇದು).
94. ಬಾಗೆಮರ = ಶಿರೀಷಃ.
95. ಬಾದಾಮು = ವಾತಾದಃ.
96. ಬಿಲ್ವಪತ್ರೆ = ಬಿಲ್ವಃ.
97. ಬಿಳೀ ಮತ್ತಿ = ಅರ್ಜುನಃ.
98. ಬೂದಿಕುಂಬಳು = ಕೂಷ್ಮಾಂಡಂ.
99. ಬೆಂಡೆಕಾಯಿ = ಡಿಣ್ಡಿಶಃ.
100. ಬೆಣ್ಣೆ = ನವನೀತಂ.
101. ಬೆಲ್ಲ = ಗುಡಃ.
102. ಬೆಳ್ಳುಳ್ಳಿ = ಲಶುನಂ.
103. ಬೇಂಗಾ (ರಕ್ತಹೊನ್ನೆ) = ಅಸನಃ
104. ಬೊಗರಿ = ಬದರಂ
105. ಭದ್ರಮುಷ್ಟಿ = ಮುಸ್ತಕಂ.
106. ಮಂಗಾರೆಕಾಯಿ = ಮದನಃ
107. ಮಜ್ಜಿಗೆ = ತಕ್ರಂ.
108. ಮಜ್ಜಿಗೆಹುಲ್ಲು = ಭೂತೃಣಂ.
109. ಮಲ್ಲಿಗೆ = ಮಲ್ಲಿಕಾ.
110. ಮಾದಳ (ಅರೆಮಾದಳ) = ಬೀಜಪೂರಃ
111. ಮಾಯಿಫಲ (ಅಗ್ರದ ಕಾಯಿ) = ಮಾಚಿಕಾ
112. ಮಾವು = ಆಮ್ರಃ.
113. ಮುಂಡುಕಳ್ಳಿ = ಸೇಹುಣ್ಡಃ.
114. ಮುಡಿವಾಳ ಅಥವಾ ಇರುವೇರಿ = ಬಾಲಂ.
115. ಮುಳ್ಳಂಕೋಲೆ (ಕೊಳವಳಿಕೆ) = ಕೋಕಿಲಾಕ್ಷಃ.
116. ಮುಳ್ಳು ಹರುವ (ಅಥವಾ ಕೈ ಹರವೆ) = ತಣ್ಡುಲೀಯಃ.
117. ಮೂಲಂಗಿ = ಮೂಲಕಂ.
118. ಮೂವೆಲೆ = ಶಾಲಪರ್ಣೀ.
119. ಮೆಂತೆ = ಮೇಥಿಕಾ.
120. ಮೊಸರು = ದಧಿ.
121. ಯವೆಗೋದಿ (ಬಾರ್ಲಿ) = ಯವಃ.
122. ರಕ್ತಚಂದನ = ರಕ್ತಚಂದನಂ.
123. ರೆಂಜೆ = ಬಕುಲಃ.
124. ರೇಣಿಕೆಬೀಜ = ರೇಣುಕಾ.

125. ಲವಂಗ = ಲವಂಗಂ.
126. ಲವಂಗಪಟ್ಟೆ = ತ್ವಕ್
127. ಲಾವಂಚ = ಉಶೀರಃ
128. ಲಿಂಬೆ = ನಿಮ್ಬೂಕಃ
129. ಲೋಳಿಸರ = ಕುಮಾರೀ
130. ವಾಯುವಿಳಂಗ = ವಿಡಙ್ಗಂ.
131 ವೀಳ್ಯದೆಲೆ = ನಾಗವಲ್ಲೀ.
132 ಶುಂಠಿ = ಶುಂಠೀ.
133. ಶ್ರೀಗಂಧ = ಶ್ರೀಖಣ್ಡಂ.
134. ಸಂಪಿಗೆ (ಕೆಂಡ) = ಚಂಪಕಃ
135. ಸಕ್ಕರೆ = ಶರ್ಕರಾ, ಸಿತಾ
136. ಸಬ್ಬಸಿಗೆ = ಶತಪುಷ್ಪಾ
137 ಸಾಸಿವೆ (ಕೆಂಪು) = ಸರ್ಷಪಃ.
138 ,, ಬಿಳೀ = ಸಿದ್ಧಾರ್ಥಃ
139. ಸಾಸಿವೆ (ಕರೀ) = ರಾಜೀ.
140. ಸುಣ್ಣ = ಚೂರ್ಣಂ
141. ಸೂರಣ = ಸೂರಣಃ
142. ಸೈಂಧವಲವಣ = ಸೈಂಧವಂ
143. ಸೋರೆಕಾಯಿ = ಅಲಾಬೂ.
144 ಸೌತೆಕಾಯಿ = ಏರ್ವಾರುಃ.
145. ಹತ್ತಿ = ಕಾರ್ಪಾಸೀ.
146. ಹರುವೆಸೊಪ್ಪು = ಮಾರಿಷಃ.
147. ಹಲವುಮಕ್ಕಳತಾಯಿ = ಶತಾವರೀ.
148. ಹಲಸು = ಪನಸಃ
149. ಹಸಿಶುಂಠಿ = ಆರ್ದ್ರಕಂ.
150. ಹಾಲು = ದುಗ್ಧಂ
151. ಹಾಲೆಮರ = ಸಪ್ತಪರ್ಣಃ

ಈ ಪಟ್ಟಿಯಲ್ಲಿ ಸೇರಬಹುದಾದ ವಸ್ತುಗಳು ಬೇರೆ ಅನೇಕ ಅವೆ ನನ್ನ ಉದ್ದೇಶಕ್ಕೆ ಇಷ್ಟೇ ಸಾಕೆಂತ ಯೋಚಿಸಿ ಸಂಗ್ರಹವನ್ನು ಸಂಕ್ಷೇಪಮಾಡಿದ್ದಾಗಿರುತ್ತದೆ

ಇಂಥಾ ಹೆಸರಿನಿಂದಲೂ ರೂಪದಿಂದಲೂ ತನಗೆ ಪರಿಚಯವಿರುವ ದ್ರವ್ಯಗಳು ಆಧರಣೀಯವಾದ ನಿಘಂಟುಗಳಲ್ಲಿ ಹೇಗೆ ವರ್ಣಿಸಲ್ಪಟ್ಟಿವೆ, ಅವು ಯಾವ ದೋಷಗಳನ್ನು ವೃದ್ಧಿಗೊಳಿಸುತ್ತವೆ, ಯಾವ ದೋಷಗಳನ್ನು ಕೆದರಿಸುತ್ತವೆ, ಯಾವ ದೋಷಗಳನ್ನು ಶಮನ ಮಾಡುತ್ತವೆ, ಯಾವ ರೋಗಗಳ ಪರಿಹಾರಕ್ಕೆ ಉಪಯುಕ್ತವಾದವು, ಎಂತ ಆ ನಿಘಂಟುಗಳು ಹೇಳುತ್ತವೆ, ಸುಶ್ರುತನ ವಿದಾರಿಗನ್ಧಾದಿ ಮೂವತ್ತೇಳು ಗಣಗಳೊಳಗೆ ಯಾವ ಗಣದಲ್ಲ ಆ ದ್ರವ್ಯಗಳು ಸೇರಿಸಲ್ಪಟ್ಟಿವೆ, ಆ ಗಣದ ಪ್ರಭಾವವನ್ನೂ ಗುಣವನ್ನೂ ಸುಶ್ರುತನು ಹೇಗೆ ವರ್ಣಿಸಿದ್ದಾನೆ, ಚರಕನ ಐವತ್ತು ಮಹಾ ಕಷಾಯಗಳೊಳಗೆ ಆ ದ್ರವ್ಯಗಳು ಸೇರಿದ್ದು ಕಾಣುತ್ತದೊ, ಸೇರಿವೆಯಾದರೆ ಯಾವ ಕಾರಿಕೆ ಕಷಾಯಗಳಲ್ಲಿ ಅವು ಇದುತ್ತವೆ ಎಂಬಿತ್ಯಾದಿ ವೈದ್ಯನು ಪರ್ಯಾಲೋಚಿಸಿದರೆ, ಅವನಿಗೆ ಅವುಗಳ ಪೂರ್ಣ ಜ್ಞಾನವು ದೊರೆಯುವದು. ಒಬ್ಬನಿಗೆ ಅಜೀರ್ತಿಯಿದ್ದರೆ, ಅವನಲ್ಲಿ ಇಂಥಾ ದ್ರವ್ಯವು ಕಡಿಮೆಯಾದ ಪಿತ್ತವನ್ನು ಹೆಚ್ಚಿಸಿ, ಇಂಥಾದ್ದು ಹೆಚ್ಚಿದ ಪಿತ್ತವನ್ನು ಹೊರಗೆ ಹಾಕಿ, ಇಂಥಾದ್ದು ಪಿತ್ತವನ್ನು ಶಮನಮಾಡಿ, ಇಂಥಾದ್ದು ಕಡಿಮೆಯಾದ ಕಫವನ್ನು ಹೆಚ್ಚಿಸಿ, ಇಂಥಾದ್ದು ಕಫವನ್ನು ಹೊರಗೆ ತಳ್ಳಿಬಿಟ್ಟು, ಇಂಥಾದ್ದು ಕಫವನ್ನು ಶಮನಮಾಡಿ, ಇಂಥಾದ್ದು ಕಫವನ್ನು ಒಣಗಿಸಿ, ಇಂಥಾದ್ದು ವಾಯುವನ್ನು ಶಮಿಸಿ, ಇಂಥಾದ್ದು ವಾಯುವಿನ ಗತಿಯನ್ನು ಕ್ರಮಪಡಿಸಿ, ಇಂಥಾದ್ದು ಆಮಾಶಯದಲ್ಲಿ ಕಡಿಮೆಯಾದ ಹುಳಿರಸವನ್ನು ಹೆಚ್ಚಿಸಿ, ಇಂಥಾದ್ದು ಆ ಹುಳಿರಸವನ್ನು ಕಡಿಮೆಮಾಡಿ, ಇಂಥಾದ್ದು ಜೀರ್ಣಕ್ಕೆ ಸಾಕಾಗದ ಕಾರ ರಸವನ್ನು ಹೆಚ್ಚಿಸಿ, ಆ ಅಜೀರ್ತಿಯನ್ನು ಪರಿಹರಿಸಬಹುದು ಎಂಬ ಭೇದಗಳನ್ನೂ, ಮಲದೋಷವಿದ್ದವನ ಸಂಗತಿಯಲ್ಲಿ ಇಂಥಾ ದ್ರವ್ಯವು ಹಿಡಕೊಂಡಿದ್ದ ಮಲವನ್ನು ಜಾರಿಸುವದು, ಇಂಥಾದ್ದು ಆ ಮಲವನ್ನು ಹೊರಗೆ ಹಾಕುವದು,

ಇಂಥಾ ದ್ರವ್ಯವು ಅಂತ್ರಗಳ ಸ್ರೋತಸ್ಸನ್ನು ಖಾಲಿಪಡಿಸಿ ಶುದ್ಧಮಾಡುವದು, ಇಂಥಾದ್ದು ತೆಳ್ಳಗಾದ ಮಲವನ್ನು ಗಟ್ಟಿಮಾಡುವದು, ಇಂಥಾದ್ದು ಮಲವನ್ನು ಕಟ್ಟಿಸುವದು, ಇಂಥಾದ್ದರಿಂದ ಕಡಿಮೆಯಾದ ಮಲವು ವೃದ್ಧಿಗೊಳ್ಳುವದು, ಇಂಥಾದ್ದು ಮಲವನ್ನು ಕಡಮೆ ಮಾಡುವದು, ಇಂಥಾದ್ದು ಆನ್ತ್ರಿಕಸ್ರೋತಸ್ಸಿನ ಆವರಣದ ಒಳ ತಲದಲ್ಲಿರಬಹುದಾದ ಬೀಗನ್ನು ಪರಿಹರಿಸುವದು, ಇಂಥಾದ್ದು ಅದರಿಂದ ಹೊರಡುವ ಆಮ (ಸಿಂಬಳ)ವನ್ನು ನಿಲ್ಲಿಸುವದು, ಇಂಥಾದ್ದು ಅಲ್ಲಿ ಉಂಟಾದ ವ್ರಣವನ್ನು ಒಣಗಿಸಿ ರಕ್ತವಾಗಲಿ ಕೀವಾಗಲಿ ಬರುವಂಥಾದ್ದನ್ನು ನಿಲ್ಲಿಸುವದು ಎಂಬ ಭೇದಗಳನ್ನೂ, ಮೂತ್ರದೋಷಕ್ಕೆ ಚಿಕಿತ್ಸೆಮಾಡುವ ಸಂದರ್ಭದಲ್ಲಿ ಇಂಥಾ ದ್ರವ್ಯವು ಮೂತ್ರವನ್ನು ಹೆಚ್ಚಿಸುವದು, ಇಂಥಾದ್ದು ಮೂತ್ರವನ್ನು ಕಡಿಮೆ ಮಾಡುವದು, ಇಂಥಾದ್ದು ಪಿತ್ತಾಧಿಕ್ಯದ ಕೆಂಪನ್ನು ಪರಿಹರಿಸುವದು, ಇಂಥಾದ್ದು ರಕ್ತಮಿಶ್ರವಾಗಿ ಉಂಟಾದ ಕೆಂಪನ್ನು ಪರಿಹರಿಸುವದು, ಇಂಥಾದ್ದು ಮೂತ್ರದ ಕಶ್ಮಲವನ್ನು ಪರಿಹರಿಸಿ ಶುದ್ಧಮಾಡುವದು, ಇಂಥಾದ್ದರಿಂದ ಕೀವಿನ ಬೆರಿಕೆ ನಿಲ್ಲುವದು, ಇಂಥಾದ್ದು ವಾಯುವಿನ ತಡೆಯನ್ನು ಪರಿಹರಿಸುವದು, ಇಂಥಾದ್ದು ಕಫದ ತಡೆಯನ್ನು ಗೆಲ್ಲುವದು, ಎಂಬ ಭೇದಗಳನ್ನೂ, ಆಲೋಚಿಸಿ ಕಾರಿಕೆಯ ದೃಷ್ಟಿಯಿಂದ ಗೊತ್ತುಮಾಡಿದ ದ್ರವ್ಯಗಳ ಉಪಯೋಗದಿಂದ ವೈದ್ಯನು ಆಯಾ ರೋಗವನ್ನು ಪರಿಹರಿಸಬಹುದು. ಶ್ವಾಸಕಾಸಗಳಿಗೆ ಚಿಕಿತ್ಸೆ ಮಾಡಬೇಕಾದಾಗ ಶ್ವಾಸಕಾಸ ಪರಿಹಾರಕ್ಕೆ ಉಕ್ತವಾದ ದ್ರವ್ಯಗಳೊಳಗೆ ಇಂಥಾದ್ದು ಕಫವನ್ನು ಸಡಿಲಿಸುವದು, ಇಂಥಾದ್ದು ಕಫವನ್ನು ಹೊರಗೆ ಹಾಕುವದು, ಇಂಥಾದ್ದು ಕಫವನ್ನು ಒಣಗಿಸುವದು, ಇಂಥಾದ್ದು ವಾಯುವಿನ ತಡೆಯನ್ನು ಪರಿಹರಿಸುವದು, ಇಂಥಾದ್ದು ಸ್ರೋತಸ್ಸಿನ ಬೀಗನ್ನು ಪರಿಹರಿಸುವದು, ಇಂಥಾದ್ದು ಸ್ರೋತಸ್ಸಿನ ಹುಣ್ಣನ್ನು ಒಣಗಿಸುವದು, ಇಂಥಾದ್ದು ಆ ಸಂಬಂಧವಾದ ಜ್ವರವನ್ನು ಪರಿಹರಿಸುವದು, ಇಂಥಾದ್ದು ಕ್ಷಯಿಸಿದ ಮಾಂಸಾದಿಗಳನ್ನು ಪುಷ್ಟಿಗೊಳಿಸುವದು, ಇಂಥಾದ್ದು ಕಫದ ತಡೆಯನ್ನು ಪರಿಹರಿಸುವದು, ಇಂಥಾದ್ದು ನರಮಂಡಲದ ದುರ್ಬಲತೆಯನ್ನು ಪರಿಹರಿಸುವದು, ಹೀಗಿನ ವಿಚಾರದಿಂದ ಕಲ್ಪಿಸಿದ ಕಾರಿಕೆಗಳಿಂದ ಆ ಶ್ವಾಸಕಾಸವನ್ನು ಪರಿಹರಿಸಬಹುದು. ವಾತರೋಗಕ್ಕೆ ಚಿಕಿತ್ಸೆಮಾಡಬೇಕಾದ್ದಲ್ಲಿ, ಇಂಥಾದ್ದು ವಾಯುವಿನ ಗತಿಯನ್ನು ಬಲಪಡಿಸಿ ಅದು ತಡೆಯದೆ ಕ್ರಮದಂತೆ ನಡೆಯುವ ಹಾಗೆ ಮಾಡುವದು, ಇಂಥಾದ್ದು ಕಫದ ತಡೆಯನ್ನು ಪರಿಹರಿಸುವದು, ಇಂಥಾದ್ದು ಪಿತ್ತಾನುಬಂಧವನ್ನು ಪರಿಹರಿಸುವದು, ಇಂಥಾದ್ದು ಕುಸಿದ ನರವನ್ನು ನೆಟ್ಟಗೆ ಮಾಡುವದು, ಇಂಥಾದ್ದು ಚಾಚಿದ ನರವನ್ನು ಸಂಕೋಚ ಮಾಡುವದು, ಇಂಥಾದ್ದು ಗಂಟುಕಟ್ಟಿದ ನರವನ್ನು ಬಿಡಿಸುವದು, ಇಂಥಾದ್ದು ಕೋಪಗೊಂಡ ವಾತವನ್ನು ಶಮನಮಾಡುವದು, ಇಂಥಾದ್ದು ಸುಪ್ತಿಯನ್ನು ಪರಿಹರಿಸುವದು, ಹೀಗಿನ ಕಾರಿಕೆಗಳಿಂದ ಆ ವಾತರೋಗವನ್ನು ಪರಿಹರಿಸಬಹುದು. ಪಾಂಡುರೋಗಕ್ಕೆ ಚಿಕಿತ್ಸೆಮಾಡುವ ಸಂದರ್ಭದಲ್ಲಿ, ಇಂಥಾ ದ್ರವ್ಯವು ಅಧಿಕವಾದ ಪಿತ್ತವನ್ನು ಹೊರಗೆ ಹಾಕುವದು, ಇಂಥಾದ್ದು ಕೆದರಿದ ಪಿತ್ತವನ್ನು ಶಮನ ಮಾಡುವದು, ಇಂಥಾದ್ದು ಪಿತ್ತವನ್ನು ಚುರುಕುಮಾಡಿ ಮಂದವಾಗಿದ್ದ ಅಗ್ನಿಯನ್ನು ಬಲಪಡಿಸುವದು, ಇಂಥಾದ್ದು ರಕ್ತವನ್ನು ವೃದ್ಧಿಮಾಡುವದು, ಇಂಥಾದ್ದು ರಕ್ತವನ್ನು ಶುದ್ಧಮಾಡುವದು, ಇಂಥಿಂಥವು ಕಫವಾತಗಳ ಅನುಬಂಧಗಳನ್ನು ಪರಿಹರಿಸುವವು, ಹೀಗಿನ ವಿಚಾರದಿಂದ ಕಾರಿಕೆಗಳನ್ನು ವಿಧಿಸಿ, ಆ ರೋಗವನ್ನು ಪರಿಹರಿಸಬಹುದು. ಇದೇ ಪ್ರಕಾರ

ಇತರ ರೋಗಗಳಲ್ಲಿಯೂ ಬೇರೆ ಬೇರೆ ಕಾರಿಕೆಗಳಿಗೆ ದೃಷ್ಟಿಯಿಟ್ಟು ಚಿಕಿತ್ಸೆ ನಡಿಸಬೇಕಾಗುತ್ತದೆ. ಹೀಗಿನ ಎಲ್ಲಾ ವಿಧದ ಕಾರಿಕೆಗಳಿಗೆ ವಿಶೇಷವಾಗಿ ಉಪಯುಕ್ತವಾದ ಸಾಕಷ್ಟು ದ್ರವ್ಯಗಳ ಪೂರ್ಣ ಪರಿಚಿತಿಯನ್ನು ಮಾಡಿಕೊಂಡ ವೈದ್ಯನು ಯಾವ ರೋಗಕ್ಕಾದರೂ ಸಫಲವಾಗಿ ಚಿಕಿತ್ಸೆಮಾಡಲು ಶಕ್ತನಾಗುವನೆಂಬದರಲ್ಲಿ ಸಂದೇಹವಿಲ್ಲ. ಆ ಕಾರಿಕೆಗಳೊಳಗೆ ಪ್ರತಿಯೊಂದಕ್ಕೆ ಒಂದು ಅಥವಾ ಹೆಚ್ಚು ದ್ರವ್ಯಗಳು ಪ್ರತ್ಯಪ್ರತ್ಯೇಕ ಬೇಕಾಗುವದಿಲ್ಲ. ಒಂದೇ ದ್ರವ್ಯಕ್ಕೆ ಅನೇಕ ಬೇರೆ ಬೇರೆ ಕರ್ಮಗಳನ್ನು ಸಂಪಾದಿಸುವ ಶಕ್ತಿ ಇರುತ್ತದೆ. ಅಂಥಾ ದ್ರವ್ಯಗಳೇ ಹೆಚ್ಚು. ಆದ್ದರಿಂದ ಬೇರೆ ಬೇರೆ ಗುಣಕರ್ಮಗಳುಳ್ಳ ನಾಲ್ಕಾರು ಸ್ವರಸಗಳನ್ನೂ, ಕಲವು ಚಿಕ್ಕ ಚಿಕ್ಕ ಕಷಾಯಗಳನ್ನೂ ಅನುಪಾನವಾಗಿಟ್ಟುಕೊಂಡರೆ, ಒಂದೇ ಜಾತಿ ಮಾತ್ರೆಗಳಿಂದ ಬಹು ವಿಧವಾದ ರೋಗಗಳನ್ನು ಪರಿಹರಿಸಬಹುದಾಗುತ್ತದೆ ಮತ್ತು ಈ ಉಪಾಯದಿಂದಲೇ ಬಹು ಸಂಕುಚಿತವಾದ ಔಷಧಸಂಗ್ರಹದಿಂದ ಸಮಸ್ತ ರೋಗಗಳಿಗೂ ನಾನು ಚಿಕಿತ್ಸೆಮಾಡುತ್ತಾ ಒಂದದ್ದಾಗಿರುತ್ತದೆ ಎಂಬದು ಪ್ರತಿ ಅಧ್ಯಾಯದ ಕೊನೆಯಲ್ಲಿ 'ದೃಷ್ಟಫಲ ಚಿಕಿತ್ಸೆ' ಎಂಬ ಶಿರೋನಾಮದಿಂದ ನಾನು ಕೊಟ್ಟಿರುವ ನನ್ನ ಸ್ವಬುದ್ಧಿಕಲ್ಪಿತ ಚಿಕಿತ್ಸಾವಿಧಾನಗಳ ದೃಷ್ಟಾಂತಗಳನ್ನು ಪರಾಮರ್ಶಿಸಿದ್ದಲ್ಲಿ ವಾಚಕರಿಗೆ ಸಮಾಧಾನವಾದೀತು.

29. ವಮನ-ವಿರೇಚನಗಳನ್ನು ಮಾಡಿಸುವದಕ್ಕಾಗಿ ಕೊಡುವ ಔಷಧಗಳನ್ನೂ, ಘೃತತೈಲಾದಿ ಸ್ನೇಹನ ಔಷಧಗಳನ್ನೂ, ದಿನಕ್ಕೆ ಒಂದೇ ಸಾರಿ ಪೂರ್ವಾಹ್ಣದಲ್ಲಿ ನಿರ್ಭಕ್ತವಾಗಿ ಕೊಡತಕ್ಕದ್ದು. ಹೊಟ್ಟೆಯೊಳಗೆ ಸೇವಿಸಬೇಕಾದ ಇತರ ಔಷಧಗಳನ್ನೆಲ್ಲಾ ಸಾಧಾರಣವಾಗಿ ಪ್ರಾತಃಕಾಲ ನಿರ್ಭಕ್ತವಾಗಿ ಒಮ್ಮೆ, ಸಂಜೆಹೊತ್ತಿನಲ್ಲಿ ಅಂತರಾಭಕ್ತವಾಗಿ ಒಮ್ಮೆ, ಹೀಗೆ ಎರಡು ಹೊತ್ತು ಎರಡು ಪಾಲು ಮಾಡಿ ಕೊಡುವದು ಪ್ರಶಸ್ತ. ರೋಗಿಗಳೆಲ್ಲ ಪ್ರಾಯಶಃ ಅಶಕ್ತರಾಗಿರುವದರಿಂದ, ಒಂದು ದಿನಕ್ಕೆ ಹೇಳಲ್ಪಟ್ಟ ಪ್ರಮಾಣದ ಔಷಧವನ್ನೆಲ್ಲ ಒಮ್ಮೆಯೇ ಅವರು ಹಸಿದಿರುವಾಗ್ಗೆ ಕೊಟ್ಟರೆ, ಅದು ಅವರ ಬಲಕ್ಕೆ ಅತಿಯಾಗಿ, ಸಂಕಟವನ್ನುಂಟುಮಾಡಬಹುದು. ಎರಡನೆ ಸರ್ತಿಯ ಔಷಧವನ್ನು ರಾತ್ರಿಕಾಲ ಊಟದನಂತರ ಕೊಡುವಂತೆ ಕೆಲವು ವೈದ್ಯರು ವಿಧಿಸುವದುಂಟು. ಹಾಗೆ ಮಾಡಿದರೆ, ಬೆಳಿಗ್ಗೆ ಔಷಧಕೊಡುವ ಕಾಲದೊಳಗೆ ರೋಗಿಗೆ ಬಹಳವಾದ ಹಸಿವು, ಬಾಯಾರಿಕೆ ಅಥವಾ ಆಯಾಸ ಉಂಟಾಗಬಹುದು. ಅಂಥಾ ಅವಸ್ಥೆ ಒದಗಿದಾಗ್ಗೆ ಔಷಧವನ್ನು ಕೊಡಬಾರದೆಂತ ಹಿಂದೆಯೇ ಹೇಳಲ್ಪಟ್ಟದಷ್ಟೆ. ಹಾಗೆ ಆಗದಿದ್ದರೂ, ಔಷಧವನ್ನು ಕೊಟ್ಟು ಒಂದೆರಡು ತಾಸು ಕಾಲ ಕಳೆಯದೆ, ಆಹಾರವನ್ನು ಕೊಡುವದು ಪ್ರಶಸ್ತವಲ್ಲದ್ದರಿಂದ, ರೋಗಿಯನ್ನು ಸುಮಾರು ಹನ್ನೆರಡು ಘಂಟೆ ಕಾಲ ಉಪವಾಸದಲ್ಲಿರಿಸಬೇಕಾಗುತ್ತದೆ. ಅಂಥ ಉಪವಾಸ ಪಥ್ಯದಲ್ಲಿರುವ ರೋಗಿಗಳಿಗೆ ಅಪಾಯಕರವಾಗಬಹುದು ಎಂಬದೇ ಆ ಪದ್ಧತಿಗೆ ಆಕ್ಷೇಪ. ಅಂಥ ಭಯಕ್ಕೆ ಕಾರಣವಿಲ್ಲದಷ್ಟು ರೋಗಿಯು ಶಕ್ತನಾಗಿದ್ದರೆ ಮತ್ತು ಔಷಧವು ಸೌಮ್ಯಗುಣದ್ದಾಗಿದ್ದರೆ ಎರಡನೇ ಸರ್ತಿಯ ಔಷಧವನ್ನು ರಾತ್ರಿ ಕೊಡಬಹುದು. ದೇಹಪುಷ್ಟಿಗೆ ಅಥವಾ ಬೇರೆ ಉದ್ದೇಶದಿಂದ ಇತರ ಔಷಧಗಳಂತೆ ಅಲ್ಪಪ್ರಮಾಣದಲ್ಲಿ ಕೊಡುವ ಸ್ನೇಹವನ್ನು ಸಹ ಎರಡು ಪಾಲುಮಾಡಿ ಎರಡು ಹೊತ್ತು ಕೊಡಬಹುದು. ಗರ್ಭಿಣಿಯರು ಮುಂತಾದವರಿಗೆ ನಿತ್ಯಾರೋಗ್ಯಕ್ಕಾಗಿ ವಿಧಿಸುವ ಹಾಲುಕಷಾಯಾದಿ ಸೌಮ್ಯವಾದ ಔಷಧಗಳನ್ನು ದಿನಕ್ಕೊಂದೇ ಸರ್ತಿ ರಾತ್ರಿ

ಔಷಧ ಸೇವನ ಕಾಲ ಮತ್ತು ಪಥ್ಯಗಳ ವಿಚಾರ

ಮಲಗುವಾಗ್ಗೆ ಕೊಡುವದೇ ಒಳ್ಳೇದು. ಅಲ್ಪಾಹಾರವನ್ನು ಸೇವಿಸುವ ಅಥವಾ ಯಾವಾಗೂ ಹಾಲು ಮುಂತಾದ ದ್ರವಾಹಾರವೇ ವಿಧಿಸಲ್ಪಟ್ಟ ರೋಗಿಗಳಿಗೆ ಮುಂಜಾನೆಯ ಔಷಧ ಕಾಲ ಬರುವದರೊಳಗೆ ಹಸಿವು, ಬಾಯಾರಿಕೆ ಅಥವಾ ಆಯಾಸ ಹೆಚ್ಚಾಗದಂತೆ ಅಪರರಾತ್ರಿ 2 ಘಂಟೆಯನಂತರ 4 ಘಂಟೆಯೊಳಗೆ ಇನ್ನೊಮ್ಮೆ ಹಾಲು, ಗಂಜಿನೀರು ಮುಂತಾದ ಯಾವದಾದರೊಂದು ಹಿತವಾದ, ತೆಳು ಮತ್ತು ಲಘುವಾದ ಪಥ್ಯವನ್ನು ಕೊಡಬೇಕಾಗುತ್ತದೆ. ಕೆಮ್ಮಿನ ಕಫವನ್ನು ಕತ್ತರಿಸಿ, ಗಂಟಲೊಳಗೆ ಉಂಟಾಗಿರಬಹುದಾದ ಕಫದ ಬೀಗುಗಳನ್ನು ಬಿವರಿಸಿ, ತೆಗೆಯುವದಕ್ಕೆ ಅತಿ ಉಪಯುಕ್ತವಾದ ಛೇದನ ಮತ್ತು ಲೇಖನ ಗುಣವುಳ್ಳ ಬಿಲ್ವಾದಿ ಲೇಪ ಮುಂತಾದ ಕಾರ ರುಚಿ ಹೆಚ್ಚಾಗಿರುವ ಔಷಧಗಳನ್ನು ಬೆಳಿಗ್ಗೆ ಮತ್ತು ಸಂಜೆಹೊತ್ತು ಮಾತ್ರವಲ್ಲದೆ, ಪ್ರತಿ ಊಟದನಂತರ ಸ್ವಲ್ಪವಾಗಿ ಸೇವಿಸುವದರಿಂದ ಬಹಳ ಗುಣ ಸಿಕ್ಕುತ್ತದೆ. ಅಂಥಾ ಸಂದರ್ಭದಲ್ಲಿ ಆ ಔಷಧದಿಂದ ದಿನಕ್ಕೆ ಮುಕ್ಕಾಲು ತೊಲೆ ಕೊಡತಕ್ಕದ್ದಾದರ, ಕಾಲು ತೊಲೆ ಬೆಳಿಗ್ಗೆ, ಕಾಲು ತೊಲೆ ಸಂಜೆಗೆ, ಮಿಕ್ಕ ಕಾಲು ತೊಲೆ ಭೋಜನಾನಂತರ ಮೂರು ಸರ್ತಿಯಿಂದ, ಹೀಗೆ ಸೇವಿಸುವಂತೆ ವಿಧಿಸುವದು ಪ್ರಯೋಜನಕರವಾಗಿ ಕಂಡದೆ.

ರೋಗಿಯು ಅನ್ನ, ರೊಟ್ಟಿ ಮುಂತಾದ ಮೂರ್ತಿಮತ್ತಾದ (ಗಟ್ಟಿ) ಆಹಾರಕ್ಕೆ ಯೋಗ್ಯನಾಗಿದ್ದರೆ, ಅವನಿಗೆ ಪೂರ್ವಾಹ್ಣ ಔಷಧ ಸೇವನಾನಂತರ ಹಸಿವು ಉಂಟಾಗಿದ್ದಾಗ ಅನ್ನದ ಅಗಳು ಸಮೇತವಾದ ಗಂಜಿ, ಮಧ್ಯಾಹ್ನ ಮತ್ತು ರಾತ್ರಿ ಅನ್ನ, ಅಪರಾಹ್ಣದಲ್ಲಿ ಹಸಿವು ಹೆಚ್ಚು ಇದ್ದರೆ ಗೋದಿರೊಟ್ಟಿ ಮತ್ತು ಹಾಲು ಅಥವಾ ಹುರಿದ ಬಾರ್ಲಿ ಹಾಕಿ ಮಾಡಿದ ಪಾನಕ, ಕೊಡುವದು. ರೋಗಿಯು ಮಂಡ, ಪೇಯ, ಹಾಲು ಮುಂತಾದ ದ್ರವರೂಪವಾದ ಆಹಾರಕ್ಕೆ ಮಾತ್ರ ಯೋಗ್ಯನಾಗಿರುವಲ್ಲಿ, ಅಂಥಾ ಆಹಾರವನ್ನು 2-3 ಗಂಟಗೊಮ್ಮೆ ಮಿತ ಪ್ರಮಾಣದಿಂದ ಕೊಡುತ್ತಾ ಬರತಕ್ಕದ್ದು. ಹಾಲನ್ನು ಪ್ರತ್ಯೇಕವಾಗಿ, ಅಂದರೆ ಮೂರ್ತಾಹಾರದ ಜೊತೆಯಲ್ಲಿ ಅಲ್ಲದೆ, ಕುಡಿಯುವದಾದರೆ ಆ ಹಾಲಿಗೆ ಅಲ್ಪಪ್ರಮಾಣದಲ್ಲಿಯಾದರೂ ಸಕ್ಕರೆಯನ್ನು, ಕಲ್ಲುಸಕ್ಕರೆಪುಡಿಯನ್ನು, ಅಥವಾ ಜ್ಯೇಷ್ಠಮಧುವಿನ ಚೂರ್ಣವನ್ನು ಕೂಡಿಸಿಕೊಳ್ಳುವದು ಒಳ್ಳೇದು. ಹಾಲನ್ನು ಅನ್ನದೊಂದಿಗೆ ಕಲಸಿ ಉಣ್ಣಲಾರದವರಿಗೆ, ಹೆಚ್ಚಾಗಿ ಬೇಳೆಸಾರನ್ನು ವಿಧಿಸಬೇಕಾಗುತ್ತದೆ. ಮಾಂಸಾಹಾರಿಯಲ್ಲದವರಿಗೆ ಬಲವನ್ನು ಕಾಪಾಡತಕ್ಕಂಥ ಆಹಾರ, ಹಾಲು ಬಿಟ್ಟರೆ, ಬೇಳೆಸಾರಲ್ಲದೆ ಬೇರೆಯಲ್ಲ. ಆ ಸಾರಿಗೆ ಕೊತ್ತುಂಬರಿ, ಜೀರಿಗೆ, ಮೆಂತೆ ಮತ್ತು ಕಾಳುಮೆಣಸು ಸೇರಿದ ಮಸಾಲೆಪುಡಿಯನ್ನು ಕೂಡಿಸುವದರಿಂದ ಆ ಸಾರು ರುಚಿಕರವಾಗುವದಲ್ಲದೆ ಬೇಗನೇ ಜೀರ್ಣವಾಗುವದಾಗುತ್ತದೆ. ಆ ಮಸಾಲೆಗೆ ಕೊತ್ತುಂಬರಿ ಒಂದು ಅಳತೆ ಪಾವಷ್ಟು ಉಪಯೋಗಿಸುವದಾದರೆ, ಇತರ ಮೂರು ಬಗೆಗಳನ್ನು ಒಂದೊಂದು ತೊಲೆ ಪ್ರಕಾರ ತೆಗೆದುಕೊಂಡರೆ ಸಾಕಾಗುತ್ತದೆ. ಆ ನಾಲ್ಕು ಬಗೆಗಳನ್ನು ಬೇರೆಬೇರೆಯಾಗಿ ಕೆಂಪಾಗುವ ತನಕ ಸಣ್ಣ ಉರಿಯಿಂದ ಹುರಿದು, ಒಟ್ಟಾಗಿ ಕುಟ್ಟಿ, ಎಲ್ಲಾ ಜಿನಸುಗಳು ಸರಿಯಾಗಿ ಬೆರಿಕೆಯಾಗುವಷ್ಟು ನುಣ್ಣಗಾದ ಪುಡಿಯಾದ ಕೂಡಲೇ, ಆ ಪುಡಿಯನ್ನು ಕರಡಿಗೆಯಲ್ಲಿ ಹಾಕಿ ಮುಚ್ಚಿಟ್ಟುಕೊಳ್ಳುವದು. ಸಾಧಾರಣವಾಗಿ ಮೂರು ತೊಲೆ ಆಗುವಷ್ಟು ತೊಗರಿಬೇಳೆ, ಪಿತ್ತಾಧಿಕ್ಯವಿರುವಲ್ಲಿ ಅಷ್ಟೇ ಹೆಸರುಬೇಳೆಗೆ ನಾಲ್ಕು ಕುಡ್ತೆಯಾಗುವಷ್ಟು ನೀರು ಹೊಯಿದು ಬೇಯಿಸಿ, ಬೇಳೆ ಮೆತ್ತಗಾದ ಮೇಲೆ, ಒಂದು ಚಾಚಮಚೆ(ವರಹತೂಕ)ಯಷ್ಟು ಮಸಾಲೆಪುಡಿಯನ್ನೂ, ಬೇಕಾದಷ್ಟು ಉಪ್ಪನ್ನೂ

ಅದಕ್ಕೆ ಹಾಕಿ, ಮುಗಚಿ, ಪುನಃ ಒಂದೆರಡು ಕುದಿ ಬಂದ ಮೇಲೆ ಆ ಸಾರನ್ನು ಒಲೆಯಿಂದ ಕೆಳಗೆ ಇಳಿಸಿ, ಅಡಿಯಲ್ಲಿ ನಿಲ್ಲುವ ಬೆಂದ ಬೇಳೆಯನ್ನು ಬಿಟ್ಟು, ಮೇಲಿನ ಸಾರನ್ನು ಮಾತ್ರ ಊಟಕ್ಕೆ, ಉಪಯೋಗಿಸುವದು.* ಉಪ್ಪಿನ ಬದಲಾಗಿ ಸೈಂಧವ ಉಪ್ಪನ್ನು ಉಪಯೋಗಿಸುವದು ಪ್ರಶಸ್ತ. ಕೋಡುಮೆಣಸನ್ನು ಉಪಯೋಗಿಸುವದು ಪ್ರಾಯಶಃ ಅಹಿತ. ಹುಳಿ ಬೇಕಾದ್ದಲ್ಲಿ ಎಸಳುಹುಳಿ(ವಾಟೆಹುಳಿ)ಯನ್ನು ಅಲ್ಪಪ್ರಮಾಣದಿಂದ ಉಪಯೋಗಿಸಬಹುದು. ಹುಳಿ ಕೂಡಿಸುವಲ್ಲೆಲ್ಲ ಅದಕ್ಕರ್ಧಾಂಶ ಬೆಲ್ಲ ಕೂಡಿಸುವ ಪದ್ಧತಿ ಒಳ್ಳೇದು. ಜ್ವರಾದಿ ಅನೇಕ ರೋಗಗಳಲ್ಲಿ ಔಷಧ ಕೂಡಿಸದ ಬರೇ ಗಂಜಿಯನ್ನು ರೋಗಿಗೆ ಕೊಡಬಾರದು. ವಾತಹರವಾದ ನೆಗ್ಗಿಲಮುಳ್ಳು, ಪಿತ್ತಹರವಾದ ಕದಿಕಹುಲ್ಲು, ಕಫಹರವಾದ ಹಸೀಶುಂಠಿ, ಇವು ಮೂರನ್ನು ಗಂಜಿಗೆ ಕೂಡಿಸುವದು ಬಹು ವ್ಯಾಧಿಗಳಲ್ಲಿ ಹಿತವಾಗುತ್ತದೆ. ಆಮಶಂಕೆ, ರಕ್ತಾತಿಸಾರ, ರಕ್ತಪಿತ್ತ ಮತ್ತು ಅಭ್ಯಂತರ ಗಾಯ ಅಥವಾ ವ್ರಣ ಇರುವ ಬೇರೆ ವ್ಯಾಧಿಗಳಲ್ಲಿ ಹಸಿಶುಂಠಿಯನ್ನು ಬಿಟ್ಟು, ಅದರ ಸ್ಥಾನದಲ್ಲಿ ಬಿಲ್ವಪತ್ರಬೇರು ಮುಂತಾದ ಆಯಾ ರೋಗಕ್ಕೆ ಅಹಿತವಲ್ಲದ ಉಷ್ಣವೀರ್ಯದ ಒಂದು ದ್ರವ್ಯವನ್ನು ಉಪಯೋಗಿಸಬೇಕು. ನೆಗ್ಗಿಲಮುಳ್ಳನ್ನು ಚನ್ನಾಗಿ ಜಜ್ಜಿ, ಪುಡಿಮಾಡಿ, ಮಡಿಯಾದ ವಸ್ತ್ರದ ತುಂಡಿನಲ್ಲಿ ಸಡಿಲಾಗಿ ಕಟ್ಟಿಹಾಕಬೇಕು; ಕದಿಕೆಯನ್ನು ಕಟ್ಟುಕಟ್ಟಿ ಹಾಕುವದು, ಹಸೀ ಶುಂಠಿಯನ್ನು ಅಲ್ಪವಾಗಿ ಜಜ್ಜಿದರೆ ಸಾಕು. ಈ ಮೂರು ದ್ರವ್ಯಗಳನ್ನು ಪ್ರಾಯಸ್ಥನಾದ ರೋಗಿಗೆ ಕಾಲು ತೊಲೆ ಪ್ರಕಾರ ಉಪಯೋಗಿಸಿದರೆ ಸಾಕು ಜೀರ್ಣಶಕ್ತಿ ಬಹು ಮಂದವಾಗಿದ್ದ ಜ್ವರಾದಿ ರೋಗಗಳಲ್ಲಿ ಉಪಯೋಗಿಸತಕ್ಕ ಗಂಜಿ ಮಾಡುವಲ್ಲಿ, ಈ ಔಷಧಗಳನ್ನು ಒಂದೂವರೆ ಕುತ್ತಿಯಾಗುವಷ್ಟು ನೀರಿನಲ್ಲಿ ಹಾಕಿ ಕುದಿಯಲಿಕ್ಕಿಡುವಾಗಲೇ, ಬೇರೊಂದು ಪಾತ್ರದಲ್ಲಿ ಅನ್ನಕ್ಕೆ ನೀರು ಕುದಿಯಲಿಕ್ಕಿಡಬೇಕು. ಎಸರು ಬಂದಕೂಡಲೇ ಅದಕ್ಕೆ ಅರ್ಧ ಪಾವು ಆಗುವಷ್ಟು ಅಕ್ಕಿಯನ್ನು ತೊಳೆದು ಹಾಕಿ, ಅಕ್ಕಿಕಾಳು ಸುಲಿಯುವಷ್ಟು ಪಕ್ವವಾದ ಕೂಡಲೇ, ಆ ಅರ್ಧ ಬೆಂದ ಅಕ್ಕಿಯನ್ನು ಬೇರ ಪಾತ್ರದಲ್ಲ ಕುದಿಯುತ್ತಿರುವ ಕಷಾಯಕ್ಕೆ ಹಾಕುವದು. ಆ ಕಷಾಯದ ನೀರಿನಲ್ಲಿ ಅನ್ನ ಚನ್ನಾಗಿ ಮೆತ್ತಗಾಗುವ ತನಕ ಬೇಯಬೇಕು. ಹಾಗೆ ತಯಾರಿಸಲ್ಪಟ್ಟ ಗಂಜಿಯ ನೀರು ಮತ್ತು ಅನ್ನ ಅಶಕ್ತರಾದ ರೋಗಿಗಳಿಗೆ ಬಹಳ ಹಿತವಾಗುತ್ತದೆ.

* ಸಾರಿನ ಕ್ರಮಕ್ಕೆ 1ನೇ ಭಾಗದ XIV-30 ನೋಡಿ

30. ಒಂದನೇ ಭಾಗದ XX-12ನೇ ಸಂಖ್ಯೆಯಲ್ಲ ಒಂದು ಪಲ, ಮುಕ್ಕಾಲು ಪಲ, ಅಥವಾ ಅರ್ಧ ಪಲ ಔಷಧಗಳಿಂದ ಒಂದು ಕುಡ್ತೆ ಅಥವಾ ಅರ್ಧ ಕುಡ್ತೆ ಕಷಾಯ ಮಾಡಿ ಕೊಡಬೇಕಾಗಿ ವಿಧಿಸಲ್ಪಟ್ಟದ್ದು ದಿನಕ್ಕೊಂದೇ ಸರ್ತಿ ಔಷಧಕೊಡುವ ವಿಷಯ ಎಂತ ತಿಳಿಯಬೇಕು. ದಿನಕ್ಕೆರಡು ಸರ್ತಿ ಔಷಧಕೊಡುವದಾದರೆ ಆ ಕಷಾಯವನ್ನು ಸಮ ಎರಡು ಪಾಲು ಮಾಡಿ, ಅರ್ಧಾಂಶ ಪ್ರಕಾರ ಕೊಡತಕ್ಕದ್ದು. ಮಾತ್ರಾದಿಗಳಿಗೆ ಅನುಪಾನವಾಗಿ ಉಪಯೋಗಿಸುವ ಕಷಾಯಕ್ಕೆ ಅನೇಕ ಬಗೆಗಳು ಸೇರುವಲ್ಲಿ, ಅವೆಲ್ಲ ಕೂಡಿ ಎರಡು ತೊಲೆ ತೂಕದಷ್ಟು ಆದರೆ ಸಾಕಾಗುತ್ತದೆ. ಒಂದೇ ಬಗೆಯ ಕಷಾಯವನ್ನೇ ಪ್ರತ್ಯೇಕವಾಗಿ ಕೊಡುವ ಸಂದರ್ಭದಲ್ಲಿ ಸಾಧಾರಣ ವಿಧಿಯಲ್ಲಿ ಉಕ್ತವಾದ ತೂಕದ ಅರ್ಧಾಂಶ ಅಥವಾ ಅದಕ್ಕೂ ಕಡಿಮೆ, ಅಂದರೆ ಜೀರಿಗೆ, ಕೊತ್ತುಂಬರಿ, ಕಲ್ಲಂಗಡಲೆ ಬೇರು, ನೆಲ್ಲಿಚಟ್ಟು,

ಔಷಧ ಪ್ರಮಾಣ ಅನುಪಾನ ಮತ್ತು ಪ್ರಕ್ಷೇಪಗಳ ವಿಚಾರ

ಮುಂತಾದ ಶಾಂತಗುಣದ ದ್ರವ್ಯವಾದರೆ ಅರ್ಧ ಪಲ, ಅಮೃತಬಳ್ಳಿ, ಓಮು, ಕಹಿಬೇವಿನ ನಾರು, ಮುಂತಾದ ಮಧ್ಯಮ ಪ್ರಭಾವದ ದ್ರವ್ಯವಾದರೆ ಒಂದು ತೊಲೆ, ಶುಂಠಿ, ಹಿಪ್ಪಲಿ, ಕಾಳು ಮೆಣಸು, ಲವಂಗಪಟ್ಟೆ, ಮುಂತಾದ ತೀಕ್ಷ್ಣ ದ್ರವ್ಯವಾದರೆ ಅರ್ಧ ತೊಲೆ, ಉಪಯೋಗಿಸುವದು ಸಾಕಾಗುತ್ತದೆ ವಿಶೇಷ ಶಕ್ತಿಯುಳ್ಳ ಅಣಿಲೆಕಾಯಿ, ಅತಿವಿಷೆ, ತಾರೆಕಾಯಿ, ದೇವದಾರು ಮುಂತಾದ ಔಷಧಗಳನ್ನು ಕಷಾಯಯೋಗದಲ್ಲ ಸೇರಿಸಬೇಕಾದ್ದಲ್ಲಿ, ಅವುಗಳನ್ನು ಇನ್ನೂ ಕಡಿಮೆ ಪ್ರಮಾಣದಲ್ಲಿ ಉಪಯೋಗಿಸಬೇಕು. ಹೀಗೆ ಪ್ರಮಾಣವಿಚಾರದಿಂದ ತೆಗೆದುಕೊಂಡ ಕಷಾಯ ದ್ರವ್ಯಗಳನ್ನು ಜಜ್ಜಿ ಪುಡಿಮಾಡಿದ ಮೇಲೆ, ಅದಕ್ಕೆ ಎರಡು, ಮೂರು, ಅಥವಾ ನಾಲ್ಕು (ಮೃದು, ಮಧ್ಯ, ಕಠಿಣ ಎಂಬ ಭೇದದ ಮೇಲೆ) ಕುಡ್ತೆ ನೀರನ್ನು ಹೊಯಿದು, ಅರ್ಧಕುಡ್ತೆ ಕಷಾಯಮಾಡಿ, ಶೋಧಿಸಿ, ಅರ್ಧಾಂಶ (ಕಾಲುಕುಡ್ತೆ) ಪ್ರಕಾರ ಎರಡು ಹೊತ್ತು ಕೊಡುವದು ಸಾಧಾರಣವಾದ ಕ್ರಮ. ಹಾಗೆ ಕಷಾಯವನ್ನು ಪ್ರತಿ ದಿವಸ ಅಪರಾಹ್ಣದಲ್ಲಿ ಮಾಡಿದರೆ, ಅರ್ಧಾಂಶ ಸಂಜೆಹೊತ್ತು ಕೊಟ್ಟ ಮೇಲೆ ಮಾರಣೇ ದಿನ ಬೆಳಿಗ್ಗೆ ಕೊಡುವದಕ್ಕೆ ಅರ್ಧಾಂಶ ಉಳಿಯುತ್ತದೆ ಅದು ಬಹಳ ಅನುಕೂಲ, ಯಾಕೆಂದರೆ, ಬೆಳಿಗ್ಗೆ ಕಷಾಯ ಮಾಡಿ ಕೊಡುವದೆಂದರೆ, ಬೆಳಿಗ್ಗಿನ ಊಟಕ್ಕೆ ವಿಳಂಬವಾಗಿ, ರೋಗಿಗೆ ಆಯಾಸ ಹೆಚ್ಚಾಗುತ್ತದೆ ಸುಖವಾಗಿ ವಿರೇಚನವಾಗುವದಕ್ಕೆ ಹೆಚ್ಚು ದ್ರವ ಬೇಕಾಗುತ್ತದಾದಾಗ್ಯೂ, ಪೋಟಾಚೂಳಿ ಮುಂತಾದ ವಿರೇಚನೌಷಧಗಳಿಗೆ ಅನುಪಾನವಾಗಿ ಉಪಯೋಗಿಸುವ ದ್ರವವು ಅಧಿಕವಾದರೆ ಔಷಧ ವಾಂತಿಯಾಗಿ ಹೋಗುವ ಭಯವಿರುವದರಿಂದ, ಆ ದ್ರವವು ಹಾಲು, ಜೀರಿಗೆಕಷಾಯ ಮುಂತಾದ ಸೌಮ್ಯ ಮತ್ತು ಹೃದ್ಯ ಪದಾರ್ಥವಾದರೂ ಕಾಲು ಕುಡ್ತೆಗಿಂತ ಹೆಚ್ಚಾಗಬಾರದು. ಆ ಔಷಧವನ್ನು ಹಾಗೆ ಸೇವಿಸಿ ಸುಮಾರು ಒಂದು ಮುಹೂರ್ತಕಾಲ ಕಳೆದನಂತರ ಬಿಸಿಯಾದ ಹಾಲು, ಅಥವಾ ಜೀರಿಗೆ, ಕೊತ್ತುಂಬರಿ ಬಾರ್ಲಿ ಮುಂತಾದ್ದನ್ನು ಸೇರಿಸಿ ಮಾಡಿದ ಪಾನಕವಿಶೇಷವನ್ನು, ಬೇಕಾದಷ್ಟು, ಒಂದು ಸತಿಯಲ್ಲಿ ಎರಡು ಕುಡ್ತೆ ಮಿಗದಷ್ಟು ಪ್ರಮಾಣದಲ್ಲಿ, ಕುಡಿಯುವದು ಹಿತಕರವಾಗುತ್ತದೆ. ವಮನೌಷಧಗಳು ಮತ್ತು ಉಪ್ಪು-ಕ್ಷಾರಗಳು ಸೇರಿದ ಕಷಾಯ-ಚೂರ್ಣಾದಿಗಳು ಹೊರತು, ಸಾಧಾರಣವಾಗಿ ಎಲ್ಲ ಕಷಾಯಾದಿಗಳಿಗೆ, ವಿಶೇಷವಾಗಿ ಹುಳಿ ಅಥವಾ ಕಹಿ ರುಚಿಯುಳ್ಳವುಗಳಿಗೆ, ಸಕ್ಕರೆ-ಜೇನುಗಳನ್ನು ಅಥವಾ ಇವುಗಳೊಳಗೆ ಒಂದನ್ನು ಪ್ರಕ್ಷೇಪವಾಗಿ ಕೂಡಿಸಬೇಕು. ಆ ಪ್ರಕ್ಷೇಪಗಳ ಪ್ರಮಾಣವನ್ನು ದೋಷವಿಚಾರದ ಮೇಲೆ ಹೆಚ್ಚುಕಡಿಮೆ ಮಾಡತಕ್ಕದ್ದು. ಸಕ್ಕರೆಗಿಂತ ಬೆಲ್ಲ ಗುರುವಾದ್ದರಿಂದ, ಬೆಲ್ಲದಲ್ಲ ಮಲಶೋಧನಕ್ಕೂ ಪಿತ್ತಪರಿಹಾರಕ್ಕೂ ಗುಣ ಬೆಚ್ಚು; ಆದರೆ ಸುಣ್ಣ ಸೇರುವ ಊರಬೆಲ್ಲದಲ್ಲಿ ಆ ಗುಣಗಳು ಕಡಿಮೆ. ಕಫದೋಷವಿರುವಲ್ಲ ಚೀನಿಸಕ್ಕರೆ ಬದಲಾಗಿ ಕಲ್ಲುಸಕ್ಕರೆಯ ಪುಡಿಯನ್ನು ಉಪಯೋಗಿಸುವದು ಒಳ್ಳೇದು. ಆ ಪ್ರಕ್ಷೇಪಗಳ ಪ್ರಮಾಣವನ್ನು ಹೆಚ್ಚುಕಡಿಮೆ ಮಾಡುವ ವಿಷಯದಲ್ಲಿ 1ನೇ ಭಾಗದ XX-17ನೇ ಸಂಖ್ಯೆಯಲ್ಲಿ ತೋರುವ ಸೂತ್ರವನ್ನು ಅನುಸರಿಸಬೇಕು. ಮಾತ್ರೆಗಳ ಸೇವನಕ್ಕೆ ಅನುಪಾನವಾಗಿ ಉಪಯೋಗಿಸಲ್ಪಡುವ ರಸಗಳಿಗೆ ಅಥವಾ ಹಾಲಿಗೆ ಪ್ರಕ್ಷೇಪವಾಗಿ ಕೂಡಿಸಬೇಕಾದ ಜೇನು ೨-೪ ತಟಕುಗಳು, ಸಕ್ಕರೆ, ಜೀರಿಗೆ ಪುಡಿ, ಹಿಪ್ಪಲಿ ಪುಡಿ, ಜ್ಯೇಷ್ಠಮಧುವಿನ ಪುಡಿ, ಅಥವಾ ಹಾಗಿನ ಬೇರೆ ಚೂರ್ಣ ೧-೨ ಚಿಮಿಟಿ, ಇದ್ದರೆ ಸಾಕು. ಮಾತ್ರೆಗೆ ಅನುಪಾನವಾಗಿ ಕಷಾಯ ಹಾಲು ಮುಂತಾದ ದ್ರವಗಳನ್ನು ಕಾಲುಕುಡ್ತೆ

ಪ್ರಮಾಣದಲ್ಲಿ ಉಪಯೋಗಿಸುವದಾದರೆ, ಜೇನನ್ನು ಕಾಲು-ಅರ್ಧ-ಮುಕ್ಕಾಲು ಅಥವಾ ಇಡೀ ಒಂದು ಚಮಚೆ(ಒಂದು ವರಹತೂಕ)ಯಷ್ಟು ದೋಷಕ್ಕೆ ತಕ್ಕ ಹಾಗೆ ಪ್ರಕ್ಷೇಪವಾಗಿ ಬೆರಿಸಬಹುದು. ಮಾತ್ರೆಯನ್ನು ತೇದಲಿಕ್ಕೆ ಬೇಕಾದಷ್ಟು ನಾಲ್ಕೈದು ತಟಕು ಜೇನಿನಲ್ಲಿಯೇ ಮಾತ್ರೆಯನ್ನು ಕೊಡುವದುಂಟು. ಸಾಧಾರಣವಾಗಿ ಮಾತ್ರೆಗಳನ್ನು ಕೊಡುವದಕ್ಕೆ ಉಪಯೋಗಿಸಲ್ಪಡುವ ಸ್ವರಸ, ಅಥವಾ ಹಾಲು, ಒಂದೆರಡು ಚಮಚೆಯಷ್ಟು ಇದ್ದರೆ ಸಾಕು. ಅನೇಕ ರಸಗಳನ್ನು ಬೆರಿಸಿ, ಅದರಲ್ಲಿ ಮಾತ್ರೆಯನ್ನು ಕೊಡುವದಾದರೂ, ರಸಗಳ ಒಟ್ಟು ಪ್ರಮಾಣ ಮೂರು ಚಮಚೆಗಿಂತ ಹೆಚ್ಚು ಇರುವದು ಪ್ರಶಸ್ತವಲ್ಲ. ಕೂಲೆರಾ ಎಂಬ ವಿಷಮಾಜೀರ್ಣರೋಗದಲ್ಲಿಯಾದರೂ ಶುಂಗೀರಸ ಮತ್ತು ಜೇನು ಒಂದೊಂದು ಚಮಚ, ಅಥವಾ ಪ್ರತಿಯೊಂದು ಒಂದೂವರೆ ಚಮಚ, ಇದ್ದರೆ ಸಾಕು. ಮೇಲೆ ಎತ್ತಿಕೊಂಡ ಸೂತ್ರದಲ್ಲಿ ಜೀರಕಾದಿ ಪ್ರಕ್ಷೇಪಗಳು ಒಂದು ಶಾಣತೂಕವಾಗಬೇಕೆಂಬದು ಎರಡು ಹೊತ್ತಿನ ಕಷಾಯಕ್ಕೆ ಮತ್ತು ಒಂದೇ ಪ್ರಕ್ಷೇಪವನ್ನು ಉಪಯೋಗಿಸುವ ಸಂಗತಿಗೆ ಸಂಬಂಧಪಟ್ಟದ್ದೆಂತ ತಿಳಿಯಬೇಕು. ಅನೇಕ ಬಗೆಗಳನ್ನು ಪ್ರಕ್ಷೇಪವಾಗಿ ಏಕಕಾಲದಲ್ಲಿ ಉಪಯೋಗಿಸುವದಾದರೆ, ಅವುಗಳ ಸಮುದಾಯದ ತೂಕ ಒಂದು ಶಾಣಕ್ಕೆ ಮಿಗಬಾರದು.

31. ಮೇಲೆ ವರ್ಣಿಸಲ್ಪಟ್ಟ ತತ್ತ್ವೋಪದೇಶಗಳಿಗೆ ಆದರ್ಶಪ್ರಾಯವಾಗಿ ನನ್ನ ಚಿಕಿತ್ಸೆಯಿಂದ ಪ್ರಯೋಜನ ಪಡೆದ ಅನೇಕ ದೀರ್ಘರೋಗಿಗಳೊಳಗ ಒಬ್ಬಳ ಚಿಕಿತ್ಸಾಕಾಲದಲ್ಲಿ ರೋಗವು ಪಡೆದ ಅವಸ್ಥಾಭೇದಗಳನ್ನೂ ಅವುಗಳಿಗೆ ತಕ್ಕ ಹಾಗೆ ಒದಗಿಸುತ್ತಾ ಬಂದ ಚಿಕಿತ್ಸಾವಯವಗಳನ್ನೂ ಕೂಲಂಕಷವಾಗಿ ತಿಳಿಸಿ, ಬೇಕಾದಲ್ಲಿ ಟೀಕಿಸಲು ಉದ್ಯುಕ್ತನಾಗುತ್ತೇನೆ. ವಾಚಕರು ಈ ಚರಿತವನ್ನು ತಾಳ್ಮೆಯಿಂದ ಸೂಕ್ಷ್ಮವಾಗಿ ಓದಿ, ತಿಳಿದು, ಆಲೋಚಿಸಿದರೆ ಬಹಳ ಪ್ರಯೋಜನ ಪಡುವರಾಗಿ ಭಾವಿಸುತ್ತೇನೆ.

ಒಬ್ಬ ದೀರ್ಘರೋಗಿಯ ಚಿಕಿತ್ಸಾಚರಿತದ ದೃಷ್ಟಾಂತ

**ರೋಗದ ಚರಿತ**

1. ರೋಗಿ ಸ್ತ್ರೀ, ಪ್ರಾಯ 32 ವರ್ಷ, ಬಹಳ ಅಶಕ್ತಿ, ಕೈಕಾಲುಗಳಲ್ಲಿ ಮತ್ತು ಕುತ್ತಿಗೆಯ ಹಿಂಬದಿಯಲ್ಲಿ ಬಹಳ ಬತ್ತಿ ಬರುತ್ತದೆ, ಮಧ್ಯಾಹ್ನದಿಂದ ರಾತ್ರಿ 8 ಘಂಟೆವರೆಗೆ ಮೈ ಬಿಸಿ ಹೆಚ್ಚು ಇರುತ್ತದೆ, ಅದು 100°ಗೆ ಮಿಗುವದಿಲ್ಲವಂತೆ; ಬೆಳಿಗ್ಗೆ 96° ಅಥವಾ 97° ರಷ್ಟು ತಗ್ಗಿರುತ್ತದಂತೆ, ಕೆಮ್ಮು ಆಗಲಿ ಉಬ್ಬಸವಾಗಲಿ ಇಲ್ಲ. ಚಳಿ ಇಲ್ಲ; ನಿದ್ರೆಬರುವದು ಬಹಳ ಕಡಿಮೆ; ಮಲ ದಿನಕ್ಕೆ 2 ಸರ್ತಿ; ಅದು ಸಡಿಲಾಗಿ ಇಲ್ಲ, ಕಾದು ಹೋಗುವದೂ ಅಲ್ಲ, ಅರಸಿನ ತರ; ಮೂತ್ರ ಸ್ವಲ್ಪ ಹೆಚ್ಚೇ, ಮೈಜವರುವದಿಲ್ಲ, ನಾಲಿಗೆ ತಕ್ಕಮಟ್ಟಿಗೆ ಶುದ್ಧವಾಗಿ ಉಂಟು, ಬಾಯಿ

**ಚಿಕಿತ್ಸಾವಯವ**

1. ಕಡೀರ ಬೇರು ತೊಲೆ. ||. ಆನೆ ಕಡೀರ ಬೇರು ತೊ. ||. ಬಿಲ್ವಪತ್ರಬೇರು ತೊ. |. ಬಿಣಶುಂಬ ತೊ. |. ಶ್ರೀಗಂಧ, ಪರ್ಪಾಟಕ, ಲಾವಂಚ ಮತ್ತು ಸುಗಂಧಿ (ನನ್ನಾರಿ) ಬೇರಿನ ಒಳಗಿನ ಸಿಪ್ಪೆ ತೊ ॥ ಪ್ರಕಾರ, ಒಟ್ಟು ತೊ. ೨, ಇವುಗಳ ಕಷಾಯದ ಅರ್ಧಾಂಶದಲ್ಲಿ ಮಹಾ ಜ್ವರಾಂಕುಶ ||. ಕಸ್ತೂರ್ಯಾದಿ || ರಂತೆ, ಕಲ್ಲುಸಕ್ಕರೆ ಪುಡಿ ಕೂಡಿಸಿಕೊಂಡು (ಪ್ರಕ್ಷೇಪ), ೮ ಸರ್ತಿಗೆ.

ರುಚಿ ಇಲ್ಲ; ಅಪರಾಹ್ಣದಲ್ಲಿ ಬಾಯಾರಿಕೆ ಹೆಚ್ಚು; ಮೊದಲು ತನಗೆ ಅಸೃಗ್ದರ ಬಹಳವಾಗಿ ಇದ್ದದರಿಂದ ಈ ಅವಸ್ಥೆ ಉಂಟಾದದ್ದೆಂತ ರೋಗಿ ಹೇಳುತ್ತಾಳೆ; ಜಿಲ್ಲಾ ಸರ್ಜನ್ ಪದವಿಯಲ್ಲಿದ್ದು ಸರಕಾರಿ ಕೆಲಸದಿಂದ ನಿವೃತ್ತರಾದ ಇವಳ ಮಾವ ಇವಳನ್ನು ಪರೀಕ್ಷಿಸಿ, ಶ್ವಾಸಕೋಶದಲ್ಲಿ ದೋಷ ಉಂಟಾಗಿದೆ ಮತ್ತು ಅದು ಹವೆಯನ್ನು ಬದಲಾಯಿಸದೆ ಪರಿಹಾರವಾಗದು ಎಂತ ಹೇಳಿದ್ದಾರಂತೆ; ಆಯುರ್ವೇದವನ್ನು ಕ್ರಮದಂತೆ ಕಲಿತು, ಬಿರುದು ಪಡೆದು, ಪ್ರಸಿದ್ಧರಾದ ಒಬ್ಬರು ಪಂಡಿತರಿಂದ ಒಂದು ತಿಂಗಳ ಕಾಲ ಚಿಕಿತ್ಸೆ ಮಾಡಿಸಿಕೊಂಡಾಗ್ಯೂ, ಇವಳಿಗೆ ಅದರಿಂದ ಪ್ರಯೋಜನ ಸಿಕ್ಕಲಿಲ್ಲವಂತೆ; ಶರೀರಕೃಶತೆ ಬಹಳ ಉಂಟು; ನಾಡಿಗಳು ಮೂರೂ ಅಸ್ಥಿರ, ವಾತ ಪಿತ್ತಗಳು ಸ್ಥಾನಚ್ಯುತ, ಅಥವಾ ಅವುಗಳಿಗೆ ತಲೆಯಿಲ್ಲ, ಕಫದಲ್ಲಿ ಅದೇ ದೋಷ ಸ್ವಲ್ಪ ಕಡಿಮೆಯಾಗಿ ಉಂಟು.

2. ಅಶಕ್ತಿ ಸ್ವಲ್ಪ ಹೆಚ್ಚು ಕಾಣುತ್ತದೆಂತ ರೋಗಿಯ ಹೇಳಿಕೆ (ಇದು ಕಾಫಿ ಬಿಟ್ಟು ಪಥ್ಯದಲ್ಲಿದ್ದದರಿಂದ ಕಾಣುವದಾಗಿರಬೇಕು); ಮೈಬಿಸಿ ನಿನ್ನೆ ಸಂಜೆ 100·2°, ರಾತ್ರಿ 8 ಘಂಟೆಗೆ 99°, ಈ ಹೊತ್ತು ಬೆಳಿಗ್ಗೆ 96° ಇತ್ತಂತೆ; ನಿನ್ನೆ ಮಲ ಹೋದದ್ದು ಒಂದೇ ಸರ್ತಿ; ರಾತ್ರಿಯಲ್ಲಿ 2 ಘಂಟೆಯನಂತರ ನಿದ್ರೆ ಬಂದದಂತೆ; ನಿನ್ನೆ ಜ್ವರ ಬಿಡುವ ಕಾಲದಲ್ಲಿ ಮೈಬೆವರು ಸ್ವಲ್ಪ ಕಂಡಿತ್ತಂತೆ, ಶ್ವಾಸ ಬಿಡುವಾಗ್ಗೆ ಎಡಪಕ್ಕದಲ್ಲಿ ನೋವು ಕಾಣುತ್ತದಂತೆ (ಇದು ಮೊದಲೇ ಇದ್ದದ್ದು), ಕುತ್ತಿಗೆಯ ಹಿಂಬದಿಯಲ್ಲಿ ಬತ್ತಿಬರುವಿಕೆ ಇದ್ದದ್ದು ವಾಸಿಯಾಗಿದೆ, ವಾತನಾಡಿಸ್ಥಾನದಲ್ಲಿ, ಪಿತ್ತ ಸ್ಥಾನಚ್ಯುತ, ಕಫ, ಸ್ಥಾನಕ್ಕೆ ಬಹು ಸಮೀಪ ಉಂಟು; ರೋಗಿಗೆ ಯಾವಾಗಲಾದರೂ ಸಕ ಕಾಣುವದಿಲ್ಲವಂತೆ.

2. ಕಷಾಯ ದ್ರವ್ಯಗಳೊಂದಿಗೆ ಜ್ಯೇಷ್ಠಮಧು ತೊ. = ಕೂಡಿಸುವದು; ಬೆಳಿಗ್ಗೆ ಕಸ್ತೂರ್ಯಾದಿ ೧, ಸಂಜೆಯಲ್ಲಿ ಮ. ಜ್ವ. ೧ ಕೊಡುವದು, 4 ದಿನಗಳಿಗೆ ಮಾತ್ರೆ ಕೊಟ್ಟದೆ.

3. ನಿನ್ನೆ ಬೆಳಿಗ್ಗೆ ಮೈಬಿಸಿ ನಾಲಿಗೆಯ ಅಡಿಯಲ್ಲಿ 99·4° ಇತ್ತಂತೆ. ಬೇರೆ ಅವಗುಣ ಎಲ್ಲ.

3. ಅದೇ ಪ್ರಕಾರ ಇನ್ನು 3 ದಿನ, ತಬ್ದೀಲು ಬೇಡ

4. ಪಿತ್ತನಾಡಿ ಮೊದಲಿನಷ್ಟು ಸ್ಥಾನದಿಂದ ದೂರ ಇಲ್ಲ, ಕೆಲವು ಸ್ಥಾನದಲ್ಲಿ ತಲೆಯಿಲ್ಲದೆ ಇರುತ್ತವೆ; ಕಫ ಸ್ಥಾನದಲ್ಲಿ, ಆದರೆ ಅದಕ್ಕೆ ತಲೆಯಿಲ್ಲ; ಮೈಬಿಸಿ ಬೆಳಿಗ್ಗೆ 99°, ಏರಿಕೆ 6 ಪೊಯಿಂಟಿಗೆ ಮಿಗುವದಿಲ್ಲ; ಮಲ ದಿನಕ್ಕೆ 2 ಸರ್ತಿ, ಮುದ್ದೆಯಾಗಿ, ಸ್ವಲ್ಪ ಬೆಳ್ಳಗೆ ತರವಂತೆ; ಬಾಯಿ ರುಚಿ ಹುಟ್ಟಲಿಲ್ಲ; ಪಕ್ಕದ ಶೂಲೆ ಕಡಿಮೆ ಆಗಿದೆ; ಕಣ್ಣಿಗೆ ನಿದ್ರೆ ಹತ್ತಿದ ಕೂಡಲೆ ಎತ್ತಿ ಹಾಕಿದ ಹಾಗೆ ಆಗಿ, ಎಚ್ಚರವಾಗುತ್ತದೆನ್ನುತ್ತಾಳೆ. ಅದರನಂತರ

4. ಕಷಾಯ ದ್ರವ್ಯಗಳಿಗೆ ಹಿಪ್ಪಲಿ ತೊ. = ಕೂಡಿಸುವದು ಮತ್ತು ಪ್ರಕ್ಷೇಪವಾಗಿ ಜೇನು ಡ್ರಾಮ್ |. ನ್ನು ಸಹ ಬೆರಿಸುವದು. ಬೆಳಿಗ್ಗೆ ಮತ್ತು ಸಂಜೆ ಮ. ಜ್ವ. ||, ಕಸ್ತೂರ್ಯಾದಿ ||. ರಂತೆ; ಮಧ್ಯಾಹ್ನ ಊಟದನಂತರ ಕಾಸೀಸ (೧ ಗ್ರೈನ್) ಮಿಶ್ರವಿರುವ ಷರಬತ ಡ್ರಾಮ್ ೧ನ್ನು ೧ ಔನ್ಸು ಕುದಿಸಿತಣಿಸಿದ ನೀರಿನಲ್ಲಿ ಕದಡಿ ಕುಡಿಯುವದು. ಔಷಧ 4 ದಿನಗಳಿಗೆ ಕೊಟ್ಟದೆ. ಅಭ್ಯಂಗನಕ್ಕೆ ನನ್ನ ಬಾಬ್ತು ಧಾತ್ರ್ಯಾದಿ ತೈಲ ತಲೆಗೆ ಹಚ್ಚುವರೆ

ನಿದ್ರೆ ಬರುವದಿಲ್ಲವಂತೆ; ಸ್ನಾನ ಮಾಡಲು ಅಪೇಕ್ಷಿಸುತ್ತಾಳೆ.

5. ಗುಣವೇ ಅಲ್ಲದೆ ಅವಗುಣವಿಲ್ಲ ಎಂತ ಹೇಳುತ್ತಾರೆ. ಮೈಬಿಸಿ ಬೆಳಿಗ್ಗೆ 99°, ಸಂಜೆ ಹೊತ್ತು 99 4° ಇರುತ್ತದಂತೆ.

6. ನಿನ್ನೆ ಮೈಬಿಸಿ ಬೆಳಿಗ್ಗೆ 98°, ಸಂಜೆ 99·4° ಇತ್ತಂತೆ. ಸ್ರಾವ (ಬಿಳೇ) ಕಡಿಮೆಯಾಗಿದೆಯಂತೆ. ನಿನ್ನೆ ತೈಲಗಳನ್ನು ಹಚ್ಚಿ ಅಭ್ಯಂಜನ ಮಾಡಿಸಿಯದೆ. ಅಪರಾಹ್ಣ ರೋಗಿಯ ಮನೆಗೆ ನಾನು ಹೋದಾಗ್ಗೆ, ರೋಗಿ ಅಲ್ಲ ಇರಲಿಲ್ಲ. 3 ಘಂಟೆಗೆ ನಾರಟಿನಲ್ಲ ಕುಳಿತು ಸಂತೆಗೆ ಹೋಗಿದ್ದಾಳೆ ಎಂತ ತಿಳಿಯಿತು. 4 ಘಂಟಗೆ ವಾಪಸು ಒಂದಳು. ಆಗ್ಗೆ ಮೈಬಸಿ 99° ಇತ್ತು ಪಿತ್ತ ಕಫ ನಾಡಿಗಳಿಗೆ ತಲೆಯಿಲ್ಲ. ನಿದ್ರೆ ಅಪರರಾತ್ರಿ 2 ಘಂಟೆ ವರೆಗೆ ಒರುವದಿಲ್ಲ ಅನ್ನುತ್ತಾಳೆ

ಕೊಟ್ಟದೆ; ಮೈಗೆ ಸವರುವರೆ ಬಲಾಶ್ವಗಂಧಾದಿ ತೈಲವನ್ನು ಕೊಂಡುಕೊಳ್ಳ ಹೇಳಿದೆ.

5. ಅದೇ ರೀತಿ ಔಷಧ ಇನ್ನು 4 ದಿನ ಮಾಡುವದು.

6. ಕಷಾಯದ್ರವ್ಯಗಳಲ್ಲಿ ಲಾಮಂಚವನ್ನು ಬಿಟ್ಟು, ಅದರ ಸ್ಥಾನದಲ್ಲಿ ಭದ್ರಮುಷ್ಟಿಯನ್ನು ಸೇರಿಸುವದು. ಮಾತ್ರೆ ಮತ್ತು ಷರಬತ್ ಅದೇ.

7 ಪಿತ್ತನಾಡಿ ಸ್ಥಾನಚ್ಯುತ, ಕಫ ಅಸ್ಥಿರ (ಗಂಜಿ ಊಟದನಂತರ ಪರೀಕ್ಷಿಸಿದ್ದು) ತನಗ ಗುಣಾವಗುಣ ಕಾಣುವದಿಲ್ಲ ಎನ್ನುತ್ತಾಳೆ ಪಕ್ಕದ ಶೂಲೆಯಾಗಲಿ ಕುತ್ತಿಗೆ ಎಂಬದಿಯ ವೇದನೆಯಾಗಲಿ ಇಲ್ಲ, ನಿದ್ರೆ ಮಾಡಲಿಸಂತೆ

7. ಕಷಾಯದ್ರವ್ಯಗಳೊಳಗೆ ಕಡೀರನ್ನು ತೊ |. ಕ್ಕ ತಗ್ಗಿಸಿ, ಆನೆಕಡೀರನ್ನು ತೊ. |||. ಕ್ಕೆ ಏರಿಸುವದು, ಮತ್ತು ಶ್ರೀಗಂಧವನ್ನು ಬಿಟ್ಟು ಕೊತ್ತುಂಬರಿ ತೊ |, ನೆಗ್ಗಿಲಮುಳ್ಳು ತೊ = ಕೂಡಿಸುವದು; ರಾತ್ರಿ ಮಲಗುವಾಗ್ಗೆ ಮಾತುಲುಂಗರಸಾಯನ ತೊ. ||. ದಂತೆ ಸೇವಿಸಿ ಅರ್ಧ ಕುಡ್ತೆ ಹಾಲನ್ನು ಅನುಪಾನವಾಗಿ ಕುಡಿಯುವದು.

8 ವಾತ ಅಸ್ಥಿರ ಹೆಚ್ಚಾಗಿ ಸ್ಥಾನಚ್ಯುತ (ಬೆಳಿಗ್ಗೆ ಹಸಿದಿರುವಾಗ್ಗೆ ನೋಡಿದ್ದು), ಪಿತ್ತನಾಡಿ ತಲೆಯಿಲ್ಲದ ಸ್ಥಾನದಲ್ಲಿ, ಅಥವಾ ಸ್ಥಾನಚ್ಯುತವಾಗಿ ಇರುತ್ತದೆ. ಕಫದಲ್ಲಿ ದೋಷ ಕಡಿಮ. ಮೈಬಸಿ 99°ಗೆ ಮಿಗುವದಿಲ್ಲವಂತೆ ನಿದ್ರೆ ಮೊದಲಿನದ್ದಕ್ಕಿಂತ ಹೆಚ್ಚು ಒರುತ್ತದ ಬಿಳೇ ಸ್ರಾವ ಹಚ್ಚಿದೆ.

8. ಕಷಾಯದ್ರವ್ಯಗಳಲ್ಲಿ ಹಿಪ್ಪಲಿಯನ್ನು ಬಿಟ್ಟು, ಖದಿರ ತಿರಳನ್ನು ಸೇರಿಸುವದು ಮತ್ತು ಬಿಲ್ವಪತ್ರೆಯನ್ನು ತೊ. = ಕ್ಕೆ ತಗ್ಗಿಸಿ ಶ್ರೀಗಂಧವನ್ನು ಪುನಃ ಕೂಡಿಸುವದು; ಸಂಜೆಹೊತ್ತು ಕೊಡುವ ಮಾತ್ರೆಗಳಲ್ಲಿ ಮ. ಜ್ವ. ಬಿಟ್ಟು, ಅತಿಸಾರಮೂಲಮಾತ್ರೆ ||. ಯನ್ನು ಕೂಡಿಸುವದು; ಔಷಧ 8 ದಿನಗಳಿಗೆ ಕೊಟ್ಟದೆ.

9. ನಿದ್ರೆ ಬರುತ್ತದೆ, ಸ್ರಾವ ಕಡಿಮೆಯಾಗಿದೆ; ಮೈಬಿಸಿ ಅಪರಾಹ್ಣ 6 ಘಂಟೆಯೊಳಗೆ ನೋರ್ಮಲಿಗೆ (ಸೌಖ್ಯಸ್ಥಿತಿದ್ದಕ್ಕೆ) ಇಳಿಯುತ್ತದೆ; ಪಿತ್ತನಾಡಿ ಅಬಲಿ.

9. ಕಷಾಯದ್ರವ್ಯಗಳಿಗೆ ಅಮೃತಬಳ್ಳಿ ತೊ. = ಕೂಡಿಸುವದು ಮತ್ತು ಮಾತುಲಂಗರಸಾಯನದ ಪ್ರಮಾಣವನ್ನು ತೊ. |||. ಕ್ಕೆ ಏರಿಸುವದು. ಔಷಧ 4 ದಿನಗಳಿಗೆ ಕೊಟ್ಟದೆ.

10. ಅವಗುಣವಿಲ್ಲ; ಮುಟ್ಟಾಗಿ ನಿನ್ನೆ ಯಿಂದದ್ದು; ರಜಸ್ಸು ಹೋದದ್ದು ಅಲ್ಪವಾದ್ದರಿಂದ ತನಗೆ ಅಶಕ್ತಿ ಉಂಟಾಗಲಿಲ್ಲ ಎಂತ ರೋಗಿ ಹೇಳುತ್ತಾಳಂತೆ.

10. ಅದೇ ಕಷಾಯ, ಮಾತ್ರೆ, ಷರಬತ್ತು ಮತ್ತು ರಸಾಯನ ಇನ್ನು 7 ದಿನ ಸೇವಿಸುವದು.

11. ಮೂರಣೆ ದಿನ ರೋಗಿಯನ್ನು ನೋಡಲಾಯಿತು. ನೀರುಳ್ಳ ತಂಬಿಗೆಯನ್ನು ಎತ್ತುವಾಗ ಎಡದ ಕೈಯಲ್ಲಿ ಉಂಟಾದ ಕೊಳುಪು (ಸಿಕ್ಕು) 3-4 ದಿನವಾದರೂ ಹೋಗಲಿಲ್ಲವಂತೆ, ಪಿತ್ತಕಫನಾಡಿಗಳ ತಲೆ ಸರಿಯಿಲ್ಲ, ಕಫದಲ್ಲಿ ದೋಷ ಹೆಚ್ಚು (ಅರ್ಧ ಘಂಟೆಗೆ ಮೊದಲು ರೋಗಿ ಉಂಡಿದ್ದಾಳ) ಕಳೆದ 3-4 ದಿನಗಳಿಂದ ಮಧ್ಯಾಹ್ನ ಊಟದನಂತರ ಯಾವದೋ ಮದುವೆಮನೆಗೆ ಹೋಗಿದ್ದು ರಾತ್ರಿ ಮಲಗುವದಕ್ಕೆ ಮನೆಗೆ ಬರುತ್ತಿದ್ದಾಳಂತೆ, ನಾಲಿಗೆ ಕೆಂಪಾಗಿ ಸ್ವಲ್ಪ ಒಣಗಿಕೊಂಡು ಉಂಟು (ವೀಳ್ಯದೆಲೆ ತಿಂದಿರಬಹುದು) ಮಲ ಸರಿ

11 ಸಂಜೆ ಹೊತ್ತು ಅತಿಸಾರವಲ್ಲೂ ಮಾತ್ರೆ ಬಿಡುವದು ಮತ್ತು ಕಸ್ತೂರ್ಯಾದಿಯನ್ನು ೧|| ಮಾತ್ರೆಗೆ ಏರಿಸುವದು

12. 4 ದಿನಗಳನಂತರ ವಿಚಾರಿಸಿದ್ದಲ್ಲಿ ಅವಗುಣವಿಲ್ಲ ಎಂದರು.

12. ರಸಾಯನದ ಪ್ರಮಾಣವನ್ನು ತೊ. ೧ಕ್ಕೆ ಏರಿಸ ಹೇಳಿದೆ

13. ಮುಟ್ಟಾಗಿದ್ದಾಳೆ, ವಿಶೇಷವಿಲ್ಲ.

13. ಸಂಜೆಗೆ ಕಸ್ತೂರ್ಯಾದಿ ||. ಅತಿ || ದಂತೆ ಮೊದಲು ಸೇವಿಸಿದ ಪ್ರಕಾರ.

14. ಮೊನ್ನೆಯಿಂದ ಮೈಬಿಸಿ ರಾತ್ರಿ ೮½ ಘಂಟೆಗೆ 100.2° ವರೆಗೆ ಏರುತ್ತದಂತೆ, ಬೆಳಗ್ಗೆ ಸೋರ್ಮಲಿಗೆ ಇಳಿಯುತ್ತದಂತೆ (ಅಪಥ್ಯದ ದೋಷವಾಗಿರಬೇಕು); ಮುಟ್ಟಿನ ಸ್ರಾವ ಅತಿಯಾಗಿರಲಿಲ್ಲ.

14 ಬೆಳಗ್ಗೆ ಕಸ್ತೂರ್ಯಾದಿಯನ್ನು ಬಿಟ್ಟು ಮು. ಜ್ವ. ೧ ಮಾತ್ರೆಯಂತೆ ಸೇವಿಸುವದು.

15. ಮೈಬಿಸಿ 99° ಗೆ ಮಿಗುವದಿಲ್ಲವಂತೆ, ಅವಗುಣವೇನೂ ಇಲ್ಲ.

15. ಕಸ್ತೂರ್ಯಾದಿ ೧, ಮು ಜ್ವ || ರಂತೆ ಕೊಡುವದು.

16. ಸಂಜೆಯಲ್ಲಿ ಮು. ಜ್ವ. ಬಿಟ್ಟರ ಮೈಬಿಸಿ 99.6°ಕ್ಕ ಏರುತ್ತದೆಂತ ಆಲೋಚಿಸಿ, ಸಂಜೆಗೂ ಅತಿ ಬಿಟ್ಟು ಅದರ ಸ್ಥಾನದಲ್ಲಿ ಮು. ಜ್ವ. ಕೂಡಿಸಿ ಕೊಡುತ್ತಾರಂತೆ; ಸುಮಾರು 15 ದಿನಗಳಿಂದ ಎಡಪಕ್ಕದಲ್ಲಿಯೂ ಎದೆಯಲ್ಲಿಯೂ ಸ್ವಲ್ಪ ನೋವು ಉಂಟಂತೆ, ಕಂಠದಲ್ಲಿ ಶೀತದಿಂದ ನೋವು ಉಂಟಾಗಿದೆ ಎನ್ನುತ್ತಾಳೆ, ಸೆಕೆ ಮತ್ತು ಬೆವರುವದು ಮೊದಲಿಲ್ಲದವು ಈಗ ಕಾಣುತ್ತವಂತೆ, ಮಲಮೂತ್ರ ಸರಿ, ಪಿತ್ತ ಹೆಚ್ಚಾಗಿ ಸ್ಥಾನಚ್ಯುತ, ಕೆಲವು ಮಾತ್ರ ಸ್ಥಾನದಲ್ಲಿ ಅಬಲಿಯಾಗಿ ಇರುತ್ತವೆ, ಕಫದಲ್ಲಿ ಈ ದೋಷ ಇನ್ನೂ ಕಡಿಮೆಯಾಗಿ ಉಂಟು.

16. ಕಂಠಕ್ಕೆ ಹೊರಗಿನಿಂದ ಭ್ರಾಂಗ್ಯಾದಿ ವಟಕವನ್ನು ನೀರಿನಲ್ಲಿ ತೇದಿ, ಕುದಿಸಿ ಹಚ್ಚುವದು; ಬೇರೆ ಚಿಕಿತ್ಸೆ ಮೊದಲಿನಂತೆ ಇನ್ನು 4 ದಿನ ಮಾಡಿ ಬರಹೇಳಿದ.

17. ಕಂಠದ ನೋವು ಹೋಗಿದೆ, ಪಕ್ಕದ ನೋವು ಕಡಿಮೆಯಾಗಿದೆ, ಮೈಬಿಸಿ 99·1° ರ ವರಗೆ ಏರುತ್ತದಂತೆ.

17. ಕಷಾಯ ದ್ರವ್ಯಗಳೊಳಗೆ ಖದಿರೆ ತಿರಳನ್ನು ಬಿಟ್ಟು, ಪರ್ಪಾಟಕವನ್ನು ತೊ. |. ಕ್ಕೆ ಏರಿಸುವದು.

18. 4ನೇ ದಿನ ನೋಡಲಾಯಿತು. ಸ್ವಲ್ಪ ನೆಗಡಿಯಾಗಿದೆ, ಕೆನ್ನೆಸಿಡಿತ ಉಂಟಾಗಿದೆ, ಪಕ್ಕದ ನೋವು ಸ್ವಲ್ಪ ಉಂಟಂತೆ; ಪ್ರಯಾಸವಿಲ್ಲದೆ ಜಗಲಿ ಮೆಟ್ಟಲುಗಳನ್ನು ಹತ್ತುವಷ್ಟು ಶಕ್ತಿ ಬಂದದಂತೆ, ನಾಡಿಗಳಲ್ಲಿ ವಾತ ಸ್ಥಾನದಲ್ಲಿ ಬಲೀ, ಪಿತ್ತ ಅಬಲಿ ಅಥವಾ ಸ್ತಬ್ಧ, ಕಫ ಅಬಲಿ ಮತ್ತು ಅಸ್ಥಿರ

18 ಕೆನ್ನೆಗಳಿಗೆ ಭಾ. ಪಟಕವನ್ನು ಮೊದಲು ಕಂಠಕ್ಕ ಹಚ್ಚಿದ ಹಾಗೆ, ಸೀರಿಸಿಂದ ತೇದಿ ಲೇಪಿಸುವದು. ನೆಗಡಿ ಕಡಿಮೆಯಾಗದಿದ್ದರೆ, ಕಷಾಯದ ಪ್ರಕ್ಷೇಪಗಳಿಗೆ ಹಿಪ್ಪಲಿ ಪುಡಿ ೧-೨ ಚಿಮಿಟಿ ಕೂಡಿಸುವದು.

19 ಹಿಪ್ಪಲಿಪುಡಿ ಕೂಡಿಸಲಿಲ್ಲವಂತೆ, ನೆಗಡಿ ಕಡಿಮೆಯಾಗಿದೆ, ಸೋಮದ ಸ್ರಾವ ಉಂಟು, ಮೊದಲಿನಷ್ಟು ಅಲ್ಲ ಅನ್ನುತ್ತಾಳೆ.

19. ಕಷಾಯ ದ್ರವ್ಯಗಳಲ್ಲಿ ಸುಗಂಧಿ ಬೇರನ್ನು ಬಿಟ್ಟು, ಕಹಿಬೇವಿನ ಒಳಸಾರನ್ನು ಕೂಡಿಸುವದು, ಕಸ್ತೂರ್ಯಾದಿ ಮತ್ತು ಮ. ಜ. |||. ರಂತೆ, ಕಲ್ಲುಸಕ್ಕರೆ ಪುಡಿ ಮತ್ತು ಜೇನು ಕೂಡಿಸಿ, ಕೊಡುವದು; ಮುಟ್ಟಾದರೆ ಮ ಜ್ವ ಸ್ಥಾನದಲ್ಲಿ ಅತಿ. ಯನ್ನು ಉಪಯೋಗಿಸ ಹೇಳಿದೆ.

20. 14 ದಿನಗಳನಂತರ ನೋಡಿದ್ದಲ್ಲಿ—ತನ್ಮಧ್ಯ ಮುಟ್ಟಾಗಿದ್ದಳು, ಸ್ರಾವವಿಶೇಷವಿರಲಿಲ್ಲ, ಅಶಕ್ತಿಯಾಗಲಿಲ್ಲ, ಎಡದ ಮಗ್ಗಲಲ್ಲಿ ಮಲಗಿದ್ದಾಗ್ಗೆ ಆ ಪಕ್ಕದಲ್ಲಿ ನೋವು ಕಾಣುತ್ತದಂತ, ಮೈಬಿಸಿ ಬೆಳಿಗ್ಗೆ 97°, ಮಧ್ಯಾಹ್ನ 99°, ಪಿತ್ತನಾಡಿ ಅಬಲಿ, ಕಫ ಅದಕ್ಕಿಂತ ಅಬಲಿ

20. ಕಷಾಯ ದ್ರವ್ಯಗಳೊಳಗೆ ಕಹಿಬೇವಿನ ಒಳಸಾರನ್ನು ತೊ. | ಕ್ಕೆ ಏರಿಸುವದು

21. 7 ದಿನಗಳನಂತರ — ನಿನ್ನೆಯಿಂದ ನೆಗಡಿಯಾಗಿದೆ, ಕೆಮ್ಮು ಉಂಟು, ಪಿತ್ತಕ್ಕ ತಲೆ ಇಲ್ಲ, ಕಫ, ಸ್ತಬ್ಧ

21. ಕಷಾಯದ ಪ್ರಕ್ಷೇಪಗಳೊಂದಿಗೆ ಹಿಪ್ಪಲಿ ಪುಡಿ 2, 3 ಚಿಮಿಟಿ ಕೂಡಿಸ ಹೇಳಿದೆ

22. 7 ದಿನಗಳನಂತರ—ಔಷಧ ಮುಗಿದು 3 ದಿನವಾಯಿತು; ಕಸ್ತೂರ್ಯಾದಿ ಒಡಲಾಗಿ ಮ. ಜ್ವ. ವನ್ನು ಕೊಡುತ್ತಾ ಬಂದಿದ್ದರಂತೆ; ಅಪರಾಹ್ಣ 2½ ಗಂಟೆ ಸಮಯದಲ್ಲಿನೋಡಲಾಗಿ, ನಾಲಿಗೆಯ ಅಡಿ ಬಿಸಿ ನೋರ್ಮಲೇ ಇತ್ತು; ಪಿತ್ತನಾಡಿ ಮಾತ್ರ ಸ್ವಲ್ಪ ಸ್ಥಾನಚ್ಯುತ.

22. ಅದೇ ಕಷಾಯದಲ್ಲಿ ಕಸ್ತೂರ್ಯಾದಿ ೧ರಂತೆ, ಕಲ್ಲುಸಕ್ಕರೆ ಮತ್ತು ಜೇನು ಕೂಡಿಸಿ 8 ಪರ್ತಿಗೆ.

| | |
|---|---|
| 23. ಮುಟ್ಟಾಗಿ ಇಂದಿಗೆ ನಾಲ್ಕನೇ ದಿನ. ಸ್ರಾವ ನಿನ್ನೆಯಿಂದ ಕಡಿಮೆಯಾಗಿದೆ. 3 ದಿನಗಳಿಂದ ಕಸ್ತೂರ್ಯಾದಿ ಮಾತ್ರೆ ಕೊಡಲಿಲ್ಲವಂತೆ. | 23. ಅದೇ ಪ್ರಕಾರ ಕಸ್ತೂರ್ಯಾದಿ 8 ಸರ್ತಿಗೆ. |
| 24. ಎಲ್ಲಾ ವಿಷಯದಲ್ಲಿಯೂ ಗುಣ, ಜ್ವರ ಇಲ್ಲ. | 24. ಅದೇ ಪ್ರಕಾರ ಕಸ್ತೂರ್ಯಾದಿ 8 ಸರ್ತಿಗೆ |
| 25. ಡಿ. ಡಿ. | 25. ಡಿ. ಡಿ. |

ಹೀಗೆ, ಒಟ್ಟು 115 ದಿನಗಳ ಚಿಕಿತ್ಸಾನಂತ್ಯದಲ್ಲಿ ರೋಗಿಗೆ ಪೂರ್ಣ ಸೌಖ್ಯವಾಯಿತೆಂಬದರಿಂದ ಚಿಕಿತ್ಸೆ ನಿಲ್ಲಿಸಿದರು. ಇನ್ನಷ್ಟು ಪುಷ್ಟಿ ಮಾಡುವದಕ್ಕೆ, ಯುಕ್ತವಾದ ಒಂದು ಘೃತವನ್ನು ತಯಾರಿಸಿ ರೋಗಿಗೆ ಕೊಡುವದು ಒಳ್ಳೇದೆಂತ ತಿಳಿಸಿದರೂ, ರೋಗಿಯು ಕಡೆಯವರಿಗೆ ಅದು ಅಗತ್ಯವೆಂತ ಕಾಣಲಿಲ್ಲ

ನನಗಿಂತ ಮೊದಲು ಈ ರೋಗಿಗೆ ಚಿಕಿತ್ಸೆಮಾಡಿದ ಪಂಡಿತರು ಅವಳ ರೋಗ ಯಾವದೆಂತ ಆಲೋಚಿಸಿ ಉಪಕ್ರಮಿಸಿದರೋ, ತಿಳಿಯಲಿಲ್ಲ. ಶಾಸ್ತ್ರದಲ್ಲಿ ನಾಮರೂಪಗಳಿಂದ ಭಿನ್ನವಾಗಿ ವರ್ಣಿಸಲ್ಪಟ್ಟ ರೋಗಗಳೊಳಗೆ ಚಿಕಿತ್ಸೆಗೆ ಬಂದ ರೋಗವು ಯಾವದೆಂತ ಮುಂದಾಗಿ ವ್ಯವಸ್ಥೆಮಾಡಿಕೊಂಡು, ಅದಕ್ಕೆ ಪ್ರಶಸ್ತವಾಗಿ ಹೇಳಲ್ಪಟ್ಟ ಔಷಧಗಳೊಳಗೆ ಒಂದರನಂತರ ಒಂದನ್ನು ಕೊಟ್ಟುನೋಡುವ ಪಂಡಿತನು ಇಂಥಾ ರೋಗಕ್ಕೆ ಹೇಗೆ ಸಮರ್ಪಕವಾಗಿ ಚಿಕಿತ್ಸೆ ಮಾಡಲು ಶಕ್ತನಾಗುವದು? ಈ ರೋಗಿಯಲ್ಲಿ ಅಸೃಗ್ದರ, ಸೋಮರೋಗ, ಶೋಷ, ಜ್ವರ, ವಾತ, ನರಮಂಡಲದವ್ಯಾಧಿ ಮುಂತಾದ ಅನೇಕ ವ್ಯಾಧಿಗಳು ಕೂಡಿಕೊಂಡಿದ್ದವು ಶಾಸ್ತ್ರದಲ್ಲಿ ವರ್ಣಿಸಲ್ಪಟ್ಟ ಯಾವ ಪ್ರತ್ಯೇಕ ವ್ಯಾಧಿಯಲ್ಲಿಯಾದರೂ ಈ ರೋಗಿಯಲ್ಲಿ ಕಂಡ ಎಲ್ಲಾ ಲಕ್ಷಣಗಳು ಸೇರಬಹುದಾಗಿ ಉಪದೇಶವಿರುವದು ಕಾಣುವದಿಲ್ಲ. ಅದಲ್ಲದೆ ಚಿಕಿತ್ಸಾಕಾಲದಲ್ಲಿ ರೋಗಿಯು ಅಪಥ್ಯಮಾಡಿ, ಬೇರೆ ಇನ್ನೂ ಕೆಲವು ವಿಕಾರವಿಶೇಷಗಳನ್ನು ಸಂಪಾದಿಸುತ್ತಿದ್ದಳು ಇಂಥಾ ಸಂದರ್ಭಗಳಲ್ಲಿ ಯಾವದಾದರೊಂದು ರೋಗವು ಪ್ರಧಾನವಾದದ್ದೆಂತ ಇಟ್ಟುಕೊಂಡು, ಅದರ ಮೇಲೆ ಮಾತ್ರ ದೃಷ್ಟಿ ಇಟ್ಟು ಚಿಕಿತ್ಸೆ ಮಾಡುತ್ತಾ ಬಂದರೆ, ಅದು ನಿರರ್ಥಕವಾಗುವದೇ ಸರಿ. ನಾನು ಚಿಕಿತ್ಸಾರಂಭದಲ್ಲಿ ವಿಧಿಸಿದ ಕಷಾಯಕ್ಕೆ ಸೇರಿದ ಔಷಧಗಳೊಳಗೆ ಕಡೀರು ಬಲಪ್ರದ, ವಾತಹರ, ಪುಷ್ಟಿಕಾರಿ ಮತ್ತು ಅಸೃಗ್ದರ ಶಮನಕಾರಿ ಮತ್ತು ಆನೆ ಕಡೀರು ವಿಶೇಷವಾಗಿ ಧಾತುವೃದ್ಧಿಕರ. 'ಮಲಾಯತ್ತಂ ಬಲಂ' ಎಂಬದನ್ನು ನೆನಪಿನಲ್ಲಿಟ್ಟುಕೊಂಡು ರೋಗಿಯ ಮಲವನ್ನು ಸಂಗ್ರಹಿಸಿ ಗಟ್ಟಿಮಾಡುವದು ಅಗತ್ಯ ಎಂಬ ಮುಖ್ಯ ಉದ್ದೇಶದಿಂದ ಬಿಲ್ಲಪತ್ರೆಯನ್ನು ಸೇರಿಸಿತು; ಅದು ಜ್ವರಶಾಂತಿಗೂ, ಎದೆ, ಕಂಠ ಮತ್ತು ಶ್ವಾಸಕೋಶಗಳಲ್ಲಿರಬಹುದಾದ ಕಫವನ್ನು ಒಣಗಿಸುವದಕ್ಕೂ ಒಳ್ಳೆಯದು. ಶ್ರೀಗಂಧವು ಜ್ವರದಲ್ಲಿಯೂ, ನರಮಂಡಲದ ದೋಷದಲ್ಲಿಯೂ ಅಸೃಗ್ದರದಲ್ಲಿಯೂ, ಸೋಮರೋಗದಲ್ಲಿಯೂ ಗುಣಕರವಾದದ್ದು. ಪಿತ್ತಶಾಂತಿಗೂ, ಜ್ವರೋಪಶಮನಕ್ಕೂ, ಜಿವರಿಸುವದಕ್ಕೂ ಪರ್ಪಾಟಕ ಮತ್ತು ಲಾಮಂಚವನ್ನೂ ಕೂಡಿಸಿತು. ಸುಗಂಧಿಬೇರು ರಕ್ತಶುದ್ಧಿಕರ, ವಾತಹರ, ಮೇಹಹರ ಮತ್ತು ಬಲಪ್ರದ. ದೀಪನಪಾಚನಕ್ಕೂ, ವಾಯುಸಂಚಾರವನ್ನು ಕ್ರಮಪಡಿಸುವದಕ್ಕೂ, ಇತರ ಸೌಮ್ಯಗುಣದ ಔಷಧಗಳ ಕಫವಾತದೋಷನಿವೃತ್ತಿ

ಗೂ ಒಣಶುಂಠಿಯನ್ನು ಸೇರಿಸಿದ್ದು. ಅದು ದೀಪನಪಾಚನಕರ ಮಾತ್ರವಲ್ಲದೆ ಹಿಡಿದಿದ್ದ ಕಫವನ್ನು ಕಡಿಯುವದಕ್ಕೂ ವಾತಸಂಚಾರವನ್ನು ಬಲಪಡಿಸುವದಕ್ಕೂ ಶಕ್ತಿಯುಳ್ಳದ್ದು. ಮಹಾಜ್ವರಾಂಕುಶ ಮಾತ್ರೆಯು ವಿಶೇಷವಾಗಿ ವಿಷಮಜ್ವರವನ್ನು ಪರಿಹರಿಸುವ ಗುಣವುಳ್ಳದ್ದು, ವೇದನೆಗಳನ್ನು ಶಮನಮಾಡತಕ್ಕಂಥಾದ್ದು ಮತ್ತು ಶ್ವಾಸನಾಳದಲ್ಲಿಯ ಕಫದ ತಡೆಯನ್ನು ತೆಗೆದುಬಿಡುವ ಗುಣದ್ದು. ಕಸ್ತೂರ್ಯಾದಿ ಮಾತ್ರೆಯು ವಿಶೇಷವಾಗಿ ಶೋಷಹರ, ಬಲಪ್ರದ, ಧೈರ್ಯಪ್ರದ, ನರಮಂಡಲಶುದ್ಧಿಕರ, ವಾತಾನುಲೋಮನಕಾರಿ ಮತ್ತು ಶೂಲಹರ. ಅತಿಸಾರಮೂಲಮಾತ್ರೆಯಲ್ಲಿ ಸಾಂತ್ವನ ಗುಣವೂ, ನಿದ್ದೆಬರಿಸುವ ಗುಣವೂ, ರಕ್ತಸ್ರಾವವನ್ನು ತಡೆಯುವ ಗುಣವೂ, ವ್ರಣವನ್ನು ಮತ್ತು ಕಫವನ್ನು ಒಣಗಿಸುವ ಗುಣವೂ ಇರುತ್ತವೆ. ಅದರಲ್ಲಿರುವ ಮಲವನ್ನು ಬಿಗಿಯುವ ಗುಣವು ಈ ರೋಗಿಯಲ್ಲಿ ದೋಷಕರವಾಗಿರಲಿಲ್ಲ. ಮಾತುಲಂಗರಸಾಯನವು ಒಳ್ಳೇ ಪುಷ್ಟಿಕಾರಿ, ಬಲಪ್ರದ ಮತ್ತು ಪಿತ್ತಶಾಂತಿಕರ. ಕಾಸೀಸ ಮಿಶ್ರ ಷರಬತ್ತು ವಿಶೇಷವಾಗಿ ರಕ್ತವೃದ್ಧಿಕಾರಿ; ಅದರಲ್ಲಿ ಧಾತುವೃದ್ಧಿ ಮಾಡುವ ಗುಣವೂ, ಪಿತ್ತಹರಗುಣವೂ ಇರುತ್ತವೆ ಭಾಂಗ್ರ್ಯಾದಿ ವಟಕವನ್ನು ನೀರಿನಿಂದ ಲೇಪಿಸುವದರಿಂದ ಕೆನ್ನೆಸಿಡಿತ, ತಲೆಭಾರ, ನೆಗಡಿ, ನೋವು ಮತ್ತು ಬೇಗು ಪರಿಹಾರವಾಗುತ್ತವೆ. ಕಷಾಯದ ಸೌಮ್ಯತ್ವವನ್ನೂ ಪಿತ್ತಶಮನಗುಣವನ್ನೂ ಸಾಂತ್ವನ ಗುಣವನ್ನೂ ಹೆಚ್ಚಿಸಿ, ನಿದ್ದೆಬರುವದಕ್ಕ ಸಹಾಯ ಮಾಡೀತೆಂತ ಯೋಚಿಸಿ, ಎರಡನೇ ಸರ್ತಿಯಲ್ಲಿ ಜ್ಯೇಷ್ಠಮಧುವನ್ನು ಕೂಡಿಸಿದ್ದು ನಾಲ್ಕನೇ ಸರ್ತಿಯಲ್ಲಿ ಮಲ ಸ್ವಲ್ಪ ಬಳೇ ವರ್ಣಕ್ಕೆ ಬಂದದೆಂತ ತಿಳಿದದ್ದರಿಂದ ಪಿತ್ತವೃದ್ಧಿಮಾಡುವದಕ್ಕಾಗಿ ಹಿಪ್ಪಲಿಯನ್ನು ಸೇರಿಸಿ, ಅದರ ತೀಕ್ಷ್ಣತೆ ಮತ್ತು ಭೇದನಗುಣಕ್ಕೆ ತಡೆಯಾಗಿ ಜೇನಿನ ಪ್ರಕ್ಷೇಪವನ್ನು ವಿಧಿಸಲಾಯಿತು. ಜ್ವರ ಮೃದುವಾದ ಮೇಲೆ ಆರೋಗ್ಯಕ್ಕೂ ಶಕ್ತಿಗೂ ಮುಖ್ಯವಾದ ರಕ್ತವನ್ನು ವೃದ್ಧಿಗೊಳಿಸುವದಕ್ಕಾಗಿ ಕಾಸೀಸ ಮಿಶ್ರ ಷರಬತ್ತನ್ನು ಅಲ್ಪಪ್ರಮಾಣದಲ್ಲಿ ದಿನಕ್ಕೊಂದೇ ಸರ್ತಿ ಕೊಡಲಾರಂಭಿಸಿತು, ಮತ್ತು ಯುಕ್ತವಾದ ತೈಲಗಳ ಉಪಯೋಗದಿಂದ ರೋಗಿಗೆ ಅಭ್ಯಂಗನ ಮಾಡಿಸುವದು, ರೋಗಿಯ ಅನಿದ್ರಾದಿ ಅನೇಕ ಲಕ್ಷಣಗಳ ವಿಚಾರದ ಮೇಲೆ, ಹಿತವಲ್ಲದೆ ಬಾಧಕಕರವಾಗದೆಂತ ವ್ಯವಸ್ಥೆ ಮಾಡಿತು. ಆರನೇ ಸರ್ತಿಯಲ್ಲಿ ರೋಗಿಯ ಕಫನಾಡಿಯಲ್ಲಿ ಪಿತ್ತದಲ್ಲಿದ್ದಷ್ಟೇ ದೋಷ ಕಂಡದ್ದರಿಂದ ಲಾವಂಚವನ್ನು ಬಿಟ್ಟು ಭದ್ರಮುಷ್ಟಿಯನ್ನು ಸೇರಿಸಿದ್ದು. ಏಳನೇ ಸರ್ತಿಯಲ್ಲಿ ನಿದ್ರೆಗೆ ಆತಂಕ ಮಾಡುವದು ವಾಯುವೇ ಆಗಿರಬೇಕೆಂತ ಊಹಿಸಿ, ಸ್ರಾವವಿಶೇಷವಿಲ್ಲದ್ದನ್ನು ನೋಡಿ, ಶ್ರೀಗಂಧದ ಬದಲಾಗಿ ಕೊತ್ತುಂಬರಿ-ನೆಗ್ಗಿಲಮುಳ್ಳುಗಳನ್ನು ಕೂಡಿಸಿ, ರಾತ್ರಿಭೋಜನಾನಂತರ ಹಾಲಿನ ಅನುಪಾನದಿಂದ ಮಾತುಲಂಗರಸಾಯನವನ್ನು ಕೊಡಲು ಆರಂಭಿಸಿತು. ಅದರಿಂದ ನಿದ್ರೆ ಸ್ವಲ್ಪ ಹೆಚ್ಚಾದಾಗ್ಯೂ, ಸ್ರಾವ ಹೆಚ್ಚಿದ್ದನ್ನು ಲಕ್ಷಿಸಿ, ಹಿಪ್ಪಲಿಯನ್ನೂ ಬಿಲ್ಲಪತ್ರೆಯನ್ನೂ ಬಿಟ್ಟು, ಖದಿರ ತಿರುಳನ್ನೂ ಶ್ರೀಗಂಧವನ್ನೂ ಎಂಟನೇ ಸರ್ತಿಯಲ್ಲಿ ಸೇರಿಸಲಾಯಿತು ಒಂಭತ್ತನೇ ಸರ್ತಿಯಲ್ಲಿ ರೋಗದ ಎಲ್ಲಾ ಲಕ್ಷಣಗಳು ಶಾಂತವಾಗಿ ಕಂಡಾಗ್ಯೂ, ಪಿತ್ತನಾಡಿ ಅಬಲವಾಗಿ ಕಂಡದ್ದರಿಂದ ತ್ರಿದೋಷಹರವಾಗಿ ಕಹಿರಸವೇ ಅಧಿಕವಾಗಿರುವ ಮತ್ತು ರಸಾಯನಗುಣವುಳ್ಳ ಅಮೃತಬಳ್ಳಿಯನ್ನು ಅಲ್ಪ ಪ್ರಮಾಣದಲ್ಲಿ ಕೂಡಿಸಲಾಯಿತು ಮತ್ತು ಮಾತುಲಂಗರಸಾಯನದ ಪ್ರಮಾಣವನ್ನು ಏರಿಸಿತು. ಇಷ್ಟರಲ್ಲಿ (ಸುಮಾರು ೬೦ ದಿನಗಳ ಚಿಕಿತ್ಸೆಯಿಂದ) ರೋಗಿಯ ಸಂಕಷ್ಟಗಳೆಲ್ಲ

ವಾಸಿಯಾಗಿ, ಅವಳ ಶಕ್ತಿಯನ್ನೂ, ದೇಹಪುಷ್ಟಿಯನ್ನೂ ಹೆಚ್ಚಿಸುವ ಕರ್ತವ್ಯ ಮಾತ್ರ ಉಳಿದಿತ್ತು. ಆ ಮೇಲೆ ರೋಗಿಯು ಚಿಕಿತ್ಸಾವಿಧಿಗಳನ್ನನುಸರಿಸುವಲ್ಲಿ ಮೊದಲಿನಷ್ಟು ಶ್ರದ್ಧೆ ಇಡದೆ, ತನ್ನ ಆರೋಗ್ಯವನ್ನು ಕಾಪಾಡಿಕೊಳ್ಳುವ ಯತ್ನವನ್ನು ಸಡಿಲು ಮಾಡಿದರಿಂದ ಅಪಥ್ಯವೇ ಹೇತುವಾದ ಬೇರೆಬೇರೆ ರೋಗಲಕ್ಷಣಗಳು ಕಾಣಿಸಿಕೊಳ್ಳಲಾಗಿ, ಅವುಗಳಿಗೆ ತಕ್ಕ ಹಾಗೆ ಔಷಧೋಪಚಾರಗಳನ್ನು ಬದಲಾಯಿಸುತ್ತಾ ಬರಬೇಕಾದ್ದರಿಂದ ಮತ್ತೂ, ಸ್ವಲ್ಪ ಕಡಿಮೆ, ಎರಡು ತಿಂಗಳ ಮಟ್ಟಿಗೆ ಚಿಕಿತ್ಸೆಯು ದೀರ್ಘವಾಗುವದಾಯಿತು.

ಮೇಲಿನ ಚಿಕಿತ್ಸಾದೃಷ್ಟಾಂತದಲ್ಲಿ ಉಪಯೋಗಿಸಲ್ಪಟ್ಟ ಯೋಗಗಳಲ್ಲಿ ಅವಯವ ದ್ರವ್ಯಗಳ ಪ್ರಮಾಣದಲ್ಲಿ ಹೆಚ್ಚುಕಡಿಮೆ ಮಾಡಿದ ಯುಕ್ತಿಗೆ ವಾಚಕರು ವಿಶೇಷವಾಗಿ ಮನಸ್ಸುಕೊಡುವರಾಗಿ ಕೋರುತ್ತೇನೆ. ಉಪಯೋಗಿಸಲ್ಪಡುವ ದ್ರವ್ಯಗಳಲ್ಲಿ ಯಾವ ಗುಣದೋಷಗಳಿವೆ? ಆ ಗುಣದೋಷಗಳ ಶಕ್ತಿ ಎಷ್ಟರ ಮಟ್ಟಿನದು? ವಿಕಾರ ಪರಿಹಾರದ ಅಥವಾ ಕಾರಿಕೆಯ ದೃಷ್ಟಿಯಿಂದ ನಮಗೆ ಯಾವ ಗುಣ ಎಷ್ಟರ ಮಟ್ಟಿಗೆ ಔಷಧದಲ್ಲಿರಬೇಕು? ಯೋಗದಲ್ಲಿ ಸೇರಿದ ಯಾವ ದ್ರವ್ಯದಿಂದಾದರೂ ಉಂಟಾಗಬಹುದೆಂಬ ದೋಷದ ಭಯನಿವಾರಣದ ದೃಷ್ಟಿಯಿಂದ ಸೇರಿಸುವ ದ್ರವ್ಯದ ಶಕ್ತಿ ಆ ಉದ್ದೇಶಪೂರ್ತಿಗೆ ತಕ್ಕಷ್ಟೇ ಇದೆಯೊ? ಎಂಬಿತ್ಯಾದಿ ವಿಚಾರಗಳ ಮೇಲೆ ಆ ಯುಕ್ತಿಯು ಆಧರಿಸಿರುವಂಥಾದ್ದು ಈ ಜ್ಞಾನವು ಚರಕಾದಿಗಳ ಆದರಣೀಯ ಗ್ರಂಥಗಳಲ್ಲಿ ಕಾಣುವ ಯೋಗಗಳಲ್ಲಿ ಮಾಡಲ್ಪಟ್ಟಿರುವ ದ್ರವ್ಯಪ್ರಮಾಣವ್ಯತ್ಯಾಸಗಳನ್ನು ಸೂಕ್ಷ್ಮವಾಗಿ ನೋಡಿ, ಆಲೋಚಿಸಿ, ಮಾಡತಕ್ಕ ಊಹೆಗಳಿಂದಲೂ, ಸ್ವಂತ ಅನುಭವದಿಂದಲೂ ಉತ್ಪನ್ನವಾಗಿ ಕ್ರಮೇಣ ವೃದ್ಧಿಯಾಗತಕ್ಕದ್ದಾಗಿರುತ್ತದೆ. ಅಂಥಾ ಜ್ಞಾನವೃದ್ಧಿಗೆ ರೋಗಿಯಲ್ಲಿ ಚಿಕಿತ್ಸಾಕಾಲದಲ್ಲಿ ಕಾಣುವ ಲಕ್ಷಣ ಭೇದಗಳನ್ನು ದಿನೇ ದಿನೇ ಪರೀಕ್ಷಿಸಿ ತಿಳಿದು, ಆ ಭೇದಗಳು ಔಷಧಯೋಗದಿಂದುಂಟಾಗಿರಬಹುದೇ? ಪಥ್ಯದ ಗುಣದೋಷಗಳಿಂದ ಉತ್ಪನ್ನವಾದವುಗಳೇ? ಅಥವಾ ಹವಾ ಮುಂತಾದ ಅನ್ಯ ಹೇತುಜಗಳೇ? ಎಂಬದನ್ನು ಆಲೋಚಿಸುತ್ತಾ ಬರುವದು ಮುಖ್ಯ ಸಾಧನ.

32. ಕಾಫಿ, ಚಾ ಮತ್ತು ಕೋಕೋ ಎಂಬ ದ್ರವ್ಯಗಳಿಂದ ತಯಾರಿಸಿದ ಪಾನಕಗಳನ್ನು ಕುಡಿಯುವ ಅಭ್ಯಾಸದಿಂದ ಜನರ ಆರೋಗ್ಯಕ್ಕೆ ಸಂಭವಿಸುವ ಕೆಡಕನ್ನು 1ನೇ ಭಾಗದ XII-53ನೇ ಸಂಖ್ಯೆಯಲ್ಲಿ ವಿವರಿಸಿರುತ್ತದಷ್ಟೆ. ಅದರ ದೃಷ್ಟಾಂತವಾಗಿ ನನ್ನಲ್ಲಿ ಉತ್ಪನ್ನವಾದ ಒಂದು ವಿಶೇಷ ಲಕ್ಷಣದ ವಿಕಾರವನ್ನೂ ಅದರಿಂದ ನಾನು ನಿವೃತ್ತಿಹೊಂದಿದ ಪ್ರಕಾರವನ್ನೂ ಪ್ರಕಟಿಸುವದರಿಂದ ಬಹು ಜನರು ಪ್ರಯೋಜನ ಪಡೆದಾರಂತ ನೆನಸಿ, ಆ ವಿಷಯವನ್ನು ಇಲ್ಲಿ ಸಂಕ್ಷೇಪವಾಗಿ ಬರೆಯುತ್ತೇನೆ.

ಕಾಫಿ ಸ್ಥಾನದಲ್ಲಿ ಉಪಯೋಗಿಸುವ ದಕ್ಕೆ ದಿವ್ಯಾಮೃತಾಖ್ಯ ಚೂರ್ಣದ ಯೋಗ

ಸುಮಾರು ಇಪ್ಪತ್ತು ವರ್ಷಗಳ ಹಿಂದೆ ನನಗೆ ಒಂದು ವಿಧವಾದ ತಲೆ ತಿರುಗುವಿಕೆ ಉಂಟಾಗುವದಕ್ಕೆ ಆರಂಭವಾಯಿತು. ಮೊದಲು ಅದು ಹೆಚ್ಚಾಗಿ ನಾನು ಕೂತಿರುವಾಗ್ಗೆ ಕಾಣುತ್ತಿತ್ತು. ಆಗ್ಗೆ ನನ್ನ ತಲೆ ಒಂದು ಪಕ್ಕಕ್ಕಾಗಿ ಬಲಾತ್ಕಾರದಿಂದ ತಿರುಗಿಸಲ್ಪಟ್ಟ ಹಾಗೆ ಆಗಿ, ನಾನು ಬಿದ್ದು ಸಾಯುವೆನೆಂಬ ಭಯ ಉಂಟಾಗುತ್ತಿತ್ತು. ಕಣ್ಣುಕತ್ತಲೆಯ ಅಥವಾ ಎಚ್ಚರ ತಪ್ಪುವ ಲಕ್ಷಣವೇನೂ ಕಾಣುತ್ತಿದ್ದಿಲ್ಲ. ಈ ಲಕ್ಷಣ ಒಂದೆರಡು ಗಳಿಗೆಯಲ್ಲಿ ತನ್ನಂತೆ ಶಾಂತವಾಗುತ್ತಿತ್ತು. ಕಾಲಕಳೆದ ಹಾಗೆ ಆ ವಿಕಾರಲಕ್ಷಣ ಬಲವಂತವಾಗುತ್ತಾ, ವ್ಯಾಧಿ

ದರ್ಶನದ ಕಾಲಾಂತರ ಕಡಿಮೆಯಾಗುತ್ತಾ ಬಂತು. ಅದು ಯಾವ ಹೇತುವಿನಿಂದ ಸಂಭವಿಸುವದೆಂಬದನ್ನು ನಿರ್ಧಾರವಾಗಿ ತಿಳಿಯುವದಕ್ಕಾಗಿ ನಾನು ಪ್ರಥಮತಃ ವೈದ್ಯ ಇಲಾಖೆಯ ಜಿಲ್ಲಾಧಿಕಾರಿಯಾಗಿದ್ದ ಒಬ್ಬರು ದೊರೆಗಳನ್ನು ಪರೀಕ್ಷಿಸಲು ಕೇಳಿಕೊಂಡೆ. ಅವರು ನನ್ನ ಶರೀರದ ಪರೀಕ್ಷೆ ಎರಡು ಸರ್ತಿ ಮಾಡಿ, ಕಾಫಿಯ ಮತ್ತು ಹೊಗೆಸೊಪ್ಪಿನ ಉಪಯೋಗವನ್ನು ಕಡಿಮೆಮಾಡಬೇಕೆಂತ ನನಗೆ ಹೇಳಿದರಲ್ಲದೆ, ನನ್ನಲ್ಲಿ ಇಂಥಾ ವ್ಯಾಧಿಯುಂಟೆಂತಾಗಲಿ ಅದಕ್ಕೆ ಇಂಥಾ ಚಿಕಿತ್ಸೆಮಾಡಬೇಕೆಂತಾಗಲಿ ಹೇಳಲಿಲ್ಲ. ಸ್ವಲ್ಪ ಕಾಲದನಂತರ ಬೆಂಗಳೂರಿಗೆ ಹೋಗಿ, ಅಲ್ಲಿಯ ವಿಕ್ಟೋರಿಯಾ ಆಸ್ಪತ್ರೆಯ ಪ್ರಧಾನಾಧಿಕಾರಿಗಳಾದ ಒಬ್ಬ ಸುಪ್ರಸಿದ್ಧ ಡಾಕ್ಟರರಿಂದ ಪರೀಕ್ಷೆಮಾಡಿಸಿಕೊಂಡೆ. ಅವರು ನನ್ನ ಕುತ್ತಿಗೆಯ ವಸ್ತ್ರದ ಪಟ್ಟಿ (collar) ಬಿಗಿದು ನಿಲ್ಲದಂತೆ ಜಾಗ್ರತೆ ತೆಗೆದುಕೊಳ್ಳಬೇಕಾಗಿ ಮಾತ್ರ ಹೇಳಿದರು. ವ್ಯಾಧಿಯನ್ನು ಅಥವಾ ಅದರ ಪರಿಹಾರವನ್ನು ಕುರಿತು ಏನೂ ಹೇಳಲಿಲ್ಲ. ಏರುಳ್ಳ ಮಾರ್ಗದಲ್ಲಿ ನಡೆಯುವಾಗಲೂ, ಮೆಟ್ಟಲುಳ್ಳ ಎತ್ತರ ಸ್ಥಳಕ್ಕೆ ಹತ್ತುವಾಗಲೂ, ನನ್ನಲ್ಲಿ ಉಬ್ಬಸವುಂಟಾಗುತ್ತಿತ್ತು; ಮತ್ತು ಕೆಲಕಾಲಾನಂತರ ಮುಖ ಮೇಲಕ್ಕಾಗುವ ಹಾಗೆ ತಲೆಯನ್ನು ಹಿಂದಕ್ಕೆ ಬಗ್ಗಿಸಿದಾಗ ತಲೆತಿರುಕು ಕಾಣುತ್ತಿತ್ತು. ಇದನ್ನೆಲ್ಲಾ ಪರ್ಯಾಲೋಚಿಸಿ, ನರಮಂಡಲದ ದುರ್ಬಲತೆಯಿಂದ ನನ್ನ ಹೃದಯದಲ್ಲಿ ಯಾವ ವಿಧವಾದದ್ದೋ ಒಂದು ವ್ಯಾಧಿಯುಂಟಾಗಿರಬೇಕು ಮತ್ತು ಅದು ನಾನು ಸರ್ಕಾರ ಉದ್ಯೋಗದಿಂದ ನಿವೃತ್ತನಾದ ಮೇಲೆ ತನ್ನಂತೆಯೇ ಕಡಿಮೆಯಾದೀತೆಂತ ಭಾವಿಸಿ ಐದಾರು ವರ್ಷ ಕಳೆದೆ. ಆದರೆ ನನಗೆ ಉದ್ಯೋಗದ ಬಿಡುಗಡೆಯಾದನಂತರ ನನ್ನ ವ್ಯಾಧಿಲಕ್ಷಣಗಳು ಅಣಗುವದರ ಬದಲಾಗಿ ಮತ್ತಷ್ಟು ಬಲವಂತವಾದ ಹಾಗೆ ಕಂಡಿತು. ಕವಚಿ ಮಲಗಿ ದೇವರಿಗೆ ಸಾಷ್ಟಾಂಗ ನಮಸ್ಕಾರ ಮಾಡುವಾಗ್ಗೆ ನನ್ನ ಮುಖವು ನೆಲಕ್ಕೆ ಅಪ್ಪಳಿಸಲ್ಪಟ್ಟು ನಾನು ಆ ಕೂಡಲೇ ಸಾಯುವೆನೆಂಬ ಭಯ ಉಂಟಾಗುವ ಲಕ್ಷಣ ತೋರಿತು. ಕೆಲಕಾಲದನಂತರ ಅದು ಮಾತ್ರವಲ್ಲದೆ, ಹಾಸಿಗೆ ಮೇಲೆ ಮಲಗಿದವನು ಮಗ್ಗಲು ಮಗಚುವಾಗ, ಅದಕ್ಕೂ ಕೆಲಕಾಲದನಂತರ ಸುಮ್ಮಗೆ ಮಲಗಿರುವಾಗ, ಸಹ ನನ್ನನ್ನು ಮಗುಚಿ ಬೀಳಿಸುವ ಲಕ್ಷಣ ಕಾಣತೊಡಗಿತು. ಕಾಫಿಯ ಪಾನವನ್ನು ಬಿಟ್ಟು, ಅದರ ಬದಲಾಗಿ ಚಾ ಪಾನವನ್ನು ಮಾಡುವದು ಒಳ್ಳೇದೆಂತ ಒಬ್ಬರು ದೊರೆಗಳು ನನ್ನ ಹಿತಚಿಂತನೆಯಿಂದ ಹೇಳಿದ ಹಾಗೆ ಮಾಡಿ ನೋಡಿದೆ. ಅದು ಸ್ವಲ್ಪ ಕಾಲ ಆರಂಭದಲ್ಲಿ ಕಿಂಚಿದ್ಗುಣಕರ ಎಂತ ಕಂಡರೂ, ಅದರಿಂದ ನನ್ನ ವ್ಯಾಧಿಯು ಶಮನವಾಗುವದಿಲ್ಲ ಎಂತ ಕಡೆಗೆ ಸ್ಪಷ್ಟವಾಯಿತು. ಹೀಗೆ ಬಹುಕಾಲ ಕಷ್ಟಪಟ್ಟ ಮೇಲೆ ಕಾಫಿ-ಚಾಗಳ ಪಾನವನ್ನು ಪೂರ್ಣವಾಗಿ ಬಿಟ್ಟು, ಅವುಗಳ ಬದಲಾಗಿ ಬೇರೊಂದು ಹಿತವಾದ ಪಾನಕವನ್ನು ಕಲ್ಪಿಸಲು ನನಗೆ ಬುದ್ಧಿ ಹೊಳೆಯಿತು. ಹಾಗೆ ಕಲ್ಪಿಸಲ್ಪಟ್ಟ "ದಿವ್ಯಾಮೃತಾದಿ" ಚೂರ್ಣದ ಪಾನಕವನ್ನು ಕಾಫಿಯ ಬದಲಾಗಿ ದಿನಕ್ಕೆರಡು ಸರ್ತಿ ಕುಡಿಯಲು ಆರಂಭಿಸಿದೆ. ಅದರಿಂದ ನನ್ನ ತಲೆ ತಿರುಕು ಬೇಗನೆ ನಿಂತಿತು. ಅದರ ಲಕ್ಷಣ ಕಾಣದೆ ಈಗ್ಗೆ ಹತ್ತು-ಹನ್ನೆರಡು ವರ್ಷಕಾಲ ಕಳೆದಿರಬೇಕು.

"ದಿವ್ಯಾಮೃತಾದಿ" ಚೂರ್ಣದ ಯೋಗ ಹೇಗೆಂದರೆ — ಲವಂಗ 1 ಪಾಲು, ಅಮೃತಬಳ್ಳಿ 1 ಪಾಲು, ಸುಗಂಧಿ(ಹಾಲುಬಳ್ಳಿ-ನನ್ನಾರಿ)ಬೇರಿನ ಒಳಗಿನ ಸಿಪ್ಪೆ (ಮಾಂಸಭಾಗ) 8 ಪಾಲು, ಕೆಂಪು ಪುನರ್ನವಿಬೇರು 8 ಪಾಲು. ಇವುಗಳ ಚೂರ್ಣವನ್ನು ಒಂದು ಬಟ್ಟಲು ಪಾನಕಕ್ಕೆ 1-2 ಚಾ ಚಮಚೆ ಪ್ರಕಾರ ಉಪಯೋಗಿಸುವದು. ಒಂದು ಬಟ್ಟಲು ಪಾನಕದಲ್ಲಿ

ಅರ್ಧ ಬಟ್ಟಲು ಚೂರ್ಣದ ಕಷಾಯ, ಅರ್ಧ ಬಟ್ಟಲು ಹಾಲು, ಇರುವದು ಒಳ್ಳೇದು. ಸಕ್ಕರೆ ಬೇಕಾದಷ್ಟು. ಒಂದು ಕುಡ್ತೆ ಅಂದರೆ ಅರ್ಧ ಬಟ್ಟಲು ನೀರಿಗೆ ಮೇಲೆ ಹೇಳಿದ ಪ್ರಮಾಣದಲ್ಲಿ ಚೂರ್ಣವನ್ನು ಹಾಕಿ, 8-10 ನಿಮಿಷವಾದರೂ ಕುದಿಸುವದು ಒಳ್ಳೇದು. ಕಷಾಯಕ್ಕೆ ಹಾಲನ್ನು ಬೆರಸುವಾಗ್ಗೆ ಎರಡೂ ಬಿಸಿಯಾಗಿದ್ದರೆ ಸಂಯೋಗ ಸರಿಯಾಗುತ್ತದೆ.

ಬಾರ್ಲಿಯ ಕಾಳನ್ನು, ಒಳಭಾಗ ಕೆಂಪಾಗುವ ತನಕ, ಹುರಿದು ಪುಡಿಮಾಡಿಟ್ಟು ಕೊಂಡು, ಆ ಪುಡಿಯಿಂದ ಒಂದು ಚಮಚೆಯನ್ನು ಚೂರ್ಣದ ಒಂದು ಚಮಚೆಯೊಂದಿಗೆ ಉಪಯೋಗಿಸಿ, ಮೇಲೆ ಹೇಳಿದಂತೆ ಒಂದು ಬಟ್ಟಲು ಪಾನಕವನ್ನು ಮಾಡಿ ಕುಡಿದರೆ, ಪಾನಕದ ಸಂತರ್ಪಣ (ಆಹಾರ) ಗುಣವು ಹೆಚ್ಚುವದು ಮತ್ತು ಪರಿಮಳವು ಕಾಫಿಯ ಪರಿಮಳಕ್ಕೆ ಸ್ವಲ್ಪ ಹೋಲುವದರಿಂದ, ಕಾಫಿಯ ಪರಿಮಳಕ್ಕೆ ಮರುಳಾದವರಿಗೆ ಅದು ಹೆಚ್ಚು ಹಿತವಾಗಬಹುದು. ದಿವ್ಯಾಮೃತಾದಿ ಚೂರ್ಣದ ಪಾನಕವು ತ್ರಿದೋಷಹರವಾದದ್ದಾದ್ದರಿಂದ, ಅದನ್ನು ರೋಗಿಗಳಿಗೆ ಬಹಳ ಸಂದರ್ಭಗಳಲ್ಲಿ ಕೊಡಬಹುದಾಗುತ್ತದೆ.

ಲವಂಗವನ್ನು ಅದರ ತುದಿಯಲ್ಲಿರುವ ಕುಸುಮದ ಮೊಗ್ಗನ್ನು ತೆಗೆದುಬಿಟ್ಟು, ತೂಕ ಮಾಡಬೇಕು. ಅಮೃತಬಳ್ಳಿಯ ಸಿಪ್ಪೆಯನ್ನು ತೆಗೆದುಬಿಟ್ಟ ಮೇಲೆ ಅದನ್ನು ತೂಗಿ, ಬೇಕಾದಷ್ಟನ್ನು ತೆಗೆದುಕೊಂಡು, ಚೂರಿಯಿಂದ ಚಿಕ್ಕದಾಗಿ ತುಂಡುಮಾಡಿ, ಆ ತುಂಡುಗಳನ್ನು ನೀರಿನ ಸೆಕೆ ಮೇಲಿಟ್ಟು, ಸ್ವಲ್ಪ ಮೃದುವಾಗುವ ತನಕ ಬೆವರಿಸಿದ ಮೇಲೆ ಬಿಸಿಲಲ್ಲಿ ಒಣಗಿಸಬೇಕು. ಪುನರ್ನವಿ ಬೇರನ್ನು ಕತ್ತಿಯಿಂದ ಕಡಿದು ಸಣ್ಣಗಿನ ತುಂಡುಗಳನ್ನು ಮಾಡಿ ಆ ತುಂಡುಗಳನ್ನು ನೀರಿನಿಂದ ತೊಳೆದು, ಬಿಸಿಲಲ್ಲಿಟ್ಟು ಒಣಗಿಸಬೇಕು ನಾಲ್ಕು ಬಗೆ ಔಷಧಗಳೂ ಬಿಸಿಲಿನಿಂದ ಒಳ್ಳೇ ಕಾದಿರುವಾಗಲೇ, ಅವುಗಳನ್ನು ಒರಳಿನಲ್ಲಿ ಹಾಕಿ ಕುಟ್ಟಿ, ಗೋದಿ ಸಜ್ಜಿಗೆಯನ್ನು ಗಾಳಿಸುವದಕ್ಕೆ ಮಾಡಿದ ಜಲ್ಲಡಿಯಿಂದ ಗಾಳಿಸಿ, ಸಿಕ್ಕಿದ ಸಜ್ಜಿಗೆಯ ಗಾತ್ರಕ್ಕೆ ಮಿಗದ ಚೂರ್ಣವನ್ನು ಕರಡಿಗೆಯೊಳಗೆ ತುಂಬಿ, ತಣಸು ತಾಗದಂತೆ, ಭದ್ರವಾಗಿ ಇಟ್ಟುಕೊಂಡದರಿಂದ, ಅದು ಎಂಟೊಂಭತ್ತು ತಿಂಗಳಕಾಲ ಕಳೆದಾಗ್ಯೂ, ಕೆಡದೆ ಗುಣಪೂರ್ಣವಾಗಿ ಉಳಿದಿದೆ

# ಉಪೋದ್ಘಾತ

## 1ನೇ ಪರಿಶಿಷ್ಟ.

### ದ್ರವ್ಯಸಂಗ್ರಹ (ದ್ರವ್ಯಗಣಗಳು).

1. ಸಮಾಸೇನ ಸಪ್ತತ್ರಿಂಶದ್ದ್ರವ್ಯಗಣಾ ಭವನ್ತಿ। ತದ್ಯಥಾ। ವಿದಾರಿಗನ್ಧಾ ವಿದಾರೀ ಸಹದೇವಾ ವಿಶ್ವದೇವಾಽಶ್ವದಂಷ್ಟ್ರಾ ಪೃಥಕ್ಪರ್ಣೀ ಶತಾವರೀ ಸಾರಿವಾ ಕೃಷ್ಣಸಾರಿವಾ ಜೀವಕರ್ಷಭಕೌ ಮಹಾಸಹಾ ಕ್ಷುದ್ರಸಹಾ ವೃಹತ್ಯೌ ಪುನರ್ನವೈರಣ್ಡ್ಯೋ ಹಂಸಪಾದೀ ವೃಶ್ಚಿಕಾಲ್ಯೃಷಭೀ ಚೇತಿ.

> ವಿದಾರಿಗನ್ಧಾದಿರಯಂ ಗಣಃ ಪಿತ್ತಾನಿಲಾಪಹಃ ।
> ಶೋಷಗುಲ್ಮಾಂಗಮರ್ದೋರ್ಧ್ವಶ್ವಾಸಕಾಸವಿನಾಶನಃ (ಸು. 138-9)

ಸಂಕ್ಷೇಪವಾಗಿ ದ್ರವ್ಯಗಣಗಳು ಮೂವತ್ತೇಳು ಆಗುತ್ತವೆ ಅದು ಹೇಗೆಂದರೆ ಮೂವೆಲೆ, ನೆಲಕುಂಬಳ, ಕಲ್ಲಂಗಡಲೆ, ಹಗ್ಗಲ್ಲಂಗಡಲೆ (ಆನೆಕಡೀರು), ನೆಗ್ಗಿಲಮುಳ್ಳು, ಓರೆಲೆ, ಶತಾವರೀ, ಸುಗಂಧಿಬೇರು, ಕರಿಸುಗಂಧಿ, ಜೀವಕ, ಋಷಭಕ, ಕಾಡು ಉದ್ದು, ಕಾಡು ಹೆಸರು, ಗುಳ್ಳ, ಕಿರುಗುಳ್ಳ, ಪುನರ್ನವಿ, ಹರಳುಗಿಡ, ಹಂಸಪಾದೀ (ನವಿಲಡಿ-ಮಲ ಚುವನ್ನ ಚೆರು ಪ್ಪುಳ್ಳಡಿ ಎಂತ ಕೃ. ನಿ. ನಿಲಂಪರಣ್ಡ ಎಂತ ಇನ್ನೊಂದು ಪುಸ್ತಕ), ಚೇಳುಬಾಲದ ಗಿಡ (ಮಲ. ತೇಳ್ಕಡ), ನಾಯಿಸೊಣಗು (ನಸುಗುನ್ನಿ) ಸಹ. **ಈ ವಿದಾರಿಗನ್ಧಾದಿ ಗಣವು** ಪಿತ್ತವಾಯುಹರ, ಶೋಷ, ಗುಲ್ಮ, ಅಂಗಮರ್ದ, ಊರ್ಧ್ವಶ್ವಾಸ, ಕೆಮ್ಮು, ಇವುಗಳನ್ನು ನಾಶವಮಾಡುವಂಥಾದ್ದು.

2 ಆರಗ್ವಧಮದನಗೋಪಘೋಂಟಾ(ಘೋ)ಂಟಾಕುಟಜಪಾಠಾಕಣ್ಟಕೀಪಾಟಲಾಮೂರ್ವೇನ್ದ್ರಯವಸಪ್ತಪರ್ಣನಿಮ್ಬಕುರುಣ್ಟಕದಾಸೀಕುರುಣ್ಟಕಗುಡೂಚೀಚಿತ್ರಕಶಾರ್ಙ್ಗಷ್ಟಾಕರಂಜದ್ವಯಪಟೋಲಕಿರಾತತಿಕ್ತಕಾನಿ ಸುಷವೀ ಚೇತಿ

> ಆರಗ್ವಧಾದಿರಿತ್ಯೇಷ ಗಣಃ ಶ್ಲೇಷ್ಮವಿಷಾಪಹಃ ।
> ಮೇಹಕುಷ್ಠಜ್ವರವಮೀಕಣ್ಡೂಘ್ನೋ ವ್ರಣಶೋಧನಃ ॥ (ಸು. 139)

ಕಕ್ಕೆಮರ, ಮಂಗಾರೆಕಾಯಿ, ವಿಕಂಕತ (ಹಲಮಾಣಿಕ?), ಕೊಡಸಿಗ, ಪಾಡಾವಳಿಗಡ್ಡೆ, ಕಂಟಕಾರಿ (ಗುಡ್ಡಕಲ್ಲಂಟೆ-ಮಲ. ಪುತ್ರಚುಂಪಾ, ಅಥವಾ ಕಿರಿಗುಳ್ಳ), ಪಾದರಿ, ಹೆಗ್ಗುರುಟಿಗೆ (ಮಲ. ಪೆರುಸ್ಕುರುನ್ನ), ಇಂದ್ರಜೀಪ, ಹಾಲೆ (ಏಳಲೆಬಾಳೆ), ಕಹಿಬೇವು, ಅರಸಿನ ಗೋರಟ, ಅಮೃತಬಳ್ಳಿ, ಚಿತ್ರಮೂಲ, ಬೀಗದಮರ (ಗುಡ್ಡೆರಂಜೆ), ಹೊಂಗೆ (ನಾಯಿಪಲ್ಲೆ), ನಾರುವ (ಮುಳ್ಳು) ಹೊಂಗೆ (ಪೂತಿಕರಂಜ), ಕಹಿಪಡುವಲ, ನೆಲಬೇವು, ಹಾಗಲಬಳ್ಳಿ ಸಹ. **ಈ ಆರಗ್ವಧಾದಿ ಗಣವು** ಕಫವನ್ನೂ ವಿಷವನ್ನೂ ಪರಿಹರಿಸುವಂಥಾದ್ದು, ಪ್ರಮೇಹ, ಕುಷ್ಠ, ಜ್ವರ, ವಾಂತಿ, ತುರಿ, ಈ ರೋಗಗಳನ್ನು ನಾಶಮಾಡುವಂಥಾದ್ದು, ಮತ್ತು ವ್ರಣ ಶೋಧನಕಾರಿ.

ಷರಾ 'ಶಾರ್ಙ್ಗಷ್ಟಾ' ಎಂಬದಕ್ಕೆ ಬೇರೆ ಬೇರೆ ಗ್ರಂಥಕಾರರು ಬೇರೆ ಬೇರೆ ಅರ್ಥ ಬರೆದದ್ದು ಕಾಣುತ್ತದೆ ಬೀಗದ ಮರವು ಚಿತ್ರಮೂಲದಂತೆ ತೀವ್ರತೆಯುಳ್ಳದ್ದಾದರೂ, ವಿಷದೋಷಕ್ಕೆ ಬಹಳ ಉಪಯುಕ್ತವಾದದ್ದು, ಅದನ್ನು ಮಿತವಾಗಿ ಉಪಯೋಗಿಸತಕ್ಕದ್ದು ಮುಳ್ಳುಳ್ಳ ಪೂತಿಕರಂಜಕ್ಕೂ, ಕರಂಜಕ್ಕೂ ಭಾ ಪ್ರ ದಲ್ಲಿ ಗುಣಗಳು ಸಾಮಾನವಾಗಿ ಹೇಳಲ್ಪಟ್ಟವೆ

3. ವರುಣಾರ್ತ್ತಗಲಶಿಗ್ರುಮಧುಶಿಗ್ರುತರ್ಕಾರೀಮೇಷಶೃಙ್ಗೀಪೂತೀಕನಕ್ತಮಾಲ - ಮೋರಟಾಗ್ನಿಮನ್ಥಸೈರೀಯಕದ್ವಯಬಿಮ್ಬೀವಸುಕವಸಿರಚಿತ್ರಕಶತಾವರೀಬಿಲ್ವಾಜಶೃಂಗೀದ - ರ್ಭಾ ವೃಹತೀದ್ವಯಂ ಚೇತಿ.

ವರುಣಾದಿರ್ಗಣೋ ಹ್ಯೇಷ ಕಫಮೇದೋನಿವಾರಣಃ |
ವಿನಿಹನ್ತಿ ಶಿರಃಶೂಲಂ ಗುಲ್ಮಾಭ್ಯನ್ತರವಿದ್ರಧೀನ್ || (ಸು. 139)

ಹೊಳೆನೆಕ್ಕಿ, ನೀಲಗೋರಟೆ, ನುಗ್ಗೆ, ಕೆಂಪುನುಗ್ಗೆ, ಜಯಂತಿ, ಮೇಷಶೃಂಗಿ (ಮಲ. ಆಟ್ಟು ಕೊಟುಪ್ಪಾಲ), ಮುಳ್ಳುಹೊಂಗೆ (ಪೂತಿಕರಂಜ), ಹೊಂಗೆ, ಹೆಗ್ಗುರುಟಿಗೆ, ನರುವಲು, ಅರಸಿನಗೋರಟೆ, ಕೆಂಪುಗೋರಟೆ, ತೊಂಡೆ, ವಸುಕ (ಕೆನ್ನೆಗ್ಗಿಲು?), ಗಜಹಿಪ್ಪಲಿ (ಮಂಗಹಿಪ್ಪಲಿ, ಹುಲ್ಲುಜಾತಿ ಎಂತ ಸಿ. ಸಂ. ವ್ಯಾ.), ಚಿತ್ರಮೂಲ, ಶತಾವರಿ, ಬಿಲ್ವಪತ್ರೆಮರ, ಮೇಷಶೃಂಗಿ, ದರ್ಭೆ (ದೊಡ್ಡ ಜಾತಿ, ಕುಶ), ಗುಳ್ಳ, ಕಿರಿಗುಳ್ಳ ಸಹ. ಈ ವರುಣಾದಿ ಗಣವು ಕಫವನ್ನೂ ಮೇದಸ್ಸನ್ನೂ ನಿವಾರಿಸುವಂಥಾದ್ದು: ತಲೆಶೂಲೆ, ಗುಲ್ಮ, ಅಭ್ಯಂತರವಿದ್ರಧಿ, ಇವುಗಳನ್ನು ಕೊಲ್ಲುತ್ತದೆ.

ಷರಾ: 'ಆರ್ತ್ತಗಲ' ಎಂಬದು ಬಿಳೇಮುತ್ತಿ, 'ಸೈರೀಯಕದ್ವಯ' ಎಂಬದು ನೀಲ ಮತ್ತು ಅರಸಿನ ಗೋರಟೆಗಳಿಗೆ. 'ವಸುಕ' ಎಂಬದು ಶಿವಮಲ್ಲಿ ಹೂವಿನ ಗಿಡ ಎಂಬಿತ್ಯಾದಿ ಅರ್ಥಾಂತರಗಳನ್ನು ಸಿ. ಸಂ. ವ್ಯಾ. ಹೇಳುತ್ತದೆ.

4. ವೀರತರುಸಹಚರದ್ವಯದರ್ಭವೃಕ್ಷಾದನೀಗುನ್ದ್ರಾನಲಕುಶಕಾಶಾಶ್ಮಭೇದಕಾಗ್ನಿ - ಮನ್ಥಮೋರಟಾವಸುಕವಸಿರಭಲ್ಲೂಕಕುರುಣ್ಟಕೇನ್ದೀವರಕಪೋತವಙ್ಕಾಃ ಶ್ವದಂಷ್ಟ್ರಾ ಚೇತಿ.

ವೀರತರ್ವಾದಿರಿತ್ಯೇಷ ಗಣೋ ವಾತವಿಕಾರನುತ್ |
ಅಶ್ಮರೀಶರ್ಕರಾಮೂತ್ರಕೃಚ್ಛ್ರಾಘಾತರುಜಾಪಹಃ || (ಸು. 139)

ವಡುವಾರದ ಮರ (ವೇಲ್ಲಸ್ತರ, ಮಲ. ವಿಡತ್ತಲ್), ಬಿಳೇಗೋರಟೆ, ಕೆಂಪುಗೋರಟೆ, ದರ್ಭೆ, ಒಂದಣಿಕೆ, ಜಂಬುಹುಲ್ಲು (ಗುಂದ್ರಾ, ದರ್ಭೆಜಾತಿ ಹುಲ್ಲು, ಮಲ. ವಿರಂಪುಲ್ಲು), ವಾಟೆ ಬಿದಿರು, ಬಿಳೇ ದರ್ಭೆ (ಕುಶ), ಕಾಶದರ್ಭೆ (ಮಲ. ಆಟ್ಟುದರ್ಭ, ಗಲಗಿನ ಹುಲ್ಲು?), ಪಾಷಾಣಭೇದಿ, ನರುವಲು, ಹೆಗ್ಗುರುಟಿಗೆ, ವಸುಕ, ಗಜಹಿಪ್ಪಲಿ, ಆನೆಮುಂಗು, ಅರಸಿನಗೋರಟೆ, ನೀಲತಾವರೆ, ಒಂದೆಲಗ ಮತ್ತು ನೆಗ್ಗಿಲಮುಳ್ಳು. ಈ ವೀರತರ್ವಾದಿ ಗಣವು ವಾತವಿಕಾರಗಳನ್ನು ನಾಶಮಾಡುವಂಥಾದ್ದು; ಅಶ್ಮರೀ, ಶರ್ಕರಾ, ಮೂತ್ರಕೃಚ್ಛ್ರ ಮತ್ತು ಮೂತ್ರಾಘಾತ, ಈ ರೋಗಗಳನ್ನು ಪರಿಹರಿಸುವವು.

ಷರಾ: 'ನಲ' ಎಂದರೆ ದೇವನಾಲ, ಭಾರತೀಯ ಹೊಗೆಸೊಪ್ಪು ಎಂತ ಬ್ಯ. ಸಿ., ಹುಳುಗಿಲು, ಹುಳುಗಲುಗು, ಹುಳುಗಿಲ ಹುಲ್ಲು ಎಂತ ಕೆಲವು ಪುಸ್ತಕಗಳಲ್ಲಿ, ಮಲಯಾಳದಲ್ಲಿ 'ನಾಂಜಣ ಪುಲ್ಲು' ಎಂತ ಕೆಲವರು, ದೂರ್ವಾಕಾರದ ಚಿಗುರುಳ್ಳ ಒಳಗೆ ರಂಧ್ರವಿರುವ 'ನಲ' ಎಂತಲೇ ಪ್ರಸಿದ್ಧವಾದ ವೃಕ್ಷ ಎಂತ ಸಿ. ಸಂ. ವ್ಯಾ. ಅದಕ್ಕೆ ವಂಶಾನ್ತರ, ನಾಲವಂಶ ಎಂಬ ಪರ್ಯಾಯಪದಗಳು ರಾ. ನಿ. ನಲ್ಲಿ ಇರುವದನ್ನು ನೋಡಿದರೆ, ಅದು ವಾಟೆ ಬಿದಿರೇ ಆಗಿರಬೇಕೆಂತ ಕಾಣುತ್ತದೆ. ಪಂಚ ತೃಣಗಳನ್ನು ಬೇರೆಬೇರೆಯಾಗಿ ಬೇರೆಬೇರೆ ಗ್ರಂಥಗಳು ವರ್ಣಿಸಿರುತ್ತವೆ. 'ಕುಶ' ಎಂಬದು ಹ್ರಸ್ವದರ್ಭ (ಗಿಡ್ಡದರ್ಭೆ) ಮತ್ತು 'ಕಾಶ' ಎಂಬದು ಚಾಮರಪುಷ್ಪವುಳ್ಳ ದರ್ಭೆ ಎಂತ ಸಿ ಸಂ. ವ್ಯಾ. ಸಾಧಾರಣವಾಗಿ ಯಜ್ಞಾದಿಗಳಿಗೆ ಉಪಯೋಗಿಸಲ್ಪಡುವ ದರ್ಭೆಯೇ ಕುಶ, ಅದು ಸೂಚ್ಯಗ್ರಃ (ತುದಿ ಚೂಪಾಗಿರುವಂಥಾದ್ದು); ಅದರಲ್ಲಿ ಇನ್ನೊಂದು ಜಾತಿ ದೀರ್ಘಪತ್ರಃ (ಉದ್ದ ಎಲೆದು) ಮತ್ತು ಕ್ಷುರಪತ್ರಃ (ಹರಿತವಾದ ಧಾರೆಯುಳ್ಳ ಎಲೆದು) ಎಂತ ಭಾ. ಪ್ರ. (ಪು. 106). ಇವೆರಡರೊಳಗೆ ಮೊದಲನೇದು ಸಿತದರ್ಭ (ಬಿಳೇ ದರ್ಭೆ), ಎರಡನೇದು ಹರಿದರ್ಭ (ಹಸರುದರ್ಭೆ), ಅವೆರಡರ ಸಮುದಾಯಕ್ಕೆ 'ದರ್ಭದ್ವಯಂ' ಎನ್ನುವದು ಎಂತ ರಾ. ನಿ. (ಪು. 161). 'ಕಾಶ'ಕ್ಕೆ ಶ್ವೇತಚಾಮರಪುಷ್ಪ, (ಬಿಳೇ ಚಾಮರದಾಕಾರದ ಹೂವುಳ್ಳದ್ದು), ಇಕ್ಷುಕುಸುಮ, (ಕಬ್ಬಿನ ಹೂವಿನ ಹಾಗಿನ ಹೂವುಳ್ಳದ್ದು),

**ಮತ್ತು ಕಾಣ್ಣೋಕ್ಟು (ಗಂಟು ಕಬ್ಬು) ಎಂಬ ಹೆಸರುಗಳು ಧ. ನಿ. (ಪು. 160)ನಲ್ಲಿ ಕಾಣುತ್ತವೆ. ಅದಕ್ಕನುಸಾರವಾಗಿ ಮಲಯಾಳದಲ್ಲಿ 'ಕುರುವಿಕ್ಕರಿಂಪು' ಎಂಬ ಹೆಸರು ಬರೆದದ್ದು ಇರುತ್ತದೆ (ಕೃ ನಿ) ಆದಾಗ್ಯೂ ಈ ಊರಲ್ಲಿ ಕಾತಕ್ಕೆ 'ಅಟ್ಟುದರ್ಭ' ಎಂಬ ಮಲಯಾಳ ಹೆಸರಿನ ಒಂದು ತೃಣವನ್ನು ಉಪಯೋಗಿಸುವದು ಹೆಚ್ಚು (ಕೆಳಗೆ 36ನೇ ಸಂಖ್ಯೆಯ ಅಡಿ ಪರಾವನ್ನು ನೋಡಿ) ವಸುಕಃ ಎಂಬದು 'ಬಕಃ' (ಶಿವಮಲ್ಲೀ) ಮತ್ತು 'ಇಂದೀವರ' ಎಂಬದು 'ಕುರುಣ್ಟಕೀ ಭೇದ' ಎಂತ ಸಿ ಸಂ ವ್ಯಾ (ಪು. 137).**

5. ಸಾಲಸಾರಾಜಕರ್ಣಖದಿರಕದರಕಾಲಸ್ಕನ್ದಕ್ರಮುಕಭೂರ್ಜಮೇಷಶೃಙ್ಗೀತಿನಿಶಚನ್ದನಕುಚನ್ದನಶಿಂಶಪಾಶಿರೀಷಾಸನಧವಾರ್ಜುನತಾಲಶಾಕನಕ್ತಮಾಲಪೂತೀಕಾಶ್ವಕರ್ಣಾಗುರೂಣಿ ಕಾಲೀಯಕಂ ಚೇತಿ.

ಸಾಲಸಾರಾದಿರಿತ್ಯೇಷ ಗಣಃ ಕುಷ್ಠವಿನಾಶನಃ |
ಮೇಹಪಾಣ್ಡಾಮಯಹರಃ ಕಫಮೇದೋವಿಶೋಷಣಃ || (ಸು. 139)

ರಾಳ, ಧೂಪದ ಮರ (ಸಂದಳಿಕೆ), ಖದಿರ (ಕಾಚಿನ) ಮರ, ಬಿಳೀ ಕಾಚಿನ ಮರ, ಕಲಿಜಾಲಿ ಮರ, ಬಿಳೀ ಲೋಧ್ರ (ಮಲ. ವೆಳುತ್ತ ಪಾಚ್ಯೋಟ್ಟಿ), ಭುಜಪತ್ರ, ಮೇಷಶೃಂಗಿ (ಮಲ. ಆಟ್ಟುಕೊಟ್ಟಪ್ಪಾಲ), ನೇಮಿ ಮರ (ಮಲ. ಕೊಡುಕಾರ), ಶ್ರೀಗಂಧ, ರಕ್ತಚಂದನ, ಅಗರುಬೀಟಮರ (ಪರಡಿ ಮರ, ಶಿಷ್ಮಬಾಗೆ, ಮಲ. ಇರುಪ್ಪುಳ್ ಮರಂ), ಬಾಗೆ ಮರ, ರಕ್ತಹೊನ್ನೆ (ಮಲ ಬೇಂಬ), ಟಿಂಡಿಗ ಮರ (ಮಲ ಅಮ, ಕೃ. ನಿ.), ಬಿಳೀ ಮತ್ತಿ (ಮತ್ತಿ, ಮಲ ವೆಳುಮರುತು), ತಾಳೆ (ಹನೆ) ಮರ (ಮಲ. ಕರಿಂಪನ), ತೇಗ (ತ್ಯಾಗ, ಮಲ. ತೇಕ್ಕು), ಹೊಂಗೆಮರ, ಮುಳ್ಳುಹೊಂಗೆ, ಆಸಿನಮರ (ಡಾಮರ, ಮಲ ಪೆರುಮರುತು), ಕೃಷ್ಣಾಗರು (ಮಲ. ಕಾರಕಿಲ) ಮತ್ತು ಕುಂಕುಮಾಗರು (ಮಲ ಪೀತಚನ್ದನಂ). **ಈ ಸಾಲಸಾರಾದಿ** ಗಣವು ಕುಷ್ಠವಿನಾಶನಕಾರಿ, ಪ್ರಮೇಹವನ್ನೂ ಪಾಂಡುರೋಗವನ್ನೂ ಪರಿಹರಿಸುವಂಥಾದ್ದು; ಮತ್ತು ಕಫವನ್ನೂ ಮೇದಸ್ಸನ್ನೂ ಆರಿಸುವ ಗುಣವುಳ್ಳದ್ದು

ಪರಾ 'ಕ್ರಮುಕ ಎಂದರೆ 'ಅಡಿಕೆ ಮರ ಮತ್ತು 'ಮೇಷಶೃಂಗಿ' ಎಂದರೆ 'ಕರ್ಕಟಶೃಂಗಿ' ಎಂತ ಸಿ ಸಂ ವ್ಯಾ (ಪು 137)

6 ರೋಧ್ರಸಾವರರೋಧ್ರಪಲಾಶಕುಟನ್ನಟಾಶೋಕಫಲಜೀಕಟ್ಫಲೈಲವಾಲುಕಸಲ್ಲಕೀಜಿಂಗಿನೀಕದಮ್ಬಸಾಲಾಃ ಕದಲೀ ಚೇತಿ

ಏಷ ರೋಧ್ರಾದಿರಿತ್ಯುಕ್ತೋ ಮೇದಃಕಫಹರೋ ಗಣಃ |
ಯೋನಿದೋಷಹರಸ್ತಮ್ಭೀ ವ್ರಣ್ಯೋ (*ವರ್ಣ್ಯೋ) ವಿಷವಿನಾಶನಃ ||

* ಪಾಠಾಂತರ (ಸು. 140)

**ಲೋಧ್ರ** (ಕೆಂಪು, ಮಲ. ಪಾಚ್ಯೋಟ್ಟಿ), (ಬಿಳೀ) ಪಟ್ಟಿಲೋಧ್ರ, ಪಲಾಶ, ಆನೆಮುಂಗು, ಅಶೋಕದ ಮರ, ನಿರ್ವಿಷ (ಗಂಟುಭಾರಂಗಿ, ಮಲ. ಚೆರುತೇಕ್ಕು), ಕಿರುಶಿವನಿ (ಕಟ್ಫಲ, ಮಲ. ಚೆರುಕುಮಿಳು), ಸುರುಸುರಿಕೆ (ಏಲಾವಾಲುಕ), ಮಾದಿಮರ (ವಿಶೇಷ ಧೂಪ, ಮಲ ಪಾಲಂಗಂ), ಉಡಿಮರ (ಮಲ. ಕಾಟಿಲವು), ಕಡಹದ ಮರ (ಮಲ ಕಟಂಪು), ಆಸಿನ ಮರ ಮತ್ತು ಬಾಳೆ. **ಈ ಗಣವು ರೋಧ್ರಾದಿ ಎನಿಸುತ್ತದೆ. ಮೇದಸ್ಸನ್ನೂ, ಕಫವನ್ನೂ, ಯೋನಿದೋಷವನ್ನೂ, ಪರಿಹರಿಸುವಂಥಾದ್ದು; ಸ್ತಂಭನಕಾರಿ, ವ್ರಣಹರ (ವರ್ಣಕಾರಿ) ಮತ್ತು ವಿಷನಾಶನಕಾರಿ.**

7. ಅರ್ಕಾಲರ್ಕಕರಂಜದ್ವಯನಾಗದನ್ತೀಮಯೂರಕಭಾರ್ಗೀರಾಸ್ನೇನ್ದ್ರಪುಷ್ಪೀಕ್ಷುದ್ರ-ಶ್ವೇತಾಮಹಾಶ್ವೇತಾವೃಶ್ಚಿಕಾಲ್ಯಲವಣಾಸ್ತಾಪಸವೃಕ್ಷಶ್ಚೇತಿ.

ಅರ್ಕಾದಿಕೋ ಗಣೋ ಹ್ಯೇಷ ಕಫಮೇದೋವಿಷಾಪಹಃ |
ಕೃಮಿಕುಷ್ಠಪ್ರಶಮನೋ ವಿಶೇಷಾದ್ವ್ರಣಶೋಧನಃ || (ಸು. 140)

ಎಕ್ಕೆ (ಕೆಂಪು), ಬಿಳೀ ಎಕ್ಕೆ, ಹೊಂಗೆ, ಮುಳ್ಳುಹೊಂಗೆ, ನಾಗದಂತಿ, ಉತ್ತರಣೆ, ಗಂಟು ಭಾರಂಗಿ (ನಿರ್ವಿಷ), ರಾಸ್ನೆ (ಮಲ. ಚಿಟ್ಟರತ), ಕೋಳಿಕುಟುಮ (ಶಿವಶಕ್ತಿ), ಬಿಳೀ ಶಂಖ ಪುಷ್ಪ (ಗಿರಿಕರ್ಣಿಕೆ), ನೀಲ ಶಂಖಪುಷ್ಪ, ಚೇಳುಬಾಲದ ಗಿಡ (ಚೇಳುಕೊಂಡಿ. ಮಲ. ತೇಲ್ಕಡ), ಭವಂಗಬೀಜ (ಮೂಲಕಾಂಗುಣಿ) ಮತ್ತು ಇಂಗಳದ ಮರ (ಮಲ. ಓಡಮರಂ). ಈ ಅರ್ಕಾದಿಗಣವು ಕಫವನ್ನೂ, ಮೇದಸ್ಸನ್ನೂ, ವಿಷವನ್ನೂ ಪರಿಹರಿಸುವಂಥಾದ್ದು, ಕೃಮಿ-ಕುಷ್ಠಗಳ ಶಮನಕಾರಿ, ವಿಶೇಷವಾಗಿ ವ್ರಣಶೋಧನಕರವಾದದ್ದು.

ಷರಾ ಮೂಲದಲ್ಲಿರುವ ಅಲವಣಾ'ಕ್ಕೆ 'ಜ್ಯೋತಿಷ್ಮತೀ' ಎಂತ ನಿ ಸಂ ವ್ಯಾ ಯಲ್ಲಿ ಅರ್ಥ ಬರೆಯಲ್ಪಟ್ಟದೆ ಧ ನಿ ನಿಘಂಟಿನಲ್ಲಿ 'ಜ್ಯೋತಿಷ್ಮತೀ'ಗೆ 'ಲವಣಾ', ರಾ ನಿ. ನಲ್ಲಿ 'ತೇಜೋವತೀ'ಗೆ 'ಲವಣಾ' ಎಂಬ ಹೆಸರು ಕಾಣುತ್ತದೆ 'ಅಲವಣಾ' ಎಂಬ ಹೆಸರು ನಿಘಂಟುಗಳಲ್ಲಿ ಯಾವದಕ್ಕೂ ಕಾಣುವದಿಲ್ಲ

8. ಸುರಸಾಶ್ವೇತಸುರಸಾಫಣಿಜ್ಝಕಾರ್ಜಕಭೂಸ್ತೃಣಸುಗನ್ಧಕಸುಮುಖಕಾಲಮಾಲ - ಕಾಸಮರ್ದಕ್ಷವಕಖರಪುಷ್ಪಾವಿಡಂಗಕಟ್ಫಲಸುರಸೀನಿರ್ಗುಣ್ಡೀಕುಲಾಹಲೋನ್ದುರುಕರ್ಣಿ - ಕಾಫಞ್ಜೀಪ್ರಾಚೀಬಲಕಾಕಮಾಚ್ಯೋ ವಿಷಮುಷ್ಟಿಕಶ್ಚೇತಿ

ಸುರಸಾದಿರ್ಗಣೋ ಹ್ಯೇಷ ಕಫಹೃತ್ಕ್ರಿಮಿಸೂದನಃ |
ಪ್ರತಿಶ್ಯಾಯಾರುಚಿಶ್ವಾಸಕಾಸಘ್ನೋ ವ್ರಣಶೋಧನಃ || (ಸು 140)

ತುಳಸಿ (ಕಂ), ಬಿಳೀ ತುಳಸಿ, ಮರುಗ (ಮಲ. ಕರ್ಪೂರ ತುಳಸಿ), ಬಿಳೀ ನಾಯಿ(ರಾಮ) ತುಳಸಿ, (ಮಲ. ಚೆರುತುಳಸಿ), ಮಜ್ಜಿಗೆಹುಲ್ಲು, ದವನ, ಕಾಡು ನಾಯಿತುಳಸಿ, ಕರೀ ನಾಯಿ ತುಳಸಿ, ಎಲೆಹುರಿ (ತಗಚೆ ಮಲ ಪೊನ್ನಾಸ್ತಗರಂ), ಉತ್ತರಣೆ, ಕೆಂಪು ಉತ್ತರಣೆ, ವಾಯು ವಿಳಂಗ, ಕಿರುಶಿವನಿ (ಕಟ್ಫಲ), ನೆಕ್ಕಿ, ಕರಿನೆಕ್ಕಿ, ಹಿರಿಕರಂಡೆ ಗಿಡ, ಇಲಿಕಿವಿ, ನಿರ್ವಿಷ (ಗಂಟುಭಾರಂಗಿ), ಕಾಕಜಂಘೆ, ಗಣಿಕೆ (ಕಾಕೆಹಣ್ಣಿನ ಗಿಡ), ಕಡಸಿಗೆ ಬಳ್ಳಿ (ಹಿಂದಿ ಡೋಡೀ) ಸಹ ಈ ಸುರಸಾದಿಗಣವು ಕಫಹರ, ಕ್ರಿಮಿಗಳನ್ನು ಕೊಲ್ಲುವಂಥಾದ್ದು, ನೆಗಡಿ, ಅರುಚಿ, ಉಬ್ಬಸ, ಕೆಮ್ಮು, ಇವುಗಳನ್ನು ಕೊಲ್ಲುವಂಥಾದ್ದು, ಮತ್ತು ವ್ರಣಶೋಧ ನಕಾರಿ

ಷರಾ ಈ ಗಣದಲ್ಲಿ ಅಡಗಿರುವ ಹೆಸರುಗಳಿಗೆ ಬಹಳವಾಗಿ ಬೇರೆ ಬೇರೆ ಅರ್ಥ ಮಾಡುತ್ತಾರಾಗಿ ನಿ ಸಂ ವ್ಯಾ ಯಿಂದ ಕಾಣುತ್ತದೆ 'ಪ್ರಾಚೀಬಲ, ಮತ್ಸ್ಯಾಕ್ಷಕ, ಕಾಕಜಂಘಾ ನದಿಪಿಪ್ಪಲೀತ್ಯಪರೇ' ಎಂಬಿತ್ಯಾದಿ ನಿ ಸಂ ವ್ಯಾ (ಪು 184) ಆದರೆ 'ಪ್ರಾಚೀಬಲ' ಶಬ್ದ ನಾನು ನೋಡಿದ ಅನೇಕ ನಿಘಂಟುಗಳಲ್ಲಿ ಕಾಣುವದಿಲ್ಲ

9. ಮುಷ್ಕಕಪಲಾಶಧವಚಿತ್ರಕಮದನವೃಕ್ಷಶಿಂಶಪಾವಜ್ರವೃಕ್ಷಾಸ್ತ್ರಿಫಲಾ ಚೇತಿ.

ಮುಷ್ಕಕಾದಿರ್ಗಣೋ ಹ್ಯೇಷ ಮೇದೋಘ್ನಃ ಶುಕ್ರದೋಷಹೃತ್ |
ಮೇಹಾರ್ಶಃಪಾಣ್ಡುರೋಗಘ್ನಃ ಶರ್ಕರಾಶ್ಮರಿನಾಶನಃ || (ಸು. 140)

ಮಗ್ಗಾರ್ತಿಮರ, ಪಲಾಶ, ದಿಂಡಿಗ, ಚಿತ್ರಮೂಲ, ಮಂಗಾರೆಮರ, ಅಗರುಬೀಟೆ ಮರ (ಬಿರಿಡಿ), ಮುಂಡುಕಳ್ಳಿ ಮತ್ತು ತ್ರಿಫಲೆ ಈ ಮುಷ್ಕಕಾದಿ ಗಣವು ಮೇದಸ್ಸನ್ನು ನಾಶ

ಮಾಡುವಂಥಾದ್ದು; ಶುಕ್ರದೋಷಹರ; ಪ್ರಮೇಹವನ್ನೂ, ಮೂಲವ್ಯಾಧಿಯನ್ನೂ, ಪಾಂಡುರೋಗವನ್ನೂ, ಶರ್ಕರಾಶ್ಮರಿರೋಗವನ್ನೂ ಕೊಲ್ಲುತ್ತದೆ.

ಷರಾ ವೃಕ್ಷ (=ಕೊಡಸಿಗ) ಎಂಬದು ಬೇರೊಂದು ದ್ರವ್ಯ ಎಂತ ನಿ. ಸಂ ವ್ಯಾ

10. ಪಿಪ್ಪಲೀಪಿಪ್ಪಲೀಮೂಲಚವ್ಯಚಿತ್ರಕಶೃಂಗವೇರಮರಿಚಹಸ್ತಿಪಿಪ್ಪಲೀಹರೇಣುಕೈ - ಲಾಜಮೋದೇನ್ದ್ರಯವಪಾಠಾಜೀರಕಸರ್ಷಪಮಹಾನಿಮ್ಬಫಲಹಿಂಗುಭಾರ್ಗೀಮಧುರಸಾತಿ - ವಿಷಾವಚಾವಿಡಂಗಾನಿ ಕಟುರೋಹಿಣೀ ಚೇತಿ.

ಪಿಪ್ಪಲ್ಯಾದಿಃ ಕಫಹರಃ ಪ್ರತಿಶ್ಯಾಯಾನಿಲಾರುಚೀಃ ।
ನಿಹನ್ಯಾದ್ದೀಪನೋ ಗುಲ್ಮಶೂಲಘ್ನಶ್ಚಾಮಪಾಚನಃ ॥ (ಸು. 110)

ಹಿಪ್ಪಲಿ, ಹಿಪ್ಪಲೀಮೂಲ, ಕಾಡುಮಣಸಿನ ಬೇರು, ಚಿತ್ರಮೂಲ, ಶುಂಠಿ, ಕಾಳುಮೆಣಸು, ಗಜಹಿಪ್ಪಲಿ, ರೇಣುಕೆ, ಏಲಕ್ಕಿ ಅಜವೋದ ಇಂದ್ರಜೇವಿ (ಕೊಡಸಿಗನ ಬೀಜ), ಪಾಡಾವಳಿ ಗಡ್ಡೆ, ಜೀರಿಗೆ. ಸಾಸುವೆ (ಕೆಂಪು), ದೊಡ್ಡ ಬೇವು (ಹುಚ್ಚುಬೇವು, ಅರೆಬೇವು), ಮಂಗಾರಕಾಯಿ, ಹಿಂಗು, ಗಂಟುಭಾರಂಗಿ (ನಿರ್ವಿಷ), ಹಗ್ಗರುಟಿಗೆ, ಅತಿಬಜೆ (ಅತಿವಿಷ), ಬಜೆ, ವಾಯುವಿಳಂಗ ಮತ್ತು ಕಟುಕರೋಹಿಣೀ. ಈ **ಪಿಪ್ಪಲ್ಯಾದಿಗಣವು** ಕಫಹರ, ನೆಗಡಿ, ವಾಯು, ಅರುಚಿ, ಗುಲ್ಮ, ಶೂಲೆ, ಇವುಗಳನ್ನು ನಾಶಮಾಡುವಂಥಾದ್ದು; ದೀಪನಕಾರಿ, ಮತ್ತು ಆಮಪಾಚನಕಾರಿ

ಷರಾ ನಿ ಸಂ ವ್ಯಾ ಯಲ್ಲಿ 'ಮಹಾನಿಮ್ಬಫಲ' (=ದೊಡ್ಡ ಬೇವಿನ ಕಾಯಿ) ಎಂಬದು ಒಂದೇ ಪದವಾಗಿ ಅರ್ಥ ಬರೆಯಲ್ಪಟ್ಟಿದೆ ಅದರ ಪ್ರಕಾರ ಮಂಗಾರೆ ಸೇರುವದಿಲ್ಲ

11. ಏಲಾತಗರಕುಷ್ಠಮಾಂಸೀಧ್ಯಾಮಕತ್ವಕ್ಪತ್ರನಾಗಪುಷ್ಪಪ್ರಿಯಂಗುಹರೇಣುಕಾ - ವ್ಯಾಘ್ರನಖಶುಕ್ತಿಚಣ್ಡಾಸ್ಥೌಣೇಯಕಶ್ರೀವೇಷ್ಟಕಚೋಚಚೋರಕಬಾಲ(?ಲು)ಕಗುಗ್ಗುಲು - ಸರ್ಜರಸತುರುಷ್ಕಕುಸ್ತುರುಕಾಗುರುಸ್ಪೃಕ್ಕಾಶಿರಭದ್ರದಾರುಕುಂಕುಮಾನಿ ಪುನ್ನಾಗ - ಕೇಶರಂ ಚೇತಿ

ಏಲಾದಿಕೋ ವಾತಕಫೌ ನಿಹನ್ಯಾದ್ವಿಷಮೇವ ಚ ।
ವರ್ಣಪ್ರಸಾದನಃ ಕಣ್ಡೂಪಿಡಕಾಕೋಠನಾಶನಃ ॥ (ಸು 141)

ಏಲಕ್ಕಿ, ತಗರ, ಚಂಗಲಕೋಷ್ಠ, ಜಟಾಮಾಂಸೀ, ಸಂಬಾರಹುಲ್ಲು (ಮಲ ನಾಸ್ಮಕಪ್ಪುಲ್ಲು), ಲವಂಗಪಟ್ಟೆ, ದಾಲ್ಚೀನಿ ಎಲೆ. ನಾಗಕೇಸರ, ಪ್ರಿಯಂಗು, ರೇಣುಕ, ದೊಡ್ಡನಖಚಿಪ್ಪು, ನಖಚಿಪ್ಪು, ಚಣ್ಡಾ (ಚೋರಕಬೀಜದ ಭೇದ), ಇಟ್ಟೇವು (ಮಲ. ತುಣೆಯಾಸ್ಕಂ), ಸರಳಧೂಪ, ಕಾಡುದಾಲ್ಚೀನಿ, ಚೋರಕ, ಏಲಾವಾಲುಕ, ಗುಗ್ಗುಲ (ಮಹಿಷಾಕ್ಷಿಗುಗ್ಗುಳ), ರಾಳ, ಶಿಲಾರಸ, ಲೋಭಾನ (ಮಲ ಕುಸ್ತುರುಕಂ), ಅಗಿಲುಗಂಧ, ಸ್ಪೃಕ್ಕ (ಮಲ ಚೋನಕಪ್ಪುಲ್ಲು), ಲಾಮಂಚ, ದೇವದಾರ, ಕುಂಕುಮಕೇಸರ ಮತ್ತು ಹೂನ್ನೆ (ಸುರಹೊನ್ನೆ) ಹೂವು ಈ ಏಲಾದಿಗಣವು ವಾತಕಫಗಳನ್ನೂ, ವಿಷವನ್ನೂ ಕೊಲ್ಲುವದು. ವರ್ಣಪ್ರಸನ್ನತೆಯನ್ನುಂಟುಮಾಡುವಂಥಾದ್ದು, ತುರಿ, ಪಿಡಕ, ಕೋಠರೋಗ, ಇವುಗಳನ್ನು ನಾಶನಮಾಡುತ್ತದೆ

ಷರಾ ಪತ್ರಂ' ಎಂಬದಕ್ಕೆ ಕೆಲವು ಮಲಯಾಳಿ ವೈದ್ಯರು 'ಪಚ್ಚಿಲ' (ಪಚ್ಚೆತೆನೆಗಿಡದ ಎಲೆ) ಎಂಬದನ್ನು ಉಪಯೋಗಿಸುತ್ತಾರೆ ಅದು ಸರಿಯಾದ್ದಾಗಿ ಕಾಣುವದಿಲ್ಲ ತೈಲಾದಿ ಬಾಹ್ಯ ಉಪಯೋಗದ ಔಷಧಗಳಿಗೆ ಅದನ್ನು

ಉಪಯೋಗಿಸುವದರಿಂದ ಬಾಧಕವಿಲ್ಲದಿರಬಹುದು ಹೊಟ್ಟೆಗೆ ಕೊಡತಕ್ಕ ಯೋಗಗಳಿಗೆ ಅದನ್ನು ಕೂಡಿಸಬಾರದು 'ಚಣ್ಡಾ' ಎಂದರೆ ಅದೇ ಹೆಸರಿನ ಸ್ವಲ್ಪ ಕಪ್ಪಾದ ಅಜಮೋದದ ಆಕಾರಾಗಿರುವ ಚೋರಕಭೇದ ಎಂತ ಸಿ ಸಂ ವ್ಯಾ. (ಪು. 138.) ಧ. ನಿ. ಪ್ರಕಾರ 'ಚಣ್ಡಾ' ಎಂಬದು ಚೋರಕಕ್ಕೇನೇ ಹೆಸರು 'ಪುನ್ನಾಗಕೇತರಂ' ಎಂಬಲ್ಲಿ 'ಕೇತರಂ' ಎಂಬದನ್ನು ಪ್ರತ್ಯೇಕಿಸಿ, ಅದಕ್ಕೆ ಬಕುಲಂ (ರಂಜೆ) ಎಂತ ನಿ. ಸಂ. ವ್ಯಾ ಅದು ಸರಿಯಾಗಿ ಕಾಣುವದಿಲ್ಲ, ಯಾಕೆಂದರೆ ಎಲ್ಲಾ ಗಣಗಳ ವರ್ಣನದಲ್ಲಿಯೂ ಒಂದೇ ದ್ರವ್ಯವನ್ನು ಕೊನೆಯಲ್ಲಿ ಪ್ರತ್ಯೇಕವಾಗಿ ಹೇಳಿದ್ದು ಕಾಣುತ್ತದೆ

**12.** **(*a*)** ವಚಾಮುಸ್ತಾತಿವಿಷಾಭಯಾಭದ್ರದಾರೂಣಿ ನಾಗಕೇಶರಂ ಚೇತಿ.
(*b*) ಹರಿದ್ರಾ ದಾರುಹರಿದ್ರಾ ಕಲಶೀ ಕುಟಜಬೀಜಾನಿ ಮಧುಕಂ ಚೇತಿ.

ಏತೌ ವಚಾಹರಿದ್ರಾದೀ ಗಣೌ ಸ್ತನ್ಯವಿಶೋಧನೌ |
ಆಮಾತೀಸಾರಶಮನೌ ವಿಶೇಷಾದ್ದೋಷಪಾಚನೌ || (ಸು. 141)

**(*a*)** ಬಜೆ, ಭದ್ರಮುಷ್ಟಿ, ಅತಿವಿಷ, ಅಣಿಲೆಕಾಯಿ, ದೇವದಾರು ಮತ್ತು ನಾಗಕೇಸರ.
**(*b*)** ಅರಶಿನ, ಮರದರಶಿನ, ಓರೆಲೆ, ಕೊಡಸಿಗನ ಬೀಜ ಮತ್ತು ಜ್ಯೇಷ್ಠಮಧು. ಈ **ವಚಾದಿ, ಹರಿದ್ರಾದಿ** ಎಂಬ ಎರಡು ಗಣಗಳು ಮೊಲೆಹಾಲನ್ನು ಶೋಧಿಸುವಂಥವು, ಆಮಾತಿಸಾರವನ್ನು ಶಮನಮಾಡುವಂಥವು ಮತ್ತು ವಿಶೇಷವಾಗಿ ದೋಷವನ್ನು ಪಾಚನ ಮಾಡುವ ಗುಣವುಳ್ಳವು (ಆಮಾವಸ್ಥೆಯನ್ನು ಗೆದ್ದು ಪಕ್ವಾವಸ್ಥೆಗೆ ತರುವಂಥವು).

ಷರಾ ಇವೆರಡನ್ನು ಪ್ರತ್ಯೇಕ ಗಣಗಳಾಗಿಯೂ, ಹ್ರಸ್ವಪಂಚಮೂಲ, ಬೃಹತ್ಪಂಚಮೂಲ ಎಂಬ ವರ್ಗಗಳು ದಶಮೂಲ ಎಂಬ ಗಣದಲ್ಲಿ ಸೇರಿದವಾದದರಿಂದ ಪ್ರತ್ಯೇಕ ಗಣಗಳಲ್ಲ ಎಂತಲೂ, ಸಂಶೋಧನೌಷಧಗಳೊಳಗೆ ಸೇರಿದ ತ್ರಿವೃತಾದಿ ಗಣವು ಈ ಪ್ರಕರಣದ ಗಣಗಳೊಳಗೆ ಸೇರತಕ್ಕಂಥಾದ್ದಾಗಿಯೂ ಎಣಿಸಿ ಒಟ್ಟು ಮೂವತ್ತೇಳು ಗಣಗಳೆಂತ ಸುಶ್ರುತ ಹೇಳಿದ್ದಾಗಿರಬಹುದು

13. ಶ್ಯಾಮಾಮಹಾಶ್ಯಾಮಾತ್ರ(?ತ್ರಿ)ವೃದ್ಧಸ್ತೀಶಂಖಿನೀತಿಲ್ವಕಕಮ್ಪಿಲ್ಲಕರಮ್ಯಕ-ಕ್ರಮುಕಪುತ್ರಶ್ರೇಣೀಗವಾಕ್ಷೀರಾಜವೃಕ್ಷಕರಂಜದ್ವಯಗುಡೂಚೀಸಪ್ತಲಾಚ್ಛಗಲಾನ್ತ್ರೀಸು-ಧಾಃ ಸುವರ್ಣಕ್ಷೀರೀ ಚೇತಿ.

ಉಕ್ತಃ ಶ್ಯಾಮಾದಿರಿತ್ಯೇಷ ಗಣೋ ಗುಲ್ಮವಿಷಾಪಹಃ |
ಆನಾಹೋದರವಿಡ್ಭೇದೀ ತಥೋದಾವರ್ತನಾಶನಃ || (ಸು 141)

ಕರಿತಿಗಡೆ, ಸುಗಂಧ (ನಾಮದ)ಬೇರು, ಕೆಂಪು ತಿಗಡೆ, ದಂತಿ(ಜಯಪಾಲಗಿಡದ) ಬೇರು, ಕಾಡುಪಾವಟೆ (ಮಣಿತೊಂಡೆ, ಸುರ್ತೆಂಗಿ) ಬಳ್ಳಿ, ಲೋಧ್ರದ ಪಟ್ಟೆ, ಕಾಂಪಿಲ್ಲ, ಕಹಿಪಡುವಲು, ಕಂಗು (ಅಡಿಕೆ ಮರ), ಕಾಡುಹರಳು, (ಗೋಲಂಬುಡ), ಹಾವುಮೆಕ್ಕೆ, ಕಕ್ಕಮರ (ಕೊಂದೆ), ಹೊಂಗೆ (ನಾಯಿಪಲ್ಲೆ), ಮುಳ್ಳುಹೊಂಗೆ (ಹೊಂಗೆಜಾತಿ ಗಿಡ), ಅಮೃತಬಳ್ಳಿ, ಕೋಡುಕಳ್ಳಿ, ಅಜಾನ್ತ್ರೀ (ಫರಂಗಿ ಚಕ್ಕೆ, ಚೀನಿಪಾವು), ಜಡೆಕಳ್ಳಿ ಮತ್ತು ಅರಸಿನ ಉಮ್ಮತ್ತ. ಈ ಗಣಕ್ಕೆ '**ಶ್ಯಾಮಾದಿ**' ಎನ್ನುತ್ತಾರೆ. ಅದು ಗುಲ್ಮ ರೋಗವನ್ನೂ ವಿಷವನ್ನೂ ಪರಿಹರಿಸುವಂಥಾದ್ದು, ಆನಾಹ ಮತ್ತು ಉದರ ವ್ಯಾಧಿಗಳಲ್ಲಿ ಮಲಭೇದಿಯನ್ನುಂಟುಮಾಡುವಂಥಾದ್ದು; ಮತ್ತು ಉದಾವರ್ತರೋಗನಾಶನಕಾರಿ.

ಷರಾ 'ಮಹಾಶ್ಯಾಮಾ' ಎಂದರೆ ವೃದ್ಧದಾರಕ (ಚೀನಿಪಾವು) ಮತ್ತು 'ಛಗಲಾನ್ತ್ರೀ' ಎಂಬದು ಅದರ ಭೇದ ಎಂತಲೂ, 'ರಮ್ಯಕ' ಎಂಬದು 'ಮಹಾನಿಮ್ಬ' (ದೊಡ್ಡ ಬೇವು) ಎಂತಲೂ ನಿ. ಸಂ ವ್ಯಾ (ಪು 139) ಛಗಲಾನ್ತ್ರೀ ಎಂಬದು 'ವೃಷಘೋಧಾ' ಎಂಬದರ ಪರ್ಯಾಯಪದ ಎಂತ ಧ ನಿ.

ನಾಲ್ಕನೇ ಪರಿಶಿಷ್ಟದ 3ನೇ ಸಂಖ್ಯೆಯಡಿ ಷರಾ ನೋಡಿ

14. ವೃಹತೀಕಂಟಕಾರಿಕಾಕುಟಜಫಲಪಾಠಾ ಮಧುಕಂ ಚೇತಿ.

ಪಾಚನೀಯೋ ವೃಹತ್ಯಾದಿರ್ಗಣಃ ಪಿತ್ತಾನಿಲಾಪಹಃ ।
ಕಫಾರೋಚಕಹೃಲ್ಲಾಸಮೂತ್ರಕೃಚ್ಛ್ರರುಜಾಪಹಃ ॥

ಗುಳ್ಳ, ಕಿರಿಗುಳ್ಳ, ಕೊಡಸಿಗನಬೀಜ, ಪಾಡಾವಳಿಗಡ್ಡೆ ಮತ್ತು ಜ್ಯೇಷ್ಠಮಧು. ಈ ವೃಹತ್ಯಾದಿ ಗಣವು ಪಾಚನಗುಣವುಳ್ಳದ್ದು; ಪಿತ್ತವಾಯುಹರ, ಕಫ, ಅರುಚಿ, ಬಿಕ್ಕಟ್ಟು ಮತ್ತು ಮೂತ್ರಕೃಚ್ಛ್ರರೋಗಗಳನ್ನು ಪರಿಹರಿಸತಕ್ಕಂಥಾದ್ದು.

15. ಪಟೋಲಚನ್ದನಕುಚನ್ದನಮೂರ್ವಾಗುಡೂಚೀಪಾಠಾಃ ಕಟುರೋಹಿಣೀ ಚೇತಿ.

ಪಟೋಲಾದಿರ್ಗಣಃ ಪಿತ್ತಕಫಾರೋಚಕನಾಶನಃ ।
ಜ್ವರೋಪಶಮನೋ ವ್ರಣ್ಯಶ್ಛರ್ದಿಕಣ್ಡೂವಿಷಾಪಹಃ ॥

ಕಹಿಪಡುವಲು, ಶ್ರೀಗಂಧ, ರಕ್ತಚಂದನ, ಹೆಗ್ಗುರುಟಿಕೆಬೇರು, ಅಮೃತಬಳ್ಳಿ, ಪಾಡಾವಳಿಗಡ್ಡೆ ಮತ್ತು ಕಟುಕರೋಹಿಣೀ ಈ ಪಟೋಲಾದಿ ಗಣವು ಪಿತ್ತ-ಕಫ-ಅರುಚಿಗಳನ್ನು ನಾಶಮಾಡತಕ್ಕಂಥಾದ್ದು, ಜ್ವರವನ್ನು ಉಪಶಮನ ಮಾಡುವಂಥಾದ್ದು, ವ್ರಣದಲ್ಲಿ ಹಿತವಾದದ್ದು. ವಾಂತಿ, ತುರಿ ಮತ್ತು ವಿಷವನ್ನು ಪರಿಹರಿಸುವ ಗುಣವುಳ್ಳದ್ದು.

16. ಕಾಕೋಲೀಕ್ಷೀರಕಾಕೋಲೀಜೀವಕರ್ಷಭಕಮುದ್ಗಪರ್ಣೀಮಾಷ(ಷ)ಪರ್ಣೀ-ಮೇದಾಮಹಾಮೇದಾಚ್ಛಿನ್ನರುಹಾಕರ್ಕಟಶೃಂಗೀತುಗಾಕ್ಷೀರೀಪದ್ಮಕಪ್ರಪೌಣ್ಡರೀಕರ್ದ್ಧಿವೃದ್ಧಿಮೃದ್ವೀಕಾಜೀವನ್ತ್ಯೋ ಮಧುಕಂ ಚೇತಿ ॥

ಕಾಕೋಲ್ಯಾದಿರಯಂ ಪಿತ್ತಶೋಣಿತಾನಿಲನಾಶನಃ ।
ಜೀವನೋ ಬೃಂಹಣೋ ವೃಷ್ಯಃ ಸ್ತನ್ಯಶ್ಲೇಷ್ಮಕರಸ್ತಥಾ ॥

ಕಾಕೋಲೀ, ಕ್ಷೀರಕಾಕೋಲೀ, ಜೀವಕ, ಋಷಭಕ, ಕಾಡುಹೆಸರು, ಕಾಡುಉದ್ದು, ಮೇದೆ, ಮಹಾಮೇದೆ, ಅಮೃತಬಳ್ಳಿ, ಕರ್ಕಟಶೃಂಗೀ, ಬಿದಿರುಪ್ಪು, ಪದ್ಮಕಾಷ್ಠ (ಮಲ. ಪತಿಮುಕಂ), ಪುಂಡರೀಯಕ (ಮಲ ಕಲ್ತಾಮರಂ), ಋದ್ಧಿ, ವೃದ್ಧಿ, ದ್ರಾಕ್ಷಿ, ಜೀವಂತಿ ಮತ್ತು ಜ್ಯೇಷ್ಠಮಧು. ಈ ಕಾಕೋಲ್ಯಾದಿಯು ಪಿತ್ತ ಮತ್ತು ರಕ್ತವಾತ ನಾಶನಕಾರಿ; ಬದುಕಿಸುವಂಥಾದ್ದು, ಪುಷ್ಟಿಕರ, ವೃಷ್ಯಗುಣವುಳ್ಳದ್ದು, ಮತ್ತು ಮೊಲೆಹಾಲನ್ನೂ ಕಫವನ್ನೂ ಉಂಟುಮಾಡುವಂಥಾದ್ದು

ಪರಾ ಜೀವಕ, ಋಷಭಕ ಮೇದೆ, ಮಹಾಮೇದೆ, ಋದ್ಧಿ, ವೃದ್ಧಿ, ಕಾಕೋಲಿ, ಕ್ಷೀರಕಾಕೋಲಿ, ಈ ಎಂಟು ದ್ರವ್ಯಗಳ ಸಮುದಾಯಕ್ಕೆ ಅಷ್ಟವರ್ಗ ಎನ್ನುತ್ತಾರೆ ಅವು ಸಾಧಾರಣವಾಗಿ ದೊರೆಯುವಂಥವಲ್ಲ ಪ್ರತಿನಿಧಿ ಪ್ರಕರಣ ನೋಡಿ ಅಷ್ಟವರ್ಗಕ್ಕೆ ಜ್ಯೇಷ್ಠಮಧು, ಜೀವಂತಿ, ಕಾಡುಹೆಸರು, ಕಾಡುಉದ್ದು ಸೇರಿದಾಗ್ಗೆ ಅದು ಜೀವನೀಯ ಗಣವಾಗುತ್ತದೆ (ಭಾ ಪ್ರ 101) ಈ ಹನ್ನೆರಡು ಬಗೆಗಳೊಳಗೆ ಋದ್ಧಿ ಮತ್ತು ವೃದ್ಧಿ ಬಿಟ್ಟು ಉಳಿದ ಹತ್ತು ಬಗೆಗಳು ಮಧುರ ವರ್ಗ (ಧ ಸಿ 302)

17 ಊಷಕಸೈನ್ಧವಶಿಲಾಜತುಕಾಸೀಸದ್ವಯಹಿಂಗೂನಿ ತುತ್ಥಕಂ ಚೇತಿ. ॥

ಊಷಕಾದಿಃ ಕಫಂ ಹನ್ತಿ ಗಣೋ ಮೇದೋವಿಶೋಷಣಃ ।
ಅಶ್ಮರೀಶರ್ಕರಾಮೂತ್ರಕೃಚ್ಛ್ರಗುಲ್ಮಪ್ರಣಾಶನಃ ॥

(ಸು. 142)

ಚವುಳು ಮಣ್ಣು, ಸೈಂಧವಲವಣ, ಶಿಲಾಜತು (ಮಲ. ಕನ್ಮದಂ), ಧಾತುಕಾಸೀಸ (ಅನ್ನಭೇದಿ, ಹಿರಾಕಾಸು), ಪುಷ್ಪಕಾಸೀಸ (ಅನ್ನಭೇದಿಯ ಭೇದ), ಹಿಂಗು, ಮಯಿಲುತುತ್ಥ (ಖರ್ಪರೀತುತ್ಥ ಎಂತ ನಿ. ಸಂ. ವ್ಯಾ.). ಈ **ಊಷಕಾದಿ** ಗಣವು ಕಫವನ್ನು ನಾಶಮಾಡುತ್ತದೆ; ಮೇದಸ್ಸನ್ನು ಒಣಗಿಸುತ್ತದೆ; ಅಶ್ಮರೀ, ಶರ್ಕರಾ, ಮೂತ್ರಕೃಚ್ಛ್ರ, ಗುಲ್ಮ, ಈ ರೋಗಗಳನ್ನು ನಾಶಮಾಡುವದು.

18. ಸಾರಿವಾಮಧುಕಚನ್ದನಕುಚನ್ದನಪದ್ಮಕಕಾಶ್ಮರೀಫಲಮಧೂಕಪುಷ್ಪಾಣ್ಯುಶೀರಂ ಚೇತಿ ||

ಸಾರಿವಾದಿಃ ಪಿಪಾಸಘ್ನೋ ರಕ್ತಪಿತ್ತಹರೋ ಗಣಃ |
ಪಿತ್ತಜ್ವರಪ್ರಶಮನೋ ವಿಶೇಷಾದ್ದಾಹನಾಶನಃ || (ಸು 142)

ಸುಗಂಧಿ (ನಾಮದ) ಬೇರು, ಜ್ಯೇಷ್ಠಮಧು, ಶ್ರೀಗಂಧ, ರಕ್ತಚಂದನ, ಪದ್ಮಕಾಷ್ಠ, ಕಾಶ್ಮೀರ (ಕೂಲಿ) ಮರನ ಹಣ್ಣು, ಇಪ್ಪೆಹೂವು ಮತ್ತು ಲಾವಂಚ. ಈ ಸಾರಿವಾದಿ ಗಣವು ಬಾಯಾರಿಕೆಯನ್ನು ನಾಶಮಾಡತಕ್ಕಂಥಾದ್ದು; ರಕ್ತಪಿತ್ತಹರ, ಪಿತ್ತಜ್ವರವನ್ನು ಶಮನಮಾಡುತ್ತದೆ; ವಿಶೇಷವಾಗಿ ಉರಿಯನ್ನು ನಾಶಮಾಡುವದು.

19. ಅಂಜನರಸಾಂಜನನಾಗಪುಷ್ಪಪ್ರಿಯಂಗುನೀಲೋತ್ಪಲನಲದನಲಿನಕೇಶರಾಣಿ ಮಧುಕಂ ಚೇತಿ ||

ಅಂಜನಾದಿರ್ಗಣೋ ಹ್ಯೇಷ ರಕ್ತಪಿತ್ತನಿಬರ್ಹಣಃ |
ವಿಷೋಪಶಮನೋ ದಾಹಂ ನಿಹನ್ತ್ಯಾಭ್ಯನ್ತರಂ ತಥಾ ||

ಸೌವೀರಾಂಜನ, ರಸಾಂಜನ, ನಾಗಸಂಪಿಗೆಹೂವು (ಅಥವಾ ನಾಗಕೇಸರ), ಪ್ರಿಯಂಗು ನೀಲತಾವರೆ, ಲಾವಂಚ, (ಜಟಾಮಾಂಸೀ ಎಂತ ನಿ ಸಂ ವ್ಯಾ.), ತಾವರೆಕೇಸರ ಮತ್ತು ಜ್ಯೇಷ್ಠಮಧು ಈ ಅಂಜನಾದಿ ಗಣವು ರಕ್ತಪಿತ್ತವನ್ನು ಜಯಿಸತಕ್ಕಂಥಾದ್ದು, ವಿಷವನ್ನು ಉಪಶಮನಮಾಡುತ್ತದೆ, ಮತ್ತು ದೇಹದೊಳಗಿನ ಉರಿಯನ್ನು ನಾಶಮಾಡುತ್ತದೆ.

20. ಪರೂಷಕದ್ರಾಕ್ಷಾಕಟ್ಫಲದಾಡಿಮರಾಜಾದನಕತಕಫಲಶಾಕಫಲಾನಿ ತ್ರಿಫಲಾ ಚೇತಿ ||

ಪರೂಷಕಾದಿರಿತ್ಯೇಷ ಗಣೋಽನಿಲವಿನಾಶನಃ |
ಮೂತ್ರದೋಷಹರೋ ಹೃದ್ಯಃ ಪಿಪಾಸಾಘ್ನೋ ರುಚಿಪ್ರದಃ ||

ಪರೂಷಕಫಲ, ದ್ರಾಕ್ಷೆ, ಕಿರುಶಿವನಿ (ಮಲ. ಚೆರುಕುಮಿಳು) ಹಣ್ಣು, ದಾಳಿಂಬ, ಖಿರಣೀ ಮರ (ರಾಜಾದನ,* ಮಲ. ಪಳಮುಳ್‌ಪಾಲ)ನ ಹಣ್ಣು, ಚಿಲ್ಲಬೀಜ, ತ್ಯಾಗದ ಕಾಯಿ ಮತ್ತು ತ್ರಿಫಲೆ ಈ ಪರೂಷಕಾದಿಗಣವು ವಾತನಾಶಕ; ಮೂತ್ರದೋಷಹರ, ಹೃದಯಕ್ಕೆ ಒಳ್ಳೆಯದು, ಬಾಯಾರಿಕೆಯನ್ನು ಜಯಿಸುತ್ತದೆ, ಮತ್ತು ರುಚಿಕರ

* ಉತ್ತರ ಮತ್ತು ಮಧ್ಯ ಹಿಂದುಸ್ಥಾನದಲ್ಲಿ ಬೆಳೆಯುವ ನೀ ಹಣ್ಣಿನ ರೆಂಜೆ ಜಾತಿಯ ಮರ (ನಾ ನಿ 555)

21. ಪ್ರಿಯಂಗುಸಮಂಗಾಧಾತಕೀಪುನ್ನಾಗರಕ್ತ*ಚನ್ದನಕುಚನ್ದನಮೋಚರಸರಸಾಂಜನಕುಂಭೀಕಸ್ರೋತೋಂಜನಪದ್ಮಕೇಸರಯೋಜನವಲ್ಯೋ ದೀರ್ಘಮೂಲಾ ಚೇತಿ

* 'ರಕ್ತಚನ್ದನ' ಎಂಬಲ್ಲಿ 'ನಾಗಪುಷ್ಪೀಚನ್ದನ' ಎಂತ ಪಾಠಾಂತರವಿದೆ

ಪ್ರಿಯಂಗು, ನಾಚಿಕೆಸೊಪ್ಪಿನ ಗಿಡ, ಧಾತಕೀ ಕುಸುಮ, ಹೊನ್ನೆ (ಕುಂಕುಮದ) ಮರ, ನಾಗಕೇಸರ, ಶ್ರೀಗಂಧ, ರಕ್ತಚಂದನ, ಬೂರಲಮೇಣ (ಮಲ. ಇಲವಿನ್‌ಪಶ), ರಸಾಂಜನ, ಪಾದರಿಹೂವು, ಸ್ರೋತೋಂಜನ, ತಾವರೆಕೇಸರ, ಮಂಜಿಷ್ಠಾ ಮತ್ತು ಬಳ್ಳಿತುರಚಿಬೇರು. ಇದು ಪ್ರಿಯಂಗ್ವಾದಿ ಗಣ.

22. ಅಮ್ಬಷ್ಠಾಧಾತಕೀಕುಸುಮಸಮಂಗಾಕಟ್ವಂಗಮಧುಕವಿಲ್ವಪೇಶಿಕಾರೋಧ್ರಸಾವರರೋಧ್ರಪಲಾಶನನ್ದೀವೃಕ್ಷಪದ್ಮಕೇಶರಾಣಿ ಚೇತಿ

ಗಣೌ ಪ್ರಿಯಂಗ್ವಮ್ಬಷ್ಠಾದೀ ಪಕ್ವಾತೀಸಾರನಾಶನೌ |
ಸನ್ಧಾನೀಯೌ ಹಿತೌ ಪಿತ್ತೇ ವ್ರಣಾನಾಂ ಚಾಪಿ ರೋಪಣೌ || (ಸು. 142-3)

ಮಾಯಿಫಲ (ಲೂತಿಕಾಯಿ)-ಧಾತಕೀಕುಸುಮ-ನಾಚಿಕ ಸೊಪ್ಪಿನ ಗಿಡ-ಆನೆಮುಂಗು-ಜ್ಯೇಷ್ಠಮಧು-ಎಳೇ ಬಿಲ್ವಪತ್ರೆಕಾಯಿ-ಲೋಧ್ರ (ಮಲ. ಪಾಚ್ಚೊಟ್ಟಿ)-ಬಿಳೇ ಪಟ್ಟಿಲೋಧ್ರ-ಪಲಾಶ, ಕಾಡು ಅಶ್ವತ್ಥ (ಮಲ. ಚಿಟ್ಟರಯಾಲ, ಕಾಶ್ಮರಿ ಎಂತ ನಿ. ಸಂ ವ್ಯಾ.) ಮತ್ತು ತಾವರೆ ಕೇಸರ. ಇದು ಅಮ್ಬಷ್ಠಾದಿಗಣ.

ಪ್ರಿಯಂಗ್ವಾದಿ ಮತ್ತು ಅಂಬಷ್ಠಾದಿ ಎಂಬ ಈ ಎರಡು ಗಣಗಳು ಪಕ್ವಾತಿಸಾರನಾಶನಕಾರಿ, ಪಿತ್ತದಲ್ಲಿ ಹಿತವಾದವು, ಸಂಧಾನ (ಒಡಕನ್ನು ಕೂಡಿಸುವ) ಗುಣವುಳ್ಳವು ಮತ್ತು ವ್ರಣಗಳನ್ನು ಬೆಳಿಸುವ (ಹಣ್ಣುಮಾಡಿಸುವ) ಗುಣವುಳ್ಳಂಥವು.

23 ನ್ಯಗ್ರೋಧೋದುಮ್ಬರಾಶ್ವತ್ಥಪ್ಲಕ್ಷಮಧೂಕಕಪೀತನಕಕುಭಾಮ್ರಕೋಶಾಮ್ರ - ಚೋರಕಪತ್ರಜಂಬೂದ್ವಯಪಿಯಾಲಮಧುಕರೋಹಿಣೀವಂಜುಲಕದಂಬವದರೀತಿನ್ದುಕೀಸ - ಲ್ಲಕೀರೋಧ್ರಸಾವರರೋಧ್ರಭಲ್ಲಾತಕಪಲಾಶಾ ನನ್ದೀವೃಕ್ಷಶ್ಚೇತಿ.

ನ್ಯಗ್ರೋಧಾದಿರ್ಗಣೋ ವ್ರಣ್ಯಃ ಸಂಗ್ರಾಹೀ ಭಗ್ನಸಾಧಕಃ |
ರಕ್ತಪಿತ್ತಹರೋ ದಾಹಮೇದೋಘ್ನೋ ಯೋನಿದೋಷಹೃತ್ || (ಸು. 143)

ಗೋಳಿಮರ, ಅತ್ತಿಮರ, ಅಶ್ವತ್ಥದಮರ, ಬಸರಿಮರ (ಮಲ. ಚುವನ್ನಾಲ-ಇತ್ತಿ), ಇಪ್ಪೆಮರ, ಜೋಗಿಯರಳೆ ಮರ (ಪೂವರಸಿ ಮಲ ಕಲ್ಲಾಲಾ, ಅಂಬಟ (ಆಮ್ರಾತಕಃ) ಎಂತ ನಿ. ಸಂ ವ್ಯಾ). ಬಿಳೇಮತ್ತಿ, ಮಾವು, ಕಾಡುಮಾವು (ಜೂರಿಮಾವು, ಮಲ ಕುರುಟ್ಟುಮಾವು), ಆರಗಿನಮರ (ಚೋರಕಪತ್ರ, 'ಲಾಕ್ಷಾವೃಕ್ಷ' ಎಂತ ನಿ. ಸಂ. ವ್ಯಾ) ನೇರಳೆ, ಕುಂಟನೇರಳೆ, ಮೂರಂಟಿಮರ (ಮೂರವಮರ-ಮಲ ಮುರಳ್ಮಾಮರಂ), ಇಪ್ಪೆಮರ, ಕಿರುಶಿವನಿ (ಕಟ್ಫಲ), ಬೆತ್ತ, ಕಡಹದಮರ, ಜೊಗರೀಮರ, ಹಯನೇ (ಒಂದದ) ಮರ, ಮಾದಿಮರ, (ವಿಶೇಷಧೂಪ, ಮಲ ಪಾಲಂಗಂ, 'ಈಸ್ತಲ್' ಎಂತ ಕ್ಯ. ನಿ., ಅಂದರೆ ಬೈನೆ ಮರವನ್ನು 'ಸಲ್ಲಕೀ'ಗೆ ಉಪಯೋಗಿಸುವ ಸಂಪ್ರದಾಯ ಉಂಟಂತಾಗುತ್ತದೆ), ಲೋಧ್ರ, ಪಟ್ಟಿ (ಬಿಳೇ) ಲೋಧ್ರ, ಗೇರುಮರ, ಪಲಾಶ ಮತ್ತು ಕಾಡು ಅಶ್ವತ್ಥ (ಮಲ ಚಿಟ್ಟರಯಾಲ್). ಈ ನ್ಯಗ್ರೋಧಾದಿ ಗಣವು ವ್ರಣಪರಿಹಾರಕರ, ಗ್ರಾಹಿ ಗುಣವುಳ್ಳದ್ದು, ಒಡಕನ್ನು (ಭಗ್ನವನ್ನು) ಸಾಧಿಸುತ್ತದೆ (ಕೂಡಿಸುತ್ತದೆ), ರಕ್ತಪಿತ್ತಹರ, ಯೋನಿದೋಷಹರ ಮತ್ತು ಉರಿಯನ್ನೂ ಮೇದಸ್ಸನ್ನೂ ನಾಶಮಾಡುತ್ತದೆ.

24. ಗುಡೂಚೀನಿಮ್ಬಕುಸ್ತುಮ್ಬುರುಚನ್ದನಾನಿ ಪದ್ಮಕಂ ಚೇತಿ

ಏಷ ಸರ್ವಜ್ವರಾನ್ ಹನ್ತಿ ಗುಡೂಚ್ಯಾದಿಸ್ತು ದೀಪನಃ |
ಹೃಲ್ಲಾಸಾರೋಚಕವಮೀಪಿಪಾಸಾದಾಹನಾಶನಃ || (ಸು. 143)

ಅಮೃತಬಳ್ಳಿ, ಕಹಿಬೇವು, ಕೊತ್ತುಂಬರಿ, ಶ್ರೀಗಂಧ (ರಕ್ತಚಂದನ, ಎಂತ ನಿ. ಸಂ. ವ್ಯಾ.) ಮತ್ತು ಪದ್ಮಕಾಷ್ಠ. ಈ ಗುಡೂಚ್ಯಾದಿವರ್ಗವು ಸರ್ವ ಜ್ವರಗಳನ್ನು ಕೊಲ್ಲುತ್ತದೆ; ದೀಪನಕಾರಿ; ಮತ್ತು ಹೃಲ್ಲಾಸ (ಬಿಕ್ಕಳು), ಅರುಚಿ, ವಾಂತಿ, ಬಾಯಾರಿಕೆ ಮತ್ತು ಉರಿ, ಇವುಗಳನ್ನು ನಾಶಮಾಡುತ್ತದೆ.

ಷರಾ ಹೃಲ್ಲಾಸ ಎಂದರೆ 'ಥೂತ್ಕರಣಂ' ('ಥೂ'ಮಾಡುವದು, ಎಂಜಲು ಉಗಿಯುತ್ತಿರುವದು) ಎಂತ ನಿ ಸಂ ವ್ಯಾ

25. ಉತ್ಪಲರಕ್ತೋತ್ಪಲಕುಮುದಸೌಗನ್ಧಿಕಕುವಲಯಪುಣ್ಡರೀಕಾಣಿ ಮಧುಕಂ ಚೇತಿ.

ಉತ್ಪಲಾದಿರಯಂ ದಾಹಪಿತ್ತರಕ್ತವಿನಾಶನಃ |
ಪಿಪಾಸಾವಿಷಹೃದ್ರೋಗಚ್ಛರ್ದಿಮೂರ್ಚ್ಛಾಹರೋ ಗಣಃ || (ಸು. 143)

ನೀಲನೈದಿಲೆ, ಕೆಂಪುನೈದಿಲೆ, ಬಿಳೇನೈದಿಲೆ(ಸುಗಂಧವುಳ್ಳ), ನೀಲತಾವರೆ, ಸುಗಂಧವುಳ್ಳ ನೀಲತಾವರೆ (ನೀಲೋತ್ಪಲ), ಬಿಳೇತಾವರೆ (ಕಮಲ) ಮತ್ತು ಜ್ಯೇಷ್ಠಮಧು. ಈ ಉತ್ಪಲಾದಿ ಗಣವು ಉರಿಯನ್ನೂ ಪಿತ್ತರಕ್ತವನ್ನೂ ನಾಶಮಾಡುವಂಥಾದ್ದು, ಬಾಯಾರಿಕೆ-ವಿಷ-ಹೃದ್ರೋಗ-ವಾಂತಿ-ಮೂರ್ಚ್ಛೆ ರೋಗಗಳನ್ನು ಪರಿಹರಿಸುವಂಥಾದ್ದು.

ಷರಾ ಉತ್ಪಲ, ಕುವಲಯ ಮತ್ತು ಸೌಗನ್ಧಿಕ ಶಬ್ದಗಳು ನೀಲತಾವರೆಗೂ ನೀಲನೈದಿಲೆಗೂ ಬರುತ್ತವೆ ನಿ ಸಂ ವ್ಯಾ ಯಲ್ಲಿ ಉತ್ಪಲ-ಎಂದರೆ ನೀಲೋತ್ಪಲ, ಕುಮುದ ಎಂಬದು ಬಿಳೇ ಉತ್ಪಲ, ಸೌಗನ್ಧಿಕ ಎಂಬದು ನಿಲೋತ್ಪಲದ ಆಕಾರ ಮತ್ತು ವರ್ಣ ಇರುವ ಸುಗಂಧವುಳ್ಳ ಉತ್ಪಲ ಮತ್ತು ಕುವಲಯ ಎಂಬದು ಕಿಂಚಿತ್ ನೀಲವುಳ್ಳ ಬಿಳೇ ವರ್ಣದ್ದು ಎಂತ ವಿವರಿಸಲ್ಪಟ್ಟಿವೆ ಅಂದರೆ 'ಪುಂಡರೀಕ' ಮಾತ್ರ ಬಿಳೇ ಕಮಲ, ಮಿಕ್ಕವುಗಳೆಲ್ಲ ನೈದಿಲೆಯ ಭೇದಗಳೆಂತ ಅರ್ಥವಾಗುತ್ತದೆ ಹೆಚ್ಚಾಗಿ ಉತ್ಪಲ ಮತ್ತು ನೀಲೋತ್ಪಲ ಎಂಬ ಹೆಸರುಗಳು ನೀಲತಾವರೆಯನ್ನೇ ಸೂಚಿಸುತ್ತವೆ ಅವ ದೊರೆಯುವದು ಅಪರೂಪವಾದ್ದರಿಂದ ನೀಲನೈದಿಲೆಗಳನ್ನು ಅವುಗಳ ಸ್ಥಾನದಲ್ಲಿ ಉಪಯೋಗಿಸುತ್ತಾರೆ

26. ಮುಸ್ತಾಹರಿದ್ರಾದಾರುಹರಿದ್ರಾಹರೀತಕ್ಯಾಮಲಕವಿಭೀತಕಕುಷ್ಠಹೈಮವತೀವಚಾಪಾಠಾಕಟುರೋಹಿಣೀಶಾರ್ಙ್ಗಷ್ಟಾತಿವಿಷಾದ್ರಾವಿಡೀಭಲ್ಲಾತಕಾನಿ ಚಿತ್ರಕಶ್ಚೇತಿ.

ಏಷ ಮುಸ್ತಾದಿಕೋ ನಾಮ್ನಾ ಗಣಃ ಶ್ಲೇಷ್ಮನಿಷೂದನಃ |
ಯೋನಿದೋಷಹರಃ ಸ್ತನ್ಯಶೋಧನಃ ಪಾಚನಸ್ತಥಾ || (ಸು 143)

ಭದ್ರಮುಷ್ಟಿ, ಅರಸಿನ, ಮರದರಸಿನ, ಅಣಿಲೆಕಾಯಿ, ನೆಲ್ಲಿಕಾಯಿ, ತಾರೆ (ಶಾಂತಿ)ಕಾಯಿ, ಚಂಗಲಕೋಷ್ಠ, ಖುರಾಸಾನಿ (ಬಿಳೇ) ಬಜೆ, ಬಜೆ, ಪಾಡಾವಳಿಗಡ್ಡೆ. ಕಟುಕರೋಹಿಣೀ, ಬೀಗದ (ರಾಹುಬೀಜದ) ಮರ ಅತಿಬಜೆ (ಅತಿವಿಷ), ಏಲಕ್ಕಿ, ಗೇರುಕಾಯಿ ಮತ್ತು ಚಿತ್ರಮೂಲ. ಈ ಮುಸ್ತಾದಿ ಗಣವು ಕಫನಾಶನಕಾರಿ, ಯೋನಿದೋಷಹರ, ಮೊಲೆಹಾಲನ್ನು ಶುದ್ಧಿಮಾಡ ತಕ್ಕಂಥಾದ್ದು ಮತ್ತು ಪಾಚನಕಾರಿ.

ಷರಾ 'ಶಾರ್ಙ್ಗಷ್ಟಾ' ಎಂಬದರ ಕುರಿತು ಪಕ್ಷಾಂತರ ಉಂಟೆಂತಲೂ ಅದು ತನ್ನ ಮತದಲ್ಲಿಯವಕತಿಕ್ತ (ಮಣಿತೊಂಡೆ-ಕಾಡುಪಾವಟೆ), ಇನ್ನೊಂದು ಪಕ್ಷದಲ್ಲಿ ಕಾಕಜಂಘೆ, ಬೇರೆ ಕೆಲವರ ಪ್ರಕಾರ ಕಾಕಮಾಚಿ (ಕಾಕ ಹಣ್ಣಿನ ಗಿಡ) ಎಂತಲೂ ನಿ ಸಂ ವ್ಯಾ ಮೇಲೆ 2ನೇ ಸಂಖ್ಯೆಯಡಿ ಬರೆದ ಷರಾ ನೋಡಿ

27. ಹರೀತಕ್ಯಾಮಲಕವಿಭೀತಕಾನಿ ತ್ರಿಫಲಾ ||

ತ್ರಿಫಲಾ ಕಫಪಿತ್ತಘ್ನೀ ಮೇಹಕುಷ್ಠವಿನಾಶಿನೀ |
ಚಕ್ಷುಷ್ಯಾ ದೀಪನೀ ಚೈವ ವಿಷಮಜ್ವರನಾಶಿನೀ || (ಸು 143)

ಅಣಲೆಕಾಯಿ, ನೆಲ್ಲಿಕಾಯಿ, ತಾರೆ (ಶಾಂತಿ) ಕಾಯಿ, ಇವು ಮೂರು ಸೇರಿದ್ದು ತ್ರಿಫಲೆ. ತ್ರಿಫಲೆಯು ಕಫಪಿತ್ತವನ್ನೂ, ಮೇಹವನ್ನೂ, ಕುಷ್ಠವನ್ನೂ, ವಿನಾಶಮಾಡತಕ್ಕಂಥಾದ್ದು; ಕಣ್ಣಿಗೆ ಹಿತ, ದೀಪನಕಾರಿ ಮತ್ತು ವಿಷಮಜ್ವರನಾಶಕ.

28. ಪಿಪ್ಪಲೀಮರಿಚಶೃಂಗವೇರಾಣಿ ತ್ರಿಕಟುಕಮ್ ||

ತ್ರ್ಯೂಷಣಂ ಕಫಮೇದೋಘ್ನಂ ಮೇಹಕುಷ್ಠತ್ವಗಾಮಯಾನ್ |
ನಿಹನ್ಯಾದ್ದೀಪನಂ ಗುಲ್ಮಪೀನಸಾಗ್ನ್ಯಲ್ಪತಾಮಪಿ || (ಸು. 143-4)

ಹಿಪ್ಪಲೀ-ಕಾಳುಮೆಣಸು-ಶುಂಠಿ, ಇವು ಮೂರು ಸೇರಿ ತ್ರಿಕಟು ಅಥವಾ ತ್ರ್ಯೂಷಣ. ತ್ರಿಕಟು ಕಫವನ್ನೂ ಮೇದಸ್ಸನ್ನೂ ನಾಶಮಾಡುವಂಥಾದ್ದು, ಪ್ರಮೇಹ, ಕುಷ್ಠ, ಚರ್ಮದ ರೋಗಗಳು, ಗುಲ್ಮ, ಪೀನಸ, ಅಗ್ನಿಯ ಅಲ್ಪತೆ, ಇವುಗಳನ್ನು ಕೊಲ್ಲುವದು ಮತ್ತು ದೀಪನ ಕಾರಿ.

29. ಆಮಲಕೀಹರೀತಕೀಪಿಪ್ಪಲ್ಯಶ್ಚಿತ್ರಕಶ್ಚೇತಿ ||

ಆಮಲಕ್ಯಾದಿರಿತ್ಯೇಷ ಗಣಃ ಸರ್ವಜ್ವರಾಪಹಃ |
ಚಕ್ಷುಷ್ಯೋ ದೀಪನೋ ವೃಷ್ಯಃ ಕಫಾರೋಚಕನಾಶನಃ ||

(ಸು. 144)

ನೆಲ್ಲಿಕಾಯಿ-ಅಣಲೆಕಾಯಿ-ಹಿಪ್ಪಲಿ ಮತ್ತು ಚಿತ್ರಮೂಲ. ಆಮಲಕ್ಯಾದಿ ಎಂಬ ಈ ಗಣವು ಸರ್ವಜ್ವರಗಳನ್ನು ಪರಿಹರಿಸತಕ್ಕಂಥಾದ್ದು, ಕಣ್ಣಿಗೆ ಹಿತ, ದೀಪನಕಾರಿ, ವೃಷ್ಯಗುಣ ವುಳ್ಳದ್ದು ಮತ್ತು ಕಫವನ್ನೂ ಅರುಚಿಯನ್ನೂ ನಾಶಮಾಡುವಂಥಾದ್ದು.

30. ತ್ರಪುಸೀಸತಾಮ್ರರಜತಕೃಷ್ಣಲೋಹಸುವರ್ಣಾನಿ ಲೋಹಮಲಂ ಚೇತಿ ||

ಗಣಸ್ತ್ರಪ್ವಾದಿರಿತ್ಯೇಷ ಗರಕ್ರಿಮಿಹರಃ ಪರಃ |
ಪಿಪಾಸಾವಿಷಹೃದ್ರೋಗಪಾಣ್ಡುಮೇಹಹರಸ್ತಥಾ || (ಸು. 144)

ತವರ-ಸೀಸ-ತಾಮ್ರ-ಬೆಳ್ಳಿ-ಕಬ್ಬಿಣ-ಚಿನ್ನ (ಭಂಗಾರ) ಮತ್ತು ಕಬ್ಬಿಣದ ಕಿಟ್ಟ ಈ ತ್ರಪ್ವಾದಿ ಗಣವು ಕೃತ್ರಿಮ ವಿಷವನ್ನೂ ಕ್ರಿಮಿಯನ್ನೂ ಪರಿಹರಿಸುವದಕ್ಕೆ ಉತ್ತಮ; ಹಾಗೆ ಯೇ ಬಾಯಾರಿಕೆ, ವಿಷ, ಹೃದ್ರೋಗ, ಪಾಂಡು, ಪ್ರಮೇಹ, ಇವುಗಳನ್ನು ಪರಿಹರಿಸು ವಂಥಾದ್ದು.

31 ಲಾಕ್ಷಾರೇವತಕುಟಜಾಶ್ವಮಾರಕಕಟ್ಫಲಹರಿದ್ರಾದ್ವಯನಿಮ್ಬಸಪ್ತಚ್ಛದಮಾಲತ್ಯ - ಸ್ತ್ರಾಯಮಾಣಾ ಚೇತಿ ||

ಕಷಾಯಸ್ತಿಕ್ತಮಧುರಃ ಕಫಪಿತ್ತಾರ್ತಿನಾಶನಃ |
ಕುಷ್ಠಕ್ರಿಮಿಹರಶ್ಚೈವ ದುಷ್ಟವ್ರಣವಿಶೋಧನಃ ||

(ಸು. 144)

ಅರಗು-ಕಕ್ಕೆಮರ (ಮಲ. ಕೊನ್ನ, ತುಳು. ಕೊಂದೆ) — ಕೊಡಸಿಗ-ಬಿಳೇ ಕಣಗಿಲು-ಕಿರುಶಿವನಿ (ಮಲ ಚೆರುಕುಮಳು)-ಅರಸಿನ-ಮರದರಸಿನ-ಕಹಿಬೇವು-ಹಾಲೆ (ಏಳೆಲೆ ಬಾಳೆ) ಮರ-ಜಾಜಿ ಮತ್ತು ತ್ರಾಯಮಾಣ. ಈ ಲಾಕ್ಷಾದಿ ಗಣವು ಚೊಗರು, ಕಹಿ ಮತ್ತು ಸೀ

ರುಚಿಯುಳ್ಳದ್ದು, ಕಫಪಿತ್ತರೋಗನಾಶನ, ಕುಷ್ಠ ಮತ್ತು ಕ್ರಿಮಿ ಪರಿಹರಿಸತಕ್ಕಂಥಾದ್ದು ಮತ್ತು ದುಷ್ಟವ್ರಣಗಳನ್ನು ಶೋಧಿಸತಕ್ಕಂಥಾದ್ದು.

32. ಪಂಚ ಪಂಚಮೂಲಾನ್ಯತ ಊರ್ಧ್ವಂ ವಕ್ಷ್ಯಾಮಃ । ತತ್ರ ತ್ರಿಕಂಟಕಬೃಹತೀದ್ವಯಪೃಥಕ್‌ಪರ್ಣ್ಯೋ ವಿದಾರಿಗನ್ಧಾ ಚೇತಿ ಕನೀಯಃ ।

ಕಷಾಯತಿಕ್ತಮಧುರಂ ಕನೀಯಃ ಪಂಚಮೂಲಕಮ್ ।
ವಾತಘ್ನಂ ಪಿತ್ತಶಮನಂ ಬೃಂಹಣಂ ಬಲವರ್ಧನಮ್ ॥ (ಸು. 144)

**ಐದು ಪಂಚಮೂಲಗಳು** ಇನ್ನು ಮುಂದೆ ಹೇಳಲ್ಪಡುತ್ತವೆ. ಅವುಗಳೊಳಗೆ ನೆಗ್ಗಿಲ ಮುಳ್ಳು-ಗುಳ್ಳ-ಕಿರಿಗುಳ್ಳ-ಓರೆಲೆ-ಮೂವೆಲೆ-ಇವು ಐದು ಸೇರಿ ಹ್ರಸ್ವ (ಸಣ್ಣ) ಪಂಚಮೂಲ.

ಈ ಸಣ್ಣ ಪಂಚಮೂಲವು ಚೊಗರು, ಕಹಿ ಮತ್ತು ಸೀ ರುಚಿಯುಳ್ಳದ್ದು, ವಾತನಾಶಕರ, ಪಿತ್ತಶಮನಕರ, ಪುಷ್ಟಿಕರ ಮತ್ತು ಬಲವೃದ್ಧಿಮಾಡತಕ್ಕಂಥಾದ್ದು.

33. ಬಿಲ್ವಾಗ್ನಿಮನ್ಥಟುಣ್ಟುಕಪಾಟಲಾಕಾಶ್ಮರ್ಯಶ್ಚೇತಿ ಮಹತ್ ।
ಸತಿಕ್ತಂ ಕಫವಾತಘ್ನಂ ಪಾಕೇ ಲಘ್ವಗ್ನಿದೀಪನಮ್ ।
ಮಧುರಾನುರಸಂ ಚೈವ ಪಂಚಮೂಲಂ ಮಹತ್ ಸ್ಮೃತಮ್ ॥ (ಸು 141)

ಬಿಲ್ಲಪತ್ರೆಮರ, ನರುವಲು, ಆನೆಮುಂಗು, ಪಾದರಿಮರ, ಕಾಶ್ಮೀರಿ ಮರ (ಶಿವನಿ ಮಲ ಕುಮಳು). ಈ ಐದು ಸೇರಿ ಮಹತ್ (ದೊಡ್ಡ) ಪಂಚಮೂಲ

**ಮಹತ್ಪಂಚಮೂಲವು** ಕಹಿರಸಮಿಶ್ರವಾಗಿ ಸೀ ರುಚಿ ಅನುರಸವಾಗಿರುವಂಥಾದ್ದು, ಪಾಕದಲ್ಲಿ ಲಘು, ಕಫವಾತನಾಶಕ ಮತ್ತು ಅಗ್ನಿದೀಪನಕಾರಿ.

ಅನಯೋರ್ದಶಮೂಲಮುಚ್ಯತೇ.

ಗಣಃ ಶ್ವಾಸಹರೋ ಹ್ಯೇಷ ಕಫಪಿತ್ತಾನಿಲಾಪಹಃ ।
ಆಮಸ್ಯ ಪಾಚನಶ್ಚೈವ ಸರ್ವಜ್ವರವಿನಾಶನಃ ॥
(ಸು. 141)

ಹ್ರಸ್ವಪಂಚಮೂಲ, ಬೃಹತ್ಪಂಚಮೂಲಗಳೆಂಬವು ಎರಡು ಸೇರಿದ ಗಣಕ್ಕೆ ದಶಮೂಲ ಎನ್ನುತ್ತಾರೆ. ಈ ಗಣವು ಶ್ವಾಸಹರ, ಕಫಪಿತ್ತವಾಯುಗಳನ್ನು ಪರಿಹರಿಸುವಂಥಾದ್ದು, ಆಮ ಪಾಚನಕಾರಿ ಮತ್ತು ಸರ್ವ (ಸನ್ನಿಪಾತ) ಜ್ವರವನ್ನು ನಾಶಮಾಡತಕ್ಕಂಥಾದ್ದು.

34. ವಿದಾರೀಸಾರಿವಾರಜನೀಗುಡೂಚ್ಯೋಽಜಶೃಂಗೀ ಚೇತಿ ವಲ್ಲೀಸಂಜ್ಞಃ ।
(ಸು. 144)

ನೆಲಕುಂಬಳಗಡ್ಡೆ, ಸುಗಂಧಿ (ನಾಮದ) ಬೇರು, ಕರಿಕಚೋರ (ಮಲ. ಕರಿಚ್ಚಚ್ಚೋಲಂ), ಅಮೃತಬಳ್ಳಿ, ಮೇಷಶೃಂಗಿ (ಸಣ್ಣಗೆರ್ಸೆ ಹಂಬು, ಮಲ. ಆಟ್ಟುಕೊಟ್ಟಪ್ಪಾಲ್), ಇವುಗಳ **ಮೂಲಗಳು ವಲ್ಲೀಪಂಚಮೂಲ.**

ಪರಾ "ರಜನೀ ಹರಿದ್ರಾ, ರಂಜನೀ ತಿರಹಲಾ" ಎಂತ ಸಿ ಸಂ ವ್ಯಾ ಯಲ್ಲಿರುವದನ್ನು ಆಲೋಚಿಸುವಾಗ್ಗೆ, ಮೂಲದಲ್ಲಿ 'ರಜನೀ' ಬೇರೆ 'ರಂಜನೀ' ಬೇರೆ ಇದ್ದ ಹಾಗೆ ಊಹಿಸಬೇಕಾಗುತ್ತದೆ ಅದು ಹೇಗಾದರೂ ಅರಸಿನವು ಬಳ್ಳಿಯಲ್ಲದ್ದರಿಂದ, ಮೂಲದಲ್ಲಿರುವ ರಜನೀಯು 'ಪರ್ಪಟೀ' ಅಥವಾ 'ಜತುಕಾ' ಎಂಬ ದ್ರವ್ಯವನ್ನು ಸೂಚಿಸುತ್ತದೆಂತ ತಿಳಿಯಬೇಕಾಗುತ್ತದೆ 'ಪರ್ಪಟೀ' ಎಂಬದು ಉತ್ತರದೇಶದಲ್ಲ 'ಪದ್ಮಾವತೀ' ಎಂಬ ಪ್ರಸಿದ್ಧವಾದ ಸುಗಂಧದ್ರವ್ಯ ಎಂತ

ಭಾ. ಪ್ರಕಾಶವು ಹೇಳುತ್ತದೆ ಬೃ ನಿ. ನಲ್ಲಿ 'ಜತುಕಾ' ಎಂಬ ದ್ರವ್ಯದ ತೊಗಟನ್ನು ವಸ್ತ್ರದಲ್ಲಿಟ್ಟು ಕಟ್ಟಿದರೆ ವಸ್ತ್ರಕ್ಕೆ ಕಲೆ ಹಿಡಿಯುವದಿಲ್ಲ ಎಂತ ಮರಾಟಿ ಭಾಷೆಯ ವ್ಯಾಖ್ಯೆ ಕಾಣುತ್ತದೆ. 'ಮೇಷಶೃಂಗೀ' ಎಂದರೆ ಉಡಿಮರ (Rhus odina) ಎಂತ ಬೃ ನಿ ಹೇಳುತ್ತದೆ. ಮೇಷಶೃಂಗಿಯು ಬಳ್ಳಿಜಾತಿದ್ದಾಗಬೇಕಾದ್ದರಿಂದ ಅದು (U. C. Dutt) ಯು. ಸಿ ದತ್ತರು ಹೇಳುವ gymnima sylvestre ಆಗಿರಬೇಕು ಅದಕ್ಕೆ 'ಸಣ್ಣ ಗೆರ್ಸೆ ಹಂಬು, ಎಂಬ ಕನ್ನಡ ಹೆಸರಿರುತ್ತದಾಗಿ ಬೆಂಗಳೂರು ಸರಕಾರಿ ಔಷಧಿಗಳ ತೋಟದ ಸುಪರಿಂಟೆಂಡೆಂಟರು ಬರೆದ ಒಂದು ಪಟ್ಟಿಯಲ್ಲಿ ತೋರುತ್ತದೆ

35. ಕರಮರ್ದತ್ರಿಕಂಟಕಸೈರೀಯಕಶತಾವರೀಗೃಧ್ರನಖ್ಯ ಇತಿ ಕಣ್ಟಕಸಂಜ್ಞಃ.
ರಕ್ತಪಿತ್ತಹರೌ ಹ್ಯೇತೌ ಶೋಫತ್ರಯವಿನಾಶನೌ |
ಸರ್ವಮೇಹಹರೌ ಚೈವ ಶುಕ್ರದೋಷವಿನಾಶನೌ || (ಸು. 145)

ಕವಳಿಕಾಯಿ (ಕರಂಡೆಹುಳಿ), ನೆಗ್ಗಿಲಮುಳ್ಳು, ಬಿಳೇ ಗೋರಟೆ, ಹಲವು ಮಕ್ಕಳ ತಾಯಿ (ಶತಾವರಿ), ಬೊಗರಿ, ಇವು ಐದು ಸೇರಿದ್ದು ಕಂಟಕಪಂಚಮೂಲ.

ಷರಾ 'ಗೃಧ್ರನಖೀ' ಎಂಬದು ಕಾಕಾದನೀ (ಕಾಕಮುಂದಲಿ, ಕರಿಯ ಕಾಕತೊಂಡೆ?) ವೃಕ್ಷಕ್ಕೂ ಹೆಸರಾಗಿದೆ

ಈ ಎರಡು (ವಲ್ಲೀಪಂಚಮೂಲ ಮತ್ತು ಕಂಟಕಪಂಚಮೂಲ) ರಕ್ತಪಿತ್ತಹರ; ದೋಷ ಜನ್ಯ, ಅಭಿಘಾತಜ, ವಿಷಜ ಎಂಬ ತ್ರಿವಿಧ ಶೋಫಗಳನ್ನು ಪರಿಹರಿಸುತ್ತವೆ; ಸರ್ವಮೇಹ ಹರ ಮತ್ತು ಶುಕ್ರದೋಷನಾಶನಕಾರಿ.

ಷರಾ ಇವೆರಡು ಕಫಶಮನಕಾರಿ ಎಂತ ಕೆಳಗೆ ಹೇಳಲ್ಪಡುತ್ತದೆ ಇವೆರಡು ಗಣಗಳ ಗುಣ ಒಂದೇಯಾಗಿದ್ದರೆ ಅವುಗಳನ್ನು ಪ್ರತ್ಯೇಕಿಸುವ ಅಗತ್ಯವೇನಿತ್ತು? ವಲ್ಲೀಪಂಚಮೂಲದಲ್ಲಿ ರಕ್ತಪಿತ್ತಹರ ಗುಣವೂ, ಕಂಟಕ ಪಂಚ ಮೂಲದಲ್ಲಿ ಶೋಫಹರ ಗುಣವೂ ಹೆಚ್ಚಾಗಿ ಇರುತ್ತವೆ. ಇವೆರಡರಲ್ಲಿ ಗುಣಭೇದಗಳನ್ನು ಹೇಳುವ ಪಾಠಾಂತರ ಉಂಟೆಂತ ನಿ ಸಂ ವ್ಯಾ ಯಿಂದ ಕಾಣುತ್ತದೆ

36 ಕುಶಕಾಶನಲದರ್ಭಕಾಣ್ಡೇಕ್ಷುಕಾ ಇತಿ ತೃಣಸಂಜ್ಞಕಃ |
ಮೂತ್ರದೋಷವಿಕಾರಂ ಚ ರಕ್ತಪಿತ್ತಂ ತಥೈವ ಚ |
ಅನ್ತ್ಯಃ ಪ್ರಯುಕ್ತಃ ಕ್ಷೀರೇಣ ಶೀಘ್ರಮೇವ ವಿನಾಶಯೇತ್ ||
ಏಷಾಂ ವಾತಹರಾವಾದ್ಯಾವನ್ತ್ಯಃ ಪಿತ್ತವಿನಾಶನಃ |
ಪಂಚಕೌ ಶ್ಲೇಷ್ಮಶಮನಾವಿತರೌ ಪರಿಕೀರ್ತಿತೌ || (ಸು 145)

1. ಬಿಳೇ ದರ್ಭೆ (ಮಲ. ವೆಳುತ್ತದರ್ಭ, ಮೃದುವಾಗಿಯೂ, ಗಿಡ್ಡಾಗಿಯೂ, ಎಲೆಯ ತುದಿ ಚೂಪಾಗಿಯೂ ಇರುವಂಥಾದ್ದೆಂತ ನಿ. ಸಂ. ವ್ಯಾ.) 2. ಕಾಶದರ್ಭೆ (ಮಲ ಆಟ್ಟು ದರ್ಭ, ಚಾಮರಾಕಾರದ ಎಲೆಯುಳ್ಳದ್ದೆಂತ ನಿ. ಸಂ. ವ್ಯಾ) 3. ನಲ (ಮಲ ನಳಂ, ನಾಂಬಣ, ಒಳಗೆ ಟೊಳ್ಳಿರುವಂಥಾದ್ದು) 4 ದರ್ಭೆ (ಮಲ ವಲಿಯ ಆಂಪೊಟ್ಟಲ, ದೊಡ್ಡದು, ದೂರಗಾದ ಎಲೆಯುಳ್ಳದ್ದು ಮತ್ತು ಉದ್ದವಾದದ್ದು ಎಂತ ನಿ. ಸಂ. ವ್ಯಾ.) 5. ಕಬ್ಬಿನ ದಂಟಿನ ಹುಲ್ಲು. ಇವು ಐದು ಸೇರಿದ್ದು ತೃಣಪಂಚಕ ಕಡೆದಾದ ಈ ತೃಣಪಂಚಕವನ್ನು ಹಾಲಿನೊಂದಿಗೆ ಕೊಡುವದರಿಂದ ಮೂತ್ರದೋಷವಿಕಾರವೂ ರಕ್ತಪಿತ್ತವೂ ಬೇಗನೆ ನಾಶ ವಾಗುತ್ತವೆ

ಈ ಐದು ಪಂಚಮೂಲಗಳೊಳಗೆ ಪ್ರಥಮದ ಎರಡು (ಹ್ರಸ್ವ ಮತ್ತು ಮಹತ್) ವಾತ ಹರ, ಅಂತ್ಯದ್ದು (ತೃಣಪಂಚಮೂಲ) ಪಿತ್ತನಾಶನಕಾರಿ, ಇತರ ಎರಡು (ವಲ್ಲೀಪಂಚಮೂಲ ಮತ್ತು ಕಂಟಕಪಂಚಮೂಲ) ಕಫಶಮನಕಾರಿ ಎಂತ ಪ್ರಸಿದ್ಧವಾಗಿದೆ.

ಷರಾ ತೃಣಪಂಚಮೂಲ ಎಂಬದು ಯಾವದೆಂಬದನ್ನು ಕುರಿತು ಅನೇಕ ಪಕ್ಷಗಳಿವೆ ಎಂತ ಮೊದಲೇ ಹೇಳಿದೆ ಯಷ್ಟೆ "ದರ್ಭಶರಕಾಶೇಕ್ಷುಶಾಲಯಃ" ಎಂತ ಧ ನಿ (ಪು 302), ಅಂದರೆ, 1 ದರ್ಭೆ. 2 ಶರ. 3 ಕಾಶ. 4 ಕಬ್ಬು 5 ಶಾಲಿಭತ್ತದ ಹುಲ್ಲು 'ಶರ' ಎಂಬದಕ್ಕೆ ಮಲಯಾಳ ಭಾಷೆಯಲ್ಲಿ 'ಅಮವೇರು' ಎಂಬದನ್ನು ಇಲ್ಲಿ

'ಅಂಪೊಟ್ಟಲ' ಎಂಬದನ್ನು ದಕ್ಷಿಣ ಮಲಯಾಳದಲ್ಲಿ ಉಪಯೋಗಿಸುತ್ತಾರಾಗಿ ಕಾಣುತ್ತದೆ 'ಶರ' ಎಂದರೂ 'ಭಹ್ರ ಮುಂಜ' ಎಂದರೂ ಒಂದೇ ವಸ್ತು ಎಂತ ಭಾ ಪ್ರ (ಪು. 105) ಸುಶ್ರುತನ 'ಕುಶ' 'ನಲ' ಮತ್ತು 'ಕಾಣ್ಡೇಕ್ಷು' ಸ್ಥಾನಗಳಲ್ಲಿ 'ಶರ', 'ಶಾಲಿ' ಮತ್ತು ಕಬ್ಬುಗಳನ್ನು ಈ ಪಕ್ಷದಲ್ಲಿ ಕೂಡಿಸುವದಾಯಿತು

ಶಾ ಸಿ. ಪ್ರಕಾರ ತೃಣಪಂಚಮೂಲ ಎಂದರೆ 1 ಕುಶ. 2 ಕಾಶ 3 ಶರ. 4 ಕೃಷ್ಣೇಕ್ಷು 5 ಶಾಲಿ ಈ ಪಕ್ಷದಲ್ಲಿಯೂ 'ನಲ'ದ ಬದಲಾಗಿ 'ಶರ' ಬೀಳುತ್ತದೆ 'ದರ್ಭ'ದ ಸ್ಥಾನದಲ್ಲಿ ಶಾಲಿಯನ್ನು, ಕಾಣ್ಡೇಕ್ಷು ಸ್ಥಾನದಲ್ಲಿ ಕರಿಕಬ್ಬನ್ನು, ಈ ಪಕ್ಷದವರು ಸೇರಿಸುತ್ತಾರೆಂತ ಆಯಿತು

'ದ್ವಿದರ್ಭಶರಕಾಶೇಕ್ಷು' ಎಂಬವು ಉತ್ತರ ಮಲಯಾಳದವರ ಸಂಪ್ರದಾಯ ಪ್ರಕಾರ ತೃಣಪಂಚಮೂಲ. 'ದ್ವಿದರ್ಭ' ಎಂದರೆ ದರ್ಭೆ ಮತ್ತು ಕುಶ ಎಂತ ಅವರು ತಿಳಿಯುವದರಿಂದ, ಧ. ನಿ ಹೇಳುವ ಪಂಚತೃಣಗಳೊಳಗೆ ಶಾಲಿಯನ್ನು ಮಾತ್ರ ಬಿಟ್ಟು ಅದರ ಬದಲಾಗಿ ಕುಶವನ್ನು ಸೇರಿಸುತ್ತಾರೆಂತಾಯಿತು ಮತ್ತು ಸುಶ್ರುತನ ಪಂಚತೃಣಗಳೊಳಗೆ 'ನಲ'ದ ಬದಲಾಗಿ ಶರವನ್ನೂ. ಕಾಣ್ಡೇಕ್ಷು ಬದಲಾಗಿ ಕಬ್ಬನ್ನೂ ಕೂಡಿಸಿದಂತಾಯಿತು

ಮೇಲೆ 4ನೇ ಸಂಖ್ಯೆಯ ಅಡಿ ಬರೆದ ಷರಾವನ್ನು ನೋಡಿ

## 37. ತ್ರಿವೃತಾದಿಕಮನ್ಯತ್ರೋಪದೇಕ್ಷ್ಯಾಮಃ.

ತ್ರಿವೃತಾದಿ ಗಣವು ಬೇರೆ ಕಡೆಯಲ್ಲಿ (ಇದರ 1ನೇ ಪರಿಶಿಷ್ಟದಲ್ಲಿ) ಉಪದೇಶಿಸಲ್ಪಡುತ್ತದೆ.

ಸಮಾಸೇನ ಗಣಾ ಹ್ಯೇತೇ ಪ್ರೋಕ್ತಾಸ್ತೇಷಾನ್ತು ವಿಸ್ತರಮ್ ।
ಚಿಕಿತ್ಸಿತೇಷು ವಕ್ಷ್ಯಾಮಿ ಜ್ಞಾತ್ವಾ ದೋಷಬಲಾಬಲಮ್ ॥
ಏಭಿರ್ಲೇಪಾನ್ ಕಷಾಯಾಂಶ್ಚ ತೈಲಂ ಸರ್ಪಿಂಷಿ ಪಾನಕಾನ್ ।
ಪ್ರವಿಭಜ್ಯ ಯಥಾನ್ಯಾಯಂ ಕುರ್ವೀತ ಮತಿಮಾನ್ ಭಿಷಕ್ (ಸು. 115)

ಈ ಗಣಗಳು ಇಲ್ಲಿ ಸಂಕ್ಷೇಪವಾಗಿ ಹೇಳಲ್ಪಟ್ಟವು. ಅವುಗಳ ವಿಸ್ತಾರವು ಚಿಕಿತ್ಸಾ ವಿಧಾನಗಳೊಳಗೆ ಹೇಳಲ್ಪಡುವದು. ಇವುಗಳಿಂದ ದೋಷಾದಿಗಳ ಬಲಾಬಲ ತಿಳಿದುಕೊಂಡು ಲೇಪಗಳನ್ನೋ, (ಪಂಚವಿಧ) ಕಷಾಯಗಳನ್ನೋ, ತೈಲಗಳನ್ನೋ, ಘೃತಗಳನ್ನೋ, (ಸಾರು, ಗಂಜಿ ಮುಂತಾದ) ಪಾನಕಗಳನ್ನೋ, ಬುದ್ಧಿಮಂತನಾದ ವೈದ್ಯನು ಬೇಕಾದ ಹಾಗೆ ಶಾಸ್ತ್ರಪ್ರಕಾರ ತಯಾರಿಸತಕ್ಕದ್ದು.

# ಉಪೋದ್ಘಾತ.

## 2ನೇ ಪರಿಶಿಷ್ಟ

## ಪ್ರತಿನಿಧಿ ದ್ರವ್ಯಗಳು.

1. ಚಿತ್ರಮೂಲ-ದನ್ತೀ-ಉತ್ತರಣೆಕ್ಷಾರ.

ಚಿತ್ರಕಾಽಭಾವತೋ ದನ್ತೀ ಕ್ಷಾರಃ ಶಿಖರಿಜೋಽಥವಾ ।

ಚಿತ್ರಮೂಲವಿಲ್ಲದಲ್ಲಿ ದನ್ತೀ (ಜೇಪಾಳದ) ಬೇರನ್ನಾಗಲಿ, ಉತ್ತರಣೆಯ ಕ್ಷಾರವನ್ನಾಗಲಿ ಹಾಕಬೇಕು.

2. ಧನ್ವಯಾಸ-ದುರಾಲಭಾ.

ಅಭಾವೇ ಧನ್ವಯಾಸಸ್ಯ ಪ್ರಕ್ಷೇಪ್ಯಾ ತು ದುರಾಲಭಾ ।

ಬಿಳೇ ಬಳ್ಳಿ ತುರಚಿ ಇಲ್ಲದಲ್ಲಿ ಕಂಪು (ಸಣ್ಣ ಜಾತಿ) ತುರಚಿಯ ಬೇರನ್ನು ಹಾಕಬೇಕು.

ಷರಾ ಬಳ್ಳಿತುರಚಿ ಬೇರಿನ ಬದಲಾಗಿ ಪಚ್ಚೆರಂಗಿಗಿಡದ ಬೇರನ್ನು ಉಪಯೋಗಿಸಬಹುದಾಗಿ ಪಕ್ಷಾಂತರ ಉಂಟು 'ಧನ್ವನ್' ಎಂದರೆ ಗುಡ್ಡೆಸ್ಥಳ ಧ ನಿ ನಲ್ಲಿ ಧನ್ವಯಾಸ ಮತ್ತು ಯಾಸಃ ಎಂಬವು ಬೇರೆಬೇರೆಯಾಗಿ ವರ್ಣಿಸಲ್ಪಟ್ಟದ್ದರಿಂದ ಅವುಗಳೊಳಗೆ ಮೊದಲನೇದು ಬಳ್ಳೀತುರಚಿ, ಎರಡನೇದು ತುರಚಿ (ಪಚ್ಚೆರಂಗಿ) ಎಂತ ಆಲೋಚಿಸುವರೆ ಕಾರಣ ಕಾಣುತ್ತದೆ ಆದರೆ ದುರಾಲಭಾ 'ಧನ್ವಯಾಸದ ಪೇದವೆಂತ ನಿಘಂಟುಗಳು ವರ್ಣಿಸಿರುತ್ತದೆ

3. ತಗರ-ಕುಷ್ಠ

ತಗರಸ್ಯಾಪ್ಯಭಾವೇ ತು ಕುಷ್ಠಂ ದದ್ಯಾದ್ಭಿಷಗ್ವರಃ ।

ತಗರವಿಲ್ಲದಲ್ಲಿ ವೈದ್ಯಶ್ರೇಷ್ಠನು ಚಂಗಲಕೋಷ್ಠವನ್ನು ಉಪಯೋಗಿಸಬೇಕು

4. ಮೂರ್ವಾ-ಚಿಂಗಿಸೀ

ಮೂರ್ವಾಭಾವೇ ತ್ವಚಾ ಗ್ರಾಹ್ಯಾ ಜಂಗಿನೀಪ್ರಭವಾ ಬುಧೈಃ ॥

ಹೆಗ್ಗುರುಟಿಗೆಬೇರು ಇಲ್ಲದಾಗ ಉಡಿ (ಸಿಂಟೆ) ಮರದ ತೊಗಟನ್ನು ತೆಗೆದುಕೊಳ್ಳಬೇಕು.

5. ಅಹಿಂಸ್ರಾ-ಮಾನಕನ್ದ.

ಅಹಿಂಸ್ರಾಯಾ ಅಭಾವೇ ತು ಮಾನಕನ್ದಃ ಪ್ರಕೀರ್ತಿತಃ ।

ಕಿರಿಕಾಕತೊಂಡ ಸಿಕ್ಕದಾಗ ಕರೀ ಮರಸಣಿಗೆ (ಮುಂಡಿ) ಗಡ್ಡೆಯನ್ನು ಉಪಯೋಗಿಸಬೇಕಾಗಿ ಹೇಳಿದ್ದಾರೆ

6. ಲಕ್ಷ್ಮಣಾ-ನೀಲಕಂಠಶಿಖಾ.

ಲಕ್ಷ್ಮಣಾಯಾ ಅಭಾವೇ ತು ನೀಲಕಂಠಶಿಖಾ ಮತಾ ॥

ಬಿಳೇನೆಲಗುಳ್ಳ ಇಲ್ಲದಲ್ಲಿ ಮಯೂರಶಿಖೆಯನ್ನು ಉಪಯೋಗಿಸುವದಾಗಿ ತಿಳಿಸಿದ್ದಾರೆ.

7. ಬಕುಲ-ಕಹ್ಲಾರಾದಿ.

**ಬಕುಲಾಭಾವತೋ ದೇಯಂ ಕಹ್ಲಾರೋತ್ಪಲಪಂಕಜಮ್.**

ರೆಂಜಿಹೂವಿಲ್ಲದ್ದಕ್ಕೆ ಬಿಳೇ ನೈದಿಲೆ, ನೀಲತಾವರೆ, ಅಥವಾ ಬಿಳೇ ತಾವರೆ, ಹೂವನ್ನು ಉಪಯೋಗಿಸುವದು.

8. ನೀಲೋತ್ಪಲ-ಕುಮುದ.

ನೀಲೋತ್ಪಲಸ್ಯಾಭಾವೇ ತು ಕುಮುದಂ ದೇಯಮಿಷ್ಯತೇ.

ನೀಲತಾವರೆ ಇಲ್ಲದಾಗ ನೈದಿಲೆಯನ್ನು ಉಪಯೋಗಿಸುವದಕ್ಕೆ ಇಚ್ಛಿಸುತ್ತಾರೆ.

9. ಜಾತೀಪುಷ್ಪ-ಲವಂಗ.

ಜಾತೀಪುಷ್ಪಂ ನ ಯತ್ರಾಸ್ತಿ ಲವಂಗಂ ತತ್ರ ದೀಯತೇ ।

ಜಾಜಿಹೂವು ಎಲ್ಲಿ ಇಲ್ಲವೋ, ಅಲ್ಲಿ ಲವಂಗವು ಉಪಯೋಗಿಸಲ್ಪಡುತ್ತದೆ.

10. ಅರ್ಕಪರ್ಣಾದಿ ಹಾಲು-ರಸ.

ಅರ್ಕಪರ್ಣಾದಿಪಯಸೋ ಹ್ಯಭಾವೇ ತದ್ರಸೋ ಮತಃ

ಎಕ್ಕೆ ಮುಂತಾದವುಗಳ ಹಾಲು ಇಲ್ಲದಾಗ ಅವುಗಳ ರಸವು ಯುಕ್ತ ಎಂತ ತಿಳಿದಿದ್ದಾರೆ.

11. ಪೌಷ್ಕರ-ಕುಷ್ಠ-ಲಾಂಗಲೀ-ಸ್ಥೌಣೇಯ.

ಪೌಷ್ಕರಾಭಾವತಃ ಕುಷ್ಠಂ ತಥಾ ಲಾಂಗಲ್ಯಭಾವತಃ ।
ಸ್ಥೌಣೇಯಕಸ್ಯಾಭಾವೇ ತು ಭಿಷಗ್ಭಿರ್ದೀಯತೇ ಗದಃ ॥

ಪುಷ್ಕರಮೂಲವಾಗಲಿ, ಕೋಳಿಕುಟುಮವಾಗಲಿ, ಇಟ್ಟೇವಾಗಲಿ ಇಲ್ಲದ್ದಕ್ಕೆ ಪಂಡಿತರು ಚಂಗಲಕೋಷ್ಠವನ್ನು ಉಪಯೋಗಿಸುತ್ತಾರೆ.

ಪರಾ ಸ್ಥೌಣೇಯಕದ ಪರ್ಯಾಯಪದಗಳು ಇಟ್ಟೇವು (ಪರಲೆ) ಗಿಡಕ್ಕೆ ಒಪ್ಪುತ್ತವಾಗಿ ಕಾಣುತ್ತದೆ ಭ ನಿ ನಲ್ಲಿ ಅದಕ್ಕೆ ಬರೆದಿರುವ ಲಾತಿನ್ ಹೆಸರು ಸ ವ್ಯ ವ ಪ್ರಕಾರ ಇಟ್ಟೇವು ಗಿಡದ್ದು ಆದರೆ ಮಲಯಾಳ ಪಂಡಿತರು ತಿಳಿದ ತುಣಿಯಾಣ್ಣಂ ಎಂಬ ದ್ರವ್ಯವು ಬೇರೆ ಎಂತ ಕಾಣುತ್ತದೆ

12. ಚವ್ಯ-ಗಜಪಿಪ್ಪಲೀ-ಪಿಪ್ಪಲೀಮೂಲ.

ಚವಿಕಾಗಜಪಿಪ್ಪಲ್ಯೌ ಪಿಪ್ಪಲೀಮೂಲವತ್ಸ್ಮೃತೌ ।

ಚವ್ಯ ಮತ್ತು ಗಜಪಿಪ್ಪಲಿ ಪಿಪ್ಪಲೀಮೂಲಕ್ಕೆ ಸಮಾನಗುಣವುಳ್ಳವೆಂತ ತಿಳಿದಿದ್ದಾರೆ

13. ಸೋಮರಾಜೀ-ಪ್ರಪುನ್ನಾಟ

ಅಭಾವೇ ಸೋಮರಾಜ್ಯಾಸ್ತು ಪ್ರಪುನ್ನಾಟಫಲಂ ಮತಮ್ ।

ಬಾವುಂಜಿಬೀಜ (ಮಲ ಕಾರ್ಕೋಲರಿ) ಇಲ್ಲದಾಗ್ಗೆ ಚಗತೆಬೀಜವನ್ನು ಉಪಯೋಗಿಸುವದು ಯುಕ್ತ ಎಂತ ತಿಳಿದಿದ್ದಾರ.

14. ದಾರುನಿಶಾ-ನಿಶಾ.

ಯದಿ ನ ಸ್ಯಾದ್ದಾರುನಿಶಾ ತದಾ ದೇಯಾ ನಿಶಾ ಬುಧೈಃ ।

ಮರದರಸಿನ ಇಲ್ಲದಿದ್ದರೆ ಬುದ್ಧಿವಂತರು ಅರಸಿನವನ್ನು ಉಪಯೋಗಿಸಬೇಕು.

15. ರಸಾಂಜನ-ದಾರ್ವೀ.

ರಸಾಂಜನಸ್ಯಾಭಾವೇ ತು ಸಮ್ಯಗ್ದಾರ್ವೀ ಪ್ರಯುಜ್ಯತೇ ।

ರಸಾಂಜನ ಇಲ್ಲದಿದ್ದಾಗ ಮರದರಸಿನವನ್ನು ಉಪಯೋಗಿಸುವದು ಸರಿಯಾದದ್ದು.

16. ಸೌರಾಷ್ಟ್ರೀ-ಸ್ಫಟಿಕಾ.

ಸೌರಾಷ್ಟ್ರ್ಯಭಾವತೋ ದೇಯಾ ಸ್ಫಟಿಕಾ ತದ್ಗುಣಾ ಜನೈಃ |

ಸೌರಾಷ್ಟ್ರದ ಮಣ್ಣು (ಗೋಪೀಚಂದನ ಎಂತ ಶಾ. ನಿ) ಇಲ್ಲದಿದ್ದಲ್ಲಿ ಅದೇ ಗುಣವುಳ್ಳ ಪಟಿಕಾರವನ್ನು ಜನರು ಉಪಯೋಗಿಸಬೇಕು

ಪರಾ 'ಸೌರಾಷ್ಟ್ರೀ'ಯ ಬದಲಾಗಿ 'ಖಟಸೀ'(ಜೇಡಿ ಮಣ್ಣು)ಯನ್ನು ಉಪಯೋಗಿಸಬೇಕಾಗಿ ಚ ಸಾ ಸಂ (ಪು 972)

17. ತಾಳೀಸಪತ್ರಕಾ-ಸ್ವರ್ಣತಾಲೀ

ತಾಳೀಸಪತ್ರಕಾಭಾವೇ ಸ್ವರ್ಣತಾಲೀ ಪ್ರಶಸ್ಯತೇ.

ತಾಳೀಸಪತ್ರೆ ಇಲ್ಲದಲ್ಲಿ ಸ್ವರ್ಣತಾಲಿಯನ್ನು ಉಪಯೋಗಿಸುವದು ಪ್ರಶಸ್ತ.

ಪರಾ ಅನೇಕ ನಿಘಂಟುಗಳನ್ನು ನೋಡಿದರೂ, 'ಸ್ವರ್ಣತಾಲಿ' ಕಾಣಲಿಲ್ಲ ಅದೇ ಹೆಚ್ಚು ಅಪರೂಪವಾದ ದ್ರವ್ಯವಾದ್ದರಿಂದ, ಅದರ ಸ್ಥಾನದಲ್ಲಿ ತಾಳೀಸಪತ್ರೆಯನ್ನು ಉಪಯೋಗಿಸತಕ್ಕದ್ದೆನ್ನುವದೇ ವಚನದ ಉದ್ದೇಶವಾಗಿರಬೇಕು

18. ಭಾಂಗೀರ್-ತಾಲೀಸಂ-ಕಂಟಕಾರೀ.

ಭಾರ್ಙ್ಗ್ಯಭಾವೇ ತು ತಾಲೀಸಂ ಕಂಟಕಾರೀಜಟಾಽಥವಾ

ಭಾಂಗೀರ್ (ಗಂಟುಭಾರಂಗಿ-ಸಿರ್ವಿಷ) ಇಲ್ಲದಾಗ ತಾಳೀಸಪತ್ರೆಯನ್ನಾಗಲೀ, ಕಿರಿಗುಳ್ಳದ ಬೇರನ್ನಾಗಲೀ ಉಪಯೋಗಿಸಬೇಕು

19. ರುಚಕ-ಪಾಂಶುಲವಣ.

ರುಚಕಾಭಾವತೋ ದದ್ಯಾಲ್ಲವಣಂ ಪಾಂಶುಪೂರ್ವಕಮ್.

ಸೌವರ್ಚಲವಣ (ತುವರ್ಚಲ-ಕರಿ ಉಪ್ಪು) ಇಲ್ಲದ್ದಕ್ಕ ಪಾಂಶುಲವಣವನ್ನು (ಮಣ್ಣುಪ್ಪನ್ನು) ಉಪಯೋಗಿಸಬೇಕು

ಪರಾ ಸೌವರ್ಚಲದ ಬದಲಾಗಿ ಬಿಡಾಲವಣವನ್ನು ಕೂಡಿಸುವದಾಗಿ ಚ ಸಾ ಸಂ (ಪು 972)

20. ಮಧುಯಷ್ಟೀ-ಧಾತಕೀ.

ಅಭಾವೇ ಮಧುಯಷ್ಟ್ಯಾಸ್ತು ಧಾತಕೀಂ ಚ ಪ್ರಯೋಜಯೇತ್ |

ಜ್ಯೇಷ್ಠಮಧುವಿಲ್ಲದಲ್ಲಿ ಧಾತಕೀ ಕುಸುಮವನ್ನು ಪ್ರಯೋಗಿಸಬೇಕು.

21. ಅಮ್ಲವೇತಸ-ಚುಕ್ರ.

ಅಮ್ಲವೇತಸಕಾಭಾವೇ ಚುಕ್ರಂ ದಾತವ್ಯಮಿಷ್ಯತೇ.

ಅಮ್ಲವೇತಸವಿಲ್ಲದಾಗ ಹುಳಿ ಚಕ್ಕ್ರೋತ ಸೊಪ್ಪನ್ನು ಉಪಯೋಗಿಸುವದಕ್ಕೆ ಇಚ್ಛಿಸುತ್ತಾರೆ.

22. ದ್ರಾಕ್ಷಾ-ಕಾಶ್ಮರೀಫಲ-ಬಂಧೂಕ.

ದ್ರಾಕ್ಷಾ ಯದಿ ನ ಲಭ್ಯೇತ ಪ್ರದೇಯಂ ಕಾಶ್ಮರೀಫಲಮ್ |

ತಯೋರಭಾವೇ ಕುಸುಮಂ ಬನ್ಧೂಕಸ್ಯ ಮತಂ ಬುಧೈಃ ||

ದ್ರಾಕ್ಷೆಹಣ್ಣು ಲಭ್ಯವಲ್ಲದಿದ್ದರೆ, ಕಾಶ್ಮರೀ (ಶಿವನೀ-ಮಲ. ಕುಮಳು) ಹಣ್ಣನ್ನೂ, ಅವೆರಡೂ ಸಿಕ್ಕದಿದ್ದಾಗ ಕೇಪಲ(ಕಿಸ್ಗಾರ)ದ ಹೂವನ್ನೂ ಉಪಯೋಗಿಸಬೇಕೆಂಬದು ಪ್ರಾಜ್ಞರ ಮತ.

ಪರಾ. 'ಬಂಧೂಕ' ಎಂಬದು ಸಾಧಾರಣವಾಗಿ ಮಧ್ಯಾಹ್ನಮಲ್ಲಿಗೆ ಆದರೆ ಕೇವಲಕ್ಕೂ 'ಬಂದೂಕ' ಎಂಬ ಹೆಸರಿದೆ ಎಂತ ನಾ. ಸಿ. ದ್ರಾಕ್ಷಿಯ ಮತ್ತು ಕಾಶ್ಮರೀ ಹಣ್ಣಿನ ಪಿತ್ತಹರ ಗುಣವು ಮಧ್ಯಾಹ್ನಮಲ್ಲಿಗೆಗಿಂತ ಕೇವಲದಲ್ಲಿ ಹೆಚ್ಚಿದೆ ಎಂಬದು ನಿಃಸಂಶಯ, ಆ ಗುಣ ಮಧ್ಯಾಹ್ನಮಲ್ಲಿಗೆಯಲ್ಲಿ ಉಂಟೆಂಬದೇ ಅನುಮಾನಾಸ್ಪದ ರಾ ಸಿ ನಲ್ಲಿ ಜ್ವರಹರೆ, ವಿವಿಧಗ್ರಹಪಿಶಾಚಶಮನಕರ, ಸೂರ್ಯನಿಗೆ ತೃಪ್ತಿಕರ ಎಂತ ಅದರ ಗುಣ ಹೇಳಲ್ಪಟ್ಟದೆ

ದ್ರಾಕ್ಷಿಯೂ ಕಾಶ್ಮರೀಫಲವೂ ದೊರೆಯದಿದ್ದರೆ ಇಷ್ಟೆ ಹೂವನ್ನು ಕೂಡಿಸುವದಾಗಿ ಚ ಸಾ ಸಂ (ಪು 973)

23. ಲವಂಗಕುಸುಮ-ನಖ.

ಲವಂಗಕುಸುಮಂ ದೇಯಂ ನಖಸ್ಯಾಭಾವತಃ ಪುನಃ |

ನಖ ಇಲ್ಲದಿದ್ದದ್ದಕ್ಕೆ ಲವಂಗದ ಹೂವನ್ನು (ಲವಂಗವನ್ನು) ಕೂಡಿಸಬೇಕು.

24. ಕಸ್ತೂರೀ-ಕಂಕೋಲ-ಜಾತೀಪುಷ್ಪ.

ಕಸ್ತೂರ್ಯಭಾವೇ ಕಂಕೋಲಂ ಕ್ಷೇಪಣೀಯಂ ವಿದುರ್ಬುಧಾಃ |

ಕಸ್ತೂರಿ ಇಲ್ಲದಲ್ಲಿ ಗಂಧ(ಬಾಲ)ಮೆಣಸನ್ನು ಹಾಕಬೇಕೆಂತ ಪ್ರಾಜ್ಞರು ತಿಳಿದಿದ್ದಾರೆ.

ಕಂಕೋಲಸ್ಯಾಪ್ಯಭಾವೇ ತು ಜಾತೀಪುಷ್ಪಂ ಪ್ರದೀಯತೇ |

ಗಂಧಮೆಣಸು ಸಹ ಸಿಕ್ಕದಿದ್ದಾಗ, (ಕಸ್ತೂರಿಯ ಸ್ಥಾನದಲ್ಲಿ) ಜಾಜಿ ಹೂವನ್ನು ಕೂಡಿಸುತ್ತಾರೆ.

25. ಸುಗನ್ಧಿಮುಸ್ತ-ಕರ್ಪೂರ.

ಸುಗನ್ಧಿಮುಸ್ತಕಂ ದೇಯಂ ಕರ್ಪೂರಾಭಾವತೋ ಬುಧೈಃ |
ಕರ್ಪೂರಾಭಾವತೋ ದೇಯಂ ಗ್ರಂಥಿಪರ್ಣಂ ವಿಶೇಷತಃ ||

ಕರ್ಪೂರ ಇಲ್ಲದಿದ್ದದ್ದಕ್ಕೆ ಸುಗಂಧಮುಸ್ತವನ್ನು (ಸಣ್ಣ ಭದ್ರಮುಷ್ಟಿಯನ್ನು), ವಿಶೇಷವಾಗಿ ಗ್ರಂಥಿಪರ್ಣವನ್ನು, ಪ್ರಾಜ್ಞರು ಉಪಯೋಗಿಸಬೇಕು.

ಪರಾ ಕರ್ಪೂರಕ್ಕೆ ಪ್ರತಿನಿಧಿ ಗ್ರಂಥಿಪರ್ಣ (ತೃಣಜಾತಿಯ ಒಂದು ಸುಗಂಧ ದ್ರವ್ಯ) ಎಂತ ಚ ಸಾ ಸಂ. (ಪು 971)

26. ಕುಂಕುಮ-ಕುಸುಮ್ಭಕುಸುಮ.

ಕುಂಕುಮಾಭಾವತೋ ದದ್ಯಾತ್ ಕುಸುಮ್ಭಕುಸುಮಂ ನವಮ್ |

ಕುಂಕುಮಕೇಸರ ಇಲ್ಲದ್ದಕ್ಕೆ ಹೊಸತಾದ ಕುಸುಮ್ಭ (ಕುಸುಬಿ) ಹೂವನ್ನು ಹಾಕಬೇಕು.

27. ಶ್ರೀಖಣ್ಡ-ಕರ್ಪೂರ-ರಕ್ತಚಂದನ

ಶ್ರೀಖಣ್ಡಚನ್ದನಾಭಾವೇ ಕರ್ಪೂರಂ ದೇಯಮಿಷ್ಯತೇ |

ಶ್ರೀಗಂಧ ಇಲ್ಲದಾಗ ಕರ್ಪೂರ(ಪಚ್ಚೆಕರ್ಪೂರ)ವನ್ನು ಕೂಡಿಸುವದಕ್ಕೆ ಇಚ್ಛಿಸುತ್ತಾರೆ.

ಅಭಾವೇ ತ್ವೇತಯೋರ್ವೈದ್ಯಃ ಪ್ರಕ್ಷಿಪೇದ್ರಕ್ತಚನ್ದನಮ್ |

ಕರ್ಪೂರ ಮತ್ತು ಶ್ರೀಗಂಧಗಳೆರಡೂ ಇಲ್ಲದಲ್ಲಿ ವೈದ್ಯನು (ಶ್ರೀಗಂಧದ ಪ್ರತಿನಿಧಿಯಾಗಿ) ರಕ್ತಚಂದನವನ್ನು ಹಾಕಬೇಕು.

28. ರಕ್ತಚಂದನ—ಉಶೀರ.

ರಕ್ತಚನ್ದನಕಾಭಾವೇ ನವ್ಯೋಶೀರಂ ವಿದುರ್ಬುಧಾಃ |

ರಕ್ತಚಂದನ ಇಲ್ಲದಾಗ, ಹೊಸತಾದ ಲಾವಂಚವನ್ನು ಉಪಯೋಗಿಸುವದು ಯುಕ್ತ ಎಂತ ಪ್ರಾಜ್ಞರು ತಿಳಿದಿದ್ದಾರೆ.

29 ಅತಿವಿಷಾ-ಮುಸ್ತಾ-ಶಿವಾ-ಶಿವಾ.

ಮುಸ್ತಾ ಚಾತಿವಿಷಾಭಾವೇ ಶಿವಾಭಾವೇ ಶಿವಾ ಮತಾ |

ಅತಿವಿಷ (ಅತಿಬಜೆ) ಇಲ್ಲದಾಗ ಭದ್ರಮುಷ್ಟಿಯನ್ನೂ, ಅಣಿಲೆಕಾಯಿ ಇಲ್ಲದ್ದಲ್ಲಿ ನೆಲ್ಲಿಕಾಯಿಯನ್ನೂ ಉಪಯೋಗಿಸುವದು ಯುಕ್ತ ಎಂತ ನಿರ್ಣಯಿಸಿದ್ದಾರೆ.

30 ನಾಗಪುಷ್ಪ-ಪದ್ಮಕೇಸರ

ಅಭಾವೇ ನಾಗಪುಷ್ಪಸ್ಯ ಪದ್ಮಕೇಸರಮಿಷ್ಯತೇ |

ನಾಗಸಂಪಿಗೆ ಹೂವು ಇಲ್ಲದಿದ್ದಾಗ ತಾವರೆ ಕೇಸರವನ್ನು ಅಪೇಕ್ಷಿಸುತ್ತಾರೆ.

31. ಅಷ್ಟವರ್ಗ-ವರೀ ವಿದಾರೀ-ಅಶ್ವಗಂಧಾ-ವಾರಾಹೀ

ಮೇದಾಜೀವಕಕಾಕೋಲೀಋದ್ಧಿದ್ವಂದ್ವೇಽಪಿ ವಾಽಸತಿ |
ವರೀವಿದಾರ್ಯಶ್ವಗನ್ಧಾವಾರಾಹೀಶ್ಚ ಕ್ರಮಾತ್ ಕ್ಷಿಪೇತ್ ||

ಮೇದಾದಿ ಅಷ್ಟವರ್ಗದ ಎಂಟು ದ್ರವ್ಯಗಳು ಇಲ್ಲದಿದ್ದಾಗ, ಮೇದೆ ಮತ್ತು ಮಹಾಮೇದೆಗಳಿಗೆ ಶತಾವರೀ ಬೇರನ್ನೂ, ಜೀವಕ-ಋಷಭಕಗಳಿಗೆ ನೆಲಕುಂಬಳದ ಗಡ್ಡೆಯನ್ನೂ, ಕಾಕೋಲೀ-ಕ್ಷೀರಕಾಕೋಲಿಗಳಿಗೆ ಅಶ್ವಗಂಧಿ(ಹಿರೇಮದ್ದು)ಯನ್ನೂ ಮತ್ತು ಋದ್ಧಿ-ವೃದ್ಧಿಗಳಿಗೆ ಹಂದಿಗಡ್ಡೆಯನ್ನೂ, ಪ್ರತಿನಿಧಿಯಾಗಿ ಹಾಕಬೇಕು.

ಶಂ. ಧಾ. ಪ್ರ. ದಲ್ಲಿ ವಿದಾರೀ, ಕ್ಷೀರವಿದಾರೀ ಮತ್ತು ವಾರಾಹೀ ಎಂಬ ಮೂರು ಗಡ್ಡೆಗಳ ಗುಣಪಾಠವು ಒಟ್ಟಾಗಿ ಹೇಳಲ್ಪಟ್ಟಿದೆ. ವಿದಾರಿ(ನೆಲಕುಂಬಳ)ಯೇ ಕೆಸರು ಭೂಮಿಯಲ್ಲಿ ಬೆಳೆದಾಗ್ಗೆ ಅದರ ಗಡ್ಡೆಯಲ್ಲಿ ಮುಳ್ಳುಹಂದಿಯ ರೋಮಗಳ ಹಾಗಿನ ಮುಳ್ಳುಗಳು ಉಂಟಾಗುವದರಿಂದ, ಅದಕ್ಕೆ 'ವಾರಾಹೀ' ಎಂಬ ಹೆಸರು ಆಗ್ಗೆ ಬರುತ್ತದೆ ಎಂಬದು ಭಾವಮಿಶ್ರನ ಅಭಿಪ್ರಾಯ ಎಂತ ಕಾಣುತ್ತದೆ. ಆದರೆ ಇವುಗಳೆಲ್ಲ ಬೇರೆಬೇರೆಯಾಗಿ ಧ. ನಿ. ನಲ್ಲಿ ವರ್ಣಿಸಲ್ಪಟ್ಟಿವೆ. ಬೃ. ನಿ. ನಲ್ಲಿ ವಾರಾಹಿಗೆ ಕೊಡಲ್ಪಟ್ಟ ಲಾಕ್ಷಿನ ಹೆಸರಿನಿಂದ ಅದು ಕುಂಟಗೆಣಸು ಎಂತ ಕಾಣುತ್ತದೆ. ಆದರೆ 'ವಾರಾಹೀ'ಯು ದೊಡ್ಡ ದೊಡ್ಡ ಪರ್ವತಗಳಲ್ಲಿ ಬೆಳೆಯುವಂಥಾದ್ದೆಂತಲೂ, ಅದರ ಎಲೆಯು ವೀಳ್ಯದೆಲೆಯ ಆಕಾರದ್ದೆಂತಲೂ, ಅದರ ಗಡ್ಡೆಯು ವೃಷಣಾಕಾರವಾಗಿರುತ್ತದೆಂತಲೂ ಬೃ. ನಿ. ನಲ್ಲಿ ವರ್ಣನ ಕಾಣುತ್ತದೆ. ರಾ. ನಿ. ಪ್ರಕಾರ 'ವಾರಾಹೀ'ಯ ಪರ್ಯಾಯಪದಗಳಲ್ಲಿ ಒಂದು ವನವಾಸೀ (ಕಾಡಿನಲ್ಲಿರುವಂಥಾದ್ದು)

ವಾರಾಹಿಗಡ್ಡೆಯು ಮುಳ್ಳುಹಂದಿಯ ತಲೆಯ ಹಾಗೆ ಇರುವದರಿಂದ ಅದಕ್ಕೆ ಆ ಹೆಸರು ಎಂತ ಚ. ಸಾ. ಸಂ (ಪ. 971). ಹಂದಿಗಡ್ಡೆ ಸಿಕ್ಕದಾಗ ಸ್ತಂಭನ ಗುಣ ಬೇಕಾದಲ್ಲಿ, ಅದರ ಪ್ರತಿನಿಧಿ ಮಂಜಿಷ್ಠ ಎಂತ ಚ. ಸಾ. ಸಂ. (ಪು. 971)

32. ಭಲ್ಲಾತಕ-ರಕ್ತಚಂದನ-ಚಿತ್ರ-ನಲ-ಇಕ್ಷು.

ಭಲ್ಲಾತಕಾಸಹತ್ವೇ ತು ರಕ್ತಚನ್ದನಮಿಷ್ಯತೇ |
ಭಲ್ಲಾತಾಭಾವತಶ್ಚಿತ್ರಂ ನಲಶ್ಚೋಕ್ಷ್ವೋರಭಾವತಃ ||

ಗೇರುಕಾಯಿ ಸಹಿಸದಿದ್ದಾಗ್ಗೆ ರಕ್ತಚಂದನವು ಅಪೇಕ್ಷಿಸಲ್ಪಡುತ್ತದೆ. ಗೇರುಕಾಯಿ ಇಲ್ಲದಾಗ ಚಿತ್ರಮೂಲವೂ, ಕಬ್ಬು ಇಲ್ಲದಾಗ ನಲವೂ, ಅಪೇಕ್ಷಿಸಲ್ಪಡುತ್ತದೆ.

ಪರಾ ಗೇರುಕಾಯಿ ಕೊಟ್ಟದ್ದರಿಂದ ಉಂಟಾದ ತೀಕ್ಷ್ಣತೆಯ ಪರಿಹಾರಕ್ಕೆ ರಕ್ತಚಂದನವನ್ನು ಉಪಯೋಗಿಸುವದು ಹಿತ ಎಂತ ತಾತ್ಪರ್ಯ 'ನಲ'ದ ವ್ಯಕ್ತಿ ಕುರಿತು 1ನೇ ಪರಿಶಿಷ್ಟದ 4ನೇ ಸಂಖ್ಯೆಯ ಅಡಿ ಪರಾ ನೋಡಿ.

33. ಸುವರ್ಣ-ಸ್ವರ್ಣಮಾಕ್ಷಿಕ.

ಸುವರ್ಣಾಭಾವತಃ ಸ್ವರ್ಣಮಾಕ್ಷಿಕಂ ಪ್ರಕ್ಷಿಪೇದ್ಬುಧಃ ।

ಭಂಗಾರ (ಚಿನ್ನ) ಎಲ್ಲದಾಗ ಬುದ್ಧಿವಂತನು ಸ್ವರ್ಣಮಾಕ್ಷಿಕ (ಮ.ಲ. ಪೊನ್ನೀರಮಾಕ್ಕಿರ) ವನ್ನು ಹಾಕಬೇಕು.

34. ತಾರಮಾಕ್ಷಿಕ-ರಜತ.

ಶ್ವೇತಸ್ತು ಮಾಕ್ಷಿಕಂ ಜ್ಞೇಯಂ ಬುಧೈ ರಜತವದ್ಧ್ರುವಮ್ ।

ಬಿಳೇ (ತಾರ) ಮಾಕ್ಷಿಕವು (ಮ.ಲ. ವೆಳುತ್ತಮಾಕ್ಕಿರ) ಬೆಳ್ಳಿಗೆ ಸಮಾನವಾದದ್ದೆಂತ ಪ್ರಾಜ್ಞರು ತಿಳಿಯಬೇಕು

35. ಮಾಕ್ಷಿಕ-ಸ್ವರ್ಣಗೈರಿಕ.

ಮಾಕ್ಷಿಕಸ್ಯಾಪ್ಯಭಾವೇ ತು ಪ್ರದದ್ಯಾತ್ಸ್ವರ್ಣಗೈರಿಕಮ್ ।

ಮಾಕ್ಷಿಕ(ಸ್ವರ್ಣ ಮತ್ತು ತಾರ)ವು ಸಹ ಇಲ್ಲದಲ್ಲಿ (ಚಿನ್ನ ಮತ್ತು ಬೆಳ್ಳಿ ಬದಲಾಗಿ) ಸ್ವರ್ಣಕಾವಿಯನ್ನು ಉಪಯೋಗಿಸಬೇಕು.

36. ಸ್ವರ್ಣಭಸ್ಮ-ರೌಪ್ಯಭಸ್ಮ-ಕಾಂತಭಸ್ಮ-ತೀಕ್ಷ್ಣಭಸ್ಮ

ಸುವರ್ಣಮಥವಾ ರೌಪ್ಯಂ ಮೃತಂ ಯತ್ರ ನ ಲಭ್ಯತೇ ।
ತತ್ರ ಕಾನ್ತೇನ ಕರ್ಮಾಣಿ ಭಿಷಕ್ಕುರ್ಯಾದ್ವಿಚಕ್ಷಣಃ ।
ಕಾನ್ತಾಭಾವೇ ತೀಕ್ಷ್ಣಲೋಹಂ ಯೋಜಯೇದ್ವೈದ್ಯಸತ್ತಮಃ ॥

ಭಂಗಾರದ ಭಸ್ಮ ಅಥವಾ ಬೆಳ್ಳಿ ಭಸ್ಮ ಎಲ್ಲಿ ಸಿಕ್ಕುವದಿಲ್ಲವೋ ಅಲ್ಲಿ ಬುದ್ಧಿಶಾಲಿಯಾದ ವೈದ್ಯನು (ಅವುಗಳಿಂದಾಗತಕ್ಕ) ಕೆಲಸಗಳನ್ನು ಕಾಂತಲೋಹದ ಭಸ್ಮದಿಂದ ಮಾಡತಕ್ಕದ್ದು. ಕಾಂತ(ಲೋಹದ ಭಸ್ಮ)ವು ದೊರೆಯದಾಗ ವೈದ್ಯೋತ್ತಮನು ತೀಕ್ಷ್ಣಲೋಹ (ಉಕ್ಕಿನ ಭಸ್ಮ)ವನ್ನು ಕೂಡಿಸತಕ್ಕದ್ದು.

37. ಮೌಕ್ತಿಕ-ಮುಕ್ತಾಶುಕ್ತಿ.

ಅಭಾವೇ ಮೌಕ್ತಿಕಸ್ಯಾಪಿ ಮುಕ್ತಾಶುಕ್ತಿಂ ಪ್ರಯೋಜಯೇತ್ ।

ಮುತ್ತು ಇಲ್ಲದಾಗ್ಗೆ ಮುತ್ತಿನಚಿಪ್ಪನ್ನು ಪ್ರಯೋಗಿಸಬೇಕು.

38. ಜೇನು-ಜೀರ್ಣಗುಡ.

ಮಧು ಯತ್ರ ನ ಲಭ್ಯೇತ ತತ್ರ ಜೀರ್ಣಗುಡೋ ಮತಃ ।

ಜೇನು ಎಲ್ಲಿ ಸಿಕ್ಕುವದಿಲ್ಲವೋ ಅಲ್ಲಿ ಹಳೇ ಬೆಲ್ಲವು ಪ್ರತಿನಿಧಿ ಎಂತ ತಿಳಿದಿದ್ದಾರೆ.

39. ಮತ್ಸ್ಯಂಡೀ-ಸಿತಶರ್ಕರಾ.

ಮತ್ಸ್ಯಣ್ಡ್ಯಭಾವತೋ ದದ್ಯುರ್ಭಿಷಜಃ ಸಿತಶರ್ಕರಾಮ್ ।

ಮುದ್ದೆಬೆಲ್ಲ ಇಲ್ಲದ್ದಕ್ಕೆ ವೈದ್ಯರು ಬಿಳೇ ಸಕ್ಕರೆಯನ್ನು ಹಾಕುವರು.

40. ಸಿತಾ-ಖಂಡಂ.

ಅಸಮ್ಭವೇ ಸಿತಾಯಾಸ್ತು ಬುಧೈಃ ಖಂಡಂ ಪ್ರಯುಜ್ಯತೇ |
ಚೀನಿಸಕ್ಕರೆ ಇಲ್ಲದಲ್ಲಿ ಪ್ರಾಜ್ಞರು ಕಲ್ಲುಸಕ್ಕರೆಯನ್ನು ಪ್ರಯೋಗಿಸುತ್ತಾರೆ.

41. ಕ್ಷೀರ-ಮೌದ್ಗ ಅಥವಾ ಮಾಸೂರ ರಸ.

ಕ್ಷೀರಾಭಾವೇ ರಸೋ ಮೌದ್ಗೋ ಮಾಸೂರೋ ವಾ ಪ್ರದೀಯತೇ |
ಹಾಲು ಇಲ್ಲದಿದ್ದಾಗ ಹೆಸರಿನ ಅಥವಾ ಚಾಣಂಗಿಯ ಸಾರು ಕೊಡಲ್ಪಡುತ್ತದೆ.

ಅತ್ರ ಪ್ರೋಕ್ತಾನಿ ವಸ್ತೂನಿ ಯಾನಿ ತೇಷು ಚ ತೇಷು ಚ |
ಯೋಜ್ಯಮೇಕತರಾಭಾವೇ ಪರಂ ವೈದ್ಯೇನ ಜಾನತಾ |
ರಸವೀರ್ಯವಿಪಾಕಾದ್ಯೈಃ ಸಮಂ ದ್ರವ್ಯಂ ವಿಚಿನ್ತ್ಯ ಚ |
ಸಾಮಾನ್ಯ ಸೂತ್ರಗಳು ಯುಂಜ್ಯಾದ್ವಿವಿಧಮನ್ಯಚ್ಚ ದ್ರವ್ಯಾಣಾನ್ತು ರಸಾದಿವಿತ್ |
ಯೋಗೇ ಯದಪ್ರಧಾನಂ ಸ್ಯಾತ್ತಸ್ಯ ಪ್ರತಿನಿಧಿರ್ಮತಃ |
ಯತ್ತು ಪ್ರಧಾನಂ ತಸ್ಯಾಪಿ ಸದೃಶಂ ನೈವ ಗೃಹ್ಯತೇ |
ವ್ಯಾಧೇರಯುಕ್ತಂ ಯದ್ದ್ರವ್ಯಂ ಗಣೋಕ್ತಮಪಿ ತತ್ತ್ಯಜೇತ್ |
ಅನುಕ್ತಮಪಿ ಯುಕ್ತಂ ಯದ್ಯೋಜಯೇತ್ತದ್ರಸಾದಿವಿತ್"

(ಭಾ. ಪು. 71-72.)

ಇಲ್ಲಿ ಯಾವ ಯಾವ ವಸ್ತುಗಳು ಯಾವ ಯಾವ ವಸ್ತುಗಳ ಸ್ಥಾನಗಳಲ್ಲಿ ಉಪಯೋಗಿಸಲ್ಪಡಬೇಕಾಗಿ ಹೇಳಲ್ಪಟ್ಟವೋ, ಆ ಜತೆ ವಸ್ತುಗಳೊಳಗೆ ಒಂದು ಇಲ್ಲದಾಗ ಇತರ ವಸ್ತುವನ್ನು ಬಲ್ಲಂಥ ವೈದ್ಯನು ಕೂಡಿಸಬೇಕು. ದ್ರವ್ಯಗಳ ರಸಾದಿ ಗುಣಗಳನ್ನು ತಿಳಿದವನು, ರಸವೀರ್ಯವಿಪಾಕಾದಿ ಗುಣಗಳಿಂದ ಸಮಾನವಾದ ದ್ರವ್ಯವು ಯಾವದೆಂದು ಆಲೋಚಿಸಿ, ವಿವಿಧವಾದ ಬೇರೆ ವಸ್ತುವನ್ನು ಕೂಡಿಸಬಹುದು. ಯೋಗದಲ್ಲಿ ಪ್ರಧಾನವಲ್ಲದ ದ್ರವ್ಯ ಯಾವದೊ, ಅದಕ್ಕೆ ಪ್ರತಿನಿಧಿಯನ್ನು ಹೇಳಿರುವದಲ್ಲದೆ, ಪ್ರಧಾನವಾಗಿರುವ ದ್ರವ್ಯಕ್ಕೆ ಸದೃಶವಾದದ್ದನ್ನು ತೆಗೆದುಕೊಳ್ಳುವದು ಎಂದೂ ಇಲ್ಲ. ಗಣದಲ್ಲಿ ಸೇರಿರುವ ದ್ರವ್ಯವಾದಾಗ್ಯೂ, ಅದು ರೋಗಕ್ಕೆ ಯುಕ್ತವಲ್ಲದ್ದಾದರೆ, ಅದನ್ನು ಬಿಟ್ಟುಬಿಡಬೇಕು, ಹೇಳಲ್ಪಡದ ದ್ರವ್ಯವನ್ನಾದರೂ, ರೋಗಕ್ಕೆ ಯುಕ್ತವಾದರೆ, ರಸಾದಿಗಳ ಜ್ಞಾನವುಳ್ಳವನು ಕೂಡಿಸಬಹುದು.

42. ಸುವರ್ಣಕ್ಷೀರೀ-ಕಂಕುಷ್ಠ.

ದದ್ಯಾತ್ಕಂಕುಷ್ಠಕಂ ವೈದ್ಯಃ ಸುವರ್ಣಕ್ಷೀರ್ಯಭಾವತಃ |

(ಚಿ. ಸಾ. ಸಂ. 971.)

ಅರಸಿನ ಉಮ್ಮತ್ತ ಇಲ್ಲದ್ದಕ್ಕೆ ವೈದ್ಯನು ಕಂಕುಷ್ಠವನ್ನು ಹಾಕಬೇಕು.

ಷರಾ ಕಂಕುಷ್ಠ ಎಂಬದು ಅರಿದಾಳದ ಹಾಗಿನ ಒಂದು ವಿಧದ ಕಲ್ಲು, ಮುರದಾರಶಿಂಗಿ ಎಂತ ಕೆಲವರು, ಎಂತ ಶಾ ನಿ . ಅದು ವಿಷದ್ರವ್ಯ. ಹಿಮಾಚಲದ ಪಾದದ ಶಿಖರದಲ್ಲಿ ಆಗುವಂಥಾದ್ದೆಂತ ಹೇಳಲ್ಪಟ್ಟಿದೆ

43. ಯೂಥಿಕಾ-ಜಾತೀ.

ಯೂಥಿಕಾಭಾವತೋ ಜ್ಞೇಯಾ ಜಾತೀ ತದ್ಗುಣಕಾರಿಣೀ.

(ಚಿ. ಸಾ. ಸಂ 972.)

ಜೂಜಿಮಲ್ಲಿಗೆ ಇಲ್ಲದಾಗ ಜಾಜಿಹೂವು ಅದೇ ಗುಣವನ್ನುಂಟುಮಾಡುವಂಥಾದ್ದೆಂತ ತಿಳಿಯಬೇಕು.

44. ಮಯೂರ-ಶಶ-ಹಂಸ-ಆಖುಕ

ಮಯೂರಾಭಾವತೋ ದದ್ಯಾಚ್ಛಶಹಂಸಾಖುಕಾನಪಿ ।

(ಚಿ. ಸಾ. ಸಂ. 972.)

ನವಿಲಿನ ಮಾಂಸವಿಲ್ಲದ್ದಲ್ಲಿ ಮೊಲ, ಹಂಸ, ಇಲಿಗಳ ಮಾಂಸಗಳನ್ನು ಕೊಡತಕ್ಕದ್ದು.

45. ಬನ್ಧೂಕ-ಪುನ್ನಾಗಪುಷ್ಪ.

ಬನ್ಧೂಕಾಭಾವತೋ ದೇಯಂ ಪುಷ್ಪಂ ಪುನ್ನಾಗಸಮ್ಭವಮ್ ।

(ಚಿ. ಸಾ. ಸಂ. 972.)

ಕೇಪಲಹೂವು (ಕಿಸ್ಗಾರ) ಇಲ್ಲದ್ದಕ್ಕೆ ಸುರಹೊನ್ನೆ(ಹೊನ್ನೆ)ಯ ಹೂವನ್ನು ಹಾಕಬೇಕು.

ಪರಾ. ಮೇಲೆ 22ನೇ ಸಂಖ್ಯೆಯ ಅಡಿಯ ಪರಾ ನೋಡಿ

46. ತುಮ್ಬುರು-ಆರುಷ್ಕರ.

ತುಮ್ಬುರುತೈಲಾಭಾವೇ ತು ಹಿತಮಾರುಷ್ಕರಂ ತಥಾ ।

(ಚಿ. ಸಾ. ಸಂ. 972.)

ತುಂಬುರುತೈಲ ಇಲ್ಲದಾಗ್ಗೆ ಗೇರೆಣ್ಣೆಯು ಹಿತವಾಗುತ್ತದೆ.

ಪರಾ ತುಂಬುರು ಹೆಚ್ಚಾಗಿ ಹಿಮಾಚಲದ ಸಮೀಪದ ಪ್ರದೇಶಗಳಲ್ಲಿ ಬೆಳೆಯುವಂಥ ಒಂದು ಗಿಡವಂತೆ

47. ದಾಡಿಮ-ವೃಕ್ಷಾಮ್ಲ.

ನ ಭವೇದ್ದಾಡಿಮಂ ಯತ್ರ ವೃಕ್ಷಾಮ್ಲಂ ತತ್ರ ಯೋಜಯೇತ್ ।

(ಚಿ. ಸಾ. ಸಂ 973.)

ದಾಳಿಂಬವು ಎಲ್ಲಿ ಇಲ್ಲವೋ ಅಲ್ಲಿ ಮುರ್ಗಿನ ಹುಳಿ(ತುಳು. ಪುಣರ್ಪುಳಿ)ಯನ್ನು ಕೂಡಿಸಬೇಕು.

48. ಬೇರು-ತೊಗಟೆ.

ಮೂಲಾಭಾವೇ ತ್ವಚಂ ಗ್ರಾಹ್ಯಂ (ಚಿ. ಸಾ. ಸಂ 973.)

ಬೇರು ಇಲ್ಲದಲ್ಲಿ ತೊಗಟನ್ನು (ಸಿಪ್ಪೆಯನ್ನು) ತೆಗೆದುಕೊಳ್ಳಬೇಕು.

49. ಲತಾ-ಜಿಂಗಿನೀ.

. . . . ಲತಾ ಜಿಂಗಿನ್ಯಸಮ್ಭವೇ (ಚಿ. ಸಾ. ಸಂ. 973.)

ಉಡಿಮರ ಇಲ್ಲದಲ್ಲಿ ಸುಗಂಧಿ(ನಾಮದ)ಬೇರನ್ನು ತೆಗೆದುಕೊಳ್ಳಬೇಕು.

50. ನತ-ತಗರಪಾದೀ-ಕುಷ್ಠ

ನತೇ ತಗರಪಾದೀ ಸ್ಯಾದ್ಯಭಾವೇ ಕುಷ್ಠಮಿಷ್ಯತೇ ।

(ಚಿ. ಸಾ. ಸಂ. 973.)

ಆನೆಮುಂಗಿನ ಸ್ಥಾನದಲ್ಲಿ ತಗರವನ್ನು, ಅದು ಸಿಕ್ಕದಿದ್ದರೆ ಚಂಗಲಕೋಷ್ಠವನ್ನು, ಅಪೇಕ್ಷಿಸುತ್ತಾರೆ.

ಪರಾ 'ನತಮ್'—ತಗರಮ್', ಸ್ಯೋನಾಕಶ್ಚ" (ಧ ನಿ 437)

51. ಯುಂಜಾತ-ತಾಲಮಸ್ತಕ.

ಯುಂಜಾತಃ (ತೇ?) ಪಶ್ಚಿಮೇ ಖ್ಯಾತಂ ಗ್ರಾಹ್ಯಂ ತಾಲಸ್ಯ ಮಸ್ತಕಮ್ |
(ಚಿ. ಸಾ. ಸಂ. 973.)

ಯುಂಜಾತದ ಸ್ಥಾನದಲ್ಲಿ ಪಶ್ಚಿಮದೇಶ (ಕರಾವಳಿ)ದಲ್ಲ ಪ್ರಖ್ಯಾತವಾದ ತಾಳೀ ಕೊಂಬನ್ನು (ಅಥವಾ ಎಳೇ ತಿರಿಯನ್ನು) ತೆಗೆದುಕೊಳ್ಳಬೇಕು.

ಪರಾ ಯುಂಜಾತಕವು 'ಪಲಪ್ರೀಸ' (ಒಂದು ಜಾತಿಯ ಹಣ್ಣು) ಎಂತ ಶಾ [illegible]

# ಉಪೋದ್ಘಾತ.

## 3ನೇ ಪರಿಶಿಷ್ಟ.

### ನ್ಸಾಯು (ನರ) ಮಂಡಲದ ರಚನೆ ಮತ್ತು ಅಧಿಕಾರ.

### (The structure and functions of the Nervous System)

### (*a*) ಪಾಶ್ಚಾತ್ಯರೀತ್ಯಾ.

ಆಯುರ್ವೇದದಲ್ಲಿ ಇಲ್ಲದ ಸ್ನಾಯುಗಳ ವಿಜ್ಞಾನಕ್ಕೆ ಪಾಶ್ಚಾತ್ಯ ಶಾರೀರಶಾಸ್ತ್ರವೇ ಆಧಾರ

1. ಅನೇಕ ರೋಗಗಳ ಪರಿಜ್ಞಾನಕ್ಕೆ ಶರೀರದೊಳಗಿರುವ ನರಗಳ ಸಂಸ್ಥಾನ (ರಚನೆ) ಮತ್ತು ಅಧಿಕಾರ (ಕರ್ಮವಿಶೇಷ) ತಿಳಿದಿರುವದು ಅವಶ್ಯಕವಾಗಿದ್ದು, ಈ ವಿಜ್ಞಾನವು ಆಯುರ್ವೇದ ಗ್ರಂಥಗಳಲ್ಲಿ ಪ್ರತ್ಯೇಕವಾಗಿ ವ್ಯಾಖ್ಯಾನ ಮಾಡಲ್ಪಟ್ಟದ್ದು ಕಾಣದಿರುವದರಿಂದ, ಅದನ್ನು ಪಾಶ್ಚಾತ್ಯ ಶಾರೀರಶಾಸ್ತ್ರಗ್ರಂಥಗಳ ಆಧಾರದಿಂದ ಈ ಅಧ್ಯಾಯದಲ್ಲಿ ಸಂಕ್ಷೇಪವಾಗಿ ನಿರ್ದೇಶಿಸೋಣಾಗುತ್ತದೆ.

ಸ್ನಾಯುಮಂಡಲದ ವ್ಯಾಖ್ಯಾನ

2. ಮಿದುಳು, ಬೆನ್ನಿನ ಕೋಲೆಲುಬಿನೊಳಗೆ ಸುರಕ್ಷಿತವಾಗಿರುವ ಪ್ರಧಾನ ನರ ಮತ್ತು ಇವುಗಳಿಂದ ಹೊರಡುವ ನರಗಳು, ಈ ಸಮುದಾಯಕ್ಕೆ ನರಮಂಡಲ ಎನ್ನುವದಾಗಿರುತ್ತದೆ. ಈ ಮಂಡಲದ ಕೇಂದ್ರ (ಮಧ್ಯಭಾಗ) ಮಿದುಳು ಮತ್ತು ಪ್ರಧಾನ ನರ.

ನರಗಳ ದ್ವಿವಿಧ

3. ನರಗಳಲ್ಲಿ 'ಮೂಲಗ', 'ಅಂತಗ' ಎಂತ ಎರಡು ವಿಧಗಳಿವೆ, ಮೂಲಗ ನರಗಳು ವೇಗಗಳನ್ನು ಮೂಲಸ್ಥಾನದ ಕಡೆಗೂ, 'ಅಂತಗ' ಎಂಬವು ವೇಗಗಳನ್ನು ಮೂಲಸ್ಥಾನದಿಂದ ಕೊನೆಯ ಕಡೆಗೂ ಸಾಗಿಸುವಂಥವು.

ನರಗಳ ರಚನೆ

4. ಪ್ರತಿ ನರದಲ್ಲಿ ಅನೇಕ ಎಳೆಗಳಿವೆ; ಅಂಥ ಪ್ರತಿಯೊಂದು ಎಳೆಯು ಸಾಧಾರಣವಾಗಿ ಎರಡು ಹೊದಿಕೆಗಳುಳ್ಳ ಒಂದು ತಂತು. ಹೊರಗಿನ ಹೊದಿಕೆಯು ಬಹು ತೆಳ್ಳಗಾಗಿಯೂ, ಸೂಕ್ಷ್ಮವಾಗಿಯೂ ಇರುತ್ತದೆ. ಈ ಹೊದಿಕೆಯೂ, ಎಳೆಯ ಮಧ್ಯಭಾಗವಾದ ತಂತುವೂ ಮೂಲದಿಂದ ಕೊನೆಯಾದ ಮಾಂಸಖಂಡ, ಚರ್ಮ, ಅಥವಾ ಇತರ ಇಂದ್ರಿಯದ ವರೆಗೂ ಒಂದೆಯಾಗಿರುತ್ತವೆ. ಒಳಗಿನ ಹೊದಿಕೆಯು ಚರಬಿಯುಳ್ಳದ್ದು ಮತ್ತು ಅಲ್ಲಲ್ಲಿ, ಸುಮಾರು ಒಂದು ಇಂಚಿನ 4ನೇ ಶತಾಂಶದ ದೂರಕ್ಕೆ, ತುಂಡುತುಂಡಾಗಿರುತ್ತದೆ. ಸಾಧಾರಣವಾಗಿ ನರದ ಎಳೆಯು ಬೆಳ್ಳಗೆ. ಕೆಲವು ಎಳೆಗಳಿಗೆ ಒಳಗಿನ ಹೊದಿಕೆ ಇರುವದಿಲ್ಲ. ಅಂಥವು ಬೂದಿಬಣ್ಣ. ಕೆಲವು ನರಗಳಲ್ಲಿ ಸಾಧಾರಣವಾಗಿ ಮೂಲದ ಸಮೀಪದಲ್ಲಿಯಾಗಲೀ ತುದಿಯ ಸಮೀಪದಲ್ಲಿಯಾಗಲೀ ಒಂದು ಗ್ರಂಥಿ (ganglion) ಇರುತ್ತದೆ. ಅದನ್ನು ಭೂತಕನ್ನಡಿಯಿಂದ ಪರೀಕ್ಷಿಸಿದರೆ, ನರದ ಎಳೆಗಳೊಂದಿಗೆ ಅನೇಕ ಜೀವಾಣುಕೋಶಗಳು (cells) ಕಲೆತಿರುವದು ಅಥವಾ ಅವುಗಳನ್ನು ಸುತ್ತಿರುವದು ಕಾಣುತ್ತದೆ. ಅಂಥ ಜೀವಾಣುಕೋಶಗಳೊಳಗೆ ಕೆಲವು ಗೋಲವಾಗಿಯೂ, ಕೆಲವು **ಬೇರಿಕಾಯಿಯ** (pear-shaped) ಆಕಾರವಾಗಿಯೂ, ಕೆಲವು ದುಂಡಗೆ ಮತ್ತು ಉದ್ದವಾಗಿಯೂ ಮತ್ತು ಕೆಲವು ಕ್ರಮವಿಲ್ಲದ ಆಕಾರವುಳ್ಳವಾಗಿಯೂ ಇರುತ್ತವೆ. ನರದ ದ್ವಿವಿಧ ಎಳೆಗಳು ಮತ್ತು

ಜೀವಾಣುಕೋಶಗಳು ಸ್ವಲ್ಪ ಆಧಾರಭೂತವಾದ ಪರೆಯೊಂದಿಗೆ ಕೂಡಿಕೊಂಡು ಮಿದುಳಿನಲ್ಲಿಯೂ ಪ್ರಧಾನ ನರದಲ್ಲಿಯೂ ಇರುತ್ತವೆ.

ಕೇಂದ್ರಭಾಗದ ಸಂಸ್ಥಾನ

5. ಪ್ರಧಾನ ನರವು ಬೆನ್ನಿನ ಕೋಲೆಲುಬಿನೊಳಗೆ ಹೇಗೊ, ಹಾಗೆ ಮಿದುಳು ತಲೆ ಓಡಿನೆಲುಬುಗಳೊಳಗೆ ಸುರಕ್ಷಿತವಾಗಿರುತ್ತದೆ. ಈ ಎಲುಬುಗಳ ಒಳ ಅಂಚಿನಲ್ಲಿ ಗಟ್ಟಿಯಾದ (ಹರಿಯಲಿಕ್ಕೆ ಕಷ್ಟವಾದ) ಎಳೆಗಳುಳ್ಳ ಪರೆಯಿರುತ್ತದೆ. ಮಿದುಳನ್ನೂ ಪ್ರಧಾನ ನರವನ್ನೂ ಬೇರೊಂದು ಸೂಕ್ಷ್ಮವಾದ ಮತ್ತು ಸಿರೆಗಳುಳ್ಳ ಪರೆಯು ಬಿಗಿಯಾಗಿ ಸುತ್ತಿರುತ್ತದೆ. ಈ ಎರಡು ಪರೆಗಳ ಮಧ್ಯದ ಎಡೆಯಲ್ಲಿ ಮೇದೋರೂಪವಾದ ಒಂದು ದ್ರವ ಮತ್ತು ಒಂದು ಭಾಗ ಮುಚ್ಚಳಕ್ಕೆ ಮತ್ತೊಂದು ಭಾಗ ಒಳಗಿನ ಮಿದುಳು ಅಥವಾ ನರಕ್ಕೆ ಕೂಡಿರುವ ಮತ್ತು ಸಡಿಲಾಗಿರುವ ಜೋಡಣೆ ಹೆಣಿಗೆಗಳು (connecting tissues) ಇರುತ್ತವೆ.

6. ಪ್ರಧಾನ ನರವು ಮಿದುಳಿಂದ ಬೆನ್ನ ಕೋಲೆಲುಬಿನೊಳಗಾಗಿ ಕೆಳಗೆ, ಸಾಧಾರಣವಾದ ಎತ್ತರವುಳ್ಳ ಒಬ್ಬ ಮನುಷ್ಯನಲ್ಲಿ, ಸುಮಾರು ಹದಿನೆಂಟು ಇಂಚು ಉದ್ದ ಮತ್ತು ಅರ್ಧ ಇಂಚು ಅಗಲವಾಗಿ, ಸೊಂಟದ ಎರಡನೇ ಎಲುಬಿನ ವರೆಗೆ ಇಳಿದು, ಅದರನಂತರ ಸಪೂರವಾಗುತ್ತಾ ತಂತುವಾಗಿ ಪರಿಣಮಿಸುತ್ತದೆ. ಪ್ರಧಾನ ನರದ ಮುಂಭಾಗದಲ್ಲ ಒಂದು, ಹಿಂಭಾಗದಲ್ಲಿ ಒಂದು, ಹೀಗೆ ಎರಡು ಆಳವಾದ ಗೀರುಗಳಿರುತ್ತವೆ. ಈ ಗೀರುಗಳಿಂದ ಪ್ರಧಾನ ನರವು ದಕ್ಷಿಣಾರ್ಧ, ಉತ್ತರಾರ್ಧ ಎಂಬ ಎರಡು ಭಾಗಗಳಾಗಿ ವಿಂಗಡಿಸಲ್ಪಟ್ಟಿದೆ. ಹಿಂಭಾಗದ ಗೀರಿನ ಒಳಕೊನೆಯೂ ಮುಂಭಾಗದ ಗೀರಿನ ಒಳಕೊನೆಯೂ ಒಂದಕ್ಕೊಂದು ಸಮೀಪವಾಗಿದ್ದು ಮಧ್ಯದಲ್ಲಿ ದಕ್ಷಿಣಾರ್ಧ ಉತ್ತರಾರ್ಧಗಳನ್ನು ಜೋಡಿಸುವಂಥ ಒಂದು ಸಪೂರವಾದ ಜಾಲಮಯ ಪರಯು ಸಂಕದೋಪಾದಿ ನಿಂತಿರುತ್ತದೆ. ಈ ಸಂಕದ ನಡುವಿನಲ್ಲಿ ಪ್ರಧಾನ ನರದ ಚಿಕ್ಕದಾದ ಮಧ್ಯನಾಳವಿರುತ್ತದೆ. ಪ್ರಧಾನ ನರವನ್ನು ಅಡ್ಡವಾಗಿ ಕಡಿದರೆ, ಅದು ಹೊರಭಾಗದಲ್ಲಿ ಬಿಳೀದಾಗಿ ಕಾಣುವ ವಸ್ತುವಿನಿಂದಲೂ ಒಳಭಾಗದಲ್ಲಿ ಬೂದಿ ಬಣ್ಣದ್ದಾಗಿ ಕಾಣುವ ವಸ್ತುವಿನಿಂದಲೂ ರಚಿತವಾಗಿದೆ ಎಂತ ಕಾಣುವದು. ಪ್ರಧಾನ ನರದ ಪ್ರತಿಯರ್ಧದಲ್ಲಿಯೂ ಗೀರುಗಳ ಪ್ರತಿ ಪಕ್ಕದಲ್ಲಿಯೂ ಬೂದಿ ಬಣ್ಣದ ವಸ್ತು (grey matter) ಮತ್ತು ಬಿಳೀ ಬಣ್ಣದ ವಸ್ತು (white matter) ಸಮವಾಗಿ ಹಂಚಲ್ಪಟ್ಟಿರುವದರಿಂದ, ನರದ ದಕ್ಷಿಣಾರ್ಧ ಉತ್ತರಾರ್ಧಗಳು ಭೇದವಿಲ್ಲದಂತೆ ಕಾಣುತ್ತವ. ಪ್ರತಿ ಅರ್ಧದಲ್ಲಿಯೂ ಬೂದಿ ಬಣ್ಣದ ವಸ್ತು ಅರ್ಧ ಚಂದ್ರಾಕಾರವಾಗಿದ್ದು, ಆ ರೇಖೆಯ ಎದುರಿನ ತುದಿಯಲ್ಲಿಯೂ ಹಿಂದಿನ ತುದಿಯಲ್ಲಿಯೂ ಉರುಟಾದ ಕೊಂಬುಗಳು (anterior and posterior horns) ಇವೆ

ಪ್ರಧಾನ ನರದ ರಚನೆ

ಪ್ರಧಾನ ನರದಿಂದ ಹೊರಡುವ ಜೊತೆ ನರಗಳು, ಮತ್ತು ಅವುಗಳ ಅಧಿಕಾರ

7. ಪ್ರಧಾನ ನರದ ಉದ್ದದಲ್ಲಿ ಒಂದರಿಂದೊಂದಕ್ಕೆ ಮಧ್ಯ ಸ್ವಲ್ಪ ಎಡ ಬಿಟ್ಟು ಒಂದೇ ಸಮಕ್ಕೆ ಎಡಭಾಗದಿಂದ ಒಂದು, ಬಲಭಾಗದಿಂದ ಒಂದು, ಹೀಗೆ ಎರಡೆರಡಾಗಿ ಮೂವತ್ತೊಂದು ಜೊತೆನರಗಳು ಹೊರಟಿರುತ್ತವೆ. ಈ ಅರುವತ್ತೆರಡು ನರಗಳಲ್ಲಿ ಪ್ರತಿಯೊಂದು ಬುಡದಲ್ಲಿ ಕವಲಾಗಿ ಒಡದು, ಒಂದು ಬೇರು ಹಿಂಭಾಗದಲ್ಲಿಯೂ ಮತ್ತೊಂದು ಬೇರು ಮುಂಭಾಗದಲ್ಲಿಯೂ ಪ್ರಧಾನ ನರದೊಳಗೆ ಸೇರುವದರಿಂದ, ಪ್ರಧಾನ ನರದ ಪ್ರತ್ಯರ್ಧದ ಬಿಳಿ ಹೊದಿಕೆಯು ಮೂರು

ಅಂಶಗಳಾಗಿ ವಿಂಗಡಿಸಲ್ಪಟ್ಟಿದೆ. ಈ ಜೊತೆನರಗಳು ಕವಲೊಡೆದ ಮೇಲೆ ಬೆನ್ನಕೋಲೆಲುಬಿನ ತುಂಡುಗಳಲ್ಲಿ ಪ್ರತಿಯೊಂದಕ್ಕೂ ಅದರ ಅನಂತರದ್ದಕ್ಕೂ ಮಧ್ಯೇ ಇರುವ ಎಡೆಗಳಿಗಾಗಿ ಪ್ರಧಾನ ನರದ ಸ್ರೋತಸ್ಸಿನಿಂದ ಹೊರಗೆ ಹೊರಟು ಕೆಲವು ಮಾಂಸಖಂಡಗಳಿಗೂ ಮುಂಡದ ಮತ್ತು ಕೈಕಾಲುಗಳ ಚರ್ಮವಿಭಾಗಗಳಿಗೂ ಸೇರುತ್ತವೆ. ಪ್ರತಿ ನರದಲ್ಲಿರುವ ಎಳೆಗಳೊಳಗೆ ಕೆಲವು ಮೂಲಗ; ಕೆಲವು ಅಂತಗ. ಈ ಎರಡು ಜಾತಿಯ ಎಳೆಗಳು ಮಾಂಸಖಂಡವನ್ನು ಅಥವಾ ಚರ್ಮವಿಭಾಗವನ್ನು ಸೇರುವಲ್ಲಿ ಪ್ರತ್ಯೇಕವಾಗುತ್ತವೆ. ಬುಡದಲ್ಲಿ ಮೂಲಗ ಎಳೆಗಳೆಲ್ಲ ಹಿಂಬದಿಯ ಬೇರಿಗಾಗಿಯೂ ಅಂತಗ ಎಳೆಗಳೆಲ್ಲಾ ಮುಂಬದಿಯ ಬೇರಿಗಾಗಿಯೂ ಪ್ರಧಾನ ನರಕ್ಕೆ ಕೂಡುತ್ತವೆ ಮೂಲಗ ಎಳೆಗಳು ಇಂದ್ರಿಯಜ್ಞಾನಕ್ಕೆ ಸಾಧನವಾದವುಗಳಾದ್ದರಿಂದ 'ಜ್ಞಾನವಾಹಿ' ಎಂತಲೂ, ಅಂತಗ ಎಳೆಗಳೊಳಗೆ ಮಾಂಸಖಂಡಗಳಿಗೆ ಹೋಗಿ ಚೇಷ್ಟೆಗಳನ್ನುಂಟುಮಾಡತಕ್ಕಂಥವುಗಳಿಗೆ 'ಚೇಷ್ಟಾಕಾರಿ' ಎಂತಲೂ ಹೇಳುತ್ತಾರೆ. ಆದುದರಿಂದ ನರದ ಹಿಂಬದಿಯ ಬೇರು ಜ್ಞಾನವಾಹಿ ಎಂತಲೂ ಮುಂಬದಿಯ ಬೇರು ಚೇಷ್ಟಾಕಾರಿ ಎಂತಲೂ ತಿಳಿಯಬಹುದು. ಪ್ರಧಾನ ನರದಿಂದ ಹೊರಟ ನರಗಳಲ್ಲಿ ಯಾವದಾದರೊಂದರ ಹಿಂದಿನ ಬೇರು ಅತಿಯಾಗಿ ಹಿಂಸಿಸಲ್ಪಟ್ಟರೆ, ಅಥವಾ ಕಡಿದುಹೋದರೆ, ಆ ನರದ ತುದಿಭಾಗವಿರುವ ಚರ್ಮವನ್ನು ಸೂಜಿಯಿಂದ ಚುಚ್ಚಿದರೆ ಅದರ ನೋವಾಗಲಿ, ಬೆಂಕಿಯ ಕೆಂಡದಿಂದ ಸುಟ್ಟರೆ ಆ ಸುಡತವಾಗಲಿ ತಿಳಿಯಲಾರದು; ಯಾಕೆಂದರೆ ಆ ನರದ ಮೂಲಗ ಎಳೆಗಳಿಗೂ ಪ್ರಧಾನ ನರಕ್ಕೂ ಇದ್ದ ಸಂಬಂಧ ಕಡಿದುಹೋದ್ದರಿಂದ, ಆ ನರದ ಜ್ಞಾನವಾಹಿವೇಗಗಳು ಪ್ರಧಾನ ನರದ ಪರಿಮುಖವಾಗಿ ಮಿದುಳಿಗೆ ಹೋಗಲು ಸಾಧ್ಯವಿಲ್ಲ. ಆದರೆ ಮುಂದಿನ ಬೇರು ಸುರಕ್ಷಿತವಿರುವ ವರೆಗೆ ಪ್ರಧಾನ ನರದಿಂದ ಚೇಷ್ಟಾಕಾರಿ ವೇಗಗಳು ಮೊದಲಿನಂತೆ ನರದ ತುದಿಯ ವರೆಗೂ ಹೋಗುತ್ತವಾದ್ದರಿಂದ, ಆ ನರದ ವ್ಯಾಪನವುಳ್ಳ ಮಾಂಸಖಂಡದ ಸಂಕೋಚನಕ್ಕೆ ಬಾಧಕ ಬರುವದಿಲ್ಲ. ಹಿಂದಿನ ಬೇರಿನ ಬದಲಾಗಿ ಮುಂದಿನ ಬೇರಿಗೆ ಅಂಥಾ ಹಿಂಸೆ ಅಥವಾ ಕ್ಷತ ಉಂಟಾದರೆ, ಅಂತಗ ಎಳೆಗಳ ಪರಿಮುಖವಾಗಿ ಚೇಷ್ಟಾಕಾರಿ ವೇಗಗಳು ಸಂಚರಿಸಲಾರವಾದ್ದರಿಂದ, ಆ ನರಕ್ಕೆ ಸಂಬಂಧಪಟ್ಟ ಮಾಂಸಖಂಡದ ಚೇಷ್ಟೆಗಳು ನಿಂತುಹೋಗಿ, ಆ ಭಾಗವು ಸ್ತಬ್ಧವಾಗುವದು; ಆದರೆ ಜ್ಞಾನವಾಹಿವೇಗಗಳು ಆ ನರದ ಮೂಲಗ ಎಳೆಗಳ ಪರಿಮುಖವಾಗಿ ಮಿದುಳಿಗೆ ಸೇರುವದಕ್ಕೆ ಅಭ್ಯಂತರವಿಲ್ಲವಾದ್ದರಿಂದ, ಆ ಸ್ತಬ್ಧವಾದ ಭಾಗವನ್ನು ನೋಯಿಸಿದರೆ, ಆ ಮನುಷ್ಯನಿಗೆ ಮೊದಲಿನಂತೆ ಅನುಭವವಾಗುತ್ತದೆ.

8. ಬೆನ್ನಿನ ಕೋಲೆಲುಬು ಒಡೆದು ಪ್ರಧಾನ ನರವು ತುಂಡಾದಾಗ್ಗೆ, ಅಥವಾ ಹಿಂಸಿಸಲ್ಪಟ್ಟು ಮಿದುಳಿನಿಂದ ಅಥವಾ ಮಿದುಳಿಗೆ ಪ್ರಧಾನ ನರದ ಪರಿಮುಖವಾಗಿ ವೇಗಗಳು ಸಂಚರಿಸುವದಕ್ಕೆ ಪ್ರತಿಬಂಧಕವಾದಾಗ್ಗೆ ಮೇಲೆ ವರ್ಣಿಸಲ್ಪಟ್ಟ ದ್ವಿವಿಧ ಲಕ್ಷಣಗಳೂ ಕಾಣುವವು. ದೃಷ್ಟಾಂತವಾಗಿ ಭಂಗವು ಬೆನ್ನಿನ ಮಧ್ಯದಲ್ಲಿ ಉಂಟಾದದ್ದಾದರೆ, ಆ ಭಂಗದ ಕೆಳಗೆ ಪ್ರಧಾನ ನರದಿಂದ ಹೊರಡುವ ನರಗಳು ಯಾವ ಯಾವ ಅಂಗಗಳಿಗೆ ಅಥವಾ ಶರೀರ ವಿಭಾಗಗಳಿಗೆ ಆಶ್ರಯವಾಗಿರುತ್ತವೋ, ಅಲ್ಲೆಲ್ಲಾ ಸ್ತಬ್ಧತೆಯುಂಟಾಗುತ್ತದೆ; ಮತ್ತು ಆ ಸ್ಥಾನಗಳಲ್ಲಿ ಉಂಟುಮಾಡಿದ ನೋವಾಗಲಿ, ಸುಡತವಾಗಲಿ ಆ ಮನುಷ್ಯನಿಗೆ ಅನುಭವವಾಗಲಾರದು. ಇಂದ್ರಿಯಗಳಿಗೂ ಇಂದ್ರಿಯಾರ್ಥಗಳಿಗೂ ಸಂಯೋಗವಾದಾಗ್ಗೆ ನರಗಳಲ್ಲಿ ಉಂಟಾಗುವ ವೇಗಗಳನ್ನು ಮಿದುಳಿಗೆ ಒಯ್ಯು

ಪ್ರಧಾನ ನರದ ಅಧಿಕಾರ

ವದು ಪ್ರಧಾನ ನರದ ಕರ್ಮಗಳೊಳಗೊಂದು ಆಗಿರುತ್ತದೆ. ಪ್ರಧಾನ ನರವು ಕಡಿದು ಹೋದಾಗ್ಗೆ ಈ ಕಾರ್ಯವು ನಡೆಯಲು ಸಾಧ್ಯವಿಲ್ಲ. ಹಾಗೆಯೇ ಒಬ್ಬ ಮನುಷ್ಯನಿಗೆ ತನ್ನ ಕಾಲನ್ನು ಅಥವಾ ಇತರ ಅಂಗವಿಭಾಗವನ್ನು ಚಲಿಸುವ ಇಚ್ಛೆಯುಂಟಾದಾಗ್ಗೆ ವೇಗಗಳು ಮಿದುಳಿನಿಂದ ಹೊರಟು ಪ್ರಧಾನ ನರಕ್ಕಾಗಿ ಇಳಿದು ಸಂಬಂಧಪಟ್ಟ ನರಗಳನ್ನು ಅವುಗಳ ಮುಂಬದಿಯ ಬೇರುಗಳ ಮಾರ್ಗವಾಗಿ ಹೊಕ್ಕು, ಆಯಾ ಶರೀರವಿಭಾಗಕ್ಕೆ ಅಂತಗ ಎಳೆಗಳ ಪರಿಮುಖವಾಗಿ ಒಯ್ಯಲ್ಪಟ್ಟರೇನೇ ಆ ಇಚ್ಛೆಯು ಸಫಲವಾಗುವದು. ಪ್ರಧಾನ ನರದಲ್ಲಿ ಭಂಗ ಉಂಟಾದ್ದಲ್ಲಿ ಅದರ ಕೆಳಗಿರುವ ಭಾಗಗಳಿಗೂ ಮಿದುಳಿಗೂ ಇರುವ ಸಂಪರ್ಕದ ವ್ಯಾಪಾರಗಳು ನಿಂತುಹೋಗುತ್ತವೆ.

ಪ್ರತಿಕ್ಷೇಪಶಕ್ತಿಯಿಂದುಂಟಾಗುವ ಚೇಷ್ಟೆ Reflex action

9. ಮಿದುಳಿನ ಸಂಪರ್ಕವಿಲ್ಲದೆ ಅಂಗಚೇಷ್ಟೆಗಳು ಉಂಟಾಗುವದುಂಟು. ದೃಷ್ಟಾಂತವಾಗಿ ಅಂಡಿನ ಮೇಲ್ಗಡೆ ಎಲ್ಲಿಯಾದರೂ ಪ್ರಧಾನ ನರದಲ್ಲಿ ಭಂಗ ಉಂಟಾದ ಮನುಷ್ಯನ ಪಾದಗಳ ಅಡಿಯಲ್ಲಿ ಚಕ್ಕಲಗುಳಿಮಾಡಿದರೆ, ಅವನ ಕಾಲುಗಳು ಒಡನೇ ಮೇಲಕ್ಕೆ ಸೆಳೆಯಲ್ಪಡುತ್ತವೆ. ಆದರೆ ಅವನಿಗೆ ಚಕ್ಕಲಗುಳಿಯ ಬೋಧೆಯಾಗುವದಿಲ್ಲ ಮತ್ತು ಸ್ವೇಚ್ಛೆಯಿಂದ ಕಾಲುಗಳನ್ನು ಮೇಲಕ್ಕೆ ಎಳಕೊಳ್ಳುವ ಶಕ್ತಿ ಇರುವದಿಲ್ಲ. ಇದು ಯಾವದರಿಂದ ಎಂದರೆ, ಚಕ್ಕಲಗುಳಿ ಮಾಡಿದರಿಂದ ಉಂಟಾದ ವೇಗಗಳು ನರಗಳ ಮೂಲಕ ಎಳೆಗಳ ಪರಿಮುಖವಾಗಿ ಹೋಗಿ, ಹಿಂಬದಿಯ ಬೇರಿನಿಂದ ಪ್ರಧಾನ ನರಕ್ಕೆ ಸೇರುತ್ತವೆ. ಅಲ್ಲಿಯ ಬೂದಿವರ್ಣದ ವಸ್ತುವಿನ ಪ್ರಭಾವದಿಂದ ಹೊಸ ಚೇಷ್ಟಾಕಾರಿ ವೇಗಗಳು ಉತ್ಪನ್ನವಾಗಿ, ಆ ವೇಗಗಳು ಮುಂಬದಿಯ ಬೇರಿಗಾಗಿ ನರಗಳನ್ನು ಹೊಕ್ಕು, ಕಾಲುಗಳ ಮಾಂಸಖಂಡಗಳಿಗೆ ಒಯ್ಯಲ್ಪಡುತ್ತವೆ. ಅದರಿಂದ ಆ ಮಾಂಸಖಂಡಗಳ ಸಂಕೋಚನ ಉಂಟಾಗುವದಾಗಿರುತ್ತದೆ. ಈ ಅಂಗಚೇಷ್ಟೆಗೆ ಮಿದುಳಿನ ಅಥವಾ ಇಚ್ಛೆಯ (ಮನಸ್ಸಿನ) ಸಹಾಯವಿಲ್ಲ. ಇಂಥಾ ಚೇಷ್ಟೆಗೆ ಪ್ರತಿಕ್ಷೇಪಶಕ್ತಿಯ ಕೆಲಸ (Reflex action) ಎಂತ ಹೇಳುತ್ತಾರೆ. ಈ ಶಕ್ತಿಯ ಪ್ರಭಾವವನ್ನು ಕಪ್ಪೆಯಲ್ಲಿ ಪರೀಕ್ಷಿಸುವದು ಬಹಳ ಸುಲಭ. ಕಪ್ಪೆಯ ಮಿದುಳನ್ನು ನಾಶಮಾಡಿದ ಮೇಲೆ ಅದನ್ನು ತೊಡದೆ ಬಿಟ್ಟರೆ, ಅದು ಯಾವ ಚಲನೆಯೂ ಇಲ್ಲದೆ ಸುಮ್ಮನೆ ಬಿದ್ದಿರುತ್ತದಾದರೂ, ಅದು ಒಣಗಿಹೋಗುವ ವರೆಗೆ ಅದರ ಹೃದಯವು ಬಡಿಯುತ್ತಿರುತ್ತದೆ. ಅದಕ್ಕೆ ಇಂದ್ರಿಯಾರ್ಥಜ್ಞಾನವಾಗಲಿ, ಇಚ್ಛಾಶಕ್ತಿಯಾಗಲಿ ಇರುವದಿಲ್ಲ. ಆದಾಗ್ಯೂ, ಅದರ ಪಾದದ ಒಂದು ಬೆಟ್ಟನ್ನು ಚಿಮುಟಿದರೆ ಕಾಲು ಎಳೆದುಹೋಗುತ್ತದೆ. ಹುಳಿಮಿಶ್ರ (acid) ನೀರಿನಲ್ಲಿ ತೋಯಿಸಲ್ಪಟ್ಟ ಒತ್ತಡಕಾಗದದ ಒಂದು ಚಿಕ್ಕ ತುಂಡನ್ನು ಅಂಥಾ ಕಪ್ಪೆಯ ಕಾಲಿನ ಮೇಲಾಗಲಿ ಮಗ್ಗಲ ಮೇಲಾಗಲಿ ಇಟ್ಟರೆ, ಅದನ್ನು ಒರಸಿ ತೆಗೆಯುವದಕ್ಕೆ ಅದರ ಕಾಲುಗಳು ಉಪಯೋಗಿಸಲ್ಪಡುತ್ತವೆ. ಹಾಗೆ ಒರೆಸುವದಕ್ಕೆ ಅನೇಕ ಮಾಂಸಖಂಡಗಳನ್ನು ಕ್ರಮದಿಂದ ಉಪಯೋಗಿಸುವದು ಅಗತ್ಯವಾದ್ದರಿಂದ, ಬೂದಿಬಣ್ಣದ ವಸ್ತುವಿನಲ್ಲಿ ಹೊಸತಾಗಿ ಉತ್ಪನ್ನವಾಗುವ ಚೇಷ್ಟಾಕಾರಿ ವೇಗಗಳು ಅನೇಕ ನರಗಳ ಮುಖಾಂತರ ಅನೇಕ ಮಾಂಸಖಂಡಗಳಿಗೆ ಸೇರುತ್ತವೆಂತ ತಿಳಿಯಬೇಕು.

ನಮ್ಮ ಅನೇಕ ಚೇಷ್ಟೆಗಳು ಈ ಪ್ರತಿಕ್ಷೇಪದ ಶಕ್ತಿಯ ಪ್ರಭಾವದಿಂದಲೇ ಉಂಟಾಗುವಂಥವು. ತೀವ್ರವಾದ ಬೆಳಕನ್ನು ಕಂಡಕೂಡಲೆ ಕಣ್ಣುಗಳು ಮುಚ್ಚಿಕೊಳ್ಳುವದು, ಬಿಸಿ

ವಸ್ತು ತಗಲಿದ ಕ್ಷಣದಲ್ಲಿ ಕೈಯೆಳೆದುಹೋಗುವದು, ಫಕ್ಕನೆ ಶಬ್ದ ಉಂಟಾದಾಗ ನಾವು ಬೆಚ್ಚಿ ಬೆದರುವದು ಇತ್ಯಾದಿ. ಇಂಥವುಗಳೆಲ್ಲ ಇಚ್ಛೆಯ ಪ್ರಯೋಗವಿಲ್ಲದೆ, ಜ್ಞಾನವಾಹಿ ವೇಗಗಳು ಪ್ರಧಾನ ನರಕ್ಕಾಗಲೀ ಮಿದುಳಿಗಾಗಲೀ ತಗಲಿ, ಅಲ್ಲಿಂದ ಪ್ರತಿಕ್ಷೇಪಶಕ್ತಿಯಿಂದಲೇ ಉತ್ಪನ್ನವಾಗಿ ಹೊರಡುವ ಚೇಷ್ಟಾವಾಹಿ ವೇಗಗಳ ಪರಿಣಾಮವಾಗಿರುತ್ತವೆ. ಈ ಪ್ರತಿಕ್ಷೇಪಶಕ್ತಿಯ ಪ್ರಭಾವದಿಂದ ಇಚ್ಛೆಗೆ ಹೊರಪಟ್ಟ ಉಚ್ಛ್ವಾಸನಿಃಶ್ವಾಸಾದಿ ಕರ್ಮಗಳಲ್ಲಿ ಹೆಚ್ಚು ಕಡಿಮೆಯುಂಟಾಗುತ್ತದೆ.

10. ಪ್ರಧಾನ ನರದ ಬುಡವು ತಲೆಬುರುಡೆಯೊಳಗೆ ಒಂದು ಗಡ್ಡೆಯ ಆಕಾರವಾಗಿ ಇರುತ್ತದೆ. ಅದು ಮೇಲಕ್ಕೆ ಏರಿದ ಹಾಗೆ ಅಗಲವಾಗುತ್ತಾ ಮುಂದಕ್ಕೆ ಮಾಲಿಕೊಂಡು ಇರುತ್ತದೆ. ಇದಕ್ಕೆ ಸ್ಪಾಯ್ನಲ್ ಬಲ್ಬ್ ಅಥವಾ ಮೆಡುಲ್ಲ ಒಬ್ಲೊಂಗೇಟಾ (Spinal bulb or Medulla oblongata), ಅಂದರೆ ಪ್ರಧಾನ ನರದ ಗಡ್ಡೆ, ಎಂತ ಹೆಸರು. ಅದು ಮಿದುಳಿನ ಅತ್ಯಂತ ಕೆಳಭಾಗ ಈ ಗಡ್ಡೆಯ ಮೇಲಿನ ಕೊನೆಯ ಪಕ್ಕಗಳಿಂದ ಹೊರಟು ಹಿಂದಿನ ಭಾಗವನ್ನು ತುಂಬಿ ಕೆಳಭಾಗದಲ್ಲಿ ಎದುರಿಗೆ ಮುಂದರಿಸಿರುವ ಮಿದುಳಿನ ವಿಭಾಗಕ್ಕೆ ಚಿಕ್ಕ ಮಿದುಳು (cerebellum) ಎನ್ನುತ್ತಾರೆ. ಪ್ರಧಾನ ಮಿದುಳು (cerebrum) ಪ್ರಧಾನ ನರಗಡ್ಡೆಯ ಮೇಲಿನ ಭಾಗದಲ್ಲಿಯೂ, ಎದುರಿಗಿರುವ ಕೆಲವು ಭಾಗಗಳ ಮೇಲೆಯೂ ಚಿಕ್ಕ ಮಿದುಳಿನ ಮೇಲೆಯೂ ಹಾಸಿರುತ್ತದೆ. ತಲೆಬುರುಡೆಯೊಳಗಿರುವ ಹೆಚ್ಚಿನ ಅಂಶ ಅದೇ. ಇದರಲ್ಲಿ ಬಲದ್ದು ಎಡದ್ದು, ಎಂಬ ಎರಡು ಅರ್ಧ ಗೋಲಗಳು (cerebral hemispheres) ಇರುತ್ತವೆ. ಈ ಎರಡು ಅರ್ಧಗೋಲಗಳು ಒಂದಕ್ಕೊಂದು ನರ ಎಳೆಗಳಿಂದ ಮಾಡಲ್ಪಟ್ಟ ಮತ್ತು ಚಪ್ಪೆಯಾದ ಹೆಣಿಗೆಯಿಂದ ಜೋಡಿಸಲ್ಪಟ್ಟವಯಲ್ಲದೆ, ಬೇರ ಸಂಬಂಧವಿಲ್ಲ. ಪ್ರಧಾನ ನರಗಡ್ಡೆಯ ಬಿಳೇ ವಸ್ತುವಾದ ನರದ ಎಳೆಗಳ ಕಟ್ಟುಗಳೊಳಗೆ ಕೆಲವು ಆ ಗಡ್ಡೆಯಿಂದ ಚಿಕ್ಕ ಮಿದುಳೊಳಗೆ ಸೇರುತ್ತವೆ, ಮಿಕ್ಕವು ಮೇಲಕ್ಕೂ ಮುಂದಕ್ಕೂ ಹೋಗಿ ಪ್ರಧಾನ ಮಿದುಳಿನ ಎದುರಿನ ಭಾಗಗಳಿಗೂ ಆ ಗಡ್ಡೆಗೂ ಸಂಬಂಧಕಾರಿಯಾಗಿವೆ. ಪ್ರಧಾನ ನರಗಡ್ಡೆಯ ಮೇಲಿನ ಭಾಗದ ಮುಂದುಗಡೆ ಆ ನರದೆಳೆಗಳ ಕಟ್ಟುಗಳು (crura cerebri) ಎರಡು ಕಂಬಗಳ ಹಾಗೆ ಪ್ರಧಾನ ಮಿದುಳಿನ ಅಡಿಯ ಇತ್ತಟ್ಟು ಹೊರಟು, ಪರಸ್ಪರ ದೂರವಾಗುತ್ತಾ ಮುಂದೆ ಹೋಗಿ, ಮಿದುಳಿನ ಅರ್ಧಗೋಲಗಳಿಗೆ ಕೂಡುತ್ತವೆ. ಮುಖ್ಯವಾಗಿ ಇವುಗಳ ಮೂಲಕವೇ ಅರ್ಧಗೋಲಗಳಿಗೂ ಮಿದುಳಿನ ಇತರ ಭಾಗಗಳಿಗೂ ಸಂಪರ್ಕವಿರುವದಾಗಿರುತ್ತದೆ. ಮಿದುಳಿನ ಅರ್ಧಗೋಲಗಳ ಮೇಲಿನ ತಲವು ಸುರುಳಿಗಳಾಗಿ ಭಿನ್ನವಾಗಿದೆ. ಈ ಸುರುಳಿಗಳ ನಡುವೆ ಹೆಚ್ಚುಕಡಿಮೆ ಆಳವುಳ್ಳ ಗೀರುಗಳಿರುತ್ತವೆ. ಪ್ರಧಾನನರದಲ್ಲಿರುವ ಬಿಳೇ ವಸ್ತು ಮತ್ತು ಬೂದಿವರ್ಣದ ವಸ್ತುಗಳ ಹಾಗಿನ ಬಿಳೇ ಮತ್ತು ಬೂದಿವರ್ಣದ ಮತ್ತು ಮೆತ್ತಗಾದ ಪದಾರ್ಥಗಳಿಂದ ಮಿದುಳು ರಚಿಸಲ್ಪಟ್ಟದ್ದಾಗಿರುತ್ತದೆ. ಈ ಪದಾರ್ಥಗಳು ಮಿದುಳಿನ ಬೇರೆ ಬೇರೆ ಸ್ಥಾನಗಳಲ್ಲಿ ಹೆಚ್ಚು ಕಡಿಮೆಯಾಗಿದ್ದರೂ, ಒಂದು ಅರ್ಧಗೋಳದ ಯಾವ ಸ್ಥಾನದಲ್ಲಿ ಯಾವದು ಎಷ್ಟು ಇರುತ್ತದೋ ಇತರ ಅರ್ಧಗೋಳದ ತತ್ಪ್ರತಿಸ್ಥಾನದಲ್ಲಿ ಅದು ಅಷ್ಟೇ ಇರುತ್ತದೆ. ಪ್ರತಿ ಅರ್ಧಗೋಳದ ಹೊರಗಿನ ಆವರಣ ಬೂದಿ ಬಣ್ಣದ ವಸ್ತು ಮತ್ತು ಅದರ ಅಡಿ ಬಿಳೇ ಬಣ್ಣದ ವಸ್ತು ಇರುವದಾಗಿರುತ್ತದೆ. ಬಿಳೇ ವಸ್ತುವಿನಲ್ಲಿ ಮುಖ್ಯವಾಗಿರುವಂಥಾದ್ದು ನರಗಳ ಎಳೆಗಳು. ಈ ಎಳೆಗಳು ಮೇಲಿನ ಬೂದಿ

ಮಿದುಳಿನ ಸಂಸ್ಥಾನ

ಬಣ್ಣದ ವಸ್ತುವಿನಿಂದ ಕೆಳಗೆ ಸುತ್ತಲು ಹೋಗುವದಲ್ಲದೆ, ಅರ್ಧಗೋಲದ ಅಡಿತಲದಲ್ಲಿ ಕಟ್ಟುಗಳಾಗಿ ಕೂಡಿಕೊಂಡು, ಮಿದುಳಿನ ಬೇರೆ ಬೇರೆ ವಿಭಾಗಗಳ ಪರಸ್ಪರ ಸಂಪರ್ಕವನ್ನುಂಟುಮಾಡುತ್ತವೆ.

11. ಶಿರಸ್ಸಿನ ನರಗಳು (ಕ್ರೇನಿಯಲ್ ನರ್ವ್ಸ್, Cranial nerves) ಎಂಬ ಹನ್ನೆರಡು ಜೋಡು ನರಗಳು ಮಿದುಳಿಂದ ಹೊರಡುತ್ತವೆ. ಪ್ರತಿ ಜೋಡಿಯಲ್ಲಿ ಒಂದು ಎಡ ಪಕ್ಕದಿಂದ, ಇನ್ನೊಂದು ಬಲಪಕ್ಕದಿಂದ, ಹೊರಡುವದಾಗಿರುತ್ತದೆ. ಆ ನರಜೋಡಿಗಳೊಳಗೆ ಅತ್ಯಂತ ಕೆಳಗಿನ ಆರು ಪ್ರಧಾನ ನರಗಡ್ಡೆಯಿಂದ, ಅವುಗಳ ಮೇಲಕ್ಕಿರುವ ನಾಲ್ಕು ಆ ಗಡ್ಡೆಯ ಎದುರಿರುವ ಮಿದುಳಿನ ಭಾಗಗಳಿಂದ, ಹೊರಡುವಂಥವು. ಅವುಗಳ ಮೇಲಕ್ಕಿರುವ ಪ್ರಥಮ ಎರಡು (ಜೋಡು) ನರಗಳು ಮಿಕ್ಕ ನರಗಳ ಹಾಗಿನ ನರಗಳಲ್ಲ; ಅವು ಮಿದುಳಿನ ಎಳೆಗಳೇ.

ಶಿರಸ್ಸಿನ ಜೊತೆ ನರಗಳು

1ನೆಯ ಜೋಡು — ಘ್ರಾಣವಹ, ಇದು ಮೂಗಿಗೆ ಹೋಗಿದೆ; ವಾಸನೆಯ ಜ್ಞಾನಕ್ಕೆ ಕಾರಣವಾದದ್ದು, ಪ್ರತಿ ಅರ್ಧಗೋಳದ ಎದುರಿಂದ ಹೊರಡುವಂಥಾದ್ದು.

2ನೆಯ ಜೋಡು — ದರ್ಶನಜ್ಞಾನವಾಹಿ, ಕಣ್ಣುಗಳಿಗೆ ಹೋಗಿದೆ; ದೃಷ್ಟಿಗೆ ಕಾರಣವಾದದ್ದು.

3ನೆಯ, 4ನೆಯ, 6ನೆಯ ಜೋಡುಗಳು – ಕಣ್ಣಿನ ಬೊಂಬೆಗಳನ್ನು ಚಲಿಸತಕ್ಕ ಮಾಂಸಖಂಡಗಳಿಗೆ ಸೇರಿದ ಚೇಷ್ಟಾಕಾರಿನರಗಳು.

5ನೆಯ ಜೋಡಿ ನರ— ಇದು ಬಾಯಿಯ ಮತ್ತು ನಾಲಿಗೆಯ ಜ್ಞಾನವಾಹಿಯಾಗಿಯೂ, ಜಗಿಯುವ ಕೆಲಸಕ್ಕೆ ಕಾರಣವಾದ ಮಾಂಸಖಂಡಗಳಿಗೆ ಚೇಷ್ಟಾಕಾರಿಯಾಗಿಯೂ ಇರುತ್ತದೆ.

7ನೆಯ ಜೋಡಿ ನರ—ಇದು ಮುಖ, ಬಾಯಿ, ತುಟಿಗಳಲ್ಲಿಯ ಮಾಂಸಖಂಡಗಳನ್ನು ಸೇರಿಕೊಂಡು, ಅವುಗಳ ಸಹಾಯದಿಂದ ಮುಖದ ಚರ್ಮದಲ್ಲಿ ಚಲನೆಯನ್ನುಂಟುಮಾಡಿ, ಮನಸ್ಸಿನ ಹರ್ಷದುಃಖಾದಿ ಅವಸ್ಥಾಂತರಗಳನ್ನು ಮುಖವು ಸೂಚಿಸುವಂತೆ ಮಾಡುತ್ತದೆ.

8ನೆಯ ಜೋಡು — ಶ್ರೋತ್ರೇಂದ್ರಿಯದ (ಕಿವಿಯ) ನರ, ಶ್ರವಣಸಾಧಕವಾದದ್ದು.

9ನೆಯ ಜೋಡು — ನಾಲಗೆಯಲ್ಲಿಯೂ, ಬಾಯಿಯ ಹಿಂಭಾಗದಲ್ಲಿಯೂ ವ್ಯಾಪಿಸಿರುವ, 5ನೆಯ ಜೊತೆಯಂತೆ, ಜ್ಞಾನವಾಹಿ ಮತ್ತು ಚೇಷ್ಟಾಕಾರಿ ಎಂಬೆರಡು ಧರ್ಮಗಳುಳ್ಳ ನರ. ಅದರ ಜ್ಞಾನವಾಹಿ ಭಾಗವು ಹೆಚ್ಚಾಗಿ ನಾಲಿಗೆಗೆ ಹೋಗುತ್ತದೆ; ರುಚಿಯನ್ನು ತಿಳಿಸುವದಕ್ಕೆ ಇದು ಮುಖ್ಯವಾದ ನರ. ಅದರ ಚೇಷ್ಟಾಕಾರಿ ಭಾಗವು ಬಾಯಿಯ ಹಿಂಭಾಗದ ಮಾಂಸಖಂಡಗಳ ವ್ಯಾಪಾರಗಳನ್ನು ನಡಿಸುತ್ತದೆ.

10ನೆಯ ಜೋಡು — ಫುಪ್ಫುಸಗಳಿಗೂ, ಅಂದರೆ ಶ್ವಾಸೋಚ್ಛ್ವಾಸಕ್ಕೂ, ಆಮಾಶಯಕ್ಕೂ, ಅಂದರೆ ಆಹಾರಜೀರ್ಣಕ್ಕೂ, ಮುಖ್ಯವಾದ ನರ. ಈ ದೊಡ್ಡ ನರವು ತಲೆಯಿಂದ ಹೊರಟು ಕುತ್ತಿಗೆಗಾಗಿ ಎದೆಗೂ ಹೊಟ್ಟೆಗೂ ಹೋಗುತ್ತದೆ. ಅದರ ಒಂದು ಭಾಗ ಜ್ಞಾನವಾಹಿ, ಉಳಿದ ಭಾಗ ಚೇಷ್ಟಾಕಾರಿ. ಅದರ ಎಗಲುಗಳು (ಶಾಖೆಗಳು) ಕುತ್ತಿಗೆಯ ಶ್ವಾಸನಾಳದ ಭಾಗ (larynx)ಕ್ಕೂ, ಫುಪ್ಫುಸಗಳಿಗೂ, ಹೃದಯಕ್ಕೂ, ಅನ್ನನಾಳಕ್ಕೂ, ಆಮಾಶಯಕ್ಕೂ ಅಂತ್ರಗಳಿಗೂ, ಯಕೃತ್ತಿಗೂ ಹೋಗಿ ಸೇರಿವೆ.

11ನೆಯ ಜತೆ — ಇದು ಚೇಷ್ಟಾ (ಕರ್ಮ)ಕಾರಿ. ಪ್ರಧಾನ ನರದ ಮೇಲಿನ ಭಾಗದಲ್ಲಿ

ಯ ಅನೇಕ ನರಮೂಲಗಳಿಂದ ಹೊರಟು ಮೇಲಕ್ಕೆ ಹೋಗಿ, ಪ್ರಧಾನ ನರಗಡ್ಡೆಯ ಕೆಲವು ನರ ಎಳೆಗಳನ್ನು ಸಹ ತನ್ನಲ್ಲಿ ಸೇರಿಸಿಕೊಂಡು, ಹತ್ತನೆಯ ಜೋಡಿ ನರದೊಂದಿಗೆ ಹೊರಗೆ ಹೋಗುತ್ತದೆ. ಅದರ ಹೆಚ್ಚಿನ ಅಂಶವು ಕುತ್ತಿಗೆಯ ಕೆಲವು ಮಾಂಸಖಂಡಗಳಿಗೆ ಹೋಗುತ್ತದೆ.

12ನೆಯ ಜೋಡು — ನಾಲಿಗೆಯ ಮಾಂಸಖಂಡಗಳ ಚೇಷ್ಟಾಕಾರಿ.

**12.** ಪ್ರಧಾನ ನರಗಡ್ಡೆಯು ಶಿರಸ್ಸಿನ ಅನೇಕ ನರಗಳಿಗೆ ಮೂಲವಾಗಿರುವದಲ್ಲದೆ, ಬೇರೆ ಬಹು ವಿಧದಿಂದ ಮಿದುಳಿನ ಒಂದು ಬಹಳ ಮಹತ್ತ್ವದ ಭಾಗವಾಗಿರುತ್ತದೆ.

ಪ್ರಧಾನ ನರಗಡ್ಡೆಯ ಅಧಿಕಾರ

ಎದೆಯ ಉಚ್ಛ್ವಾಸನಿಃಶ್ವಾಸ ಸಂಬಂಧವಾದ ಚಲನೆಗಳು ಇದನ್ನು ಆಧರಿಸಿಕೊಂಡಿವೆ. ಈ ನರಗಡ್ಡೆಗೆ ಹಿಂಸೆಯುಂಟಾದರೆ, ಶ್ವಾಸವು ನಿಂತು ಮರಣ ಸಂಭವಿಸುವದು. ಹೃದಯದ ಬಡಿತ ಸಹ ಈ ನರಗಡ್ಡೆಯಿಂದ ಹೊರಡುವ ವೇಗಗಳನ್ನು ಹೊಂದಿರುತ್ತದೆ. ನುಂಗುವಿಕೆ, ಜೊಲ್ಲು ಉಂಟಾಗುವಿಕೆ ಮುಂತಾದ ವ್ಯಾಪಾರಗಳು ಪ್ರಧಾನ ನರಗಡ್ಡೆಯ ಬೇರೆ ಕೆಲವು ಭಾಗಗಳ ಅಧಿಕಾರಕ್ಕೊಳಪಟ್ಟಿವೆ. ಮಿದುಳಿನ ಅರ್ಧಗೋಲಗಳು ಮುಂತಾದ ತಲೆಯೊಳಗಿನ ಇತರ ಭಾಗಗಳಿಂದ ಹೊರಡುವ ವೇಗಗಳು ಪ್ರಧಾನ ನರಕ್ಕೂ ಅದರಿಂದ ಹೊರಡುವ ನರಗಳಿಗೂ ಹೋಗುವದಕ್ಕೆ ಈ ನರಗಡ್ಡೆಯೇ ಹಾದಿಯಾಗಿರುತ್ತದೆ ಹಾಗೆಯೇ ಪ್ರಧಾನ ನರದಿಂದಾಗಲಿ, ಅದರಿಂದ ಉತ್ಪನ್ನವಾದ ನರಗಳಿಂದಾಗಲಿ ಹೊರಟ ವೇಗಗಳು ಮಿದುಳಿಗೆ ಹೋಗುವದಕ್ಕೆ ಅದೇ ಮಾರ್ಗ.

ಒಂದು ಬಹಳ ವಿಶೇಷವಾದ ಸಂಗತಿ ಯಾವದೆಂದರೆ ಚೇಷ್ಟಾಕಾರಿ ವೇಗಗಳನ್ನು ಮಿದುಳಿನಿಂದ ಕೆಳಗೆ ಪ್ರಧಾನ ನರಕ್ಕೆ ಪ್ರಧಾನ ನರಗಡ್ಡೆಮೂಲಕವಾಗಿ ಸಾಗಿಸುವ ನರದ ಎಳೆಗಳು ಈ ನರಗಡ್ಡೆಯಲ್ಲಿ ಒಂದು ಪಾರ್ಶ್ವದಿಂದ ಎದುರಿನ ಪಾರ್ಶ್ವಕ್ಕೆ ಒಡನೆ ದಾಟುತ್ತವೆ. ದೃಷ್ಟಾಂತವಾಗಿ, ಮಿದುಳಿನ ಬಲದ ಅರ್ಧಗೋಲದಿಂದ ಚೇಷ್ಟಾಕಾರಿ ವೇಗಗಳನ್ನು ಸಾಗಿಸುವ ನರದ ಎಳೆಗಳು ಅದರ ಅಡಿಯ ಕಂಬದಿಂದ ಕೆಳಗೆ ಪ್ರಧಾನ ನರಗಡ್ಡೆಯ ಬಲ ಭಾಗಕ್ಕೆ ಇಳಿದು, ಆ ಗಡ್ಡೆಯ ಪರಿಮುಖವಾಗಿ ಎಡಪಕ್ಕಕ್ಕೆ ದಾಟಿ, ಪ್ರಧಾನ ನರದ ಎಡ ಪಕ್ಕದ ಬಿಳೇ ವಸ್ತುವಿಗಾಗಿ ಮುಂದೆ ಹೋಗುತ್ತವೆ ಆದದರಿಂದ ಮಿದುಳಿನ ಬಲ ಅರ್ಧಗೋಲದಲ್ಲಿ ರಕ್ತನಾಳ ಒಡದು ಹೋಗುವದು ಮುಂತಾದ ಹಿಂಸೆಗಳುಂಟಾದಾಗ, ಎಡಕ್ಕೈ ಎಡಕಾಲು, ಮುಖದ ಅಥವಾ ಮುಂಡದ ಎಡಭಾಗ, ಈ ಎಡಪಾರ್ಶ್ವದ ಅಂಗಗಳಲ್ಲಿ ಜಡತ್ವ ಉಂಟಾಗುತ್ತದೆ ಹಾಗೆಯೇ ಎಡ ಅರ್ಧಗೋಳದಲ್ಲಿಯುಂಟಾದ ಅಂಥಾ ಹಿಂಸೆಯ ದೆಸೆಯಿಂದ ಬಲಪಾರ್ಶ್ವದ ಅಂಗವಿಭಾಗಗಳಲ್ಲಿ ಜಡತ್ವ ಉಂಟಾಗುತ್ತದೆ. ಇದೇ ಪ್ರಕಾರ ಶರೀರದ ಒಂದು ಪಾರ್ಶ್ವದಲ್ಲಿ (ದೃಷ್ಟಾಂತಕ್ಕೆ ಎಡ) ಇಂದ್ರಿಯ ಇಂದ್ರಿಯಾರ್ಥಗಳ ಸಂಯೋಗದಿಂದ ಉಂಟಾಗುವ ಜ್ಞಾನವಾಹಿವೇಗಗಳು ಆಯಾ ನರಗಳ ಬಿಳೇ ವಸ್ತುವಿನಲ್ಲಿಯ ಎಳೆಗಳಿಂದ ಪ್ರಧಾನನರದ (ಎಡ)ಪಕ್ಕಕ್ಕೆ ಹೋಗಿ, ಕೆಲವು ಅಂಶ ಪ್ರಧಾನನರದಲ್ಲಿಯೇ ಮತ್ತು ಕೆಲವು ಅಂಶ ಪ್ರಧಾನ ನರಗಡ್ಡೆಯಲ್ಲಿ ಇತರ (ಬಲ) ಪಾರ್ಶ್ವಕ್ಕೆ ದಾಟಿ ಎದುರು ಪಾರ್ಶ್ವದ (ಬಲದ) ಅರ್ಧಗೋಳಕ್ಕೆ ಮುಟ್ಟಿ ಅಲ್ಲಿ ಆಯಾ ತಿಳಿವು ಉಂಟಾಗುವದಾಗಿರುತ್ತದೆ. ಆದ್ದರಿಂದ ಮಿದುಳಿನ ಬಲದ ಅರ್ಧಗೋಳಕ್ಕೆ ಕೆಲವು ಹಿಂಸೆಗಳು ಉಂಟಾಗಿದ್ದಾಗ ಶರೀರದ ಎಡಪಕ್ಕದ ಚರ್ಮದಿಂದ ಹೊರಟ ವೇಗಗಳು ಮಿದುಳಿನಲ್ಲಿ ತಿಳುವಳಿಕೆಯನ್ನುಂಟು ಮಾಡಲಾರದವಾಗುತ್ತವೆ. ಮಿದುಳಿನ ಒಂದು ಅರ್ಧಗೋಲದ ಹಿಂಸೆಯಿಂದ ಶರೀರದ ಇತರ

ಪಕ್ಕದಲ್ಲಿ ಘಾತ (ಅಂದರೆ ಚಲನಾಶಕ್ತಿಯ ಹಾನಿ) ಮತ್ತು ಇಂದ್ರಿಯಾರ್ಥ ಜ್ಞಾನದ ನಾಶ, ಉಂಟಾಗುತ್ತವೆ.

13. ಮಿದುಳಿನ ಅರ್ಧಗೋಲಗಳು ಇಂದ್ರಿಯಾರ್ಥಜ್ಞಾನ (ಬೋಧ ಅಥವಾ ಎಚ್ಚರ) ಕ್ಕೂ, ಬುದ್ಧಿಗೂ, ಇಚ್ಛಾಶಕ್ತಿ(ಸಂಕಲ್ಪ)ಗೂ ಅಧಿಷ್ಠಾನ. ಇಡೀ ಮಿದುಳನ್ನು ತೆಗೆದು ಬಿಟ್ಟಾಗಲೂ, ಅರ್ಧಗೋಲಗಳನ್ನು ಮಾತ್ರ ಇತರ ಭಾಗಗಳ ಹಿಂಸೆ ಇಲ್ಲದೆ ತೆಗೆದುಬಿಟ್ಟಾಗಲೂ, ಇಂದ್ರಿಯಾರ್ಥಜ್ಞಾನವಾಗಲಿ, ಸ್ವೇಚ್ಛಾ ಚೇಷ್ಟೆಗಳಾಗಲಿ ಇರುವದಿಲ್ಲ ಇಷ್ಟರ ಮಟ್ಟಿಗೆ ಅವರಡು ಸ್ಥಿತಿಗಳ ಫಲ ಒಂದೇಯಾದರೂ ಬೇರೆ ಭೇದಗಳು ಕಾಣುತ್ತವೆ. ಇಡೀ ಮಿದುಳನ್ನು ಕತ್ತರಿಸಿ ತೆಗೆದ ಸಂಗತಿಯಲ್ಲಿ ಒಂದು ಕಪ್ಪೆಯು ಇರಿಸಲ್ಪಟ್ಟ ಸ್ಥಾನದಲ್ಲಿಯೇ ಅಡ್ಡಬಿದ್ದು ನಿಶ್ಚೇಷ್ಟವಾಗಿ ಇರುತ್ತದೆ, ಶ್ವಾಸವಿರುವದಿಲ್ಲ ಅರ್ಧಗೋಳಗಳನ್ನು ಮಾತ್ರ ತೆಗೆದ ಸಂಗತಿ ಯಲ್ಲಿ ಆ ಕಪ್ಪೆಯು ಸಾಧಾರಣವಾಗಿ ಕಪ್ಪೆಗಳು ಹೇಗೋ ಹಾಗೆ ಕೂತುಕೊಳ್ಳುತ್ತದೆ; ಉಚ್ಛ್ವಾಸನಿಃಶ್ವಾಸಗಳು ಮೊದಲಿನಂತೆಯೇ ನಡೆಯುತ್ತಿರುತ್ತವೆ, ಮೆಲ್ಲಗಿನ ಸ್ಪರ್ಶನಕ್ಕೆ, ಅಥವಾ ನೇತ್ರಸಂಬಂಧವಾದ ನರಗಳು ಕೆಟ್ಟಿರದಿದ್ದರೆ ಬೆಳಕಿನ ಪ್ರಭೆಗೆ, ಅದು ಚಲಿಸುತ್ತದೆ; ಮತ್ತು ಅಂಗಾತವಾಗಿ ಅಥವಾ ಬೇರೆ ಸ್ವಾಭಾವಿಕವಲ್ಲದ ಸ್ಥಿತಿಯಲ್ಲಿ ಇರಿಸಲ್ಪಟ್ಟರೆ, ಚಲನೆ ಯುಂಟಾಗಿ ಅದರ ತನ್ನ ಸ್ವಾಭಾವಿಕವಾದ ಕೂತುಕೊಳ್ಳುವ ಸ್ಥಿತಿಗೆ ಬರುತ್ತದೆ, ಅದನ್ನು ಕೆರೆ ನೀರಿನಲ್ಲಿ ಇರಿಸಿದರ, ಅದು ದಡ ಸಿಕ್ಕುವ ವರೆಗೂ ಈಜಾಡುತ್ತದೆ, ಮತ್ತು ದಡ ಸಿಕ್ಕಿದ ಮೇಲೆ ಪುನಃ ಅದನ್ನು ತೊಡುವ ವರೆಗೆ ಅದು ಸುಮ್ಮನೆ ಕೂತುಕೊಳ್ಳುತ್ತದೆ. ಇದರಿಂದೆಲ್ಲಾ ಗೊತ್ತಾಗುವದೇನಂದರೆ — ಸ್ವೇಚ್ಛಾಚೇಷ್ಟಗಳಿಗೆ ಮಿದುಳಿನ ಅರ್ಧಗೋಲಗಳು ಆವಶ್ಯಕ ವಾದರೂ, ಮೂಲಗನೇಗಗಳು ಅಲ್ಪವಾದರೂ, ಉಂಟಾದರೆ, ಮಿದುಳಿನ ಇತರ ಭಾಗಗಳ ಪ್ರಭಾವದಿಂದಲೇ, ಸ್ವಸ್ಥವಾದ ಪ್ರಾಣಿಯು ಮಾಡಬಹುದಾದ ಚೇಷ್ಟೆಗಳಷ್ಟೇ ಸಂಪೂರ್ಣ ವಾದವುಗಳಂತೆ ಕಾಣುವ ನಾನಾ ವಿಧವಾದ ಚೇಷ್ಟೆಗಳು ಉತ್ಪನ್ನವಾಗಬಹುದು.

ಮಿದುಳಿನ ಅರ್ಧಗೋಲಗಳ ಅಧಿಕಾರ

ಸಕಲ ಇಂದ್ರಿಯಾರ್ಥ ಜ್ಞಾನಕ್ಕೂ ಮಿದುಳು ಮೂಲವಾಗಿದ್ದರೂ, ಅದು (ಮಿದುಳು) ಜಡಸ್ವಭಾವದ್ದು, ಅಂದರೆ ಅದನ್ನು ಮುಟ್ಟಿದರೆ ಅಥವಾ ನೋಯಿಸಿದರೆ, ಅಂಥಾ ಕರ್ಮದ ಜ್ಞಾನ ಉಂಟಾಗುವದಿಲ್ಲ. ಮಿದುಳನ್ನಾಗಲೀ, ಅದರ ಭಾಗಗಳನ್ನಾಗಲೀ ನೋವಿಲ್ಲದೆ ತೆಗೆದುಬಿಡ ಬಹುದು ಒಂದು ನಾಯಿಯ ಮಿದುಳಿನ ಮುಂಭಾಗವನ್ನು ಪೂರ್ಣವಾಗಿ ತೆಗೆದುಬಿಟ್ಟ ನಂತರದಲ್ಲಿಯೂ, ಅದಕ್ಕೆ ಸರಿಯಾದ ಆಹಾರ ಕೊಡುತ್ತಾ ಬಂದರೆ ಅದು ಅನೇಕ ತಿಂಗಳು ಬದುಕಬಹುದು. ಬಾಯಿಯೊಳಗೆ ಹಾಕಲ್ಪಟ್ಟ ಆಹಾರವನ್ನು ಅದು ತಿನ್ನುವದು; ಆದರೆ ಆಹಾರವನ್ನು ಹುಡುಕಲಾರದು. ನೆನಪು ಇರುವದಿಲ್ಲ. ಮಿದುಳಿನ ಹಿಂಭಾಗವನ್ನು ತೆಗೆದು ಬಿಟ್ಟರೆ, ಅದಕ್ಕೆ ನಿಲ್ಲುವದಕ್ಕಾಗಲೀ, ನಡೆಯುವದಕ್ಕಾಗಲೀ ಸಾಧ್ಯವಾಗುವದಿಲ್ಲ; ಅಂಗತ ಇರಿಸಲ್ಪಟ್ಟರೆ ತಿರಿಗಿ ಮೊದಲಿನ ಸ್ಥಾನಕ್ಕೆ ಬರುವಂತೆ ತಾನಾಗಿ ಚಲಿಸಲಾರದು, ಆದರೆ ಕೈ ಕಾಲುಗಳಲ್ಲಿ ಚಲನಾಶಕ್ತಿ ಇರುತ್ತದೆ, ಅದನ್ನು ಅದರ ಕಾಲುಗಳ ಮೇಲೆ ನಿಲ್ಲಿಸಿದರೆ ಅದು ನಡುಗಿ ಬೀಳುತ್ತದಾದರೂ, ನಿಲ್ಲಲಿಕ್ಕೆ ಪ್ರಯತ್ನಿಸುತ್ತದೆ.

14. ಪ್ರಧಾನ ನರದ ಮುಂಭಾಗದಲ್ಲಿ ಇತ್ತಟ್ಟು ತಲೆಯಿಂದ ಬುಡದ ವರೆಗೂ ನರ ಗ್ರಂಥಿಗಳ ಸಾಲು ಇರುತ್ತದೆ. ಈ ಗ್ರಂಥಿಗಳು ನರದ ಎಳೆಗಳಿಂದ ಒಂದಕ್ಕೊಂದು ಸರಪಣಿ

ಯಂತೆ ಪವಣಿಸಲ್ಪಟ್ಟಿವೆ. ಈ ನರಗ್ರಂಥಿ ಸಾಲುಗಳಿಗೆ ಸಹಕಾರಿ ಸರಪಣಿಗಳು (Sympathetic chains) ಎನ್ನುತ್ತಾರೆ. ಪ್ರಧಾನ ನರದಿಂದ ಹೊರಟ ನರಗಳು ಬೆನ್ನೆಲುಬನ್ನು ದಾಟಿದ ಮೇಲೆ ಸಮೀಪದಲ್ಲಿ ಕವಲೊಡೆದು ಒಂದು ಚಿಕ್ಕ ಕವಲು ಆ ಗ್ರಂಥಿಗಳೊಳಗೊಂದಕ್ಕೆ ಸೇರುತ್ತದೆ. ಕುತ್ತಿಗೆಯಿಂದ ಕೆಳಗೆ ಪ್ರತಿಯೊಂದು ನರಕ್ಕೆ ಒಂದು ಗ್ರಂಥಿಯಂತೆ ಗ್ರಂಥಿಗಳು ಇರುತ್ತವೆ. ಪ್ರತಿ ಪಾರ್ಶ್ವದ ಸಹಕಾರಿ ಸರಪಣಿಯಿಂದ ನರಗಳ ಎಳೆಗಳು ಬಹು ಸಂಖ್ಯೆಯಾಗಿ ಹೊರಟು, ಎದೆಯಲ್ಲಿಯೂ ಹೊಟ್ಟೆಯಲ್ಲಿಯೂ ವ್ಯಾಪಕವಾಗಿರುವ ಅಂಗವಿಭಾಗಗಳಿಗೆ ಸೇರುತ್ತವೆ. ಅಲ್ಲಿಂದ ನರಗಳು ಹೊರಟು ಹಿಂದಕ್ಕೆ ಕೆಲವು ಪ್ರಧಾನ ನರದಿಂದ ಹೊರಟ ನರಗಳಿಗೂ, ಕೆಲವು ಮಿದುಳಿನಿಂದ ಹೊರಟ ನರಗಳಿಗೂ ಹೋಗಿ ಸೇರುತ್ತವೆ. ಹೀಗೆ ಪ್ರಧಾನ ನರದಿಂದಲೂ ಮಿದುಳಿನಿಂದಲೂ ಹೊರಟ ನರಗಳು ಎಲ್ಲೆಲ್ಲಾ ಪಸರಿಸಿವೆಯೋ, ಅಲ್ಲಿಯ ಕೈ, ಕಾಲು, ಮುಂಡ ಮುಂತಾದ ಅಂಗವಿಭಾಗಗಳಲ್ಲಿರುವ ರಕ್ತನಾಳಗಳಿಗೆ ಸಹಕಾರಿ ನರಗಳು ಹಂಚಲ್ಪಟ್ಟಿರುತ್ತವೆ. ಒಳಗಿರುವ ಪುಪ್ಪುಸ, ಹೃದಯ, ಯಕೃತ್, ಪ್ಲೀಹ, ಮುಂತಾದ ಅಂಗವಿಭಾಗಗಳ ಮತ್ತು ರಕ್ತನಾಳಗಳ ವ್ಯಾಪಾರಗಳು ಕ್ರಮವಾಗಿ ನಡೆಯುವದಕ್ಕೆ ಸಹಕಾರಿ ನರಗಳ ಪ್ರಸಾರವು ಆವಶ್ಯಕವಾದ್ದು. ಈ ಸಹಕಾರಿ ನರಗಳಲ್ಲಿ ಸಂಚರಿಸುವ ವೇಗಗಳು ನರಮಂಡಲದ ಕೇಂದ್ರದಿಂದ ಹೊರಡುವಂಥವು ಅಲ್ಲದೆ ಸಹಕಾರಿ ನರಗಳಲ್ಲಿಯೇ ಉತ್ಪನ್ನವಾಗುವದಿಲ್ಲ.

ಸಹಕಾರಿ ನರಗಳ ಪ್ರಸಾರ

15. ಮೂಲಗ ವೇಗಗಳು ನರಮಂಡಲದ ಕೇಂದ್ರಭಾಗಕ್ಕೆ ತಲಪಿ, ಅಲ್ಲಿ ವಿಕ್ಷೇಪಶಕ್ತಿಯಿಂದ ಚೇಷ್ಟಾಕಾರಿ ವೇಗಗಳು ಅಥವಾ ಒಸರುವಿಕೆ, ಮುಂತಾದ ಪ್ರವೃತ್ತಿಗೆ ಕಾರಣವಾದ ಇತರ ಅಂತಗ ವೇಗಗಳು ಉತ್ಪನ್ನವಾಗುತ್ತವೆಂತ ಹಿಂದೆ ಹೇಳಲ್ಪಟ್ಟಿತಷ್ಟೆ. ಅಂಥಾ ವಿಕ್ಷೇಪಶಕ್ತಿ ಮೂಲಕವಾದ ಅನೇಕ ಕರ್ಮಗಳು, ಅವುಗಳಿಗೆ ಕಾರಣವಾಗಿ ಯಾವ ಮೂಲಗ ವೇಗಗಳಾದರೂ ಉಂಟಾದದ್ದು ನಮಗೆ ತಿಳಿಯದೇನೇ, ಸಂಭವಿಸುತ್ತವೆ. ಮೂಲಗ ವೇಗಗಳ ದೆಸೆಯಿಂದ ನಮ್ಮಲ್ಲಿ ಯಾವದಾದರೊಂದು ಅನುಭವ ಉಂಟಾಗುವದಕ್ಕೆ ಬೋಧ (ತಿಳಿವು, sensation) ಎನ್ನುತ್ತೇವೆ. ಆಯಾಸ, ಅಸಮಾಧಾನ, ಮುಂತಾದವುಗಳ ಹಾಗಿನ ಕೆಲವು ಅನುಭವಗಳು ನಮ್ಮ ಶರೀರದೊಳಗೇನೇ ಉಂಟಾಗುವವು, ಮತ್ತು ಅವು ನಮ್ಮ ಶರೀರದ ಯಾವ ಭಾಗದಲ್ಲಿ ಉತ್ಪನ್ನವಾಗುವಂಥವು ಎಂತ ವಗೈರೆ ವರ್ಣಿಸಲು ಶಕ್ಯವಾಗುವಷ್ಟು ನಿಶ್ಚಿತವಾಗಿಲ್ಲ. ಬೇರೆ ಹೆಚ್ಚಿನ ಬೋಧೆಗಳು ಹೊರಗಿನ ಹೇತುಗಳಿಂದ ಉತ್ಪನ್ನವಾಗುವಂಥವು ಮತ್ತು ಇಂಥಾದ್ದರ ದೆಸೆಯಿಂದ ಉಂಟಾದ್ದೆಂತ ಒಡನೆ ತಿಳಿಯುವಷ್ಟು ನಿಶ್ಚಿತವಾದವು. ಇಂಥವು ಸ್ಪರ್ಶ, ರುಚಿ, ವಾಸನೆ, ಕೇಳುವಿಕೆ, ದೃಷ್ಟಿ, ಎಂಬ ನಮ್ಮ ಐದು ಇಂದ್ರಿಯಾರ್ಥ ಜ್ಞಾನಗಳು. ಹವೆಯ ಬಿಸಿಯ ತಿಳಿವು ಸಾಧಾರಣವಾದ ಸ್ಪರ್ಶಜ್ಞಾನದಿಂದ ಭಿನ್ನವಾದದ್ದು. ನಾವು 'ನೋವು' ಎನ್ನುವ ಅನುಭವ ವಿಶೇಷವು ಮತ್ತು ಮಾಂಸಖಂಡಗಳಿಗೆ ಸಂಬಂಧಪಟ್ಟ ಬೋಧಗಳೆನ್ನುವವು ಬೇರೆ ವಿಧದವು. ಆಯಾ ಇಂದ್ರಿಯಾಧಿಷ್ಠಾನದ ಮುಖ್ಯ ಭಾಗದಲ್ಲಿರುವ ಜ್ಞಾನವಾಹಿ ನರಗಳ ತುದಿಗಳಿಂದ ಇಂದ್ರಿಯಾರ್ಥ ಸಂಬಂಧವಾದ ವೇಗಗಳು ಪ್ರವೇಶಮಾಡಿ ಆ ನರಗಳ ಪರಿಮುಖವಾಗಿ ಒಳಗೆ ಸಂಚರಿಸುತ್ತವೆ. ಆ ಇಂದ್ರಿಯಾಧಿಷ್ಠಾನದ ಇತರ ಭಾಗಗಳು ಮುಖ್ಯ ಭಾಗವನ್ನೂ ಕಾಪಾಡುತ್ತವೆ, ಅಥವಾ ಆ

ಬೋಧಭೇದಗಳು ಮತ್ತು ಅವುಗಳಿಗೆ ಕಾರಣವಾದ ಅಂಗ ಪ್ರವೃತ್ತಿ

ಇಂದ್ರಿಯಜ್ಞಾನಕ್ಕೆ ಕಾರಣವಾದ ಬಾಹ್ಯೇಂದ್ರಿಯಾರ್ಥಗಳ ಶಕ್ತಿಗಳನ್ನು ಸಂಗ್ರಹಿಸಿ ಆ ಮುಖ್ಯ ಭಾಗಕ್ಕೆ ಒದಗಿಸಿಕೊಡುತ್ತವೆ.

ಸ್ಪರ್ಶಜ್ಞಾನ (touch)

16. ಸ್ಪರ್ಶಜ್ಞಾನಕ್ಕೆ ಸಾಧನಗಳಾದ ಜ್ಞಾನವಾಹಿ ನರಗಳ ತುದಿಗಳು ಎರಡನೆಯ ಚರ್ಮದ ಮೇಲ್ಭಾಗದಲ್ಲಿ ಇರುತ್ತವೆ. ಅವುಗಳ ಕೆಲವು ಬಹು ಸೂಕ್ಷ್ಮವಾದ ಎಳೆಗಳು ಒಂದನೆಯ ಚರ್ಮದ ಅಡಿಭಾಗದಲ್ಲಿ ವ್ಯಾಪಿಸಿರುತ್ತವೆ. ಆದರೆ ಹೊರಗಿನ ಇಂದ್ರಿಯಾರ್ಥಕ್ಕೂ ಆ ನರಗಳಿಗೂ ನಡುವೆ ಒಂದನೆಯ ಚರ್ಮವಾಗಲೀ ಅದರ ಹೊರಗಿನ ಭಾಗವಾಗಲೀ ಅಡ್ಡವಾಗಿ ನಿಂತಿರುವದರಿಂದ, ಇಂದ್ರಿಯಾರ್ಥಗಳಿಗೂ ನರಗಳಿಗೂ ಪ್ರತ್ಯಕ್ಷ ಸಂಸ್ಪರ್ಶವಿಲ್ಲ; ಅದಲ್ಲದೆ ನರಗಳ ಪ್ರತ್ಯಕ್ಷ ಸ್ಪರ್ಶನದಿಂದ ಸಾಧಾರಣವಾದ ಸ್ಪರ್ಶಜ್ಞಾನವು ಉಂಟಾಗುವದಿಲ್ಲ. ಚರ್ಮದ ಮೇಲೆ ಸುಟ್ಟಿಟ್ಟು, ಅದರ ಹೊರಭಾಗವನ್ನು ನಾಶಮಾಡಿದ ಮೇಲೆ ಆ ಸುಟ್ಟ ಸ್ಥಾನವನ್ನು ಮುಟ್ಟಿದಲ್ಲಿ ನೋವು ಎಂಬ ಪ್ರತ್ಯೇಕ ಬೋಧೆಯುಂಟಾಗುತ್ತದಲ್ಲದೆ ಸಾಧಾರಣವಾದ ಸ್ಪರ್ಶಜ್ಞಾನವು ಉತ್ಪನ್ನವಾಗುವದಿಲ್ಲ ಮತ್ತು ಆ ಸ್ಥಾನಕ್ಕೆ ತಗಲಿದ ಪದಾರ್ಥವು ದೊರಗಾಗಿದೆಯೋ ನುಣುಪಾಗಿದೆಯೋ ಎಂಬ ಹಾಗಿನ ವಿವರಗಳನ್ನು ಹೇಳುವದಕ್ಕೆ ಸಾಧ್ಯವಾಗುವದಿಲ್ಲ. ಬೆರಳುಗಳ ತುದಿಗಳಲ್ಲಿಯೂ, ಮುಖದಲ್ಲಿಯೂ, ನಾಲಿಗೆಯ ತುದಿಯಲ್ಲಿಯೂ, ಸ್ಪರ್ಶಜ್ಞಾನಶಕ್ತಿಯು ಅತ್ಯಂತ ಚುರುಕಾಗಿರುತ್ತದೆ, ಇತರ ಸ್ಥಾನಗಳಲ್ಲಿ ಹೊರಗಿನ ಒಂದನೆಯ ಚರ್ಮವು ಹೆಚ್ಚು ದಪ್ಪವಾಗಿರುವದರಿಂದಲೂ, ಜ್ಞಾನವಾಹಿನರಗಳ ತುದಿಗಳು ಕಡಿಮೆಯಾದ್ದರಿಂದಲೂ, ಸ್ಪರ್ಶಜ್ಞಾನಶಕ್ತಿಯು ಅಷ್ಟು ಚುರುಕಾಗಿಲ್ಲ. ಕೈವಾರದ (ಕಂಪಾಸಿನ) ಎರಡು ಒಡ್ಡು ತುದಿಗಳನ್ನು ಗಲ್ಲದ ಮೇಲೆ ಪರಸ್ಪರ ಒಂದು ಅಂಗುಲ ದೂರಕ್ಕೆ ನಿಲ್ಲುವ ಹಾಗೆ ಹಿಡಿದರೂ ಒಂದೇ ಸ್ಪರ್ಶದ ತಿಳಿವಳಿಕೆಯುಂಟಾಗುತ್ತದೆ; ಮತ್ತು ಬೆನ್ನಿನ ಮೇಲೆ ಆ ಕೈವಾರದ ತುದಿಗಳನ್ನು ಪರಸ್ಪರ ಮೂರು ಅಂಗುಲ ದೂರಕ್ಕೆ ಹಿಡಿದರೂ ಬೇರೆ ಬೇರೆ ಎರಡು ಸ್ಥಾನಗಳಲ್ಲಿ ತೊಡುವಿಕೆಯ ಜ್ಞಾನವುಂಟಾಗುವ ಬದಲಿಗೆ, ಒಂದೇ ಸ್ಪರ್ಶವಾದ ಹಾಗೆ ಕಾಣುತ್ತದೆ. ಆದ್ದರಿಂದ ಬೆನ್ನಿನಲ್ಲಿ ಸ್ಪರ್ಶಬೋಧೆಯು ಅತ್ಯಂತ ಮಂದ. ಕೈವಾರದ ತುದಿಗಳು ಒಂದಕ್ಕೊಂದು ಒಂದಂಗುಲದ $\frac{1}{10}$ರಷ್ಟು ಸಮೀಪವಾಗಿದ್ದರೂ, ಕೈಬೆರಳಿನ ತುದಿಯಲ್ಲಿ ಅವುಗಳ ತೊಡುವಿಕೆಯು ಪ್ರತ್ಯೇಕವಾಗಿ ತಿಳಿಯುವದು. ಬಿಸಿ, ತಣುಪು ಎಂಬ ಬೋಧೆಯು ಚರ್ಮದ ಬಿಸಿಯನ್ನಾಧರಿಸಿರುವಂಥಾದ್ದು. ಒಂದು ಕೈಯನ್ನು ಒಳ್ಳೇ ತಣ್ಣಗಾದ ನೀರಿನಲ್ಲಿಟ್ಟು ತಣಿಸಿ, ಇನ್ನೊಂದು ಕೈಯನ್ನು ಬಿಸಿ ನೀರಿನಲ್ಲಿಟ್ಟು ಕಾಯಿಸಿಕೊಂಡು, ಆ ಕೈಗಳನ್ನು ಉಗುರು ಬೆಚ್ಚಗಿನ ನೀರಿನಲ್ಲಿ ಅದ್ದಿದರೆ ಆ ನೀರು ತಣ್ಣಗಾಗಿದ್ದ ಕೈಗೆ ಬಿಸಿಯಾಗಿಯೂ, ಬಿಸಿಯಾಗಿದ್ದ ಕೈಗೆ ತಣ್ಣಗಾಗಿಯೂ ತಗಲುತ್ತದೆ. ನರತುದಿಗಳ ರಚನಾವಿಶೇಷದಿಂದ ಈ ಜ್ಞಾನ ಉಂಟಾಗುವದಾಗಿರುತ್ತದೆ. ಬಿಸಿಯನ್ನಾಗಲೀ, ತಣುಪನ್ನಾಗಲೀ ನರಗಳಿಗೇನೇ ತಗಲಿಸಿದರೆ, ನೋವು ಉಂಟಾಗುತ್ತದಲ್ಲದೆ ಬಿಸಿ ತಣುಪುಗಳ ಬೋಧೆಯುಂಟಾಗುವದಿಲ್ಲ. ಬಿಸಿಯನ್ನು ತಿಳಿಯುವ ಈ ಶಕ್ತಿಯು ಅಂಗೈಗಳಲ್ಲಿಯೂ, (ಸಾಧಾರಣವಾದ ಸ್ಪರ್ಶಜ್ಞಾನಕ್ಕೆ ಅಸದೃಶವಾಗಿ) ವಿಶೇಷವಾಗಿ ಗಲ್ಲಗಳಲ್ಲಿಯೂ ಹೆಚ್ಚು ಚುರುಕಾಗಿರುತ್ತದೆ. ನಮ್ಮ ಕೈಯನ್ನು ಮೇಜಿನ ಮೇಲೆ ಆಧರಿಸಿ, ಅಂಗೈ ಮೇಲೆ ಒಂದು ಭಾರವುಳ್ಳ ವಸ್ತುವನ್ನು ಇಟ್ಟಲ್ಲಿ ಸ್ಪರ್ಶಜ್ಞಾನ ಉಂಟಾಗುವದು ಮಾತ್ರವಲ್ಲದೆ ಭಾರದ ಒತ್ತುವಿಕೆ ನಮಗೆ ತಿಳಿಯುತ್ತದೆ ಮತ್ತು ಆ ವಸ್ತು ಎಷ್ಟು ಭಾರವಾಗಿರಬಹುದೆಂಬ ಅಂದಾಜು

ಮಾಡಲಿಕ್ಕಾಗುತ್ತದೆ. ಮೇಜನ್ನು ಬಿಟ್ಟು ಆ ಕೈಯನ್ನು ಎತ್ತಿಯೂ ತಗ್ಗಿಸಿಯೂ ಪರೀಕ್ಷಿಸಿದರೆ ಅಂಥಾ ಅಂದಾಜನ್ನು ಇನ್ನಷ್ಟು ಚನ್ನಾಗಿ ಮಾಡುವದಕ್ಕೆ ಅನುಕೂಲವಾಗುತ್ತದೆ. ಈ ವಿವೇಚನ ಶಕ್ತಿಯು ಆ ಭಾರವನ್ನು ಆಧರಿಸಿದ ಮಾಂಸಖಂಡಗಳ ಸಂಕೋಚನ ಸಂಬಂಧವಾದ ಬೋಧೆಗಳಿಂದ ನಮಗೆ ಉಂಟಾಗುವದಾಗಿರುತ್ತದೆ.

17. ರುಚಿಯ ತಿಳಿವನ್ನುಂಟುಮಾಡುವ ಅಂಗವು ಬಾಯಿಯ, ಮುಖ್ಯವಾಗಿ ನಾಲಿಗೆ ಮತ್ತು ತಾಲುವಿನ ಕಫಾವರಣ ಆಗಿರುತ್ತದೆ. ಅದರಲ್ಲಿ ಚರ್ಮದಲ್ಲಿದ್ದಂತೆ, ಎರಡು ಪದರುಗಳಿವೆ ಅಡಿಯ ಪದರು ಮೇಲಕ್ಕೇರಿ, ನಾಲಿಗೆಯಲ್ಲಿ ಮೊನೆಗಳು ಉಂಟಾಗಿವೆ. ಈ ಮೊನೆಗಳು ಮೂರು ವಿಧ: 1ನೆಯದು ಸಪೂರ ಮತ್ತು ಉದ್ದ, 2ನೆಯದು ಬುಡದಲ್ಲಿ ಸಪೂರ ತಲೆಯಲ್ಲಿ ಅಗಲವಾಗಿ ಆಳಿಂಬೆ (ನಾಯಿಕೊಡೆ, ಲಾಂಬು)ಯ ಆಕಾರವಾಗಿರುವಂಥಾದ್ದು, 3ನೆಯದು ದೊಡ್ಡದಾಗಿ ಸುತ್ತಲು ಅಗಳುಳ್ಳ ದಿಣ್ಣೆಯ ಹಾಗಿರುವಂಥಾದ್ದು. ಇವುಗಳೊಳಗೆ 1ನೆಯ 2ನೆಯ ವಿಧದವು ನಾಲಿಗೆಯ ಎದುರು ಭಾಗದಲ್ಲಿಯೂ ಪಕ್ಕಗಳಲ್ಲಿಯೂ, ನಿಬಿಡವಾಗಿ ಇರುತ್ತವೆ. 3ನೇ ವಿಧದ ಮೊನೆಗಳು ನಾಲಿಗೆಯ ಹಿಂಭಾಗದಲ್ಲಿ ಎರಡು ಸಾಲುಗಳಾಗಿ ನಿಂತಿವೆ. ಆ ಸಾಲುಗಳು ಹಿಂದುಗಡೆಯಲ್ಲಿ ಒಂದಕ್ಕೊಂದು ತಗಲುವಷ್ಟು ಸಮೀಪ ಇದ್ದು ಮುಂದಕ್ಕೆ ಬರುತ್ತಾ ದೂರದೂರವಾಗಿ ನಿಂತಿವೆ. 3ನೆಯ ವಿಧದ ಮೊನೆಗಳ ಮತ್ತು 2ನೆಯ ವಿಧದವುಗಳಲ್ಲಿ ಅನೇಕ ಮೊನೆಗಳ ಪಾರ್ಶ್ವಗಳಲ್ಲಿ ರುಚಿಯ ಅಂಕುರಗಳೆಂಬ ಕಫಾವರಣದ ಕೋಶಗಳ ಗುಂಪುಗಳು ರಚಿಸಲ್ಪಟ್ಟಿರುತ್ತವೆ. ಅಂಕುರದಲ್ಲಿ ಎಲೆಗಳು ಇದ್ದಂತೆ ಪ್ರತಿ ರುಚಿಯ ಅಂಕುರದಲ್ಲಿ ಅನೇಕ ಕೋಶಗಳಿರುತ್ತವೆ. ಆದ್ದರಿಂದಲೇ ಅದಕ್ಕೆ ರುಚಿಯ ಅಂಕುರ ಎಂಬ ಹೆಸರು. ಶಿರಸ್ಸಿನ 9ನೆಯ ನರದ ಎಳೆಗಳು ಆ ಅಂಕುರಗಳಿಗೆ ಸೇರಿದ್ದು ಕಾಣಬಹುದು. ಶಿರಸ್ಸಿನ 5ನೆಯ ನರದ ಒಂದು ಕೊಂಬೆಗೂ ರುಚಿಯ ಬೋಧೆಯನ್ನುಂಟುಮಾಡುವದರಲ್ಲಿ ಸೇರಿಕೆ ಉಂಟು. ತಾಲುವಿನ ಕಫಾವರಣವು ಬಹಳ ಮಟ್ಟಿಗೆ ನಾಲಿಗೆಯದಕ್ಕೆ ಸಮಾನವಾಗಿದ್ದರೂ, ಅದರಲ್ಲಿರುವ ಮೊನೆಗಳು ಅಷ್ಟು ಎತ್ತರವಾಗಿ ಇಲ್ಲ. ಅವುಗಳಲ್ಲಿಯೂ ರುಚಿಯ ಅಂಕುರಗಳಿರುತ್ತವೆ. ಈ ಅಂಕುರಗಳಲ್ಲಿ ರುಚಿಯ ವಸ್ತು ತಗಲಿದೊಡನೆ ವೇಗಗಳು ಉತ್ಪನ್ನವಾಗಿ, ಆ ವೇಗಗಳು ನರದ ಎಳೆಗಳ ಪರಿಮುಖವಾಗಿ ಮಿದುಳಿಗೆ ಹೋಗಿ ತಲಪಿ, ಆ ರುಚಿಯ ತಿಳಿವು ನಮಗೆ ಉಂಟಾಗುವದಾಗಿರುತ್ತದೆ. ರುಚಿಯ ಅಂಕುರಗಳ ದ್ವಾರವಾಗಿ ನಮಗೆ ತಿಳಿಯುವ ರುಚಿಗಳು ನಾಲ್ಕು: ಸಿಹಿ, ಕಹಿ, ಹುಳಿ ಮತ್ತು ಉಪ್ಪು. ಈ ರುಚಿಗಳೊಂದಿಗೆ ಬೇರೆ ಅರುವುಗಳು ಸೇರಿ, ಕಾರ, ಸುಟಿ ಮುಂತಾದ ಇತರ ರುಚಿಗಳು ಉಂಟಾಗುವದಾಗಿರುತ್ತದೆ. ಸಾಧಾರಣವಾಗಿ ನಾವು 'ರುಚಿ' ಎನ್ನುವದರಲ್ಲಿ ಪದಾರ್ಥಗಳ ಪರಿಮಳ ಸೇರುತ್ತದೆ. ಪರಿಮಳ ತಿಳಿಯುವದಕ್ಕೆ ಮೂಗಿನೊಳಗಿನ ನರಗಳ ಸಹಾಯ ಅಗತ್ಯ. ಆದ್ದರಿಂದ ನೆಗಡಿಯಾದಾಗ ಅಥವಾ ಮೂಗನ್ನು ಒತ್ತಿ ಮುಚ್ಚಿಕೊಂಡರೆ, ರುಚಿ ತಿಳಿಯುವದಿಲ್ಲ ಎಂತ ನಾವು ಹೇಳುವದಾಗಿರುತ್ತದೆ.

ರುಚಿ (taste)

18. ವಾಸನೆಯ ಬೋಧೆಯನ್ನುಂಟುಮಾಡುವ ಅಂಗವಿಭಾಗವು ಮೂಗಿನ ರಂಧ್ರಗಳ ಊರ್ಧ್ವಭಾಗದ ಕಫಾವರಣವಾಗಿರುತ್ತದೆ. ಅದರಲ್ಲಿರುವ ಅಣುಕೋಶ(cell)ಗಳಿಗೆ ಶಿರಸ್ಸಿನ 1ನೆಯ ನರವಾದ ಘ್ರಾಣವಹ ನರದ ಶಾಖೆಗಳ ಎಳೆಗಳು ಬಂದು ಸೇರಿವೆ (Iನೇ ಭಾಗದ II-140 ನೋಡಿ). ವಾಸನೆಯ ಅಣುಗಳು

ವಾಸನೆ (smell)

ಗಾಳಿಯೊಂದಿಗೆ ಮೂಗಿನ ಸೊಳ್ಳೆಗಳಿಂದ ಒಳಗೆ ಹೊಕ್ಕು ಆ ಅಣುಕೋಶಗಳಿಗೆ ತಗಲಿದೊಡನೆ ವೇಗಗಳು ಉಂಟಾಗಿ, ಆಘ್ರಾಣವಹ ನರದ ಪರಿಮುಖವಾಗಿ ಮಿದುಳಿಗೆ ಹೋಗುವದರಿಂದ ನಮಗೆ ವಾಸನೆಯ ತಿಳಿವು ಉಂಟಾಗುವದಾಗಿರುತ್ತದೆ. ನಮ್ಮ ಉಚ್ಛ್ವಾಸನಿಃಶ್ವಾಸಗಳಲ್ಲಿ ಗಾಳಿಯು ಒಳಕ್ಕೂ ಹೊರಕ್ಕೂ ಸಂಚರಿಸುವದು ಮೂಗಿನ ರಂಧ್ರಗಳ ಕೆಳಭಾಗದಲ್ಲಿ ಆಗಿರುತ್ತದೆ. ಈ ಭಾಗದ ಕಫಾವರಣದಲ್ಲಿರುವ ಅಣುಕೋಶಗಳ ರಚನೆಯು ಘ್ರಾಣಕ್ಕೆ ಕಾರಣವಾದ ಮೇಲಿನ ಭಾಗದ ಕಫಾವರಣದ ಅಣುಕೋಶಗಳ ರಚನೆಯಿಂದ ಭಿನ್ನವಾಗಿರುತ್ತದೆ.

19. ಬಹು ಸೂಕ್ಷ್ಮವಾದ ಅನೇಕ ವಿಭಾಗಗಳುಳ್ಳ ಕಣ್ಣುಗಳ ರಚನೆಯು 1ನೆಯ ಭಾಗದ II-139ನೆಯ ಸಂಖ್ಯೆಯಲ್ಲಿ ಸಂಕ್ಷೇಪವಾಗಿ ವರ್ಣಿಸಲ್ಪಟ್ಟಿದೆ. ಮಿದುಳಿನಿಂದ ಹೊರಟ ಎರಡನೆಯ ಜೊತೆನರಗಳು ಕಣ್ಣುಗಳೊಳಗೆ ಪ್ರವೇಶಿಸಿದನಂತರ ಪ್ರತಿ ಕಣ್ಣಿನ ಮೂರನೇ ಎರಡು ಅಂಶಗಳ ಮಟ್ಟಿಗೆ ವಿಸ್ತರಿಸಿಕೊಂಡು, ಸುತ್ತಲು ಒಂದು ಸೂಕ್ಷ್ಮವಾದ ಬಟ್ಟಲಿನ ಆಕಾರವಾಗಿ ನಿಂತಿರುತ್ತವೆ. ಇದಕ್ಕೆ ನರಾವರಣ (Retina), ಎನ್ನುವದು. ಕಣ್ಣಿನ ಹೊರಬಾಗುಳ್ಳ ಶ್ವೇತಮಂಡಲ, ಒಳಗಿನ ದೃಷ್ಟಿಮಣಿ, ಅದಕ್ಕೆ ಹಿಂದಕ್ಕೂ ಮುಂದಕ್ಕೂ ಸ್ಥಾಪಿತವಾದ ದ್ರವಗಳು, ಚಲನೆಯುಳ್ಳ ಸೂಕ್ಷ್ಮವಾದ ಮಾಂಸಖಂಡಗಳ ಮುಂತಾದ ಅವಯವವಿಶೇಷಗಳ ಪ್ರಭಾವದಿಂದ ಹೊರಗಿನ ಬೆಳಕಿನ ಗತಿಯು ಕ್ರಮಪಟ್ಟು ನರಾವರಣದ ಮೇಲೆ ಹೊರಗಿನ ವಸ್ತುಗಳ ಪ್ರತಿಬಿಂಬಗಳು ಬೀಳುವದರಿಂದ ಅಲ್ಲಿಯ ನರಎಳೆಗಳಲ್ಲಿ ಉಂಟಾಗುವ ವೇಗಗಳು ಆ ಶಿರಸ್ಸಿನ ಎರಡನೆಯ ನರಗಳ ಪರಿಮುಖವಾಗಿ ಮಿದುಳಿಗೆ ಹೋಗಿ ಮುಟ್ಟುವದರಿಂದ ನಮಗೆ ಆ ವಸ್ತುಗಳು ಕಾಣುವದಾಗಿರುತ್ತದೆ.

ದೃಷ್ಟಿ (sight).

ಆ ಪ್ರತಿಬಿಂಬಗಳು ನರಾವರಣದಲ್ಲಿಯ ತಕ್ಕ ಸ್ಥಾನದಲ್ಲಿ ಬೀಳುವದಕ್ಕೆ ಬೆಳಕಿನ ಗತಿಯನ್ನು ಕಣ್ಣುಗಳೊಳಗೆ ಬೇಕಾದ ಹಾಗೆ ತಿರುಗಿಸುವದು ಶಿರಸ್ಸಿನ ಮೂರನೆ, ನಾಲ್ಕನೆ ಮತ್ತು ಆರನೆ ಜೊತೆಗಳಾದ ಚೇಷ್ಟಾಕಾರಿ ನರಗಳ ಸಹಾಯದಿಂದಾಗಿರುತ್ತದೆ. ಹಾಗೆ ಬೆಳಕಿನ ಗತಿಯನ್ನು ಕಣ್ಣುಗಳೊಳಗೆ ಕ್ರಮಪಡಿಸುವ ಶಕ್ತಿಯು ವೃದ್ಧರಲ್ಲಿ ಕಡಿಮೆಯಾಗುವ ದೆಸೆಯಿಂದ ಅವರಿಗೆ ಸಮೀಪದಲ್ಲಿರುವ ವಸ್ತುಗಳು ಸ್ಪಷ್ಟವಾಗಿ ಕಾಣುವದಿಲ್ಲ. ಪ್ರಕೋಪವನ್ನುಂಟುಮಾಡುವ ಸ್ವಭಾವದ ಪದಾರ್ಥ (irritation) ದ ದೆಸೆಯಿಂದ ಕಣ್ಣುಗಳು ಮುಚ್ಚಿಕೊಳ್ಳುವದಕ್ಕೆ ಬೇಕಾದ ಜ್ಞಾನವಾಹಿ ವೇಗಗಳು ಶಿರಸ್ಸಿನ ಐದನೆಯ ಜೊತೆನರದ ಪರಿಮುಖವಾಗಿಯೂ, ಚೇಷ್ಟಾಕಾರಿ ವೇಗಗಳು ಶಿರಸ್ಸಿನ ಏಳನೆಯ ಜೊತೆನರದ ಪರಿಮುಖವಾಗಿಯೂ ಸಂಚರಿಸುವದಾಗಿರುತ್ತದೆ.

20. ಕಿವಿಗಳ ರಚನೆಯೂ, ನಮಗೆ ಶಬ್ದಜ್ಞಾನ ಉಂಟಾಗುವ ವಿಧವೂ ಒಂದನೆಯ ಭಾಗದ II-141ನೆಯ ಸಂಖ್ಯೆಯಲ್ಲಿ ವರ್ಣಿಸಲ್ಪಟ್ಟಿವೆ. ಯಾವದೊಂದು ವಸ್ತುವಾಗಲಿ, ಅದರಲ್ಲಿಯ ಕೆಲವು ಕಣಗಳಾಗಲಿ ಅಲಗಾಡುವದರಿಂದ ಆ ವಸ್ತುವಿನ ಸುತ್ತಲಿನ ಗಾಳಿಯಲ್ಲಿ ತೆರೆಗಳು ಉಂಟಾಗುತ್ತವೆ. ಬೆಳಕಿನ ತೆರೆಗಳು ದರ್ಶನಜ್ಞಾನವಹ ನರಗಳಿಗೆ ಸಂಬಂಧಪಟ್ಟ ಅಣುಕೋಶ ವಿಶೇಷಗಳಿಗೆ ತಗಲಿ ನಮಗೆ ದರ್ಶನಜ್ಞಾನ ಹೇಗೆ ಉಂಟಾಗುತ್ತದೋ, ಹಾಗೆ ಶಬ್ದದ ತೆರೆಗಳು ಶ್ರೋತ್ರೇಂದ್ರಿಯನರ(ಶಿರಸ್ಸಿನ ಎಂಟನೆಯ ಜೊತೆನರ)ಕ್ಕೆ ಸಂಬಂಧಪಟ್ಟ ಕೆಲವು ಅಣುಕೋಶ ವಿಶೇಷಗಳಿಗೆ

ಶ್ರುತಿ (Hearing).

ತಗಲಿ ನಮಗೆ ಶಬ್ದಜ್ಞಾನ ಸಂಭವಿಸುವದಾಗಿರುತ್ತದೆ. ಆ ತೆರೆಗಳಲ್ಲಿ ಸಾಕಷ್ಟು ತೀವ್ರತೆಯೂ ಬಹುತ್ವ(ಸಂಖ್ಯಾಪರಿಮಾಣ)ವೂ ಇಲ್ಲದಿದ್ದಲ್ಲಿ ಆ ಶಬ್ದವು ನಮಗೆ ಕೇಳಿಸದು.

### (*b*) ನರಮಂಡಲದ ಮತ್ತು ಅದರ ಅಧಿಕಾರದ ವಿಷಯದಲ್ಲಿ ಆಯುರ್ವೇದ

ಇಂದ್ರಿಯಜ್ಞಾನಕ್ಕೆ ಮನಸ್ಸಿನ ಆವಶ್ಯಕತೆ

**21.** ನರಮಂಡಲದ ಮೇಲಿನ ವರ್ಣನದಿಂದ ಅದು ನಮ್ಮ ಶರೀರದಲ್ಲಿ ಸರ್ವ ಬಾಹ್ಯಾಭ್ಯಂತರ ಅಂಗವಿಶೇಷಗಳು ತಮ್ಮ ತಮ್ಮ ಐಚ್ಛಿಕಾನೈಚ್ಛಿಕ ಕರ್ಮಗಳನ್ನು ನಡಿಸುವದಕ್ಕೂ, ನಮ್ಮ ಪ್ರಾಪಂಚಿಕ ಜ್ಞಾನಕ್ಕೂ, ಸುಖದುಃಖಾದಿ ಅನುಭವಗಳಿಗೂ, ಅತ್ಯಾವಶ್ಯಕವೆಂತ ತಿಳಿದುಬರುತ್ತದೆ ಆದರೆ ಮನಸ್ಸು ಬೇರೆ ಕಡೆಗೆ ಹೋಗಿದ್ದರೆ, ಅಥವಾ ಉದಾಸೀನವಾಗಿದ್ದರೆ, ಇಂದ್ರಿಯ-ಇಂದ್ರಿಯಾರ್ಥಗಳ ಸಂಗಮದ ಬೋಧಯು ನಮಗುಂಟಾಗುವದಿಲ್ಲವೆಂಬದನ್ನು ನೆನಪಿನಲ್ಲಿಟ್ಟುಕೊಂಡರೆ, ಚರಕನ "ಮನಃಪುರಃಸರಾಣೀಂದ್ರಿಯಾಣ್ಯರ್ಥಗ್ರಹಣ ಸಮರ್ಥಾನಿ ಭವನ್ತಿ" (ಪು. 41), (ಅಂದರೆ, ಮನಸ್ಸಿನ ನಾಯಕತ್ವದಿಂದ ಇಂದ್ರಿಯಗಳು ತಮ್ಮ ಅರ್ಥಗಳನ್ನು ಗ್ರಹಿಸುವದಕ್ಕೆ ಸಮರ್ಥವಾಗುತ್ತವೆ.) ಎಂಬ ವಚನದಲ್ಲಿ ಅಡಗಿರುವ ವಿಚಾರಸೂಕ್ಷ್ಮತೆಯು ಯಾರಿಗಾದರೂ ಹೊಳೆಯದಿರಲಾರದು

ಇಂದ್ರಿಯಜ್ಞಾನಭೇದಗಳಿಗೆ ಕಾರಣ

**22.** ಹಾಗೆಯೇ ಬೇರೆ ಬೇರೆ ಇಂದ್ರಿಯಗಳಿಂದ ಉಂಟಾಗುವ ಬೇರೆ ಬೇರೆ ಬೋಧಗಳಿಗೂ ಚೇಷ್ಟೆಗಳಿಗೂ ಕಾರಣವೆಂತ ಹೇಳಬಹುದಾದ ಭೇದಗಳು ನರಗಳಲ್ಲಿದ್ದ ಹಾಗೆ ಕಂಡುಬರಲಿಲ್ಲವಾದ್ದರಿಂದ ಚರಕಾಚಾರ್ಯನು – "ಪಂಚೇಂದ್ರಿಯಬುದ್ಧಯಶ್ಚಕ್ಷುರ್ಬುದ್ಧ್ಯಾದಿಕಾಃ (ಸ್ತ್ರಾಃ) ಪುನರಿಂದ್ರಿಯೇಂದ್ರಿಯಾರ್ಥಸ್ವ(ಸ)ತ್ವಾತ್ಮಸನ್ನಿಕರ್ಷಜಾಃ। ಕ್ಷಣಿಕಾ ನಿಶ್ಚಯಾತ್ಮಿಕಾಶ್ಚ"। (ಪು. 41) ಎಂತ ಹೇಳಿದ್ದಾನೆ. ಅದರ ಅರ್ಥವೇನೆಂದರೆ, ದೃಷ್ಟಿಯ ಬೋಧ, ಶ್ರವಣದ ಬೋಧ ಮುಂತಾದ ಇಂದ್ರಿಯಜನ್ಯ ಬುದ್ಧಿಗಳು ಐದು ಇವೆ. ಇಂದ್ರಿಯಗಳು, ಇಂದ್ರಿಯಗಳ (ರೂಪ ಶಬ್ದ ಮುಂತಾದ) ಅರ್ಥಗಳು, ಮನಸ್ಸು ಮತ್ತು ಆತ್ಮ, ಇವುಗಳ ಸಂಗಮದಿಂದ ಆ ಪಂಚಬುದ್ಧಿಗಳು ಉಂಟಾಗುವಂಥಾದ್ದು. ಬುದ್ಧಿಗಳು ಕ್ಷಣಿಕಾ, (ಬೇಗನೇ ನಾಶವಾಗುವಂಥವು, ಅಂದರೆ ಅಂಥಾ ಸನ್ನಿಕರ್ಷಗಳು ಕ್ಷಣಮಾತ್ರ ಇರುವಂಥವು) ಮತ್ತು ನಿಶ್ಚಯಾತ್ಮಿಕಾ, (ಬೋಧೆಯು ದೃಢವಾಗಿ ತನ್ನಲ್ಲಿ ನಿಂತು ಮುಂದೆ ಅದೇ ಇಂದ್ರಿಯದಿಂದ ಅದೇ ಬೋಧೆಯುಂಟಾದಾಗ ಹಿಂದಿನದಕ್ಕೆ ಅದು ಸಮವೆಂತಲೂ, ಬೇರೆಯಾದಾಗ್ಗೆ ಬೇರೆ ಎಂತಲೂ ನಿರ್ದೇಶಿಸುವಷ್ಟು ನಿಶ್ಚಯವನ್ನುಂಟುಮಾಡುವಂಥವು) ಎಂತ ಎರಡು ವಿಧವಾದವು. ಪಂಚೇಂದ್ರಿಯಗಳ ಭೇದಕ್ಕೆ ಕಾರಣವಾಗಿ ಇನ್ನೊಂದು ವಿಶೇಷ ಹೇಳಲ್ಪಟ್ಟಿದೆ. ಪ್ರತಿ ಇಂದ್ರಿಯವು ಪಂಚಮಹಾಭೂತಗಳ ರೂಪಾಂತರಗಳ ಸಮುದಾಯವಾಗಿದ್ದರೂ, ದೃಷ್ಟಿಯಲ್ಲಿ ತೇಜಸ್ಸು, ಕಿವಿಯಲ್ಲಿ ಆಕಾಶ, ಘ್ರಾಣದಲ್ಲಿ ಭೂಮಿ, ನಾಲಿಗೆಯಲ್ಲಿ ನೀರು, ಸ್ಪರ್ಶನೇಂದ್ರಿಯದಲ್ಲಿ ವಾಯು, ವಿಶೇಷ ಎಂತ ತಿಳಿದುಬರುತ್ತದೆ; ಮತ್ತು ಯಾವ ಇಂದ್ರಿಯದಲ್ಲಿ ಯಾವ ಮಹಾಭೂತವು ವಿಶೇಷವೋ ಆ ಇಂದ್ರಿಯವು ಆ ಮಹಾಭೂತ ಅಧಿಕವಾಗಿರುವ ಇಂದ್ರಿಯಾರ್ಥವನ್ನೇ ಅನುಗ್ರಹಿಸುವ ಶಕ್ತಿಯೂ ಸ್ವಭಾವವೂ ಇರುವಂಥಾದ್ದಾಗಿರುತ್ತದೆ. ಮನಸ್ಸಿನ ಅರ್ಥವಾದ ಧರ್ಮಾರ್ಥಕಾಮಮೋಕ್ಷಗಳೆಂಬ ಚಿಂತ್ಯಗಳು, ಇಂದ್ರಿಯದ ಐದು ಅರ್ಥ

ಗಳು, ಸಂಕಲ್ಪಗಳು, ಇವುಗಳ ವಿಷಯದಲ್ಲಿ ಒಬ್ಬನಲ್ಲಿಯೆ ವ್ಯಭಿಚಾರ ಕಾಣುವದರಿಂದ, ಅಂದರೆ ಅವು ಒಮ್ಮೆ ಒಂದು ಮಾರ್ಗವಾಗಿ, ಒಮ್ಮೆ ಮತ್ತೊಂದು ಮಾರ್ಗವಾಗಿ ವರ್ತಿಸುವದರಿಂದ, ಮತ್ತು ಒಬ್ಬನಲ್ಲಿಯೇ ಒಮ್ಮೆ ಸತ್ವಗುಣ, ಒಮ್ಮೆ ರಜೋಗುಣ, ಒಮ್ಮೆ ತಮೋಗುಣ, ಹೀಗೆ ಬೇರೆ ಬೇರೆ ಗುಣಗಳು ವ್ಯಕ್ತವಾಗುವದರಿಂದ, ಪ್ರತಿಯೊಬ್ಬನಲ್ಲಿ ಅನೇಕ ಮನಸ್ಸುಗಳು ಇದ್ದ ಹಾಗೆ ಕಂಡರೂ, ಮನಸ್ಸು ಒಂದೇ ಆಗಿರುತ್ತದೆ. ಯಾಕೆಂದರೆ ಅನೇಕವಾಗಿದ್ದರೆ ಮನಸ್ಸಿನ ಮತ್ತು ಇಂದ್ರಿಯಗಳ ಅನೇಕವಾದ ಅರ್ಥಗಳಲ್ಲಿಯೂ, ಅನೇಕ ಸಂಕಲ್ಪಗಳಲ್ಲಿಯೂ, ಅನೇಕ ಗುಣಗಳಲ್ಲಿಯೂ, ಒಂದೇ ಕಾಲದಲ್ಲಿ ಮನಸ್ಸನ್ನು ವ್ಯಾಪಿಸುವ ಶಕ್ತಿಯು ಮನುಷ್ಯನಿಗೆ ಇರಬೇಕಿತ್ತು. ಹಾಗ ಇಲ್ಲ. ಹಾಗೆಯೇ ಆತ್ಮವೂ ಒಂದೇ.

ಇಷ್ಟೆಲ್ಲ ಸೂಕ್ಷ್ಮಶೋಧನಮಾಡಿದ ಆಯುರ್ವೇದ ಶಾಸ್ತ್ರಕಾರರಿಗೆ ನರಮಂಡಲದ ಪರಿಚಿತಿಯಿರಲಿಲ್ಲವೇ? ನರಮಂಡಲದ ಅಧಿಕಾರಮೆಂತ ಪಾಶ್ಚಾತ್ಯ ಪಂಡಿತರು ಗೊತ್ತುಮಾಡಿರುವ ಜೀವಂತ ಮನುಷ್ಯನ ಪ್ರಧಾನಲಕ್ಷಣವಾದ ಚೇಷ್ಟೆಗಳ ಪ್ರವೃತ್ತಿಗೆ ಸಾಧನವಾಗಿ ಆಯುರ್ವೇದಕಾರರು ಯಾವ ಅವಯವವನ್ನು ಹೇಳಿದ್ದಾರೆ? ಎಂಬವು ಸಹಜವಾಗಿ ಹುಟ್ಟತಕ್ಕ ಪ್ರಶ್ನೆಗಳು.

23. ಚರಕ ಸಂಹಿತೆಯು ಕೋಪಗೊಳ್ಳದ ವಾಯುವು ಶರೀರದ ಯಂತ್ರವನ್ನು ಹಿಡಿದುಕೊಂಡವನಾಗಿರುತ್ತಾನೆ, ಪ್ರಾಣ-ಉದಾನ-ಸಮಾನ-ವ್ಯಾನ-ಅಪಾನ ರೂಪಗಳಿಂದ ವಿವಿಧವಾದ ಚೇಷ್ಟೆಗಳನ್ನು ಪ್ರವರ್ತಿಸುತ್ತಾನೆ, ಮನಸ್ಸಿಗೆ ನಿಯಾಮಕನೂ, ನಾಯಕನೂ ಆಗಿರುತ್ತಾನೆ, ಸರ್ವೇಂದ್ರಿಯಗಳಿಂದ ತಮ್ಮ ತಮ್ಮ ಕೆಲಸ ಮಾಡಿಸುತ್ತಾನೆ, ಇಂದ್ರಿಯಾರ್ಥಗಳನ್ನು ಆಯಾ ಇಂದ್ರಿಯಗಳಿಗೆ ಒದಗಿಸಿಕೊಡುವಂಥವ, ಶರೀರದ ಸರ್ವ ಧಾತುಗಳನ್ನು ಸಂಗ್ರಹಿಸುವವ, ಶರೀರವನ್ನು ಜೋಡಿಸುವವ, ಮಾತನ್ನು ಹೊರಡಿಸುವವ, ಸ್ಪರ್ಶ-ಶಬ್ದಗಳಿಗೆ ಕಾರಣ, ಕಿವಿಗೂ ಸ್ಪರ್ಶನಕ್ಕೂ ಮೂಲ, ಹರ್ಷಕ್ಕೂ, ಉತ್ಸಾಹಕ್ಕೂ ಯೋನಿ (ತಾಯಿ), ಅಗ್ನಿಯನ್ನು ಉರಿಸುವವ, ದೋಷಗಳನ್ನು ಒಣಗಿಸುವವ; ಮಲಗಳನ್ನು ಹೊರಗೆ ಹಾಕುವವ. ಅಣುರೂಪವಾದ ಮತ್ತು ತೋರವಾದ ಸ್ರೋತಸ್ಸುಗಳನ್ನು ಬಿಂಗಡಿಸುವವ, ಗರ್ಭಗಳ ಆಕಾರಗಳಿಗೆ ಕರ್ತೃ ಮತ್ತು (ಆಯುಸ್ಸಿಗೆ ಅನುಸಾರವಾಗಿ) ಒದುಕುವದಕ್ಕೆ ಸಾಧನ ಆಗಿರುತ್ತಾನೆ ಎಂತ ಹೇಳುತ್ತದೆ. ಕೋಪಗೊಂಡ ವಾಯುವು ಬಲ, ವರ್ಣ, ಸುಖ, ಆಯುಷ್ಯಗಳನ್ನೂ, ಸರ್ವೇಂದ್ರಿಯಗಳನ್ನೂ ನಾಶಮಾಡುತ್ತಾನೆ. ಮನಸ್ಸನ್ನು ತಿರಿಗಿಸುತ್ತಾನೆ. ಭಯ, ಶೋಕ, ಭ್ರಮೆ, ದೈನ್ಯ, ಅತಿಹರಟೆ ಇವುಗಳನ್ನುಂಟುಮಾಡುತ್ತಾನೆ; ಮತ್ತು ಪ್ರಾಣಗಳನ್ನು (ಉಚ್ಛ್ವಾಸನಿಃಶ್ವಾಸಾದಿಗಳನ್ನು) ತಡೆಯುತ್ತಾನೆ ಎಂತಲೂ ಅಲ್ಲಿಯೇ ಹೇಳಲ್ಪಟ್ಟಿದೆ (ಪು. 65). ಸುಶ್ರುತನು ಸಹ ದೋಷ, ಧಾತು, ಅಗ್ನಿಗಳ ಸಮತ್ವವನ್ನೂ, ಶಬ್ದಾದಿ ವಿಷಯಗಳಲ್ಲಿ ಸರಿಯಾದ ಪ್ರಾಪ್ತಿಯನ್ನೂ, ಕ್ರಿಯೆಗಳ ಕ್ರಮವಾದ ಪ್ರವೃತ್ತಿಯನ್ನೂ, ಕೋಪಗೊಳ್ಳದ ವಾಯುವು ನಡಿಸುತ್ತಾನೆಂತ ಹೇಳಿರುತ್ತಾನೆ (1ನೆಯ ಭಾಗದV-6). ಇದಲ್ಲದೆ ಚರಕನ ತ್ರಿಮರ್ಮೀಯ ಸಿದ್ಧಿಸ್ಥಾನದಲ್ಲಿ ಇಂದ್ರಿಯಗಳೂ, ಇಂದ್ರಿಯಗಳ ಪ್ರಾಣವಾಹಿ ಸ್ರೋತಸ್ಸುಗಳೂ, ತಲೆಯಲ್ಲಿ ಸೂರ್ಯನನ್ನು ಕಿರಣಗಳು ಹೇಗೋ ಹಾಗೆ (ಮಿದುಳನ್ನು) ಆಶ್ರಯಿಸಿಕೊಂಡಿರುತ್ತವೆ ಎಂತ ನಿರ್ದಿಷ್ಟವಾಗಿದೆ (1ನೆಯ ಭಾಗದ II-13). ಪಾಶ್ಚಾತ್ಯರ ವರ್ಣನ ಪ್ರಕಾರ ಮೂಲಗ ನರಗಳಲ್ಲಿ ಜ್ಞಾನವಾಹಿ ವೇಗಗಳು ಮತ್ತು ಅಂತಗ ನರಗಳಲ್ಲಿ ಚೇಷ್ಟಾಕಾರಿ ವೇಗಗಳು

ನರಗಳಲ್ಲಿಯ ವೇಗಗಳೇ ವಾಯು

ಸಂಚರಿಸುತ್ತವೆ ಎಂದರೆ ವಾಯುವು ಹಾಗೆ ಸಂಚರಿಸುತ್ತದೆ ಎಂತಲೂ, ವೇಗಗಳೆಂಬದು ವಾಯುವಿನ ವೇಗಗಳೆಂತಲೂ, ನಮ್ಮ ಪೂರ್ವಿಕರು ತಿಳಿದಿದ್ದರೆಂತ ಭಾವಿಸಿದರೆ ಮೇಲೆ ಬರೆದ ಚರಕ ಸುಶ್ರುತರ ವಾಕ್ಯಗಳು ಪಾಶ್ಚಾತ್ಯರ ಶೋಧನಕ್ಕೆ ಅನುಗುಣವಾದ ಅರ್ಥವನ್ನೇ ಹೇಳುತ್ತವೆಂತ ಸ್ಪಷ್ಟವಾಗುವದು, ಮತ್ತು ಇಂದ್ರಿಯಗಳ ಪ್ರಾಣವಾಹಿ ಸ್ರೋತಸ್ಸುಗಳಿಗೆ ಮಿದುಳು ಆಶ್ರಯಸ್ಥಾನವೆಂತ ಚರಕ ಹೇಳಿದ್ದರಿಂದ, ಅಂಥಾ ವಾಯುಗಳು (ವೇಗಗಳು) ಸಂಚರಿಸುವದಕ್ಕೆ ಸ್ರೋತಸ್ಸುಗಳು (ನರಗಳು) ಇರುತ್ತವೆಂತಲೂ, ಅಂಥ ಸ್ರೋತಸ್ಸು(ನರ)ಗಳಿಗೆ ಮಿದುಳು ಆಶ್ರಯಸ್ಥಾನವೆಂತಲೂ ಅವರು ತಿಳಿದಿದ್ದರೆಂತ ಸಹ ಕಾಣುತ್ತದೆ.

ನರಮಂಡಲವನ್ನು ಪ್ರತ್ಯೇಕವಾಗಿ ವರ್ಣಿಸದಿರುವದಕ್ಕೆ ಕಾರಣ

24. ಚರಕಾಚಾರ್ಯನು ಮನುಷ್ಯನಲ್ಲಿ ಆಕಾರವುಳ್ಳ ಪದಾರ್ಥವಿಶೇಷಗಳು (ಮೂರ್ತಿಮನ್ತೋ ಭಾವವಿಶೇಷಾಃ) ಎಷ್ಟು ಇರುತ್ತವೊ ಅಷ್ಟು ಸ್ರೋತಸ್ಸುಗಳ ಪ್ರಕಾರವಿಶೇಷಗಳು ಇವೆ ಎಂತ ಹೇಳಿ, ಸ್ರೋತಸ್ಸು, ಶಿರೆ, ಧಮನೀ, ರಸವಾಹಿ, ನಾಡಿ, ಪಂಥಾ, ಮಾರ್ಗ, ಶರೀರಚ್ಛಿದ್ರ (ಒಟ್ಟೆ), ಸಂವೃತಸ್ಥಾನ, ಅಸಂವೃತಸ್ಥಾನ, ಆಶಯ, ಆಲಯ, ಮತ್ತು ನಿಕೇತ, ಎಂಬವು ಶರೀರದಲ್ಲಿಯ ಧಾತುಗಳ ದೃಶ್ಯಾದೃಶ್ಯವಾದ ಎಡೆಗಳ ಹೆಸರುಗಳು ಎಂತ ಬರೆದುಬಿಟ್ಟಿದ್ದಾನೆ ಅದಲ್ಲದೆ ಪ್ರಾಣ, ನೀರು, ಅನ್ನರಸ, ರಕ್ತ ಮಾಂಸ, ಮೇದಸ್ಸು, ಎಲುಬು, ಮಜ್ಜೆ, ಶುಕ್ರ, ಮೂತ್ರ, ಮಲ ಮತ್ತು ಬೆವರು, ಇವುಗಳಿಗೆ ಸಂಬಂಧಪಟ್ಟ ಸ್ರೋತಸ್ಸುಗಳನ್ನು ಮಾತ್ರ ವರ್ಣಿಸುತ್ತೇವೆ, ಇಷ್ಟೇ ವರ್ಣನ ಮಾಡಿದರಿಂದ ಬುದ್ಧಿವಂತರಿಗೆ ವರ್ಣಿಸಲ್ಪಡದ ಬಹುವಾದ ಸ್ರೋತಸ್ಸುಗಳ ಜ್ಞಾನ ಉಂಟಾದೀತು, ಮತ್ತು ವಾತ-ಪಿತ್ತ-ಕಫಗಳು ಇಡೀ ಶರೀರವನ್ನು ಸಂಚರಿಸುವವಾದ್ದರಿಂದ, ಎಲ್ಲಾ ಸ್ರೋತಸ್ಸುಗಳೂ ಅವುಗಳಿಗೆ ಮಾರ್ಗಗಳೇ ಎಂತಲೂ ಚರಕನು ಉಪದೇಶಮಾಡಿದ್ದಾನೆ (ಪು 259-260) ಆಯುರ್ವೇದರೀತ್ಯಾ ತ್ರಿದೋಷಾತ್ರಿತ ಚಿಕಿತ್ಸೆಮಾಡುವದಕ್ಕೆ ಆ ಎಲ್ಲಾ ಸ್ರೋತಸ್ಸುಗಳ ವಿಧಗಳನ್ನು ತಿಳಿಯುವದು ಅಷ್ಟು ಮುಖ್ಯವಾದ್ದಲ್ಲ ಎಂಬದರಿಂದ ಅವುಗಳನ್ನು ವರ್ಣಿಸದೆ ಬಿಟ್ಟಿದ್ದಾರಾಗಿ ಎಣಿಸಬೇಕಾಗುತ್ತದೆ ಶಿರಾ ಧಮನೀ, ಸ್ರೋತಸ್ಸುಗಳು ಎಂಬವು ಬೇರೆ ಬೇರೆ ಎಂತ ಸುಶ್ರುತನು ಹೇಳಿದಾಗ್ಯೂ (1ನೆಯ ಭಾಗದ II-69), ಆ ಭೇದವು ಪ್ರಕೃತ ವಿಚಾರದಲ್ಲಿ ಉಪಕಾರಿಯಲ್ಲ ಸುಶ್ರುತನೇ ಪಕ್ಷಾಘಾತವನ್ನು ವರ್ಣಿಸುವಲ್ಲಿ ಅತಿಯಾಗಿ ಕೋಪಗೊಂಡ ವಾಯುವು ಮೇಲಕ್ಕೂ, ಅಡ್ಡಕ್ಕೂ ಕೆಳಕ್ಕೂ ಹೋಗುವ ಧಮನಿಗಳನ್ನು ಸೇರಿಕೊಂಡಾಗ, ಒಂದು ಪಕ್ಷದ ಸಂಧುಗಳು ಸಡಿಲಾಗಿ ಆ ಪಕ್ಷ ಸಾಯುತ್ತದೆ ಎಂತ ಬರೆದಿದ್ದಾನಲ್ಲದೆ ನರಗಳನ್ನು ಹೇಳಲಿಲ್ಲ.

ಸ್ನಾಯೌ ಶಿರಾಕಂಡರಯೋರ್ದುಷ್ಟಾಃ ಕ್ಲಿಶ್ನಂತಿ ಮಾನವಮ್ ।
ಸ್ತಮ್ಭಸಂಕೋಚಖಲ್ಲೀಭಿಗ್ರ್ರಂಥಿಸ್ಫುರಣಸುಪ್ತಿಭಿಃ ॥
ಸ್ನಾಯ್ವಾದಿಜಾನಾಂ ಪ್ರಶಮೋ ವಕ್ಷ್ಯತೇ ವಾತರೋಗಿಕೇ (ಚ. 187)

"ಸ್ನಾಯು, ಶಿರಾ, ಕಂಡರೆಗಳಲ್ಲಿ ವಾತಾದಿ ದೋಷಗಳು ಕೆಟ್ಟಾಗ್ಗೆ ಮನುಷ್ಯನಿಗೆ ಸ್ತಬ್ಧತೆ, ಮುದುರುವಿಕೆ, ಕೈಕಾಲು ಮೋಟುವಿಕೆ, ಗ್ರಂಥಿ, ಸಿಡಿತ, ನಿರ್ಜೀವಸ್ಥಿತಿ, ಈ ಪೀಡೆಗಳು ಉಂಟಾಗುತ್ತವೆ. ಈ ಪೀಡೆಗಳಿಗೆ ಪರಿಹಾರವು ವಾತರೋಗದ ಚಿಕಿತ್ಸೆಯಲ್ಲಿ ಹೇಳಲ್ಪಡುವದು."

ಚರಕನ ಈ ವಾಕ್ಯದಲ್ಲಿ ಪ್ರಸ್ತಾಪಿಸಲ್ಪಟ್ಟ ರೋಗಗಳು ಪಾಶ್ಚಾತ್ಯ ರೀತ್ಯಾ ನರಮಂಡಲಕ್ಕೆ ಸಂಬಂಧಪಟ್ಟ ರೋಗಗಳಲ್ಲಿ ಸೇರಿದವು ಎಂಬದರಲ್ಲಿ ಸಂದೇಹವಿಲ್ಲ. ಚಿಕಿತ್ಸೆಯು

ವಾತರೋಗದ ಅಧ್ಯಾಯದಲ್ಲಿ ಹೇಳಲ್ಪಡುತ್ತದೆಂತ ಬರೆದ್ದನ್ನು ನೋಡಿದರೆ ಚರಕನ ಮತವೂ ಅದೇ ಆಗಿದೆ ಎಂತ ಕಾಣುತ್ತದೆ. ಅದಾಗ್ಯೂ ಸ್ನಾಯು, ಶಿರಾ, ಕಂಡರೆಗಳಲ್ಲಿ ಉಂಟಾದ ದೋಷಗಳು ಎಂತ ಹೇಳಲ್ಪಟ್ಟಿದೆ. ಇಲ್ಲಿ ಶಿರೆಯೇ ಸ್ನಾಯುವಾಗುವದು ಮತ್ತು ಆ ಸ್ನಾಯುವೇ ಕಂಡರೆಯಾಗುವದೆಂಬ ಉಪದೇಶವನ್ನು ನೆನಪಿನಲ್ಲಿಡತಕ್ಕದ್ದು (1ನೇ ಭಾಗ II-21-59). ಹೀಗೆಯೇ ಇಂದ್ರಿಯಜ್ಞಾನಗಳು, ಉಚ್ಛ್ವಾಸನಿಃಶ್ವಾಸಗಳು, ಆಕಳಿಕೆ, ಹಸಿವು, ನಗೆ, ಮಾತು, ಅಳುವಿಕೆ, ಮುಂತಾದ ಚೇಷ್ಟಾವಿಶೇಷಗಳು ಊರ್ಧ್ವಗಧಮನಿಗಳಿಂದ (ನರಗಳಿಂದ ಎನ್ನುವ ಬದಲಾಗಿ) ಎಂತಲೂ (1ನೇ ಭಾಗದ II-71), ಶರೀರದ ಎಲ್ಲಾ ಕ್ರಿಯೆಗಳನ್ನು ತಡೆಯಿಲ್ಲದೆ ನಡಿಸುವದು ಮತ್ತು ಬುದ್ಧಿಕರ್ಮಗಳನ್ನು ಭ್ರಮೆ ಇಲ್ಲದೆ ಸ್ಪಷ್ಟಪಡಿಸುವದು ತನ್ನ ಶಿರೆಗಳಲ್ಲಿ (ನರಗಳಲ್ಲಿ ಅನ್ನುವ ಬದಲಾಗಿ) ಸಂಚರಿಸುತ್ತಿರುವ ವಾತದಿಂದ ಉಂಟಾಗುವದಾಗಿರುತ್ತದೆ ಎಂತಲೂ (1ನೆಯ ಭಾಗದ II-83), ಪ್ರಾಣವಾಹಿ ಸ್ರೋತಸ್ಸುಗಳು (ನರಗಳ ಪ್ರಸ್ತಾಪವಿಲ್ಲ) ಎರಡು, ಅವುಗಳಿಗೆ ಮೂಲ ಹೃದಯ ಮತ್ತು ರಸವಾಹಿ ಧಮನಿಗಳು, ಆ ಸ್ರೋತಸ್ಸುಗಳಲ್ಲಿ ಗಾಯವಾದರೆ ಕೂಗುವದು, ಬೊಗ್ಗುವದು, ಮೂರ್ಛೆ ಭ್ರಮೆ ಮತ್ತು ನಡುಕು ಉಂಟಾಗುತ್ತವೆ ಎಂತಲೂ (1ನೇ ಭಾಗದ II-76) ಸುಶ್ರುತನ ಉಪದೇಶ. ಈಗ ಶರೀರದ ಯಾವ ಭಾಗವಾದರೂ ಜೀವದಲ್ಲಿರಬೇಕಾದರೆ, ಶಿರಾ, ಧಮನೀ, ಸ್ರೋತಸ್ಸೆಂಬ ಭೇದವುಳ್ಳ ನಾಳಗಳಿಂದ ಆಹಾರ ಸಿಕ್ಕಬೇಕು ಮತ್ತು ಅದು ಅದರ ಅಧಿಕಾರವನ್ನು ನಡಿಸುವದಕ್ಕೆ ನರಗಳು ಬೇಕು ಎಂಬದಕ್ಕೆ ಆ ನರಗಳಲ್ಲಿ ಸಂಚರಿಸುವ ವಾಯು ಬೇಕು ಎಂಬದು ಆಯುರ್ವೇದಕಾರರ ಅಂಬೋಣ. ಅದ್ದರಿಂದಲೇ, ಶಿರಾ-ಧಮನಿಗಳು ವಾಯುವಿನ ಸಹಾಯದಿಂದ ಇಡೀ ಶರೀರವನ್ನು ಸರ್ವ ಧಾತುಗಳಿಂದ ಪೋಷಿಸುತ್ತವೆ ಎಂತ ಶಾರ್ಙ್ಗಧರ ಹೇಳಿದ್ದು (1ನೆಯ ಭಾಗದ II-91). ಆ ಶಿರಾಧಮನಿಗಳು ತಮ್ಮ ಕರ್ತವ್ಯಗಳನ್ನು ಮಾಡುವದಕ್ಕೆ ನರಗಳ (ವಾಯುವಿನ) ಸಹಾಯ ಅಗತ್ಯ, ಹಾಗೆಯೇ ನರಗಳು ಸಜೀವವಾಗಿದ್ದು ತಮ್ಮ ಕೆಲಸಗಳನ್ನು ಮಾಡುವದಕ್ಕೆ ಶಿರಾಧಮನಿಗಳಿಂದ ಸಿಕ್ಕತಕ್ಕ ಆಹಾರ ಅಗತ್ಯ. ಶಿರೆಗಳು ಸರ್ವಾಂಗ ದೇಹವನ್ನು ವ್ಯಾಪಿಸಿಕೊಂಡಿವ (1ನೆಯ ಭಾಗದ I-89), ವಾತಕ್ಕಾಗಲೀ, ಪಿತ್ತಕ್ಕಾಗಲೀ, ಕಫಕ್ಕಾಗಲೀ, ಪ್ರತ್ಯೇಕ ಶಿರಯಿಲ್ಲ, ಶಿರೆಗಳು ಸರ್ವವಾಹಿಗಳು (1ನೆಯ ಭಾಗದ II-17), ವಾತ-ಪಿತ್ತ-ಕಫಗಳು ಇಡೀ ಶರೀರವನ್ನು ವ್ಯಾಪಿಸಿಕೊಂಡಿರುವಂಥವು ಮತ್ತು ಅವುಗಳಿಗೆ ಎಲ್ಲಾ ಸ್ರೋತಸ್ಸುಗಳೂ ಮಾರ್ಗಗಳೇ ಎಂಬ ಹಿಂದೆ ಬರೆದ ಚರಕನ ಮಾತು ಇದೇ ಅಭಿಪ್ರಾಯವುಳ್ಳದ್ದು. ಹೀಗೆ ನರಗಳು ವಾತ, ಪಿತ್ತ, ಕಫ ಮತ್ತು ಶಿರೆಗಳಂತೆ ಸರ್ವಾಂಗವ್ಯಾಪಿಗಳಾಗಿರುವದರಿಂದಲೂ, ಇವುಗಳೆಲ್ಲ ಒಂದರಲ್ಲೊಂದು ಕಲೆತಿರುವದರಿಂದಲೂ, ಆ ಶಿರಾನಾಡಿಗಳಿಗೇನೇ ಕೆಲವು ಸಂದರ್ಭದಲ್ಲಿ ಧಮನೀ ಎಂತಲೂ, ಕೆಲವು ಸಂದರ್ಭದಲ್ಲಿ ಸ್ರೋತಸ್ಸು ಎಂತಲೂ, ಹೇಳುವದಾದ್ದರಿಂದಲೂ, ಶಿರೆಗಳ ದೋಷಗಳಿಗೂ ವಾತ ದೋಷಕ್ಕೂ ಹೇಳಲ್ಪಟ್ಟ ಚಿಕಿತ್ಸೆಯನ್ನು, ಅನುಬಂಧಿಗಳಾದ ಪಿತ್ತ ಕಫಗಳಿಗೆ ಲಕ್ಷ್ಯವಿಟ್ಟು, ನಡಿಸುವದರಿಂದ ಸಾಧಾರಣವಾಗಿ ನರಸಂಬಂಧವಾದ ರೋಗಗಳು ಪರಿಹಾರವಾಗತಕ್ಕವಾದ್ದರಿಂದ ಸಹ, ನರಗಳನ್ನು ಪ್ರತ್ಯೇಕವಾಗಿ ವರ್ಣಿಸದೆ 'ನರ' ಎನ್ನಬೇಕಾದ್ದಲ್ಲಿ ಸ್ನಾಯು, ಕಂಡರೆ, ಶಿರೆ, ಧಮನೀ, ಸ್ರೋತಸ್ಸು, ಪ್ರಾಣವಾಹಿ ಸ್ರೋತಸ್ಸು, ವಾತವಾಹಿ ಸ್ರೋತಸ್ಸು, ಮನೋವಾಹಿ ಸ್ರೋತಸ್ಸು, ಎಂತ ಬೇರೆ ಬೇರೆ ನಾಮಗಳನ್ನು ಸಂದರ್ಭಾನು

ಸಾರ ಉಪಯೋಗಿಸಿದ್ದಾಗಿ ಕಾಣುತ್ತದೆ. ರಕ್ತನಾಳಗಳಿಗೂ ನರಗಳಿಗೂ ಇರುವ ಭೇದ ವನ್ನು ಆಯುರ್ವೇದಕಾರರು ತಿಳಿದಿರಲಿಲ್ಲ ಎಂತ ನೆನಸುವದಕ್ಕೆ ಕಾರಣವಿಲ್ಲ.

ನರಮಂಡಲದ ಕರ್ಮ ಕ್ಕೂ ವಾತಕ್ಕೂ ಭೇದ

25. ನರಮಂಡಲದ ಕ್ರಿಯೆಗಳನ್ನೂ, ರೋಗಗಳನ್ನೂ, ರೋಗಗಳ ಪರಿಹಾರವನ್ನೂ, ವಾತದ ಕ್ರಿಯೆ, ರೋಗ, ಚಿಕಿತ್ಸೆಗಳಲ್ಲಿ ಆಯುರ್ವೇದ ಗ್ರಂಥಗಳು ವ್ಯಾಕರಿಸುವದರಿಂದ, ಆಯುರ್ವೇದಕ್ಕೆ ನರಮಂಡಲ ಎಂದರೂ ವಾತವೆಂದರೂ ಒಂದೇ ಎಂತ ತಿಳಿಯಕೂಡದು. ಉತ್ಪತ್ತಿ, ಸ್ಥಿತಿ, ಲಯಗಳಿಗೆ ಕಾರಣವಾದ ತ್ರಿದೋಷಗಳಲ್ಲಿ ವಾತ ಎಂದರೆ, ನರಮಂಡಲ ಎಂತಲ್ಲ. ಸಾಧಾರಣವಾಗಿ ರೋಗಗಳ ಕಾರಣಗಳಲ್ಲಿ ಒಂದಾದ ವಾತವಾಗಲೀ, ವಾತರೋಗಗಳೆಂಬ ಎಂಭತ್ತು ರೋಗಗಳೊಳಗೆ ರೂಕ್ಷತೆ, ವಿಡ್ಗ್ರಹ, ಬದ್ಧವಿಟ್ಕತಾ, ಅತ್ಯುದ್ಗಾರ, ಅಂತ್ರಕೂಜನ, ವಾತ ಪ್ರವೃತ್ತಿ, ಆಧ್ಮಾನ, ಪ್ರತ್ಯಾಧ್ಮಾನ, ಶೀತತೆ, ಮುಂತಾದವುಗಳಾಗಲೀ, ನರಮಂಡಲಕ್ಕೆ ಸಂಬಂಧ ಪಟ್ಟವುಗಳಲ್ಲ. ವಾತಹರ ವಸ್ತುಗಳಲ್ಲಿ ಎಲ್ಲವು ನರಮಂಡಲಕ್ಕೆ ಗುಣಕರವಾದವುಗಳಲ್ಲ; ಮತ್ತು ನರಮಂಡಲದ ದೋಷಗಳಿಗೆ ಮತ್ತು ಅದರ ಪ್ರಧಾನ ಸ್ಥಾನವಾದ ಮಿದುಳಿನ ದೋಷಗಳಿಗೆ ವಿಶೇಷವಾಗಿ ಪ್ರಯೋಜನಕಾರಿಯಾದ ಕಾಸರ್ಕನ ಬೀಜ, ಒಜೆ, ಶತಾವರಿ, ಶ್ರೀಗಂಧ, ಒಂದೆಲಗ, ಉನ್ಮತ್ತ, ಭಂಗಾರ, ಪಾದರಸ, ಮುಂತಾದ ದ್ರವ್ಯಗಳು ಇವೆ. ಆದದರಿಂದ ಈ ಅಧ್ಯಾಯದಲ್ಲಿ ವರ್ಣಿಸಲ್ಪಟ್ಟ ಮಟ್ಟಿಗಾದರೂ ನರಮಂಡಲದ ರಚನಾವಿಶೇಷವನ್ನೂ ಅಧಿಕಾರವನ್ನೂ ತಿಳಿದಿರುವದು ಆಯುರ್ವೇದಜ್ಞಾನಕ್ಕೆ ಬಹು ಉಪಕಾರಿಯಾಗಿರುತ್ತದೆ.

ಮನಸ್ಸಿಗೆ ಹೃದಯವು ಅಧಿಷ್ಠಾನವೆನ್ನುವದಕ್ಕೆ ಕಾರಣ

26. ಈ ಸಂದರ್ಭದಲ್ಲಿ ಮನಸ್ಸಿಗೆ ಶರೀರದಲ್ಲಿ ಅಧಿಷ್ಠಾನ (ವಾಸಸ್ಥಾನ) ಪ್ರತ್ಯೇಕ ಉಂಟೋ, ಇದ್ದರೆ ಅದು ಯಾವದು, ಎಂಬದನ್ನು ಕುರಿತು ಸ್ವಲ್ಪ ವಿಚಾರಮಾಡುವದು ಪ್ರಯೋಜನಕರವಾಗಬಹುದು. ಸಾಧಾರಣವಾಗಿ ಮನೋಧಿಷ್ಠಾನವು ಮಿದುಳು ಎಂಬದು ಪಾಶ್ಚಾತ್ಯರ ಮತವೆಂತ ಕಾಣುತ್ತದೆ. ಮನಸ್ಸು, ಬುದ್ಧಿ ಮತ್ತು ಆತ್ಮ ಸಹ ಹೃದಯದಲ್ಲಿ ಪ್ರತಿಷ್ಠಿತವಾಗಿವೆ ಎಂಬದು ಚರಕನ ಮತ (ಪು. 903). ಉನ್ಮಾದದ ಸಂಪ್ರಾಪ್ತಿಯನ್ನು ವರ್ಣಿಸುವಲ್ಲಿ ದೋಷಗಳು ಕೆಟ್ಟು, ಬುದ್ಧಿಗೆ ವಾಸಸ್ಥಾನವಾದ ಹೃದಯವನ್ನು ಕೆಡಿಸಿ, ಮನೋವಾಹಿ ಸ್ರೋತಸ್ಸುಗಳನ್ನು (ನರಗಳನ್ನು) ಸ್ವಾಧೀನಮಾಡಿಕೊಂಡು ಮನುಷ್ಯನ ಮನಸ್ಸನ್ನು ಭ್ರಮೆಗೊಳಿಸುತ್ತವೆ ಎಂಬ ಅರ್ಥವನ್ನು ಹೇಳಿದ್ದಾನೆ (ಪು. 607). ಈ ಮತ ಭೇದಕ್ಕೆ ಕಾರಣವೇನು? ಮಿದುಳಿಲ್ಲದ ಕಪ್ಪೆಗೆ ಇಂದ್ರಿಯಜ್ಞಾನವಾಗಲಿ, ಇಚ್ಛಾಶಕ್ತಿಯಾಗಲಿ ಇಲ್ಲದಿದ್ದರೂ, ಅದರ ಎದೆಯ ಬಡಿತ ನಿಲ್ಲುವದಿಲ್ಲ ಮತ್ತು ಅದರಲ್ಲಿ ಪ್ರತಿಕ್ಷೇಪದ ಶಕ್ತಿಯಿಂದ ಕೆಲವು ಅನೈಚ್ಛಿಕ ಚೇಷ್ಟೆಗಳು ಉಂಟಾಗುತ್ತವೆ ಎಂತ ಪಾಶ್ಚಾತ್ಯರು ಕಂಡುಹಿಡಿದಿದ್ದಾರೆಂತ ಹಿಂದೆ ಹೇಳಲ್ಪಟ್ಟದೆಯಷ್ಟೆ. ಹಾಗೆಂದ ಮೇಲೆ ಮಿದುಳು ತೆಗೆದ ಮಾತ್ರದಿಂದ ಕಪ್ಪೆಯು ಸಾಯುತ್ತದೆನ್ನುವದಕ್ಕಾಗುವದಿಲ್ಲ. ಎದೆ ಬಡಿತ ನಿಂತರೇನೇ ಸಾವು ಉಂಟಾಯಿತೆಂತ ಹೇಳಬೇಕಷ್ಟೆ. ಆದ್ದರಿಂದ ಆತ್ಮದ ಪ್ರಧಾನ (ಶ್ರೇಷ್ಠತಮ) ಮನೆಯು ಹೃದಯವೆಂತ ತಿಳಿಯಬೇಕಾಯಿತು. ಮನಸ್ಸು ಮತ್ತು ಬುದ್ಧಿ ಆತ್ಮದಂತೆ ಅತೀಂದ್ರಿಯವಾಗಿ ಅದರೊಂದಿಗೆ ಇರತಕ್ಕವಾದ್ದರಿಂದ, ಅವುಗಳ ಅಧಿಷ್ಠಾನ ಸಹ ಹೃದಯವೆಂತ ಹೇಳಬೇಕಾಯಿತು. ಅದಲ್ಲವೆನ್ನುವದಾದರೆ ಸತ್ತ ಮೇಲೆಯೂ ಮನಸ್ಸು ಮತ್ತು ಬುದ್ಧಿ ಇರುತ್ತವೆನ್ನಬೇಕಾದೀತು. ಈ

ಮತವು ನರಮಂಡಲದ ಕರ್ಮಗಳಿಗೆ ಮಿದುಳು ಮುಖ್ಯವಾದ ಅಂಗವೆನ್ನುವದಕ್ಕೆ ವಿರುದ್ಧ ವಲ್ಲ. ಉನ್ಮಾದದ ಮನೋವಿಕಾರವು ಮನೋವಹ ಸ್ರೋತಸ್ಸುಗಳಲ್ಲಿ ದೋಷಗಳು ಸೇರಿ ಉಂಟಾಗುವದೆಂತ ಚರಕ ಹೇಳಿದ ವಚನವನ್ನು ಮೇಲೆ ಎತ್ತಿಕೊಂಡದೆ. ಅಪಸ್ಮಾರದಲ್ಲಿ ಹೃದಯವೂ, ಇಂದ್ರಿಯಗಳ ಮನೆಗಳೂ, ಕೆಡುತ್ತವೆಂತ ಚರಕ ಹೇಳಿದ್ದಾನೆ. ಅಲ್ಲಿ, ಇಂದ್ರಿಯ ಗಳು ಮತ್ತು ಇಂದ್ರಿಯಜ್ಞಾನವಾಹಿ ಸ್ರೋತಸ್ಸುಗಳು ತಲೆಯೊಳಗೆ ಇರುವ ಮಿದುಳನ್ನು ಆಶ್ರ ಯಿಸಿರುವಂಥವು ಎಂತ ಇನ್ನೊಂದು ಕಡೆಯಲ್ಲಿ, ಹಿಂದೆ ಸೂಚಿಸಿದಂತೆ, ಚರಕನು ವರ್ಣಿಸಿರು ವದರಿಂದ, ಇಂದ್ರಿಯಗಳ ಮನೆಗಳು ಎಂದರೆ ಮಿದುಳೇ ಆಧಾರವಾಗಿರುವ ನರಮಂಡಲ, ಎಂತ ತಿಳಿಯಬೇಕು. ಮಿದುಳಿಗೂ ನರಮಂಡಲದ ಇತರ ಭಾಗಗಳಿಗೂ ಆಹಾರಗಳಾಗಲಿ ದೋಷಗಳಾಗಲಿ, ಆ ದೋಷಪರಿಹಾರಕ್ಕೆ ತಕ್ಕ ಔಷಧವಾಗಲಿ, ಹೃದಯದ ವ್ಯಾಪಾರ ದಿಂದಲೇ ಹೋಗತಕ್ಕವಾದ್ದರಿಂದ. ವ್ಯಾವಹಾರಿಕವಾಗಿ ನೋಡಿದರೂ ಆಯುರ್ವೇದೀಯ ಮತದ ತಥ್ಯವು ಹೊಳೆಯುವದು.

---

# ಉಪೋದ್ಘಾತ.

## ನಾಲ್ಕನೇ ಪರಿಶಿಷ್ಟ.

### ಸಂಶೋಧನ ಮತ್ತು ಸಂಶಮನ ದ್ರವ್ಯಗಳು

ವಮನೌಷಧಗಳು

1. ಮದನಕುಟಜಜೀಮೂತಕೇಕ್ಷ್ವಾಕುಧಾಮಾರ್ಗವಕೃತವೇಧನಸರ್ಷಪವಿಡಂಗಪಿಪ್ಪಲೀಕರಂಜಪ್ರಪುನ್ನಾಡಕೋವಿದಾರಕರ್ಬುದಾರಾರಿಷ್ಟಾಶ್ವಗನ್ಧಾವಿದುಲಬನ್ಧುಜೀವಕಶ್ವೇತಾಶಣಪುಷ್ಪೀವಿಮ್ಬೀವಚಾಮೃಗೇರ್ವಾರುಚಿತ್ರಾಚೇತ್ಯೂರ್ಧ್ವಭಾಗಹರಾಣಿ। ತತ್ರ ಕೋವಿದಾರಪೂರ್ವಾಣಾಂ ಫಲಾನಿ। ಕೋವಿದಾರಾದೀನಾಂ ಮೂಲಾನಿ. (ಸು. 145-6).

ಮಂಗಾರೆಕಾಯಿ, ಕೊಡಸಿಗ, ದೇವದಾಳಿ, ಕಹಿಸೋರೆ, ಉತ್ತರಣೆ, ಕಹಿಹೀರೆ, ಸಾಸಿವೆ, ವಾಯುವಿಳಂಗ, ಹಿಪ್ಪಲೀ, ಹೊಂಗೆ, ಚಗತೆ, ಕೆಂಪುಮಂದಾರ (ಕಂಚಿವಾಳ), ಚಳ್ಳೆ (ಮಣ್ಣಡಿಕೆ), ಕಹಿಬೇವು, ಅಶ್ವಗಂಧಿ (ಹಿರೇಮದ್ದು), ಸಣ್ಣ ಬೆತ್ತ (ಮಲ. ಚೂರಳ್‌ವಳ್ಳಿ). ಮಧ್ಯಾಹ್ನ ಮಲ್ಲಿಗೆ, ಬಿಳೀ (ಖುರಾಸಾನಿ) ಬಜೆ, ಗಿಲಿಗಿಚಿ (ಗಿಜಿಗಿಚಿ, ಮಲ ಕಿಲುಕಿಲುಪ್ಪ), (ಕಹಿ) ತೊಂಡೆ, ಬಜೆ, (ಬಿಳೀ) ಹಾವು ಮೆಕ್ಕೆ (ಮಲ ಕಾಟ್ಟುವೆಳ್ಳರಿ) ಮತ್ತು ದೊಡ್ಡ ಹಾವು ಮೆಕ್ಕೆ ಇವು ಊರ್ಧ್ವಭಾಗದಿಂದ ಶೋಧಿಸು(ವಾಂತಿ ಮಾಡಿಸು)ವಂಥವು. ಅವುಗಳೊಳಗೆ ಕೋವಿದಾರ(ಕೆಂಪು ಮಂದಾರ)ಕ್ಕೆ ಹಿಂದಿನವುಗಳ ಫಲಗಳೂ, ಕೋವಿದಾರ ಮೊದಲಾದವುಗಳ ಬೇರುಗಳೂ ಉಪಯೋಗಿಸಲ್ಪಡಬೇಕಾದ ಅಂಗಗಳಾಗಿರುತ್ತವೆ.

ಪರಾ: 'ಧಾಮಾರ್ಗವ' ಎಂದರೆ ಅರಸಿನ ವರ್ಣದ ಹೂವಿನ ಹೀರೆ ಮತ್ತು 'ಕೃತವೇಧನ' ಎಂಬವು ಹೀರೆಯಲ್ಲಿ ಒಂದು ಜಾತಿ ಎಂತ ನಿ ಸಂ, ವ್ಯಾ. (ಪು 142)

ವಿರೇಚನ ಔಷಧಗಳು

2. ತ್ರಿವೃತಾಶ್ಯಾಮಾದನ್ತೀದ್ರವನ್ತೀಸಪ್ತಲಾಶಙ್ಖಿನೀವಿಷಾಣಿಕಾಗವಾಕ್ಷೀಚ್ಛಗಲಾನ್ತ್ರೀಸ್ನುಕ್‌ಸುವರ್ಣಕ್ಷೀರೀಚಿತ್ರಕಕಿಣಿಹೀಕುಶಕಾಶತಿಲ್ವಕಕಮ್ಪಿಲ್ಲಕರಮ್ಯಕಪಾಟಲಾಪೂಗಹರೀತಕ್ಯಾಮಲಕವಿಭೀತಕನೀಲಿನೀಚತುರಙ್ಗುಲೈರಣ್ಡಪೂತೀಕಮಹಾವೃಕ್ಷಸಪ್ತಚ್ಛದಾರ್ಕಜ್ಯೋತಿಷ್ಮತೀಚೇತ್ಯಧೋಭಾಗಹರಾಣಿ । ತತ್ರ ತಿಲ್ವಕಪೂರ್ವಾಣಾಂ ಮೂಲಾನಿ । ತಿಲ್ವಕಾದೀನಾಂ ಪಾಟಲಾನ್ತಾನಾಂ ತ್ವಚಃ । ಕಮ್ಪಿಲ್ಲಕಫಲರಜಃ । ಪೂಗಾದೀನಾಮೇರಣ್ಡಾನ್ತಾನಾಂ ಫಲಾನಿ । ಪೂತೀಕಾರಗ್ವಧಯೋಃ ಪತ್ರಾಣಿ । ಶೇಷಾಣಾಂ ಕ್ಷೀರಾಣೀತಿ । (ಸು. 146).

(ಕೆಂಪು) ತಿಗಡೆ, ಕರಿತಿಗಡೆ, ಜೇಪಾಳ (ತುಳು. ಬ್ಯಾರಿಬಿತ್ತ್), ಕಾಡುಹರಳು, ಮುಂಡು (ಕೋಡು)ಕಳ್ಳಿ (ಮಲ. ಚರ್ಮಲನ್ತ), ಮಣಿತೊಂಡೆ (ಕಾಡುಪಾವಟೆ), ಮೇಷಶೃಂಗಿ (ಸಣ್ಣಗೆರ್ಸೆ ಹಂಬು), (ಸಣ್ಣ ಅಥವಾ ಬಿಳೀ) ಹಾವುಮೆಕ್ಕೆ, ಅಜಾನ್ತ್ರೀ (ಫರಂಗಿ ಚಕ್ಕೆ, ಚೀನಿಪಾವು), ಬೊಂತೆ (ಜಡೆ) ಕಳ್ಳಿ, ಅರಸಿನ (ಮುಳ್ಳು) ಉಮ್ಮತ್ತ, ಹರಳುಗಿಡ, ದಡ್ಡಾಲ, ಬಿಳೀ ದರ್ಭೆ, ಕಾಶದರ್ಭೆ, ಲೋಧ್ರ, ಕಮ್ಪಿಲ್ಲಕ (ಕುಂಕುಮದ ಮರ, ಮಲ. ಕಮ್ಪಿಪ್ಪಾಲ), ಹೆಬ್ಬೇವು (ಹುಚ್ಚುಬೇವು, ಮಲ. ಮಲವೇಪ್ಪು) ಅಥವಾ ಕಹಿಪಡುವಲು, ಪಾದರಿ ಮರ, ಅಡಿಕೆ (ಕಂಗು), ಅಣಿಲೆ, ನೆಲ್ಲಿ, ತಾರೆ (ಶಾಂತಿ), ನೀಲೀಗಿಡ, ಕಕ್ಕೆಮರ, ಹರಳು,

ಬಿಳೇ(ಮುಳ್ಳು)ಹೊಂಗೆ, ಎಲೆಕಳ್ಳಿ, ಹಾಲೆ (ಏಳೆಲೆಬಾಳೆ), ಎಕ್ಕೆ ಮತ್ತು ಜ್ಯೋತಿಷ್ಮತೀ (ಮಾಲಕಾಂಗುನಿ). ಇವು ಕೆಳಭಾಗದಿಂದ ಶೋಧನ (ಭೇದಿ) ಮಾಡಿಸುವಂಥವು. ಅವುಗಳೊಳಗೆ 'ತಿಲ್ವಕ'(ಲೋಧ್ರ)ಕ್ಕೆ ಹಿಂದಿನವುಗಳ ಬೇರುಗಳು, 'ತಿಲ್ವಕ' ಮೊದಲುಗೊಂಡು 'ಪಾದರಿ' ವರೆಗಿನವುಗಳ ತೊಗಟು (ಸಿಪ್ಪೆ), ಕಂಪಿಲ್ಲಕದ ಕಾಯಿಯೊಳಗಿನ ಧೂಳು (ಹಿಟ್ಟು), 'ಅಡಿಕೆ' ಮೊದಲುಗೊಂಡು 'ಹರಳು' ವರೆಗಿನವುಗಳ ಫಲಗಳು, ಪೂತೀಕ (ಬಿಳೇ ಹೊಂಗೆ) ಮತ್ತು ಕಕ್ಕೆಮರಗಳ ಎಲೆಗಳು ಮತ್ತು ಉಳಿದವುಗಳ ಹಾಲುಗಳು ಉಪಯೋಗಿಸಲ್ಪಡಬೇಕಾದ ಅಂಗಗಳಾಗಿರುತ್ತವೆ.

ಪರಾ 'ಖಗಲಾಸ್ತ್ರೀ' ಎಂಬದು 'ವೃದ್ಧದಾರಕ' ಎಂತ ಸಿ. ಸಂ. ವ್ಯಾ (ಪು, 142) 'ವೃದ್ಧದಾರು' ಎಂದರೆ ಚೀನಿಪಾವು ಎಂತ ಸಾಧಾರಣವಾಗಿ ಮಲಯಾಳಿ ಪಂಡಿತರು ತಿಳಿಯುತ್ತಾರೆ. ಆದರೆ ಶೋಧನವಮಾಡಿದ್ದಲ್ಲಿ, ಇವು ಮೂರು ಬೇರೆ ಬೇರೆ ವಸ್ತುಗಳೆಂತ ಕಂಡುಬರುತ್ತದೆ. 'ಖಗಲಾಸ್ತ್ರಿ' ಎಂಬದು ಧ. ಸಿ. ಸಲ್ಲಿ 'ವೃಷಮೋಧಾ' ಎಂಬ ಶಿರೋನಾಮವಿಂದ ವರ್ಣಿಸಲ್ಪಟ್ಟ ಒಂದು ಜಾತಿ ಬಳ್ಳಿ. ಅದು 'ಕುರುಟಿಗೆಯ ಭೇದ' ಎಂತ ಧ್ವ. ಸಿ. ಅದೇ ನಿಘಂಟಿನಲ್ಲಿ 'ವೃದ್ಧದಾರು' ಎಂಬದರ ಕನ್ನಡ ಹೆಸರುಗಳಲ್ಲಿ 'ಫರಂಗಿಚಕ್ಕೆ' ಎಂಬದು ಕಾಣುತ್ತದೆ. ಈ ಹೆಸರು ಚೀನಿಪಾವಿಗೆ ಇರುವಂಥಾದ್ದು. ಆದರೆ ಅದರಲ್ಲಿಯೇ ಲಾತಿನ ಹೆಸರು 'ರೌರಿಯಾ ಸಂಟಲೋಯಿಡಿಸ' (Roui ea Santaloides) ವೃದ್ಧದಾರುವಿಗೆ ಕೊಡಲ್ಪಟ್ಟದೆ. ಆದರೆ ಆ ಲಾತಿನ ಹೆಸರಿನ ವಸ್ತು 'ಸಮುದ್ರಪಾಲೆ' ಅಥವಾ ಸಮುದ್ರಪಾಲೆ ಎಂಬ ಒಂದು ಬಳ್ಳಿ (Elephant Cieeper) ಎಂತ ಸ. ವೃ. ವ. ವಿಂದ ಕಾಣುತ್ತದೆ. ಈ ಲಾತಿನ ಹೆಸರಿನ ವಸ್ತುವಿನ ಕನ್ನಡ ಹೆಸರು 'ಹುಳಿಕಲ ಬಳ್ಳಿ' ಎಂತ ಹೇಳಿ ಅದರ ಮರಾಟಿ ಹೆಸರು ಬೃ. ಸಿ. ನಲ್ಲಿ ವೃದ್ಧದಾರುವಿಗೆ ಕೊಡಲ್ಪಟ್ಟು, 'ವರಧಾರಾ' ಎಂತ ನಾ. ಸಿ. ನಲ್ಲಿ ನಮೂದಿಸಲ್ಪಟ್ಟದೆ. 'ಚೀನಿಪಾವು' ಎಂಬದು ಬಾ. ಪ್ರ. ದಲ್ಲಿ 'ದ್ವೀಪಾನ್ತರವಚಾ (ಚೋಪಚೀನಿ)' ಎಂತ ವರ್ಣಿಸಲ್ಪಟ್ಟ ವಸ್ತು ಎಂಬದು ನಾ. ನಿ. ಸಿಂದ ಬಲಪಡುತ್ತದೆ. ಅದರಲ್ಲಿ ಅದರ ಸಂಸ್ಕೃತ ಹೆಸರೇ 'ಚೋಬಚೀನೀ' ಎಂತ ಉಂಟು. ಅದಕ್ಕೆ 'ಚೋಪಚೀನೀ' ಎಂಬ ಸಂಸ್ಕೃತ ಹೆಸರುಂಟೆಂತ ಶಾ. ಸಿ. ಸಿಂದ ತೋರುತ್ತದೆ. ಅದರ ಇಂಗ್ಲೀಷ ಹೆಸರು (China ioot) ಚಾಯ್ನಾರೂಟ್ ಮತ್ತು ಲಾತಿನ್ (Smilax Chinensis) ಸ್ಮೈಲೆಕ್ಸ್ ಚಾಯ್ನೆನ್ಸಿಸ್.

ಮೂಲದಲ್ಲಿ 'ತಿಲ್ವಕ' ಹಿಡಿದು 'ಪಾಟಲಾ' ವರೆಗಿನವುಗಳ ತೊಗಟುಗಳು ಎಂತ ಹೇಳಿ, ತನ್ಮಧ್ಯವಿರುವ 'ಕಂಪಿಲ್ಲಕ'ದ ಕಾಯಿಯೊಳಗಿನ ಹಿಟ್ಟು ಎಂತ ಪುನಃ ಹೇಳಿದ್ದು, ಅದರ ಆ ಎರಡು ಅಂಗಗಳೊಳಗೆ ಯಾವದೊಂದನ್ನಾದರೂ ಉಪಯೋಗಿಸಬಹುದೆಂಬ ಅರ್ಥವಿಂದ ಆಗಿರಬೇಕು. ಹಾಗೆಯೇ ಕಕ್ಕೆಮರದ ಕಾಯಿಯನ್ನಾಗಲೀ ಎಲೆಗಳನ್ನಾಗಲೀ ಉಪಯೋಗಿಸಬಹುದೆಂಬವರಿಂದ ಅದನ್ನು ಎರಡು ವರ್ಗಗಳಲ್ಲಿ ಸೇರಿಸಿದ್ದಾಗಿರಬೇಕು.

3. ಕೋಶಾತಕೀ ಸಪ್ತಲಾ ಶಙ್ಖಿನೀ ದೇವದಾಲೀ ಕಾರವೇಲ್ಲಿಕಾ ಚೇತ್ಯುಭಯತೋಭಾಗಹರಾಣಿ | ಏಷಾಂ ಸ್ವರಸಾ ಇತಿ. (ಸು. 146).

ವಾಂತಿ-ವಿರೇಚನಗಳೆರಡನ್ನೂ ಮಾಡುವ ಔಷಧಗಳು

ಕಹಿಹೀರೆ, ಮುಂಡುಕಳ್ಳಿ, ಮಣಿತೊಂಡೆ (ಕಾಡುಪಾವಟೆ), ದೇವದಾಳಿ ಮತ್ತು ಸಣ್ಣಹಾಗಲು. ಇವು ಊರ್ಧ್ವಭಾಗದಿಂದಲೂ ಅಧೋಭಾಗದಿಂದಲೂ ಶೋಧನ (ವಾಂತಿ ಮತ್ತು ವಿರೇಚನ) ಮಾಡಿಸುವಂಥವು. ಇವುಗಳ ಸ್ವರಸಗಳು ಉಪಯೋಗಿಸಬೇಕಾದವು.

4. ಪಿಪ್ಪಲೀವಿಡಂಗಾಪಾಮಾರ್ಗಶಿಗ್ರುಸಿದ್ಧಾರ್ಥಕಶಿರೀಷಮರಿಚಕರವೀರಬಿಮ್ಬೀಗಿರಿಕರ್ಣಿಕಾಕಿಣಿಹೀವಚಾಜ್ಯೋತಿಷ್ಮತೀಕರಂಜಾರ್ಕಾಲರ್ಕಲಶುನಾತಿವಿಷಾಶೃಙ್ಗವೇರತಾಲೀಶತಮಾಲಸುರಸಾರ್ಜಕೇಙ್ಗುದೀಮೇಷಶೃಙ್ಗೀಮಾತುಲುಙ್ಗೀಸುರಙ್ಗೀಪೀಲುಜಾತೀಶಾಲತಾಲಮಧೂಕಲಾಕ್ಷಾಹಿಙ್ಗುಲವಣಮದ್ಯಗೋಶಕೃದ್ರಸಮೂತ್ರಾಣೀತಿ ಶಿರೋವಿರೇಚನಾನಿ | ತತ್ರ ಕರವೀರಪೂರ್ವಾಣಾಂ ಫಲಾನಿ | ಕರವೀರಾದೀನಾಮರ್ಕಾನ್ತಾನಾಂ ಮೂಲಾನಿ | ತಾಲೀಶಪೂರ್ವಾಣಾಂ ಕನ್ದಾಃ | ತಾಲೀಶಾದೀನಾಮರ್ಜಕಾನ್ತಾನಾಂ ಪತ್ರಾಣಿ | ಇಙ್ಗುದೀಮೇಷಶೃಙ್ಗ್ಯೋಃ ತ್ವಚೌ | ಮಾತುಲುಙ್ಗೀಮುರುಙ್ಗೀಪೀಲುಜಾತೀನಾಂ ಪುಷ್ಪಾಣಿ | ಶಾಲತಾ-

ಲಮಧೂಕಾನಾಂ ಸಾರಾಃ | ಹಿಙ್ಗುಲಾಕ್ಷೇ ನಿರ್ಯಾಸೌ | ಲವಣಾನಿ ಪಾರ್ಥಿವವಿಶೇಷಾಃ | ಗೋಮೂತ್ರಶಕೃದ್ರಸೌ ಮಲಾವಿತಿ. (ಸು. 146).

ಹಿಪ್ಪಲೀ, ವಾಯುವಿಳಂಗ, ಉತ್ತರಣೆ, ಸುಗ್ಗೆ, ಬಿಳೇ ಸಾಸಿವೆ, ಬಾಗೆಮರ, ಕಾಳು ಮೆಣಸು, ಕಣಗಿಲು, (ಕಹಿ) ತೊಂಡೆ, ಗಿರಿಕರ್ಣಿಕೆ (ಶಂಖಪುಷ್ಪ), ದದ್ದಾಲ (ದಡ್ಡಾಲ), ಒಜೆ, ಜ್ಯೋತಿಷ್ಮತೀ (ಮಾಲಬೀಜ-ಮಾಲಕಾಂಗುನಿ), ಹೊಂಗೆ, ಎಕ್ಕೆ, ಬಿಳೇಎಕ್ಕೆ, ಬೆಳ್ಳುಳ್ಳಿ, ಅತಿ ಬಜೆ (ಅತಿವಿಷೆ), ಶುಂಠಿ, ತಾಳೀಸಪತ್ರೆ, ಅಡವಿದಾಳ್ಚೀನಿ, ತುಳಸಿ, ಬಿಳೇ ರಾಮ (ನಾಯಿ) ತುಳಸೀ, ಇಂಗಳಗಿಡ (ಮಲ. ಓಡಮರಂ), ಮೇಷಶೃಂಗಿ (ಸಣ್ಣಗೆರ್ಸೆಹಂಬು), ಕಾಡು ಹುಳಿಮಾದಳ, ಕೆಂಪುಸುಗ್ಗೆ, ಗೋಣಿಮರ (ಮಲ. ಉಕಮರಂ), ಜಾಜಿ, ಆಸಿನ (ರಾಳದ) ಮರ, ತಾಳಿಮರ, ಇಪ್ಪೆಮರ, ಅರಗು, ಹಿಂಗು, ಉಪ್ಪುಗಳು, ಮದ್ಯ, ದನದ ಸೆಗಣಿಯ ರಸ, ಮತ್ತು ಗೋಮೂತ್ರ; ಇವು ಶಿರೋವಿರೇಚನಕಾರಿಗಳು. ಅವುಗಳೊಳಗೆ ಕಣಗಿಲೆ(ಕರವೀರ)ಗೆ ಹಿಂದಿನವುಗಳ ಫಲಗಳು; ಕಣಗಿಲೆ ಮೊದಲ್ಗೊಂಡು ಎಕ್ಕೆ ವರೆಗಿನವುಗಳ ಬೇರುಗಳು; ತಾಳೀಸಪತ್ರೆಗೆ ಹಿಂದಿನವುಗಳ ಗಡ್ಡೆ(ಗೆಣಸು)ಗಳು; ತಾಳೀಸಪತ್ರೆ ಮೊದಲುಗೊಂಡು ಬಿಳೇ ರಾಮತುಳಸೀ (ಅರ್ಜಕ) ವರೆಗಿನವುಗಳ ಎಲೆಗಳು; ಇಂಗಳಗಿಡದ ಮತ್ತು ಮೇಷಶೃಂಗಿಯ ತೊಗಟುಗಳು (ಸಿಪ್ಪೆ); ಕಾಡು ಹುಳಿಮಾದಳ, ಕೆಂಪುಸುಗ್ಗೆ, ಗೋಣಿಮರ ಮತ್ತು ಜಾಜಿ, ಇವುಗಳ ಹೂವುಗಳು; ಆಸಿನ (ರಾಳದ) ಮರ, ತಾಳಿಮರ ಮತ್ತು ಇಪ್ಪೆಮರಗಳ ತಿರುಳುಗಳು; ಹಿಂಗಿನ ಮತ್ತು ಅರಗಿನ ಮೇಣಗಳು; ಉಪ್ಪುಗಳು ಮಣ್ಣಿನ ವಿಶೇಷಗಳು, "ಮದ್ಯಗಳು ಸಂಧಾನ(ಹುಳಿಸುವ ಕ್ರಮ)ದಿಂದ ಸಂಯೋಗವಾದವು (ಮದ್ಯಾನ್ಯಾಸುತಸಂಯೋಗಾಃ);" *ಗೋಮೂತ್ರ ಮತ್ತು ಸೆಗಣಿರಸ ಮಲಗಳು.

*ಈ ವಚನ ಪಾಠಾಂತರದಲ್ಲಿ ಕಾಣುತ್ತದೆ

5. ಭದ್ರದಾರುಕುಷ್ಠಹರಿದ್ರಾವರುಣಮೇಷಶೃಙ್ಗೀಬಲಾತಿಬಲಾರ್ತ್ತಗಲಕಚ್ಛುರಾಸಲ್ಲಕೀಕುವೇರಾಕ್ಷೀವೀರತರುಸಹಚರಾಗ್ನಿಮನ್ಥವತ್ಸಾದನ್ಯೇರಣ್ಡಾಶ್ಮಭೇದಕಾಲರ್ಕಾರ್ಕಶತಾವರೀಪುನರ್ನವಾವಸುಕವಸಿರಕಾಂಚನಕಭಾರ್ಗೀಕಾರ್ಪಾಸೀವೃಶ್ಚಿಕಾಲೀಪತ್ತೂರ ಬದರಯವಕೋಲಕುಲತ್ಥಪ್ರಭೃತೀನಿ ವಿದಾರಿಗನ್ಧಾದಿಶ್ಚ ದ್ವೇ ಚಾದ್ಯೇ ಪಂಚಮೂಲ್ಯೌ ಸಮಾಸೇನ ವಾತಸಂಶಮನೋ ವರ್ಗಃ (ಸು. 147).

ವಾತಸಂಶಮನ ವರ್ಗ.

ದೇವದಾರ, ಚಂಗಲಕೋಷ್ಠ, ಅರಸಿನ, ವರುಣ (ಹೊಳೆಸೆಕ್ಕಿ), ಮೇಷಶೃಂಗಿ (ಸಣ್ಣಗೆರ್ಸೆಹಂಬು), ಕಲ್ಲಂಗಡಲೆ (ಕಡೀರು), ತುತ್ತಿ (ಉರ್ಕಿ), ನೀಲಗೋರಟೆ (ಬಿಳೇ ಮತ್ತಿ, 'ಕಕುಭ', ಎಂತ ನಿ.ಸಂ.ವ್ಯಾ.), ನಾಯಿಸೊಣಗು (ನಸುಗುನ್ನಿ), ಮಾದಿಮರ (ವಿಶೇಷ ಧೂಪ, ಮಲ. ಪಾಲಂಗಂ), ಗಜ್ಜಿಗ (ಬಿಳೇ ಪಾದರಿ ಮರ ಎಂತ ನಿ. ಸಂ. ವ್ಯಾ.), ಗೇರು (ಜಲ್ಪನಾಸಿಕಾ? ಅಥವಾ ಕೆಲವರ ಪಕ್ಷದಲ್ಲಿ 'ಶರ ಎಂತ ನಿ. ಸಂ. ವ್ಯಾ.), ಮುಳ್ಳು ಗೋರಟೆ, ನರುವಲು (ಸರ್ಜೋರ್ವೃಕ್ಷ? ಎಂತ ನಿ. ಸಂ. ವ್ಯಾ.), ಅಮೃತಬಳ್ಳಿ, ಹರಳುಗಿಡ, ಪಾಷಾಣಭೇದಿ (ಹಿಟ್ಟಳಿಗೆ), ಬಿಳೇ ಎಕ್ಕೆ, ಎಕ್ಕೆ, ಶತಾವರಿ (ಹಲವುಮಕ್ಕಳ ತಾಯಿ), ಪುನರ್ನವಿ, ಶಿವಮಲ್ಲೀ (ಕೆನ್ನೆಗ್ಗಿಲು, ಚನ್ನೆಗಿಡ), ಉತ್ತರಣೆ (ಸೂರ್ಯಾವರ್ತ ಎಂತ ನಿ. ಸಂ. ವ್ಯಾ.), ಉಮ್ಮತ್ತ, ನಿರ್ವಿಷ (ಗಂಟುಭಾರಂಗಿ), ಕಾಡುಹತ್ತಿ, ಚೇಳುಕೊಂಡಿ (ಮಣಿ) ಗಿಡ. ಸಪ್ಪಂಗ (ಪತಂಗ), ಬೊಗರಿ, ಯವೆಗೋದಿ, ಗಂಧಮೆಣಸು, ಹುರುಳಿ, ಮುಂತಾದವು, ವಿದಾರಿಗನ್ಧಾದಿಗಣ ಮತ್ತು

ಪ್ರಮಥದ ಎರಡು (ಹ್ರಸ್ವ ಮತ್ತು ಮಹತ್) ಪಂಚಮೂಲಗಳು, ಸಂಕ್ಷೇಪವಾಗಿ ವಾತ ಸಂಶಮನ ವರ್ಗವಾಗಿರುತ್ತದೆ.

ಸರಾ 'ಕುರುಳಿ ಮುಂತಾದವು' ಎಂಬದರಿಂದ ಉದ್ದು, ಎಳ್ಳು, ಅತಸೀ ಮುಂತಾದವು ಸೇರಿದವು ಎಂತ ನಿ. ಸಂ. ವ್ಯಾ. (ಪು 143)

6. ಚನ್ದನಕುಚನ್ದನಹ್ರೀವೇರೋಶೀರಮಂಜಿಷ್ಠಾಪಯಸ್ಯಾವಿದಾರಿ(ರೀ)ಶತಾವರೀಗುನ್ದ್ರಾಶೈವಾಲಕಹ್ಲಾರಕುಮುದೋತ್ಪಲಕದಲೀಕನ್ದಲೀದೂರ್ವಾಮೂರ್ವಾಪ್ರಭೃತೀನಿ ಕಾಕೋಲ್ಯಾದಿರ್ನ್ಯಗ್ರೋಧಾದಿಸ್ತೃಣಪಂಚಮೂಲಮಿತಿ ಸಮಾಸೇನ ಪಿತ್ತಸಂಶಮನೋ ವರ್ಗಃ.

ಪಿತ್ತಸಂಶಮನ ವರ್ಗ

(ಸು. 147).

ಶ್ರೀಗಂಧ, ರಕ್ತಚಂದನ, ಮುಡಿವಾಳ, ಲಾವಂಚ, ಮಂಜಿಷ್ಠ, ಕುಟುಂಬಿನೀ (ತೆಲಗು ಪಾಲಕೂರ; ಕ್ಷೀರ ಕಾಕೋಲೀ ಎಂತ ನಿ. ಸಂ. ವ್ಯಾ.), ನೆಲಕುಂಬಳ, ಶತಾವರಿ (ಹಲವು ಮಕ್ಕಳ ತಾಯಿ), ಪ್ರಿಯಂಗು ಅಥವಾ ಸಣ್ಣ ದರ್ಭೆ (ಕುಶ), ಹಾವಸೆ, ಬಿಳೇ ನೈದಿಲೆ, ನೀಲ ನೈದಿಲೆ, ನೀಲತಾವರ, ಕದಲೀ (ರಸಬಾಳೆ), ತಾವರೆಬೀಜ (ಒಂದು ಜಾತಿಯ ಗಡ್ಡೆ ಎಂತ ನಿ. ಸಂ. ವ್ಯಾ.), ದೂರ್ವೆ, ಹೆಗ್ಗುರುಟಿಗೆ (ಮಲ. ಪೆರುಬ್ಬುರುಮ್ಬು), ಮುಂತಾದವುಗಳು, ಕಾಕೋಲ್ಯಾದಿಗಣ, ನ್ಯಗ್ರೋಧಾದಿಗಣ ಮತ್ತು ತೃಣಪಂಚಮೂಲ, ಇವು ಸಂಕ್ಷೇಪವಾಗಿ ಪಿತ್ತಸಂಶಮನವರ್ಗವಾಗಿರುತ್ತದೆ.

ಸರಾ ಪಾಠಾಂತರದಲ್ಲಿ 'ಕದಲೀ' (ಬಾಳೆ) ಪ್ರತ್ಯೇಕವಾಗಿ ಇಲ್ಲ. ಕಾಕೋಲ್ಯಾದಿ ಮತ್ತು ನ್ಯಗ್ರೋಧಾದಿಗಳ ಮಧ್ಯ 'ಶಾರಿವಾದಿರಂಜನಾದಿರುತ್ಪಲಾದಿಃ' ಎಂಬದು ಉಂಟು. ಆ ಪ್ರಕಾರ ಶಾರಿವಾದಿಗಣ, ಅಂಜನಾದಿಗಣ ಮತ್ತು ಉತ್ಪಲಾದಿಗಣ (18—19 ಮತ್ತು 25ನೇ ಗಣಗಳು) ಪಿತ್ತಸಂಶಮನವರ್ಗದಲ್ಲಿ ಸೇರಿದವು. ಮೊದಲಿನ ಪಟ್ಟಿಯಲ್ಲಿ ಕಾಣುವ ಕೆಲವು ದ್ರವ್ಯಗಳು ಅಂತ್ಯದಲ್ಲಿ ನಿರ್ದೇಶಿಸಲ್ಪಟ್ಟ ಗಣಗಳಲ್ಲಿ ಸೇರಿದವಾದಾಗ್ಯೂ, ಅವುಗಳಲ್ಲಿ ಪ್ರತ್ಯೇಕವಾಗಿ ಪಿತ್ತಶಮನಗುಣವಿರುತ್ತದೆಂತ ತಿಳಿಸುವದಕ್ಕಾಗಿ ಅವುಗಳನ್ನು ಪುನಃ ಹೇಳಿದ್ದಂತ ನಿ. ಸಂ. ವ್ಯಾ. (ಪು 143

7. ಕಾಲೇಯಕಾಗುರುತಿಲಪರ್ಣೀಕುಷ್ಠಹರಿದ್ರಾಶೀತಶಿವಶತಪುಷ್ಪಾಸರಲಾರಾಸ್ನಾಪ್ರಕೀರ್ಯೋದಕೀರ್ಯೇಙ್ಗುದೀಸುಮನಃಕಾಕಾದನೀಲಾಂಗಲಕೀಹಸ್ತಿಕರ್ಣಮುಂಜಾತಕಲಾಮಜ್ಜಕಪ್ರಭೃತೀನಿ ವಲ್ಲೀಕಣ್ಟಕಪಂಚಮೂಲ್ಯೌ ಪಿಪ್ಪಲ್ಯಾದಿರ್ಬೃಹತ್ಯಾದಿರ್ಮುಷ್ಕಕಾದಿರ್ವಚಾದಿಃ ಸುರಸಾದಿರಾರಗ್ವಧಾದಿರಿತಿ ಸಮಾಸೇನ ಶ್ಲೇಷ್ಮಸಂಶಮನೋ ವರ್ಗ. (ಸು. 147).

ಕಫಸಂಶಮನ ವರ್ಗ

ಕುಂಕುಮಾಗರು, ಅಗಿಲುಗಂಧ, ತಿರಿಕಾಳ (ತಿಲೋಣಿ, ಅಜಗನ್ಧಾ, ಮಲ. ಕಾರವೇಲ), ಚಂಗಲಕೋಷ್ಠ, ಅರಸಿನ, ಬಡೇಸೋಪಿ (ಕರ್ಪೂರ ಎಂತ ನಿ. ಸಂ. ವ್ಯಾ.), ಸಬ್ಬಸಿಗೆ, ತಿಗಡೆ, ರಾಸ್ನೆ, ಮುಳ್ಳು (ಬಿಳೇ) ಹೊಂಗೆ, ದೊಡ್ಡ ಹೊಂಗೆ (ಹೊಂಗೆ ಎಂತ ನಿ. ಸಂ. ವ್ಯಾ.), ಇಂಗಳ ಮರ, ಜಾಜಿ, ಕಾಕತೊಂಡೆ (ಮಲ. ಕಾಕತೊಂಡಿ), ಕೋಳಿಕುಟುಮ (ಶಿವಶಕ್ತಿ; ಮಲ. ಮೆತ್ತೊನ್ನಿ), ನೆಲಪಾಲಾಶ (ಅನೆಕಿವಿಪಾಲಾಶ), ಅಥವಾ ಕೆಂಪು ಹರಳುಗಿಡ, ಮುಂಜಾತಕ (ಉತ್ತರದೇಶದಲ್ಲಿರುವ ಒಂದು ಜಾತಿಯ ಚಿಕ್ಕ ಗಡ್ಡೆ ಎಂತ ನಿ. ಸಂ. ವ್ಯಾ.; ಹೂ-ಪಲ್ಯಕ್ಕೆ ಆಗುವ ಒಂದು ಜಾತಿ ಎಂತ ಶಾ. ನಿ.) ಮತ್ತು ಅರಸಿನ ಲಾವಂಚ ಮುಂತಾದವು, ವಲ್ಲೀ ಪಂಚಮೂಲ, ಕಂಟಕಪಂಚಮೂಲ, ಪಿಪ್ಪಲ್ಯಾದಿಗಣ, ಬೃಹತ್ಯಾದಿಗಣ, ಮುಷ್ಕಕಾದಿಗಣ,

ವಚಾದಿಗಣ, ಸುರಸಾದಿಗಣ ಮತ್ತು ಆರಗ್ವಧಾದಿಗಣ, ಇವು ಸಂಕ್ಷೇಪವಾಗಿ ಕಫಸಂಶಮನ ವರ್ಗವಾಗಿರುತ್ತದೆ.

ಔಷಧಗಳ ಉಪಯೋಗಕ್ಕೆ ಬಲವಿಚಾರ ಅಗತ್ಯ.

8. ತತ್ರ ಸರ್ವಾಣ್ಯೇವೌಷಧಾನಿ ವ್ಯಾಧ್ಯಗ್ನಿಪುರುಷಬಲಾನ್ಯಭಿಸಮೀಕ್ಷ್ಯ ವಿದಧ್ಯಾತ್ (ಸು. 147).

ಮೇಲೆ ಹೇಳಲ್ಪಟ್ಟ ಔಷಧಗಳನ್ನೆಲ್ಲಾ, ರೋಗದ ಬಲ, ರೋಗಿಯ ಅಗ್ನಿಬಲ ಮತ್ತು ರೋಗಿಯ ಬಲಗಳನ್ನು ಚನ್ನಾಗಿ ನೋಡಿಕೊಂಡು, ಕೊಡತಕ್ಕದ್ದು.

ಹೀಗೆ ಅಂಥಾ ಬಲವಿಚಾರಮಾಡದೆ ಔಷಧಗಳನ್ನು ಪ್ರಯೋಗಿಸುವದರಿಂದ ಉಂಟಾಗುವ ದೋಷಗಳು ಉಪೋದ್ಘಾತದ 24ನೆಯ ಸಂಖ್ಯೆಯಲ್ಲಿ (ಪುಟ 32) ವಿವರಿಸಲ್ಪಟ್ಟಿವೆ

# ಆಯುರ್ವೇದಸಾರ

## ದ್ವಿತೀಯಭಾಗದ ಪೂರ್ವಖಂಡ.

(ಚಿಕಿತ್ಸಾಸ್ಥಾನ)

॥ ಶ್ರೀ ಗುರುಭ್ಯೋ ನಮಃ ॥

ನಮೋ ನೃಸಿಂಹದೇವಾಯ ಜನಾನಾಂ ಸುಖಹೇತವೇ ।
ಯಃ ಪ್ರೀತಃ ಸ್ಯಾತ್ಸಮಾನೇನ ಯತ್ನೇನ ರಮಯಾ ಸಹ
ಬುದ್ಧಿದಶ್ಚ ಮರುತ್ಪುತ್ರೋ ವಿಘ್ನಹಾರೀ ಗಜಾನನಃ ।
ಧನ್ವನ್ತರಿಶ್ಚ ಜ್ಞಾನಾಯ ಪ್ರಸನ್ನಾಸ್ಸನ್ತು ಮೇ ಧ್ರುವಮ್
ಅನುಗೃಹ್ಣಾತು ಮೇ ಶುದ್ಧಾಂ ಪ್ರತಿಭಾಂ ಚ ಸರಸ್ವತೀ ।
ಯಸ್ಯಾಃ ಕೃಪಾಂ ವಿನಾ ನ ಸ್ಯಾದ್ವೈಶದ್ಯಂ ಚಾರ್ಥವರ್ಣನೇ ।

## ಅಧ್ಯಾಯ I

### ಉನ್ಮಾದ (ಹುಚ್ಚು)

(Insanity, Hypochondriasis, and Hysteria.)

1. ಮದಯನ್ತ್ಯುದ್ಗತಾ ದೋಷಾ ಯಸ್ಮಾದುನ್ಮಾರ್ಗಮಾಶ್ರಿತಾಃ ।
ಮಾನಸೋಽಯಮತೋ ವ್ಯಾಧಿರುನ್ಮಾದ ಇತಿ ಕೀರ್ತಿತಃ ॥ (ಸು. 896)

ಉನ್ಮಾದದ ವ್ಯುತ್ಪತ್ತಿ ಮತ್ತು ನಿರುಕ್ತಿ

(ವಾತಾದಿ) ದೋಷಗಳು ಕೆದರಿ ಉನ್ಮುಖವಾದ ಮಾರ್ಗವನ್ನು ಆಶ್ರಯಿಸಿಕೊಂಡು ಮದವನ್ನು (ಭ್ರಾಂತಿಯನ್ನು) ಉಂಟುಮಾಡುತ್ತವಾದ್ದರಿಂದ, ಮನಃಸಂಬಂಧವಾದ ಈ ರೋಗವು 'ಉನ್ಮಾದ' ಎಂತ ಕರೆಯಲ್ಪಡುತ್ತದೆ.

ಉನ್ಮಾದಂ ಪುನರ್ಮನೋ-ಬುದ್ಧಿ-ಸಂಜ್ಞಾ-ಜ್ಞಾನ-ಸ್ಮೃತಿ-ಭಕ್ತಿ-ಶೀಲ-ಚೇಷ್ಟಾಚಾರ-ವಿಭ್ರಮಂ ವಿದ್ಯಾತ್ ॥ (ಚ. 229)

'ಉನ್ಮಾದ' ಎಂಬದು ಮನಸ್ಸು, ಬುದ್ಧಿ, ಎಚ್ಚರ, ಜ್ಞಾನ, ನೆನಪು, ವಿಶ್ವಾಸ, ಶೀಲ (ನಡತೆ)-ಚೇಷ್ಟೆ, ಆಚಾರ, ಇವುಗಳ ವಿಕಾರ, (ಭ್ರಾಂತಿ, ಸುಳಿಯುವಿಕೆ) ಎಂತ ತಿಳಿಯಬೇಕು.

ಹರಾ ಹುಚ್ಚಿನ ಭೇದವಾಗಿ ಪಾಶ್ಚಾತ್ಯ ವೈದ್ಯಗ್ರಂಥಗಳಲ್ಲಿ ಸಾಧಾರಣವಾಗಿ ವರ್ಣಿಸಲ್ಪಡುವ ಇಮ್ಬೆಸಿಲಿಟಿ (Imbecility)-ಬುದ್ಧಿಹೀನತೆ-ಎಂಬ ವ್ಯಾಧಿಯು ಅಪಸ್ಮಾರದ ಅಧ್ಯಾಯದಲ್ಲಿ 'ಅತತ್ವಾಭಿನಿವೇಶ' ಎಂಬ ನಾಮದಿಂದ ವರ್ಣಿತವಾಗಿದೆ

2\. ವಿರುದ್ಧದುಷ್ಟಾಶುಚಿಭೋಜನಾನಿ ಪ್ರಧರ್ಷಣಂ ದೇವಗುರುದ್ವಿಜಾನಾಮ್ |
ಉನ್ಮಾದಹೇತುರ್ಭಯಹರ್ಷಪೂರ್ವೋ ಮನೋಭಿಘಾತೋ (ತೋ) ವಿಷ
ಮಾಶ್ಚಚೇಷ್ಟಾಃ ||
ತೈರಲ್ಪಸತ್ವಸ್ಯ ಮಲಾಃ ಪ್ರದುಷ್ಟಾ ಬುದ್ಧೇರ್ನಿವಾಸಂ ಹೃದಯಂ ಪ್ರದೂಷ್ಯ |
ಸ್ರೋತಾಂಸ್ಯಧಿಷ್ಠಾಯ ಮನೋವಹಾನಿ ಪ್ರಮೋಹಯನ್ತ್ಯಾಶು ನರಸ್ಯ ಚೇತಃ ||
(ಚ. 607)

ಉನ್ಮಾದದ ಸಾಮಾನ್ಯ ಹೇತು ಮತ್ತು ಸಂಪ್ರಾಪ್ತಿ

(ಹಾಲನ್ನೂ ಮೀನನ್ನೂ ಒಟ್ಟಾಗಿ ಸೇವಿಸುವದು ಮುಂತಾದ ಸಂಯೋಗ) ವಿರುದ್ಧವಾದ, (ವಿಷಪದಾರ್ಥ ಮುಂತಾದ್ದು ಸೇರಿ) ದೋಷಯುಕ್ತವಾದ, ಮತ್ತು ಶುಚಿಯಲ್ಲದ ಭೋಜನಗಳು, ದೇವತೆ, ಗುರು, ಬ್ರಾಹ್ಮಣರನ್ನು ದರ್ಪದಿಂದ ಅವಮಾನಿಸುವದು, ಭಯ-ಹರ್ಷಗಳಿಂದ ಮನಸ್ಸಿಗೆ ಪೆಟ್ಟು ಆಗುವದು (ಅತಿಯಾದ ಭಯ ಅಥವಾ ಅತಿಹರ್ಷ), ವಿಷಮವಾದ ಅಂಗಚೇಷ್ಟೆಗಳು, ಇವು ಉನ್ಮಾದಕ್ಕೆ ಹೇತುವಾಗಿರುತ್ತವೆ ಅವುಗಳಿಂದ ಅಲ್ಪಸತ್ವವುಳ್ಳವನಲ್ಲಿ (ನರಮಂಡಲದ ಅಶಕ್ತಿಯುಳ್ಳವನಲ್ಲಿ) ವಾತಾದಿ ದೋಷಗಳು ವಿಶೇಷವಾಗಿ ಕೆಡಿಸಲ್ಪಟ್ಟು, ಬುದ್ಧಿಯ ವಾಸಸ್ಥಾನವಾದ ಹೃದಯವನ್ನು ಬಹಳವಾಗಿ ಕೆಡಿಸಿ, ಮನೋವಹ ಸ್ರೋತಸ್ಸುಗಳನ್ನು (ಮಿದುಳಿಗೆ ಸಂಬಂಧಪಟ್ಟ ನರಗಳನ್ನು) ಸ್ವಾಧೀನ ಮಾಡಿಕೊಂಡು, ಮನುಷ್ಯನ ಚಿತ್ತವನ್ನು (ಮನಸ್ಸನ್ನು) ಭ್ರಮಪಡಿಸುತ್ತವೆ.

ಷರಾ ನರಮಂಡಲಕ್ಕೆ ಕೇಂದ್ರಸ್ಥಾನವಾದ ಮಿದುಳು ಮತ್ತು ಅಲ್ಲಿಂದ ಹೊರಟು ಬೆನ್ನ ಕೋಲಿಬುಡಿನೊಳಗೆ ಸುರಕ್ಷಿತವಾಗಿರುವ ಪ್ರಧಾನನರಕ್ಕೂ ಆ ಮಂಡಲದ ಪರಿಧಿಯಾದ ಇಂದ್ರಿಯಗಳು ಮೊದಲಾದ ಅಂಗವಿಭಾಗಗಳಿಗೂ ಮಧ್ಯವಿದ್ಯುಚ್ಛಕ್ತಿಯ ತಂತಿಗಳ ಹಾಗೆ ಇರುವ ಅಸಂಖ್ಯಾತವಾದ ನರಗಳಲ್ಲಿ ಎರಡು ವಿಧವಾದ ಎಳೆಗಳಿದ್ದು ಅವುಗಳೊಳಗೆ 'ಮೂಲಗ' ಎಂಬ ವರ್ಗದ ಎಳೆಗಳಿಂದ ವೇಗಗಳು ಪರಿಧಿಯಿಂದ ಮಿದುಳಿಗೆ ಹೋಗಿ ಇಂದ್ರಿಯಜ್ಞಾನ ಉಂಟಾಗುವದೆಂತಲೂ, ಇತರ 'ಅಂತಗ' ಎಂಬ ಎಳೆಗಳ ಪರಿಮುಖವಾಗಿ ವೇಗಗಳು ಕೇಂದ್ರಸ್ಥಾನದಿಂದ ಪರಿಧಿಗೆ ಹೋಗಿ ಬೇರೆ ಬೇರೆ ಚೇಷ್ಟೆಗಳು ಉಂಟಾಗುವದೆಂತಲೂ ಜ್ಞಾನವಿಶೇಷಗಳಿಗೆಲ್ಲಾ ಮೂಲಸ್ಥಾನ ಮಿದುಳೆಂತಲೂ ಪಾಶ್ಚಾತ್ಯ ಶಾಸ್ತ್ರಜ್ಞರ ನಿರ್ಣಯವಿರುತ್ತದೆ ನರಮಂಡಲದಲ್ಲಿ ಅತ್ತಿತ್ತ ಸಂಚರಿಸುತ್ತಿರುವ ವೇಗಗಳೆಂಬದು ವಾಯುವಿನ ವೇಗಗಳು. ಇಂದ್ರಿಯಜ್ಞಾನಗಳಿಗೆ ಮನಸ್ಸು ಮುಖ್ಯ, ಅವುಗಳಿಗೆಲ್ಲ ವಾಯುವು ನಾಯಕನು, ಆ ಮನಸ್ಸು ಬುದ್ಧಿ ಮತ್ತು ಆತ್ಮಗಳಿಗೆ ವಾಸಸ್ಥಾನ ಹೃದಯ ಎಂಬದು ಆಯುರ್ವೇದೀಯ ಮತ ಈ ವಿಷಯವನ್ನು ಸವಿಸ್ತಾರವಾಗಿ ವರ್ಣಿಸಿರುವ 'ನರಮಂಡಲದ ರಚನೆ ಮತ್ತು ಅಧಿಕಾರ' ಎಂಬ ಪ್ರಕರಣವನ್ನು ಉಪೋದ್ಘಾತದ 3ನೇ ಪರಿಶಿಷ್ಟವಾಗಿ ಸೇರಿಸಿರುತ್ತದೆ ಮೇಲಿನ ಶ್ಲೋಕದಲ್ಲಿ ಮನೋವಹ ಸ್ರೋತಸ್ಸುಗಳು ಎಂದದ್ದು ನರಗಳಿಗೆ ಮನಸ್ಸು ಮಿದುಳಿನ ಪರಿಮುಖವಾಗಿ ಕೆಲಸ ಮಾಡುತ್ತದೆಂಬದು ಆಯುರ್ವೇದಕ್ಕೆ ಸಮ್ಮತವಾದದ್ದೇ ನರಗಳಿಗೂ ರಕ್ತಕ್ಕೂ ಇರುವ ಪರಸ್ಪರ ಸಂಬಂಧವನ್ನು ಕುರಿತು ಒಬ್ಬರು ಪಾಶ್ಚಾತ್ಯ ಡಾಕ್ಟರರು ಉನ್ಮಾದ ಚಿಕಿತ್ಸೆಯಲ್ಲಿ ಬರೆದಿರುವದೇನೆಂದರೆ –

"There can be no question that the quantity and quality of blood play a weighty part in the pathology of Insanity . . it has been known that similar symptoms are produced by too much and too little blood in the brain In that continued active relation between the blood and the nervous element whereby due reparative material is brought and waste matter carried away, it amounts to much the same thing whether through stasis of the blood the

"ಉನ್ಮಾದದ ಹೇತು ಮತ್ತು ಲಕ್ಷಣ ವಿಚಾರದಲ್ಲಿ ರಕ್ತದ ಪ್ರಮಾಣ ಮತ್ತು ಗುಣ (ಶುದ್ಧಾಶುದ್ಧತೆ) ಮುಖ್ಯವೆನ್ನುವದಕ್ಕೆ ಸಂದೇಹವಿರಲಾರದು. ಮಿದುಳಿನಲ್ಲಿಯ ರಕ್ತದ ಆಧಿಕ್ಯದಿಂದಲೂ ಹೀನತೆಯಿಂದಲೂ ಸಮಾನ ಲಕ್ಷಣಗಳು ಉಂಟಾಗುತ್ತವೆಂತ ತಿಳಿದುಬಂದದೆ. (ನರದಲ್ಲಿಯ) ಕ್ಷಯಿಸಿಹೋದ ಅಂಶವನ್ನು ಭರ್ತಿಮಾಡಿ ಮಲಾಂಶವನ್ನು ತೆಗೆದು ಒಯ್ಯುವ ಕೆಲಸವು ನಿರಂತರವಾಗಿ ಚಟುವಟಿಕೆಯಿಂದ ನಡೆಯುತ್ತಿರುವ ಹಾಗೆ ನರ ಎಂಬ ಅಂಗಕ್ಕೂ ರಕ್ತಕ್ಕೂ ಏರ್ಪಟ್ಟಿರುವ ಪರಸ್ಪರ ಸಂಬಂಧದಲ್ಲಿ ರಕ್ತದ ಅಧಿಕಾರಭಂಗದ ದೆಸೆಯಿಂದ ಮಲಾಂಶ ಹೋಗಿ, ಬೇಕಾದಲ್ಲಿಗೆ ಸಾರಾಂಶ ಬಂದೊದಗದಿದ್ದರೂ, ರಕ್ತದ ಗುಣಹೀನತೆಯಿಂದಾಗಲೀ ರಕ್ತಸಂಚಾರದ ಕೊರತೆಯಿಂದಾಗಲೀ ಅದೇ ಫಲ ಸಂಭವಿಸಿದರೂ,

refuse is not carried away nor the supply brought to the spot where it is wanted or whether the like result ensues by reason of a defective blood or a deficient circulation" Dr Henry Maundsby (A system of medicine by Dr. J. R Reynolds volume II, pages 50 and 51.)

ಬಹಳ ಮಟ್ಟಿಗೆ ಒಂದೇ ಎನ್ನಬೇಕು." ಇದರಿಂದ ರಕ್ತದ ಶಿರೆಗಳ ಸಹಾಯ ವಿನಾ ನರಗಳು ಆರೋಗ್ಯಸ್ಥಿತಿಯಲ್ಲಿರಲಾರವು ಎಂತ ಸ್ಪಷ್ಟವಾಗುತ್ತದೆ ಶುದ್ಧ ರಕ್ತಕ್ಕೆ ಆಶ್ರಯಸ್ಥಾನ ಹೃದಯ ಎಂಬದು ಸರ್ವಸಮ್ಮತ. ಆದ್ದರಿಂದ, ರಕ್ತದ ದೋಷದಂತೆ ಅದರ ಸೂಕ್ಷ್ಮ ಶಿರೆಗಳೊಂದಿಗೆ ಕೂಡಿಕೊಂಡೇ ಇರುವಂಥಾ ನರಗಳ ದೋಷ ಸಹ ಹೃದಯದಲ್ಲಿ ಆರಂಭಿಸುತ್ತದೆನ್ನುವದಕ್ಕೆ ಬಲ ಕಾಣುತ್ತದೆ. ಇದಲ್ಲದೆ ಉನ್ಮಾದದಿಂದ ಸತ್ತವರ ಮಿದುಳನ್ನು ಶೋಧಿಸಿದ್ದಲ್ಲಿ, ಅದರ ಸ್ಥೂಲ (ಶಾರೀರಿಕ) ರೂಪದಲ್ಲಿ ವಿಕಾರಗಳೇನೂ ಕಾಣದ ದೃಷ್ಟಾಂತಗಳು ಅನೇಕ ಸಿಕ್ಕಿಯವೆಯಂತೆ ಅದರ ಅಧಿಕಾರದ ವಿಕಾರವೇ ಉನ್ಮಾದದಲ್ಲಿ ಕಾಣುವಂಥಾದ್ದು ಇದಕ್ಕೆ ಅನುಗುಣವಾಗಿ ಮೂಲವಚನದಲ್ಲಿ ದೋಷಗಳು (ಶುದ್ಧ ರಕ್ತದ ಮನೆಯಾದ) ಹೃದಯವನ್ನು ಕೆಡಿಸಿ ಮನೋವಹ ಸ್ರೋತಸ್ಸುಗಳನ್ನು (ಮಿದುಳಿಗೆ ಹೋಗುವ ನರಗಳನ್ನು) ಸ್ವಾಧೀನಮಾಡಿಕೊಂಡು (ಕೆಡಿಸಿ ಅಲ್ಲ) ಚಿತ್ತಭ್ರಮೆಯನ್ನುಂಟುಮಾಡುತ್ತವೆ ಎಂತ ಹೇಳಲ್ಪಟ್ಟಿದೆ

3. ಇಹ ಖಲು ಪಂಚ ಉನ್ಮಾದಾ ಭವನ್ತಿ | ತದ್ಯಥಾ —ವಾತಪಿತ್ತಕಫಸನ್ನಿಪಾತಾ-
ಗನ್ತುನಿಮಿತ್ತಾಸ್ತತ್ರ ದೋಷನಿಮಿತ್ತಾಶ್ಚತ್ವಾರಃ (ಚ. 229)

ಉನ್ಮಾದಭೇದಗಳು

ಉನ್ಮಾದವು ವಾತಪಿತ್ತಕಫಗಳಿಂದ ಪ್ರತ್ಯೇಕವಾಗಿ ಒಂದೊಂದು, ಸನ್ನಿಪಾತದಿಂದ ಒಂದು, ಆಗಂತು ಒಂದು, ಹೀಗೆ ಐದು ವಿಧ. ಅವುಗಳೊಳಗೆ ದೋಷಗಳಿಂದ ಉಂಟಾಗುವಂಥವು ನಾಲ್ಕು.

ಪರಾ ಸುಶ್ರುತನು ದೋಷಗಳಿಂದ ನಾಲ್ಕು, ಮನೋದುಃಖದಿಂದ ಒಂದು, ವಿಷದಿಂದ ಒಂದು, ಹೀಗೆ ಉನ್ಮಾದಗಳು ಆರು ಎಂತ ಹೇಳಿದ್ದಾನೆ (ಸು 896)

ಆ 5ನೇ, 6ನೇ ಉನ್ಮಾದಗಳನ್ನು ಕುರಿತಾದ ಸುಶ್ರುತನ ಉಪದೇಶವನ್ನು ಸಹ ಕೆಳಗೆ ಬರೆಯಲಾಗುತ್ತದೆ ಉನ್ಮಾದವು ಬಲವಾಗಿ ಬೆಳೆಯದೆ ಹೊಸತಾಗಿದ್ದರೆ, ಅದಕ್ಕೆ 'ಮದ' ಎನ್ನುವದು ಎಂತಲೂ ಸುಶ್ರುತ ಬರದಿದ್ದಾನೆ ಚರಕನು ಆಗಂತು ಎಂದದ್ದು ಭೂತೋನ್ಮಾದ ಅದು ದೇವತೆ-ಋಷಿಗಳು-ಪಿತೃಗಳು ಮುಂತಾದವರ ಕೋಪದಿಂದ ಉಂಟಾಗುವಂಥಾದ್ದು ಈ ವಿಧದ ಪೀಡೆಗಳನ್ನು ಸುಶ್ರುತನು 'ಅಮಾನುಷೋಪಸರ್ಗಪ್ರತಿಷೇಧ' ಎಂಬ ಶಿರೋನಾಮದ ಅಧ್ಯಾಯದಲ್ಲಿ ಪ್ರತ್ಯೇಕವಾಗಿ ವರ್ಣಿಸಿ ಪ್ರತೀಕಾರ ಹೇಳಿರುತ್ತಾನೆ ಮನೋದುಃಖದಿಂದ ಉಂಟಾಗುವ ಉನ್ಮಾದವು ವಾತೋನ್ಮಾದದಲ್ಲಿ ಸೇರಿದ್ದು ಮತ್ತು ವಿಷದಿಂದುಂಟಾದ ಮನೋವಿಕಾರವು ವಿಷಚಿಕಿತ್ಸೆಯಲ್ಲಿಯಾಗಲೀ, ಮೂರ್ಛೆಯೊಳಗೆ ಸೇರಿದ ಮದ-ಸನ್ಯಾಸಗಳೊಳಗಾಗಲೀ ಸೇರುವಂಥಾದ್ದು, ಎಂತ ಚರಕನು ಅವುಗಳನ್ನು ಉನ್ಮಾದ ವಿಭಾಗಗಳಲ್ಲಿ ಬಿಟ್ಟಿರಬೇಕು ಆದಾಗ್ಯೂ ವಿಷದಿಂದ ಉತ್ಪನ್ನವಾದ ಮದವು, ದೀರ್ಘಕಾಲ ನಿಂತು, ನರಮಂಡಲವನ್ನು ದುರ್ಬಲಪಡಿಸಿದ ಸಂಗತಿಯಲ್ಲಿ ಅಂಥಾ ರೋಗಿಗೆ ಉನ್ಮಾದಚಿಕಿತ್ಸೆಯನ್ನು ನಡಿಸುವದೇ ಯುಕ್ತವಾಗಿರುತ್ತದೆ

4. ಮೋಹೋದ್ವೇಗೌ ಸ್ವನಃ ಶ್ರೋತ್ರೇ ಗಾತ್ರಾಣಾಮಪಕರ್ಷಣಮ್ |
ಅತ್ಯುತ್ಸಾಹೋಽರುಚಿಶ್ಚಾನ್ನೇ ಸ್ವಪ್ನೇ ಕಲುಷಭೋಜನಮ್ |
ವಾಯುನೋನ್ಮಥನಂ ಚಾಪಿ ಭ್ರಮಶ್ಚ ಕ್ರಮತಸ್ತಥಾ |
ಯಸ್ಯ ಸ್ಯಾದಚಿರೇಣೈವಮುನ್ಮಾದಂ ಸೋಽಧಿಗಚ್ಛತಿ (ಸು. 896)

ಉನ್ಮಾದದ ಪೂರ್ವರೂಪ

ಕಾರಣವಿಲ್ಲದ ದುಃಖ ಮತ್ತು ಭಯ, ಕಿವಿಯೊಳಗೆ ಶಬ್ದ, ಶರೀರವನ್ನು ಬಗ್ಗಿಸಿಕೊಂಡಿರುವದು, ಅತಿಯಾದ ಉತ್ಸಾಹ, ಅನ್ನದಲ್ಲಿ ಅರುಚಿ, ಸ್ವಪ್ನದಲ್ಲಿ ಅಶುಚಿಭೋಜನ, ವಾಯುವು ಎದ್ದು ಸುಳಿಯುವದು ಮತ್ತು ಕ್ರಮೇಣ ಭ್ರಾಂತಿ, ಈ ಲಕ್ಷಣಗಳು ಯಾರಿಗೆ ಉಂಟಾಗುತ್ತವೋ ಅವನು ಹಾಗೆಯೇ ಬೇಗನೇ ಉನ್ಮಾದರೋಗವನ್ನು ಪಡೆಯುತ್ತಾನೆ.

5. ಧೀವಿಭ್ರಮಃ ಸತ್ತ್ವಪರಿಪ್ಲವಶ್ಚ ಪರ್ಯಾಕುಲಾ ದೃಷ್ಟಿರಧೀರತಾ ಚ ।
ಅಬದ್ಧವಾಕ್ತ್ವಂ ಹೃದಯಂ ಚ ಶೂನ್ಯಂ ಸಾಮಾನ್ಯಮುನ್ಮಾದಗದಸ್ಯ ಲಿಂಗಮ್ ।
ಸ ಮೂಢಚೇತಾ ನ ಸುಖಂ ನ ದುಃಖಂ ನಾಚಾರಧರ್ಮೌ ಕುತ ಏವ ಶಾನ್ತಿಮ್ ।
ವಿನ್ದತ್ಯಪಾಸ್ತಸ್ಮೃತಿಬುದ್ಧಿಸಂಜ್ಞೋ ಭ್ರಮತ್ಯಯಂ ಚೇತ ಇತಸ್ತತಶ್ಚ ।
(ಚ. 607)

ಉನ್ಮಾದದ ಸಾಮಾನ್ಯ ಲಕ್ಷಣ.

ಬುದ್ಧಿಭ್ರಮೆ, ಮನಶ್ಚಂಚಲತೆ, ಗಾಬರಿ ಅಥವಾ ಕಳವಳಪಟ್ಟ ದೃಷ್ಟಿ, ಪುಕ್ಕತನ, ಅಸಂಬದ್ಧ ಮಾತು, ಮನೋವಿಚಾರವಿಲ್ಲದಿರುವಿಕೆ (ತಲೆ ಶೂನ್ಯವಾಗಿರುವಿಕೆ), ಇವು ಉನ್ಮಾದ ರೋಗದ ಸಾಮಾನ್ಯ ಲಕ್ಷಣಗಳು. ಅಂಥವನ ಮನಸ್ಸಿನ ಗ್ರಹಣಶಕ್ತಿಯೂ ವಿಚಾರಶಕ್ತಿಯೂ ಮೌಢ್ಯವನ್ನು ಹೊಂದುವದರಿಂದ ಅವನು ಸುಖವನ್ನಾಗಲಿ ದುಃಖವನ್ನಾಗಲಿ ಪಡೆಯುವದಿಲ್ಲ. ಆಚಾರದ ಮತ್ತು ಧರ್ಮದ ವಿಚಾರ ಅವನಿಗಿರುವದಿಲ್ಲ. ಸಮಾಧಾನ ಎಲ್ಲಿಂದ? ನೆನಪು, ಬುದ್ಧಿ, ಬೋಧ ಸಹ ಇವನು ಕಳೆದುಕೊಂಡಿರುತ್ತಾನೆ. ಮತ್ತು ಇವನ ಮನಸ್ಸು ಅತ್ತಿತ್ತ ಸುಳಿಯುತ್ತಿರುತ್ತದೆ.

6. ರೂಕ್ಷಾಲ್ಪಶೀತಾನ್ನವಿರೇಕಧಾತುಕ್ಷಯೋಪವಾಸೈರನಿಲೋಽತಿವೃದ್ಧಃ ।
ಚಿಂತಾದಿಜುಷ್ಟಂ ಹೃದಯಂ ಪ್ರದೂಷ್ಯ ಬುದ್ಧಿಂ ಸ್ಮೃತಿಂ ಚಾಪ್ಯುಪಹನ್ತಿ ಶೀಘ್ರಮ್ ।
ಅಸ್ಥಾನಹಾಸಸ್ಮಿತನೃತ್ಯಗೀತವಾಗಂಗವಿಕ್ಷೇಪಣರೋದನಾನಿ ।
ಪಾರುಷ್ಯಕಾರ್ಶ್ಯಾರುಣವರ್ಣತಾ ಚ ಜೀರ್ಣೇ ಬಲಂ ಚಾನಿಲಜಸ್ಯ ರೂಪಮ್ ॥
(ಚ. 608)

ವಾತೋನ್ಮಾದದ ನಿದಾನ ಮತ್ತು ಲಕ್ಷಣ

ರೂಕ್ಷಗುಣದ, ಪ್ರಮಾಣದಲ್ಲಿ ಕಡಿಮೆಯಾದ, ಅಥವಾ ಶೀತವಾದ ಆಹಾರದಿಂದ, ವಿರೇಕ (ವಾಂತಿ ಅಥವಾ ಭೇದಿಯಿಂದ)ದಿಂದ ಧಾತುಕ್ಷಯದಿಂದ ಮತ್ತು ಉಪವಾಸದಿಂದ ವಾಯುವು ಅತಿಯಾಗಿ ಬೆಳೆದು, ಯೋಚನೆ ಮುಂತಾದವುಗಳಿಂದ ಪೀಡಿಸಲ್ಪಟ್ಟ ಮನಸ್ಸನ್ನು ಬಹಳವಾಗಿ ಕೆಡಿಸಿ, ಬೇಗನೇ ಬುದ್ಧಿಯನ್ನೂ ನೆನಪನ್ನೂ ನಾಶಮಾಡುವದು. ಅಯುಕ್ತವಾದ (ನಿಮಿತ್ತವಿಲ್ಲದ) ನಗುವಿಕೆ, ಮುಗುಳನಗೆ, ಕುಣಿಯುವಿಕೆ, ಹಾಡುವಿಕೆ, ಮಾತು, ಅಂಗಗಳ ಚಲನೆ ಮತ್ತು ಅಳುವಿಕೆ, ಶರೀರವು ದೊರಗು, ಕೃಶ ಮತ್ತು ಅರುಣ (ಕೆಂಪೊತ್ತಿದ ಕಪ್ಪು) ವರ್ಣವಾಗುವದು ಮತ್ತು ಉಂಡ ಆಹಾರವು ಜೀರ್ಣವಾಗಿರುವ ಕಾಲಗಳಲ್ಲಿ (ರೋಗವು) ಬಲಗೊಳ್ಳುವದು, ಇವು ವಾತಜ ಉನ್ಮಾದದ ಲಕ್ಷಣಗಳಾಗಿರುತ್ತವೆ.

ಸೂ. ನಿಷ್ಠುರವಾದ ಮಾತು, ಉಬ್ಬಸ, ಅಂಗಸಂಧುಗಳಲ್ಲಿ ನಡುಕು, ಚಟಿಕೆ ಹೊಡೆದು ಹಾಡುವದು ಮುಂತಾದ ಲಕ್ಷಣಗಳು ಸಹ ಹೇಳಲ್ಪಟ್ಟಿವೆ (ಸು. 896) ವಾತಾದಿ ದೋಷಗಳ ಸಾಮಾನ್ಯ ಲಕ್ಷಣಗಳನ್ನು ನೆನಪಿನಲ್ಲಿಟ್ಟುಕೊಂಡಲ್ಲಿ ಇಲ್ಲಿ ಹೇಳಲ್ಪಡದ ಲಕ್ಷಣಗಳು ಸಹ ದೋಷನಿರ್ಣಯಕ್ಕೆ ಸಹಾಯಕರವಾಗುವವು

7. ಅಜೀರ್ಣಕಟ್ವಮ್ಲವಿದಾಹ್ಯಶೀತೈರ್ಭೋಜ್ಯೈಶ್ಚಿತಂ ಪಿತ್ತಮುದೀರ್ಣವೇಗಮ್ ।
ಉನ್ಮಾದಮತ್ಯುಗ್ರಮನಾತ್ಮಕಸ್ಯ ಹೃದಿ ಶ್ರಿತಂ ಪೂರ್ವವದೇವ ಕುರ್ಯಾತ್ ॥

ಪಿತ್ತೋನ್ಮಾದದ ನಿದಾನ ಮತ್ತು ಲಕ್ಷಣ

ಅಮರ್ಷಸಂರಂಭವಿನಗ್ನಭಾವಾಃ ಸಂತರ್ಜನಾಭಿದ್ರವಣೌಷ್ಣ್ಯರೋಷಾಃ ।
ಪ್ರಚ್ಛಾಯಶೀತಾನ್ನಜಲಾಭಿಲಾಷಃ ಪೀತಾ ಚ ಭಾಃ ಪಿತ್ತಕೃತಸ್ಯ ಲಿಂಗಮ್ ॥
(ಚ. 608)

ಜೀರ್ಣಕ್ಕೆ ಕಷ್ಟವಾದ, ಕಾರವಾದ, ಹುಳಿಯಾದ, ವಿದಾಹಿಯಾದ ಮತ್ತು ಬಿಸಿಯಾದ ತೀನಿಗಳಿಂದ ವೃದ್ಧಿಯಾದ ಪಿತ್ತವು ವೇಗೋದ್ರೇಕವನ್ನು ಪಡೆದು, ಧೃತಿಯಿಲ್ಲದವನಲ್ಲಿ ಹೃದಯವನ್ನಾಶ್ರಯಿಸಿಕೊಂಡು, ಮೊದಲು ಹೇಳಿದ ರೀತಿಯಲ್ಲಿ ಅತಿ ಕಠಿನವಾದ ಉನ್ಮಾದವನ್ನುಂಟುಮಾಡುವದು.

ಸಹನಶಕ್ತಿ ಇಲ್ಲದಿರುವಿಕೆ, ಆರ್ಭಟೆ (ಗದ್ದಲ), ಬತ್ತಲೆಯಾಗಿರುವದು, ಗದರಿಸುವದು, ಓಡಿಸುವದು, ಮೈಬಿಸಿ, ಕೋಪ, ಶರೀರದ ಕಾಂತಿ ಅರಿಸಿನವಾಗುವದು, ಮತ್ತು ನೆರಳಿನ ಮತ್ತು ತಣ್ಣಗಾದ ಅನ್ನಪಾನಗಳ ಇಚ್ಛೆ, ಇವು ಪಿತ್ತಜ ಉನ್ಮಾದದ ಲಕ್ಷಣಗಳು.

ಷರಾ ಬಾಯಾರಿಕೆ ಬೆವರು ಮತ್ತು ಉರಿ ಬಹಳವಾಗಿರುವದು, ಅತಿ ಹಸಿವೆ, ನಿದ್ರೆಯಿಲ್ಲದಿರುವದು, ನೆರಳಲ್ಲಿ, ಗಾಳಿಯಿರುವಲ್ಲಿ, ನೀರಿನ ಮತ್ತು ತಂಪಾದ ಸ್ಥಳದ ಸಮೀಪದಲ್ಲಿ, ತಿರುಗುತ್ತಿರುವದು, ತಣ್ಣಗಿನ ನೀರು ತುಂಬಿರುವಲ್ಲಿ ಬೆಂಕಿ ಇರಬಹುದೆಂಬ ಸಂದೇಹ, ಹಗಲಲ್ಲಿ ನಕ್ಷತ್ರಗಳನ್ನು ಕಾಣುವದು, ಇವು ಸಹ ಪಿತ್ತೋನ್ಮಾದದ ಲಕ್ಷಣಗಳು ಎಂತ ಸು (ಸು. 896).

8. ಸಂಪೂರಣೈರ್ಮಂದವಿಚೇಷ್ಟಿತಸ್ಯ ಸೋಷ್ಮಾ ಕಫೋ ಮರ್ಮಣಿ ಸಂಪ್ರವೃದ್ಧಃ ಬುದ್ಧಿಂ ಸ್ಮೃತಿಂ ಚಾಪ್ಯುಪಹತ್ಯ ಚಿತ್ತಂ ಪ್ರಮೋಹಯನ್ ಸಂಜನಯೇದ್ವಿಕಾರಮ್ ॥

ಕಫೋನ್ಮಾದದ ನಿದಾನ ಮತ್ತು ಲಕ್ಷಣ

ವಾಕ್ಚೇಷ್ಟಿತಂ ಮಂದಮರೋಚಕಶ್ಚ ನಾರೀವಿವಿಕ್ತಪ್ರಿಯತಾತಿನಿದ್ರಾ ।
ಛರ್ದಿಶ್ಚ ಲಾಲಾ ಚ ಬಲಂ ಚ ಭುಕ್ತೇ ನಖಾದಿಶೌಕ್ಲ್ಯಂ ಚ ಕಫಾತ್ಮಕೇ ಸ್ಯಾತ್ ॥ (ಚ. 608)

ಹೊಟ್ಟೆತುಂಬಿಸಿಕೊಳ್ಳುವ ಹೊಟ್ಟೆಹೊರಕನಾಗಿರುವದರಿಂದಲೂ, ಸಾಕಷ್ಟು ವ್ಯಾಯಾಮವಿಲ್ಲದರಿಂದಲೂ, ಬಿಸಿಯುಕ್ತವಾದ ಕಫವು ಬಹಳವಾಗಿ ವೃದ್ಧಿಗೊಂಡು ಹೃದಯವನ್ನಾಶ್ರಯಿಸಿ, ಬುದ್ಧಿಯನ್ನೂ ನೆನವನ್ನೂ ಕೆಡಿಸಿ, ಮನಸ್ಸನ್ನು ಮೋಹಗೊಳಿಸಿ (ಭ್ರಾಂತಿಯನ್ನುಂಟುಮಾಡಿ), ಕಫಜ ಉನ್ಮಾದವನ್ನುಂಟುಮಾಡುತ್ತದೆ.

ಮಾತು ಮತ್ತು ಚೇಷ್ಟೆ ಕಡಮೆಯಾಗುವದು, ಅರುಚಿ, ಹೆಂಗಸಿನಲ್ಲಿಯೂ ನಿರ್ಜನ ಸ್ಥಳದಲ್ಲಿಯೂ ಪ್ರೀತಿ, ಅತಿ ನಿದ್ರೆ, ವಾಂತಿ, ಜೊಲ್ಲು, ಉಂಡ ಮೇಲೆ ರೋಗವು ಬಲಗೊಳ್ಳುವದು ಮತ್ತು ಉಗುರು ಮುಂತಾದವು ಬೆಳ್ಳಗಾಗಿರುವದು, ಇವು ಕಫಜ ಉನ್ಮಾದದ ಲಕ್ಷಣಗಳು.

ಷರಾ ಅಗ್ನಿಮಾಂದ್ಯ, ಆಲಸ್ಯ, ಕೆಮ್ಮು, ಅಲ್ಪವಾಗಿ ಉಣ್ಣುವದು, ಬಿಸಿಯಲ್ಲಿ ಪ್ರೀತಿ, ರಾತ್ರಿಕಾಲದಲ್ಲಿ ರೋಗದ ಪೀಡೆ ಹೆಚ್ಚುವದು, ಇವು ಸಹ ಕಫೋನ್ಮಾದದ ಲಕ್ಷಣಗಳೆಂತ ಸು (ಸು. 897)

9. ಯಃ ಸನ್ನಿಪಾತಪ್ರಭವೋಽತಿಘೋರಃ ಸರ್ವೈಃ ಸಮಸ್ತೈಃ ಸ ತು ಹೇತುಭಿಃ ಸ್ಯಾತ್ ।

ತ್ರಿದೋಷಜ ಉನ್ಮಾದದ ನಿದಾನ ಮತ್ತು ಲಕ್ಷಣ.

ಸರ್ವಾಣಿ ರೂಪಾಣಿ ಬಿಭರ್ತಿ ತಾದೃಗ್ವಿರುದ್ಧಭೈಷಜ್ಯವಿಧಿರ್ವಿವರ್ಜ್ಯಃ ॥
(ಚ. 608)

ಮೂರು ದೋಷಗಳು ಕೂಡಿಕೊಂಡುಂಟುಮಾಡುವ ಉನ್ಮಾದವು ಅತಿ ಘೋರವಾದ ವಾತಾದಿಗಳಿಗೆ ಪ್ರತ್ಯೇಕವಾಗಿ ಹೇಳಲ್ಪಟ್ಟ ಎಲ್ಲಾ ಕಾರಣಗಳು ಸೇರಿ ಆಗುವಂಥಾದ್ದು. ಅದರಲ್ಲಿ (ಹಿಂದೆ ಹೇಳಲ್ಪಟ್ಟ) ಎಲ್ಲಾ ಲಕ್ಷಣಗಳಿರುತ್ತವೆ. ಅಂಥಾ ಉನ್ಮಾದವು ಔಷಧೋಪಯೋಗದ ವಿಧಿಗಳಿಗೆ ವಿರುದ್ಧವಾದ್ದರಿಂದ ಅದನ್ನು (ಚಿಕಿತ್ಸೆಮಾಡದೆ) ಬಿಟ್ಟುಬಿಡತಕ್ಕದ್ದು.

ಷರಾ ತ್ರಿದೋಷಜ ಉನ್ಮಾದವು ಕೆಲವು ಸಂದರ್ಭದಲ್ಲಿ ಸಾಧ್ಯವಾಗುತ್ತದೆ, ಆದರೆ ಎಲ್ಲಾ ಲಕ್ಷಣಗಳಿಂದ ಸಂಪೂರ್ಣವಾಗಿದ್ದರೆ ಅದು ಅಸಾಧ್ಯ ಎಂತ ಸು (ಪು. 897) ಇದೇ ಮತವೇ ಚರಕನದಾಗಿರಬೇಕು ಈ ವಾಕ್ಯಗಳಿಂದಲೂ ಕಫಜ ಉನ್ಮಾದಕ್ಕೆ ಬಿಸಿಯುಕ್ತವಾದ (ಸೋಷ್ಮಾ) ಕಫವು ಕರ್ತೃ ಎಂತ ಹೇಳಲ್ಪಟ್ಟದ್ದರಿಂದಲೂ ಅನೇಕ ವ್ಯಾಖ್ಯಾನಕಾರರು ಗಲಿಬಿಲಿಪಟ್ಟ ಹಾಗೆ ಕಾಣುತ್ತದೆ. ಕೆಲವರು 'ಸೋಷ್ಮಾ' ಎಂದರೆ ಅತಿ ಶಕ್ತಿಯುಳ್ಳ ಎಂತ ಅರ್ಥ ಮಾಡಿದ್ದಾರೆಂತಲೂ, ಕೆಲವರು 'ಸೋಷ್ಮಾ' ಎಂತ ಹೇಳಿದ್ದು ಕಫಪಿತ್ತಗಳು ಕೂಡಿ ದ್ವಂದ್ವಜ ಉನ್ಮಾದವನ್ನುಂಟುಮಾಡುವದುಂಟೆಂತ ಸೂಚಿಸುವದಕ್ಕೆ ಮಾತ್ರ ಎಂತ ಬರದಿದ್ದಾರೆಂತಲೂ, ಮ ವ್ಯಾ ಹೇಳುತ್ತದೆ (ಪು 123) ಯಾವ ಉನ್ಮಾದವಾದರೂ ತ್ರಿದೋಷಗಳ ವಿನಾ ಉಂಟಾಗುವದಿಲ್ಲ ಮತ್ತು ಮೇಲೆ ಹೇಳಲ್ಪಟ್ಟ ವಿಭಾಗಗಳು ಪ್ರಬಲವಾದ ದೋಷಗಳ ಮೇಲೆ ಮಾಡಲ್ಪಟ್ಟವು ಎಂತ ತಿಳಿದರೆ ಅಂಥಾ ಗಲಿಬಿಲಿಗೆ ಎಡೆ ಇರಲಾರದು ಬಯಸಲ್ಪಟ್ಟ ಮನೋರಥಗಳನ್ನು ಸಾಧಿಸತಕ್ಕಂಥಾದ್ದು ಹೃದಯದಲ್ಲಿರುವ ಸಾಧಕಪಿತ್ತ ಎಂತ ಹೇಳಲ್ಪಟ್ಟದೆ (೧ನೇ ಭಾಗದ V 17 ನೋಡಿ). ಉನ್ಮಾದಕ್ಕೆ ಪಿತ್ತದಲ್ಲಿ ದೋಷ ಉಂಟಾಗಿರಬೇಕು "ವಿಷಯಗಳಲ್ಲಿ ಒಳ್ಳೇ ಪ್ರವೃತ್ತಿಯನ್ನೂ, ಕ್ರಿಯೆಗಳ ಕ್ರಮವಾದ ಪ್ರವೃತ್ತಿಯನ್ನೂ" ಸಂಪಾದಿಸುವಂಥಾದ್ದು ವಾಯುವು ಎಂತ ಹೇಳಲ್ಪಟ್ಟಿರುವದರಿಂದ (೧ನೇ ಭಾಗದ V 6 ನೋಡಿ), ವಾಯುದೋಷವು ಉನ್ಮಾದಕ್ಕೆ ಅಗತ್ಯ ಎಂತ ತಿಳಿಯಬೇಕು "ತಲೆಯಲ್ಲಿರುವ ಕಫವು ಜಡ್ಡನ್ನು ಕೊಟ್ಟು ತೃಪ್ತಿಪಡಿಸುವ ಅಧಿಕಾರವುಳ್ಳದ್ದಾಗಿರುವದರಿಂದ, ತನ್ನ ವೀರ್ಯದಿಂದ ಇಂದ್ರಿಯಗಳಿಗೆಲ್ಲಾ ಅನುಗ್ರಹಮಾಡುತ್ತದೆ" (೧ನೇ ಭಾಗದ V 25 ನೋಡಿ) ಇಂಥಾ ಕಫದೋಷ ಸಹ ಉನ್ಮಾದದಲ್ಲಿರುವದು ಸಾಮಾನ್ಯ ಲಕ್ಷಣ ಈ ಜಡ್ಡು ಕಡಿಮೆಯಾಗಬೇಕಾದರೆ (ಮಿದುಳು ಒಣಗಬೇಕಾದರೆ) ಕಫವು ಬಿಸಿಯಾಗಬೇಕು, ಅಂದರೆ ಅದರೊಂದಿಗೆ ಪಿತ್ತಸೇರಬೇಕು ಆದ್ದರಿಂದಲೇ ಕಫಜ ಉನ್ಮಾದದ ನಿದಾನ ವರ್ಣಿಸುವಲ್ಲಿ 'ಸೋಷ್ಮಾಕಫಃ' ಎಂತ ಚರಕನು ಹೇಳಿದ್ದಾಗಿರಬೇಕು ಈ ಅಭಿಪ್ರಾಯಕ್ಕೆ ಅನುಸಾರವಾಗಿ ಕಫಜ ಉನ್ಮಾದದಲ್ಲಿಯೂ ಆರಂಭದಲ್ಲಿ ವಮನದೊಂದಿಗೆ ವಿರೇಚನ ಮಾಡಿಸಬೇಕೆಂತ ಉಪದೇಶ ಮಾಡಿದ್ದಾನೆ (ಕೆಳಗಿನ 30ನೇ ಸಂಖ್ಯೆ ನೋಡಿ)

10. ಚೋರೈರ್ನರೇಂದ್ರಪುರುಷೈರರಿಭಿಸ್ತಥಾನ್ಯೈ-
ರ್ವಿತ್ರಾಸಿತಸ್ಯ ಧನಬಾಂಧವಸಂಕ್ಷಯಾದ್ವಾ ।
ಗಾಢಂ ಕ್ಷತೇ ಮನಸಿ ಚ ಪ್ರಿಯಯಾ ರಿರಂಸೋ-
ರ್ಜಾಯೇತ ಚೋತ್ಕಟತರೋ ಮನಸೋ ವಿಕಾರಃ ॥
ಚಿತ್ರಂ ಸ ಜಲ್ಪತಿ ಮನೋನುಗತಂ ವಿಸಂಜ್ಞೋ ।
ಗಾಯತ್ಯಥೋ ಹಸತಿ ರೋದಿತಿ ಚಾಪಿ ಮೂಢಃ ॥

ಸುಶ್ರುತನ ಶೋಕೋನ್ಮಾದದ ನಿದಾನ ಮತ್ತು ಲಕ್ಷಣ.

(ಸು. 897)

ಕಳ್ಳರ, ರಾಜಪುರುಷರ, ಶತ್ರುಗಳ, ಅಥವಾ ಅಂಥಾ ಬೇರೆಯವರ ವಿಶೇಷವಾದ ಭಯಕ್ಕೊಳಪಟ್ಟವನಿಗೆ, ಅಥವಾ ಐಶ್ವರ್ಯವನ್ನಾಗಲೀ ಬಾಂಧವರನ್ನಾಗಲೀ ಕಳಕೊಂಡ ದೆಸೆಯಿಂದ, ಅಥವಾ ಕಾಮುಕನಾಗಿ ಬಯಸಿದ ಪ್ರಿಯಳು ದೊರೆಯದೆ ಹೋದ್ದರಿಂದ ಮನಸ್ಸು ಬಹಳವಾಗಿ ನೊಂದು, ಅತಿಕಠಿಣವಾದ ಮನೋವಿಕಾರವು ಉಂಟಾಗಬಹುದು. ಆಗ್ಗೆ ಅಂಥವನು ಮೂಢನಾಗಿ ವಿವಿಧವಾದ ಮನಸ್ಸಿನಲ್ಲಿದ್ದ ಗುಟ್ಟನ್ನು ಎಚ್ಚರ (ವಿಚಾರ) ವಿಲ್ಲದೆ ಹರಟುತ್ತಾನೆ, ಹಾಡುತ್ತಾನೆ, ನಗುತ್ತಾನೆ ಮತ್ತು ಅಳುತ್ತಾನೆ.

ಷರಾ ಶರೀರಕೃಶತೆ, ಶ್ವಾಸ, ಮಂದಚೇಷ್ಟೆ, ಅನ್ನಸಹಾಸ್ಯತೆ, ಮನಃಸಂತಾಪ, ಇವು ಆಧಿಜ ಉನ್ಮಾದದ ಲಕ್ಷಣ ಎಂತ ವೈ. ಸಾ. ಸಂ. (ಪು. 528).

11. ರಕ್ತೇಕ್ಷಣೋ ಹತಬಲೇಂದ್ರಿಯಭಾಃ ಸುದೀನಃ |
ಶ್ಯಾವಾನನೋ ವಿಷಕೃತೇನ ಭವೇದ್ವಿಸಂಜ್ಞಃ ||
(ಸು. 897)

ಸುಶ್ರುತನ ವಿಷೋನ್ಮಾದದ ಲಕ್ಷಣ.

ವಿಷದಿಂದುಂಟಾದ ಉನ್ಮಾದದಲ್ಲಿ ಕಣ್ಣುಗಳು ರಕ್ತವರ್ಣವಾಗುವದು, ಬಲ, ಇಂದ್ರಿಯ ಶಕ್ತಿ ಮತ್ತು ಕಾಂತಿ ಕೆಡುವದು, ಬಹಳವಾದ ದೈನ್ಯಭಾವ, ಮುಖ ಕಪಿಶವರ್ಣವಾಗುವದು ಮತ್ತು ಸಂಜ್ಞೆಯಿಲ್ಲದಿರುವದು, ಈ ಲಕ್ಷಣಗಳು ಉಂಟಾಗುತ್ತವೆ.

ಟಿಪ್ಪಣಿ ತೀವ್ರವಾದ ಉರಿ, ಪ್ರತಾಪ, ದಾಯಾರಿಕೆ, ಉಷ್ಣಾತಿಸಾರ, ನಿದ್ರಾಭಂಗ, ಕೃಶತೆ ಸಹ ವಿಷೋನ್ಮಾದದ ಲಕ್ಷಣಗಳೆಂತ ವೈ ಸಾ ಸಂ (ಪು. 528)

12. ದೇವರ್ಷಿಗಂಧರ್ವಪಿಶಾಚಯಕ್ಷರಕ್ಷಃಪಿತೄಣಾಮಭಿಧರ್ಷಣಾನಿ |
ಆಗನ್ತುಹೇತುರ್ನಿಯಮವ್ರತಾದಿ ಮಿಥ್ಯಾ ಕೃತಂ ಕರ್ಮ ಚ ಪೂರ್ವದೇಹೇ ||
ಅಮರ್ತ್ಯವಾಗ್ವಿಕ್ರಮವೀರ್ಯಚೇಷ್ಟಾಜ್ಞಾನಾದಿವಿಜ್ಞಾನಬಲಾದಿಭಿರ್ಯಃ |
ಉನ್ಮಾದಕಾಲೋಽನಿಯತಶ್ಚ ಯಸ್ಯ ಭೂತೋತ್ಥಮುನ್ಮಾದಮುದಾಹರೇತ್ತಮ್ ||
ಅದೂಷಯನ್ತಃ ಪುರುಷಸ್ಯ ದೇಹಂ ದೇವಾದಯಃ ಸ್ವೈಶ್ಚ ಗುಣಪ್ರಭಾವೈಃ |
ವಿಶನ್ತ್ಯದೃಶ್ಯಾಸ್ತರಸಾ ಯಥೈವ ಛಾಯಾತಪೌ ದರ್ಪಣಸೂರ್ಯಕಾನ್ತೌ ||
(ಚ. 608)

ಭೂತೋನ್ಮಾದದ (ಆಗಂತುವಿನ) ನಿದಾನ ಮತ್ತು ಸಾಮಾನ್ಯ ಲಕ್ಷಣ

ಈ ಜನ್ಮವಲ್ಲಿ ಅಥವಾ ಪೂರ್ವಜನ್ಮದಲ್ಲಿ ನಿಯಮವ್ರತಾದಿಗಳನ್ನು ತಪ್ಪಾಗಿ ಮಾಡಿದ ದೆಸೆಯಿಂದ (೧) ದೇವತೆಗಳು. (೨) ಋಷಿಗಳು. (೩) ಗಂಧರ್ವರು. (೪) ಪಿಶಾಚಗಳು. (೫) ಯಕ್ಷರು. (೬) ರಾಕ್ಷಸರು (೭) ಬ್ರಹ್ಮರಾಕ್ಷಸರು ಮತ್ತು (೮) ಪಿತೃಗಳು ಆವೇಶವಾಗುವಂಥಾದ್ದು ಆಗಂತು ಉನ್ಮಾದಕ್ಕೆ ಹೇತು. ಮಾತು, ಪರಾಕ್ರಮ, ಶಕ್ತಿ, ಚೇಷ್ಟೆಗಳು, ತತ್ತ್ವಜ್ಞಾನಾದಿಗಳ ಮತ್ತು (ಶಿಲ್ಪಾದಿ ಶಾಸ್ತ್ರಗಳ) ವಿಶೇಷಜ್ಞಾನದ ಬಲ ಮುಂತಾದವು ಸಾಮಾನ್ಯ ಮನುಷ್ಯಜಾತಿಗಿರುವದಕ್ಕಿಂತ ಅಧಿಕವಾಗಿರುವದು ಮತ್ತು ಉನ್ಮಾದದ ಕಾಲದಲ್ಲಿ (ಉಂಡಾಗ ಹೆಚ್ಚು, ಜೀರ್ಣವಾದಾಗ್ಗೆ ಹೆಚ್ಚು, ಎಂಬ ಹಾಗಿನ) ನಿಯಮವಿಲ್ಲದಿರುವದು, ಈ ಲಕ್ಷಣಗಳುಳ್ಳ ಉನ್ಮಾದವು ಭೂತಗಳಿಂದ ಉಂಟಾದ್ದೆಂತ ಹೇಳಬೇಕು. ಕಣ್ಣುಗಳಿಗೆ ಗೋಚರವಾಗದ ದೇವತೆ ಮೊದಲಾದ ಭೂತಗಳು ತಮ್ಮ ತಮ್ಮ ಗುಣಪ್ರಭಾವಗಳಿಂದ ಮನುಷ್ಯನ ಶರೀರವನ್ನು, ಬೆಳಕು ಕನ್ನಡಿಯನ್ನು ಮತ್ತು ಬಿಸಿಲು 'ಸೂರ್ಯಕಾಂತ' ಎಂಬ ರತ್ನವನ್ನು ಹೇಗೋ ಹಾಗೆ, ದೋಷವನ್ನುಂಟುಮಾಡದೆ, ಒಡನೆ ಪ್ರವೇಶಮಾಡುತ್ತವೆ.

ಟಿಪ್ಪಣಿ ಗ್ರಹಣ-ಧಾರಣ-ಸ್ಮರಣ-ಶಕ್ತಿಗಳು ಸಹ ಅಮಾನುಷವಾಗಿರುತ್ತವೆ ಎಂತ ನಿದಾನ ಸ್ಥಾನದಲ್ಲಿ ಚ. (ಪು. 231) ಸುಶ್ರುತನು ಗ್ರಹಗಣಗಳು ಅಸಂಖ್ಯೇಯ, ಅವುಗಳ ವಿವಿಧಾಕಾರವುಳ್ಳ ಅಧಿಪತಿಗಳಲ್ಲಿ (೧) ದೇವತೆಗಳು. (೨) ದೇವಶತ್ರುಗಳು (ಅಸುರರು) (೩) ಗಂಧರ್ವರು (೪) ಯಕ್ಷರು (೫) ಪಿತೃಗಳು (೬) ಭುಜಂಗ (ಸರ್ಪಗಳು) (೭) ರಾಕ್ಷಸರು, ಮತ್ತು (೮) ಪಿಶಾಚಗಳು, ಎಂತ ಎಂಟು ವಿಧಗಳಿರುತ್ತವೆ ಮತ್ತು ಆ ಎಂಟೂ ದೇವಗಣಗ್ರಹ ಎಂಬ ಜಾತಿಯವು, ಎಂತ ಹೇಳಿರುತ್ತಾನೆ (ಪು. 887)

13. ಅವಲೋಕಯನ್ತೋ ದೇವಾ ಜನಯನ್ತಿ ಉನ್ಮಾದಮ್ ಗುರುವೃದ್ಧಸಿದ್ಧರ್ಷಯೋಽಭಿಶಪನ್ತಃ ಪಿತರೋ ಧರ್ಷಯನ್ತಃ ಸ್ಪೃಶನ್ತೋ ಗನ್ಧರ್ವಾಃ ಸಮಾವಿಶನ್ತೋ ಯಕ್ಷರಾಕ್ಷಸಾಸ್ತ್ವಾಮಗನ್ಧಮಾಘ್ರಾಪಯನ್ತಃ ಪಿಶಾಚಾಃ ಪುನರಧಿರುಹ್ಯ ವಾಹಯನ್ತಃ || (ಚ. 231)

ಉನ್ಮಾದಕಾರಕ ಭೂತಗಳು ಉನ್ಮಾದವನ್ನುಂಟು ಮಾಡುವ ವಿಧ

ದೇವತೆಗಳು ನೋಡುವದರಿಂದ, ಗುರುಗಳು, ವೃದ್ಧರು, ಸಿದ್ಧರು, ಮತ್ತು ಋಷಿಗಳು ಶಪಿಸುವದರಿಂದ, ಪಿತೃಗಳು ಗದರಿಸುವದರಿಂದ, ಗಂಧರ್ವರು ಮುಟ್ಟುವದರಿಂದ, ಯಕ್ಷ-ರಾಕ್ಷಸರು ಆವೇಶಮಾಡುವದರಿಂದ, ಮತ್ತು ಪಿಶಾಚಗಳು ಆಮದ (ಹಸಿಮಾಂಸಾದಿಗಳ) ವಾಸನೆಯನ್ನು ಮೂಗಿನೊಳಗೆ ಹೊಗಿಸುವದಲ್ಲದೆ ಶರೀರವನ್ನು ಏರಿ ವಾಹನವನ್ನಾಗಿ ಮಾಡುವದರಿಂದ, ಮನುಷ್ಯರಲ್ಲಿ ಉನ್ಮಾದರೋಗವನ್ನುಂಟುಮಾಡುತ್ತಾರೆ.

ಉನ್ಮಾದಕರವಾದ ಭೂತಗಳ ಉದ್ದೇಶ

14. ತ್ರಿವಿಧನ್ತು ಖಲು ಉನ್ಮಾದಕರಾಣಾಂ ಭೂತಾನಾಮುನ್ಮಾದನೇ ಪ್ರಯೋಜನಂ ಭವತಿ । ತದ್ಯಥಾ:—ಹಿಂಸಾ ರತಿರಭ್ಯರ್ಚನಂ ಚೇತಿ । ತೇಷಾಂ ತತ್ಪ್ರಯೋಜನಮುನ್ಮತ್ತಾಚರಣವಿಶೇಷಲಕ್ಷಣೈರ್ವಿದ್ಯಾತ್ । ತತ್ರ ಹಿಂಸಾರ್ಥಮುನ್ಮಾದ್ಯಮಾನೋಽಗ್ನಿಂ ಪ್ರವಿಶತಿ ಅಪ್ಸು ವಾ ನಿಮಜ್ಜತಿ ಸ್ಥಲಾತ್ ಶ್ವಭ್ರೇ ವಾ ನಿಪತತಿ ಶಸ್ತ್ರಕಷಾಕಾಷ್ಠಲೋಷ್ಟ್ರಮುಷ್ಟಿಭಿರ್ಹನ್ತ್ಯಾತ್ಮಾನಮನ್ಯಚ್ಚ ಪ್ರಾಣವಧಾರ್ಥಮಾರಭತೇ । ಹಿಂಸಾರ್ಥಿನಮುನ್ಮತ್ತಮಸಾಧ್ಯಂ ವಿದ್ಯಾತ್ । ಸಾಧ್ಯೌ ಪುನರ್ದ್ವಾವಿತರೌ ॥ (ಚ. 232)

ಉನ್ಮಾದವನ್ನುಂಟುಮಾಡುವ ಭೂತ (ಜೀವಿ)ಗಳಿಗೆ ಹುಚ್ಚು ಹಿಡಿಸುವದರಲ್ಲಿ ಪ್ರಯೋಜನವು ಮೂರು ವಿಧ. ಹೇಗೆಂದರೆ:—(೧) ಹಿಂಸೆ, (೨) ಕ್ರೀಡೆ, ಮತ್ತು (೩) ಪೂಜೆ. ಆ ಪ್ರಯೋಜನವನ್ನು ಹುಚ್ಚು ಹಿಡಿದವನ ನಡತೆಯ ವಿಶೇಷ ಲಕ್ಷಣಗಳಿಂದ ಗೊತ್ತುಮಾಡತಕ್ಕದ್ದು. ಅದರಲ್ಲಿ ಹಿಂಸೆಗಾಗಿ ಹುಚ್ಚು ಹಿಡಿಸಲ್ಪಟ್ಟವನು ಅಗ್ನಿಯನ್ನು ಪ್ರವೇಶಿಸುತ್ತಾನೆ, ಅಥವಾ ನೀರಿನಲ್ಲಿ ಮುಳುಗುತ್ತಾನೆ, ಅಥವಾ ನೆಲದಿಂದ ಕೆಳಗೆ ಕಣಿಗೆ ಹಾರಿ ಬೀಳುತ್ತಾನೆ, ಶಸ್ತ್ರ, ಕಸೆ, ಕಟ್ಟಿಗೆ, ಮಣ್ಣಿನ ಹೆಂಟೆ, ಕೈಮುಷ್ಟಿ, ಇವುಗಳಿಂದ ತನ್ನನ್ನು ತಾನೇ ಹೊಡಕೊಳ್ಳುತ್ತಾನೆ, ಮತ್ತು ಬೇರೆ ಯತ್ನವನ್ನು ಪ್ರಾಣವಧೆಗಾಗಿ ಆರಂಭಿಸುತ್ತಾನೆ. ಹಿಂಸಾರ್ಥವಾಗಿ ಉಂಟಾದ ಉನ್ಮಾದವು ಅಸಾಧ್ಯವೆಂತ ತಿಳಿಯಬೇಕು. ಮಿಕ್ಕ ಎರಡು ಸಾಧ್ಯವಾಗುತ್ತವೆ.

ಉನ್ಮಾದಕರ ಭೂತಗಳ ಪಟ್ಟಿಗೆ ಕಾಲಗಳು

15. ಉನ್ಮಾದಯಿಷ್ಯತಾಮಪಿ ಖಲು ದೇವರ್ಷಿಪಿತೃಗನ್ಧರ್ವಯಕ್ಷರಾಕ್ಷಸಪಿಶಾಚಾನಾಂ ಗುರುವೃದ್ಧಸಿದ್ಧಾನಾಂ ವಾ ಏಷು ಅನ್ತರೇಷು ಅಭಿಗಮನೀಯಾಃ ಪುರುಷಾ ಭವನ್ತಿ । ತದ್ಯಥಾ:—ಪಾಪಸ್ಯ ಕರ್ಮಣಃ ಸಮಾರಂಭೇ ಪೂರ್ವಕೃತಸ್ಯ ವಾ ಕರ್ಮಣಃ ಪರಿಣಾಮಕಾಲೇ ಏಕಸ್ಯ ವಾ ಶೂನ್ಯಗೃಹವಾಸೇ ಚತುಷ್ಪಥಾಧಿಷ್ಠಾನೇ ವಾ ಸನ್ಧ್ಯಾವೇಲಾಯಾಮಪ್ರಯತಭಾವೇ ವಾ ಪರ್ವಸನ್ಧಿಷು ವಾ ಮಿಥುನಭಾವೇ ರಜಸ್ವಲಾಭಿಗಮನೇ ವಾ ವಿಗುಣೇ ವಾಧ್ಯಯನಬಲಮಂಗಲಹೋಮಪ್ರಯೋಗೇ ನಿಯಮವ್ರತಬ್ರಹ್ಮಚರ್ಯಭಂಗೇ ವಾ ಮಹಾಹವೇ ವಾ ದೇಶಕುಲಪುರವಿನಾಶೇ ವಾ ಮಹಾಗ್ರಹೋಪಗಮನೇ ವಾ ಸ್ತ್ರಿಯಾಃ ಪ್ರಜನನಕಾಲೇ ವಿವಿಧಭೂತಾಶುಭಾಶುಚಿಸ್ಪರ್ಶನೇ ವಾ ವಮನವಿರೇಚನರುಧಿರಸ್ರಾವೇ ವಾಶುಚೇರಪ್ರಯತಸ್ಯ ವಾ ಚೈತ್ಯದೇವಾಯತನಾಭಿಗಮನೇ ವಾ ಮಾಂಸಮಧುತಿಲಗುಡಮದ್ಯೋಚ್ಛಿಷ್ಟೇ ವಾ ದಿಗ್ವಾಸಸಿ ವಾ ನಿಶಿ ನಗರನಿಗಮಚತುಷ್ಪಥೋಪವನಶ್ಮಶಾನಾಯತನಾಭಿಗಮನೇ ವಾ ದ್ವಿಜಗುರುಸುರಪೂಜ್ಯಾಭಿಧರ್ಷಣೇ ವಾ ಧರ್ಮಾಖ್ಯಾನವ್ಯತಿಕ್ರಮೇ ವಾ ಅನ್ಯಸ್ಯ ಕರ್ಮಣೋಽಪ್ರಶಸ್ತಸ್ಯಾರಂಭೇ ವಾ ಇತ್ಯಾಘಾತಕಾಲಾಃ । (ಚ. 232)

ಉನ್ಮಾದವನ್ನುಂಟುಮಾಡಲುಳ್ಳ ದೇವತೆ-ಋಷಿ-ಪಿತೃ-ಗಂಧರ್ವ-ಯಕ್ಷ-ರಾಕ್ಷಸ-ಪಿಶಾಚಗಳಾಗಲಿ, ಗುರು, ವೃದ್ಧ, ಸಿದ್ಧರಾಗಲಿ ಸಮೀಪಿಸುವದಕ್ಕೆ ಜನರು ಗುರಿಯಾಗುವ ಕಾಲಗಳು (ಸಂದರ್ಭಗಳು) ಯಾವವೆಂದರೆ:—ಪಾಪಕೆಲಸದ ಆರಂಭದಲ್ಲಿ (ಅಥವಾ ಆಚರಣ ಕಾಲದಲ್ಲಿ), ಪೂರ್ವಜನ್ಮದ (ಪಾಪ)ಕೃತ್ಯವು ಫಲಿಸುವ ಕಾಲದಲ್ಲಿ, ಖಾಲಿಮನೆಯಲ್ಲಿ ಏಕಾಕಿಯಾಗಿ ವಾಸಮಾಡುವಾಗ್ಗೆ, ನಾಲ್ಕು ಮಾರ್ಗಗಳು ಕೂಡುವ ಸ್ಥಳದಲ್ಲಿ ನಿಂತಿರುವಾಗ್ಗೆ, ಸಂಧ್ಯಾಕಾಲಗಳಲ್ಲಿ, ಅಶುಚಿಯಾಗಿರುವಾಗ್ಗೆ, ಪರ್ವಕಾಲಗಳಲ್ಲಿ (ಹುಣ್ಣಿವೆ ಅಮಾವಾಸ್ಯೆ ಮುಂತಾದವುಗಳಲ್ಲಿ), ಮೈಥುನಕಾಲದಲ್ಲಿ, ರಜಸ್ವಲೆಯ ಸಂಗ ಮಾಡುವಾಗ, ಅಧ್ಯಯನ, ಬಲಿಪ್ರದಾನ, ಮಂಗಲಕರ್ಮ, ಹೋಮ, ಇವುಗಳನ್ನು ಅಕ್ರಮವಾಗಿ ಪ್ರಯೋಗಿಸುವಾಗ, ನಿಯಮ-ವ್ರತ-ಬ್ರಹ್ಮಚರ್ಯಗಳು ಭಂಗಪಟ್ಟಾಗ್ಗೆ, ಮಹಾಯುದ್ಧ ನಡೆಯುತ್ತಿರುವಾಗ, ದೇಶವಾಗಲಿ, ಕುಲವಾಗಲಿ, ಪಟ್ಟಣವಾಗಲಿ ನಾಶವಾಗುವಾಗ್ಗೆ, (ಗ್ರಹಣಾದಿ) ಮಹಾಗ್ರಹಗಳ ಯೋಗದಲ್ಲಿ, ಸ್ತ್ರೀಯು ಹೆರುವ ಕಾಲದಲ್ಲಿ, ನಾನಾ ವಿಧವಾದ ಭೂತಗಳನ್ನು ಅಶುಭಕರವಾಗಿ ಅಥವಾ ಅಶುಚಿಯಾಗಿ ಮುಟ್ಟುವ ಕಾಲದಲ್ಲಿ, ವಮನ-ವಿರೇಚನ-ರಕ್ತಸ್ರಾವಕಾಲಗಳಲ್ಲಿ, ಅಶುಚಿಯಾಗಿ ಅಥವಾ ನಮ್ರಭಾವವಿಲ್ಲದೆ ಯಜ್ಞಾಲಯಗಳಿಗೆ ಅಥವಾ ದೇವಾಲಯಗಳಿಗೆ ಹೋಗುವಾಗ್ಗೆ, ಮಾಂಸ, ಶರಾಬು, ಎಳ್ಳು, ಬೆಲ್ಲ, ಕಳ್ಳು ಮತ್ತು ಎಂಜಲಾದ ಪದಾರ್ಥ (ಉಚ್ಛಿಷ್ಟ), ಇವುಗಳು ಇರುವಲ್ಲಿ (ಅಥವಾ ಇವುಗಳನ್ನು ಸೇವಿಸುವಲ್ಲಿ), ಬತ್ತಲೆಯಾಗಿರುವಾಗ, ರಾತ್ರಿಕಾಲದಲ್ಲಿ ಪಟ್ಟಣ, ಸಂತೆ, ನಾಲ್ಕು ಮಾರ್ಗಗಳು ಕೂಡುವ ಸ್ಥಳ, ತೋಟ, ಶ್ಮಶಾನ, ಬಲಿಗೃಹ, ಇವುಗಳಿಗೆ ಹೋಗುವಾಗ್ಗೆ, ಬ್ರಾಹ್ಮಣರು, ಗುರುಗಳು, ದೇವತೆಗಳು ಮತ್ತು ಪೂಜ್ಯರು, ಇವರನ್ನು ಧಿಕ್ಕಾರಮಾಡುವಾಗ್ಗೆ, ಧರ್ಮಶಾಸ್ತ್ರಕ್ಕೆ ವ್ಯತಿಕ್ರಮ ಮಾಡುವಾಗ್ಗೆ, ಅಥವಾ ಪ್ರಶಸ್ತವಲ್ಲದ ಬೇರೆ ಯಾವದಾದರೂ ಕೆಲಸವನ್ನು ಕೈಗೊಂಡಾಗ್ಗೆ, ಇವು (ದೇವತಾದಿಗಳು) ಪೆಟ್ಟುಹೊಡೆಯುವ ಕಾಲಗಳು.

16. ದೇವತೆಗಳಿಂದ ಉಂಟಾದ ಉನ್ಮಾದದ ರೂಪ

ಸೌಮ್ಯದೃಷ್ಟಿಂ ಗಂಭೀರಮಪ್ರಧೃಷ್ಯಮಕೋಪನಮಸ್ವಪ್ನಮ್ ಅಭೋಜನಾಭಿಲಾಷಿಣಮಲ್ಪಸ್ವೇದಮೂತ್ರಪುರೀಷವಾತಂಶುಭಗನ್ಧಂ ಫುಲ್ಲಪದ್ಮವದನಮಿತಿ ದೇವೋನ್ಮತ್ತಂ ವಿದ್ಯಾತ್ ॥ (ಚ. 608)

ಸೌಮ್ಯವಾದ ದೃಷ್ಟಿಯುಳ್ಳ, ಗಾಂಭೀರ್ಯವುಳ್ಳ, ದರ್ಪಕ್ಕೊಳಪಡದ, ಕೋಪವಿಲ್ಲದ, ನಿದ್ರೆಮಾಡದ, ಭೋಜನದ ಅಭಿಲಾಷೆಯಿಲ್ಲದ, ಅಲ್ಪವಾದ ಬೆವರು-ಮೂತ್ರ-ಮಲ-ವಾತುಗಳುಳ್ಳ, ಸುವಾಸನೆಯುಳ್ಳ ಮತ್ತು ಅರಳಿದ ತಾವರೆಯಂತಿರುವ ಮುಖವುಳ್ಳ ರೋಗಿಯ ಉನ್ಮಾದವನ್ನು ದೇವತೆಯಿಂದ ಉಂಟಾದದ್ದೆಂತ ತಿಳಿಯಬೇಕು.

ಪರಾ ದೇವತೆಗಳು ಮನುಷ್ಯರೊಂದಿಗೆ ಇರುವದೂ ಇಲ್ಲ, ಮನುಷ್ಯರಲ್ಲಿ ಆವೇಶವಾಗುವದೂ ಇಲ್ಲ ದೇವತೆಗಳ ಸಹಸ್ರ-ಕೋಟಿ-ಅಯುತ-ಪದ್ಮ ಸಂಖ್ಯೆಯಲ್ಲಿರುವ ಪರಿಚಾರಕರು ರಕ್ತ, ವಸಾ, ಮಾಂಸಗಳನ್ನು ಭುಂಜಿಸಿಕೊಂಡು ರಾತ್ರಿಕಾಲದಲ್ಲಿ ಸಂಚಾರಮಾಡುತ್ತಿರುವವರು ಇರುತ್ತಾರೆ. ಅವರು ಮನುಷ್ಯರಲ್ಲಿ ಆವೇಶವಾಗುತ್ತಾರೆ ಅವರೊಳಗೆ ದೇವತೆಗಳಿಂದ ಹುಟ್ಟಿದವರು ಶುಚಿಯಾಗಿ ದೇವತೆಗಳ ಹಾಗೆ ಇರುವವರು ಇದ್ದಾರೆ ಅಂಥವರನ್ನು ದೇವಗ್ರಹ ಎನ್ನುತ್ತಾರೆ ಮತ್ತು ಕೆಲವರು ದಿವ್ಯಭಾವವನ್ನು ಧರಿಸಿಯೂ, ಸತ್ಯವನ್ನು ಬಿಟ್ಟು ನಡಕೊಳ್ಳುವವರೂ, ಹಿಂಸೆಯಲ್ಲಿ ಸಂತೋಷಪಡುವವರೂ, ಇರುತ್ತಾರೆ ಅಂಥವರಿಗೆ ಭೂತಗಳೆನ್ನುತ್ತಾರೆ (ಸು 889-90)

ಸಂತೋಷಪಟ್ಟುಕೊಂಡು ಶುಚಿಯಾಗಿ ಮತ್ತು ಗಂಧಮಾಲೆಗಳಲ್ಲಿ ಪ್ರೀತಿಯುಳ್ಳವನಾಗಿ ಇದ್ದು, ಸತ್ಯವಾಗಿಯೂ ಪರಿಷ್ಕಾರವಾಗಿಯೂ ಮಾತಾಡುವ, ತೇಜಸ್ಸುಳ್ಳ, ವರವನ್ನು ಕೊಡುತ್ತಿರುವ ಮತ್ತು ಬ್ರಾಹ್ಮಣರಲ್ಲಿ ಪ್ರೀತಿಯುಳ ರೋಗಿಯು ದೇವಪೀಡಿತನಾದವನು ಎಂತ ಸು. (ಪು. 887)

17. ಗುರುವೃದ್ಧಸಿದ್ಧರ್ಷೀಣಾಮಭಿಶಾಪಾಭಿಚಾರಾಭಿಧ್ಯಾನಾನುರೂಪಾ-ಹಾರಚೇಷ್ಟಾವ್ಯಾಹಾರಂ ತೈರುನ್ಮತ್ತಂ ವಿದ್ಯಾತ್ || (ಚ. 609)

ಋಷ್ಯಾದಿಗಳ ಶಾಪದಿಂದುಂಟಾದ ಉನ್ಮಾದದ ರೂಪ.

ಗುರು, ಹಿರಿಯ, ಸಿದ್ಧ, ಋಷಿ, ಇವರ ಶಾಪ, ಮಂತ್ರಪ್ರಯೋಗ ಮತ್ತು ಅಭಿಲಾಷೆ ಹೇಗೋ (ಯಾವ ಅಭಿಪ್ರಾಯವುಳ್ಳದ್ದಾಗಿತ್ತೋ) ಅದಕ್ಕೆ ಅನುಸಾರವಾದ ಆಹಾರ, ಚೇಷ್ಟೆ ಮತ್ತು ಮಾತು ರೋಗಿಯಲ್ಲಿರುತ್ತವಾದ್ದರಿಂದ, ಆ ಲಕ್ಷಣಗಳಿಂದ ಗುರು, ವೃದ್ಧ, ಸಿದ್ಧ, ಋಷಿಗಳಿಂದುಂಟಾದ ಉನ್ಮಾದವನ್ನು ಗೊತ್ತುಮಾಡಬೇಕು

ಷರಾ ಈ ಜಾತಿಯ ಉನ್ಮಾದವನ್ನು ಸುಶ್ರುತನು ಪ್ರತ್ಯೇಕವಾಗಿ ವರ್ಣಿಸಿರುವದಿಲ್ಲ

18. ಅಪ್ರಸನ್ನದೃಷ್ಟಿಮಪಶ್ಯಂತಂ ನಿದ್ರಾಲುಂ ಪ್ರತಿಹತವಾಚಮನನ್ನಾಭಿಲಾಷಾರೋ-ಚಕಾವಿಪಾಕಪರೀತಂ ಪಿತೃಭಿರುನ್ಮತ್ತಂ ವಿದ್ಯಾತ್ || (ಚ. 609)

ಪಿತೃಗಳಿಂದ ಉಂಟಾದ ಉನ್ಮಾದದ ರೂಪ

ದೃಷ್ಟಿಪ್ರಸನ್ನತೆ ಇಲ್ಲದಿರುವದು, ನೋಡದಿರುವದು, ನಿದ್ರೆ ಅಧಿಕವಾಗಿರುವದು, ಮಾತು ಕಡಿಮೆಯಾಗಿರುವದು, ಅನ್ನದ ಇಚ್ಛೆಯಿಲ್ಲದಿರುವದು, ಅರುಚಿ, ಅಜೀರ್ಣ, ಈ ಲಕ್ಷಣಗಳುಳ್ಳವನ ರೋಗವನ್ನು ಪಿತೃಗಳಿಂದುಂಟಾದ ಉನ್ಮಾದ ಎಂತ ತಿಳಿಯಬೇಕು.

ಷರಾ ಎಡಕಚ್ಚೆಹಾಕಿ ವಸ್ತ್ರ ಉಟ್ಟುಕೊಂಡು, ಶಾಂತನಾಗಿ, ಪಿಂಡಗಳನ್ನು ಅಥವಾ ನೀರನ್ನು ಪ್ರೇತಗಳಿಗಾಗಿ ದರ್ಭೆ ಹಾಸಿದ್ದರ ಮೇಲೆ (ಅಥವಾ ಇತರ ಹಾಸಿಗೆ ಮುಂತಾದ್ದರ ಮೇಲೆ) ಬಿಡುವದು, ಮಾಂಸದಲ್ಲಿ ಇಚ್ಛೆ, ಎಳ್ಳು, ಬೆಲ್ಲ, ಪಾಯಸಗಳಲ್ಲಿ ಅಭಿಲಾಷೆ ಮತ್ತು ಅವುಗಳಲ್ಲಿ ಭಕ್ತಿ, ಇವು ಪಿತೃಬಾಧೆಯಿಂದ ಉನ್ಮತ್ತನಾದವನ ಲಕ್ಷಣ ಎಂತ ಸು. (ಪು 888)

19. ಚಂಡಂ ಸಾಹಸಿಕಂ ತೀಕ್ಷ್ಣಂ ಗಂಭೀರಮಪ್ರಧೃಷ್ಯಂ ಮುಖವಾದ್ಯನೃತ್ಯಗೀತಾ-ನ್ನಪಾನಸ್ನಾನಪಾನಮಾಲ್ಯಧೂಪಗಂಧರಕ್ತವಸ್ತ್ರಬಲಿಕರ್ಮಹಾಸ್ಯಕಥಾಯೋ-ಗಪ್ರಿಯಂ ಶುಭಗಂಧಮಿತಿ ಗನ್ಧರ್ವೋನ್ಮತ್ತಂ ವಿದ್ಯಾತ್ || (ಚ. 609)

ಗಂಧರ್ವರಿಂದ ಉಂಟಾದ ಉನ್ಮಾದದ ರೂಪ

ಉಗ್ರಸ್ವರೂಪ, ಸಾಹಸ, ತೀವ್ರತೆ, ಗಾಂಭೀರ್ಯ, ಬಲಾತ್ಕಾರಕ್ಕೊಳಪಡದಿರುವಿಕೆ, ಮುಖವಾದ್ಯ-ಕುಣಿತ-ಗಾಯನ-ಅನ್ನಪಾನ-ಸ್ನಾನ-ಪಾನ-ಮಾಲೆ-ಧೂಪ-ಪರಿಮಳ-ಕೆಂಪುವಸ್ತ್ರ-ಬಲಿಕರ್ಮ-ಹಾಸ್ಯ-ಕಥೆಗಳ ಯೋಗದಲ್ಲಿ ಪ್ರೀತಿ, ಶರೀರದಲ್ಲಿ ಶುಭವಾದ ವಾಸನೆ, ಈ ಲಕ್ಷಣಗಳುಳ್ಳ ಉನ್ಮತ್ತನ ರೋಗವು ಗಂಧರ್ವರಿಂದ ಉಂಟಾದ್ದೆಂತ ತಿಳಿಯಬೇಕು.

ಷರಾ ಹರ್ಷವುಳ್ಳವನಾಗಿರುವದು, ದ್ವೀಪದಲ್ಲಿ ಮತ್ತು ಕಾಡಿನ ಮಧ್ಯದಲ್ಲಿ ಇರುವದು, ಅಲ್ಪವಾದ ಮಾತು, ಗಂಧರ್ವರ ಆಚಾರ, ಇವುಗಳು ಸಹ ಗಂಧರ್ವರ ಪೀಡೆಯ ಲಕ್ಷಣ ಎಂತ ಸು (ಪು 888).

20. ಅಸಕೃತ್ ಸ್ವಪ್ನರೋದನಹಾಸ್ಯಂ ನೃತ್ಯಗೀತವಾದ್ಯಕಥಾನ್ನಪಾನಸ್ನಾನಮಾಲ್ಯ-ಧೂಪಗಂಧರತಿಂ ರಕ್ತವಿಪ್ಲುತಾಕ್ಷಂ ದ್ವಿಜಾತಿವೈದ್ಯಪರಿವಾದಿನಂ ರಹಸ್ಯಭಾಷಿಣ-ಮಿತಿ ಯಕ್ಷೋನ್ಮತ್ತಂ ವಿದ್ಯಾತ್. || (ಚ. 609)

ಯಕ್ಷೋನ್ಮಾದದ ರೂಪ.

ಅನೇಕ ಸರ್ತಿ ನಿದ್ರಿಸುವದು, ಅಳುವದು ಮತ್ತು ನಗುವದು, ನರ್ತನ, ಹಾಡುವಿಕೆ, ವಾದ್ಯ, ಕಥೆ, ಅನ್ನ, ಪಾನ, ಸ್ನಾನ, ಮಾಲೆ, ಧೂಪ, ಪರಿಮಳ, ಇವುಗಳಲ್ಲಿ ಪ್ರೇಮ, ಕೆಂಪಾದ

ಮತ್ತು ಕೆದರಿಕೊಂಡ ಕಣ್ಣು, ದ್ವಿಜರನ್ನೂ ವೈದ್ಯರನ್ನೂ ಬಯ್ಯುವದು, ಗುಟ್ಟಾಗಿ ಮಾತಾಡು ವದು, ಈ ಲಕ್ಷಣಗಳುಳ್ಳ ಉನ್ಮಾದಿಯ ರೋಗವು ಯಕ್ಷರಿಂದುಂಟಾದದ್ದೆಂತ ತಿಳಿಯ ತಕ್ಕದ್ದು.

ಷರಾ ದೇಹದಲ್ಲಿ ಪ್ರೀತಿ, ಕೆಂಪು ವಸ್ತ್ರಧರಿಸುವದು, ಗಾಂಭೀರ್ಯ, ಚುರುಕು ಮನಸ್ಸು, ಅಲ್ಪಮಾತು, ಸಹನಶಕ್ತಿ, ತೇಜಸ್ಸು, ಮತ್ತು ಯಾರಿಗೆ ಯಾವದನ್ನು ನಾನು ಕೊಡುವದು? ಎಂತ ಹೇಳುತ್ತಿರುವದು, ಇವು ಸಹ ಯಕ್ಷ ಪೀಡೆಯ ಲಕ್ಷಣ ಎಂತ ಸು (ಪು 888)

21. ನಷ್ಟನಿದ್ರಮನ್ನಪಾನದ್ವೇಷಿಣಮನಾಹಾರಮಪ್ರತಿಬಲಿನಂ ಶಸ್ತ್ರಶೋಣಿತ-ಮಾಂಸರಕ್ತಮಾಲ್ಯಾಭಿಲಾಷಿಣಂ ಸನ್ತರ್ಜಕಮಿತಿ ರಾಕ್ಷಸೋನ್ಮತ್ತಂ ವಿದ್ಯಾತ್ || (ಚ. 609)

ರಾಕ್ಷಸೋನ್ಮಾದದ ರೂಪ

ನಿದ್ರೆಯಿಲ್ಲದಿರುವದು, ಅನ್ನಪಾನಗಳಲ್ಲಿ ದ್ವೇಷ, ಆಹಾರವಿಲ್ಲದಿರುವದು, ಎದುರಿಲ್ಲದ ಬಲ. ಶಸ್ತ್ರ-ರಕ್ತ-ಮಾಂಸ-ಕೆಂಪುಮಾಲೆಗಳಲ್ಲಿ ಅಭಿಲಾಷೆ, ಗದರಿಸುವಿಕೆ, ಈ ಲಕ್ಷಣಗಳಿಂದ ರಾಕ್ಷಸರಿಂದುಂಟಾದ ಉನ್ಮಾದವನ್ನು ತಿಳಿಯಬೇಕು.

ಷರಾ ನಾನಾ ವಿಧವಾದ ಮದ್ಯಗಳನ್ನು ಕುಡಿಯುವ ಇಚ್ಛೆ, ಲಜ್ಜೆಯಿಲ್ಲದಿರುವದು, ನಿಷ್ಠುರತೆ, ಅತಿಶೌರ್ಯ, ಸಿಟ್ಟುಗೊಳ್ಳುವ ಸ್ವಭಾವ, ರಾತ್ರಿಗಳಲ್ಲಿ ವಿಹಾರ, ಮಡಿಮೈಲಿಗೆಗಳಲ್ಲಿ ದ್ವೇಷ, ಬಹಳ ಆಲೋಚನೆ, ಇವು ಸಹ ರಾಕ್ಷಸ ಪೀಡೆಯಿಂದುಂಟಾದ ಉನ್ಮಾದದ ಲಕ್ಷಣ ಎಂತ ಸು (ಪು 888)

22 ಪ್ರಹಾಸನೃತ್ಯಪ್ರಧಾನಂ ದೇವವಿಪ್ರವೈದ್ಯದ್ವೇಷಾವಜ್ಞಾಭಿಷ್ಟುತಿ ವೇದಮನ್ತ್ರಶಾಸ್ತ್ರೋದಾಹರಣೈಃ ಕಾಷ್ಠಾದಿಭಿರಾತ್ಮಪೀಡನೇನ ಚ ಬ್ರಹ್ಮರಾಕ್ಷಸೋನ್ಮತ್ತಂ ವಿದ್ಯಾತ್ || (ಚ. 609)

ಬ್ರಹ್ಮರಾಕ್ಷಸೋನ್ಮಾದದ ರೂಪ

ನಗೆ ಮತ್ತು ನರ್ತನ ಹೆಚ್ಚಾಗಿರುವದು, ದೇವತೆಗಳಲ್ಲಿ, ಬ್ರಾಹ್ಮಣರಲ್ಲಿ ಮತ್ತು ವೈದ್ಯರಲ್ಲಿ ದ್ವೇಷ ಮತ್ತು ಅವಮರ್ಯಾದಾಪೂರ್ವಕವಾದ ವರ್ಣನೆ, ವೇದಮಂತ್ರಗಳ ಮತ್ತು ಶಾಸ್ತ್ರಗಳ ಉದಾಹರಣ ಕೊಡುತ್ತಿರುವದು, ಕಟ್ಟಿಗೆ ಮುಂತಾದವುಗಳಿಂದ ತನ್ನನ್ನು ತಾನು ಪೀಡಿಸುವದು, ಈ ಲಕ್ಷಣಗಳಿಂದ ಬ್ರಹ್ಮರಾಕ್ಷಸರಿಂದ ಉಂಟಾದ ಉನ್ಮಾದರೋಗವನ್ನು ಗೊತ್ತುಮಾಡಬೇಕು.

ಷರಾ ಈ ಜಾತಿಯ ಉನ್ಮಾದವನ್ನು ಸುಶ್ರುತನು ಪ್ರತ್ಯೇಕವಾಗಿ ಹೇಳಿರುವದಿಲ್ಲ

23. ಅಸ್ವಸ್ಥಚಿತ್ತಂ ಸ್ಥಾನಮಲಭಮಾನಂ ನೃತ್ಯಗೀತಹಾಸಿನಂ ಬದ್ಧಾಬದ್ಧಪ್ರಭಾಷಿಣಂ ಸಂಕಟಕೂಟಮಲಿನರಥ್ಯಾಚೇಲತೃಣೇಷು ಆರೋಹಣರತಿಂ ಸಮ್ಭಿನ್ನವರ್ಣರೂಕ್ಷಸ್ವರಂ ನಗ್ನಂ ವಿಧಾವನ್ತಂ ನೈಕತ್ರ ತಿಷ್ಠನ್ತಂ ದುಃಖಾನಿ ಆವೇದಯನ್ತಂ ನಷ್ಟಸ್ಮೃತಿಂ ಪಿಶಾಚೋನ್ಮತ್ತಂ ವಿದ್ಯಾತ್ || (ಚ. 609)

ಪಿಶಾಚೋನ್ಮಾದದ ರೂಪ.

ಚಿತ್ತಚಂಚಲವಾಗಿರುವದು, ವಿರಾಮವಿಲ್ಲದಿರುವದು, ಕುಣಿಯುತ್ತಾ, ಹಾಡುತ್ತಾ, ನಗುತ್ತಾ ಇರುವದು, ಹೊಂದಿಕೆಯಾಗಿರುವ ಮತ್ತು ಹೊಂದಿಕೆಯಿಲ್ಲದ ಮಾತುಗಳು ಬೆರೆತಿರುವದು, ಏರಲು ಕಷ್ಟವಾದ ಬೆಟ್ಟದ ತುದಿಯನ್ನು, ಮಲಿನವಾದ ರಥಸಮೂಹವನ್ನು ಮತ್ತು ಕೆಟ್ಟ ಹುಲ್ಲಿನ ರಾಶಿಯನ್ನು ಏರುವದರಲ್ಲಿ ಸಂತೋಷ, ವರ್ಣ ಕೆಟ್ಟಿರುವದು, ಸ್ವರ ಒಣಗಿರುವದು, ಬತ್ತಲೆಯಾಗಿರುವದು, ಒಂದೇ ಸ್ಥಳದಲ್ಲಿ ನಿಲ್ಲದಿರುವದು, ಓಡುತ್ತಿರುವದು, ತನ್ನ ದುಃಖ

ಗಳನ್ನು ಹೇಳುತ್ತಿರುವದು, ನೆನಪಿಲ್ಲದಿರುವದು, ಈ ಲಕ್ಷಣಗಳಿಂದ ಪಿಶಾಚೋನ್ಮಾದವನ್ನು ತಿಳಿಯಬೇಕು.

ಪರಾ: ಕೈಎತ್ತಿಕೊಂಡು, ಕೃಶವಾಗಿ, ನಯವಿಲ್ಲದೆ, ಬಹಳ ಹರಟುತ್ತಾ ಇರುವದು, (ಶರೀರದಲ್ಲಿ) ದುರ್ವಾಸನೆ, ಬಹಳ ಅಶುಚಿತ್ವ, ಅತಿಯಾದ ಅನ್ನಪಾನಗಳ ಆಶೆ, ಅತಿಯಾಗಿ ಉಣ್ಣುವದು, ಜನಶೂನ್ಯವಾದ ಸ್ಥಳ, ಹಿಮ ಅಥವಾ ನೀರುಳ್ಳ ಸ್ಥಳ ಮತ್ತು ರಾತ್ರಿಕಾಲ, ಇವುಗಳನ್ನು ಉಪಯೋಗಿಸುತ್ತಿರುವದು, ನಾನಾ ಕುಚೇಷ್ಟೆಗಳನ್ನು ಮಾಡುತ್ತಾ ಅಳುತ್ತಾ ತಿರುಗುವದು, ಇವು ಪಿಶಾಚ ಹಿಡಿದದ್ದರ ಲಕ್ಷಣಗಳು ಎಂತ ಸು (ಪು 888, 889)

24. ಸಂಸ್ವೇದೀ ದ್ವಿಜಗುರುದೇವದೋಷವಕ್ತಾ,
ಜಿಹ್ಮಾಕ್ಷೋ ವಿಗತಭಯೋ ವಿಮಾರ್ಗದೃಷ್ಟಿಃ |
ಸಂತುಷ್ಟೋ ಭವತಿ ನ ಚಾನ್ನಪಾನಜಾತೈ,
ದುಷ್ಟಾತ್ಮಾ ಭವತಿ ಚ ದೇವಶತ್ರುಜುಷ್ಟಃ || (ಸು. 887, 888)

ಅಸುರರ ಪೀಡೆಯ ಲಕ್ಷಣ

ವಿಶೇಷವಾಗಿ ಮೈಬೆವರುತ್ತಿರುವದು, ಬ್ರಾಹ್ಮಣರ, ಗುರುಗಳ ಮತ್ತು ದೇವತೆಗಳ ದೋಷಗಳನ್ನು ಹೇಳುತ್ತಿರುವದು, ಓರೆಕಣ್ಣು, ಭಯವಿಲ್ಲದಿರುವಿಕೆ, ದುರ್ಮಾರ್ಗದಲ್ಲಿ (ನಾಸ್ತಿಕ್ಯ) ದೃಷ್ಟಿ, ಅನ್ನಪಾನಗಳ ರಾಶಿಗಳಿಂದಲೂ ಸಂತೋಷವಾಗದಿರುವದು, ದುಷ್ಟಸ್ವಭಾವ, ಇವು ದೇವ ಶತ್ರುಗಳಿಂದ (ಅಸುರ ಅಥವಾ ದೈತ್ಯರಿಂದ) ಪೀಡಿಸಲ್ಪಟ್ಟವನ ಲಕ್ಷಣಗಳು.

25. ಭೂಮೌ ಯಃ ಪ್ರಸರತಿ ಸರ್ಪವತ್ಕದಾಚಿತ್
ಸೃಕ್ಕಿಣ್ಯೌ ವಿಲಿಹತಿ ಜಿಹ್ವಯಾ ಪ್ರಸಕ್ತಮ್ |
ನಿದ್ರಾಲುರ್ಗುಡಮಧುದುಗ್ಧಪಾಯಸೇಪ್ಸು
ರ್ವಿಜ್ಞೇಯೋ ಭವತಿ ಭುಜಂಗಮೇನ ಜುಷ್ಟಃ || (ಸು. 888)

ನಾಗಾವೇಶದ ಲಕ್ಷಣ

ಪರಾ ಇದರಲ್ಲಿ ಪಾಠಭೇದ ಉಂಟು ಆದರೆ ಅರ್ಥಭೇದ ವಿಶೇಷವಿಲ್ಲ 'ನಿದ್ರಾಲುಃ' ಎಂಬಲ್ಲಿ 'ಕ್ರೋಧಾಲುಃ', ಎಂದರೆ (ನಿದ್ರೆ ಬದಲಾಗಿ) ಸಿಟ್ಟು ಹೆಚ್ಚು ಎಂತ ಅರ್ಥವಾಗುತ್ತದೆ (ಮಾ. ನಿ 125).

ಕೆಲವು ಸಮಯದಲ್ಲಿ ನೆಲದ ಮೇಲೆ ಸರ್ಪನಂತೆ ಹರಿದಾಡುವದು, ಪದೇಪದೇ ಬಾಯಿಯ ಮೂಲೆಗಳನ್ನು ನಾಲಿಗೆಯಿಂದ ನೆಕ್ಕುವದು, ನಿದ್ರೆ ಹೆಚ್ಚಾಗಿರುವದು, ಬೆಲ್ಲ, ಜೇನು ಮತ್ತು ಪಾಯಸಗಳಲ್ಲಿ ಅಪೇಕ್ಷೆ, ಈ ಲಕ್ಷಣಗಳು ನಾಗನ ದೋಷವುಳ್ಳವನಲ್ಲಿ ಕಾಣುವವು.

26. ದೇವಗ್ರಹಾಃ ಪೌರ್ಣಮಾಸ್ಯಾಮಸುರಾಃ ಸನ್ಧ್ಯಯೋರಪಿ |
ಗನ್ಧರ್ವಾಃ ಪ್ರಾಯಶೋಽಷ್ಟಮ್ಯಾಂ ಯಕ್ಷಾಂಶ್ಚ (?ಕ್ಷಾಶ್ಚ) ಪ್ರತಿಪದ್ಯಥ ||
ಕೃಷ್ಣಪಕ್ಷೇ ಚ ಪಿತರಃ ಪಂಚಮ್ಯಾಮಪಿ ಚೋರಗಾಃ |
ರಕ್ಷಾಂಸಿ ನಿಶಿ ಪೈಶಾಚಾಶ್ಚತುರ್ದಶ್ಯಾಂ ವಿಶನ್ತಿ ಚ || (ಸು. 889)

ದೇವಾದಿ ಭೂತಗಳು ಪೀಡಿಸುವ ದಿನ

ದೇವಗ್ರಹಗಳು ಹುಣ್ಣಿಮೆಯಲ್ಲಿ, ಅಸುರರು ಎರಡು ಸಂಧ್ಯಾವೇಳೆಗಳಲ್ಲಿ, ಗಂಧರ್ವರು ಹೆಚ್ಚಾಗಿ ಅಷ್ಟಮಿದಿನದಲ್ಲಿ, ಯಕ್ಷರು ಪಾಡ್ಯದ ದಿನದಲ್ಲಿ, ಪಿತೃಗಳು ಕೃಷ್ಣಪಕ್ಷದಲ್ಲಿ, ನಾಗಗಳು ಪಂಚಮಿ ದಿನ, ರಾಕ್ಷಸರು ರಾತ್ರಿಕಾಲದಲ್ಲಿ ಮತ್ತು ಪಿಶಾಚಗಳು ಚತುರ್ದಶಿ ದಿನ (ಮನುಷ್ಯನನ್ನು) ಹೊಗುತ್ತಾರೆ.

ಪರಾ ಇಲ್ಲಿ ಹೇಳಲ್ಪಟ್ಟ ಕಾಲಗಳು ರೋಗಾರಂಭ ಸೂಚಿಸುವಂಥವು ಎಂತ ತಿಳಿಯಬೇಕಾಗುತ್ತದೆ. ಯಾಕೆಂದರೆ, ದೇವತೆಗಳು ಶುಕ್ಲಪಕ್ಷದ ಪಾಡ್ಯದಲ್ಲಿ ಮತ್ತು ತ್ರಯೋದಶಿಯಲ್ಲಿ, ಋಷಿಗಳು ಷಷ್ಠಿ ಮತ್ತು ನವಮಿಯಲ್ಲಿ, ಪಿತೃಗಳು ದಶಮಿ ಮತ್ತು ಅಮಾವಾಸ್ಯೆಯಲ್ಲಿ, ಗಂಧರ್ವರು ದ್ವಾದಶೀ ಮತ್ತು ಚತುರ್ದಶೀಯಲ್ಲಿ, ಯಕ್ಷರು ಶುಕ್ಲಪಕ್ಷದ ಏಕಾದಶಿ ಮತ್ತು ಸಪ್ತಮಿಯಲ್ಲಿ, ಬ್ರಹ್ಮರಾಕ್ಷಸರು ಶುಕ್ಲಪಂಚಮಿ ಮತ್ತು ಪೌರ್ಣಿಮಾಯಲ್ಲಿ, ರಾಕ್ಷಸರೂ ಪಿಶಾಚಗಳೂ ಬಿದಿಗೆ, ತದಿಗೆ, ಅಷ್ಟಮಿಯಲ್ಲಿ ಮನುಷ್ಯನನ್ನು ಹೆಚ್ಚಾಗಿ ಸ್ವಾಧೀನಮಾಡಿಕೊಳ್ಳುತ್ತವೆಂತ ಚರಕನು ಹೇಳಿದ್ದಾನೆ (ಪು 609-610).

27. ಅವಾಂಚೀ ವಾಪ್ಯುದಂಚೀ ವಾ ಕ್ಷೀಣಮಾಂಸಬಲೋ ನರಃ |
ಜಾಗರೂಕೋ ಹ್ಯಸಂದೇಹಮುನ್ಮಾದೇನ ವಿನಶ್ಯತಿ || (ಮಾ. ನಿ. 124)

ಸಾಧ್ಯಾಸಾಧ್ಯ ವಿಚಾರ

ಮುಖವೆತ್ತಿಕೊಂಡೇ ಅಥವಾ ಬಗ್ಗಿಸಿಕೊಂಡೇ ಇರುವ, ಮಾಂಸದಲ್ಲಿಯೂ ಬಲದಲ್ಲಿಯೂ ಕ್ಷೀಣನಾದ ಮತ್ತು ನಿದ್ರೆಯಿಲ್ಲದ, ರೋಗಿಯು ಉನ್ಮಾದದಿಂದ ನಿಃಸಂದೇಹವಾಗಿ ಸಾಯುತ್ತಾನೆ.

ಸರ್ವೇಷು ಅಪಿ ತು ಖಲು ಏಷು ಯೋ ಹಸ್ತಾವುದ್ಯಮ್ಯ ರೋಷಸಂರಂಭಾನ್ನಿಃಸಂಜ್ಞ-ಮನ್ಯೇಷು ಆತ್ಮನಿ ವಾ ಪಾತಯೇತ್ ಸ ಹಿ ಅಸಾಧ್ಯೋ ಜ್ಞೇಯಸ್ತಥಾ ಯಃ ಸಾಶ್ರು-ನೇತ್ರೋ ಮೇಢ್ರಪ್ರವೃತ್ತರಕ್ತಃ ಕ್ಷತಜಿಹ್ವಃ ಪ್ರಸ್ರುತನಾಸಿಕಶ್ಛಿದ್ಯಮಾನಮರ್ಮಾಪ್ರತಿ-ಹನ್ಯಮಾನಪಾಣಿಃ ಸತತಂ ವಿಕೂಜನ್ ದುರ್ವರ್ಣಸ್ತೃಷಾರ್ತಃ ಪೂತಿಗನ್ಧಿಶ್ಚ ಹಿಂ-ಸಾರ್ಥೀ ಉನ್ಮತ್ತೋ ಜ್ಞೇಯಸ್ತಂ ಪರಿವರ್ಜಯೇತ್ || (ಚ. 610)

ಈ ಎಲ್ಲಾ ಗ್ರಹೋನ್ಮಾದಿಗಳೊಳಗೆ ಯಾವನು ಸಿಟ್ಟಿನ ಉದ್ವೇಗದಿಂದ ತನ್ನ ಎರಡು ಕೈಗಳನ್ನೆತ್ತಿ ಸಂಜ್ಞೆಯಿಲ್ಲದೆ ಪರರ ಮೇಲೆಯಾಗಲೀ ತನ್ನ ಮೇಲೆಯಾಗಲೀ ಬೀಳಿಸುತ್ತಾನೋ, ಅವನ ರೋಗವು ಅಸಾಧ್ಯವೆಂತ ತಿಳಿಯಬೇಕು. ಹಾಗೆಯೇ ಕಣ್ಣುಗಳಿಂದ ನೀರು ಸುರಿಯುತ್ತಿರುವದು, ಶಿಶ್ನದಿಂದ ರಕ್ತ ಹೊರಡುವದು, ನಾಲಿಗೆ ಒಡದಿರುವದು, ಮೂಗು ಸ್ರವಿಸುತ್ತಿರುವದು, ಎದೆಯಲ್ಲಿ ಸೀಳಿದ ಹಾಗಿನ ನೋವು, ಕೈಗಳು ಸುಮ್ಮಗಿರಲಾರದಿರುವದು (ಯಾವಾಗಲೂ ಹಿಂಸೆಮಾಡುವ ಪ್ರಯತ್ನದಲ್ಲಿರುವದು), ಯಾವಾಗಲೂ ವಿಕಾರವಾಗಿ ಕೂಗುತ್ತಿರುವದು, (ದೇಹದ) ವರ್ಣ ಕೆಟ್ಟಿರುವದು, ಬಾಯಾರಿಕೆಯ ಪೀಡೆ, (ಶರೀರದಲ್ಲಿ) ದುರ್ವಾಸನೆ, ಈ ಲಕ್ಷಣಗಳು ಯಾರಲ್ಲಿ ಕಾಣುತ್ತವೋ, ಅಂಥವನ ಉನ್ಮಾದವು ಕೊಲ್ಲುವದಕ್ಕಾಗಿ ಉಂಟಾದದ್ದೆಂತ ತಿಳಿದು (ಚಿಕಿತ್ಸೆಮಾಡದೆ) ಬಿಟ್ಟುಬಿಡತಕ್ಕದ್ದು

ವರಾ ಭೂತೋನ್ಮಾದ ಯಾವ ಜಾತಿಯಾದರೂ ಹವಿಮೂರು ವರ್ಷ ಕಾಲ ಕಳೆದಲ್ಲಿ ಅಸಾಧ್ಯವಾಗುತ್ತದೆಂತ ಮಾ ನಿ (ಪ. 126)

ತೇ ತು ಖಲು ನಿಜಾಗನ್ತುವಿಶೇಷೇಣ ಸಾಧ್ಯಾಸಾಧ್ಯವಿಶೇಷೇಣ ಚ ಪ್ರವಿಭಜ್ಯ-ಮಾನಾಃ ಪಂಚ ಸನ್ತೋ ದ್ವೌ ಏವ ಭವತಃ | ತೌ ಪರಸ್ಪರಮನುಬಧ್ನೀತಃ ಕದಾಚಿದ್ಯ-ಥೋಕ್ತಹೇತುಸಂಸರ್ಗಾಚ್ಚ ತಯೋಃ ಸಂಸೃಷ್ಟಮೇವ ಪೂರ್ವರೂಪಂ ಭವತಿ ಸಂಸೃಷ್ಟಮೇವ ಲಿಂಗಂ ಚ | ತತ್ರ ಅಸಾಧ್ಯಸಂಯೋಗಂ ಸಾಧ್ಯಾಸಾಧ್ಯಸಂಯೋಗಂ ವಾ ಅಸಾಧ್ಯಂ ವಿದ್ಯಾತ್ | ಸಾಧ್ಯನ್ತು ಸಾಧ್ಯಸಂಯೋಗಂ ತಸ್ಯ ಸಾಧನಂ ಸಾಧನ-ಸಂಯೋಗಮೇವ ವಿದ್ಯಾದಿತಿ. (ಚ. 233).

ಪಂಚವಿಧವಾದ ಉನ್ಮಾದಗಳು ನಿಜ-ಆಗಂತು ಎಂಬ ಭೇದದ ಮೇಲೆ ಮತ್ತು ಸಾಧ್ಯ-ಅಸಾಧ್ಯ ಎಂಬ ಭೇದದ ಮೇಲೆ ವಿಭಾಗಿಸಲ್ಪಡುವಾಗ್ಗೆ ಎರಡೇ ವಿಧವಾಗುತ್ತವೆ. ಆ ಎರಡು ವಿಧದವು ಒಂದಕ್ಕೊಂದು ಕೂಡಿಕೊಳ್ಳುವದುಂಟು. ಕೆಲವು ಸಂದರ್ಭಗಳಲ್ಲಿ ಬೇರೆ ಬೇರೆ ಉನ್ಮಾದಗಳಿಗೆ ಬೇರೆ ಬೇರೆಯಾಗಿ ಹೇಳಲ್ಪಟ್ಟ ಹೇತುಗಳು ಮಿಶ್ರವಾಗುವ ದೆಸೆಯಿಂದ ಅಂಥಾ ರೋಗದ ಪೂರ್ವರೂಪದಲ್ಲಿಯೂ ಲಕ್ಷಣದಲ್ಲಿಯೂ ಒಂದರದೊಂದಿಗೆ ಇನ್ನೊಂದರದು ಕೂಡಿಕೊಂಡೇ ಇರುತ್ತದೆ. ಅಂಥಾ ಸಂಗತಿಯಲ್ಲಿ ಕೂಡಿಕೊಂಡ ಎರಡು ಜಾತಿ ಉನ್ಮಾದಗಳು ಅಸಾಧ್ಯವಾಗಿದ್ದರೆ, ಅಥವಾ ಒಂದು ಜಾತಿ ಸಾಧ್ಯ ಇನ್ನೊಂದು ಜಾತಿ ಅಸಾಧ್ಯ

ವಾಗಿದ್ದರೆ, ಬೆರತು ಉಂಟಾದ ರೋಗವು ಅಸಾಧ್ಯವೆಂತ ತಿಳಿಯಬೇಕು. ಬೆರೆತ ಎರಡು ಜಾತಿಗಳೂ ಸಾಧ್ಯವಾಗಿದ್ದಲ್ಲಿ ಅಂಥಾ ರೋಗವು ಸಾಧ್ಯ, ಅದಕ್ಕೆ ಪರಿಹಾರವು ಆಯಾ ಜಾತಿಗೆ ಯುಕ್ತವಾದ ಸಾಧನಗಳನ್ನು ಸಂಯೋಗಮಾಡುವದೇ ಆಗಿರುತ್ತದೆಂತ ತಿಳಿಯತಕ್ಕದ್ದು.

ಷರಾ ದೋಷಜನ್ಯವಾದ ನಾಲ್ಕು ವಿಧಗಳಲ್ಲಿ ತ್ರಿದೋಷದ್ದು ಮಾತ್ರ ಸಾಧಾರಣವಾಗಿ ಅಸಾಧ್ಯ, ಮಿಕ್ಕ ಮೂರು ಸಾಧ್ಯವೆಂತ ಹೇಳಲ್ಪಟ್ಟಿವೆ ಮೇಲಿನ 9ನೇ ಸಂಖ್ಯೆಯಡಿ ಷರಾವನ್ನು ನೋಡಿ

28. ಸಾಧ್ಯಾನಾಂ ತು ತ್ರಯಾಣಾಂ ಸಾಧನಾನಿ ಭವನ್ತಿ। ತದ್ಯಥಾ: ಸ್ನೇಹ-ಸ್ವೇದ-ವಮನ - ವಿರೇಚನಾಸ್ಥಾಪನಾನುವಾಸನೋಪಶಮನ - ನಸ್ತಃಕರ್ಮ - ಧೂಪ - ಧೂಮಪಾನಾಂಜನಾವಪೀಡಪ್ರಧಮನಾಭ್ಯಂಗ - ಪ್ರದೇಹ - ಪರಿಷೇಕಾನುಲೇಪನ - ವಧ - ಬನ್ಧನಾವರೋಧನ - ವಿತ್ರಾಸನ - ವಿಸ್ಮಾಪನ-ವಿಸ್ಮಾರಣಾಪತರ್ಪಣ-ಶಿರಾವ್ಯ-ಧನಾನಿ। ಭೋಜನವಿಧಾನಂ ಚ ಯಥಾಸ್ವಂ ಯುಕ್ತ್ಯಾ ಯಚ್ಚಾನ್ಯದಪಿ ಕಿಂಚಿನ್ನಿದಾನವಿಪರೀತಮೌಷಧಂ ಕಾರ್ಯಂ ತತ್ ಸ್ಯಾದಿತಿ. (ಚ. 230-1)

ಉನ್ಮಾದಚಿಕಿತ್ಸಾ ಸಾಧನಗಳು

ತಯೋಃ ಸಾಧನಾನಿ ಮನ್ತ್ರೌಷಧಿಮಣಿಮಂಗಲಬಲ್ಯುಪಹಾರಹೋಮನಿಯಮವ್ರತ-ಪ್ರಾಯಶ್ಚಿತ್ತೋಪವಾಸಸ್ವಸ್ತ್ಯಯನಪ್ರಣಿಪಾತಗಮನಾದೀನಿ ಇತಿ. (ಚ. 232)

ಸಾಧ್ಯವಾದ ಒಂದೊಂದೇ ದೋಷದಿಂದ ಉಂಟಾದ ಮೂರು ಉನ್ಮಾದಗಳನ್ನು ಜಯಿಸುವದಕ್ಕೆ ಸಾಧನಗಳು ಯಾವವೆಂದರೆ:—ಸ್ನೇಹನಕ್ರಮ, ಸ್ವೇದನ (ಬೆವರಿಸುವ) ಕ್ರಮ, ವಾಂತಿಮಾಡಿಸುವದು, ಭೇದಿಮಾಡಿಸುವದು, ಆಸ್ಥಾಪನವಸ್ತಿ, ಅನುವಾಸನವಸ್ತಿ, ಶಮನ ಗುಣವುಳ್ಳ ಔಷಧಗಳು, ನಸ್ಯಕರ್ಮ, ಹೊಗೆಕೊಡುವದು, ಹೊಗೆಸೇದುವದು, ಅಂಜನ, ಅವಪೀಡನ ನಸ್ಯ, ಪ್ರಧಮನ ನಸ್ಯ, ಅಭ್ಯಂಗ, ಪ್ರದೇಹ (ಲೇಪ), ಪರಿಷೇಕ (ನೀರುಧಾರೆ), ಅನುಲೇಪನ, ಹೊಡೆಯುವದು, ಬಂಧನದಲ್ಲಿರಿಸುವದು, ತಡೆಯುವದು, ಭಯಪಡಿಸುವದು, ವಿಸ್ಮಯಗೊಳಿಸುವದು, ಮರೆಸುವದು, ಲಂಘನ ಮತ್ತು ಶಿರೆಯನ್ನು ಚುಚ್ಚಿ ರಕ್ತತೆಗೆಯುವದು, ಇವು ಆಗಿರುತ್ತವೆ. ಆಯಾ ದೋಷಕ್ಕೆ ಯುಕ್ತವಾದ ಆಹಾರನಿಯಮ ಮತ್ತು ಹೇತುವಿಗೆ ಪ್ರತಿಕೂಲವಾದ ಔಷಧವೇನಾದರೂ ಇದ್ದರೆ ಅದನ್ನು ಉಪಯೋಗಿಸಬೇಕು. ಭೂತೋನ್ಮಾದಗಳಲ್ಲಿ ಹಿಂಸೆಗಾಗಿ ಉಂಟಾದ್ದನ್ನು ಬಿಟ್ಟು ಮಿಕ್ಕ ಎರಡು ಜಾತಿ ಉನ್ಮಾದಗಳನ್ನು ಜಯಿಸಲು ಉಪಾಯಗಳು ಯಾವವೆಂದರೆ:—ಮಂತ್ರಿಸಲ್ಪಟ್ಟ ಔಷಧಿ, ಮಣಿಗಳನ್ನು ಧರಿಸುವದು, ಮಂಗಲಾಚರಣ, ಬಲಿ, ನೈವೇದ್ಯ, ಹೋಮ, ನಿಯಮ, ವ್ರತ, ಪ್ರಾಯಶ್ಚಿತ್ತ, ಉಪವಾಸ, ಸ್ವಸ್ತಿವಾಚನ (ಅನಿಷ್ಟಪರಿಹಾರಕ ಮಂತ್ರೋಚ್ಚಾರಣ), ಶರಣಾಗತನಾಗುವದು, ಮುಂತಾದವುಗಳಾಗಿರುತ್ತವೆ.

29. ಉನ್ಮಾದೇಷು ಚ ಸರ್ವೇಷು ಕುರ್ಯಾಚ್ಚಿತ್ತಪ್ರಸಾದನಮ್ ॥

(ಸು. 899)

ಉನ್ಮಾದಚಿಕಿತ್ಸೆಯಲ್ಲಿ ಪ್ರಧಾನ ಕರ್ತವ್ಯ

ಎಲ್ಲಾ ಉನ್ಮಾದಗಳಲ್ಲಿಯೂ ಮನಸ್ಸಿನ ಪ್ರಸನ್ನತೆಯನ್ನು ಉಂಟುಮಾಡತಕ್ಕದ್ದು.

ಷರಾ ೧. ಮನುಷ್ಯನು ಅಲ್ಪ ಸತ್ವವುಳ್ಳವನಾಗುವದು ಅಂದರೆ ಅವನ ಮಿದುಳೇ ಪ್ರಧಾನವಾದ ನರಮಂಡಲವು ಬಲಹೀನವಾಗಿರುವದು ೨. ವಾತಾದಿ ದೋಷಗಳಿಂದ ಹೃದಯವು ಬಹಳವಾಗಿ ಕೆಡುವದು ಅಂದರೆ ರಕ್ತವು ಹೀನ, ಅಥವಾ ಅಧಿಕ, ಅಥವಾ ಮಲಿನವಾಗುವದು. ೩ ಮನೋವಹ ಸ್ರೋತಸ್ಸುಗಳು ದೋಷಾಧೀನವಾಗುವದು ಅಂದರೆ ಮಿದುಳಿಗೆ ಸಂಬಂಧಪಟ್ಟ ನರಗಳ ಅಧಿಕಾರವು ವಿಕಾರವಾಗುವದು ಈ ಮೂರು ಅವಸ್ಥಾವಿಶೇಷಗಳು ಕೂಡಿಕೊಳ್ಳುವದು ಉನ್ಮಾದದಲ್ಲಿ ಉಂಟಾಗುವ ಚಿತ್ತಪ್ರಸನ್ನತೆಯ ಭಂಗಕ್ಕೆ ಸನ್ನಿಕೃಷ್ಟಹೇತು ಎಂತ ಮೇಲೆ ಹೇಳಲ್ಪಟ್ಟ ನಿದಾನೋಕ್ತಿಯಿಂದ (ಸಂ. ೨) ತಿಳಿದುಬರುತ್ತದೆ ನರಮಂಡಲದ ಅಧಿಕಾರಕ್ಕೂ ಮನಸ್ಸಿಗೂ ನಾಯಕನು ವಾಯುವಾದ್ದರಿಂದ ವಾತಾದಿ ದೋಷಗಳೊಳಗೆ ವಾತದ ದೋಷವು ಎಲ್ಲಾ ಉನ್ಮಾದಗಳಲ್ಲಿಯೂ ಇರಬೇಕು ರಕ್ತದೋಷಕ್ಕೆ ಸಾಧಾರಣವಾಗಿ ಪಿತ್ತಚಿಕಿತ್ಸೆಯೇ ಹೇಳಲ್ಪಟ್ಟಿರುವದರಿಂದ ರಕ್ತದೋಷವೆಂದರೂ ಪಿತ್ತದೋಷವೆಂದರೂ ಒಂದೇ ಎನ್ನಬಹುದು ಆದ್ದರಿಂದ ಪಿತ್ತದೋಷ ಸಹ ಎಲ್ಲಾ ಉನ್ಮಾದಗಳಲ್ಲಿ ಇರುವಂಥಾದ್ದೆಂತ ತಿಳಿಯಬಹುದು ನರಗಳನ್ನು ಬಲಪಡಿಸುವದು, ರಕ್ತವು ಕಡಿಮೆಯಾಗಿದ್ದರೆ ಕಬ್ಬಿಣಯುಕ್ತವಾದದ್ದೇ ಮೊದಲಾದ ಔಷಧಗಳನ್ನು ಕೊಟ್ಟು ಅದನ್ನು ಭರ್ತಿಮಾಡುವದು, ಅಧಿಕವಾಗಿದ್ದರೆ ತಿರೆಯನ್ನು ಚುಚ್ಚಿರಕ್ತಮೋಕ್ಷಣ ಮಾಡುವದು ಮತ್ತು ಮಲಿನವಾಗಿದ್ದರೆ ಯುಕ್ತವಾದ ಔಷಧಗಳನ್ನು ಕೊಟ್ಟು ಅದನ್ನು ಶುದ್ಧಪಡಿಸುವದು, ವಾತಾದಿದೋಷಗಳನ್ನು ಕ್ರಮಪಡಿಸುವದು, ವಿಶೇಷವಾಗಿ ಕೋಪಗೊಂಡ ವಾತವನ್ನೂ ಪಿತ್ತವನ್ನೂ ಶಮನಮಾಡುವದು, ಚಿಂತೆ-ದುಃಖಾದಿ ಹೇತುಗಳಿದ್ದಲ್ಲಿ ಅವುಗಳ ಪರಿಹಾರಕ್ಕಾಗಿ ವಿಸ್ಮಾಪನ (ಟಕಾಯಿಸುವದು), ವಿಸ್ಮಾರಣ (ಮರಸುವದು,) ಮುಂತಾದ ಬೇರೆ ಉಪಯುಕ್ತವಾದ ಸಾಧನಗಳನ್ನು ಪ್ರಯೋಗಿಸುವದು, ಇವೇ ಮೊದಲಾದ ಉಪಾಯಗಳಿಂದ ಚಿತ್ತಪ್ರಸನ್ನತೆಯನ್ನುಂಟುಮಾಡುವದೇ ಉನ್ಮಾದದ ಚಿಕಿತ್ಸೆಯಾಗಿರುತ್ತದೆ. ಸಾಧ್ಯವಾದ ಭೂತೋನ್ಮಾದಗಳಲ್ಲಿ ಇದೇ ಕ್ರಮಗಳನ್ನು ನಡಿಸತಕ್ಕದ್ದಾದರೂ, ಮುಂದಾಗಿ ದೇವತಾಪ್ರಾರ್ಥನೆ, ಮಂತ್ರ, ಬಲಿ, ಹೋಮ, ನಿಯಮ, ಪ್ರಾಯಶ್ಚಿತ್ತಾದಿ ಸಾಧನಗಳಿಗೆ ಮನಸ್ಸು ಕೊಡತಕ್ಕದ್ದೆಂಬದು ಆಯುರ್ವೇದದ ವಿಧಿಯಾಗಿರುತ್ತದೆ

30.　ಉನ್ಮಾದೇ ವಾತಜೇ ಪೂರ್ವಂ ಸ್ನೇಹಪಾನಂ ವಿಶೇಷವಿತ್ ।
ಕುರ್ಯಾದಾವೃತಮಾರ್ಗೇ ತು ಸಸ್ನೇಹಂ ಮೃದು ಶೋಧನಮ್ ॥
ಕಫಪಿತ್ತಭವೇಽಪ್ಯಾದೌ ವಮನಂ ಸವಿರೇಚನಮ್ ।
ಸ್ನಿಗ್ಧಸ್ವಿನ್ನಸ್ಯ ಕರ್ತವ್ಯಂ ಶುದ್ಧೇ ಸಂಸರ್ಜನಕ್ರಮಃ ।

ಸ್ನೇಹ-ಪಾನ-ಸ್ವೇದನ-ಶೋಧನಗಳ ಉಪಯೋಗ

(ಚ. 610)

ವಾತಜ ಉನ್ಮಾದದಲ್ಲ ಮೊದಲಾಗಿ ಬಲ್ಲಂಥ ವೈದ್ಯನು ಯುಕ್ತರೀತಿಯಿಂದ ಸ್ನೇಹಪಾನವನ್ನು ಮಾಡಿಸತಕ್ಕದ್ದು ಮತ್ತು ಸ್ರೋತಸ್ಸುಗಳಲ್ಲಿ ತಡೆ ಕಂಡರೆ, ಸ್ನೇಹಯುಕ್ತವಾದ ಮೃದು (ವಮನ-ವಿರೇಚನ ರೂಪವಾದ) ಶೋಧನವನ್ನು ಕೊಡಬೇಕು. ಕಫಪಿತ್ತಗಳಿಂದುಂಟಾದ ಉನ್ಮಾದಗಳಲ್ಲಿಯೂ, ಸ್ನೇಹನ-ಸ್ವೇದನ ಕ್ರಮಗಳನ್ನು ನಡಿಸಿದ ಮೇಲೆ ಮುಂದಾಗಿ ವಿರೇಚನವಲ್ಲದೆ ವಮನವನ್ನು ಮಾಡಿಸತಕ್ಕದ್ದು. ಈ ಕ್ರಮಗಳಿಂದ ದೇಹ ಶುದ್ಧವಾದ ಮೇಲೆ ನಿತ್ಯದ ಮಲ ಹೋಗುವ ಹಾಗೆ ಔಷಧಕೊಡುವದು.

ಷರಾ ಕಫಜದಲ್ಲಿ ವಾಂತಿ, ಪಿತ್ತಜದಲ್ಲಿ ವಿರೇಚನ ಎಂಬ ಸಾಮಾನ್ಯವಿಧಿಯನ್ನೇ ಇಲ್ಲಿ ಹೇಳಿದ್ದಾಗಿ ಅರ್ಥಮಾಡುವದು ಸರಿ ಕಾಣುವದಿಲ್ಲ ಸುಶ್ರುತನು ಎಲ್ಲಾ ಉನ್ಮಾದಗಳಲ್ಲಿ ತೀಕ್ಷ್ಣವಾದ ವಮನ ವಿರೇಚನಗಳನ್ನು ಮಾಡಿಸಬೇಕಾಗಿ ಹೇಳಿದ್ದಾನೆ (ಪು 897)

31.　ನಿರೂಹಣಸ್ನೇಹವಸ್ತೀ ಶಿರಸಶ್ಚ ವಿರೇಚನಮ್ ।
ತತಃ ಕುರ್ಯಾದ್ಯಥಾದೋಷಂ ತೇಷಾಂ ಭೂಯಸ್ತ್ವಮಾಚರೇತ್ ॥

ವಸ್ತಿ ಮತ್ತು ಶಿರೋವಿರೇಚನದ ಉಪಯೋಗ

(ಚ. 610)

ರೋಗಿಯ ಕೋಷ್ಠ ಶುದ್ಧವಾದ ಮೇಲೆ ಅವನಿಗೆ ನಿರೂಹವಸ್ತಿ—ಸ್ನೇಹವಸ್ತಿ (ಅನುವಾಸನ)—ಶಿರೋವಿರೇಚನಗಳನ್ನು ಮಾಡಿಸಬೇಕು. ದೋಷಬಲವನ್ನು ನೋಡಿಕೊಂಡು ಅವುಗಳನ್ನು ಪುನಃಪುನಃ ಮಾಡಿಸಬಹುದು.

32. ಶಙ್ಖಕೇಶಾನ್ತಸನ್ಧೌ ವಾ ಮೋಕ್ಷಯೇಜ್ ಜ್ಞೋ ಭಿಷಕ್ ಶಿರಾಮ್ ।
ಉನ್ಮಾದೇ ವಿಷಮೇ ಚೈವ ಜ್ವರೇಽಪಸ್ಮಾರ ಏವ ಚ ॥

ರಕ್ತಮೋಕ್ಷಣ

(ಚ 615)

(ಪಿತ್ತೋನ್ಮಾದದಲ್ಲಿ) ಕೆನ್ನೆಗೂ ತಲೆಕೂದಲಿನ ಅಂಚಿಗೂ ಮಧ್ಯದ ಸಂಧಿನಲ್ಲಿ ತಿಳಿದಂಥ ವೈದ್ಯನು ಶಿರೆಯನ್ನು ಚುಚ್ಚಿ ರಕ್ತವನ್ನು ತೆಗೆಯಬೇಕು. ಇದು ಉನ್ಮಾದದಲ್ಲಿಯೂ ವಿಷಮ ಜ್ವರದಲ್ಲಿಯೂ, ಅಪಸ್ಮಾರದಲ್ಲಿಯೂ ಪ್ರಯೋಜನಕರ.

ಷರಾ ತಲೆಯಲ್ಲಿ ರಕ್ತವು ಅಧಿಕವಾಗಿ ಸೇರಿ ಬಿಸಿ ಕಂಡಲ್ಲಿ ಈ ಪ್ರಯೋಗವು ಗುಣಕರವಾದೀತು ಈ ಸ್ಥಾನವಲ್ಲದೆ, ಎದೆ, ಕಣ್ಣಿನ ಹೊರಮೂಲೆ (ಅಪಾಂಗ) ಮತ್ತು ಹಣೆಯಲ್ಲಿಯೂ ಶಿರೆಯನ್ನು ಚುಚ್ಚಬಹುದಾಗಿ ಸು (ಪು 353)

33. ಅಥವಾ ರಾಜಪುರುಷಾ ಬಹಿರ್ನೀತ್ವಾ ಸುಸಂಯತಮ್ ।
ತ್ರಾಸಯೇಯುರ್ವಧೇನೈನಂ ತರ್ಜಯನ್ತೋ ನೃಪಾಜ್ಞಯಾ ॥
ದೇಹದುಃಖಭಯೇಭ್ಯೋ ಹಿ ಪರಂ ಪ್ರಾಣಭಯಂ ಮಹತ್ ।
ತೇನ ಯಾತಿ ಶಮಂ ತಸ್ಯ ಸರ್ವತೋ ವಿಪ್ಲುತಂ ಮನಃ ॥

ಭಯಪಡಿಸು ವದು, ಗದರಿಸು ವದು, ಮುಂತಾ ದ್ದರ ಉಪಯೋಗ

(ಚ. 615)

ಅಥವಾ ಸರಕಾರದ (ರಾಜನ) ಕಡೆ ಜನರು ಆ ಉನ್ಮಾದಿಯನ್ನು ಗಟ್ಟಿಯಾಗಿ ಹಿಡಕೊಂಡು ಹೊರಗೆ ಕರೆದುಕೊಂಡು ಹೋಗಿ ಅರಸನ ಆಜ್ಞೆಯಾಗಿರುವ ಪ್ರಕಾರ ನಿನ್ನನ್ನು ಕೊಲ್ಲುತ್ತೇವೆಂದು ಗರ್ಜಿಸುತ್ತಾ ಬೆದರಿಸಬೇಕು. ಯಾಕೆಂದರೆ ದೇಹಕ್ಕುಂಟಾಗಬಹುದಾದ ಸಂಕಷ್ಟಗಳ ಭಯಗಳಿಗಿಂತ ಪ್ರಾಣ (ಹೋದೀತೆಂಬ) ಭಯವು ಬಹಳ ದೊಡ್ಡದಾದ್ದರಿಂದ, ಅವನ ಸರ್ವತ್ರ ಉಕ್ಕಿ ಪಸರಿಸಿದ ಮನಸ್ಸು ಅದರಿಂದ ಶಮನವನ್ನು ಪಡೆಯುವದು.

ಆಶ್ವಾಸಯೇತ್ ಸುಹೃದ್ವಾ ತಂ ವಾಕ್ಯೈರ್ಧರ್ಮಾರ್ಥಸಂಹಿತೈಃ ।
ಬ್ರೂಯಾದಿಷ್ಟವಿನಾಶಂ ವಾ ದರ್ಶಯೇದದ್ಭುತಾನಿ ವಾ ॥ (ಚ. 615)

ಅಥವಾ ರೋಗಿಯನ್ನು ಆತನ ಸ್ನೇಹಿತನಾದವನು ಧರ್ಮ ಮತ್ತು ಅರ್ಥಗಳಿಂದ ಕೂಡಿದ ಮಾತುಗಳಿಂದ ಸಮಾಧಾನಪಡಿಸಬೇಕು, ಅಥವಾ ಆತನಿಗೆ ಇಷ್ಟವಾದದ್ದು ಯಾವದಾದರೊಂದು ನಾಶವಾಯಿತೆಂತ ಹೇಳಬೇಕು, ಅಥವಾ ಆಶ್ಚರ್ಯಕರವಾದವುಗಳನ್ನು ತೋರಿಸಬೇಕು.

34. ಇಷ್ಟದ್ರವ್ಯವಿನಾಶಾತ್ತು ಮನೋ ಯಸ್ಯೋಪಹನ್ಯತೇ ।
ತಸ್ಯ ತತ್ಸದೃಶಪ್ರಾಪ್ತಿಶಾನ್ತ್ಯಾಶ್ವಾಸೈಃ ಶಮಂ ನಯೇತ್ ॥
ಕಾಮಶೋಕಭಯಕ್ರೋಧಹರ್ಷೇರ್ಷ್ಯಾಲೋಭಸಂಭವಾನ್ ।
ಪರಸ್ಪರಪ್ರತಿದ್ವಂದ್ವೈರೇಭಿರೇವ ಶಮಂ ನಯೇತ್ ॥

ಶೋಕ (ಮನೋವ್ಯಥಾದಿ) ಜ ಉನ್ಮಾದಗಳಲ್ಲಿ ಆಶ್ವಾಸನಾದಿ ಪ್ರತಿಕ್ರಿಯೆ

(ಚ 615)

ಇಷ್ಟವಾಗಿದ್ದ ದ್ರವ್ಯ ನಾಶವಾದ ಡೆಸೆಯಿಂದ ಯಾರ ಮನಸ್ಸು ಕೆಟ್ಟಿರುತ್ತದೋ ಆತನಿಗೆ ಅದಕ್ಕೆ ಸದೃಶವಾದದ್ದನ್ನು ತೋರಿಸಿ, ಕಳದುಹೋದ ವಸ್ತು ಪ್ರಾಪ್ತವಾಯಿತೆಂಬ ಸಮಾಧಾನ ಹೇಳಿ, ನಂಬಿಕೆ ಹುಟ್ಟಿಸಿ, ಅವನ ರೋಗವನ್ನು ಶಾಂತಮಾಡಬೇಕು. ಕಾಮ, ಚಿಂತೆ, ಭಯ, ಸಿಟ್ಟು, ಹರ್ಷ, ಹೊಟ್ಟೆಕಿಚ್ಚು, ದ್ರವ್ಯದ ಆಶೆ, ಇವುಗಳ ದೆಸೆಯಿಂದುಂಟಾದ ಉನ್ಮಾದಗಳನ್ನು

ಶಾಂತಮಾಡುವದಕ್ಕೆ ಅವುಗಳೊಳಗೆ ಒಂದಕ್ಕೊಂದು ವಿರುದ್ಧವಾಗಿ ಇರುವದರಿಂದ ಅವುಗಳನ್ನೇ ಆಯಾ ಹೇತುವಿಗೆ ವಿರೋಧವಾಗುವ ಕ್ರಮದಿಂದ ಉಪಯೋಗಿಸಬೇಕು.

ಟಿಪ್ಪಣಿ ಕಾಮುಜವನ್ನು ಭಯದಿಂದ ಅಥವಾ ಕ್ರೋಧದಿಂದ ಶಮನಮಾಡಬೇಕು, ಹಾಗೆಯೇ ಇತರ ಉನ್ಮಾದಗಳನ್ನು ಪ್ರತಿವಿರುದ್ಧವಾದ ಭಾವವನ್ನುಂಟುಮಾಡಿ ಶಮಿಸಬೇಕು

ಶೋಕಶಲ್ಯಂ ವ್ಯಪನಯೇದುನ್ಮಾದೇ ಪಂಚಮೇ ಭಿಷಕ್ || (ಸು. 899)

ಶೋಕದಿಂದುಂಟಾದ ಉನ್ಮಾದದಲ್ಲಿ ವೈದ್ಯನು ಶೋಕವನ್ನುಂಟುಮಾಡಿದ ಹೇತು (ಬಾಣ) ವನ್ನು ತೆಗೆದುಬಿಡಬೇಕು.

35. ವಿಷಜೇ ಮೃದುಪೂರ್ವಾಂ ಚ ವಿಷಘ್ನೀಂ ಕಾರಯೇತ್ಕ್ರಿಯಾಮ್ || (ಸು. 899)

ವಿಷೋನ್ಮಾದಕ್ಕೆ ಪ್ರತಿಕ್ರಿಯೆ

ವಿಷದಿಂದುಂಟಾದ ಉನ್ಮಾದದಲ್ಲಿ ವಿಷಸಂಹಾರಕವಾದ ಚಿಕಿತ್ಸೆಯನ್ನು ಮೃದುರೂಪವಾಗಿ ನಡಿಸತಕ್ಕದ್ದು.

36. ನಿವೃತ್ತಾಮಿಷಮದ್ಯೋ ಯೋ ಹಿತಾಶೀ ಪ್ರಯತಃ ಶುಚಿಃ |
ನಿಜಾಗಂತುಭಿರುನ್ಮಾದೈಃ ಸತ್ವವಾನ್ ನ ಸ ಯುಜ್ಯತೇ || (ಚ. 616)

ಉನ್ಮಾದ ತಟ್ಟಲಾರದವರು

ಮಾಂಸವನ್ನೂ ಮದ್ಯವನ್ನೂ ಬಿಟ್ಟು ಹಿತಕರವಾದದ್ದನ್ನೇ ಉಣ್ಣುವವನಾಗಿ, ಶುಚಿಯಾಗಿಯೂ, ನಿಯತಿಯಿಂದ ನಡಕೊಳ್ಳುವವನಾಗಿಯೂ, ಸತ್ವವಂತನಾಗಿಯೂ, ಯಾರು ಇರುತ್ತಾನೋ, ಅವನಿಗೆ ನಿಜೋನ್ಮಾದವಾಗಲೀ ಆಗಂತುವರ್ಗದ ಉನ್ಮಾದವಾಗಲೀ ತಟ್ಟಲಾರದು.

ಟಿಪ್ಪಣಿ 'ಸತ್ವವಂತ' ಎಂದರೆ ನರಗಳ ಬಲವನ್ನು ಕಾಪಾಡಿಕೊಂಡವ, ಜಿತೇಂದ್ರಿಯ

37 ಜಲಾಗ್ನಿದ್ರುಮಶೈಲೇಭ್ಯೋ ವಿಷಮೇಭ್ಯಶ್ಚ ತಂ ಸದಾ |
ರಕ್ಷೇದುನ್ಮಾದಿನಂ ಯತ್ನಾತ್ಸದ್ಯಃ ಪ್ರಾಣಹರಂ ಹಿ ತತ್ | (ಭಾ. ಪ್ರ. 102)

ಉನ್ಮಾದಿಗಳ ರಕ್ಷಣವಿಶೇಷ

ಅಪಾಯಕರವಾದ ನೀರಾಶ್ರಯ, ಬೆಂಕಿ, ಮರ, ಮತ್ತು ಬೆಟ್ಟ, ಇವುಗಳಿಂದ ಅಪಾಯ ಉಂಟಾಗದಂತೆ ಉನ್ಮಾದಿಯನ್ನು ಯಾವಾಗಲೂ ಪ್ರಯತ್ನಪಟ್ಟು ಕಾಪಾಡಬೇಕು. ಯಾಕೆಂದರೆ, ಅವುಗಳಿಂದ ಕೂಡಲೇ ಪ್ರಾಣ ಹೋಗಬಹುದು.

38. ತ್ರ್ಯೂಷಣಂ ತ್ರಿಫಲಾ ಹಿಂಗು ಸೈಂಧವಂ ಕಟುಕಾ ವಚಾ |
ನಕ್ತಮಾಲಕಬೀಜಾನಿ ತಥಾ ಚ ಗೌರಸರ್ಷಪಾಃ ||
ವಸ್ತಮೂತ್ರೇಣ ಪಿಷ್ಟ್ವಾ ತು ಗುಟೀ ಛಾಯಾವಿಶೋಷಿತಾ |
ಅಂಜನಂ ಹನ್ತ್ಯಪಸ್ಮಾರಮುನ್ಮಾದಂ ಚೈವ ದಾರುಣಮ್ ||
ಸ್ಮೃತಿಭ್ರಂಶಭ್ರಮಿವಾದೋಷಭೂತದೋಷವಿನಾಶನಮ್ |
ಐಕಾಹಿಕಂ ದ್ವ್ಯಾಹಿಕಂ ಚ ಜ್ವರಂ ಚಾತುರ್ಥಕಂ ಹರೇತ್ ||
ತಿಮಿರಂ ಪಟಲಂ ಹನ್ತಿ ರಾತ್ರ್ಯನ್ಧಂ ಚ ಶಿರೋರುಜಮ್ |
ಸನ್ನಿಪಾತವಿಸ್ಮರಣಂ ಚೇತಯತ್ಯಾಶು ಮಾನವಮ್ ||
(ಹಾ. 217, 218)

ಅಂಜನಕ್ಕೆ ತ್ರ್ಯೂಷಣಾದಿ ವಟಕ

ತ್ರಿಕಟು (ಒಣಶುಂಠಿ, ಹಿಪ್ಪಲಿ, ಬಿಳೇ ಕಾಳುಮೆಣಸು) ತ್ರಿಫಲೆ (ಅಣಲೆಕಾಯಿ ಸಿಪ್ಪೆ, ಶಾಂತಿಕಾಯಿ (ತಾರೇಕಾಯಿ) ಸಿಪ್ಪೆ, ನೆಲ್ಲಚಟ್ಟು), ಹಿಂಗು, ಸೈಂಧವಲವಣ, ಕಟುಕರೋಹಿಣೀ, ಬಜೆ, ಕರಂಜದ (ಕಾಡುಹಲ್ಲೆ-ಹೊಂಗೆ-ಕೊರಂಗು) ಬೀಜ, ಬಿಳೇಸಾಸಿವೆ, ಇವುಗಳನ್ನು (ಒಂದೊಂದು ತೊಲೆಯಂತೆ) ಸರಿಪಾಲು ತೆಗೆದುಕೊಂಡು, ಹಿಂಗ(ತುಪ್ಪದಲ್ಲಿ ಹುರಿದು, ಅದ)ನ್ನೂ, ಸೈಂಧವಲವಣವನ್ನೂ ನುಣ್ಣಗೆ ಪುಡಿಮಾಡಿಕೊಳ್ಳುವದಲ್ಲದೆ, ಮಿಕ್ಕ ಜೀನಸುಗಳನ್ನು ಒಣಗಿಸಿ ವಸ್ತ್ರಗಾಳಿತ ಚೂರ್ಣಮಾಡಿ, (ಹಿಂಗು, ಸೈಂಧವಲವಣ ಸಹ) ಎಲ್ಲಾ ಚೂರ್ಣವನ್ನು ಒಟ್ಟಾಗಿ ಶೋಧಿಸಿದ ಆಡಿನ ಮೂತ್ರದಿಂದ ಮೂರು ಜಾಮು ಅರೆದು, ನುಣ್ಣಗಾದ ಮೇಲೆ, (ಗಜ್ಜಿಗದ ಬೀಜದ ಪ್ರಮಾಣದಲ್ಲಿ) ಮಾತ್ರೆ ಮಾಡಿ ನೆಳಲಲ್ಲಿ ಒಣಗಿಸಿ ಇಟ್ಟುಕೊಂಡು, (ಆಯಾ ರೋಗಕ್ಕೆ ಯುಕ್ತವಾದ ರಸದಲ್ಲಿ ತೇದಿ) ಕಣ್ಣಿಗೆ ಅಂಜನ ಹಾಕಲು ಅಪಸ್ಮಾರ, ಕಠಿಣವಾದ ಉನ್ಮಾದ, ಸ್ಮೃತಿ ತಪ್ಪುವದು, ಭ್ರಮೆ, ಭೂತದೋಷ, ಪ್ರತಿದಿನ, ಅಥವಾ ದಿನ ಬಿಟ್ಟು ದಿನ, ಅಥವಾ ಎರಡು ದಿನ ಬಿಟ್ಟು, ಬರುವ ವಿಷಮಜ್ವರ, ಕಣ್ಣಿನ ಮಂಜು, ಕಣ್ಣಿನ ಪರೆ, ರಾತ್ರಿಕುರುಡು, ತಲೆನೋವು, ಸನ್ನಿಪಾತದಿಂದ ಸ್ಮೃತಿ ತಪ್ಪುವದು, ಇವುಗಳನ್ನೆಲ್ಲ ಪರಿಹರಿಸುವದಲ್ಲದೆ, ಮನುಷ್ಯನನ್ನು ಬೇಗನೇ ವಿಚಾರವಂತನಾಗಿ ಮಾಡುವದು.

39. ಶಿರೀಷೋ ಮಧುಕಂ ಹಿಂಗು ಲಶುನಂ ತಗರಂ ವಚಾಮ್ ।
ಕುಷ್ಠಂ ವಸ್ತಮೂತ್ರೇಣ ಪಿಷ್ಟಂ ಸ್ಯಾನ್ನಾವನಾಂಜನಮ್ ॥

ಶಿರೀಷಾದಿ ನಸ್ಯ

(ಚ. 613, 614)

ಬಾಗೆ ಮರದ ಬೀಜ, ಜ್ಯೇಷ್ಠಮಧು, ಹಿಂಗು, ಬೆಳ್ಳುಳ್ಳಿ ಕಾಳು, ತಗರ, ಬಜೆ, ಚಂಗಲಕೋಷ್ಟ, ಇವುಗಳನ್ನು ಆಡಿನ ಮೂತ್ರದಿಂದ ಅರೆದು ಉನ್ಮಾದದಲ್ಲಿ ನಸ್ಯಕ್ಕೂ ಅಂಜನಕ್ಕೂ ಉಪಯೋಗಿಸುವದು. (ಅದರಿಂದ ಉನ್ಮಾದಿಯು ವಿಧೇಯನಾಗುತ್ತಾನೆ.)

40. ಸಿದ್ಧಾರ್ಥಕೋ ವಚಾ ಹಿಂಗುಕರಂಜೋ ದೇವದಾರು ಚ ।
ಮಂಜಿಷ್ಠಾ ತ್ರಿಫಲಾ ಶ್ವೇತಾ ಕಟಭೀತ್ವಕ್ ಕಟುತ್ರಿಕಮ್ ॥
ಸಮಾಂಶಾನಿ ಪ್ರಿಯಂಗುಶ್ಚ ಶಿರೀಷೋ ರಜನೀದ್ವಯಮ್ ।
ವಸ್ತಮೂತ್ರೇಣ ಪಿಷ್ಟೋಽಯಮಗದಃ ಪಾನಮಂಜನಮ್ ॥
ನಸ್ಯಮಾಲೇಪನಂ ಚೈವ ಸ್ನಾನಮುದ್ವರ್ತನಂ ತಥಾ ।
ಅಪಸ್ಮಾರವಿಷೋನ್ಮಾದಕೃತ್ಯಾಲಕ್ಷ್ಮೀಜ್ವರಾಪಹಃ ॥
ಭೂತೇಭ್ಯಶ್ಚ ಭಯಂ ಹಂತಿ ರಾಜದ್ವಾರೇ ಚ ಶಸ್ಯತೇ ।
ಸರ್ಪಿರೇತೇನ ಸಿದ್ಧಂ ವಾ ಸಗೋಮೂತ್ರಂ ತದರ್ಥಕೃತ್ ॥

ನಸ್ಯಾಂಜನಾದಿಗಳಿಗೆ ಸಿದ್ಧಾರ್ಥಕಾದಿ ಯೋಗ

(ಚ. 611)

ಬಿಳೇಸಾಸಿವೆ, ಬಜೆ, ಹಿಂಗು, ಹೊಂಗೆಬೀಜ, ದೇವದಾರ, ಮಂಜಿಷ್ಠ, ತ್ರಿಫಲೆ, ಬಿಳೇ ಗಿರಿಕರ್ಣಿಕೆ (ಶಂಖಪುಷ್ಪದ) ಬೇರು, ದದ್ದಾಲದ ಚಕ್ಕೆ, ತ್ರಿಕಟು, ಪ್ರಿಯಂಗು, ಬಾಗೆ ಚಕ್ಕೆ, ಅರಸಿನ, ಮರದರಸಿನ, ಇವುಗಳನ್ನು ಸಮಾಂಶವಾಗಿ ತೆಗೆದುಕೊಂಡು ಚೂರ್ಣಿಸಿ, ಆಡಿನ ಮೂತ್ರದಿಂದ ಅರೆದು, ಪಾನ, ಅಂಜನ, ನಸ್ಯ, ಲೇಪನ, ಸ್ನಾನ, ಮೈತಿಕ್ಕುವದು, ಇವುಗಳಿಗೆ ಉಪಯೋಗಿಸಬಹುದು. ಈ ಔಷಧದ ಉಪಯೋಗದಿಂದ ಅಪಸ್ಮಾರ, ವಿಷ, ಉನ್ಮಾದ,

ಕೃತ್ಯಾ' ಎಂಬ ಮಾಟದೇವತೆಯ ಬಾಧೆ, ಕಲಿ, ಮತ್ತು ಜ್ವರ ಪರಿಹಾರವಾಗುತ್ತವೆ, ಭೂತಗಳ ಭಯ ನಾಶವಾಗುತ್ತದೆ, ಮತ್ತು ರಾಜದ್ವಾರದಲ್ಲಿ ಉಪಯೋಗಿಸುವದಕ್ಕೆ ಪ್ರಶಸ್ತವಾದದ್ದು. ಈ ಯೋಗದ ಔಷಧಗಳಿಂದ (ಕಲ್ಕದಿಂದ) ಗೋಮೂತ್ರವನ್ನು ಕೂಡಿಸಿ ಕಾಯಿಸಲ್ಪಟ್ಟ ತುಪ್ಪವು ಅದೇ ಗುಣವುಳ್ಳದ್ದು.

ಪರಾ 'ಕಟಫೀತ್ವಕ್' ಎಂಬಲ್ಲಿ ಕಟಫೀ (ದದ್ದಾಲ) ಮತ್ತು ತ್ವಕ್ (ಲವಂಗಪಟ್ಟೆ) ಎಂಬವು ಬೇರೆ ಬೇರೆ ಎರಡು ದ್ರವ್ಯಗಳು ಎಂತ ಭಾ ಪ್ರ (ಪು 403)

41. ಬ್ರಾಹ್ಮೀಕೂಷ್ಮಾಂಡೀಫಲಷಡ್ಗ್ರನ್ಥಾಶಂಖಪುಷ್ಪಿಕಾಸ್ವರಸಾಃ |
ದೃಷ್ಟಾ ಉನ್ಮಾದಹೃತಃ ಪೃಥಗೇತೇ ಕುಷ್ಠಮಧುಮಿಶ್ರಾಃ ||

ಬ್ರಾಹ್ಮ್ಯಾದಿ ಸ್ವರಸಗಳು

(ಭಾ. ಪ್ರ. 403)

(೧) ಒಂದೆಲಗನ ರಸ, (೨) ಹಳೇ ಬೂದಿಕುಂಬಳಕಾಯಿಯ ರಸ, (೩) ಬಜೆಯ ರಸ, (೪) ಕಟ್ಟವತ್ತಿಗೆ (ಶಂಖಪುಷ್ಪೀ) ರಸ, ಇವುಗಳೊಳಗೆ ಯಾವದೊಂದನ್ನಾದರೂ, ಚಂಗಲಕೋಷ್ಠದ ಚೂರ್ಣ ಮತ್ತು ಜೇನು ಕೂಡಿಸಿ, ಪಾನಮಾಡುವದರಿಂದ ಉನ್ಮಾದ ಪರಿಹಾರವಾಗುತ್ತದೆಂತ ಕಂಡದೆ.

ಪರಾ 'ಕೂಷ್ಮಾಂಡೀ' ಎಂತ ಇರುವದಕ್ಕೆ ಬೂದಿ ಕುಂಬಳಕಾಯಿಯ ಬೀಜದ ಚೂರ್ಣವನ್ನು ಉಪಯೋಗಿಸುವದಾಗಿ ವ್ಯಾಖ್ಯಾನದಿಂದ ಕಾಣುತ್ತದೆ. ವಾಕ್ಯದಲ್ಲಿ ಹೇಳಲ್ಪಟ್ಟ ಸ್ವರಸ ಸಿಕ್ಕದ ಸಂಗತಿಯಲ್ಲಿ ಬೀಜದ ಚೂರ್ಣವನ್ನು ಉಪಯೋಗಿಸುವ ಕ್ರಮವಿರಬೇಕು ಹಸೀ ಬಜೆ ದೊರೆಯದ ಸಂಗತಿಯಲ್ಲಿ ಒಣಗಿದ ಬಜೆಯ ಚೂರ್ಣವನ್ನೂ, ಹಾಗೆಯೇ ಶಂಖಪುಷ್ಪಿಯ ಗಿಡವಿಲ್ಲದಲ್ಲಿ ಅದರ ಬೇರಿನ ಸಿಪ್ಪೆಯ ಚೂರ್ಣವನ್ನೂ ಉಪಯೋಗಿಸಬಹುದು ಆದರೆ ಅಂಥಾ ಸಂಗತಿಯಲ್ಲಿ ಸ್ವರಸಕ್ಕೆ ಬದಲಾಗಿ ಕಲ್ಕವನ್ನು ಉಪಯೋಗಿಸುವದು ಒಳ್ಳೇದು. ಸ್ವರಸ ೧ ಪಲ, ಜೇನು ಅರ್ಧ ಕರ್ಷ, ಚಂಗಲಕೋಷ್ಠದ ಚೂರ್ಣ ಕಾಲು ಕರ್ಷ, ಎಂತ ಅದೇ ವ್ಯಾಖ್ಯಾನ ಹೇಳುತ್ತದೆ ಸ್ವರಸ ಸಾಧಾರಣವಾಗಿ ಅರ್ಧಪಲ ಕೊಡುವದಾದರೂ, ಉನ್ಮಾದದಲ್ಲಿ ಆ ಪ್ರಮಾಣ ಕಾಲದೆಂತ ಅರ್ಥವಾಗುತ್ತದೆ ಅದೇ ವ್ಯಾಖ್ಯಾನದಲ್ಲಿ ಚೂರ್ಣವಾದರೆ ಅರ್ಧಕರ್ಷ ಎಂತ ಕಾಣುತ್ತದೆ ಇದು ಬಜೆ ಮತ್ತು ಶಂಖಪುಷ್ಪೀ ಮಟ್ಟಿಗೆ ಸರಿಯಾದದ್ದೇ. ಸಾಮಾನ್ಯ ವಚನಪ್ರಕಾರ ೧ ಕರ್ಷ ಕೊಡುವದು ಹೆಚ್ಚಾದೀತು. ಇದೇ ಪ್ರಮಾಣ ಕಲ್ಕಕ್ಕಾದರೂ ಸಾಕು ಶಾರ್ಙ್ಗಧರಸಂಹಿತೆಯ ಗೂಢದೀ ಯಲ್ಲಿ ಜೇನು ಮತ್ತು ಕುಷ್ಠ ಇವೆರಡನ್ನೂ ಅರ್ಧ ಕರ್ಷ ಪ್ರಕಾರ, ಅಥವಾ ಯಥಾಬಲವಾಗಿ, ಕೂಡಿಸುವದಾಗಿ ಹೇಳಲ್ಪಟ್ಟದೆ ಪೀಠಿಕೆಯಲ್ಲಿ ಬೂದಿಕುಂಬಳ ಸೊಪ್ಪು ಸಿಕ್ಕದಿದ್ದಲ್ಲಿ ಅದರ ಕಾಯಿಯ ಕಷಾಯವನ್ನು ಉಪಯೋಗಿಸುವದಾಗಿ ಉಪದೇಶ (ಪು 140, 141) ಕಾಯಿಯ ಹೋಳುಗಳನ್ನು ನೀರಿನ ಸೆಕೆಯಲ್ಲಿ ಬೆವರಿಸಿ ರಸ ತೆಗೆಯುವ ವಾಡಿಕೆ ಪ್ರಶಸ್ತವಾದದ್ದು ಬ್ರಾಹ್ಮೀ ಎಂಬದಕ್ಕೆ ಅದೇ ಹೆಸರಿನ ಚಿಕ್ಕ ಎಲೆಗಳ ಒಂದು ಬಳ್ಳಿಯನ್ನು ಉಪಯೋಗಿಸುವದು ಮಲೆಯಾಳ ಸಂಪ್ರದಾಯ ಇತರ ಪ್ರದೇಶಗಳಲ್ಲಿ ಹೆಚ್ಚಾಗಿ ಒಂದೆಲಗವನ್ನು ಉಪಯೋಗಿಸುತ್ತಾರೆ ಅದನ್ನು ತಿಂದರೆ ಬುದ್ಧಿ ಬರುತ್ತದೆ ಎಂಬದು ಹಳ್ಳಿಪಳ್ಳಿಯ ಜನರಲ್ಲಿಯೂ ಪೂರ್ವದಿಂದ ಪ್ರಸಿದ್ಧವಿರುವ ವಿಷಯ (ಬೃ ನಿ ಸಂ 160)

42. ಶತಾವರೀಂ ಪಿಪ್ಪಲೀಂ ಚ ವಿದಾರೀಂ ಚ ಕಶೇರುಕಾಮ್ |
ಖರ್ಜೂರಂ ಮಧುಕಂ ಕ್ಷೌದ್ರಂ ಶರ್ಕರಾಂ ಚ ಘೃತಂ ತಥಾ ||
ಆಲೋಡ್ಯ ಪಾಯಯೇತ್ಪ್ರಾಜ್ಞಸ್ಸರ್ವೋನ್ಮಾದವಿನಾಶನಮ್ ||

ಶತಾವರ್ಯಾದಿ ಚೂರ್ಣ

(ವೈ ಸಾ. ಸಂ. 529)

ಶತಾವರೀಬೇರು, ಹಿಪ್ಪಲಿ, ನೆಲಕುಂಬಳಗಡ್ಡೆ, ಸಣ್ಣ ಭದ್ರಮುಷ್ಟಿ, ಖರ್ಜೂರ, ಜ್ಯೇಷ್ಠಮಧು, ಇವುಗಳ ಚೂರ್ಣವನ್ನು ತುಪ್ಪದಲ್ಲಿ ಅರೆದು, ಜೇನನ್ನೂ ಸಕ್ಕರೆಯನ್ನೂ ಬೆರಸಿ, ಬುದ್ಧಿವಂತನಾದ ವೈದ್ಯನು ಸರ್ವ ಉನ್ಮಾದನಾಶನಕ್ಕಾಗಿ ರೋಗಿಗೆ ಕುಡಿಸಬೇಕು.

ಪರಾ ಸಾಧಾರಣವಾಗಿ ಚೂರ್ಣಕ್ಕೆ ೨ ಪಾಲು ತುಪ್ಪ, ಸಮಪಾಲು ಸಕ್ಕರೆ, ಅರ್ಧ ಪಾಲು ಜೇನು ಕೂಡಿಸುವದು. ದೋಷದ ಭೇದದ ಮೇಲೆಯೂ, ದೇಹಬಲದ ಮೇಲೆಯೂ, ಈ ಪ್ರಮಾಣವನ್ನು ಹೆಚ್ಚುಕಡಿಮೆ ಮಾಡಬಹುದು.

43. ಪಿಪ್ಪಲೀ ಕತಕಾಸ್ಥೀನಿ ನಾರೀಕ್ಷೀರೇಣ ಪೇಷಯೇತ್ |
ಪಿಪ್ಪಲ್ಯಾದಿಕಲ್ಕ ತತ್ಪಿಬೇತ್ಪ್ರಾತರುತ್ಥಾಯ ಪಿತ್ತೋನ್ಮಾದಪ್ರಶಾನ್ತಯೇ |
(ವೈ. ಸಾ. ಸಂ. 530)

ಹಿಪ್ಪಲಿ ಮತ್ತು ಚಿಲ್‌ಬೀಜದ ತಿರಳನ್ನು ಸ್ತ್ರೀ ಮೊಲೆಹಾಲಿನಿಂದ ಅರೆದು, ಕಲ್ಕಮಾಡಿ, ಪ್ರತಿದಿನ ಬೆಳಿಗ್ಗೆ ಎದ್ದ ಕೂಡಲೇ ಕುಡಿಯುವದರಿಂದ ಪಿತ್ತಜ ಉನ್ಮಾದವು ಶಾಂತವಾಗುತ್ತದೆ.

44. ಕುಷ್ಠಾಶ್ವಗನ್ಧೇ ಲವಣಾಜಮೋದೇ ದ್ವೇ ಜೀರಕೇ ತ್ರೀಣಿ ಕಟೂನಿ ಪಾಠಾ|
ಸಾರಸ್ವತ ಚೂರ್ಣ. ಮಾ(? ಮ)ಂಗಲ್ಯಪುಷ್ಪೀ ಚ ಸಮಾನ್ಯಮೂನಿ ಸರ್ವೈಃ ಸಮಾನಾಂ ಚ ವಚಾಂ ವಿಚೂರ್ಣ್ಯ ||
ಬ್ರಾಹ್ಮೀರಸೇನಾಖಿಲಮೇವ ಭಾವ್ಯಂ ವಾರತ್ರಯಂ ಶುಷ್ಕಮಿದಂ ಹಿ ಚೂರ್ಣಮ್ |
ಅಕ್ಷಪ್ರಮಾಣಂ ಮಧುನಾ ಘೃತೇನ ಲಿಹ್ಯಾನ್ನರಃ ಸಪ್ತದಿನಾನಿ ಚೂರ್ಣಮ್ ||
ಸಾರಸ್ವತಮಿದಂ ಚೂರ್ಣಂ ಬ್ರಹ್ಮಣಾ ನಿರ್ಮಿತಂ ಪುರಾ |
ಹಿತಾಯ ಸರ್ವಲೋಕಾನಾಂ ದುರ್ಮೇಧಾನಾಂ ವಿಶೇಷತಃ ||
ಏತಸ್ಯಾಭ್ಯಾಸತಃ ಪುಂಸಾಂ ಬುದ್ಧಿರ್ಮೇಧಾ ಧೃತಿಃ ಸ್ಮೃತಿಃ |
ಸಂಪತ್ತಿಃ ಕವಿತಾಶಕ್ತಿಃ ಪ್ರವರ್ಧೇತೋತ್ತರೋತ್ತರಮ್ ||
(ಭಾ. ಪ್ರ 403)

ಚಂಗಲಕೋಷ್ಠ, ಅಶ್ವಗಂಧಿ, ಸೈಂಧವಲವಣ, ಅಜಮೋದ, ಜೀರಿಗೆ, ಕರಿಜೀರಿಗೆ, ತ್ರಿಕಟು, ಪಾಡಾವಳಿಗಡ್ಡೆ, ಶಂಖಪುಷ್ಪೀ, ಇವುಗಳನ್ನು ಸಮಪಾಲು ತೆಗೆದುಕೊಂಡು, ಒಟ್ಟು ಎಷ್ಟಾಗುತ್ತದೋ ಅಷ್ಟು ಬಜೆಯನ್ನು ಕೂಡಿಸಿ, ನುಣ್ಣಗಿನ ವಸ್ತ್ರಗಾಲಿತ ಚೂರ್ಣಮಾಡಿ, ಆ ಚೂರ್ಣ ಮುಳುಗುವಷ್ಟು ಶೋಧಿಸಿದ ಒಂದೆಲಗ (ತಿಮರೆ) ಸಮೂಲದ ರಸವನ್ನು ಹೊಯಿದು ಕಲಿಸಿ, ಒಂದು ರಾತ್ರಿ ನೆನೆಯಿಟ್ಟು, ಮಾರಣೆ ದಿನ ಬಿಸಿಲಿನಲ್ಲಿಟ್ಟು ಒಣಗಿಸುವದು. ಈ ರೀತಿಯ ಭಾವನೆ ಮೂರು ಸರ್ತಿ ಮಾಡಿ, ಚನ್ನಾಗಿ ಒಣಗಿಸಿಟ್ಟುಕೊಂಡ ಚೂರ್ಣದಿಂದ ಒಂದು ಕರ್ಷತೂಕ ಪ್ರಕಾರ ಪ್ರತಿದಿನ ಬೆಳಿಗ್ಗೆ ದನದ ತುಪ್ಪ ಮತ್ತು ಜೇನಿನೊಂದಿಗೆ ಕಲಸಿ ಏಳು ದಿನಗಳ ವರೆಗೆ ಬಿಡದೆ ಕೊಡುವದು ಈ ಸಾರಸ್ವತ ಚೂರ್ಣವು ಪೂರ್ವದಲ್ಲಿ ಬುದ್ಧಿಹೀನರಾದ ಮತ್ತು ಮನೋವಿಕಾರವುಳ್ಳ ಸಮಸ್ತ ಜನರ ಹಿತಕ್ಕಾಗಿ ಬ್ರಹ್ಮನಿಂದ ನಿರ್ಮಿತವಾದದ್ದು. ಇದರ (ಲಘುವಾದ ಪ್ರಮಾಣದಲ್ಲಿ ದೀರ್ಘಕಾಲ ಸೇವಿಸುವ) ಅಭ್ಯಾಸದಿಂದ ಜನರ ಬುದ್ಧಿ, ಗ್ರಹಣಶಕ್ತಿ, ಧಾರಣಶಕ್ತಿ, ನೆನಪು, ಸಂಪತ್ತು, (ಆರೋಗ್ಯ) ಮತ್ತು ಪಾಂಡಿತ್ಯ ದಿನೇ ದಿನೇ ವೃದ್ಧಿಯಾಗುತ್ತಾ ಬರುವವು.

ಷರಾ 'ಪಾಠಾ ಎಂಬದಕ್ಕೆ ಅಗಳುತುಂರಿ ಎಂತ ಅರ್ಥ ಬರೆದದ್ದು ಅನೇಕ ವೈದ್ಯಕ ಪುಸ್ತಕಗಳಲ್ಲಿ ಕಾಣುತ್ತದೆ ಅಗಳುತುಂರಿಯು ಪಾಡಾವಳಿಗಡ್ಡೆಗಿಂತ ಹೆಚ್ಚು ತೀಕ್ಷ್ಣವಾದ ಬೇರೊಂದು ದ್ರವ್ಯ ಅದು ಪಾಡಾವಳಿಯಂತೆ ದಾಹ ವ್ರಣಾದಿಗಳ ಪರಿಹಾರಕ್ಕೆ ಉಪಯುಕ್ತವಾದದ್ದಲ್ಲ. ಬ್ರಾಹ್ಮೀವಿಷಯ ಹಿಂದಿನ 41ನೇ ಸಂಖ್ಯೆ ನೋಡಿ. ಚೂರ್ಣದೊಂದಿಗೆ ಬೆರಸುವ ಜೇನು-ತುಪ್ಪಗಳು ಸಮಾನತೂಕವಾಗದಾರದು (೧ನೇ ಭಾಗದ IV-42ಲ್ಲಿ ಪುಟ 99 ನೋಡಿ) ಉನ್ಮಾದದಲ್ಲಿ ವಾತವೇ ಪ್ರಧಾನವಾದದ್ದಾದ್ದರಿಂದ ಜೇನಿಗಿಂತ ತುಪ್ಪವನ್ನೇ ಅಧಿಕವಾಗಿ ಕೂಡಿಸತಕ್ಕದ್ದು ಕುಲಬದ್ಧತೆ

ಇರುವಲ್ಲಿ ಜೇನಿನ ಪ್ರಮಾಣದ ಎರಡು ಪಾಲಷ್ಟು ತುಪ್ಪವನ್ನು ಉಪಯೋಗಿಸುವದು ಫಲಕಾರಿಯಾಗುವದು (೧ನೇ ಭಾಗದ XX 25 ನೋಡಿ) ತುಪ್ಪದ ಪ್ರಮಾಣವು ರೋಗಿಯ ಅಗ್ನಿಬಲಕ್ಕೆ ಮೀರದ ಹಾಗೆ ಜಾಗ್ರತೆ ತಗೆದುಕೊಳ್ಳಬೇಕು

೧ನೇ ಭಾಗದ ಉಪೋದ್ಘಾತದ 55ನೇ ಪುಟದಲ್ಲಿ ಪ್ರಸ್ತಾಪಿಸಲ್ಪಟ್ಟ ದೀರ್ಘಕಾಲದ ಉನ್ಮಾದರೋಗದ ಸ್ತ್ರೀಗೆ ಈ ಚೂರ್ಣವನ್ನು ಕೊಡಲಾರಂಭಿಸಿದ ಒಂದು ಪಕ್ಷದೊಳಗೆ ಚಿತ್ತವಿಕಾರವು ಬಹಳಮಟ್ಟಿಗೆ ಶಾಂತವಾಗಿತ್ತು ಆಗಲೂ ಶಂಖಪುಷ್ಪೀಯ ಸ್ಥಾನದಲ್ಲಿ ಬಿಳೇ ಶಂಖಪುಷ್ಪದ (ಗಿರಿಕರ್ಣಿಕೆಯ) ಬೇರನ್ನೇ ಉಪಯೋಗಿಸಿದ್ದಾಗಿರುತ್ತದೆ ಆ ಸ್ತ್ರೀಗೆ ಕ್ರಮೇಣ ಪೂರ್ಣ ಸೌಖ್ಯವಾಗಿ ಈಗಲೂ ಅವಳು ಮನೋವಿಕಾರವೇನೂ ಇಲ್ಲದೆ ಜೀವಂತಳಾಗಿರುತ್ತಾಳೆ

45. ಸಾಧಿತಂ ಷೋಡಶಗುಣೇ ಕೂಷ್ಮಾಂಡಸ್ವರಸೇ ಘೃತಮ್ |
ಯಷ್ಟಿಕಲ್ಕಂ ಪಿಬೇತ್ತ್ರಾತರುನ್ಮಾದಾಪಸ್ಮೃತೀರ್ಜಯೇತ್ ||

ಕೂಷ್ಮಾಂಡಘೃತ

(ವೈ. ಸಾ. ಸಂ. 531)

೧ ಪಾಲು ದನದ ತುಪ್ಪಕ್ಕೆ ೧೬ ಪಾಲು (ಹಳೇ) ಬೂದಿಕುಂಬಳಕಾಯಿಯ ರಸವನ್ನೂ (ಕಾಲುಪಾಲು) ಜ್ಯೇಷ್ಠಮಧುವಿನ ಕಲ್ಕವನ್ನೂ ಕೂಡಿಸಿ ಕಾಯಿಸಿ, ಪಾಕದಲ್ಲಿ ಒಲೆಯಿಂದ ಕೆಳಗೆ ಪಾತ್ರವನ್ನು ಇಳಿಸಿ, ಶೋಧಿಸಿಟ್ಟುಕೊಂಡ ತುಪ್ಪವನ್ನು ಯುಕ್ತಪ್ರಮಾಣದಲ್ಲಿ ಪ್ರತಿದಿನ ಬೆಳಿಗ್ಗೆ ಸೇವಿಸುತ್ತಾ ಬರಬೇಕು. ಅದರಿಂದ ಉನ್ಮಾದಗಳೂ ಅಪಸ್ಮಾರಗಳೂ ಅಡಗುವವು.

46. ದ್ವೌ ಪ್ರಸ್ಥೌ ಸ್ವರಸಾದ್ ಬ್ರಾಹ್ಮ್ಯಾ ಘೃತಪ್ರಸ್ಥಂ ಚ ಸಾಧಿತಮ್ |
ವ್ಯೋಷಶ್ಯಾಮಾತ್ರಿವೃದ್ದನ್ತೀಶಂಖಪುಷ್ಪೀನೃಪದ್ರುಮೈಃ ||
ಸಸಪ್ತಲಾಕೃಮಿಹರೈಃ ಕಲ್ಕಿತೈರಕ್ಷಸಮ್ಮಿತೈಃ |
ಪಲವೃದ್ಧ್ಯಾ ಪ್ರಯುಂಜೀತ ಪರಂ ಮಾತ್ರಾಚತುಷ್ಪಲಮ್ ||
ಉನ್ಮಾದಕುಷ್ಠಾಪಸ್ಮಾರಹರಂ ವನ್ಧ್ಯಾಸುತಪ್ರದಮ್ |
ವಾಕ್ಸ್ವರಸ್ಮೃತಿಮೇಧಾಕೃದ್ಧನ್ಯಂ ಬ್ರಾಹ್ಮೀಘೃತಂ ಸ್ಮೃತಮ್ ||

ಬ್ರಾಹ್ಮೀಘೃತ

(ವಾ. 458, 459)

(ಸಮೂಲ) ಒಂದೆಲಗದ ರಸ ೨ ಪ್ರಸ್ಥ, ದನದ ತುಪ್ಪ ೧ ಪ್ರಸ್ಥ, (ಕಲ್ಕವಾಗಿ) ತ್ರಿಕಟು, ಕರೀತಿಗಡ, ನಾಗದಂತಿಬೇರು, ಶಂಖಪುಷ್ಪೀಬೇರು, ಕಕ್ಕೆಮರದ (ಕೊಂದೆ) ಬೇರು, ಏಳೆಲೆಬಾಳೆ (ಹಾಲೆ) ಬೇರು, ವಾಯುವಿಳಂಗ, ಇವುಗಳನ್ನು ಒಂದು ಕರ್ಷ ಪ್ರಕಾರ ತೆಗೆದುಕೊಂಡು ಮಾಡಿದ ಚೂರ್ಣ, ಇವುಗಳಿಂದ ತಯಾರಿಸಲ್ಪಟ್ಟ ತುಪ್ಪದಿಂದ ಪ್ರತಿದಿನ ಬೆಳಿಗ್ಗೆ ೧ ಪಲದಿಂದ ಹಿಡಿದು ೪ ಪಲದ ವರೆಗೆ ಒಂದೊಂದು ಪಲ ಪ್ರಕಾರ ಏರಿಸಿ ಪ್ರಯೋಗಿಸುವದರಿಂದ, ಉನ್ಮಾದ, ಕುಷ್ಠ, ಅಪಸ್ಮಾರ ಸಹ ಪರಿಹಾರವಾಗುವವು; ಬಂಜೆಯಾದವಳಿಗೆ ಮಗನು ಹುಟ್ಟುವನು; ಮಾತು, ಸ್ವರ, ನೆನಪು, ಗ್ರಹಣಶಕ್ತಿ ಸಹ ಉಂಟಾಗುವವು. ಸಂಪತ್ಕರವಾದ ಈ ತುಪ್ಪವು 'ಬ್ರಾಹ್ಮೀಘೃತ' ಎಂತ ಹೆಸರುಗೊಂಡದೆ.

ಪರಾ ಯೋಗದಲ್ಲಿ ಹೇಳಲ್ಪಟ್ಟ ಪ್ರಮಾಣವು ಅಗ್ನಿಬಲ ಒಳ್ಳೇ ಚುರುಕಾಗಿರುವವರಿಗೆ ಒಪ್ಪಿದ್ದು ತುಪ್ಪ ಜೀರ್ಣವಾಗದ ಲಕ್ಷಣ ಕಂಡರೆ ಅದರ ಸೇವನವನ್ನು ಆ ದೋಷಪರಿಹಾರವಾಗುವ ತನಕ ನಿಲ್ಲಿಸಿ, ಪುನಃ ಕಡಿಮೆ ಪ್ರಮಾಣದಲ್ಲಿ ಕೊಡಲಾರಂಭಿಸತಕ್ಕದ್ದು

47. ಬ್ರಾಹ್ಮೀರಸವಚಾಕುಷ್ಠಶಂಖಪುಷ್ಪೀಭಿರೇವ ಚ ।
ಪುರಾಣಂ ಘೃತಮುನ್ಮಾದಾಲಕ್ಷ್ಮ್ಯಪಸ್ಮಾರಪಾಪಜಿತ್ ॥

ಲಘುಬ್ರಾಹ್ಮೀ ಘೃತ

(ಚ. 618)

ಹಳೇ ದನದ ತುಪ್ಪ, (೧ ಪ್ರಸ್ಥಕ್ಕೆ), ಒಂದೆಲಗನ ಅಥವಾ ಬ್ರಾಹ್ಮೀಯ ರಸ (೪ ಪ್ರಸ್ಥ), ಬಜೆ, ಚಂಗಲಕೋಷ್ಠ, ಶಂಖಪುಷ್ಪೀಬೇರು, (ಇವು ೩ ಎರಡೆರಡು ತೊಲೆ ಪ್ರಕಾರ) ಇವುಗಳ ಕಲ್ಕ ಬೆರಸಿ ಪಾಕಮಾಡಿದ ಹಳೇ ತುಪ್ಪವು, ಉನ್ಮಾದ ಮತ್ತು ಅಪಸ್ಮಾರ ಗಳನ್ನು ಜಯಿಸತಕ್ಕಂಥಾದ್ದು; (ಅವುಗಳಿಗೆ ಹೇತುವಾದ) ಕಲಿಯೂ ಪಾಪವೂ ಈ ಘೃತಸೇವನ ದಿಂದ ಪರಿಹಾರವಾಗುವವು.

ಪ.ಸಾ. ಬ್ರಾಹ್ಮೀ ಎಂಬದಕ್ಕೆ ಒಂದೆಲಗವನ್ನೂ, ಶಂಖಪುಷ್ಪೀ ಎಂಬದಕ್ಕೆ ಬಿಳೀ ಗಿರಿಕರ್ಣಿಕೆ (ಶಂಖಪುಷ್ಪದ) ಬೇರನ್ನೂ ಉಪಯೋಗಿಸಿ ಮಾಡಿದ ಈ ಯೋಗದ ಘೃತವು ಪ್ರಯೋಜನವುಳ್ಳದ್ದಾಗಿ ಕಂಡದೆ

48. ವಿಶಾಲಾ ತ್ರಿಫಲಾ ಕೌನ್ತೀ ದೇವದಾರ್ವೇಲವಾಲುಕಮ್ ।
ಸ್ಥಿರಾನನ್ತಾ ರಜನ್ಯೌ ದ್ವೇ ಶಾರಿವೇ ದ್ವೇ ಪ್ರಿಯಂಗುಕಮ್ ॥
ನೀಲೋತ್ಪಲೈಲಾ ಮಂಜಿಷ್ಠಾ ದನ್ತೀ ದಾಡಿಮಕೇಸರಮ್ ।
ತಾಲೀಶಪತ್ರಂ ಬೃಹತೀ ಮಾಲತ್ಯಾಃ ಕುಸುಮಂ ನವಮ್ ॥
ವಿಡಂಗಂ ಪೃಶ್ನಿಪರ್ಣೀ ಚ ಕುಷ್ಠಂ ಚನ್ದನಪದ್ಮಕೌ ।
ಕಲ್ಕೈಃ ಕರ್ಷಸಮೈರೇತೈರ್ವಿಂಶತ್ಯಾ (?ತ್ಯ) ಷ್ಟಾಭಿರೇವ ಚ
ಚತುರ್ಗುಣೇ ಜಲೇ ಪಕ್ತ್ವಾ ಘೃತಪ್ರಸ್ಥಂ ವಿಪಾಚಯೇತ್ ।
ಅಪಸ್ಮಾರೇ ಜ್ವರೇ ಕಾಸೇ ಶ್ವಾಸೇ ಮನ್ದೇಽನಲೇ ಕ್ಷಯೇ ॥
ವಾತರೋಗೇ ಪ್ರತಿಶ್ಯಾಯೇ ತೃತೀಯಕಚತುರ್ಥಕೇ ।
ಛರ್ದ್ಯರ್ಶೋಮೂತ್ರಕೃಚ್ಛ್ರೇ ಚ ವಿಸರ್ಪೋಪಹತೇಷು ಚ ॥
ಕಂಡುಪಾಂಡ್ವಾಮಯೋನ್ಮಾದವಿಷಮೇಹಗದೇಷು ಚ ।
ಭೂತೋಪಹತಚಿತ್ತಾನಾಂ ಗದ್ಗದಾನಾಮಚೇತಸಾಮ್
ಶಸ್ತಂ ಸ್ತ್ರೀಣಾಂ ಚ ವನ್ಧ್ಯಾನಾಂ ಧನ್ಯಮಾಯುರ್ಬಲಪ್ರದಮ್ ।
ಅಲಕ್ಷ್ಮೀಪಾಪರಕ್ಷೋಘ್ನಂ ಸರ್ವಗ್ರಹವಿನಾಶನಮ್ ।
ಕಲ್ಯಾಣಕಮಿದಂ ಸರ್ಪಿಃ ಶ್ರೇಷ್ಠಂ ಪುಂಸವನೇಷು ಚ ॥

ಕಲ್ಯಾಣಘೃತ

(ಚ 611, 612)

ಹಾವುಮೆಕ್ಕೆಬೇರು (ಮಲ. ಕಾಟುಪೆಳ್ಳರಿ), ತ್ರಿಫಲೆ, ರೇಣೆಕೆ ಬೀಜ, ತುಪ್ಪದೇವದಾರ, ಏಲವಾಲುಕ (ಸುರಸುರಿಕೆ? ಮಲ. ವಾಲುಕಂ), ಮೂವೆಲೆಬೇರು, ಬಳ್ಳಿತುರಚ(ಬೀಳು ಪಚ್ಚೆರಂಗಿ)ನ ಬೇರು, ಅರಸಿನ, ಮರದರಸಿನ, ಬಿಳೇ ಸುಗಂಧಿ (ನಾಮದ ಬಳ್ಳಿ)ಬೇರು, ಕರೀ ಸುಗಂಧಿಬೇರು, ಪ್ರಿಯಂಗು, *ನೀಲತಾವರೆ ಹೂವು, ಏಲಕ್ಕಿ, ಮಂಜಿಷ್ಠ, ನಾಗದಂತಿಬೇರು, (ದಾಳಿಂಬದ ಬೀಜ ಇಲ್ಲದಲ್ಲಿ ಕಾಯಿಯ ಸಿಪ್ಪೆ), ನಾಗಕೇಸರ, ತಾಳೀಸಪತ್ರೆ, ಕಿರಿಗುಳ್ಳದ ಬೇರು (ಕಲ್ಲಂಟಿಬೇರು), ಹೊಸತಾದ ಜಾಜಿಹೂವು, ವಾಯುವಿಳಂಗ, ಓರೆಲೆಬೇರು, ಚಂಗಲ ಕೋಷ್ಠ, ಶ್ರೀಗಂಧ, ಪದ್ಮಕಾಷ್ಠ, ಇವು ೨೮ ಬಗೆಗಳು ೧ ಕರ್ಷ ಪ್ರಕಾರ ತೆಗೆದುಕೊಂಡು,

ಕುಟ್ಟಿ ಮಾಡಿದ ಚೂರ್ಣ ಪಲ ೭ (ತೊಲೆ ೨೧)ಕ್ಕೆ ೧ ಪ್ರಸ್ಥ ದನದ ತುಪ್ಪವನ್ನೂ ೪ ಪ್ರಸ್ಥ ನೀರನ್ನೂ ಬೆರಸಿ, ಕಾಯಿಸಿ ಪಾಕಮಾಡಿ, ಶೋಧಿಸಿಟ್ಟುಕೊಂಡ ತುಪ್ಪದ ಸೇವನವು ಅಪಸ್ಮಾರ, ಜ್ವರ, ಕೆಮ್ಮು, ಉಬ್ಬಸ, ಅಗ್ನಿಮಾಂದ್ಯ, ಕ್ಷಯ, ವಾತರೋಗ, ಪೀನಸ, ತ್ರ್ಯಾಹಿಕ ಜ್ವರ, ಚಾತುರ್ಥಿಕಜ್ವರ, ವಾಂತಿ, ಮೂಲವ್ಯಾಧಿ, ಮೂತ್ರಕೃಚ್ಛ್ರ, ವಿಸರ್ಪದ ಬಾಧೆ, ಖಜ್ಜಿ, ಪಾಂಡುರೋಗ, ಉನ್ಮಾದ, ವಿಷ, ಮೇಹರೋಗಗಳು, ಭೂತೋನ್ಮಾದ, ಗದ್ಗದಮಾತು, ಬುದ್ಧಿಶೂನ್ಯತೆ, ಇವುಗಳಿಗೆಲ್ಲ ಪ್ರಶಸ್ತವಾದದ್ದು; ಬಂಜೆಯಾದ ಸ್ತ್ರೀಯರಿಗೂ ಹಿತವಾದದ್ದು; ಸಂಪತ್ಕರ, ಆಯುಸ್ಸನ್ನೂ ಬಲವನ್ನೂ ಕೊಡುವಂಥಾದ್ದು; ಕಲಿಯ, ಪಾಪದ ಮತ್ತು ರಕ್ಷೋಗ್ರಹದ ಪೀಡಗಳನ್ನೂ ಸರ್ವಗ್ರಹಬಾಧೆಗಳನ್ನೂ ನಾಶಮಾಡತಕ್ಕಂಥಾದ್ದು. 'ಕಲ್ಯಾಣ ಘೃತ' ಎಂಬ ಈ ತುಪ್ಪವು ಸಂತತಿಯ ಉತ್ಪತ್ತಿಗೂ ಶ್ರೇಷ್ಠವಾದದ್ದು.

* ನೀಲೋತ್ಪಲವಿಲ್ಲದಲ್ಲಿ ಕುಮುದ(ನೈದಿಲೆ, ಮಲ ಅಮ್ಬಲ್)ವನ್ನು ಉಪಯೋಗಿಸಬೇಕಾಗಿ ವಿಧಿ ಇರುತ್ತದೆ

49 ವಿಶೇಷತಃ ಪುರಾಣಂ ಚ ಘೃತಂ ತಂ ಪಾಯಯೇದ್ಭಿಷಕ್ ।
ತ್ರಿದೋಷಘ್ನಂ ಪವಿತ್ರತ್ವಾತ್ ವಿಶೇಷಾದ್ಗ್ರಹವೋಕ್ಷಣಮ್ ॥
ಗುಣಕರ್ಮಾಧಿಕಂ ಸ್ವಾಸಾದಾಸ್ವಾದಾತ್ಕಟುತಿಕ್ತಕಮ್ ।
ಉಗ್ರಗಂಧಂ ಪುರಾಣಂ ಸ್ಯಾದ್ದಶವರ್ಷಸ್ಥಿತಂ ಘೃತಮ್ ॥
ಲಾಕ್ಷಾರಸನಿಭಂ ಶೀತಂ ತದ್ಧಿ ಸರ್ವಗ್ರಹಾಪಹಮ್ ।
ಮೇಧ್ಯಂ ವಿರೇಚನೇಷ್ವಗ್ರ್ಯಂ ಪ್ರಪುರಾಣಮತಃ ಪರಮ್ ॥
ನಾಸಾಧ್ಯಂ ನಾಮ ತಸ್ಯಾಸ್ತಿ ಯತ್ ಸ್ಯಾದ್ವರ್ಷಶತಸ್ಥಿತಮ್ ।
ದೃಷ್ಟಂ ಸ್ಪೃಷ್ಟಮಥಾಘ್ರಾತಂ ತದ್ಧಿ ಸರ್ವಗ್ರಹಾಪಹಮ್ ॥
ಅಪಸ್ಮಾರಗ್ರಹೋನ್ಮಾದವತಾಂ ಶಸ್ತಂ ವಿಶೇಷತಃ ॥

ಹಳೇ ತುಪ್ಪದ ವರ್ಣನ ಮತ್ತು ಮಹತ್ವ

(ಚ. 613)

ವಿಶೇಷವಾಗಿ ಉನ್ಮಾದಪೀಡಿತನಾದವನಿಗೆ ವೈದ್ಯನು (ಬಹೇ) ಹಳೇ ತುಪ್ಪವನ್ನು ಕುಡಿಸಬೇಕು. ಅದು ತ್ರಿದೋಷಹರ ಮತ್ತು ಪವಿತ್ರವಾದ್ದರಿಂದ ವಿಶೇಷವಾಗಿ ಗ್ರಹಾವೇಶವನ್ನು ಬಿಡಿಸುತ್ತದೆ. ಅದು ಕಾಲವಾದಷ್ಟು ಹೆಚ್ಚು ಗುಣವುಳ್ಳದ್ದಾಗಿ ಅಧಿಕವಾದ ಕೆಲಸ ಮಾಡುತ್ತದೆ. ಹತ್ತು ವರ್ಷಗಳ ವರೆಗೆ ಇರಿಸಲ್ಪಟ್ಟ ತುಪ್ಪವು ಹಳೆದೆನ್ನಿಸಿಕೊಳ್ಳುತ್ತದೆ ಅಂಥಾದ್ದು ರುಚಿಯಲ್ಲಿ ಕಾರ ಮತ್ತು ಕಹಿ ರುಚಿಗಳುಳ್ಳದ್ದಾಗಿಯೂ, ತೀಕ್ಷ್ಣವಾದ ವಾಸನೆಯುಳ್ಳದ್ದಾಗಿಯೂ, ಅರಗಿನ ಕಷಾಯದ ವರ್ಣದ್ದಾಗಿಯೂ, ಶೀತವಾಗಿಯೂ ಇರುವದು. ಅದರಿಂದ ನಿಶ್ಚಯವಾಗಿ ಸರ್ವಗ್ರಹಗಳೂ ದೂರ ಹೋಗುವವು. ಅದಕ್ಕೂ ಹಳೇದಾದ ತುಪ್ಪದಿಂದ ತಲೆ ಶುದ್ಧವಾಗುವದು. ಅದು ವಿರೇಚನ ಔಷಧಗಳೊಳಗೆ ಶ್ರೇಷ್ಠವಾದದ್ದು. ನೂರು ವರ್ಷ ಉಳಿದ ತುಪ್ಪಕ್ಕೆ ಅಸಾಧ್ಯ ಎಂಬದು ಇಲ್ಲ ಅಂಥಾದ್ದನ್ನು ನೋಡುವದರಿಂದ, ಮುಟ್ಟುವದರಿಂದ, ಮತ್ತು ಮೂಸುವದರಿಂದ ಸರ್ವಗ್ರಹಗಳು ನಿಶ್ಚಯವಾಗಿ ಬಿಟ್ಟುಹೋಗುವವು. ವಿಶೇಷವಾಗಿ ಅಪಸ್ಮಾರ ಮತ್ತು ಗ್ರಹೋನ್ಮಾದ ರೋಗಗಳುಳ್ಳವರಿಗೆ ಅದು ಪ್ರಶಸ್ತವಾದದ್ದು.

ವರ್ಷ: ಒಂದು ವರ್ಷ ಕಾಲ ಕಳೆದ ತುಪ್ಪವು ಹಳೇ ತುಪ್ಪ ಎಂತ ಭಾ ಪ್ರ (ಪು 181)

50. ಯಚ್ಚೋಪದೇಕ್ಷ್ಯತೇ ಕಿಂಚಿದಪಸ್ಮಾರೇ ಚಿಕಿತ್ಸಿತೇ |
ಉನ್ಮಾದೇ ತಚ್ಚ ಕರ್ತವ್ಯಂ ಸಾಮಾನ್ಯಾದ್ಧೇತುದೂಷ್ಯಯೋಃ ||
(ಚ. 616)

ಅಪಸ್ಮಾರ ಚಿಕಿತ್ಸೆಯ ಪ್ರಯೋಗ.

ಅಪಸ್ಮಾರದಲ್ಲಿಯೂ ಉನ್ಮಾದದಲ್ಲಿಯೂ ಹೇತು ಮತ್ತು ದೋಷಕ್ಕೊಳಪಟ್ಟ ಅಂಗ ಸಮಾನವಾದ್ದರಿಂದ, ಅಪಸ್ಮಾರಚಿಕಿತ್ಸೆಯಲ್ಲಿ ಉಪದೇಶಿಸಲ್ಪಡುವದು ಬೇರೆ ಏನು ಉಂಟೋ ಅದನ್ನು ಸಹ ಉನ್ಮಾದದಲ್ಲಿ ನಡಿಸತಕ್ಕದ್ದು.

ಹರಾ ಸಮುಹೇತು ಎಂದರೆ ಮನೋದುಷ್ಟಿ, ದೂಷ್ಯ ಎಂಬದು ಹೃದಯ, ಮತ್ತು ಈ ಉಪದೇಶವು ದೈವ ವ್ಯಪಾಶ್ರಯ ಉನ್ಮಾದವನ್ನು ಕುರಿತು ಹೇಳಲ್ಪಟ್ಟದ್ದು, ಎಂತ ಆ ದೀ ವ್ಯಾಖ್ಯಾ (ಪ 415)

51. ರತ್ಯರ್ಚನಕಾಮೋನ್ಮಾದಿನೌ ತು ಭಿಷಕ್ ಅಭಿಚಾರಾಭಿಶಾಪಾಭ್ಯಾಂ ಬುದ್ಧ್ವಾ ತದಂಗೋಪಹಾರಬಲಿಶ್ರಮೇಣ ಮನ್ತ್ರಭೈಷಜ್ಯವಿಧಿನಾ ಉಪಕ್ರಮೇತ್ ||
(ಚ 610)

ಭೂತೋನ್ಮಾದಗಳಿಗೆ ಉಪಕ್ರಮ ವಿಧಾನ

ಬುದ್ಧ್ವಾ ದೇಶಂ ವಯಃ ಸಾತ್ಮ್ಯಂ ದೋಷಂ ಕಾಲಂ ಬಲಾಬಲಮ್ |
ಚಿಕಿತ್ಸಿತಮಿದಂ ಕುರ್ಯಾದುನ್ಮಾದೇ ಭೂತದೋಷಜೇ ||
ದೇವರ್ಷಿಪಿತೃಗನ್ಧರ್ವೈರುನ್ಮತ್ತಸ್ಯ ತು ಬುದ್ಧಿಮಾನ್ |
ವರ್ಜಯೇದಂಜನಾದೀನಿ ತೀಕ್ಷ್ಣಾನಿ ಕ್ರೂರಕರ್ಮ ಚ ||
ಸರ್ಪಿಷ್ಪಾನಾದಿ ತಸ್ಯೇಹ ಮೃದುಭೈಷಜ್ಯಮಾಚರೇತ್ |
ಪೂಜಾಂ ಬಲ್ಯುಪಹಾರಾಂಶ್ಚ ಮನ್ತ್ರಾಂಜನವಿಧೀಂಸ್ತಥಾ ||
ಶಾನ್ತಿಕರ್ಮೇಷ್ಟಿಹೋಮಾಂಶ್ಚ ಜಪ್ಯಸ್ವಸ್ತ್ಯಯನಾನಿ ಚ |
ವೇದೋಕ್ತಾನ್ ನಿಯಮಾಂಶ್ಚಾಪಿ ಪ್ರಾಯಶ್ಚಿತ್ತಾನಿ ಚಾಚರೇತ್ ||
ಭೂತಾನಾಮಧಿಪಂ ದೇವಮೀಶ್ವರಂ ಜಗತಃ ಪ್ರಭುಮ್ |
ಪೂಜಯನ್ ಪ್ರಯತೋ ನಿತ್ಯಂ ಜಯತ್ಯುನ್ಮಾದಜಂ ಭಯಮ್ ||
(ಚ. 615, 616)

ಕ್ರೀಡೆಯ, ಅಂದರೆ ಕಾಮ್ಯಾರ್ಥದ, ಬಯಕೆ ಮತ್ತು ಪೂಜೆಯ ಆಸೆ ಇರುವ ಉನ್ಮಾದ ರೋಗದವರ ರೋಗವು ಮಂತ್ರವಾದದ ಫಲವಾಗಿ ಅಥವಾ ಶಾಪದಿಂದ ಉಂಟಾದದ್ದೆಂತ ತಿಳಿದು, ವೈದ್ಯನು ಅದೇ ಅಂಗದಲ್ಲಿ ಹೇಳಲ್ಪಟ್ಟ ಪ್ರಕಾರ ಕಾಣಿಕೆ ಅರ್ಪಿಸುವ ಮತ್ತು ಬಲಿ ಕೊಡುವ ಪರಿಹಾರಕ್ರಮಗಳನ್ನು ನಡಿಸುವ ಶ್ರಮದಿಂದಲೂ, ಮಂತ್ರಯುಕ್ತವಾಗಿ ಔಷಧ ಕ್ರಮವನ್ನು ನಡಿಸುವದರಿಂದಲೂ ಉಪಕ್ರಮಿಸತಕ್ಕದ್ದು

ಭೂತೋನ್ಮಾದದಲ್ಲಿಯೂ ದೋಷಜನ್ಯ ಉನ್ಮಾದದಲ್ಲಿಯೂ ವೈದ್ಯನು ದೇಶ, ಕಾಲ, (ರೋಗಿಯ) ಪ್ರಾಯ, ಬಲಾಬಲ, ದೋಷ, ಮತ್ತು ಅವನಿಗೆ ಸಾತ್ಮ್ಯವಾದ್ದು, ಈ ಭೇದಗಳನ್ನು ತಿಳಿದು, ಆಯಾ ಅವಸ್ಥೆಗೆ ತಕ್ಕ ರೀತಿಯಿಂದ ಮೇಲೆ ಹೇಳಲ್ಪಟ್ಟ ಚಿಕಿತ್ಸಾವಿಶೇಷಗಳನ್ನು ನಡಿಸತಕ್ಕದ್ದು. ಆದರೆ, ದೇವತೆಗಳ, ಋಷಿಗಳ, ಪಿತೃಗಳ, ಅಥವಾ ಗಂಧರ್ವರ ಪೀಡೆಯಾಗಿ ಉಂಟಾದ ಉನ್ಮಾದಗಳಲ್ಲಿ ಬುದ್ಧಿವಂತನಾದ ವೈದ್ಯನು ತೀಕ್ಷ್ಣವಾದ ಅಂಜನಾದಿಗಳನ್ನೂ, ಕ್ರೂರಕೃತ್ಯಗಳನ್ನೂ ನಡಿಸಬಾರದು; ಅಂಥಾ ರೋಗಿಗೆ ತುಪ್ಪದ ಸೇವನ

ಮುಂತಾದ ಮೃದುವಾದ ಔಷಧಕ್ರಮವನ್ನು ನಡಿಸತಕ್ಕದ್ದು ಮತ್ತು ಪೂಜೆ, ಬಲಿದಾನ, ಕಾಣಿಕೆ, ಮಂತ್ರಯುಕ್ತವಾದ ಅಂಜನಕ್ರಮಗಳು, ಶಾಂತಿ-ಯಜ್ಞ-ಹೋಮಗಳು, ಜಪ-ಸ್ವಸ್ತ್ಯಯನಗಳು, ವೇದದಲ್ಲಿ ಹೇಳಲ್ಪಟ್ಟ ನಿಯಮಗಳು ಮತ್ತು ಪ್ರಾಯಶ್ಚಿತ್ತಗಳು, ಇವುಗಳನ್ನೆಲ್ಲಾ ನಡಿಸಬೇಕು. ಇದಲ್ಲದೆ ಭೂತಗಳಿಗೆ ಅಧಿಪತಿಯೂ, ಜಗತ್ತಿಗೆ ಪ್ರಭುವೂ, ಆಗಿರುವ ಈಶ್ವರ ದೇವರನ್ನು ನಿತ್ಯದಲ್ಲಿಯೂ ನಿಯಮದಿಂದ ಪೂಜಿಸುತ್ತಾ ಬರಬೇಕು. ಇದರಿಂದ ಉನ್ಮಾದದ ಭಯವು ಪರಿಹಾರವಾಗುತ್ತದೆ.

ನ ಚಾಯುಕ್ತಂ ಪ್ರಯುಂಜೀತ ಪ್ರಯೋಗಂ ದೇವತಾಗ್ರಹೇ |
ಋತೇ ಪಿಶಾಚಾದನ್ಯೇಷು ಪ್ರತಿಕೂಲಂ ನ ಚಾಚರೇತ್ ||
ವೈದ್ಯಾತುರೌ ನಿಹನ್ಯುಸ್ತೇ ಧ್ರುವಂ ಕ್ರುದ್ಧಾ ಮಹೌಜಸಃ |
ಹಿತಾಹಿತವಿಧಾನಂ ಚ ನಿತ್ಯಮೇವ ಸಮಾಚರೇತ್ ||
ತತಃ ಪ್ರಾಪ್ಸ್ಯತಿ ಸಿದ್ಧಿಂ ಚ ಯಶಶ್ಚ ವಿಪುಲಂ ಭಿಷಕ್ ||

(ಸು. 892)

ಉನ್ಮಾದಕ್ಕೆ ಕಾರಣವಾದ ಭೂತವು ದೇವತೆಯಾದಲ್ಲಿ ಆ ದೇವತೆಗೆ ಅಯುಕ್ತವಾದ ಪ್ರಯೋಗವನ್ನು ಪ್ರಯೋಗಿಸಬಾರದು. ಪಿಶಾಚಗಳ ಸಂಗತಿಯಲ್ಲಿ ಅಲ್ಲದೆ, ಇತರ ಭೂತೋನ್ಮಾದಗಳಲ್ಲಿ ಪೀಡಿಸುತ್ತಿರುವ ಭೂತಗಳಿಗೆ ಪ್ರತಿಕೂಲವಾಗಿ ಯಾವದನ್ನಾದರೂ ಆಚರಿಸಬಾರದು. ಹಾಗೆ ಪ್ರತಿಕೂಲಮಾಡಿದರೆ ಅವುಗಳು ಮಹಾಶಕ್ತಿಯುಳ್ಳವಾದ್ದರಿಂದ ಕೋಪಗೊಂಡು ರೋಗಿಯನ್ನೂ ವೈದ್ಯನನ್ನೂ ಕೊಂದುಬಿಡುವವು. ಆದ್ದರಿಂದ ಹಿತಾಹಿತ ವಿಚಾರದ ವಿಧಿಗಳನ್ನು ತಪ್ಪದೆ ಆಚರಿಸತಕ್ಕದ್ದು. ಆದರಿಂದ ವೈದ್ಯನು ಸಿದ್ಧಿಯನ್ನೂ ಬಹಳವಾದ ಯಶಸ್ಸನ್ನೂ ಪಡೆಯುವನು.

ಪರಾ ಭೂತಗಳ ಬಾಧೆ ಎನ್ನುವದರಲ್ಲಿ ಈಗ ಬಹುಮಂದಿಗೆ ವಿಶ್ವಾಸವಿಲ್ಲ. ವಿಶ್ವಾಸವಿದ್ದ ಸಂಗತಿಯಲ್ಲಿ ಆಯಾ ಗ್ರಹವು ಉಂಟುಮಾಡುವ ಲಕ್ಷಣವಿಶೇಷಗಳನ್ನು ತಿಳಿದು, ಅದಕ್ಕೆ ತಕ್ಕವಾಗಿ ಶಾಸ್ತ್ರೋಕ್ತ ಕ್ರಮದಿಂದ ಬಲಿ-ಹೋಮ ಮುಂತಾದ ವಿಧಿಗಳನ್ನು ನಡಿಸಬಲ್ಲವರು ಸಾಧಾರಣವಾಗಿ ಈಗ ಇಲ್ಲವೇ ಇಲ್ಲ ಎನ್ನಬಹುದು. ಆದಾಗ್ಯೂ ಉನ್ಮಾದಗಳಲ್ಲಿ ಎಂಥೆಂಥಾ ಲಕ್ಷಣಗಳೆಲ್ಲಾ ಉಂಟಾಗಬಹುದೆಂಬದನ್ನು ತಿಳಿಯುವದು ಒಂದು, ಡಾಕ್ಟರರು ಚಿಕಿತ್ಸೆ ಇಲ್ಲವೆಂದು ನಿರಾಶೆಯನ್ನುಂಟುಮಾಡಿದ ಸಂದರ್ಭದಲ್ಲಿ ಸಾಧಾರಣವಾದ ಈಶ್ವರ ಪ್ರಾರ್ಥನೆಮಾಡಿ ವ್ರತನಿಯಮಾದಿ ಸಾಧನಗಳೊಳಗೆ ಯಥಾಶಕ್ತಿ ಯಾವದನ್ನಾದರೊಂದನ್ನು ಅವಲಂಬಿಸಿದರೆ, ಸ್ವಲ್ಪ ಮನಃಶಾಂತಿಯುಂಟಾದೀತೆಂಬದು ಒಂದು, ಈ ಎರಡು ಪ್ರಯೋಜನಗಳಿಗಾಗಿ ಭೂತೋನ್ಮಾದಗಳ ಇಷ್ಟು ವಿವರಗಳನ್ನು ಕೊಡಲಾಗಿದೆ. ಹಾ. ಸಂಹಿತೆಯಲ್ಲಿ ಗ್ರಹಬಾಧೆಯುಳ್ಳವನಿಗೆ ಗುಗ್ಗುಳಕ್ಕೆ ಜೇನು ಮತ್ತು ತುಪ್ಪವನ್ನು ಕೂಡಿಸಿ ಅದರಿಂದ ಧೂಪ ಕೊಡುವದಲ್ಲದೆ, ರೋಗಿಯನ್ನು, ಮಂತ್ರ ಹೇಳಿ, ಹೆದರಿಸುವದಕ್ಕೆ 'ಭೂತೇಶ್ವರಮಂತ್ರ' ಎಂಬ ನೂಡ್ತದೊಂದು ಮಂತ್ರ ಉಕ್ತವಾಗಿದೆ (ಪು. 296, 297)

52. 1. ಸ್ತ್ರೀ, ಪ್ರಾಯ 32 ವರ್ಷ, 5 6 ವರ್ಷಗಳಿಂದ ತಲೆ ಸರಿ ಇಲ್ಲ. ಅಡಗಿಕೊಳ್ಳುವದು, ಕೆರೆಬಾವಿಗಳಲ್ಲಿ ಬೀಳಲಿಕ್ಕೆ ಹೋಗುವದು ಮತ್ತು ಕೆಲಸಮಾಡುವ ಮನಸ್ಸಿಲ್ಲ.

ದೃಷ್ಟಫಲಚಿಕಿತ್ಸೆ

ಪಿತ್ತನಾಡಿ ಬಲೀ ಮತ್ತು ಹೆಚ್ಚಾಗಿ ಸ್ಥಾನಚ್ಯುತ, ಮತ್ತು ಕಫಸ್ಥಾನದಲ್ಲಿ ಬಲೀ,—ಒಂದೆಲಗ, ಶ್ರೀಗಂಧ, ಶಂಖಪುಷ್ಪದ (ಗಿರಿಕರ್ಣಿಕೆ, ಬಿಳೇದು) ಬೇರು, ತುಪ್ಪದೇವದಾರ, ಅಮೃತಬಳ್ಳಿ, ಬಜೆ, ಅಶ್ವಗಂಧಿ, ಜೀರಿಗೆ, ಹರಳಬೇರು, ನೆಗ್ಗಿಲಮುಳ್ಳು, ಕಲ್ಲಂಗಡಲೇ (ಕಡೀರು) ಬೇರು, ಸುಗಂಧಿ (ನನ್ನಾರಿ) ಬೇರಿನ ಒಳಗಿನ ಸಿಪ್ಪೆ, ಅರತೆ (ರಾಸ್ನೆ ಗಡ್ಡೆ), ಬಳ್ಳಿ ತುರಚನ (ಬೀಳುಪಚ್ಚೆರಂಗಿ, ಆಕಿರೆ) ಬೇರು, ಪುನರ್ನವಿಬೇರು, ಶತಾವರಿ

ಬೇರು ಇವುಗಳೊಳಗೆ ಪ್ರತಿಯೊಂದನ್ನು || (ಅರ್ಧ) ತೊಲೆ ಪ್ರಕಾರ ತೆಗೆದುಕೊಂಡು ಒಟ್ಟಾಗಿ ಪುಡಿಮಾಡಿಟ್ಟುಕೊಂಡು, ಅರ್ಧತೊಲೆ ಪುಡಿಯ ಕಷಾಯದ ಅರ್ಧದಲ್ಲಿ ವಾತಾರಿ ಮಾತ್ರೆ ೧, ವಾತಗಜಾಂಕುಶ ೧ರಂತೆ, ಸಕ್ಕರೆ ಮತ್ತು ಜೇನು ಪ್ರಕ್ಷೇಪವಾಗಿ ಮೇಲ್ಪುಡಿ ಸ್ಥಾನದಲ್ಲಿ ಬೆರಸಿಕೊಂಡು, ದಿನಕ್ಕೆ ೨ ಸರ್ತಿ ಪ್ರಕಾರ ೧೪ ದಿನ, ತದನಂತರ ಅದೇ ಕಷಾಯ ವನ್ನು ಮಾತ್ರ (ಮಾತ್ರೆಗಳಿಲ್ಲದೆ) ೭ ದಿನ ಪ್ರಕ್ಷೇಪಯುಕ್ತವಾಗಿ, ಅದರನಂತರ ಅದೇ ಕಷಾಯದಲ್ಲಿ ಕಾಸೀಸಾದಿ ಮಾತ್ರೆ ೧ರಂತೆ ಅದೇ ಪ್ರಕ್ಷೇಪದಿಂದ ೧೪ ದಿನ ಸೇವಿಸಿದರಿಂದ ರೋಗಿಗೆ ಪೂರ್ಣಸೌಖ್ಯವಾಯಿತು. (ಹೆಂಗಸು ಅದರನಂತರ ಬಹು ವರ್ಷ ಬದುಕಿ ಕೊಂಡಿದ್ದರೂ ಮನೋಬುದ್ಧಿವಿಕಾರ ಪುನಃ ಉಂಟಾಗಲಿಲ್ಲ.)

ವಾತಾರಿಮಾತ್ರೆ ಕ್ರಮ

ಶುದ್ಧಶೂದ್ರವತ್ಸನಾಭಿ ತೊಲೆ ೪, ಶುದ್ಧಪಾದರಸ ತೊ. ೧, ಶುದ್ಧ ಹವಳಸರಗಂಧಕ ತೊಲೆ ೧, ತ್ರಿಫಲೆ ಮತ್ತು ಲವಂಗ, ಇವು ನಾಲ್ಕು ಜೀನಸುಗಳು ಅರ್ಧತೊಲೆ ಪ್ರಕಾರ ತೊ ೨, ಇವುಗಳೊಳಗೆ ಪಾದರಸ ಮತ್ತು ಗಂಧಕ ಬಿಟ್ಟು, ಮಿಕ್ಕ ಐದು ಜೀನಸುಗಳನ್ನು ವಸ್ತ್ರಗಾಲಿತ ಚೂರ್ಣಮಾಡಿ, ಆ ಚೂರ್ಣದ ತೂಕಕ್ಕೆ ತಕ್ಕ ಪ್ರಮಾಣದಲ್ಲಿ ಪಾದರಸ ಮತ್ತು ಗಂಧಕ ಕೂಡಿಸಿಕೊಂಡು, ಚಿತ್ರಮೂಲದ ಬೇರಿನ ಕಷಾಯದಿಂದ ಮೂರು ಜಾಮು ಅರೆದು, ನುಣ್ಣಗಾದ ಮೇಲೆ ಉದ್ದಿನ ಕಾಳಿನ (ಸುಮಾರು ಕಾಲುಗುಲಗುಂಜಿ ತೂಕ) ಗಾತ್ರದ ಮಾತ್ರೆಮಾಡಿ, ನೆರಳಲ್ಲಿ ಒಣಗಿಸಿ ಇರಿಸಿಕೊಂಡು, ೧,೨ ಮಾತ್ರೆಗಳನ್ನು ಅನುಪಾನ ವಿಶೇಷದಿಂದ ಕೊಡಲು, ಉನ್ಮಾದ, ಅಪಸ್ಮಾರ, ಮಧುಮೇಹ, ಕುಷ್ಠ ಮುಂತಾದ ಮಹಾರೋಗಗಳು ಮತ್ತು ರಕ್ತದೋಷದಿಂದ ಅಥವಾ ವಾತದೋಷ ದಿಂದ ಅಥವಾ ಕಫದೋಷದಿಂದುಂಟಾದ ಅನೇಕ ವ್ಯಾಧಿಗಳು ಪರಿಹಾರವಾಗುವವು, ಹುಣ್ಣುಗಳು ಬೇಗನೇ ಒಣಗುವವು.

ವತ್ಸನಾಭಿ ಒಳ್ಳೆದಾಗಿರಬೇಕು. ನಿಜವಾದ ವತ್ಸನಾಭಿಯ ಒಂದು ಚೂರನ್ನು ಹಲ್ಲಿನಿಂದ ತುಂಡುಮಾಡಿ ಉಗುಳಿದರೆ, ಆ ವತ್ಸನಾಭಿಯ ತುಂಡು ನಾಲಿಗೆಗೆ ತಗಲಿದ ಸ್ಥಳದಲ್ಲಿ ಉಂಟಾಗುವ ಮಿರಿಮಿರಿಯು (ಸ್ಪರ್ಶಜ್ಞಾನವಿಶೇಷ) 21 ತಾಸುಗಳ ವರೆಗೆ ಹೋಗದೆ ಉಳಿ ಯುತ್ತದೆ. ಆ ಬೇರನ್ನು ಯಾವದೋ ಒಂದು ಮೂತ್ರದಲ್ಲಿ ನನೆಸಿ ಒಣಗಿಸಿದ ಮೇಲೆ ವಿಕ್ರಯಕ್ಕೆ ಕಳುಹಿಸುತ್ತಾರಾದ್ದರಿಂದ, ಬಜಾರಿನಲ್ಲಿ ದೊರೆಯುವ ವತ್ಸನಾಭಿಯಲ್ಲಿ ಆ ಮಿರಿಮಿರಿಯನ್ನು ಚೆನ್ನಾಗಿ ಉಂಟುಮಾಡುವಷ್ಟು ಶಕ್ತಿ ಇರುವದಿಲ್ಲ. ಆದರೆ ಅದೇ ರೂಪದ ಬೇರೆ ಬೇರನ್ನು ಅಂಗಡಿಗಳಲ್ಲಿ ಕೊಡುವದುಂಟಾದ್ದರಿಂದ, ಈ ಮೋಸಕ್ಕೊಳಪಡದಂತೆ ಜಾಗ್ರತೆ ತೆಗೆದುಕೊಳ್ಳುವದು ಆವಶ್ಯಕ

ವತ್ಸನಾಭಿಯ ಭೇದ, ಲಕ್ಷಣ ಮತ್ತು ಶುದ್ಧಿ ಕ್ರಮ

ಯಃ ಕನ್ಧೋ (?ನ್ದೋ) ಗೋಸ್ತನಾಕಾರೋ ನ ದೀರ್ಘಃ ಪಂಚಮಾಂಗು ಲಾತ್ |
ನ ಸ್ಥೂಲೋ ಗೋಸ್ತನಾದೂರ್ಧ್ವಂ ದ್ವಿವಿಧೋ ವತ್ಸನಾಭಕಃ ||
ಆಶುಕಾರೀ ಲಘುತ್ಯಾಗೀ ಶುಕ್ಲಕೃಷ್ಣೋಽನ್ಯಥಾ ಭವೇತ್ |
ಪ್ರಯೋಜ್ಯೋ ರೋಗಹರಣೇ ಜಾರಣಾಯಾಂ ರಸಾಯನೇ ||
(ರಸೇಂದ್ರಚಿಂತಾಮಣಿ 42)

ಈ ಆಧಾರ ಪ್ರಕಾರ ವತ್ಸನಾಭಿಯು ಗೋವಿನ ಮೊಲೆಯಾಕಾರವಾಗಿ ಅದಕ್ಕಿಂತ ಸ್ಥೂಲವಲ್ಲದೆಯೂ, ಐದು ಅಂಗುಲಕ್ಕೆ ಮಿಕ್ಕು ಉದ್ದವಿರದೆಯೂ, ಕಪ್ಪು ಅಥವಾ ಬೆಳ್ಳಗಿರಬೇಕು. ಕಪ್ಪುಜಾತಿದೇ ಸಾಧಾರಣವಾಗಿ ಅಂಗಡಿಯಲ್ಲಿ ದೊರೆಯುವದು. ವತ್ಸನಾಭಿಯು ಕಠಿಣವಾದ ವಿಷ ಎಂಬದನ್ನು ನೆನಪಿನಲ್ಲಿಡಬೇಕು. ಅದನ್ನು ಹೆಚ್ಚಾಗಿ ಉಪಯೋಗಿಸುವಾಗ ರೋಗಿಯನ್ನು ಪಥ್ಯದಲ್ಲಿಟ್ಟು ಹಾಲು ತುಪ್ಪ ಹೆಚ್ಚಾಗಿ ಉಪಯೋಗಿಸ ಹೇಳಬೇಕು.

ವತ್ಸನಾಭಿಯು ಮೃದುವಾಗುವ ತನಕ ಅದನ್ನು ಗೋಮೂತ್ರದಲ್ಲಿ ನನೆಯಿಟ್ಟು, ಅನಂತರ ಬಿಸಿನೀರಿನಿಂದ ಚೆನ್ನಾಗಿ ತೊಳೆದು, ಬಿಸಿಲಲ್ಲಿ ಒಣಗಿಸಿದ ಮೇಲೆ, ಔಷಧಕ್ಕೆ ಉಪಯೋಗಿಸತಕ್ಕದ್ದು. ಮೂತ್ರದ ವಾಸನೆ ಆಗದಿದ್ದರೆ, ದನದ ಅಥವಾ ಆಡಿನ ಹಾಲಿನಲ್ಲಿ ಬೇಯಿಸಿ, ಹಿಂಡಿ ತೆಗೆದು, ತೊಳೆದು ಶುದ್ಧಮಾಡಬಹುದು.

ಪಾದರಸದ ಶುದ್ಧಿಕ್ರಮ

ಅಂಗಡಿಗಳಲ್ಲಿ ದೊರೆಯುವ ಪಾದರಸದಲ್ಲಿ ಸೀಸ ಮುಂತಾದ ಲೋಹಗಳು ಬೆರತಿರುವದರಿಂದ, ಅದನ್ನು ಶುದ್ಧಿಮಾಡುವದು ಬಹು ಪ್ರಯಾಸ. ಸಾಧಾರಣವಾಗಿ ಹಂಚಿನ ಅಥವಾ ಇಟ್ಟಿಗೆಯ ಪುಡಿ, ಕೆಂಡದ ಮಸಿ ಅಥವಾ ಹೊಗೆಕರಿ ಮತ್ತು ಅರಸಿನದ ಪುಡಿ, ಇವುಗಳು ಮೂರು ಸೇರಿ ಪಾದರಸದ ತೂಕಕ್ಕೆ ಹದಿನಾರನೇ ಒಂದು ಪಾಲು ಆಗುವಷ್ಟು ಪಾದರಸದೊಂದಿಗೆ ಹಾಕಿ ಒಂದು ಜಾಮ ಅರೆದು, ಆ ಮೇಲೆ ಆ ಮಿಶ್ರವನ್ನು ಮಡಿಯಾದ ವಸ್ತ್ರದ ತುಂಡಿನಲ್ಲಿ ಹಾಕಿ, ಮೂರು ನಾಲ್ಕು ಸರ್ತಿ ಹಿಂಡಿ ಶೋಧಿಸಿದ್ದಲ್ಲಿ ಸಿಕ್ಕುವ ಪಾದರಸವು ಶುದ್ಧವಾದದ್ದೆಂತ ನೆನಸಿ, ಮಾತ್ರಾದಿಗಳಿಗೆ ಅದನ್ನು ಉಪಯೋಗಿಸುತ್ತಾರೆ ಹಸಿ ಅರಸಿನ ಸಿಕ್ಕಿದಾಗ ಅರಸಿನದ ಪುಡಿಯನ್ನು ಬಿಟ್ಟು ಅರಸಿನದ ರಸ ಕೂಡಿಸಿ ಅರೆಯುವದು ಪ್ರಶಸ್ತ. ಹಾಗೆ ಪಾದರಸವನ್ನು ಅರೆಯುವಾಗ್ಗೆ ಕೆಲವರು ಲಿಂಬೇರಸವನ್ನು, ಕೆಲವರು ಲೋಳೆಸರದ ರಸವನ್ನು, ಕೆಲವರು ಹುಳಿ ಗಂಜಿಸೀರನ್ನು. ಹೀಗೆ ಬೇರೆ ಬೇರೆ ದ್ರವಗಳನ್ನು ಕೂಡಿಸುವದುಂಟೆಂತ ಗ್ರಂಥಗಳಿಂದ ಕಾಣುತ್ತದೆ. ಅಗ್ಗೆ ಕಲಬತ್ತನ್ನು ಬಿಸಿಯಾಗಿ ಇಟ್ಟುಕೊಳ್ಳಬೇಕೆಂತ ಕೆಲವರ ಮತ. ಹಾಗೆ ಬಿಸಿ ಕಲಬತ್ತಿನ ಮೇಲೆ ಹದಿನಾರು ಬಗೆ ದ್ರವಗಳಿಂದ ಬೇರೆ ಬೇರೆಯಾಗಿ ಪಾದರಸವನ್ನು ಅರೆದ ಮೇಲೆ ಸಿಕ್ಕಿದ ಪಾದರಸದಲ್ಲಿಯೂ ಸೀಸದ ಬೆರಿಕೆ ಪೂರ್ಣವಾಗಿ ಹೋಗಲಿಲ್ಲ ಎಂತ ಪ್ರತ್ಯಕ್ಷ ಕಂಡದೆ ಆ ದೋಷ ಹೋಗುವದಕ್ಕೆ ವಿದ್ಯಾಧರ ಅಥವಾ ಡಮರು ಯಂತ್ರದಿಂದ ಊರ್ಧ್ವಪಾತನವನ್ನು ಮಾಡುವದೇ ಮುಖ್ಯ. ಇಷ್ಟೆಲ್ಲಾ ಪ್ರಯತ್ನಪಡುವದರ ಬದಲಾಗಿ ಇಂಗಳೀಕದಿಂದ ಪಾದರಸವನ್ನು ತೆಗೆಯುವದು ಸುಲಭ ಮತ್ತು ಅದರಲ್ಲಿ ಅನ್ಯಲೋಹಗಳ ಬೆರಿಕೆ ಇರುವದಿಲ್ಲ ಎಂಬದು ನಿಶ್ಚಯ. ಈ ವಿಷಯದಲ್ಲಿ ಭಾ. ಪ್ರ. ಹೇಳುವದೇನೆಂದರೆ —

ನಿಮ್ಬೂರಸೈರ್ನಿಮ್ಬಪತ್ರರಸೈರ್ವಾ ಯಾಮಮಾತ್ರಕಮ್ ।
ಘೃಷ್ಟ್ವಾ ದರದಮೂರ್ಧ್ವಂ ತು ಪಾತಯೇತ್ ಸೂತಯುಕ್ತಿವತ್ ॥
ತತ್ರೋರ್ಧ್ವಪಿಠರೀಲಗ್ನಂ ಗೃಹ್ಣೀಯಾದ್ರಸಮುತ್ತಮಮ್ ।
ಶುದ್ಧಮೇವ ಹಿ ತಂ ಸೂತಂ ಸರ್ವಕರ್ಮಸು ಯೋಜಯೇತ್ ॥

(ಪು. 209)

"ಲಿಂಬೆಹಣ್ಣಿನ ರಸದಿಂದ, ಅಥವಾ ಲಿಂಬೆ ಎಲೆಗಳ ರಸದಿಂದ ಇಂಗಳೀಕವನ್ನು ಒಂದು ಜಾಮ ಕಾಲ ಅರೆದು, ಪಾದರಸಕ್ಕೆ ಹೇಳಲ್ಪಟ್ಟ ಯುಕ್ತಿಯಿಂದ, ಊರ್ಧ್ವಪಾತನ ಮಾಡಿ

ದ್ದಲ್ಲಿ, ಮೇಲಿನ ಮಡಿಕೆಯ ಅಡಿಯನ್ನು ಹಿಡಿದು ನಿಲ್ಲುವ ಉತ್ತಮವಾದ ಪಾದರಸವನ್ನು ತೆಗೆದುಕೊಳ್ಳಬೇಕು. ಆ ಪಾದರಸವು ನಿಶ್ಚಯವಾಗಿ ಶುದ್ಧವಾದ್ದು. ಅದನ್ನು ಎಲ್ಲಾ ಕೆಲಸಗಳಲ್ಲಿಯೂ ಉಪಯೋಗಿಸಬಹುದು.

ಲಿಂಬೇಹಣ್ಣಿನ ರಸದಿಂದ ಇಂಗಳೀಕವನ್ನು ಅರೆದು ಬಿಸಿಲಿನಲ್ಲಿಟ್ಟು ಒಣಗಿಸಿದ ಮೇಲೆ, ಒಂದರ ಮೇಲೆ ಒಂದು ನಿಲ್ಲತಕ್ಕ ಎರಡು ಮಡಿಕೆಗಳೊಳಗೆ ಕೆಳಗಿನ ಮಡಿಕೆಯೊಳಗೆ ಆ ಇಂಗಳೀಕವನ್ನಿಟ್ಟು, ಮೇಲಿನ ಮಡಿಕೆಯನ್ನು ಮೇಲ್ಮುಖವಾಗಿ ಅಡಿಮಡಿಕೆಯ ಬಾಯಿ ಮುಚ್ಚುವ ಹಾಗೆ ಇರಿಸಿ, ಸಂದಿಗೆ ನೀರಿನಿಂದ ಅರೆದ ಹುತ್ತದ ಮಣ್ಣನ್ನು ಲೇಪಿಸಿ, ಅದರ ಮೇಲೆ ಒಂದು ವಸ್ತ್ರದ ಪಟ್ಟಿಯನ್ನು ಸುತ್ತಿ, ಅದು ಒಣಗಿದ ಮೇಲೆ ಗಾಳಿಸಂಚಾರಕ್ಕೆ ಎಡೆ ಅಥವಾ ಒಡಕು ಉಳಿಯದಂತೆ ಪುನಃ ಮಣ್ಣಿನ ಲೇಪವನ್ನು ಮೆತ್ತಿ ಒಣಗಿಸುವದು. ಆ ಮೇಲೆ ಈ ಯಂತ್ರವನ್ನು ಒಲೆಯ ಮೇಲೆ ಇಟ್ಟು ಉರಿ ಹಾಕುವದು. ಮೇಲಿನ ಗಡಿಗೆಯೊಳಗೆ ನೀರು ತುಂಬಿ, ಆ ನೀರು ಬಿಸಿಯಾದ ಹಾಗೆ ಅದನ್ನು ತೆಗೆದು ಬೇರೆ ತಣ್ಣೀರನ್ನು ಹೊಯ್ಯುತ್ತಿರಬೇಕು. ಬಿಸಿಯಾದ ನೀರನ್ನು ಹೊರಗೆ ಬಿಡುವದಕ್ಕೆ ಅನುಕೂಲವಾಗುವ ಹಾಗೆ ಒಂದು ಚಿಕ್ಕ ನಳಿಗೆಯನ್ನು ಮೇಲಿನ ಮಡಿಕೆಯ ಪಕ್ಕದಲ್ಲಿ ಬೇಕಾದಷ್ಟೇ ರಂಧ್ರಮಾಡಿ ಅದರೊಳಗೆ ಹೊಗಿಸಿ ನಿಲ್ಲಿಸುವದು ಉತ್ತಮ. ಅದು ಕಷ್ಟ ಕಂಡರೆ, ಮೇಲಿನ ಗಡಿಗೆಯೊಳಗಿನ ನೀರಿನಲ್ಲಿ ಒಂದು ವಸ್ತ್ರದ ಚಿಂದಿಯನ್ನು ಮುಳುಗಿಸಿಟ್ಟು, ನೀರು ಬಿಸಿಯಾದ ಕೂಡಲೆ ಆ ಚಿಂದಿಯನ್ನು ತೆಗೆದು ಹಿಂಡಿ, ತಣ್ಣೀರಿನಲ್ಲಿ ಮುಳುಗಿಸಿ, ತಣ್ಣಗಾದ ಮೇಲೆ, ಆ ಮಡಿಕೆಗೆ ಪುನಃ ತಣ್ಣೀರು ಹೊಯಿದು, ಆ ಚಿಂದಿಯನ್ನು ಅದರೊಳಗೆ ಪುನಃ ಮುಳುಗಿಸಿಡುವ ಕ್ರಮದಿಂದ ಮೇಲಿನ ಗಡಿಗೆಯ ನೀರು ವಿಶೇಷ ಬಿಸಿಯಾಗದ ಹಾಗೆ ಮಾಡಬಹುದು. ಈ ಯಂತ್ರ ಎರಡು ಜಾಮು ಕಾಲ ಉರಿಯುತ್ತಿರುವ ಒಲೆಯ ಮೇಲೆ ಇಡತಕ್ಕದ್ದು. ಉರಿ ನಿಂತು ಮಡಿಕೆಗಳು ತಣಿದ ಮೇಲೆ ಜಾಗ್ರತೆಯಿಂದ ಸಂದುಬಂಧವನ್ನು ಬಿಡಿಸಿ, ಮೇಲಿನ ಮಡಿಕೆಯನ್ನು ಎತ್ತಿ ನೋಡಿದರೆ ಅದರ ಅಡಿಗೆ ಪಾದರಸ ಮತ್ತು ಸ್ವಲ್ಪ ಕರಿ ಹತ್ತಿಕೊಂಡಿರುವದು ಕಾಣುವದು. ಆ ಪತಂಗವನ್ನು ಚೂರಿಯಿಂದ ಹೆರೆಸಿ ತೆಗೆದು, ಒಂದು ನಿರ್ಮಲವಾದ ವಸ್ತ್ರದ ತುಂಡಿನೊಳಗಿಟ್ಟು ಹಿಂಡಿದರೆ, ಪಾದರಸವು ಶುದ್ಧವಾಗಿ ವಸ್ತ್ರದಿಂದ ಹೊರಗೆ ಬರುವದು. ಮೂರು-ನಾಲ್ಕು ಸರ್ತಿ ಹಾಗೆ ಹಿಂಡಿದ್ದಲ್ಲ ಕರಿ ಪೂರ್ಣವಾಗಿ ಅಗಲ ಹೋಗಿ, ಪಾದರಸವು ಶುಭ್ರವಾಗುತ್ತದೆ.

ಮೇಲಿನ ಯಂತ್ರದ ಕೆಳಗಿನ ಮಡಿಕೆಯ ಅಡಿತಲದಲ್ಲಿ ಚಿತ್ರಮೂಲದ ಪುಡಿಯನ್ನು ಹರಡಿ, ಅದರ ಮೇಲೆ ಇಂಗಳೀಕದ ಪುಡಿಯನ್ನು ಚಲ್ಲಿ, ಮುಚ್ಚಳ ಮುಚ್ಚಿ, ಸಂದುಬಂಧ ಮಾಡಿದ ಮೇಲೆ, ಒಲೆ ಮೇಲಿಟ್ಟು ಒಂದೇ ಜಾತಿ ಕಟ್ಟಿಗೆಯಿಂದ ಒಂದೂವರೆ ಜಾಮು ಗಾಢಾಗ್ನಿ ಮಾಡಿ, ಅದೇ ಕ್ರಮದಿಂದ ಪಾದರಸವನ್ನು ತೆಗೆದರೆ, ಒಂದು ತೊಲೆ ಇಂಗಳೀಕಕ್ಕೆ ಮುಕ್ಕಾಲು ತೊಲೆ ಪಾದರಸದಂತೆ ಸಿಕ್ಕುತ್ತದೆಂತ ಹಿಂದಿನವರು ಬರೆದಿಟ್ಟದ್ದು ಕಾಣುತ್ತದೆ. ಇದರಲ್ಲಿ ಮೇಲಿನ ಗಡಿಗೆಯನ್ನು ಅಂಗತವಾಗಿಟ್ಟು, ಅದರೊಳಗೆ ನೀರನ್ನು ತಣ್ಣಗೆ ಇರಿಸಬೇಕೆಂಬದು ಇಲ್ಲ. ಒಂದು ತೊಲೆ ಇಂಗಳೀಕದಲ್ಲಿ ಮುಕ್ಕಾಲು ತೊಲೆ ರಸ ಸಿಕ್ಕುವದಾದರೆ, ಇಂಗಳೀಕದಲ್ಲಿ ಗಂಧಕವು ಕಾಲು ತೊಲೆಗೂ ಕಡಿಮೆ ಇರಬೇಕೆಂತಾಗುತ್ತದೆ. ಸಾಧಾರಣವಾಗಿ ಇಂಗಳೀಕದಲ್ಲಿ ರಸವೂ ಗಂಧಕವೂ ಸಮಪಾಲು ಇರುತ್ತವೆಂತ ಪಾಶ್ಚಾತ್ಯ ರಸಾಯನ

ಶಾಸ್ತ್ರದಿಂದ ಕಾಣುತ್ತದೆ. ಆದರೆ ಇಂಗಳೀಕದಲ್ಲಿ ಗಂಧಕದ ಪ್ರಮಾಣಕ್ಕಿಂತಲೂ ರಸದ ಪ್ರಮಾಣ ಹೆಚ್ಚು ಇರಬಹುದೆಂಬದೂ, ಮೇಲಿನ ಮಡಿಕೆಯನ್ನು ಅಂಗತವಿಟ್ಟು ಅದರೊಳಗೆ ತಣ್ಣೀರು ಹೊಯಿದಿಡುವದು ಅಗತ್ಯವಲ್ಲ ಎಂಬದೂ ಕೆಳಗೆ ವರ್ಣಿಸಿದ ನಾನು ಕಡೇ ಸರ್ತಿ ಇಂಗಳೀಕದಿಂದ ರಸ ತೆಗೆದ ಕ್ರಮದಿಂದ ಸ್ಪಷ್ಟವಾಗುತ್ತದೆ. ಅದು ಹೇಗೆಂದರೆ:—

ಹದಿನೆಂಟು ತೊಲೆ ಒಳ್ಳೇ ಇಂಗಳೀಕವನ್ನು ಲಿಂಬೆಹಣ್ಣಿನ ರಸದಿಂದ (ದೊಡ್ಡದೊಂದು ಲಿಂಬೆಹಣ್ಣಿನ ರಸ ಸಾಕಾಯಿತು) ಒಂದು ಜಾಮು ಅರೆದು, ಕಲ್ಕವನ್ನು ಬಿಸಿಲಲ್ಲಿಟ್ಟು ಒಣಗಿಸಿದ ಮೇಲೆ ಪುಡಿಮಾಡಿ, ಆ ಪುಡಿಯನ್ನು ಒಂದು ಕಾಗದದ ತುಂಡಿನಲ್ಲಿಟ್ಟು ಕಟ್ಟಿ ಹೊರಗಿನಿಂದ ಒಂದು ವಸ್ತ್ರದ ತುಂಡನ್ನು ಸುತ್ತಿ ಗಡಿಗೆಯೊಳಗಿಟ್ಟು, ಮೇಲಿನ ಮಡಿಕೆಯನ್ನು ಕವಚಿ ಇಟ್ಟು ಅಡಿಗಡಿಗೆಯ ಬಾಯಿಯನ್ನು ಮುಚ್ಚಿತು. ಮಧ್ಯ ವಿಶೇಷ ಸಂದುಬಿಡದ ಹಾಗೆ, ಗಡಿಗೆಗಳ ಮುಖದ ಸುತ್ತಿನ ಅಂಚಿನಲ್ಲಿ ಕಂಡ ಎತ್ತರತಗ್ಗುಗಳನ್ನು, ಹಲಿಗೆಯ ಮೇಲೆ ಬಿಳೇ ಕಲ್ಲಿನ ರಂಗವಲ್ಲಿ ಪುಡಿ ಹರಡಿ, ಅದರ ಮೇಲೆ ಆ ಗಡಿಗೆ ಅಂಚುಗಳನ್ನು ಉಜ್ಜಿ, ಸಮಮಾಡಿ ಕೊಂಡಿತ್ತು ಮೇಲಿನ ಮಡಿಕೆಯು ಅದರದಂತೆ ಎರಡು ಮಡಿಕೆಗಳ ಕುತ್ತಿಗೆಗಳನ್ನು ಒಂದಕ್ಕೊಂದು ಸುತ್ತಲಿಹಗ್ಗದಿಂದ ಜಗಿದು ಕಟ್ಟಲಾಯಿತು ಸಂದನ್ನು ನೀರಿನೊಂದಿಗೆ ಅರೆದ ಹುತ್ತದ ಮಣ್ಣಿನ ಲೇಪದಿಂದ ಮುಚ್ಚಿ, ಆ ಮಣ್ಣು ಒಣಗಿದ ಮೇಲೆ ಪುನಃ ಒಂದು ಅದೇ ಮಣ್ಣಿನ ಲೇಪವನ್ನು ಹಾಕಿತು. ಆ ಲೇಪ ಸಹ ಒಣಗಿದ ಮೇಲೆ ಮಡಿಕೆಗಳ ಕುತ್ತಿಗೆ ಅಂಶ ಪೂರಾ ಮುಚ್ಚುವ ಹಾಗೆ ದಪ್ಪವಾಗಿ ಮಣ್ಣನ್ನು ಹಚ್ಚಿ ಅದು ಒಣಗುವ ತನಕ ಬಿಸಿಲಿನಲ್ಲಿ ಯಂತ್ರವನ್ನಿಟ್ಟು, ಲೇಪದಲ್ಲಿ ಒಡಕು ಬಿರುಕು ಇಲ್ಲ ಎಂತ ಸಮಾಧಾನವಾದ ಮೇಲೆ ಯಂತ್ರವನ್ನು ಒಲೆ ಮೇಲೆ ಏರಿಸಿ, ಧೂಪದ ಮರನ ಕಟ್ಟಿಗೆಯಿಂದ ಸುಮಾರು ಐದು ಘಂಟೆ ಕಾಲ ಬಿಡದೆ ಉರಿಕೊಟ್ಟಿತು. ಸುಮಾರು 12 ತಾಸು ಕಾಲದಲ್ಲಿ ಮಡಿಕೆಗಳ ಬಿಸಿ ಆರಿದ್ದನ್ನು ಕಂಡು, ಲೇಪವನ್ನೊಡೆದು ತೆಗೆದು ಸಂದನ್ನು ಬಿಡಿಸಿ ನೋಡಿದ್ದಲ್ಲಿ, ಮೇಲಿನ ಮಡಿಕೆಯೊಳಭಾಗದಲ್ಲೆಲ್ಲಾ ಮತ್ತು ಕೆಳಗಡಿಗೆಯ ಮೇಲಿನ ಅಂಶದಲ್ಲಿ ಪಾದರಸವು ಬೆಳ್ಳಗಿನ ಲೇಪವಾಗಿ ಹಿಡಕೊಂಡಿತ್ತು. ಅದನ್ನೆಲ್ಲಾ ಹೆರಸಿ ತೆಗೆದು, ವಸ್ತ್ರದ ತುಂಡಿನೊಳಗೆ ಹಾಕಿ ಎರಡು ಮೂರು ಸರ್ತಿ ಹಿಂಡಿದರಿಂದ ಹತ್ತು ತೊಲೆ ಶುಭ್ರವಾದ ಪಾದರಸ ಸಿಕ್ಕಿತು. ಸುಮಾರು ಒಂದು ತೊಲೆಯಾಗುವಷ್ಟು ಸುಡದೆ ಉಳಿದ ಇಂಗಳೀಕದ ಪುಡಿ ಇತ್ತು. ಇದರಿಂದ ಐದು ಘಂಟೆಯ ಉರಿ ಸಾಲಲಿಲ್ಲ ಎಂತ ನಿರ್ಧಾರವಾಯಿತು. ಇಂಗಳೀಕದಿಂದ ಇಷ್ಟು ಹೆಚ್ಚು ಅಂಶ ಪಾದರಸ ಮೊದಲು ಅನೇಕ ವಿಧವಾಗಿ ಮಾಡಿದ ಪ್ರಯತ್ನಗಳಲ್ಲಿ ಸಿಕ್ಕಲಿಲ್ಲ.

ಇಂಗಳೀಕವನ್ನು ಒಂದು ವಸ್ತ್ರದ ತುಂಡಿನಲ್ಲಿಟ್ಟು, ಒಂದು ಗೋಲಾಕಾರದ ಪೊಟ್ಟಣವಾಗುವ ಹಾಗೆ ಹಳೇ ವಸ್ತ್ರದ ಪಟ್ಟಿಗಳನ್ನು ಅದಕ್ಕೆ ಸುತ್ತಿ, ಮಧ್ಯೆ ಎತ್ತರವಾಗಿರುವ ಒಂದು ತಾಮ್ರದ ಹರಿವಾಣದ ಮೇಲಿಟ್ಟು, ಗಾಳಿ ಬೀಸುವಿಕೆಯಿಲ್ಲದ ಮತ್ತು ನಿರ್ಜನವಾದ ಒಂದು ಕೋಣೆಯೊಳಗೆ ಹರಿವಾಣವನ್ನಿರಿಸಿ, ಪೊಟ್ಟಣಕ್ಕೆ ಬೆಂಕಿ ಕಡ್ಡಿ ಗೀರಿ ಉರಿ ಹಚ್ಚುವದು. ಸುಮಾರು ಮೂರು ಘಂಟೆ ಕಾಲದನಂತರ ಕೋಣೆಯೊಳಗೆ ಹೋಗಿ ನೋಡಿದರೆ, ಇಂಗಳೀಕವು ಸುಟ್ಟು ಪಾದರಸವು ಹರಿವಾಣದಲ್ಲಿ ಚಿಕ್ಕ ಮಣಿಗಳಾಗಿ ನಿಂತಿರುವದು ಕಾಣುವದು. ಅವುಗಳನ್ನು ಮೊದಲು ಹೇಳಿದಂತೆ ವಸ್ತ್ರದಲ್ಲಿ ಹಾಕಿ ಒಟ್ಟಾಗಿ ಹಿಂಡಿದರೆ ಶುಭ್ರವಾದ ರಸ ಸಿಕ್ಕುತ್ತದೆ. ಈ ಕ್ರಮವನ್ನು ನಡಿಸುವಲ್ಲಿ ಇಂಗಳೀಕದ ತೂಕಕ್ಕೆ ಎರಡರಷ್ಟು ವಸ್ತ್ರದ

ತುಂಡುಗಳಿಂದ ಅದನ್ನು ಸುತ್ತಬೇಕೆಂತಲೂ, ಹೊಗೆ ಹಾರಿ ಹೋಗದ ಹಾಗೆ ಹಂಡೆಯಿಂದ ಮುಚ್ಚಬೇಕೆಂತಲೂ ಒಬ್ಬರು ಬರೆದದ್ದು ಕಾಣುತ್ತದೆ. ಮುಚ್ಚುವ ಪಾತ್ರ ಚಿಕ್ಕದಾದರೆ ಒಳಗಿನ ಗಾಳಿ ಸಾಲದೆ ಬೆಂಕಿ ನೊಂದಿ, ಪೊಟ್ಲ ಸುಡದೆ ಉಳಿಯಬಹುದು. ಒಟ್ಟಾರೆ ಈ ಕ್ರಮದಲ್ಲಿ ನಷ್ಟ ಹೆಚ್ಚು ಒದಗುವ ಸಂಭವ ಉಂಟು.

ಗಂಧಕಶೋಧನ

ಗಂಧಕಕ್ಕೆ ಸಮತೂಕ ದನದ ತುಪ್ಪವನ್ನು ಕಬ್ಬಿಣದ ಕಾವಲಿಯಲ್ಲಿ ಸಣ್ಣ ಉರಿಯಿಂದ ಕಾಯಿಸಿ, ಗಂಧಕದ ಪುಡಿಯನ್ನು ಆ ಕಾದ ತುಪ್ಪದೊಳಗೆ ಹಾಕಿ ಮಗುಚುತ್ತಾ ಬಂದರೆ ಗಂಧಕವು ಕರಗಿ ತುಪ್ಪದೊಂದಿಗೆ ಕೂಡುತ್ತದೆ. ಅದಕ್ಕೆ ಮೊದಲೇ ದನದ ತಂಬಾಲನ್ನು ಒಂದು ಅಗಲ ಬಾಯಿಯುಳ್ಳ ಪಾತ್ರೆಯಲ್ಲಿ ಹೊಯಿದು, ಆ ಪಾತ್ರದ ಬಾಯಿಗೆ ತೆಳ್ಳಗಿನ ಮತ್ತು ನಿರ್ಮಲವಾದ ವಸ್ತ್ರವನ್ನು ಕಟ್ಟಿಟ್ಟುಕೊಂಡಿರಬೇಕು. ಆ ವಸ್ತ್ರದ ಮೇಲೆ ಕರಗಿದ ಗಂಧಕವುಳ್ಳ ತುಪ್ಪವನ್ನು ಒಂದೇ ಕಡೆ ಒಟ್ಟಾಗಿ ಒಳಗೆ ಬೀಳದಂತೆ ಜಾಗ್ರತೆಯಿಂದ ಹೊಯ್ಯುವದು. ಹಾಲಿನಲ್ಲಿ ಗಂಧಕವು ಹರಳುಗಳಾಗಿ ನಿಲ್ಲುತ್ತದೆ. ಆ ಹರಳುಗಳನ್ನು ಕೂಡಿಸಿ ತೊಳದಿಟ್ಟುಕೊಂಡು ಉಪಯೋಗಿಸುವದು. ಇದಕ್ಕೆ ಆಧಾರ—

ಗಂಧಕದ ಶುದ್ಧಿ

ಲೋಹಪಾತ್ರೇ ವಿನಿಕ್ಷಿಪ್ಯ ಘೃತಮಗ್ನೌ ಪ್ರತಾಪಯೇತ್ ।
ತಪ್ತೇ ಘೃತೇ ತತ್ಸಮಾನಂ ಕ್ಷಿಪೇದ್ಗನ್ಧಕಜಂ ರಜಃ ॥
ವಿದ್ರುತಂ ಗಂಧಕಂ ದೃಷ್ಟ್ವಾ ತನುವಸ್ತ್ರೇ ವಿನಿಕ್ಷಿಪೇತ್ ।
ಯಥಾವಸ್ತ್ರಾದ್ವಿನಿಃಸ್ರುತ್ಯ ದುಗ್ಧಮಧ್ಯೇಽಖಿಲಂ ಪತೇತ್ ॥
ಏವಂ ಸ ಗನ್ಧಕಃ ಶುದ್ಧೋ (?ದ್ಧಃ) ಸರ್ವಕರ್ಮೋಚಿತೋ ಭವೇತ್ ॥
(ಭಾ. ಪ್ರ. 209)

ವಾತಗಜಾಂಕುಶ ಮಾತ್ರೆ

ತ್ರಿಕಟು (ಶುಂಠಿ, ಹಿಪ್ಪಲಿ, ಬಿಳೇ ಕಾಳುಮೆಣಸು ತೊಲೆ ೧ರ ಪ್ರಕಾರ) ತೊಲೆ ೩. ತ್ರಿಫಲೆ (ಒಂದೊಂದು ತೊಲೆ ಪ್ರಕಾರ) ತೊಲೆ ೩, ಶುದ್ಧ ಕಾಸರ್ಕನ ಬೀಜ ತೊಲೆ ೨ ಶುದ್ಧ ಪಾದರಸ ತೊಲೆ ೨, ಶುದ್ಧ ಗಂಧಕ ತೊಲೆ ೨, ಬಜೆ ತೊಲೆ ೧, ಪುತ್ರಜೀವಿ ಮಣಿ ತಿರಳು ತೊಲೆ ೧, (ಇವುಗಳೊಳಗೆ ತ್ರಿಫಲೆ ತ್ರಿಕಟು ಬಜೆ ಮತ್ತು ಪುತ್ರಜೀವಿಯನ್ನೂ ಶುದ್ಧಕಾಸರ್ಕನ ಬೀಜವನ್ನೂ ವಸ್ತ್ರಗಾಲಿತ ಚೂರ್ಣ ಮಾಡಿಕೊಳ್ಳಬೇಕು.) ಲಿಂಬೇರಸದಿಂದ ಅರೆದು ಗುಂಜಾಗಾತ್ರದ ಮಾತ್ರೆಗಳನ್ನು ಮಾಡಿ, ನೆರಳಿನಲ್ಲಿಟ್ಟು ಒಣಗಿಸಿಟ್ಟುಕೊಂಡು, ರೋಗೋಕ್ತಾನುಪಾನಗಳಲ್ಲಿ ೧, ೨ ಮಾತ್ರೆ ಪ್ರಕಾರ ಕೊಡುವದರಿಂದ ಸಕಲ ವಾತರೋಗಗಳೂ, ಮನೋವಿಕಾರಗಳೂ, ನರದೋಷಗಳೂ, ರಕ್ತಸಂಬಂಧವಾದ ರೋಗಗಳೂ ಪರಿಹಾರವಾಗುವವು.

ಕಾಸರ್ಕನ ಬೀಜದ ಶುದ್ಧಿ

ಕಾಸರ್ಕನ ಬೀಜ (ಕಾರಸ್ಕರ—ವಿಷತಿಂದುಕಃ)ಕ್ಕೆ ಘಟ್ಟದ ಮೇಲೆ ವಿಷಮುಷ್ಟಿ ಎನ್ನುತ್ತಾರೆ. ಆದರೆ ವಿಷಮುಷ್ಟಿ ಎಂಬ ಹೆಸರಿನ ಬೇರೊಂದು ಔಷಧವಿರುತ್ತದೆ ಕಾಸರ್ಕನ ಬೀಜಗಳನ್ನು ಗಂಜಿನೀರಿನಲ್ಲಿ ಅಥವಾ ಗೋಮೂತ್ರದಲ್ಲಿ ಏಳು ದಿನ ನೆನೆಯಿಟ್ಟರೆ ಅವು ಮೃದುವಾಗುತ್ತವೆ. ಅವುಗಳನ್ನು ಬಿಸಿನೀರಿನಿಂದ ತೊಳೆದು ಸಿಪ್ಪೆತೆಗೆದು, ಸಣ್ಣ ತುಂಡುಗಳಾಗಿ ಕತ್ತರಿಸಿ, ಒಣಗಿಸಿದನಂತರ ದನದ ತುಪ್ಪ ಸವರಿಕೊಂಡು, ಹೊಗೆಯಿಲ್ಲದ ಕೆಂಡದ ಬೆಂಕಿಯಿಂದ ಹುರಿದು, ಚೂರ್ಣಮಾಡಿ ಉಪಯೋಗಿಸುವದು. ತುಂಡುಗಳು ಸೌಟಿನ ಪೆಟ್ಟಿಗೆ ಪುಡಿಯಾಗುವಷ್ಟರ ವರೆಗೆ ಕಾಯ

ಬೇಕು. ಆಗ್ಗೆ ಅವು ಕಪ್ಪಾಗುತ್ತವೆ. ೬ ದಿನ ನನೆಯಿಡುವದರ ಬದಲಾಗಿ ಒಂದು ಗಂಟೆ ಕಾಲ ಗೋಮೂತ್ರದಲ್ಲಿ ಬೀಜಗಳನ್ನು ಬೇಯಿಸಿದರೆ ಅವು ಮೃದುವಾಗುತ್ತವೆ ಮತ್ತು ಸಿಪ್ಪೆಯನ್ನು ಸುಲಭವಾಗಿ ತೆಗೆಯಬಹುದಾಗುತ್ತದೆ. ಪಾದರಸವನ್ನೂ ಗಂಧಕವನ್ನೂ ಹಿಂದೆ ಬರೆದ ಕ್ರಮದಲ್ಲಿ ಶುದ್ಧಮಾಡಿಕೊಳ್ಳಬೇಕು.

ಈ ಮಾತ್ರೆಗೂ ೩ ಜಾಮು (೯ ಘಂಟೆ)ಗಳ ಅರೆತ ಬೇಕಾಗುವದು. ಯಾವ ಮಾತ್ರೆಯ ನ್ನಾದರೂ ಅರೆದದ್ದು ಸಾಕೆಂತ ಹೇಳಬೇಕಾದರೆ, ಅದು ಮಾತ್ರೆ ಮಾಡುವದಕ್ಕೆ ತಕ್ಕಷ್ಟು ಗಟ್ಟಿ ಮತ್ತು ಅಂಟಾಗುವದಲ್ಲದೆ, ಅದರಲ್ಲಿ ಸುಣ್ಣಪಿನ ಮಿಂಚು ಹುಟ್ಟಿರಬೇಕು. ಮಾತ್ರೆ ಯನ್ನು ಕಷಾಯದಿಂದ ಅರೆದು ಮಾಡಬೇಕಾಗಿ ಹೇಳುವಲ್ಲಿ ಮಾತ್ರೆಯ ಔಷಧಗಳ ಒಟ್ಟು ತೂಕಕ್ಕೆ ಸಮತೂಕವಾಗಿ ಕಷಾಯ ದ್ರವ್ಯವನ್ನು ತೆಗೆದುಕೊಂಡು, ಅದಕ್ಕೆ ಮೃದುವಾಗಿದ್ದರೆ ೬ ಪಾಲು, ಕಠಿಣವಾಗಿದ್ದರೆ ೧೨ ಪಾಲು ನೀರು ಹೊಯಿದು ಒಂದೂವರೆ ಪಾಲು ಶೋಧಿಸಿದ ಕಷಾಯ ಸಿಕ್ಕುವಷ್ಟಕ್ಕೆ ಬತ್ತಿಸುವದು ಸಾಧಾರಣ ಕ್ರಮ. ಮಾತ್ರೆಯ ಔಷಧಗಳು ಹಗುರ ವಾದ ಸಂಗತಿಯಲ್ಲಿ ದ್ರವ ಸ್ವಲ್ಪ ಹೆಚ್ಚು ಬೇಕಾಗಬಹುದು. ಅಂಥಾ ಸಂಗತಿಯಲ್ಲಿ ನೀರನ್ನು ೮ ಪಾಲೋ, ೧೬ ಪಾಲೋ ಕೂಡಿಸಿ ೨ ಪಾಲಾಗುವಷ್ಟಕ್ಕೆ ಬತ್ತಿಸುವದು.

ಕಾಸೀಸಾದಿ ಮಾತ್ರೆ

ಶುದ್ಧಹಿರಾಕಾಸು (ಅನ್ನಭೇದಿ) ತೊಲೆ ೫, ನೀರಿನ ಸೆಕೆಯಿಂದ ಬೆವರಿಸಿ ಒಣಗಿಸಿದ ಅಮೃತಬಳ್ಳಿ ತೊಲೆ ೨, ಸಿಪ್ಪೆಹೆರಸಿ ಒಣಗಿಸಿದ ಭದ್ರಮುಷ್ಟಿ ತೊಲೆ ೨, ಲವಂಗಪಟ್ಟೆ (ದಾಲ್ಚೀನಿ ಕೆತ್ತೆ) ತೊಲೆ ೨, ಜ್ಯೇಷ್ಠಮಧು ತೊಲೆ ೨, ಅರಸಿನ ತೊಲೆ ೧, ಶುದ್ಧ ಚಿತ್ರ ಮೂಲದ ಬೇರು ತೊಲೆ ೧, ಇವುಗಳೊಳಗೆ ಅನ್ನಭೇದಿ ಬಿಟ್ಟು ಮಿಕ್ಕ ೬ ಒಗೆಗಳನ್ನು ವಸ್ತ್ರಗಾಲಿತ ಚೂರ್ಣಮಾಡಿಕೊಂಡು, ಶುಂಠಿಯ ಸುಣ್ಣ ತೆಗೆದ ರಸದಿಂದ ಅನ್ನಭೇದಿಯನ್ನು ಅರ್ಧ ಘಂಟೆಕಾಲ ಮುಂದಾಗಿ ಪ್ರತ್ಯೇಕವಾಗಿ ಅರೆದ ನಂತರ ಚೂರ್ಣವನ್ನು ಸೇರಿಸಿ, ಅದೇ ರಸದಿಂದ ಅರೆದು, ನುಣ್ಣಗಾಗಿ ಮಾತ್ರೆಮಾಡಲಿಕ್ಕೆ ಸಿದ್ಧವಾದದ್ದನ್ನು ನೋಡಿ, ಕಲ್ಲಿನಿಂದ ಔಷಧವನ್ನು ತೆಗೆದು ಒಂದು ಗಾಜಿನ ಪಾತ್ರದಲ್ಲಿಟ್ಟು ಕೊಂಡು, ಬೊಗರೀ ಹಣ್ಣಿನ ಗಾತ್ರದ ಮಾತ್ರೆಗಳನ್ನು ಮಾಡಿ, ನೆಳಲಲ್ಲಿ ಒಣಗಿಸಿ, ತಣಸು ತಾಗ ದಂತೆ ಬಾಟ್ಲಿಯಲ್ಲಿ ತುಂಬಿಟ್ಟುಕೊಳ್ಳುವದು. ೩ ಗುಂಜಾ (೪|| ಗ್ರೈನ್) ತೂಕದ ಮಾತ್ರೆಯಲ್ಲಿ ೧ ಗುಂಜಾ (೧|| ಗ್ರೈನ್ ತೂಕದಷ್ಟು) ಅನ್ನಭೇದಿ ಇರುವದು. ಇದು ಒಬ್ಬ ಪ್ರಾಯಸ್ಥನಿಗೆ ಹೊತ್ತಿಗೆ ೧ ಮಾತ್ರೆಯಂತೆ ದಿನಕ್ಕೆ 2 ಸರ್ತಿ ಕೊಡುವದಕ್ಕೆ ತಕ್ಕ ಪ್ರಮಾಣ. ಈ ಮಾತ್ರೆಯ ಸೇವನದಿಂದ ರಕ್ತವು ವೃದ್ಧಿಯಾಗುವದಲ್ಲದೆ ಶುದ್ಧವಾಗುತ್ತದೆ. ಪಾಂಡು, ಖಜ್ಜಿ, ಬಿಳೇ ಕುಷ್ಠ (ಶ್ವಿತ್ರ), ಮುಂತಾದ ರೋಗಗಳಲ್ಲಿ ಇದು ಬಹು ಪ್ರಯೋಜನಕಾರಿ.

ಅಮೃತಬಳ್ಳಿ ಚೂರ್ಣಮಾಡುವ ಕ್ರಮ

ಅಮೃತಬಳ್ಳಿಯನ್ನು ಸಿಪ್ಪೆ ತೆಗೆದು ಸಣ್ಣ ತುಂಡುಗಳಾಗಿ ಕತ್ತರಿಸಿಟ್ಟುಕೊಂಡು, ಅರ್ಧಾಂಶ ನೀರು ತುಂಬಿದ ಗಡಿಗೆಯ ಬಾಯಿಗೆ ವಸ್ತ್ರವನ್ನು ಕಟ್ಟಿ, ಒಲೆಯ ಮೇಲಿಟ್ಟು ಉರಿಹಾಕಿ ನೀರು ಕುದಿಯುವದಕ್ಕೆ ಆರಂಭಿಸುವಾಗ್ಗೆ ಆ ವಸ್ತ್ರದ ಮೇಲೆ ಅಮೃತ ಬಳ್ಳಿಯ ತುಂಡುಗಳನ್ನು ಹರವಿ, ಅದರ ಮೇಲೆ ಗಡಿಗೆಯ ಮುಚ್ಚಳವನ್ನು ಇಟ್ಟು ಮುಚ್ಚಿ, ಸ್ವಲ್ಪ ಹೊತ್ತಿನ ಮೇಲೆ ನೋಡಲು, ಅಮೃತಬಳ್ಳಿ ತುಂಡು ಗಳು ಬೆವರಿ ಸ್ವಲ್ಪ ಮೆತ್ತಗಾಗಿರುವವು. ಸಾಧಾರಣವಾಗಿ ಅರ್ಧ ಘಂಟೆಯ ಕುದಿಯುವಿಕೆ ಸಾಕಾಗುವದು. ಆ ಕೂಡಲೇ ಗಡಿಗೆಯನ್ನು ಒಲೆಯ ಮೇಲಿಂದ ಕೆಳಗಿಳಿಸಿ,

ಅಮೃತಬಳ್ಳಿ ಹೋಳುಗಳನ್ನು ತೆಗೆದು, ಚಾಪೆಯಲ್ಲಿ ಅಥವಾ ಗಾಜಿನ ಹರಿವಾಣದಲ್ಲಿ ಹರವಿ, ಬಿಸಿಲಿಗಿಟ್ಟು ಒಣಗಿಸಿ ಚೂರ್ಣಮಾಡುವದು. ಚೂರ್ಣ ಒಂದನ್ನೇ ಹಾಲಿನಲ್ಲಿ ಸಕ್ಕರೆ ಕೂಡಿಸಿಕೊಂಡು ಕಲಸಿ ನಿತ್ಯದಲ್ಲು ಕುಡಿಯುತ್ತಾ ಬಂದಲ್ಲಿ, ತಲೆ ತಿರುಕು ಮುಂತಾದ ಪಿತ್ತ-ವಾಯು ದೋಷಗಳು, ಒಳಜ್ವರ, ಕಾಮಲೆ ಇತ್ಯಾದಿ ಪರಿಹಾರವಾಗಿ ಸೌಖ್ಯವುಂಟಾಗುವದು. ಅಮೃತಬಳ್ಳಿಯು ತ್ರಿದೋಷಹರ.

ಹಿರಾಕಾಸಿನ ಶುದ್ಧಿ ಸಕೃದ್ಗಂಗಾಮ್ಬುನಾ ಕ್ಲಿನ್ನಂ ಕಾಸೀಸಂ ನಿರ್ಮಲಂ ಭವೇತ್ ।

(ಧ. ನಿ. ಟಿಪ್ಪಣೀ ಪು. 119)

ಈ ವಚನದಲ್ಲಿರುವ 'ಗಂಗಾಮ್ಬುನಾ' ಎಂಬ ಪದಕ್ಕೆ ಬದಲಾಗಿ 'ಭೃಂಗಾಮ್ಬುನಾ' ಎಂಬ ಪದವಿಟ್ಟ ಪಾಠ ಅನೇಕ ಪುಸ್ತಕಗಳಲ್ಲಿ ಕಾಣುತ್ತದೆ. ಅದರ ಪ್ರಕಾರ ಹಿರಾಕಾಸನ್ನು ಗರುಗನ ರಸದಿಂದ ತೊಳೆಯುವದೆಂತ ಅರ್ಥವಾಗುತ್ತದೆ. ಹಾಗೆ ಗರುಗನ ರಸವನ್ನು ತಗಲಿಸಿದ ಮಾತ್ರದಿಂದ ಪ್ರಯೋಜನವಿರಲಾರದು. ಅಂಗಡಿಗಳಲ್ಲಿ ಸಿಕ್ಕುವ ಹಿರಾಕಾಸಿನಿಂದ ದೊಡ್ಡ ದೊಡ್ಡ ಹರಳುಗಳನ್ನು ಹೆಕ್ಕಿ, ಅವುಗಳಿಗೆ ಹಿಡಕೊಂಡಿರುವ ದೂಳು, ಕಿಲುಬು ಮುಂತಾದ ದೋಷ ಹೋಗುವ ಹಾಗೆ ಆ ಹರಳುಗಳನ್ನು ಶುದ್ಧವಾದ ನೀರಿನಲ್ಲಿ (ಸಾಧ್ಯವಾದರೆ ಮಳೆ ನೀರಿನಲ್ಲಿ) ಹಾಕಿ, ಒಡನೆ ಹಿಸಿಕಿ ತೆಗೆದು ಬಿಸಿಲಿಗಿಟ್ಟು ಒಣಗಿಸಿದ ಮೇಲೆ, ಅವುಗಳನ್ನು ಪುಡಿಮಾಡಿ, ಆ ಪುಡಿ ಮುಳುಗುವಷ್ಟು ಲಿಂಬೇ ರಸ ಹೊಯಿದು ಒಂದು ಜಾವು ಅರೆದು, ಪುನಃ ಬಿಸಿಲಿಗಿಟ್ಟು ಒಣಗಿಸುವದು. ಆ ಮೇಲೆ ಆ ಪುಡಿಯನ್ನು ಪುನಃ ಅರೆಯಬೇಕು. ಆಗ್ಗೆ ಅದು ಬಿಳೇ ಹಿಟ್ಟಿನ ಆಕಾರಕ್ಕೆ ಬರುತ್ತದೆ. ಅದನ್ನು ಅಗಲ ಬಾಯಿಯ ಬಾಟ್ಲಿಯಲ್ಲಿ ತುಂಬಿ, ತಣಸು ತಾಗದಂತೆ ಭದ್ರವಾಗಿ ಇಟ್ಟುಕೊಂಡಲ್ಲಿ, ಬಹು ವರ್ಷಗಳ ವರೆಗೆ ಅದು ಬಿಳೇ ಹಿಟ್ಟಿನ ಹಾಗೆಯೇ ಉಳಿಯುತ್ತದೆ. ಹಿರಾಕಾಸ ಉತ್ತಮಜಾತಿದಲ್ಲವಾದರೆ, ಅಥವಾ ಶುದ್ಧಿಕ್ರಮದಲ್ಲಿ ವ್ಯತ್ಯಾಸ ಉಂಟಾದರೆ, ಆ ಪುಡಿಯು ಕೆಲವು ಕಾಲದ ಮೇಲೆ ಹಸುರುಬಿಳೇ ಮಿಶ್ರವರ್ಣವನ್ನು ಪಡೆಯುವದು. ಹಾಗೆ ವರ್ಣವಿಕಾರ ಹೊಂದಿದ್ದನ್ನು ಹೊಟ್ಟೆಗೆ ಕೊಡುವದರಿಂದ ದೋಷ ಉಂಟಾಗಬಹುದು. ಶುದ್ಧವಾದ ಹಿರಾಕಾಸನ್ನು ಜೇನಿನಲ್ಲಿ ಅಥವಾ ಸಕ್ಕರೆ-ತುಪ್ಪದಲ್ಲಿ ಕಲಸಿ ಹೊತ್ತಿಗೆ ೧ ಗುಂಜಾ (೧।। ಗ್ರೈನ್) ತೂಕ ಪ್ರಕಾರ ದಿನಕ್ಕೆ 2 ಸರ್ತಿ ಕೊಡಬಹುದು. ಅದನ್ನು ದೋಷಕ್ಕೆ ತಕ್ಕದಾದ ಕಷಾಯದಲ್ಲಿಯೂ ಕೊಡಬಹುದು. ಆಗ್ಗೆ ಕಷಾಯದ್ರವ್ಯಗಳಲ್ಲಿ ಅಣಿಲೆಕಾಯಿ ಮುಂತಾದ ಚೊಗರು ವಿಶೇಷವುಳ್ಳವು ಇಲ್ಲದಂತೆ ಜಾಗ್ರತೆ ತೆಗೆದುಕೊಳ್ಳುವದು ಒಳ್ಳೇದು. ಚೊಗರಿನ ಪದಾರ್ಥಗಳು ಸೇರಿದ ಕಷಾಯವು, ಆ ಪುಡಿ ಬಿದ್ದೊಡನೆ, ಶಾಯಿಯಂತೆ ಕಪ್ಪಾಗುವದು. ಹಾಗೆ ಕಪ್ಪಾದ ಕಷಾಯದಲ್ಲಿರುವ ಕಬ್ಬಿಣದ ಹೆಚ್ಚಿನ ಅಂಶವು ದೇಹಕ್ಕೆ ವ್ಯಾಪಿಸದೆ ಮಲದೊಂದಿಗೆ ಹೊರಗೆ ಹೋಗಬಹುದು. ಕಾಸೀಸಾದಿ ಮಾತ್ರೆಯ ಯೋಗವನ್ನು ಮಾಡುವಲ್ಲಿ ಈ ದೋಷ ಉಂಟಾಗದಂತೆ ಜಾಗ್ರತೆ ತೆಗೆದುಕೊಂಡದೆ. ದೇಹಕ್ಕೆ ಕಬ್ಬಿಣ ಬೇಕಾದ ಸಂಗತಿಯಲ್ಲಿ ಹೀಗೆ ತಯಾರಿಸಲ್ಪಟ್ಟ ಕಾಸೀಸಯುಕ್ತವಾದ ಯೋಗಗಳು ಉತ್ತಮವಾಗುತ್ತವೆ. ಪಾಂಡುವಿನಲ್ಲಿ ಉಂಟಾಗುವ ರಕ್ತದ ಬಿಳುಪಿನ ಪರಿಹಾರಕ್ಕೆ ಕಬ್ಬಿಣದ ಪ್ರಯೋಗವು ಮುಖ್ಯವಾದದ್ದು.

2. ರೋಗಿ ಸ್ತ್ರೀ. ಪ್ರಾಯ 25 ವರ್ಷ—ಕೆಲವು ಸಮಯದಲ್ಲಿ ಮಂಕು. ಆಗ್ಗೆ ಊಟದ ಗೊಡವೆ ಇಲ್ಲ. ಮಲಮೂತ್ರ ವಿಸರ್ಜನದಲ್ಲಿ ಹೇಸಿಕೆ ವಿಚಾರವಿಲ್ಲ. ಕೆಲವು

ಸಮಯದಲ್ಲಿ ಸುಮ್ಮನೆ ನಗುತ್ತಿರುವದು, ಮತ್ತು ಕೆಲವು ಸಮಯ ಅತಿ ಕ್ರೋಧ, ಸತ್ತು ಹೋಗಿದ್ದ ಅಕ್ಕನೇ ತಾನು ಎಂಬ ಭ್ರಮೆ. ಮೂರು ನಾಡಿಗಳೂ ಸ್ಥಾನಚ್ಯುತ—ವಾತಾರಿ ಮಾತ್ರೆ ||| (¾)ರಂತೆ ಅರ್ಧ ಕುಡ್ತೆ ಹಾಲಿನಲ್ಲಿ ಸಕ್ಕರೆ ಕೂಡಿಸಿ ಒಂದು ಹೊತ್ತು, ಇನ್ನೊಂದು ಹೊತ್ತು ದಶಮೂಲಾದಿ ಘೃತ ೧ ವರಹತೂಕ (೧ ಡ್ರಾಂ) ಪ್ರಕಾರ ಕಲ್ಲುಸಕ್ಕರೆ ಪುಡಿ ಮತ್ತು ಜೇನು | (¼) ಡ್ರಾಂ. ಪ್ರಕಾರ ಬೆರಸಿ, ಹೀಗೆ ಔಷಧಸೇವಿಸುತ್ತಾ, ತಲೆಗೆ ಧಾತ್ರ್ಯಾದಿ ತೈಲವನ್ನು ಹಚ್ಚಿ ಸ್ನಾನವನ್ನು ಮಾಡುತ್ತಾ ಬಂದದರಿಂದ, ತಲೆ ಶುದ್ಧವಾಯಿತು. ಆ ಮೇಲೆ ಕಾಸೀಸಾದಿ ಮಾತ್ರೆ ೧ರಂತೆ ತುಪ್ಪ-ಜೇನುಗಳಲ್ಲಿ (ತುಪ್ಪಕ್ಕೆ ಎರಡು ಪಾಲಿನಷ್ಟು ಜೇನು) ತೇದಿ, 12 ದಿನ ಕೊಟ್ಟಿತು. ಅದರಿಂದ ಪೂರ್ಣ ಸೌಖ್ಯವಾಯಿತೆಂತ ಚಿಕಿತ್ಸೆಯನ್ನು ಬಿಟ್ಟರು

ದಶಮೂಲಗಳು, ಕಲ್ಲಂಗಡಲೆ (ಕಡೀರು)ಬೇರು, ಹರಳಬೇರು, ಶತಾವರಿಬೇರು, ತುಪ್ಪ ದೇವದಾರ, ದ್ರಾಕ್ಷೆ, ಸುಗಂಧಿ ಬೇರಿನ ಒಳಗಿನ ಸಿಪ್ಪೆ, ಈ ೧೬ ಜೇನಸುಗಳನ್ನು ಮೂರು ತೊಲೆ ಪ್ರಕಾರ ತೆಗೆದುಕೊಂಡು ಕುಟ್ಟಿ ಪುಡಿಮಾಡಿ, ೮ ಪ್ರಸ್ಥ (೪|| ಕುತ್ತಿ) ಸೀರಿನಲ್ಲಿ ಹಾಕಿ ಕುದಿಸಿ, ಕಾಲಂಶಕ್ಕ ಬತ್ತಿಸಿ ಶೋಧಿಸಿದ ಕಷಾಯ ಪ್ರಸ್ಥ ೨ಕ್ಕೆ, ದನದ ತುಪ್ಪ (ಹಳೇದಾದಷ್ಟು ಒಳ್ಳೇದು) ೧ ಪ್ರಸ್ಥ (೨|| ಸೇರು-೫ ಕುಡ್ತೆ), ಹಳೇ ಬೂದಿಕುಂಬಳಕಾಯಿಯ ರಸ ೨ ಪ್ರಸ್ಥ, ಕಲ್ಕವಾಗಿ, ಬಜೆ ತೂಲೆ ೧||, ಒಣಗಿಸಿದ ಒಂದೆಲಗ ಸಮೂಲ (ತಿಮರೆ) ತೊಲೆ ೧, ಜ್ಯೇಷ್ಠಮಧು, ಬಿಳೇ ಶಂಖಪುಷ್ಪದ ಬೇರಿನ ಸಿಪ್ಪೆ, ಅಶ್ವಗಂಧಿ, ಭದ್ರಮುಷ್ಟಿ, ಇವು ನಾಲ್ಕು ಬಗೆಗಳು ಮುಕ್ಕಾಲು ತೊಲೆ ಪ್ರಕಾರ, ಚಂಗಲಕೋಷ್ಠ, ಜೀರಿಗೆ, ಕರಿಜೀರಿಗೆ, ಹಿಪ್ಪಲಿ, ಸೈಂಧವಲವಣ, ಶ್ರೀಗಂಧ, ಏಲಕ್ಕಿ, ವಾಯುವಿಳಂಗ, ಇವು ೮ ಬಗೆ ತೊಲೆ |= (⅜) ಪ್ರಕಾರ ತೆಗೆದುಕೊಂಡು ಕುಟ್ಟಿ ವಸ್ತ್ರಗಾಲಿತ ಮಾಡಿದ ಚೂರ್ಣ ಸಹ ಬೆರಸಿ ಕಾಯಿಸಿ, ಪಾಕದಲ್ಲಿ ಇಳಿಸಿ, ಶೋಧಿಸಿಟ್ಟುಕೊಂಡ ಘೃತವನ್ನು ಅನುಪಾನಭೇದದಿಂದ ಕೊಡಲು ಮಿದುಳು ಸರಿಯಾಗಿ ಮನಃ ಪ್ರಸನ್ನತೆ ಉಂಟಾಗುವದು, ನರಗಳಿಗೆ ಬಲವುಂಟಾಗುವದು, ರಕ್ತ ಶುದ್ಧವಾಗುವದು, ಉನ್ಮಾದರೋಗದಲ್ಲಿ ಬಹು ಪ್ರಯೋಜನಕಾರಿ.

ದಶಮೂಲಾದಿ ಘೃತ.

ಮೇಲೆ 41ನೇ ಸಂಖ್ಯೆಯ ಅಡಿ ಷರಾದ 1ನೇ ವಿಚ್ಛೇದದ ಕೊನೆ ಭಾಗ ನೋಡಿ.

ನೆಲ್ಲಿಚಟ್ಟು ಸೇರು ೪, ಸಿಪ್ಪೆತೆಗೆದ ಅಮೃತಬಳ್ಳಿ ಸೇರು ೨, ಸೇರಿ ಸೇರು ೬ಕ್ಕೆ ೨೪ ಸೇರು ನೀರಿಟ್ಟು ಮಾಡಿದ ಕಷಾಯ ಸೇರು ೬, ಕಲ್ಲಂಗಡಲೆಬೇರು (ಕಡೀರು) ಸೇರು ೨ನ್ನು ಸಣ್ಣದಾಗಿ ಕಡಿದು, ಕುಟ್ಟಿ ಮಾಡಿದ ಪುಡಿಗೆ ೧೬ ಸೇರು ನೀರಿಟ್ಟು ಮಾಡಿದ ಕಷಾಯ ಸೇರು ೨, ಗರುಗದ ರಸ ಸೇರು ೪, ಎಳ್ಳೆಣ್ಣೆ ಸೇರು ೪, ದನದ ಹಾಲು ಸೇರು ೪, ದನದ ತುಪ್ಪ ಸೇರು || , ಕಲ್ಕವಾಗಿ:— ಲಾವಂಚ, ಮುಡಿವಾಳ, ರಕ್ತಚಂದನ, ಜ್ಯೇಷ್ಠಮಧು, ಇಪ್ಪೆಹೂವು, ಶ್ರೀಗಂಧ, ಚಂಗಲಕೋಷ್ಠ, ತಾವರೆಹೂವು, ಭದ್ರಮುಷ್ಟಿ, ಲವಂಗಪಟ್ಟೆ, ಪಚ್ಚೆಯಲೆ, ಏಲಕ್ಕಿ, ಸುಗಂಧಿಬೇರಿನ ಒಳಗಿನ ಸಿಪ್ಪೆ, ಜಾಯಿಕಾಯಿ, ತಕ್ಕೋಲ, ಶತಾವರಿಬೇರಿನ ಮಾಂಸ ಭಾಗ (ಮಧ್ಯದ ಕಡ್ಡಿ ಮತ್ತು ಹೊರಗಿನ ಸಿಪ್ಪೆ ಬಿಡಬೇಕು), ಕಚೋರ, ನಾಗಕೇಸರ, ಮಂಜಿಷ್ಠ, ಕಟುಕರೋಹಿಣೀ, ಸರಳದೇವದಾರ, ತುಪ್ಪದೇವದಾರ, ಜೀರಿಗೆ, ತ್ರಿಫಲೆ, ತ್ರಿಕಟು, ಸಬ್ಬಸಿಗೆ (ಸತಾಪೆ)ಬೀಜ, ಅಗಿಲುಗಂಧ, ಜಟಾಮಾಂಸಿ, ದ್ರಾಕ್ಷೆ, ಅಶ್ವಗಂಧಿ, ತಗರ ಮತ್ತು

ಧಾತ್ರ್ಯಾದಿ ತೈಲ

ಪುನರ್ನವಿಬೇರು— ಈ ೩೬ ಬಗೆಗಳನ್ನು ಎರಡೆರಡು ವರಹತೂಕ ಪ್ರಕಾರ ತೆಗೆದುಕೊಂಡು ಮಾಡಿದ ಚೂರ್ಣ, ಇವುಗಳನ್ನೆಲ್ಲಾ ಒಟ್ಟಾಗಿ ಸೇರಿಸಿ, ಸಣ್ಣ ಉರಿಯಿಂದ ಮೂರು ದಿನ ಕುದಿಸಿ, ಅನಂತರ ಖರಪಾಕ ಬಂದೊಡನೆ, ಕಂಚನ್ನು ಒಲೆ ಮೇಲಿಂದ ಕೆಳಗೆ ಇರಿಸಿ, ಮಡ್ಡನ್ನು ಬಿಸಿ ಆರುವದಕ್ಕೆ ಮೊದಲು, ತೆಂಗಿನ ಮರದ ಚಾಪರಿಕೆಯಲ್ಲಿಯೊ ಕಬ್ಬಿಣದ ಪ್ರೆಸ್ಸಿನಲ್ಲಿಯೊ ಹಾಕಿ, ಬಲವಂತವಾಗಿ ಹಿಂಡಿ ಶೋಧಿಸಿದ ತೈಲಕ್ಕೆ ೧ ವರಹತೂಕ ಒಳ್ಳೇ ಪಚ್ಚೆಕರ್ಪೂರದ ಪುಡಿಯನ್ನೂ ಬೇಕಾದಷ್ಟು ಅಲ್ಪವಾಗಿ ಬಿಸಿಮಾಡಿ ಅರೆದು ಮಾಡಿದ ಕುಂಕುಮಕೇಸರ ವರಹತೂಕ ೧ರ ಪುಡಿಯನ್ನೂ ಬೆರಸಿ, ತಣಸು ತಾಗದಂತೆ ಭದ್ರವಾಗಿ ಇಟ್ಟುಕೊಳ್ಳುವದು. ಈ ತೈಲವನ್ನು ತಲೆಗೆ ಹಚ್ಚಿ ಅಭ್ಯಂಗನ ಮಾಡುತ್ತಾ ಬಂದಲ್ಲಿ, ಸಾಧಾರಣವಾಗಿ, ಕುತ್ತಿಗೆ ಮೇಲಿನ ಎಲ್ಲಾ ರೋಗಗಳೂ ಶಮನವಾಗುವವು; ಮಿದುಳಿಗೆ ಬಲಬರುವದು; ಮತ್ತು ಅದರಲ್ಲಿ ಉಂಟಾದ ಪಿತ್ತವಾತಗಳ ವಿಕಾರಗಳ ಪರಿಹಾರಕ್ಕೆ ಈ ತೈಲವು ಉತ್ತಮವಾದದ್ದು.

ನೆಗಡಿ, ಕಿವಿ ಸೋರುವದು ಮುಂತಾದ ಕಫದೋಷಗಳು ವಿಶೇಷವಾಗಿ ಕಾಣುವಂಥವರಿಗಾಗಿ ಈ ತೈಲವನ್ನು ಮಾಡುವದಾದರೆ, ನೆಲ್ಲಿಚಟ್ಟಿನ ಪ್ರಮಾಣದಲ್ಲಿ ೧ ಸೇರು, ಅಮೃತಬಳ್ಳಿ ಪ್ರಮಾಣದಲ್ಲಿ ||ಸೇರು ಕಡಿಮೆ ಮಾಡಿ, ಬಿಲ್ಲಪತ್ರೆಬೇರು ಸೇರು ೧, ರಕ್ತಹೊನ್ನೆ (ಅಸನ, ಬೇಂಬ) ತಿರಳು ಸೇರು ||, ಸಹ ಕಲ್ಲಂಗಡಲೆ ಬೇರಿನೊಂದಿಗೆ ಪುಡಿಮಾಡಿ ಸೇರಿಸಿ, ಕಷಾಯ ಮಾಡಿ ಕೂಡಿಸುವದರಿಂದ ವಿಶೇಷಫಲ ಸಿಕ್ಕುತ್ತದೆ. ಆಗ್ಗೆ ಕಷಾಯದ್ರವ್ಯಗಳ ಪ್ರಮಾಣದ ಭೇದಕ್ಕೆ ಅನುಗುಣವಾಗಿ ಕಷಾಯಗಳ ಪ್ರಮಾಣಗಳಲ್ಲಿ ಭೇದಮಾಡಿಕೊಳ್ಳಬೇಕು.

ಪೃಥಗ್ರೋಗೋಕ್ತೌಷಧಗಳು

54. ಅಣಿಲೆಕಾಯಿ, ಒಂದೆಲಗ, ಕಂಪಿಲ್ಲಕ, ಕಬ್ಬಿನ ಹಾಲು, ಕರ್ಪೂರ, ಗೋರೋಚನ, ಚೀನಿಪಾವು (ದ್ವೀಪಾಂತರವಚಾ), ಜಡೆ(ಬೊಂತೆ)ಕಳ್ಳಿ, ಜೇನು, ಜ್ಯೇಷ್ಠಮಧು, ದ್ರಾಕ್ಷೆ, ನೆಲ್ಲಿ, ಬಜೆ, ಬೂದಿಕುಂಬಳಕಾಯಿ, ಭದ್ರಮುಷ್ಟಿ, ಮುಡಿವಾಳ, ಮೊಲೆಹಾಲು, ಶತಾವರಿ, ಶ್ರೀಗಂಧ, ಸುವರ್ಣಭಸ್ಮ ಮತ್ತು ಹುಲಿಮಾಂಸ.

ಷರಾ. ರೋಗಿಯು ಋತು ಸರಿಯಿಲ್ಲದ ಯೌವನಸ್ಥ ಸ್ತ್ರೀಯಾಗಿದ್ದರೆ ಜೀರಿಗೆ, ಬಡೆಸೋಪಿ, ಎಳ್ಳು, ಕಹಿಬೇವು, ಹಿಂಗು, ಮುಂತಾದ ಋತುದೋಷಶಮನಕರವಾದ ಔಷಧಗಳನ್ನು ಯೋಗಗಳಲ್ಲಿ, ಅವಸ್ಥೆ ನೋಡಿಕೊಂಡು, ಕೂಡಿಸಿಕೊಳ್ಳುವದು ಅಗತ್ಯವಾಗಬಹುದು

ಪಥ್ಯವರ್ಗ.

55. ಮಲಗಿಸುವದು, ಕುಳ್ಳಿರಿಸುವದು, ನಿದ್ರೆ, ಬಹುಶೀತವಾದ ಲೇಪಗಳು, ಗೋದಿ, ಹೆಸರು, (ಕೆಂಪು-ಕಪ್ಪು) ಅರುಣ ಶಾಲ್ಯಕ್ಕಿಗಳು, ಧಾರೋಷ್ಣ ಹಾಲು, ನೂರಾವರ್ತಿ ತೊಳೆದ ತುಪ್ಪ, ಹೊಸತುಪ್ಪ, ಹಳೇತುಪ್ಪ, ಆಮೆಯ ಮಾಂಸ, ಜಾಂಗಲಮಾಂಸದ ರಸ, ರಸದಾಳಿಕಬ್ಬು, ಹಳೇ ಬೂದಿಕುಂಬಳಕಾಯಿ, ಪಡುವಲಕಾಯಿ, ಒಂದೆಲಗನ ಎಲೆ, ಚಕ್ಕೋತ ಸೊಪ್ಪು, ಕೈಹರುವೆ ಅಥವಾ ಮುಳ್ಳು ಹರುವೆ (ಕಿರುಕಸಾಲೆ), ಮಳೆನೀರು, ಎಳೇ ತೆಂಗಿನಕಾಯಿ, ದ್ರಾಕ್ಷೆ, ಬೇಲದ ಹಣ್ಣು, ಹಲಸಿನ ಹಣ್ಣು, ದಾಳಿಂಬ, ಹೊನ್ನಗನ್ನೆ ಸೊಪ್ಪು ಮತ್ತು ಲಘುವಾಗಿಯೂ ಪಿತ್ತಹರವಾಗಿಯೂ ಇರುವ ಬೇರೆ ಪದಾರ್ಥಗಳು.

ಷರಾ ಮೇಲಿನ 28ನೆಯ ಸಂಖ್ಯೆ ಸಹ ನೋಡಿ.

ಅಪಥ್ಯವರ್ಗ.

56. ಮದ್ಯ, (ಸಂಯೋಗ) ವಿರುದ್ಧವಾದ ಆಹಾರ, ಗುರುವಾದ, ತೀಕ್ಷ್ಣವಾದ ಮತ್ತು ಬಿಸಿಯಾದ ಭೋಜನ, ನಿದ್ರೆ-ಹಸಿವೆ-ಬಾಯಾರಿಕೆಗಳ ವೇಗಗಳನ್ನು ತಡೆಯುವದು, ಮೈಥುನ, ಹಾಗಲಕಾಯಿ, ಸೊಪ್ಪುಗಳು, ಕಹಿ ಪದಾರ್ಥಗಳು, ತೊಂಡೆಕಾಯಿ, ಪಾನು, ವ್ಯಾಯಾಮ, ಉಪವಾಸ, ಶೋಕ ಮತ್ತು ಸಿಟ್ಟು.

ಪರಾ ಮೇಲೆ 6, 7, 8ನೇ ಸಂಖ್ಯೆಗಳಲ್ಲಿ ವರ್ಣಿಸಲ್ಪಟ್ಟ ನಿದಾನವಿಶೇಷಗಳು, ಸಹ

# ಅಧ್ಯಾಯ II

## ಅಪಸ್ಮಾರ (Epilepsy)

### ಮತ್ತು ಅತತ್ವಾಭಿನಿವೇಶ (Imbecility, moral insanity)

1. ಸ್ಮೃತೇರಪಗಮಂ ಪ್ರಾಹುರಪಸ್ಮಾರಂ ಭಿಷಗ್ವಿದಃ ।
ತಮಃಪ್ರವೇಶವೀಭತ್ಸಚೇಷ್ಟಂ ಧೀಸತ್ವಸಂಪ್ಲವಾತ್ ॥ (ಚ. 616)

ಅಪಸ್ಮಾರ ನಿರುಕ್ತಿ

ಬುದ್ಧಿ ಮತ್ತು ಮನಸ್ಸು ಮುಣುಗಿಹೋಗುವ ದೆಸೆಯಿಂದ ಕತ್ತಲೆಯು ಪ್ರವೇಶವಾಗಿ ಭಯಂಕರವಾದ ಚೇಷ್ಟೆಗಳನ್ನುಂಟುಮಾಡುವ ಸ್ಮೃತಿತಪ್ಪುವಿಕೆಯನ್ನು ವೈದ್ಯಜ್ಞರು ಅಪಸ್ಮಾರ ಎನ್ನುತ್ತಾರೆ.

ಸರಾ 'ವಿಪ್ಲವ' ಎಂದರೆ 'ಸ್ವರೂಪ ಬೇರೆಯಾಗುವಿಕೆ' ಎಂತ ಆ ದೀ, 'ವಿನಾಶ' ಎಂತ ಇಂದು ವ್ಯಾ

ಸ್ಮೃತಿರ್ಭೂತಾರ್ಥವಿಜ್ಞಾನಮಪಸ್ತ್ತ ಪರಿವರ್ಜನೇ ।
ಅಪಸ್ಮಾರ ಇತಿ ಪ್ರೋಕ್ತಃ . . . . ॥ (ಸು. 892)

ಅಪಸ್ಮಾರ ಶಬ್ದದಲ್ಲಿ 'ಅಪ' ಎಂದರೆ 'ಅಗಲುವಿಕೆ', 'ತಪ್ಪುವಿಕೆ' ಮತ್ತು 'ಸ್ಮೃತಿ' (ಸ್ಮಾರ) ಎಂದರೆ ಹಿಂದೆ ನಡದ ವಿಷಯದ ಪರಿಜ್ಞಾನ, ಅಪಸ್ಮಾರ ಎಂದರೆ ಅಂಥಾ ಸ್ಮೃತಿಯ ಅಗಲುವಿಕೆ.

2. ರಜಸ್ತಮೋಭ್ಯಾಮುಪಹತಚೇತಸಾಮುದ್ಭ್ರಾನ್ತವಿಷಮಬಹುದೋಷಾಣಾಂ ಸಮಲವಿಕೃತೋಪಹಿತಾನಿ ಅಶುಚೀನಿ ಅಭ್ಯವಹಾರಜಾತಾನಿ ವೈಷಮ್ಯ-ಯುಕ್ತೇನ ಉಪಯೋಗವಿಧಿನೋಪಯುಂಜಾನಾನಾಂ ತನ್ತ್ರಪ್ರಯೋಗ-ಮಪಿ ಚ ವಿಷಮಮಾಚರತಾಮನ್ಯಾಶ್ಚ ಶರೀರಚೇಷ್ಟಾ ವಿಷಮಾಃ ಸಮಾ-ಚರತಾಮ್ ಅತ್ಯುಪಕ್ಷೀಣದೇಹಾನಾಂ ವಾ ದೋಷಾಃ ಪ್ರಕುಪಿತಾ ರಜಸ್ತಮೋಭ್ಯಾ-ಮುಪಹತಚೇತಸಾಮ್ ಅನ್ತರಾತ್ಮನಃ ಶ್ರೇಷ್ಠತಮಮಾಯತನಂ ಹೃದಯಮುಪ-ಸಂಗೃಹ್ಯ ಪರ್ಯವತಿಷ್ಠನ್ತೇ ತಥಾ ಇಂದ್ರಿಯಾಯತನಾನಿ। ತತ್ರ ಚಾವಸ್ಥಿತಾಃ ಸನ್ತೋ ಯದಾ ಹೃದಯಮಿನ್ದ್ರಿಯಾಯತನಾನಿ ಚೇರಿತಾಃ ಕಾಮಕ್ರೋಧಭಯಲೋಭ ಮೋಹಹರ್ಷಶೋಕಚಿನ್ತೋದ್ವೇಗಾದಿಭಿಃ ಭೂಯಃ ಸಹಸಾ ಅಭಿಪೂರಯನ್ತಿ ತದಾ ಜನ್ತುಃ ಅಪಸ್ಮರತಿ ॥ (ಚ. 233-34)

ಅಪಸ್ಮಾರದ ಹೇತು

ಯಾರಲ್ಲಿ ರಜೋಗುಣ-ತಮೋಗುಣಗಳಿಂದ ಮನಸ್ಸು ಕಲಂಕಿತವಾಗಿರುತ್ತದೋ, ಯಾರಲ್ಲಿ ವಾತಾದಿ ದೋಷಗಳು ಭ್ರಾಂತಿಗೊಂಡು, ವಿಷಮವಾಗಿ ಮತ್ತು ಬಹಳವಾಗಿ ಇರುತ್ತವೋ, ಯಾರು ಮಲಯುಕ್ತವಾದ, ದುಷ್ಟವಾದ, ಹಳೆಯದಾದ, ಮತ್ತು ಶುಚಿಯಲ್ಲದ ಆಹಾರ ವರ್ಗಗಳನ್ನು ಕ್ರಮಬಿಟ್ಟು ವಿಷಮವಾಗಿ ಉಪಯೋಗಿಸುತ್ತಾರೋ, ಯಾರು ವಿಷಮವಾಗಿ ತಂತ್ರಪ್ರಯೋಗವನ್ನು (ಕುಟುಂಬದ ಅಥವಾ ಗೃಹಕೃತ್ಯದ ಕೆಲಸವನ್ನು) ನಡಿಸುತ್ತಾರೋ ಮತ್ತು ಬೇರೆ ವಿಷಮವಾದ ಶರೀರಚೇಷ್ಟೆಗಳನ್ನು ಬಹಳವಾಗಿ ಆಚರಿಸುತ್ತಾರೋ, ಅಥವಾ ಯಾರ ದೇಹವು ಅತಿಯಾಗಿ ಕ್ಷೀಣಿಸಿರುತ್ತದೋ, ಅಂಥವರ ಪ್ರಕೋಪಗೊಂಡ ದೋಷಗಳು, ರಜಸ್ತಮೋಗುಣಗಳಿಂದ ಮಲಿನವಾದ* ಮನಸ್ಸುಳ್ಳ ಜನರ ಅಂತರಾತ್ಮನಿಗೆ ಅತಿಶ್ರೇಷ್ಠವಾಸಸ್ಥಾನವಾಗಿರುವ ಹೃದಯವನ್ನು, ಹಾಗೆಯೇ ಇಂದ್ರಿಯಗಳ ಮನೆಗಳನ್ನು,

ಹಿಡಿದುಕೊಂಡು ನಿಂತಿರುತ್ತವೆ; ಮತ್ತು ಅಲ್ಲಿ ನಿಂತಿರುವ ಆ ದೋಷಗಳು ಕಾಮ, ಕ್ರೋಧ, ಭಯ, ಲೋಭ, ಮೋಹ, ಹರ್ಷ, ಶೋಕ, ಚಿಂತೆ, ಇವುಗಳ ಉದ್ವೇಗ ಮುಂತಾದವುಗಳಿಂದ ಕೆದರಿಸಲ್ಪಟ್ಟು, ಹೃದಯವನ್ನೂ ಇಂದ್ರಿಯಗಳ ಮನೆಗಳನ್ನೂ ಪುನಃ ಯಾವಾಗ ಒಮ್ಮೆಯೇ ತುಂಬುತ್ತವೋ, ಆಗ್ಗೆ ಆ ಪ್ರಾಣಿಗೆ ಅಪಸ್ಮಾರ ಉಂಟಾಗುತ್ತದೆ.

ಷರಾ *ಈ ಪುನರುಕ್ತಿಯು ರಜಸ್ತಮೋಗುಣಗಳೇ ಅಧಿಕವಾಗಿ ಸತ್ವಗುಣ ಅಡಗಿರುವವರಲ್ಲಿ ಅಲ್ಲದೆ ಇತರರಲ್ಲಿ ಈ ರೋಗವು ಉಂಟಾಗುವದಿಲ್ಲ ಎಂಬ ಅಭಿಪ್ರಾಯವನ್ನು ಬಲಪಡಿಸುತ್ತದೆ ಅಪಸ್ಮಾರವು ಉನ್ಮಾದದ ಹಾಗಿನದೊಂದು ಮನೋವ್ಯಾಧಿ ಒಂದನೇ ಅಧ್ಯಾಯದ 2ನೇ ಸಂಖ್ಯೆಯಡಿ ಬರೆದ ಷರಾ ನೋಡಿ

ಈ ರೋಗವು ಸಾಧಾರಣವಾಗಿ 10 ವರ್ಷ ಪ್ರಾಯ ಕಳೆದ ಮೇಲೆ 40 ವರ್ಷ ಪ್ರಾಯದ ವರೆಗೆ ಜನರಲ್ಲಿ ಸಂಭವಿಸುವದು ಹೆಚ್ಚೆಂತ ಒಂದು ಪಾಶ್ಚಾತ್ಯ ವೈದ್ಯಗ್ರಂಥದಲ್ಲಿ ಕೊಟ್ಟಿರುವ ಈ ಕೆಳಗಣ ಪಟ್ಟಿಯಿಂದ ಕಾಣುತ್ತದೆ —

| ಪ್ರಾಯ | ಗಂಡು | ಹೆಣ್ಣು | ಜುಮ್ಲಾ ಸಂಖ್ಯೆ |
|---|---|---|---|
| 10 ವರ್ಷದೊಳಗೆ | 10 | 9 | 19 |
| 10 ವರ್ಷಕ್ಕೂ 20 ವರ್ಷಕ್ಕೂ ಮಧ್ಯೆ | 66 | 40 | 106 |
| 20 ವರ್ಷಕ್ಕೂ 40 ವರ್ಷಕ್ಕೂ ಮಧ್ಯೆ. | 25 | 20 | 45 |
| 45 ವರ್ಷ ಕಳೆದ ಮೇಲೆ | 1 | 1 | 2 |
| | 102 | 70 | 172 |

3. ಧಮನೀಭಿಃ ಶ್ರಿತಾ ದೋಷಾ ಹೃದಯಂ ಪೀಡಯನ್ತಿ ಹಿ |
ಸಮ್ಪಾಡ್ಯಮಾನೋ ವ್ಯಥತೇ ಮೂಢೋ ಭ್ರಾನ್ತೇನ ಚೇತಸಾ ||
ಅಪಸ್ಮಾರ ಲಕ್ಷಣ
ಪಶ್ಯತ್ಯಸನ್ತಿ ರೂಪಾಣಿ ಪತತಿ ಪ್ರಸ್ಫುರತ್ಯಪಿ |
ಜಿಹ್ವಾಕ್ಷಿಭ್ರು(?ಭ್ರೂ)ಪ್ರವಲ್ಲಾಲೋ ಹಸ್ತೌ ಪಾದೌ ಚ ವಿಕ್ಷಿಪನ್ ||
ದೋಷವೇಗೇ ಚ ವಿಗತೇ ಸುಪ್ತವತ್ ಪ್ರತಿಬುಧ್ಯತೇ || (ಚ. 617)

ದೋಷಗಳು ಧಮನಿಗಳನ್ನು ಕೂಡಿಕೊಂಡು ಹೃದಯವನ್ನು ಪೀಡಿಸುತ್ತವೆ. ಹಾಗೆ ಪೀಡಿಸಲ್ಪಡುವ ಮನುಷ್ಯನು ಸ್ಮೃತಿಯಿಲ್ಲದವನಾಗಿ, ತಿರುಗುತ್ತಿರುವ ಮನಸ್ಸಿನಿಂದ ಸಂಕಷ್ಟಪಡುತ್ತಾನೆ, ಇಲ್ಲದ ರೂಪಗಳನ್ನು ಕಾಣುತ್ತಾನೆ, ಬೀಳುತ್ತಾನೆ, ನಾಲಿಗೆಯನ್ನೂ ಕಣ್ಣುಗಳನ್ನೂ ಹುಬ್ಬುಗಳನ್ನೂ ಹಾರಿಸುತ್ತಾನೆ ಮತ್ತು ಜೊಲ್ಲು ಸುರಿಸುತ್ತಾ ಕೈಗಳನ್ನೂ ಕಾಲುಗಳನ್ನೂ ಅತ್ತಿತ್ತ ಒಗೆಯುತ್ತಾನೆ; ಮತ್ತು ದೋಷಗಳ ವೇಗವು ನಿಂತ ಮೇಲೆ ಅವನಿಗೆ ನಿದ್ರೆಯಿಂದ ಎಚ್ಚರವಾದಂತೆ ಬೋಧ ಉಂಟಾಗುತ್ತದೆ.

ಷರಾ ಹೃದಯವು ಮನಸ್ಸಿನ ಅಧಿಷ್ಠಾನ ಮುಂದೆ 16ನೇ ಸಂಖ್ಯೆಯ ಅಡಿಯಲ್ಲಿ ಬರೆದ ಷರಾ ನೋಡಿ

4. ಹೃತ್ಕಮ್ಪಃ ಶೂನ್ಯತಾ ಸ್ವೇದೋ ಧ್ಯಾನಂ ಮೂರ್ಛಾ ಪ್ರಮೂಢತಾ |
ನಿದ್ರಾನಾಶಶ್ಚ ತಸ್ಮಿಂಸ್ತು ಭವಿಷ್ಯತಿ ಭವನ್ತ್ಯಥ ||
ಪೂರ್ವರೂಪ
(ಸು. 893)

ಎದೆನಡುಕು, ಶೂನ್ಯತೆ (ತಲೆ ಖಾಲಿ ಆಗಿರುವದು), ಬೆವರು, ಧ್ಯಾನ (ಯೋಚನೆ), ಮೂರ್ಛೆ, ಅತಿಮೂಢತನ, ನಿದ್ರೆಯಿಲ್ಲದಿರುವಿಕೆ, ಇವುಗಳು ಮುಂದೆ ಬರುವ ಅಪಸ್ಮಾರದ ಲಕ್ಷಣಗಳು.

ಷರಾ· ಹುಬ್ಬನ್ನು ವಿಕಾರವಾಗಿ ಹಾರಿಸುತ್ತಿರುವದು, ಕಣ್ಣುಗಳ ವಿಕಾರ, ಇಲ್ಲದ ಶಬ್ದ ಕೇಳಿಸುವದು, ಜೊಲ್ಲು ಮತ್ತು ಸಿಂಬಳ ಸುರಿಯುವದು, ಊಟದ ಇಚ್ಛೆ ಇಲ್ಲದಿರುವದು, ಅರುಚಿ, ಅಜೀರ್ಣ, ಎದೆ ಒಡಕೊಳ್ಳುವದು, ಹೊಟ್ಟೆ ಯುಬ್ಬರ, ಬಲಹೀನತೆ, ಅಂಗಗಳ ಬಳಲುವಿಕೆ, ಇತ್ಯಾದಿ ಲಕ್ಷಣಗಳು ಸಹ ಪೂರ್ವರೂಪ ಎಂತ ಚ (ಪು. 234)

5. ಪೃಥಗ್ದೋಷೈಃ ಸಮಸ್ತೈಶ್ಚ ವಕ್ಷ್ಯತೇ ಸ ಚತುರ್ವಿಧಃ ||

(ಚ. 617)

ಅಪಸ್ಮಾರದಲ್ಲಿ ಭೇದಗಳು

ವಾತದಿಂದ, ಪಿತ್ತದಿಂದ, ಕಫದಿಂದ ಮತ್ತು ತ್ರಿದೋಷಗಳಿಂದ, ಹೀಗೆ ಅಪಸ್ಮಾರವು ನಾಲ್ಕು ವಿಧ ಎಂತ ಹೇಳುತ್ತಾರೆ.

6. ಕಮ್ಪತೇ ದಶತೇ ದನ್ತಾನ್ ಫೇನೋದ್ವಾಮೀ ಶ್ವಸಿತ್ಯಪಿ |
ಪರುಷಾಣಿ ಚ ಕೃಷ್ಣಾನಿ ಪಶ್ಯೇದ್ರೂಪಾಣಿ ಚಾನಿಲಾತ್ ||

(ಚ. 617)

ವಾತಾಪಸ್ಮಾರದ ಲಕ್ಷಣ

ನಡುಗುವದು, ಹಲ್ಲುಗಳನ್ನು ಕಚ್ಚುವದು, ನೊರೆಕಾರುವದು, ಉಬ್ಬಸ ಬಿಡುವದು, ಚಿತ್ರವಿಚಿತ್ರವಾದ ಮತ್ತು ಕಪ್ಪುವರ್ಣದ ರೂಪಗಳನ್ನು ಕಾಣುವದು, ಇವು ವಾತದಿಂದ.

ವೇಪಮಾನೋ ದಶೇದ್ದನ್ತಾನ್ ಶ್ವಸನ್ ಫೇನಂ ವಮನ್ನಪಿ |
ಯೋ ಬ್ರೂಯಾದ್ವಿಕೃತಂ ಸತ್ವಂ ಕೃಷ್ಣಂ ಮಾಮನುಧಾವತಿ ||
ತತೋ ಮೇ ಚಿತ್ತನಾಶಃ ಸ್ಯಾತ್ಸೋಽಪಸ್ಮಾರೋಽನಿಲಾತ್ಮಕಃ ||

(ಸು. 893)

ಹಲ್ಲು ಕಚ್ಚುವದು, ನಡುಕು, ಉಬ್ಬಸ ಮತ್ತು ನೊರೆಕಾರುವದು, ಈ ಲಕ್ಷಣಗಳು ಕಾಣುವದಲ್ಲದೆ ಕಪ್ಪಾದ ಮತ್ತು ವಿಕಾರವುಳ್ಳ ಒಂದು ಸತ್ವವು ನನ್ನನ್ನು ಓಡಿಸಿಕೊಂಡು ಬರುತ್ತದೆ, ಆ ಮೇಲೆ ನನಗೆ ಸ್ಮೃತಿ ಇರುವದಿಲ್ಲ, ಎಂತ ಯಾವನು ಹೇಳುತ್ತಾನೋ ಅವನ ಅಪಸ್ಮಾರವು ವಾತದೋಷಾತ್ಮಕವಾದದ್ದೆಂತ ತಿಳಿಯಬೇಕು.

ಷರಾ 9ನೇ ಸಂಖ್ಯೆಯಡಿ ಷರಾ ನೋಡಿ ವಾತಜ ಅಪಸ್ಮಾರದಲ್ಲಿ ಉಗುರು, ಕಣ್ಣು, ಮುಖ ಮತ್ತು ಚರ್ಮ ಕಪ್ಪಾಗಿ ಅಥವಾ ಕೆಂಪೊತ್ತಿದ ಕಪ್ಪಾಗಿ ಮತ್ತು ದೊರಗಾಗಿ ಕಾಣುವವು, ಮತ್ತು ಬಹು ಸರ್ತಿ ಸ್ಮೃತಿ ತಪ್ಪುವದು, ಕ್ಷಣೇ ಕ್ಷಣೇ ಎಚ್ಚರವಾಗುವದು, ಮುಂತಾದ ಬೇರೆ ಲಕ್ಷಣಗಳು ಸಹ ವಾತಜದಲ್ಲಿ ಕಾಣುವವು ಎಂತ ಚ (ಪು 234)

7. ಪೀತಫೇನಾಂಗವಕ್ತ್ರಾಕ್ಷಃ ಪೀತಾಸೃಗ್ರೂಪದರ್ಶನಃ |
ಸತೃಷ್ಣಶ್ಚಾನಲವ್ಯಾಪ್ತಲೋಕದರ್ಶೀ ಚ ಪೈತ್ತಿಕಃ || (ಚ. 617)

ಪಿತ್ತಾಪಸ್ಮಾರದ ಲಕ್ಷಣ

ಬಾಯಿಯಿಂದ ಹೊರಡುವ ನೊರೆ, ಶರೀರ, ಮುಖ ಮತ್ತು ಕಣ್ಣು ಅರಸಿನವಾಗಿರುವದು, ಅರಸಿನವಾದ ಅಥವಾ ರಕ್ತವರ್ಣದ ರೂಪಗಳನ್ನು ಕಾಣುವದು, ಬಾಯಾರಿಕೆ, ಬೆಂಕಿಯಿಂದ ವ್ಯಾಪ್ತವಾದ ಊರನ್ನು ಕಾಣುವದು, ಈ ಲಕ್ಷಣಗಳು ಪಿತ್ತಾಪಸ್ಮಾರದಲ್ಲಿ ಕಾಣುವವು.

ತೃಟ್ತಾಪಸ್ವೇದಮೂರ್ಛಾರ್ತೋ ಘುನ್ವನ್ನಂಗಾನಿ ವಿಹ್ವಲಃ |
ಯೋ ಬ್ರೂಯಾದ್ವಿಕೃತಂ ಸತ್ವಂ ಪೀತಂ ಮಾಮನುಧಾವತಿ ||
ತತೋ ಮೇ ಚಿತ್ತನಾಶಃ ಸ್ಯಾತ್ಸ ಪಿತ್ತಭವ ಉಚ್ಯತೇ || (ಸು. 893)

ಬಾಯಾರಿಕೆ, ತಾಪ, ಬೆವರು, ಮೂರ್ಛೆಗಳ ಪೀಡೆ, ಅಂಗಗಳನ್ನು ಒಗೆಯುವದು, ಸಂಕಟಪಡುವದು, ಈ ಲಕ್ಷಣ ಕಾಣುವದಲ್ಲದೆ, ಅರಸಿನ ವರ್ಣದ ಒಂದು ವಿಕಾರವುಳ್ಳ ಸತ್ವವು (ಪ್ರಾಣಿಯು) ನನ್ನನ್ನೋಡಿಸಿಕೊಂಡು ಬರುತ್ತದೆ, ಅನಂತರ ನನಗೆ ಸ್ಮೃತಿತಪ್ಪುತ್ತದೆ ಎಂತ ಯಾವನು ಹೇಳುತ್ತಾನೋ, ಅವನ ರೋಗವು ಪಿತ್ತದಿಂದುಂಟಾದದ್ದೆಂತ ಹೇಳುತ್ತಾರೆ.

ಷರಾ 9ನೇ ಸಂಖ್ಯೆಯಡಿಯ ಷರಾ ನೋಡಿ

8. ಕಫಾಪಸ್ಮಾರದ ಲಕ್ಷಣ

ಶುಕ್ಲಫೇನಾಂಗವಕ್ತ್ರಾಕ್ಷಃ ಶೀತಹೃಷ್ಟಾಂಗಜೋ ಗುರುಃ |
ಪಶ್ಯನ್ ಶುಕ್ಲಾನಿ ರೂಪಾಣಿ ಶ್ಲೈಷ್ಮಿಕೋ ಮುಚ್ಯತೇ ಚಿರಾತ್ ||
(ಚ. 617)

ಬಾಯಿನೊರೆ, ದೇಹ, ಮುಖ ಮತ್ತು ಕಣ್ಣು ಬೆಳ್ಳಗಾಗಿರುವದು, ಶರೀರವು ತಣ್ಣಗಾಗಿ ರೋಮ ನೆಟ್ಟಗಾಗಿರುವದು, ದೇಹ ಭಾರವಾಗಿ ಕಾಣುವದು, ಬಿಳೇ ರೂಪಗಳನ್ನು ಕಾಣುವದು, ಸಾವಕಾಶದಿಂದ ವಿಮೋಚನವಾಗುವದು, ಈ ಲಕ್ಷಣಗಳುಳ್ಳ ವ್ಯಾಧಿಯು ಶ್ಲೇಷ್ಮದಿಂದುಂಟಾದದ್ದೆಂತ ಹೇಳುತ್ತಾರೆ.

ಶೀತಹೃಲ್ಲಾಸನಿದ್ರಾರ್ತ್ತಃ ಪತನ್ ಭೂಮೌ ವಮನ್ ಕಫಮ್ |
ಯೋ ಬ್ರೂಯಾದ್ವಿಕೃತಂ ಸತ್ವಂ ಶುಕ್ಲಂ ಮಾಮನುಧಾವತಿ ||
ತತೋ ಮೇ ಚಿತ್ತನಾಶಃ ಸ್ಯಾತ್ಸೋಽಪಸ್ಮಾರಃ ಕಫಾತ್ಮಕಃ || (ಸು. 893)

ಶೀತ, ಎದೆಹಾರುವಿಕೆ ಮತ್ತು ನಿದ್ರೆಯ ಪೀಡೆ, ನೆಲದಲ್ಲಿ ಬಿದ್ದು ಕಫವನ್ನು ವಾಂತಿ ಮಾಡುವದು, ಈ ಲಕ್ಷಣ ಕಾಣುವದಲ್ಲದೆ, ಬಿಳೇ ವರ್ಣದ ಒಂದು ವಿಕಾರವುಳ್ಳ ಸತ್ವವು ನನ್ನನ್ನು ಓಡಿಸಿಕೊಂಡು ಬರುತ್ತದೆ, ಅನಂತರ ನನ್ನ ಸ್ಮೃತಿ ನಾಶವಾಗುತ್ತದೆ ಎಂತ ಯಾವನು ಹೇಳುತ್ತಾನೋ, ಅವನ ಅಪಸ್ಮಾರವು ಕಫಾತ್ಮಕವಾದದ್ದು.

ಷರಾ 9ನೇ ಸಂಖ್ಯೆಯಡಿಯ ಷರಾ ನೋಡಿ

9. ತ್ರಿದೋಷಾಪಸ್ಮಾರದ ಲಕ್ಷಣ.

ಸರ್ವೈರೇತೈಃ ಸಮಸ್ತೈಸ್ತು ಲಿಂಗೈರ್ಜ್ಞೇಯಸ್ತ್ರಿದೋಷಜಃ |
ಅಪಸ್ಮಾರಃ ಸ ಚಾಸಾಧ್ಯೋ ಯಃ ಕ್ಷೀಣಸ್ಯಾ ನವಶ್ಚ ಯಃ ||
(ಚ. 617)

ಮೇಲೆ ಹೇಳಲ್ಪಟ್ಟ ವಾತ, ಪಿತ್ತ, ಕಫಾತ್ಮಕವಾದ ಅಪಸ್ಮಾರಗಳ ಲಕ್ಷಣಗಳೆಲ್ಲ ಒಟ್ಟು ಕೂಡಿಕೊಂಡಿರುವ ರೋಗವು ಸನ್ನಿಪಾತದಿಂದುಂಟಾದದ್ದೆಂತ ತಿಳಿಯಬೇಕು. ರೋಗಿಯು ಕ್ಷೀಣನಾಗಿದ್ದರೆ ಅವನ ಅಪಸ್ಮಾರವು, ಹೊಸತಲ್ಲವಾದದ್ದು ಮತ್ತು ಸನ್ನಿಪಾತಜ ಅಪಸ್ಮಾರ ಅಸಾಧ್ಯ.

ಷರಾ ವಾತಜದಲ್ಲಿ ಎದೆನೋವು, ಪಿತ್ತಜದಲ್ಲಿ ಬಾಯಾರಿಕೆ, ಮತ್ತು ಕಫಜದಲ್ಲಿ ವಾಂತಿ ಬರುವ ಹಾಗಿನ ವೇಗ (ವಿಶೇಷವಾಗಿ) ಇರುವದಲ್ಲದೆ, ಮೂರರಲ್ಲಿಯೂ ಪ್ರಲಾಪ (ಹರಟುತ್ತಿರುವದು), ನರಳುವಿಕೆ ಮತ್ತು ಸಂಕಟ ಇರುತ್ತವೆ (ಸು 893—4)

10. ಅಸಾಧ್ಯ ಲಕ್ಷಣ

ಪ್ರಸ್ಫುರಸ್ತಂ ಸುಬಹುಶಃ ಕ್ಷೀಣಂ ಪ್ರಚಲಿತಭ್ರುವಮ್ |
ನೇತ್ರಾಭ್ಯಾಂ ಚ ವಿಕುರ್ವಾಣಮಪಸ್ಮಾರೋ ವಿನಾಶಯೇತ್ ||
(ಮಾ. ನಿ. 128)

ಬಹಳವಾದ ಮೈನಡುಕು, ಕ್ಷೀಣತೆ, ಹುಬ್ಬುಹಾರಿಸುವಿಕೆ, ಕಣ್ಣುಗಳನ್ನು ವಿಕಾರವಾಗಿ ತಿರುಗಿಸುವದು, ಈ ಲಕ್ಷಣಗಳುಳ್ಳವನನ್ನು ಅಪಸ್ಮಾರವು ಕೊಲ್ಲುವದು.

ಷರಾ ಹಿಂದಿನ 9ನೇ ಸಂಖ್ಯೆ ನೋಡಿ

11. ಪಕ್ಷಾದ್ವಾ ದ್ವಾದಶಾಹಾದ್ವಾ ಮಾಸಾದ್ವಾ ಕುಪಿತಾ ಮಲಾಃ |
ವೇಗದ ಕಾಲಾಂತರ
ಅಪಸ್ಮಾರಾಯ ಕುರ್ವನ್ತಿ ವೇಗಂ ಕಿಂಚಿದಥಾನ್ತರಮ್ ||

(ಚ. 617)

ಕೋಪಗೊಂಡ ವಾತಾದಿ ದೋಷಗಳು ಒಂದು ಪಕ್ಷಕ್ಕೊಮ್ಮೆ, ಹನ್ನೆರಡು ದಿನಗಳಿಗೊಮ್ಮೆ, ಅಥವಾ ತಿಂಗಳಿಗೊಮ್ಮೆ, ಅಪಸ್ಮಾರಕ್ಕೆ ಕಾರಣವಾದ ವೇಗವನ್ನುಂಟುಮಾಡುತ್ತವೆ ಮತ್ತು ಮಧ್ಯಕಾಲದಲ್ಲಿ ಅಲ್ಪವಾದ ವೇಗವು ಇರುತ್ತದೆ.

ಷರಾ ಪಕ್ಷ ಎಂಬದು ಪಿತ್ತದಲ್ಲಿ, ಹನ್ನೆರಡು ದಿನಗಳ ಕಾಲವು ವಾತದಲ್ಲಿ, ಮತ್ತು ಒಂದು ತಿಂಗಳು ಕಫದಲ್ಲಿ, ಎಂತ ಕೆಲವು ವ್ಯಾಖ್ಯಾನಕಾರರು ಬರೆದಿರುತ್ತಾರೆ. ಹೇಗಾದರೂ ಈ ಕಾಲನಿಯಮಕ್ಕೊಳಗಾಗದ ಅಪಸ್ಮಾರ ರೋಗದವರು ಬಹಳವಾಗಿರುವದು ಅನುಭವಸಿದ್ಧ 'ಕಿಂಚಿದಥಾನ್ತರಂ' ಎಂದರೆ 'ಉಕ್ತಕಾಲದೊಳಗೆ ವೇಗ ಉಂಟಾಗುವದು ಉಂಟು' ಎಂತ ವ್ಯಾಖ್ಯಾನಕಾರರು ಅರ್ಥ ಬರೆದದ್ದು ಕಾಣುತ್ತದೆ

12. ತೇಷಾಮಾಗನ್ತುರನುಬನ್ಧೋ ಭವತ್ಯೇವ ಕದಾಚಿತ್ | * * * |
ಅಪಸ್ಮಾರದಲ್ಲಿ ಆಗಂತುವಿನ ಅನುಬಂಧ
ತಸ್ಯ ವಿಶೇಷವಿಜ್ಞಾನಂ ಯಥೋಕ್ತೈರ್ಲಿಂಗೈರ್ಲಿಂಗಾಧಿಕ್ಯಮದೋಷ ಲಿಂಗಾನುರೂಪಂ ಕಿಂಚಿತ್ ||

(ಚ. 235)

ಆ ನಾಲ್ಕು ವಿಧವಾದ ದೋಷಜನ್ಯ ಅಪಸ್ಮಾರದೊಂದಿಗೆ ಹೊರಗಿನ ಹೇತುವಿನದೊಂದು (ಆಗಂತು) ಯಾವಾಗಲಾದರೂ ಕೂಡಿಕೊಳ್ಳುವದುಂಟೆಂಬದೇ ಸರಿ. ಅದರ ವಿಶೇಷವನ್ನು ದೋಷೋತ್ಪನ್ನವಾದ ಅಪಸ್ಮಾರಗಳಿಗೆ ಹೇಳಲ್ಪಟ್ಟ ಲಕ್ಷಣಗಳಲ್ಲದೆ, ಅವುಗಳಿಗೆ ಅನುರೂಪವಲ್ಲದ ಕೆಲವು ಲಕ್ಷಣಗಳು ಅಧಿಕವಾಗಿ ಇರುವದರಿಂದ ತಿಳಿಯತಕ್ಕದ್ದು.

ಷರಾ ಅಪಸ್ಮಾರವು ವಾತಾದಿ ದೋಷಗಳಿಂದ ಉತ್ಪನ್ನವಾಗುವಂಥಾದ್ದೇ ಅಲ್ಲ ಎಂಬ ಪರಮತವನ್ನು ಸುಶ್ರುತನು ಖಂಡನೆ ಮಾಡಿದ್ದಾನೆ ಆಗಂತುವು ಅಪಸ್ಮಾರದಲ್ಲಿ ಸೇರಿಕೊಳ್ಳುವದುಂಟೆಂತ ಪ್ರತ್ಯೇಕವಾಗಿ ಹೇಳದಿದ್ದರೂ, ಗ್ರಹೋಪಸ್ಮಾರಗಳಿಗೆ ಉಕ್ತವಾದ ಯೋಗಗಳನ್ನು ಅಪಸ್ಮಾರದಲ್ಲಿ ವಿಶೇಷವಾಗಿ ಉಪಯೋಗಿಸಬೇಕೆಂತಲೂ, ರುದ್ರದೇವರ ಮತ್ತು ಅವರ ಗಣಗಳ ಪೂಜೆಯನ್ನು ನಿತ್ಯದಲ್ಲು ಮಾಡತಕ್ಕದ್ದೆಂತಲೂ, ಸುಶ್ರುತ ಹೇಳುತ್ತದೆ (ಪು 894) ವಾಗ್ಭಟನ ಅಷ್ಟಾಂಗಹೃದಯದಲ್ಲಿ ಆಗಂತುವಿನ ಸೇರಿಕೆಯುಳ್ಳ ಅಪಸ್ಮಾರದ ಪ್ರಸ್ತಾಪ ಕಾಣದಿದ್ದರೂ, ಅಷ್ಟಾಂಗಸಂಗ್ರಹದಲ್ಲಿ ಚರಕನ ಮತಕ್ಕನುಸಾರವಾದ ಈ ಕೆಳಗಿನ ಶ್ಲೋಕ ಉಂಟು —

ಭೂತಾನುಬನ್ಧೇಽಪಸ್ಮಾರೇ ದೋಷಲಿಂಗಾಧಿಕಾಕೃತೌ |
ಯುಞ್ಜ್ಯಾದ್ಯಥಾಸ್ವಂ ಭೂತೋಕ್ತಾಂ ಕ್ರಿಯಾಂ ದೈವವ್ಯಪಾಶ್ರಯಾಮ್ || (III, 85)

"ಅಪಸ್ಮಾರದಲ್ಲಿ ದೋಷಗಳ ಲಕ್ಷಣಗಳಿಗೆ ಅಧಿಕವಾದ ಲಕ್ಷಣವುಳ್ಳ ಭೂತಾನುಬಂಧ ಸಂಭವಿಸಿದ್ದಲ್ಲಿ, ಆಯಾ ಭೂತಗಳಿಗೆ ಯುಕ್ತವಾದ ದೈವಾಶ್ರಯವನ್ನು ಗಳಿಸತಕ್ಕ (ಮಂತ್ರಾದಿ) ಪರಿಹಾರಕ್ರಮಗಳನ್ನು ಉಪಯೋಗಿಸತಕ್ಕದ್ದು"

13. ಜಲಾಗ್ನಿದ್ರುಮಶೈಲೇಭ್ಯೋ ವಿಷಮೇಭ್ಯಶ್ಚ ತಂ ಸದಾ |
ಅಪಸ್ಮಾರಿಗಳ ರಕ್ಷಣೆ
ರಕ್ಷೇದುನ್ಮಾದಿನಂ ಚೈವ ಸದ್ಯಃ ಪ್ರಾಣಹರಾ ಹಿ ತೇ ||

(ಚ. 621)

ಅಪಾಯಕರವಾದ ನೀರಿನ ಆಶ್ರಯ, ಬೆಂಕಿ, ಮರ, ಬೆಟ್ಟಗಳ ದೆಸೆಯಿಂದ ಅಪಸ್ಮಾರರೋಗದವನನ್ನೂ, ಉನ್ಮಾದರೋಗದವನನ್ನೂ ಯಾವಾಗಲೂ ಕಾಪಾಡಬೇಕು; ಯಾಕಂದರೆ ಅವು ಕೂಡಲೇ ಪ್ರಾಣವನ್ನು ತೆಗೆದುಬಿಡುವಂಥವು.

14. ದುಶ್ಚಿಕಿತ್ಸ್ಯೋ ಹ್ಯಪಸ್ಮಾರಶ್ಚಿರಕಾರೀ ಕೃತಾಸ್ಪದಃ |
ದೀರ್ಘ ಚಿಕಿತ್ಸೆಯ ಅವಶ್ಯಕತೆ. ತಸ್ಮಾದ್ರಸಾಯನೈರೇನಂ ಪ್ರಾಯಶಃ ಸಮುಪಾಚರೇತ್ ||
(ಚ. 621)

ಅಪಸ್ಮಾರರೋಗವು ಆಸ್ಪದಮಾಡಿಕೊಂಡು ದೀರ್ಘಕಾಲ ಇರುವಂಥಾದ್ದು ಮತ್ತು ಚಿಕಿತ್ಸೆಗೆ ಕಷ್ಟವಾದದ್ದು. ಆದ್ದರಿಂದ ಆ ರೋಗವುಳ್ಳವನಿಗೆ ಹೆಚ್ಚಾಗಿ ರಸಾಯನ ಗುಣದ ಔಷಧಗಳಿಂದ ಚನ್ನಾಗಿ ಉಪಚಾರ ಮಾಡತಕ್ಕದ್ದು.

15. ಮುಕ್ತಂ ಮನೋವಿಕಾರೇಣ ತ್ವಮಿತ್ಥಂ ಕೃತವಾನಿತಿ |
ವೇಗಾನಂತರ ರೋಗಿಯ ಕೂಡೆ ಸಂಭಾಷಣ. ನ ಬ್ರೂಯಾದ್ವಿಷಯೈರಿಷ್ಟೈಃ ಕ್ಲಿಷ್ಟಂ ಚೇತೋಽಸ್ಯ ಬೃಂಹಯೇತ್ ||
(ವಾ. 464)

ಮನೋವಿಕಾರ ನಿಂತ ಮೇಲೆ ರೋಗಿಯ ಕೂಡೆ ನೀನು ಹೀಗೆ ಮಾಡಿದ್ದಿ ಎಂತ ಹೇಳಬಾರದು. ಅವನಿಗೆ ಇಷ್ಟವಾದ ವಿಷಯಗಳನ್ನು ಹೇಳಿ, ಅವನ ಶ್ರಮಪಟ್ಟ ಮನಸ್ಸನ್ನು ಪೋಷಿಸತಕ್ಕದ್ದು (ಬಲಪಡಿಸಬೇಕು).

16. ತೈರಾವೃತಾನಾಂ ಹೃತ್ಸ್ರೋತೋಮನಸಾಂ ಸಮ್ಪ್ರಬೋಧನಮ್ |
ತೀಕ್ಷ್ಣೈರಾದೌ ಭಿಷಕ್ಕುರ್ಯಾತ್ ಕರ್ಮಭಿರ್ವಮನಾದಿಭಿಃ ||
ಚಿಕಿತ್ಸೋಪಕ್ರಮ ವಾತಿಕಂ ವಸ್ತಿಭೂಯಿಷ್ಠೈಃ ಪೈತ್ತಂ ಪ್ರಾಯೋ ವಿರೇಚನೈಃ |
ಶ್ಲೈಷ್ಮಿಕಂ ವಮನಪ್ರಾಯೈರಪಸ್ಮಾರಂ ಸಮಾಚರೇತ್ ||
ಸರ್ವತಃ ಸುವಿಶುದ್ಧಸ್ಯ ಸಮ್ಯಗಾಶ್ವಾಸಿತಸ್ಯ ಚ |
ಅಪಸ್ಮಾರವಿಮೋಕ್ಷಾರ್ಥಂ ಯೋಗಾನ್ ಸಂಶಮನಾನ್ ಶೃಣು ||
(ಚ. 617)

ಅಪಸ್ಮಾರದಲ್ಲಿ ಮುಂದಾಗಿ ತೀಕ್ಷ್ಣವಾದ ವಮನ (ವಾಂತಿಮಾಡಿಸುವದು) ಮುಂತಾದ ಕರ್ಮಗಳಿಂದ ರೋಗಿಯ ಮನಸ್ಸು, ಹೃದಯ ಮತ್ತು ಸ್ರೋತಸ್ಸು (ಬುದ್ಧಿ, ಚಿತ್ತ, ಹೃದಯ ಮತ್ತು ಧಮನೀ ಎಂತ ವಾ. 463), ಇವುಗಳನ್ನು ಮುಚ್ಚಿಕೊಂಡಿರುವ ವಾತಾದಿ ದೋಷಗಳನ್ನು ಪರಿಹರಿಸಿ, ಎಚ್ಚರಿಸತಕ್ಕದ್ದು, (ಸ್ವಸ್ಥಸ್ಥಿತಿಗೆ ತರತಕ್ಕದ್ದು). ವಾತಾಪಸ್ಮಾರಿಯನ್ನು ಹೆಚ್ಚಾಗಿ ವಸ್ತಿಗಳಿಂದ, ಪಿತ್ತಾಪಸ್ಮಾರಿಯನ್ನು ಹೆಚ್ಚಾಗಿ ವಿರೇಚನಗಳಿಂದ, ಕಫಾಪಸ್ಮಾರಿಯನ್ನು ಹೆಚ್ಚಾಗಿ ವಾಂತಿಮಾಡಿಸುವದರಿಂದ, ಚನ್ನಾಗಿ ಉಪಚರಿಸಬೇಕು. ಎಲ್ಲಾ ವಿಧಗಳಿಂದಲೂ ಚೆನ್ನಾಗಿ ಶೋಧನಮಾಡಿಸಿ, ಅದರ ಆಯಾಸ ಪರಿಹಾರವಾದನಂತರ, ಅಪಸ್ಮಾರದ ಬಿಡುಗಡೆಗಾಗಿ ಸಂಶಮನರೂಪವಾದ ಮುಂದೆ ಹೇಳುವ ಯೋಗಗಳನ್ನು ಉಪಯೋಗಿಸತಕ್ಕದ್ದು.

ಹದಿ ೧ನೆಯ ಭಾಗದ II 71-88ನೇ ಸಂಖ್ಯೆಗಳಲ್ಲಿ ಕೊಡಲ್ಪಟ್ಟಿರುವ ಧಮನೀತಿರೆಗಳ ಅಧಿಕಾರದ ವರ್ಣನವನ್ನು ನೋಡಿ. ಈ ರೋಗದಲ್ಲಿ ಉನ್ಮಾದದಂತೆ ವಾಯುಹರವಾಗಿಯೂ, ರಕ್ತಶುದ್ಧಿಕರವಾಗಿಯೂ, ವಾತಾದಿ ದೋಷವಾಹಿ

ಗಳಾದ ಧಮನೀಶಿರೆಗಳನ್ನು ಮತ್ತು ಹೃದಯವನ್ನು ಬಲಪಡಿಸತಕ್ಕವಾಗಿಯೂ, ಇರುವ ಔಷಧಗಳನ್ನು ಹೆಚ್ಚಾಗಿ ಉಪಯೋಗಿಸುವದು ವೈದ್ಯನ ಕರ್ತವ್ಯ ಪಾಶ್ಚಾತ್ಯ ಶಾರೀರಶಾಸ್ತ್ರಜ್ಞರು ನರಗಳು (nerves) ಎನ್ನುವ ನಾಳಗಳು ಈ ಧಮನೀಶಿರೆಗಳಲ್ಲಿ ಮಿಲಿತವಾಗಿ ಇವೆ ಎಂಬದನ್ನು ಹಿಂದೆ ಉಪೋದ್ಘಾತದ ಪರಿಶಿಷ್ಟವಾಗಿ ಪ್ರಕಟಿಸಿರುವ "ನರಮಂಡಲದ ರಚನೆ ಮತ್ತು ಅಧಿಕಾರ" ಎಂಬ ಪ್ರಕರಣದಲ್ಲಿ ವಿವರಿಸಿರುತ್ತದೆ. ಬೋಧೆ(ಎಚ್ಚರಿಕೆ)ಗೆ ಆಯುರ್ವೇದ ಪ್ರಕಾರ ಹೃದಯದ ಮತ್ತು ಮಿದುಳಿನ ಅಧಿಕಾರ ಆವಶ್ಯಕವೆಂಬದು ಚರಕನ ಈ ಕೆಳಗಣ ಶ್ಲೋಕದಿಂದ ತಿಳಿಯಬಹುದು —

ಅಭಿಃ ಕ್ರಿಯಾಭಿಃ ಸಿದ್ಧಾಭಿರ್ಹೃದಯಂ ಸಮ್ಪ್ರಬುಧ್ಯತೇ |
ಸ್ರೋತಾಂಸಿ ಚಾಪಿ ಶುಧ್ಯನ್ತಿ ತತಃ ಸಂಜ್ಞಾಂ ಸ ವಿನ್ದತಿ || (ಪು. 620)

"ಈ (ಹಿಂದೆ ಉಪದೇಶಮಾಡಿದ) ಔಷಧೋಪಚಾರಗಳನ್ನು ನಡಿಸಿದ್ದರಿಂದ ಹೃದಯವು ಸರಿಯಾಗಿ ಎಚ್ಚರವಾಗುತ್ತದೆ ಮತ್ತು ಸ್ರೋತಸ್ಸುಗಳು ಶುದ್ಧವಾಗುತ್ತವೆ ಆದರಿಂದ ರೋಗಿಯು ಸಂಜ್ಞೆಯನ್ನು, ಅಂದರೆ ಸ್ಮೃತಿಯನ್ನು, ಪಡೆಯುತ್ತಾನೆ"

'ಹೃದಯ' ಶಬ್ದಕ್ಕೆ ಹೃತ್ಕೋಶವಲ್ಲದೆ, ಮನಸ್ಸು ಎಂಬ ಅರ್ಥವನ್ನು ಸಹ ಎಲ್ಲಾ ಕೋಶಗಳು ಹೇಳುತ್ತವೆ ಆದರೆ ಮನಸ್ಸೆಂಬದು ಪಾಶ್ಚಾತ್ಯರು ಹೇಳುವಂತೆ ಮಿದುಳನ್ನೇ ಅಧಿಷ್ಠಾನ ಮಾಡಿಕೊಂಡಿರುವಂಥಾದ್ದಲ್ಲ ಆಯುರ್ವೇದಪ್ರಕಾರ ಮನಸ್ಸಿಗೆ ಅಧಿಷ್ಠಾನ ಹೃದಯ ಈ ವಿಷಯವನ್ನು ಸಹ ನರಮಂಡಲಕ್ಕೆ ಸಂಬಂಧಪಟ್ಟ ಪ್ರಕರಣದಲ್ಲಿ ವಿಮರ್ಶಿಸಿಯದೆ ಸ್ರೋತಸ್ಸುಗಳ ಶುದ್ಧಿಯಲ್ಲಿ ಹೃದಯದಿಂದ ಮಿದುಳು ಮುಂತಾದ ಅಂಗವಿಶೇಷಗಳಿಗೆ ಹೋಗುವ ಧಮನಿಗಳೊಂದಿಗೆ ಕಲಿತಿರುವ ನರಗಳ ಮತ್ತು ನರಮಂಡಲದ ಪ್ರಧಾನಸ್ಥಾನಗಳ ಶುದ್ಧಿಯು ಅಡಗಿರುತ್ತದೆ. ತಲೆಯ ಹಿಂಭಾಗದಲ್ಲಿರುವ ನರಗಡ್ಡೆ, ಪ್ರಧಾನನರದ ಮೇಲಿನ ಭಾಗ, ಮತ್ತು ಅವುಗಳಿಗೆ ಸಂಬಂಧಪಟ್ಟ ದ್ವಿವಿಧನರಗಳಲ್ಲಿ ದೋಷವುಂಟಾಗಿ, ಅಪಸ್ಮಾರ ಸಂಭವಿಸುವದು ಎಂಬದು ಪಾಶ್ಚಾತ್ಯರ ಮತ

17. ತಸ್ಯ ಕಾರ್ಯೋ ವಿಧಿಃ ಸರ್ವೋ ಯ ಉನ್ಮಾದೇಷು ವಕ್ಷ್ಯತೇ |
ಪುರಾಣಸರ್ಪಿಷಃ ಪಾನಮಭ್ಯಂಗಶ್ಚೈವ ಪೂಜಿತಃ ||
ಉಪಯೋಗೋ ಗ್ರಹೋಕ್ತಾನಾಂ ಯೋಗಾನಾನ್ತು ವಿಶೇಷತಃ ||
(ಸು. 894)

ಉನ್ಮಾದೋಕ್ತ ಚಿಕಿತ್ಸೆಯ ಉಪಯೋಗ

ಉನ್ಮಾದಗಳಲ್ಲಿ ಹೇಳಲ್ಪಟ್ಟ ವಿಧಿ ಸರ್ವವೂ ಅಪಸ್ಮಾರದಲ್ಲಿಯೂ ಮಾಡಲ್ಪಡತಕ್ಕಂಥಾದ್ದು; ಹಳೇ ತುಪ್ಪದ ಪಾನ, ಅಭ್ಯಂಗ ಮತ್ತು, ವಿಶೇಷವಾಗಿ, ಗ್ರಹೋನ್ಮಾದಗಳಿಗೆ ಹೇಳಲ್ಪಟ್ಟ ಯೋಗಗಳ ಉಪಯೋಗ ಈ ರೋಗದಲ್ಲಿಯೂ ಪ್ರಶಸ್ತವಾಗಿರುತ್ತವೆ.

ಷರಾ ಉನ್ಮಾದರೋಗ ಸಹ ನರಮಂಡಲಕ್ಕೆ ಸಂಬಂಧಪಟ್ಟ ವ್ಯಾಧಿಗಳೊಳಗೆ ಒಂದು ಎಂತ ಮೊದಲೇ ಸೂಚಿಸಿಯದೆಯಷ್ಟೆ

18. ಗೋಶಕೃದ್ರಸದಧ್ಯಮ್ಲಕ್ಷೀರಮೂತ್ರೈಃ ಸಮೈರ್ಘೃತಮ್ |
ಸಿದ್ಧಂ ಪಿಬೇದಪಸ್ಮಾರಕಾಮಲಾಜ್ವರನಾಶನಮ್ ||
(ಚ. 618)

ಪಂಚಗವ್ಯ ಘೃತ

ದನದ ಸೆಗಣಿಯ ರಸ, ದನದ ಹುಳಿ ಮೊಸರು, ದನದ ಹಾಲು, ದನದ ತುಪ್ಪ ಮತ್ತು ದನದ ಮೂತ್ರ, ಇವುಗಳನ್ನು ಸಮಪಾಲು ಕೂಡಿಸಿ, ಕಾಯಿಸಿ, ಶೋಧಿಸಿಟ್ಟುಕೊಂಡ ಘೃತವನ್ನು ಸೇವಿಸುವದರಿಂದ ಅಪಸ್ಮಾರ, ಕಾಮಿಲೆ ಮತ್ತು ಜ್ವರ ನಾಶವಾಗುವವು.

19. ಮಧುಕಾದ್ವಿಪಲೇ ಕಲ್ಕೇ ದ್ರೋಣೇ ಚಾಮಲಕೀರಸಾತ್ |
ತದ್ವತ್ಸಿದ್ಧೋ ಘೃತಪ್ರಸ್ಥಃ ಪಿತ್ತಾಪಸ್ಮಾರಭೇಷಜಮ್ ||
(ಚ. 619)

ಆಮಲಕೀ ಘೃತ

ತುಪ್ಪ ೧ ಪ್ರಸ್ಥ, ನೆಲ್ಲಿರಸ ೧೬ ಪ್ರಸ್ಥ, ಜ್ಯೇಷ್ಠಮಧುವಿನ ಚೂರ್ಣ ೨ ಪಲ, ಇವುಗಳಿಂದ ತಯಾರಿಸಲ್ಪಟ್ಟ ಘೃತವು ಹಾಗೆಯೇ ಪಿತ್ತಾಪಸ್ಮಾರಕ್ಕೆ ಔಷಧವಾಗಿರುತ್ತದೆ.

20. ಕೂಷ್ಮಾಂಡ ಘೃತ.

ಕೂಷ್ಮಾಂಡಸ್ವರಸೇ ಸರ್ಪಿರಷ್ಟಾದಶಗುಣೇ ಶೃತಮ್ |
ಯಷ್ಟೀಕಲ್ಕಮಪಸ್ಮಾರಹರಂ ಧೀವಾಕ್ಸ್ವರಪ್ರದಮ್ ||

(ವಾ. 464)

ದನದ ತುಪ್ಪ ೧ ಪ್ರಸ್ಥ, (ಹಳೇ) ಬೂದಿಕುಂಬಳಕಾಯಿಯ ರಸ ೧೮ ಪ್ರಸ್ಥ, ಕಲ್ಕವಾಗಿ ಜ್ಯೇಷ್ಠಮಧುವಿನ ಚೂರ್ಣ ೨ ಪಲ, ಇವುಗಳಿಂದ ಸಾಧಿಸಲ್ಪಟ್ಟ ಘೃತವು ಅಪಸ್ಮಾರವನ್ನು ಪರಿಹರಿಸುವದು ಮತ್ತು ಬುದ್ಧಿಯನ್ನೂ, ಮಾತನ್ನೂ, ಸ್ವರವನ್ನೂ ಕೊಡುವದು (ಹೆಚ್ಚಿಸುವದು).

21. ಕೆಲವು ಸುಲಭ ಔಷಧಯೋಗಗಳು.

ಶೀಲಯೇತ್ತೈಲಲಶುನಂ ಪಯಸಾ ವಾ ಶತಾವರೀಮ್ |
ಬ್ರಾಹ್ಮೀರಸಂ ಕುಷ್ಠರಸಂ ವಚಾಂ ವಾ ಮಧುಸಂಯುತಾಮ್ ||

(ವಾ. 464)

ಬೆಳ್ಳುಳ್ಳಿಯನ್ನು ಎಳ್ಳೆಣ್ಣೆಯಲ್ಲಿ ಅಥವಾ ಶತಾವರೀ ಬೇರನ್ನು ಹಾಲಿನಲ್ಲಿ ಅರೆದು ತಿನ್ನುತ್ತಾ ಬರುವದು; ಅಥವಾ ಒಂದೆಲಗದ ರಸವನ್ನಾಗಲಿ, ಚಂಗಲಕೋಷ್ಠದ ಕಷಾಯವನ್ನಾಗಲಿ, ಬಜೆಯ ಚೂರ್ಣವನ್ನಾಗಲಿ, ಜೇನು ಕೂಡಿಸಿಕೊಂಡು, ಸೇವಿಸುತ್ತಾ ಬರುವದು (ಇದರಿಂದ ಅಪಸ್ಮಾರ ಪರಿಹಾರವಾಗುತ್ತದೆ).

ಪರಾ "ಕುಷ್ಠರಸಂ" ಎಂಬಲ್ಲಿ "ಕುಷ್ಠಯುತಂ" ಎಂತ ಪಾಠಾಂತರ ಅದರ ಪ್ರಕಾರ ಒಂದೆಲಗನ ರಸದೊಂದಿಗೆ ಚಂಗಲಕೋಷ್ಠದ ಪುಡಿಯನ್ನು ಕೂಡಿಸಿಕೊಳ್ಳಬೇಕೆಂಬ ಅರ್ಥವಾಗುತ್ತದೆ ಹಾಗೂ ಮಾಡಬಹುದು ಆದರೆ ಒಂದೆಲಗನ ರಸವನ್ನು ಜೇನು ಮಾತ್ರ ಕೂಡಿಸಿಕೊಂಡು ಪಾನಮಾಡುವದರಿಂದ ಸರ್ವ ಅಪಸ್ಮಾರ ಪರಿಹಾರವಾಗುತ್ತದೆಂತ ಚ ಸಾ. ಸಂ ಹೇಳುತ್ತದೆ ಹಾಗೆಯೇ ಬಜೆಚೂರ್ಣವನ್ನು ಸೇವಿಸುತ್ತಾ ಹಾಲನ್ನ ಪಥ್ಯದಲ್ಲಿರಲು ಮಹಾ ಘೋರವಾದ ಮತ್ತು ದೀರ್ಘಕಾಲದ ಅಪಸ್ಮಾರ ಸಹ ನಿಶ್ಚಯವಾಗಿ ಜಯಿಸಲ್ಪಡುತ್ತದೆಂತ ಚ ಸಾ ಸಂ (ಪು 312). ಮೇಲಿನ ಮೂಲವಚನವು ಚರಕನದು (ಪ 621) 'ಶೀಲಯೇತ್' ಎಂಬಲ್ಲಿ 'ಪ್ರಯುಂಜ್ಯಾತ್' ಎಂತ ಇರುವದಷ್ಟೇ ಭೇದ

22. ಅಭ್ಯಂಗಕ್ಕೆ ಕಟಭೀತೈಲ

ಕಟಭೀನಿಮ್ಬಕಟ್ವಂಗಮಧುಶಿಗ್ರುತ್ವಚಾಂ ರಸೇ |
ಸಿದ್ಧಂ ಮೂತ್ರಸಮಂ ತೈಲಮಭ್ಯಂಗಾರ್ಥೇ ಪ್ರಶಸ್ಯತೇ ||

(ಚ. 619)

ದಡ್ಡಾಲ (ದದ್ದಾಲ) ಮರನ ಕೆತ್ತೆ, ಕಹಿಬೇವಿನ ಕೆತ್ತೆ, ಆನೆಮುಂಗುಮರನ ಕೆತ್ತೆ, ನುಗ್ಗೆಕೆತೆ, ಇವುಗಳ ಕಷಾಯದಲ್ಲಿ ಎಳ್ಳೆಣ್ಣೆಯನ್ನು, (ಎಣ್ಣೆಗೆ) ಸಮಭಾಗ ಗೋಮೂತ್ರ ಕೂಡಿಸಿಕೊಂಡು, ಪಾಕಮಾಡಿ ಶೋಧಿಸಿಟ್ಟುಕೊಂಡ ತೈಲವು (ಅಪಸ್ಮಾರದಲ್ಲಿ) ಅಭ್ಯಂಗಕ್ಕೆ ಪ್ರಶಸ್ತವಾಗಿರುತ್ತದೆ.

ಪರಾ ಇದನ್ನು ಕಲ್ಕವಿಲ್ಲದೇನೇ ಕಾಯಿಸುವ ಪದ್ಧತಿಯುಂಟೆಂತ ಕಾಣುತ್ತದೆ ಆದರೆ ತೈಲ ಪ್ರಸ್ಥ ೧ಕ್ಕೆ ನಾಲ್ಕು ಬಗೆ ಕೆತ್ತೆಗಳನ್ನೂ ನಾಲ್ಕು ಪಲಪ್ರಕಾರ ತೆಗೆದುಕೊಂಡು, ಮೂರು ಮೂರು ಪಲಗಳನ್ನು ತೈಲದ ಮೂರು ಪಾಲು ಕಷಾಯಮಾಡುವದಕ್ಕೆ ಉಪಯೋಗಿಸಿ, ಉಳಿದ ಒಂದೊಂದು ಪಲವನ್ನು ನುಣ್ಣಗೆ ಚೂರ್ಣಿಸಿ ಕಲ್ಕವಾಗಿ ಉಪಯೋಗಿಸುವದು ಒಳ್ಳೇದು 'ಕಟಭೀ' ಎಂಬದು ಶಂಖಪುಷ್ಪದ ಬೇರಿಗೂ ಹೆಸರಾಗಿರುತ್ತದೆ ಆದರೆ ಅದರ ಬೇರಿನ ಸಿಪ್ಪೆ ೪ ಪಲವಾಗುವಷ್ಟು ಒದಗಿಸುವದು ಪ್ರಯಾಸ, ಅದಲ್ಲದೆ ಅದನ್ನು ಹೊರಗಿನ ಉಪಯೋಗಕ್ಕೆ ಹೇಳಿದ್ದು ಬೇರೆ ಎಲ್ಲಿಯೂ ಕಾಣುವದಿಲ್ಲ

23. ಸುರದ್ರುಮವಚಾಕುಷ್ಠಸಿದ್ಧಾರ್ಥವ್ಯೋಷಹಿಂಗುಭಿಃ |
ಸಿದ್ಧಾರ್ಥಕ ಘೃತ ಮಂಜಿಷ್ಠಾರಜನೀಯುಗ್ಮಸಮಂಗಾತ್ರಿಫಲಾಂಬುದೈಃ ||
ಕರಂಜಬೀಜಶೈರೀಷಗಿರಿಕರ್ಣಾಹುತಾಶನೈಃ |
ಸಿದ್ಧಂ ಸಿದ್ಧಾರ್ಥಕಂ ನಾಮ ಸರ್ಪಿರ್ಮೂತ್ರಚತುರ್ಗುಣಮ್ ||
ಕೃಮಿಕುಷ್ಠಗರಶ್ವಾಸಬಲಾಸವಿಷಮಜ್ವರಾನ್ |
ಸರ್ವಭೂತಗ್ರಹೋನ್ಮಾದಾನಪಸ್ಮಾರಾಂಶ್ಚ ನಾಶಯೇತ್ || (ಸು. 895)

ತುಪ್ಪದೇವದಾರ, ಬಜೆ, ಚಂಗಲಕೋಷ್ಠ, ಬಿಳೇಸಾಸಿವೆ, ತ್ರಿಕಟು, ಹಿಂಗು, ಮಂಜಿಷ್ಠ, ಅರಸಿನ, ಮರದರಸಿನ, ಕಲ್ಲಂಗಡಲೇ ಬೇರು, ತ್ರಿಫಲೆ, ಭದ್ರಮುಷ್ಟಿ, ಹೊಂಗೆ (ನಾಯಿಹಲ್ಲೆ-ಕೊರಂಗು) ಬೀಜ, ಬಾಗೆಮರನ ಬೀಜ, ಶಂಖಪುಷ್ಪದ ಬೇರು, ಚಿತ್ರಮೂಲ, ಇವುಗಳ ಕಲ್ಕದಿಂದ ತುಪ್ಪವನ್ನು ಅದರ ನಾಲ್ಕು ಪಾಲು ಗೋಮೂತ್ರದಲ್ಲಿ ಕಾಯಿಸಿ ತಯಾರಿಸಲ್ಪಟ್ಟ ಘೃತಕ್ಕೆ ಸಿದ್ಧಾರ್ಥಕ ಎಂತ ಹೆಸರು. ಈ ಘೃತವು ಕ್ರಿಮಿರೋಗ, ಕುಷ್ಠ, ವಿಷ, ಉಬ್ಬಸ, ಕಫರೋಗ ಮತ್ತು ವಿಷಮಜ್ವರಗಳನ್ನೂ, ಸರ್ವಭೂತೋನ್ಮಾದಗಳನ್ನೂ, ಗ್ರಹೋನ್ಮಾದಗಳನ್ನೂ, ಅಪಸ್ಮಾರಗಳನ್ನೂ ನಾಶಮಾಡುವದು.

ಷರಾ 'ಸಮಂಗಾ' ಎಂದರೆ ನಾಚಿಕೆಸೊಪ್ಪಿನ ಗಿಡ ಎಂತ ನಿ ಸಂ ವ್ಯಾ (ಪು 694)

24. ತ್ರಿಕಟುತ್ರಿಫಲಾದಾರುಹಿಂಗುಸೌವರ್ಚಲಂ ವಚಾ |
ತ್ರಿಕಟ್ವಾದಿ ಕಷಾಯ ಕಷಾಯಂ ಕ್ಷೌದ್ರಸಂಯುಕ್ತಮಪಸ್ಮಾರವಿನಾಶನಮ್ ||
(ವೈ. ಸಾ. ಸಂ. 537)

ತ್ರಿಕಟು, ತ್ರಿಫಲೆ, ತುಪ್ಪದೇವದಾರ, ಹಿಂಗು, ಸೌವರ್ಚಲ (ಕರಿಉಪ್ಪು), ಬಜೆ, ಇವುಗಳ ಕಷಾಯವನ್ನು, ಜೇನು ಕೂಡಿಸಿಕೊಂಡು, ಕುಡಿಯುವದರಿಂದ ಅಪಸ್ಮಾರ ನಾಶವಾಗುತ್ತದೆ.

25. ಶಕ್ರರಸೋನವಚಾಮರುಗ್ಯಷ್ಟಿಭಿರಪಿ ಚಾಂಜನಂ ನಸ್ಯಮ್ |
ನಸ್ಯಗಳು ಉನ್ಮಾದಾಪಸ್ಮಾರೇ ಶಸ್ತಮಜಾಮೂತ್ರಪಿಷ್ಟಾಭಿಃ ||
(ವೈ. ಸಾ. ಸಂ. 541)

ಕೊಡಸಿಗನ ಕೆತ್ತೆ, ಬೆಳ್ಳುಳ್ಳಿ, ಬಜೆ, ಚಂಗಲಕೋಷ್ಠ, ಜ್ಯೇಷ್ಠಮಧು, ಇವುಗಳನ್ನು ಆಡಿನ ಮೂತ್ರದಲ್ಲಿ ನುಣ್ಣಗಾಗಿ ಅರೆದು, ಅಂಜನವನ್ನೂ ನಸ್ಯವನ್ನೂ ಮಾಡಿಸುವದು ಉನ್ಮಾದದಲ್ಲಿಯೂ ಅಪಸ್ಮಾರದಲ್ಲಿಯೂ ಪ್ರಶಸ್ತ.

ಯಷ್ಟೀಹಿಂಗುವಚಾದಾರುಶಿರೀಷಲಶುನಾಮಯೈಃ |
ಸಾಜಮೂತ್ರೈರಪಸ್ಮಾರೇ ಸೋನ್ಮಾದೇ ನಾವನಾಂಜನೇ ||
(ಚಿ. ಸಾ. ಸಂ. 311)

ಜ್ಯೇಷ್ಠಮಧು, ಹಿಂಗು, ಬಜೆ, ದೇವದಾರ, ಬಾಗೆಮರನ ಬೀಜ, ಬೆಳ್ಳುಳ್ಳಿ, ಚಂಗಲಕೋಷ್ಠ, ಇವುಗಳನ್ನು ಆಡಿನ ಮೂತ್ರದಲ್ಲಿ ನುಣ್ಣಗೆ ಅರೆದು ಅಪಸ್ಮಾರದಲ್ಲಿಯೂ, ಉನ್ಮಾದದಲ್ಲಿಯೂ ನಸ್ಯವನ್ನೂ, ಅಂಜನವನ್ನೂ ಮಾಡಬೇಕು.

26. ಗೋಮೂತ್ರಸಿದ್ಧಾರ್ಥಕಶಿಗ್ರುಪರ್ಣೈ
ಲೇಪಧೂಪಾದಿ ಯೋಗಗಳು ರುದ್ವರ್ತನಂ ತೈರಥವಾ ಪ್ರಲೇಪಃ |
ಪೂತಿಶ್ಚ ಗೋಮತ್ಸ್ಯಕೃತೋಽತ್ರಧೂಮೋ
ನಸ್ಯಂ ಚ ತೀಕ್ಷ್ಣೈರವಬೋಧನಾರ್ಥಮ್ ||

(ಚಿ. ಸಾ. ಸಂ. 312)

ಬಿಳೀ ಸಾಸಿವೆ ಮತ್ತು ನುಗ್ಗೆ ಎಲೆಗಳನ್ನು ಗೋಮೂತ್ರದಲ್ಲಿ ಅರೆದು ತಿಕ್ಕುವದು ಅಥವಾ ಲೇಪಿಸುವದು, ಗೋಮತ್ಸ್ಯ ಎಂಬ ಮೀನಿನ ದುರ್ವಾಸನೆಯುಳ್ಳ ಹೊಗೆಯನ್ನು ಕೊಡುವದು, ತೀಕ್ಷ್ಣವಾದ ದ್ರವ್ಯಗಳ ನಸ್ಯವನ್ನು ಮಾಡಿಸುವದು, ಈ ಉಪಚಾರಗಳನ್ನು (ಅಪಸ್ಮಾರ ರೋಗಿಗೆ) ಎಚ್ಚರ ಉಂಟಾಗುವದಕ್ಕಾಗಿ ಮಾಡಿಸಬೇಕು.

ಪರಾ ರಕ್ತನಾಳಗಳ ಸಂಕೋಚನ ಮುಂತಾದ ಹೇತುಗಳಿಂದ ಸಾಕಷ್ಟು ರಕ್ತವು ಮಿದುಳಿಗೆ ಹೋಗದೆ, ಮೂರ್ಛೆಯುಂಟಾಗುವದಾದ್ದರಿಂದ ರಕ್ತವು ತಲೆಗೆ ಹರಿದುಬರುವ ಹಾಗೆ ಮಾಡುವದಕ್ಕೆ ಈ ನಸ್ಯ ಧೂಪಾದಿಗಳು ವಿಹಿತವಾದವು ಕಫವಾತಹರವಾದ ಉದ್ವರ್ತನ-ಲೇಪನಗಳನ್ನು ಹಣೆಗೂ, ನೆತ್ತಿಗೂ, ಕುತ್ತಿಗೆಯ ಹಿಂಬದಿಯಿರುವ ಪ್ರಧಾನನರದ ಬುಡಕ್ಕೂ ಉಪಯೋಗಿಸಬಹುದು

27. ಕೂಷ್ಮಾಂಡಕಫಲೋತ್ಥೇನ ರಸೇನ ಪರಿಪೇಷಿತಮ್ |
ಯಷ್ಟೀಕಲ್ಕ ಅಪಸ್ಮಾರವಿನಾಶಾಯ ಯಷ್ಟ್ಯಾಹ್ವಂ ಸ ಪಿಬೇತ್ ತ್ರ್ಯಹಮ್ ||

(ಚಿ. ಸಾ. ಸಂ. 312)

(ಹಳೀ) ಬೂದಿಕುಂಬಳಕಾಯಿಯ ರಸದಿಂದ ಜ್ಯೇಷ್ಠಮಧುವಿನ ಚೂರ್ಣವನ್ನು ಅರೆದು, ಮೂರು ದಿನ ಕುಡಿಯುವದರಿಂದ ಅಪಸ್ಮಾರ ನಾಶವಾಗುತ್ತದೆ.

ಪರಾ ಹಪ್ತೆಯಲ್ಲಿ ಮೂರು ದಿನ ಪ್ರಕಾರ ಈ ಕಲ್ಕವನ್ನು ದೀರ್ಘಕಾಲ ಸೇವಿಸುತ್ತಾ ಬರುವದರಿಂದ ನರದೋಷಗಳು ಪರಿಹಾರವಾದಾವು

28. ಹೃತ್ಕಮ್ಪೋಽಕ್ಷಿರುಜಾ ಯಸ್ಯ ಸ್ವೇದೋ ಹಸ್ತಾದಿಶೀತತಾ |
ಕಲ್ಯಾಣಘೃತದ ಉಪಯೋಗ. ದಶಮೂಲೀಜಲಂ ತಸ್ಯ ಕಲ್ಯಾಣಾಜ್ಯಂ ಚ ಯೋಜಯೇತ್ ||

(ಚಿ. ಸಾ. ಸಂ. 313)

ಎದೆ ನಡುಗುವಿಕೆ, ಕಣ್ಣುನೋವು, ಬೆವರು, ಹಸ್ತಾದಿಗಳು ಶೀತವಾಗುವದು, ಈ ಲಕ್ಷಣಗಳು ಯಾರಲ್ಲಿ ಕಾಣುತ್ತವೋ, ಅಂಥವನಿಗೆ ದಶಮೂಲಗಳ ಕಷಾಯವನ್ನೂ ಕಲ್ಯಾಣಘೃತವನ್ನೂ ಕುಡಿಸಬೇಕು.

ಪರಾ ಕಲ್ಯಾಣಘೃತದ ಯೋಗ ಹಿಂದೆ ಉನ್ಮಾದಚಿಕಿತ್ಸೆಯಲ್ಲಿ ಕೊಡಲ್ಪಟ್ಟದೆ

29. ವಚಾಶಮ್ಯಾಕಕೈರಣ್ಡವಯಸ್ಥಾಹಿಂಗುಚೋರಕೈಃ |
ವಚಾದಿಘೃತ ಸಿದ್ಧಂ ಪಲಂಕಷಾಯುಕ್ತೈರ್ವಾತಶ್ಲೇಷ್ಮಾತ್ಮಕೇ ಘೃತಮ್ ||

(ಚಿ. ಸಾ. ಸಂ. 315)

ಬಜೆ, ಕಕ್ಕೆಮರನ (ಕೊಂದೆ) ಬೇರು, ಹರಳುಬೇರು, ಅಮೃತಬಳ್ಳಿ, ಹಿಂಗು, ಚೋರಕ (ಕಾಟ್ಟುಕಚ್ಚೋಲಾ), ಗುಗ್ಗುಳ, ಇವುಗಳ ಕಲ್ಕದಿಂದ (ನಾಲ್ಕುಪಾಲು ನೀರಿನಲ್ಲಿ) ತಯಾರಿಸಲ್ಪಟ್ಟ ತುಪ್ಪವು ಕಫವಾತಾತ್ಮಿಕವಾದ ಅಪಸ್ಮಾರದಲ್ಲಿ (ಹಿತವಾಗುತ್ತದೆ).

ಪರಾ ಚರಕನ ಯೋಗದಲ್ಲಿ (ಪು 618) ಪೂರ್ವಾರ್ಧ —

'ವಚಾಸಮ್ಪಾಕಕೈಟರ್ಯವಯಃಸ್ಥಾಹಿಂಗುರೋಚಕೈಃ' ||

ಎಂತ ಉಂಟು. 'ಸಮ್ಪಾಕ' ಎಂದರೂ 'ಶಮ್ಯಾಕ' ಎಂದರೂ ಒಂದೇ. ಹಾಗೆಯೇ 'ರೋಚಕ' ಎಂದರೂ 'ಚೋರಕ' ಎಂದರೂ ಒಂದೇ 'ಕೈಟರ್ಯ' ಎಂದರೆ ಪರ್ವತದ ಬೇವು (ಹುಚ್ಚು-ದೊಡ್ಡ-ಅರೆಬೇವು) ಎಂತ ಆ ದೀ. (ಪು. 467) ಅದು ಕಟ್ಫಲ (ಕಿರುತಿವನಿ, ಕರಿಂಕುವುಳ್)ಕ್ಕೂ ಬರುತ್ತದೆ ಕಟ್ಫಲದಲ್ಲಿ ವಾತಕಫಹರ ಗುಣ ಉಂಟು.

30. ತೈಲಪ್ರಸ್ಥಂ ಘೃತಪ್ರಸ್ಥಂ ಜೀವನೀಯೈಃ ಪಲೋನ್ಮಿತೈಃ ।
ಜೀವನೀಯ ಯಮಕ — ಕ್ಷೀರದ್ರೋಣೇ ಪಚೇತ್ಸಿದ್ಧಮಪಸ್ಮಾರವಿನಾಶನಮ್ ॥ (ಚ. 618)

ಎಳ್ಳೆಣ್ಣೆ ೧ ಪ್ರಸ್ಥ, ದನದ ತುಪ್ಪ ೧ ಪ್ರಸ್ಥ, ದನದ ಹಾಲು ೧೬ ಪ್ರಸ್ಥ, ಜೀವನೀಯ ಗಣದ ೧೨ ಬಗೆ ಔಷಧಗಳು ಒಂದೊಂದು ಪಲ ಪ್ರಕಾರ ತೆಗೆದುಕೊಂಡು ಮಾಡಿದ ಚೂರ್ಣದ ಕಲ್ಕ, ಇವುಗಳನ್ನು ಒಟ್ಟು ಕೂಡಿಸಿ ಕಾಯಿಸಿ, ಪಾಕದಲ್ಲಿ ಇಳಿಸಿ, ಶೋಧಿಸಿಟ್ಟುಕೊಂಡ ತುಪ್ಪದ ಸೇವನದಿಂದ ಅಪಸ್ಮಾರ ನಾಶವಾಗುತ್ತದೆ.

ಷರಾ ಅಷ್ಟವರ್ಗ, ಜ್ಯೇಷ್ಠಮಧು, ಜೀವಂತೀ, ಕಾಡುಹೆಸರು, ಕಾಡುಉದ್ದು, ಇವು ೧೨ ಸೇರಿದ್ದು ಜೀವನೀಯಗಣ ಅಷ್ಟವರ್ಗವೆಂದರೆ ಜೀವಕ, ಋಷಭಕ, ಮೇದೆ, ಮಹಾಮೇದೆ, ಕಾಕೋಲೀ, ಕ್ಷೀರಕಾಕೋಲೀ, ಋದ್ಧಿ, ವೃದ್ಧಿ, ಇವು ೮ ಸೇರಿದ್ದು (ಭಾ. ಪ್ರ 84-101) ಜೀವನೀಯಗಣದ ಔಷಧಗಳ ಒಟ್ಟು ೧೨ ಪಲಗಳಲ್ಲಿ ೪ ಪಲದ ಅಂಶ ಮಾತ್ರ ಕಲ್ಕಕ್ಕೆ ಇಟ್ಟು, ಮಿಕ್ಕ ೮ ಪಲಗಳ ಕಷಾಯವನ್ನು ಮಾಡಿ ಸೇರಿಸುವದು ಪ್ರಶಸ್ತ (೧ನೇ ಭಾಗದ XX—೩೪ನೆಯ ಅಡಿಷರಾ ನೋಡಿ) ಘೃತತೈಲಗಳ ಪ್ರಸ್ಥಕ್ಕೆ ೨೦ ಪಲ ತೆಗೆದುಕೊಳ್ಳುವದು

31. ತ್ವಗಕ್ಷಿರೋಗಾಪಸ್ಮಾರರಾಜಯಕ್ಷ್ಮಮಸೂರಿಕಾಃ ।
ಅಪಸ್ಮಾರವು ಸಾಂಕ್ರಾಮಿಕ — ದರ್ಶನಾತ್ಸ್ಪರ್ಶನಾದ್ದಾನಾತ್ಸಂಕ್ರಾಮನ್ತಿ ನರಾನ್ನರಮ್ ॥
(ವೈ. ಸಾ. ಸಂ. 377)

ಚರ್ಮರೋಗಗಳು, ನೇತ್ರರೋಗಗಳು, ಅಪಸ್ಮಾರ, ರಾಜಯಕ್ಷ್ಮ, ಮತ್ತು ಮಸೂರಿಕೆ (ಮೈಲೆಗಜ್ಜಿ), ಈ ರೋಗವುಳ್ಳವರನ್ನು ಮುಟ್ಟುವದರಿಂದಲೂ, (ರೋಗದ ವೇಗ ಉಂಟಾಗಿರುವಾಗ್ಗೆ) ನೋಡುವದರಿಂದಲೂ, ಅಂಥವರಿಂದ ದಾನಪಡಕೊಳ್ಳುವದರಿಂದಲೂ ಅವು ಒಬ್ಬರಿಂದೊಬ್ಬರಿಗೆ ಅಂಟುತ್ತವೆ (ಸೋಂಕುತ್ತವೆ).

ಷರಾ ೧ನೇ ಭಾಗದ VI-21 ನೋಡಿ ಅಲ್ಲಿ ಹೇಳಲ್ಪಟ್ಟ ಇತರ ಹೇತುಗಳು ಅಪಸ್ಮಾರಾದಿಗಳಿಗೆ ಸಹ ಒಪ್ಪುವಂಥವು ಎಂತ ತಿಳಿಯಬೇಕು

32. ಮಲಿನಾಹಾರಶೀಲಸ್ಯ ವೇಗಾನ್ ಪ್ರಾಪ್ತಾನ್ ನಿಗೃಹ್ಣತಃ ।
ಶೀತೋಷ್ಣಸ್ನಿಗ್ಧರೂಕ್ಷಾದ್ಯೈರ್ಹೇತುಭಿಶ್ಚಾತಿಸೇವಿತೈಃ ॥
ಅತತ್ವಾಭಿನಿವೇಶದ ನಿದಾನ, ಸಂಪ್ರಾಪ್ತಿ ಮತ್ತು ಲಕ್ಷಣ — ಹೃದಯಂ ಸಮುಪಾಶ್ರಿತ್ಯ ಮನೋಬುದ್ಧಿವಹಾಃ ಶಿರಾಃ ।
ದೋಷಾಃ ಸಂದೂಷ್ಯ ತಿಷ್ಠನ್ತಿ ರಜೋಮೋಹಾವೃತಾತ್ಮನಃ ॥
ರಜಸ್ತಮೋಭ್ಯಾಂ ವೃದ್ಧಾಭ್ಯಾಂ ಬುದ್ಧೌ ಮನಸಿ ಚಾವೃತೇ ।
ಹೃದಯೇ ವ್ಯಾಕುಲೇ ದೋಷೈರಥ ಮೂಢೋಽಲ್ಪಚೇತನಃ ॥
ಕರೋತಿ ವಿಷಮಾಂ ಬುದ್ಧಿಂ ನಿತ್ಯಾನಿತ್ಯೇ ಹಿತಾಹಿತೇ ।
ಅತತ್ವಾಭಿನಿವೇಶಂ ತಮಾಹುರಾಪ್ತಾ ಮಹಾಗದಮ್ ॥ (ಚ. 621)

ರಜೋಗುಣ ತಮೋಗುಣಗಳಿಂದ ಮುಚ್ಚಲ್ಪಟ್ಟ ಆತ್ಮವುಳ್ಳವನೂ, ಮಲಿನವಾದ ಆಹಾರಗಳನ್ನು ಸೇವಿಸುವ ಶೀಲವುಳ್ಳವನೂ, (ಮಲಮೂತ್ರಾದಿಗಳ) ವೇಗಗಳು ಸಂಭವಿಸಿ

ದಾಗ್ಗೆ ಅವುಗಳನ್ನು ತಡೆಯುತ್ತಿರುವವನೂ, ಆಗಿರುವ ಮನುಷ್ಯನಲ್ಲಿ ಅತಿಯಾಗಿ ಸೇವಿಸಲ್ಪಟ್ಟ ಶೀತ-ಉಷ್ಣ-ಸ್ನಿಗ್ಧ-ರೂಕ್ಷ-ಮೊದಲಾದ ಹೇತುಗಳಿಂದ (ವಾತಾದಿ) ದೋಷಗಳು ಹೃದಯವನ್ನಾಶ್ರಯಿಸಿಕೊಂಡು ಮನೋಬುದ್ಧಿಗಳಿಗೆ ಆಧಾರವಾದ ಶಿರೆಗಳನ್ನು (ನರಗಳನ್ನು) ಚನ್ನಾಗಿ ಕೆಡಿಸಿ ನಿಲ್ಲುತ್ತವೆ. ಅದರಿಂದ ವೃದ್ಧಿಗೊಂಡ ರಜೋಗುಣ-ತಮೋಗುಣಗಳಿಂದ ಬುದ್ಧಿಯೂ ಮನಸ್ಸೂ ಮುಚ್ಚಲ್ಪಟ್ಟು, ದೋಷಗಳ ದೆಸೆಯಿಂದ ಹೃದಯವು ಕಳವಳ ಪಟ್ಟಾಗ್ಗೆ, ಆ ಮನುಷ್ಯನು ಮೂಢನೂ ಅಲ್ಪ ಸತ್ವವುಳ್ಳವನೂ ಆಗಿ, ನಿತ್ಯ ಯಾವದು ಅನಿತ್ಯ ಯಾವದು ಮತ್ತು ಹಿತ ಯಾವದು ಅಹಿತ ಯಾವದು ಎಂಬ ವಿಚಾರದಲ್ಲಿ ಅವನಿಗೆ ವಿಷಮವಾದ ಬುದ್ಧಿ ಉಂಟಾಗುತ್ತದೆ. ಆ ಮಹಾವ್ಯಾಧಿಗೆ ಬಲ್ಲಂಥ ಮಹಾತ್ಮರು ಅತತ್ವಾಭಿನಿವೇಶ ಎನ್ನುತ್ತಾರ.

**ಷರಾ** ಈ ವ್ಯಾಧಿಗೆ ಸಂಬಂಧಪಟ್ಟ ವಚನಗಳು ಋಷಿಪ್ರಣೀತವಲ್ಲ ಎಂತ ವೃದ್ಧರು ಹೇಳಿದ್ದಾರಾಗಿ ಆ ದೀ ವ್ಯಾಖ್ಯಾನ, ಆದರೆ ಅಂಥಾ ವ್ಯಾಧಿಯೊಂದು ಪ್ರತ್ಯೇಕ ಉಂಟೆಂಬದು ಅನುಭವಸಿದ್ಧವಾಗಿ ಕಾಣುತ್ತದೆ ಅದಕ್ಕೆ ಮೊರಲ್ ಇನ್‌ಸೇನಿಟಿ (moral insanity) ಅಂದರೆ ಧರ್ಮವಿಚಾರದಲ್ಲಿ ಸ್ವಸ್ಥ ಬುದ್ಧಿ ಇಲ್ಲದಿರುವಿಕೆ, ಅಥವಾ ಇಮ್ಬೆಸಿಲಿಟಿ (imbecility) ಅಂದರೆ ಬುದ್ಧಿಶೂನ್ಯತೆ ಎಂತ ಪಾಶ್ಚಾತ್ಯರು ಹೇಳುತ್ತಾರೆ. ಅವರು ಇದನ್ನೂ ಉನ್ಮಾದವನ್ನೂ ಇನ್ಸೇನಿಟಿ (insanity), ಅಂದರೆ ಬುದ್ಧಿಸ್ವಾಸ್ಥ್ಯವಿಲ್ಲದಿರುವಿಕೆ ಎಂಬ ಒಂದೇ ಪ್ರಕರಣದಲ್ಲಿ ವರ್ಣಿಸುತ್ತಾರೆ ಆದರೆ ನಮ್ಮ ಉನ್ಮಾದದಲ್ಲಿ ಮದದ ವೇಗ ಇರಬೇಕು ಆ ವೇಗವು ತನ್ನಂತೆ ನಿಂತು ಬುದ್ಧಿ ಸ್ವಸ್ಥತೆಯುಂಟಾಗಬಹುದು ಹುಟ್ಟಿ ಬಹು ವರ್ಷಗಳ ವರೆಗೆ ಎಲ್ಲರಂತೆ ಸೌಖ್ಯದಲ್ಲಿದ್ದು ಆ ಮೇಲೆ ಆ ರೋಗವು ಉಂಟಾಗುವದೇ ಹೆಚ್ಚು ಅತತ್ವಾಭಿನಿವೇಶ ಎಂಬದರಲ್ಲಿ 'ಅತತ್ವ' ಎಂದರೆ ಯಥಾರ್ಥಕ್ಕೆ ವಿಪರೀತವಾದ ಜ್ಞಾನ ಮತ್ತು 'ಅಭಿನಿವೇಶ' ಎಂದರೆ ಹಿಡಿದಿರುವಿಕೆ ಮಲಿನಾಹಾರಾದಿಕಾರಣಗಳಿಂದ ಈ ರೋಗವು ವಿಶೇಷವಾಗಿ ಕಾಣಿಸಿಕೊಳ್ಳುತ್ತದಾದರೂ, ಅದರಲ್ಲಿ ಜನ್ಮಾವಸ್ಥೆಯು ಮುಖ್ಯವಾದದ್ದು ಹುಟ್ಟುವಾಗಲೇ ಆತ್ಮವು ರಜಸ್ತಮೋಗುಣಗಳಿಂದ ಮುಚ್ಚಲ್ಪಟ್ಟಿರುತ್ತದೆ ಮತ್ತು ಮನೋಬುದ್ಧಿವ್ಯಾಪಾರಗಳಿಗೆ ಮುಖ್ಯಕಾರಣವಾದ ಶರೀರದಲ್ಲಿಯ ನರಮಂಡಲವು ಸ್ವಾಭಾವಿಕವಾಗಿ ದುರ್ಬಲವಾಗಿರುವದು ಹೆಚ್ಚು ಅಪಸ್ಮಾರದ ಪರಿಣಾಮವಾಗಿ ನರಮಂಡಲವು ಬಹಳ ಕ್ಷೀಣವಾಗಿ ಈ ರೋಗ ಕಾಣುವದುಂಟೆಂತ ಪಾಶ್ಚಾತ್ಯ ವೈದ್ಯಗ್ರಂಥಗಳು ಹೇಳುತ್ತವೆ ಸನ್ನಿಪಾತಜ್ವರದ ಪರಿಣಾಮವಾಗಿಯೂ ಅದು ಸಂಭವಿಸಬಹುದು ಆದರೆ ಅದು ಪುನಃ ಪುನಃ ಕಾಲಾಂತರದಿಂದ ಕಾಣಿಸಿಕೊಳ್ಳುವಂಥಾದ್ದಲ್ಲ ಆದರಲ್ಲಿ ತಿಳವಳಿಕೆ (ಸ್ಮೃತಿ) ಕೆಟ್ಟಿರುವದೇ ಪ್ರಧಾನ ಲಕ್ಷಣವಾದ್ದರಿಂದ ಅದನ್ನು ಅಪಸ್ಮಾರಪ್ರಕರಣದಲ್ಲಿ ವರ್ಣಿಸಿದು ಯುಕ್ತವೇ

33. ಸ್ನೇಹಸ್ವೇದೋಪಪನ್ನಂ ತಂ ಸಂಶೋಧ್ಯ ವಮನಾದಿಭಿಃ |
ಕೃತಸಂಸರ್ಜನಂ ಮೇಧ್ಯೈರನ್ನಪಾನೈರುಪಾಚರೇತ್ ||
ಬ್ರಾಹ್ಮೀಸ್ವರಸಸಂಯುಕ್ತಂ ಪಂಚಗವ್ಯಮುದಾಹೃತಮ್ |
ತತ್ಸೇವ್ಯಂ ಶಂಖಪುಷ್ಪೀ ಚ ಯಚ್ಚ ಸೇವ್ಯಂ ರಸಾಯನಮ್ ||
ಸುಹೃದಶ್ಚಾನುಕೂಲಾಸ್ತಂ ಸ್ವಾಪ್ತಧರ್ಮಾರ್ಥವಾದಿನಃ |
ಸಂಯೋಜಯೇಯುರ್ವಿಜ್ಞಾನಧೈರ್ಯಸ್ಮೃತಿಸಮಾಧಿಭಿಃ || (ಚ. 621)

ಅತತ್ವಾಭಿನಿವೇಶದ ಚಿಕಿತ್ಸೆ

ಸ್ನೇಹನ-ಸ್ವೇದನಕ್ರಮಾನಂತರ, ವಮನಾದಿಗಳಿಂದ ಅವನ ದೇಹವನ್ನು ಚನ್ನಾಗಿ ಶುದ್ಧಮಾಡಿ, ಮಲಪ್ರವೃತ್ತಿ ಕ್ರಮಪಡಿಸಿದ ಮೇಲೆ ಧಾರಣಬುದ್ಧಿಯನ್ನೂ (ವಿಚಾರಶಕ್ತಿಯನ್ನು) ಬಲಪಡಿಸತಕ್ಕ ಅನ್ನಪಾನಗಳಿಂದ ಅವನನ್ನು ಉಪಚರಿಸಬೇಕು. ಅವನು ಹಿಂದೆ ವರ್ಣಿಸಲ್ಪಟ್ಟ ಪಂಚಗವ್ಯಘೃತವನ್ನು ಒಂದೆಲಗನ ರಸವನ್ನು ಕೂಡಿಸಿಕೊಂಡು, ಶಂಖಪುಷ್ಪೀ ಬೇರನ್ನು ಮತ್ತು ಯಾವದರಲ್ಲಿ ರಸಾಯನ ಗುಣವಿರುತ್ತದೋ ಅದನ್ನು ಸೇವಿಸತಕ್ಕದ್ದು. ಅವನಿಗೆ ಅನುಕೂಲವಾಗಿರುವವರೂ, ಒಳ್ಳೇ ಆಪ್ತರೂ, ಧರ್ಮಾರ್ಥಗಳನ್ನು ಹೇಳುವ ಶಕ್ತಿಯುಳ್ಳವರೂ, ಆದ ಸ್ನೇಹಿತರು ಲೌಕಿಕ ಜ್ಞಾನ, ಧೈರ್ಯ, (ಸ್ವಾನುಭವಗಳ) ನೆನಪು, ಪಾರಮಾರ್ಥಿಕ ಜ್ಞಾನಕ್ಕಾಗಿ ನಿಯಮಯುಕ್ತವಾದ ಭಗವಚ್ಚಿಂತನ, ಇವುಗಳನ್ನು ಅವನಲ್ಲಿ ಉಂಟುಮಾಡಬೇಕು

ಪರಾ ಮೇಲಿನ 21ನೇ ಸಂಖ್ಯೆಯ ಉಪದೇಶವು ಚರಕನಿಂದ ಆತತ್ವಾಭಿನಿವೇಶಕ್ಕೆ ಸಂಬಂಧಪಟ್ಟು ಹೇಳಲ್ಪಟ್ಟದ್ದಾಗಿ ಕಾಣುತ್ತದೆ ಅವರಲ್ಲಿಯ ಯೋಗಗಳು ನರಗಳನ್ನು ಚುರುಕುಮಾಡುವಂಥವುಗಳಾದ್ದರಿಂದ ಎರಡಕ್ಕೂ ಉಪಯುಕ್ತವಾದವುಗಳೇ

34. ರೋಗಿಗೆ ಪ್ರಾಯ ೩೨ ವರ್ಷ, ೨ ವರ್ಷಗಳಿಂದ ಎರಡು ತಿಂಗಳಿಗೊಮ್ಮೆ ವೇಗ ಉಂಟಾಗುವದು, ಮನಸ್ಸಿನಲ್ಲಿ ಗಲಿಬಿಲಿ, ಮೂರು ನಾಡಿಗಳೂ ಅಸ್ಥಿರ, ಮಲಪ್ರವೃತ್ತಿ ಸಮಾಧಾನಕರವಲ್ಲ—ಘೋಟಾಚೂಳಿ ಮಾತ್ರೆ ೧ನ್ನು ಸೀಯಾಳದ ನೀರಿನಲ್ಲಿ ಕೊಟ್ಟು ಮಲಶೋಧನವಾದನಂತರ, ಕಾಸೀಸಾದಿ ಮಾತ್ರೆ ೧ರಂತೆ ಒಂದೆಲಗನ ರಸದಲ್ಲಿ ಜೇನು ಮತ್ತು ಬೆಲ್ಲ ಕೂಡಿಸಿ ದಿನಕ್ಕೆ ೨ ಸರ್ತಿ ಪ್ರಕಾರ ೧೨ ದಿನ; ತದನಂತರ ಶತಾವರಿ ತೊ. ||, ಒಂದೆಲಗ ತೊ. ||, ಬಜೆ ತೊ. |, ಬಿಳೇ ಶಂಖಪುಷ್ಪದ ಬೇರು ತೊ |, ತುಪ್ಪದೇವದಾರ ತೊ. |, ಸುಗಂಧಿ (ನನ್ನಾರಿ) ಬೇರಿನ ಒಳಗಿನ ಸಿಪ್ಪೆ (ಮಾಂಸ) ತೊ. |, ಇವುಗಳ ಕಷಾಯದ ಅರ್ಧದಲ್ಲಿ ವಾತಾರಿ ಮಾತ್ರೆ ||| ಮತ್ತು ವಾತಗಜಾಂಕುಶ ||ರಂತೆ— ಶತಾವರಿ ರಸ ೧ ತೊಲೆ (೩ ಡ್ರಾಮ್)ಯಲ್ಲಿ ಜೇನು ೧ ಡ್ರಾಮ್ ಬೆರಸಿ, ಅದರಲ್ಲಿ ಕೆಲವು ದಿನ ವಾತಾರಿ ಮಾತ್ರೆ ಮತ್ತು ಕೆಲವು ದಿನ ವಾತಾರಿ ಮತ್ತು ವಾ. ಗ., ಎರಡನ್ನು ಕೂಡಿಸಿ, ಕೊಟ್ಟಿತು.

ದೃಷ್ಟಫಲಚಿಕಿತ್ಸೆ.

ರೋಗಿಯು ಒಟ್ಟು ೨೦ ತಿಂಗಳ ಕಾಲ ಚಿಕಿತ್ಸೆಯಲ್ಲಿದ್ದ ಎಂತ ಹೇಳಬಹುದು. ಚಿಕಿತ್ಸಾರಂಭದ ೧ ತಿಂಗಳಲ್ಲಿ ಒಂದು ಸರ್ತಿ, ಅಂದಿನಿಂದ ೧೬೯ ದಿನಗಳಲ್ಲಿ ಒಮ್ಮೆ, ಆ ಮೇಲೆ ೬೭ ದಿನಗಳಲ್ಲಿ ಒಮ್ಮೆ, ತದನಂತರ ೩೩೯ ದಿನಗಳಲ್ಲಿ ಒಮ್ಮೆ, ಅಪಸ್ಮೃತಿ ಉಂಟಾಯಿತು. ಒಂದನೇ ಸರ್ತಿಯ ವೇಗವು ಉಂಟಾದದ್ದು ವಾತಾರಿಮಾತ್ರೆಯನ್ನು ಕೊಡಲಾರಂಭಿಸುವದಕ್ಕೆ ಮೊದಲು, ವಾತಗಜಾಂಕುಶವನ್ನು ೯ ದಿನ ಸೇವಿಸಿದ್ದನಷ್ಟೆ. ಎರಡನೇ ಸರ್ತಿ ಅಪಸ್ಮೃತಿ ಉಂಟಾಗುವಾಗ್ಗೆ ಮಾತ್ರೆಸೇವನ ಬಿಟ್ಟು ೩೬ ದಿನಗಳಾಗಿದ್ದವು. ೪ನೇ ಸರ್ತಿಯ ವೇಗವು ಮಾತ್ರೆ ಬಿಟ್ಟು ೮೦ ದಿನಗಳ ಮೇಲೆ ಉಂಟಾದದ್ದು. ೩ನೇ ಸರ್ತಿಯ ಅಪಸ್ಮೃತಿಯುಂಟಾಗುವಾಗ್ಗೆ ರೋಗಿಗೆ ಆ ಎರಡು ಜಾತಿ ಮಾತ್ರೆಗಳನ್ನು ಕಲ್ಲಂಗಡಲೆ ಬೇರು, ಸುಗಂಧಿ ಬೇರು, ಪುನರ್ನವಿ ಬೇರು, ಬೀಜದ ದ್ರಾಕ್ಷೆ, ಬಿಲ್ವಪತ್ರೆ ಬೇರು, (ಚಂಗಲ) ಕೋಷ್ಠ, ಬಜೆ, ಬಿಳೇ ಶಂಖಪುಷ್ಪದ ಬೇರು, ಪುತ್ರಜೀವಿಮಣಿ, ಒಂದೆಲಗ, ಇವು ೯ ಬಗೆಗಳನ್ನು ೧/೧೬ ತೊಲೆ ಪ್ರಕಾರ ತೆಗೆದುಕೊಂಡು ಮಾಡಿದ ಕಷಾಯದ ಅರ್ಧದಲ್ಲಿ ಕೊಡುತ್ತಿತ್ತು. ಈ ಕಷಾಯವು ಶೀತವಾಗಿ, ಪಿತ್ತವನ್ನು ಮಂದಮಾಡಿ, ವಾತವನ್ನು ಪ್ರಕೋಪಿಸಿತು. ಈ ಚಿಕಿತ್ಸಾನುಭವದಿಂದ ಹಳೇ ಅಪಸ್ಮಾರ ರೋಗಿಗೆ ಮಧ್ಯಮಧ್ಯ ೧—೨ ಪಕ್ಷ ಕಾಲ ಬಿಟ್ಟು ದೀರ್ಘಕಾಲದ ವರೆಗೆ ಚಿಕಿತ್ಸೆ ಮಾಡುವದು ಅಗತ್ಯ ಎಂತ ಕಂಡುಬರುತ್ತದೆ.

35. ಉನ್ಮಾದರೋಗಕ್ಕೆ ಬರೆಯಲ್ಪಟ್ಟ ಪಟ್ಟಿಗಳೇ ಈ ರೋಗಕ್ಕೂ ಒಪ್ಪತಕ್ಕಂಥವು. ನುಗ್ಗೆಕೋಡು, ಸಿಹಿ ದಾಳಿಂಬದ ಹಣ್ಣು, ಮತ್ತು ತೈಲ ಪಥ್ಯ ಎಂತ ಪಥ್ಯಾಪಥ್ಯವಿಚಾರ ಎಂಬ ಗ್ರಂಥದಲ್ಲಿ ಹೇಳಲ್ಪಟ್ಟಿರುವದಲ್ಲದೆ, ಕಿರುಕಸಾಲೆ ಸೊಪ್ಪು ಅಲ್ಲಿಯ ಪಥ್ಯವರ್ಗದಲ್ಲಿ ಕಾಣುವದಿಲ್ಲ.

ಪಥ್ಯಾಪಥ್ಯ

36. ಒಂದೆಲಗ, ಕಹಿಬೇವಿನ ಸೊಪ್ಪು, ಕಿರಿಕರಂಡೆ ಬೇರು, ಗಿರಿಕರ್ಣಿಕೆ, ಚೀನಿಪಾವು, ಜ್ಯೋತಿಷ್ಮತೀ (ಮಾಲಬೀಜ), ತಗರ, ತುಪ್ಪದೇವದಾರ, ತ್ರಿಕಟು, ತ್ರಿಫಲೆ, ನೆಕ್ಕಿ, ಪಂಚಗವ್ಯ, ಬಜೆ, ಬಿಳೇ ಶಂಖಪುಷ್ಪದ ಬೇರು, ಬೆಳ್ಳುಳ್ಳಿ, ಶತಾವರಿ

ಪೃಥಗ್ರೋಗೌಷಧಗಳು.

ಬೇರು, ಸುಗಂಧಿ (ನನ್ನಾರಿ) ಬೇರು, ಹೊಂಗೆ, ಮತ್ತು ಕುದುರೆ, ನರಿ, ಆನೆ, ಮುಂಗುಲಿ, ಬೆಕ್ಕು, ಉಡು, ದನ, ಇವುಗಳ ಪಿತ್ತ. ಇವುಗಳೊಳಗೆ ಕುದುರೆ ಮುಂತಾದವುಗಳ ಪಿತ್ತ, ತ್ರಿಫಲೆ, ತ್ರಿಕಟು, ಹೊಂಗೆ ಮತ್ತು ಬೆಳ್ಳುಳ್ಳಿ ನಸ್ಯಕ್ಕೆಂತಲೂ, ಕಹಿಬೇವಿನ ಸೊಪ್ಪು ಧೂಪಕ್ಕೆಂತಲೂ ಶತಶ್ಲೋಕೀ (ಪು. 34).

---

# ಅಧ್ಯಾಯ III.

## ಮೂರ್ಛಾ-ಮೂರ್ಚ್ಛೆ (Fainting, Syncope)

(ಭ್ರಮ Vertigo, giddiness
ನಿದ್ರಾ Sleepiness, drowsiness
ತನ್ದ್ರಾ Collapse, prostration
ಕ್ಲಮ Fatigue, exhaustion
ಸನ್ಯಾಸ Apoplexy
ಮದ Delirium
ಮದ್ಯಜ ಮದ Delirium Tremens ಇವು ಸಹ)

1. ಕ್ಷೀಣಸ್ಯ ಬಹುದೋಷಸ್ಯ ವಿರುದ್ಧಾಹಾರಸೇವಿನಃ |
ಮೂರ್ಚ್ಛೆಯ ನಿದಾನ — ವಿಘಾತಾದಭಿಘಾತಾದ್ವಾ ಹೀನಸತ್ವಸ್ಯ ವಾ ಪುನಃ ||
ಕರಣಾಯತನೇಷೂಗ್ರಾ ಬಾಹ್ಯೇಷ್ವಾಭ್ಯಂತರೇಷು ಚ |
ನಿವಿಶನ್ತೇ ಯದಾ ದೋಷಾಸ್ತದಾ ಮೂರ್ಚ್ಛನ್ತಿ ಮಾನವಾಃ ||
(ಸು. 828)

ಕ್ಷೀಣನಾದವನಿಗೆ, ಹೆಚ್ಚು ದೋಷವುಳ್ಳವನಿಗೆ, ವಿರುದ್ಧವಾದ ಆಹಾರಗಳನ್ನು ಸೇವಿಸುತ್ತಿರುವವನಿಗೆ, ಅಥವಾ ಸತ್ವ (ನರಬಲ) ಕಡಿಮೆಯಾದವನಿಗೆ, ಮಲಾದಿವೇಗಗಳನ್ನು ತಡೆಯುವದರಿಂದ ಅಥವಾ ಪೆಟ್ಟಿನಿಂದ ಉಗ್ರವಾದಂಥಾ ದೋಷಗಳು ಮನಸ್ಸಿನ ಹೊರಗಿನ ಮನೆಗಳಾದ ಇಂದ್ರಿಯಗಳನ್ನೂ (ಜ್ಞಾನೇಂದ್ರಿಯ ಕರ್ಮೇಂದ್ರಿಯಗಳನ್ನೂ) ಒಳಗಿನ ಮನೆಗಳಾದ ಹೃದಯ ಮತ್ತು ಸ್ರೋತಸ್ಸು(ನರ)ಗಳನ್ನೂ ಹೊಕ್ಕು ಯಾವಾಗ ನಿಂತಿರುತ್ತವೊ, ಆಗ್ಗೆ ಮನುಷ್ಯರು ಮೂರ್ಚ್ಛೆಹೋಗುತ್ತಾರೆ.

ಪಠಾ 'ವಿಘಾತಾದಭಿಘಾತಾದ್ವಾ ಹೀನಸತ್ತ್ವಸ್ಯ' ಎಂಬಲ್ಲಿ 'ವೇಗಾಘಾತಾದಭಿಘಾತಾದ್ಧೀನಸತ್ತ್ವಸ್ಯ' ಎಂಬ ಪಾಠ ಅನೇಕ ಪ್ರತಿಗಳಲ್ಲಿ ಕಾಣುತ್ತದೆ ಅರ್ಥ ಒಂದೇ

2. ಹೃತ್ಪೀಡಾ ಜೃಂಭಣಂ ಗ್ಲಾನಿಃ ಸಂಜ್ಞಾನಾಶೋಽಬಲಸ್ಯ ಚ |
ಮೂರ್ಚ್ಛೆಯ ಪೂರ್ವರೂಪ. — ಸರ್ವಾಸಾಂ ಪೂರ್ವರೂಪಾಣಿ ಯಥಾಸ್ವಮುಪಲಕ್ಷಯೇತ್ |
(ಸು. 828)

ಎದೆಯಲ್ಲಿ ಪೀಡೆ, ಆಕಳಿಕೆ, ಬಳಲಿಕೆ, ಎಚ್ಚರವಿಲ್ಲದಿರುವಿಕೆ, ಬಲಹಾನಿ, ಇವುಗಳು ಎಲ್ಲಾ ಮೂರ್ಚ್ಛೆಗಳ ಪೂರ್ವರೂಪಗಳು. ಅನಂತರದ ಲಕ್ಷಣಗಳು ವಾತಾದಿ ದೋಷಗಳ ಮೇಲೆ ಭಿನ್ನವಾಗುವದನ್ನು ಪರೀಕ್ಷಿಸತಕ್ಕದ್ದು.

ಪಠಾ: 4ನೇ ಚರಣದ ಪಾಠಾಂತರ —'ಯಥಾಸ್ವಂತಾವಿಭಾವಯೇತ್' (ಮಾ. ನಿ 110) ಈ ಪಾಠಾಂತರದಿಂದ ತಾತ್ಪರ್ಯ ಭೇದವಾಗುವದಿಲ್ಲ "ಸಂಜ್ಞಾನಾಶೋಽಬಲಸ್ಯ" ಎಂಬದಕ್ಕೆ "ಸಂಜ್ಞಾದೌರ್ಬಲ್ಯಮೇವ" ಎಂತ ಪಾಠಾಂತರ ಎಚ್ಚರಿಕೆಯು ಬಲಹೀನವಾಗುವದು, ಎಂಬದು ಅದರ ಅರ್ಥ ಅದೇ ಸರಿಯಾದದ್ದಾಗಿ ಕಾಣುತ್ತದೆ.

3. ಸಂಜ್ಞಾವಹಾಸು ನಾಡೀಷು ಪಿಹಿತಾಸ್ವನಿಲಾದಿಭಿಃ |
ಮೂರ್ಛೆಯ ಲಕ್ಷಣ ತಮೋಽಭ್ಯುಪೈತಿ ಸಹಸಾ ಸುಖದುಃಖವ್ಯಪೋಹಕೃತ್ ||
ಸುಖದುಃಖವ್ಯಪೋಹಾಚ್ಚ ನರಃ ಪತತಿ ಕಾಷ್ಠವತ್ |
ಮೋಹೋ ಮೂರ್ಛೇತಿ ತಾಂ ಪ್ರಾಹುಃ ಷಡ್ವಿಧಾ ಸಾ ಪ್ರಕೀರ್ತಿತಾ ||
(ಸು. 828)

ಸಂಜ್ಞೆ(ಎಚ್ಚರಿಕೆ)ಗೆ ಆಧಾರವಾದ ನಾಡಿಗಳಲ್ಲಿ (ನರಗಳಲ್ಲಿ) ವಾತಾದಿ ದೋಷಗಳು ಮುಚ್ಚಿ ತಡೆಯನ್ನುಂಟುಮಾಡಿದಾಗ್ಗೆ, (ಕತ್ತಲೆಯನ್ನುಂಟುಮಾಡುವ) ತಮೋಗುಣವು ಒಡನೆ ಒಂದು ಸೇರಿ ಸುಖದುಃಖಗಳ ತಿಳುವಳಿಕೆಯನ್ನು ನಾಶಮಾಡುವದು, ಮತ್ತು ಅದರಿಂದ ಮನುಷ್ಯನು ಕಟ್ಟಿಗೆಯಂತೆ ಕೆಳಗೆ ಬೀಳುತ್ತಾನೆ. ಆ ರೋಗಕ್ಕೆ "ಮೋಹ" ಎಂತಲೂ, "ಮೂರ್ಛೆ" ಎಂತಲೂ ಹೇಳುತ್ತಾರೆ. ಅದು ಆರು ವಿಧವೆಂತ ಪ್ರಸಿದ್ಧಿಗೊಂಡದೆ.

4. ವಾತಾದಿಭಿಃ ಶೋಣಿತೇನ ಮದ್ಯೇನ ಚ ವಿಷೇಣ ಚ |
ಮೂರ್ಛೆಯಲ್ಲಿ ಭೇದಗಳು ಷಟ್ಸ್ವಪಿ ತಾಸು ಪಿತ್ತಂ ಹಿ ಪ್ರಭುತ್ವೇನಾವತಿಷ್ಠತೇ ||
(ಸು. 829)

ಮೂರ್ಛೆಯು ವಾತದಿಂದ, ಪಿತ್ತದಿಂದ, ಕಫದಿಂದ, ರಕ್ತದಿಂದ, ಮದ್ಯದಿಂದ, ವಿಷದಿಂದ, ಹೀಗೆ ಆರು ವಿಧ. ಆ ಆರು ವಿಧಗಳಲ್ಲಿಯೂ ಪಿತ್ತವು ಪ್ರಭು(ಮುಖ್ಯ)ವಾಗಿ ವ್ಯಾಪಿಸಿ ಕೊಂಡಿರುತ್ತದೆ.

ಷರಾ ಕೆಳಗೆ 11ನೇ ಸಂಖ್ಯೆಯಡಿ ಬರೆದ ಷರಾ ನೋಡಿ

5. ನೀಲಂ ವಾ ಯದಿ ವಾ ಕೃಷ್ಣಮಾಕಾಶಮಥವಾರುಣಮ್ |
ವಾತಮೂರ್ಛೆಯ ಲಕ್ಷಣ ಪಶ್ಯಂಸ್ತಮಃ ಪ್ರವಿಶತಿ ಶೀಘ್ರಂ ಚ ಪ್ರತಿಬುಧ್ಯತೇ ||
ವೇಪಥುಶ್ಚಾಂಗಮರ್ದಶ್ಚ ಪ್ರಪೀಡಾ ಹೃದಯಸ್ಯ ಚ |
ಕಾರ್ಶ್ಯಂ ಶ್ಯಾವಾರುಣಾ ಚ್ಛಾಯಾ ಮೂರ್ಛಾಯೇ ವಾತಸಂಭವೇ ||
(ಚ. 129)

ನೀಲ, ಕಪ್ಪು, ಅಥವಾ ಕಪಿಲವರ್ಣದ ಆಕಾಶವನ್ನು ಕಾಣುತ್ತಾ ಮೂರ್ಛೆ ಹೋಗುವದು, ಬೇಗನೇ ಎಚ್ಚರವಾಗುವದು, ಮೈನಡುಕು, ಅಂಗಗಳಲ್ಲಿ ಸೆಳೆತ, ಎದೆಯಲ್ಲಿ ಬಹಳವಾದ ಪೀಡೆ, ಕೃಶತೆ (ತೆಳ್ಳಗಿನ ದೇಹ), ದೇಹದ ಛಾಯೆಯು ಕಪಿಶ ಅಥವಾ ಕಪಿಲ ವರ್ಣ ಆಗಿರುವದು, ಇವು ವಾತಜ ಮೂರ್ಛೆಯ ಲಕ್ಷಣಗಳು.

6. ರಕ್ತಂ ಹರಿತವರ್ಣಂ ವಾ ವಿಯತ್ಪೀತಮಥಾಪಿ ವಾ |
ಪಿತ್ತಮೂರ್ಛೆಯ ಲಕ್ಷಣ ಪಶ್ಯಂಸ್ತಮಃ ಪ್ರವಿಶತಿ ಸಸ್ವೇದಶ್ಚ ಪ್ರಬುಧ್ಯತೇ ||
ಸಪಿಪಾಸಃ ಸಸಂತಾಪೋ ರಕ್ತಪೀತಾಕುಲೇಕ್ಷಣಃ |
ಸಂಭಿನ್ನವರ್ಚಾಃ ಪೀತಾಭೋ ಮೂರ್ಛಾಯೇ ಪಿತ್ತಸಂಭವೇ ||
(ಚ. 129)

ಕೆಂಪು, ಅಥವಾ ಹಸುರು, ಅಥವಾ ಹಳದಿ ವರ್ಣದ, ಆಕಾಶವನ್ನು ಕಾಣುತ್ತಾ ಮೂರ್ಛೆಹೋಗುವದು, ಎಚ್ಚರವಾಗುವಾಗ್ಗೆ ಮೈಬೆವರುವದು, ಬಾಯಾರಿಕೆ, ಉರಿ, ಕಣ್ಣುಗಳು ಕೆಂಪು ಅಥವಾ ಅರಸಿನವಾಗಿ ವ್ಯಥೆಪಟ್ಟಿರುವದು, ಮಲ ಒಡೆದು ತೆಳ್ಳಗಾಗಿರುವದು, ಅರಸಿನ ಛಾಯೆ, ಇವು ಪಿತ್ತಮೂರ್ಛೆಯ ಲಕ್ಷಣಗಳು.

7. ಮೇಘಸಂಕಾಶಮಾಕಾಶಮಾವೃತಂ ವಾ ತಮೋಘನೈಃ ।
ಪಶ್ಯಂಸ್ತಮಃ ಪ್ರವಿಶತಿ ಚಿರಾಚ್ಚ ಪ್ರತಿಬುಧ್ಯತೇ ॥
ಕಫಮೂರ್ಛೆಯ ಲಕ್ಷಣ — ಗುರುಭಿಃ ಪ್ರಾವೃತೈರಂಗೈರ್ಯಥೈವಾರ್ದ್ರೇಣ ಚರ್ಮಣಾ ।
ಸಪ್ರಸೇಕಃ ಸಹೃಲ್ಲಾಸೋ ಮೂರ್ಛಾಯೇ ಕಫಸಂಭವೇ ॥
(ಚ. 129)

(ಶುಭ್ರವಾದ) ಮೋಡದ ಹಾಗಿನ, ಅಥವಾ ಕತ್ತಲೆಯಿಂದಲೂ ಮೋಡಗಳಿಂದಲೂ ಮುಚ್ಚಲ್ಪಟ್ಟ, ಆಕಾಶವನ್ನು ಕಾಣುತ್ತಾ ಮೂರ್ಛೆಹೋಗುವದು, ಸಾವಕಾಶದಿಂದ ಎಚ್ಚರವಾಗುವದು, ಒದ್ದೆಯಾದ ಚರ್ಮದಿಂದ ಮುಚ್ಚಿಕೊಂಡಂತೆ ಭಾರವಾಗಿರುವ ಅಂಗಗಳಿಂದ ನೀರು ಒಸರುವದು, ಎದೆಯ ಕುಣಿತ ಅಥವಾ ತಲ್ಲಣ, ಇವು ಕಫಜಮೂರ್ಛೆಯ ಲಕ್ಷಣಗಳು.

8. ಸರ್ವಾಕೃತಿಃ ಸನ್ನಿಪಾತಾದಪಸ್ಮಾರ ಇವಾಗತಃ ।
ಸನ್ನಿಪಾತ ಮೂರ್ಛೆಯ ಲಕ್ಷಣ — ಸ ಜಂತುಂ ಪಾತಯತ್ಯಾಶು ವಿನಾ ಭೀಭತ್ಸಚೇಷ್ಟಿತೈಃ ॥
(ಚ. 119)

ಸನ್ನಿಪಾತದಿಂದುಂಟಾದ ಮೂರ್ಛೆಯಲ್ಲಿ ಮೇಲೆ ಹೇಳಿದ ಎಲ್ಲಾ ಲಕ್ಷಣಗಳು ಕೂಡಿರುವವು. ಅದು ಅಪಸ್ಮಾರದಂತೆ ಒಂದು ಪ್ರಾಣಿಯನ್ನು ಬೇಗನೇ ಬೀಳಿಸುವದು; ಆದರೆ ಅದರಲ್ಲಿ ಅಪಸ್ಮಾರದ ಭಯಂಕರವಾದ (ನೊರೆಕಾರುವದು ಮುಂತಾದ) ಚೇಷ್ಟೆಗಳು ಇರುವದಿಲ್ಲ.

ಚರಾ ಸುಶ್ರುತನ ವಿವರಣದಲ್ಲಿ ಸನ್ನಿಪಾತಜ ಮೂರ್ಛೆ ಇಲ್ಲ

9. ಪೃಥಿವ್ಯಂಭಸ್ತಮೋರೂಪಂ ರಕ್ತಗನ್ಧಶ್ಚ ತನ್ಮಯಃ ।
ರಕ್ತಜ ಮೂರ್ಛೆಯ ಸಂಪ್ರಾಪ್ತಿ — ತಸ್ಮಾದ್ರಕ್ತಸ್ಯ ಗನ್ಧೇನ ಮೂರ್ಛಂತಿ ಭುವಿ ಮಾನವಾಃ ॥
ದ್ರವ್ಯಸ್ವಭಾವ ಇತ್ಯೇಕೇ ದೃಷ್ಟ್ವಾ ಯದಭಿಮುಹ್ಯತಿ ।
(ಸು 829)

(ಪಂಚ ಮಹಾಭೂತಗಳೊಳಗೆ) ಪೃಥ್ವಿಯಲ್ಲಿಯೂ ಜಲದಲ್ಲಿಯೂ (ಕತ್ತಲೆಗೆ ಕಾರಣವಾದ) ತಮೋಗುಣವೇ ಅಧಿಕವಾಗಿದ್ದು, ರಕ್ತದ ವಾಸನೆಯಲ್ಲಿ ಅಂಥಾ ಪೃಥ್ವೀಜಲಗಳು ತುಂಬಿರುವದರಿಂದ, ಭೂಮಿಯಲ್ಲಿ ರಕ್ತದ ವಾಸನೆಯಿಂದ (ಪೃಥ್ವೀಭೂತವೇ (ತಾಮಸಗುಣವೇ) ಅಧಿಕವಾಗಿರುವ) ಮನುಷ್ಯರಲ್ಲಿ ಮೂರ್ಛೆಯುಂಟಾಗುತ್ತದೆ. ರಕ್ತವನ್ನು ನೋಡಿ ಮೂರ್ಛೆಹೋಗುವದು ದ್ರವ್ಯದ ಸ್ವಭಾವವೆಂತ ಕೆಲವರು ಹೇಳುತ್ತಾರೆ.

10. ಗುಣಾಸ್ತೀವ್ರತರತ್ವೇನ ಸ್ಥಿತಾಸ್ತು ವಿಷಮದ್ಯಯೋಃ |
ತ ಏವ ತಸ್ಮಾಜ್ಜಾಯನ್ತೇ ತಾಭ್ಯಾಂ ಮೋಹಾ ಯಥೇರಿತಾಃ ||
(ಸು. 829)

ವಿಷಜಮೂರ್ಛೆ ಮದ್ಯಜಮೂರ್ಛೆಗಳಿಗೆ ಕಾರಣ

ವಿಷದಲ್ಲಿಯೂ, ಮದ್ಯದಲ್ಲಿಯೂ, ಒಂದೇ ಗುಣಗಳು. ಅವೇ ಮದ್ಯಕ್ಕಿಂತಲೂ ವಿಷದಲ್ಲಿ ಹೆಚ್ಚು ತೀವ್ರವಾಗಿ ಇರುತ್ತವೆ. ಅವುಗಳಿಂದ ವಿಷಜಮೂರ್ಛೆ, ಮದ್ಯಜಮೂರ್ಛೆ ಎಂಬವು ಉಂಟಾಗುತ್ತವೆ.

ಷರಾ "ತಸ್ಮಾಜ್ಜಾಯೇತ ತಾಭ್ಯಾಂ ಮೋಹೋ ಯಥೇರಿತ" ಎಂಬ ಪಾಠಾಂತರವೇ ಯುಕ್ತವಾಗಿ ಕಾಣುತ್ತದೆ ಲಘು, ಉಷ್ಣ, ತೀಕ್ಷ್ಣ, ಸೂಕ್ಷ್ಮ, ಹುಳಿ, ವ್ಯವಾಯಿ, ಆಶುಗ, ರೂಕ್ಷ, ವಿಕಾಸ, ವಿಶದ, ಈ ಹತ್ತು ದ್ರವ್ಯಗುಣಗಳು ಮದ್ಯದಲ್ಲಿರುತ್ತವೆಂತಲೂ, ಅವುಗಳಿಂದ ಮನುಷ್ಯನ ಓಜಸ್ಸಿನಲ್ಲಿರುವ ಗುರು, ಶೀತ, ಮೃದು, ಶ್ಲಕ್ಷ್ಣ, ಬಹಲ, ಮಧುರ, ಸ್ಥಿರ, ಪ್ರಸನ್ನ, ಪಿಚ್ಛಿಲ, ಸ್ನಿಗ್ಧ, ಎಂಬ ದಶಗುಣಗಳು ಹತವಾಗಿ ಮದ ಉಂಟಾಗುತ್ತದೆಂತಲೂ ಚರಕ ಹೇಳಿದ್ದಾನೆ (ಪು 584) ಮೇಲೆ ಹೇಳಿದ ಲಘ್ವಾದಿ ದಶಗುಣಗಳೊಳಗೆ ಆಮ್ಲ(ಹುಳಿ)ರಸಸ್ಥಾನದಲ್ಲಿ ಅನಿರ್ದೇಶ್ಯರಸ (ಅಂದರೆ ಇಂಥಾದ್ದೇ ಎಂತ ಹೇಳಕೂಡದ ರಸ) ಮತ್ತು ಮಿಕ್ಕ ಒಂಭತ್ತು ಗುಣಗಳು ಹೀಗೆ ಹತ್ತು ಗುಣಗಳು ವಿಷದಲ್ಲಿ ಇರುತ್ತವೆಂತಲೂ ಚರಕನು ಹೇಳಿರುತ್ತಾನೆ (ಪು 724) ಆದ್ದರಿಂದ ಒಂದೇ ಗುಣಗಳು ವಿಷದಲ್ಲಿಯೂ ಮದ್ಯದಲ್ಲಿಯೂ ಇರುತ್ತವೆ, ಅವುಗಳ ದೆಸೆಯಿಂದ ಮದಮೂರ್ಛೆಗಳು ಉಂಟಾಗುತ್ತವೆ, ಮತ್ತು ವಿಷದಲ್ಲಿ ಆ ಗುಣಗಳು ಹೆಚ್ಚು ತೀವ್ರವಾಗಿರುವದರಿಂದ ಪ್ರಾಣಹಾನಿ ಸಹ ಉಂಟಾಗುತ್ತದೆ, ಎಂಬ ಚರಕನ ಅಭಿಪ್ರಾಯವನ್ನು ಮೇಲಿನ ಶ್ಲೋಕವು ಆಧರಿಸುತ್ತದೆ (1ನೇ ಭಾಗ III 2 ನೋಡಿ)

11. ಸ್ತಬ್ಧಾಂಗದೃಷ್ಟಿಸ್ತ್ವಸೃಜಾ ಗೂಢೋಚ್ಛ್ವಾಸಶ್ಚ ಮೂರ್ಛಿತಃ |
ಮದ್ಯೇನ ವಿಲಪನ್ ಶೇತೇ ನಷ್ಟವಿಭ್ರಾಂತಮಾನಸಃ ||
ಗಾತ್ರಾಣಿ ವಿಕ್ಷಿಪನ್ ಭೂಮೌ ಜರಾಂ ಯಾವನ್ನ ಯಾತಿ ತತ್ |
ವೇಪಥುಸ್ವಪ್ನತೃಷ್ಣಾಃ ಸ್ಯುಃ ಸ್ತಂಭಶ್ಚ ವಿಷಮೂರ್ಛಿತೇ |
ವೇದಿತವ್ಯಂ ತೀವ್ರತರಂ ಯಥಾಸ್ವಂ ವಿಷಲಕ್ಷಣೈಃ || (ಸು. 829)

ರಕ್ತಜ, ಮದ್ಯಜ, ವಿಷಜ, ಮೂರ್ಛೆಗಳ ಲಕ್ಷಣಗಳು.

ಅಂಗಗಳು ಮತ್ತು ದೃಷ್ಟಿ, ಇವುಗಳ ಚಲನ ಇಲ್ಲದಿರುವದು, ಶ್ವಾಸವು ಅಡಗಿರುವದು (ಸೂಕ್ಷ್ಮವಾಗಿರುವದು), ಇವು ರಕ್ತಜಮೂರ್ಛೆಯ ಲಕ್ಷಣಗಳು. ಮದ್ಯದಿಂದ ಮೂರ್ಛೆ ಹೋದವನು, ಆ ಮದ್ಯ ಜೀರ್ಣವಾಗುವ ತನಕ ಮನಸ್ಸು ಸ್ವಾಧೀನವಿಲ್ಲದೆ (ಎಚ್ಚರವಿಲ್ಲದೆ), ಭ್ರಾಂತಿಯಿಂದ ಹರಟುತ್ತಾ, ಕೈಕಾಲುಗಳನ್ನು ಅತ್ತಿತ್ತ ಒಗೆಯುತ್ತಾ, ನೆಲದ ಮೇಲೆ ಮಲಗಿರುತ್ತಾನೆ. ವಿಷದ ಮೂರ್ಛೆಯಲ್ಲಿ ಮೈನಡುಕು, ನಿದ್ರೆ, ಬಾಯಾರಿಕೆ ಮತ್ತು ಅಂಗಚಲನವಿಲ್ಲದಿರುವಿಕೆ, ಈ ಲಕ್ಷಣಗಳು ಕಾಣುವವು; ಅದು ಮದ್ಯಜ ಮೂರ್ಛೆಗಿಂತ ಕಠಿಣವಾದದ್ದು; ಮತ್ತು ಅದನ್ನು ಆಯಾ ವಿಷದ (ಅಂದರೆ ವಿಷಭೇದಗಳ ವಿಶೇಷದ) ಲಕ್ಷಣಗಳ ಮೇಲೆ ಗೊತ್ತುಮಾಡತಕ್ಕದ್ದು.

12. ರಜೋಮೋಹಾಹಿತಾಹಾರಪರಸ್ಯ ಸ್ಯುಸ್ತ್ರಯೋ ಗದಾಃ |
ರಸಾಸೃಕ್‌ಚೇತನಾವಾಹಿಸ್ರೋತೋರೋಧಸಮುದ್ಭವಾಃ ||
ಮದಮೂರ್ಛಾಯಸಂನ್ಯಾಸಾ ಯಥೋತ್ತರಬಲೋತ್ತರಾಃ ||
(ವಾ. 205)

ಮದಮೂರ್ಛಾ ಸನ್ಯಾಸಗಳಿಗೆ ಸಾಮಾನ್ಯ ಹೇತು

ರಜೋಗುಣ-ತಮೋಗುಣಗಳೇ ಯಾರಲ್ಲಿ ಪ್ರಧಾನವಾಗಿರುತ್ತವೋ ಮತ್ತು ಯಾರು ಅಹಿತವಾದ ಆಹಾರಗಳನ್ನು ಉಣ್ಣುತ್ತಾ ಬರುತ್ತಾನೊ, ಅವನಲ್ಲಿ ರಸ-ರಕ್ತ-ಮನಸ್ಸುಗಳನ್ನು

ಸಾಗಿಸುವ ಸ್ರೋತಸ್ಸುಗಳಲ್ಲಿ ತಡೆ ಉಂಟಾಗಿರುವದರಿಂದ ಮದ-ಮೂರ್ಛಾ-ಸನ್ನ್ಯಾಸಗಳೆಂಬ ಮೂರು ಯಥೋತ್ತರ (ಮದಕ್ಕಿಂತ ಮೂರ್ಛೆ, ಮೂರ್ಛೆಗಿಂತ ಸನ್ನ್ಯಾಸ) ಬಲವುಳ್ಳವುಗಳಾದ ವ್ಯಾಧಿಗಳು ಹುಟ್ಟುತ್ತವೆ.

ಷರಾ ಇದು ಚರಕನನ್ನು ಅನುಸರಿಸಿ ಹೇಳಲ್ಪಟ್ಟದ್ದು. ಚೇತನಾವಾಹಿ ಅಥವಾ ಮನೋವಾಹಿ ಸ್ರೋತಸ್ಸುಗಳೆಂದರೆ ನರಗಳು (13ನೇ ಸಂಖ್ಯೆಯ ಷರಾ ನೋಡಿ) ಅವುಗಳನ್ನು ಚರಕನು ಸಂಜ್ಞಾವಹ ಸ್ರೋತಸ್ಸುಗಳೆಂದು ವರ್ಣಿಸಿದ್ದಾನೆ.

13. ಮದೋಽತ್ರ ದೋಷೈಃ ಸರ್ವೈಶ್ಚ ರಕ್ತಮದ್ಯವಿಷೈರಪಿ ।
ಸಕ್ತಾನಲ್ಪದ್ರುತಾಭಾಷಶ್ಚಲಃ ಸ್ಖಲಿತಚೇಷ್ಟಿತಃ ॥
ರೂಕ್ಷಶ್ಯಾವಾರುಣತನುರ್ಮದೇ ವಾತೋದ್ಭವೇ ಭವೇತ್ ।
ಪಿತ್ತೇನ ಕ್ರೋಧನೋ ರಕ್ತಪೀತಾಭಃ ಕಲಹಪ್ರಿಯಃ ॥
ಸ್ವಲ್ಪಾಸಂಬದ್ಧವಾಕ್ಪಾಂಡುಃ ಕಫಾದ್ಧ್ಯಾನಪರೋಽಲಸಃ ।
ಸರ್ವಾತ್ಮಾ ಸನ್ನಿಪಾತೇನ ರಕ್ತಾತ್ ಸ್ತಬ್ಧಾಂಗದೃಷ್ಟಿತಾ ॥
ಪಿತ್ತಲಿಂಗಂ ಚ ಮದ್ಯೇನ ವಿಕೃತೇಹಾಸ್ವರಾಂಗತಾ ।
ವಿಷೇ ಕಂಪೋಽತಿನಿದ್ರಾ ಚ ಸರ್ವೇಭ್ಯೋಽಭ್ಯಧಿಕಸ್ತು ಸಃ ।
ಲಕ್ಷಯೇಲ್ಲಕ್ಷಣೋತ್ಕರ್ಷಾದ್ವಾತಾದೀನ್ ಶೋಣಿತಾದಿಷು ॥

(ವಾ. 205)

ಮದದ ಭೇದಗಳು ಮತ್ತು ಲಕ್ಷಣಗಳು

ಮದವು ವಾತದಿಂದ, ಪಿತ್ತದಿಂದ, ಕಫದಿಂದ, ಸನ್ನಿಪಾತದಿಂದ, ರಕ್ತದಿಂದ, ಮದ್ಯದಿಂದ, ವಿಷದಿಂದ, ಹೀಗೆ ೭ ವಿಧವಾಗಿ ಉತ್ಪನ್ನವಾಗುವದು. ವಿರಳವಲ್ಲದ, ಅಲ್ಪವಲ್ಲದ ಮತ್ತು ತ್ವರಿತವಾದ ಮಾತು, ಮೈನಡುಕು, ಸ್ವಾಧೀನವಿಲ್ಲದ ಅಂಗಚೇಷ್ಟೆಗಳು, ಶರೀರವು ಕಪಿಶ ಅಥವಾ ಕಪಿಲವರ್ಣದ್ದಾಗಿ ಒಣಗಿಕೊಂಡು ಇರುವದು, ಈ ಲಕ್ಷಣಗಳು ವಾತಜ ಮದದಲ್ಲಿಯೂ, ಸಿಟ್ಟು, ಜಗಳದಲ್ಲಿ ಪ್ರೀತಿ, ಮೈವರ್ಣವು ಕೆಂಪು ಅಥವಾ ಅರಸಿನವಾಗಿರುವದು, ಈ ಲಕ್ಷಣಗಳು ಪಿತ್ತಜ ಮದದಲ್ಲಿಯೂ, ಅಲ್ಪವಾದ ಮತ್ತು ಅಸಂಬದ್ಧವಾದ ಮಾತು, ಮೈ ಬೆಳ್ಳಗಾಗಿರುವದು, ಆಲಸ್ಯ, ಧ್ಯಾನಮಾಡುತ್ತಿರುವದು, ಈ ಲಕ್ಷಣಗಳು ಕಫಜ ಮದದಲ್ಲಿಯೂ, ಈ ಎಲ್ಲಾ ಲಕ್ಷಣಗಳು ಸನ್ನಿಪಾತಜ ಮದದಲ್ಲಿಯೂ, ಕಾಣುವವು. ರಕ್ತಜ ಮದದಲ್ಲಿ ಅಂಗಗಳು ಮತ್ತು ದೃಷ್ಟಿಗಳು ಸ್ತಬ್ಧವಾಗಿರುವವು ಮತ್ತು ಪಿತ್ತಜಮದಕ್ಕೆ ಹೇಳಲ್ಪಟ್ಟ ಲಕ್ಷಣಗಳು ಕಾಣುವವು. ಮದ್ಯದಿಂದುಂಟಾದ ಮದದಲ್ಲಿ ಚೇಷ್ಟೆ, ಸ್ವರ ಮತ್ತು ಅಂಗಗಳು ವಿಕಾರಹೊಂದಿರುವವು. ನಡುಕು ಮತ್ತು ಅತಿಯಾದ ನಿದ್ರೆ ವಿಷಜ ಮದದ ಲಕ್ಷಣಗಳು; ಆ ವಿಷಜಮದವು ಇತರ ಎಲ್ಲಾ ಮದಗಳಿಗಿಂತ ಕಠಿಣವಾದದ್ದು. ರಕ್ತಜಮದದಲ್ಲಿಯೂ ಮದ್ಯಜಮದದಲ್ಲಿಯೂ ಮತ್ತು ವಿಷಜಮದದಲ್ಲಿಯೂ ವಿಶೇಷವಾದ ಲಕ್ಷಣಗಳಿಂದ ವಾತಾದಿದೋಷ ಭೇದವನ್ನು ಗೊತ್ತುಮಾಡತಕ್ಕದ್ದು.

ಷರಾ. ಮೇಲಿನ ದೋಷಜನ್ಯವಾದ ನಾಲ್ಕು ಮದಗಳ ಲಕ್ಷಣನಿರ್ದೇಶವು ಚರಕಾಚಾರ್ಯನ ಮತವನ್ನನುಸರಿಸಿರುತ್ತದೆ ಚರಕನು ರಕ್ತಜ, ಮದ್ಯಜ, ವಿಷಜ, ಎಂಬ ಮದಗಳು ವಾತಾದಿದೋಷಗಳನ್ನು ಬಿಟ್ಟಿರುವಂಥವಲ್ಲ ಎಂತ ನಿರೂಪಿಸಿರುತ್ತಾನೆ; ಅವುಗಳ ಲಕ್ಷಣಗಳನ್ನು ಪ್ರತ್ಯೇಕವಾಗಿ ಈ ಪ್ರಕರಣದಲ್ಲಿ ವರ್ಣಿಸಿರುವದಿಲ್ಲ ಸುಶ್ರುತನು ಮದಗಳ ನಿದಾನ ಲಕ್ಷಣಾದಿಗಳನ್ನು ಪ್ರತ್ಯೇಕವಾಗಿ ವರ್ಣಿಸದೆ, ಬೆಳೆಯದ (ಅಂದರೆ ಲಘುವಾದ, ಹೊಸತಾದ) ಉನ್ಮಾದವೇ ಮದ ಎಂತ ಉನ್ಮಾದಪ್ರಕರಣದಲ್ಲಿ ಹೇಳಿರುತ್ತಾನೆ, ಮತ್ತು ಅದಕ್ಕನುಗುಣವಾಗಿ ವಿಷಜ ಉನ್ಮಾದ ಎಂಬ

ದನ್ನು ಉನ್ಮಾದಭೇದಗಳೊಳಗೆ ಅಧಿಕವಾಗಿ ಸೇರಿಸಿದ್ದಾನೆ, (ಹಿಂದೆ ಉನ್ಮಾದ ಪ್ರಕರಣದ 3ನೇ ಸಂಖ್ಯೆ ನೋಡಿ), ಅವನು ಸನ್ನ್ಯಾಸವನ್ನು ಸಹ ಒಂದು ಪ್ರತ್ಯೇಕ ರೋಗವನ್ನಾಗಿ ಗಣಿಸದೆ, ಅದರ ಲಕ್ಷಣಗಳನ್ನು ಮೂರ್ಛೆಯ ಕಠಿಣವಾದ ಅವಸ್ಥೆಯ ರೂಪವನ್ನಾಗಿ ವರ್ಣಿಸಿ, (19ನೇ ಸಂಖ್ಯೆಯ ಷರಾ ನೋಡಿ), ಅದಕ್ಕೆ ಚಿಕಿತ್ಸಾವಿಧಿಯನ್ನು ಬರೆದಿರುತ್ತಾನೆ ತ್ರಿದೋಷಜ ಮೂರ್ಛೆ ಎಂಬದು ಸಹ ಸುಶ್ರುತನ ಮೂರ್ಛೆಯ ವಿಭಾಗಗಳಲ್ಲಿ ಇಲ್ಲ ಸುಶ್ರುತನ ಮೂರ್ಛಾವಿಭಾಗದಲ್ಲಿ ಅಧಿಕವಾಗಿ ಕಾಣುವ ರಕ್ತಜ, ಮದ್ಯಜ, ಮತ್ತು ವಿಷಜ, ಎಂಬವು ಚರಕನ ಮೂರ್ಛಾವಿವರಣದಲ್ಲಿ ತೋರುವದಿಲ್ಲ ಆದರೆ ಮದಭೇದಗಳೊಳಗೆ ರಕ್ತಜ, ಮದ್ಯಜ, ವಿಷಜ, ಎಂಬ ಮೂರು ವಾತಾದಿ ದೋಷಗಳನ್ನು ಬಿಟ್ಟು ಇರುವಂಥವಲ್ಲವಾದ್ದರಿಂದ, ಅವುಗಳನ್ನು ಬೇರೆಯಾಗಿ ಗಣಿಸುವದು ಅಗತ್ಯವಲ್ಲವೆಂತ ತಾನು ಹೇಳಿರುವ ನ್ಯಾಯದ ಮೇಲೆ, ಮೂರ್ಛೆಯ ವಿಧಗಳು ವಿಪ್ರಕೃಷ್ಟಹೇತುವಿನ ವಿಚಾರದಲ್ಲಿ ಹೆಚ್ಚಿರಬಹುದಾದರೂ ಸನ್ನಿಕೃಷ್ಟ ಹೇತುವಿನ ದೃಷ್ಟಿಯಿಂದ ವಿಭಾಗಿಸುವಾಗ್ಗೆ ನಾಲ್ಕೇ ಆಗುತ್ತವೆ ಎಂತ ಸಿದ್ಧವಾಗುತ್ತದೆಂಬದರಿಂದ, ಸುಶ್ರುತನ ರಕ್ತಜಾದಿ ಮೂರು ಮೂರ್ಛಾಭೇದಗಳನ್ನು ಚರಕನು ಹೇಳದೆ ಬಿಟ್ಟಿರಬೇಕೆಂತ ಊಹಿಸಬಹುದು ಈ ಸಂದರ್ಭದಲ್ಲಿ ಚರಕನ ರೌಧಿರ ಮದಕ್ಕೂ ಸುಶ್ರುತನ ರಕ್ತಜ ಮೂರ್ಛೆಗೂ ಕಾರಣವು ಒಂದೇ ಎಂತ ನೆನಸಬಾರದು ರೌಧಿರ ಮದವು ರಕ್ತದ ಹೀನಾಧಿಕ್ಯ ಅಥವಾ ಬೇರೆ ದೋಷದಿಂದ ಉಂಟಾಗುವಂಥಾದ್ದು, ರಕ್ತಜ ಮೂರ್ಛೆಯು ರಕ್ತವನ್ನು ನೋಡುವದರಿಂದ ಅಥವಾ ಅದರ ವಾಸನೆಯನ್ನು ಘ್ರಾಣಿಸುವದರಿಂದ ಉತ್ಪನ್ನವಾಗುವಂಥಾದ್ದು ವಾಗ್ಭಟನ ಅನಂತರದ ಗ್ರಂಥಗಳಾದ ಮಾಧವನಿದಾನಾದಿಗಳು ಸುಶ್ರುತನ ವಿಭಾಗಕ್ರಮವನ್ನೇ ಅನುಸರಿಸಿ ಇವೆ ವಾಗ್ಭಟನು ಮದ-ಮೂರ್ಛಾ-ಸನ್ನ್ಯಾಸಗಳನ್ನು "ಮದಾತ್ಯಯ ನಿದಾನಂ" ಎಂಬ ಅಧ್ಯಾಯದಲ್ಲಿ ವರ್ಣಿಸಿ, ಅದಕ್ಕೆ ಸರಿಯಾಗಿ ಅವುಗಳ ಚಿಕಿತ್ಸಾಕ್ರಮವನ್ನು 'ಮದಾತ್ಯಯ ಚಿಕಿತ್ಸಿತಂ' ಎಂಬ ಅಧ್ಯಾಯದಲ್ಲಿ ವಿವರಿಸಿರುತ್ತಾನೆ. ಚರಕಸಂಹಿತೆಯಲ್ಲಿ 'ಮದಾತ್ಯಯ'ಕ್ಕೆ ಪ್ರತ್ಯೇಕ ಒಂದು ಅಧ್ಯಾಯವಿದೆ ಸುಶ್ರುತನು ಅದಕ್ಕೆ "ಪಾನಾತ್ಯಯ" ಎಂಬ ಹೆಸರನ್ನು ಕೊಟ್ಟು ಪ್ರತ್ಯೇಕಾಧ್ಯಾಯವನ್ನು ವಿಂಗಡಿಸುತ್ತಾನೆ (೪ನೇ ಅಧ್ಯಾಯ ನೋಡಿ) ಚರಕಸಂಹಿತೆಯಲ್ಲಿ ರಕ್ತದೋಷದಿಂದ ಉಂಟಾಗುವ ರೋಗಗಳೊಳಗೆ ಮದ-ಮೂರ್ಛಾ-ಸನ್ನ್ಯಾಸಗಳು ಸೇರಿದವು ಎಂತಲೂ, ಮಲಿನವಾದ ಆಹಾರವನ್ನು ಭುಂಜಿಸುವ ಶೀಲ ಉಳ್ಳವನಲ್ಲಿ ಆತ್ಮವು ರಜೋಗುಣ ತಮೋಗುಣಗಳಿಂದ ಮುಚ್ಚಲ್ಪಟ್ಟು, ಕೋಪಗೊಂಡ ವಾತಾದಿ ದೋಷಗಳು ಒಂದೊಂದಾಗಿಯಾಗಲೀ ಒಟ್ಟಾಗಿಯಾಗಲೀ ರಕ್ತವಾಹಿ ಸ್ರೋತಸ್ಸುಗಳನ್ನೂ (blood vessels), ರಸವಾಹಿ ಸ್ರೋತಸ್ಸುಗಳನ್ನು (lymphatic vessels), ಸಂಜ್ಞಾವಾಹಿ ಸ್ರೋತಸ್ಸುಗಳನ್ನೂ (nerves), ಕೆಡಿಸಿ ಸ್ವಾಧೀನ ಮಾಡಿಕೊಂಡು ನಿಂತಾಗ್ಗೆ ಮದ ಮೂರ್ಛಾಸನ್ನ್ಯಾಸ ಎಂಬ ಮೂರು ವ್ಯಾಧಿಗಳು ಸಂಭವಿಸುತ್ತವೆ ಎಂತಲೂ, ಈ ಪ್ರಕರಣದಲ್ಲಿ ವರ್ಣಿಸಲ್ಪಟ್ಟ ಮದಗಳಾಗಲೀ ಮೂರ್ಛೆಗಳಾಗಲೀ ವೇಗಾಂತ್ಯದಲ್ಲಿ ಚಿಕಿತ್ಸೋಪಚಾರಗಳಿಲ್ಲದೆ ತಮ್ಮಂತೆ ಶಾಂತವಾಗುವ ಸ್ವಭಾವದವು ಎಂತಲೂ, ತ್ರಿದೋಷಜ ಮೂರ್ಛೆಯು ಅಪಸ್ಮಾರದ ಹಾಗೆ ಕಂಡರೂ ಅದರಲ್ಲಿ ಅಪಸ್ಮಾರದ ಭಯಂಕರವಾದ (ಭೀಭತ್ಸ) ಲಕ್ಷಣಗಳು ಇರುವದಿಲ್ಲ ಎಂತಲೂ ಹೇಳಲ್ಪಟ್ಟಿರುವದರಿಂದ (ಚ 128, 129), ಉನ್ಮಾದ, ಅಪಸ್ಮಾರ, ಮದಾತ್ಯಯದ ಮದ, ಇವುಗಳಿಗೂ, ಮದ-ಮೂರ್ಛಾ-ಸನ್ನ್ಯಾಸಗಳಿಗೂ ಇರುವ ಪರಸ್ಪರ ಭೇದಗಳು ತಿಳಿದುಬರುತ್ತವೆ ಈ ಅಧ್ಯಾಯದಲ್ಲಿ ವರ್ಣಿಸಲ್ಪಟ್ಟ ಮೂರ್ಛೆಗಳು ಅಥವಾ ಮದಗಳು ಯಾರಲ್ಲಿ ನರಗಳು ದುರ್ಬಲವಾಗಿಯೂ ಪಿತ್ತದ ಅಥವಾ ರಕ್ತದ ದೋಷವೇ ಪ್ರಧಾನವಾಗಿಯೂ ಇರುತ್ತವೆಯೋ, ಅಂಥವರಲ್ಲಿ ತಾತ್ಕಾಲಿಕ ಕಾರಣಗಳಿಂದ, ಅಥವಾ ಕಾರಣವಿಶೇಷ ತೋರದೆ, ಉಂಟಾಗಿ ಶಾಂತವಾಗುವ ಸ್ವಭಾವದವು ಆಗಿರುತ್ತವೆ ಹುಳದ ಉಪದ್ರವ, ಎದೆಯ ರೋಗ, ಶೋಣಿತಪಿತ್ತ, ಅತಿಸಾರ, ಗ್ರಹಣೀ, ವಿಷಪಾನ, ಮದ್ಯಪಾನ, ಮುಂತಾದ ಅನೇಕ ರೋಗಗಳಲ್ಲಿ ಕಾಣಬಹುದಾದ ಮದಮೂರ್ಛೆಗಳಿಗೆ ಸಹ, ತಾತ್ಕಾಲಿಕ ಪರಿಹಾರವಾಗಿ, ಆಯಾ ರೋಗೋಪಶಮನ ವಿಧಿಗೆ ಪ್ರತಿಕೂಲವಾಗದಂತೆ, ಈ ಪ್ರಕರಣದಲ್ಲಿ ಉಪದೇಶಿಸಲ್ಪಟ್ಟ ಕ್ರಮದಿಂದ ಚಿಕಿತ್ಸೆ ಮಾಡಬೇಕಾಗಬಹುದು

14. ಮೂರ್ಛಾ ಪಿತ್ತತಮಃಪ್ರಾಯಾ ರಜಃಪಿತ್ತಾನಿಲಾದ್ಭ್ರಮಃ |
ತಮೋವಾತಕಫಾತ್ತಂದ್ರಾ ನಿದ್ರಾ ಶ್ಲೇಷ್ಮತಮೋಭವಾ ||

(ಮಾ. ನಿ. 113)

ಮೂರ್ಛಾ-ಭ್ರಮ-ತಂದ್ರಾ-ನಿದ್ರೆಗಳಲ್ಲಿ ದೋಷಭೇದ

ಕತ್ತಲೆರೂಪವಾದ ತಮೋಗುಣಕ್ಕೆ ಪಿತ್ತ ಕೂಡಿದಲ್ಲಿ ಮೂರ್ಛೆ, ವಾತ ಕಫ ಕೂಡಿದಲ್ಲ ತಂದ್ರಾ, ಕಫ ಕೂಡಿದಲ್ಲಿ ನಿದ್ರೆ ಉಂಟಾಗುತ್ತವೆ. ಭ್ರಮವು ರಜೋಗುಣಕ್ಕೆ ಪಿತ್ತವಾಯುಗಳು ಸೇರಿ ಉಂಟಾಗುತ್ತದೆ.

ಷರಾ ಮೂರೂ ಸೇರಬೇಕೆಂತಿಲ್ಲ, ಬರೇ ಪಿತ್ತಜ್ವರದಲ್ಲಿ ಭ್ರಮಲಕ್ಷಣ ಹೇಳಲ್ಪಟ್ಟದೆ ಎಂತ ಭಾ. ಪ್ರ ವ್ಯಾಖ್ಯಾನ ಹೇಳುತ್ತದೆ (ಪು 389) ಆದರೆ, ವಾಯು ಸೇರದ ವಿನಾ ಭ್ರಮ ಉಂಟಾಗದು ಎಂಬ ಪಕ್ಷವೇ ಯುಕ್ತಾಯುಕ್ತವಾದದ್ದೆಂತ ಕಾಣುತ್ತದೆ

15. ಚಕ್ರವದ್ಭ್ರಮತೋ ಗಾತ್ರಂ ಭೂಮೌ ಪತತಿ ಸರ್ವದಾ |
ಭ್ರಮರೋಗದ ಲಕ್ಷಣ.
ಭ್ರಮರೋಗ ಇತಿ ಜ್ಞೇಯೋ ರಜಃಪಿತ್ತಾನಿಲಾತ್ಮಕಃ ||
(ಮಾ. ನಿ. 113)

ಚಕ್ರದಂತೆ (ತಾನೂ, ಸುತ್ತಲಿನ ವಸ್ತುಗಳೂ), ತಿರುಗುತ್ತಿರುವ ಹಾಗೆ ಕಂಡು, ಶರೀರವು ಕೆಳಗೆ ನೆಲದ ಮೇಲೆ ಬೀಳುವ ಲಕ್ಷಣವು ಯಾವಾಗಲೂ ರಜೋಗುಣ ಮತ್ತು ಪಿತ್ತ ವಾಯುಗಳು ಸೇರಿಕೊಂಡುಂಟಾಗುವಂಥಾದ್ದು. ಅದು ಭ್ರಮರೋಗ ಎಂತ ತಿಳಿಯತಕ್ಕದ್ದು.

16. ಇಂದ್ರಿಯಾರ್ಥೇಷ್ವಸಂವಿತ್ತಿರ್ಗೌರವಂ ಜೃಂಭಣಂ ಕ್ಲಮಃ |
ತನ್ದ್ರಾ ಲಕ್ಷಣ
ನಿದ್ರಾರ್ತಸ್ಯೇವ ಯಸ್ಯೇಹಾ ತಸ್ಯ ತಂದ್ರಾಂ ವಿನಿರ್ದಿಶೇತ್ ||
(ಮಾ. ನಿ. 113)

ಇಂದ್ರಿಯವಿಷಯಗಳಲ್ಲಿ ಜ್ಞಾನವಿಲ್ಲದಿರುವಿಕೆ, ಶರೀರ ಭಾರವಾಗಿ ಕಾಣುವದು, ಆಕಳಿಕೆ, ದಣಿಕೆ ಮತ್ತು ನಿದ್ರೆಯಿಂದ ಪೀಡಿತನಾದವನ ಹಾಗಿನ ಚೇಷ್ಟೆ, ಈ ಲಕ್ಷಣಗಳು ಯಾರಲ್ಲಿ ಕಾಣುತ್ತವೋ ಅವನನ್ನು ತಂದ್ರಾರೋಗಿ ಎಂತ ಗೊತ್ತುಮಾಡಬೇಕು.

17. ಯೋಽನಾಯಾಸಃ ಶ್ರಮೋ ದೇಹೇ ಪ್ರವೃದ್ಧಃ ಶ್ವಾಸಸಂಗತಃ |
ಕ್ಲಮಲಕ್ಷಣ
ಕ್ಲಮಃ ಸ ಇತಿ ವಿಜ್ಞೇಯ ಇಂದ್ರಿಯಾರ್ಥಪ್ರಬಾಧಕಃ ||
(ಭಾ. ಪ್ರ. 390)

ಆಯಾಸದ ಕೆಲಸಮಾಡದೆನೇ ದೇಹದಲ್ಲಿ ಅತಿಯಾದ ದಣಿಕೆ, ಉಬ್ಬಸ, ಮತ್ತು ಇಂದ್ರಿಯ(ಜ್ಞಾನೇಂದ್ರಿಯ, ಕರ್ಮೇಂದ್ರಿಯ)ಗಳ ಪ್ರಯೋಜನವನ್ನು ಪಡೆಯುವದರಲ್ಲಿ ಶಕ್ತಿಹೀನತೆ (ಬಾಧೆ), ಈ ಲಕ್ಷಣಗಳಿಂದ ಕ್ಲಮ ಎಂಬ ವ್ಯಾಧಿಯನ್ನು ಗೊತ್ತುಮಾಡತಕ್ಕದ್ದು.

18. ಯದಾ ತು ಮನಸಿ ಕ್ಲಾಂತೇ ಕರ್ಮಾತ್ಮಾನಃ ಕ್ಲಮಾನ್ವಿತಾಃ |
ನಿದ್ರೆಯ ಲಕ್ಷಣ
ವಿಷಯೇಭ್ಯೋ ನಿವರ್ತಂತೇ ತದಾ ಸ್ವಪಿತಿ ಮಾನವಃ || (ಚ. 117)

ಯಾವಾಗ ಮನಸ್ಸು ದಣಿಯುವದರಿಂದ ಕರ್ಮೇಂದ್ರಿಯಗಳು ಮತ್ತು ಜ್ಞಾನೇಂದ್ರಿಯಗಳು ದಣಿಕೆ ಉಳ್ಳವುಗಳಾಗಿ, ತಮ್ಮ ತಮ್ಮ ವಿಷಯಗಳಲ್ಲಿ ಪ್ರವೇಶ ಮಾಡದೆ, ನಿಂತಿರುತ್ತವೋ, ಆಗ್ಗೆ ಮನುಷ್ಯನು ನಿದ್ರಿಸುತ್ತಾನೆ.

ಪರಾ 1ನೇ ಭಾಗ XI-35 ನೋಡಿ.

19. ದೋಷೇಷು ಮದಮೂರ್ಛಾಯಾಃ ಕೃತವೇಗೇಷು ದೇಹಿನಾಂ |
ಸ್ವಯಮೇವೋಪಶಾಮ್ಯಂತಿ ಸನ್ಯಾಸೋ ನೌಷಧೈರ್ವಿನಾ ||
ಸನ್ಯಾಸದ ಲಕ್ಷಣ
ವಾಗ್ದೇಹಮನಸಾಂ ಚೇಷ್ಟಾಮಾಕ್ಷಿಪ್ಯಾತಿಬಲಾ ಮಲಾಃ |
ಸನ್ಯಾಸಂ ಸನ್ನಿಪತಿತಾಃ ಪ್ರಾಣಾಯತನಸಂಶ್ರಯಾಃ ||
ಕುರ್ವಂತಿ ತೇನ ಪುರುಷಃ ಕಾಷ್ಠಭೂತೋ ಮೃತೋಪಮಃ |
ಮ್ರಿಯೇತ ಶೀಘ್ರಂ ಶೀಘ್ರಂ ಚೇಚ್ಚಿಕಿತ್ಸಾ ನ ಪ್ರಯುಜ್ಯತೇ ||
ಅಗಾಧೇ ಗ್ರಾಹಬಹುಲೇ ಸಲಿಲೌಘ ಇವಾತಟೇ |
ಸನ್ಯಾಸೇ ವಿನಿಮಜ್ಜಂತಂ ನರಮಾಶು ನಿವರ್ತಯೇತ್ || (ವಾ. 206)

ಮದ ಮತ್ತು ಮೂರ್ಛೆ ಎಂಬ ರೋಗಗಳಲ್ಲಿ ಮನುಷ್ಯರಿಗೆ ದೋಷಗಳ ವೇಗವು ತೀರಿದೊಡನೆ, ಆ ರೋಗಗಳು (ಚಿಕಿತ್ಸೆ ಇಲ್ಲದಿದ್ದರೂ) ತಾವಾಗಿ ಶಾಂತವಾಗುವವು. ಆದರೆ ಸನ್ಯಾಸವೆಂಬ ರೋಗವು ಔಷಧಗಳಿಂದಲ್ಲದೆ ಶಮನವಾಗುವದಿಲ್ಲ. ವಾತಾದಿ ದೋಷಗಳು ಒಟ್ಟು ಕೂಡಿಕೊಂಡು, ಅತಿ ಬಲವಂತವಾಗಿ, ಪ್ರಾಣದ ಮನೆಯಾದ ಹೃದಯವನ್ನು ಆಶ್ರಯಿಸಿಕೊಂಡು, ಮಾತಿನ, ದೇಹದ ಮತ್ತು ಮನಸ್ಸಿನ ಚೇಷ್ಟೆಗಳನ್ನು ನಿಲ್ಲಿಸಿ, ಸನ್ಯಾಸವೆಂಬ ರೋಗವನ್ನುಂಟುಮಾಡುತ್ತವೆ. ಅದರಿಂದ ಮನುಷ್ಯನು ಸತ್ತವನಂತೆ ಕಟ್ಟಿಗೆಯ ಹಾಗೆ ಆಗಿ, ಚಿಕಿತ್ಸೆಯನ್ನು ಬೇಗನೇ ಮಾಡದಿದ್ದರೆ, ಬೇಗನೇ ಸಾಯುವನು. ಆಳವಾದ, ಹೆಚ್ಚು ಮೊಸಳೆಗಳಿರುವ ಮತ್ತು ದಡ ಕಾಣದ ನೀರಾಶ್ರಯದಲ್ಲಿ ಮುಳುಗುವಂಥಾ ಮನುಷ್ಯನನ್ನು ಹೇಗೊ, ಹಾಗೆ ಸನ್ಯಾಸ ಎಂಬ ರೋಗದಲ್ಲಿ ಮುಳುಗುವಂತವ (ಸಾಯುವಂತವ)ನನ್ನು ಬೇಗನೆ ತಪ್ಪಿಸಬೇಕು (ಚಿಕಿತ್ಸೆಮಾಡಿ ಬದುಕಿಸಬೇಕು).

ಪಠಾ ದೋಷಗಳ ಪ್ರಾಬಲ್ಯದಿಂದಲೂ, ಅಂಧಕಾರದ ಅತಿರೇಕದಿಂದಲೂ, ಕಠಿಣವಾದ ಮೂರ್ಛೆಯುಂಟಾಗಿ, ನಿಶ್ಚೇಷ್ಟಿತನಾಗಿ ಬಿದ್ದಿರುವ ಯಾವ ಮನುಷ್ಯನಿಗೆ ಎಚ್ಚರ ಉಂಟಾಗುವದಿಲ್ಲವೊ, ಅಂಥವನಿಗೆ ಚಿಕಿತ್ಸೆಮಾಡುವದು ಅತಿ ಪ್ರಯಾಸವೆಂತ ಬುದ್ಧಿವಂತನು ತಿಳಿಯತಕ್ಕದ್ದು, ಮತ್ತು ನೀರಲ್ಲಿ ಬಿದ್ದು ನೆನೆದ ಮಣ್ಣಿನ ಹೆಂಟೆಯನ್ನು, ಕರಗಿಹೋಗುವದರೊಳಗೇನೇ, ಹೇಗೆ ತೆಗೆಯತಕ್ಕದ್ದೊ, ಹಾಗೆ ಮೂರ್ಛೆಯ ಹೊಡತದಿಂದ ಯಾವ ನೋವನ್ನೂ ಅರಿಯದೆ ಯಮನ ವಶ ಹೋಗುವಂಥವನಿಗೆ ಬೇಗನೇ ಚಿಕಿತ್ಸೆಮಾಡತಕ್ಕದ್ದು ಎಂತ ಸುಶ್ರುತ ಬರದಿದ್ದಾನೆ (ಪು 830)

## ಚಿಕಿತ್ಸೆ

20. ಸೇಕಾವಗಾಹೌ ಮಣಯಃ ಸಹಾರಾಃ ಶೀತಾಃ ಪ್ರದೇಹಾ ವ್ಯಜನಾನಿಲಾಶ್ಚ |
ಶೀತಾನಿ ಪಾನಾನಿ ಚ ಗನ್ಧವಂತಿ ಸರ್ವಾಸು ಮೂರ್ಚ್ಛಾಸ್ವನಿವಾರಿತಾನಿ ||
(ಸು. 829)

ಮೂರ್ಛೆಗಳಿಗೆ ಸಾಮಾನ್ಯ ಉಪಕ್ರಮ ವಿಧಾನ

ತಣ್ಣೀರನ್ನು ಚಿಮುಕಿಸುವದು, ತಣ್ಣೀರಿನಲ್ಲಿ ಕೂಡ್ರಿಸುವದು, (ಚಂದ್ರಕಾಂತಾದಿ) ಮಣಿಗಳು, (ಮುತ್ತು ಮುಂತಾದವುಗಳ) ಸರಗಳು, ಶೀತಕರವಾದ (ಚಂದನಾದಿ) ಲೇಪಗಳು, ಬೀಸಣಿಕೆಯ ಗಾಳಿ, ತಂಪಾದ ಮತ್ತು ಪರಿಮಳವುಳ್ಳ ಪಾನಕಗಳು, ಇವುಗಳು ಯಾವ ಜಾತಿಯ ಮೂರ್ಛೆಯಲ್ಲಿಯಾದರೂ ನಿಷೇಧಿಸಲ್ಪಟ್ಟಿರುವದಿಲ್ಲ. (ಅಂದರೆ ಎಲ್ಲಾ ಮೂರ್ಛೆಗಳಲ್ಲಿಯೂ ಹಿತಕಾರಿಯಾಗುತ್ತವೆ.)

ಪಠಾ ತಣ್ಣೀರು ಚಿಮುಕಿಸಬೇಕಾದದ್ದು ಹಣೆಗೆ

21. ಭುಜಂಗಪುಷ್ಪಂ ಮರಿಚಾನ್ಯುಶೀರಂ ಕೋಲಸ್ಯ ಮದ್ಯಂ ಚ ಪಿಬೇತ್ಸಮಾನಿ |
ಸತೀನ* (?ಶೀತೇನ) ತೋಯೇನ ಬಿಸಂ ಮೃಣಾಲಂ ಕ್ಷೌದ್ರೇಣ ಕೃಷ್ಣಾಂ ಸಿತಯಾ ಚ ಪಥ್ಯಾಮ್ || (ಸು. 830)

ಕೆಲವು ಕಲ್ಕಗಳು

ನಾಗಕೇಸರ, ಬಿಳೇ ಕಾಳುಮೆಣಸು, ಲಾವಂಚ, ಬೊಗರಿ ಬೀಜದ ತಿರುಳು, ಇವುಗಳನ್ನು ಸಮಾಂಶವಾಗಿ ತೆಗೆದುಕೊಂಡು, ತಣ್ಣೀರಿನಿಂದ ಅರೆದು ಕುಡಿಯುವದು; ಅಥವಾ ತಾವರೆ ದಂಟು ಮತ್ತು ಲಾವಂಚಗಳನ್ನು ಶೀತವಾದ ನೀರಿನಿಂದ ಅರೆದು

ಕುಡಿಯುವದು, ಅಥವಾ ಹಿಪ್ಪಲಿ ಮತ್ತು ಅಣಿಲೆಕಾಯಿಯ ಸಿಪ್ಪೆಯ ಚೂರ್ಣ ಮಾಡಿ ಸಕ್ಕರೆ ಮತ್ತು ಜೇನು ಕೂಡಿಸಿಕೊಂಡು ನೆಕ್ಕುವದು. (ಈ ಯೋಗಗಳು ಮೂರ್ಛೆಯಲ್ಲಿ ಪ್ರಶಸ್ತ.)

*'ಶೀತೇನತೋಯೇನ' ಎಂಬ ಪಾಠವೇ ಬಹಳವಾಗಿ ಉಂಟು "ಸತೀನತೋಯ" ಎಂದರೆ ಪುಟಾಣಿ ಕಡಲೇ ನೀರು ಬರೇ ಹಿಪ್ಪಲೀ ಚೂರ್ಣವನ್ನು ಜೇನಿನಿಂದ ಮತ್ತು ಅಣಿಲೆಕಾಯಿ ಚೂರ್ಣವನ್ನು ಸಕ್ಕರೆ ಕೂಡಿಸಿ, ಸೇವಿಸಬಹುದು ಎಂತ ಅರ್ಥ ಬರೆದದ್ದು ಕಾಣುತ್ತದೆ (ನಿ ಸಂ ವ್ಯಾ) ಆದರೆ 'ಮೃಣಾಲಾದಿ' ನಾಲ್ಕು ಬಗೆಗಳನ್ನೂ ಒಟ್ಟಾಗಿ ಜೇನಿನಿಂದ ನೆಕ್ಕಬೇಕು ಎಂತ ವಾ (ಮುಂದಿನ ಸಂ 25 ನೋಡು) ಅದೇ ಸಮಂಜಸವಾಗಿ ತೋರುತ್ತದೆ

22. ಕುರ್ಯಾಚ್ಚ ನಾಸಾವದನಾವರೋಧಂ ಕ್ಷೀರಂ ಪಿಬೇದ್ವಾಪ್ಯಥ ಮಾನುಷೀಣಾಂ । (ಸು. 830)

ಎಚ್ಚರಬರಿಸುವದಕ್ಕೆ ಉಪಾಯ

ಮೂಗಿನ ಸೊಳ್ಳೆಗಳಲ್ಲಿಯೂ ಬಾಯಿಯಲ್ಲಿಯೂ (ಶ್ವಾಸಕ್ಕೆ) ತಡೆಯನ್ನುಂಟುಮಾಡಿ ನೋಡಬೇಕು, ಅಥವಾ ಹೆಂಗಸರ ಮೊಲೆ ಹಾಲನ್ನು ಕುಡಿಯಬೇಕು.

ಷರಾ ಸ್ತ್ರೀಯ ಮೊಲೆ ಹಾಲಿನಿಂದ ನಸ್ಯಮಾಡಿಸುವದು ಸಹ ಮೂರ್ಛೆಯುಂಟಾಗಿದ್ದಾಗ್ಗೆ ಹಿತ ಎಂತ ವಾ (ಪು 305) ಬಾಯಿ ಮೂಗುಗಳನ್ನು ಮುಚ್ಚುವದರಿಂದ ತಡೆಯಲ್ಪಟ್ಟ ವಾಯುವು ಸ್ರೋತಸ್ಸುಗಳನ್ನು ಅರಳಿಸಿ (ಹಿಗ್ಗಿಸಿ) ಮೂರ್ಛೆಯನ್ನು ಪರಿಹರಿಸುತ್ತದೆ ಎಂತ ನಿ ಸಂ ವ್ಯಾ. (ಪು 634-5)

23. ಮೂರ್ಛಾಂ ಪ್ರಸಕ್ತಾಂ ತು ಶಿರೋವಿರೇಕೈರ್ಜಯೇದಭೀಕ್ಷ್ಣಂ ವಮನೈಶ್ಚ ತೀಕ್ಷ್ಣೈಃ । (ಸು. 830)

ಶಿರೋವಿರೇಚನ ವಮನಗಳ ಉಪಯೋಗ

ಹಿಡಕೊಂಡಿರುವ (ಪದೇ ಪದೇ ಬರುತ್ತಿರುವ) ಮೂರ್ಛೆಯನ್ನು ಶಿರೋವಿರೇಚನಗಳಿಂದಲೂ, ಬಹು ಸರ್ತಿ ತೀಕ್ಷ್ಣವಾದ ವಮನೌಷಧಗಳಿಂದ ವಾಂತಿ ಮಾಡಿಸುವದರಿಂದಲೂ, ಜಯಿಸಬೇಕು.

ಷರಾ ಪ್ರಥಮ ಚರಣದಲ್ಲಿ "ಮೂರ್ಛಾಂ ಪ್ರಶಸ್ತಾಮ್ಬು" ಎಂತ ಪಾಠವಿರುವಲ್ಲಿ ಮೂರ್ಛೆಯನ್ನು ಪ್ರಶಸ್ತವಾದ ನೀರಿನಿಂದ (ರಸಗಳಿಂದ) ಶಿರೋವಿರೇಚನ ಮಾಡಿಸಿ ಗೆಲ್ಲಬೇಕೆಂತ ಅರ್ಥವಾಗುತ್ತದೆ. ಆ ಪಾಠ ಸರಿ ಕಾಣುವದಿಲ್ಲ

24. ಹರೀತಕೀಕ್ವಾಥಘೃತಂ ಪಿಬೇದ್ವಾ ಧಾತ್ರೀಫಲಾನಾಂ ಸ್ವರಸೈಃ ಕೃತಂ ವಾ।
ದ್ರಾಕ್ಷಾಸಿತಾದಾಡಿಮಲಾಜವನ್ತಿ ಶೀತಾನಿ ನಿಲೋತ್ಪಲಪದ್ಮವನ್ತಿ ॥
ಪಿಬೇತ್ ಕಷಾಯಾಣಿ ಚ ಗನ್ಧವನ್ತಿ ಪಿತ್ತಜ್ವರಂ ಯಾನಿ ಶಮಂ ನಯನ್ತಿ ।
(ಸು. 830)

ಪಿತ್ತಜ್ವರಹರ ಕಷಾಯಾದಿಗಳ ಉಪಯೋಗ.

ಅಣಿಲೆಕಾಯಿಯ ಕಷಾಯದಿಂದ ಅಥವಾ ನೆಲ್ಲಿಹಣ್ಣಿನ ರಸಗಳಿಂದ ತಯಾರಿಸಿದ ತುಪ್ಪವನ್ನು ಮೂರ್ಛಾರೋಗಿಯು ಕುಡಿಯಬೇಕು. ದ್ರಾಕ್ಷೆ, ಸಕ್ಕರೆ, ದಾಳಿಂಬದ ಹಣ್ಣು ಮತ್ತು ಲಾವಂಚ ಸೇರಿದ, (ಅಥವಾ) ನೈದಿಲೆ ಮತ್ತು ತಾವರೆ ಸೇರಿದ, (ಅಥವಾ) ಸುಗಂಧದ್ರವ್ಯಗಳು ಸೇರಿದ, ಪಿತ್ತಜ್ವರಶಮನಕರವಾದ ಶೀತವಾದ ಕಷಾಯಗಳನ್ನು ಅವನು ಕುಡಿಯಬೇಕು.

ಷರಾ ದೋಷಕ್ಕೆ ತಕ್ಕ ಹಾಗಿನ ಜ್ವರಹರ ಕಷಾಯಗಳನ್ನು ಪ್ರಯೋಗಿಸಬೇಕು ಎಂತ ಅ ಸಂ. (II—177) ಮತ್ತು ರ. ರ. (ಪು. 336)

25. ಮೃಣಾಲಬಿಸಕೃಷ್ಣಾ ವಾ ಲಿಹ್ಯಾತ್ ಕ್ಷೌದ್ರೇಣ ಸಾಭಯಾಃ ।
ಲೇಹಗಳು ದುರಾಲಭಾಂ ವಾ ಮುಸ್ತಾಂ ವಾ ॥ (ವಾ. 305)

ಲಾವಂಚ, ತಾವರೆದಂಟು, ಹಿಪ್ಪಲಿ ಮತ್ತು ಅಣಿಲೆಕಾಯಿ, ಇವುಗಳ, ಅಥವಾ ಕೆಂಪುಬಳ್ಳಿತುರುಚದ ಬೇರಿನ, ಅಥವಾ ಭದ್ರಮುಷ್ಟಿಯ ಚೂರ್ಣವನ್ನು ಜೇನಿನೊಂದಿಗೆ ಕಲಸಿ ನೆಕ್ಕಬೇಕು. (ಆದರಿಂದ ಮೂರ್ಛೆ ಪರಿಹಾರ.)

26. ಕಲ್ಯಾಣಕಂ ಮಹಾತಿಕ್ತಂ ಷಟ್ಪಲಂ ಪಯಸಾಗ್ನಿಕಃ ।
ರಸಾಯನ ಪಿಪ್ಪಲ್ಯೋ ವಾ ಶಿಲಾಹ್ವಂ ವಾ ರಸಾಯನವಿಧಾನತಃ ।
ಯೋಗಗಳು ತ್ರಿಫಲಾ ವಾ ಪ್ರಯೋಕ್ತವ್ಯಾ ಸಘೃತಕ್ಷೌದ್ರಶರ್ಕರಾ ॥ (ವಾ. 305)

(ಉನ್ಮಾದ ಚಿಕಿತ್ಸೆಯಲ್ಲಿ ವಿವರಿಸಲ್ಪಟ್ಟ) ಕಲ್ಯಾಣಘೃತವನ್ನಾಗಲೀ, (ಕುಷ್ಠ ಚಿಕಿತ್ಸೆಯಲ್ಲಿ ಹೇಳಲ್ಪಟ್ಟ) ಮಹಾ ತಿಕ್ತಘೃತವನ್ನಾಗಲೀ, (ರಾಜಯಕ್ಷ್ಮ ಚಿಕಿತ್ಸೆಯಲ್ಲಿ ವರ್ಣಿಸಲ್ಪಟ್ಟ) ಷಟ್ಪಲ ಘೃತವನ್ನಾಗಲೀ, ಹಾಲಿನಿಂದ ಚಿತ್ರಮೂಲದ ಬೇರನ್ನಾಗಲೀ, ರಸಾಯನಕ್ರಮದಿಂದ ಹಿಪ್ಪಲಿ ಅಥವಾ ಶಿಲಾಜತುವನ್ನಾಗಲೀ, ತುಪ್ಪ, ಜೇನು ಮತ್ತು ಸಕ್ಕರೆ ಕೂಡಿಸಿಕೊಂಡು ತ್ರಿಫಲೆಯನ್ನಾಗಲೀ, ಪ್ರಯೋಗಿಸಬೇಕು. (ಇವುಗಳ ಉಪಯೋಗದಿಂದ ಮೂರ್ಛೆರೋಗ ಪರಿಹಾರವಾಗುತ್ತದೆ.)

27. ಮೃದ್ವೀಕಾಮಧುಕಮಧೂಕಪಿಪ್ಪಲೀಭಿಃ
ದ್ರಾಕ್ಷಾದಿ ಖರ್ಜೂರೈರ್ಮಲಯಜಶಾರಿಬಾಜಲಾಬ್ದೈಃ ।
ಕಷಾಯ ಸೋಶೀರೈಃ ಶೃತಮಥವಾ ಸುಶೀತಮಮ್ಬು
ಸ್ತೃಣ್ಮೂರ್ಛಾಮದಮತಿವಿಭ್ರಮಾನ್ನಿರಸ್ಯೇತ್ ॥ (ವೈ. ಸಾ. ಸಂ. 192)

ದ್ರಾಕ್ಷೆ, ಜ್ಯೇಷ್ಠಮಧು, ಇಪ್ಪೆಹೂವು, ಹಿಪ್ಪಲಿ, ಖರ್ಜೂರ, ಶ್ರೀಗಂಧ, ಸುಗಂಧಿಬೇರು, ಮುಡಿವಾಳ, ಭದ್ರಮುಷ್ಟಿ, ಲಾವಂಚ, ಇವುಗಳ ಕುದಿಸಿದ ಅಥವಾ ಶೀತಕಷಾಯವು ಬಾಯಾರಿಕೆ, ಮೂರ್ಛೆ, ಮದ ಮತ್ತು ಬುದ್ಧಿಭ್ರಮೆಗಳನ್ನು ಪರಿಹರಿಸುವದು.

ಷರಾ ಇಪ್ಪೆಹೂವಿನ ಬದಲಾಗಿ ಇಪ್ಪೆ ತಿರುಳನ್ನು ಹಾಕುವ ವಾಡಿಕೆಯು ಸರಿಯಲ್ಲ, 'ಶಾರಿಬಾಜಲಾಬ್ದೈಃ' ಎಂಬಲ್ಲಿ "ಶಾರಿಬಾಬ್ಜಲಾಬ್ದೈ" ಎಂತ ಪಾಠವಿಟ್ಟು ಲಾವಂಚ ಮತ್ತು ಭದ್ರಮುಷ್ಟಿ ಬದಲಾಗಿ ತಾವರೆದಂಟು ಮತ್ತು ಅರಳು ಎಂತ ಅರ್ಥ ಬರದಿರುವದು ಕಾಣುತ್ತದೆ ಲಾವಂಚ ಮತ್ತು ಮುಸ್ತಾ ಸೇರಿಸಿ ಮಾಡಿದ ಕಷಾಯವು ಫಲಕಾರಿಯಾಗಿ ಕಂಡದೆ

28. ಮಹೌಷಧಾಮೃತಾ ಕ್ಷುದ್ರಾ ಪೌಷ್ಕರಂ ಗ್ರಂಥಿಕೋದ್ಭವಮ್ ।
ಶುಂಠ್ಯಾದಿ ಪಿಬೇತ್ಕಣಾಯುತಂ ಕ್ವಾಥಂ ಮೂರ್ಛಾಯೇಷು ಮದೇಷು ಚ ॥
ಕಷಾಯ (ರ. ರ. 366)

ಒಣಶುಂಠಿ, ಅಮೃತಬಳ್ಳಿ, ಕಿರಗುಳ್ಳದಬೇರು, ಪುಷ್ಕರಮೂಲ, ಮೋಡಿ (ಹಿಪ್ಪಲಿ ಮೂಲ), ಹಿಪ್ಪಲಿ, ಇವುಗಳ ಕಷಾಯವನ್ನು ಮೂರ್ಛೆಗಳಲ್ಲಿಯೂ, ಮದಗಳಲ್ಲಿಯೂ, ಕುಡಿಯಬೇಕು. (ಆದರಿಂದ ಕ್ಷೇಮವಾಗುವದು.)

29. ಪ್ರಾತರ್ಗುಡಾರ್ದ್ರಕಂ ಖಾದೇತ್ತಥಾ ಮಧುಲಿಹನ್ನಿಶಿ ।
ಹಸಿಶುಂಠಿಯ ಮೂರ್ಛೋನ್ಮಾದಮದಂ ಕಾಸಂ ಸಪ್ತಾಹಾತ್ಪಥ್ಯಭುಕ್ ಜಯೇತ್ ॥
ಉಪಯೋಗ (ರ. ರ. 368)

ಬೆಳಿಗ್ಗೆ ಹಸಿಶುಂಠಿಯನ್ನು ಹಳೇ ಬೆಲ್ಲದೊಂದಿಗೆ ತಿನ್ನುತ್ತಾ, ರಾತ್ರಿ ಜೇನನ್ನು ನೆಕ್ಕುತ್ತಾ, ಏಳು ದಿನ ಪಥ್ಯದಲ್ಲಿದ್ದರೆ, ಮೂರ್ಛೆ, ಉನ್ಮಾದ, ಮದ ಮತ್ತು ಕೆಮ್ಮು ಪರಿಹಾರವಾಗುವವು.

30. ಚನ್ದನಂ ಪದ್ಮಕೋಶೀರಮಧುಕಂ ಪದ್ಮಕೇಸರಂ |
ಚಂದನಾದಿ ಕಷಾಯ ಮಧೂಕತ್ರಿಫಲೇ ಚ ದ್ವೇ ಜಲೇ ನೀಲಮಧೋತ್ಪಲಮ್ ||
ಕ್ವಾಥೋಽಯಂ ಶಿಶಿರೋವಾಥ ಶರ್ಕರಾಮಧುಯೋಜಿತಃ |
ಪೀತಃ ಪಿತ್ತಾನಿಲಮದತೃಷ್ಣಾಂ ಮೂರ್ಚ್ಛಾಂ ಚ ನಾಶಯೇತ್ ||

(ವೈ. ಸಾ. ಸಂ. 19)

ಶ್ರೀಗಂಧ, ಪದ್ಮಕ, ಲಾವಂಚ, ಜ್ಯೇಷ್ಠಮಧು, ತಾವರೆಕೇಸರ, ಇಪ್ಪೆಹೂವು, ತ್ರಿಫಲೆ, ಮುಡಿವಾಳ, ಇರುವೇರಿದಂಟು, ನೀಲತಾವರೆ (ಅಥವಾ ನೈದಿಲೆ), ಇವುಗಳ ಪಕ್ವಕಷಾಯವನ್ನಾಗಲೀ, ಶೀತ ಕಷಾಯವನ್ನಾಗಲೀ, ಸಕ್ಕರೆ ಮತ್ತು ಜೇನು ಕೂಡಿಸಿಕೊಂಡು, ಕುಡಿಯಲು, ಪಿತ್ತವಾಯು, ಮದ, ಬಾಯಾರಿಕೆ, ಮೂರ್ಛೆ ಸಹ ನಾಶವಾಗುವವು.

31. ಸ್ವಿನ್ನಮಾಮಲಕಂ ಪಿಷ್ಟ್ವಾ ದ್ರಾಕ್ಷಯಾ ಸಹ ಸಂಸೃಜೇತ್ |
ಆಮಲಕ್ಯಾದಿ ಲೇಹ ವಿಶ್ವಭೇಷಜಸಂಯುಕ್ತಂ ಮಧುನಾ ಸಹ ಲೇಹಯೇತ್ ||
ತೇನಾಸ್ಯ ಶಾಮ್ಯತೇ ಮೂರ್ಚ್ಛಾ ಶ್ವಾಸಃ ಕಾಸಸ್ತಥೈವ ಚ |

(ಚಿ. ಸಾ. ಸಂ. 291)

ಹಸೀ ನೆಲ್ಲಿಹಣ್ಣನ್ನು ಸೆಕೆಯಿಂದ ಬೆವರಿಸಿ, ದ್ರಾಕ್ಷಿಯೊಂದಿಗೆ ಅರೆದು, ಅನಂತರ ಒಣಶುಂಠಿ ಚೂರ್ಣವನ್ನೂ ಜೇನನ್ನೂ ಕೂಡಿಸಿ, ಲೇಹಮಾಡಿಟ್ಟುಕೊಂಡು ಸೇವಿಸುತ್ತಾ ಬಂದಲ್ಲಿ, ಮೂರ್ಛೆ, ಉಬ್ಬಸ ಮತ್ತು ಕೆಮ್ಮು ಪರಿಹಾರವಾಗುವವು.

32. ಪಂಚಮೂಲಕಷಾಯಂ ಚ ಮಧುನಾ ಸಿತಯಾ ಪಿಬೇತ್ ||

(ಚಿ. ಸಾ. ಸಂ. 291)

ಪಂಚಮೂಲ ಕಷಾಯ

(ಹ್ರಸ್ವ) ಪಂಚಮೂಲಗಳ ಕಷಾಯವನ್ನು, ಸಕ್ಕರೆ ಮತ್ತು ಜೇನು ಕೂಡಿಸಿಕೊಂಡು, ಪಾನಮಾಡಬೇಕು. (ಅದರಿಂದ ಮೂರ್ಛೆ ಪರಿಹಾರ.)

33. ಯಥಾಸ್ವಂ ಚ ಜ್ವರಘ್ನಾನಿ ಕಷಾಯಾಣ್ಯುಪಯೋಜಯೇತ್ |
ಸರ್ವಮೂರ್ಚ್ಛಾಪರೀತಾನಾಂ ವಿಷಜಾನಾಂ ವಿಷಾಪಹಮ್ ||

(ಸು. 831)

ಜ್ವರಹರವಾದ ಮತ್ತು ವಿಷಹರವಾದ ಯೋಗಗಳ ಉಪಯೋಗ

ಎಲ್ಲಾ ಮೂರ್ಚ್ಛಾ ರೋಗದವರಿಗೂ ಆಯಾ ಮೂರ್ಛೆಗೆ ಕಾರಣವಾದ ದೋಷಗಳಿಂದುಂಟಾದ ಜ್ವರವನ್ನು ಪರಿಹರಿಸತಕ್ಕ ಕಷಾಯಗಳನ್ನು ಉಪಯೋಗಿಸತಕ್ಕದ್ದು. ವಿಷದಿಂದುಂಟಾಗುವ ಮೂರ್ಛೆಯಲ್ಲಿ ಆ ವಿಷಕ್ಕೆ ಉಕ್ತವಾದ ಪರಿಹಾರಗಳನ್ನು ಮಾಡತಕ್ಕದ್ದು.

34. ಮದೇಷ್ವತಿಪ್ರವೃದ್ಧೇಷು ಮೂರ್ಛಾಯೇಷು ಚ ಯೋಜಯೇತ್ ।
ತೀಕ್ಷ್ಣಂ ಸನ್ಯಾಸವಿಹಿತಂ ವಿಷಘ್ನಂ ವಿಷಜೇಷು ಚ ॥
(ವಾ. 305)

ಕಠಿಣವಾದ ಮದ ಮೂರ್ಛೆಗಳಲ್ಲಿ ಸನ್ಯಾಸ ಚಿಕಿತ್ಸೆ

ಮದಗಳಾಗಲಿ ಮೂರ್ಛೆಗಳಾಗಲಿ ಅತಿಯಾಗಿ ಬೆಳೆದುಕೊಂಡಿದ್ದರೆ, ಸನ್ಯಾಸರೋಗಕ್ಕೆ ಹೇಳಲ್ಪಟ್ಟ ತೀಕ್ಷ್ಣ ಪ್ರಯೋಗಗಳನ್ನು ಉಪಯೋಗಿಸಬೇಕು; ಮತ್ತು ವಿಷಜ ಮದಮೂರ್ಛೆಗಳಲ್ಲಿ (ಅವುಗಳಿಗೆ ಕಾರಣವಾದ) ವಿಷವನ್ನು ಪರಿಹರಿಸತಕ್ಕಂಥಾ ಔಷಧೋಪಚಾರಗಳನ್ನು ಮಾಡಬೇಕು.

35. ಸಗುಡಃ ಕೂಷ್ಮಾಂಡರಸಃ ಶಮಯತಿ ಮದಮಾಶು ಕೋದ್ರವಜಮ್ ।
(ಭಾ. ಪ್ರ. 397)

ಕೋದ್ರವ ಮದಕ್ಕೆ

ಕೋದ್ರವ (ಹಾರಕ) ಎಂಬ ಧಾನ್ಯದ ಮದವು ಬೂದಿಕುಂಬಳ ರಸವನ್ನು ಬೆಲ್ಲ ಕೂಡಿಸಿ ಸೇವಿಸಿದ್ದಲ್ಲಿ ಬೇಗನೆ ಶಮನವಾಗುತ್ತದೆ.

36. ದತ್ತೂರಜಂ ಚ ದುಗ್ಧಂ ಸಶರ್ಕರಂ ಚಾಶು ಪಾನೇನ
(ಭಾ. ಪ್ರ. 397)

ಉನ್ಮತ್ತದ ಮದಕ್ಕೆ

ಉಮ್ಮತ್ತಗಿಡದ ಬೀಜ ಮುಂತಾದ್ದರ ಸೇವನದಿಂದ ಉಂಟಾದ ಮದವು ಬೇಗನೇ ಹಾಲನ್ನು, ಸಕ್ಕರೆ ಕೂಡಿಸಿ, ಕುಡಿಯುವದರಿಂದ ಶಮನವಾಗುವದು.

ಪರಾ ಮುಂದೆ ವಿಷಚಿಕಿತ್ಸೆ ನೋಡಿ

37. ಸಚ್ಛರ್ದಿಮೂರ್ಛಾತಿಸಾರಂ ಮದಂ ಪೂಗಫಲೋದ್ಭವಮ್ ।
ಸದ್ಯಃ ಪ್ರಶಮಯೇತ್ಪೀತಮಾತೃಪ್ತೇರ್ವಾರಿ ಶೀತಲಂ ॥ (ಭಾ. ಪ್ರ. 397)

ಅಡಿಕೆಯ ಮದಕ್ಕೆ

ಅಡಿಕೆಯನ್ನು ತಿಂದು ಉಂಟಾದ ವಾಂತಿ, ಮೂರ್ಛೆ ಮತ್ತು ಅತಿಸಾರಗಳಿಂದ ಕೂಡಿಕೊಂಡ ಮದವು ತಣ್ಣೀರನ್ನು ತೃಪ್ತಿಯಾಗುವ ತನಕ ಕುಡಿಯುವದರಿಂದ ಕೂಡಲೆ ಶಮನವಾಗುವದು.

ವಸ್ಯಕರೀಷಘ್ರಾಣಾಜ್ಜಲಪಾನಾಲ್ಲವಣಭಕ್ಷಣಾದಪಿ ಚ ।
ಶಾಮ್ಯತಿ ಪೂಗಫಲೋದ್ಭವಮದಃ ಸಶೂಲಃ ಸಶರ್ಕರಾಕವಲಾತ್ ॥
(ಭಾ. ಪ್ರ. 397)

ಗೋವುಗಳು ಕಾಡಿನಲ್ಲಿ ಇಕ್ಕಿ ಒಣಗಿದ ಸೆಗಣಿಯ ವಾಸನೆ ತೆಗೆದುಕೊಳ್ಳುವದರಿಂದಲೂ, ನೀರನ್ನು ಕುಡಿಯುವದರಿಂದಲೂ, ಉಪ್ಪನ್ನು ತಿನ್ನುವದರಿಂದಲೂ, ಸಕ್ಕರೆಯನ್ನು ಬಾಯಲ್ಲಿಟ್ಟುಕೊಳ್ಳುವದರಿಂದಲೂ, ಶೂಲಸಹಿತವಾದ ಅಡಿಕೆ ಸೊಕ್ಕಿದ ಮದವು ಶಮನವಾಗುವದು.

38. ತತ್‌ಕ್ಷಣಾನ್ಮೃದಿತಂ ಚೂರ್ಣಂ ಸಮಾಘ್ರಾತಂ ಪ್ರಣಾಶಯೇತ್ ।
ತಾಂಬೂಲೋತ್ಥಂ ಮದಂ ಪುಂಸಾಮೇಕಮೇವ ಸ್ವಭಾವತಃ ॥
(ಭಾ. ಪ್ರ. 397)

ವೀಳ್ಯದೆಲೆಯ ಮದ

ಸುಣ್ಣ ಒಂದನ್ನೇ ಪುಡಿಮಾಡಿ (ಅಥವಾ ಹಿಸುಕಿ), ಅದರ ವಾಸನೆಯನ್ನು ಮೂಗಿನಿಂದ ಸರಿಯಾಗಿ ಸೆಳಕೊಳ್ಳುವದರಿಂದ ಆ ಕ್ಷಣದಲ್ಲಿ ವೀಳ್ಯದೆಲೆಯಿಂದುಂಟಾದ ಮದವು ಸ್ವಾಭಾವಿಕವಾಗಿ ವಾಸಿಯಾಗುವದು.

39. ಜಾಯಿಕಾಯಿಯ ಮದಕ್ಕೆ

ಜಾತೀಫಲಮದಂ ಶೀಘ್ರಂ ಹನ್ತಿ ಪಥ್ಯಾ ನಿಷೇವಿತಾ |
ಶೀತತೋಯಾವಗಾಹಶ್ಚ ಶರ್ಕರಾ ದಧಿಯೋಜಿತಾ ||

(ಭಾ. ಪ್ರ. 397)

ಜಾಯಿಕಾಯಿಯ ಭಕ್ಷಣದಿಂದುಂಟಾದ ಮದವು ಅಣಿಲೆಕಾಯಿಯನ್ನು ಸೇವಿಸುವದರಿಂದಲೂ, ತಣ್ಣೀರ ಸ್ನಾನದಿಂದಲೂ, ಸಕ್ಕರೆ ಕೂಡಿಸಿ ಮೊಸರನ್ನು ಕುಡಿಯುವದರಿಂದಲೂ, ಬೇಗನೇ ಪರಿಹಾರವಾಗುತ್ತದೆ.

40 ಶಾಂತಿಕಾಯಿಯ ಮದಕ್ಕೆ

ವಿಭೀತಮದಶಾಂತ್ಯರ್ಥಮೇತದೇವ ಮತಾ ಪುನಃ ||

(ಭಾ. ಪ್ರ. 397)

ಮೇಲೆ ಜಾಯಿಕಾಯಿಯ ಮದಕ್ಕೆ ಹೇಳಲ್ಪಟ್ಟ ಪ್ರಯೋಗಗಳೇ ಶಾಂತಿಕಾಯಿಯ ಮದವನ್ನು ಶಮನಮಾಡುವವೆಂತ ತಿಳಿದಿದ್ದಾರೆ.

41. ಮದ್ಯದ ಮದಕ್ಕೆ

ಮದ್ಯಂ ಪೀತ್ವಾ ಯದಿ ನಾ ತತ್‌ಕ್ಷಣಮವಲೇಢಿ ಶರ್ಕರಾಂ ಸಘೃತಾಮ್ |
ಜಾತು ನ ಮದಯತಿ ಮದ್ಯಂ ಮನಾಗಪಿ ಪ್ರಥಿತವೀರ್ಯಮಂ ||

(ಭಾ. ಪ್ರ. 397)

ಮನುಷ್ಯನು ಮದ್ಯವನ್ನು ಕುಡಿದು ಆ ಕ್ಷಣದಲ್ಲಿಯೇ ಸಕ್ಕರೆಯನ್ನು ತುಪ್ಪದಲ್ಲ ಕಲಸಿ ನೆಕ್ಕಿದರೆ, ಅವನಿಗೆ ಆ ಮದ್ಯವು, ಎಷ್ಟು ವೀರ್ಯವುಳ್ಳದ್ದಾದರೂ, ಸ್ವಲ್ಪಮಾತ್ರಕ್ಕೂ ಅಮಲನ್ನುಂಟುಮಾಡಲಾರದು.

42. ರಕ್ತಜ ಮತ್ತು ಮದ್ಯಜ ಮೂರ್ಛೆಗೆ ಪ್ರತಿಕ್ರಿಯೆ.

ರಕ್ತಜಾಯಾನ್ತು ಮೂರ್ಛಾಯಾಂ ಹಿತಃ ಶೀತಕ್ರಿಯಾವಿಧಿಃ |
ಮದ್ಯಜಾಯಾಂ ವಮೇನ್ಮದ್ಯಂ ನಿದ್ರಾಂ ಸೇವೇದ್ಯಥಾ ಸುಖಮ್ ||

(ರ. ರ. 366)

ರಕ್ತಜಮೂರ್ಛೆಯಲ್ಲಿ ಶೀತೋಪಚಾರಗಳ ವಿಧಿಯು ಹಿತವಾದದ್ದು. ಮದ್ಯದಿಂದುಂಟಾದ ಮೂರ್ಛೆಯಲ್ಲಿ ಮದ್ಯವನ್ನು ವಾಂತಿಮಾಡಿಸಿ, ಸುಖವಾಗಿ ನಿದ್ರೆಮಾಡಿಸಬೇಕು.

43. ಮದ್ಯಜ ಮದಕ್ಕೆ ಪುನರ್ನವಾದಿ ಘೃತ

ಪಯಃಪುನರ್ನವಾಕ್ವಾಥೇ ಯಷ್ಟೀಕಲ್ಕಪ್ರಸಾಧಿತಮ್ |
ಘೃತಂ ಪುಷ್ಟಿಕರಂ ಪಾನಾತ್ ಮದ್ಯಪಾನಹತೌಜಸಮ್(?ಸಃ) ||

(ರ. ರ. 368)

ಪುನರ್ನವೀಬೇರಿನ ಕಷಾಯವನ್ನೂ ಹಾಲನ್ನೂ ಕೂಡಿಸಿಕೊಂಡು, ಜ್ಯೇಷ್ಠಮಧುವಿನ ಕಲ್ಕದಿಂದ, ಪಾಕಮಾಡಿದ ತುಪ್ಪದ ಪಾನವು ಮದ್ಯಪಾನದ ಬೆಸೆಯಿಂದ ಧಾತು ಕೆಟ್ಟವನಿಗೆ ಪುಷ್ಟಿಕರ.

44. ಪಿಬೇದ್ದುರಾಲಭಾಕ್ವಾಥಂ ಸಘೃತಂ ಭ್ರಮಶಾಂತಯೇ |
ಭ್ರಮಪರಿಹಾರಕ ಯೋಗಗಳು. ತ್ರಿಫಲಾಯಾಃ ಪ್ರಯೋಗೋ ವಾ ಪ್ರಯೋಗಃ ಪಯಸೋಽಪಿವಾ ||
(ಚಿ. ಸಾ. ಸಂ. 290)

ಭ್ರಮರೋಗದ ಶಾಂತಿಗಾಗಿ ಬಳ್ಳಿ ತುರಚನಬೇರಿನ ಕಷಾಯವನ್ನು, ತುಪ್ಪ ಕೂಡಿಸಿಕೊಂಡು, ಸೇವಿಸಬೇಕು; ಹಾಗೆಯೇ ತ್ರಿಫಲೆಯ ಪ್ರಯೋಗವಾಗಲೀ ದನದ ಹಾಲಿನ ಉಪಯೋಗವಾಗಲೀ (ಹಿತಕಾರಿಯಾಗುವದು).

45. ಕೃಷ್ಣಾಶತಾಹ್ವಾಶುಂಠೀನಾಂ ಸಾಭಯಾನಾಂ ಪಲಂ ಪಲಂ |
ಭ್ರಮಕ್ಕೆ ಪಿಪ್ಪಲ್ಯಾದಿ ಗುಳಿಗೆ ಗುಡಸ್ಯ ಷಟ್ಪಲಾನ್ಯೇಷಾ ಗುಟಿಕಾ ಭ್ರಮನಾಶಿನೀ ||
(ಚಿ. ಸಾ. ಸಂ. 291)

ಹಿಪ್ಪಲಿ, ಸಬ್ಬಸಿಗೆ ಬೀಜ (ಸತಾಪೆ), ಒಣಶುಂಠಿ, ಅಣಿಲೆಕಾಯಿಯ ಸಿಪ್ಪೆ, ಇವುಗಳನ್ನು ಒಂದೊಂದು ಪಲ ಪ್ರಕಾರ ತೆಗೆದುಕೊಂಡು, ಸಣ್ಣನಾಗಿ ವಸ್ತ್ರಗಾಲಿತ ಚೂರ್ಣಮಾಡಿ, ಆರು ಪಲ ಹಳೇ ಬೆಲ್ಲದಲ್ಲಿ ಕಲಸಿ, ಗುಳಿಗೆ ಮಾಡಿಟ್ಟುಕೊಂಡು, ಸೇವಿಸುತ್ತಾ ಬಂದಲ್ಲಿ ಭ್ರಮರೋಗ ಪರಿಹಾರವಾಗುವದು.

46. ಶತಾವರೀಬಲಾಮೂಲದ್ರಾಕ್ಷಾಸಿದ್ಧಂ ಪಿಬೇತ್ಪಯಃ |
ಭ್ರಮಕ್ಕೆ ಹಾಲು ಕಷಾಯ ಸಘೃತಂ ಭ್ರಮನಾಶಾಯ ಬೀಜಂ ವಾಟ್ಯಾಲಕಸ್ಯ ವಾ ||
(ರ. ರ. 367)

ಶತಾವರೀಬೇರು, ಕಲ್ಲಂಗಡಲೆ ಬೇರು, ಸಿಹಿ ದ್ರಾಕ್ಷೆ, ಇವುಗಳಿಂದ ತಯಾರಿಸಿದ ಹಾಲ ಕಷಾಯವು ಭ್ರಮನಾಶಕ. ತುತ್ತಿ (ಉರ್ಕಿ) ಬೀಜದ ಚೂರ್ಣವನ್ನು ತುಪ್ಪದೊಂದಿಗೆ ಸೇವಿಸಿದ್ದಲ್ಲಿ ಭ್ರಮನಾಶವಾಗುವದು.

ಷರಾ "ವಾಟ್ಯಾಲಕ" ಎಂದರೂ "ಬಲಾ" ಎಂದರೂ ಒಂದೇ ಎಂತ ನಿಘಂಟು ಹೇಳುತ್ತವೆ ಕಡ್ಡೀರಿನ ಬೀಜವನ್ನು ಸಂಗ್ರಹಿಸುವದಾಗಲೀ ಉಪಯೋಗಿಸುವದಾಗಲಿ ವಾಡಿಕೆಯಾಗಿ ಇಲ್ಲ ಬಲಾಪಂಚಕದಲ್ಲಿ ಸೇರಿದ ತುತ್ತಿಯ ಬೀಜ ಆಗಿರಬಹುದು

47. ಸೈಂಧವಂ ಶ್ವೇತಮರಿಚಂ ಸರ್ಷಪಾಃ ಕುಷ್ಠಮೇವ ಚ |
ತಂದ್ರೆಗೂ ಅತಿನಿದ್ರೆಗೂ ಪರಿಹಾರಗಳು ಬಸ್ತಮೂತ್ರೇಣ ಸಂಪಿಷ್ಟಂ ನಸ್ಯಂ ತನ್ದ್ರಾನಿವಾರಣಮ್ ||
(ಭಾ. ಪ್ರ. 391)

ಸೈಂಧವಲವಣ, ಬಿಳೇ ಕಾಳುಮೆಣಸು, ಸಾಸಿವೆ, ಚಂಗಲಕೋಷ್ಠ, ಇವುಗಳನ್ನು ಆಡಿನ ಮೂತ್ರದೊಂದಿಗೆ ಅರೆದು, ನಸ್ಯ ಮಾಡಿದ್ದಲ್ಲಿ ತಂದ್ರೆಯು ಪರಿಹಾರವಾಗುವದು.

ಷರಾ 'ಶ್ವೇತಮರಿಚ' ಅಂದರೆ ನುಗ್ಗೆಬೀಜ ಎಂತ ವ್ಯಾಖ್ಯಾನವಿದೆ ತ್ರ್ಯೂಷಣಾದಿ ವಟಕವನ್ನು ಅಂಜನ ಹಾಕುವದರಿಂದ ತಂದ್ರೆಯಲ್ಲಿಯೂ ಅತಿನಿದ್ರೆಯಲ್ಲಿಯೂ ಗುಣ ಕಾಣುವದು.

ಶುಂಠೀಕಣೋಗ್ರಾಲವಣೋತ್ತಮಾನಿ ನಸ್ಯೇನ ತನ್ದ್ರಾವಿಜಯೋಲ್ಬಣಾನಿ |
ಕ್ಷುದ್ರಾಮೃತಾಪೌಷ್ಕರನಾಗರಾಣಿ ಭಾರ್ಗೀಶಿವಾಭ್ಯಾಂ ಕ(?ಕ್ವ)ಥಿತಾನಿ-
ಪಾನಾತ್ || (ಭಾ. ಪ್ರ. 391—392)

ಒಣಶುಂಠಿ, ಹಿಪ್ಪಲಿ, ಬಜೆ, ಸೈಂಧವಲವಣ, ಇವುಗಳ ಚೂರ್ಣದ ನಸ್ಯದಿಂದ ತಂದ್ರೆಯು ಪರಿಹಾರವಾಗುವದು ಪ್ರತ್ಯಕ್ಷ. ಕಿರಿಗುಳ್ಳ(ಕಲ್ಲಟ್ಟೆ)ದ ಬೇರು, ಅಮೃತಬಳ್ಳಿ, ಪುಷ್ಕರಮೂಲ, ಒಣಶುಂಠಿ, ನಿರ್ವಿಷದ ಬೇರು(ಚೆರುತೇಕ್ಕ್) ಮತ್ತು ಅಣಿಲೆಕಾಯಿಯ ಸಿಪ್ಪೆ, ಇವುಗಳ ಕಷಾಯವನ್ನು ಪಾನಮಾಡುವದರಿಂದಲೂ ತಂದ್ರೆಯು ಜಯಿಸಲ್ಪಡುವದು.

ಮುಸ್ತಕಂ ಸೈನ್ಧವಂ ಚೈವ ಬೃಹತೀಫಲಮೇವ ಚ ।
ಯಷ್ಟೀಮಧುಸಮಾಯುಕ್ತಂ ನಸ್ಯಂ ತನ್ದ್ರಾವಿನಾಶನಮ್ ॥ (ರ. ರ. 368)

ಭದ್ರಮುಷ್ಟಿ, ಸೈಂಧವಲವಣ, ಕಿರಿಗುಳ್ಳದ ಫಲ, ಜ್ಯೇಷ್ಠಮಧು, ಇವುಗಳ ಚೂರ್ಣವನ್ನು ನಸ್ಯಮಾಡುವದರಿಂದ ತಂದ್ರಾ ಪರಿಹಾರ.

ನಿದ್ರಾತಿಯೋಗೇ ವಮನಂ ಹಿತಂ ಸಂಶೋಧನಾನಿ ಚ ।
ಲಂಘನಂ ರಕ್ತಮೋಕ್ಷಶ್ಚ ಮನೋವ್ಯಾಕುಲತಾಪಿ ಚ ॥ (ನಿ. ರ.)

ನಿದ್ರೆ ಅತಿಯಾದ ಸಂಗತಿಯಲ್ಲಿ ವಾಂತಿಮಾಡಿಸುವದು, ಶೋಧನ ಮಾಡಿಸುವದು, ಲಂಘನ, ರಕ್ತ ತೆಗೆಯುವದು, ಮನೋವ್ಯಥೆ ಸಹ ಹಿತ.

48. ಆಶು ಪ್ರಯೋಜ್ಯಂ ಸನ್ನ್ಯಾಸೇ ಸುತೀಕ್ಷ್ಣಂ ನಸ್ಯಮಂಜನಂ ।
ಧೂಮಪ್ರಧಮನಂ ತೋದಃ ಸೂಚಿಭಿಶ್ಚ ನಖಾಂತರೇ ॥
ಸನ್ನ್ಯಾಸ ಚಿಕಿತ್ಸೆ
ಕೇಶಾನಾಂ ಲುಂಚನಂ ದಾಹೋ ದಂಶೋ ದಶನವೃಶ್ಚಿಕೈಃ ।
ಕಟ್ವಮ್ಲಗಾಲನಂ ವಕ್ತ್ರೇ ಕಪಿಕಚ್ಛ್ವವಘರ್ಷಣಮ್ ॥
ಉತ್ಥಿತೋ ಲಬ್ಧಸಂಜ್ಞಶ್ಚ ಲಶುನಸ್ವರಸಂ ಪಿಬೇತ್ ।
ಖಾದೇತ್ಸವ್ಯೋಷಲವಣಂ ಬೀಜಪೂರಕಕೇಸರಮ್ ॥
ಲಘ್ವನ್ನಂ ಪ್ರತಿತೀಕ್ಷ್ಣೋಷ್ಣಮದ್ಯಾತ್ಸ್ರೋತೋವಿಶುದ್ಧಯೇ ।
ವಿಸ್ಮಾಪನೈಃ ಸಂಸ್ಮರಣೈಃ ಪ್ರಿಯಶ್ರವಣದರ್ಶನೈಃ ॥
ಪಟುಭಿರ್ಗೀತವಾದಿತ್ರಶಬ್ದೈರ್ವ್ಯಾಯಾಮಶೀಲನೈಃ ।
ಸ್ರಂಸನೋಲ್ಲೇಖನೈರ್ಧೂಮೈಃ ಶೋಣಿತಸ್ಯಾವಸೇಚನೈಃ ॥
ಉಪಾಚರೇತ್ತಂ ಪ್ರತತಮನುಬನ್ಧಭಯಾತ್ಪುನಃ ।
ತಸ್ಯ ಸಂರಕ್ಷಿತವ್ಯಂ ಚ ಮನಃ ಪ್ರಲಯಹೇತುತಃ ॥ (ವಾ. 305-306)

ಸನ್ನ್ಯಾಸರೋಗದಿಂದ ಬೋಧವಿಲ್ಲದೆ ಬಿದ್ದಿರುವವನಿಗೆ ಬೇಗನೇ ಬಹಳ ತೀಕ್ಷ್ಣವಾದ (ನೆಕ್ಕಿಸೊಪ್ಪಿನ ರಸ ಮುಂತಾದ) ನಸ್ಯಗಳನ್ನೂ, ಅಂಜನಗಳನ್ನೂ, ಧೂಮಗಳನ್ನೂ, (ತ್ರಿಕಟು ಚೂರ್ಣ ಮುಂತಾದವುಗಳ) ಪ್ರಧಮನಗಳನ್ನೂ, ಉಪಯೋಗಿಸಿ, ಉಗುರುಗಳ ಒಳಭಾಗದಲ್ಲಿ ನೋಯಿಸುವ ಹಾಗೆ ಸೂಜಿಗಳಿಂದ ಚುಚ್ಚಿ, ಕೂದಲುಗಳನ್ನು ಕಿತ್ತು, (ಅಂಗಾಲು ಮತ್ತು ಹಣೆಯಲ್ಲಿ) ಸುಟ್ಟಿಟ್ಟು, ಹಲ್ಲುಗಳಿಂದಲೋ ಚೇಳುಗಳಿಂದಲೋ ಕಡಿದು, ಬಾಯಿಯೊಳಗೆ ಕಾರವಾದ ಅಥವಾ ಹುಳಿಯಾದ ಔಷಧಗಳನ್ನು ಹಾಕಿ, ಅಥವಾ ನಾಯಿಸೊಣಗಿನ ಕೋಡಿನಿಂದ (ಮೈಯನ್ನು) ತಿಕ್ಕಿ, ಬೋಧವನ್ನುಂಟುಮಾಡಬೇಕು. ಎಚ್ಚರಿಕೆಯುಂಟಾಗಿ ಎದ್ದ ಮೇಲೆ, ಬೆಳ್ಳುಳ್ಳಿಯ ರಸವನ್ನು ಕುಡಿಸಬೇಕು, ಅಥವಾ ಮಾದಲಹಣ್ಣಿನೊಳಗಿನ ಕುಸುಮವನ್ನು ತ್ರಿಕಟುಗಳ ಮತ್ತು ಸೈಂಧವಲವಣದ ಚೂರ್ಣದೊಂದಿಗೆ ತಿನ್ನ

ಕೊಡಬೇಕು. ಸ್ರೋತಸ್ಸುಗಳು ಶುದ್ಧವಾಗುವದಕ್ಕಾಗಿ ಲಘುತರವಾದ ಮತ್ತು ತೀಕ್ಷ್ಣತರವಾದ ಆಹಾರವನ್ನು ಬಿಸಿಯಾಗಿ ಉಣ್ಣಕೊಡತಕ್ಕದ್ದು. ಅಂಥಾ ರೋಗಿಗೆ ಆಶ್ಚರ್ಯಕರವಾದ ಮಾತು ಮತ್ತು ಕೃತ್ಯಗಳಿಂದಲೂ, ಅವನಿಗೆ ಪ್ರಿಯವಾದವುಗಳನ್ನು ಕೇಳಿಸುವದರಿಂದಲೂ, ಅಂಥವುಗಳನ್ನು ಅಥವಾ ಅಂಥವರನ್ನು ತೋರಿಸುವದರಿಂದಲೂ, ಅಂಥವುಗಳ ನೆನಪನ್ನುಂಟುಮಾಡುವದರಿಂದಲೂ, ಮನೋಹರವಾದ ಗೀತವಾದ್ಯಗಳ ಶಬ್ದಗಳಿಂದಲೂ, ವ್ಯಾಯಾಮದ ಅಭ್ಯಾಸಗಳಿಂದಲೂ, ವಮನ, ವಿರೇಚನ, ಧೂಮಗಳಿಂದಲೂ, ರಕ್ತಸ್ರಾವ ಮಾಡಿಸುವದರಿಂದಲೂ, ಉಪಚರಿಸುವದಲ್ಲದೆ, ಅನಂತರವೂ ಪುನಃ ಆ ವ್ಯಾಧಿಲಕ್ಷಣಗಳು ಕಾಣದಂತೆ, ಅವನ ಮನಸ್ಸನ್ನು ಕೆಡಕಿನ ಹೇತುವಿನ (ಕ್ಲೇಶದ) ದೆಸೆಯಿಂದ ರಕ್ಷಿಸತಕ್ಕದ್ದು.

ಪಠಃ ನಸ್ಯ, ಅಂಜನ, ಧೂಮ, ಮತ್ತು ಪ್ರಧಮನ ವಿಧಿಗಳ ವರ್ಣನಕ್ಕೆ 1ನೇ ಭಾಗದ 24 25 26ನೇ ಅಧ್ಯಾಯಗಳನ್ನು ನೋಡಿ 'ನಖಾಂತರೇ' ಎಂಬಲ್ಲಿ 'ಅಥಾನ್ತರೇ' ಎಂಬ ಪಾಠವಿಟ್ಟದ್ದು ಕಾಣುತ್ತದೆ ಹಾಗೆ ಮಾಡಿದಲ್ಲಿ ಸೂಜಿಯಿಂದ ಚುಚ್ಚುವದು, ಸುಟ್ಟಿಡುವದು ಮುಂತಾದ ಪೀಡೆಗಳನ್ನು ಮಧ್ಯ ಸ್ವಲ್ಪ ಕಾಲ ಬಿಟ್ಟು ಮಾಡತಕ್ಕದ್ದೆಂತಲೂ ಚುಚ್ಚುವದನ್ನು ಉಗುರುಸಂದುಗಳಲ್ಲಿಯೇ ಮಾಡುವದು ಅಗತ್ಯವಲ್ಲವೆಂತಲೂ ಅರ್ಥವಾಗುತ್ತದೆ

ಮೂರ್ಛೆಯಲ್ಲಿ ಹೃದಯದಿಂದ ಸಾಕಷ್ಟು ರಕ್ತವು ಮೆದುಳಿಗೆ ಸಂಚರಿಸುವದಕ್ಕೆ ತಡೆಯುಂಟಾಗುವದರಿಂದ ಫಲಿಸುವದೊಂದು, ಮಿದುಳಿನಲ್ಲಿ ರಕ್ತವು ಅತಿಯಾಗಿ ಸೇರಿಸುವದರಿಂದ, ಹೆಚ್ಚಾಗಿ ಮಿದುಳಿನೊಳಗಿನ ಯಾವದಾದರೊಂದು ರಕ್ತದ ನಾಳ ಅಥವಾ ತಿರೆ ಒಡೆಯುವದರಿಂದ, ಉತ್ಪನ್ನವಾಗುವದೊಂದು, ಹೀಗೆ ಎರಡು ವರ್ಗಗಳಿವೆ ಸಾಧಾರಣವಾಗಿ ಒಂದನೆ ವರ್ಗದ್ದಕ್ಕೆ ಮೂರ್ಛೆ, ಎರಡನೇ ವರ್ಗದ್ದಕ್ಕೆ ಸನ್ಯಾಸ ಎನ್ನುವದಾಗಿರುತ್ತದೆ ಮೂರ್ಛೆಯೇ ಬಲವಂತವಾದರೆ ಸನ್ಯಾಸದ ಪರಿಣಾಮ ಉಂಟಾಗುತ್ತದೆಂಬದರಿಂದ, ಅಂಥಾ ಮೂರ್ಛೆಯಲ್ಲಿಯೂ ಸನ್ಯಾಸದಲ್ಲಿ ಬೋಧ ಉಂಟಾಗುವದಕ್ಕೆ ಹೇಳಲ್ಪಟ್ಟ ತೀಕ್ಷ್ಣವಾದ ನಸ್ಯಾದಿ ಪ್ರಯೋಗಗಳನ್ನು ಮಾಡಬೇಕೆಂತ ಹೇಳಲ್ಪಟ್ಟದ್ದಾಗಿರುತ್ತದೆ (ಸು 34) ಹೇಗಾದರೂ ಇಲ್ಲಿ ನಿರ್ದೇಶಿಸಲ್ಪಟ್ಟ ವರ್ಗಭೇದವನ್ನು ತಿಳಿದುಕೊಳ್ಳುವದು ಆವಶ್ಯಕ, ಯಾಕೆಂದರೆ, ಉಪಚಾರಗಳಲ್ಲಿ ಆ ಭೇದಕ್ಕನುಗುಣವಾಗಿ ವ್ಯತ್ಯಾಸಮಾಡುವದು ಮುಖ್ಯ. ದೃಷ್ಟಾಂತವಾಗಿ, ರಕ್ತವಿಮೋಚನವು ತಲೆಯಲ್ಲಿಯ ರಕ್ತಾಧಿಕ್ಯದ ಅವಸ್ಥೆಯಲ್ಲಿಯಲ್ಲದೆ, ಇತರ ಸಂಗತಿಯಲ್ಲಿ ದೋಷಕರವಾಗಬಹುದು. ಹಾಗೆಯೇ ಸೇಕಾವಗಾಹಗಳು ಎಲ್ಲಾ ಮೂರ್ಛೆಗಳಲ್ಲಿಯೂ ಹಿತವೆಂತ ಹೇಳಲ್ಪಟ್ಟಾಗ್ಯೂ ಒಂದನೇ ತರಗತಿಯ ಮೂರ್ಛೆಯ ವೇಗದ ಕಾಲದಲ್ಲಿ ಮುಖಕ್ಕೆ, ಹೆಚ್ಚಾಗಿ ಹಣೆಗೆ, ತಣ್ಣೀರನ್ನು ಬಲವಾಗಿ ತಾಗುವಂತೆ ಸ್ವಲ್ಪ ದೂರದಿಂದ ಹೊಡೆಯುವದು ಮಾತ್ರವೇ ಹಿತ ಎರಡನೇ ತರಗತಿಯ ಮೂರ್ಛೆ ಅಥವಾ ಸನ್ಯಾಸದಲ್ಲಿ ರೋಗಿಯು ಬಲವಂತನಾಗಿದ್ದರೆ, ಅವನನ್ನು ಕುಳ್ಳಿರಿಸಿ, ಅಲ್ಲವಾದರೆ ಮಲಗಿದಲ್ಲಿಯೇ ತಲೆಗಿಂಬಿನ ಮೇಲೆ ತಲೆಯನ್ನು ಸ್ವಲ್ಪ ಎತ್ತರಿಸಿಟ್ಟು ನೆತ್ತಿಯ ಮೇಲೆ ತಣ್ಣೀರನ್ನು ಸಪೂರವಾದ ಧಾರೆಯಾಗಿ ಕಡಿಯದೆ ಒಂದೆರಡು ನಿಮಿಷ ಬೀಳುತ್ತಿರುವ ಹಾಗೆ ಎರಡು ಮೂರು ಅಡಿ ಎತ್ತರದಿಂದ ಹೊಯ್ಯುತ್ತಿರಬೇಕು ಲಾವಂಚ, ತ್ರೀಗಂಧ, ರಕ್ತಚಂದನ, ಬಜೆ, ಇವುಗಳನ್ನು ಕೂಡಿಸಿ ಬಿಸಿನೀರು ಕಾಯಿಸಿ, ತಣಿಸಿದ್ದು ಇದ್ದರೆ, ಅದನ್ನು ತಣ್ಣೀರಿನ ಬದಲಾಗಿ ಉಪಯೋಗಿಸುವದು ಒಳ್ಳೇದು, ಆದು ಬಹು ತಣ್ಣಗಾಗಿರಬೇಕಾದ್ದರಿಂದ ಅದನ್ನು ಸಾಕಷ್ಟು ಬೇಗನೇ ಸಿದ್ಧಪಡಿಸುವದು ಕಷ್ಟ ಕೈಕಾಲುಗಳು ಬೆಚ್ಚಗಿರುವ ಹಾಗೆ ಅವುಗಳನ್ನು ಬಿಸಿ ಕೈಗಳಿಂದ ಉಜ್ಜುವದು ಮತ್ತು ಬಿಸಿನೀರು ತುಂಬಿದ ಬಾಟ್ಲಿಗಳಿಂದ ಅಥವಾ ಚೀಲಗಳಿಂದ ಅಂಗಾಲುಗಳಿಗೆ ಶಾಕಕೊಡುವದು ಸಹ ಪ್ರಶಸ್ತ. ಈ ಕ್ರಮಗಳು ಸಾಧಾರಣವಾದ ಒಂದನೇ ತರಗತಿಯ ಮೂರ್ಛೆಯಲ್ಲ ಉಪಯುಕ್ತವಲ್ಲ ಒಂದನೇ ತರಗತಿಯ ಮೂರ್ಛೆಯಲ್ಲಿ ರೋಗಿಯ ಹಣೆ ಮತ್ತು ತಲೆಯಲ್ಲಿ ಮೈಗಿಂತ ಬಿಸಿ ಕಡಿಮೆಯಾಗಿ, ಮುಖದ ಛಾಯೆ ಮತ್ತು ತುಟಿಗಳು ಬಿಳುಪ್ಪಾತ್ತಿರುವವು ನಾಡಿಯು ಅಬಲವಾಗಿರುವದಲ್ಲದೆ, ಶ್ವಾಸದ ಸಂಖ್ಯೆ ಹೆಚ್ಚಾಗಿರುವದು ಮತ್ತು ಅದರಲ್ಲಿ ಶಬ್ದವಿರುವದಿಲ್ಲ ಎರಡನೇ ತರಗತಿದರಲ್ಲಿ ಹಣೆ ಮತ್ತು ತಲೆ ಬಿಸಿಯಾಗಿಯೂ, ಮುಖ ಮತ್ತು ತುಟಿಗಳ ವರ್ಣವು ಕೆಂಪಾತ್ತಿದ್ದಾಗಿಯೂ ಇರುವವು, ಶ್ವಾಸವು ಮೆಲ್ಲಗಾಗಿ ಸ್ವಲ್ಪ ಗೊರಕೆ ಯುಕ್ತವಾಗಿರುವದು, ನಾಡಿಯು ಬಲವಾಗಿಯೂ ಮಂದಗತಿಯುಳ್ಳದ್ದಾಗಿಯೂ ಇರುತ್ತದೆ.

49　(1) ರೋಗಿ 60 ವರ್ಷದ ಮುದುಕಿ. ಅಗ್ನಿಮಾಂದ್ಯ ವ ಅಶಕ್ತಿ ಇರುವಾಗ್ಗೆ ಏಕಾದಶಿಗೆ ಶೀತವಾದ ಫಲಾಹಾರ ಮಾಡಿ ಕಿಟಿಕಿಗಳ ಎದುರಿಗೆ ಮಲಗಿದ್ದವಳನ್ನು ಬೆಳಿಗ್ಗೆ ನೋಡುವಾಗ್ಗೆ ಅವಳಿಗೆ ಎಚ್ಚರವಿಲ್ಲ; ಕಣ್ಣು ಬಿಡಿಸುವದಿಲ್ಲ — ವಾತಾರಿಗ, ಸನ್ನಿಪಾತಭೈರವಿ (ಜ್ವರೋಕ್ತ) ಇನ್ನು ಶುಂಠೀರಸ ಮತ್ತು ಸರಿಪಾಲು

ದೃಷ್ಟಫಲ ಚಿಕಿತ್ಸೆ

ಜೇನಿನಲ್ಲಿ ಕೊಟ್ಟಲ್ಲಿ, ಎಚ್ಚರವಾಯ್ತು, ಆದರೆ ನಾಲಿಗೆ ಸ್ವಾಧೀನವಿಲ್ಲ; ಬಲಭಾಗ ಸಹ ಸ್ವಾಧೀನ ಇಲ್ಲ. ಕ್ರಮೇಣ ವಾತೋಕ್ತ ಕಲ್ಯಾಣಕ ಚೂರ್ಣವನ್ನು ಹೊಟ್ಟೆಗೆ ಕೊಟ್ಟು ತೈಲಾಭ್ಯಂಗ ಮಾಡಿಸಿದ್ದರಿಂದ ಪೂರ್ಣ ಗುಣವಾಯ್ತು.

(2) ರೋಗಿಗೆ ಪ್ರಾಯ 8 ವರ್ಷ. 5, 6 ತಿಂಗಳಿಂದ ಆಗಾಗ್ಗೆ ಮೂರ್ಛೆ, ಬಿಸಿನೀರಿನಿಂದ ಸ್ನಾನಮಾಡಿದ್ದಲ್ಲಿ ಹೆಚ್ಚು ಅಶಕ್ತಿ, ರಕ್ತ ಕಡಿಮೆ, ಅರುಚಿ, ನಾಡಿಗಳು ಮೂರೂ ಅಸ್ಥಿರ, ಪಿತ್ತಸ್ಥಾನದಲ್ಲಿರುವದು ಕಡಿಮೆ.—ಶತಾವರೀ ರಸ ॥ ಡ್ರಾಮ್, ಶುಂಠಿ ರಸ | ಡ್ರಾಮ್, ಕಲ್ಲುಸಕ್ಕರೆ ಪುಡಿ | ಡ್ರಾಮ್, ಇದರಲ್ಲಿ ಕಸ್ತೂರ್ಯಾದಿ | ರಂತೆ ದಿನಕ್ಕೆ ೨ ಸರ್ತಿ ಪ್ರಕಾರ ೧೨ ಸರ್ತಿ; ಅನಂತರ ಶತಾವರಿ ರಸ ॥ ಡ್ರಾಮಿನಲ್ಲಿ ಕಾಸೀಸಾದಿ | ರಂತೆ ಕಲ್ಲುಸಕ್ಕರೆ ಕೂಡಿಸಿ ಅದೇ ಪ್ರಕಾರ ೩೦ ಸರ್ತಿ; ಅನಂತರ ಬಿಲ್ವಾದಿ ಲೇಹ ತೊ = ರಂತೆ ಸೇವಿಸಿ, | ಕುಡುತೆ ಹಾಲು ಕುಡಿಯುವದು ೧೬ ಸರ್ತಿ. ಅನಂತರ ಮೈಪುಷ್ಟಿಗೆ ಮಾತುಲುಂಗರಸಾಯನ ತೊ = (1/8) ರಂತೆ ೨೪ ಸರ್ತಿ. ಔಷಧ ಆರಂಭಿಸಿದ ಲಾಗಾಯಿತು ಮೂರ್ಛೆ ಇಲ್ಲ.

(3) ಅಪಸ್ಮಾರದಂತೆ ಆಗಾಗ್ಗೆ ಪೀಡಿಸುತ್ತಿದ್ದ ಮೂರ್ಛೆಯು 27ನೇ ಸಂಖ್ಯೆಯಲ್ಲಿ ಬರದ ದ್ರಾಕ್ಷಾದಿ ಕಷಾಯದಿಂದ ಪರಿಹಾರವಾಗಿದೆ.

ರಾಜಯಕ್ಷ್ಮದಲ್ಲಿ ಉಕ್ತವಾದ ಕಸ್ತೂರ್ಯಾದಿ ಮಾತ್ರೆಯನ್ನು ದನದ ಹಾಲಿನಲ್ಲಿ, ಅಥವಾ ಬೇರೆ ರೋಗೋಕ್ತ ಅನುಪಾನದಲ್ಲಿ ಕೊಟ್ಟಲ್ಲಿ, ಮದಮೂರ್ಚ್ಛಾಸನ್ಯಾಸಗಳಲ್ಲಿ ವಿಶೇಷ ಪ್ರಯೋಜನ ಸಿಗುವದು. ಹಾಗೆಯೇ ವಾತಾರಿಮಾತ್ರೆಯನ್ನು ಪಿತ್ತಹರವಾದ ಕಷಾಯಗಳಲ್ಲಿ ಕೊಟ್ಟರೆ ರಕ್ತವು ಶುದ್ಧವಾಗುವದಲ್ಲದೆ ಅದರ ಚಲನೆಯು ಕ್ರಮಕ್ಕೆ ಬರುವದರಿಂದ ಮೇಲೆ ಹೇಳಿದ ರೋಗಗಳಲ್ಲಿ, ವಿಶೇಷವಾಗಿ ಭ್ರಮದಲ್ಲಿ, ಕ್ಷೇಮವಾಗುವದು. ನರಗಳು ಅಥವಾ ಹೃದಯ ದುರ್ಬಲವಾಗಿದ್ದ ಸಂಗತಿಯಲ್ಲಿ ವಾತಾರಿಮಾತ್ರೆಯೊಂದಿಗೆ ವಾತಗಜಾಂಕುಶವನ್ನಾಗಲೀ, ಕಸ್ತೂರ್ಯಾದಿಯನ್ನಾಗಲೀ ಕೂಡಿಸಿ ಕೊಡುವದು ಒಳ್ಳೇದು.

50. ಅರಳು, ಇಪ್ಪೆಹೂವು, ಕಬ್ಬು, ಕರೀತಿಗಡೆ, ಕಲ್ಲುಹೂವು (ಶೈಲೇಯ), ಖರ್ಜೂರ, ಗುಲುಗುಂಜಿಬೇರು, ಜೀವಂತಿ ಗಡ್ಡೆ, ಜ್ಯೇಷ್ಠಮಧು, ತಾವರೆ ಬಳ್ಳಿ, ತುಪ್ಪ, ತ್ರಿಫಲೆ, ದಾಳಿಂಬ, ದ್ರಾಕ್ಷೆ, ನಾಗಕೇಸರ, ನೀಲೀಗಿಡದ ಬೇರು, ಪಚ್ಚೆಕರ್ಪೂರ, ಬಳ್ಳಿತುರಚದ ಬೇರು, ಬಾಳೆಹಣ್ಣು, ಬೂದಿಕುಂಬಳಕಾಯಿ, ಬೊಗರೀಬೀಜ, ಭದ್ರಮುಷ್ಟಿ, ಮುಡಿವಾಳ, ಮೊಲೆಹಾಲು, (ದನದ ಸಿಹಿ) ಮೊಸರಿನ ನೀರು ಮತ್ತು ಕೆನೆ, ಲಾವಂಚ, ಸೀಯಾಳದ ನೀರು, ಸಕ್ಕರೆ, ಸರಳದೇವದಾರ, ಹಾಲು, ಹಿಪ್ಪಲಿ; (ಭ್ರಮಕ್ಕೆ) ಕಾಶ್ಮೀರಿ (ಶಿವನ್ನಿ), ಗುಲುಗುಂಜಿ, ತ್ರಾಯಮಾಣಾ, ನೀಲೀಬೇರು, ಪರ್ಪಾಟಕ, ಬನ್ನಿಮರ, ಬಳಿತುರಚ, ಸಿಹಿ ಮಾದಳ, ಸುಗಂಧಿಬೇರು (ನನ್ನಾರಿ) ಮತ್ತು ಹೆಬ್ಬೇವು (ಅರೆಬೇವು).

ಪೃಥಗ್ರೋಗೋಕ್ತ ಔಷಧಗಳು

51. ಮೃದು ಮತ್ತು ಕಹಿ ಪದಾರ್ಥಗಳು, ಅರಳುಗಂಜಿ, ಹಳೇದಾದ ಯವೆಗೋದಿ ಮತ್ತು ಕೆಂಪು ಅಕ್ಕಿ, ಹತ್ತು ವರ್ಷಕ್ಕೂ ಹಳೇದಾದ ತುಪ್ಪ, ಹೆಸರು ಸಾರು, ದನದ ಹಾಲು, ಸಕ್ಕರೆ, ಹಳೇ ಬೂದಿಕುಂಬಳಕಾಯಿ, ಪಡುವಲ

ಪಥ್ಯವರ್ಗ

ಕಾಯಿ, ಬಾಳೇಹಣ್ಣು, ದಾಳಿಂಬದ ಹಣ್ಣು, ಸೀಯಾಳದ ನೀರು, ಇಪ್ಪೆಹೂವು, ಕಿರುಕಸಾಲೆ (ಕೈಹರಿವೆ)ಸೊಪ್ಪು ಮತ್ತು ಲಘುವಾದ ಆಹಾರ. (ಒಳಗೆ 20-22-23ನೇ ಸಂಖ್ಯೆಗಳಲ್ಲಿ ವರ್ಣಿಸಲ್ಪಟ್ಟ ಸೇಕಾವಗಾಹಾದಿಗಳು ಸಹ.)

52. ಸಾಮಾನ್ಯವಾಗಿ ಸೊಪ್ಪುಗಳು, ಖಾರ ಪದಾರ್ಥಗಳು, ಮಜ್ಜಿಗೆ, ತಾಂಬೂಲ, ಮೈಥುನ, ಬೆವರಿಸುವದು, ನಿದ್ರಾಭಂಗ, ಮತ್ತು ಬಾಯಾರಿಕೆಯ ತಡೆ.

ಅಪಥ್ಯವರ್ಗ

# ಅಧ್ಯಾಯ IV

## ಪಾನಾತ್ಯಯ (Alcoholism).

ಷರಾ ಈ ರೋಗವು ಕೆಲವು ಗ್ರಂಥಗಳಲ್ಲಿ ಮದಾತ್ಯಯ ಎಂಬ ಹೆಸರಿನಿಂದ ವರ್ಣಿತವಾಗಿದೆ 'ಪಾನಾತ್ಯಯ ಎಂಬಲ್ಲಿ 'ಪಾನ' ಎಂಬದು ಮದ್ಯಪಾನ, 'ಮದಾತ್ಯಯ' ಎಂಬಲ್ಲಿ 'ಮದ' ಎಂಬದು 'ಮದ್ಯ' ಎಂಬ ಅರ್ಥದಲ್ಲಿ 'ಅತ್ಯಯ' ಎಂದರೆ ವಿಕಾರ, ವ್ಯಾಧಿ ಅದಕ್ಕೆ ಅತಿಕ್ರಮ ಎಂಬ ಅರ್ಥವೂ ಉಂಟು 'ಪಾನಾತ್ಯಯ' ಎಂದರೂ 'ಮದಾತ್ಯಯ' ಎಂದರೂ ಕ್ರಮ ಬಿಟ್ಟು ಮದ್ಯಪಾನ ಮಾಡುವದರಿಂದ ಉಂಟಾಗುವ ವಿಕಾರ ಎಂತ ತಾತ್ಪರ್ಯ ಸಾಧಾರಣವಾಗಿ 'ಮದ' ಶಬ್ದವು ಮನೋಬುದ್ಧ್ಯಹಂಕಾರಗಳ ದೋಷವಿಶೇಷವನ್ನು ಸೂಚಿಸುತ್ತದೆ, ಮತ್ತು ಮದ್ಯಪಾನದಿಂದ ಒಂದು ವಿಧವಾದ ಮದ ಉಂಟಾಗುತ್ತದಾದರೂ ಈ ಅಧ್ಯಾಯವು ಅಂಥಾ ಮದಗಳನ್ನು ಕುರಿತಾದ್ದಲ್ಲ ಆದ್ದರಿಂದ ಈ ಅಧ್ಯಾಯಕ್ಕೆ ಸುಶ್ರುತನು ಕೊಟ್ಟಿರುವ 'ಪಾನಾತ್ಯಯ' ಎಂಬ ತಿರೋನಾಮವೇ ಉಚಿತವಾಗಿ ಕಾಣುತ್ತದೆ (ಹಿಂದಿನ IIIನೇ ಅಧ್ಯಾಯದ 13ನೇ ಸಂಖ್ಯೆಯಡಿ ಷರಾವನ್ನು ನೋಡಿ) ಮದ್ಯಪಾನದ ತೀವ್ರತೆಯಿಂದ ಉಂಟಾಗುವ ಮೂರ್ಛೆಯು (Acute alcoholic delirium or delirium tremens) ಮೂರ್ಛೆಗಳೊಳಗೆ (IIIನೇ ಅಧ್ಯಾಯ) ಮತ್ತು ದೀರ್ಘಕಾಲದ ದುರಭ್ಯಾಸದಿಂದ ಉಂಟಾಗುವ ಮನೋವಿಕಾರವು (chronic alcoholism or Dementis) ಉನ್ಮಾದಗಳೊಳಗೆ (Iನೇ ಅಧ್ಯಾಯ) ಸೇರುತ್ತದೆ

1. ಮದ್ಯಮುಷ್ಣಂ ತಥಾ ತೀಕ್ಷ್ಣಂ ಸೂಕ್ಷ್ಮಂ ವಿಶದಮೇವ ಚ |
ರೂಕ್ಷಮಾಶುಕರಂ ಚೈವ ವ್ಯವಾಯಿ ಚ ವಿಕಾಶಿ ಚ ||
ಔಷ್ಣ್ಯಾಚ್ಛೀತೋಪಚಾರಂ ತತ್ತೈಕ್ಷ್ಣ್ಯಾದ್ಧನ್ತಿ ಮನೋಗತಿಮ್ |
ವಿಶತ್ಯವಯವಾನ್ ಸೌಕ್ಷ್ಮ್ಯಾದ್ವೈಶದ್ಯಾತ್ಕಫಶುಕ್ರನುತ್ ||
ಮಾರುತಂ ಕೋಪಯೇದ್ರೌಕ್ಷ್ಯಾದಾಶುತ್ವಾದಾಶುಕರ್ಮಕೃತ್ |
ಹರ್ಷದಂ ಚ ವ್ಯವಾಯಿತ್ವಾದ್ವಿಕಾಶಿತ್ವಾದ್ವಿಸರ್ಪತಿ ||
ತದಮ್ಲಂ ರಸತಃ ಪ್ರೋಕ್ತಂ ಲಘುರೋಚನದೀಪನಮ್ |
ಕೇಚಿಲ್ಲವಣವರ್ಜ್ಯಾಂಸ್ತು ರಸಾನತ್ರಾದಿಶನ್ತಿ ಹಿ ||

ಮದ್ಯದ ಗುಣಗಳು

(ಸು. 831)

ಮದ್ಯವು ಉಷ್ಣ, ತೀಕ್ಷ್ಣ, ಸೂಕ್ಷ್ಮ, ವಿಶದ, ರೂಕ್ಷ, ಆಶುಕರ, ವ್ಯವಾಯಿ, ಮತ್ತು ವಿಕಾಸಿಗುಣವುಳ್ಳದ್ದು. ಅದರ ಉಷ್ಣತೆ ದೆಸೆಯಿಂದ ಅದಕ್ಕೆ ಶೀತೋಪಚಾರಗಳು ಹಿತವಾಗುತ್ತವೆ; ಅದರ ತೀಕ್ಷ್ಣತೆಯಿಂದ ಮನಸ್ಸಿನ ಗತಿಯೂ, ವಿಶದತ್ವದಿಂದ ಕಫ ಮತ್ತು ಶುಕ್ರವೂ ಕೆಡುತ್ತವೆ; ಅದರ ಸೂಕ್ಷ್ಮತೆಯಿಂದ ಅದು ಅವಯವಗಳನ್ನು ಹೊಗುತ್ತದೆ; ಅದರ ರೂಕ್ಷತೆಯ ದೆಸೆಯಿಂದ ಅದು ವಾಯುವನ್ನು ಕೋಪಿಸುವದು; ಆಶುತ್ವದಿಂದ ಆಶು ಶೀಘ್ರವಾಗಿ ಕರ್ಮಗಳನ್ನು ನಡಿಸುವದು, ವ್ಯವಾಯಿತ್ವದಿಂದ ಹರ್ಷವನ್ನುಂಟುಮಾಡುವದು; ಮತ್ತು ವಿಕಾಶಿತ್ವದಿಂದ ಪಸರಿಸುವದು. ಅದು ರಸದಲ್ಲಿ ಹುಳಿಯಾಗಿ, ಲಘು, ರುಚಿಕರ ಮತ್ತು ಅಗ್ನಿದೀಪನಕಾರಿ ಎಂತ ಹೇಳಲ್ಪಟ್ಟಿದೆ. ಕೆಲವರು ಅದರಲ್ಲಿ ಉಪ್ಪುವಿನಾ ಮಿಕ್ಕ ಐದು ರಸಗಳಿವೆ ಎಂತ ಹೇಳುತ್ತಾರೆ.

ಷರಾ ಉಷ್ಣ, ತೀಕ್ಷ್ಣ, ಮುಂತಾದ ದ್ರವ್ಯಗುಣವಾಚಕ ಶಬ್ದಗಳ ಅರ್ಥಕ್ಕೆ Iನೇ ಭಾಗದ III. 2 ನೋಡಿರಿ

2. ಸ್ನಿಗ್ಧೈಸ್ತದನ್ನೈರ್ಮಾಂಸೈಶ್ಚ ಭಕ್ಷ್ಯೈಶ್ಚ ಸಹ ಸೇವಿತಮ್ |
ಭವೇದಾಯುಃಪ್ರಕರ್ಷಾಯ ಬಲಾಯೋಪಚಯಾಯ ಚ ||

ನಿಯಮಿತ ಮದ್ಯ ಪಾನದ ಗುಣ.

ಕಾಮ್ಯತಾ ಮನಸಸ್ತುಷ್ಟಿರ್ಧೈರ್ಯಂ ತೇಜೋಽತಿವಿಕ್ರಮಃ |
ವಿಧಿವತ್ಸೇವ್ಯಮಾನೇ ತು ಮದ್ಯೇ ಸನ್ನಿಹಿತಾ ಗುಣಾಃ ||

(ಸು. 831)

ಸ್ನಿಗ್ಧವಾದ ಅನ್ನ, ಮಾಂಸ, ಭಕ್ಷ್ಯಗಳೊಂದಿಗೆ ಸೇವಿಸಲ್ಪಟ್ಟ ಮದ್ಯದಿಂದ ಬಲವೂ ಪುಷ್ಟಿಯೂ ಉಂಟಾಗಿ ಆಯುಸ್ಸು ವೃದ್ಧಿಯಾಗುತ್ತದೆ. ಮತ್ತು ವಿಧಿಗಳನ್ನು ಉಲ್ಲಂಘಿಸದೆ (ಅಂದರೆ, ಕಾಲ, ಪ್ರಕೃತಿ, ದೋಷ ಮುಂತಾದ ವಿಚಾರಗಳನ್ನನುಸರಿಸಿ) ಸೇವಿಸಲ್ಪಡುವ ಮದ್ಯದಲ್ಲಿ ಕಾಮವೃದ್ಧಿ (ಅಥವಾ ಕಾಮಿಗಳು ಅಪೇಕ್ಷಿಸುವ ರೂಪ), ಮನಸ್ಸಿಗೆ ತುಷ್ಟಿ, ಧೈರ್ಯ, ಉತ್ಸಾಹ (ಅಥವಾ ತೇಜಸ್ಸು) ಮತ್ತು ಅತಿಯಾದ ಪೌರುಷ, ಈ ಗುಣಗಳು ಇರುತ್ತವೆ.

3. ಮದ್ಯಪಾನದಿಂದ ಬಹಳ ಬಾಧಕಪಡದವರು

ಶ್ಲೈಷ್ಮಿಕಾನಲ್ಪಪಿತ್ತಾಂಶ್ಚ ಸ್ನಿಗ್ಧಾನ್ಮಾತ್ರೋಪಸೇವಿನಃ |
ಪಾನಂ ನ ಬಾಧತೇಽತ್ಯರ್ಥಂ ವಿಪರೀತಾಂಸ್ತು ಬಾಧತೇ ||

(ಸು. 832)

ಕಫಪ್ರಕೃತಿಯವರಿಗೂ, ಪಿತ್ತಕಡಿಮೆಯುಳ್ಳವರಿಗೂ, ಸ್ನಿಗ್ಧಶರೀರದವರಿಗೂ, ಮಿತವಾಗಿ (ಮದ್ಯವನ್ನು) ಸೇವಿಸುತ್ತಿರುವವರಿಗೂ, ಮದ್ಯಪಾನ ಅತಿಯಾಗಿ ಬಾಧೆಯನ್ನುಂಟುಮಾಡುವದಿಲ್ಲ. ಈ ಲಕ್ಷಣಗಳಿಗೆ ಸರಿವಿರುದ್ಧವಾದ ಲಕ್ಷಣದವರಿಗೆ ಅದು ಬಾಧಿಸುತ್ತದೆ.

4. ಮದಕ್ಕೆ ಕಾರಣ (ಸುಶ್ರುತ)

ತದೇವಾನನ್ನಮಜ್ಞೇನ ಸೇವ್ಯಮಾನಮಮಾತ್ರಯಾ |
ಕಾಯಾಗ್ನಿನಾ ಹ್ಯಗ್ನಿಸಮಂ ಸಮೇತ್ಯ ಕುರುತೇ ಮದಮ್ ||

(ಸು. 831)

ಅದೇ ಮದ್ಯವನ್ನು ಹೆಡ್ಡನು ಆಹಾರವಿಲ್ಲದೆ, ಮಿತತಪ್ಪಿ ಸೇವಿಸಿದ್ದಲ್ಲಿ, ಅಗ್ನಿಗೆ ಸಮವಾದ ಆ ಮದ್ಯವು ದೇಹದೊಳಗಿನ ಅಗ್ನಿಯೊಂದಿಗೆ ಕೂಡಿಕೊಂಡು, ಮದವನ್ನುಂಟುಮಾಡುತ್ತದೆ.

5. ಮದಸಂಪ್ರಾಪ್ತಿ ಮತ್ತು ಅದರ ಅವಸ್ಥಾತ್ರಯ

ರಸಧಾತ್ವಾದಿಮಾರ್ಗಾಣಾಂ ಸತ್ವಬುದ್ಧೀಂದ್ರಿಯಾತ್ಮನಾಮ್ |
ಪ್ರಧಾನಸ್ಯೌಜಸಶ್ಚೈವ ಹೃದಯಂ ಸ್ಥಾನಮುಚ್ಯತೇ ||
ಅತಿಪೀತೇನ ಮದ್ಯೇನ ವಿಹತೇನೌಜಸಾ ಚ ತತ್ |
ಹೃದಯಂ ಯಾತಿ ವೈಕೃತ್ಯಂ ತತ್ರಸ್ಥಾ ಯೇ ಚ ಧಾತವಃ ||
ಓಜಸ್ಯವಿಹತೇ ಪೂರ್ವೋ ಹೃದಿ ಚ ಪ್ರತಿಬೋಧಿತೇ |
ಮಧ್ಯಮೋ ವಿಹತೇಽಲ್ಪೇ ಚ ವಿಹತೇ ತೂತ್ತಮೋ ಮದಃ ||

(ಚ. 584)

ರಸ, (ವಾತ, ಪಿತ್ತ, ಕಫ, ಎಂಬ) ಧಾತುಗಳು, ಮುಂತಾದವುಗಳನ್ನು ಸಾಗಿಸುವ ನಾಡಿಗಳಿಗೂ, ಮನಸ್ಸು, ಬುದ್ಧಿ, ಇಂದ್ರಿಯಗಳು ಮತ್ತು ಆತ್ಮ, ಇವುಗಳಿಗೂ, ಪ್ರಧಾನ ಧಾತುವಾದ ಓಜಸ್ಸಿಗೂ ಹೃದಯವು ಸ್ಥಾನವೆಂತ ಹೇಳುತ್ತಾರೆ. ಅತಿಯಾಗಿ ಮದ್ಯಪಾನ ಮಾಡಿದ್ದರಿಂದ ಓಜೋಧಾತು ಕೆಟ್ಟು, ಆ ಹೃದಯವೂ ಅಲ್ಲಿರುವ ಎಲ್ಲಾ ಧಾತುಗಳೂ ವಿಕಾರವನ್ನು

ಹೊಂದುತ್ತವೆ. ಮದದ ಪ್ರಥಮಾವಸ್ಥೆಯಲ್ಲಿ ಓಜಸ್ಸು ನಷ್ಟವಾಗಿರುವದಿಲ್ಲ ಮತ್ತು ಹೃದಯವು ಎಚ್ಚರವಾಗಿರುತ್ತದೆ; ಮಧ್ಯಮಾವಸ್ಥೆಯಲ್ಲಿ ಆ ಓಜಸ್ಸು ಅಲ್ಪವಾಗಿ ನಷ್ಟವಾಗಿರುತ್ತದೆ; ಮತ್ತು ಕಡೇ ಅವಸ್ಥೆಯಲ್ಲಿ ಓಜಸ್ಸು (ವಿಶೇಷವಾಗಿ) ನಷ್ಟವಾಗುತ್ತದೆ.

ಷರಾ 'ರಸಧಾತ್ವಾದಿ' ಎಂಬಲ್ಲಿ 'ರಸವಾತಾದಿ' ಎಂಬ ಪಾಠಾಂತರವೂ ಕಾಣುತ್ತದೆ 'ಧಾತ್ವಾದಿ' ಎಂಬ ಪದವಿರುವಲ್ಲಿ ರಕ್ತನಾಳಗಳು ಮತ್ತು ಮನೋವಾಹಿಯಾದ ನರಗಳು 'ಆದಿ'ಶಬ್ದದಿಂದ ಸೂಚಿತ ಎಂತ ತಿಳಿಯಬೇಕು

6. ಪೀಯಮಾನಸ್ಯ ಮದ್ಯಸ್ಯ ವಿಜ್ಞಾತವ್ಯಾಸ್ತ್ರಯೋ ಮದಾಃ |
ಪ್ರಥಮೋ ಮಧ್ಯಮೋಽನ್ತ್ಯಶ್ಚ ಲಕ್ಷಣೈಸ್ತಾನ್ ಪ್ರವಕ್ಷ್ಯತೇ
ಪ್ರಹರ್ಷಣಃ ಪ್ರೀತಿಕರಃ ಪಾನಾನ್ನಗುಣದರ್ಶಕಃ |
ವಾದ್ಯಗೀತಪ್ರಹಾಸಾನಾಂ ಕಥಾನಾಂ ಚ ಪ್ರವರ್ತಕಃ
ನ ಚ ಬುದ್ಧಿಸ್ಮೃತಿಹರೋ ವಿಷಯೇಷು ನ ಚಾಕ್ಷಮಃ |
ಸುಖನಿದ್ರಾಪ್ರಬೋಧಶ್ಚ ಪ್ರಥಮಃ ಸುಖದೋ ಮದಃ ||
ಮುಹುಃ ಸ್ಮೃತಿರ್ಮುಹುರ್ಮೋಹೋ ವ್ಯಕ್ತಾ ಸಜ್ಜತಿ ವಾಙ್ಮುಹುಃ |
ಯುಕ್ತಾಯುಕ್ತಪ್ರಲಾಪಶ್ಚ ಪ್ರಚಲಾಯನಮೇವ ಚ ,
ಸ್ಥಾನಪಾನಾನ್ನಸಾಂಕಥ್ಯೇ ಯೋಜನಾ ಸವಿಪರ್ಯಯಾ |
ಲಿಂಗಾನ್ಯೇತಾನಿ ಜಾನೀಯಾದಾವಿಷ್ಟೇ ಮಧ್ಯಮೇ ಮದೇ ||
ಮಧ್ಯಮಂ ಮದಮುತ್ಕ್ರಮ್ಯ ಮದಮಪ್ರಾಪ್ಯ ಚೋತ್ತಮಮ್ |
ನ ಕಿಂಚಿನ್ನಾಶುಭಂ ಕುರ್ಯುರ್ನರಾ ರಾಜಸತಾಮಸಾಃ
ಕೋ ಮದಂ ತಾದೃಶಂ ವಿದ್ವಾನುನ್ಮಾದಮಿವ ದಾರುಣಮ್ |
ಗಚ್ಛೇದಧ್ವಾನಮಸ್ವಸ್ತಂ ಬಹು ದೋಷಮಿವಾಧ್ವಗಃ ,
ತೃತೀಯಸ್ತು ಮದಂ ಪ್ರಾಪ್ಯ ಭಗ್ನದಾರ್ವಿವ ನಿಷ್ಕ್ರಿಯಃ ,
ಮದಮೋಹಾವೃತಮನಾ ಜೀವನ್ನಪಿ ಮೃತೈಃ ಸಮಃ ||
ರಮಣೀಯಾನ್ ಸ ವಿಷಯಾನ್ ನ ವೇತ್ತಿ ನ ಸುಹೃಜ್ಜನಮ್ |
ಯದರ್ಥಂ ಪೀಯತೇ ಮದ್ಯಂ ರತಿಂ ತಾಂ ಚ ನ ವಿಂದತಿ ||
ಕಾರ್ಯಾಕಾರ್ಯಂ ಸುಖಂ ದುಃಖಂ ಲೋಕೇ ಯಚ್ಚ ಹಿತಾಹಿತಮ್ |
ಯದವಸ್ಥೋ ನ ಜಾನಾತಿ ಕೋಽವಸ್ಥಾಂ ತಾಂ ವ್ರಜೇದ್ಬುಧಃ ||
ಸ ದೂಷ್ಯಃ ಸರ್ವಭೂತಾನಾಂ ನಿನ್ದ್ಯಶ್ಚಾಗ್ರಾಹ್ಯ ಏವ ಚ |
ವ್ಯಸನಿತ್ವಾದುದರ್ಕೇ ಚ ಸದುಃಖಂ ವ್ಯಾಧಿಮಶ್ನುತೇ

(ಚ 585)

ಮದದ ಅವಸ್ಥಾತ್ರಯದ ಲಕ್ಷಣಗಳು

ಮದ್ಯಪಾನದಿಂದುಂಟಾಗುವ ಮದದಲ್ಲಿ ಪ್ರಥಮ, ಮಧ್ಯಮ, ಅಂತ್ಯ ಎಂಬ ಮೂರು ಅವಸ್ಥೆಗಳು ಇವೆ. ಅವುಗಳ ಲಕ್ಷಣಗಳು ಹೇಗೆಂದರೆ—ಪ್ರಥಮಾವಸ್ಥೆಯಲ್ಲಿ, ಅಧಿಕವಾದ ಉಲ್ಲಾಸವನ್ನೂ ಪ್ರೀತಿಯನ್ನೂ ಉಂಟುಮಾಡುವಿಕೆ, ಅನ್ನಪಾನಗಳ ಗುಣ ತೋರಿಸುವಿಕೆ, ವಾದ್ಯ, ಹಾಡು, ನಗೆ, ಕಥೆ, ಇವುಗಳಲ್ಲಿ ಪ್ರವೃತ್ತಿ, ಈ ಲಕ್ಷಣಗಳು ಉಂಟಾಗುತ್ತವೆ; ಬುದ್ಧಿಯಾಗಲೀ, ನೆನಪಾಗಲೀ, ವಿಷಯಭೋಗದ ಶಕ್ತಿಯಾಗಲೀ ಕಡಿಮೆಯಾಗುವದಿಲ್ಲ, ನಿದ್ರೆಯೂ ಎಚ್ಚರವೂ ಸುಖವಾಗಿರುತ್ತವೆ; ಮತ್ತು ಆ ಪ್ರಥಮಾವಸ್ಥೆಯ ಮದವು ಸುಖ

ಪ್ರದವಾಗಿರುತ್ತದೆ. ಕೆಲವು ಸಮಯ ಸ್ಮೃತಿ ಇರುವದು, ಕೆಲವು ಸಮಯ ಸ್ಮೃತಿ ತಪ್ಪುವದು; ಮಾತು ಕೆಲವು ಸಮಯ ಸ್ಪಷ್ಟವಾಗಿ, ಕೆಲವು ಸಮಯ ವಿರಳವಲ್ಲದೆ ಇರುವದು; ಕೆಲವು ಯುಕ್ತವಾಗಿ ಮತ್ತು ಕೆಲವು ಯುಕ್ತವಲ್ಲದೆ ಹರಟುವದು; ಓಡುವದು; ನಿಲ್ಲುವದರಲ್ಲಿಯೂ ಕುಡಿಯುವದರಲ್ಲಿಯೂ, ಉಣ್ಣುವದರಲ್ಲಿಯೂ, ಸಂಭಾಷಣದಲ್ಲಿಯೂ ವ್ಯತಿಕ್ರಮವಿರುವದು; ಈ ಲಕ್ಷಣಗಳು ಮದದ ಮಧ್ಯಮಾವಸ್ಥೆಯಲ್ಲಿ ಕಾಣುವವು. ರಾಜಸ-ತಾಮಸಗುಣಭರಿತರಾದ ಮನುಷ್ಯರು ಮದದ ಮಧ್ಯಮಾವಸ್ಥೆಯನ್ನು ದಾಟಿ ಅಂತ್ಯದ ಅವಸ್ಥೆಗೆ ಹೋಗದ ಸ್ಥಿತಿಯಲ್ಲಿ ಅಶುಭವಲ್ಲದ ಯಾವ ಕೆಲಸವನ್ನಾದರೂ ಮಾಡಲಾರರು. ಪ್ರಯಾಣಸ್ಥನು ಬಹು ದೋಷಯುಕ್ತವಾದ ಮತ್ತು ಸಮವಾದ ಕೊನೆಯಿಲ್ಲದ ಮಾರ್ಗವನ್ನು ಹಿಡಿದು ಹೋದ ಹಾಗೆ, ಉನ್ಮಾದದ ಹಾಗಿನ ಭಯಂಕರವಾದ ಅಂಥಾ ಮದಕ್ಕೆ ಬುದ್ಧಿವಂತನಾದ ಯಾವ ಮನುಷ್ಯನು ಹೋದಾನು? ಮದದ ಮೂರನೇ ಅವಸ್ಥೆಯನ್ನು ಹೊಂದಿದ ಮನುಷ್ಯನು ಕಡಿದು ಬಿದ್ದ ಮರನ ತುಂಡಿನಂತೆ ಚೇಷ್ಟೆಯಿಲ್ಲದೆ, ಮದ-ಮೋಹಗಳಿಂದ ಮುಚ್ಚಲ್ಪಟ್ಟ ಮನಸ್ಸುಳ್ಳವನಾಗಿ ಮತ್ತು ಬದುಕಿದ್ದರೂ ಸತ್ತವರಿಗೆ ಸಮವಾಗಿ ಇರುವನು, ವಿನೋದಕರವಾದ ವಿಷಯಗಳನ್ನು ಮತ್ತು ಸ್ನೇಹಿತಜನವನ್ನು ಅವನು ತಿಳಿಯನು; ಯಾವದಕ್ಕಾಗಿ ಅವನು ಮದ್ಯಪಾನ ಮಾಡುತ್ತಾನೋ, ಆ ಉಲ್ಲಾಸ ಅವನಿಗೆ ದೊರೆಯುವದಿಲ್ಲ. ಈ ಲೋಕದಲ್ಲಿ ಮಾಡತಕ್ಕದ್ದು-ಮಾಡಬಾರದ್ದು, ಸುಖ-ದುಃಖ, ಹಿತ-ಅಹಿತ, ಎಂಬವುಗಳ ಭೇದವನ್ನು ಯಾವ ಅವಸ್ಥೆಯಲ್ಲ ತಿಳಿಯಲಾರನೋ, ಅಂಥಾ ಅವಸ್ಥೆಗೆ ಬುದ್ಧಿವಂತನಾದ ಯಾವ ಮನುಷ್ಯನು ಹೋದಾನು? ಆ ಮನುಷ್ಯನು ಸರ್ವಪ್ರಾಣಿಗಳೊಳಗೆ ದೂಷಿಸಲ್ಪಡತಕ್ಕವನೂ, ನಿಂದಿಸಲ್ಪಡತಕ್ಕವನೂ, ಸ್ವೀಕಾರಕ್ಕೆ ಅಯೋಗ್ಯನೂ ಆಗಿರುತ್ತಾನೆಯೋ ಸರಿ ಆ ವ್ಯಸನದ ಪರಿಣಾಮವಾಗಿ ಅವನು ಮುಂದೆಯೂ ಸಂಕಷ್ಟಕರವಾದ ವ್ಯಾಧಿಯನ್ನು ಅನುಭವಿಸುತ್ತಾನೆ

ಪರಾ ಮಾ ನಿದಾನಕಾರನು ಕಡೇ ಅವಸ್ಥೆ ನಾಲ್ಕನೇದು, ಅದಕ್ಕೂ ಎರಡನೇ ಅವಸ್ಥೆಗೂ ಮಧ್ಯದ್ದು ಮೂರನೇದು, ಎಂತ ಬರೆದು, ಆ ಮೂರನೇ ಅವಸ್ಥೆಯಲ್ಲಿ ಸಮೀಪಿಸ ಬಾರದವರನ್ನು ಸಮೀಪಿಸುವದು, ಗುರುಗಳನ್ನು ಎದುರಾಡುವದು, ತಿನ್ನಬಾರದವುಗಳನ್ನು ತಿನ್ನುವದು, ಸಂಜ್ಞೆಕಳಕೊಂಡಿರುವದು, ಮನಸ್ಸಿನಲ್ಲಿದ್ದ ಗುಟ್ಟುಗಳನ್ನು ಹೇಳಿಬಿಡುವದು, ಬುದ್ಧಿಸ್ವಾತಂತ್ರ್ಯವಿಲ್ಲವಿರುವದು, ಈ ಲಕ್ಷಣಗಳು ಕಾಣುವವು ಎಂತ ವರ್ಣಿಸಿರುತ್ತಾನೆ (ಪು 115)

7. ನಿರ್ಭಕ್ತಮೇಕಾಂತತ ಏವ ಮದ್ಯಂ
ನಿಷೇವ್ಯಮಾಣಂ ಮನುಜೇನ ನಿತ್ಯಮ್ |
ಉತ್ಪಾದಯೇತ್ಕಷ್ಟತಮಾನ್ವಿಕಾರಾನ್
ಆಪಾದಯೇಚ್ಚಾಪಿ ಶರೀರಭೇದಮ್ ||

ಮದ್ಯಪಾನದಿಂದ ಉಂಟಾಗುವ ರೋಗಗಳು

ಕ್ರುದ್ಧೇನ ಭೀತೇನ ಪಿಪಾಸಿತೇನ
ಶೋಕಾಭಿತಪ್ತೇನ ಬುಭುಕ್ಷಿತೇನ |
ವ್ಯಾಯಾಮಭಾರಾಧ್ವಪರಿಕ್ಷತೇನ
ವೇಗಾವರೋಧಾಭಿಹತೇನ ಚಾಪಿ ||
*ಅತ್ಯಮ್ಲಭಕ್ಷ್ಯಾವತತೋದರೇಣ
ಸಾಜೀರ್ಣಭುಕ್ತೇನ ತಥಾಬಲೇನ |
ಉಷ್ಣಾಭಿತಪ್ತೇನ ಚ ಸೇವ್ಯಮಾನಂ
ಕರೋತಿ ಮದ್ಯಂ ವಿವಿಧಾನ್ವಿಕಾರಾನ್ |

ಪಾನಾತ್ಯಯಂ ಪರಮದಂ ಪಾನಾಜೀರ್ಣಮಥಾಪಿ ವಾ |
ಪಾನವಿಭ್ರಮಮುಗ್ರಂ ಚ ತೇಷಾಂ ವಕ್ಷ್ಯಾಮಿ ಲಕ್ಷಣಮ್ ||

(ಸು. 832)

ನಿತ್ಯದಲ್ಲೂ ಊಟಕ್ಕೆ ಮೊದಲು ಬರೇದಾಗಿ (ತೀನಿಯಿಲ್ಲದೆ) ಮದ್ಯವನ್ನು ಸೇವಿಸುತ್ತಾ ಬರುವದರಿಂದ ಮನುಷ್ಯನಿಗೆ ಅತ್ಯಂತ ಕಷ್ಟವಾದ ರೋಗಗಳು ಉಂಟಾಗಿ ಶರೀರವು ನಾಶವಾಗುವದು. ಸಿಟ್ಟುಗೊಂಡಾಗ್ಗೆ, ಹೆದರಿಕೊಂಡಾಗ್ಗೆ, ಬಾಯಾರಿದಾಗ್ಗೆ, ವ್ಯಸನದ ಜ್ವಾಲೆಯಿರುವಾಗ್ಗೆ, ಹಸಿವಾಗಿದ್ದಾಗ್ಗೆ, ದೇಹದಂಡನೆಯಿಂದ, ಭಾರಹೊತ್ತದರಿಂದ, ಅಥವಾ ದಾರಿ ನಡೆದುದರಿಂದ ನೊಂದಿರುವಾಗ್ಗೆ, (ಮಲಮೂತ್ರಾದಿ) ವೇಗಗಳ ತಡೆಯಿಂದ ಪೀಡಿತನಾಗಿರುವಾಗ್ಗೆ, ಅತಿ ಹುಳಿಯಾದ ಭಕ್ಷ್ಯಗಳನ್ನು ತಿಂದು ಹೊಟ್ಟೆ ಉಬ್ಬಿರುವಾಗ್ಗೆ, ಅಜೀರ್ತಿಕರವಾದ ಭೋಜನವನ್ನು ಮಾಡಿರುವಾಗ್ಗೆ, ಬಲಹೀನವಾಗಿರುವಾಗ್ಗೆ, (ಬಿಸಿಲು ಮುಂತಾದ) ಬಿಸಿಯಿಂದ (ದೇಹವು) ಕಾದಿರುವಾಗ್ಗೆ, ಪಾನಮಾಡಲ್ಪಡುವ ಮದ್ಯವು ನಾನಾ ವಿಧವಾದ ರೋಗಗಳನ್ನು, ಅಂದರೆ, ಪಾನಾತ್ಯಯ, ಪರಮದ, ಪಾನಾಜೀರ್ಣ, ಮತ್ತು ಉಗ್ರವಾದ ಪಾನವಿಭ್ರಮ, ಇವುಗಳನ್ನುಂಟುಮಾಡುತ್ತದೆ. ಅವುಗಳ ಲಕ್ಷಣಗಳು ಕೆಳಗೆ ಉಕ್ತವಾಗುತ್ತವೆ.

*'ಅತ್ಯವ್ಲ' ಎಂಬಲ್ಲಿ 'ಅತ್ಯವ್ಬು' ಎಂತ ಪಾಠಾಂತರ ಕಾಣುತ್ತದೆ ಆಗ್ಗೆ ಅತಿಯಾದ ನೀರಿನಿಂದಲೂ, ಭಕ್ಷ್ಯಗಳಿಂದಲೂ, ಹೊಟ್ಟೆಯು ಉಬ್ಬಿರುವಾಗ್ಗೆ ಎಂಬ ಅರ್ಥವಾಗುತ್ತದೆ.

ಚತುರ್ವಿಧ ಪಾನಾತ್ಯಯ ಲಕ್ಷಣಗಳು

8. ಸ್ತಮ್ಭಾಂಗಮರ್ದಹೃದಯಗ್ರಹತೋದಕಮ್ಪಾಃ
ಪಾನಾತ್ಯಯೇಽನಿಲಕೃತೇ ಶಿರಸೋ ರುಜಶ್ಚ |
ಸ್ವೇದಪ್ರಲಾಪಮುಖಶೋಷಣದಾಹಮೂರ್ಛಾಃ
ಪಿತ್ತಾತ್ಮಕೇ ವದನಲೋಚನಪೀತತಾ ಚ ||
ಶ್ಲೇಷ್ಮಾತ್ಮಕೇ ವಮಥುಶೀತಕಫಪ್ರಸೇಕಾಃ
ಸರ್ವಾತ್ಮಕೇ ಭವತಿ ಸರ್ವವಿಕಾರಸಮ್ಪತ್ ||

(ಸು. 832)

ಜಡತ್ವ, ಮೈಸೆಳವು, ಎದೆಹಿಡಿದುಕೊಳ್ಳುವದು, ಮೈನೋವು, ನಡುಕು, ತಲೆಶೂಲೆ, ಈ ಲಕ್ಷಣಗಳು ವಾತಜ ಪಾನಾತ್ಯಯದಲ್ಲಿಯೂ, ಬೆವರು, ಅಸಂಬದ್ಧಮಾತು, ಬಾಯಿ ಒಣಗುವದು, ಉರಿ, ಮೂರ್ಛೆ, ಮುಖ ಮತ್ತು ಕಣ್ಣುಗಳು ಅರಸಿನ ವರ್ಣವಾಗಿರುವದು, ಈ ಲಕ್ಷಣಗಳು ಪಿತ್ತಜ ಪಾನಾತ್ಯಯದಲ್ಲಿಯೂ, ವಾಂತಿ, ಶೀತ, ಕಫ ಸುರಿಯುವದು, ಇವು ಕಫಾತ್ಮಕ ಪಾನಾತ್ಯಯದಲ್ಲಿಯೂ, ಈ ಎಲ್ಲಾ ವಿಕಾರಗಳ ಕೂಡುವಿಕೆಯು ತ್ರಿದೋಷಜ ಪಾನಾತ್ಯಯದಲ್ಲಿಯೂ ಉಂಟಾಗುವವು.

ಪರಾ ಚರಕನ ಪ್ರಕಾರ ವಾತಜದಲ್ಲಿ ಬಿಕ್ಕಟ್ಟು, ಉಬ್ಬಸ, ತಲೆನಡುಕು, ಪಾರ್ಶ್ವಶೂಲೆ, ಜಾಗರ, ಬಹಳವಾದ ಪ್ರಲಾಪ ಕಾಣುವವು, ಪಿತ್ತಜದ ಲಕ್ಷಣಗಳೊಳಗೆ, ಜ್ವರ, ಅತಿಸಾರ, ಭ್ರಮೆ ಸಹ ತೋರುವವು, ಕಫಜದಲ್ಲಿ ಅರುಚಿ, ಗುರುತ್ವ, ಹೃಲ್ಲಾಸ (ಬಿಕ್ಕಳು ಅಥವಾ ಎದೆ ಕುಣಿತ), ತಂದ್ರೆ ಸಹ, ಲಕ್ಷಣಗಳು (ಚ 588-589) ಕೆಳಗಿನ 9ನೇ ಸಂಖ್ಯೆ ನೋಡಿ

9 ವಿಷಸ್ಯ ಯೇ ಗುಣಾ ದೃಷ್ಟಾಃ ಸನ್ನಿಪಾತಪ್ರಕೋಪಣಾಃ |
ತ ಏವ ಮದ್ಯೇ ದೃಶ್ಯನ್ತೇ ವಿಷೇತು ಬಲವತ್ತರಾಃ ||

ಮದಾತ್ಯಯವು ವಿಷಕ್ಕೆ ಸದೃಶ.

ಹನ್ತ್ಯಾಶು ಹಿ ವಿಷಂ ಕಿಂಚಿತ್ ಕಿಂಚಿತ್ ರೋಗಾಯ ಕಲ್ಪತೇ |
ಯಥಾ ವಿಷಂ ತಥೈವಾನ್ತ್ಯೋ ಜ್ಞೇಯೋ ಮದ್ಯಕೃತೋ ಮದಃ ||
ತಸ್ಮಾತ್ತ್ರಿದೋಷಜಂ ಲಿಂಗಂ ಸರ್ವತ್ರಾಪಿ ಮದಾತ್ಯಯೇ |
ದೃಶ್ಯತೇ ರೂಪವೈಶೇಷ್ಯಾತ್ ಪೃಥಕ್ತ್ವಂ ಚಾಸ್ಯ ಲಕ್ಷ್ಯತೇ ||

(ಚ. 589)

ತ್ರಿದೋಷಗಳನ್ನು ಪ್ರಕೋಪಿಸತಕ್ಕ ಯಾವ ಗುಣಗಳು ವಿಷದಲ್ಲಿ ಕಾಣುತ್ತವೋ, ಆ ಗುಣಗಳೇ ಮದ್ಯದಲ್ಲಿಯೂ ಕಾಣುತ್ತವೆ. ಆದರೆ ವಿಷದಲ್ಲಿ ಆ ಗುಣಗಳು ಹೆಚ್ಚು ಬಲವಂತವಾಗಿರುತ್ತವೆ. ಕೆಲವು ವಿಷಗಳು ಕೊಲ್ಲುತ್ತವೆ, ಬೇರೆ ಕೆಲವು ವಿಷಗಳು ರೋಗಗಳನ್ನುಂಟುಮಾಡುತ್ತವೆ. ಮದ್ಯದಿಂದುಂಟಾಗುವ ಕಡೇ ಅವಸ್ಥೆಯ ಮದವು ವಿಷದ ಹಾಗೆಯೇ ಎಂತ ತಿಳಿಯತಕ್ಕದ್ದು. ಆದ್ದರಿಂದ ಸನ್ನಿಪಾತದ ಲಕ್ಷಣಗಳು ಎಲ್ಲಾ ಮದಾತ್ಯಯಗಳಲ್ಲಿ ಕಾಣುತ್ತವೆ, ಅವುಗಳೊಳಗೆ ವಿಶೇಷವಾಗಿ ಕಾಣುವ ಲಕ್ಷಣಗಳ ಮೇಲೆ ಮದಾತ್ಯಯದ (ನಾಲ್ಕು) ಪ್ರತ್ಯೇಕ ಜಾತಿಗಳನ್ನು ವಿಂಗಡಿಸುವದಾಗಿರುತ್ತದೆ.

10. ಪರಮದದ ಲಕ್ಷಣ

ಉಷ್ಣಾ(?ಷ್ಮಾ)ಶರೀರಗುರುತಾ ವಿರಸಾನನತ್ವಂ
ಶ್ಲೇಷ್ಮಾಧಿಕತ್ವಮರುಚಿರ್ಮಲಮೂತ್ರಸಂಗಃ |
ಲಿಂಗಂ ಪರಸ್ಯ ತು ಮದಸ್ಯ ವದನ್ತಿ ತಜ್ಞಾ
ಸ್ತೃಷ್ಣಾ ರುಜಾ ಶಿರಸಿ ಸನ್ಧಿಷು ಚಾಪಿ ಭೇದಃ ||

(ಸು. 833)

ಮೈಬಿಸಿ, ಶರೀರ ಭಾರವಾಗಿ ಕಾಣುವದು, ಮುಖ ಬಾಡಿರುವದು, ಕಫಾಧಿಕ್ಯ, ಅರುಚಿ, ಮಲಮೂತ್ರ ಕಟ್ಟಿಕೊಳ್ಳುವದು, ಬಾಯಾರಿಕೆ, ತಲೆನೋವು, ಮತ್ತು ಸಂದುಗಳ ಕಡತ, ಇವು ಪರಮದದ ಲಕ್ಷಣಗಳೆಂತ ಬಲ್ಲವರು ಹೇಳುತ್ತಾರೆ.

ಪರಾ ಮಾಧವನಿದಾನಾದಿಗಳಲ್ಲಿ ಉಷ್ಣತೆಯು ಪರಮದದ ಲಕ್ಷಣಗಳೊಳಗೆ ಕಾಣುವದಿಲ್ಲ. ಮೂಲದಲ್ಲಿ ಬೇರೆಬೇರೆ ಪಾಠಾಂತರ ಮಾಡಿರುತ್ತಾರೆ 'ಉಷ್ಣಾಶರೀರ' ಎಂಬದಕ್ಕೆ 'ಶ್ಲೇಷ್ಮೋಚ್ಛ್ರಯೋಽಂಗ' ಎಂತ ಮಾ ನಿ (ಪು 118) ಶ್ಲೇಷ್ಮೋಚ್ಛ್ರಯವನ್ನು ಮೂಗಿನ ಸ್ರಾವ ಮುಂತಾದ್ದರಿಂದ ತಿಳಿಯಬೇಕು ಎಂತ ವ್ಯಾಖ್ಯಾ.

11. ಪಾನಾಜೀರ್ಣದ ಲಕ್ಷಣ

ಆಧ್ಮಾನಮುದ್ಗಿರಣಮಮ್ಲರಸೋ ವಿದಾಹೋ
ಽಜೀರ್ಣಸ್ಯ ಪಾನಜನಿತಸ್ಯ ವದನ್ತಿ ಲಿಂಗಮ್ |
ಜ್ಞೇಯಾನಿ ತತ್ರ ಭಿಷಜಾ ಸುವಿನಿಶ್ಚಿತಾನಿ
ಪಿತ್ತಪ್ರಕೋಪಜನಿತಾನಿ ಚ ಕಾರಣಾನಿ || (ಸು. 833)

ಹೊಟ್ಟೆಯುಬ್ಬರ, ವಾಂತಿ, ಬಾಯಿ ಹುಳಿಯಾಗಿರುವದು, ಮೈಯುರಿ, ಇವು ಪಾನಾಜೀರ್ಣದ ಲಕ್ಷಣಗಳೆಂತ (ಬಲ್ಲವರು) ಹೇಳುತ್ತಾರೆ. ಆದರೆ ಅದರಲ್ಲಿ ವೈದ್ಯನು ಪಿತ್ತಪ್ರಕೋಪದಿಂದ ಹುಟ್ಟಿದ ನಿಶ್ಚಿತವಾದ ಕಾರಣಗಳು (ಲಕ್ಷಣಗಳು) ಸಹ ಇರುತ್ತವೆಂತ ತಿಳಿಯತಕ್ಕದ್ದು.

12. ಹೃದ್ಗಾತ್ರತೋದವಮಥುಜ್ವರಕಂಠಧೂಮ-
ಮೂರ್ಚ್ಛಾಕಫಸ್ರವಣಮೂರ್ದ್ಧರುಜೋ ವಿದಾಹಃ |

ಪಾನವಿಭ್ರಮದ ಲಕ್ಷಣ

ದ್ವೇಷಃ ಸುರಾನ್ನವಿಕೃತೇಷು ಚ ತೇಷು ತೇಷು
ತಂ ಪಾನ ವಿಭ್ರಮಮುಶನ್ತ್ಯಖಿಲೇಸ* ಧೀರಾಃ ||

(ಸು. 833)

* 'ಅಖಿಲೇಷು' ಎಂಬ ಪಾಠವೂ ಕಾಣುತ್ತದೆ ಹಾಗಿದ್ದರೆ, ಮದ್ಯವಿಕಾರಗಳೊಳಗೆ ಎಂತ ಅರ್ಥ.

ಎದೆಯಲ್ಲಿಯೂ ಶರೀರದಲ್ಲಿಯೂ (ಚುಚ್ಚಿದಂತೆ) ನೋವು, ವಾಂತಿ, ಜ್ವರ, ಗಂಟಲಲ್ಲಿ ಹೊಗೆ ಬಂದ ಹಾಗಿನ ಪೀಡೆ, ಮೂರ್ಛೆ, ಕಫ ಸುರಿಯುವದು, ತಲೆಶೂಲೆ, ಉರಿ, ಆಯಾ (ನಾನಾ ವಿಧವಾದ) ಮದ್ಯಭೇದಗಳಲ್ಲಿಯೂ, ಆಹಾರಭೇದಗಳಲ್ಲಿಯೂ ದ್ವೇಷ, ಈ ಲಕ್ಷಣಗಳುಳ್ಳ ವ್ಯಾಧಿಯನ್ನು ಪಾನವಿಭ್ರಮ ಎಂತ ಎಲ್ಲಾ ಪಂಡಿತರು ತಿಳಿಯುತ್ತಾರೆ.

13. ಪಾನಾತ್ಯಯದ ಅಸಾಧ್ಯ ಲಕ್ಷಣ ಮತ್ತು ಉಪದ್ರವಗಳು

ಹೀನೋತ್ತರೌಷ್ಠಮತಿಶೀತಮಮನ್ದದಾಹಂ
ತೈಲಪ್ರಭಾಸ್ಯಮತಿಪಾನಹತಂ ವಿಜಹ್ಯಾತ್ ।
ಜಿಹ್ವೌಷ್ಠದನ್ತಮಸಿತಂ ತ್ವಥವಾಪಿ ನೀಲಂ
ಪೀತೇ ಚ ಯಸ್ಯ ನಯನೇ ರುಧಿರಪ್ರಭೇ ಚ ||
ಹಿಕ್ಕಾಜ್ವರೌವಮಥುವೇಪಥುಪಾರ್ಶ್ವಶೂಲಾಃ
ಕಾಸಭ್ರಮಾವಪಿ ಚ ಪಾನಹತಂ ಭಜನ್ತೇ । (ಸು 833)

ಮೇಲಿನ ತುಟಿ ತಗ್ಗಿ (ಜೋತಾಡಿದ ಹಾಗೆ) ಇರುವದು, ಮೈ ತಣ್ಣಗೆ, ಒಳಗೆ ಹೆಚ್ಚು ಉರಿ, ಮುಖದಲ್ಲಿ ಎಣ್ಣೆ ಸವರಿದ ಹಾಗಿನ ಪ್ರಭೆ, ನಾಲಿಗೆ, ತುಟಿ, ಮತ್ತು ಹಲ್ಲುಗಳು ಕಪ್ಪು ಅಥವಾ ನೀಲವರ್ಣವಾಗಿರುವದು, ಮತ್ತು ಕಣ್ಣುಗಳು ಅರಸಿನ ಅಥವಾ ರಕ್ತವರ್ಣವಾಗುವದು, ಈ ಲಕ್ಷಣಗಳು ಯಾವ ಅತಿಯಾದ ಮಧುಪಾನದಿಂದ ನೊಂದ ರೋಗಿಯಲ್ಲಿ ಕಾಣುತ್ತವೋ, ಅಂಥವನ ಆಶೆಯನ್ನು ಬಿಡಬೇಕು. ಬಿಕ್ಕಟ್ಟು, ಜ್ವರ, ವಾಂತಿ, ಮೈನಡುಕು, ಪಾರ್ಶ್ವಶೂಲೆ, ಕೆಮ್ಮು, ತಲೆತಿರುಕು, ಈ ವಿಕಾರಗಳು ಸಹ ಮದ್ಯಪಾನದಿಂದ ಕೆಡುಕು ಹೊಂದಿದವನನ್ನು ಆಶ್ರಯಿಸಿಕೊಳ್ಳುತ್ತವೆ.

14. ಧ್ವಂಸಕ ವಿಟ್‌ಕ್ಷಯ ಎಂಬ ರೋಗಗಳು

ವಿಚ್ಛಿನ್ನಮದ್ಯಃ ಸಹಸಾ ಯೋಽತಿಮದ್ಯಂ ನಿಷೇವತೇ ।
ಧ್ವಂಸಕೋ ವಿಟ್‌ಕ್ಷಯಶ್ಚೈವ ರೋಗಸ್ತಸ್ಯೋಪಜಾಯತೇ ||
ವ್ಯಾಧ್ಯುಪಕ್ಷೀಣದೇಹಸ್ಯ ದುಶ್ಚಿಕಿತ್ಸ್ಯತಮೌ ಮತೌ ।
ಶ್ಲೇಷ್ಮಪ್ರಕೋಪಃ ಕಂಠಸ್ಯ ಶೋಷಃ ಶಬ್ದಾಸಹಿಷ್ಣುತಾ ।
ತನ್ದ್ರಾ ನಿದ್ರಾಭಿಯೋಗಶ್ಚ ಜ್ಞೇಯಂ ಧ್ವಂಸಕಲಕ್ಷಣಮ್ ।
ಹೃತ್ಕಂಠರೋಗಃ* ಸಮ್ಮೋಹಶ್ಛರ್ದಿರಂಗರುಜಾ ಜ್ವರಃ ।
ತೃಷ್ಣಾ ಕಾಸಃ ಶಿರಃಶೂಲಮೇತದ್ವಿಟ್‌ಕ್ಷಯಲಕ್ಷಣಮ್ ||

(ಚ. 597)

ಮದ್ಯಪಾನವನ್ನು ಬಿಟ್ಟಿದ್ದ ಮನುಷ್ಯನು ಒಡನೆ ಅತಿಯಾಗಿ ಮದ್ಯವನ್ನು ಸೇವಿಸಿದರಿಂದ ಅವನಿಗೆ ಧ್ವಂಸಕ, ವಿಟ್‌ಕ್ಷಯ ಎಂಬ ರೋಗಗಳು ಉತ್ಪನ್ನವಾಗುತ್ತವೆ. ವ್ಯಾಧಿಯಿಂದ ಕ್ಷೀಣವಾದ ದೇಹವುಳ್ಳವನಲ್ಲಿ ಈ ರೋಗಗಳು ಉಂಟಾದರೆ ಅವುಗಳ ಚಿಕಿತ್ಸೆಯು ಅತ್ಯಂತ ಕಷ್ಟ ಎಂತ ಎಣಿಸಲ್ಪಡುತ್ತದೆ. ಕಫಪ್ರಕೋಪ, ಗಂಟಲ ಒಣಗುವಿಕೆ, ಶಬ್ದವನ್ನು ಸಹಿಸ

ಕೊಡದಿರುವಿಕೆ, ತನ್ದ್ರೆ, ಅತಿನಿದ್ರೆ, ಇವು ಧ್ವಂಸಕದ ಲಕ್ಷಣಗಳೆಂತ ತಿಳಿಯಬೇಕು. ಎದೆ ರೋಗ, ಕಂಠರೋಗ, ಮೂರ್ಛೆ, ವಾಂತಿ, ಮೈನೋವು, ಜ್ವರ, ಬಾಯಾರಿಕೆ, ಕೆಮ್ಮು, ತಲೆ ಶೂಲೆ, ಇವು ವಿಟ್ಕ್ಷಯದ ಲಕ್ಷಣಗಳು.

* ಪಠ 'ಹೃತ್ಕಂಠರೋಧಃ' ಎಂಬ ಪಾಠಾಂತರ ಅ ಸಂ (II-40)ದಲ್ಲಿ ಕಾಣುತ್ತದೆ ಅದರಿಂದ 'ಎದೆಯಲ್ಲಿ ಮತ್ತು ಕಂಠದಲ್ಲಿ ತಡೆ' ಎಂತ ಅರ್ಥವಾಗುತ್ತದೆ

15 ಸರ್ವಂ ಮದಾತ್ಯಯಂ ವಿದ್ಯಾತ್ ತ್ರಿದೋಷಮಧಿಕಸ್ತು ಯತ್ ।
ಸಾಧಾರಣ ಚಿಕಿತ್ಸೋಪಕ್ರಮ ವಿಧಿ
ದೋಷಂ ಮದಾತ್ಯಯೇ ಪಶ್ಯೇತ್ ತಸ್ಯಾದೌ ಪ್ರತಿಕಾರಯೇತ್ ॥
ಕಫಸ್ಥಾನಾನುಪೂರ್ವ್ಯಾ ಚ ಕ್ರಿಯಾ ಕಾರ್ಯಾ ಮದಾತ್ಯಯೇ ।
ಪಿತ್ತಮಾರುತಪರ್ಯನ್ತಃ ಪ್ರಾಯೇಣ ಹಿ ಮದಾತ್ಯಯಃ (ಚ. 590)

ಎಲ್ಲಾ ಮದಾತ್ಯಯಗಳು ಸನ್ನಿಪಾತದಿಂದ ಉಂಟಾಗುವದಾದ್ದರಿಂದ ವಾತಾದಿ ಮೂರು, ದೋಷಗಳೊಳಗೆ ಅಧಿಕವಾಗಿರುವದು ಯಾವದೆಂದು ನೋಡಿಕೊಂಡು, ಮುಂದಾಗಿ ಅದಕ್ಕೆ ತಕ್ಕ ಪರಿಹಾರವನ್ನು ಮಾಡತಕ್ಕದ್ದು. ಮದಾತ್ಯಯದಲ್ಲಿ ದೋಷವು ಕಫಸ್ಥಾನ (ಪಾದ ಆಮಾಶಯ)ವನ್ನು ಹೊಕ್ಕು, ಅಲ್ಲಿಂದ ಪಿತ್ತಸ್ಥಾನಕ್ಕೆ, ಕಡೆಗೆ ವಾತಸ್ಥಾನಕ್ಕೆ, ಪ್ರವೇಶ ಮಾಡುವುದಾದ್ದರಿಂದ, (ಮೂರು ದೋಷಗಳೂ ಸಮವಾಗಿ ಕಾಣುವ ಸಂಗತಿಯಲ್ಲಿ) ಹೆಚ್ಚಾಗಿ ಅದೇ ಕ್ರಮದಲ್ಲಿ ಕಫಾದಿ ಮೂರು ದೋಷಗಳಿಗೆ ಚಿಕಿತ್ಸೆಯನ್ನು ಮಾಡತಕ್ಕದ್ದು.

ಪಠ ತ್ರಿದೋಷಪರಿಹಾರಕರವಾಗಿ ಮಾಡತಕ್ಕ ಯೋಗಗಳಲ್ಲಿ ಯಾವ ದೋಷಪರಿಹರಿಸುವ ಶಕ್ತಿ ವಿಶೇಷವಾಗಿ ಇರಬೇಕೆಂಬದನ್ನು ಈ ಉಪದೇಶವು ವರ್ಣಿಸುತ್ತದೆ

16 ಮಿಥ್ಯಾತಿಹೀನಪೀತೇನ ಯೋ ವ್ಯಾಧಿರುಪಜಾಯತೇ ।
ಮದ್ಯದಿಂದ ಪ್ರತೀಕಾರ
ಸಮಪೀತೇನ ತೇನೈವ ಸ ಮದ್ಯೇನೋಪಶಾಮ್ಯತಿ ॥ (ಚ. ¯90)

ತಪ್ಪಾದ ಯೋಗದಿಂದ, ಅಥವಾ ಅತಿಯಾಗಿ, ಅಥವಾ ಹೀನವಾಗಿ, ಮದ್ಯಪಾನಮಾಡಿದ್ದರಿಂದ ಯಾವ ರೋಗ ಉಂಟಾಗುತ್ತದೋ, ಅದು ಅದೇ ಮದ್ಯವನ್ನು ಸಮವಾಗಿ ಕುಡಿಸುವದರಿಂದ ಪರಿಹಾರವಾಗುತ್ತದೆ.

17 ಜೀರ್ಣಾಮಮದ್ಯದೋಷಾಯ ಮದ್ಯಮೇವ ಪ್ರದಾಪಯೇತ್ ।
ಪ್ರಕಾಂಕ್ಷಾಲಾಘವೇ ಜಾತೇ ಯದ್ಯದಸ್ಮೈ ಹಿತಂ ಭವೇತ್ ॥
ಮದ್ಯವನ್ನು ಕೊಡುವ ವಿಧಾನ
ಸೌವರ್ಚಲಾನುಸಂವಿದ್ಧಂ ಶೀತಂ ಸವಿಡಸೈಂಧವಮ್ ।
ಮಾತುಲುಂಗಾರ್ದ್ರಕೋಪೇತಂ ಜಲಯುಕ್ತಂ ಪ್ರಮಾಣವಿತ್ ॥
(ಚ. 590)

(ಹಿಂದಿನ ಶ್ಲೋಕದಲ್ಲಿ ಉಕ್ತವಾದಂಥವನ) ಮದ್ಯದಿಂದುಂಟಾದ ಆಮದೋಷವು (ಅಂದರೆ ಆರಂಭದ ತೀವ್ರ ವಿಕಾರವು) ಜೀರ್ಣವಾಗಿ, (ಮದ್ಯದ) ಅತ್ಯಾಶೆಯು ಲಘುವಾದ ಮೇಲೆ, ಅವನಿಗೆ ಯಾವ ಯಾವ ಮದ್ಯವು (ದೋಷವಿಚಾರದಿಂದ) ಹಿತವೋ, ಅದನ್ನು ಅವನಿಗೆ ಸೌವರ್ಚಲವಣ (ಕರೀ ಉಪ್ಪು), ಬಿಡಾಲವಣ, ಸೈಂಧವಲವಣ, ಮಾದಳಹಣ್ಣಿನ ರಸ, ಶುಂಠೀರಸ, ನೀರು, ಸಹ ಕೂಡಿಸಿ ತಕ್ಕ ಪ್ರಮಾಣದಲ್ಲಿ ಶೀತವಾಗಿ ಕೊಡಬೇಕು.

18. ತೀಕ್ಷ್ಣೋಷ್ಣೇನಾತಿಮಾತ್ರೇಣ ಪೀತೇನಾಮ್ಲವಿದಾಹಿನಾ |
ಮದ್ಯೇನಾನ್ನರಸಕ್ಲೇದೋ ವಿದಗ್ಧಃ ಕ್ಷಾರತಾಂ ಗತಃ ||
ಅನ್ತರ್ದಾಹಂ ಜ್ವರಂ ತೃಷ್ಣಾಂ ಪ್ರಮೋಹಂ ವಿಭ್ರಮಂ ಮದಮ್ |
ಜನಯತ್ಯಾಶು ತಚ್ಛಾನ್ತ್ಯೈ ಮದ್ಯಮೇವ ಪ್ರದಾಪಯೇತ್ ||
ಮದ್ಯವು ಪ್ರತೀಕಾರವು ಕ್ಷಾರೋ ಹಿ ಯಾತಿ ಮಾಧುರ್ಯಂ ಶೀಘ್ರಮಮ್ಲೋಪಸಂಸ್ಕೃತಃ |
ಶ್ರೇಷ್ಠಮಮ್ಲೇಷು ಮದ್ಯಂ ಚ ಯೈರ್ಗುಣೈಸ್ತಾನ್ ಪರಂ ಶೃಣು ||
ಮದ್ಯಸ್ಯಾಮ್ಲಸ್ವಭಾವಸ್ಯ ಚತ್ವಾರೋಽನುರಸಾಃ ಸ್ಮೃತಾಃ |
ಮಧುರಶ್ಚ ಕಷಾಯಶ್ಚ ತಿಕ್ತಃ ಕಟುಕ ಏವ ಚ ||
ಗುಣಾಶ್ಚ ದಶ ಪೂರ್ವೋಕ್ತಾಸ್ತೈಶ್ಚತುರ್ದಶಭಿರ್ಗುಣೈಃ |
ಸರ್ವೇಷಾಂ ಮದ್ಯಮಮ್ಲಾನಾಮುಪರ್ಯುಪರಿ ತಿಷ್ಠತಿ || (ಚ. 590)

ತೀಕ್ಷ್ಣವಾದ, ಉಷ್ಣವಾದ, ಹುಳಿಯಾದ, ಉರಿಯನ್ನುಂಟುಮಾಡತಕ್ಕ ಮತ್ತು ಪ್ರಮಾಣಾತಿರೇಕವಾಗಿ ಕುಡಿಯಲ್ಪಟ್ಟ ಮದ್ಯದಿಂದ ಹೊಟ್ಟೆಯೊಳಗಿನ ಅನ್ನರಸದ ದ್ರವವು ಅತಿಯಾಗಿ, ಪಾಕವಾಗಿ ಕ್ಷಾರವಾಗುತ್ತದೆ; ಮತ್ತು ಅದರಿಂದ ಒಳಗೆ ಉರಿ, ಜ್ವರ, ಬಾಯಾರಿಕೆ, ಮೂರ್ಛೆ ಭ್ರಾಂತಿ, ಮದ ಸಹ ಉಂಟಾಗುತ್ತವೆ; ಇವುಗಳ ಶಮನಕ್ಕೆ ಮದ್ಯವನ್ನೇ ಕೊಡತಕ್ಕದ್ದು; ಯಾಕೆಂದರೆ ಕ್ಷಾರವು ಯುಕ್ತವಾದ ಹುಳಿಯ ಸಂಯೋಗದಿಂದ ಬೇಗನೇ ಸಿಹಿಯಾಗುತ್ತದೆ. ಹುಳಿಪದಾರ್ಥಗಳೊಳಗೆ ಮದ್ಯವು ಶ್ರೇಷ್ಠವಾದದ್ದು; ಯಾವ ಗುಣಗಳಿಂದ ಅಂದರೆ:— ಹುಳಿ ಸ್ವಭಾವದ ಮದ್ಯದಲ್ಲಿ ಸಿಹಿ, ಚೊಗರು, ಕಹಿ, ಕಾರ, ಎಂಬ ನಾಲ್ಕು ಅನುರಸಗಳು ಇವೆ; ಇವು ನಾಲ್ಕು ಹಿಂದೆ ಹೇಳಿದ ಹತ್ತು ಕೂಡಿ (ಮದ್ಯದಲ್ಲಿ) ಹದಿನಾಲ್ಕು ಗುಣಗಳಿರುವದರಿಂದ ಹುಳಿಯಾದ ಸರ್ವಪದಾರ್ಥಗಳಲ್ಲಿ ಬಹಳ ಮೇಲೆ ಇರುವಂಥಾದ್ದು ಅತಿ (ಶ್ರೇಷ್ಠವಾದದ್ದು) ಮದ್ಯ

19. ಮದ್ಯೋತ್ಕ್ಲಿಷ್ಟೇನ ದೋಷೇಣ ರುದ್ಧಃ ಸ್ರೋತಃಸು ಮಾರುತಃ |
ಕರೋತಿ ವೇದನಾಂ ತೀವ್ರಾಂ ಶಿರಸ್ಯಸ್ಥಿಷು ಸನ್ಧಿಷು ||
ದೋಷವಿಷ್ಯನ್ದನಾರ್ಥಂ ಹಿ ತಸ್ಮೈ ಮದ್ಯಂ ವಿಶೇಷತಃ |
ಮದ್ಯದ ಹುಳಿಯಲ್ಲಿ ಗುಣವಿಶೇಷ ವ್ಯವಾಯಿತೀಕ್ಷ್ಣೋಷ್ಣತಯಾ ದೇಯಮಮ್ಲೇಷು ಸತ್ಸ್ವಪಿ ||
ಸ್ರೋತೋವಿಬನ್ಧಮುನ್ಮಥ್ಯ ಮಾರುತಸ್ಯಾನುಲೋಮನಮ್ |
ರೋಚನಂ ದೀಪನಂ ಚಾಗ್ನೇರಭ್ಯಾಸಾತ್ಸಾತ್ಮ್ಯಮೇವ ಚ ||
ರಸಸ್ರೋತಃಸ್ವರುದ್ಧೇಷು ಮಾರುತೇ ಚಾನುಲೋಮಿತೇ |
ನಿವರ್ತನ್ತೇ ವಿಕಾರಾಶ್ಚ ಶಾಮ್ಯನ್ತ್ಯಸ್ಯ ಮದೋದಯಾಃ* ||
(ಚ. 590-91)

ಮದ್ಯದಿಂದ ಕೆದರಿಸಲ್ಪಟ್ಟ ದೋಷದಿಂದ ಸ್ರೋತಸ್ಸುಗಳಲ್ಲಿ ವಾಯುವು ತಡೆಯಲ್ಪಟ್ಟು, ತಲೆಯಲ್ಲಿಯೂ, ಎಲುಬುಗಳಲ್ಲಿಯೂ, ಸಂದುಗಳಲ್ಲಿಯೂ, ತೀಕ್ಷ್ಣವಾದ ನೋವನ್ನುಂಟುಮಾಡುತ್ತದೆ. ಆ ದೋಷವನ್ನು ಹರಿಸುವುದಕ್ಕೋಸ್ಕರ, ಬೇರೆ ಹುಳಿಗಳು ಇದ್ದರೂ, ವ್ಯವಾಯಿ, ತೀಕ್ಷ್ಣತೆ ಮತ್ತು ಉಷ್ಣತೆ ಗುಣಗಳಿರುವ ಮದ್ಯವನ್ನೇ ವಿಶೇಷವಾಗಿ ಕೊಡತಕ್ಕದ್ದು. ಅದು ಸ್ರೋತಸ್ಸುಗಳೊಳಗಿನ ತಡೆಯನ್ನು ಕಿತ್ತುತೆಗೆದು, ವಾಯುಸಂಚಾರವನ್ನು

ಕ್ರಮಪಡಿಸಿ, ರುಚಿಯನ್ನೂ ಅಗ್ನಿದೀಪನವನ್ನೂ ಉಂಟುಮಾಡುವದಲ್ಲದೆ, ಅಭ್ಯಾಸವಿದ್ದದ್ದಾದ್ದರಿಂದ ಹಿತವೇ ಆಗುತ್ತದೆ. ರಸವಾಹಿಸ್ರೋತಸ್ಸುಗಳಲ್ಲಿ ತಡೆಯಿಲ್ಲದಿದ್ದು, ವಾಯುಸಂಚಾರ ಕ್ರಮಪಡಿಸಲ್ಪಟ್ಟರೆ ಎಲ್ಲಾ ವಿಕಾರಗಳೂ ಹೊರಟುಹೋಗುತ್ತವೆ ಮತ್ತು ಅವನ ಪಾನಾತ್ಯಯರೋಗಗಳು ಶಮನವಾಗುತ್ತವೆ.

ಪರಾ *'ಮದಾದಯ' ಎಂಬ ಪಾಠಾಂತರವಿದ್ದಲ್ಲಿ 'ಮದ ಮತ್ತು ಬಾಯಾರಿಕೆ ಮುಂತಾದ ಸಂಬಂಧಪಟ್ಟ ರೋಗಗಳು' ಎಂತ ಅರ್ಥ

20. ದೋಷಗಳಿಗೆ ತಕ್ಕವಾದ ಮದ್ಯಗಳು

ತತ್ರ ವಾತೇ ಹಿತಂ ಮದ್ಯಂ ಪ್ರಾಯಃ ಪೈಷ್ಟಿಕಗೌಡಿಕಮ್ ।
ಪಿತ್ತೇ ಸಾಮ್ಭೋ ಮಧು ಕಫೇ ಮಾರ್ದ್ವೀಕಾರಿಷ್ಟಮಾಧವಮ್ ।
(ವಾ. 304—305)

ಮದ್ಯಗಳೊಳಗೆ ಹಿಟ್ಟಿನಿಂದಲೂ ಬೆಲ್ಲದಿಂದಲೂ ಉಂಟಾದ ಮದ್ಯವು ವಾತದೋಷ ಅಧಿಕವುಳ್ಳ ಮನುಷ್ಯನಿಗೆ, ಜೇನು ಮತ್ತು ನೀರು ಕೂಡಿದ (ಅದೇ) ಮದ್ಯವು ಪಿತ್ತಾಧಿಕ್ಯವುಳ್ಳವನಿಗೆ, ದ್ರಾಕ್ಷೆಯಿಂದ ತಯಾರಿಸಲ್ಪಟ್ಟ ಅರಿಷ್ಟ ಮತ್ತು ಮದ್ಯವು ಕಫಾಧಿಕ್ಯವುಳ್ಳವನಿಗೆ, ಸಹ ಹೆಚ್ಚಾಗಿ ಹಿತವಾಗಿರುತ್ತವೆ.

21. ವಾತಿಕ ಪಾನಾತ್ಯಯದ ಚಿಕಿತ್ಸೆ

ಮದ್ಯಸ್ತು ಚುಕ್ರಮರಿಚಾರ್ದ್ರಕದೀಪ್ಯಕುಷ್ಠ-
ಸೌವರ್ಚಲಾಯುತಮಲಂ ಪವನಸ್ಯ ಶಾನ್ತ್ಯೈ ।
ಸ್ಯಾದ್ವೀಕದೀಪ್ಯಕಮಹೌಷಧಹಿಂಗುಭಿರ್ವಾ
ಸೌವರ್ಚಲೇನ ಚ ಯುತಂ ವಿತರೇತ್ಸುಖಾಯ ॥
ಆಮ್ರಾತಕಾಮ್ರಫಲದಾಡಿಮಮಾತುಲುಂಗೈಃ
ಕುರ್ಯಾಚ್ಚ ಭಾಷ್ಯಪಿ ಚ ಷಾಡವಪಾನಕಾನಿ ॥ (ಸು. 823-34)

ಹುಳಿ, ಮೆಣಸು, ಶುಂಠಿ, ಓಮ, ಚಂಗಲಕೋಷ್ಠ, ಕರೀಉಪ್ಪು, ಇವುಗಳು ಸೇರಿದ ಮದ್ಯವು ವಾತವನ್ನು ಶಾಂತಮಾಡುವದಕ್ಕೆ ಸಾಕಾದ್ದು; ಅಥವಾ ಕರಿಜೀರಿಗೆ, ಓಮ, ಶುಂಠಿ, ಹಿಂಗು, ಕರೀಉಪ್ಪು, ಇವುಗಳನ್ನು ಕೂಡಿಸಿ ಮದ್ಯವನ್ನು ಕುಡಿಸಿದ್ದಲ್ಲಿ (ವಾತ ಶಾಂತವಾಗಿ), ಸುಖವಾಗುತ್ತದೆ. ಅಮಟೆಹಣ್ಣು, ಮಾವಿನಹಣ್ಣು, (ಹುಳಿ) ದಾಳಿಂಬದ ಹಣ್ಣು, ಮಾದಳ ಹಣ್ಣು, ಇವುಗಳನ್ನು ಕೂಡಿಸಿ ಒಳ್ಳೇ ಸಾರುಗಳನ್ನೂ, ಪಾನಕಗಳನ್ನೂ ತಯಾರಿಸಿ ಕುಡಿಯಕೊಡಬೇಕು.

ಪರಾ 'ಷಾಡವ' ಎಂದರೆ ಬೆಲ್ಲ-ಹುಳಿ ಸಾರಿನ ಹಾಗಿನ ಸಾರು ಅದರಲ್ಲಿ ಹುಳಿರಸವೂ, ಸೀರಸವೂ ಪ್ರಧಾನವಾಗಿಯೂ, ಕಾರ-ಕಹಿ-ಉಪ್ಪುಗಳು ಅಲ್ಪವಾಗಿಯೂ, ಕಷಿರಸವಿಲ್ಲದೆಯೂ, ಇರಬೇಕು

ದೃಷ್ಟ್ವಾ ವಾತೋಲ್ಬಣಂ ಲಿಂಗಂ ರಸೈಶ್ಚೈನಮುಪಾಚರೇತ್ ।
ಲಾವತಿತ್ತಿರದಕ್ಷಾಣಾಂ ಸ್ನಿಗ್ಧಾಮ್ಲೈಃ ಶಿಖಿನಾಮಪಿ ॥
ಪಕ್ಷಿಣಾಂ ಮೃಗಮತ್ಸ್ಯಾನಾಮಾನೂಪಾನಾಂ ಚ ಸಂಸ್ಕೃತೈಃ ।
ಭೂಶಯಪ್ರಸಹಾನಾಂ ಚ ರಸೈಃ ಶಾಲ್ಯೋದನೇನ ಚ ॥ (ಚ. 591)

ವಾತ ಅಧಿಕವಾದ ಲಕ್ಷಣವನ್ನು ಕಂಡು, ಪಕ್ಷಿಗಳೊಳಗೆ ಲಾವ, ತಿತ್ತಿರ, ಕೋಳಿ, ನವಿಲು, ಇವುಗಳ ಮಾಂಸರಸಗಳನ್ನು ಹುಳಿ ಮತ್ತು ಸ್ನೇಹಯುಕ್ತವಾಗಿ ತಯಾ

ರಿಸಿ, ಆನೂಪವರ್ಗದ ಮೃಗಮೀನುಗಳ ಮತ್ತು ಭೂಶಯ (ಗುಹಾಶಯ, ಬಿಲೇಶಯ)—ಪ್ರಸಹ ವರ್ಗಗಳ ಜಂತುಗಳ ಮಾಂಸರಸಗಳನ್ನು ಸಂಸ್ಕಾರಯುಕ್ತವಾಗಿ (ಒಗ್ಗರಣೆ, ಮಸಾಲೆ ಮುಂತಾದವುಗಳನ್ನು ಉಪಯೋಗಿಸಿ) ತಯಾರಿಸಿ, ರೋಗಿಗೆ ಶಾಲ್ಯನ್ನದೊಂದಿಗೆ ಕೊಟ್ಟು, ಉಪಚರಿಸಬೇಕು.

ಪರಾ 1ನೇ ಭಾಗದ XV, 2—5—14—15 ಮತ್ತು 17 ನೋಡಿ

ಭಕ್ತೇನ ವಾರುಣೀಮಣ್ಡಂ ದದ್ಯಾತ್ಪಾತುಂ ಪಿಪಾಸವೇ |
ದಾಡಿಮಸ್ಯ ರಸಂ ವಾಥ ಜಲಂ ವಾ ಪಾಂಚಮೂಲಿಕಮ್ ।
ಧಾನ್ಯನಾಗರತೋಯಂ ಚ ದಧಿಮಂಡಮಥಾಪಿ ವಾ | (ಚ. 591)

ಬಾಯಾರಿಕೆಯುಳ್ಳವನಿಗೆ ಅನ್ನದೊಂದಿಗೆ ವಾರುಣೀ ಎಂಬ ಮದ್ಯವಿಶೇಷದ ಮೇಲಿನ ನೀರನ್ನು, ಅಥವಾ ದಾಳಿಂಬದ ಹಣ್ಣಿನ ರಸವನ್ನು, ಅಥವಾ ಪಂಚಮೂಲಗಳನ್ನು ಕೂಡಿಸಿ ಕಾಯಿಸಿದ ನೀರನ್ನು, ಅಥವಾ ಕೊತ್ತುಂಬರಿ ಮತ್ತು ಶುಂಠಿ ಕೂಡಿಸಿ ಕಾಯಿಸಿದ ನೀರನ್ನು, ಅಥವಾ (ಹುಳಿ) ಮೊಸರಿನ ಮೇಲಿನ ನೀರನ್ನು ಕುಡಿಯಕೊಡಬಹುದು.

ಪರಾ ("ಪುನರ್ನವಾಶಾಲಿಪಿಷ್ಟೈರ್ವಿಹಿತಾವಾರುಣೀಮತಾ") ಪುನರ್ನವಿ ಮತ್ತು ಶಾಲ್ಯಕ್ಕಿಯ ಹಿಟ್ಟು ಸೇರಿಸಿ ಹುಳಿಸಿದ ಮದ್ಯವು ವಾರುಣೀ ಎನ್ನಿಸಿಕೊಳ್ಳುತ್ತದೆ (ಮ. ಸಿ 109) ತಾಳಿ ಮತ್ತು ಖರ್ಜೂರಗಳ ರಸ ಕೂಡಿಸಿ ಮಾಡಿದ ಮದ್ಯಕ್ಕೂ ವಾರುಣೀ ಎನ್ನುತ್ತಾರೆ ಎಂತ ಬಾ ಪ್ರ (ಪು 185)

22. ಪಿತ್ತಾತ್ಮಕೇ ಮಧುರವರ್ಗಕಷಾಯಮಿಶ್ರಂ, ಮದ್ಯಂ ಹಿತಂ ಸಮಧುಶರ್ಕರ-
ಮಿಷ್ಟಗನ್ಧಮ್ | ಪೀತ್ವಾ ಚ ಮದ್ಯಮಪಿ ಚೇಕ್ಷುರಸಪ್ರಗಾಢಂ, ನಿಃಶೇ-
ಷತಃ ಕ್ಷಣಮವಸ್ಥಿತಮುಲ್ಲಿಖೇಚ್ಚ | ಲಾವೈಣತಿತ್ತಿರಿರಸಾಂಶ್ಚ ಪಿಬೇದ
ನಮ್ಲಾನ್, ಮೌದ್ಗಾನ್ ಸುಖಾಯ ಸಘೃತಾನ್ ಸಸಿತಾಂಶ್ಚ ಯೂಷಾನ್ ||
(ಸು 834)

ಪೈತ್ತಿಕ ಪಾನಾತ್ಯಯದ ಚಿಕಿತ್ಸೆ

ಪೈತ್ತಿಕ ಪಾನಾತ್ಯಯದಲ್ಲಿ ಮಧುರವರ್ಗದ ದ್ರವ್ಯಗಳ ಕಷಾಯಮಿಶ್ರವಾದ ಮದ್ಯವನ್ನು ಜೇನು, ಸಕ್ಕರೆ ಮತ್ತು ಇಷ್ಟವಾದ ಪರಿಮಳದ್ರವ್ಯಗಳ ಚೂರ್ಣಕೂಡಿಸಿಕೊಂಡು ಪಾನಮಾಡುವದು ಹಿತವಾಗುತ್ತದೆ. ಮದ್ಯಕ್ಕೆ ಧಾರಾಳವಾಗಿ ಕಬ್ಬಿನಹಾಲನ್ನು ಕೂಡಿಸಿ ಕುಡಿದು, ಒಂದು ಕ್ಷಣ ಅದು ನಿಂತ ಮೇಲೆ, ಅದನ್ನು ನಿಃಶೇಷವಾಗಿ (ಗಂಟಲಿಗೆ ಬೆರಳನ್ನೋ ಬತ್ತಿಯನ್ನೋ ಹಾಕಿ) ವಾಂತಿಮಾಡಬೇಕು. ಲಾವ, ತಿತ್ತಿರಿ ಎಂಬ ಪಕ್ಷಿಗಳು ಮತ್ತು ಕರಿ ಜಿಂಕೆ, ಇವುಗಳ ಮಾಂಸಗಳಿಂದ ಹುಳಿ ಕೂಡಿಸದೆ ತಯಾರಿಸಿದ ರಸಗಳನ್ನೂ, ಹೆಸರಿನ ಸಾರನ್ನೂ, ತುಪ್ಪ ಸಕ್ಕರೆ ಕೂಡಿಸಿಕೊಂಡು, ಕುಡಿಯುವದರಿಂದ ಸುಖವುಂಟಾಗುತ್ತದೆ.

ಪರಾ. ಕಫಪಿತ್ತ ಮದಾತ್ಯಯದಲ್ಲಿ ಮದ್ಯಕ್ಕೆ ದ್ರಾಕ್ಷೆರಸವನ್ನೂ ನೀರನ್ನೂ ಕೂಡಿಸಿ ಬೇಕಾದಷ್ಟು ರೋಗಿಗೆ ಕುಡಿಯಕೊಟ್ಟು, ವಾಂತಿಮಾಡಿಸಬೇಕಾಗಿ ಚ (ಪು. 592)

ಮಧುರವರ್ಗ.—ಕಾಕೋಲ್ಯಾದಿ (ಉಪೋದ್ಘಾತದ 1ನೇ ಪರಿಶಿಷ್ಟದ 16ನೇ ಸಂಖ್ಯೆ ನೋಡಿ) ಹಾಲು, ತುಪ್ಪ, ವಸೆ, ಮಜ್ಜೆ, ಆರುವತ್ತು ದಿನಗಳ ಬೆಳೆಕೆಯ ಭತ್ತದ ಶಾಲ್ಯನ್ನ, ಯವೆಗೋದಿ, ಗೋದಿ, ಉದ್ದು, ಬಳ್ಳಿನೀರಾಟವಕಾಯಿ, ಸೇಕಿನ ಗಡ್ಡೆ, ಮುಳ್ಳುಸವುತೇಕಾಯಿ, ದೊಡ್ಡ ಸವುತೇಕಾಯಿ, ಕಾಶಿಕುಂಬಳಕಾಯಿ, ಸೋರೆಕಾಯಿ, ಬಚ್ಚಂಗಾಯಿ,

ಚಿಲ್ಲಬೀಜ, ಗಿಲೋಢ್ಯ, ಮೊರವೆಬೀಜ, ತಾವರೆಬೀಜ, ಶಿವಸೀ (ಕಾಶ್ಮೀರಿ) ಹಣ್ಣು, ಇಪ್ಪೆಹೂವು ದ್ರಾಕ್ಷಿ, ಖರ್ಜೂರ, ಹಾದರಿ ಮರದ ಹಣ್ಣು (ಮಲ ಪಳಮುಣ್ಣಾಪ್ಲ), ತಾಳಿಹಣ್ಣು, ತೆಂಗಿನಕಾಯಿ, ಕಬ್ಬಿನಿಂದ ಉಂಟಾದ (ಬೆಲ್ಲ ಮುಂತಾದ) ದ್ರವ್ಯವಿಶೇಷಗಳು, ಕಲ್ಲಂಗಡಲೆ, ತುತ್ತಿ (ಉರ್ಕ), ನಸುಗುನ್ನಿ (ನಾಯಿಸೊಣಗು), ನೆಲಕುಂಬಳ, ನೆನೆಯೆಕ್ಕಿಸೊಪ್ಪು (ಕುಟುಂಬಿಸೀ, ಅರ್ಕಪುಷ್ಪೀ ನೆಲಕುಂಬಳದ ಭೇದ ಎಂತ ನಿ ಸಂ ವ್ಯಾ), ನೆಗ್ಗಿಲಮುಳ್ಳು, ಹಾಲು, ಹಾಲಿನ ನೀರು (ಏಳು ದಿನ ಇರಿಸಲ್ಪಟ್ಟ ಹಾಲು), ಹೆಗ್ಗುರುಟಿಗೆ (ಮಲ ವೆರುಂಕುರುಂಬ), ಬೂದಿಕುಂಬಳಕಾಯಿ ಮೊದಲಾದವು ಮಧುರ ವರ್ಗದ ಸಂಕ್ಷೇಪ ಸಂಗ್ರಹ (ಸು 158)

ಮದ್ಯಂ ಖರ್ಜೂರಮೃದ್ವೀಕಾಪರೂಷಕರಸೈರ್ಯುತಮ್ ।
ಸದಾಡಿಮರಸಂ ಶೀತಂ ಶಕ್ತುಭಿಃ ಸ್ವವಚೂರ್ಣಿತಮ್ ॥
ಸಶರ್ಕರಂ ಶಾರ್ಕರಂ ವಾ ಮಾರ್ದ್ವೀಕಮಥವಾಪರಮ್ ।
ದದ್ಯಾತ್ ಬಹೂದಕಂ ಕಾಲೇ ಪಾತುಂ ಪಿತ್ತಮದಾತ್ಯಯೇ ॥

(ಚ. 592)

ಪಿತ್ತಮದಾತ್ಯಯದಲ್ಲಿ ಖರ್ಜೂರ, ದ್ರಾಕ್ಷೆ, ಪರೂಷಕ, ಇವುಗಳ ಕಷಾಯವನ್ನು ಮತ್ತು ದಾಳಿಂಬದ ಹಣ್ಣಿನ ರಸವನ್ನು ಮದ್ಯಕ್ಕೆ ಬೆರಸಿ, ಸಕ್ತುವನ್ನು (ಹುರಿದ ಭತ್ತದ ಅಕ್ಕಿ ಹಿಟ್ಟನ್ನು) ಚನ್ನಾಗಿ ತಳಿದು, ಅದನ್ನು ಶೀತವಾಗಿ, ಅಥವಾ ಸಕ್ಕರೆಯಿಂದ ಮಾಡಲ್ಪಟ್ಟ ಮದ್ಯವನ್ನಾಗಲಿ, ಬೇರೆ ಮದ್ಯವನ್ನಾಗಲಿ, ಸಕ್ಕರೆಯನ್ನೂ ಯಥೇಷ್ಟ ನೀರನ್ನೂ ಕೂಡಿಸಿ, ಯುಕ್ತಕಾಲದಲ್ಲಿ ಕುಡಿಯಕೊಡಬೇಕು.

23 ವಮನದ್ರವ್ಯಸಂಯುಕ್ತಂ ಮದ್ಯೇನೋಲ್ಲೇಖನಂ ಹಿತಮ್ ।
ಪಾನರೋಗೇ ಕಫೋದ್ಭೂತೇ ಲಂಘನಂ ಚ ಯಥಾ ಬಲಮ್ ॥
ದೀಪನೀಯೌಷಧೋಪೇತಂ ಪಿಬೇನ್ಮದ್ಯಂ ಸಮಾಹಿತಃ ।
ತ್ರಿಫಲಾಯಾ ರಸೋ ವಾಪಿ ವ್ಯೋಷಚೂರ್ಣಸಮನ್ವಿತಃ ॥
ಶುಷ್ಕಮೂಲಕಜೋ ಯೂಷಃ ಕೌಲತ್ಥೋ ವಾ ಮಧೂತ್ಕಟಃ ।
ಯವಾನ್ನವಿಕೃತಿರ್ಯೋಜ್ಯಾ ಜಾಂಗಲಾನ್ನಕೃತಾನಿ ಚ ॥

ಶ್ಲೇಷ್ಮಕ ಪಾನಾತ್ಯಯಕ್ಕೆ ಉಪಕ್ರಮ

(ಚಿ. ಸಾ. ಸಂ 295)

ಕಫಪ್ರಕೋಪವುಳ್ಳ ಪಾನಾತ್ಯಯರೋಗದಲ್ಲಿ ವಾಂತಿಮಾಡಿಸತಕ್ಕ ಔಷಧವನ್ನು ಕೂಡಿಸಿ ಮದ್ಯವನ್ನು ಕೊಟ್ಟು ವಾಂತಿಮಾಡಿಸುವದು ಮತ್ತು ಶಕ್ತಿಗೆ ತಕ್ಕವಾಗಿ ಲಂಘನವನ್ನು ಮಾಡಿಸುವದು ಹಿತವು. ವಾಂತಿಯಾದ ಮೇಲೆ ದೀಪನಕರವಾದ ಔಷಧವನ್ನು ಸೇರಿಸಿ ಮದ್ಯವನ್ನು ಕುಡಿಯಬೇಕು. ತ್ರಿಕಟುಗಳ ಚೂರ್ಣಯುಕ್ತವಾದ ತ್ರಿಫಲೆಗಳ ಕಷಾಯವನ್ನಾಗಲೀ, ಒಣಗಿಸಲ್ಪಟ್ಟ ಮುಲ್ಲಂಗಿಗಡ್ಡೆಯ ಅಥವಾ ಹುರುಳಿಯ ಸಾರನ್ನು ಯಥೇಷ್ಟವಾಗಿ ಜೇನು ಕೂಡಿಸಿಕೊಂಡಾಗಲೀ, ಕುಡಿಯಕೊಡುವದು; ಮತ್ತು ಯವೆಗೋದಿಯಿಂದ ಸಿದ್ಧಪಡಿಸಿದ ನಾನಾ ಆಹಾರಗಳನ್ನೂ, ಜಾಂಗಲ ಮಾಂಸಗಳಿಂದ ತಯಾರಿಸಲ್ಪಟ್ಟ ಆಹಾರಗಳನ್ನೂ, ಯುಕ್ತಿಯಿಂದ ಉಪಯೋಗಿಸತಕ್ಕದ್ದು.

ಷರಾ ಯವಾನ್ನಕ್ಕೆ ಕಾರ ಪದಾರ್ಥಗಳನ್ನು ಹೆಚ್ಚಾಗಿ ಕೂಡಿಸಿಕೊಳ್ಳಬೇಕಾಗಿ ಭಾ ಪ್ರ. (ಪು 396) ಊಟಕ್ಕೆ ಉಪಯೋಗಿಸುವ ಮುಲ್ಲಂಗಿಯ ಸಾರಿಗೂ, ಹುರುಳಿಯ ಸಾರಿಗೂ, ಕಾರ, ಹುಳಿಗಳನ್ನೂ ಅಲ್ಪವಾಗಿ ತುಪ್ಪವನ್ನೂ ಕೂಡಿಸಬೇಕಾಗಿಯೂ, ಅದು ತೆಳ್ಳಗಾಗಿರಬೇಕಾಗಿಯೂ ಚ (ಪು. 594).

24. ಸೌವರ್ಚಲಮಜಾಜೀ ಚ ವೃಕ್ಷಾಮ್ಲಂ ಸಾಮ್ಲವೇತಸಮ್ ।
ತ್ವಗೇಲಾಮರಿಚಾರ್ಧಾಂಶಂ ಶರ್ಕರಾಭಾಗಯೋಜಿತಮ್ ॥
ಅಷ್ಟಾಂಗಲವಣ. ಏತಲ್ಲವಣಮಷ್ಟಾಂಗಮಗ್ನಿಸನ್ದೀಪನಂ ಪರಮ್ ।
ಮದಾತ್ಯಯೇ ಕಫಪ್ರಾಯೇ ದದ್ಯಾತ್ ಸ್ರೋತೋವಿಶೋಧನಮ್ ॥
ಏತದೇವ ಪುನರ್ಯುಕ್ತ್ಯಾ ಮಧುರಾಮ್ಲೈರ್ದ್ರವೀಕೃತಮ್ ।
ಗೋಧೂಮಾನ್ನಯವಾನ್ನಾನಾಂ ಮಾಂಸಾನಾಂ ಚಾತಿರೋಚನಮ್ ॥
(ಚ. 595)

ಸೌವರ್ಚಲಲವಣ (ಕರಿಉಪ್ಪು), ಕರಿಜೀರಿಗೆ, ಮುರ್ಗಿನಹುಳಿ, ಅಮ್ಲವೇತಸ. ಸಕ್ಕರೆ, ಇವು ಐದು ಸರಿ ಭಾಗ, ಲವಂಗಪಟ್ಟೆ, ಏಲಕ್ಕಿ ಮತ್ತು ಕಾಳುಮೆಣಸು, ಇವು ಮೂರು ಅರ್ಧಾಂಶ ಪ್ರಕಾರ, ಹೀಗೆ ಎಂಟು ಬಗೆಗಳನ್ನು ಕೂಡಿಸಿ ಮಾಡಿದ ಚೂರ್ಣಕ್ಕೆ ಅಷ್ಟಾಂಗ ಲವಣ ಎಂತ ಹೆಸರು. ಅದು ಅಗ್ನಿದೀಪನಕ್ಕೆ ಶ್ರೇಷ್ಠವಾದದ್ದು; ಸ್ರೋತಸ್ಸುಗಳನ್ನು ಸರಿಯಾಗಿ ಶೋಧನಮಾಡುವದಕ್ಕಾಗಿ, ಕಫಮದಾತ್ಯಯದಲ್ಲಿ ಅದನ್ನು ಕೊಡತಕ್ಕದ್ದು. ಅದನ್ನೇ ಮಧುರ ಮತ್ತು ಅಮ್ಲವರ್ಗಗಳ ದ್ರವ್ಯಗಳ ರಸ ಅಥವಾ ಕಷಾಯ ಕೂಡಿಸಿ ತೆಳ್ಳಗೆಮಾಡಿ, ಗೋದಿಯ ಆಹಾರಗಳೊಂದಿಗೆ ಅಥವಾ ಯವೆಗೋದಿಯ ಆಹಾರಗಳೊಂದಿಗೆ ಅಥವಾ ಮಾಂಸಗಳೊಂದಿಗೆ ಯುಕ್ತಿಯಿಂದ ಉಪಯೋಗಿಸಿದ್ದಲ್ಲಿ ಅದು ಅತಿರುಚಿಕರವಾಗುತ್ತದೆ.

ಷರಾ 'ಮಧುರವರ್ಗ'ವನ್ನು ಹಿಂದೆ 22ನೇ ಸಂಖ್ಯೆಯ ಅಡಿಯಲ್ಲಿ ವಿವರಿಸಿಯದ ಅಮ್ಲವರ್ಗದ ವಿವರ — ಹುಳಿದಾಳಿಂಬದ ಹಣ್ಣು, ನೆಲ್ಲಿಹಣ್ಣು, ಮಾದಳಹಣ್ಣು, ಅಮಟೆಹಣ್ಣು, ಬೇಲದಹಣ್ಣು, ಕವಳಿಕಾಯಿ (ಕರಂಡೆ), ಬೊಗರಿ ಹಣ್ಣು, ಸೀರ್ನೆಲ್ಲಿ, ಹುಣಸೆಹಣ್ಣು, ಜೂರಿಮಾವಿನಹಣ್ಣು, ಪಾರೆಹುಳಿ, ಸಣ್ಣಲಿಂಬೆಹಣ್ಣು, ಚಿತ್ರದ ಗಿಡದ ಹಣ್ಣು, ವಾಟೆ ಹುಳಿ (ಅಥವಾ ಹೆಬ್ಬಲಸಿನ ಹಣ್ಣು), ಅಮ್ಲವೇತಸ, ದೊಡ್ಡಹುಳಿ, (ಹುಳಿ) ಮೊಸರು, ಮಜ್ಜಿಗೆ, ಹೆಂಡ, ಶುಕ್ತ (ಸಿರ್ಕಾ) ಯವೆಗೋದಿಯು ಹುಳಿಸಿದ ಗಂಜಿಸೀರು, ಹುಳಿಕಲಗಚ್ಚು, ಧಾನ್ಯದ ಹುಳಿ ನೀರು ಮುಂತಾದವು ಹುಳಿವರ್ಗದ ಸಂಕ್ಷೇಪವಾದ ಸಂಗ್ರಹ (ಸು 158)

25. ಕುರ್ಯಾಚ್ಚ ಸರ್ವಮಥ ಸರ್ವಭವೇ ವಿಧಾನಂ ।
ದ್ವಂದ್ವೋದ್ಭವೇ ದ್ವಯಮವೇಕ್ಷ್ಯ ಯಥಾಪ್ರಧಾನಮ್ (ಸು. 834)

ತ್ರಿದೋಷಜ, ದ್ವಂದ್ವಜ, ಮದಾತ್ಯಯಗಳಿಗೆ ಪ್ರತಿಕ್ರಿಯಾವಿಧಾನ.

ತ್ರಿದೋಷಜ ಪಾನಾತ್ಯಯದಲ್ಲ ಮೇಲೆ ಹೇಳಿದ್ದನ್ನೆಲ್ಲಾ (ಬೇಕಾದ ಹಾಗೆ ಯೋಜಿಸಿ) ಉಪಯೋಗಿಸತಕ್ಕದ್ದು. ದ್ವಂದ್ವಜದಲ್ಲಿ ಯಾವ ಎರಡು ದೋಷಗಳು ಪ್ರಧಾನವಾಗಿವೆಯೋ ಅವುಗಳನ್ನು ನೋಡಿಕೊಂಡು ಚಿಕಿತ್ಸೆಮಾಡತಕ್ಕದ್ದು.

ಷರಾ ಲಕ್ಷಣವರ್ಣನದಲ್ಲಿ ವಾತಾದಿ ದೋಷಗಳಿಂದ ಪ್ರತ್ಯೇಕವಾಗಿ ಮೂರು, ಸನ್ನಿಪಾತದಿಂದ ಒಂದು, ಹೀಗೆ ನಾಲ್ಕು ಮದಾತ್ಯಯಗಳು ಮಾತ್ರ ಹೇಳಲ್ಪಟ್ಟಾಗ್ಯೂ, ಸುಶ್ರುತನ ಮತದಲ್ಲಿ ದ್ವಂದ್ವಜ ಬೇರೆ ಇವೆ ಎಂತ ಈ ಶ್ಲೋಕದಿಂದ ಸ್ಪಷ್ಟವಾಗುತ್ತದೆ. ಚರಕನು ಚಿಕಿತ್ಸೆ ಬರೆಯುವಲ್ಲಿ ವಾತಪಿತ್ತಜ ಮತ್ತು ಕಫಪಿತ್ತಜ ಮದಾತ್ಯಯಗಳ ಪ್ರಸ್ತಾಪ ಮಾಡಿರುತ್ತಾನೆ (592-593) ಆದರೆ ಎಲ್ಲಾ ಮದಾತ್ಯಯಗಳು ಸನ್ನಿಪಾತದಿಂದಲೇ ಉಂಟಾಗುವಂಥಾದ್ದೆಂಬ ಅವನ ಮತಕ್ಕನುಗುಣವಾಗಿ, ಒಂದೊಂದು ದೋಷವನ್ನು ಕುರಿತು ಹೇಳಲ್ಪಟ್ಟ ಪ್ರತೀಕಾರ ಯಾವದು ಉಂಟೋ ಅದನ್ನೆಲ್ಲಾ ದಶವಿಧವಾದ ಸನ್ನಿಪಾತದಲ್ಲಿ ಪಂಡಿತನು ಯೋಜಿಸತಕ್ಕದ್ದೆಂತ ಬರೆದಿರುವದರಿಂದ, ಅವನು ಪ್ರಸ್ತಾಪಿಸಿದ ವಾತಪಿತ್ತಜ ಮತ್ತು ಕಫಪಿತ್ತಜ ಮದಾತ್ಯಯಗಳು ದಶವಿಧ ಸನ್ನಿಪಾತದಲ್ಲಿಯೇ ಸೇರಿದವು ಎಂತ ತಿಳಿಯಬೇಕಾಗುತ್ತದೆ ದೋಷಗಳ ಸಂಯೋಗವು ಪ್ರಕೃತಿ-ಸಮವಾಯ ಕ್ರಮದ್ವಾದ್ದರಿಂದ ಅವುಗಳ ಲಕ್ಷಣಗಳು ಪ್ರತ್ಯೇಕವಾಗಿ ವರ್ಣಿಸಲ್ಪಡವ್ವಾಗಿರಬೇಕು ದಶವಿಧ ಸನ್ನಿಪಾತ ಎಂದದ್ದು ಸನ್ನಿಪಾತದ ಹದಿಮೂರು ವಿಧಗಳಲ್ಲಿ ಒಂದೇ ದೋಷ ಬಲವಂತವಾಗಿರುವ ಮೂರು ವಿಕಾರಗಳಿಗೆ ಪ್ರತ್ಯೇಕ ಚಿಕಿತ್ಸೆ ಹೇಳಿದ್ದರಿಂದ, ಆ ಮೂರು ಬಿಟ್ಟು ಮಿಕ್ಕ ಹತ್ತು ಎಂಬ ಅರ್ಥದಲ್ಲಿ ಆಗಿರಬೇಕು

ಉಪೋದ್ಘಾತದ 16ನೇ ಸಂಖ್ಯೆಯಲ್ಲಿ ದೋಷಗಳು ಪ್ರವೃದ್ಧ-ಸಮ-ಕ್ಷೀಣ ಎಂಬ ಭೇದದಿಂದ ಹನ್ನೆರಡು ವಿಧವಾಗಿರುವದು ಹೇಗೆ ಎಂಬದು ವರ್ಣಿಸಲ್ಪಟ್ಟದೆಯಷ್ಟೆ ಅವುಗಳೊಳಗೆ ಪ್ರಥಮ ಆರು ವಿಧಗಳಲ್ಲಿ 'ಸಮ' ಎಂಬದನ್ನು 'ಮಧ್ಯ', 'ಕ್ಷೀಣ' ಎಂಬದನ್ನು 'ಹೀನ', ಎಂತ ತಿಳಿದರೆ, ಅವು ಪ್ರವೃದ್ಧ-ಮಧ್ಯ-ಹೀನಗಳಾದ ದೋಷಗಳಿಂದ ಉಂಟಾಗುವ ಸನ್ನಿಪಾತದ ಭೇದಗಳಾಗುತ್ತವೆ ಇತರ ಆರು ವಿಧಗಳಲ್ಲಿ 'ಹೀನ' ಎಂಬದನ್ನು 'ಮಂದ' ಎಂತ ತಿಳಕೊಂಡರೆ, 7ನೇ, 8ನೇ, 9ನೇಯವು ಒಂದು ದೋಷ ಮಂದ ಮತ್ತು ಎರಡು ದೋಷ ಬಲವಂತ ಆಗಿ ಉಂಟಾಗುವ ಮೂರು ಸನ್ನಿಪಾತ ಭೇದಗಳು, ಮತ್ತು 10ನೇ, 11ನೇ, 12ನೇಯವು ಎರಡು ದೋಷಗಳು ಮಂದ ಮತ್ತು ಒಂದು ದೋಷ ಪ್ರಬಲವಾಗಿ ಸಂಭವಿಸುವ ಮೂರು ಸನ್ನಿಪಾತ ಭೇದಗಳು ಆಗುತ್ತವೆ. ಚರಕಸಂಹಿತೆಯಲ್ಲಿ ಪ್ರತ್ಯಪ್ರತ್ಯೇಕ ಚಿಕಿತ್ಸೆ ಹೇಳಿರುವದು ಆ 10ನೇ, 11ನೇ ಮತ್ತು 12ನೇ ವರ್ಗದ ಮದಾತ್ಯಯಗಳಿಗೆ ಎಂತ ತಿಳಿಯಬೇಕು.

26. ಆಭಿಃ ಕ್ರಿಯಾಭಿಃ ಸಿದ್ಧಾಭಿಃ ಶಮಂ ಯಾತಿ ಮದಾತ್ಯಯಃ |
ನ ಚೇನ್ಮದ್ಯವಿಧಿಂ ಹಿತ್ವಾ ಕ್ಷೀರಮಸ್ಯ ಪ್ರಯೋಜಯೇತ್ ||
ಲಂಘನೈಃ ಪಾಚನೈಶ್ಚೈವ ದೋಷಸಂಶೋಧನೈರಪಿ |
ವಿಮದ್ಯಸ್ಯ ಕಫೇ ಕ್ಷೀಣೇ ಜಾತೇ ದೌರ್ಬಲ್ಯಲಾಘವೇ ||
ತಸ್ಯ ಮದ್ಯವಿದಗ್ಧಸ್ಯ ವಾತಪಿತ್ತಾಧಿಕಸ್ಯ ವಾ |
ಗ್ರೀಷ್ಮೋಪತಪ್ತಸ್ಯ ತರೋರ್ಯಥಾ ವರ್ಷಂ ತಥಾ ಪಯಃ ||
ಪಯಸಾಭಿಹೃತೇ ರೋಗೇ ಬಲೇ ಜಾತೇ ನಿವರ್ತಯೇತ್ |
ಕ್ಷೀರಪ್ರಯೋಗಂ ಮದ್ಯಂ ಚ ಕ್ರಮೇಣಾಲ್ಪಾಲ್ಪಮಾಚರೇತ್ ||

(ಚ. 596)

ಮದ್ಯದ ಬದಲಾಗಿ ಹಾಲಿನ ಉಪಯೋಗ

ಹೀಗೆ (ಮದ್ಯವನ್ನು ಉಪಯೋಗಿಸಿ) ಮಾಡಿದ ಪ್ರತಿಕ್ರಿಯೆಗಳಿಂದ ಮದಾತ್ಯಯವು ಶಾಂತವಾಗುತ್ತದೆ. ಹಾಗೆ ಆಗದಿದ್ದರೆ, ರೋಗಿಗೆ ಮದ್ಯವನ್ನುಪಯೋಗಿಸುವ ಕ್ರಮವನ್ನು ಬಿಟ್ಟು ಹಾಲನ್ನು ಪ್ರಯೋಗಿಸಬೇಕು. ಲಂಘನಗಳಿಂದಲೂ, ಪಾಚನೌಷಧಗಳ ಉಪಯೋಗದಿಂದಲೂ, ದೋಷಶೋಧನ ಮಾಡಿಸಿದರಿಂದಲೂ ರೋಗಿಯಲ್ಲಿ ಮದ್ಯವು ಹೋಗಿ, ಕಫವು ಕ್ಷೀಣವಾಗಿ, ಬಲಹೀನತೆಯೂ ಲಘುತ್ವವೂ ಉಂಟಾದಾಗ್ಗೆ, ಮದ್ಯದಿಂದ ಸುಡಲ್ಪಟ್ಟ ಅವನ ಶರೀರಕ್ಕೆ, ಅಥವಾ ವಾತಪಿತ್ತ ದೋಷಗಳು ಅಧಿಕವಾಗಿರುವವನಿಗೆ ಹಾಲು, ಗ್ರೀಷ್ಮ ಋತುವಿನ ಬಿಸಿಲಿನಿಂದ ಬಾಡಿದ ಮರಕ್ಕೆ ಮಳೆಯಂತೆ, ಹಿತವಾಗುತ್ತದೆ. ಹಾಗೆ ಹಾಲಿನ ಉಪಯೋಗದಿಂದ ರೋಗವು ಪರಿಹಾರವಾಗಿ ಬಲವುಂಟಾದ ಮೇಲೆ (ಮದ್ಯಸಾತ್ಮ್ಯವಾದ ರೋಗಿಯಾದರೆ), ಹಾಲನ್ನೂ ಮದ್ಯವನ್ನೂ ಅಲ್ಪಾಲ್ಪವಾಗಿ ಕೊಡುತ್ತಾ ಬಂದು ಕ್ರಮೇಣ ಹಾಲಿನ ಉಪಯೋಗವನ್ನು ಬಿಡಿಸಬೇಕು. (ಒಡನೇ ಹಾಲನ್ನು ಪೂರ್ಣವಾಗಿ ಬಿಟ್ಟು ಮದ್ಯವನ್ನುಪಯೋಗಿಸಲು ತೊಡಗಬಾರದು.)

27. ತಯೋಃ ಕರ್ಮ ತದೇವೇಷ್ಟಂ ವಾತಿಕೇ ಯನ್ಮದಾತ್ಯಯೇ |
ತೌ ಹಿ ಪ್ರಕ್ಷೀಣದೇಹಸ್ಯ ಜಾಯ(?ಯೇ)ತೇ ದುರ್ಬಲಸ್ಯ ವಾ ||
ವಸ್ತಯಃ ಸರ್ಪಿಷಃ ಪಾನಂ ಪ್ರಯೋಗಃ ಕ್ಷೀರಸರ್ಪಿಷೋಃ |
ಅಭ್ಯಂಗೋದ್ವರ್ತನಸ್ನಾನಾನ್ಯನುಪಾನಂ ಚ ವಾತನುತ್ ||
ಧ್ವಂಸಕೋ ವಿಟ್ಕ್ಷಯಶ್ಚೈವ ಕರ್ಮಣಾನೇನ ಶಾಮ್ಯತಿ |
ಯುಕ್ತಮದ್ಯಸ್ಯ ಮದ್ಯೋತ್ಥೋ ನ ವ್ಯಾಧಿರುಪಜಾಯತೇ ||

(ಚ. 597)

ಧ್ವಂಸಕ ಮತ್ತು ವಿಟ್ಕ್ಷಯಗಳಿಗೆ ಪ್ರತಿಕ್ರಿಯೆ

ಧ್ವಂಸಕ ಮತ್ತು ವಿಟ್‍ಕ್ಷಯ ಎಂಬ ವ್ಯಾಧಿಗಳು ದೇಹದಲ್ಲಿ ಬಹಳ ಕ್ಷೀಣನಾದವನಿಗೆ ಅಥವಾ ಬಲಹೀನನಾದವನಿಗೆ ಮದ್ಯಪಾನದಿಂದ ಉಂಟಾಗುತ್ತವೆ. ಅವುಗಳಿಗೆ ವಾತಿಕ ಮದಾತ್ಯಯಕ್ಕೆ ಉಕ್ತವಾದ ಪ್ರತೀಕಾರವೇ ಹಿತವಾದದ್ದು. (ವಾತಹರವಾದ) ವಸ್ತಿಗಳು, ಘೃತ ಪಾನ, ಹಾಲುತುಪ್ಪಗಳ ಉಪಯೋಗ, ಅಭ್ಯಂಗ, ಮೈತಿಕ್ಕುವದು, ಸ್ನಾನ, ಮತ್ತು ವಾತಹರ ವಾದ ಅನುಪಾನ, ಈ ಔಷಧೋಪಚಾರಗಳಿಂದ ಆ ರೋಗಗಳು ಪರಿಹಾರವಾಗುತ್ತವೆ. ಯುಕ್ತವಾಗಿ ಮದ್ಯಪಾನ ಮಾಡುವಂಥವನಿಗೆ ಆ ಮದ್ಯದಿಂದ ವ್ಯಾಧಿ ಉಂಟಾಗುವದಿಲ್ಲ.

28. ಅನುತರ್ಷಸ್ಯ ಮಾತ್ರಾ ಸಾ ಯಯಾ ನೋ ಹನ್ಯತೇ ಮನಃ |
ತೃಷ್ಯತೇ ಮದ್ಯಮಲ್ಪಾಲ್ಪಂ ಪ್ರದೇಯಂ ಸ್ಯಾದ್ಬಹೂದಕಮ್ ||
ತೃಷ್ಣಾ ಯೇನ ಚ ಸಂಶಾಮ್ಯೇನ್ಮದಂ ಯೇನ ಚ ನಾಪ್ನುಯಾತ್ ||
(ಚ. 593)

ಬಾಯಾರಿಕೆ ಕೊಡುವ ಮದ್ಯಕ್ಕೆ ಪರಿಮಿತಿ

ಉಣ್ಣುವಾಗ್ಗೆ ಕುಡಿಯಕೊಡುವ ಮದ್ಯವು ಮನಸ್ಸನ್ನು ಕೆಡಿಸದಷ್ಟು (ತಲೆಗೆ ಹತ್ತದಷ್ಟು) ಕಡಿಮೆಯಾಗಿರಬೇಕು. ಬಾಯಾರಿಕೆಗೆ ಮದ್ಯಕೊಡುವಲ್ಲಿ ಧಾರಾಳವಾಗಿ ನೀರು ಕೂಡಿಸಿ, ಮದ ಉಂಟಾಗದ ಹಾಗೂ, ಬಾಯಾರಿಕ ಶಮನವಾಗುವ ಹಾಗೂ, ಅಲ್ಪಾಲ್ಪವಾಗಿ ಕೊಡತಕ್ಕದ್ದು.

29. ಕಾಸೇ ಸರಕ್ತನಿಷ್ಠೀವೇ ಪಾರ್ಶ್ವಸ್ತನರುಜೋಽಸ್ತಥಾ |
ತೃಷ್ಯತೇ ಸವಿದಾಹೇ ಚ ಸೋತ್ಕ್ಲೇಶೇ ಹೃದಯೋರಸಿ ||
ಗುಡೂಚೀಭದ್ರಮುಸ್ತಾನಾಂ ಪಟೋಲಸ್ಯಾಥವಾ ಭಿಷಕ್ |
ರಸಂ ಸನಾಗರಂ ದದ್ಯಾತ್ ತಿತ್ತಿರಿಪ್ರತಿಭೋಜನಮ್ ||
(ಚ. 592-593)

ಕಫಪಿತ್ತ ಪಾನಾತ್ಯಯಕ್ಕೆ ಪ್ರತೀಕಾರ

(ಕಫಪಿತ್ತ ಮದಾತ್ಯಯದಲ್ಲಿ ದೋಷವು ವಾಂತಿಯಾಗಿ ಹೋಗದೆ ಶೇಷ ಉಳಿದು), ಕೆಮ್ಮು, ರಕ್ತಮಿಶ್ರವಾದ ಉಗುಳು, ಪಾರ್ಶ್ವಗಳಲ್ಲಿಯೂ ಮೊಲೆಗಳಲ್ಲಿಯೂ ನೋವು, ಬಾಯಾರಿಕೆ, ವಾಂತಿ ಬಂದ ಹಾಗೆ ಆಗುವದು, ಎದೆಯಲ್ಲಿಯೂ ಹೃದಯದಲ್ಲಿಯೂ ಉರಿ. ಈ ಲಕ್ಷಣಗಳು ಕಂಡಲ್ಲಿ ಅಮೃತಬಳ್ಳಿ ಮತ್ತು ಭದ್ರಮುಷ್ಟಿಯ ಕಷಾಯವನ್ನಾಗಲೀ, ಕಹಿ ಪಡುವಲ ಕಷಾಯವನ್ನಾಗಲೀ, ಶುಂಠಿಚೂರ್ಣವನ್ನು ಕೂಡಿಸಿ, ವೈದ್ಯನು ಕುಡಿಯಕೊಡಬೇಕು. ಹಸಿವೆಹುಟ್ಟಿದನಂತರ ಕೊಡಬೇಕಾದ ಊಟಕ್ಕೆ ತಿತ್ತಿರಿಯ ಮಾಂಸವನ್ನು ಉಪಯೋಗಿಸಬೇಕು.

30. ಫಲಿನೀಸೇವ್ಯಲೋಧ್ರಾಮ್ಬುಹೇಮಪತ್ರಂ ಕುಟನ್ನಟಮ್ |
ಕಾಲೀಯಕರಸೋಪೇತಂ ದಾಹೇ ಶಸ್ತಂ ಪ್ರಲೇಪನಮ್ |
ಬದರೀಪಲ್ಲವೋತ್ಥಾಶ್ಚ ತಥೈವಾರಿಷ್ಟಕೋದ್ಭವಾಃ |
ಫೇನಿಲಾಯಾಶ್ಚ ಯಃ ಫೇನಸ್ತೈರ್ದಾಹೇ ಲೇಪನಂ ಶುಭಮ್ |
(ಚ. 594)

ಪಿತ್ತ ಪಾನಾತ್ಯಯದಲ್ಲಿ ಉರಿಗೆ ಲೇಪಗಳು.

ಪ್ರಿಯಂಗು, ಲಾವಂಚ, ಲೋಧ್ರದ ಚಕ್ಕೆ, ಮುಡಿವಾಳ, ನಾಗಸಂಪಿಗೆಯೆಲೆ, ಕೈವರ್ತ ಮುಸ್ತ,* ಇವುಗಳನ್ನು ಚೂರ್ಣಿಸಿ ಕುಂಕುಮಾಗರುಗಂಧದ ಕಷಾಯದಿಂದ ಅರೆದು ಲೇಪಿಸುವದು ಉರಿಶಾಂತಿಗೆ ಪ್ರಶಸ್ತ. ಬೊಗರಿ ಎಲೆಗಳನ್ನಾಗಲಿ, ಕಹಿಬೇವಿನ ಸೊಪ್ಪನ್ನಾಗಲಿ, ನೊರೆಕಾಯಿಯನ್ನಾಗಲಿ ನೀರಿನಲ್ಲಿ ನೆನೆಸಿ ಹಿಸಿಕಿದ್ದಲ್ಲಿ, ಅಥವಾ ನೀರಿನಿಂದ ಅರೆದು ಕಡ ಗೋಲಿನಿಂದ ಕಡೆದಲ್ಲಿ, ಬರುವ ನೊರೆಯನ್ನು ಲೇಪಿಸುವದರಿಂದ ಉರಿ ಶಾಂತವಾಗಿ ಶುಭ ವಾಗುತ್ತದೆ.

* ಇದು ಸಣ್ಣ ಭದ್ರಮುಷ್ಟಿಯ ಹೆಸರೆಂತ ಸಾಧಾರಣವಾಗಿ ತಿಳಿಯುತ್ತಾರೆ ಅದು ನೀರಿನಲ್ಲಿ ಬೆಳೆಯುವ ತುಂಗೆ ಗಡ್ಡೆ, ಒಂದು ಜಾತಿ ಹಾವಸೆ ಎಂತ ಧ. ನಿ., ಅದು ಭದ್ರಮುಷ್ಟಿಯ ಆಕಾರವಾಗಿರುವ ವಿತುನ್ನಕ ವೃಕ್ಷದ ತೊಗಟು ಎಂತ ಭಾ ಪ್ರ (ಪು 97)

31. ತೃಷ್ಯತೇ ಸಲಿಲಂ ಚಾಸ್ಮೈ ದದ್ಯಾದ್ ಹ್ರೀವೇರಸಾಧಿತಮ್ ।
ಬಲಾಯಾಃ ಪ್ರಶ್ನಿಪರ್ಣ್ಯಾ ವಾ ಕಣ್ಟಕಾರ್ಯಾಽಥವಾ ಶೃತಮ್ ।
ಸನಾಗರಾಭಿಃ ಸರ್ವಾಭಿರ್ಜಲಂ ವಾ ಕೃತಶೀತಲಮ್ ।
ದುಸ್ಪರ್ಶಿತೇನ ಮುಸ್ತೇನ ಮುಸ್ತಪರ್ಪಟಕೇನ ವಾ ॥
ಜಲಂ ಮುಸ್ತೈಃಶೃತಂ ವಾಪಿ ದದ್ಯಾದ್ದೋಷವಿಪಾಚನಮ್ ।
ಏತದೇವ ಚ ಪಾನೀಯಂ ಸರ್ವತ್ರಾಪಿ ಮದಾತ್ಯಯೇ ।
ನಿರತ್ಯಯಂ ಪೀಯಮಾನಂ ಪಿಪಾಸಾಜ್ವರನಾಶನಮ್ ॥ (ಚ. 594)

ಪಾನಾತ್ಯಯದ ಬಾಯಾರಿಕೆಗೆ ಪರಿಹಾರ

(ಕಫಮದಾತ್ಯಯದಲ್ಲಿ ವಮನ-ಲಂಘನಾನಂತರ) ಬಾಯಾರಿದವನಿಗೆ ಮುಡಿವಾಳ ಕೂಡಿಸಿ ಕಾಯಿಸಿದ ನೀರನ್ನಾಗಲಿ, ಕಲ್ಲಂಗಡಲೆ ಬೇರನ್ನೂ ಓರೆಲೆ ಬೇರನ್ನೂ ಹಾಕಿ ಕಾಯಿಸಿದ ನೀರನ್ನಾಗಲಿ, ಕಿರಿಗುಳ್ಳದ ಬೇರಿನ ಕಷಾಯದ ನೀರನ್ನಾಗಲಿ, ಇವುಗಳೆಲ್ಲಾ ಔಷಧ ಗಳೊಂದಿಗೆ ಶುಂಠಿಯನ್ನು ಕೂಡಿಸಿ ಕಾಯಿಸಿದ ನೀರನ್ನಾಗಲಿ, ತಣ್ಣಗಾಗಿ ಕುಡಿಯಕೊಡ ಬೇಕು. ಬಳ್ಳಿತುರಚನ ಬೇರು ಮತ್ತು ಭದ್ರಮುಷ್ಟಿ, ಅಥವಾ ಭದ್ರಮುಷ್ಟಿ ಮತ್ತು ಪರ್ಪಾಟಕ, ಅಥವಾ ಭದ್ರಮುಷ್ಟಿ ಒಂದನ್ನೇ, ಹಾಕಿ, ಕಾಯಿಸಿ ಬತ್ತಿಸಿದ ನೀರನ್ನು ಕೊಡಬೇಕು; ಅದ ರಿಂದ ದೋಷ ಪಾಚನವಾಗುತ್ತದೆ. ಈ ಪ್ರಕಾರದ ಪಾನೀಯವನ್ನೇ ಎಲ್ಲಾ ಮದಾತ್ಯಯ ಗಳಲ್ಲಿಯೂ ಕೊಡಬಹುದು. ಹಾಗೆ ಕ್ರಮ ಮೀರದೆ ಅದನ್ನು ಕುಡಿಯುತ್ತಾ ಬಂದಲ್ಲಿ ಬಾಯಾರಿಕೆಯೂ ಜ್ವರವೂ ನಾಶವಾಗುವವು.

32. ಖರ್ಜೂರದಾಡಿಮೀದ್ರಾಕ್ಷಾತಿನ್ತಿಡೀಕಾಮ್ಲಿಕಾಮಲೈಃ ।
ಸಪರೂಷೈಃ ಕೃತೋ ಮನ್ಥಃ ಸರ್ವಮದ್ಯವಿಕಾರನುತ್ ॥
(ಶಾ. 56)

ಖರ್ಜೂರಾದಿ ಮನ್ಥ

ಖರ್ಜೂರ, ದಾಳಿಂಬ, ದ್ರಾಕ್ಷಿ, ಮುಗ್ಗಿನಹುಳಿ, ಹುಣಸೆಹುಳಿ, ನೆಲ್ಲಿಹಣ್ಣು, ಪರೂಷ ಕದ ಹಣ್ಣು, ಇವುಗಳಿಂದ ತಯಾರಿಸಲ್ಪಟ್ಟ ಮಂಥವು ಸರ್ವ ಮದ್ಯವಿಕಾರಗಳನ್ನೂ ಪರಿ ಹರಿಸುವಂಥಾದ್ದು.

ಷರಾ 'ಮಂಥ'ದ ಕ್ರಮಕ್ಕೆ 1ನೇ ಭಾಗದ XX 23 ನೋಡಿ

33. ಮಧುನಾ ಹನ್ತ್ಯುಪಯುಕ್ತಾ ತ್ರಿಫಲಾ ರಾತ್ರೌ ಗುಡಾರ್ದ್ರಕಂ ಪ್ರಾತಃ |
ತ್ರಿಫಲಾಶುಂಠಿ ಉಪಯೋಗ
ಸಪ್ತಾಹಾತ್ ಪಥ್ಯಭುಜೋ ಮದಮೂರ್ಛಾಕಾಮಲೋನ್ಮಾದಾನ್ ||
(ಚಿ. ಸಾ. ಸಂ. 295–6)

ರಾತ್ರಿ ಮಲಗುವಾಗ್ಗೆ ತ್ರಿಫಲೆಯ ಚೂರ್ಣವನ್ನು ಜೇನಿನಲ್ಲಿ ಕಲಸಿ ನೆಕ್ಕಿ, ಪ್ರಾತಃಕಾಲ ಹಸಿಶುಂಠಿಯನ್ನು ಬೆಲ್ಲಕೂಡಿಸಿಕೊಂಡು ಅರೆದು ತಿನ್ನುತ್ತಾ ಬರುವದು. ಈ ಪ್ರಕಾರ ಏಳು ದಿನ ಮಾಡಿ ಪಥ್ಯದಲ್ಲಿರುವದರಿಂದ ಮದ, ಮೂರ್ಛೆ, ಕಾಮಲೆ ಮತ್ತು ಉನ್ಮಾದ ಪರಿಹಾರವಾಗುವವು.

34. ಶತಾವರೀಸವೃಶ್ಚಿಕಯಷ್ಟೀಕಲ್ಕೈಃ ಶೃತಂ ಘೃತಮ್ |
ಪಯಃಪುನರ್ನವಾಕ್ವಾಥೇ ಪಾನಾತ್ಯಯಮಪೋಹತಿ |
ಶತಾವರೀ ಪುನರ್ನವಾದಿಘೃತ
ಘೃತಂ ಪುಷ್ಟಿಕರಂ ಪಾನಾನ್ಮದ್ಯಪಾನಹತೌಜಸಃ ||
(ಚಿ. ಸಾ. ಸಂ. 296)

ಪುನರ್ನವೀಬೇರಿನ ಕಷಾಯದಲ್ಲಿ, ಶತಾವರಿಬೇರು, ಪುನರ್ನವೀಬೇರು ಮತ್ತು ಜ್ಯೇಷ್ಠ ಮಧು, ಇವುಗಳ ಕಲ್ಕದಿಂದ, ಹಾಲು ಕೂಡಿಸಿ, ಕಾಯಿಸಲ್ಪಟ್ಟ ತುಪ್ಪವು ಪಾನಾತ್ಯಯ ರೋಗವನ್ನು ಪರಿಹರಿಸುತ್ತದೆ. ಮದ್ಯಪಾನದಿಂದ ದುರ್ಬಲನಾದವನಿಗೆ ಈ ಘೃತದ ಪಾನದಿಂದ ಪುಷ್ಟಿಯುಂಟಾಗುತ್ತದೆ.

ಷರಾ' ಜ್ಯೇಷ್ಠಮಧು ಒಂದನ್ನೇ ಕಲ್ಕವಾಗಿ ಹಾಕಿ ಈ ಘೃತವನ್ನು ಕಾಯಿಸುವ ವಾಡಿಕೆಯೂ ಉಂಟೆಂತ ಕಾಣುತ್ತದೆ (ರ ರ 368) 'ವೃಶ್ಚಿಕ' ಎಂಬ ಹೆಸರಿನ ಪ್ರತ್ಯೇಕ ಒಂದು ಔಷಧ ಉಂಟೆಂತ ಕಾಣುತ್ತದೆ ಅದರ ವರ್ಣನ ಅಥವಾ ಗುಣಪಾಠ ವೈದ್ಯನಿಘಂಟುಗಳಲ್ಲಿ ಕಾಣುವದಿಲ್ಲ ವೃಶ್ಚಿಕಾ' ಎಂದರೆ 'ಪಚ್ಚೆರಂಗಿಗಿಡ' ಎಂತ ಬೃ. ನಿ (ಪು. 29)

35. ಮೂರ್ಛೆಗೆ ಹೇಳಲ್ಪಟ್ಟವುಗಳೇ.
ಪೃಥಗ್ರೋಗೋಕ್ತೌಷಧಗಳು

36. ಹನ್ನೆರಡು ತಿಂಗಳ ಬೆಳಿಕೆಯ ಅಕ್ಕಿ, ಅರ್ವತ್ತು ದಿನಗಳ ಬೆಳಿಕೆಯ ಅಕ್ಕಿ,
ಪಥ್ಯವರ್ಗ
ಯವೆಗೋದಿ, ಹೆಸರು, ಉದ್ದು, ಗೋದಿ, ಜಿಂಕೆ-ತಿತ್ತಿರಿ-ಲಾವಪಕ್ಷಿ-ಆಡು-ಕೋಳಿ-ನವಿಲು-ಮೊಲಗಳ ಮಾಂಸ, ಶರೀರಕ್ಕೆ ಹಿತವಾದ ಮದ್ಯ, ಹಾಲು, ಸಕ್ಕರೆ, ಕಿರುಕಸಾಲೆ(ಮುಳ್ಳುಹರಿವೆ ಅಥವಾ ಕ್ಯೊಹರಿವೆ)ಸೊಪ್ಪು, ಪಡುವಲಕಾಯಿ, ಮಾದಳ ಹಣ್ಣು, ಪರೂಷಕದ ಹಣ್ಣು, ಖರ್ಜೂರ, ದಾಳಿಂಬದ ಹಣ್ಣು, ನೆಲ್ಲಿಹಣ್ಣು, ಸೀಯಾಳ, ದ್ರಾಕ್ಷೆಹಣ್ಣು, ಹಳೇ ತುಪ್ಪ, ಪಚ್ಚೆಕರ್ಪೂರ, ತಣ್ಣೀರು, ಗಂಧಲೇಪನ ಮತ್ತು ಸ್ನಾನ.

37. ಬೆವರಿಸುವದು ಅಂಜನ, ಧೂಮಪಾನ, ಉಪ್ಪಿನಕಾಯಿ, ತಾಂಬೂಲ,
ಅಪಥ್ಯವರ್ಗ
ಹಲ್ಲು ಉಜ್ಜುವದು ಮತ್ತು ನಸ್ಯಕರ್ಮ.

---

# ಅಧ್ಯಾಯ V.

## ರಾಜಯಕ್ಷ್ಮ (ಶೋಷ, ಕ್ಷಯ).

### (Consumption, Phthisis, Tuberculosis)

1. ಅನೇಕರೋಗಾನುಗತೋ ಬಹುರೋಗಪುರೋಗಮಃ |
ದುರ್ವಿಜ್ಞೇಯೋ ದುರ್ನಿವಾರಃ ಶೋಷೋ ವ್ಯಾಧಿರ್ಮಹಾಬಲಃ ||
ಸಂಶೋಷಣಾದ್ರಸಾದೀನಾಂ ಶೋಷ ಇತ್ಯಭಿಧೀಯತೇ |
ಕ್ರಿಯಾಕ್ಷಯಕೃತತ್ವಾಚ್ಚ ಕ್ಷಯ ಇತ್ಯುಚ್ಯತೇ ಪುನಃ ||
ರಾಜ್ಞಶ್ಚನ್ದ್ರಮಸೋ ಯಸ್ಮಾದಭೂದೇಷ ಕಿಲಾಮಯಃ |
ತಸ್ಮಾತ್ತಂ ರಾಜಯಕ್ಷ್ಮೇತಿ ಕೇಚಿದಾಹುರ್ಮನೀಷಿಣಃ || (ಸು. 796)

ರೋಗದ ಮಹತ್ತ್ವ.

ಶೋಷರೋಗವು ಅನೇಕರೋಗಗಳನ್ನು ಅನುಸರಿಸಿ ಬರುವಂಥಾ, ಬಹು ರೋಗಗಳಿಗೆ ಮುಂದಾಳು ಆದ, ತಿಳಿಯುವದಕ್ಕೂ, ನಿವಾರಿಸಲಿಕ್ಕೂ ಕಷ್ಟವಾದ ಮತ್ತು ಮಹಾಬಲವಂತವಾದ ವ್ಯಾಧಿಯಾಗಿರುತ್ತದೆ. ದೇಹದ ರಸಾದಿಧಾತುಗಳನ್ನು ಬಹಳವಾಗಿ ಒಣಗಿಸುವದೆಸೆಯಿಂದ ಶೋಷ ಎಂತಲೂ, ಇಂದ್ರಿಯಗಳ ಕೆಲಸಗಳನ್ನು ಕ್ಷಯಿಸುವದರಿಂದ ಕ್ಷಯ ಎಂತಲೂ, ಅದಕ್ಕೆ ಹೇಳುತ್ತಾರೆ. ಹಿಂದೆ ರಾಜನಾದ ಚಂದ್ರನಿಗೆ ಈ ರೋಗವು ಸಂಭವಿಸಿತ್ತೆಂಬದರಿಂದ ರಾಜಯಕ್ಷ್ಮಾ ಎಂತ ಕೆಲವು ಪಂಡಿತರು ಈ ರೋಗಕ್ಕೆ ಹೇಳುತ್ತಾರೆ.

ತಂ ಸರ್ವರೋಗಾಣಾಂ ಕಷ್ಟತಮಂ ಮತ್ವಾ ರಾಜಯಕ್ಷ್ಮಾಣಮಾಚಕ್ಷತೇ ಭಿಷಜಃ |
ಯಸ್ಮಾದ್ವಾ ಪೂರ್ವಮಾಸೀದ್ಭಗವತಃ ಸೋಮಸ್ಯೋಡುರಾಜಸ್ಯ ತಸ್ಮಾದ್ರಾಜಯಕ್ಷ್ಮೇತಿ ||
(ಚ. 227-8)

ಸರ್ವರೋಗಗಳೊಳಗೆ ಅದು ಅತಿ ಕಷ್ಟವಾದದ್ದೆಂಬದರಿಂದ ಅದಕ್ಕೆ ಪಂಡಿತರು ರಾಜಯಕ್ಷ್ಮ ಎನ್ನುತ್ತಾರೆ; ಅಥವಾ ಪೂರ್ವದಲ್ಲಿ ರಾಶಿಗಳೊಡೆಯನಾದ ಭಗವಚ್ಚಂದ್ರನಿಗೆ ಅದು ಉಂಟಾಗಿತ್ತೆಂಬದರಿಂದ ಅದಕ್ಕೆ ರಾಜಯಕ್ಷ್ಮಾ ಎಂತ ಹೆಸರು.

ಷರಾ ಯಕ್ಷ್ಮ ಎಂದರೆ ರೋಗ ಎಂಬ ಅರ್ಥದಲ್ಲಿ ಈ ರೋಗದ ಚಿಕಿತ್ಸೆಯನ್ನು ರಾಜಯಕ್ಷ್ಮಾ ಎಂಬ ಶಿರೋನಾಮದಿಂದ ಚರಕನು ವರ್ಣಿಸಿದ್ದಾಗಿ ಕಾಣುತ್ತದೆ ಆದರೆ ನಿದಾನಸ್ಥಾನದಲ್ಲಿ 'ಶೋಷನಿದಾನಂ' ಎಂದೇ ಈ ಪ್ರಕರಣಕ್ಕೆ ಹೆಸರು ಇದೆ ಮೇಲೆ ಕಾಣುವ ಮೂರು ಹೆಸರುಗಳಲ್ಲದೆ, ಈ ರೋಗಕ್ಕೆ ರೋಗರಾಡ್ (ರೋಗರಾಜ) ಎಂಬ ಹೆಸರು ಸಹ ಉಂಟೆಂತಲೂ, ದೇಹವನ್ನೂ ಔಷಧವನ್ನೂ ಕ್ಷಯಿಸುತ್ತದೆ ಎಂಬದರಿಂದ ಈ ರೋಗಕ್ಕೆ ಕ್ಷಯ ಎಂಬ ಹೆಸರು ಎಂತಲೂ ವಾ (ಪು 198); ಅವನು ಸಹ ಈ ರೋಗವನ್ನು ರಾಜಯಕ್ಷ್ಮ ಎಂಬ ಶಿರೋನಾಮವಿಟ್ಟೇ ವರ್ಣಿಸಿ ಚಿಕಿತ್ಸೆ ಬರೆದಿರುತ್ತಾನೆ ಸುಶ್ರುತನು 'ಶೋಷಪ್ರತಿಷೇಧಂ' ಎಂಬ ಶಿರೋನಾಮದಿಂದ ಈ ರೋಗದ ನಿದಾನಾದಿ ಪೂರ್ಣ ವಿವರವನ್ನು ಕೊಟ್ಟಿದ್ದಾನೆ ಕ್ಷಯಶೋಷಗಳಿಂದ ರಾಜಯಕ್ಷ್ಮ ಉಂಟಾಗುವದು ಮತ್ತು ರಾಜಯಕ್ಷ್ಮದ ಲಕ್ಷಣವಾಗಿ ಕ್ಷಯಶೋಷಗಳು ಉಂಟಾಗುವದು ನಿಜವಾದರೂ, ಸಾಮಾನ್ಯ ಅರ್ಥದಲ್ಲಿ ಕ್ಷಯಶೋಷಗಳೆಲ್ಲ ರಾಜಯಕ್ಷ್ಮವೆನ್ನುವದಕ್ಕಾಗುವದಿಲ್ಲ ಆದ್ದರಿಂದ ಈ ರೋಗಕ್ಕೆ ರಾಜಯಕ್ಷ್ಮ ಎಂಬ ಹೆಸರೇ ಯುಕ್ತವಾಗಿ ಕಾಣುತ್ತದೆ ಕೆಳಗಿನ 5ನೇ ಸಂಖ್ಯೆ ನೋಡಿ ರಾಜಯಕ್ಷ್ಮರೋಗವು ಸಾಂಕ್ರಾಮಿಕ ರೋಗಗಳೊಳಗೊಂದು ಎಂಬದಕ್ಕೆ ಅ II—31 ನೋಡಿ

2. ಸಾಹಸಂ ವೇಗಸಂರೋಧಃ ಶುಕ್ರೌಜಃಸ್ನೇಹಸಂಕ್ಷಯಃ |
ಅನ್ನಪಾನವಿಧಿತ್ಯಾಗಶ್ಚತ್ವಾರಸ್ತಸ್ಯಹೇತವಃ ||
ತೈರುದೀರ್ಣೋಽನಿಲಃ ಪಿತ್ತಂ ಕಫಂ ಚೋದೀರ್ಯ ಸರ್ವತಃ |
ಶರೀರಸನ್ಧೀನಾವಿಶ್ಯ ತಾನ್ ಶಿರಾಶ್ಚ ಪ್ರಪೀಡಯನ್ ||

ರೋಗದ ಹೇತುಗಳು.

ಮುಖಾನಿ ಸ್ರೋತಸಾಂ ರುದ್ಧ್ವಾ ತಥೈವಾತಿವಿವೃತ್ಯ ಚ ।
ಸರ್ವಾನ್ಸಂಧೀನ್ಶಿರಾಃ ಪೀಡ್ಯ ಜೃಂಭ್ಯತೇ ಸರ್ವದೇಹಗಃ ॥

ಸರ್ಪನ್ನೂರ್ಧ್ವಮಧಸ್ತಿರ್ಯಗ್ಯಥಾಸ್ವಂ ಜನಯೇದ್ಗದಾನ್ ॥

(ವಾ. 199)

ಸಾಹಸ, (ವಾಯು, ಮೂತ್ರ ಮತ್ತು ಮಲದ) ವೇಗಗಳನ್ನು ತಡೆಯುವದು, (ದೇಹದ) ಶುಕ್ರ, ಓಜಸ್ಸು ಮತ್ತು ಸ್ನೇಹ, ಇವುಗಳ ಕ್ಷಯ, ಅನ್ನಪಾನಗಳನ್ನು ಕುರಿತಾದ ವಿಧಿಗಳನ್ನು ಬಿಟ್ಟಿರುವದು, ಇವು ನಾಲ್ಕು ರಾಜಯಕ್ಷ್ಮಕ್ಕೆ ಹೇತುಗಳು. ಅವುಗಳಿಂದ ವಾಯು ಪ್ರಕೋಪಗೊಂಡು, ಪಿತ್ತಕಫಗಳನ್ನು ಕೆದರಿಸಿ, ಶರೀರದ ಸರ್ವ ಸಂದುಗಳನ್ನು ಸೇರಿ, ಅವುಗಳನ್ನೂ ಶಿರಾನಾಳಗಳನ್ನೂ ಬಹಳವಾಗಿ ಪೀಡಿಸಿ, ಸ್ರೋತಸ್ಸುಗಳ ಮುಖಗಳನ್ನು ಮುಚ್ಚಿ, ಅಥವಾ ಅತಿಯಾಗಿ ಅರಳಿಸಿ, ಮೇಲಕ್ಕೆ, ಕೆಳಕ್ಕೆ ಮತ್ತು ಅಡ್ಡಕ್ಕೆ ಹರಿದು, ಬೇರೆ ಬೇರೆ ರೋಗಗಳನ್ನು ಹುಟ್ಟಿಸುತ್ತದೆ.

ಷರಾ 'ಸಾಹಸ' ಎಂದರೆ ತನಗಿಂತಲೂ ಬಲಿಷ್ಠನಾದವನೊಂದಿಗೆ ಮಲ್ಲಯುದ್ಧ ಮಾಡುವದು (ಗುದ್ದಾಡುವದು), ಮಹತ್ತಾದ ಧನುಸ್ಸನ್ನು ಎತ್ತುವದು, ಅತಿಯಾಗಿ ಹರಟುವದು, ಅತಿಯಾದ ಭಾರವನ್ನು ಹೊರುವದು, ನೀರೊಳಗೆ ಅತಿ ದೂರ ಈಜಿ ಹೋಗುವದು, ಅತಿ ಬಲವಾಗಿ ಮೈ ತಿಕ್ಕಿಸಿಕೊಳ್ಳುವದು ಅಥವಾ ಕಾಲಿನಿಂದ ತುಳಿಸಿಕೊಳ್ಳುವದು, ಅತಿ ದೂರ ಮಾರ್ಗವನ್ನು ಅವಸರದಿಂದ ನಡೆಯುವದು, ಜೀಳುವದು, ಪೆಟ್ಟಿಗೊಳಗಾಗುವದು, ಅಥವಾ ಹೀಗಿನ ಬೇರೆ ವಿಷಮವಾದ ಅಥವಾ ಅತಿಯಾದ ಯಾವದೊಂದು ವ್ಯಾಯಾಮವನ್ನು ಆರಂಭಿಸುವದಾಗಿರುತ್ತದೆ ಅಂಥಾ ಸಾಹಸದಿಂದ ವಾಯುವು ಎದೆಯಲ್ಲಿ ಪೀಡೆಯನ್ನುಂಟುಮಾಡುವದಲ್ಲದೆ, ಅಲ್ಲಿ ನಿಂತು ಕಫವನ್ನು ಒಣಗಿಸಿ, ಮೇಲೆ, ಕೆಳಗೆ ಮತ್ತು ಅಡ್ಡವಾಗಿ ಸಂಚಾರಮಾಡುತ್ತದೆ ಅದರ ಯಾವ ಅಂಶವು ಶರೀರದ ಸಂದುಗಳನ್ನು ಹೊಗುತ್ತದೋ, ಅದರಿಂದ ಆಕಳಿಕೆ, ಮೈನೋವು, ಮತ್ತು ಜ್ವರ ಉಂಟಾಗುತ್ತವೆ, ಆಮಾಶಯವನ್ನು ಪ್ರವೇಶಮಾಡಿದ ವಾಯುವಿನ ಅಂಶದಿಂದ ಅರುಚಿ ಮತ್ತು ಎದೆ ಸಂಬಂಧವಾದ ವಿಕಾರಗಳು ಹುಟ್ಟುತ್ತವೆ, ವಾಯುವು ಕಂಠಕ್ಕೆ ಹೋಗುವದರಿಂದ ಕಂಠಸ್ವರದ ತಿರೆಗಳನ್ನು ಕೆಡಿಸಿ ಸ್ವರದ ದುರ್ಬಲತೆಯುನ್ನುಂಟುಮಾಡುತ್ತದೆ, ಪ್ರಾಣವಾಹಿ ಸ್ರೋತಸ್ಸುಗಳನ್ನು ಹಿಡಿದ ವಾಯುವಿನಿಂದ ಉಬ್ಬಸವೂ ನೆಗಡಿಯೂ ಉಂಟಾಗುತ್ತವೆ, ಮತ್ತು ವಾಯುವು ತಲೆಯೊಳಗೆ ನಿಂತು ತಲೆನೋವನ್ನುಂಟುಮಾಡುತ್ತದೆ.

ವೇಗಸಂರೋಧದಿಂದಲೂ ವಾಯು ಪ್ರಕೋಪಗೊಂಡು, ಪಿತ್ತಕಫಗಳನ್ನು ಕೆದರಿಸಿ, ಮೇಲಕ್ಕೆ, ಕೆಳಕ್ಕೆ ಮತ್ತು ಅಡ್ಡಕ್ಕೆ ಸಂಚರಿಸುವದರಿಂದ ಶೂಲೆ ಉಂಟಾಗುತ್ತದೆ, ಮಲ ಒಡೆದುಹೋಗುತ್ತದೆ ಅಥವಾ ಬದ್ಧವಾಗುತ್ತದೆ, ಪಕ್ಕಗಳಲ್ಲಿ ನೋವು, ಹೆಗಲಡಿಗಳಲ್ಲಿಯೂ ಕಂಠದಲ್ಲಿಯೂ ಹಿಡಿತ, ಎದೆ ಹಾರುವಿಕೆ, ತಲೆನೋವು, ಕೆಮ್ಮು, ಉಬ್ಬಸ, ಜ್ವರ, ಸ್ವರಭೇದ ಮತ್ತು ನೆಗಡಿ ಉಂಟಾಗುತ್ತವೆ, ಮತ್ತು ಈ ಉಪದ್ರವಗಳಿಂದ ಪೀಡಿತನಾಗಿ ಅವನು ಮೆಲ್ಲಮೆಲ್ಲನೆ ಒಣಗುತ್ತಾನೆ

ಕ್ಷಯದಿಂದ ಶೋಷ ಉಂಟಾಗುವದು ಹೇಗೆಂದರೆ ಅತಿಯಾಗಿ ಯಾವದಾದರೂ ಚಿಂತೆಶೋಕಗಳನ್ನು ಮನಸ್ಸಿಗೆ ಹಚ್ಚಿಕೊಂಡರೆ, ಅಥವಾ ಮತ್ಸರ, ಭಯ, ಸಿಟ್ಟು, ಅಥವಾ ಆಶೆ ಅವನಲ್ಲಿ ಬಲವಾಗಿ ಆವೇಶಮಾಡಿಕೊಂಡರೆ, ಒಣಗಿದ ಶರೀರದವನಾಗಿರುತ್ತಾ ರೂಕ್ಷವಾದ ಅನ್ನಪಾನಗಳನ್ನೇ ಸೇವಿಸುತ್ತಾ ಬಂದರೆ, ಬಲಹೀನನಾಗಿರುತ್ತಾ ಸಾಕಷ್ಟು ಆಹಾರಗಳನ್ನು ಸೇವಿಸದೆ ಇದ್ದರೆ ಅಥವಾ ಉಪವಾಸ ಮಾಡಿದರೆ, ಅವನ ಹೃದಯದಲ್ಲಿರುವ ರಸಧಾತು ಕ್ಷಯವಾಗುವದರಿಂದ ಅವನು ಬಹಳ ಬತ್ತುತ್ತಾನೆ ಅದಕ್ಕೆ ತಕ್ಕ ಪ್ರತಿಕಾರ ಮಾಡದೆ ಬಿಟ್ಟರೆ ಯಕ್ಷ್ಮರೋಗವು ಉಂಟಾಗುತ್ತದೆ ಯಾವಾಗ ಮನುಷ್ಯನು ಅತಿ ಹರ್ಷವುಳ್ಳವನಾಗಿ ಅತಿಯಾಗಿ ಸ್ತ್ರೀಸಂಭೋಗಮಾಡುತ್ತಾನೋ, ಆಗ್ಗೆ ಅವನ ಶುಕ್ರವು ಕ್ಷಯವಾಗುತ್ತದೆ, ಆದಾಗ್ಯೂ ಅವನಲ್ಲಿ ಸ್ತ್ರೀಯರ ಇಚ್ಛೆ ಕಡಿಮೆಯಾಗದೆ ಅತಿಯಾಗಿಯೇ ಇದ್ದು, ಅತಿಯಾದ ಸಂಕಲ್ಪದಿಂದ ಮೈಥುನಮಾಡಿದ್ದಲ್ಲಿ, ರೇತಸ್ಸು ಅತಿ ಕ್ಷೀಣವಾಗಿದ್ದ ದೆಸೆಯಿಂದ ಶುಕ್ರಪ್ರವೃತ್ತಿ ಆಗದೆ, ಅದರ ಬದಲಾಗಿ ವಾಯುವು ರಕ್ತವಾಹೀನಾಡಿಗಳನ್ನು ಪ್ರವೇಶಿಸಿ ವಾತದೋಷಯುಕ್ತವಾದ ರಕ್ತವನ್ನು ಶುಕ್ರಮಾರ್ಗದಿಂದ ಸುರಿಸುತ್ತದೆ ಆ ಶುಕ್ರಕ್ಷಯದಿಂದಲೂ, ರಕ್ತಪ್ರವರ್ತನದಿಂದಲೂ ಅವನ ದೇಹದ ಸಂದುಗಳು ಸಡಿಲಾಗಿ, ದೇಹವು ರೂಕ್ಷವಾಗುತ್ತಾ ಬಂದು, ಬಲಹೀನತೆ ಬಹಳವಾಗುತ್ತದೆ ಮತ್ತು ವಾಯು ಪ್ರಕೋಪಗೊಂಡು, ಶರೀರದಲ್ಲೆಲ್ಲಾ ಹರಡಿಕೊಂಡು, ರಕ್ತಮಾಂಸಗಳನ್ನು ಒಣಗಿಸಿ, ಕಫಪಿತ್ತಗಳನ್ನು ಹೊರಗೆ ಹಾಕುತ್ತದೆ, ಪಕ್ಕೆಗಳಲ್ಲಿ ನೋವನ್ನುಂಟುಮಾಡುತ್ತದೆ, ಹೆಗಲಡಿಗಳನ್ನು ಹಿಡಕೊಳ್ಳುತ್ತದೆ, ಕಂಠಧ್ವಂಸವನ್ನುಂಟುಮಾಡುತ್ತದೆ, ತಲೆಯೊಳಗಿನ ಕಫವನ್ನು ಕೂಡಿಕೊಂಡು ತಲೆಯೊಳಗೆ ಕಫವನ್ನು ತುಂಬಿಸುತ್ತದೆ, ಸಂದುಗಳನ್ನು ಪೀಡಿಸುತ್ತದೆ, ಮೈನೋವನ್ನೂ, ಅರುಚಿಯನ್ನೂ, ಅಜೀರ್ತಿಯನ್ನೂ, ಉಂಟುಮಾಡುತ್ತದ, ವಾಯುವಿನ ಪ್ರತಿಲೋಮಗತಿಯಿಂದಲೂ, ಕಫಪಿತ್ತಗಳ ಕೆದರುವಿಕೆಯಿಂದಲೂ ಜ್ವರ, ಕೆಮ್ಮು, ಸ್ವರಭೇದ ಮತ್ತು

ನೆಗಡಿ ಸಂಭವಿಸುತ್ತವೆ. ಶೋಷಣಕರವಾದ ಈ ಉಪದ್ರವಗಳ ದೆಸೆಯಿಂದ ಅವನು ಮೆಲ್ಲಮೆಲ್ಲನೆ ಬತ್ತುತ್ತಾ ಬರುತ್ತಾನೆ

ಅನ್ನ, ಪಾನ, ಭಕ್ಷ್ಯ, ಲೇಹ್ಯಗಳನ್ನು ದೇಶ, ಕಾಲ, ಪ್ರಕೃತಿ, ಸಾತ್ಮ್ಯ, ಕರಣ, ಸಂಯೋಗ ಮುಂತಾದವುಗಳನ್ನು ಕುರಿತು ಇರುವ ವಿಧಿಗಳಿಗೆ ಪ್ರತಿಕೂಲವಾಗಿ ಸೇವಿಸುವದರಿಂದ ವಾತಪಿತ್ತಕಫಗಳು ವಿಷಮವಾಗಿ, ಶರೀರದೊಳಗೆಲ್ಲಾ ಸಂಚರಿಸಿ ಸ್ರೋತಸ್ಸುಗಳ ಮುಖಗಳನ್ನು ತಡೆದು ನಿಲ್ಲುತ್ತವೆ ಆಗ್ಗ ಆ ಮನುಷ್ಯನು ತೆಗೆದುಕೊಂಡ ಆಹಾರಾದಿಗಳು ಮಲ ಮೂತ್ರಗಳನ್ನು ವೃದ್ಧಿಮಾಡುವದಲ್ಲದೆ, ಶರೀರಧಾತುಗಳನ್ನು ಪೋಷಿಸುವದಿಲ್ಲ. ಹಾಗೆ ಪೋಷಣ ಕಡಿಮೆಯಾದ ಶರೀರವನ್ನು ವಿಷಮಾಶನದಿಂದ ವೃದ್ಧಿಗೊಂಡ ದೋಷಗಳು, ಬೇರೆ ಬೇರೆ ಉಪದ್ರವಗಳನ್ನು ತಂದೊಡ್ಡಿ, ಒಣಗಿಸುತ್ತಾ ಬರುತ್ತವೆ ವಾತವು ಶೂಲೆಯನ್ನೂ, ಮೈನೋವನ್ನೂ, ಕಂಠಧ್ವಂಸವನ್ನೂ, ಪಕ್ಕಶೂಲೆಯನ್ನೂ, ಹೆಗಲಡಿಗಳ ನೋವನ್ನೂ ಸ್ವರಭೇದವನ್ನೂ, ನೆಗಡಿಯನ್ನೂ, ಉಂಟುಮಾಡುತ್ತದೆ, ಪಿತ್ತವು ಜ್ವರವನ್ನೂ, ಅತಿಸಾರವನ್ನೂ, ದೇಹದೊಳಗೆ ಉರಿಯನ್ನೂ ತರುತ್ತದೆ, ಮತ್ತು ಕಫವು ನೆಗಡಿಯನ್ನೂ, ತಲೆಭಾರವನ್ನೂ, ಕೆಮ್ಮನ್ನೂ, ಅರುಚಿಯನ್ನೂ ಹುಟ್ಟಿಸುತ್ತದೆ ಆಗ್ಗ ಆ ಕೆಮ್ಮಿನಿಂದ ಎದೆಯೊಳಗೆ ಒಡಕು ಉಂಟಾದರೆ, ಉಗುಳಿನಲ್ಲಿ ರಕ್ತಬರುತ್ತದೆ, ಹಾಗೆ ರಕ್ತ ಹೋಗುವದರಿಂದ ಅವನಿಗೆ ಬಲಹೀನತೆಯುಂಟಾಗುತ್ತದೆ ಈ ಶೋಷಣಕರವಾದ ಉಪದ್ರವಗಳಿಂದ ಅವನು ಮೆಲ್ಲಮೆಲ್ಲಗೆ ಬತ್ತುತ್ತಾ ಬರುತ್ತಾನೆ ವಿಷಮಾಶನದಿಂದ ಸಂಚಯವಾದ ದೋಷಗಳು ರಾಜಯಕ್ಷ್ಮರೋಗವನ್ನು ಉಂಟುಮಾಡುವದು ಹೀಗೆ ಆಗಿರುತ್ತದೆ (ಚ 224-27).

ರಾಜಯಕ್ಷ್ಮದ ಹೇತು ಯಾವದಾದರರೂ ಈ ನಾಲ್ಕು ವಿಧಗಳೊಳಗೆ ಅಡಗುತ್ತದೆ ಎಂದು ತಾತ್ಪರ್ಯ

ಸರ್ವಸ್ತ್ರಿದೋಷಜೋ ಯಕ್ಷ್ಮಾ ದೋಷಾಣಾನ್ತು ಬಲಾಬಲಮ್ ।
ಪರೀಕ್ಷ್ಯಾವಸ್ಥಿತಂ ವೈದ್ಯಃ ಶೋಷಿಣಂ ಸಮುಪಾಚರೇತ್ ॥

(ಚ. 523)

ಯಕ್ಷ್ಮರೋಗಗಳೆಲ್ಲ (ವಾತಾದಿ) ಮೂರು ದೋಷಗಳ ಸೇರಿಕೆಯಿಂದ ಉಂಟಾಗುವಂಥವು. ದೋಷಗಳ ಬಲಾಬಲವನ್ನು ಪರೀಕ್ಷಿಸಿ, ಶೋಷರೋಗದವನನ್ನು ವೈದ್ಯನು ಅವಸ್ಥೆಗೆ ತಕ್ಕಂತೆ ಸರಿಯಾಗಿ ಉಪಚರಿಸತಕ್ಕದ್ದು.

3\. ಭಕ್ತದ್ವೇಷೋ ಜ್ವರಃ ಶ್ವಾಸಃ ಕಾಸಃ ಶೋಣಿತದರ್ಶನಮ್ ।
ಸ್ವರಭೇದಶ್ಚ ಜಾಯನ್ತೇ ಷಡ್ರೂಪೇ ರಾಜಯಕ್ಷ್ಮಣಿ ॥
ಸ್ವರಭೇದೋಽನಿಲಾಚ್ಛೂಲಂ ಸಂಕೋಚಶ್ಚಾಂಸಪಾರ್ಶ್ವಯೋಃ ।
ಜ್ವರೋ ದಾಹೋಽತಿಸಾರಶ್ಚ ಪಿತ್ತಾದ್ರಕ್ತಸ್ಯ ಚಾಗಮಃ ॥
ಶಿರಸಃ ಪರಿಪೂರ್ಣತ್ವಮಭವ(?ಕ್ತ)ಚ್ಛನ್ದ ಏವ ಚ ।
ಕಾಸಃ ಕಂಠಸ್ಯ ಚೋದ್ಧ್ವಂಸೋ ವಿಜ್ಞೇಯಃ ಕಫಕೋಪತಃ ॥
ಏಕಾದಶಭಿರೇತೈರ್ವಾ ಷಡ್ಭಿರ್ವಾಪಿ ಸಮನ್ವಿತಮ್ ।
ಕಾಸಾತಿಸಾರಪಾರ್ಶ್ವಾರ್ತಿಸ್ವರಭೇದಾರುಚಿಜ್ವರೈಃ ॥
ತ್ರಿಭಿರ್ವಾ ಪೀಡಿತಂ ಲಿಂಗೈರ್ಜ್ವರಕಾಸಾಸೃಗಾಮಯೈಃ ।
ಜಹ್ಯಾಚ್ಛೋಷಾರ್ದಿತಂ ಜನ್ತುಮಿಚ್ಛನ್ ಸುವಿಪುಲಂ ಯಶಃ ॥

ರಾಜಯಕ್ಷ್ಮದ ರೂಪಭೇದಗಳು

(ಸು. 797)

ಅನ್ನದ್ವೇಷ, ಜ್ವರ, ಉಬ್ಬಸ, ಕೆಮ್ಮು (ಉಗುಳಿನಲ್ಲಿ) ರಕ್ತಕಾಣುವಿಕೆ, ಸ್ವರಭೇದ, ಈ ವಿಕಾರಗಳು ಆರು ರೂಪದ ರಾಜಯಕ್ಷ್ಮದಲ್ಲಿ ಉಂಟಾಗುತ್ತವೆ. ವಾಯುವಿನಿಂದ ಸ್ವರಭೇದ, ಹೆಗಲಡಿಗಳ ಮತ್ತು ಪಕ್ಕಗಳ ಸಂಕೋಚ ಮತ್ತು ಶೂಲೆ; ಪಿತ್ತದಿಂದ ಜ್ವರ, ಉರಿ, ಅತಿಸಾರ ಮತ್ತು ರಕ್ತಬರುವದು, ಕಫದಿಂದ ತಲೆಭಾರ, ಅರುಚಿ, ಕೆಮ್ಮು, ಕಂಠಧ್ವಂಸ (ಗಂಟಲು ಒಡೆಯುವದು); ಉಂಟಾಗುವದೆಂತ ತಿಳಿಯಬೇಕು. ಈ ಹನ್ನೊಂದು ರೂಪ

ಗಳುಳ್ಳ, ಅಥವಾ, ಕೆಮ್ಮು, ಅತಿಸಾರ, ಪಾರ್ಶ್ವಶೂಲೆ, ಸ್ವರಭೇದ, ಅರುಚಿ ಮತ್ತು ಜ್ವರ, ಈ ಆರು ಲಕ್ಷಣಗಳುಳ್ಳ, ಅಥವಾ, ಜ್ವರ, ಕೆಮ್ಮು ಮತ್ತು ರಕ್ತವ್ಯಾಧಿ, ಈ ಮೂರು ಲಕ್ಷಣ ಗಳುಳ್ಳ ಶೋಷದಿಂದ ಪೀಡಿತನಾದವನನ್ನು ವಿಶಾಲವಾದ ಯಶಸ್ಸಿನ ಇಚ್ಛೆಯುಳ್ಳ ವೈದ್ಯನು ಚಿಕಿತ್ಸೆಮಾಡದೆ ಬಿಡಬೇಕು (ಅಂದರೆ ಅಂಥಾ ರಾಜಯಕ್ಷ್ಮಗಳು ಅಸಾಧ್ಯ).

ತೇಷಾಮುಪದ್ರವಾನ್ ವಿದ್ಯಾತ್ ಕಣ್ಠಧ್ವಂಸಮುರೋರುಜಮ್ |
ಜೃಮ್ಭಾಂಗಮರ್ದನಿಷ್ಠೀವವಹ್ನಿಸಾದಾಸ್ಯಪೂತಿತಾಃ || (ವಾ. 199)

ಗಂಟಲು ಒಡೆಯುವದು, ಎದೆನೋವು, ಆಕಳಿಕೆ, ಮೈನೋವು, ಉಗುಳುತ್ತಿರುವಿಕೆ, ಅಗ್ನಿಮಾಂದ್ಯ ಮತ್ತು ಬಾಯಿವಾಸನೆ, ಇವು ರಾಜಯಕ್ಷ್ಮದ ಹನ್ನೊಂದು ರೂಪಗಳ ಉಪ ದ್ರವಗಳೆಂತ ತಿಳಿಯಬೇಕು.

ಷರಾ ವಾಗ್ಭಟನು ಹನ್ನೊಂದು ರೂಪಗಳನ್ನು ವಿವರಿಸುವಲ್ಲಿ ಸುಶ್ರುತನ ದಾಹ, ರಕ್ತಾಗಮ ಮತ್ತು ಕಂಠೋಧ್ವಂಸ ಎಂಬವುಗಳ ಬದಲಾಗಿ, ಪೀನಸ, ಶ್ವಾಸ ಮತ್ತು ಛರ್ಧಿಗಳನ್ನು ಹೇಳಿದ್ದಾನೆ ಮತ್ತು ಅದಕ್ಕನುಗುಣವಾಗಿ ಕಂಠಧ್ವಂಸ ವನ್ನು ಉಪದ್ರವಗಳೊಳಗೆ ಸೇರಿಸಿದ್ದಾನೆ. ಚರಕನು ನಿದಾನಸ್ಥಾನದಲ್ಲಿ ಹೇಳಿದ ಹನ್ನೊಂದು ರೂಪಗಳಿಗೂ ಚಿಕಿತ್ಸಾ ಸ್ಥಾನದಲ್ಲಿ ವಿವರಿಸಿದ ಹನ್ನೊಂದು ರೂಪಗಳಿಗೂ ಸ್ವಲ್ಪ ಭೇದ ಕಾಣುತ್ತದೆ ಅಂಗಾವಮರ್ದ ಎಂಬದಕ್ಕೆ ಅಂಸತಾಪ, ಅತಿಸಾರದ ಬದಲಾಗಿ ಕೋಷ್ಠಾಮಯ (ಇದರಲ್ಲಿ ಮಲಬದ್ಧತೆ ಸಹ ಸೇರಿತು), ಶೋಣಿತಷ್ಠೀವನ ಎಂಬಲ್ಲಿ ಶೋಣಿತ ಛರ್ದಿ (ರಕ್ತವಾಂತಿ), ಶಿರಃಪರಿಪೂರಣ ಎಂದಲ್ಲಿ ಶಿರೋರುಜ (ತಲೆನೋವು) ಎಂತ ಚಿಕಿತ್ಸಾಸ್ಥಾನದಲ್ಲಿ ಇವೆ ಸುಶ್ರುತನು ಹೇಳಿದ ಶೂಲೆ ಮತ್ತು ದಾಹ ಎಂಬವುಗಳನ್ನು ಚರಕನು ಆ ಎರಡು ಕಡೆಗಳಲ್ಲಿಯೂ ಬಿಟ್ಟು, ಶ್ವಾಸ ಮತ್ತು ಶ್ಲೇಷ್ಮಛರ್ಧಿ ಎಂಬವುಗಳನ್ನು ಸೇರಿಸಿದ್ದಾನೆ, ಆರು ರೂಪಗಳನ್ನು ವಿವರಿಸುವಲ್ಲಿಯೂ ಚರಕನು ಸುಶ್ರುತನಿಂದ ನಿರ್ದಿಷ್ಟವಾದ ಶ್ವಾಸ ಮತ್ತು ಶೋಣಿತದರ್ಶನ ಎಂಬವುಗಳನ್ನು ಬಿಟ್ಟು, ಪಾರ್ಶ್ವಶೂಲ ಮತ್ತು ವರ್ಚೋಗದ (ಮಲದೋಷ) ಎಂಬವುಗಳನ್ನು ಹೆಚ್ಚಾಗಿ ಹೇಳಿದ್ದಾನೆ ಚರಕನ ಮತದಲ್ಲಿ ಮೂರು ರೂಪಗಳು ಅಂಸಪಾರ್ಶ್ವಗಳಲ್ಲಿ ಉರಿ, ಪಾದಗಳಲ್ಲಿಯೂ ಹಸ್ತ ಗಳಲ್ಲಿಯೂ ಉರಿ ಮತ್ತು ಸರ್ವಾಂಗಜ್ವರ ಎಂತ ಕಾಣುತ್ತದೆ ಸುಶ್ರುತನೇ ಷಡ್ರೂಪವರ್ಣನದಲ್ಲಿ ಹೇಳಿದ ಶ್ವಾಸವು ಅವನ ಹನ್ನೊಂದು ರೂಪಗಳೊಳಗೆ ಕಾಣುವದಿಲ್ಲ ಅವನು ಮೂರು, ಆರು ಮತ್ತು ಹನ್ನೊಂದು ರೂಪಗಳನ್ನು ವಿವರಿ ಸಿದ್ದು ಅಸಾಧ್ಯತೆಯನ್ನು ತೋರಿಸುವ ಮುಖ್ಯ ಉದ್ದೇಶದಿಂದಾಗಿರಬೇಕು ಚರಕನ ಮತದಲ್ಲಿ ರಾಜಯಕ್ಷ್ಮವು ಸಂಪೂರ್ಣವಾದ ಹನ್ನೊಂದು ರೂಪಗಳನ್ನು ಕಾಣಿಸಿಕೊಂಡ ಸಂಗತಿಯಲ್ಲಿ ಸಹ, ಮಾಂಸಗಳ ಮತ್ತು ಬಲದ ಕ್ಷಯ ಕಾಣದಿದ್ದರೆ, ಅದಕ್ಕೆ ಚಿಕಿತ್ಸೆಮಾಡಬೇಕು (ಅಂದರೆ ಅದು ಸಾಧ್ಯವಾಗಬಹುದು), ಮಾಂಸಬಲಗಳ ಕ್ಷಯ ಉಂಟಾ ಗಿದ್ದರೆ, ರಾಜಯಕ್ಷ್ಮವು ಮೂರು ರೂಪಗಳನ್ನು ಮಾತ್ರ ಕಾಣಿಸಿಕೊಂಡಿರುವದಾದರೂ ಅದಕ್ಕೆ ಚಿಕಿತ್ಸೆಮಾಡದೆ ಬಿಡ ಬೇಕು (ಅಂದರೆ ಅದು ಸಾಧ್ಯವಾಗುವ ಸಂಭವವಿಲ್ಲ) (ಕೆಳಗಿನ 6ನೇ ಸಂಖ್ಯೆ ನೋಡಿ) ಇದರಿಂದ ಮಾಂಸಬಲಗಳ ಕ್ಷಯ ರಾಜಯಕ್ಷ್ಮದಲ್ಲಿ ಯಾವಾಗಲೂ ಇರಬೇಕೆಂತಿಲ್ಲ ಎಂಬದು ಸ್ಪಷ್ಟವಾಯಿತು ಸುಶ್ರುತನು ಹೇಳಿದ ಮೂರು ರೂಪ ಗಳಾದ ಜ್ವರ-ಕಾಸ-ರಕ್ತಾಗಮಗಳೊಳಗೆ, ಅವನ ಮತಪ್ರಕಾರವೇ ಜ್ವರ ಮತ್ತು ರಕ್ತಾಗಮ ಪಿತ್ತದಿಂದ ಮತ್ತು ಕಾಸ ಕಫದಿಂದ ಉಂಟಾಗುವಂಥವು. ಆದ್ದರಿಂದ ವಾತದೋಷದ ಲಕ್ಷಣ ಅವುಗಳೊಳಗೆ ಇಲ್ಲ ಚರಕನು ಹೇಳಿದ ತ್ರಿರೂಪ ರಾಜಯಕ್ಷ್ಮದ ಲಕ್ಷಣಗಳು ಮೂರೂ ಪಿತ್ತಜನ್ಯ, ವಾತ-ಕಫಜನ್ಯ ಲಕ್ಷಣಗಳು ಅವುಗಳೊಳಗೆ ಸೇರಲಿಲ್ಲ ರಾಜಯಕ್ಷ್ಮ ವು ತ್ರಿದೋಷಜವಾದ್ದರಿಂದ ಅದರಲ್ಲಿ ಯಾವಾಗಲೂ ಮೂರು ದೋಷಗಳ ಬೇರೆ ಬೇರೆ ಲಕ್ಷಣಗಳು ಕೆಲಮಟ್ಟಿಗಾದರೂ ಇರಬೇಕು ಇದನ್ನೆಲ್ಲಾ ಆಲೋಚಿಸಿದ್ದಲ್ಲಿ ರಾಜಯಕ್ಷ್ಮದ ರೂಪಗಳಾಗಿ ಮೇಲೆ ಉದಾಹರಿಸಲ್ಪಟ್ಟ ವ್ಯಾಧಿಗಳು ಅದರ ಆರಂಭಕ್ಕೆ ಮೊದಲು ಮತ್ತು ಅನಂತರ ಇರುವವೆಂತ ಹೇಳಲ್ಪಟ್ಟ ಬಹು ರೋಗಗಳೊಳಗೆ ಹೆಚ್ಚಾಗಿ ಕಾಣುವಂಥವು ಎಂತ ಅಲ್ಲದೆ, ಆ ಮೂರೇ, ಆರೇ, ಅಥವಾ ಹನ್ನೊಂದೇ ರಾಜಯಕ್ಷ್ಮದಲ್ಲಿ ಇರುವಂಥವು ಎಂತಲ್ಲ ಸಾಧಾರಣವಾಗಿ ರಾಜ ಯಕ್ಷ್ಮ ಎನ್ನುವದು ಶ್ವಾಸಕೋಶದೊಳಗೆ ಕ್ಷಯದ ಲಕ್ಷಣ ಉಂಟಾದ ವ್ಯಾಧಿಗೆ ಕೆಮ್ಮು, ಉಬ್ಬಸ, ಉಗುಳಿನಲ್ಲಿ ರಕ್ತ ಅಥವಾ ಕೀವು ಕಾಣುವದು, ಪಾರ್ಶ್ವಶೂಲೆ, ಹೆಗಲಡಿಯ ನೋವು, ಜ್ವರ, ಸ್ವರಭಂಗ, ಬಾಯಿವಾಸನೆ, ಇವುಗಳೊ ಳಗೆ ಕೆಲವಾದರೂ ಶ್ವಾಸಕೋಶದಲ್ಲಿ ಉಂಟಾದ ಆ ವಿಕಾರದಿಂದ ಕಾಣಿಸಿಕೊಳ್ಳದಿರವು. ಮಾಂಸಬಲಗಳ ಕ್ಷಯವಿರುವ ರೋಗಿಯಲ್ಲಿ ಆ ಲಕ್ಷಣಗಳೊಳಗೆ ಯಾವದು ಕಂಡಾಗ್ಯೂ ರಾಜಯಕ್ಷ್ಮದ ಶಂಕೆ ಉಂಟಾಗಬೇಕು ರಾಜಯಕ್ಷ್ಮದ ಜ್ವರವು ಶ್ವಾಸಕೋಶದೊಳಗಿನ ಹುಣ್ಣಿಗೆ ಅಥವಾ ವಿಪಾಕಕ್ಕೆ ಸಂಬಂಧಪಟ್ಟದ್ದಾದರೆ ಬಲವಂತವಾಗಿರುವದಿಲ್ಲ. ಈ ವ್ಯಾಧಿಯಲ್ಲಿ ನರಗಳ ದುರ್ಬಲತೆ ಬಹಳ ಉಬ್ಬಸ ಎಂದರೆ ಅಲ್ಪ ಶ್ರಮದಲ್ಲಿ ಕಾಣುವಂಥಾದ್ದು

4. ಯಥಾಸ್ವೇನೋಷ್ಮಣಾ ಪಾಕಂ ಶಾರೀರಾ ಯಾನ್ತಿ ಧಾತವಃ |
ಸ್ರೋತಸಾ ಚ ಯಥಾಸ್ವೇನ ಧಾತುಃ ಪುಷ್ಯತಿ ಧಾತುನಾ ||

ರಾಜಯಕ್ಷ್ಮದ ಸಂಪ್ರಾಪ್ತಿ

ಸ್ರೋತಸಾಂ ಸನ್ನಿರೋಧಾಚ್ಚ ರಕ್ತಾದೀನಾಂ ಚ ಸಂಕ್ಷಯಾತ್ ।
ಧಾತೂಷ್ಮಣಾಂ ಚಾಪಚಯಾದ್ರಾಜಯಕ್ಷ್ಮಾ ಪ್ರವರ್ತತೇ ॥
ತಸ್ಮಿನ್ ಕಾಲೇ ಪಚತ್ಯಗ್ನಿರ್ಯದನ್ನಂ ಕೋಷ್ಠಮಾಶ್ರಿತಮ್ ।
ಮಲೀಭವತಿ ತತ್ಪ್ರಾಯಃ ಕಲ್ಪತೇ ಕಿಂಚಿದೋಜಸೇ ॥
ತಸ್ಮಾತ್ಪುರೀಷಂ ಸಂರಕ್ಷ್ಯಂ ವಿಶೇಷಾದ್ರಾಜಯಕ್ಷ್ಮಿಣಃ ।
ಸರ್ವಧಾತುಕ್ಷಯಾರ್ತಸ್ಯ ಬಲಂ ತಸ್ಯ ಹಿ ವಿಡ್ಬಲಮ್ ॥ (ಚ. 521-22)

ಶರೀರದ (ಸಪ್ತ) ಧಾತುಗಳು ತಮ್ಮ ತಮ್ಮ ಬಿಸಿಯಿಂದ ಕ್ರಮವಾಗಿ ಪಾಕವಾಗಿ, ಆಯಾ ಧಾತುವಿಗೆ ಸಂಬಂಧಪಟ್ಟ (ಶಿರಾರೂಪವಾದ) ಸ್ರೋತಸ್ಸುಗಳ ಪರಿಮುಖವಾಗಿ ಧಾತುವಿನಿಂದ ಧಾತು ಕ್ರಮವಾಗಿ (ರಸದಿಂದ ರಕ್ತ, ರಕ್ತದಿಂದ ಮಾಂಸ, ಹೀಗೆ) ಪೋಷಿಸಲ್ಪಡುತ್ತದೆ. ಅಂಥಾ ಸ್ರೋತಸ್ಸುಗಳಲ್ಲಿ ತಡೆಯುಂಟಾಗುವದರಿಂದಲೂ, ರಕ್ತಾದಿ ಧಾತುಗಳು ಬಹಳ ಕಡಿಮೆಯಾಗುವದರಿಂದಲೂ, ಧಾತುಗಳ (ಪಾಕರೂಪವಾದ) ಬಿಸಿಯು ಕ್ಷಯಿಸುವದರಿಂದಲೂ, ರಾಜಯಕ್ಷ್ಮರೋಗವು ಆರಂಭವಾಗುತ್ತದೆ. ಆ ಕಾಲದಲ್ಲಿ ಹೊಟ್ಟೆಯೊಳಗೆ ಸೇರಿ ನಿಂತ ಆಹಾರವನ್ನು ಅಗ್ನಿಯು ಪಚನಮಾಡಿದಾಗ್ಯೂ, ಹೆಚ್ಚಿನ ಅಂಶ ಮಲವಾಗಿ, ಅಲ್ಪಸ್ವಲ್ಪ ಮಾತ್ರ ಸಾರವಾಗಿ ಶರೀರಪೋಷಣಶಕ್ತಿಯುಳ್ಳದ್ದಾಗುತ್ತದೆ. ಆದ್ದರಿಂದ ವಿಶೇಷವಾಗಿ ರಾಜಯಕ್ಷ್ಮರೋಗದಲ್ಲಿ ಮಲವನ್ನು ಚನ್ನಾಗಿ ಕಾಪಾಡಬೇಕು. ಸರ್ವಧಾತುಗಳ ಕ್ಷಯದಿಂದ ಸಂಕಷ್ಟಪಡುವ ಆ ರೋಗಿಗೆ ಮಲಬಲವೇ ಬಲ

ಷರಾ ಅಂಥಾ ರೋಗಿಯ ಮಲದಲ್ಲಿ ಸಾರಭೂತವಾದದ್ದು ಹೆಚ್ಚು ಉಳಿಯುವದರಿಂದ ಮಲವು ಸಾಕಷ್ಟು ಕಾಲ ಸ್ಥೂಲಾಂತ್ರದಲ್ಲಿ ನಿಂತರೆ, ಆ ಸಾರದಲ್ಲಿ ಸ್ವಲ್ಪ ಹೆಚ್ಚು ಅಂಶ ದೇಹವನ್ನು ವ್ಯಾಪಿಸಿಕೊಳ್ಳುವ ಸಂಭವ ಉಂಟೆಂಬದರಿಂದ ಅವನ ಮಲ ಸಡಿಲಾಗಲಿಕ್ಕೆ ಬಿಡಬಾರದೆಂಬದಾಗಿರಬೇಕು ಶೋಷಸಂಪ್ರಾಪ್ತಿಯ ಇನ್ನು ಹೆಚ್ಚಿನ ವಿವರಕ್ಕೆ ಮೇಲಿನ 2ನೇ ಸಂಖ್ಯೆಯ ಅಡಿ ಷರಾ ನೋಡಿ ಅಲ್ಲಿ ಆಹಾರವು ಮೈಗೆ ಸೇರದಿರುವ ಲಕ್ಷಣ ವಿಷಮಾಶನ ಶೋಷದ ಆರಂಭದಲ್ಲಿಯೇ ಕಾಣುವದಾಗಿ ಹೇಳಲ್ಪಟ್ಟದೆ ಅದು ಕ್ರಮೇಣ ಇತರ ಮೂರು ಹೇತುಗಳಿಂದ ಉಂಟಾಗುವ ರಾಜಯಕ್ಷ್ಮದಲ್ಲಿಯೂ ಉಂಟಾಗುತ್ತದೆಂಬದು ಈ ವಚನದಿಂದ ಸಿದ್ಧವಾಗುತ್ತದೆ

5. ವ್ಯವಾಯಶೋಕಸ್ಥಾವಿರ್ಯ್ಯವ್ಯಾಯಾಮಾಧ್ವೋಪವಾಸತಃ ।
ವ್ರಣೋರಃಕ್ಷತಪೀಡಾಭ್ಯಾಂ ಶೋಷಾನನ್ಯೇ ವದನ್ತಿ ಹಿ ॥
ವ್ಯವಾಯಶೋಷಃ ಶುಕ್ರಸ್ಯ ಕ್ಷಯಲಿಂಗೈರುಪದ್ರುತಃ ।
ಪಾಂಡುದೇಹೋ ಯಥಾಪೂರ್ವಂ ಕ್ಷೀಯನ್ತೇ ಚಾಸ್ಯ ಧಾತವಃ ॥
ಪ್ರಧ್ಯಾನಶೀಲಃ ಸ್ರಸ್ತಾಂಗಃ ಶೋಕಶೋಷ್ಯಪಿ ತಾದೃಶಃ ।
ವಿನಾ ಶುಕ್ರಕ್ಷಯಕೃತೈರ್ವಿಕಾರೈರಭಿಲಕ್ಷಿತಃ ॥
ಜರಾಶೋಷೀ ಕೃಶೋ ಮನ್ದಸ್ವಲ್ಪಬುದ್ಧಿಬಲೇನ್ದ್ರಿಯಃ ।
ಶ್ವಸನೋಽರುಚಿಮಾನ್ ಭಿನ್ನಕಾಂಸ್ಯಪಾತ್ರಹತಸ್ವರಃ ॥
ಷ್ಠೀವತಿ ಶ್ಲೇಷ್ಮಣಾ ಹೀನಂ ತಥೈವಾರತಿಪೀಡಿತಃ ।
ಸಮ್ಪ್ರಸ್ರುತಾಸ್ಯನಾಸಾಕ್ಷಃ ಶುಷ್ಕರೂಕ್ಷಮಲಚ್ಛವಿಃ ॥
ಅಧ್ವಪ್ರಶೋಷೀ ಸ್ರಸ್ತಾಂಗಃ ಸಂಭೃಷ್ಟಪರುಷಚ್ಛವಿಃ ।
ಪ್ರಸುಪ್ತಗಾತ್ರಾವಯವಃ ಶುಷ್ಕಕ್ಲೋಮಗಲಾನನಃ ॥

ವ್ಯವಾಯಾದಿ ಕೆಲವು ಹೇತು ಭೇದಗಳಿಂದ ಲಕ್ಷಣಭೇದಗಳು

ವ್ಯಾಯಾಮಶೋಷೀ ಭೂಯಿಷ್ಠಮೇಭಿರೇವ ಸಮನ್ವಿತಃ |
ಉರಃ ಕ್ಷತಕೃತೈರ್ಲಿಂಗೈಃ ಸಂಯುಕ್ತಶ್ಚ ಕ್ಷತಾದ್ವಿನಾಃ ||
ರಕ್ತಕ್ಷಯಾದ್ವೇದನಾಭಿಸ್ತಥೈವಾಹಾರಯನ್ತ್ರಣಾತ್ |
ವ್ರಣಿತಸ್ಯಭವೇಚ್ಛೋಷಃ ಸ ಚಾಸಾಧ್ಯತಮಸ್ಸ್ಮೃತಃ ||
ವ್ಯಾಯಾಮಭಾರಾಧ್ಯಯನೈರಭಿಘಾತಾತಿಮೈಥುನೈಃ |
ಕರ್ಮಣಾ ಚಾಪ್ಯುರಸ್ಯೇನ ವಕ್ಷೋ ಯಸ್ಯ ವಿದಾರಿತಮ್ ||
ತಸ್ಯೋರಸಿ ಕ್ಷತೇ ರಕ್ತಂ ಪೂಯಃ ಶ್ಲೇಷ್ಮಾ ಚ ಗಚ್ಛತಿ |
ಕಾಸಮಾನಶ್ಛರ್ದಯೇಚ್ಚ ಪೀತರಕ್ತಾಸಿತಾರುಣಮ್ ||
ಸನ್ತಪ್ತವಕ್ಷಾಃ ಸೋಽತ್ಯರ್ಥಂ ದೂಯನಾತ್ಪರಿತಾಮ್ಯತಿ |
ದುರ್ಗನ್ಧವದನೋಚ್ಛ್ವಾಸೋ ಭಿನ್ನವರ್ಣಸ್ವರೋ ನರಃ ||
ಕೇಷಾಂಚಿದೇವ ಶೋಷೋ ಹಿ ಕಾರಣೈರ್ಭೇದಮಾಗತಃ |
ನ ತತ್ರ ದೋಷಲಿಂಗಾನಾಂ ಸಮಸ್ತಾನಾಂ ನಿಪಾತನಮ್ ||
ಕ್ಷಯಾ ಏವ ಹಿ ತೇ ಜ್ಞೇಯಾಃ ಪ್ರತ್ಯೇಕಂ ಧಾತುಸಂಕ್ಷಯಾತ್ |
ಚಿಕಿತ್ಸಿತನ್ತು ತೇಷಾಂ ಹಿ ಪ್ರಾಗುಕ್ತೇ ಧಾತುಸಂಕ್ಷಯೇ || (ಸು. 797-8)

ಮೈಥುನ, ಶೋಕ, ಮುದಿತನ, ಸಾಧಕ, ದಾರಿನಡಿಯೋಣ, ಉಪವಾಸ, ವ್ರಣದ ಮತ್ತು ಉರಃಕ್ಷತದ ಪೀಡೆಗಳು, ಇವುಗಳಿಂದುಂಟಾಗುವ ಶೋಷಗಳನ್ನು ಬೇರೆಯವರು ಹೇಳುತ್ತಾರೆ. ಮೈಥುನದಿಂದುಂಟಾದ ಶೋಷದಲ್ಲಿ ಶುಕ್ರಧಾತುಕ್ಷಯದ ಲಕ್ಷಣಗಳಾದ ಉಪದ್ರವಗಳು ಕಾಣುವದಲ್ಲದೆ, ಮೈಪಾಂಡುವರ್ಣವಾಗುತ್ತದೆ ಮತ್ತು ಧಾತುಗಳು ಹಿಂದಕ್ಕಾಗಿ ಒಂದರನಂತರ ಒಂದು (ಶುಕ್ರದನಂತರ ಮಜ್ಜೆ, ಅದರನಂತರ ಎಲುಬು, ಈ ಕ್ರಮದಲ್ಲಿ) ಕ್ಷೀಣವಾಗುತ್ತವೆ. ಶೋಕಜ ಶೋಷದಲ್ಲಿ ರೋಗಿಯು ವಿಶೇಷದ ಧ್ಯಾನಮಾಡುತ್ತಿರುವ ಶೀಲವುಳ್ಳವನೂ, ಸಡಿಲಾದ ಅಂಗಗಳುಳ್ಳವನೂ (ಬಲಹೀನನೂ), ಶುಕ್ರಕ್ಷಯವಿಲ್ಲದೆ ಶುಕ್ರಕ್ಷಯದಿಂದುಂಟಾಗುವ ವಿಕಾರಗಳುಳ್ಳವನೂ, ಆಗುತ್ತಾನೆ. ಮುದಿತನದ ಶೋಷದಲ್ಲಿ ಕೃಶತೆ (ಮೈಬತ್ತಿರುವದು), ಬುದ್ಧಿಯೂ, ಬಲವೂ, ಇಂದ್ರಿಯಗಳೂ ಮಂದವಾಗಿ ಮತ್ತು ಸ್ವಲ್ಪವಾಗಿ ಇರುವಿಕೆ, ಉಬ್ಬಸ, ಅರುಚಿ, ಒಡೆದ ಕಂಚಿನಪಾತ್ರಕ್ಕೆ ಹೊಡೆದ ಹಾಗಿನ ಸ್ವರ, ಕಫವಿಲ್ಲದೆ ಉಗಿಯುತ್ತಿರುವದು, ರತಿಶಕ್ತಿಯಿಲ್ಲದ ಪೀಡೆ, ಬಾಯಿ, ಮೂಗು ಮತ್ತು ಕಣ್ಣುಗಳಿಂದ ನೀರು ಬರುವದು, ಒಣಗಿ ಜಿಡ್ಡಿಲ್ಲದ ಹಾಗಿನ ಮಲ, ಈ ಲಕ್ಷಣಗಳು ಕಾಣುವವು. ದಾರಿನಡಿಕೆಯಿಂದುಂಟಾದ ಶೋಷದಲ್ಲಿ ಅಂಗಗಳು ಸಡಿಲಾಗುವದು, ಮೈಬಣ್ಣವು ಹುರಿದ ಹಾಗೆ ದೊರಗಾಗಿ ಕಾಣುವದು, ಶರೀರದಲ್ಲಿ ಮತ್ತು ಅವಯವಗಳಲ್ಲಿ ಸ್ಪರ್ಶಜ್ಞಾನ ಕಡಿಮೆಯಾಗಿರುವದು, ಕ್ಲೋಮವೂ, ಗಂಟಲೂ, ಬಾಯಿಯೂ ಒಣಗಿರುವದು, ಈ ಲಕ್ಷಣಗಳು ಕಾಣುವವು. ಸಾಧಕದಿಂದುಂಟಾದ ಶೋಷದಲ್ಲಿ ಇವೇ ಲಕ್ಷಣಗಳು ಅಧಿಕವಾಗಿ ಇರುವದಲ್ಲದೆ, ಕ್ಷತ (ಗಾಯ ಅಥವಾ ಒಡಕು) ವಿಲ್ಲದೆ ಉರಃಕ್ಷತದ ಲಕ್ಷಣಗಳು ಉಂಟಾಗಿರುವವು. ವ್ರಣರೋಗಿಗೆ ರಕ್ತಕ್ಷಯದಿಂದಲೂ, ನೋವಿನಿಂದಲೂ, ಆಹಾರನಿಯಮದಿಂದಲೂ ಶೋಷ ಉಂಟಾಗುತ್ತದೆ; ಆದರೆ ಅದು ಅತ್ಯಂತ ಅಸಾಧ್ಯವ್ಯಾಧಿ. ವ್ಯಾಯಾಮ (ಸಾಧಕ), ಭಾರ ಹೊರುವದು, ಗಟ್ಟಿಯಾಗಿ ಅಧ್ಯಯನ ಮಾಡುವದು, ಪೆಟ್ಟುಬೀಳುವದು, ಅತಿಮೈಥುನ, ಎದೆಯಿಂದ ಮಾಡುವ ಕೆಲಸ, ಈ ನಿಮಿತ್ತಗಳಿಂದ ಯಾರ ಎದೆಯಲ್ಲಿ ಗಾಯ

ವಾಗುತ್ತದೋ, ಅವನಲ್ಲಿ ಎದೆಯ ಗಾಯ(ಉರಃಕ್ಷತ)ದಿಂದ ರಕ್ತ, ಕೀವು ಮತ್ತು ಕಫ ಹೊರಡುತ್ತವೆ; ಅವನು ಕೆಮ್ಮುತ್ತಾ ಅರಸಿನ, ಕೆಂಪು, ಕಪ್ಪು, ಅಥವಾ ಅರುಣೋದಯದ ವರ್ಣದ ವಾಂತಿ ಮಾಡುವನು ಮತ್ತು ಬಹಳವಾದ ಎದೆಯ ಉರಿಯಿಂದಲೂ, ನೋವಿನಿಂದಲೂ ಸಂಕಷ್ಟಪಡುತ್ತಾನೆ; ಅವನ ಬಾಯಿಯಲ್ಲಿಯೂ ಶ್ವಾಸದಲ್ಲಿಯೂ ದುರ್ಗಂಧ ಉಂಟಾಗುತ್ತದೆ; ಮತ್ತು ಅವನ ವರ್ಣದಲ್ಲಿಯೂ ಸ್ವರದಲ್ಲಿಯೂ ಭೇದ ಉಂಟಾಗುತ್ತದೆ. ಕೆಲವರ ಮತದಲ್ಲಿ ಈ (ವ್ಯಾಯಾಮಾದಿಗಳಿಂದ ಉಂಟಾದ) ವ್ಯಾಧಿಗಳು ಕಾರಣಭೇದಗಳಿಂದ ಉಂಟಾದ ಶೋಷದ ಭೇದಗಳು. (ಆದರೆ) ಅವುಗಳಲ್ಲಿ ಸಮಸ್ತ ದೋಷ ಲಕ್ಷಣಗಳು ಸೇರುವದಿಲ್ಲ (ಆದ್ದರಿಂದ ಶೋಷವಲ್ಲ). ಅವುಗಳೊಳಗೆ ಪ್ರತಿಯೊಂದು ಧಾತುಕ್ಷಯದಿಂದ ಉಂಟಾಗುವದಾದ್ದರಿಂದ ಅವು ಕ್ಷಯಗಳೆಂತಲೇ ತಿಳಿಯಬೇಕು (ಶೋಷವಲ್ಲ). ಯಾಕೆಂದರೆ ಅವುಗಳ ಚಿಕಿತ್ಸೆಯು ಹಿಂದೆ ಧಾತುಕ್ಷಯದ ವರ್ಣನದಲ್ಲಿ ಹೇಳಲ್ಪಟ್ಟಂತೆ ಆಗಿರುತ್ತದೆ. (Iನೇ ಭಾಗದ V-44 ನೋಡಿ.)

ಷರಾ ಈ ಉರಃಕ್ಷತಜ ಶೋಷದ ನಿದಾನ, ಲಕ್ಷಣ ಮತ್ತು ಚಿಕಿತ್ಸೆಗಳು ಮುಂದೆ XIVನೇ ಅಧ್ಯಾಯದಲ್ಲಿ "ಕ್ಷತಕ್ಷೀಣಚಿಕಿತ್ಸೆ" ಎಂಬ ತಿರೋನಾಮದಿಂದ ಪ್ರತ್ಯೇಕವಾಗಿ ವರ್ಣಿಸಲ್ಪಡುತ್ತವೆ ಉಪವಾಸದಿಂದ ಉಂಟಾದ ಶೋಷದ ಲಕ್ಷಣಗಳು ಮೇಲಿನ ವರ್ಣನದಲ್ಲಿ ಇಲ್ಲ. ಆದ್ದರಿಂದ ಉಪವಾಸದ ಶೋಷ ಪ್ರತ್ಯೇಕ ಇಲ್ಲ ಎಂತ ಆಲೋಚಿಸಿ, "ವ್ಯಾಯಾಮಾಧ್ವೋಪವಾಸತಃ" ಎಂಬದಕ್ಕೆ ಬದಲಾಗಿ "ವ್ಯಾಯಾಮಾಧ್ವ ಪ್ರಕೋಪಿತಾನ್" ಎಂತ ಪಾಠವಿಟ್ಟದ್ದು ಕಾಣುತ್ತದೆ ಉಪವಾಸಜ ಶೋಷದ ಲಕ್ಷಣಾದಿಗಳು ಕಾರ್ಶ್ಯವರ್ಣನದಲ್ಲಿ (1ನೇ ಭಾಗದ IX-5ನೇ ಸಂಖ್ಯೆ ನೋಡಿ) ಅಡಗಿಯವೆ ಎಂತ ನಿ ಸಂ ವ್ಯಾ ಚರಕನಿಂದ ವರ್ಣಿಸಲ್ಪಟ್ಟ ಕ್ಷಯಜ ರಾಜಯಕ್ಷ್ಮದ ಹೇತುಗಳೊಳಗೆ ಉಪವಾಸವು ಸೇರಿರುತ್ತದೆ

6. ಸರ್ವೈರರ್ಧೈಸ್ತ್ರಿಭಿರ್ವಾಪಿ ಲಿಂಗೈರ್ಮಾಂಸಬಲಕ್ಷಯೇ |
ಅಸಾಧ್ಯ ಲಕ್ಷಣ ಯುಕ್ತೋ ವರ್ಜ್ಯಶ್ಚಿಕಿತ್ಸ್ಯಸ್ತು ಸರ್ವರೂಪೋಽಪ್ಯತೋಽನ್ಯಥಾ ||

(ಚ. 522)

ಶೋಷದಲ್ಲಿ (ಹಿಂದೆ ಹೇಳಿದ) ಹನ್ನೊಂದು ಲಕ್ಷಣಗಳು ಕೂಡಿಕೊಂಡಿರಲಿ, ಆರು ಲಕ್ಷಣಗಳು ಇರಲಿ, ಅಥವಾ ಮೂರೇ ಲಕ್ಷಣಗಳು ಇರಲಿ, ದೇಹದ ಮಾಂಸವೂ, ಬಲವೂ ಕ್ಷಯವಾಗಿದ್ದರೆ, ಅದು ಅಸಾಧ್ಯ (ಅಂಥಾ ಶೋಷರೋಗಿಗೆ ಚಿಕಿತ್ಸೆಮಾಡಿ ಪ್ರಯೋಜನ ಎಲ್ಲ). ಸರ್ವಲಕ್ಷಣಗಳಿಂದ ಕೂಡಿದ್ದಾದರೂ, ಬಲಮಾಂಸಗಳು ಕ್ಷಯವಾಗಿರದಿದ್ದರೆ ಅದಕ್ಕೆ ಚಿಕಿತ್ಸೆಮಾಡಬೇಕು.

ಷರಾ ಕ್ಷೀಣನಾಗಿ ವ್ಯಾಧಿಯ ಮತ್ತು ಔಷಧದ ಬಲವನ್ನು ಸಹಿಸಕೂಡದವನನ್ನು ವರ್ಜ್ಯಮಾಡಬೇಕು (ವಾ 200)

ಮಹಾಶನಂ ಕ್ಷೀಯಮಾಣಮತೀಸಾರನಿಪೀಡಿತಮ್ |
ಶೂನಮುಷ್ಕೋದರಂ ಚೈವ ಯಕ್ಷ್ಮಿಣಂ ಪರಿವರ್ಜಯೇತ್ ||

(ಸು. 799)

ಬಹಳವಾಗಿ ಉಂಡಾಗ್ಯೂ ಕ್ಷೀಣವಾಗುತ್ತಾ ಬರುವ, ಅತಿಸಾರದಿಂದ ಪೀಡಿತನಾದ ಮತ್ತು ಆಂಡವೂ ಹೊಟ್ಟೆಯೂ ಊದಿಕೊಂಡಿರುವ, ಯಕ್ಷ್ಮರೋಗದವನ್ನು ಚಿಕಿತ್ಸೆಮಾಡಿ ಪ್ರಯೋಜನವಿಲ್ಲ.

ಷರಾ 1ನೇ ಭಾಗದ XVIII-12 ನೋಡಿರಿ

ಸ ಜೀವೇಚ್ಛತುರೋ ಮಾಸಾನ್ ಷಣ್ಮಾಸಂ ವಾ ಬಲಾಧಿಕಃ |
ಉತ್ಕೃಷ್ಟೈಶ್ಚ ಪ್ರತೀಕಾರೈಃ ಸಹಸ್ರಾಹನ್ತು ಜೀವತಿ ||

ಸಹಸ್ರಾತ್ ಪರತೋ ನಾಸ್ತಿ ಜೀವಿತಂ ರಾಜಯಕ್ಷ್ಮಿಣಃ |
ಗತಪ್ರಾಣಬಲೌಜಶ್ಚ ಕ್ಷೀಣಶ್ಚ ವಿಕಲೇನ್ದ್ರಿಯಃ ||
ನ ಭವೇತ್ ಪುನರುಚ್ಛ್ವಾಸೋ ಯಾಪ್ಯರೋಗಶ್ಚ ಮುಂಚತಿ |
ಯಸ್ತದಾಯಾಸಸಂಪನ್ನೋ ಭೂಯೋಪಿ ಕಾಸನಾ ಭವೇತ್ ||
ತದಾ ಪ್ರಾಣಾಪಹಾರೀ ಸ್ಯಾತ್ ರಾಜಯಕ್ಷ್ಮಾತಿದಾರುಣಃ |
ತ್ರಿಭಿರ್ಮಾಸೈಶ್ಚ ಷಣ್ಮಾಸೈರ್ವರ್ಷೈರ್ಶ್ಚಾಪಿ ತ್ರಿಭಿಃ ಪುನಃ ||
(ಹಾ. ಸಂ. 176, 177)

ರಾಜಯಕ್ಷ್ಮದವನು ನಾಲ್ಕು ತಿಂಗಳು ಬದುಕಿಯಾನು, ಒಳ್ಳೇ ಬಲವುಳ್ಳವನಾದರೆ ಆರು ತಿಂಗಳು, ಮತ್ತು ಉತ್ಕೃಷ್ಟವಾದ ಚಿಕಿತ್ಸೆಮಾಡಿಸಿಕೊಂಡರೆ ಒಂದು ಸಹಸ್ರದಿನ ಬದುಕುತ್ತಾನೆ. ಒಂದು ಸಹಸ್ರ ದಿನಗಳನಂತರ ಅವನಿಗೆ ಆಯುಷ್ಯವಿಲ್ಲ. ರೋಗವು ಯಾಪ್ಯ ಅವಸ್ಥೆಯನ್ನು ಪಡೆದು (ಉಪಚಾರ ಬಲದಿಂದ) ಬಿಟ್ಟಾಗ್ಯೂ ರೋಗಿಯು ಸತ್ವ, ಬಲ, ಓಜಸ್ಸುಗಳು ಹೋಗಿ, ಕ್ಷೀಣನಾಗಿ, ಇಂದ್ರಿಯಗಳಲ್ಲಿ ಆರೋಗ್ಯದ ಕಳೆ ಇಲ್ಲದೆ, ಇರುತ್ತಾನೆ. ಅವನಿಗೆ ಪುನಃ ಏಳಿಗೆ ಇಲ್ಲ. ಹಾಗೆ ಅವನು ಆಯಾಸವುಳ್ಳವನಾಗಿ ಇರುವಾಗ್ಗೆ, ಅವನಿಗೆ ಪುನಃ ಕೆಮ್ಮು ಉಂಟಾದರೆ, ರಾಜಯಕ್ಷ್ಮವು ಅತಿ ಕಠಿಣವಾಗಿ, ಪುನಃ ಮೂರು ತಿಂಗಳಲ್ಲಿ, ಆರು ತಿಂಗಳಲ್ಲಿ, ಅಥವಾ ಮೂರು ವರ್ಷಗಳಲ್ಲಿ ಅವನ ಪ್ರಾಣವನ್ನು ಅಪಹರಿಸುತ್ತದೆ.

ಪರಾ ಒಂದು ವರ್ಷದನಂತರ ಉರಃಕ್ಷತವು ಯಾಪ್ಯ ಎಂತಲೂ, ಶೋಷವು 1000 ದಿನಗಳನಂತರ ವಾಸಿಯಾಗುವದು ಸಂದೇಹಾಸ್ಪದ ಎಂತಲೂ ಭಾವಪ್ರಕಾಶ ಮುಂತಾದ ಗ್ರಂಥಗಳಲ್ಲಿ ಕಾಣುತ್ತದೆ

7. ಶ್ವಾಸಾಂಗಸಾದಕಫಸಂಸ್ರವತಾಲುಶೋಷ-
ಚ್ಛರ್ದ್ಯಗ್ನಿಸಾದಮದಪೀನಸಕಾಸನಿದ್ರಾಃ |
ಪೂರ್ವರೂಪ ಶೋಷೇ ಭವಿಷ್ಯತಿ ಭವನ್ತಿ ಸ ಚಾಪಿ ಜನ್ತುಃ
ಶುಕ್ಲೇಕ್ಷಣೋ ಭವತಿ ಮಾಂಸಪರೋ ರಿರಂಸುಃ || (ಸು. 798)

ಉಬ್ಬಸ, ಅಂಗಗಳಲ್ಲಿ ದಣುವು, ಕಫ ಉಗಿಯುತ್ತಿರುವದು, ತಾಲು ಒಣಗುವದು, ವಾಂತಿ, ಅಗ್ನಿಮಾಂದ್ಯ, ಮದ, ಪೀನಸ (ನೆಗಡಿ), ಕೆಮ್ಮು, ಅತಿನಿದ್ರೆ, ಕಣ್ಣುಗಳು ಬೆಳ್ಳಗಿರುವದು, ಮಾಂಸದ ಆಹಾರದಲ್ಲಿಯೂ ಮೈಥುನದಲ್ಲಿಯೂ ಅತಿಯಾದ ಇಚ್ಛೆ, ಈ ಲಕ್ಷಣಗಳು ಶೋಷರೋಗ ಬರುವದಕ್ಕೆ ಪೂರ್ವರೂಪಗಳು.

ಪರಾ ದುರ್ಬಲತೆ, ನಿರ್ದುಷ್ಟವಾದವುಗಳಲ್ಲಿ ದೋಷ ಕಾಣುವದು, ಉಂಡಾಗ್ಯೂ ಬಲಮಾಂಸಗಳು ಕ್ಷಯಿಸುವದು, ಮುಖಛಾಯು ಕೆಡುವದು, ಮುಂತಾದವು ಸಹ ಪೂರ್ವರೂಪದಲ್ಲಿ ಸೇರಿದವು ಎಂತ ಚ (ಪು. 521)

8. ಘ್ರಾಣಮೂಲೇ ಸ್ಥಿತಃ ಶ್ಲೇಷ್ಮಾ ರುಧಿರಂ ಪಿತ್ತಮೇವ ವಾ |
ಮಾರುತಾಧ್ಮಾತಶಿರಸೋ ಮಾರುತಂ ಶ್ಯಾಯತೇ ಪ್ರತಿ ||
ಪ್ರತಿಶ್ಯಾಯಪೂರ್ವಕವಾದ ಯಕ್ಷ್ಮದ ಲಕ್ಷಣ ಪ್ರತಿಶ್ಯಾಯಸ್ತತೋ ಘೋರೋ ಜಾಯತೇ ದೇಹಕರ್ಶನಃ |
ತಸ್ಯ ರೂಪಂ ಶಿರಃಶೂಲಂ ಗೌರವಂ ಘ್ರಾಣವಿಪ್ಲವಃ ||
ಜ್ವರಃ ಕಾಸಃ ಕಫೋತ್ಕ್ಲೇಶಃ ಸ್ವರಭೇದೋಽರುಚಿಃ ಕ್ಲಮಃ |
ಇನ್ದ್ರಿಯಾಣಾಮಸಾಮರ್ಥ್ಯಂ ಯಕ್ಷ್ಮಾ ಚಾತಃ ಪ್ರವರ್ತತೇ ||

ಪಿಚ್ಛಲಂ ವಹಲಂ ವಿಸ್ರಂ ಹರಿತಂ ಶ್ವೇತಪೀತಕಮ್ |
ಕಾಸಮಾನೋ ರಸಂ ಯಕ್ಷ್ಮೀ ನಿಷ್ಠೀವತಿ ಕಫಾನುಗಮ್ ||
ಅಂಸಪಾರ್ಶ್ವಾಭಿತಾಪಶ್ಚ ತಾಪಃ ಪಾದಕರಸ್ಯ ಚ |
ಜ್ವರಃ ಸರ್ವಾಂಗಗಶ್ಚೇತಿ ಲಕ್ಷಣಂ ರಾಜಯಕ್ಷ್ಮಣಃ || (ಚ. 522)

ತಲೆಯಲ್ಲಿ ಅತಿಯಾಗಿ ವಾಯು ಸೇರಿಕೊಂಡಿದ್ದಾಗ್ಗೆ ಮೂಗಿನ ಬುಡದಲ್ಲಿ ನಿಂತಿರುವ ಕಫ, ರಕ್ತ ಅಥವಾ ಪಿತ್ತವು ವಾಯುವಿಗೆ ಎದುರು ಹೋಗುವದರಿಂದ, ಶರೀರವನ್ನು ಒಣಗಿಸತಕ್ಕ ಘೋರವಾದ ಪ್ರತಿಶ್ಯಾಯ (ನೆಗಡಿ) ಎಂಬ ರೋಗವು ಉತ್ಪನ್ನವಾಗುತ್ತದೆ. ತಲೆಶೂಲೆ, ತಲೆಭಾರ, ಮೂಗಿನೊಳಗೆ ಉಪದ್ರವ, ಜ್ವರ, ಕೆಮ್ಮು, ಕಫ ಉಗಿಯುವದು, ಸ್ವರಭೇದ, ಅರುಚಿ, ಕ್ಲಮ, ಇಂದ್ರಿಯಗಳಲ್ಲಿ ಸಾಮರ್ಥ್ಯವಿಲ್ಲದಿರುವಿಕೆ, ಇವು ಆ ಪ್ರತಿಶ್ಯಾಯದ ಲಕ್ಷಣಗಳು. ಆದರಿಂದ ಯಕ್ಷ್ಮರೋಗ ಉತ್ಪನ್ನವಾಗುತ್ತದೆ. ಆಗ್ಗೆ ಪಿಚ್ಛಿಲವಾದ, ಗಟ್ಟಿಯಾದ, ಹಸಿಮಾಂಸದ ವಾಸನೆಯುಳ್ಳ ಮತ್ತು ಹಸುರು, ಬೆಳ್ಳಗೆ, ಅರಸಿನ ವರ್ಣಗಳುಳ್ಳ ರಸವನ್ನು ಕೆಮ್ಮುವಾಗ್ಗೆ ಕಫದೊಂದಿಗೆ ಅವನು ಉಗಿಯುತ್ತಾನೆ. ಭುಜಗಳ ಅಡಿ ಮತ್ತು ಪಾರ್ಶ್ವಗಳಲ್ಲಿ ಉರಿ, ಕೈ ಮತ್ತು ಪಾದಗಳಲ್ಲಿ ಉರಿ, ಮತ್ತು ಸರ್ವಾಂಗ ಜ್ವರ, ಇವು ರಾಜಯಕ್ಷ್ಮದ ಲಕ್ಷಣಗಳಾಗಿರುತ್ತವೆ. (ಅಂದರೆ ಇವು ಮೂರು ಲಕ್ಷಣಗಳು ಸೇರಿದ ಯಕ್ಷ್ಮರೋಗವು ರಾಜಯಕ್ಷ್ಮ ಎನ್ನಿಸಿಕೊಳ್ಳುತ್ತದೆ.)

9.　ವಾತಾತ್ ಪಿತ್ತಾತ್ ಕಫಾತ್ ರಕ್ತಾತ್ ಕಾಸವೇಗಾತ್ ಸಪೀನಸಾತ್ |
ಸ್ವರಭೇದೋ ಭವೇತ್ ವಾತಾತ್ ರೂಕ್ಷಃ ಕ್ಷಾಮಶ್ಚಲಃ ಸ್ವರಃ ||
ತಾಲುಕಂಠಪರಿಪ್ಲೋಷಃ ಪಿತ್ತಾತ್ ವಕ್ತುಮಸೂಯತೇ |
ಕಫಾತ್ ಮನ್ದೋ ವಿಬದ್ಧಶ್ಚ ಸ್ವರಃ ಖುರುಖುರಾಯತೇ ||
ಸದ್ಯೋ ರಕ್ತವಿಬನ್ಧತ್ವಾತ ಸ್ವರಃ ಕೃಚ್ಛ್ರಾತ್ ಪ್ರವರ್ತತೇ |
ಕಾಸಾತಿವೇಗಾತ್ ಕರು(?ಷ)ಣಃ ಪೀನಸಾತ್ ಕಫವಾತಿಕಃ ||
(ಚ. 522-3)

ಸ್ವರಭೇದದ ಭೇದಗಳು ಮತ್ತು ಲಕ್ಷಣ

ವಾತದಿಂದ, ಪಿತ್ತದಿಂದ, ಕಫದಿಂದ, ರಕ್ತದಿಂದ, ಕೆಮ್ಮಿನ ವೇಗದಿಂದ, ಮತ್ತು ಪೀನಸದಿಂದ, ಹೀಗೆ ಆರು ವಿಧವಾಗಿ ಸ್ವರಭೇದ ಉಂಟಾಗುತ್ತದೆ. ವಾತದಿಂದ ಉಂಟಾದ್ದರಲ್ಲಿ ಸ್ವರವು ಒಣಗಿಕೊಂಡು, ಬಲಹೀನವಾಗಿ, ಮತ್ತು ನಡುಕುಳ್ಳದ್ದಾಗಿ ಇರುತ್ತದೆ. ಪಿತ್ತದಿಂದ ಉಂಟಾದ್ದರಲ್ಲಿ ತಾಲು ಮತ್ತು ಕಂಠದಲ್ಲಿ ಸುಡತ, ಮತ್ತು ಮಾತಾಡುವದಕ್ಕೆ ಅಸೂಯೆ (ಮಾತನ್ನು ಪೂರ್ಣ ಮಾಡದಿರುವದು) ಉಂಟಾಗುವವು. ಕಫಜ ಸ್ವರಭೇದದಲ್ಲಿ ಸ್ವರವು ಮಂದ, ತಡೆಯುಳ್ಳದ್ದು ಮತ್ತು ಖುರುಖುರು ಶಬ್ದವುಳ್ಳದ್ದು ಆಗುತ್ತದೆ. ರಕ್ತದ ತಡೆಯಿಂದ ಉಂಟಾದ್ದರಲ್ಲಿ ಸ್ವರವು ಸಣ್ಣದಾಗಿ ಕಷ್ಟದಿಂದ ಹೊರಡುತ್ತದೆ. ಕೆಮ್ಮಿನ ಅತಿವೇಗದಿಂದ ಉಂಟಾದ್ದರಲ್ಲಿ ಗಂಟಲತುರಿಕೆ, ಮತ್ತು ಪೀನಸದಿಂದ ಸಂಭವಿಸಿದ್ದರಲ್ಲಿ ಕಫದೋಷದ್ದಕ್ಕೂ ವಾತದೋಷದ್ದಕ್ಕೂ ಹೇಳಲ್ಪಟ್ಟ ಲಕ್ಷಣಗಳು, ಕಾಣುವವು.

ಪಠಾ 'ಸದ್ಯಃ' ಎಂಬಲ್ಲಿ 'ಸನ್ನಃ' ಮತ್ತು 'ಕರುಣಃ' ಎಂಬಲ್ಲಿ 'ಕಷಣಃ' ಎಂಬ ಪಾಠಾಂತರಗಳು ಕಾಣುತ್ತವೆ ಅವೇ ಸರಿಯಾದವು ಎಂತ ಕಾಣುತ್ತದೆ.

ಪ್ರತಿಶ್ಯಾಯವು ನಾಸಾ ರೋಗದ ಭೇದವಾಗಿ, ಸ್ವರಭೇದ ಮತ್ತು ಅರುಚಿ ಪ್ರತ್ಯಪ್ರತ್ಯೇಕ ಪ್ರಕರಣಗಳಲ್ಲಿ ವರ್ಣಿಸಲ್ಪಟ್ಟಿರುವದರಿಂದ, ಅವುಗಳ ವರ್ಣನವನ್ನು ಈ ಪ್ರಕರಣದಲ್ಲ ಅನೇಕ ಗ್ರಂಥಕಾರರು ಬಿಟ್ಟಿದ್ದಾರೆ

ಸ್ವರಭೇದವು ವಾತಾದಿ ದೋಷಗಳಿಂದ ಪ್ರತ್ಯೇಕವಾಗಿ ಮೂರು, ಸನ್ನಿಪಾತದಿಂದ ಒಂದು, ಕ್ಷಯದಿಂದ ಒಂದು, ಮೇದಸ್ಸಿನಿಂದ ಒಂದು, ಹೀಗೆ ಆರು ವಿಧ ಎಂತ 'ಸ್ವರಭೇದ' ಪ್ರಕರಣದಲ್ಲಿ ಕಾಣುವದನ್ನೆಲ್ಲಾ ಈ ಸಂದರ್ಭದಲ್ಲಿಯೂ ವಾಗ್ಭಟನು ವರ್ಣಿಸಿರುತ್ತಾನೆ.

ಸ್ವರಭೇದ ರೋಗದ ಸಂಪೂರ್ಣ ವರ್ಣನ ಮತ್ತು ಚಿಕಿತ್ಸೆ ಮುಂದೆ IXನೇ ಅಧ್ಯಾಯದಲ್ಲಿ ಕಾಣುವವು

10. ಪೃಥಗ್ದೋಷೈಃ ಸಮಸ್ತೈರ್ವಾ ಜಿಹ್ವಾಹೃದಯಸಂಶ್ರಿತೈಃ ।
ಜಾಯತೇಽರುಚಿರಾಹಾರ್ಯೈರ್ದುಷ್ಟೈರರ್ಥೈಶ್ಚ ಮಾನಸೈಃ ॥
ಕಷಾಯತಿಕ್ತಮಧುರೈರ್ವಿದ್ಯಾನ್ಮುಖರಸೈಃ ಕ್ರಮಾತ್ ।
ವಾತಾದ್ಯೈರರುಚಿಂ ಜಾತಾಂ ಮಾನಸೀಂ ದೋಷದರ್ಶನಾತ್ ॥
(ಚ. 523)

ಅರುಚಿಯ ಭೇದಗಳು

ನಾಲಿಗೆ ಮತ್ತು ಹೃದಯವನ್ನು ಆಶ್ರಯಿಸಿಕೊಂಡಿರುವ ವಾತ, ಪಿತ್ತ, ಕಫ, ಮತ್ತು ಸನ್ನಿಪಾತ ದೋಷಗಳಿಂದಲೂ, ದೋಷಯುಕ್ತವಾದ ಆಹಾರಗಳಿಂದಲೂ, ಮನೋವ್ಯಥೆಯಿಂದಲೂ ಅರುಚಿ ಎಂಬ ವ್ಯಾಧಿ ಉಂಟಾಗುತ್ತದೆ. ಬಾಯಿಯ ರುಚಿಯು ವಾತದೋಷದಲ್ಲಿ ಚೊಗರು, ಪಿತ್ತದೋಷದಲ್ಲಿ ಕಹಿ, ಕಫದೋಷದಲ್ಲಿ ಸಿಹಿ, ಆಗುತ್ತದೆಂಬದರಿಂದ ದೋಷಗಳನ್ನು ತಿಳಿಯತಕ್ಕದ್ದು. ಮಾನಸಿಕ ಅರುಚಿಯಲ್ಲಿಯೂ ದೋಷಗಳನ್ನು ಅದೇ ರೀತಿ ತಿಳಿಯುವದು.

ಪರಾ ಮುಂದಿನ XIನೇ ಅಧ್ಯಾಯವು 'ಅರುಚಿ'ಯ ಕುರಿತಾದದ್ದು.

11. ಅರೋಚಕಾತ್ ಕಾ*ಸವೇಗಾದ್ದೋಷೋತ್ಕ್ಲೇಶಾದ್ಭಯಾದಪಿ ।
ಛರ್ದಿರ್ಯಾ ಸಾ ವಿಕಾರಾಣಾಮನ್ಯೇಷಾಮಪ್ಯುಪದ್ರವಃ ॥ (ಚ. 523)

ವಾಂತಿಗೆ ಹೇತುಗಳು.

ಅರುಚಿಯಿಂದಲೂ, ಕೆಮ್ಮಿನ ವೇಗದಿಂದಲೂ, ವಾತಾದಿ ದೋಷಗಳಿಂದಲೂ, ಅಸಹ್ಯಪಡುವದರಿಂದಲೂ, ಭಯದಿಂದಲೂ ಉಂಟಾಗುವ ವಾಂತಿಯು (ರಾಜಯಕ್ಷ್ಮಾದಿ) ಬೇರೆ ರೋಗಗಳಲ್ಲಿಯೂ ಉಪದ್ರವವಾಗಿ ಕಾಣುವದು.

*'ಕಾಸ' ಎಂಬಲ್ಲಿ 'ಸಾಮ' ಎಂಬ ಪಾಠ ಕಾಣುತ್ತದೆ ಆಗ್ಗೆ 'ಅಜೀರ್ಣದ ವೇಗ' ಎಂತ ಅರ್ಥವಾಗುತ್ತದೆ

ಪರಾ: ಮುಂದಿನ XVನೇ ಅಧ್ಯಾಯವು 'ವಾಂತಿಯ' ವಿಷಯವಾದದ್ದು

12. ಪಾರ್ಶ್ವಶೂಲಂ ತ್ವನಿಯತಂ ಸಂಕೋಚಾಯಾಮಲಕ್ಷಣಮ್ ।
ಶಿರಃಶೂಲಂ ಸಸನ್ತಾಪಂ ಯಕ್ಷ್ಮಿಣಃ ಸ್ಯಾತ್ ಸಗೌರವಮ್ ॥
ಅತಿಖಿನ್ನೇ ಶರೀರೇ ತು ಯಕ್ಷ್ಮಿಣೋ ವಿಷಮಾಶನಾತ್ ।
ಕಂಠಾತ್ಪ್ರವರ್ತತೇ ರಕ್ತಂ ಶ್ಲೇಷ್ಮಾ ಚೋತ್ಕ್ಲಿಷ್ಟಸಂಚಿತಃ ॥
ರಕ್ತಂ ವಿಬದ್ಧಮಾರ್ಗತ್ವಾತ್ ಮಾಂಸಾದೀನ್ ನಾನುಪದ್ಯತೇ ।
ಆಮಾಶಯಸ್ಥಮುತ್ಕ್ಲಿಷ್ಟಂ ಬಹುತ್ವಾತ್ ಕಂಠಮೇತಿ ವಾ ॥
ವಾತಶ್ಲೇಷ್ಮವಿಬಂಧತ್ವಾದುರಸಃ ಶ್ವಾಸಮೃಚ್ಛತಿ ।
ದೋಷೈರುಪಹತೇ ಚಾಗ್ನೌ ಸಪಿಚ್ಛಮತಿಸಾರ್ಯತೇ ॥ (ಚ. 523)

ಪಾರ್ಶ್ವಶೂಲಾದಿ ಇತರ ಉಪದ್ರವಗಳು

ಪಾರ್ಶ್ವಶೂಲೆಯು ಎದೆಯ ಕುಗ್ಗುವ ಹಿಗ್ಗುವ (ಸಂಕೋಚನ ಪ್ರಸರಣ) ಅವಸ್ಥೆಗಳಲ್ಲಿ ಕಾಣುವ ಸ್ಥಿರವಲ್ಲದ ಲಕ್ಷಣವಾಗಿರುತ್ತದೆ. ಯಕ್ಷ್ಮರೋಗದವನಿಗೆ ಉಂಟಾಗುವ ತಲೆಶೂಲೆ

ಯಲ್ಲಿ ಬಿಸಿಯೂ, ಭಾರವೂ, ಕೂಡಿರುವವು. ವಿಷಮಾಶನದಿಂದ ಹುಟ್ಟಿದ ಯಕ್ಷ್ಮರೋಗದವನ ಶರೀರವು (ಕೆಮ್ಮಿನಿಂದ) ಅತಿಯಾಗಿ ನೊಂದಲ್ಲಿ, ಕೆದರಿ ಸಂಗ್ರಹವಾದ ಕಫದೊಂದಿಗೆ ರಕ್ತವು ಕಂಠದಿಂದ ಪ್ರವರ್ತಿಸುತ್ತದೆ; ಅಥವಾ ಆಮಾಶಯದಲ್ಲಿಯ ರಕ್ತವು ತನ್ನ ಮಾರ್ಗ ಮುಚ್ಚಿಹೋದ ದೆಸೆಯಿಂದ ಮಾಂಸಾದಿ ಧಾತುಗಳನ್ನು ಸೇರದೆ ಹೆಚ್ಚಾದ್ದರಿಂದ, ವಾಂತಿಯಾಗುವ (ವಾಕರಿಕೆ) ಸಂಕಟ ಉಂಟಾಗಿ ಕಂಠವನ್ನು ಸೇರುತ್ತದೆ. ಎದೆಯಲ್ಲಿ (ಶ್ವಾಸಕೋಶದಲ್ಲಿ) ಉಂಟಾಗುವ ವಾತ-ಕಫಗಳ ತಡೆಯ ದೆಸೆಯಿಂದ ಉಬ್ಬಸವು ಉಂಟಾಗುತ್ತದೆ. ದೋಷಗಳು ಅಗ್ನಿಯನ್ನು ಕೆಡಿಸುವದರಿಂದ, (ಉಕ್ಕು ತಿಳಿಹಾಗಿನ) ಪಿಚ್ಛಯುಕ್ತವಾದ ಅತಿಸಾರ ಉಂಟಾಗುತ್ತದೆ.

## ಚಿಕಿತ್ಸೆ.

13. ಬಲಿನೋ ಬಹುದೋಷಸ್ಯ ಸ್ನಿಗ್ಧಸ್ವಿನ್ನಸ್ಯ ಶೋಧನಮ್ ।
ಊರ್ಧ್ವಾಧೋ ಯಕ್ಷ್ಮಿಣಃ ಕುರ್ಯಾತ್ ಸಸ್ನೇಹಂ ಯನ್ನಕರ್ಶನಮ್ ॥
(ವಾ. 283)

ಚಿಕಿತ್ಸೋಪಕ್ರಮದಲ್ಲಿ ಪಂಚಕರ್ಮಗಳು.

ಯಕ್ಷ್ಮರೋಗದವನು ಬಲಿಷ್ಠನಾಗಿದ್ದು, ಅವನಲ್ಲಿ ದೋಷಗಳು ಬಹಳವಾಗಿದ್ದರೆ, (ಸ್ನೇಹನಸ್ವೇದನ ವಿಧಿಪ್ರಕಾರ) ಸ್ನೇಹಹಚ್ಚಿ ಬೆವರಿಸಿ, ಸ್ನೇಹಯುಕ್ತವಾದ ಮತ್ತು ಶರೀರವನ್ನು ಬತ್ತಿಸತಕ್ಕಂಥಾದ್ದಲ್ಲದ ಔಷಧಗಳಿಂದ ಮೇಲಕ್ಕೂ ಕೆಳಕ್ಕೂ ಶೋಧನ (ವಾಂತಿ ವಿರೇಚನಗಳನ್ನು) ಮಾಡಿಸಬೇಕು.

ವಿರೇಚನದ ನಿಷೇಧ.

ಶೋಷೀ ಮುಂಚತಿ ಗಾತ್ರಾಣಿ ಪುರೀಷಸ್ರಂಸನಾದಪಿ ।
ಅಬಲಾಪೇಕ್ಷಿಣೀಂ ಮಾತ್ರಾಂ ಕಿಂ ಪುನರ್ಯೋ ವಿರಿಚ್ಯತೇ ॥
(ಚ. 525)

ಶೋಷರೋಗದವನಿಗೆ ಅವನ ದೇಹದ ದುರ್ಬಲತೆಯನ್ನು ನೋಡಿಕೊಂಡು ಅದಕ್ಕೆ ಯುಕ್ತವಾದ ಪ್ರಮಾಣದಲ್ಲಿ ಶೋಧನವನ್ನು ಕೊಟ್ಟು ಮಲವನ್ನು (ಸಡಿಲಾಗಿ) ಹೊರಪಡಿಸಿದಾಗಲೂ, ಅವನು ಕೈಕಾಲು ಬಿಡುತ್ತಾನೆ (ಕ್ಷೀಣನಾಗುತ್ತಾನೆ); ಹಾಗಿರುವಾಗ ಅವನಿಗೆ (ಎಲ್ಲವರಂತೆ) ವಿರೇಚನ ಮಾಡಿಸಿದರೆ ಏನು ಹೇಳಬೇಕು? (ಅವನು ಸಾಯುವದು ನಿಶ್ಚಯ.)

ಮಲರೇತಸ್ಸುಗಳ ರಕ್ಷಣ.

ಬಲಿನೋ ಬಹುದೋಷಸ್ಯ ಪಂಚಕರ್ಮಾಣಿ ಕಾರಯೇತ್ ।
ಯಕ್ಷ್ಮಿಣೋ ಕ್ಷೀಣದೇಹಸ್ಯ ತತ್ಕೃತಂ ಸ್ಯಾದ್ವಿಷೋಪಮಮ್ ॥
ಮಲಾಯತ್ತಂ ಬಲಂ ಪುಂಸಾಂ ಶುಕ್ರಾಯತ್ತಂ ಚ ಜೀವಿತಮ್ ।
ತಸ್ಮಾದ್ಯತ್ನೇನ ಸಂರಕ್ಷ್ಯೇದ್ಯಕ್ಷ್ಮಿಣೋ ಮಲರೇತಸೀ ॥ (ಭಾ. ಪ್ರ. 368)

ಬಹುದೋಷವುಳ್ಳ ಯಕ್ಷ್ಮರೋಗದವನು ಬಲಿಷ್ಠನಾಗಿದ್ದರೆ, ಅವನಿಗೆ ವಮನಾದಿ ಪಂಚಕರ್ಮಗಳನ್ನು ಮಾಡಿಸಬೇಕು. ಆ ಪಂಚಕರ್ಮಗಳು ಕ್ಷೀಣದೇಹದವನಿಗೆ ನಡಿಸಲ್ಪಟ್ಟಲ್ಲಿ ವಿಷಕ್ಕೆ ಸಮಾನವಾಗಿ ಪರಿಣಮಿಸುವವು. (ಆದ್ದರಿಂದ ಅವು ತ್ಯಾಜ್ಯ.) ಜನರ ಬಲವು ಮಲವನ್ನು ಮತ್ತು ಬದುಕುವಿಕೆಯು ಶುಕ್ರವನ್ನು ಹೊಂದಿರುವದರಿಂದ, ಯಕ್ಷ್ಮರೋಗದವನ ಮಲವನ್ನೂ ಶುಕ್ರವನ್ನೂ ಯತ್ನಪಟ್ಟು ಕಾಪಾಡತಕ್ಕದ್ದು.

ಆಸ್ಥಾಪನಂ ತಥಾ ಕಾರ್ಯಂ ಶಿರಸಶ್ಚ ವಿರೇಚನಮ್ ।
ಯವಗೋಧೂಮಶಾಲೀಶ್ಚ ರಸೈರ್ಭುಂಜೀತ ಶೋಧಿತಃ ॥
ದೃಢೇಽಗ್ನೌ ಬೃಂಹಯೇಚ್ಚಾಪಿ ನಿವೃತ್ತೋಪದ್ರವಂ ನರಮ್ ॥

ವಸ್ತಿ, ಶಿರೋವಿರೇಚನ ಮತ್ತು ಬೃಂಹಣ ವಿಧಿಗಳು

(ಸು. 799)

(ವಾಂತಿ ಮತ್ತು ವಿರೇಚನಗಳನಂತರ) ಮೃದುವಾಗಿ ಆಸ್ಥಾಪನವನ್ನೂ ಶಿರೋವಿರೇಚನವನ್ನೂ ಮಾಡಿಸಬೇಕು. ಈ ಪ್ರಕಾರ ಶೋಧನಮಾಡಿಸಿಕೊಂಡವನು ಯವೆ, ಗೋದಿ, ಶಾಲ್ಯಕ್ಕಿ, ಇವುಗಳ ಅನ್ನವನ್ನು ಮಾಂಸರಸಗಳೊಂದಿಗೆ ಉಣ್ಣಬೇಕು. ಅಗ್ನಿಯು ಬಲವಾಗಿ ಉಪದ್ರವಗಳೆಲ್ಲಾ ಪರಿಹಾರವಾದ ಮೇಲೆ, ಅವನಿಗೆ (ಪುಷ್ಟಿಕರವಾದ ಆಹಾರಪಾನಗಳನ್ನು ಕೊಟ್ಟು) ಬೃಂಹಣಮಾಡಬೇಕು.

14. ವ್ಯವಾಯಶೋಷಿಣಂ ಪ್ರಾಯೋ ಭಜನ್ತೇ ವಾತಜಾ ಗದಾಃ ।
ಬೃಂಹಣೀಯೋ ವಿಧಿಸ್ತಸ್ಮೈ ಹಿತಃ ಸ್ನಿಗ್ಧೋಽನಿಲಾಪಹಃ ॥

ವ್ಯವಾಯದಿಂದ ಉಂಟಾದ ಶೋಷಕ್ಕೆ

(ಸು. 799)

ಮೈಥುನದಿಂದುಂಟಾದ ಶೋಷರೋಗದವನಿಗೆ ಹೆಚ್ಚಾಗಿ ವಾತದೋಷದ ರೋಗಗಳು ಉಂಟಾಗುತ್ತವಾದ್ದರಿಂದ, ಸ್ನೇಹಯುಕ್ತವಾದ ಮತ್ತು ವಾತಹರವಾದ ಬೃಂಹಣವಿಧಿಯು ಅವನಿಗೆ ಹಿತಕರವಾಗಿರುತ್ತದೆ.

15. ಕಫಪ್ರಸೇಕೇ ಬಲವಾನ್ ಶ್ಲೈಷ್ಮಿಕಶ್ಛರ್ದಯೇನ್ನರಃ ।
ಪಯಸಾ ಫಲಯುಕ್ತೇನ ಮಧುರೇಣ ರಸೇನ ವಾ ॥
ಸರ್ಪಿಷ್ಮತ್ಯಾ ಯವಾಗ್ವಾ ವಾ ವಮನೀಯೋಪಸಿದ್ಧಯಾ ॥

ಕಫಕ್ಕೆ ವಮನ ಯೋಗಗಳು

(ಚ. 528)

ಮಂಗಾರೆಕಾಯಿಯ ಚೂರ್ಣಕೂಡಿಸಿದ ಹಾಲನ್ನು, ಅಥವಾ ಅದೇ ಫಲವನ್ನೂ ಸೀವರ್ಗದ ದ್ರವ್ಯಗಳನ್ನೂ ಕೂಡಿಸಿ ಮಾಡಿದ ಮಾಂಸರಸವನ್ನು, ಅಥವಾ ವಮನಮಾಡಿಸುವ ಗುಣವುಳ್ಳ ದ್ರವ್ಯಗಳೊಂದಿಗೆ ತಯಾರಿಸಲ್ಪಟ್ಟ ಮತ್ತು ತುಪ್ಪ ಕೂಡಿದ ಯವಾಗೂ ಗಂಜಿಯನ್ನು, ಬಲವಂತನಾದ ಕಫಪ್ರಕೃತಿಯ ಶೋಷರೋಗದವನಿಗೆ, ಅಧಿಕವಾಗಿ ಕಫ ಉಗಿಯುತ್ತಿರುವ ಸಂದರ್ಭದಲ್ಲಿ, ಕೊಟ್ಟು ವಾಂತಿಮಾಡಿಸತಕ್ಕದ್ದು.

16. ಶ್ಲೇಷ್ಮಣೋಽತಿಪ್ರಸೇಕೇ ತು ವಾಯುಃ ಶ್ಲೇಷ್ಮಾಣಮಸ್ಯತಿ ।
ಕಫಪ್ರಸೇಕಂ ತಂ ವಿದ್ವಾನ್ ಸ್ನಿಗ್ಧೋಷ್ಣೇನೈವ ನಿರ್ಜಯೇತ್ ॥

ಕಫಕ್ಕೆ ಸ್ನಿಗ್ಧೋಷ್ಣ ಉಪಚಾರ

(ಚ. 528)

ಕಫ ಹೋಗುವದು ಅತಿಯಾದಾಗ್ಗೆ, ಆ ಕಫವನ್ನು ಹೊರಗೆ ಹಾಕುವದು ವಾಯುವಾದ್ದರಿಂದ, ಪಂಡಿತನಾದವನು ಅಂಥಾ ಕಫಪ್ರಸೇಕವನ್ನು ಸ್ನಿಗ್ಧ ಮತ್ತು ಉಷ್ಣವಾದ ಔಷಧೋಪಚಾರಗಳಿಂದಲೇ ಜಯಿಸತಕ್ಕದ್ದು.

17. ವಿರೇಚನಕ್ಕೆ ಯೋಗಗಳು

. . . . . ವಿರೇಚನಂ ದದ್ಯಾತ್ ತ್ರಿವೃಚ್ಛಾಮಾನ್ಯಪದ್ರುಮಾನ್ |
ಶರ್ಕರಾಮಧುಸರ್ಪಿರ್ಭಿಃ ಪಯಸಾ ತರ್ಪಣೇನ ವಾ ||
ದ್ರಾಕ್ಷಾವಿದಾರೀಕಾಶ್ಮರ್ಯಮಾಂಸಾನಾಂ ವಾ ರಸೈರ್ಯುತಾನ್

(ವಾ 284)

ವಿರೇಚನಕ್ಕೆ ಬಿಳೇತಿಗಡೆ, ಕರೀತಿಗಡೆ, ಕಕ್ಕೆಮರನಕಾಯಿ, ಇವುಗಳೊಳಗೊಂದನ್ನು, ತುಪ್ಪ, ಜೇನು ಮತ್ತು ಸಕ್ಕರೆ ಕೂಡಿಸಿಕೊಂಡು, ಹಾಲಿನೊಂದಿಗೆ ಅಥವಾ ತರ್ಪಣಕರವಾದ ಕಷಾಯ, ಗಂಜಿ ಮುಂತಾದ್ದರೊಂದಿಗೆ, ಅಥವಾ ದ್ರಾಕ್ಷೆ, ನೆಲಕುಂಬಳಗಡ್ಡೆ, ಕಾಶ್ಮೀರದ ಹಣ್ಣು, ಮಾಂಸ ಇವುಗಳಲ್ಲೊಂದರ ರಸದೊಂದಿಗೆ ಕೊಡತಕ್ಕದ್ದು.

ಷರಾ ಶರ್ಕರಾದಿಗಳೊಳಗೆ ಪಿತ್ತ ವಿಶೇಷವಿರುವಲ್ಲಿ ಸಕ್ಕರೆಯನ್ನೂ, ಕಫ ಹೆಚ್ಚಿದ್ದಾಗ ಜೇನನ್ನೂ, ವಾತ ಹೆಚ್ಚು ಇದ್ದಾಗ ತುಪ್ಪವನ್ನೂ, ಪ್ರಮಾಣದಲ್ಲಿ ಹೆಚ್ಚಿಸಿ ಕೊಡುವದು

18. ಅನ್ನಪಾನಗಳು

ಶುದ್ಧಕೋಷ್ಠಸ್ಯ ಯುಂಜೀತ ವಿಧಿಂ ಬೃಂಹಣದೀಪನಮ್ |
ಹೃದ್ಯಾನಿ ಚಾನ್ನಪಾನಾನಿ ವಾತಘ್ನಾನಿ ಲಘೂನಿ ಚ ||
ಶಾಲಿಷಷ್ಟಿಕಗೋಧೂಮಯವಮುದ್ಗಂ ಸಮೋಚಿತಮ್ |
ಆಜಂ ಕ್ಷೀರಂ ಘೃತಂ ಮಾಂಸಂ ಕ್ರವ್ಯಾನ್ಮಾಂಸಂ ಚ ಶೋಷಜಿತ್ ||

(ವಾ 284)

(ವಾಂತಿ-ವಿರೇಚನಗಳಿಂದ) ಹೊಟ್ಟೆ ಶುದ್ಧವಾದ ಮೇಲೆ, ಬೃಂಹಣರೂಪವಾದ ಮತ್ತು ಅಗ್ನಿದೀಪನಕರವಾದ ವಿಧಿಯನ್ನೂ, ವಾತಹರವಾದ, ಲಘುವಾದ ಮತ್ತು ಹಿತವಾದ ಅನ್ನಪಾನಗಳನ್ನೂ ಉಪಯೋಗಿಸತಕ್ಕದ್ದು. ಒಂದು ವರ್ಷಕ್ಕೆ ಹಳೇದಾದ ಶಾಲ್ಯಕ್ಕಿ, ಷಷ್ಟಿಕ ಅಕ್ಕಿ (60 ದಿನಗಳ ಬೆಳಿಕೆಯದು), ಗೋದಿ, ಯವಗೋದಿ ಮತ್ತು ಸಣ್ಣ ಹೆಸರು, ಆಡಿನ ಹಾಲು, ಆಡಿನ ತುಪ್ಪ, ಆಡಿನ ಮಾಂಸ ಮತ್ತು ಮಾಂಸಾಶಿವರ್ಗದ ಮೃಗಗಳ ಮಾಂಸ, ಇವು ಶೋಷರೋಗವನ್ನು ಗೆಲ್ಲತಕ್ಕಂಥವು.

ಷರಾ ನವಿಲಿನ ಮಾಂಸವನ್ನೂ, ನವಿಲು ಎಂತ ಹೇಳಿ, ಹದ್ದುಗೂಗೆಗಳ ಮಾಂಸವನ್ನೂ, ತಿತ್ತಿರಿ ಎಂತ ಹೇಳಿ, ಕಾಗೆಯ ಮಾಂಸವನ್ನೂ, ಮೊಲ ಎಂತ ಹೇಳಿ ನರಿಯ ಮರಿಯ ಮಾಂಸವನ್ನೂ, ಜಿಂಕೆ ಎಂತ ಹೇಳಿ, ಸಿಂಹ, ಹುಲಿ ಮುಂತಾದ ಮಾಂಸಾಶಿ ಮೃಗಗಳ ಮಾಂಸವನ್ನೂ, ಎಮ್ಮೆ ಎಂತ ಹೇಳಿ, ಆನೆ, ಖಡ್ಗಮೃಗ, ಕುದುರೆಗಳ ಮಾಂಸವನ್ನೂ, ಹೀಗೆ ಮಾಂಸವೃದ್ಧಿಮಾಡತಕ್ಕಂಥ ಮೃಗಪಕ್ಷಿಗಳ ಮಾಂಸವನ್ನು ರೋಗಿಯು ಅಸಹ್ಯಪಡದ ಹಾಗೆ ಬೇರೆಬೇರೆ ನೆವನದಿಂದ ಹುರಿದೋ, ಸೂಪ (ತೋವೆ) ಮಾಡಿಯೋ, ಚಟ್ಣಿ ಮಾಡಿಯೋ, ಕೊಡತಕ್ಕದ್ದೆಂತ ಚರಕ ವರ್ಣಿಸಿದ್ದಾನೆ (ಪು 530).

19. ನೆಗಡಿ ಮುಂತಾದ ಆರು ಉಪದ್ರವಗಳಿಗೆ ಪ್ರತಿಕ್ರಿಯೆ

ಪ್ರತಿಶ್ಯಾಯೇ ಶಿರಃಶೂಲೇ ಕಾಸೇ ಶ್ವಾಸೇ ಸ್ವರಕ್ಷಯೇ |
ಪಾರ್ಶ್ವಶೂಲೇ ಚ ವಿವಿಧಾಃ ಕ್ರಿಯಾಃ ಸಾಧಾರಣೀಃ ಶೃಣು ||
ಪೀನಸೇ ಸ್ವೇದಮಭ್ಯಂಗಂ ಧೂಮಮಾಲೇಪನಾನಿ ಚ |
ಪರಿಷೇಕಾವಗಾಹಾಂಶ್ಚ ಯಾವಕಂ ವಾಟ್ಯಮೇವ ಚ ||
ಲವಣಾಮ್ಲಕಟೂಷ್ಣಾಂಶ್ಚ ರಸಾನ್ ಸ್ನೇಹೋಪಸಂಹಿತಾನ್ |
ಲಾವತಿತ್ತಿರಿದಕ್ಷಾಣಾಂ ವರ್ತಕಾನಾಂ ಚ ಕಲ್ಪಯೇತ್ ||
ಸಪಿಪ್ಪಲೀಕಂ ಸಯವಂ ಸಕುಲತ್ಥಂ ಸನಾಗರಮ್ |
ದಾಡಿಮಾಮಲಕೋಪೇತಂ ಸ್ನಿಗ್ಧಮಾಜಂ ರಸಂ ಪಿಬೇತ್ ||

ತೇನ ಷಡ್ವಿನಿವರ್ತನ್ತೇ ವಿಕಾರಾಃ ಪೀನಸಾದಯಃ |
ಮೂಲಕಾನಾಂ ಕುಲತ್ಥಾನಾಂ ಯೂಷೈರ್ವಾ ಸೂಪಕಲ್ಪಿತೈಃ ||
ಯವಗೋಧೂಮಶಾಲ್ಯನ್ನೈರ್ಯಥಾಸಾತ್ಮ್ಯಮುಪಾಚರೇತ್ |
ಪಿಬೇತ್ಪ್ರಸಾದಂ ವಾರುಣ್ಯಾ ಜಲಂ ವಾ ಪಂಚಮೂಲಿಕಮ್ ||
ಧಾನ್ಯನಾಗರಸಿದ್ಧಂ ವಾ ತಾಮಲಕ್ಯಾಥ ವಾ ಶೃತಮ್ |
ಪರ್ಣಿನೀಭಿಶ್ಚತಸೃಭಿಸ್ತೇನ ಚಾನ್ನಾನಿ ಕಲ್ಪಯೇತ್ || (ಚ. 525-524)

ನೆಗಡಿ, ತಲೆಶೂಲೆ, ಕೆಮ್ಮು, ಉಬ್ಬಸ, ಸ್ವರಕ್ಷಯ, ಪಾರ್ಶ್ವಶೂಲೆ, ಇವುಗಳ ಪರಿಹಾರಕ್ಕೆ ನಾನಾ ವಿಧವಾದ ಸಾಮಾನ್ಯಪ್ರಯೋಗಗಳು ಹೇಳಲ್ಪಡುತ್ತವೆ. ನೆಗಡಿಯಲ್ಲಿ ಬೆವರಿಸುವದು, ಅಭ್ಯಂಗ, ಧೂಮಪಾನ, ಲೇಪ, ಪರಿಷೇಕ, ಸ್ನಾನ ಸಹ ವಿಧಿಪ್ರಕಾರ ಮಾಡಿಸಬೇಕು; ಮತ್ತು ಯವೆಗೋದಿಯ ವಡೆಯನ್ನೂ, ಲಾವ, ತಿತ್ತಿರಿ, ದಕ್ಷ (ಕೋಳಿ), ವರ್ತಕ (ಬಾತು), ಎಂಬ ಪಕ್ಷಿಗಳ ಮಾಂಸದಿಂದ ಉಪ್ಪು-ಹುಳಿ-ಕಾರಗಳನ್ನೂ ಸ್ನೇಹವನ್ನೂ ಕೂಡಿಸಿ ಮಾಡಿದ ಬಿಸಿಯಾಗಿರುವ ರಸಗಳನ್ನೂ ಕೊಡುವದು; ಹಿಪ್ಪಲಿ, ಯವೆಗೋದಿ, ಹುರುಳಿ, ಶುಂಠಿ, ದಾಳಿಂಬದ ಹಣ್ಣು, ನೆಲ್ಲಿಕಾಯಿ ಮತ್ತು ಸ್ನೇಹ ಇವುಗಳ ಕೂಡಿಕೆಯಿಂದ ತಯಾರಿಸಿದ ಆಡಿನ ಮಾಂಸದ ರಸ(ಷಡಂಗಯೂಷ)ವನ್ನು ಕುಡಿಯಬೇಕು; ಇದರಿಂದ (ಮೇಲೆ ಹೇಳಿದ) ನೆಗಡಿ ಮುಂತಾದ ಆರು ವಿಕಾರಗಳು ವಾಸಿಯಾಗುವವು. ಮುಲ್ಲಂಗಿಗಡ್ಡೆ ಅಥವಾ ಹುರುಳಿಯಿಂದ ಚಂದವಾಗಿ ತಯಾರಿಸಿದ ಸಾರುಗಳಿಂದ ಯವೆ, ಗೋದಿ, ಶಾಲ್ಯಕ್ಕಿ, ಇವುಗಳೊಳಗೆ ಯಾವದು ಹಿತವೋ ಅದರ ಅನ್ನವನ್ನು ಉಣ್ಣಕೊಡಬೇಕು. ವಾರುಣೀ ಎಂಬ ಮದ್ಯದ (ಮೇಲಿನ ನೀರು) ಮಂಡವನ್ನಾಗಲಿ, (ಬೃಹತ್) ಪಂಚಮೂಲಗಳನ್ನು, ಅಥವಾ ಶುಂಠಿ ಮತ್ತು ಕೊತ್ತಂಬರಿಗಳನ್ನೂ, ಅಥವಾ ನೆಲನೆಲ್ಲಿಯನ್ನೂ, ಅಥವಾ ಓರೆಲೆ ಬೇರು, ಮೂವೆಲೆ ಬೇರು, ಕಾಡು ಹೆಸರಿನ ಬೇರು, ಕಾಡು ಉದ್ದಿನ ಬೇರು, ಇವು ನಾಲ್ಕನ್ನು ಕೂಡಿಸಿ, ಕಾಯಿಸಿದ ನೀರನ್ನಾಗಲಿ ಕುಡಿಯಲಿಕ್ಕೆ ಕೊಡಬೇಕು; ಮತ್ತು ಅದರಿಂದ ಆಹಾರಗಳನ್ನು ತಯಾರಿಸಿ ಉಣ್ಣಿಸಬೇಕು.

ಷಡಂಗಯೂಷದ ವಿಧಾನ

ದ್ರವ್ಯತೋ ದ್ವಿಗುಣಂ ಮಾಂಸಂ ಸರ್ವತೋऽಷ್ಟಗುಣಂ ಜಲಮ್ |
ಪಾದಸ್ಥಂ ಸಂಸ್ಕೃತಂ ಚಾಜ್ಯಂ ಷಡಂಗೋ ಯೂಷ ಉಚ್ಯತೇ ||
(ಚಿ ಸಾ. ಸಂ. 223)

ದ್ರವ್ಯಕ್ಕೆ ಎರಡು ಪಾಲು ಮಾಂಸ, ಎಲ್ಲದಕ್ಕೆ ಎಂಟು ಪಾಲು ನೀರು, ಇವುಗಳನ್ನು ಕೂಡಿಸಿ, ಕಾಲುಪಾಲು ಉಳಿಯುವ ಹಾಗೆ ಬೇಯಿಸಿ, ಅದಕ್ಕೆ ಆಡಿನ ತುಪ್ಪದಿಂದ ಒಗ್ಗರಣೆ ಕೊಡುವದು. ಇದು ಷಡಂಗಯೂಷ ಎಂತ ಹೇಳಲ್ಪಡುತ್ತದೆ.

ಪರಾ ಮೇಲೆ ಹೇಳಿದ ಪಿಪ್ಪಲ್ಯಾದಿ ಷಡಂಗಯೂಷವನ್ನು ಈ ಕ್ರಮದಿಂದ ತಯಾರಿಸಬೇಕು 'ವಾರುಣೀ'ಯ ವರ್ಣನೆ ಹಿಂದೆ 'ಪಾನಾತ್ಯಯ' ಅಧ್ಯಾಯದ 21ನೇ ಸಂಖ್ಯೆಯ ಅಡಿ ಕೊಟ್ಟದೆ

20. ತೂಲಿಗೆ ಶಾಕ

ಕೃಶರೋತ್ಕಾರಿಕಾಮಾಷಕುಲತ್ಥಯವಪಾಯಸೈಃ |
ಸಂಕರಸ್ವೇದವಿಧಿನಾ ಕಂಠಂ ಪಾರ್ಶ್ವಮುರಃ ಶಿರಃ ||
ಸ್ವೇದಯೇತ್ | (ಚ. 524)

ಕೃಶರಾ, ಉತ್ಕಾರಿಕಾ, ಮತ್ತು ಉದ್ದಿನ ಅಥವಾ ಹುರುಳಿಯ ಅಥವಾ ಯವೆಯ ಪಾಯಸ, ಇವುಗಳಿಂದ ಕುತ್ತಿಗೆ, ಪಕ್ಕಗಳು, ಎದೆ ಮತ್ತು ತಲೆ, ಈ ಸ್ಥಾನಗಳಲ್ಲಿ ಸಂಕರ ಸ್ವೇದಕ್ರಮದಿಂದ ಬೆವರಿಸಬೇಕು.

ಷರಾ: ಕೃಶರಾ, ಉತ್ಕಾರಿಕಾ, ಸಂಕರಸ್ವೇದ, ಇವುಗಳ ವ್ಯಾಖ್ಯಾನಗಳು 1ನೇ ಭಾಗ XIX-74ರ ಅಡಿ ಕಾಣುತ್ತವೆ.

21. ಶತಪುಷ್ಪಾ ಸಮಧುಕಂ ಕುಷ್ಠಂ ತಗರಚನ್ದನಮ್ ।
ಆಲೇಪನಂ ಸ್ಯಾತ್ ಸಘೃತಂ ಶಿರಃಪಾರ್ಶ್ವಾಂಸಶೂಲನುತ್ ॥
ಶೂಲೆಗಳಿಗೆ ಲೇಪಗಳು.
ಬಲಾರಾಸ್ನಾತಿಲಾಃ ಸರ್ಪಿರ್ಮಧುಕಂ ನೀಲಮುತ್ಪಲಮ್ ।
ಪಲಂಕಷಾ ದೇವದಾರು ಚನ್ದನಂ ಕೇಶರಂ ಘೃತಮ್ ॥
ವೀರಾ ಬಲಾ ವಿದಾರೀ ಚ ಕೃಷ್ಣಗಂಧಾ ಪುನರ್ನವಾ ।
ಶತಾವರೀ ಪಯಸ್ಯಾ ಚ ಕತ್ತೃಣಂ ಮಧುಕಂ ಘೃತಮ್ ॥
ಚತ್ವಾರ ಏತೇ ಶ್ಲೋಕಾರ್ಧೈಃ ಪ್ರದೇಹಾಃ ಪರಿಕೀರ್ತಿತಾಃ ।
ಶಸ್ತಾಃ ಸಂಸೃಷ್ಟದೋಷಾಣಾಂ ಶಿರಃಪಾರ್ಶ್ವಾಂಸಶೂಲಿನಾಮ್ ॥
(ಚ. 524-525)

ಸಬ್ಬಸಿಗೆ ಬೀಜ, ಜ್ಯೇಷ್ಠಮಧು, ಚಂಗಲಕೋಷ್ಠ, ತಗರ, ಶ್ರೀಗಂಧ, ಇವುಗಳ ಚೂರ್ಣ ಮಾಡಿ ತುಪ್ಪದಲ್ಲಿ ಅರೆದು (ಆಲೇಪವಾಗಿ) ಲೇಪಿಸಿದ್ದಲ್ಲಿ ತಲೆಶೂಲೆ, ಪಾರ್ಶ್ವಶೂಲೆ, ಮತ್ತು ಹೆಗಲ ಅಡಿಯ ಶೂಲೆ ಸಹ ಪರಿಹಾರವಾಗುವವು. ಕಲ್ಲಂಗಡಲೆ ಬೇರು (ಕಡೀರಬೇರು), ಅರತೆ (ರಾಸ್ನೆಗಡ್ಡೆ), ಎಳ್ಳು, ಜ್ಯೇಷ್ಠಮಧು, ನೀಲತಾವರೆ, ತುಪ್ಪ, ಇವುಗಳನ್ನಾಗಲೀ, ಗುಗ್ಗುಳ, ತುಪ್ಪದೇವದಾರ, ಶ್ರೀಗಂಧ, ನಾಗಕೇಸರ, ತುಪ್ಪ, ಇವುಗಳನ್ನಾಗಲೀ, ಕ್ಷೀರಕಾಕೋಲಿ, ಕಲ್ಲಂಗಡಲೆ ಬೇರು, ನೆಲಕುಂಬಳ ಗಡ್ಡೆ, ನುಗ್ಗೆಬೇರು, ಪುನರ್ನವಿ, ಇವುಗಳನ್ನಾಗಲೀ, ಶತಾವರೀ, ಕ್ಷೀರಕಾಕೋಲಿ, ಸಂಬಾರಹುಲ್ಲು, ಜ್ಯೇಷ್ಠಮಧು, ತುಪ್ಪ, ಇವುಗಳನ್ನಾಗಲೀ, ಪ್ರದೇಹಲೇಪವಾಗಿ ಉಪಯೋಗಿಸುವದು; ಈ ಯೋಗಗಳು ಮಿಶ್ರದೋಷಗಳುಳ್ಳ ತಲೆಶೂಲೆ, ಪಾರ್ಶ್ವಶೂಲೆ, ಹೆಗಲಡಿಶೂಲೆ, ಇವುಗಳ ಪರಿಹಾರಕ್ಕೆ ಪ್ರಶಸ್ತವಾದವು.

ಷರಾ: ಆಲೇಪ, ಪ್ರದೇಹಗಳ ಭೇದಕ್ಕೆ 1ನೇ ಭಾಗದ XXIII-14 ನೋಡಿ. 'ಕೇಸರ'ದ ಸ್ಥಾನದಲ್ಲಿ ವಾಗ್ಭಟನು ಜ್ಯೇಷ್ಠಮಧುವನ್ನು ಹೇಳಿದ್ದಾನೆ (ಅ. ಸಂ. II-154).

ಪ್ರದೇಹಃ ಸಘೃತಶ್ಶ್ರೇಷ್ಠಃ ಪದ್ಮಕೋಶೀರಚಂದನೈಃ ।
ದೂರ್ವಾಮಧುಕಮಂಜಿಷ್ಠಾಕೇಶರೈರ್ವಾ ಘೃತಾಪ್ಲುತೈಃ ॥
ಪ್ರಪೌಂಡರೀಕನಿರ್ಗುಂಡೀಪದ್ಮಕೇಶರಮುತ್ಪಲಮ್ ।
ಕಶೇರುಕಾಃ ಪಯಸ್ಯಾ ಚ ಸಸರ್ಪಿಷ್ಕಂ ಪ್ರಲೇಪನಮ್ ॥
ಚನ್ದನಾದ್ಯೇನ ತೈಲೇನ ಶತಧೌತೇನ ಸರ್ಪಿಷಾ ।
ಅಭ್ಯಂಗಃ ಪಯಸಾ ಸೇಕಃ ಶಸ್ತಶ್ಚ ಮಧುಕಾಂಬುನಾ ॥ (ಚ. 525)

ಪದ್ಮಕ, ಲಾವಂಚ, ಚಂದನ, ಇವುಗಳಿಂದ, ಅಥವಾ ದೂರ್ವೆ, ಜ್ಯೇಷ್ಠಮಧು, ಮಂಜಿಷ್ಠ, ನಾಗಕೇಸರ, ಇವುಗಳಿಂದ, ತುಪ್ಪ ಕೂಡಿಸಿ ಮಾಡಿದ ಪ್ರದೇಹಲೇಪವು ಹಿತವಾಗುತ್ತದೆ.

ಪುಂಡರೀಕ, ಕರಿನುಕ್ಕಿ, ತಾವರೆಕೇಸರ, ನೀಲತಾವರೆ, ಸೇಕಿನ ಗಡ್ಡೆ (ಮಲ. ನೀರ್‌ಮುತ್ತಂಬ), ಕ್ಷೀರಕಾಕೋಲಿ, ಇವುಗಳ ಚೂರ್ಣಮಾಡಿ, ತುಪ್ಪದಲ್ಲಿ ಅರದು ಲೇಪಿಸುವದು,—ಚಂದನಾದಿ ತೈಲದಿಂದ ಅಥವಾ ನೂರು ಸರ್ತಿ ತೊಳೆದ ತುಪ್ಪದಿಂದ ಅಭ್ಯಂಗಮಾಡುವದು,—ಅಥವಾ ಹಾಲಿನಿಂದ ಅಥವಾ ಜ್ಯೇಷ್ಠಮಧುವಿನ ಕಷಾಯನೀರಿನಿಂದ ಧಾರೆ ಹಿಡಿಯುವದು,—ಇವು ಸಹ ಮೇಲೆ ಹೇಳಲ್ಪಟ್ಟ ಶೂಲೆಗಳ ಪರಿಹಾರಕ್ಕೆ ಪ್ರಶಸ್ತವಾದವು.

ಷರಾ ತುಪ್ಪವನ್ನು ಕರಗಿಸಿ, ಅದಕ್ಕೆ ತಣ್ಣೀರು ಕೂಡಿಸಿ ಗಟ್ಟಿಯಾದ ಮೇಲೆ ನೀರನ್ನು ತೆಗೆದುಬಿಡುವದು, ಈ ರೀತಿ ಒಂದು ನೂರು ಸರ್ತಿ ತೊಳೆದದ್ದು 'ಶತಧೌತಘೃತ'.

22. ನಾವನಂ ಧೂಮಪಾನಾನಿ ಸ್ನೇಹಾಶ್ಚೋತ್ತರಭಕ್ತಿಕಾಃ ।
ತೈಲಾನ್ಯಭ್ಯಂಗಯೋಗಾನಿ ಬಸ್ತಿಕರ್ಮ ತಥಾ ಪರಮ್ ॥ (ಚ. 525)

ನಸ್ಯಾದಿಗಳ ಉಪಯೋಗ

ನಸ್ಯ, ಧೂಮಪಾನಗಳು, ಊಟವಾದನಂತರ ಉಪಯೋಗಿಸಲ್ಪಡುವ ಸ್ನೇಹಗಳು, ತೈಲಗಳು, ಅಭ್ಯಂಗ ಯೋಗಗಳು ಮತ್ತು ಬಸ್ತಿಕರ್ಮ, (ತ್ರಿವಿಧ ಶೂಲೆ ನಿವಾರಣಕ್ಕೆ) ಉತ್ತಮ.

ನಸ್ಯಕ್ಕೆ ಬಲಾದಿ ಘೃತ

ಬಲಾವಿದಾರಿಗನ್ಧಾಭ್ಯಾಂ ವಿದಾರ್ಯಾ ಮಧುಕೇನ ಚ ।
ಸಿದ್ಧಂ ಸಲವಣಂ ಸರ್ಪಿರ್ನಸ್ಯಂ ಸ್ವರ್ಯಮನುತ್ತಮಮ್ ॥ (ವಾ. 287)

ಕಲ್ಲಂಗಡಲೆಬೇರು, ಮೂವೆಲೆಬೇರು, ನೆಲಕುಂಬಳಗಡ್ಡೆ ಮತ್ತು ಜ್ಯೇಷ್ಠ ಮಧು, ಇವುಗಳ ಕಷಾಯದಿಂದ ಸೈಂಧವಲವಣ ಕೂಡಿಸಿ ತಯಾರಿಸಿದ ತುಪ್ಪವನ್ನು ನಸ್ಯಮಾಡುವದು ಸ್ವರದೋಷದ ಪರಿಹಾರಕ್ಕೆ ಉತ್ತಮವಾದದ್ದು.

23. ಜಲೌಕಾಲಾಬುಶೃಂಗೈರ್ವಾ ಪ್ರದುಷ್ಟಂ ವ್ಯಧನೇನ ವಾ ।
ಶಿರಃಪಾರ್ಶ್ವಾಂಸಶೂಲೇಷು ರುಧಿರಂ ತಸ್ಯ ನಿರ್ಹರೇತ್ ॥ (ಚ. 525)

ರಕ್ತಮೋಕ್ಷಣ

ತಲೆಶೂಲೆ, ಪಾರ್ಶ್ವಶೂಲೆ, ಹೆಗಲಡಿಶೂಲೆ ಸಂಗತಿಯಲ್ಲಿ ಜಿಗಳೆ, ಸೋರೆಕಾಯಿ, ಅಥವಾ ಕೋಡನ್ನು ಕಚ್ಚಿಸಿ, ಅಥವಾ ಚುಚ್ಚುವದರಿಂದ, ಕೆಟ್ಟರಕ್ತವನ್ನು ತೆಗೆದು ಬಿಡಬೇಕು.

ಷರಾಃ ರಕ್ತಮೋಕ್ಷಣಕ್ರಮ 1ನೇ ಭಾಗದ XXVIIನೇ ಅಧ್ಯಾಯದಲ್ಲಿ ವರ್ಣಿಸಲ್ಪಟ್ಟದೆ ಪಿತ್ತದೋಷವಿದ್ದಲ್ಲಿ ಜಿಗಳೆಯನ್ನೂ, ಕಫದೋಷದಲ್ಲಿ ಸೋರೆಕಾಯಿಯನ್ನೂ, ವಾತದಲ್ಲಿ ಕೊಂಬನ್ನೂ ಉಪಯೋಗಿಸತಕ್ಕದ್ದು 1ನೇ ಭಾಗದ XXVII-2 ನೋಡಿ

24. ಶಿರಃಪಾರ್ಶ್ವಾಂಸಶೂಲಘ್ನಂ ಕಾಸಶ್ವಾಸನಿಬರ್ಹಣಮ್ ।
ಪ್ರಯುಜ್ಯಮಾನಂ ಬಹುಶೋ ಘೃತಂ ಚೋತ್ತರಭಕ್ತಿಕಮ್ ॥
ದಶಮೂಲೇನ ಪಯಸಾ ಸಿದ್ಧಂ ಮಾಂಸರಸೇನ ಚ ।
ಬಲಾಗರ್ಭಂ ಘೃತಂ ಸದ್ಯೋ ರೋಗಾನೇತಾನ್ ಪ್ರಬಾಧತೇ ॥
(ಚ. 525-526)

ದಶಮೂಲಾದಿ ಘೃತ

(ತಕ್ಕದಾದ) ತುಪ್ಪವನ್ನು ಕಾಯಿಸಿಟ್ಟುಕೊಂಡು ಪದೇಪದೇ ಊಟದನಂತರ ಉಪಯೋಗಿಸುತ್ತಾ ಬಂದಲ್ಲಿ, ತಲೆಯ, ಪಾರ್ಶ್ವಗಳ ಮತ್ತು ಹೆಗಲಡಿಯ ಶೂಲೆಗಳು ಪರಿಹಾರವಾಗುತ್ತವಲ್ಲದೆ ಕೆಮ್ಮು ಮತ್ತು ಉಬ್ಬಸ ಕಡಿಮೆಯಾಗುವವು. ದಶಮೂಲಗಳ ಕಷಾಯ, ಹಾಲು, ಮಾಂಸರಸ, ಇವುಗಳನ್ನೂ, (ಕಲ್ಕವಾಗಿ) ಕಲ್ಲಂಗಡಲೆ ಬೇರನ್ನೂ, ಕೂಡಿಸಿ ಕಾಯಿಸಿದ ತುಪ್ಪವು ಮೇಲೆ ಹೇಳಿದ ರೋಗಗಳನ್ನು ಕೂಡಲೆ ಬಾಧಿಸುತ್ತದೆ.

ಖರ್ಜೂರ ದ್ರಾಕ್ಷೆಗಳ ಉಪಯೋಗ

25. ಘೃತಂ ಖರ್ಜೂರಮೃದ್ವೀಕಾಶರ್ಕರಾಕ್ಷೌದ್ರಸಂಯುತಮ್ ।
ಸಪಿಪ್ಪಲೀಕಂ ವೈಸ್ವರ್ಯಕಾಸಶ್ವಾಸನಿಬರ್ಹಣಮ್ ॥

(ಚ. 526)

ಖರ್ಜೂರ, ದ್ರಾಕ್ಷೆ, ಜೇನು, ಸಕ್ಕರೆ, ತುಪ್ಪ, ಇವುಗಳನ್ನು ಅರದು ಹಿಪ್ಪಲಿಪುಡಿ ಕೂಡಿಸಿಟ್ಟುಕೊಂಡು ಸೇವಿಸುತ್ತಾ ಬಂದಲ್ಲಿ, ಸ್ವರಭಂಗ, ಕೆಮ್ಮು, ಉಬ್ಬಸ, ಸಹ ಪರಿಹಾರವಾಗುವವು.

ಹಾಲುಕಷಾಯಗಳಿಂದ ತೆಗೆದ ಹೊಸ ತುಪ್ಪಗಳು

26. ದಶಮೂಲಶೃತಾತ್ ಕ್ಷೀರಾತ್ ಸರ್ಪಿರ್ಯದುದಿಯಾನ್ನವಮ್ ।
ಸಪಿಪ್ಪಲೀಕಂ ಸಕ್ಷೌದ್ರಂ ತತ್ಪರಂ ಸ್ವರಬೋಧನಮ್ ॥
ಶಿರಃಪಾರ್ಶ್ವಾಂಸಶೂಲಘ್ನಂ ಕಾಸಶ್ವಾಸಜ್ವರಾಪಹಮ್ ।
ಪಂಚಭಿಃ ಪಂಚಮೂಲೈರ್ವಾ ಶೃತಾದ್ಯದುದಿಯಾದ್ ಘೃತಮ್ ॥

(ಚ. 526)

ಹಾಲಿಗೆ ದಶಮೂಲಗಳ ಚೂರ್ಣವನ್ನು ಹಾಕಿ ಕಾಯಿಸಿ ಬತ್ತಿಸಿದ್ದಲ್ಲಿ ಉಂಟಾಗುವ ಹೊಸತುಪ್ಪವನ್ನು, ಹಿಪ್ಪಲಿಪುಡಿಯನ್ನೂ ಜೇನನ್ನೂ ಕೂಡಿಸಿಕೊಂಡು, ಸೇವಿಸುವದು ಬಿದ್ದ ಸ್ವರವನ್ನು ಚುರುಕುಮಾಡುವದಕ್ಕೆ ಉತ್ತಮವಾದದ್ದು ಮತ್ತು ಶಿರಃಪಾರ್ಶ್ವಾಂಸ ಶೂಲೆಗಳನ್ನೂ, ಕೆಮ್ಮು-ಜ್ವರ-ಉಬ್ಬಸಗಳನ್ನೂ ಪರಿಹರಿಸುತ್ತದೆ. ಪಂಚವಿಧವಾದ ಪಂಚಮೂಲಗಳನ್ನು ಹಾಲಿಗೆ ಹಾಕಿ ಕಾಯಿಸಿ, ಅದರಿಂದ ಅದೇ ರೀತಿ ತೆಗೆದ ತುಪ್ಪಕ್ಕೂ ಅದೇ ಗುಣಗಳು ಇರುತ್ತವೆ.

ಪರಾ ಪಂಚ ಪಂಚಮೂಲಗಳ ವಿವರಣಕ್ಕೆ ಉಪೋದ್ಘಾತದ ಒಂದನೇ ಪರಿಶಿಷ್ಟದ ಸಂ 32 – 36 ನೋಡಿ

ಖರ್ಜೂರಾದಿ, ತ್ರಿಫಲಾದಿ, ವೀರಾದಿ, ನಾಗರಾದಿ, ಲೇಹ ಯೋಗಗಳು

27. ಖರ್ಜೂರಂ ಪಿಪ್ಪಲೀ ದ್ರಾಕ್ಷಾ ಪಥ್ಯಾ ಶೃಂಗೀ ದುರಾಲಭಾ ।
ತ್ರಿಫಲಾ ಪಿಪ್ಪಲೀ ಮುಸ್ತಂ ಶೃಂಗಾಟೀಗುಡಶರ್ಕರಾಃ ॥
ವೀರಾ ಶಟೀ ಪುಷ್ಕರಾಖ್ಯಂ ಸುರಸಃ ಶರ್ಕರಾ ಗುಡಃ ।
ನಾಗರಂ ಚಿತ್ರಕೋ ಲಾಜಾಃ ಪಿಪ್ಪಲ್ಯಾಮಲಕಂ ಗುಡಃ ॥
ಶ್ಲೋಕಾರ್ಧೈರಭಿಹಿತಾನೇತಾನ್ ಲಿಹ್ಯಾನ್ನಾ ಮಧುಸರ್ಪಿಷಾ ।
ಕಾಸಶ್ವಾಸಾಪಹಾನ್ ಸ್ವರ್ಯಾನ್ ಪಾರ್ಶ್ವಶೂಲಾಪಹಾಂಸ್ತಥಾ ॥

(ಚ. 526)

1. ಖರ್ಜೂರ, ಹಿಪ್ಪಲಿ, ದ್ರಾಕ್ಷೆ, ಅಣಿಲೆಕಾಯಿ ಸಿಪ್ಪೆ, ಕರ್ಕಾಟಕಶೃಂಗಿ, ಬಳ್ಳಿತುರಚನ ಬೇರು; (2) ತ್ರಿಫಲೆ, ಹಿಪ್ಪಲಿ, ಭದ್ರಮುಷ್ಟಿ, ಶೃಂಗಾಟಿಕ (ಬಳ್ಳಿನೀರಾಟದ ಕಾಯಿ), ಸಕ್ಕರೆ, ಬೆಲ್ಲ, (3) ಕ್ಷೀರಕಾಕೋಲಿ, ಸಣ್ಣಕಚೋರ, ಪುಷ್ಕರಮೂಲ, ಬೂರುಗದ ಮೇಣ, ಸಕ್ಕರೆ, ಬೆಲ್ಲ; (4) ಶುಂಠಿ, ಚಿತ್ರಮೂಲ, ಅರಳು, ಹಿಪ್ಪಲಿ, ನೆಲ್ಲಿಚಟ್ಟು, ಮತ್ತು ಬೆಲ್ಲ; ಈ ನಾಲ್ಕು ಯೋಗಗಳ ಔಷಧಗಳ ಚೂರ್ಣವನ್ನು, ತುಪ್ಪದಲ್ಲಿ ಕಲಸಿ, ಜೇನು ಕೂಡಿಸಿಕೊಂಡು, ನೆಕ್ಕುವದರಿಂದ ಕೆಮ್ಮು, ಉಬ್ಬಸ, ಸ್ವರಭೇದ ಮತ್ತು ಪಾರ್ಶ್ವಶೂಲೆ ಪರಿಹಾರವಾಗುವವು.

28. ಸಿತೋಪಲಾಂ ತುಗಾಕ್ಷೀರೀಂ ಪಿಪ್ಪಲೀಂ ಬಹುಲಾಂ ತ್ವಚಮ್ |
ಅನ್ತ್ಯಾದೂರ್ಧ್ವಂ ದ್ವಿಗುಣಿತಂ ಲೇಹಯೇನ್ಮಧುಸರ್ಪಿಷಾ ||
ಸಿತೋಪಲಾದಿ ಚೂರ್ಣ
ಚೂರ್ಣಿತಂ ಪ್ರಾಶಯೇದ್ವಾ ತತ್ ಶ್ವಾಸಕಾಸಕಫಾತುರಮ್ |
ಸುಪ್ತಜಿಹ್ವಾರೋಚಕಿನಮಲ್ಪಾಗ್ನಿಂ ಪಾರ್ಶ್ವಶೂಲಿನಮ್ || (ಚ. 526)

ಒಂದು ಪಾಲು ಲವಂಗಪಟ್ಟೆ, ಎರಡು ಪಾಲು ಏಲಕ್ಕಿ, ನಾಲ್ಕು ಪಾಲು ಹಿಪ್ಪಲಿ, ಎಂಟು ಪಾಲು ಬಿದಿರುಪ್ಪು, ಹದಿನಾರು ಪಾಲು ಕಲ್ಲುಸಕ್ಕರೆ, ಇವುಗಳ ಚೂರ್ಣಮಾಡಿ, ಉಬ್ಬಸ, ಕೆಮ್ಮು, ಕಫಗಳಿಂದ ಪೀಡಿತನಾದವನಿಗೂ, ನಾಲಿಗೆ ನಿರ್ಜೀವವಾದವನಿಗೂ, ಅರುಚಿಯುಳ್ಳವನಿಗೂ, ಅಗ್ನಿಬಲ ಕಡಿಮೆಯಾದವನಿಗೂ, ಪಾರ್ಶ್ವಶೂಲೆಯುಳ್ಳವನಿಗೂ, ತುಪ್ಪ-ಜೇನುಗಳಲ್ಲಿ ಕಲಿಸಿ ನೆಕ್ಕಿಸಬೇಕು, ಅಥವಾ ಚೂರ್ಣವನ್ನೇ ತಿನ್ನಿಸಬೇಕು.

29. ಹಸ್ತಪಾದಾಂಗದಾಹೇಷು ಜ್ವರೇ ರಕ್ತೇ ತಥೋರ್ಧ್ವಗೇ |
ವಾಸಾಘೃತ-ಶತಾವರೀ ಘೃತಗಳ ಉಪಯೋಗ
ವಾಸಾಸರ್ಪಿಃ ಶತಾವರ್ಯಾ ಸಿದ್ಧಂ ವಾ ಪರಮಂ ಹಿತಮ್
(ಚ. 526-7)

ಹಸ್ತಗಳಲ್ಲಿ, ಪಾದಗಳಲ್ಲಿ ಮತ್ತು ಶರೀರದಲ್ಲಿ ಉರಿಕಂಡಾಗ್ಗೆ, ಜ್ವರದಲ್ಲಿ, ಮತ್ತು ರಕ್ತ ಮೇಲಕ್ಕೆ (ಬಾಯಿಗೆ) ಬಂದಾಗ್ಗೆ, (ರಕ್ತಪಿತ್ತಪ್ರಕರಣದಲ್ಲಿ ಹೇಳಲ್ಪಟ್ಟ) ವಾಸಾಘೃತವು, ಅಥವಾ (ಸ್ತ್ರೀ ರೋಗಪ್ರಕರಣದಲ್ಲಿ ಪ್ರದರಕ್ಕೆ ಉಕ್ತವಾದ) ಶತಾವರೀಘೃತವು ಅತ್ಯಂತ ಹಿತವಾಗುತ್ತದೆ.

30. ದುರಾಲಭಾಂ ಶ್ವದಂಷ್ಟ್ರಾಂ ಚ ಚತಸ್ರಃ ಪರ್ಣಿನೀರ್ಬಲಾಮ್ |
ಭಾಗಾನ್ ಪಲೋನ್ಮಿತಾನ್ ಕೃತ್ವಾ ಪಲಂ ಪರ್ಪಟಕಸ್ಯ ಚ ||
ಪಚ್ಚೇದ್ದಶಗುಣೇ ತೋಯೇ ದಶಭಾಗಾವಶೇಷಿತೇ |
ಗೋಕ್ಷುರಾದಿ ಘೃತ
ರಸೇ ಸುಪೂತೇ ದ್ರವ್ಯಾಣಾಮೇಷಾಂ ಕಲ್ಕಾನ್ ಸಮಾಪಯೇತ್ ||
ಶಟ್ಯಾಃ ಪುಷ್ಕರಮೂಲಸ್ಯ ಪಿಪ್ಪಲೀತ್ರಾಯಮಾಣಯೋಃ |
ತಾಮಲಕ್ಯಾಃ ಕಿರಾತಾನಾಂ ತಿಕ್ತಸ್ಯ ಕುಟಜಸ್ಯ ಚ ||
ಫಲಾನಾಂ ಶಾರಿವಾಯಾಶ್ಚ ಸುಪಿಷ್ಟಾನ್ ಕರ್ಷಸಮ್ಮಿತಾನ್ |
ತತಸ್ತೇನ ಘೃತಪ್ರಸ್ಥಂ ಕ್ಷೀರದ್ವಿಗುಣಿತಂ ಪಚೇತ್ |
ಜ್ವರಂ ದಾಹಂ ಭ್ರಮಂ ಕಾಸಮಂಸಪಾರ್ಶ್ವಶಿರೋರುಜಮ್ |
ತೃಷ್ಣಾಂ ಛರ್ದಿರ(?ಮ)ತೀಸಾರಮೇತಾನ್ ಸರ್ಪಿರಪೋಹತಿ || (ಚ. 527)

ಬಳ್ಳಿತುರಚನ ಬೇರು, ನೆಗ್ಗಿಲಮುಳ್ಳು, ಓರೆಲೆಬೇರು, ಮೂವೆಲೆಬೇರು, ಕಾಡು ಉದ್ದಿನ ಬೇರು, ಕಾಡು ಹೆಸರಿನ ಬೇರು, ಕಲ್ಲಂಗಡಲೆಬೇರು, ಪರ್ಪಟಕ, ಇವುಗಳನ್ನು ೧ ಪಲ ಪ್ರಕಾರ ಕೂಡಿಸಿ ಕುಟ್ಟಿ, ೧೦ ಪಾಲು ನೀರಿಟ್ಟು, ೧೦ನೆಯ ಒಂದು ಪಾಲು ಉಳಿಯುವಷ್ಟು ಕಷಾಯ ಮಾಡಿ, ಶೋಧಿಸಿ, ಅದಕ್ಕೆ ೧ ಪ್ರಸ್ಥ ತುಪ್ಪ, ೨ ಪ್ರಸ್ಥ ಹಾಲು ಮತ್ತು ಕಲ್ಕವಾಗಿ ಸಣ್ಣ ಕಚ್ಚೂರ, ಪುಷ್ಕರಮೂಲ, ಹಿಪ್ಪಲಿ, ತ್ರಾಯಮಾಣ, ನೆಲನೆಲ್ಲಿ, ಕಿರಾತಕಡ್ಡಿ, ಕಹಿಪಡುವಲ, ಇಂದ್ರಜೇವಿ, ನಾಮದಬೇರು (ಸುಗಂಧಿ), ಇವುಗಳನ್ನು ೧ ಕರ್ಷ ಪ್ರಕಾರ ತೆಗೆದುಕೊಂಡು

ಕುಟ್ಟಿ, ನುಣ್ಣಗಿನ ಚೂರ್ಣಮಾಡಿ ಕೂಡಿಸಿ, ಕಾಯಿಸಿದ ತುಪ್ಪದ ಸೇವನದಿಂದ ಜ್ವರ, ಉರಿ, ತಲೆತಿರುಕು, ಕೆಮ್ಮು, ಪಾರ್ಶ್ವಶೂಲೆ, ಹೆಗಲಡಿಶೂಲೆ, ತಲೆಶೂಲೆ, ಬಾಯಾರಿಕೆ, ವಾಂತಿ, ಅತಿ ಸಾರ, ಇವುಗಳು ಪರಿಹಾರವಾಗುವವು.

ಷರಾ 'ತ್ರಾಯಮಾಣ'ದ ಸ್ಥಾನದಲ್ಲಿ ಕಹಿದರಸೆಯನ್ನು ಉಪಯೋಗಿಸುವದುಂಟೆಂತ ಕಾಣುತ್ತದೆ

31. ಜೀವನ್ತೀಂ ಮಧುಕಂ ದ್ರಾಕ್ಷಾಂ ಫಲಾನಿ ಕುಟಜಸ್ಯ ಚ |
ಶಟೀಂ ಪುಷ್ಕರಮೂಲಂ ಚ ವ್ಯಾಘ್ರೀಂ ಗೋಕ್ಷುರಕಂ ಬಲಾಮ್ ||
ಜೀವನ್ತ್ಯಾದಿ ಘೃತ ನೀಲೋತ್ಪಲಂ ತಾಮಲಕೀಂ ತ್ರಾಯಮಾಣಾಂ ದುರಾಲಭಾಮ್ |
ಪಿಪ್ಪಲೀಂ ಚ ಸಮಂ ಪಿಷ್ಟ್ವಾ ಘೃತಂ ವೈದ್ಯೋ ವಿಪಾಚಯೇತ್ ||
ಏತದ್ವ್ಯಾಧಿಸಮೂಹಸ್ಯ ರೋಗೇಶಸ್ಯ ಸಮುತ್ಥಿತಮ್ |
ರೂಪಮೇಕಾದಶವಿಧಂ ಸರ್ಪಿರಗ್ರ್ಯಂ ವ್ಯಪೋಹತಿ || (ಚ. 527)

ಜೀವನ್ತಿಗಡ್ಡೆ, ಜ್ಯೇಷ್ಠಮಧು, ದ್ರಾಕ್ಷೆ, ಇಂದ್ರಜೀವಿ, ಸಣ್ಣಕಚ್ಚೂರ, ಪುಷ್ಕರಮೂಲ, ಕಿರಿಗುಳ್ಳದಬೇರು, ನೆಗ್ಗಿಲಮುಳ್ಳು, ಕಲ್ಲಂಗಡಲೆಬೇರು, ನೀಲತಾವರೆ, ನೆಲನೆಲ್ಲಿ, ತ್ರಾಯ ಮಾಣದ ಬೇರು, ಬಳ್ಳಿತುರಚನ ಬೇರು ಮತ್ತು ಹಿಪ್ಪಲಿ, ಇವುಗಳನ್ನು ಸಮಪಾಲು ಸೇರಿಸಿ ಚೂರ್ಣಮಾಡಿ, ವೈದ್ಯನು ತುಪ್ಪವನ್ನು ಕಾಯಿಸಬೇಕು. ಈ ಶ್ರೇಷ್ಠವಾದ ತುಪ್ಪವು ವ್ಯಾಧಿ ಸಮೂಹದ ಅರಸನಾದ ರಾಜಯಕ್ಷ್ಮದಿಂದ ಹುಟ್ಟಿದ ಹನ್ನೊಂದು ವಿಧವಾದ ರೂಪವನ್ನು ಪರಿಹರಿಸುತ್ತದೆ.

ಷರಾ ಈ ಯೋಗದಲ್ಲಿ ದ್ರವ ಹೇಳಲ್ಪಟ್ಟಿರುವದಿಲ್ಲ ಆದ್ದರಿಂದ ಸಾಮಾನ್ಯ ವಿಧಿಪ್ರಕಾರ 4 ಪಾಲಷ್ಟು ನೀರನ್ನು ಕೂಡಿಸತಕ್ಕದ್ದು (1 ನೇ ಭಾಗ XX, 40 ನೋಡಿ) ಬಹು ವ್ಯಾಖ್ಯಾನಕಾರರು ನಾಲ್ಕು ಪಾಲಷ್ಟು ಹಾಲು ಕೂಡಿಸು ವದಾಗಿ ಬರೆದದ್ದು ಕಾಣುತ್ತದೆ. ಆದರೆ ಔಷಧಗಳ ಸಾರ ಒಳ್ಳೇವಾಗಿ ಹೊರಟು ತುಪ್ಪದಲ್ಲಿ ಸೇರುವದಕ್ಕೆ ನೀರು ಅಗತ್ಯ

32. ಬಲಾಂ ಸ್ಥಿರಾಂ ಪೃಶ್ನಿಪರ್ಣೀಂ ಬೃಹತೀಂ ಸನಿದಿಗ್ಧಿಕಾಮ್ |
ಸಾಧಯಿತ್ವಾ ರಸೇ ತಸ್ಮಿನ್ ಪಯೋ ಗವ್ಯಂ ಸನಾಗರಮ್ ||
ಬಲಾದಿಘೃತ ದ್ರಾಕ್ಷಾಖರ್ಜೂರಸರ್ಪಿರ್ಭಿಃ ಪಿಪ್ಪಲ್ಯಾ ಚ ಶೃತಂ ಸಹ |
ಸಕ್ಷೌದ್ರಂ ಜ್ವರಕಾಸಘ್ನಂ ಸ್ವರ್ಯಂ ಚೈತತ್ ಪ್ರಯೋಜಯೇತ್ ||
(ಚ 527)

ಕಲ್ಲಂಗಡಲೆಬೇರು, ಮೂವೆಲೆಬೇರು, ಓರೆಲೆಬೇರು, ಗುಳ್ಳದ ಬೇರು, ಕಿರಿಗುಳ್ಳದ ಬೇರು, ಇವುಗಳ ಕಷಾಯ, ದನದ ಹಾಲು ಮತ್ತು ತುಪ್ಪ, ಇವುಗಳನ್ನು, ಶುಂಠಿ, ದ್ರಾಕ್ಷೆ, ಖರ್ಜೂರ, ಹಿಪ್ಪಲಿ, ಇವುಗಳ ಕಲ್ಕದೊಂದಿಗೆ, ಕಾಯಿಸಿ, ಆ ತುಪ್ಪವನ್ನು, ಜೇನು ಕೂಡಿಸಿಕೊಂಡು, ಜ್ವರ-ಕೆಮ್ಮುಗಳ ನಾಶನಕ್ಕೂ, ಸ್ವರವನ್ನುಂಟುಮಾಡುವದಕ್ಕೂ ಉಪಯೋಗಿಸಬೇಕು.

33. ಜ್ವರಾಣಾಂ ಶಮನೀಯೋ ಯಃ ಪೂರ್ವಮುಕ್ತಃ ಕ್ರಿಯಾವಿಧಿಃ |
ಶೋಷದ ಜ್ವರಕ್ಕೆ ಪ್ರತೀಕಾರ ಯಕ್ಷ್ಮಿಣಾಂ ಜ್ವರದಾಹೇಷು ಸಸರ್ಪಿಷ್ಕಃ ಪ್ರಶಸ್ಯತೇ || (ಚ. 527)

ಜ್ವರಗಳಿಗೆ ಶಮನಕರವಾದ ಪ್ರತೀಕಾರ ವಿಧಿ ಯಾವದು ಹೇಳಲ್ಪಟ್ಟದೋ, ಅದನ್ನು ತುಪ್ಪ ಕೂಡಿಸಿ ಪ್ರಯೋಗಿಸುವದು ಯಕ್ಷ್ಮರೋಗದವರ ಜ್ವರಗಳಲ್ಲಿಯೂ ಉರಿಗಳಲ್ಲಿಯೂ ಪ್ರಶಸ್ತವಾಗಿರುತ್ತದೆ.

'ಸಸರ್ಪಿಷ್ಕ' ಎಂಬಲ್ಲಿ 'ಸ ಸರ್ವೋಽಪಿ' ಎಂಬ ಪಾಠಾಂತರ ನಿ. ರ ದಲ್ಲಿ ಕಾಣುತ್ತದೆ ಅದರ ಪ್ರಕಾರ ತುಪ್ಪ ಕೂಡಿಸಿಕೊಳ್ಳಬೇಕೆಂಬ ವಿಶೇಷ ವಿಧಿ ಇಲ್ಲ ಎಂತ ಆಗುತ್ತದೆ. ಅದೇ ಸರಿಯಾಗಿರಬೇಕು ಜ್ವರಾದಿಗಳಲ್ಲಿ ಆಯಾ ರೋಗೋಕ್ತ ಚಿಕಿತ್ಸೆಯನ್ನು ನಡಿಸಬೇಕೆಂತ ಅ ಸಂ (ಪು II-155) ಹೇಳುತ್ತದೆ

34. ಶ್ಲೇಷ್ಮಣೋಽತಿಪ್ರಸೇಕೇ ತು ವಾಯುಃ ಶ್ಲೇಷ್ಮಾಣಮಸ್ಯತಿ ।
ಕಫಪ್ರಸೇಕಂ ತಂ ವಿದ್ವಾನ್ ಸ್ನಿಗ್ಧೋಷ್ಣೇನೈವ ನಿರ್ಜಯೇತ್ ॥
ಕಫ ಸುರಿಯುವ ದಕ್ಕೂ ವಾಂತಿಗೂ ಪ್ರತೀಕಾರ
ಕ್ರಿಯಾ ಕಫಪ್ರಸೇಕೇ ಯಾ ವಮ್ಯಾಂ ಸೈವ ಪ್ರಶಸ್ಯತೇ ।
ಹೃದ್ಯಾನಿ ಚಾನ್ನಪಾನಾನಿ ವಾತಘ್ನಾನಿ ಲಘೂನಿ ಚ ॥ (ಚ. 528)

ಕಫವು ಅತಿಯಾಗಿ ಸುರಿಯುವ ಸಂಗತಿಯಲ್ಲಿ ವಾಯುವು ಕಫವನ್ನು ಹೊರಗೆ ಎಸೆಯುವದಾಗಿರುತ್ತದೆ. ಆದ್ದರಿಂದ ಆ ಕಫಪ್ರಸೇಕವನ್ನು ಪಂಡಿತನು ಸ್ನಿಗ್ಧವೂ ಉಷ್ಣವೂ ಆದ ಪ್ರತೀಕಾರದಿಂದ ಗೆಲ್ಲತಕ್ಕದ್ದು. ಕಫಪ್ರಸೇಕಕ್ಕೆ ಹೇಳಲ್ಪಟ್ಟ ಪ್ರತೀಕಾರವೇ ವಾಂತಿಯಲ್ಲಿ ಪ್ರಶಸ್ತವಾಗಿರುತ್ತದೆ; ಮತ್ತು ಅನ್ನಪಾನಗಳು ಇಷ್ಟ, ವಾತಹರ, ಮತ್ತು ಲಘು ಆಗಿರಬೇಕು.

ಪಿಬೇದ್ವಾನ್ತಿಪ್ರಶಾನ್ತ್ಯರ್ಥಂ ಕ್ಷೌದ್ರಂ ಛಿನ್ನರುಹಾರಸಮ್ ।
ಮಾತುಲುಂಗಸ್ಯ ಮೂಲಂ ವಾ ಲಾಜಾಚೂರ್ಣಂ ಸಸೈನ್ಧವಮ್
ಪಿಪ್ಪಲೀಮಧುಸಂಯುಕ್ತಂ ಖಾದೇದ್ವಾನ್ತಿನಿವೃತ್ತಯೇ । (ನಿ ರ)

ವಾಂತಿಯ ಶಾಂತಿಗಾಗಿ ಅಮೃತಬಳ್ಳಿಯ ಕಷಾಯವನ್ನಾಗಲೀ, ಮಾದಳದ ಬೇರಿನ ಕಷಾಯವನ್ನಾಗಲೀ, ಜೇನು ಕೂಡಿಸಿಕೊಂಡು, ಕುಡಿಯಬೇಕು. ಭತ್ತದ ಅರಳಿನ ಚೂರ್ಣವನ್ನು, ಸೈಂಧವಲವಣದ ಮತ್ತು ಹಿಪ್ಪಲಿಯ ಪುಡಿ ಮತ್ತು ಜೇನು ಕೂಡಿಸಿಕೊಂಡು, ತಿಂದಲ್ಲಿ ವಾಂತಿ ನಿವೃತ್ತಿಯಾಗುತ್ತದೆ.

35. ಉಶೀರಂ ತಗರಂ ಶುಂಠೀ ಕಂಕೋಲಂ ಚಂದನದ್ವಯಮ್ ।
ಲವಂಗಂ ಪಿಪ್ಪಲೀಮೂಲಂ ಕೃಷ್ಣೈಲಾ ನಾಗಕೇಸರಮ್ ॥
ರಕ್ತವಾಂತಿಗೆ ಉಶೀರಾದಿ ಚೂರ್ಣ
ಮುಸ್ತಾಮಲಕಕರ್ಪೂರಂ ತವಕ್ಷೀರಂ ಚ ಪತ್ರಕಮ್ ।
ಕೃಷ್ಣಾಗರುಸಮಂ ಚೂರ್ಣಂ ಸಿತಾ ಸ್ಯಾದಷ್ಟಮಾಂಶತಃ ॥
ರಕ್ತವಾನ್ತಿಂ ಚ ಹೃತ್ತಾಪಂ ನಾಶಯೇನ್ನಾತ್ರ ಸಂಶಯಃ । (ಸಿ. ರ.)

ಲಾವಂಚ, ತಗರ, ಶುಂಠಿ, ಗಂಧ (ಬಾಲ) ಮೆಣಸು, ಶ್ರೀಗಂಧ, ರಕ್ತಚಂದನ, ಲವಂಗ, ಹಿಪ್ಪಲೀಮೂಲ, ಹಿಪ್ಪಲಿ, ಏಲಕ್ಕಿ, ನಾಗಕೇಸರ, ಭದ್ರಮುಷ್ಟಿ, ನೆಲ್ಲಿಚಟ್ಟು, ಪಚ್ಚೆಕರ್ಪೂರ, ಬಿದಿರುಪ್ಪು, ಅಡವಿದಾಲ್ಚಿನಿಯೆಲೆ (ಲವಂಗಪತ್ರೆ), ಕೃಷ್ಣಾಗರು, ಇವುಗಳನ್ನು ಸಮಭಾಗವಾಗಿ ತೆಗೆದುಕೊಂಡು, ವಸ್ತ್ರಗಾಲಿತ ಚೂರ್ಣಮಾಡಿ, ಆ ಚೂರ್ಣದ ತೂಕದ ಎಂಟನೇ ಒಂದು ಪಾಲಷ್ಟು ಕಲ್ಲುಸಕ್ಕರೆಯ ಪುಡಿಯನ್ನು ಬೆರಿಸಿಟ್ಟುಕೊಂಡು, ಸೇವಿಸಿದ್ದಲ್ಲಿ ರಕ್ತವಾಂತಿ, ಎದೆಯುರಿ ಸಹ ನಾಶವಾಗುವದರಲ್ಲಿ ಸಂದೇಹವಿಲ್ಲ.

36. ಪ್ರಾಯೇಣೋಪಹತಾಗ್ನಿತ್ವಾತ್ ಸಪಿಚ್ಛಮತಿಸಾರ್ಯತೇ ।
ಪ್ರಾಪ್ನೋತ್ಯಾಸ್ಯಸ್ಯ ವೈರಸ್ಯಂ ನ ಚಾನ್ನಮಭಿನನ್ದತಿ ॥
ಅತಿಸಾರಕ್ಕೆ ಪ್ರತೀಕಾರವಿಧಾನ
ತಸ್ಯಾಗ್ನಿದೀಪನಾನ್ ಯೋಗಾನತೀಸಾರನಿಬರ್ಹಣಾನ್ ।
ವಕ್ತ್ರಶುದ್ಧಿಕರಾನ್ ಕುರ್ಯಾದರುಚಿಪ್ರತಿಬಾಧಕಾನ್ ॥ (ಚ. 528)

ಹೆಚ್ಚಾಗಿ ಅಗ್ನಿ ಕೆಟ್ಟದ್ದರಿಂದ ಪಿಚ್ಛ (ಅನ್ನದ ಉಕ್ಕುತೆಳಿ ಹಾಗಿನದು) ಯುಕ್ತವಾದ ಅತಿಸಾರ ಉಂಟಾಗುತ್ತದೆ. ಆಗ್ಗೆ ರೋಗಿಗೆ ಅನ್ನದಲ್ಲಿ ಸಂತೋಷವಿರುವದಿಲ್ಲ ಮತ್ತು ಅವನ ಬಾಯಿರುಚಿಯು ವಿಕಾರವಾಗುತ್ತದೆ. ಅಂಥವನಿಗೆ ಅಗ್ನಿದೀಪನಕರವಾದ, ಅತಿಸಾರವನ್ನೂ ಅರುಚಿಯನ್ನೂ ಪರಿಹರಿಸತಕ್ಕಂಥಾ ಮತ್ತು ಬಾಯಿಯನ್ನು ಶುದ್ಧಮಾಡತಕ್ಕಂಥಾ ಯೋಗ ಗಳನ್ನು ಉಪಯೋಗಿಸತಕ್ಕದ್ದು.

37. ಸನಾಗರಾನಿನ್ದ್ರಯವಾನ್ ಪಿಬೇದ್ವಾ ತಂಡುಲಾಂಬುನಾ ।
ಸಿದ್ಧಾಂ ಯವಾಗೂಂ ಜೀರ್ಣೇ ಚ ಚಾಂಗೇರಿತಕ್ರದಾಡಿಮೈಃ ॥
(ಅತಿಸಾರಕ್ಕೆ ಯೋಗಗಳು) ಪಾಠಾಂ ಬಿಲ್ವಂ ಯಮಾನೀಂ ಚ ಪಾತವ್ಯಂ ತಕ್ರಸಂಯುತಮ್ ।
ದುರಾಲಭಾಂ ಶೃಂಗವೇರಂ ಪಾಠಾಂ ಚ ಸುರಯಾ ಸಹ ॥
ಜಮ್ಬ್ವಾಮ್ರಮಧ್ಯಂ ಬಿಲ್ವಂ ಚ ಸಕಪಿತ್ಥಂ ಸನಾಗರಮ್ ।
ಪೇಯಾಮಂಡೇನ ಪಾತವ್ಯಮತೀಸಾರನಿವೃತ್ತಯೇ ॥
ಏತಾನೇವ ಚ ಯೋಗಾಂಸ್ತ್ರೀನ್ ಪಾಠಾದೀನ್ ಕಾರಯೇತ್ ಖಡಾನ್ ।
ಸಸೂಪಧಾನ್ಯಾನ್ ಸಸ್ನೇಹಾನ್ ಸಾಮ್ಲಾನ್ ಸಂಗ್ರಹಣಾನ್ ಪರಾನ್ ॥
(ಚ. 528)

ಶುಂಠಿ ಮತ್ತು ಇಂದ್ರಜೀವಿ, ಇವುಗಳ ಚೂರ್ಣಮಾಡಿ ಅಕ್ಕಚ್ಚಿನಲ್ಲಿ ಅರೆದು ಕುಡಿಯ ಬೇಕು; ಮತ್ತು ಜೀರ್ಣವಾಗಿ ಹಸಿವು ಉಂಟಾದಾಗ್ಗೆ, ಪುಲ್ಲಂಪುರುಚಿ (ಪುಳಿಯಾರಲ) ಮತ್ತು ದಾಳಿಂಬದ ಸಿಪ್ಪೆ (ಅಥವಾ ಎಳೇಕಾಯಿ ಅಥವಾ ಸೊಪ್ಪು) ಹಾಕಿ ತಯಾರಿಸಿದ ಯವಾಗೂ ಗಂಜಿಯನ್ನು, ಮಜ್ಜಿಗೆ ಕೂಡಿಸಿಕೊಂಡು, ಕುಡಿಯಬೇಕು. ಪಾಡಾವಳಿ ಗಡ್ಡೆ, ಬಿಲ್ವಪತ್ರೆಕಾಯಿ, ಓಮ, ಇವುಗಳ ಕಷಾಯವನ್ನು ಮಜ್ಜಿಗೆ ಕೂಡಿಸಿ (ಅಥವಾ ಅವು ಗಳ ಚೂರ್ಣವನ್ನು ಮಜ್ಜಿಗೆಯಲ್ಲಿ ಅರೆದು) ಕುಡಿಯುವದು; ಅಥವಾ ಬಳ್ಳಿತುರುಚನ ಬೇರು, ಶುಂಠಿ, ಪಾಡಾವಳಿಗಡ್ಡೆ, ಇವುಗಳ ಕಷಾಯಕ್ಕೆ ಕಳ್ಳು ಕೂಡಿಸಿ (ಅಥವಾ ಅವುಗಳ ಚೂರ್ಣವನ್ನು ಕಳ್ಳಿನಲ್ಲಿ ಕಲಸಿ) ಕುಡಿಯುವದು; ಅಥವಾ ಜಂಬುನೇರಳೆ ಚಕ್ಕೆ (ಅಥವಾ ಚಿಗುರು), ಮಾವಿನ ಗೊರಟು, ಎಳೇ ಬಿಲ್ವಪತ್ರೆಕಾಯಿ, ಬೇಲದ ಹಣ್ಣಿನ ತಿರುಳು, ಶುಂಠಿ, ಇವುಗಳನ್ನು ಗಂಜಿನೀರಿನಿಂದ ಅರದು ಕುಡಿಯುವದು; ಈ ಯೋಗಗಳಿಂದ ಅತೀಸಾರ ನಿವೃತ್ತಿ ಯಾಗುತ್ತದೆ. ಕಡೇ ಮೂರು ಯೋಗಗಳ ಔಷಧಗಳಿಗೆ ತೋವೆಯ ಧಾನ್ಯಗಳು, ಹುಳಿ ಮತ್ತು ಸ್ನೇಹ ಕೂಡಿಸಿ ತಯಾರಿಸಿದ ಖಡಿ(ಪಳಿದ್ಯ)ಗಳು ಮಲ ಕಟ್ಟಿಸುವದಕ್ಕೆ ಉತ್ತಮ.

ಪರಾ ಈ 'ಖಡ'ಕ್ಕೆ ಉಪ್ಪನ್ನು ಸಹ ಕೂಡಿಸಬೇಕು (ಸಂ II-154) ಅತಿಸಾರಕ್ಕೂ ಗ್ರಹಣಿಗೂ ಹೇಳಲ್ಪಟ್ಟ ಔಷಧಗಳು ರಾಜಯಕ್ಷ್ಮದ ಅತಿಸಾರದಲ್ಲಿಯೂ ಹಿತವಾಗುತ್ತವೆ (ವಾ 289)

38. ತ್ವಙ್ಮುಸ್ತಮೇಲಾಧಾನ್ಯಾನಿ ಮುಸ್ತಮಾಮಲಕಂ ತ್ವಚಮ್ ।
ದಾರ್ವೀ ತ್ವಚೋ ಯಮಾನೀ ಚ ಪಿಪ್ಪಲ್ಯಸ್ತೇಜವತ್ಯಪಿ ॥
(ಬಾಯಿಶೋಧನಕ್ಕೆ ಯೋಗಗಳು) ಯಮಾನೀ ತಿನ್ತ್ರಿಡೀಕಂ ಚ ಪಂಚೈತೇ ಮುಖಧಾವನಾಃ ।
ಶ್ಲೋಕಪಾದೇಷು ವಿಹಿತಾ ರೋಚನಾ ಮುಖಶೋಧನಾಃ ॥
ಗುಲಿಕಾಂ ಧಾರಯೇದಾಸ್ಯೇ ಚೂರ್ಣೈರ್ವಾ ಶೋಧಯೇನ್ಮುಖಮ್ ।
ಏಷಾಮಾಲೋಡಿತಾನಾಂ ವಾ ಧಾರಯೇತ್ ಕವಲಗ್ರಹಾನ್ ॥ (ಚ. 529)

(1) ಲವಂಗಪಟ್ಟೆ, ಭದ್ರಮುಷ್ಟಿ, ಏಲಕ್ಕಿ, ಕೊತ್ತುಂಬರಿ, (2) ಭದ್ರಮುಷ್ಟಿ, ನೆಲ್ಲಿ ಚಟ್ಟು, ದೊಡ್ಡ ಲವಂಗಪಟ್ಟೆ, (3) ಮರದರಸಿನ, ದೊಡ್ಡ ಲವಂಗಪಟ್ಟೆ, ಓಮ, (4) ಹಿಪ್ಪಲಿ, ಭವಂಗಬೀಜ (ಮಾ. ಚರುಪುನ್ನರಿ), (5) ಓಮ, ಹುಣಸೇ ಸೊಪ್ಪು (ಅಥವಾ ಸೊಪ್ಪಿನ ಕಡ್ಡಿ), ಈ ಐದು (ಚೂರ್ಣ) ಯೋಗಗಳು ಬಾಯಿ ತೊಳೆಯುವದಕ್ಕೆ ಉಪಯುಕ್ತ ವಾದವು; ಬಾಯಿಯನ್ನು ಶುದ್ಧಿಮಾಡತಕ್ಕಂಥವು; ಮತ್ತು ರುಚಿಯನ್ನು ಕೊಡತಕ್ಕವು. ಅವು ಗಳನ್ನು (ಬೆಲ್ಲದಲ್ಲಿ ಕಲಸಿ) ಗುಳಿಗೆಮಾಡಿ ಬಾಯಿಯಲ್ಲಿ ಇಟ್ಟುಕೊಳ್ಳಬೇಕು; ಅಥವಾ ಅವುಗಳ ಚೂರ್ಣದಿಂದ ಬಾಯಿಯನ್ನು ಶುದ್ಧಪಡಿಸಬೇಕು, ಅಥವಾ ಆ ಚೂರ್ಣವನ್ನು (ನೀರಿನಲ್ಲಿ) ಕದಡಿ ಕವಳವಾಗಿ ಬಾಯಿಯೊಳಗಿಟ್ಟುಕೊಳ್ಳಬೇಕು.

39 ತಾಲೀಸಪತ್ರಂ ಮರಿಚಂ ನಾಗರಂ ಪಿಪ್ಪಲೀ ಶುಭಾ |
ಯಥೋತ್ತರಂ ಭಾಗವೃದ್ಧ್ಯಾ ತ್ವಗೇಲೇ ಚಾರ್ಧಭಾಗಿಕೇ
ಪಿಪ್ಪಲ್ಯಷ್ಟಗುಣಾ ಚಾತ್ರ ಪ್ರದೇಯಾ ಸಿತಶರ್ಕರಾ |
ಕಾಸಶ್ವಾಸಾರುಚಿಹರಂ ತಚ್ಚೂರ್ಣಂ ದೀಪನಂ ಪರಮ್ ||
ಹೃತ್ಪಾಂಡುಗ್ರಹಣೀದೋಷಶೋಷಪ್ಲೀಹಜ್ವರಾಪಹಮ್ |
ವಮ್ಯತೀಸಾರಶೂಲಘ್ನಮೂರ್ಧ್ವವಾತಾನುಲೋಮನಮ್
ಕಲ್ಪಯೇದ್ಗುಟಿಕಾಂ ಚೈವ ಚೂರ್ಣಂ ಪಕ್ತ್ವಾ ಸಿತೋಪಲೈಃ |
ಗುಟಿಕಾ ಹ್ಯಗ್ನಿಸಂಯೋಗಾಚ್ಚೂರ್ಣಾಲ್ಲಘುತರಾಃ ಸ್ಮೃತಾಃ
(ಚ. 530)

ತಾಲೀಸಾದಿ ಚೂರ್ಣ ಅಥವಾ ಗುಳಿಗೆ

ಒಂದು ಭಾಗ ತಾಳೀಸಪತ್ರೆ, ಎರಡು ಭಾಗ ಬಳೇ ಕಾಳುಮೆಣಸು, ಮೂರು ಭಾಗ ಶುಂಠಿ, ನಾಲ್ಕು ಭಾಗ ಹಿಪ್ಪಲಿ, ಐದು ಭಾಗ ಬಿದಿರುಪ್ಪು, ಅರ್ಧ ಭಾಗ ಏಲಕ್ಕಿ, ಅರ್ಧ ಭಾಗ ಲವಂಗಪಟ್ಟೆ, ಇವುಗಳನ್ನೆಲ್ಲಾ ನುಣ್ಣಗಾಗಿ ಚೂರ್ಣಿಸಿ, ಹಿಪ್ಪಲಿಯ ಎಂಟು ಭಾಗ (ಅಂದರೆ ೩೨ ಭಾಗ) ಬಿಳೇ ಸಕ್ಕರೆಯನ್ನು ಕೂಡಿಸಿ ಅರದು ಇಟ್ಟುಕೊಂಡು, ಸೇವಿಸುತ್ತಾ ಬಂದಲ್ಲಿ, ಕೆಮ್ಮು, ಉಬ್ಬಸ, ಅರುಚಿ, ಸಹ ಪರಿಹಾರವಾಗುವವು. ಆ ಚೂರ್ಣವು ಉತ್ತಮ ವಾದ ಅಗ್ನಿದೀಪನಕಾರಿ; ಎದೆಯರೋಗ, ಪಾಂಡು, ಗ್ರಹಣೀದೋಷ, ಶೋಷರೋಗ, ಪ್ಲೀಹವ್ಯಾಧಿ ಮತ್ತು ಜ್ವರ, ಇವುಗಳನ್ನು ಪರಿಹರಿಸತಕ್ಕಂಥಾದ್ದು, ವಾಂತಿಯನ್ನೂ ಅತಿ ಸಾರವನ್ನೂ ಶೂಲೆಯನ್ನೂ ನಾಶಮಾಡುವದು; ಮತ್ತು ಮೇಲ್ಮುಖವಾದ ವಾಯುವನ್ನು ಸರಿಪಡಿಸುವದು. ಅದೇ ಚೂರ್ಣವನ್ನು ಕಲ್ಲುಸಕ್ಕರೆ ಪುಡಿಯೊಂದಿಗೆ ಪಾಕಮಾಡಿ, ಗುಳಿಗೆ ಮಾಡಿಟ್ಟುಕೊಂಡು ಉಪಯೋಗಿಸಬಹುದು. ಆದರೆ, ಅಗ್ನಿಸಂಯೋಗದ ದೆಸೆಯಿಂದ ಚೂರ್ಣಕ್ಕಿಂತಲೂ ಗುಳಿಗೆಗಳು ಲಘುವಾಗಿರುತ್ತವೆ.

40. ಪ್ರಸನ್ನಾಂ ವಾರುಣೀಂ ಶೀಧುಮರಿಷ್ಟಾನಾಸವಾನ್ಮಧು |
ಯಥಾರ್ಹಮನುಪಾನಾರ್ಥಂ ಪಿಬೇನ್ಮಾಂಸಾನಿ ಭಕ್ಷಯೇತ್ ||
ಮದ್ಯಂ ತೈಕ್ಷ್ಣ್ಯೋಷ್ಣ್ಯವೈಶದ್ಯಸೂಕ್ಷ್ಮತ್ವಾತ್ ಸ್ರೋತಸಾಂ ಮುಖಮ್ |
ಪ್ರಮಥ್ಯ ವಿವೃಣೋತ್ಯಾಶು ತನ್ಮೋಕ್ಷಾತ್ ಸಪ್ತಧಾತವಃ ||
ಪುಷ್ಯನ್ತಿ ಧಾತುಪೋಷಾಚ್ಚ ಶೀಘ್ರಂ ಶೋಷಃ ಪ್ರಶಾಮ್ಯತಿ | (ಚ 531)

ಮದ್ಯಪಾನದ ಉಪಯೋಗ

ಪ್ರಸನ್ನಾ (ಸುರೆಯ ತಿಳಿನೀರು) ವಾರುಣೀ, ಶೀಧು (ಕಬ್ಬಿನ ರಸದ ಕಳ್ಳು), ಅರಿಷ್ಟ, ಆಸವ, ದ್ರಾಕ್ಷೆಯ ಮದ್ಯ, ಇವುಗಳನ್ನು ಸ್ಥಿತಿಗೆ ತಕ್ಕ ಹಾಗೆ ಮಾಂಸಭಕ್ಷಣಮಾಡುವಾಗ್ಗೆ ಅನುಪಾನವಾಗಿ ಕುಡಿಯಬೇಕು. ಮದ್ಯದಲ್ಲಿ ತೀಕ್ಷ್ಣ, ಉಷ್ಣ, ವಿಶದ, ಸೂಕ್ಷ್ಮ ಗುಣಗಳಿರುವದರಿಂದ ಮದ್ಯವು ಸ್ರೋತಸ್ಸುಗಳ ಬಾಯಿಯನ್ನು ಬೇಗನೆ ಬಲಾತ್ಕಾರದಿಂದ ಬಿಡಿಸುತ್ತದೆ. ಹಾಗೆ ಸ್ರೋತಸ್ಸುಗಳು ತಡೆಯಿಂದ ವಿಮೋಚನೆಪಡುವದರಿಂದ, (ಶರೀರದ) ಏಳು ಧಾತುಗಳು ಪುಷ್ಟಿಯಾಗುತ್ತವೆ. ಧಾತುಪುಷ್ಟಿಯಿಂದ ಶೋಷರೋಗವು ಬೇಗನೆ ಶಮನವಾಗುತ್ತದೆ.

41. ಸ್ನೇಹಕ್ಷೀರಾಮ್ಬುಕೋಷ್ಠೇ ತಂ ಸ್ವಭ್ಯಕ್ತಮವಗಾಹಯೇತ್ ।
ಸ್ರೋತೋವಿಬನ್ಧಮೋಕ್ಷಾರ್ಥಂ ಬಲಪುಷ್ಟ್ಯರ್ಥಮೇವ ವಾ ॥
ಉತ್ತೀರ್ಣಂ ಮಿಶ್ರಕೈಃ ಸ್ನೇಹೈಃ ಪುನರು(ರ)ಕ್ತೈಃ ಸುಖೈಃ ಕರೈಃ ।
ಮೃದ್ನೀಯಾತ್ ಸುಖಮಾಸೀನಂ ಸುಖಂ ಚೋತ್ಸಾದಯೇನ್ನರಮ್
ಅವಗಾಹಸ್ನಾನ ಮತ್ತು ಉದ್ವರ್ತನ
ಜೀವನ್ತೀಂ ಶತವೀರ್ಯಾಂ ಚ ವಿಕಸಾಂ ಸಪುನರ್ನವಾಮ್ ।
ಅಶ್ವಗನ್ಧಾಮಪಾಮಾರ್ಗಂ ತರ್ಕಾರೀಂ ಮಧುಕಂ ಬಲಾಮ್
ವಿದಾರೀಂ ಸರ್ಷಪಂ ಕುಷ್ಠಂ ತಂಡುಲಾನತಸೀಫಲಮ್ ।
ಮಾಷಾಂಸ್ತಿಲಾಂಶ್ಚ ಕಿಣ್ವಂ ಚ ಸರ್ವಮೇಕತ್ರ ಚೂರ್ಣಯೇತ್
ತ್ರಿಗುಣಂ ಯವಚೂರ್ಣೇನ ದಧ್ನಾ ಯುಕ್ತಂ ಸಮಾಕ್ಷಿಕಮ್ ।
ಏತದುತ್ಸಾದನಂ ಕಾರ್ಯಂ ಪುಷ್ಟಿವರ್ಣಬಲಪ್ರದಮ್ (ಚ. 532)

ರೋಗಿಯ ಮೈಗೆ (ರೋಗೋಕ್ತ) ತೈಲವನ್ನು ಹಚ್ಚಿ, ಸ್ನೇಹ ಮತ್ತು ಹಾಲು ಬೆರಸಿದ ನೀರು ತುಂಬಿದ ಪಾತ್ರದಲ್ಲಿ ಅವನನ್ನು ಕೂಡ್ರಿಸಿ, ಮೈ-ಸ್ನಾನಮಾಡಿಸಬೇಕು. ಅದರಿಂದ ಸ್ರೋತಸ್ಸುಗಳ ತಡೆಯು ಹೋಗಿಬಿಡುವದಲ್ಲದೆ, ಅವನಿಗೆ ಬಲವೂ ಪುಷ್ಟಿಯೂ ಉಂಟಾಗುತ್ತದೆ ಅವನು ಪಾತ್ರದಿಂದ ಹೊರಗೆ ಬಂದ ಮೇಲೆ, ಅವನನ್ನು ಸುಖವಾಗಿ ಕೂತುಕೊಳ್ಳಿಸಿ, ಬೇರೆಯವರು ಮಿಶ್ರಕಸ್ನೇಹವನ್ನು ತಮ್ಮ ಕೈಗಳಿಗೆ ಹಚ್ಚಿಕೊಂಡು, ಆ ಕೈಗಳಿಂದ ರೋಗಿಯ ಶರೀರವನ್ನು ಮೃದುವಾಗಿ ತಿಕ್ಕಬೇಕು. ಅನಂತರ ಮೈಯನ್ನು ಕೆಳಗೆ ಬರದ ಕ್ರಮದಿಂದ ಉಜ್ಜಬೇಕು. ಜೀವನ್ತೀ, ಶತಾವರೀ, ಮಂಜಿಷ್ಠ, ಪುನರ್ನವಿ, ಅಶ್ವಗಂಧಿ, ಉತ್ತರಣೆ, ನರುವಲು, ಜ್ಯೇಷ್ಠಮಧು, ಕಲ್ಲಂಗಡಲೆಬೇರು, ನೆಲಕುಂಬಳಗಡ್ಡೆ, ಸಾಸಿವೆ, ಚಂಗಲಕೋಷ್ಠ, ಅಕ್ಕಿ, ಅತಸೀಬೀಜ (Lin seed), ಉದ್ದು, ಎಳ್ಳು, ಸುರಾಬೀಜ (ಸುರೆಗೆ ಉಪಯೋಗಿಸುವ ಬೀಜ), ಇವುಗಳನ್ನೆಲ್ಲಾ ಒಟ್ಟಿಗೆ ಚೂರ್ಣಿಸಿ, ಆ ಚೂರ್ಣಕ್ಕೆ ಮೂರು ಪಾಲು ಯವೆಗೋದಿಯ ಚೂರ್ಣವನ್ನು ಬೆರಸಿ, ಸ್ವಲ್ಪ ಜೇನು ಕೂಡಿಸಿಕೊಂಡು ಮೊಸರಿನಲ್ಲಿ ಕಲಸಿ, ಆ ಮುದ್ದೆಯಿಂದ ರೋಗಿಯ ಮೈಯನ್ನು ಒರಸಬೇಕು. ಈ ಉತ್ಸಾದನ (ಉಜ್ಜುವ) ಯೋಗದಿಂದ ಪುಷ್ಟಿ, ವರ್ಣ ಮತ್ತು ಬಲ ಉಂಟಾಗುತ್ತದೆ.

ಪರಾ ಉತ್ಸಾದನಕ್ಕೆ ಅಶ್ವಗಂಧ, ಯವೆ ಮತ್ತು ದ್ವಿವಿಧ ಪುನರ್ನವಿ, ಇವುಗಳ ಚೂರ್ಣವು ಸುಶ್ರುತದಲ್ಲಿ ಉಕ್ತವಾಗಿದೆ, ಸು. (ಪು 400) ಸ್ನೇಹ ಅಥವಾ ಹಾಲು ಅಥವಾ ನೀರು ತುಂಬಿದ ಪಾತ್ರದಲ್ಲಿ ಅವಗಾಹನ ಮಾಡಿಸುವದಾಗಿ ಒಬ್ಬರು ಭಾಷಾಂತರಕಾರರು ಬರದದ್ದು ಸರಿಕಾಣುವದಿಲ್ಲ 'ಪುನರಕ್ತೈಃ' ಎಂಬದಕ್ಕೆ 'ಪುನರಕ್ತಂ' ಎಂತ ಅ. ಸಂ (II-153)ದಲ್ಲಿ ಪಾಠಾಂತರ ಕಾಣುತ್ತದೆ ಅಗ್ಗೆ ಮಿಶ್ರಕ ತೈಲವನ್ನು ರೋಗಿಯ ಮೈಗೆ ಪುನಃ ಹಚ್ಚುವದು ಎಂತ ಅರ್ಥವಾಗುತ್ತದೆ, ತಿಕ್ಕುವವರ ಕೈಗಳಿಗೆ ಅಲ್ಲ ಆ ಪಾಠವೇ ಸಮರ್ಪಕವಾಗಿ ಕಾಣುತ್ತದೆ

42. ಘೃತೇನ ಚಾಜೇನ ಸಮಾಕ್ಷಿಕೇನ
ತುರಂಗಗನ್ಧಾತಿಲಮಾಷಚೂರ್ಣಮ್ ।
ಸಿತಾಶ್ವಗಂಧಾಮಗಧೋದ್ಭವಾನಾಂ
ಚೂರ್ಣಂ ಘೃತಂ ಕ್ಷೌದ್ರಯುತಂ ಪ್ರಲಿಹ್ಯಾತ್ ॥
ಕ್ಷೀರಂ ಪಿಬೇದ್ವಾಪ್ಯಥ ವಾಜಿಗನ್ಧಾ-
ವಿಪಕ್ವಮೇವಂ ಲಭತೇ ಚ ಪುಷ್ಟಿಮ್ ।
ತದುತ್ಥಿತಂ ಕ್ಷೀರಘೃತಂ ಸಿತಾಢ್ಯಂ
ಪ್ರಾತಃ ಪಿಬೇದ್ವಾಥ ಪಯೋಽನುಪಾನಮ್ । (ಸು. 800)

ಅಶ್ವಗಂಧಿಯ ಯೋಗಗಳು

ಅಶ್ವಗಂಧಿ, ಎಳ್ಳು ಮತ್ತು ಉದ್ದು, ಇವುಗಳ ಚೂರ್ಣವನ್ನು ಆಡಿನ ತುಪ್ಪದಲ್ಲಿ ಕಲಸಿ, ಜೇನು ಕೂಡಿಸಿಕೊಂಡು, ಸೇವಿಸಬೇಕು, ಅಥವಾ ಅಶ್ವಗಂಧಿ, ಹಿಪ್ಪಲಿ ಮತ್ತು ಕಲ್ಲುಸಕ್ಕರೆ, ಇವುಗಳ ಚೂರ್ಣವನ್ನು ತುಪ್ಪದಲ್ಲಿ ಕಲಸಿ, ಜೇನು ಕೂಡಿಸಿಕೊಂಡು, ನೆಕ್ಕಬೇಕು, ಅಥವಾ ಅಶ್ವಗಂಧಿ ಹಾಕಿ ಕಾಯಿಸಿದ ಹಾಲುಕಷಾಯವನ್ನು ಕುಡಿಯಬೇಕು, ಹೀಗೆ ಮಾಡುವದರಿಂದ ಪುಷ್ಟಿಯುಂಟಾಗುತ್ತದೆ. ಅಥವಾ ಆ ಹಾಲುಕಷಾಯವನ್ನು ತುಪ್ಪಬರುವ ತನಕ ಬತ್ತಿಸಿ ತೆಗೆದ ತುಪ್ಪವನ್ನು, ಕಲ್ಲುಸಕ್ಕರೆ ಪುಡಿ ಕೂಡಿಸಿಕೊಂಡು, ಪ್ರತಿ ದಿನ ಬೆಳಿಗ್ಗೆ ಸೇವಿಸಿ ಅನುಪಾನವಾಗಿ ಹಾಲನ್ನು ಕುಡಿಯಬೇಕು.

ಷರಾ ಹಾಲುಕಷಾಯದ ಕ್ರಮಕ್ಕೆ 1ನೇ ಭಾಗದ XX-33 ನೋಡಿ 'ಸಿತಾ' ಎಂಬದನ್ನು ಕೆಲವು ನಿಘಂಟುಗಳು ಬಿಳೀ ಸಕ್ಕರೆ ಅಥವಾ ಚೀನಿಸಕ್ಕರೆ ಎಂತಲೂ, ಕೆಲವು ಕಲ್ಲುಸಕ್ಕರೆ ಎಂತಲೂ, ವರ್ಣಿಸಿದ್ದು ಕಾಣುತ್ತದೆ ಈ ವ್ಯಾಧಿಯಲ್ಲಿ ಕಲ್ಲುಸಕ್ಕರೆಯೇ ಹೆಚ್ಚು ಗುಣಕರವಾದ್ದು

43 ಏಲಾಜಮೋದಾಮಲಕಾಭಯಾಕ್ಷ-
ಗಾಯತ್ರ್ಯರಿಷ್ಟಾಸನಶಾಲಸಾರಾನ್ ।
ವಿಡಂಗಭಲ್ಲಾತಕಚಿತ್ರಕೋಗ್ರಾ-
ಕಟುತ್ರಿಕಾಮ್ಭೋದಸುರಾಷ್ಟ್ರಜಾಂಶ್ಚ ॥
ಪಕ್ತ್ವಾ ಜಲೇ ತೇನ ಪಚೇದ್ ದ್ವಿಸರ್ಪಿ-
ಸ್ತಸ್ಮಿನ್ ಸುಸಿದ್ಧೇ ತ್ವವತಾರಿತೇ ಚ ।
ತ್ರಿಂಶತ್ಪಲಾನ್ಯತ್ರ ಸಿತೋಪಲಾಯಾ
ದತ್ವಾ ತುಗಾಕ್ಷೀರಿಪಲಾನಿ ಷಟ್ ಚ ॥
ಪ್ರಸ್ಥೇ ಘೃತಸ್ಯ ದ್ವಿಗುಣಂ ಚ ದದ್ಯಾತ್
ಕ್ಷೌದ್ರಂ ತತೋ ಮನ್ಥಹತಂ ವಿದಧ್ಯಾತ್ ।
ಪಲಂ ಪಲಂ ಪ್ರಾತರತಃ ಪ್ರಲಿಹ್ಯಾತ್
ಪಶ್ಚಾತ್ಪಿಬೇತ್ಕ್ಷೀರಮತನ್ದ್ರಿತಶ್ಚ ॥
ಏತದ್ಧಿ ಮೇಧ್ಯಂ ಪರಮಂ ಪವಿತ್ರಂ
ಚಕ್ಷುಷ್ಯಮಾಯುಷ್ಯಮಥೋ ಯಶಸ್ಯಮ್ ।
ಯಕ್ಷ್ಮಾಣಮಾಶು ವ್ಯಪಹನ್ತಿ ಚೈತತ್
ಪಾಂಡ್ವಾಮಯಂ ಚೈವ ಭಗಂದರಂ ಚ ।

ಏಲಾದಿಮನ್ಥಘೃತ

ಶ್ವಾಸಂ ಚ ಹನ್ತಿ ಸ್ವರಭೇದಕಾಸ-
ಹೃತ್‌ಪ್ಲೀಹಗುಲ್ಮಗ್ರಹಣೀಗದಾಂಶ್ಚ ।
ನ ಚಾತ್ರ ಕಿಂಚಿತ್ಪರಿವರ್ಜನೀಯಂ
ರಸಾಯನಂ ಚೈತದುಪಾಸ್ಯಮಾನಮ್ ॥ (ಸು. 801-2)

ಏಲಕ್ಕಿ, ಅಜಮೋದ, ನೆಲ್ಲಿಚಟ್ಟು, ಅಣಿಲೆಕಾಯಿ ಸಿಪ್ಪೆ, ಶಾಂತಿಕಾಯಿ ಸಿಪ್ಪೆ, ಕಾಚಿನ (ಕದಿರೆ) ತಿರುಳು, ಕಹಿಬೇವಿನ ಒಳನಾರು, ಬೇಂಬದ (ರಕ್ತಹೊನ್ನೆ) ತಿರುಳು, ಆಸಿನ (ಷಾಮರ) ಮರದ ತಿರುಳು, ವಾಯುವಿಳಂಗ, ಗೇರುಕಾಯಿ, ಚಿತ್ರಮೂಲ, ಬಜೆ, ತ್ರಿಕಟು, ಭದ್ರಮುಷ್ಟಿ, ಕರೀಹೆಸರು, ಇವುಗಳ ಕಷಾಯದಲ್ಲಿ ಎರಡು ವಿಧವಾದ (ದನ ಮತ್ತು ಆಡಿನ) ತುಪ್ಪ ಕೂಡಿ ೧ ಪ್ರಸ್ಥವನ್ನು ಕಾಯಿಸಿ ಕೆಳಗಿಳಿಸಿದ ಮೇಲೆ, ಮೂವತ್ತು ಪಲ ಕಲ್ಲುಸಕ್ಕರೆ ಪುಡಿ, ಆರು ಪಲ ಬಿದಿರುಪ್ಪಿನ ಚೂರ್ಣ ಸಹ ಅದರೊಳಗೆ ಹಾಕಿ, ಎರಡು ಪ್ರಸ್ಥ ಜೇನುತುಪ್ಪ ವನ್ನು ಕೂಡಿಸಿ, ಕುಡಗೋಲಿನಿಂದ ಕಡದಿಟ್ಟುಕೊಂಡು, ಪ್ರತಿದಿನ ಬೆಳಿಗ್ಗೆ ಒಂದು ಪಲ ಪ್ರಕಾರ ನೆಕ್ಕಿ ಅನಂತರ ಕೂಡಲೆ ಹಾಲನ್ನು ಕುಡಿಯತಕ್ಕದ್ದು, ಇದು ಅತಿ ಪವಿತ್ರವಾದದ್ದು; ಬುದ್ಧಿಯನ್ನೂ, ಆಯುಸ್ಸನ್ನೂ, ಕೀರ್ತಿಯನ್ನೂ ವೃದ್ಧಿಸತಕ್ಕಂಥಾದ್ದು, ಕಣ್ಣಿಗೆ ಹಿತವಾದದ್ದು, ಯಕ್ಷ್ಮರೋಗವನ್ನು ಬೇಗನೇ ನಾಶಮಾಡುತ್ತದೆ; ಮತ್ತು ಅದರಿಂದ ಪಾಂಡುರೋಗ, ಭಗಂದರ, ಉಬ್ಬಸ, ಸ್ವರಭೇದ, ಕೆಮ್ಮು, ಎದೆರೋಗ, ಪ್ಲೀಹವ್ಯಾಧಿ, ಗುಲ್ಮ, ಗ್ರಹಣೀ, ಈ ಎಲ್ಲಾ ರೋಗಗಳು ಸಹ ಪರಿಹಾರವಾಗುವವು. ಈ ಔಷಧ ಸೇವನದಲ್ಲಿ ಪಥ್ಯ ಅವಶ್ಯವಿಲ್ಲ. ಇದು ಪೂಜಿಸಲ್ಪಡುವ ರಸಾಯನವಾಗಿರುತ್ತದೆ.

ಷರಾ 'ಸುರಾಷ್ಟ್ರಜಾ' ಅಂದರೆ 'ತುವರಮೃತ್ತಿಕಾ' (ತೊಗರು ಮಣ್ಣು, ಗೋಪೀಚನ್ದನ) ಎಂತ ನಿ ಸಂ ವ್ಯಾ (ಪು. 610) ಆದರೆ ಇಲ್ಲಿಯ 'ಸುರಾಷ್ಟ್ರಜಾನ' ಎಂಬ ಪುಲ್ಲಿಂಗಪದಕ್ಕೆ ಆ ಅರ್ಥ ಬರುವದಿಲ್ಲ 'ಪಚೇದ್‌ದ್ವಿಸರ್ಪಿಃ' ಎಂಬಲ್ಲಿ 'ಪಚೇದ್ದ್ವಿಸರ್ಪಿಃ' ಎಂತ ಪಾಠಾಂತರ ಉಂಟು ಆಗ್ಗೆ ಒಂದೇ ಜಾತಿ ತುಪ್ಪವನ್ನು ಉಪಯೋಗಿಸಬೇಕಾಗಿ ಅರ್ಥವಾಗುತ್ತದೆ

44. ಕಕುಭತ್ವಙ್ನಾಗಬಲಾ ವಾನರೀಬೀಜಾನಿ ಚೂರ್ಣಿತಂ ಪಯಸಿ ।
ಕುಭಾದಿ ಚೂರ್ಣ ಪಕ್ವಂ ಮಧುಘೃತಯುಕ್ತಂ ಸಸಿತಂ ಯಕ್ಷ್ಮಾದಿಕಾಸಹರಮ್ ॥
(ಚಿ. ಸಾ. ಸಂ. 221)

ಬಿಳೀಮತ್ತಿಕೆತ್ತೆ, ಆನೆಕಲ್ಲಂಗಡಲೆಬೇರು, ಮತ್ತು ನಾಯಿಸೊಣಗಿನಬೀಜ, ಇವುಗಳ ಚೂರ್ಣವನ್ನು ಹಾಲಲ್ಲಿ ಬೇಯಿಸಿ, ಒಣಗಿಸಿಟ್ಟುಕೊಂಡು, ಜೇನು ಮತ್ತು ತುಪ್ಪ ಗಳಲ್ಲಿ ಕಲಸಿ, ಕಲ್ಲುಸಕ್ಕರೆ ಕೂಡಿಸಿಕೊಂಡು, ಸೇವಿಸುತ್ತಾ ಬಂದಲ್ಲಿ, ಯಕ್ಷ್ಮರೋಗ ಮುಂತಾದ್ದರ ಕೆಮ್ಮು ಪರಿಹಾರವಾಗುತ್ತದೆ.

ಷರಾ ಈ ಚೂರ್ಣವಿಂದ ಹಾಲುಕಷಾಯ ಮಾಡಿ, ಅದನ್ನು ಮಧು-ಘೃತ-ಸಕ್ಕರೆಯೊಂದಿಗೆ ಪಾನಮಾಡುವದು ಒಳ್ಳೇದು

45. ಬಲಾಹ್ವಯಂ ಗೋಕ್ಷುರಕೋ ಬೃಹತ್ಯೌ ನಿಃಕ್ವಾಥ್ಯ ದುಗ್ಧೇನ ಕಣಾ-
ಸಮೇತಮ್ ।
ಬಲಾಹ್ವಯಾದಿ ಹಾಲುಕಷಾಯ. ಪಾನಂ ಹಿತಂ ಸ್ಯಾನ್ಮಧುನಾ ಸಿತಾಢ್ಯಂ ವಿನಾಶನಂ ಕಾಮಲಕ*-
ಕ್ಷಯಸ್ಯ ॥
ಮೋಹಸ್ಯ ತೃಷ್ಣಾಮಯನಾಶಕಾರಿ ಕ್ಷೀಣೇನ್ದ್ರಿಯಾಣಾಂ ಬಲಮಾ-
ತನೋತಿ ॥ (ಹಾ. ಸಂ. 172)

ಕಲ್ಲಂಗಡಲೆ ಬೇರು, ನೆಗ್ಗಿಲಮುಳ್ಳು, ಗುಳ್ಳದ ಬೇರು, ಕಿರೀಗುಳ್ಳದ ಬೇರು, ಹಿಪ್ಪಲಿ, ಇವುಗಳ ಹಾಲುಕಷಾಯವನ್ನು, ಜೇನು ಮತ್ತು ಕಲ್ಲುಸಕ್ಕರೆ ಪುಡಿಯನ್ನು ಕೂಡಿಸಿಕೊಂಡು, ಪಾನಮಾಡುವದರಿಂದ ಕಾಮಲೆ, ಕ್ಷಯ, ಮೇಹ, ಬಾಯಾರಿಕೆ, ಇವುಗಳು ಪರಿಹಾರವಾಗುವವು; ಕ್ಷೀಣವಾದ ಇಂದ್ರಿಯಗಳಿಗೆ ಬಲವುಂಟಾಗುತ್ತದೆ.

*'ಕಾಮಲಕಂ ಕ್ಷಯಂ ವಃ' ಎಂತ ಮೂಲವಿರುತ್ತದೆ

46. ದ್ವಿಪಂಚಮೂಲೀಮಗಧಾಧಾನ್ಯನಾಗರಜಂ ಜಲಮ್ ।
ಚಾತುರ್ಜಾತಕಸಂಯುಕ್ತಂ ಪಿಬೇನ್ನಿತ್ಯಂ ಕ್ಷಯಾತುರಃ ॥
ಕಾಸಜ್ವರಾದಿಶಮನಂ ಬಲಪುಷ್ಟಿವಿವರ್ಧನಮ್ ॥ (ಚಿ. ಸಾ. ಸಂ. 221)

ದಶಮೂಲಾದಿ ಕಷಾಯ

ದಶಮೂಲಗಳು, ಹಿಪ್ಪಲಿ, ಕೊತ್ತುಂಬರಿ, ಶುಂಠಿ, ಇವುಗಳ ಕಷಾಯವನ್ನು, ಚಾತುರ್ಜಾತಕದ ಚೂರ್ಣ ಸೇರಿಸಿಕೊಂಡು, ಕ್ಷಯರೋಗದವನು ನಿತ್ಯವೂ ಕುಡಿಯತಕ್ಕದ್ದು. ಅದರಿಂದ ಕೆಮ್ಮು, ಜ್ವರ ಮೊದಲಾದವುಗಳು ಶಮನವಾಗುವವಲ್ಲದೆ, ಬಲವೂ, ಪುಷ್ಟಿಯೂ ವೃದ್ಧಿಯಾಗುವವು.

ಷರಾ ಲವಂಗಪಟ್ಟೆ, ಏಲಕ್ಕಿ, ದಾಲ್ಚೀನಿ ಎಲೆ ಮತ್ತು ನಾಗಕೇಸರ, ಈ ನಾಲ್ಕರ ಸಮುದಾಯಕ್ಕೆ 'ಚಾತುರ್ಜಾತಂ' ಎನ್ನುವದಾಗಿರುತ್ತದೆ ದಾಲ್ಚೀನಿ ಎಲೆಯ ಬದಲಾಗಿ 'ಪಚ್ಚೆಲೆ'ಯನ್ನು ಕೂಡಿಸುವದು ಸಾಧಾರಣವಾಗಿ ಮಲಯಾಳ ಸಂಪ್ರದಾಯ

47. ಕೂಷ್ಮಾಂಡಕಫಲೋತ್ಥೇನ ರಸೇನ ಪರಿಪೇಷಿತಮ್ ।
ಲಾಕ್ಷಾಕರ್ಷದ್ವಯಂ ಪೀತ್ವಾ ಜಯೇದ್ರಕ್ತಕ್ಷಯಂ ನರಃ
(ಚಿ. ಸಾ. ಸಂ. 221)

ಅರಗಿನ ಪ್ರಯೋಗ

ಎರಡು ಕರ್ಷ ಕಡ್ಡಿಅರಗನ್ನು ಪುಡಿಮಾಡಿ, (ಹಳೇ) ಬೂದಿಕುಂಬಳಕಾಯಿಯ ರಸದಿಂದ ಅರದು, ಪಾನಮಾಡುತ್ತಾ ಬಂದಲ್ಲಿ, ಮನುಷ್ಯನು ರಕ್ತಕ್ಷಯವನ್ನು ಗೆಲ್ಲುವನು.

ಷರಾ ಕುಂಬಳಕಾಯಿಯ ಹೋಳನ್ನು ಕುದಿಯುವ ನೀರಿನ ಸೆಕೆಯಿಂದ ಬೇಯಿಸಿ, ರಸವನ್ನು ತೆಗೆಯುವದು ಒಳ್ಳೇದು

48. ವ್ಯೋಷಂ ಶತಾವರೀ ತ್ರೀಣಿ ಫಲಾನಿ ದ್ವೇ ಬಲೇ ತಥಾ ।
ಸರ್ವಾಮಯಹರೋ ಯೋಗಃ ಸೇವ್ಯೋ ಲೋಹರಜೋನ್ವಿತಃ
ಏತದ್ವಕ್ಷಃಕ್ಷತಂ ಹನ್ತಿ ಕಂಠಜಾಂ ವಿವಿಧಾಂ ರುಜಮ್ ।
ರಾಜಯಕ್ಷ್ಮಾಣಮತ್ಯುಗ್ರಂ ಬಾಹುಸ್ತಂಭಮಥಾರ್ದಿತಮ್ ।
(ಚಿ. ಸಾ. ಸಂ. 221)

ಕಬ್ಬಿಣದ ಭಸ್ಮದ ಯೋಗ

ತ್ರಿಕಟು, ಶತಾವರೀ, ತ್ರಿಫಲೆ, ಕಲ್ಲಂಗಡಲೆ ಬೇರು, ಆನೆಕಲ್ಲಂಗಡಲೆ ಬೇರು, ಇವುಗಳನ್ನು (ಚೂರ್ಣಮಾಡಿ), ಕಬ್ಬಿಣದ ಭಸ್ಮ ಕೂಡಿಸಿ ಸೇವಿಸುವದು. ಈ ಯೋಗವು ಸರ್ವರೋಗಹರವಾದದ್ದು ಮತ್ತು ಉರಃಕ್ಷತವನ್ನೂ, ಕಂಠದ ನಾನಾ ವ್ಯಾಧಿಗಳನ್ನೂ, ಅತಿ ಕಠಿನವಾದ ರಾಜಯಕ್ಷ್ಮವ್ಯಾಧಿಯನ್ನೂ, ಬಾಹುಸ್ತಂಭ, ಅರ್ದಿತ, ಎಂಬ ವ್ಯಾಧಿಗಳನ್ನೂ ಕೊಲ್ಲುವದು.

ಷರಾ ಚೂರ್ಣವನ್ನು ಜೇನಿನಲ್ಲಿ, ಅಥವಾ ತುಪ್ಪ ಮತ್ತು ಜೇನುಗಳಲ್ಲಿ, ಕಲಸಿ ನೆಕ್ಕಬಹುದು.

49. ಶುದ್ಧಂ ಸೂತಂ ದ್ವಿಧಾ ಗನ್ಧಂ ಕುರ್ಯಾತ್ ಖಲ್ವೇನ ಕಜ್ಜಲೀಮ್ |
ತಯೋಃ ಸಮಂ ತೀಕ್ಷ್ಣಚೂರ್ಣಂ ಮರ್ದಯೇತ್ಕನ್ಯಕಾದ್ರವೈಃ ||
ದ್ವಿಯಾಮಮಥಾತಪೇ ಗೋಲಂ ತಾಮ್ರಪಾತ್ರೇ ನಿಧಾಪಯೇತ್ |
ಆಚ್ಛಾದ್ಯೈರಂಡಪತ್ರೇಣ ಸ್ಯಾದುಷ್ಣಂ ಯಾಮಯುಗ್ಮತಃ ||
ಅಗ್ನಿರಸ ಧಾನ್ಯರಾಶೌ ನ್ಯಸೇತ್ಪಶ್ಚಾದಷ್ಟರಾತ್ರಾತ್ತದುದ್ಧರೇತ್ |
ಸಂಚೂರ್ಣ್ಯ ಗಾಲಯೇದ್ವಸ್ತ್ರೈಃ ಸತ್ಯಂ ವಾರಿತರಂ ಭವೇತ್ ||
ತ್ರಿಕಟುತ್ರಿಫಲೈಲಾಭಿರ್ಜಾತೀಫಲಲವಂಗಕೈಃ |
ನವಭಾಗೋನ್ಮಿತೈರೇಭಿಃ ಸಮೈರೇಷ ರಸೋ ಭವೇತ್ ||
ನಿಷ್ಕದ್ವಯಮಿತಂ ನಿತ್ಯಂ ಮಧುನಾ ಸಹ ಲೇಹಯೇತ್ |
ಅಯಮಗ್ನಿರಸೋ ನಾಮ್ನಾ ಕಾಸಕ್ಷಯಹರಃ ಪರಃ || (ಭಾ. ಪ್ರ. 371)

ಶುದ್ಧ ಪಾದರಸ ಒಂದು ಭಾಗಕ್ಕೆ ೨ ಭಾಗ ಶುದ್ಧ ಗಂಧಕವನ್ನು ಕೂಡಿಸಿ, ಕಲ್ವತ್ತಿನಲ್ಲಿ ಅರದು ಕಜ್ಜಲಮಾಡಿಕೊಂಡು, ಆ ಎರಡಕ್ಕೂ ಸರಿಪಾಲು ಹಳೇ ಕಬ್ಬಿಣವನ್ನು ಅರದಿಂದ ಉಜ್ಜಿ ತೆಗೆದ ಪುಡಿಯನ್ನು ಸೇರಿಸಿ, ಲೋಳಿಸರದ ರಸದಿಂದ ಪೂರ್ವಾಹ್ಣ ಎರಡು ಜಾಮ ಬಿಡದೆ ಅರದು ಮುದ್ದೆಮಾಡಿ, ತಾಮ್ರದ ಪಾತ್ರೆಯಲ್ಲಿ ಆ ಮುದ್ದೆಯನ್ನು ಇಟ್ಟು, ಸಣ್ಣ ಹರಳು ಗಿಡದ ಎಲೆಗಳಿಂದ ಮುಚ್ಚಿ, ಒಳ್ಳೇ ಬಿಸಿಲಿನಲ್ಲಿಟ್ಟರೆ, ಎರಡು ಜಾಮದಲ್ಲಿ ಬಿಸಿಯಾಗುತ್ತದೆ. ಆ ಪಾತ್ರವನ್ನು ಮುಚ್ಚಳದಿಂದ ಮುಚ್ಚಿ, ಧಾನ್ಯರಾಶಿಯಲ್ಲಿ ಹುಗಿದಿಟ್ಟು, ಎಂಟು ರಾತ್ರಿಗಳು ಕಳದ ಮೇಲೆ ಅದನ್ನು ಧಾನ್ಯರಾಶಿಯಿಂದ ತೆಗೆದು, ಆ ಗಟ್ಟಿಯನ್ನು ಚೂರ್ಣಿಸಿ ವಸ್ತ್ರಗಾಳಿತ ಮಾಡಿದ್ದಲ್ಲಿ, ಸಿಕ್ಕುವ ಭಸ್ಮವು ನೀರಿನ ಮೇಲೆ ತೇಲುವದು. ತ್ರಿಕಟು, ತ್ರಿಫಲೆ, ಏಲಕ್ಕಿ, ಜಾಯಿಕಾಯಿ, ಲವಂಗ, ಮೇಲೆ ಹೇಳಿದ ಕಬ್ಬಿಣದ ಭಸ್ಮ, ಇವುಗಳನ್ನು ಸರೀ ಪಾಲು ತೆಗೆದುಕೊಂಡು, ಪ್ರಥಮ ಒಂಭತ್ತು ಬಗೆಗಳ ಚೂರ್ಣದೊಂದಿಗೆ ಭಸ್ಮವನ್ನು ಬೆರಸಿಟ್ಟು ಕೊಂಡು, ನಿತ್ಯದಲ್ಲು ಎರಡು ನಿಷ್ಕತೂಕ ಪ್ರಕಾರ ಜೇನಿನಲ್ಲಿ ಕಲಸಿ, ನೆಕ್ಕುತ್ತಾ ಬರಬೇಕು. ಇದಕ್ಕೆ ಅಗ್ನಿರಸ ಎಂತ ಹೆಸರು ಇದು ಕೆಮ್ಮನ್ನೂ, ಕ್ಷಯವನ್ನೂ ಪರಿಹರಿಸುವದಕ್ಕೆ ಉತ್ತಮವಾದದ್ದು.

ಪರಾ ಬಿಸಿಲಿನಲ್ಲಿ ಅರ್ಧ ಜಾಮ ಇಟ್ಟರೆ ಸಾಕೆಂತ ಶಾ ಎರಡು ಜಾಮ ಕಾಲ ತೀಕ್ಷ್ಣವಾದ ಬಿಸಿಲು ಮಧ್ಯಾಹ್ನದ ಮೇಲೆ ದೊರಕುವದು ಅಸಾಧ್ಯ ಬಿಸಿಲಿನಲ್ಲಿಟ್ಟ ಮುದ್ದೆಯು ಒಳ್ಳೆ ಬಿಸಿಯಾಗುವದು ಮುಖ್ಯ ಆ ಬಿಸಿಯು ತಣಿಯುವದಕ್ಕೆ ಮೊದಲೇ ಅದನ್ನು ಧಾನ್ಯರಾಶಿಯಲ್ಲಿಡತಕ್ಕದ್ದು. ಭಸ್ಮವು ಶುದ್ಧ ಕೆಂಪು ಮತ್ತು ಹಿಟ್ಟು ಆಗಬೇಕು ಮುದ್ದೆಯು ಹಿಟ್ಟಿನ ಸ್ವಭಾವಕ್ಕೆ ಬಂದಾಗ್ಯೂ, ಕೆಂಪಾಗದಿರುವದುಂಟು ಅಂಥಾ ಸಂಗತಿಯಲ್ಲಿ ಅದನ್ನು ಪುಡಿಮಾಡಿ ತಾಮ್ರದ ಹರಿವಾಣದಲ್ಲಿ ಹರವಿ, ಸಣ್ಣ ಉರಿಯಿಂದ ಹರಿವಾಣವನ್ನು ಬಿಸಿಮಾಡಿದರೆ, ಭಸ್ಮವು ಕೆಂಪಾಗುತ್ತದೆ ಸೂರ್ಯರಶ್ಮಿಯ ಬಿಸಿ ಮುದ್ದೆಗೆ ಸಾಲದೆ ಹೋಗಿ, ಅಥವಾ ಅದನ್ನು ಅನಂತರ ಸರಿಯಾಗಿ ಕಾಪಾಡದೆ, ಆ ಸ್ಥಿತಿಯುಂಟಾಗುವದೆಂಬದು ಸ್ಪಷ್ಟಕಾಣುತ್ತದೆ ಈ ಕ್ರಮದಿಂದ ಮಾಡಿದ ಕಬ್ಬಿಣದ ಭಸ್ಮವನ್ನು ಪಾಶ್ಚಾತ್ಯರಸಾಯನ ಶಾಸ್ತ್ರಜ್ಞರಿಂದ ಶೋಧನಮಾಡಿಸಿದ್ದಲ್ಲಿ, ಅದರಲ್ಲಿ ಕಬ್ಬಿಣ ಮತ್ತು ಲೋಳಿಸರದ ಅಂಶವಲ್ಲದೆ, ರಸದ ಅಂಶವಾಗಲೀ ಗಂಧಕದ ಅಂಶವಾಗಲೀ ಉಳಿಯಲಿಲ್ಲ ಎಂತ ತಿಳಿದುಬಂದದೆ ಪಾದರಸದ ಅಥವಾ ಗಂಧಕದ ಅಂತ ಉಳಿಯದ ಹಾಗೆ, ಈ ಕ್ರಮದಿಂದ ತಯಾರಿಸಿದ ಭಸ್ಮವನ್ನು ಮೇಲೆ ಹೇಳಿದಂತೆ ಹರಿವಾಣದಲ್ಲಿ ಹರವಿ, ಒಂದೆರಡು ಮಿನಿಟಿನ ಸಣ್ಣ ಉರಿ ಕೊಟ್ಟು, ಹರಿವಾಣ ಬಿಸಿಯಾದ ಮೇಲೆ ಭಸ್ಮವನ್ನು ಮುಗಚುವ ಕ್ರಮವನ್ನು ಮಾಡುವದು ಒಳ್ಳೇದೆಂತ ಕಾಣುತ್ತದೆ ಶಾ ಹೇಳುವಂತೆ ಒಂದು ಹಗಲೂ ರಾತ್ರಿ ಕಾಲ ಮಾತ್ರ ಧಾನ್ಯರಾಶಿಯಲ್ಲಿ ಬಿಸಿಯಾದ ಮುದ್ದೆಯನ್ನಿರಿಸಿದರೆ ಸಾಲದು ಅದನ್ನು ಎಂಟು ದಿನ ಇರಿಸುವದು ಅಗತ್ಯ

ಅದಲ್ಲದೆ ಕಬ್ಬಿಣದ ಭಸ್ಮಕ್ಕೆ ಮಿಕ್ಕ ಒಂಭತ್ತು ಬಗೆಗಳ ಚೂರ್ಣವನ್ನು ಸಮಪಾಲಾಗಿ ಮಿಶ್ರಮಾಡಬೇಕೆಂತಲೂ, ಹಾಗಿನ ಅಗ್ನಿರಸವನ್ನು, ಎರಡು ನಿಷ್ಕ ಪ್ರಕಾರ ಕೊಡಬೇಕೆಂತಲೂ ಶಾ (ಪು. 126) ಹಾಗಂದರೆ ಭಸ್ಮದ ಪ್ರಮಾಣ

ದಿನಕ್ಕೆ ಒಂದು ನಿಷ್ಕ ಎಂತಾಯಿತು. ಅಷ್ಟು ಹೆಚ್ಚು ಪ್ರಮಾಣದಲ್ಲಿ ಭಸ್ಮವನ್ನು ಕೊಡುವದು ರಾಜಯಕ್ಷ್ಮರೋಗದಲ್ಲಿ ಉಚಿತವಲ್ಲ. ರೋಗಿಯಲ್ಲಿ ಜ್ವರವಿರುವ ಸಂಗತಿಯಲ್ಲಿ ಲೋಹಭಸ್ಮವನ್ನು ಕೊಡಲೇಬಾರದು ಭಾ. ಪ್ರ ಹೇಳಿದ ಕ್ರಮದಲ್ಲಿ ಮಾಡಿದ ಅಗ್ನಿರಸದಲ್ಲಿ ಹತ್ತನೇ ಅಂಶ ಮಾತ್ರ ಭಸ್ಮವಿರುತ್ತದೆ ಅದನ್ನು ಒಂದು ನಿಷ್ಕದಿಂದ ಎರಡು ನಿಷ್ಕದ ವರೆಗೆ ಪ್ರತಿ ದಿನ ಕೊಡಬಹುದು.

ಕತ್ತರಿಸಿದ ಲೋಳಿಸರದ ತುಂಡುಗಳೊಂದಿಗೆ ಭತ್ತದ ಉಮಿಯನ್ನಾಗಲಿ, ಅಣಿಲೆಕಾಯಿಯ ಚೂರ್ಣವನ್ನಾಗಲಿ, ಕೂಡಿಸಿ ಹಿಸುಕಿ ಹಿಂಡಿದರೆ, ತಿಳಿಯಾದ ರಸ ಬರುತ್ತದೆ

ಕಬ್ಬಿಣದ ಶುದ್ಧಿ

ತಪ್ತಾನಿ ಸರ್ವಲೋಹಾನಿ ಕದಲೀಮೂಲವಾರಿಣಿ |
ಸಪ್ತಧಾಭಿನಿಷಿಕ್ತಾನಿ ಶುದ್ಧಿಮಾಯಾನ್ತ್ಯನುತ್ತಮಾಮ್ || (ರ. ಚಿ. 35)

ಎಲ್ಲಾ ಲೋಹಗಳನ್ನು ತಗಡುಗಳಾಗಿ ಬಡಿದು, ಕಾಯಿಸಿ ಬಾಳೆಗಡ್ಡೆಯ ರಸದಲ್ಲಿ ಅದ್ದುವದು, ಅಥವಾ ಆ ರಸವನ್ನು ತಗಡುಗಳ ಮೇಲೆ ಚಿಮುಕಿಸಿ ಅವುಗಳನ್ನು ತಣಿಸುವದು, ಈ ರೀತಿ ಏಳು ಸರ್ತಿ ಮಾಡಿದ್ದಲ್ಲಿ ಉತ್ತಮವಾದ ಶುದ್ಧಿಯಾಗುತ್ತದೆ.

ಪರಾ ತಗಡುಗಳನ್ನು ಮೂರು ಮೂರು ಸರ್ತಿ ಕಾಯಿಸಿ, ಎಳ್ಳೆಣ್ಣೆ, ಮಜ್ಜಿಗೆ, ಹುಳಿಗಂಜಿನೀರು, ಗೋಮೂತ್ರ, ಮತ್ತು ಹುರುಳಿಕಷಾಯದಲ್ಲಿ ಅದ್ದಬೇಕೆಂತ ಭಾ ಪ್ರ (ಪು 203)

ದ್ರಾಕ್ಷಾದಿಘೃತ

50. ದ್ರಾಕ್ಷಾಯಾಃ ಪ್ರಸ್ಥಮೇಕನ್ತು ಮಧುಕಸ್ಯ ಪಲಾಷ್ಟಕಮ್ |
ಪಚೇತ್ತ್ರೋಯಾಢಕೇ ಶುದ್ಧೇ ಪಾದಶೇಷೇಣ ತೇನ ತು ||
ಪಲಿಕೇ ಮಧುಕದ್ರಾಕ್ಷೇ ಪಿಷ್ಟೇ ಕೃಷ್ಣಾಪಲದ್ವಯಮ್ |
ಪ್ರದಾಯ ಸರ್ಪಿಷಃ ಪ್ರಸ್ಥಂ ಪಚೇತ್ಕ್ಷೀರೇ ಚತುರ್ಗುಣೇ ||
ಸಿದ್ಧೇ ಶೀತೇ ಪಲಾನ್ಯಷ್ಟೌ ಶರ್ಕರಾಯಾಃ ಪ್ರದಾಪಯೇತ್ |
ಏತದ್ದ್ರಾಕ್ಷಾಘೃತಂ ಸಿದ್ಧಂ ಕ್ಷತಕ್ಷೀಣಸುಖಾವಹಮ್
ವಾತಂ ಪಿತ್ತಂ ಜ್ವರಂ ಶ್ವಾಸಂ ವಿಸ್ಫೋಟಕಹಲೀಮಕಾನ್ |
ಪ್ರದರಂ ರಕ್ತಪಿತ್ತಂ ಚ ಹನ್ಯಾನ್ಮಾಂಸಬಲಪ್ರದಮ್ || (ಭಾ. ಪ್ರ. 370)

ದ್ರಾಕ್ಷೆ ೧ ಪ್ರಸ್ಥ, ಜ್ಯೇಷ್ಠಮಧುವಿನ ಪುಡಿ ೮ ಪಲ, ಇವುಗಳನ್ನು ೧ ಆಢಕ ನೀರಿನಲ್ಲಿ ಬೇಯಿಸಿ, ಕಾಲಂಶಕ್ಕೆ ಬತ್ತಿದಾಗ್ಗೆ ಹಿಂಡಿ ಶೋಧಿಸಿದ ಕಷಾಯಕ್ಕೆ, ಜ್ಯೇಷ್ಠಮಧುವಿನ ಪುಡಿ ೧ ಪಲ, ದ್ರಾಕ್ಷೆ ೧ ಪಲ, ಇವುಗಳನ್ನು ಅರೆದು, ಅದನ್ನೂ, ಹಿಪ್ಪಲಿಚೂರ್ಣ ೨ ಪಲವನ್ನೂ, ೧ ಪ್ರಸ್ಥ ತುಪ್ಪವನ್ನೂ, ೪ ಪ್ರಸ್ಥ ಹಾಲನ್ನೂ ಬೆರಸಿ. ಪಾಕಮಾಡಿ ಶೋಧಿಸಿ, ತುಪ್ಪವು ತಣಿದ ಮೇಲೆ, ಅದಕ್ಕೆ ೮ ಪಲ ಸಕ್ಕರೆ ಕೂಡಿಸಿಟ್ಟುಕೊಳ್ಳುವದು. ಈ ದ್ರಾಕ್ಷಾಘೃತವು ಕ್ಷತಕ್ಷೀಣ ರೋಗದವರಿಗೆ ಸುಖವನ್ನುಂಟುಮಾಡುತ್ತದೆ; ವಾತ, ಪಿತ್ತ, ಜ್ವರ, ಉಬ್ಬಸ, ವಿಸ್ಫೋಟ, ಹಲೀಮಕ, ಪ್ರದರ, ರಕ್ತಪಿತ್ತ, ಈ ರೋಗಗಳು ಇದರ ಸೇವನದಿಂದ ನಾಶವಾಗುತ್ತವೆ; ಮತ್ತು ಮಾಂಸವೂ, ಬಲವೂ ಉಂಟಾಗುತ್ತವೆ.

ಅಮೃತಾದಿ ಘೃತ

51. ಗುಡೂಚೀ ಶಾರಿವಾ ಹ್ರಸ್ವಾ ಪಂಚಮೂಲೀ ಬಲಾ ವೃಷಮ್ |
ಸಮೂಲಪತ್ರಶಾಖನ್ತು ಪೃಥಗ್ದಶಪಲಾನಿ ಚ ||
ಜಲದ್ರೋಣೇ ವಿಪಕ್ತವ್ಯಂ ಯಾವತ್ಪಾದಾವಶೇಷಿತಮ್ |
ಪಿಪ್ಪಲೀ ಚನ್ದನಂ ಲೋಧ್ರಂ ಹ್ರೀವೇರೋಶೀರಪರ್ಪಟಮ್ ||
ಪಾರಾಭೂನಿಮ್ಬಯಷ್ಟ್ಯಾಹ್ವತ್ರಾಯನ್ತೀ ನೀಲಮುತ್ಪಲಮ್ |
ಮುಸ್ತಕೇನ್ದ್ರಯವಾಃ ಶುಂಠೀ ಕಟುಕಂ ಸದುರಾಲಭಮ್ ||

ತ್ವಕ್ಪತ್ರಂ ವೃಷಮೂಲಂ ಚ ಕಲ್ಕೈರರ್ಧಪಲೈರ್ಭಿಷಕ್ |
ಅಜಾಕ್ಷೀರೇಣ ತತ್ತುಲ್ಯಂ ಘೃತಪ್ರಸ್ಥಂ ವಿಪಾಚಯೇತ್ ||
ಹನ್ತಿ ಯಕ್ಷ್ಮಾಣಮತ್ಯುಗ್ರಂ ರಕ್ತಪಿತ್ತಂ ತ್ರಿದೋಷಜಮ್ |
ಶ್ವಾಸಕಾಸಕ್ಷತಕ್ಷೀಣದಾಹಶೋಥರುಜಾಪಹಮ್ || (ಚಿ. ಸಾ. ಸಂ. 228)

ಅಮೃತಬಳ್ಳಿ, ಸುಗಂಧಿ(ನಾಮದ)ಬೇರು, ಹ್ರಸ್ವಪಂಚಮೂಲಗಳು, ಕಲ್ಲಂಗಡಲೆ ಬೇರು, ಆಡುಸೋಗೆಯ ಬೇರು, ಎಲೆ ಮತ್ತು ಶಾಖೆ, ಇವುಗಳನ್ನು ಒಂದೊಂದು ಹತ್ತು ಹತ್ತು ಪಲ ಪ್ರಕಾರ ಸೇರಿಸಿ ಕುಟ್ಟಿ, ೧ ದ್ರೋಣ ನೀರಲ್ಲಿ ಹಾಕಿ, ಬತ್ತಿಸಿ, ೨ ಪ್ರಸ್ಥ ಕಷಾಯ ಮಾಡಿ, ಶೋಧಿಸಿದ ಆ ಕಷಾಯಕ್ಕೆ, ಹಿಪ್ಪಲಿ, ಶ್ರೀಗಂಧ, ಲೋಧ್ರ, ಮುಡಿವಾಳ, ಲಾಮಂಚ, ಪರ್ಪಟಿಕ, ಪಾಡಾವಳಿಗಡ್ಡೆ, ನೆಲಬೇವು, ಜ್ಯೇಷ್ಠಮಧು, ತ್ರಾಯಮಾಣದ ಬೇರು, ನೀಲತಾವರೆ, ಭದ್ರಮುಷ್ಟಿ, ಇಂದ್ರಜೀವಿ, ಶುಂಠಿ, ಕಟುಕರೋಹಿಣಿ, ಬಳ್ಳಿತುರಚ, ದಾಲ್ಚೀನಿ ಕೆತ್ತೆ (ದೊಡ್ಡ ಲವಂಗಪಟ್ಟೆ), ಆಡುಸೋಗೆಬೇರು, ಇವುಗಳನ್ನೆಲ್ಲಾ ಅರ್ಧಪಲ ತೂಕ ಪ್ರಕಾರ ಕೂಡಿಸಿ ಮಾಡಿದ ಚೂರ್ಣದ ಕಲ್ಕ, ೧ ಪ್ರಸ್ಥ ತುಪ್ಪ, ಮತ್ತು ೧ ಪ್ರಸ್ಥ ಆಡಿನ ಹಾಲು, ಹಾಕಿ ಪಾಕಮಾಡಿ ಶೋಧಿಸಿಟ್ಟುಕೊಂಡ ತುಪ್ಪದ ಸೇವನೆಯಿಂದ ಅತಿಉಗ್ರವಾದ ಯಕ್ಷ್ಮರೋಗ, ತ್ರಿದೋಷದಿಂದುಂಟಾದ ರಕ್ತಪಿತ್ತ, ಉಬ್ಬಸ, ಕೆಮ್ಮು, ಕ್ಷತಕ್ಷೀಣ, ಉರಿ, ಶೋಥ, ಈ ರೋಗಗಳು ದೂರವಾಗುವವು.

52. ವೀತತ್ವಗಸ್ಥಿಕೂಷ್ಮಾಂಡತುಲಾಂ ಛಿನ್ನಾಂ ಪುನಃ ಪಚೇತ್ |
ಭರ್ಜಯನ್ ಸರ್ಪಿಷಃ ಪ್ರಸ್ಥೇ ಕ್ಷೌದ್ರವರ್ಣೇಽತ್ರ ನಿಕ್ಷಿಪೇತ್ ||
ಕೂಷ್ಮಾಂಡ ರಸಾಯನ
ಖಂಡಾಚ್ಛತಂ ಕಣಾಶುಂಠ್ಯೋರ್ದ್ವಿಪಲಂ ಜೀರಕಾದಪಿ |
ತ್ರಿಜಾತಂ ಧಾನ್ಯಮರಿಚಂ ಪೃಥಗರ್ಧಪಲಾನ್ವಿತಮ್ ||
ಅವತಾರ್ಯಾರ್ಧ ಶೀತೇಽಸ್ಮಿನ್ ದತ್ವಾ ಕ್ಷೌದ್ರಂ ಘೃತಾರ್ಧಕಮ್ |
ಪಕ್ಷಂ ಧಾನ್ಯೇ ಸ್ಥಾಪಿತಂ ಚ ತನ್ನಿಹನ್ತ್ಯುಪಯೋಜಿತಮ್ ||
ಕಾಸಹಿಧ್ಮಾರುಚಿಶ್ವಾಸಾನ್(ನ್) ರಕ್ತಪಿತ್ತಕ್ಷತಕ್ಷಯಾತ್(ನ್) |
ಉರಃಸನ್ಧಾನಜನನಂ ಮೇಧಾಸ್ಮೃತಿಬಲಪ್ರದಮ್ ||
ಅಶ್ವಿಭ್ಯಾಂ ವಿಹಿತಂ ಹೃದ್ಯಂ ಕೂಷ್ಮಾಂಡಕರಸಾಯನಮ್ |
ದೀಪ್ತಾಗ್ನಾ ವಿಧಿರೇಷಸ್ಯಾನ್ಮಂದೇ ದೀಪನಪಾಚನಃ ||
ಯಕ್ಷ್ಮೋಕ್ತಕ್ಷಯಿಣಾಂ ಶಸ್ತೋ ಗ್ರಾಹೇ ಶಕೃತಿ ತು ದ್ರವೇ ||
(ವೈ. ಸಾ. ಸಂ. 166)

ಹಳೇ ಬೂದಿಕುಂಬಳಕಾಯಿಯ ಹೊರಗಿನ ಸಿಪ್ಪೆಯನ್ನೂ, ಒಳಗಿನ ಬೆಂಡನ್ನೂ, ತೆಗೆದು ಬಿಟ್ಟು, ಮಧ್ಯದ ತಿರುಳನ್ನು ಸಣ್ಣದಾಗಿ ಹೆಚ್ಚಿ, ೧೦೦ ಪಲ ಹೋಳುಗಳನ್ನು ಕುದಿಯುವ ನೀರಿನ ಸೆಕೆಯಿಂದ ಬೆವರಿಸಿ, (ಒಂದು ಕವಳಿಗೆಯೊಳಗೆ ಅರ್ಧಾಂಶ ನೀರು ತುಂಬಿ, ಬಾಯಿಗೆ ವಸ್ತ್ರಕಟ್ಟಿ ಆ ವಸ್ತ್ರದ ಮೇಲೆ ಹೋಳುಗಳನ್ನು ಹರಡಿ, ಮುಚ್ಚಿ ಒಂದು ಗಳಿಗೆ ಕುದಿಸಿದರೆ ಸಾಕಾದೀತು, ಹೋಳು ಸ್ವಲ್ಪ ಮೃದುವಾಗಬೇಕು.) ಹಿಂಡಿ ರಸವನ್ನು ತೆಗೆದು ಬೇರೆ ಇಟ್ಟುಕೊಂಡು, ಹೋಳುಗಳನ್ನು ಬಿಸಿಲಿನಲ್ಲಿ ಒಣಗಿಸುವದು. ಒಂದು ತಾಮ್ರದ ಬಾಣಲೆಯಲ್ಲಿ (ಅಥವಾ ಕಂಚಿನ ಉರುಳಿಯಲ್ಲಿ) ಒಂದು ಪ್ರಸ್ಥ ದನದ ತುಪ್ಪವನ್ನು ಕಾಯಲಿಕ್ಕಿಟ್ಟು, ಅದು

ಕಾದ ಮೇಲೆ, ಆ ತಿರುಳ ಬಾಳಕವನ್ನು ಒಂದೇ ಸಾರಿ ಹಾಕಿ ಹುರಿಯುವದು. ಕಾಳುಗಳ ವರ್ಣ ಜೇನಿನಂತೆ ಕೆಂಪಾದ ಕೂಡಲೇ, ಪಾತ್ರವನ್ನು ಒಲೆಯಿಂದ ಕೆಳಗೆ ಇಳಿಸಿ, ತೇಲುವ ಆ ಕಾಳುಗಳನ್ನು ಸೌಟಿನಿಂದ ತೆಗೆದು ಸ್ವಲ್ಪ ಬಿಸಿಯಾಗಿರುವಾಗಲೇ ಕುಟ್ಟಿ, ಸಣ್ಣದಾಗಿ ಚೂರ್ಣ ಮಾಡಿಟ್ಟುಕೊಳ್ಳುವದಲ್ಲದೆ, ತುಪ್ಪವನ್ನು ಬೇರೆ ಇರಿಸುವದು. ೧೦೦ ಪಲ ಕಲ್ಲುಸಕ್ಕರೆಯನ್ನು ಪುಡಿಮಾಡಿ, ಆ ಪುಡಿಯನ್ನೂ ಎರಡು ಪ್ರಸ್ಥ ಕುಂಬಳಕಾಯಿಯ ರಸವನ್ನೂ (ಅದೇ ದಿನ ಕುಂಬಳ ಕಾಯನ್ನು ಹೆಚ್ಚಿದ್ದಾದರೆ ಬೆವರಿಸಿದ ಹೋಳುಗಳಿಂದ ತೆಗೆದಿಟ್ಟಿದ್ದ ರಸ ಆಗಬಹುದು. ಇಲ್ಲವಾದರೆ ಬೇರೆ ಕುಂಬಳ ಹೋಳನ್ನು ಅದೇ ರೀತಿ ಬೆವರಿಸಿ ರಸ ತೆಗೆಯಬೇಕು) ಹಾಕಿ ಪಾಕ ಮಾಡುವದು. ಸಕ್ಕರೆ ಪಾಕಕ್ಕೆ ಬರುವ ಸಮಯದಲ್ಲಿ, ಹಿಪ್ಪಲಿ, ಶುಂಠಿ ಮತ್ತು ಜೀರಿಗೆ ೨ ಪಲ ಪ್ರಕಾರ, ತ್ರಿಜಾತಕ, ಕೊತ್ತಂಬರಿ ಮತ್ತು ಬಿಳೇ ಕಾಳುಮೆಣಸು, ಇವುಗಳು ಅರ್ಧ ಪಲ ಪ್ರಕಾರ, ಈ ೮ ಬಗೆ ಜಿನಸುಗಳ ವಸ್ತ್ರಗಾಳಿತ ಚೂರ್ಣವನ್ನೂ, ಕುಂಬಳ ಹೋಳುಗಳ ಚೂರ್ಣವನ್ನೂ ಪ್ರತ್ಯೇಕವಿಟ್ಟ ತುಪ್ಪವನ್ನೂ ಹಾಕಿ ಬೆರಸಿ, ಬೇಯಿಸಿ, ಪಾಕನೋಡಿ ಪಾತ್ರವನ್ನು ಕೆಳಗೆ ಇಳಿಸುವದು. ಪಾಕವು ತಣಿದ ಮೇಲೆ ಅರ್ಧ ಪ್ರಸ್ಥ ಜೇನನ್ನು ಬೆರಸುವದು. ಆ ಮೇಲೆ ರಸಾಯನವನ್ನು ತೆಗೆದು ಭರಣಿಯಲ್ಲಿ ತುಂಬಿ ಸರಿಯಾಗಿ ಬಾಯಿಮುಚ್ಚಿ, ೧ ಪಕ್ಷಕಾಲದ ವರೆಗೆ ಅಕ್ಕಿ ರಾಶಿ ಅಥವಾ ಬತ್ತದ ರಾಶಿಯಲ್ಲಿ ಹುಗಿದಿಡಬೇಕು. ಅನಂತರ ಈ ರಸಾಯನವನ್ನು ಸೇವಿಸಿದ್ದಲ್ಲಿ, ಕೆಮ್ಮು, ಬಿಕ್ಕಟ್ಟು, ಅರುಚಿ, ಉಬ್ಬಸ, ರಕ್ತಪಿತ್ತ, ಕ್ಷತಕ್ಷೀಣ ಸಹ ಪರಿಹಾರವಾಗುವವು; ಎದೆಯಲ್ಲಿ ಒಡಕು ಉಂಟಾಗಿದ್ದರೆ ಅದನ್ನು ಕೂಡಿಸುವದಕ್ಕೂ, ಬುದ್ಧಿ, ನೆನಪು ಮತ್ತು ಬಲ, ಇವುಗಳನ್ನು ವೃದ್ಧಿಸಲಿಕ್ಕೂ ಈ ರಸಾಯನದಲ್ಲಿ ಶಕ್ತಿ ಇರುತ್ತದೆ. ಅದು ಅಶ್ವಿನೀ ದೇವತೆಗಳಿಂದ ವಿಧಿಸಲ್ಪಟ್ಟದ್ದು ಮತ್ತು ಮನೋಹರವಾದದ್ದು; ಅಗ್ನಿ ಚುರುಕುಳ್ಳವರಿಗೆ ಅದು ಒಳ್ಳೇ ರಸಾಯನ, ಅಗ್ನಿ ಮಂದವಾಗಿದ್ದರೆ, ಈ ರಸಾಯನವು ದೀಪನ, ಪಾಚನಶಕ್ತಿಗಳನ್ನುಂಟುಮಾಡುವದು, ಮತ್ತು ರಾಜಯಕ್ಷ್ಮರೋಗದಿಂದ ಕ್ಷಯಿಸಿದವರ ಮುಖ ತೆಳ್ಳಗಾಗಿದ್ದರೆ ಅದನ್ನು ಕಟ್ಟಿಸುವದಕ್ಕೆ ಪ್ರಶಸ್ತವಾದದ್ದು

ಷರಾ ಈ ಯೋಗವು ವಾಗ್ಭಟನ ಅಷ್ಟಾಂಗಹೃದಯದ 'ಕಾಸಚಿಕಿತ್ಸಿತಂ' ಎಂಬ ಅಧ್ಯಾಯದಲ್ಲಿ ಕಾಣುವಂಥಾದ್ದೇ. ಪಾಠಭೇದಗಳು ಇದ್ದಾಗ್ಯೂ, ಅರ್ಥಭೇದ ಉಂಟಾಗುವಂಥವು ಇಲ್ಲ. ಮೂಲದಲ್ಲಿ ವಿವರಿಸಿದ ಹೋಳನ್ನು ಪುನಃ ತುಪ್ಪದಲ್ಲಿ ಬೇಯಿಸಿ, ಹೋಳು ಜೇನಿನ ವರ್ಣಕ್ಕೆ ಬರುತ್ತಲೇ, ಅದಕ್ಕೇನೇ ಕಲ್ಲುಸಕ್ಕರೆ ಪುಡಿಯನ್ನೂ, ಹಿಪ್ಪಲಿ ಮೊದಲಾದ ಔಷಧಗಳ ಚೂರ್ಣವನ್ನೂ ಹಾಕಬೇಕೆಂತಲ್ಲದೆ, ಹೋಳನ್ನು ಹಿಂಡಬೇಕೆಂತಾಗಲೀ, ಬಿಸಿಲಿನಲ್ಲಿ ಅದನ್ನು ಒಣಗಿಸಬೇಕೆಂತಾಗಲೀ, ಸಕ್ಕರೆಯ ಪಾಕಕ್ಕೆ ಪ್ರತ್ಯೇಕ ದ್ರವವನ್ನು ಕೂಡಿಸಬೇಕೆಂತಾಗಲೀ ಇಲ್ಲ (ಪು '74) ಅದಕ್ಕನುಸಾರವಾಗಿ ಬೆವರಿಸಿದ ಹೋಳನ್ನು ಹಿರಿವಿ, ತುಪ್ಪ ಕೂಡಿಸಿ, ಪಾಕಕ್ಕೆ ಇಟ್ಟು, ಹೋಳಿನ ವರ್ಣ ಕೆಂಪಾದ ಕೂಡಲೆ, ಸಕ್ಕರೆ ಮೊದಲಾದವುಗಳನ್ನು ಬೆರಸಿ, ಪಾಕಮಾಡುವ ಕ್ರಮ ಬಹಳವಾಗಿ ಉಂಟು.

ಶಾ ದಲ್ಲಿ (ಪು 82-3) ಕಾಣುವ ಕೂಷ್ಮಾಂಡಾವಲೇಹ ಯೋಗದ ಔಷಧಗಳು ಇವೇ. ಆದರೆ, ಕುಂಬಳ ಕಾಯಿಯ ಹೋಳಿಗೆ ಎರಡು ಪಾಲು ನೀರಿಟ್ಟು ಅರ್ಧಾಂಶ ಬತ್ತಿಸಬೇಕೆಂತಲೂ, ಅನಂತರ ಹೋಳನ್ನು ವಸ್ತ್ರದಲ್ಲಿ ಕಟ್ಟಿ ಹಿಂಡಿ, ಬಿಸಿಲಿನಲ್ಲಿ ಅಲ್ಪವಾಗಿ ಒಣಗಿಸಬೇಕೆಂತಲೂ, ಆ ಮೇಲೆ ಆ ಹೋಳುಗಳನ್ನು (ಸಬ್ಬುಗದ ತಲೆಯಿಂದ ಅಥವಾ) ಶೂಲೆಯ ಕೊನೆಯಿಂದ ಹೊಡೆದು ತುಂಡುಮಾಡಿದನಂತರ ಅದನ್ನು ತಾಮ್ರದ ಪಾತ್ರೆಯಲ್ಲಿ ಎಂಟು ಪಲ (ಪ್ರಸ್ಥವಲ್ಲ) ತುಪ್ಪ ಕೂಡಿಸಿಕೊಂಡು, ಸ್ವಲ್ಪ (ಕೆಂಪಾಗುವತನಕವಲ್ಲ) ಹುರಿದು, ಅನಂತರ ಅದಕ್ಕೆ ಹಿಂದೆ ಹೇಳಿದ ಕುಂಬಳ ಹೋಳಿನ ನೀರನ್ನೂ (ಹಿಂಡಿದ ನೀರು ಸಮೇತ ಎಂತ ಆಗಿರಬೇಕು) ಸಕ್ಕರೆಯನ್ನೂ ಕೂಡಿಸಿ, ಒಟ್ಟಾಗಿ ಬೇಯಿಸಬೇಕೆಂತಲೂ, ಒಳ್ಳೇ ಪಾಕ ಬಂದ ಮೇಲೆ ಹಿಪ್ಪಲಿ ಮೊದಲಾದವುಗಳ ಚೂರ್ಣವನ್ನು ಬೆರಸಬೇಕೆಂತಲೂ ಹೇಳಲ್ಪಟ್ಟಿದೆ.

ಈ ಎರಡು ವಿಧಾನಗಳಿಗಿಂತ ಮೇಲೆ ಅರ್ಥ ಬರೆಯುವಲ್ಲಿ ಹೇಳಲ್ಪಟ್ಟ ಕ್ರಮವು ಪ್ರಶಸ್ತವಾದದ್ದು. ಹಾಗೆ ಪಾಕ ಮಾಡಿದ ಲೇಹವು ದೀರ್ಘಕಾಲದ ವರೆಗೆ ಕೆಡದೆ ಒಳ್ಳೇ ಸ್ಥಿತಿಯಲ್ಲಿರುತ್ತದೆ.

ಲವಂಗಪಟ್ಟೆ, ಏಲಕ್ಕಿ, ಅಥವಾ ದಾಳ್ಚೀನಿಯ ಎಲೆ, ಇವು ಮೂರು ದ್ರವ್ಯಗಳ ಸಮುದಾಯಕ್ಕೆ 'ತ್ರಿಜಾತ' ಎನ್ನುವದು. ದಾಳ್ಚೀನಿ ಎಲೆಯ ಬದಲಾಗಿ ಪಚ್ಚೆಲೆ, ಎಂಬ (ಪಚ್ಚತೆನೆ ಗಿಡದ) ಎಲೆಯನ್ನು ಮಲಯಾಳ ಸಂಪ್ರದಾಯದವರಲ್ಲಿ ಅನೇಕರು ಉಪಯೋಗಿಸುತ್ತಾರೆ. ಅವುಗಳಲಿ ಪ್ರತಿಯೊಂದನ್ನು ಅರ್ಧಪಲ ಪ್ರಕಾರ ತೆಗೆದುಕೊಳ್ಳಬೇಕು.

ಆ ಎಲೆಯನ್ನು ಬಿಟ್ಟು ವಾಯುವಿಳಂಗವನ್ನೂ, ಜೀರಿಗೆಯನ್ನು ಒಂದು ಪಲಕ್ಕೆ ತಗ್ಗಿಸಿ ಒಂದು ವರೆ ಶುದ್ಧ ಅಶ್ವಗಂಧಿಯನ್ನೂ, ಸೇರಿಸಿದರೆ ರಸಾಯನದ ಗುಣವು ಹೆಚ್ಚುವದು ಈ ರಸಾಯನ ಸೇವಿಸಿದೊಡನೆ ಅನುಪಾನವಾಗಿ ಮುಕ್ಕಾಲು, ಅರ್ಧ, ಅಥವಾ ಕಾಲು, ಕುಡ್ತೆ ಕಾಯಿಸಿದ ಹಾಲನ್ನು ವಾತಾದಿ ದೋಷವಿಚಾರದ ಮೇಲೆ ರೋಗಿಗೆ ಕುಡಿಯ ಹೇಳುವದು ಪ್ರಾಯಶಃ ಅಗತ್ಯವಾದ್ದು

'ರಕ್ತಪಿತ್ತ' ಚಿಕಿತ್ಸೆಯಲ್ಲಿ ಹೇಳುವ 'ಖಂಡಕೂಷ್ಮಾಂಡಕಾವಲೇಹ'ದ ಮತ್ತು 'ಕಾಸ' ಚಿಕಿತ್ಸೆಯಲ್ಲಿ ಬರೆದ 'ವಾಸಾಕೂಷ್ಮಾಂಡಕಾವಲೇಹ'ದ ಯೋಗಗಳನ್ನು ನೋಡಿ

53. ಪಲಂ ವಿಂಶತ್ಯಶ್ವಗನ್ಧಾಂ ಸೂಕ್ಷ್ಮಚೂರ್ಣಸ್ತು ಕಾರಯೇತ್ ।
ದ್ರೋಣದ್ವಯಂ ಗವಾಂ ಕ್ಷೀರಂ ಗೋಘೃತಂ ಪ್ರಸ್ಥಮಾತ್ರಕಮ್
ಸರ್ವಮೇಕೀಕೃತಂ ಪಾತ್ರೇ ಶನೈರ್ಮೃದ್ವಗ್ನಿನಾ ಪಚೇತ್ ।
ಅಶ್ವಗಂಧ ರಸಾಯನ ಚಿಕ್ಕಣಂ ಪಕ್ವಮಾಯಾತೇ, ಸಿತಾ ದಶಪಲಂ ತಥಾ ॥
ಚಾತುರ್ಜಾತಕಧಾನ್ಯಾಕಂ ದ್ರಾಕ್ಷಾಖರ್ಜೂರಚನ್ದನಮ್ ।
ಜಾತೀಫಲಂ ಶಟೀ ಗ್ರಂಥಿಸ್ತುಗಾಕ್ಷೀರಕಟುತ್ರಯಮ್
ಹ್ರೀಬೇರಂ ದೇವಕುಸುಮಂ ಗ್ರನ್ಥಿಕಂ ಚವ್ಯಚಿತ್ರಕಮ್ ।
ಪ್ರತ್ಯೇಕಂ ಕರ್ಷಮಾತ್ರಸ್ತು ಘೃತಾರ್ಧಂ ಮಾಕ್ಷಿಕಂ ಕ್ಷಿಪೇತ್
ಶೀತೀಭೂತಂ ನಿಧಾತವ್ಯಂ ಧಾನ್ಯೇ ಪಕ್ಷಂ ತಥೈವ ಚ ।
ಸಾಯಂ ಪ್ರಾತಶ್ಚ ಸೇವೇತ ಜ್ಞಾತ್ವಾ ಚಾಗ್ನಿಬಲಂ ನರಃ
ಷಡ್ವಿಧಾಂಶ್ಚ ಕ್ಷಯಾನ್ ಹನ್ತಿ ತಥೈಕಾದಶರೂಪಿಣಃ ।
ರಕ್ತಪಿತ್ತಂ ಚಾಮ್ಲಪಿತ್ತಂ ಕಾಮಿಲಾಂ ಪಾಂಡುತಾಮಪಿ
ಅಸ್ಥಿಜ್ವರಂ ಪುರಾಣಂ ಚ ನಾಶಯೇನ್ನಾತ್ರಸಂಶಯಃ ।
ಅಗ್ನಿದೀಪ್ತಿಕರಂ ಚೈವ ಹ್ಯೋಜೋಬಲವಿವರ್ಧನಮ್ ॥
ಗರ್ಭಿಣೀವೃದ್ಧಬಾಲಾನಾಂ ಸೌಕುಮಾರ್ಯಂ ಪ್ರಶಸ್ಯತೇ ।
ಕೃಶಾನಾಂ ಬೃಂಹಣಂ ಬಲ್ಯಂ ಕ್ಷೀಣವೀರ್ಯಪ್ರವರ್ಧನಮ್
ಭಾಷಿತಂ ಕಾಮದೇವೇನ ಹ್ಯಶ್ವಗಂಧರಸಾಯನಮ್ ॥

(ಇಂದ್ರಕಣ್ವವಲ್ಲಭ ರಚಿತ ವೈದ್ಯಚಿನ್ತಾಮಣಿ)

(ಶುದ್ಧಮಾಡಿದ) ಅಶ್ವಗಂಧಿ ೨೦ ಪಲವನ್ನು ಸಣ್ಣದಾಗಿ ಚೂರ್ಣಿಸಿ, ೧೬ ಕುತ್ತಿ ದನದ ಹಾಲಿನಲ್ಲಿ ಕಲಸಿ, ೫ ಕುಡತ ದನದ ತುಪ್ಪವನ್ನು ಸೇರಿಸಿ, ಸಣ್ಣ ಉರಿಯಿಂದ ಕುದಿಸುವದು. ಚಿಕ್ಕಣ ಪಾಕ ಬಂದಾಗ್ಗೆ ಕೂಡಿಸತಕ್ಕ ಚೂರ್ಣಕ್ಕೆ. ಚಾತುರ್ಜಾತಕ, ಕೊತ್ತಂಬರಿ, ದ್ರಾಕ್ಷೆ, ಖರ್ಜೂರ, ಶ್ರೀಗಂಧ, ಜಾಯಿಕಾಯಿ, ಕಚೋರ, ಭದ್ರಮುಷ್ಟಿ, ಬಿದಿರುಪ್ಪು, ತ್ರಿಕಟುಗಳು, ಮುಡಿವಾಳ, ಲವಂಗ, ಹಿಪ್ಪಲಿಮೂಲ, ಕಾಡುಮೆಣಸಿನ ಬೇರು, ಚಿತ್ರಮೂಲ, ಇವುಗಳಲ್ಲಿ ಪ್ರತಿಯೊಂದು ಕಾಲುಪಲ ಪ್ರಕಾರ ಕೂಡಿಸಿ ಮಾಡಿದ ವಸ್ತ್ರಗಾಲಿತ ಪುಡಿಯನ್ನೂ ಹತ್ತು ಪಲ ಕಲ್ಲುಸಕ್ಕರೆ ಪುಡಿಯನ್ನೂ ಬೆರಸಿ, ಒಲೆಯಿಂದ ಕೆಳಗಿಳಿಸಿ, ಸಾಕಷ್ಟು ತಣಿದ ಮೇಲೆ ೨॥ ಕುಡತೆ ಜೇನನ್ನು ಕೂಡಿಸುವದು. ಈ ರಸಾಯನವನ್ನು ಒಂದು ಪಕ್ಷ ಕಾಲದ ವರೆಗೆ ಧಾನ್ಯರಾಶಿಯಲ್ಲಿ ಹುಗಿದಿಟ್ಟು, ಅನಂತರ ತನ್ನ ಅಗ್ನಿಬಲ ನೋಡಿಕೊಂಡು ಬೆಳಿಗ್ಗೆಯೂ ಸಂಜೆಯೂ ಸೇವಿಸುತ್ತಾ ಬರುವದು. ಅದರಿಂದ ಆರು ವಿಧವಾದ ಅಥವಾ ಹನ್ನೊಂದು ಲಕ್ಷಣಗಳುಳ್ಳ ಕ್ಷಯಗಳು, ರಕ್ತಪಿತ್ತ, ಆಮ್ಲಪಿತ್ತ, ಕಾಮಿಲೆ, ಪಾಂಡು, ಅಸ್ಥಿ

ಜ್ವರ, ಹಳೇಜ್ವರ, ಇವುಗಳೆಲ್ಲಾ ಪರಿಹಾರವಾಗುವದಕ್ಕೆ ಸಂದೇಹವಿಲ್ಲ. ಅಗ್ನಿದೀಪನವಾಗಿ ಓಜಸ್ಸು ಮತ್ತು ಬಲ ವೃದ್ಧಿಯಾಗುವವು; ಎಳೇ ಶರೀರವನ್ನುಂಟುಮಾಡುತ್ತದೆ, ಗರ್ಭಿಣಿಯರಿಗೂ, ಮುದುಕರಿಗೂ, ಬಾಲಕರಿಗೂ ಪ್ರಶಸ್ತ; ಒಣಗಿದ ದೇಹವನ್ನು ಪುಷ್ಟಿಮಾಡುತ್ತದೆ, ಬಲ ಕೊಡುತ್ತದೆ; ಮತ್ತು ಕ್ಷೀಣವಾದ ವೀರ್ಯವನ್ನು ವೃದ್ಧಿಮಾಡುತ್ತದೆ. ಈ ಅಶ್ವಗಂಧಿ ರಸಾಯನದ ಯೋಗವು ಕಾಮದೇವನಿಂದ ಹೇಳಲ್ಪಟ್ಟದ್ದು.

ಪರಾ 'ಚಕ್ಕಣ'ಪಾಕದ ವರ್ಣನಕ್ಕೆ 1ನೇ ಭಾಗದ XX—44(b) ನೋಡಿ.

54. ಅಶ್ವಗನ್ಧ(?ನ್ಧಾ)ಬಲಾಭೀರುಸ್ಥಿರಾಜೀವನ್ತಿಗೋಕ್ಷುರಾನ್ ।
ಶಿಫಾಂ ಪಚೇಜ್ಜಲೇ ದ್ರೋಣೇ ತ್ವಷ್ಟಭಾಗಾವಶೇಷಿತೇ ॥
ಸರ್ಪಿಃಪ್ರಸ್ಥಂ ಪಚೇದೇತೈಃ ದ್ವಿಗುಣಕ್ಷೀರಸಂಯುತಮ್ ।
ಚನ್ದನೋತ್ಪಲಯಷ್ಟ್ಯಾಹ್ವಾಕೃಷ್ಣಾದ್ರಾಕ್ಷಾಕಶೇರುಭಿಃ ॥
ದ್ವಿಮೇದಾದಾರುಮಂಜಿಷ್ಠಾತುಕಾಪುಂಡ್ರಕಪದ್ಮಕೈಃ ।
ದುರಾಲಭಾವೃಷಸಟೀಶೃಂಗಿ(?ಗೀ)ಭಾರ್ಙ್ಗೀಪುನರ್ನವೀ ।
ಅಗರ್ವತಿವಿಷಾಪಾಠಾವಾಲಕೋಶೀರನಾಗರಮ್ ।
ಸರ್ಪಿಃ ಪಕ್ವಂ ಪರಂ ಸ್ವರ್ಯಂ ರಕ್ತಮಾಂಸಬಲಪ್ರದಮ್ ॥
ರಕ್ತಪಿತ್ತಂ ಮಹಾರಕ್ತಂ ಸ್ತ್ರೀಣಾಂ ವಿಸ್ಫೋಟತೃಡ್ಭ್ರ(?ವಿಭ್ರ)ಮಾನ್ ।
ವಿಸರ್ಪಕಾಮಂಗದಾಹಂ ತೃಷ್ಣಾಂ ಛರ್ದಿಂ ಚ ದುರ್ಜಯಾಮ್ ॥
ಕಾಸಂ ಶ್ವಾಸಂ ಪ್ರತಿಶ್ಯಾಯಂ ಶೋಷಾ(?ಷ)ಶೋಷಾ(?ಷ)ಕೃತಾಮಯಾನ್ ।
ಪಾನವಸ್ತ್ಯಾದಿಭಿಃ ಶೀಘ್ರಂ ಜಯೇತ್ಕಾನ್ತಿವರಪ್ರದಮ್ ॥
ವಸ್ತಿಯೋನಿರುಜಸ್ಸರ್ವಾಃ ಪ್ರಮೇಹಾಂಶ್ಚ* ವಿನಾಶಯೇತ್ ।
ಕ್ಷಯಕ್ಷೀಣಶರೀರಾಣಾಂ ನಾಸ್ತ್ಯನ್ಯತ್ ಶರಣಂ ನೃಣಾಮ್ ॥
(ವೈ. ಸಾ. ಸಂ. 167 8)

ಅಶ್ವಗಂಧಾದಿ ಘೃತ

* "ವಸ್ತಿಯೋನಿರುಜಸ್ಸರ್ವಾಪ್ರಮೇಹೇನ" ಎಂತ ಮೂಲದಲ್ಲಿರುವದನ್ನು ತಿದ್ದಿಕೊಂಡದೆ

ಅಶ್ವಗಂಧಿ, ಕಲ್ಲಂಗಡಲೆಬೇರು, ಓರೆಲೆಬೇರು, ಶತಾವರಿಬೇರು, ಜೀವಂತಿಗಡ್ಡೆ, ಆನೆನೆಗ್ಗಿಲು ಬೇರು ಮತ್ತು ನೈದಿಲೆಗಡ್ಡೆ (ಏಳು ತೊಲೆ ಪ್ರಕಾರ ತೆಗೆದುಕೊಂಡು) ಕುಟ್ಟಿ ಪುಡಿಮಾಡಿ, ೧೬ ಪ್ರಸ್ಥ ನೀರಿಟ್ಟು ೨ ಪ್ರಸ್ಥ ಕಷಾಯ ಮಾಡಿ, ಶೋಧಿಸಿದ ಆ ಕಷಾಯಕ್ಕೆ ೧ ಪ್ರಸ್ಥ ತುಪ್ಪ, ೨ ಪ್ರಸ್ಥ ಹಾಲು ಮತ್ತು (ಕಲ್ಕವಾಗಿ) ಶ್ರೀಗಂಧ, ಕೆಂದಾವರೆ (ಅಥವಾ ನೈದಿಲೆಗಡ್ಡೆ), ಜ್ಯೇಷ್ಠಮಧು, ಹಿಪ್ಪಲಿ, ದ್ರಾಕ್ಷೆ, ಸೇಕಿನಗಡ್ಡೆ (ಕಶೇರು), ಮೇದೆ, ಮಹಾಮೇದೆ, ತುಪ್ಪ ದೇವದಾರ, ಮಂಜಿಷ್ಠ, ಬಿದಿರುಪ್ಪು, ಪುಂಡರೀಕ, ಪದ್ಮಕಾಷ್ಠ, ಬಳ್ಳಿತುರಚನ ಬೇರು, ಆಡುಸೋಗೆಬೇರು, ಕಚ್ಚೂರ, ಕರ್ಕಟಶೃಂಗಿ, ನಿರ್ವಿಷದ ಬೇರು, ಪುನರ್ನವಿ ಬೇರು, ಅಗಿಲು ಗಂಧ, ಅತಿವಿಡೆ, ಪಾಡಾವಳಿಗಡ್ಡೆ, ಮುಡಿವಾಳ, ಲಾಮಂಚ, ಶುಂಠಿ, ಇವು (೧ ವರಹ ತೂಕ = ತೊಲೆ ½ ಪ್ರಕಾರ)ಗಳ ಚೂರ್ಣವನ್ನು ಕೂಡಿಸಿ, ಪಾಕಮಾಡಿ ಶೋಧಿಸಿಟ್ಟುಕೊಂಡ ತುಪ್ಪವು, ಸ್ವರವನ್ನೂ, ರಕ್ತವನ್ನೂ, ಮಾಂಸವನ್ನೂ, ಬಲವನ್ನೂ ಕೊಡುವದು; ರಕ್ತಪಿತ್ತ, ಸ್ತ್ರೀಯರ ಪ್ರದರವ್ಯಾಧಿ, ವಿಸ್ಫೋಟ, ಬಾಯಾರಿಕೆ, ತಲೆತಿರುಕು, ವಿಸರ್ಪ, ಅಂಗ

ಗಳ ಉರಿ, ಬಾಯಾರಿಕೆ, ಕಠಿಣವಾದ ವಾಂತಿ, ಕೆಮ್ಮು, ಉಬ್ಬಸ, ನೆಗಡಿ, ಶೋಷ, ಶೋಷ ದಿಂದುಂಟಾದ ವ್ಯಾಧಿಗಳನ್ನು ಸಹ, ಪಾನದಿಂದಲೂ ವಸ್ತಿ ಮುಂತಾದವುಗಳಿಗೆ ಉಪಯೋಗಿ ಸುವದರಿಂದಲೂ, ಬೇಗನೇ ಗೆಲ್ಲುವದು; ಕಾಂತಿಯನ್ನುಂಟುಮಾಡುವದು; ಮೂತ್ರಕೋಶ ಮತ್ತು ಯೋನಿಯ ಎಲ್ಲಾ ರೋಗಗಳನ್ನೂ ಪ್ರಮೇಹಗಳನ್ನೂ ನಾಶಪಡಿಸುವದು, ಕ್ಷಯ ದಿಂದ ಕ್ಷೀಣವಾದ ಶರೀರ ಉಳ್ಳವರಿಗೆ ಇದಲ್ಲದೆ ಬೇರೆ ಕಾಪಾಡತಕ್ಕದ್ದು ಇಲ್ಲ.

55. ಕೂಷ್ಮಾಂಡಕಂ ಸಮಾದಾಯ ಜಲದ್ರೋಣೇ ವಿಪಾಚಯೇತ್ |
ಚತುರ್ಭಾಗಾವಶಿಷ್ಟೇಽಸ್ಮಿನ್ ಕಲ್ಕದ್ರವ್ಯಾಣಿ ಪೇಷಯೇತ್ ||

ಕೂಷ್ಮಾಂಡ ಘೃತ

ಕಾಕೋಲೀ ಕ್ಷೀರಕಾಕೋಲೀ ಸಾಶ್ವಗಂಧಾ ಚ ಪಿಪ್ಪಲೀ |
ಪರ್ಪಟಂ ಮುಸ್ತಕಂ ರಾಶ್ನಾ (?ಸ್ನಾ) ಶುಂಠೀ ಭಾರ್ಙೀ ಮಧೂಲಿಕಾ ||
ಸೈಂಧವಂ ಪಿಪ್ಪಲೀಮೂಲಂ ಚಿತ್ರಕಂ ಹಸ್ತಿಪಿಪ್ಪಲೀ |
ಪೃಥಗರ್ಧಪಲಾನೇತಾನ್ ದತ್ವಾ ಸರ್ಪಿಶ್ಚತುರ್ಗುಣೇ ||
ಕ್ಷೀರೇ ಚೇಕ್ಷುರಸೇ ತದ್ವತ್ ಶನೈರ್ಮೃದ್ವಗ್ನಿನಾ ಪಚೇತ್ |
ಏತತ್ಸರ್ಪಿಃ ಪ್ರಿಯಂ ಮಾನಂ (?ನ್ಯಂ) ಸರ್ವಕ್ಷಯವಿನಾಶನಮ್ ||
ವಿಶೇಷಾತ್ಪಿತ್ತಜಂ ಶೋಷಂ ಗುಲ್ಮಂ ಚ ವಿಷಮಜ್ವರಮ್ |
ಹಸ್ತಿ ಕೂಷ್ಮಾಂಡಕಘೃತಂ ಏತದ್ವರ್ಣಬಲಪ್ರದಮ್ ||
(ವೈ ಸಾ. ಸಂ. 169)

ಹಳೇ ಬೂದಿಕುಂಬಳಕಾಯಿಯ (೮ ಸೇರು) ಹೋಳನ್ನು ೧೬ ಪ್ರಸ್ಥ ನೀರಲ್ಲಿ ಬೇಯಿಸಿ, ೪ನೇ ೧ ಅಂಶಕ್ಕೆ ಬತ್ತಿಸಿ, ಸಿಕ್ಕುವ ಕಷಾಯ ಪ್ರಸ್ಥ ೪ಕ್ಕೆ, ತುಪ್ಪ ಪ್ರಸ್ಥ ೧. ಕಬ್ಬಿನ ರಸ ಪ್ರಸ್ಥ ೪, ಹಾಲು ಪ್ರಸ್ಥ ೪, ಮತ್ತು ಕಾಕೋಲೀ, ಕ್ಷೀರಕಾಕೋಲೀ, ಅಶ್ವಗಂಧಿ, ಹಿಪ್ಪಲಿ, ಪರ್ವಾಟಕ, ಭದ್ರಮುಷ್ಟಿ, ಅರತೆ (ರಾಶ್ನೆ), ಶುಂಠಿ, ನಿರ್ವಿಷದ ಬೇರು (ಗಂಟುಭಾರಂಗಿ), ಇಪ್ಪೆಹೂವು, ಸೈಂಧವಲವಣ, ಹಿಪ್ಪಲಿಮೂಲ, ಚಿತ್ರಮೂಲ, ಗಜಹಿಪ್ಪಲಿ, ಇವುಗಳೊಳಗೆ ಪ್ರತಿಯೊಂದು ಅರ್ಧ ಪಲ ಪ್ರಕಾರ ಕೂಡಿಸಿ, ಮಾಡಿದ ಚೂರ್ಣದ ಕಲ್ಕವನ್ನು ಕಷಾಯದಲ್ಲಿ ಅರೆದು ಸಹ ಬೆರಸಿ, ಸಣ್ಣ ಉರಿಯಿಂದ ನೆಲ್ಲಗೆ ಪಾಕಮಾಡಿ, ಶೋಧಿಸಿ ಇಟ್ಟುಕೊಂಡ ತುಪ್ಪವು ಕ್ಷಯಗಳನ್ನೆಲ್ಲಾ ವಿನಾಶಮಾಡುವದು; ಹಿತವೂ ಪೂಜ್ಯವೂ ಆಗಿರುತ್ತದೆ, ವಿಶೇಷವಾಗಿ ಪಿತ್ತ ದಿಂದುಂಟಾದ ಶೋಷವನ್ನೂ, ಗುಲ್ಮವನ್ನೂ, ವಿಷಮಜ್ವರವನ್ನೂ ಈ ಕೂಷ್ಮಾಂಡಘೃತವು ಜಯಿಸುತ್ತದೆ ಮತ್ತು ರೋಗಿಗೆ ಬಲವನ್ನೂ ವರ್ಣವನ್ನೂ ಕೊಡುವಂಥಾದ್ದಾಗಿರುತ್ತದೆ.

ಪರಾ ಕುಂಬಳಕಾಯಿಯ ಹೋಳನ್ನು 128 ಹಲ, ಅಂದರೆ 16 ಸೇರು, ತೆಗೆದುಕೊಳ್ಳಬೇಕೆಂತ ಅರ್ಥ ಬರೆದದ್ದು ಕಾಣುತ್ತದೆ ದ್ರೋಣವನ್ನು ಕೆಳಗೆ ಬರೆದ ಆಧಾರದ ಮೇಲೆ 32 ಪಲದ ಪ್ರಸ್ಥ 16, ಮತ್ತು ಕುಂಬಳ ಹೋಳು ಹಸಿ ಯಾದ್ದರಿಂದ ಅದನ್ನು ತೂಕದಲ್ಲಿ ದುಬಾರಿಯಾಗಿ ಉಪಯೋಗಿಸಬೇಕು, ಎಂಬ ವಿಧಿಗಳನ್ನನುಸರಿಸಿದರೆ ಅದು ಸರಿ ಆದರೆ ಅಷ್ಟು ಹೋಳುಗಳನ್ನು ಉಪಯೋಗಿಸಿದರೆ ಘೃತದ ಗುರುತ್ವ ಹೆಚ್ಚಾಗುತ್ತದೆ

ಲಾಜಾಪಾಯಸನಾರಿಕೇಲಸಲಿಲಂ ಮೂತ್ರಂ ಜಲಂ ಕಾಂಜಿಕಮ್ |
ದ್ವಾತ್ರಿಂಶತ್ಪಲಿತಂ ತದರ್ಧಮುದಿತಂ ಪ್ರಸ್ಥಂ ರಸೇ ಔಷಧೇ ||
ತೈಲಕ್ಷೌದ್ರಘೃತೇ ಚ ವಿಂಶತಿಪಲೋ ಕ್ಷೀರೇ ಚ ತ್ರಿಂಶತ್ಪಲಮ್ |
ದಧ್ನಃ ಪಂಚಕಪಂಚಕಂ ಗುಡಪಲಾ ಚಾಷ್ಟಾದಶಂ ಚೋಚ್ಯತೇ || (ವೈ ಸಾ. ಸಂ 122)

ಭತ್ತದ ಅರಳು, ಪಾಯಸ, ಸೀಯಾಳದ ನೀರು, ಗೋಮೂತ್ರ, ಸೀರು, ಹುಳಿಗಂಜಿ ಸೀರು, ಇವುಗಳ ಪ್ರಸ್ಥ ಎಂದರೆ ಮೂವತ್ತೆರಡು ಪಲ, ಸ್ವರಸದ ಔಷಧದ ಪ್ರಸ್ಥ ಹದಿನಾರು ಪಲ, ಎಣ್ಣೆ, ತುಪ್ಪ, ಜೇನು, ಇವುಗಳ ಪ್ರಸ್ಥ ಇಪ್ಪತ್ತು ಪಲ, ಹಾಲಿನ ಪ್ರಸ್ಥ ಮೂವತ್ತು ಪಲ, ಮೊಸರಿನ ಪ್ರಸ್ಥ ಇಪ್ಪತ್ತೈದು ಪಲ, ಬೆಲ್ಲದ ಪ್ರಸ್ಥ ಹದಿನೆಂಟು ಪಲ, ಎಂತ ತಿಳಿಯುತ್ತಾರೆ

56\. ಚವಿಕಾಯಾಸ್ಮೂಲಾರ್ಧಂ ಸ್ಯಾತ್ತತ್ಸಮಂ ಕಂಟಕಾರಿಕಾ |
ಕೃಷ್ಣಾ ತನ್ಮೂಲಮರಿಚಶೃಂಗಿ(?ಗೀ)ಭಾರ್ಙೀರ್ಝುಟಾವಚಾಃ ||
ಅಭಯಾ ಪುಷ್ಕರಜಟಾ ದಶಮೂಲಂ ಸುರದ್ರುಮಮ್ |
ಅಶ್ವಗಂಧಾ ಸಮೃದ್ವೀಕಾ ಕುಂಡಲ್ಯಾಲರ್ಕವಲ್ಯಪಿ ||
ವಾಶಾ ಕುಲೀರಶೃಂಗೀ ಚ ವೃಶ್ಚಿಕಾಲೀ ಚ ಚಿತ್ರಕಮ್ |
ಏತೇಷಾಂ ಷಟ್ಪಲಂ ಚಾಪಿ ಪೃಥಗೇವ ಸಮಾಹರೇತ್ ||
ತತ್ಸರ್ವಮೇಕತಃ ಕೃತ್ವಾ ಜಲದ್ರೋಣೇಷು ಸಪ್ತಸು |
ಅಷ್ಟಭಾಗಾವಶಿಷ್ಟಂ ಸ್ಯಾದ್ಯಾವತ್ತಾವದ್ವಿಪಾಚಯೇತ್ ||
ಕಷಾಯೇಽಸ್ಮಿನ್ಸುಘಾ(?ಪೂ)ತೇ ತು ಗುಳ(?ಡ)ಮರ್ಧತುಲಾಂ ಕ್ಷಿಪೇತ್ |
ಸುಪಾಕಂ ಸಾಧಯಿತ್ವಾ ತು ಪಂಚವಿಂಶತ್ಪಲಂ ಕ್ಷಿಪೇತ್ |
ಚೂರ್ಣೀಕೃತಾಯಾಃ ಪಿಪ್ಪಲ್ಯಾಃ ಶೀತೇಽಸ್ಮಿನ್ಮಧುರೇ(?ಪಿ)ಕ್ಷಿಪೇತ್ |
ಪ್ರಸ್ಥಾ(?ಸ್ಥಂ) ಸುಗುಪ್ತಂ ಸ್ಥಾತವ್ಯಂ ಮಾಸಂ ವಾ ಪಕ್ಷಮೇವ ವಾ ||
ಚಿರಕಾಲಂ ಸ್ಥಿತಂ ಶೋಷಂ ಲೇಹಯತ್ರೇನ(?ನಾತ್ತಸ್ಯ) ಸಾಧಯೇತ್ |
ಕಾಸಂ ಶ್ವಾಸಂ ವಮಿಂ ಹಿಕ್ಕಾಂ ಪ್ರತಿಶ್ಯಾಯಂ ಗುದಾಂಕುರಮ್ ||
ಗ್ರಹಣೀಮಗ್ನಿಸಾದಂ ಚ ಪ್ಲೀಹಂ ಚ ಜಲಕೂರ್ಮಕಮ್ |
ಗುಲ್ಮಾಂಶ್ಚಾಷ್ಟೌ ಉದಾವರ್ತಜಠರಶ್ವಯಥುಕ್ರಿಮೀನ್ ||
ವಿಶುದ್ಧಿಂ ಸ್ರೋತಸಾಂ ಕೃತ್ವಾ ರಪಧ್ಯಾ(ಕಫವ್ಯಾ)ಪ್ತಶರೀರಿಣಾಮ್ |
ರಾಜಯಕ್ಷ್ಮಾದಿಭೂತಾನಾಂ ಝಡಿತ್ವೇ(?ತ್ಯೇ)ಷ ನಿವರ್ತಕಃ ||
ಅನೇನೈವ ತು ಕಲ್ಪೇನ ಪಥ್ಯಂ ವಾ ಸಾಧಯೇತ್ಸುಧೀಃ ||
(ವೈ ಸಾ ಸಂ 174)

ಚವ್ಯಾರಿಷ್ಟ ಮತ್ತು ಪಥ್ಯಾರಿಷ್ಟ

ಕಾಡುಮೆಣಸಿನ ಬೇರು ಪಲ ೫೦, ಕಿರಿಗುಳ್ಳ(ಕಲ್ಲಂಟ)ದ ಬೇರು ಪಲ ೫೦, ಹಿಪ್ಪಲಿ, ಹಿಪ್ಪಲಿಮೂಲ, ಕಾಳುಮೆಣಸು, ಅತಿವಿಡೆ, ಸಿರ್ವಿಷದ ಬೇರು (ಗಂಟುಭಾರಂಗಿ), ನೆಲನೆಲ್ಲಿ, ಬಜೆ, ಅಣಲೆಕಾಯಿ, ಪುಷ್ಕರಮೂಲ, ಜಟಾಮಾಂಸಿ, ದಶಮೂಲಗಳು, ದೇವದಾರ, ಅಶ್ವಗಂಧಿ, ದ್ರಾಕ್ಷೆ, ನಾಯಿಸೊಣಗಿನ (ನಸುಗುನ್ನಿ) ಬೇರು, ಬಿಳೇ ಎಕ್ಕೆಯ ಹೂವು, ಅಜಮೋದ, ಆಡುಸೋಗೆ, ಕರ್ಕಟಶೃಂಗಿ, ಚೇಳುಬಾಲಗಿಡದ ಬೇರು, ಚಿತ್ರಮೂಲ, ಇವುಗಳೊಳಗೆ ಪ್ರತಿಯೊಂದು ಪಲ ೬, ಇವುಗಳನ್ನೆಲ್ಲಾ ಕುಟ್ಟಿ, (ಒಂದು ಮಣ್ಣಿನ ಹಂಡೆಯಲ್ಲಿ ಹಾಕಿ) ಏಳು ದ್ರೋಣ (೧೧೨ ಪ್ರಸ್ಥ) ನೀರು ಹೊಯಿದು, ಕುದಿಸಿ ೮ನೇ ೧ ಅಂಶ ಉಳಿಯುವ ವರೆಗೆ ಬತ್ತಿಸಿ, ಶೋಧಿಸಿದ ಕಷಾಯಕ್ಕೆ ೫೦ ಪಲ ಹಳೇ ಬೆಲ್ಲದ ಪುಡಿಯನ್ನೂ ಕೂಡಿಸಿ, ಪಾಕ

ಮಾಡಿ, ಸರಿಯಾದ ಪಾಕಬರುತ್ತಲೇ, ೨॥ ಪಲ ಹಿಪ್ಪಲಿಯ ವಸ್ತ್ರಗಾಲಿತ ಚೂರ್ಣವನ್ನು ಬೆರಸಿ ಮತ್ತು, ತಣಿದ ಮೇಲೆ, ೧ ಪ್ರಸ್ಥ ಜೇನನ್ನು ಹಾಕಿ, ಮುಗುಚಿ (ಆ ಪಾಕವನ್ನು ಒಂದು ಬಾನೆಯಲ್ಲಿ ತುಂಬಿ ಅದಕ್ಕೆ ಸರಿಯಾಗಿ ಬಾಯಿಕಟ್ಟಿ), ಭೂಮಿಯಲ್ಲಿ ಭದ್ರವಾಗಿ ಒಂದು ತಿಂಗಳು ಅಥವಾ ಒಂದು ಪಕ್ಷಕಾಲ ಹುಗಿದಿಡುವದು. ಆ ಮೇಲೆ ಅಲ್ಲಿಂದ ತೆಗೆದಿಟ್ಟುಕೊಂಡು, ಆ ಅರಿಷ್ಟವನ್ನು ಸೇವಿಸುತ್ತಾ ಬರುವದರಿಂದ, ಬಹುಕಾಲದ ಶೋಷರೋಗ, ಕೆಮ್ಮು, ಉಬ್ಬಸ, ವಾಂತಿ, ಬಿಕ್ಕಟ್ಟು, ನೆಗಡಿ (ಪೀನಸ), ಮೂಲವ್ಯಾಧಿಯ ಮೊಳೆ, ಗ್ರಹಣೀ, ಅಗ್ನಿಮಾಂದ್ಯ, ಪ್ಲೀಹವ್ಯಾಧಿ, ಜಲಕೂರ್ಮ ಎಂಬ ಗಡ್ಡೆವ್ಯಾಧಿ, ಎಂಟು ವಿಧವಾದ ಗುಲ್ಮ, ಉದಾವರ್ತ, ಉದರವ್ಯಾಧಿ, ಶ್ವಯಥು, ಕ್ರಿಮಿಗಳು ಸಹ ಪರಿಹಾರವಾಗುವವು, ಮತ್ತು ಅದು ಕಫ ವ್ಯಾಪಿಸಿದ ಶರೀರದವರ ಸ್ರೋತಸ್ಸುಗಳನ್ನು ಶೋಧಿಸಿ, ರಾಜಯಕ್ಷ್ಮ ಮುಂತಾದ ಭೂತಗಳನ್ನು ಬೇಗನೇ ಬಿಡಿಸುವದು. ಇದೇ ವಿಧಿಪ್ರಕಾರ (ಕಾಡುಮೆಣಸಿನ ಬೇರಿನ ಬದಲಾಗಿ ಅಣಿಲೆಕಾಯಿಯನ್ನು ಹಾಕಿ) ಪಥ್ಯಾರಿಷ್ಟವನ್ನು ಬುದ್ಧಿವಂತನು ತಯಾರಿಸತಕ್ಕದ್ದು.

೧ಸರಾ ಪಿಪ್ಪಲೀಮೂಲಂ, 2 ಚವಿಕಾ (ಚವ್ಯಂ), 3 ಗಜಪಿಪ್ಪಲೀ, ಇವುಗಳನ್ನು ಕುರಿತು ಧ. ನಿ., ರಾ. ನಿ. ಮತ್ತು ಬಾ. ಪ್ರ. ಕೊಟ್ಟಿರುವ ವರ್ಣನಗಳಿಂದ, ವಿಶೇಷವಾಗಿ ಗಜಪಿಪ್ಪಲೀ ಎಂಬದು ಚವಿಕೆಯ ಫಲ ಎಂತ ಹೇಳಲ್ಪಟ್ಟಿರುವದರಿಂದ, ಆ ವಸ್ತುಗಳು ಯಾವವು ಎಂಬ ವಿಷಯದಲ್ಲಿ ಸಂದೇಹಕ್ಕೆ ಬಹಳ ಆಸ್ಪದ ಉಂಟು. ಇತ್ತಲಾಗಿನ ಗ್ರಂಥಕಾರರು ಬೇರೆ ಬೇರೆ ವಿಧವಾಗಿ ತಿಳಿಸಿದ್ದಾರೆ. ಪಿಪ್ಪಲೀಮೂಲ ಎಂಬಲ್ಲಿ ಕಾಡುಪಿಪ್ಪಲಿಯ ಬಳ್ಳಿ, ಚವಿಕಾ ಎಂಬಲ್ಲಿ ಕಾಡುಮೆಣಸಿನ ಬೇರು, ಗಜಪಿಪ್ಪಲೀ ಎಂಬಲ್ಲಿ ಆನೆ ಪಿಪ್ಪಲಿ ಎಂಬ ಹಿಪ್ಪಲಿ ಭೇದ, ಹೀಗೆ ಉಪಯೋಗಿಸುವದು ಈ ಪ್ರಾಂತದಲ್ಲಿ ಸಂಪ್ರದಾಯವಾಗಿರುತ್ತದೆ. ಚವಿಕಾ ಎಂಬದಕ್ಕೆ 'ಕೋಲವಲ್ಲೀ' ಎಂತ ನಾಮಾಂತರವಿರುವದರಿಂದ ಅದು ಒಂದು ಜಾತಿಯ ಮೆಣಸಿನ ಬಳ್ಳಿ ಎಂತ ಅರ್ಥವಾಗುತ್ತದೆ. ಒಳಗೆ ಬಾವು, ಹುಣ್ಣು ಇತ್ಯಾದಿ ಇರಬಹುದಾದ ಶೋಫ, ಗುಲ್ಮ ಮುಂತಾದ ರೋಗಗಳಲ್ಲಿ, 'ಚವ್ಯ'ಸ್ಥಾನದಲ್ಲಿ ಕಾಡುಮೆಣಸಿನ ಬೇರನ್ನು ಉಪಯೋಗಿಸುವದರಿಂದ ವಿಶೇಷ ಗುಣ ಸಿಗುತ್ತದೆಂಬದು ಅನುಭವಸಿದ್ಧ.

57. (1) ರೋಗಿಯ ಪ್ರಾಯ 23 ವರ್ಷ, ದೀರ್ಘಕಾಲದ ಕೆಮ್ಮು, ಕಫದ ಜೊತೆಯಲ್ಲಿ ರಕ್ತ ಕಾಣುತ್ತದೆ, ಉಬ್ಬಸ, ಕ್ಷೀಣತೆ, ವಾತನಾಡಿ ಸ್ಥಾನಚ್ಯುತ, ಪಿತ್ತಕಫಗಳು ಸ್ತಬ್ಧ.—

ದೃಷ್ಟಫಲಚಿಕಿತ್ಸೆ

ಕಡೀರುಬೇರು, ಆನೆಕಡೀರುಬೇರು, ಬಿಲ್ಲಪತ್ರೆಬೇರು, ಆಡುಸೋಗೆಯ ಹಸಿ ಯೆಲೆ, ಭದ್ರಮುಷ್ಟಿ, ಕಾಡುಮೆಣಸಿನಬೇರು, ಕರಿಗುಳ್ಳದಬೇರು, ಬಳ್ಳಿತುರಚನ(ಬೀಳುಪಚ್ಚೆ ರಂಗಿ)ಬೇರು, ಇವು ತೊಲ | ರಂತೆ, ಅರ್ಧಾಂಶ ಕಷಾಯದಲ್ಲಿ ಅತಿಸಾರಮೂಲಮಾತ್ರೆ |||, ಮಹಾಜ್ವರಾಂಕುಶ |||ರಂತೆ, ಕಲ್ಲುಸಕ್ಕರೆ ಪುಡಿ ಮತ್ತು ಜೇನು ಕೂಡಿಸಿಕೊಂಡು, ದಿನಕ್ಕೆ ೩ ಸರ್ತಿ ಪ್ರಕಾರ ೮ ದಿನ, ಅನಂತರ ೧೫ ದಿನ ಅತಿಸಾರಮೂಲಮಾತ್ರೆ ಸ್ಥಾನದಲ್ಲಿ ಕಸ್ತೂರ್ಯಾದಿ ಕೂಡಿಸಿಕೊಂಡು ಅದೇ ರೀತಿ ಸೇವಿಸಿದ್ದರಿಂದ ಕ್ಷೇಮವಾಯಿತು.

(2) ರೋಗಿಗೆ 28 ವರ್ಷ, ಕೆಮ್ಮು, ಮೈಬಿಸಿ, ಪಕ್ಕಗಳಲ್ಲಿ ಶೂಲೆ, ನೊರೆಕೂಡಿದ ಕಫ ಬರುವದು; ವಾತನಾಡಿಯು ಸ್ಥಾನದಲ್ಲಿ ಬಲಿಷ್ಠ, ಪಿತ್ತಕಫಗಳು ಸ್ಥಾನಚ್ಯುತ.— ಆಡುಸೋಗೆ ಯೆಲೆರಸ ೨ ಡ್ರಾಂ (ಚಮಚೆ), ನೀರುಳ್ಳಿ ರಸ ೧ ಡ್ರಾಂ, ಜೇನು ೧ ಡ್ರಾಂ, ಇದರಲ್ಲಿ ಬೆಳಿಗ್ಗೆ ಮ. ಜ್ವ. ೧ ರಂತೆ, ಸಂಜೆಗೆ ಕಸ್ತೂರ್ಯಾದಿ ೧ ರಂತೆ, ೨ ಚಿಮಿಟಿ ಹಿಪ್ಪಲಿ ಪುಡಿ, ೪ ಚಿಮಿಟಿ ಕಲ್ಲುಸಕ್ಕರೆ ಪುಡಿ ಅಥವಾ ಜ್ಯೇಷ್ಠಮಧುವಿನ ಚೂರ್ಣ, ಕೂಡಿಸಿಕೊಂಡು ಸೇವಿಸಿದ್ದರಿಂದ ಕ್ಷೇಮ.

(3) ರೋಗಿಯ ಪ್ರಾಯ 37 ವರ್ಷ, ಕಂಠಸ್ವರ ಬಿದ್ದದೆ, ೮ ತಿಂಗಳಿಂದ ಕೆಮ್ಮು, ಪಕ್ಕಗಳಲ್ಲಿ ಮಲಗಲಿಕ್ಕಾಗುವದಿಲ್ಲ, ಜ್ವರ, ಛಳಿಯುಂಟು; ಪಿತ್ತಕಫನಾಡಿಗಳು ಅಸ್ಥಿರ.— ಆಡುಸೋಗೆ ಎಲೆ ರಸ ೨ ಡ್ರಾಂ, ನೀರುಳ್ಳಿ ರಸ ೧ ಡ್ರಾಂ, ಶುಂಠಿ ರಸ ǁ ಡ್ರಾಂ, ಜೇನು ǁ ಡ್ರಾಂ, ಇದರಲ್ಲಿ ಕಸ್ತೂರ್ಯಾದಿ ೧ ರಂತೆ, ಜ್ವರ ಹೆಚ್ಚು ಇರುವಾಗ್ಗೆ ಮಹಾಜ್ವರಾಂಕುಶ ೧ ರಂತೆ; ಗಂಜಿಗೆ ಹಸಿ ಶುಂಠಿ ಮತ್ತು ಬಳ್ಳಿತುರಚನ ಬೇರು ಕೂಡಿಸಿಕೊಳ್ಳುವದು; ಬಾಯಾರಿಕೆಗೆ ಕೊತ್ತುಂಬರಿ, ಕಾಳುಮೆಣಸು, ಮತ್ತು ಬಳ್ಳಿತುರಚನ ಬೇರು, ಇವುಗಳನ್ನು ಕೂಡಿಸಿ ಕುದಿಸಿದ ನೀರನ್ನು, ಹಾಲು ಮತ್ತು ಸಕ್ಕರೆ ಬೆರಿಸಿ, ಕುಡಿಯಕೊಡುವದು — ಈ ಪ್ರಕಾರ ೮ ದಿನ ಚಿಕಿತ್ಸೆಮಾಡಿದ್ದರಿಂದ ತನಗೆ ಕೆಮ್ಮು ಬಹಳ ಮಟ್ಟಿಗೆ ವಾಸಿಯಾಗಿದೆ, ಹಗಲು 1-2 ಕೆಮ್ಮು ಬರುತ್ತದಷ್ಟೆ; ಹಸಿವೆ ಹೆಚ್ಚಿದೆ; ನಿದ್ರೆ ಸರಿಯಾಗಿ ಬರುತ್ತದೆ; ಹಗಲು ಹೊತ್ತು ಮಾತ್ರ, ಹೊತ್ತು ತಪ್ಪಿ, ಅಲ್ಪಸ್ವಲ್ಪ ಮೈಕಾಯುತ್ತದೆ, ಆಗ್ಗೆ ಸ್ವಲ್ಪ ಛಳಿ ಇರುತ್ತದೆಂತ ಹೇಳಿದ -ಮೊದಲು ಹೇಳಿದ ರಸಗಳೊಂದಿಗೆ ತುಳಸೀರಸ ಅರ್ಧ ಡ್ರಾಂ ಕೂಡಿಸಿ ಮ. ಜ್ವ. ೧ ರಂತೆ ಬೆಳಿಗ್ಗೆ ಮಾತ್ರ ಜ್ವರ ನಿಃಶೇಷವಾಗುವ ತನಕ, ಇತರ ವೇಳೆ ಮೊದಲಿನಂತೆ ಕಸ್ತೂರ್ಯಾದಿ ೧ರಂತೆ ಸೇವಿಸಬೇಕೆಂತಲೂ, ಛಳಿ ನಿಂತರೆ ತುಳಸೀರಸವನ್ನು ಬಿಡಬೇಕೆಂತಲೂ, ಹೇಳಿ ೮ ಮ ಜ್ವ. ಮತ್ತು ೨೪ ಕಸ್ತೂರ್ಯಾದಿ ಮಾತ್ರೆಗಳನ್ನು ಕೊಡಲಾಯಿತು. ಇದರಿಂದ ಎಷ್ಟರಮಟ್ಟಿಗೆ ಗುಣವಾಯಿತೆಂಬದು ರೋಗಿಯು ಪುನಃ ನಮ್ಮಲ್ಲಿಗೆ ಬಾರದ್ದರಿಂದ ತಿಳಿಯಲಿಲ್ಲ. ಅವನು ನಮಗೆ ಪರಿಚಯವಿಲ್ಲದ ದೂರ ಗ್ರಾಮದ ನಿವಾಸಿಯಾಗಿದ್ದ. ಗುಣವಾದ್ದು ಸಾಕೆಂತ ಯೋಚಿಸಿ ಚಿಕಿತ್ಸೆಯನ್ನು ನಿಲ್ಲಿಸಿರಬೇಕು.

(4) ಬೆಳೆದ ಅನೇಕ ದೀರ್ಘ ರೋಗಗಳಲ್ಲಿ ಲಕ್ಷಣ ಭೇದಗಳು ತೋರಿದ ಹಾಗೆ ಔಷಧಯೋಗವನ್ನು ಬದಲಾಯಿಸುತ್ತಾ ದೀರ್ಘಕಾಲದ ವರೆಗೆ ಚಿಕಿತ್ಸೆ ನಡಿಸುವದು ಅಗತ್ಯವಾಗುತ್ತದಾದ್ದರಿಂದ, ಅಂಥಾ ಚಿಕಿತ್ಸೆಗಳನ್ನು ಸವಿಸ್ತಾರವಾಗಿ ಈ ಗ್ರಂಥದಲ್ಲ ಗರ್ಭಿಸುವದು ಅಸಾಧ್ಯ. ಅಂಥಾ ಚಿಕಿತ್ಸೆಗಳ ಒಂದು ದೃಷ್ಟಾಂತವನ್ನು ಉಪೋದ್ಘಾತದ 31ನೇ ಸಂಖ್ಯೆಯಲ್ಲಿ ವಿವರಿಸಿಯದೆ. ಅದು ಇಲ್ಲಿ ಬರೆಯಬಹುದಾದಂಥಾದ್ದು. ಆ ಚಿಕಿತ್ಸೆಯಲ್ಲಿ ಪ್ರಯೋಗಿಸಲ್ಪಟ್ಟ ಧಾತ್ರ್ಯಾದಿ ತೈಲದ ಯೋಗವನ್ನು ಹಿಂದೆ ಉನ್ಮಾದ ಚಿಕಿತ್ಸೆಯ ಅಧ್ಯಾಯದಲ್ಲಿ ವರ್ಣಿಸಿಯದೆ. ಬಲಾಶ್ವಗಂಧಾದಿ ತೈಲದ ಕ್ರಮವು ಮುಂದೆ ಜ್ವರಪ್ರಕರಣದಲ್ಲಿ (XVI ನೇ ಅಧ್ಯಾಯ) ವಿವರಿಸಲ್ಪಡುವದು. ಕಸ್ತೂರ್ಯಾದಿ ಮಾತ್ರೆಯ ಯೋಗ ಹೇಗೆಂದರೆ —

ಕಸ್ತೂರ್ಯಾದಿ ಮಾತ್ರೆ.

(1) ಕಸ್ತೂರಿ, (2) ಶುದ್ಧ ಪಾದರಸ, (3) ಶುದ್ಧ ಗಂಧಕ, (4) ಶುದ್ಧ ಇಂಗಳೀಕ, (5) ಶುದ್ಧ ವತ್ಸನಾಭಿ, (6) ಶುದ್ಧ ಕಾಸರ್ಕನ ಬೀಜ, (7) ಶುದ್ಧ ಟಂಕಣಕಾರ, (8) ಪುತ್ರಜೀವಿಮಣಿಯ ತಿರುಳು, (9) ಕಹಿಬೇವಿನ ಒಣಗಿಸಿದ ಎಲೆ, (10) ಜಾಯಿಕಾಯಿ, (11) ಜಾಪತ್ರೆ, (12) ಬಿಳೇ ಕಾಳುಮೆಣಸು, (13) ಹಿಪ್ಪಲಿ, (14) ಒಣಶುಂಠಿ, (15) ಲವಂಗ, (16) ಶುದ್ಧ ಕರೀಉಮ್ಮತ್ತನ ಬೀಜ, (17) ಶ್ರೀಗಂಧ, (18) ಬಜೆ, (19) ಆಕಳಕರೆ, (20) ಜ್ಯೇಷ್ಠಮಧು, (21) ಬಳ್ಳಿತುರಚನ (ಬೀಳುಪಚ್ಚರಂಗಿಯ) ಬೇರು, (22) ಸಬ್ಬಸಿಗೆ (ಸತಾಪೆ), (23) ಪಚ್ಚೆಕರ್ಪೂರ, (24) ಕುಂಕುಮಕೇಸರ, (25) ಕಿರಾತಕಡ್ಡಿ, (26) ಅಣಿಲೆಕಾಯಿಯ ಸಿಪ್ಪೆ, (27) ತಾರೆ (ಶಾಂತಿ) ಕಾಯಿಯ ಸಿಪ್ಪೆ, (28) ನೆಲ್ಲಿಚಟ್ಟು, (29) ಏಲಕ್ಕಿ, (30) ಜೀರಿಗೆ, (31) ಕರಿಜೀರಿಗೆ, (32)

ಓಮ, (33) ಗಂಧ(ಬಾಲ)ಮೆಣಸು, (34) ಬಿದಿರುಪ್ಪು, (35) ಅಮೃತಬಳ್ಳಿಯ ಸತ್ವ, (36) ಶುದ್ಧ ಅಶ್ವಗಂಧಿ, (37) ಕಬ್ಬಿಣದ ಭಸ್ಮ, (38) ತುಪ್ಪದೇವದಾರ, (39) ಕಟುಕರೋಹಿಣೀ, (40) ವಾಯುವಿಳಂಗ, (41) ಭದ್ರಮುಷ್ಟಿ, ಇವುಗಳೊಳಗೆ ಕಬ್ಬಿಣದ ಭಸ್ಮ ತೊಲೆ ೧, ಮಿಕ್ಕ ನಾಲ್ವತ್ತು ಬಗೆಗಳು ತೊ. || ರಂತೆ, ತೆಗೆದುಕೊಂಡು ದಶಮೂಲಗಳ ಕಷಾಯದಿಂದ ಅರೆದು, ಗುಲಗುಂಜೀ ಗಾತ್ರಕ್ಕೆ ಮೀರದ ಮಾತ್ರೆಗಳನ್ನು ಮಾಡಿ, ನೆಳಲಲ್ಲಿ ಒಣಗಿಸಿಟ್ಟುಕೊಂಡು, ಒಂದೆರಡು ಮಾತ್ರೆಗಳನ್ನು ರೋಗಕ್ಕೂ ದೋಷಗಳಿಗೂ ಯುಕ್ತವಾದ ಅನುಪಾನದಿಂದ ಕೊಡಲು ಶೋಷ, ಉಬ್ಬಸ, ಅಶಕ್ತಿ, ಉದರವಾಯು, ವಾಯುವಿನ ಸಿಕ್ಕು, ಗರ್ಭಶೂಲೆ, ಮೂರ್ಛೆ ಮುಂತಾದ ಹಲವು ವ್ಯಾಧಿಗಳು ಪರಿಹಾರವಾಗುವದಲ್ಲದೆ, ಬಲವೂ ಪುಷ್ಟಿಯೂ ಉಂಟಾಗುವವು; ಸ್ತ್ರೀಯರು ಪ್ರಸವಕಾಲದಲ್ಲಿ ಈ ಮಾತ್ರೆಯನ್ನು ಹಾಲಿನಲ್ಲಿ ಸಕ್ಕರೆ ಕೂಡಿಸಿ ಸೇವಿಸಿದ್ದಲ್ಲಿ ವೇದನೆಯು ಲಘುವಾಗಿ, ಸುಖವಾಗಿ ಪ್ರಸವವಾಗುವರು; ಪ್ರಸವದ ಆಯಾಸವನ್ನು ಪರಿಹರಿಸುವದಕ್ಕೆ ಇದು ಉತ್ತಮ.

ಟಂಕಣಕಾರದ ಶುದ್ಧಿ

ಟಂಕಣಕಾರವನ್ನು ಕಬ್ಬಿಣದ ಬಾಣಲೆಯಲ್ಲಿ ಹಾಕಿ ಸಣ್ಣ ಉರಿಯಿಂದ ಹುರಿದು, ಅರಳು ಮಾಡಿಕೊಳ್ಳಬೇಕು. ಎಣ್ಣೆ ಬೆರಿಸಿಟ್ಟಂಥಾದ್ದಾದರೆ, ಗೋಮೂತ್ರದಿಂದಲೂ ಬಿಸಿನೀರಿನಿಂದಲೂ ಜಾಗ್ರತೆಯಿಂದ ಉಜ್ಜಿ, ಎಣ್ಣೆಯನ್ನು ಮುಂದಾಗಿ ತೆಗೆದುಬಿಡಬೇಕು.

ಇಂಗಳೀಕದ ಶುದ್ಧಿ

ಇಂಗಳೀಕವನ್ನು ಒಂದು ಗಾಜಿನ ಬಟ್ಟಲಲ್ಲಿ ಹಾಕಿ, ಅದು ಮುಳುಗುವಷ್ಟು ಸ್ತ್ರೀಮೊಲೆಹಾಲನ್ನು ಹೊಯಿದು, ಮುಚ್ಚಿಟ್ಟು, ಮಾರಣೆ ದಿನ ಆ ಹಾಲನ್ನು ಬಸಿದು ತೆಗೆದು, ಬೇರೆ ಹಾಲನ್ನು ಹೊಯ್ಯಬೇಕು. ಈ ರೀತಿ ಮೂರು ದಿನ ಮಾಡಿದ ಮೇಲೆ ಇಂಗಳೀಕದ ತುಂಡುಗಳನ್ನು ನೀರಿನಿಂದ ತೊಳೆದು, ಉಪಯೋಗಿಸುವದು.

ಕರೀ ಉಮ್ಮತ್ತದ ಬೀಜದ ಶುದ್ಧಿ

ಕರೀಉಮ್ಮತ್ತದ ಬೀಜವನ್ನು ಅದೇ ರೀತಿಯಲ್ಲಿ ಮೂರು ದಿನ ದನದ ಹುಳಿ ಮಜ್ಜಿಗೆಯಲ್ಲಿ ನೆನೆಸಿಟ್ಟು, ಆ ಮೇಲೆ ಬಿಸಿ ನೀರಿನಿಂದ ತೊಳೆದು, ಬಿಸಿಲಿನಲ್ಲಿ ಒಣಗಿಸಿ, ಉಪಯೋಗಿಸುವದು.

ಕಬ್ಬಿಣದ ಭಸ್ಮ

ಕಬ್ಬಿಣದ ಭಸ್ಮವನ್ನು ಹಿಂದೆ 'ಅಗ್ನಿರಸ'ದ ವರ್ಣನದಲ್ಲಿ ಹೇಳಲ್ಪಟ್ಟ ಕ್ರಮದಿಂದ ತಯಾರಿಸುವದು.

ಅಮೃತಬಳ್ಳಿಯ ಸತ್ವ ತೆಗೆಯುವ ಕ್ರಮ.

ಬೆಳೆದ ಅಮೃತಬಳ್ಳಿಯನ್ನು ಸಂಗ್ರಹಿಸಿ, ಸಿಪ್ಪೆಯನ್ನು ತೆಗೆದುಬಿಟ್ಟು, ಸಣ್ಣ ತುಂಡುಗಳಾಗಿ ಕತ್ತರಿಸಿ, ಚನ್ನಾಗಿ ಒರಳಿನಲ್ಲಿ ಕುಟ್ಟಿದ ಮುದ್ದೆಯನ್ನು ಒಳ್ಳೇ ನೀರಿನಲ್ಲಿ ಕದಡಿ, ಒಂದು ರಾತ್ರಿ ಇಟ್ಟು, ಮಾರಣೇ ದಿನ ಹಿಸುಕಿ ಚರಟವನ್ನು ಹಿಂಡಿ ತೆಗೆದುಬಿಟ್ಟು, ಉಳಿದ ಅಂಶವನ್ನು ವಸ್ತ್ರದಿಂದ ಶೋಧಿಸಿ, ಆ ನೀರನ್ನು ಹನಿಸಿದ್ದಲ್ಲಿ, ಪಾತ್ರದ ಅಡಿಯಲ್ಲಿ ಸುಣ್ಣದ ಹಾಗಿನ ಬಿಳೇ ಸತ್ವ ನಿಲ್ಲುತ್ತದೆ. ಇದರೊಂದಿಗೆ ಬೆರೆತಿರುವ ಇತರ ಬಳ್ಳಿಯ ಅಂಶವನ್ನು ಪ್ರತ್ಯೇಕಿಸಿ ತೆಗೆಯುವದಕ್ಕೆ ಎರಡು ಮೂರು ಸರ್ತಿ ವಸ್ತ್ರಗಾಲಿತ ಮಾಡುವದು ಮತ್ತು ಐದಾರು ಸರ್ತಿ ಹನಿಸುವದು ಅಗತ್ಯವಾಗಬಹುದು. ಆ ಶಂಖವರ್ಣದ ಮಡ್ಡನ್ನು ಬಿಸಿಲಿನಲ್ಲಿ ಒಣಗಿಸಿ, ಅರೆದು ಬಾಟ್ಲಿಯಲ್ಲಿ ತುಂಬಿಸಿ, ಇಟ್ಟುಕೊಳ್ಳುವದು. ಬೆರಿಕೆಯಿಲ್ಲದ ಸತ್ವವು, ಬಹು ವರ್ಷಗಳು ಕಳೆದಾಗ್ಯೂ, ಕೆಡದೆ ಸುರಕ್ಷಿತವಾಗಿ ಉಳಿಯುತ್ತದೆ. ಈ ಸತ್ವಕ್ಕೇನೇ ಅಮೃತಶರ್ಕರೆ ಎನ್ನುವದು.

ಮಾದಳಹಣ್ಣಿನ ಸಿಪ್ಪೆಯನ್ನೂ ಒಳಗಿನ ಬೆಂಡನ್ನೂ ತೆಗೆದುಬಿಟ್ಟು, ಮಧ್ಯದ ತಿರುಳನ್ನು ತೆಗೆದುಕೊಂಡು ಹೋಳುಗಳಾಗಿ ಹೆಚ್ಚುವದು. ಆ ಬೆಂಡನ್ನು ಜಜ್ಜಿ ಹಿಂಡಿ, ರಸವನ್ನು ತೆಗೆದು ಪ್ರತ್ಯೇಕ ಇಟ್ಟುಕೊಳ್ಳಬೇಕು. ಆ ಹೋಳುಗಳ ಭಾರ ತೊ. ೧೦೦ಕ್ಕೆ ದನದ ಹಾಲು ಕುಡ್ತೆ ೨, ಕಲ್ಲುಸಕ್ಕರೆ ಪುಡಿ ತೊ. ೧೦೦, ಹಸಿ ಶುಂಠಿಯ ರಸ ಕುಡ್ತೆ ೧, ಜೇನು ಕುಡ್ತೆ ೧, ದನದ ತುಪ್ಪ ಕುಡ್ತೆ ೨, ಮತ್ತು ಶುದ್ಧ ಅಶ್ವಗಂಧಿ ತೊ. ೩, ಜ್ಯೇಷ್ಠಮಧು ತೊ. ೩, ನೆಲ್ಲಿಚಟ್ಟು ತೊ. ೩, ಬಾದಾಮಿನ ಬೀಜ ತೊ. ೩, ವಾಯುವಿಳಂಗ ತೊ. ೧||, ಬಿದಿರುಪ್ಪು ತೊ. ೧, ಜಾಯಿಕಾಯಿ ತೊ. ೧, ಹಿಪ್ಪಲಿ ತೊ. ||, ಒಣಶುಂಠಿ ತೊ. |, ಹಿಪ್ಪಲಿಮೂಲ ತೊ. ||, ಲವಂಗ ತೊ. |, ಬಿಳೇ ಕಾಳುಮೆಣಸು ತೊ. ||, ಅಮೃತಬಳ್ಳಿ ಸತ್ವ ತೊ. |, ಏಲಕ್ಕಿ ತೊ. |=(೩), ಲವಂಗಪಟ್ಟೆ ತೊ. |=, ನಾಗಕೇಸರ ತೊ. |=, ಮತ್ತು ದಾಲ್ಚೀನಿಯ ಒಣಗಿಸಿದ ಎಲೆ ತೊ. |=; ಇವುಗಳೊಳಗೆ ಬಾದಾಮಿ ಬೀಜವನ್ನು ನೀರಿನಲ್ಲಿ ನೆನೆಸಿ ಸಿಪ್ಪೆತೆಗೆದು ಸಣ್ಣದಾಗಿ ಹೆಚ್ಚಿ ಇಟ್ಟುಕೊಳ್ಳಬೇಕು; ಅಶ್ವಗಂಧಿಬೇರನ್ನು ಸಣ್ಣ ತುಂಡುಗಳಾಗಿ ಕಡಿದು, ಮುಳುಗುವಷ್ಟು ಹಾಲಿನಲ್ಲಿ ಸಣ್ಣ ಉರಿಯಿಂದ ಹಾಲು ಆರುವ ವರೆಗೆ ಬೇಯಿಸಿ, ಬಿಸಿಲಿಗೆ ಇಟ್ಟು ಒಣಗಿಸಿದ ಮೇಲೆ ಅದನ್ನು ಮತ್ತು ಜ್ಯೇಷ್ಠಮಧು ಮುಂತಾದ ಇತರ ಜೀನಸುಗಳನ್ನು ಕುಟ್ಟಿ ವಸ್ತ್ರಗಾಲಿತ ಚೂರ್ಣ ಮಾಡಿಟ್ಟುಕೊಳ್ಳಬೇಕು; ಹಸಿ ಶುಂಠಿಯನ್ನು, ಸಿಪ್ಪೆತೆಗೆದು, ಕುಟ್ಟಿ, ವಸ್ತ್ರದಲ್ಲಿ ಹಾಕಿ ಹಿಂಡಿ ರಸ ತೆಗೆದು ಹನಿಯಲಿಕ್ಕಿಟ್ಟು, ಅಡಿಯಲ್ಲಿ ನಿಲ್ಲುವ ಸುಣ್ಣವನ್ನು ಬಿಟ್ಟು, ಮೇಲಿನ ರಸವನ್ನು ತೆಗೆದುಕೊಳ್ಳಬೇಕು; (ಒಂದು ಸೇರು ಒಳ್ಳೇ ಹಸಿ ಶುಂಠಿಯಿಂದ ಒಂದು ಕುಡ್ತೆ ರಸ ಸಿಕ್ಕುತ್ತದೆ.); ಹಣ್ಣಿನ ಹೋಳುಗಳನ್ನು ಹಾಲು ಕೂಡಿಸಿ ಬೇಯಿಸಬೇಕು; ಹೋಳುಗಳು ಮೆತ್ತಗಾದ ಮೇಲೆ, ಆ ಹೋಳುಗಳನ್ನೂ ಬಾದಾಮಿ ಬೀಜದ ಚೂರನ್ನೂ ತಿರುವುಕಲ್ಲಿನಲ್ಲಿ ಹಾಕಿ ನುಣ್ಣಗಾಗುವ ತನಕ ಅರೆಯಬೇಕು; ಕಲ್ಲುಸಕ್ಕರೆಯನ್ನು ಕುಟ್ಟಿ ಪುಡಿಮಾಡಿಕೊಳ್ಳಬೇಕು. ಶುಂಠಿರಸವನ್ನೂ, ಮಾದಳಹಣ್ಣಿನ ಬೆಂಡಿನ ರಸ ೨ ಕುಡ್ತೆಯನ್ನೂ, ಕಲ್ಲುಸಕ್ಕರೆ ಪುಡಿಯನ್ನೂ ಕಲಸಿ ಕಂಚಿನ ಉರುಳಿಯಲ್ಲಿ ಪಾಕಕ್ಕೆ ಇಡಬೇಕು. ಸಕ್ಕರೆ ಪಾಕಕ್ಕೆ ಬರುವ ಸಮಯದಲ್ಲಿ ಅರೆದಿಟ್ಟಿದ್ದ ಹಣ್ಣನ್ನು ಅದರೊಳಗೆ ಹಾಕಿ, ಮಗಚಿ, ಬೇಯಿಸುವದು. ಅದು ಪಾಕಕ್ಕೆ ಬರುವ ಸಮಯದಲ್ಲಿ ಚೂರ್ಣವನ್ನೂ ತುಪ್ಪವನ್ನೂ ಅದರೊಂದಿಗೆ ಕಲಸಿ, ಸಣ್ಣ ಉರಿಕೊಟ್ಟು, ಸರಿಯಾದ ಲೇಹ್ಯ ಪಾಕಕ್ಕೆ ಬರುತ್ತಲೇ, ಉರುಳಿಯನ್ನು ಒಲೆಯಿಂದ ಕೆಳಗಿರಿಸಿ, ಸಾಕಷ್ಟು ತಣಿದ ಮೇಲೆ ಜೇನನ್ನು ಹೊಯಿದು, ಕಲಸಿಟ್ಟುಕೊಳ್ಳುವದು. ಈ ರಸಾಯನವನ್ನು ಒಂದು ಪಕ್ಷಕಾಲ ಧಾನ್ಯರಾಶಿಯಲ್ಲಿ ಹುಗಿದಿಡುವದು ಒಳ್ಳೇದು. ಈ ರಸಾಯನದಿಂದ ಹೊತ್ತಿಗೆ ಅರ್ಧ ತೊಲೆಯಿಂದ ಒಂದೂವರೆ ತೊಲೆ ವರೆಗೆ ಕೊಡಬಹುದು. ಅದು ವೀರ್ಯ ವೃದ್ಧಿಗೂ ದೇಹಪುಷ್ಟಿಗೂ ಉತ್ತಮ, ಪಿತ್ತವಾತಾಧಿಕ್ಯವುಳ್ಳ ಅನೇಕ ರೋಗಗಳನ್ನು ತೊಲಗಿಸುವದು, ವಿಶೇಷವಾಗಿ ಶೋಷರೋಗದವರಿಗೆ ಹಿತವಾದದ್ದು.

ಮಾತುಳಂಗ ರಸಾಯನದ ಯೋಗ.

58. ಅಮಟೆಹಣ್ಣು, ಅಮೃತಬಳ್ಳಿ, ಅಶೋಕ, ಅಶ್ವಗಂಧಿ, ಅಷ್ಟವರ್ಗ (ಜೀವಕಾದಿ), ಆಡಿನ ಹಾಲು, ಆಡುಸೋಗೆ, ಆನೆಕಡೀರು(ಹೆಗ್ಗಲ್ಲಂಗಡಲೆ)ಬೇರು, ಆನೆಬೇಲ, ಇಪ್ಪೆಹೂವು, ಎವೆಮುರಿಸೊಪ್ಪು, ಕರ್ಕಟಶೃಂಗಿ, ಕಲ್ಲಂಗಡಲೆ ಬೇರು, ಕಾಡುಉದ್ದಿನ ಬೇರು, ಕಾಡುಮೆಣಸಿನ ಬೇರು, ಕಾಡುಹೆಸರಿನ ಬೇರು, ಕಾಶದರ್ಭೆ,

ಪೃಥಗ್ರೋಗೋಕ್ತೌಷಧಗಳು

ಕಾಶ್ಮಿರೀ (ಶಿವನಿ), ಸುರಗಿ (ಕಿಂಕಿರಾತ), ಕೆಂಪು ಮಂದಾರ, ಖರ್ಜೂರ, ಗುಗ್ಗುಳ, ಗುಲಗುಂಜಿ ಬೇರು, ಜಾಯಿಕಾಯಿ, ಜೀವಂತಿಗಡ್ಡೆ, ಜ್ಯೇಷ್ಠಮಧು, ತಾಳೀಸಪತ್ರೆ, ತುತ್ತಿ(ಉರ್ಕಿ)ಬೇರು, ತುಪ್ಪ, ದೇವದಾಳಿ, ದ್ರಾಕ್ಷಿ, ನೆಗ್ಗಿಲಮುಳ್ಳು, ನೆಲಕುಂಬಳದ ಗಡ್ಡೆ, ನೆಲನೆಲ್ಲಿ, ಪರೂಷಕ, ಬಳ್ಳಿತುರಚನ ಬೇರು, ಬಾಳೆಹಣ್ಣು, ಬಿದಿರುಪ್ಪು, ಬೂದಿಕುಂಬಳಕಾಯಿ, ಬೆಣ್ಣೆ, ಬೊಗರಿ ಹಣ್ಣು, ಮಾದಳಹಣ್ಣು, ಮೂವೆಲೆಬೇರು, ಲವಂಗ, ಲಿಂಬೆಹಣ್ಣು, ಶತಾವರಿ(ಹಲವು ಮಕ್ಕಳತಾಯಿ)ಬೇರು, ಶಿಷ್ಮಬಾಗೆ (ಮಲ. ಇರುಪ್ಪಳ ಮರಂ), ಶ್ರೀಗಂಧ, ಸಹದೇವಿ, ಸೀ ಲಿಂಬೆ, ಸುಗಂಧಿ(ನಾಮದ)ಬೇರು, ಹಿಪ್ಪಲಿ, ಹಿಪ್ಪಲಿಮೂಲ, ಹೆಗ್ಗುರುಟಿಗೆ (ಮಲ. ಪೆರು ನ್ಕುರುನ್ನ).

59. ಪಥ್ಯವರ್ಗ ಜೀರಿಗೆ, ಕಾಳುಮೆಣಸು ಮತ್ತು ತುಪ್ಪ ಕೂಡಿಸಿ ತಯಾರಿಸಿದ ಲಾವ ಮತ್ತು ತಿತ್ತಿರಿ ಪಕ್ಷಿಗಳ ಮಾಂಸರಸಗಳು, ಗೋದಿ, ಯವೆಗೋದಿ, ಅರುಣ ವರ್ಣದ ಅಕ್ಕಿಗಳು, ಅರ್ವತ್ತು ದಿನಗಳ ಬೆಳಿಕೆಯ ಅಕ್ಕಿಗಳು, ಹೆಸರು, ಕಡಲೆ, ಆಡಿನ ಮಾಂಸ-ಬೆಣ್ಣೆ-ಹಾಲು ಮತ್ತು ತುಪ್ಪ, ಮಾಂಸಾಶಿ ಮೃಗಗಳ ಮಾಂಸ, ಕುರಂಗ, ಕೃಷ್ಣಜಿಂಕೆ, ಮೊಲ, ಜಾಂಗಲಮೃಗಗಳ ಮಾಂಸರಸಗಳು, ಚಂದ್ರನ ಕಿರಣ, ಸಿಹಿರಸ (ಸಕ್ಕರೆ, ಜೇನು ಮುಂತಾದ್ದು), ಬಾಳೆಯ-ಹೆಬ್ಬಲಸಿನ ಮತ್ತು ಮಾವಿನ ಪಕ್ವವಾದ ಹಣ್ಣುಗಳು, ನೆಲ್ಲಿಹಣ್ಣು, ಖರ್ಜೂರ, ದ್ರಾಕ್ಷೆ, ತೆಂಗಿನಕಾಯಿ, ನುಗ್ಗೆಕೋಡು, ಚಿಂಚಿಮಿ ಕಲ್ಲುಸಕ್ಕರೆ, ಆಡುಸೋಗೆ, ಆಡಿನ-ಗೋವಿನ-ಮತ್ತು ಎಮ್ಮೆಯ ತುಪ್ಪ, ಕರ್ಪೂರ, ಕಸ್ತೂರಿ, ಶ್ರೀಗಂಧ, ತೈಲಾಭ್ಯಂಗ, ಸ್ನಾನ ಮತ್ತು ಶ್ವಾಸ-ಕಾಸ-ಸ್ವರಭೇದಗಳಿಗೆ ಉಕ್ತವಾದ ಪಥ್ಯವರ್ಗ.

60. ಅಪಥ್ಯವರ್ಗ ಮಲಶೋಧನ, ಮಲಮೂತ್ರಾದಿ ವೇಗಗಳ ತಡೆ, ಶ್ರಮ, ಮೈಥುನ, ಬೆವರಿಸುವದು, ಅಂಜನಕರ್ಮ, ಜಾಗರ, ಅತಿಸಾಹಸದ ಕೆಲಸ, ರೂಕ್ಷಗುಣವುಳ್ಳ ಅನ್ನಪಾನಗಳು, ವಿಷಮವಾದ ಭೋಜನ, ತಾಂಬೂಲ, ಬಚ್ಚಂಗಾಯಿ, ಹುರುಳಿ, ಉದ್ದು, ಬೆಳ್ಳುಳ್ಳಿ, ಬಿದಿರಿನ ಮೊಳಿಕೆ, ಹಿಂಗು, ಹುಳಿ-ಕಹಿ-ಮತ್ತು ಚೊಗರು ಪದಾರ್ಥಗಳು, ಎಲ್ಲಾ ಕಾರಗಳು, ಸೊಪ್ಪು ಶಾಕಗಳು, ಕ್ಷಾರ, ವಿರುದ್ಧವಾದ ಭೋಜನ, ಅವರೆ, ಹೀರೆಕಾಯಿ, ವಿದಾಹಿದ್ರವ್ಯಗಳು ಮತ್ತು ಕರಿತುಳಸಿ (ಕೃಷ್ಣಕರಿಲ್ಲಕಂ).

ಪರಾ ಎಳ್ಳೆಣ್ಣೆ, ಎಳ್ಳಿನ ಚೂರ್ಣ, ಹೊಸಧಾನ್ಯ, ಅಲಸಂದೆ, ಕಡಲೆ, ನುಗ್ಗೆಕೋಡು, ಬಾಳೆಕಾಯಿ, ಬಾಳೆಹಣ್ಣು ಮತ್ತು ಕುರಿಮಾಂಸ ಸಹ ಅಪಥ್ಯ ಎಂತ ಬೇರೊಂದು ಗ್ರಂಥ (ವೈ ಸಾ ಸಂ 176)

61. ಪ್ರಕರಣಾಂತ ಟಿಪ್ಪನಿ ಶ್ವಾಸಕೋಶದ ಬೇರೆ ಬೇರೆ ಭಾಗಗಳಲ್ಲಿ ಮತ್ತು ಕ್ರಮೇಣ ಶ್ವಾಸಕೋಶಕ್ಕೂ ಬಾಯಿಗೂ ಮಧ್ಯೇ ಶ್ವಾಸನಾಳದ ಬೇರ ಬೇರೆ ಭಾಗಗಳಲ್ಲಿ ಕಾಳುಗಳು (grains), ಮತ್ತು ಗ್ರಂಥಿಗಳು ಅಥವಾ ಗಡ್ಡಗಳು (nodules or tubercles) ಎಂಬ ಹಾಗಿನ ಬಹು ಸೂಕ್ಷ್ಮವಾದ ಬೆಳಿಕೆಗಳು ಉತ್ಪನ್ನವಾಗುವದು ಈ ರೋಗದ ಲಕ್ಷಣ ಎಂಬದರಿಂದ, ಅದಕ್ಕೆ ಟ್ಯೂಬರ್ಕ್ಯುಲೋಸಿಸ್ (tuberculosis) ಎಂಬ ಹೆಸರು ಪಾಶ್ಚಾತ್ಯ ವೈದ್ಯದಲ್ಲಿ ಇತ್ತಲಾಗಿ ವಾಡಿಕೆಗೆ ಬಂದದೆ. ಆ ಬೆಳಿಕೆಗಳು ಬರೇ ಕಣ್ಣಿಗೆ ಕಾಣದಷ್ಟು ಸೂಕ್ಷ್ಮವಾಗಿರಬಹುದು. ಅವು 'ಬೆಸಿಲ್ಲಸ್ ಟ್ಯುಬರ್ಕ್ಯುಲೋಸಿಸ್'(bacillus tuberculosis) ಎಂಬ ಒಂದು ಜಾತಿ ಅಣುಜೀವಿಗಳ ವ್ಯಾಪಾರ

ಎಂತಲೂ, ಆ ಅಣುಜೀವಿಗಳಲ್ಲಿ ಪಕ್ಷಿಜಾತಿಯನ್ನು ಬಾಧಿಸುವಂಥವು, ಜಾನುವಾರುಗಳಲ್ಲಿ ಕಾಣುವಂಥವು, ಮನುಷ್ಯಜಾತಿಯಲ್ಲಿ ತೋರುವಂಥವು, ಹೀಗೆ ಮೂರು ವಿಧ ಉಂಟೆಂತಲೂ, ರಾಜಯಕ್ಷ್ಮರೋಗಪೀಡಿತರಾದ ಮನುಷ್ಯರೊಳಗೆ ಸುಮಾರು ಹತ್ತು ಶತಾಂಶದವರಲ್ಲಿ ಕಾಣುವ ಅಣುಜೀವಿಗಳು ಜಾನುವಾರುಗಳಲ್ಲಿ ಕಾಣುವ ಜಾತಿಯವೇ ಎಂತಲೂ, ಒಬ್ಬರು ಡಾಕ್ಟರರು ಬರೆದಿದ್ದಾರೆ. ಮೊದಲು ಈ ರೋಗಕ್ಕೆ ಥೈಸಿಸ (phthisis) ಅಥವಾ ಕನ್ಸ ಮ್ಶನ್ (consumption ಅಂದರೆ ಕ್ಷಯ) ಎಂಬ ಹೆಸರೇ ಪಾಶ್ಚಾತ್ಯ ವೈದ್ಯರಲ್ಲಿಯೂ ಇದ್ದಂಥಾದ್ದು. ವಿಶೇಷವಾಗಿ ಶ್ವಾಸಕೋಶ ಕ್ಷಯವಾಗುತ್ತಾ ಬರುವದೇ ಈ ರೋಗದ ಮುಖ್ಯ ಲಕ್ಷಣ ಎಂಬದರಿಂದ ಪಾಶ್ಚಾತ್ಯ ವೈದ್ಯರು ಆ ಹೆಸರನ್ನಿಟ್ಟಿದ್ದದ್ದು. ಈ ರೋಗದ ವಿಶೇಷ ಲಕ್ಷಣವಾಗಿ ಇತ್ತಲಾಗಿ ಕಂಡುಬಂದ ಆ ಗ್ರಂಥಿಗಳು ಒಂದಕ್ಕೊಂದು ಕೂಡಿಕೊಂಡು ರೂಪಾಂತರಗಳನ್ನು ಪಡೆಯುವದುಂಟು. ಸ್ವಾಭಾವಿಕವಾಗಿ ಬಹು ಗಟ್ಟಿಯಾಗಿರುವ ಆ ಗ್ರಂಥಿಗಳು ಕೆಲವು ಸಂಗತಿಗಳಲ್ಲಿ ಮೆತ್ತಗಾಗಿ ಹುಣ್ಣಾಗುವದು ಮುಂತಾದ ಅವಸ್ಥಾಂತರ ಗಳನ್ನು ಪಡೆಯುತ್ತವೆ. ಅವು ಶ್ವಾಸಕೋಶ ಮತ್ತು ನಾಳದಲ್ಲಿ ಮಾತ್ರವಲ್ಲದೆ, ಯಕೃತ್ತು, ಪ್ಲೀಹ, ಕರುಳುಗಳು, ಹೃದಯ ಮುಂತಾದ ಅಂಗವಿಭಾಗಗಳಲ್ಲಿ ಸಹ ಉಂಟಾಗುವದುಂಟು. ಹೃದಯದಲ್ಲಿ ಅವು ಉತ್ಪನ್ನವಾದರೆ, ಹೃದಯ ಬಹಳ ಮುರುಟುತ್ತದೆ. ಕರುಳುಗಳಲ್ಲಿ ಅವು ಸಂಭವಿಸಿ ಕರುಳುಗಳ ಹೊದಿಕೆಯಲ್ಲಿ ತೂತು ಬಿದ್ದರೆ, ಬೇಗನೇ ಮರಣ ಉಂಟಾಗು ತ್ತದೆ. ಸಾಧಾರಣವಾಗಿ ರಾಜಯಕ್ಷ್ಮದ ಹಿಂದಾಗಲೀ ಮುಂದಾಗಲೀ ಬಹಳ ಅಶಕ್ತಿ, ಅಲ್ಪ ಶ್ರಮದಿಂದ ಉಬ್ಬಸ ಉಂಟಾಗುವದು, ದೇಹ ಕ್ಷೀಣವಾಗುತ್ತ ಬರುವದು, ರಕ್ತವು ಕೆಡು ವದು ಮತ್ತು ಕಡಿಮೆಯಾಗುವದು ಮತ್ತು ಉಂಡ ಆಹಾರದ ಸಾರ, ವಿಶೇಷವಾಗಿ ಜಿಡ್ಡಿನ ಅಂಶ, ಮೈಗೆ ವ್ಯಾಪಿಸದೆ ಹೋಗುವದು, ಈ ಲಕ್ಷಣಗಳು ಕಾಣುವವು. ಒಬ್ಬ ರಾಜ ಯಕ್ಷ್ಮರೋಗದವನನ್ನು ನಮ್ಮ ಮನೆಯಲ್ಲಿಯೇ ನಿಲ್ಲಿಸಿಕೊಂಡು, ರಸಾಯನಗುಣವುಳ್ಳ ಔಷಧದೊಂದಿಗೆ, ಪುಷ್ಟಿಕರವಾದ ಆಹಾರ ಮತ್ತು ಪ್ರತಿ ದಿನ ಆರು ತೊಲೆ ಬೆಣ್ಣೆ ಕೊಡುತ್ತಾ ಬಂದು, ಒಂದು ತಿಂಗಳನಂತರ ರೋಗಿಯನ್ನು ತೂಗಿ ನೋಡಿದಾಗ, ದೇಹದ ಭಾರದಲ್ಲಿ ಒಂದು ರಾತ್ಲ ಆದರೂ ಏರಿದ್ದು ಕಾಣಲಿಲ್ಲ. ಈ ರೋಗವುಳ್ಳವನು ಕೆಮ್ಮಿಸಿ ಉಗುಳಿದ ಎಂಜಲನ್ನು ಭೂತಕನ್ನಡಿಯಿಂದ ಪರೀಕ್ಷಿಸಿದರೆ ಶ್ವಾಸಕೋಶದಲ್ಲಿಯ ಗಾಳಿ ಚೀಲಗಳು ಕರಗಿ ಪ್ರತ್ಯೇಕವಾದ ಅಂಶಗಳು ಮಂಡಲಾಕಾರವಾಗಿ ಅಥವಾ ಅರ್ಧಮಂಡಲಾಕಾರವಾಗಿ ಕಾಣುತ್ತವೆ ಎಂಬದರಿಂದ, ಹಾಗೇ ಪರೀಕ್ಷಿಸುವದೇ ಈ ರೋಗೋತ್ಪತ್ತಿಯನ್ನು ಗೊತ್ತು ಮಾಡುವದಕ್ಕೆ ಮುಖ್ಯವಾದದ್ದೆಂತ ಪಾಶ್ಚಾತ್ಯ ಡಾಕ್ಟರರು ಎಣಿಸುತ್ತಾರೆ.

---

# ಅಧ್ಯಾಯ VI

## ಬಿಕ್ಕಟ್ಟು (ಬಿಕ್ಕಳಿಕೆ) – (Hiccup, Hiccough, Singultus.)

1. ಕಾಮಂ ಪ್ರಾಣಹರಾ ರೋಗಾ ಬಹವೋ ನ ತು ತೇ ತಥಾ ।
ಯಥಾ ಶ್ವಾಸಶ್ಚ ಹಿಕ್ಕಾ ಚ ಪ್ರಾಣಾನಾಶು ನಿಕೃನ್ತತಃ ॥
ಅನ್ಯೈರಪ್ಯುಪಸೃಷ್ಟಸ್ಯ ರೋಗೈರ್ಜನ್ತೋಃ ಪೃಥಗ್ವಿಧೈಃ ।
ಅನ್ತೇ ಸಂಜಾಯತೇ ಹಿಕ್ಕಾ ಶ್ವಾಸೋ ವಾ ತೀವ್ರವೇದನಃ ॥
ಕಫವಾತಾತ್ಮಕಾವೇತೌ ಪಿತ್ತಸ್ಥಾನಸಮುದ್ಭವೌ ।
ಹೃದಯಸ್ಯ ರಸಾದೀನಾಂ ಧಾತೂನಾಂ ಚೋಪಶೋಷಣೌ ।
ತಸ್ಮಾತ್ಸಾಧಾರಣಾವೇತೌ ಮತೌ ಸಮಸುದುರ್ಜಯೌ ॥
ಮಿಥ್ಯೋಪಚರಿತೌ ಕ್ರುದ್ಧೌ ಹತಾವಾಶೀವಿಷಾವಿವ ॥ (ಚ. 686-687)

ಹಿಕ್ಕಾಶ್ವಾಸಗಳ ಕಠಿಣ ಸ್ವಭಾವ

ಪ್ರಾಣಹರವಾದ ರೋಗಗಳು ಬಹಳ ಇವೆ ಎಂತ ಒಪ್ಪತಕ್ಕದ್ದು. ಆದರೆ, ಬಿಕ್ಕಟ್ಟು ಮತ್ತು ಉಬ್ಬಸವು ಹ್ಯಾಗೆ ಪ್ರಾಣಗಳನ್ನು ಶೀಘ್ರವಾಗಿ ಕಡದುಬಿಡುತ್ತವೋ, ಹಾಗೆ ಅನ್ಯ ರೋಗಗಳು ಅಲ್ಲ. ನಾನಾ ವಿಧವಾದ ಬೇರೆ ರೋಗಗಳಿಂದ ಪೀಡಿತನಾದ ಪ್ರಾಣಿಗೆ ಅಂತ್ಯ ಕಾಲದಲ್ಲಿ ಬಿಕ್ಕಟ್ಟಾಗಲೀ, ಕಠಿಣ ಸಂಕಷ್ಟಕರವಾದ ಉಬ್ಬಸವಾಗಲೀ, ಉಂಟಾಗುತ್ತದೆ. ಈ ಎರಡು ರೋಗಗಳು ಕಫವಾತದೋಷಗಳುಳ್ಳವು; ಪಿತ್ತಸ್ಥಾನದಿಂದ (ಆಮಾಶಯದಿಂದ) ಹೊರಡುವಂಥವು; ಮತ್ತು ರಸಾದಿ (ಸಪ್ತ) ಧಾತುಗಳನ್ನೂ, ಹೃದಯವನ್ನೂ ಒಣಗಿಸ ತಕ್ಕಂಥವು. ಆದ್ದರಿಂದ ಇವೆರಡು ಸಮಾನವಾದವು ಎಂತಲೂ, ಜಯಿಸುವದಕ್ಕೆ ಸಮಕಷ್ಟ ವುಳ್ಳವು ಎಂತಲೂ ಎಣಿಸುತ್ತಾರೆ. ಅವುಗಳಿಗೆ ತಪ್ಪಾಗಿ ಉಪಚಾರ ಮಾಡಿದರೆ, ಅವುಗಳು ಕೋಪಗೊಂಡು ಆಶೀವಿಷದಂತೆ (ಶೀಘ್ರವಾಗಿ) ಕೊಲ್ಲುವವು.

2. ರಜಸಾ ಧೂಮವಾತಾಭ್ಯಾಂ ಶೀತಸ್ಥಾನಾಮ್ಬುಸೇವನಾತ್ ।
ವ್ಯಾಯಾಮಾದ್ಗ್ರಾಮ್ಯಧರ್ಮಾಧ್ವರೂಕ್ಷಾನ್ನವಿಷಮಾಶನಾತ್ ॥
ಆಮಪ್ರದೋಷಾದಾನಾಹಾದ್ರೌಕ್ಷ್ಯಾದತ್ಯಪತರ್ಪಣಾತ್ ।
ದೌರ್ಬಲ್ಯಾನ್ಮರ್ಮಣೋ ಘಾತಾತ್ದ್ವಂದ್ವಾತ್ ಶುದ್ಧ್ಯತಿಯೋಗತಃ ॥
ಅತೀಸಾರಜ್ವರಚ್ಛರ್ದಿಪ್ರತಿಶ್ಯಾಯಕ್ಷತಕ್ಷಯಾತ್ ।
ರಕ್ತಪಿತ್ತಾದುದಾವರ್ತಾದ್ವಿಸೂಚ್ಯಲಸಕಾದಪಿ ॥
ಪಾಂಡುರೋಗಾದ್ವಿಷಾಚ್ಚೈವ ಪ್ರವರ್ತೇತೆ ಗದಾವಿಮೌ ।
ನಿಷ್ಪಾವಮಾಸ(?ಷ)ಪಿಣ್ಯಾಕತಿಲತೈಲನಿಷೇವಣಾತ್ ॥
ಪಿಷ್ಟಶಾಲೂಕಪಿ(?ವಿ)ಷ್ಟಮ್ಭಿವಿದಾಹಿಗುರುಭೋಜನಾತ್ ।
ಜಲಜಾನೂಪಪಿಶಿತದಧ್ಯಾಮಕ್ಷೀರಸೇವನಾತ್ ॥
ಅಭಿಷ್ಯಂದ್ಯುಪಚಾರಾಚ್ಚ ಶ್ಲೇಷ್ಮಲಾನಾಂ ಚ ಸೇವನಾತ್ ।
ಕಂಠೋರಸೋಃ ಪ್ರತೀಘಾತಾದ್ವಿಬನ್ಧೈಶ್ಚ ಪೃಥಗ್ವಿಧೈಃ ॥

ನಿದಾನ

ಮಾರುತಃ ಪ್ರಾಣವಾಹೀನಿ ಸ್ರೋತಾಂಸ್ಯಾವಿಶ್ಯ ಕುಪ್ಯತಿ |
ಉರಃಸ್ಥಃ ಕಫಮುದ್ಧೂಯ ಹಿಕ್ಕಾಶ್ವಾಸಾನ್ ಕರೋತಿ ಸಃ ||
ಘೋರಾನ್ ಪ್ರಾಣೋಪರೋಧಾಯ ಪ್ರಾಣಿನಾಂ ಪಂಚ ಪಂಚ ಚ | (ಚ. 687)

ದೂಳು, ಹೊಗೆ, ಗಾಳಿ, ಶೀತವಾದ ಸ್ಥಾನದಲ್ಲಿರುವದು, ಶೀತವಾದ ನೀರನ್ನು ಪಾನ ಮಾಡುವದು, ವ್ಯಾಯಾಮ, ಮೈಥುನ, ದಾರಿ ನಡೆಯುವಿಕೆ, ರೂಕ್ಷವಾದ ಆಹಾರ, ವಿಷಮ ವಾದ ಅಶನ, ಆಮ(ಅಜೀರ್ಣ)ದೋಷ, ಆನಾಹ, (ಶರೀರದ) ರೂಕ್ಷತ್ವ, ಅತಿಯಾದ (ಲಂಘನಾದಿ) ಅಪತರ್ಪಣ, ದುರ್ಬಲತೆ, ಮರ್ಮದ ಕೇಡು, ಎರಡು ವಿಧವಾದ ಶೋಧನ ಗಳ (ವಮನ ವಿರೇಚನಗಳ) ಅತಿಯಾದ ಉಪಯೋಗ, ಅತಿಸಾರ, ಜ್ವರ, ವಾಂತಿ, ನೆಗಡಿ, ಕ್ಷತದ ಕ್ಷಯ, ರಕ್ತಪಿತ್ತ, ಉದಾವರ್ತ, ವಿಸೂಚಿ, ಅಲಸಕ, ಪಾಂಡುರೋಗ, ವಿಷ, ಈ ನಿಮಿತ್ತಗಳಿಂದ ಬಿಕ್ಕಟ್ಟು ಮತ್ತು ಶ್ವಾಸ ಎಂಬ ಈ ಎರಡು ರೋಗಗಳು ಉಂಟಾಗುತ್ತವೆ. ಅವರೆ, ಉದ್ದು, ಹಿಂಡಿ, ಎಳ್ಳೆಣ್ಣೆ, ಇವುಗಳ ಸೇವನದಿಂದಲೂ, ಹಿಟ್ಟು, ಕುಮುದ (ನೈದಿಲೆ) ಮುಂತಾದ ನೀರೊಳಗೆ ಬೆಳೆದ ಗಡ್ಡೆಗಳು, ಇವುಗಳ ಅಥವಾ ವಿಷ್ಟಂಭಕರವಾದ, ವಿದಾಹಿ ಯಾದ, ಅಥವಾ ಗುರುವಾದ, ಭೋಜನದಿಂದಲೂ, ಜಲವಾಸಿ ಮತ್ತು ಆನೂಪಜಾತಿ ಪ್ರಾಣಿ ಗಳ ಮಾಂಸಗಳ ಅಥವಾ ಮೊಸರಿನ ಅಥವಾ ಹಸಿಯಾದ ಹಾಲಿನ ಸೇವನದಿಂದಲೂ, ಅಭಿಷ್ಯಂದಿಕರವಾದ ಉಪಚಾರದಿಂದಲೂ, ಕಫವೃದ್ಧಿಕರವಾದ ಪದಾರ್ಥಗಳ ಸೇವನದಿಂದಲೂ, ಕಂಠದ ಮೇಲೆ ಅಥವಾ ಎದೆಯ ಮೇಲೆ ಪೆಟ್ಟು ತಗಲುವದರಿಂದಲೂ, ಬೇರೆ ಬೇರೆ ಬಂಧ ಗಳಿಂದಲೂ, ವಾಯುವು ಕೋಪಗೊಂಡು, ಪ್ರಾಣವಾಹಿಗಳಾದ ಸ್ರೋತಸ್ಸುಗಳನ್ನು ಹೊಕ್ಕು, ಎದೆಯಲ್ಲಿ ನಿಂತು, ಕಫವನ್ನು ಕೆದರಿ, ಘೋರವಾದ ಐದು ಬಿಕ್ಕಟ್ಟನ್ನೂ, ಐದು ಉಬ್ಬಸ ವನ್ನೂ, ಪ್ರಾಣಿಗಳ ಪ್ರಾಣಹಿಂಸೆಗಾಗಿ, ಉಂಟುಮಾಡುತ್ತದೆ.

3. ಅನ್ನಜಾಂ ಯಮಲಾಂ ಕ್ಷುದ್ರಾಂ ಗಂಭೀರಾಂ ಮಹತೀಂ ತಥಾ |

ಬಿಕ್ಕಟ್ಟಿನ ವಿಧಗಳು ಮತ್ತು ಲಕ್ಷಣಗಳು

ಕಫೇನಾನುಗತೋ ವಾಯುಃ ಪಂಚಹಿಕ್ಕಾಃ ಕರೋತಿ ಹಿ ||
ಪಾನಾನ್ನೈರತಿಸಂಯುಕ್ತೈಃ ಸಹಸಾ ಪೀಡಿತೋಽನಿಲಃ |
ಹಿಕ್ಕಯತ್ಯೂರ್ಧ್ವಗೋ ಭೂತ್ವಾ ತಾಂ ವಿದ್ಯಾದನ್ನಜಾಂ ಭಿಷಕ್ ||
ಚಿರೇಣ ಯಮಲೈರ್ವೇಗೈರ್ಯಾ ಹಿಕ್ಕಾ ಸಂಪ್ರವರ್ತತೇ |
ಕಮ್ಪಯನ್ತೀ ಶಿರೋಗ್ರೀವಂ ಯಮಲಾನ್ತಾಂ ವಿನಿರ್ದಿಶೇತ್ ||
ವಿಕೃಷ್ಟಕಾಲೈರ್ಯಾ ವೇಗೈರ್ಮನ್ದೈಃ ಸಮಭಿವರ್ತತೇ |
ಕ್ಷುದ್ರಿಕಾ ನಾಮ ಸಾ ಹಿಕ್ಕಾ ಜತ್ರುಮೂಲಾತ್ಪ್ರಧಾವಿತಾ ||
ನಾಭಿಪ್ರವೃತ್ತಾ ಯಾ ಹಿಕ್ಕಾ ಘೋರಾ ಗಮ್ಭೀರನಾದಿನೀ |
ಶುಷ್ಕೌಷ್ಠಕಂಠಜಿಹ್ವಾಸ್ಯಶ್ವಾಸಪಾರ್ಶ್ವರುಜಾಕರೀ ||
ಅನೇಕೋಪದ್ರವಯುತಾ ಗಮ್ಭೀರಾ ನಾಮ ಸಾ ಸ್ಮೃತಾ |
ಮರ್ಮಾಣ್ಯಾಪೀಡಯನ್ತೀವ ಸತತಂ ಯಾ ಪ್ರವರ್ತತೇ ||
ದೇಹಮಾಯಮ್ಯ ವೇಗೇನ ಘೋಷಯತ್ಯತಿತೃಷ್ಯತಃ |
ಮಹಾಹಿಕ್ಕೇತಿ ಸಾ ಜ್ಞೇಯಾ ಸರ್ವಗಾತ್ರಪ್ರಕಮ್ಪಿನೀ || (ಸು. 819)

ಕಫದಿಂದ ಕೂಡಿಕೊಂಡ ವಾಯುವು ಅನ್ನಜಾ, ಯಮಲಾ, ಕ್ಷುದ್ರಾ, ಗಂಭೀರಾ, ಮಹಾಹಿಕ್ಕಾ, ಎಂಬ ಹೆಸರುಗಳುಳ್ಳ ಐದು ಬಿಕ್ಕಟ್ಟುಗಳನ್ನು ಉಂಟುಮಾಡುತ್ತದೆ. ಅತಿಯಾಗಿಯೂ, ಅವಸರದಿಂದಲೂ, ಸೇವಿಸಲ್ಪಟ್ಟ ಅನ್ನಪಾನಗಳಿಂದ ಪೀಡಿಸಲ್ಪಟ್ಟ ವಾಯುವು, ಊರ್ಧ್ವಮುಖವಾಗಿ, ಉಂಟುಮಾಡುವ ಬಿಕ್ಕಟ್ಟನ್ನು ಪಂಡಿತನು 'ಅನ್ನಜ' ಬಿಕ್ಕಟ್ಟೆಂತ ತಿಳಿಯತಕ್ಕದ್ದು. ತಲೆಯನ್ನೂ ಕುತ್ತಿಗೆಯನ್ನೂ ನಡುಗಿಸುತ್ತಾ, ದೀರ್ಘಕಾಲದ ವರೆಗೆ ಜೋಡು ಜೋಡಾಗಿ ಹೊರಡುವ ಬಿಕ್ಕಟ್ಟನ್ನು 'ಯಮಲಾ' ಎಂತ ತಿಳಿಯತಕ್ಕದ್ದು. ಕುತ್ತಿಗೆಯ ಬುಡದಿಂದ ಹೊರಡುವಂಥ ಮತ್ತು ಮಂದವಾದ ವೇಗದಿಂದ ದೀರ್ಘಕಾಲ ಕಾಣಿಸಿಕೊಳ್ಳುವ ಬಿಕ್ಕಟ್ಟು 'ಕ್ಷುದ್ರಾ' ಎಂತ ಹೇಳಲ್ಪಡುತ್ತದೆ. ನಾಭಿಪ್ರದೇಶದಿಂದ ಹೊರಡುವ, ಗಂಭೀರವಾದ ಶಬ್ದವನ್ನುಂಟುಮಾಡುವ, ತುಟಿ, ಗಂಟಲು, ನಾಲಿಗೆ, ಮತ್ತು ಬಾಯಿ, ಇವುಗಳನ್ನು ಒಣಗಿಸುವಂಥ, ಉಬ್ಬಸವನ್ನೂ ಪಕ್ಕಗಳ ಶೂಲೆಯನ್ನೂ ಉಂಟುಮಾಡತಕ್ಕಂಥ, ಅನೇಕವಾದ ಉಪದ್ರವಗಳಿಂದ ಕೂಡಿಕೊಂಡಿರುವ ಮತ್ತು ಘೋರವಾದ ಬಿಕ್ಕಟ್ಟನ್ನು 'ಗಂಭೀರಾ' ಎಂತ ತಿಳಿಯುತ್ತಾರೆ. ಇಡೀ ಶರೀರವನ್ನು ಅಲ್ಲಾಡಿಸುತ್ತಾ, ಅತಿಯಾದ ಬಾಯಾರಿಕೆಯನ್ನೂ ದೇಹದ ನೀಡುವಿಕೆಯನ್ನೂ, ವೇಗದಿಂದ ಮಹಾಶಬ್ದವನ್ನೂ ಉಂಟುಮಾಡಿ, ಮರ್ಮಸ್ಥಾನಗಳನ್ನು ಹಿಸಿಕಿಬಿಡುತ್ತವೋ ಎಂಬ ಹಾಗಿನ ಮತ್ತು ಬಿಡದೆ ಬರುವ ಬಿಕ್ಕಟ್ಟನ್ನು 'ಮಹಾಹಿಕ್ಕಾ' ಎಂತ ತಿಳಿಯತಕ್ಕದ್ದು.

ಪರಾ ಚರಕನ ಪ್ರಕಾರ ಅನ್ನಜ ಬಿಕ್ಕಟ್ಟಿಗೆ ಅತಿಯಾದ ಅಮಲನ್ನುಂಟುಮಾಡತಕ್ಕಂಥ ಮದ್ಯವನ್ನು ಪಾನಮಾಡುವದು ಮತ್ತು ಅತಿಯಾದ ಅನ್ನಪಾನ ಸೇವಿಸಿದ ಮೇಲೆ ಅತಿಯಾದ ಸಿಟ್ಟುಗೊಳ್ಳುವದು, ಮಾತಾಡುವದು, ದಾರಿ ನಡೆಯುವದು, ಭಾರ ಹೊರುವದು ಮತ್ತು ಅತಿಯಾದ ತಿರುಗುವಿಕೆ, ಇವು ಸಹ ಹೇತುಗಳು, ಅದು ಮರ್ಮಗಳಿಗಾಗಲೀ, ಇಂದ್ರಿಯಗಳಿಗಾಗಲೀ, ಬಾಧೆಯನ್ನುಂಟುಮಾಡತಕ್ಕಂಥಾದ್ದಲ್ಲ, ಮತ್ತು ನೀರು ಕುಡಿದರೆ, ಅಥವಾ ಉಂಡರೆ ಅದು ಶಾಂತವಾಗುತ್ತದೆ ವ್ಯಪೇತಾ (ಅಥವಾ ಯಮಿಕಾ) ಎಂಬ ಬಿಕ್ಕಟ್ಟು ನಾಲ್ಕು ವಿಧವಾದ ಅನ್ನಪಾನಗಳನ್ನು ಸೇವಿಸುವಾಗ್ಗೆ ಉಂಟಾಗಿ ಆಹಾರಪಾಕದ ಅಂತ್ಯದಲ್ಲಿ, ಪುನಃ ಬಲಪಡುತ್ತದೆ, ಪ್ರಲಾಪ (ಹರಟುವದು), ವಾಂತಿ, ಅತಿಸಾರ, ಬಾಯಾರಿಕೆ, ಇವುಗಳ ಪೀಡೆ, ಎಚ್ಚರವಿಲ್ಲದಿರುವಿಕೆ, ಬಾಯಿ ಒಣಗುವದು, ಕಣ್ಣುಗಳಲ್ಲಿ ನೀರು ತುಂಬುವದು, ಹೊಟ್ಟೆಯುಬ್ಬರಿಸುವದು, ಆಕಳಿಸುವದು, ಈ ಲಕ್ಷಣಗಳೊಂದಿಗೆ ಮನುಷ್ಯನಿಗೆ ಆಗಾಗ್ಗ ಕುತ್ತಿಗೆಯ ಬುಡ(ಜತ್ರುಮೂಲ)ದಿಂದ ಹೊರಡುವ ವ್ಯಪೇತಾ ಎಂಬ ಬಿಕ್ಕಟ್ಟು ಪ್ರಾಣವನ್ನು ತಡೆಯತಕ್ಕಂಥಾದ್ದಾಗಿರುತ್ತದೆ ಕ್ಷುದ್ರಾ ಎಂಬ ಬಿಕ್ಕಟ್ಟಿನಿಂದ ಅತಿಸಂಕಷ್ಟವಾಗಲೀ, ಎದೆ, ತಲೆ, ಮರ್ಮಗಳಿಗೆ ಬಾಧಕವಾಗಲೀ ಉಂಟಾಗುವದಿಲ್ಲ, ಶ್ವಾಸದ ಮತ್ತು ಅನ್ನಪಾನಗಳ ಮಾರ್ಗಗಳಲ್ಲಿ ತಡೆಯಾಗಿ ನಿಲ್ಲುವದಿಲ್ಲ, ಆಯಾಸಪಟ್ಟಾಗ್ಗೆ ಅದು ವೃದ್ಧಿಯಾಗಿ, ಉಂಡಕೂಡಲೇ ಮೃದು(ಬಲಹೀನ)ವಾಗುತ್ತದೆ, ಅದು ಯಾವದರಿಂದ ಮೊದಲು ಹೊರಡುತ್ತದೋ, ಅದರಿಂದಲೇ (ಹೇತುನಿವೃತ್ತಿಯಿಂದ) ಅದು ನಿವೃತ್ತಿಯಾಗುತ್ತದೆ, ಅದು ಹೃದಯ, ಕ್ಲೋಮ, ಕಂಠ ಮತ್ತು ತಾಲು, ಇವುಗಳನ್ನು ಆಶ್ರಯಿಸಿಕೊಂಡಿರುವಂಥಾದ್ದು, ಮತ್ತು ಮೃದುವಾದ್ದರಿಂದ ಸಾಧ್ಯರೋಗವಾಗಿರುತ್ತದೆ. ಗಂಭೀರಾ ಎಂಬ ಬಿಕ್ಕಟ್ಟು ಪಕ್ವಾಶಯದಿಂದಾಗಲೀ, ನಾಭಿಯಿಂದಾಗಲೀ ಹೊರಡುತ್ತದೆ. ಅದು ವೃದ್ಧನಾದ, ಕೃಶನಾದ ಮತ್ತು ಕಂಗಾಲಾದ ಮನಸ್ಸುಳ್ಳ ಮನುಷ್ಯನಿಗೆ ಉಂಟಾದಾಗ್ಗೆ ಕ್ಷಯಿಸಿದ ಎದೆಯಿಂದ ಕಷ್ಟದಿಂದ ಗಂಭೀರವಾದ ಶಬ್ದ ಹೊರಡುತ್ತದೆ ಅವನು ಆಕಳಿಸುತ್ತಾ ಅಂಗಗಳನ್ನು ಅತ್ತಿತ್ತ ಒಗೆಯುತ್ತಾ ನೀಡುತ್ತಾ ಇರುತ್ತಾನೆ. ಅದು ದೇಹವನ್ನು ಬಹಳವಾಗಿ ಕುಲಗಿಸುತ್ತದೆ, ಬಗ್ಗಿಸುತ್ತದೆ ಮತ್ತು ಕಷ್ಟಪಡಿಸುತ್ತದೆ, ಶ್ವಾಸಮಾರ್ಗದಲ್ಲಿ ತಡೆಯುಂಟಾಗುತ್ತದೆ, ಬಲವೂ ಎಚ್ಚರಿಕೆಯೂ ನಷ್ಟವಾಗುತ್ತವೆ, ಅದು ಪ್ರಾಣಾಂತಿಕವಾದ್ದು ಇತ್ಯಾದಿ ಲಕ್ಷಣವುಳ್ಳದ್ದು. ಮಹಾಹಿಕ್ಕೆಯಲ್ಲಿ ಬಿಕ್ಕಟ್ಟು, ಒಂದೊಂದಾಗಿ, ಎರಡೆರಡಾಗಿ, ಅಥವಾ ಮೂರುಮೂರಾಗಿ ಬರುವದು, ಗಟ್ಟಿಯಾದ ಶಬ್ದ ಕೂಡಿರುವದು, ಪ್ರಾಣವಾಯು ಮರ್ಮಗಳನ್ನೂ, ಸ್ರೋತಸ್ಸುಗಳನ್ನೂ, ಮೈಬಿಸಿಯನ್ನೂ ತಡದು ಸಂಜ್ಞೆಯನ್ನು ತಪ್ಪಿಸಿ, ಮೈಯಲ್ಲಿ ಸ್ತಬ್ಧತೆಯನ್ನುಂಟುಮಾಡಿ, ಅನ್ನಪಾನಗಳ ಮಾರ್ಗವನ್ನು ತಡದು, ಸ್ಮೃತಿಯನ್ನು ಹೋಗಲಾಡಿಸುತ್ತದೆ. ಕಣ್ಣುಗಳಿಂದ ನೀರು ಸುರಿಸಿ, ಕೆನ್ನೆಗಳನ್ನು ಸ್ತಬ್ಧಮಾಡಿ, ಹುಬ್ಬುಗಳ ಸ್ಥಾನ ತಪ್ಪಿಸಿ, ವಿರಳವಲ್ಲದ ಹರಟುವಿಕೆಯನ್ನೂ, ನರಳುವಿಕೆಯನ್ನೂ ಉಂಟುಮಾಡಿ, ನಿವೃತ್ತಿಯಾಗದ ಮಹಾಪ್ರತಾಪ, ಮಹಾವೇಗ, ಮಹಾಶಬ್ದ, ಮಹಾಬಲವುಳ್ಳ, ಮಹಾಹಿಕ್ಕೆಯು ಕೂಡಲೆ ಪ್ರಾಣವನ್ನು ತೆಗೆದುಬಿಡತಕ್ಕಂಥಾದ್ದು (ಚ. 688—89). ಚರಕದಲ್ಲಿ ವರ್ಣಿಸಲ್ಪಟ್ಟಿರುವ ಯಮಿಕಾ ಅಥವಾ ವ್ಯಪೇತಾ ಎಂಬ ಹಿಕ್ಕೆಯು ಸುಶ್ರುತನ ವಿಭಾಗದಲ್ಲಿ ಕಾಣುವ 'ಯಮಲಾ' ಎಂಬದೇಯೋ ಅಲ್ಲವೋ ಎಂಬದನ್ನು ಕುರಿತು ವ್ಯಾಖ್ಯಾನಕಾರರು ಚರ್ಚಿಸಿದ್ದಾರೆ ಯಮಲಾ ಎಂಬ ಹಿಕ್ಕೆಗೇನೇ 'ವೇಗಿನೀ' ಎಂತ

ಲೂ 'ಪರಿಣಾಮವತೀ' ಎಂತಲೂ ಹೆಸರುಗಳಿವೆ ಎಂತ ವಾಗ್ಭಟ ಹೇಳಿದ್ದಾನಲ್ಲದೆ, ಚರಕನ 'ಯಮಿಕಾ' ಅಥವಾ 'ವ್ಯಪೇತಾ' ಎಂಬ ಹೆಸರುಗಳನ್ನು ಹೇಳಿರುವದಿಲ್ಲ. ಆದರೆ ಬಿಕ್ಕಟ್ಟು ಐದು ವಿಧ ಎಂಬದೂ, ಆ ಐದು ವಿಧಗಳಲ್ಲಿ ನಾಲ್ಕಕ್ಕೆ ಕ್ರಮವಾಗಿ ಅನ್ನಜಾ, ಕ್ಷುದ್ರಾ, ಮಹಾಹಿಕ್ಕಾ (ಅಥವಾ ಮಹತೀ) ಮತ್ತು ಗಂಭೀರಾ ಎಂಬವು ಹೆಸರುಗಳು ಎಂಬದೂ ಸರ್ವಸಮ್ಮತವಾದ್ದರಿಂದ, ಯಮಿಕಾ, ಯಮಲಾ, ವ್ಯಪೇತಾ, ವೇಗಿನೀ, ಪರಿಣಾಮವತೀ ಎಂಬ ಹೆಸರುಗಳೆಲ್ಲ ಉಳಿದ ಐದನೇ ವಿಧದ್ದಕ್ಕೆ ಅಥವಾ ಅದರ ರೂಪಾಂತರಗಳಿಗೆ ಆಗಿರಬೇಕೆಂತ ಸಿದ್ಧವಾಗುತ್ತದೆ

ಬಿಕ್ಕಟ್ಟು ಸಹ ಉಚ್ಛ್ವಾಸ-ನಿಃಶ್ವಾಸಗಳ ವಿಕಾರ. ಪದೇ ಪದೇ, ತಟ್ಟನೆ, ವೇಗದಿಂದ ಮತ್ತು ಬಲವಂತವಾಗಿ ವಪಾವಹನದ ಸಂಕೋಚನದಿಂದ, ಉಚ್ಛ್ವಾಸವು ಶಬ್ದ ವಿಶೇಷವಾಗಿ ಉಂಟಾಗುವದು ಮತ್ತು ಮಧ್ಯದ ನಿಃಶ್ವಾಸವು ಕ್ಷುದ್ರವಾಗುವದು, ಆಗ್ಗೆ ಮಾತಾಡುವದಕ್ಕೆ ಕಷ್ಟವಾಗುತ್ತದೆ ಈ ರೋಗವು ಪ್ರಧಾನ ನರಕ್ಕೆ ಸಂಬಂಧಪಟ್ಟ ಕೆಲವು ವ್ಯಾಧಿಗಳಲ್ಲಿ ಮತ್ತು ಸ್ತ್ರೀಯರ ಗರ್ಭಕೋಶದ ದೋಷದಲ್ಲಿ ಸಹ ಕಾಣುವದುಂಟು

4. ಮುಖಂ ಕಷಾಯಮರತಿರ್ಗೌರವಂ ಕಣ್ಠವಕ್ಷಸೋಃ |
(ಬಿಕ್ಕಟ್ಟಿನ ಪೂರ್ವರೂಪ) ಪೂರ್ವರೂಪಾಣಿ ಹಿಕ್ಕಾನಾಮಾಟೋಪೋ ಜಠರಸ್ಯ ಚ || (ಸು. 849)

ಬಾಯಿ ಚೊಗರಾಗುವದು, ಹರ್ಷವಿಲ್ಲದಿರುವಿಕೆ, ಕಂಠದಲ್ಲಿಯೂ ಎದೆಯಲ್ಲಿಯೂ ಭಾರಕಾಣುವದು ಮತ್ತು ಹೊಟ್ಟೆಯುಬ್ಬರ ಬಿಕ್ಕಟ್ಟಿನ ಪೂರ್ವರೂಪಗಳು.

5. ಅತಿಸಂಚಿತದೋಷಸ್ಯ ಭಕ್ತಚ್ಛೇದಕೃಶಸ್ಯ ಚ |
ವ್ಯಾಧಿಭಿಃ ಕ್ಷೀಣದೇಹಸ್ಯ ವೃದ್ಧಸ್ಯಾತಿವ್ಯವಾಯಿನಃ ||
(ಅಸಾಧ್ಯ ಬಿಕ್ಕಟ್ಟುಗಳು.) ಆಸಾಂ ಯಾ ಸಾ ಸಮುತ್ಪನ್ನಾ ಹಿಕ್ಕಾ ಹನ್ತ್ಯಾಶು ಜೀವಿತಮ್ |
ಯಮಿಕಾ ಚ ಪ್ರಲಾಪಾರ್ತಿತೃಷ್ಣಾಮೋಹಸಮನ್ವಿತಾ ||
ಅಕ್ಷೀಣಶ್ಚಾಪ್ಯದೀನಶ್ಚ ಸ್ಥಿರಧಾತ್ವಿನ್ದ್ರಿಯಶ್ಚ ಯಃ |
ತಸ್ಯ ಸಾಧಯಿತುಂ ಶಕ್ಯಾ ಯಮಿಕಾ ಹನ್ತ್ಯತೋಽನ್ಯಥಾ || (ಚ. 689-90)

ದೋಷವು (ಆಮದೋಷ ಎಂತ ವಾ.) ಅತಿಯಾಗಿ ಸಂಗ್ರಹವಾದವನಲ್ಲಿ, ಅನ್ನ ಬಿಟ್ಟು ಕೃಶನಾದವನಲ್ಲಿ, ರೋಗಗಳ ದೆಸೆಯಿಂದ ದೇಹಕ್ಷೀಣತೆಯುಂಟಾದವನಲ್ಲಿ, ಮುದುಕನಲ್ಲಿ ಮತ್ತು ಅತಿ ಮೈಥುನಶೀಲವುಳ್ಳವನಲ್ಲಿ ಯಾವ ಬಿಕ್ಕಟ್ಟು ಉತ್ಪನ್ನವಾಗುತ್ತದೋ, ಅದು ಅವನ ಜೀವವನ್ನು ಬೇಗನೇ ನಾಶಮಾಡುತ್ತದೆ; ಪ್ರಲಾಪದ ಪೀಡೆ, ಬಾಯಾರಿಕೆ ಮತ್ತು ಮೂರ್ಛೆ ಯುಕ್ತವಾದ ಯಮಿಕಾ ಎಂಬ ಬಿಕ್ಕಟ್ಟು ಹಾಗೆಯೇ. ಕ್ಷೀಣನಾಗದ, ಕಂಗೆಡದ ಮತ್ತು ಧಾತುಗಳೂ ಇಂದ್ರಿಯಗಳೂ ಸ್ಥಿರವಾಗಿರುವ ಮನುಷ್ಯನಲ್ಲಿ ಯಮಿಕೆಯನ್ನು ವಾಸಿಮಾಡುವದು ಶಕ್ಯ; ಈ ಗುಣಗಳಿಲ್ಲವಾದರೆ ಅದು ಕೊಲ್ಲುವದು.

ಷರಾ· ಅನ್ನಜಾ, ಕ್ಷುದ್ರಜಾ ಎಂಬ ಎರಡು ಸಾಧ್ಯ; ಗಂಭೀರಾ ಮಹತೀ ಎಂಬ ಎರಡು ಅಸಾಧ್ಯ, ಸರ್ವಲಕ್ಷಣ ಯುಕ್ತವಾದ ವೇಗಿನಿಯೂ ಅಸಾಧ್ಯ, ಸಂಚಿತಆಮದೋಷ ಮುಂತಾದ (ಮೇಲಿನ ಒಂದನೇ ಶ್ಲೋಕದಲ್ಲಿ ಹೇಳಲ್ಪಟ್ಟ) ಲಕ್ಷಣಗಳುಳವನಲ್ಲಿ ಸರ್ವ ಬಿಕ್ಕಟ್ಟುಗಳೂ ಅಸಾಧ್ಯ ಎಂತ ವಾ. (ಪು 198) ಅಂದರೆ, ಅಂಥಾ ಅವಸ್ಥೆಯಲ್ಲಿ ಕ್ಷುದ್ರಾ, ಅನ್ನಜಾ ಎಂಬವು ಸಹ ಅಸಾಧ್ಯವಾಗುತ್ತವೆ.

ಬಿಕ್ಕಳಿಕೆ ಕಾಲದಲ್ಲಿ ಅಂಗಗಳನ್ನು ಚಾಚುವದು, ದೃಷ್ಟಿ ಮೇಲೆ ಆಗುವದು ಮತ್ತು ಬಹಳವಾದ ಸಂಕಟ, ಈ ಲಕ್ಷಣಗಳಾಗಲೀ, ಕ್ಷೀಣತೆ, ಅನ್ನದ್ವೇಷ ಮತ್ತು ಕೆಮ್ಮು, ಈ ಲಕ್ಷಣಗಳಾಗಲೀ ಕಾಣುವ ಬಿಕ್ಕಟ್ಟುಗಳು (ಮಹತೀ, ಗಂಭೀರಾ ಎಂಬವುಗಳಲ್ಲವಾದರೂ) ಅಸಾಧ್ಯ ಎಂತ ಸು. (ಪು. 849).

6. ಶೀತಾಮ್ಬುಸೇಕಃ ಸಹಸಾ ತ್ರಾಸವಿಕ್ಷೇಪಭೀಶುಚಃ |
(ಬಿಕ್ಕೆಯನ್ನು ನಿಲ್ಲಿಸುವದಕ್ಕೆ ಕೆಲವು ಉಪಾಯಗಳು.) ಹರ್ಷೇರ್ಷ್ಯೋಚ್ಛ್ವಾಸಸಂರೋಧಾ ಹಿತಂ ಕೀಟೈಶ್ಚ ದಂಶನಮ್ || (ವಾ. 283.)

ತಟ್ಟನೆ ತಣ್ಣೀರನ್ನು ಚಿಮುಕಿಸುವದು, ಗದರಿಸುವದು, ಗಾಬರಿಪಡಿಸುವದು, ಭಯವನ್ನು, ದುಃಖವನ್ನು, ಹರ್ಷವನ್ನು ಅಥವಾ ಮತ್ಸರವನ್ನು ಉಂಟುಮಾಡುವದು,

ಶ್ವಾಸವನ್ನು ತಡೆಯುವದು, ಹುಳಗಳಿಂದ ಕಚ್ಚಿಸುವದು, ಇವುಗಳೆಲ್ಲ (ಬಿಕ್ಕಟ್ಟಿನ ವ್ಯಾಧಿಯಲ್ಲಿ) ಹಿತ.

ಷರಾ: ಸೂಜಿಗಳಿಂದ ಚುಚ್ಚುವದು ಸಹ ಹಿತ ಎಂತ ಸು (ಪು 849) ವಿಸ್ಮಯವನ್ನುಂಟುಮಾಡುವದು ಮತ್ತು ಸಿಟ್ಟುಬರಿಸುವದು ಸಹ ಹಿತ ಎಂತ ಚ (ಪು 697) ಎದೆಗೂಡಿಯ ಮೇಲೆ ಒಂದು ವಸ್ತ್ರದ ಮಡಿಪನ್ನು (ಒತ್ತಡೆ=pad) ಇಟ್ಟು, ಅದರ ಮೇಲೆ ಒಂದು ಗಟ್ಟಿಯಾದ ವಸ್ತ್ರದ ಅಥವಾ ಚರ್ಮದ ಪಟ್ಟಿಯನ್ನು ಎದೆಯ ಸುತ್ತ ಸುತ್ತಿ ಬಿಗಿಯುವದರಿಂದ ಉಂಟಾಗುವ ಬಲವಂತವಾದ ಒತ್ತುವಿಕೆಯಿಂದಲೂ, ಗಂಟಲ ಸಮೀಪದಲ್ಲಿ ಜತ್ರುವಿನ (collai) ಎಲುಬುಗಳ ತುದಿ(ಗಳು ಉಚ್ಛ್ವಾಸದಲ್ಲಿ ಮೇಲಕ್ಕೆ ಬಾರದಂತೆ ಅವು)ಗಳ ಒತ್ತಿನಲ್ಲಿ ಹೆಬ್ಬೆಟ್ಟನ್ನು ಇಟ್ಟು ಬಲವಾಗಿ ಒತ್ತುವದರಿಂದಲೂ, ನೀರುಗಟ್ಟಿಯ (ice) ಒಂದು ಚೂರನ್ನು ನುಂಗುವದರಿಂದಲೂ, ಕೆಲವು ಸರ್ತಿ ಬಿಕ್ಕಟ್ಟು ನಿಲ್ಲುವದುಂಟೆಂತ ಒಬ್ಬರು ಪಾಶ್ಚಾತ್ಯ ಡಾಕ್ಟರರು ಬರೆದದ್ದು ಕಾಣುತ್ತದೆ.

ಚಿಕಿತ್ಸೆಯಲ್ಲಿ ಶೋಧನದ ಪ್ರಾಮುಖ್ಯ

7. ಏತೇ ಹಿ ಕಫಸಂರುದ್ಧಗತಿಪ್ರಾಣಪ್ರಕೋಪಜಾಃ ।
ತಸ್ಮಾತ್ತನ್ಮಾರ್ಗಶುದ್ಧ್ಯರ್ಥಮೂರ್ಧ್ವಾಧಃ ಶೋಧನಂ ಹಿತಮ್ ॥
ಉದೀರ್ಯ್ಯತೇ ಭೃಶತರಂ ಮಾರ್ಗರೋಧಾದ್ವಹಜ್ಜಲಮ್ ।
ಯಥಾನಿಲಸ್ತಥಾ ತಸ್ಯ ಮಾರ್ಗಮಸ್ಮಾದ್ವಿಶೋಧಯೇತ್ ॥
ಅಶಾನ್ತೌ ಕೃತಸಂಶುದ್ಧೇರ್ಧೂಮೈರ್ಲೀನಂ ಮಲಂ ಹರೇತ್ । (ವಾ 280)

ತನ್ನ ಮಾರ್ಗದಲ್ಲಿ ಕಫ ನಿಂತು ತಡೆಯುವದರಿಂದ ಪ್ರಾಣವಾಯುವು ಕೋಪಗೊಂಡು, ಈ ರೋಗಗಳು (ಬಿಕ್ಕಟ್ಟು ಮತ್ತು ಶ್ವಾಸ) ಉತ್ಪನ್ನವಾಗುವದಾದ್ದರಿಂದ, ಆ ವಾಯುವಿನ ಮಾರ್ಗವನ್ನು ಶೋಧಿಸುವದಕ್ಕೋಸ್ಕರ, ರೋಗಿಗೆ ವಾಂತಿಯನ್ನೂ ವಿರೇಚನವನ್ನೂ ಮಾಡಿಸುವದು ಹಿತವಾಗುತ್ತದೆ. ಹರಿಯುವ ನೀರಿನ ಮಾರ್ಗದಲ್ಲಿ ತಡೆಹಾಕಿದರೆ, ಆ ನೀರುಕ್ಕಿ ಮೇಲಕ್ಕೆ ಬಹಳವಾಗಿ ಉಕ್ಕುತ್ತದೆ ಹೇಗೋ, ಹಾಗೆ ವಾಯುವು ಕಫದ ತಡೆಯಿಂದ ಕೆದರುತ್ತದೆ. ಆದ್ದರಿಂದ ಅದರ ಮಾರ್ಗದ ತಡೆಯನ್ನು ತೆಗೆದು ಶೋಧಿಸತಕ್ಕದ್ದು. ಹಾಗೆ ಶೋಧನ ಮಾಡಿಸಿದ್ದಲ್ಲಿ ರೋಗವು ಶಾಂತವಾಗದಿದ್ದರೆ, ಹಿಡಕೊಂಡು ನಿಂತ ದೋಷವನ್ನು ಧೂಮಪಾನಗಳಿಂದ ಪರಿಹರಿಸತಕ್ಕದ್ದು.

ಶೋಧನಕ್ಕೆ ಅರ್ಹರಲ್ಲದವರ ವಿಷಯ

8. ಹಿಕ್ಕಾಶ್ವಾಸಾಮಯೀ ಹ್ಯೇಕೋ ಬಲವಾನ್ ದುರ್ಬಲೋಽಪರಃ ।
ಕಫಾಧಿಕಸ್ತಥೈವೈಕೋ ರೂಕ್ಷಬಹ್ವನಿಲೋಽಪರಃ ॥
ಕಫಾಧಿಕೇ ಬಲಸ್ಥೇ ಚ ವಮನಂ ಸವಿರೇಚನಮ್ ।
ಕುರ್ಯಾತ್ ಪಥ್ಯಾಶಿನೇ ಧೂಮಲೇಹಾದಿಶಮನಂ ತತಃ ॥
ವಾತಿಕಾನ್ ದುರ್ಬಲಾನ್ ಬಾಲಾನ್ ವೃದ್ಧಾಂಶ್ಚಾನಿಲಸೂದನೈಃ ।
ತರ್ಪಯೇದೇವ ಶಮನೈಃ ಸ್ನೇಹಯೂಷರಸಾದಿಭಿಃ ॥
ಅನುತ್ಕ್ಲಿಷ್ಟಕಫಾಸ್ವಿನ್ನದುರ್ಬಲಾನಾಂ ವಿಶೋಧನಾತ್ ।
ವಾಯುರ್ಲಬ್ಧಾಸ್ಪದೋ ಮರ್ಮ ಸಂಶುಷ್ಯಾಶು ಹರೇದಸೂನ್ ॥
ದೃಢಾನ್ ಬಹುಕಫಾಂಸ್ತಸ್ಮಾದ್ರಸೈರಾನೂಪವಾರಿಜೈಃ ।
ತೃಪ್ತಾನ್ ವಿಶೋಧಯೇತ್ ಸ್ವಿನ್ನಾನ್ ಬೃಂಹಯೇದಿತರಾನ್ ಭಿಷಕ್ ॥
(ಚ. 693)

ಬಿಕ್ಕಟ್ಟು ಅಥವಾ ಉಬ್ಬಸ ರೋಗದವರಲ್ಲಿ ಬಲವಂತನಾದವನು ಒಬ್ಬ, ಬಲಹೀನನಾದವನು ಬೇರೊಬ್ಬ, ಹಾಗೆಯೇ ಕಫಾಧಿಕ್ಯವುಳ್ಳವನು ಒಬ್ಬ, ರೂಕ್ಷಶರೀರದವನೂ ಬಹಳ

ವಾಯುವುಳ್ಳವನೂ ಆದವನು ಜೇರೊಬ್ಬ. ಬಲವಂತನಾದವನಿಗೂ ಕಫಾಧಿಕ್ಯವುಳ್ಳವನಿಗೂ ವಮನವಿರೇಚನಗಳನ್ನು ಮಾಡಿಸಿ, ಅನಂತರ ಅವನನ್ನು ಪಥ್ಯದ ಊಟದಲ್ಲಿರಿಸಿ, ಧೂಮಪಾನ, ಲೇಹ ಮುಂತಾದ ಶಮನಕರ್ಮಗಳನ್ನು ನಡಿಸತಕ್ಕದ್ದು. ವಾತಾಧಿಕ್ಯವುಳ್ಳವರಿಗೆ, ದುರ್ಬಲರಿಗೆ, ಬಾಲಕರಿಗೆ, ಮತ್ತು ಮುದುಕರಿಗೆ ವಾತಹರವಾದ ಸ್ನೇಹಯುಕ್ತ ಸಾರು, ಮಾಂಸರಸ ಮುಂತಾದ ಶಮನ ಯೋಗಗಳಿಂದ ತರ್ಪಣಕ್ರಮವನ್ನೇ ಮಾಡಿಸಬೇಕು. ಕಫ ಎದ್ದ ಪೀಡೆಯಿಲ್ಲದ, ಬೆವರಿಸಲ್ಪಡದ ಮತ್ತು ದುರ್ಬಲರಾದ ರೋಗಿಗಳಿಗೆ ಶೋಧನ (ವಮನ ವಿರೇಚನ) ಮಾಡಿಸುವದರಿಂದ ವಾಯು ಆಸ್ಪದಪಡೆದು, ಮರ್ಮ (ಹೃದಯಾದಿ)ವನ್ನು ಒಣಗಿಸಿ ಬೇಗನೆ ಪ್ರಾಣವನ್ನು ಅಪಹರಿಸುವದು. ಆದ್ದರಿಂದ ದೃಢಕಾಯರಾಗಿ, ಬಹುಕಫವುಳ್ಳ ಮತ್ತು ಆನೂಪ ಮತ್ತು ಜಲವಾಸಿ ಪ್ರಾಣಿಗಳ ಮಾಂಸರಸಗಳಿಂದ ತೃಪ್ತರಾದ ರೋಗಿಗಳನ್ನು ಬೆವರಿಸಿ, ಶೋಧನಮಾಡಿಸಬೇಕು, ಇತರರಿಗೆ ವೈದ್ಯನು ಬೃಂಹಣ ಕ್ರಮವನ್ನು ನಡಿಸತಕ್ಕದ್ದು.

9. ಹಿಕ್ಕಾಶ್ವಾಸಾರ್ದಿತಂ ಸ್ನಿಗ್ಧೈರಾದೌ ಸ್ವೇದೈರುಪಾಚರೇತ್ |
ಆಕ್ತಂ ಲವಣತೈಲೇನ ನಾಡೀಪ್ರಸ್ತರಸಂಕರೈಃ ||
ತೈರಸ್ಯ ಗ್ರಥಿತಃ ಶ್ಲೇಷ್ಮಾ ಸ್ರೋತಃಸ್ವಭಿವಿಲೀಯತೇ |
ಖಾನಿ ಮಾರ್ದವಮಾಯಾಂತಿ ತತೋ ವಾತಾನುಲೋಮತಾ ||
ಯಥಾದ್ರಿಕುಂಜೇಷ್ವರ್ಕಾಂಶುತಪ್ತಂ ವಿಷ್ಯಂದತೇ ಹಿಮಮ್ |
ಸ್ಥಿರಃ ಶ್ಲೇಷ್ಮಾ ಶರೀರಸ್ಥಃ ಸ್ವೇದೈರ್ವಿಷ್ಯಂದತೇ ತಥಾ || (ಚ. 692)

ಬೆವರಿಸುವದರ ಪ್ರಯೋಜನ

ಬಿಕ್ಕಟ್ಟು ಅಥವಾ ಉಬ್ಬಸದಿಂದ ಕಷ್ಟಪಡುವವನಿಗೆ ಮೊದಲಾಗಿ ಸ್ನೇಹಯುಕ್ತವಾದ ಬೆವರಿಸುವ ಕ್ರಮಗಳಿಂದ ಉಪಚಾರಮಾಡಬೇಕು. ಉಪ್ಪುಕೂಡಿದ ತೈಲವನ್ನು ರೋಗಿಯ ಶರೀರಕ್ಕೆ ಹಚ್ಚಿ, ನಾಡೀಸ್ವೇದ, ಪ್ರಸ್ತರಸ್ವೇದ, ಅಥವಾ ಸಂಕರಸ್ವೇದ ಕ್ರಮದಿಂದ ಬೆವರಿಸತಕ್ಕದ್ದು. ಆ ಸ್ವೇದನ ಕ್ರಮಗಳಿಂದ ಸ್ರೋತಸ್ಸುಗಳಲ್ಲಿ ಗಟ್ಟಿಯಾಗಿ ನಿಂತಿದ್ದ ಕಫವು ಕರಗುತ್ತದೆ ಮತ್ತು ನಾಡಿಗಳು ಮೃದುವಾಗುತ್ತವೆ. ಅದರಿಂದ ವಾತದ ಗತಿಯು ಕ್ರಮಕ್ಕೆ ಬರುತ್ತದೆ. ಬೆಟ್ಟದ ಪೊದರುಗಳಲ್ಲಿ ಹಿಮವು ಸೂರ್ಯನ ಕಿರಣಗಳಿಂದ ಬಿಸಿಯಾಗಿ ಹೇಗೆ ಕರಗುತ್ತದೋ, ಹಾಗೆ ಶರೀರದಲ್ಲಿ ಗಟ್ಟಿಯಾಗಿ ನಿಂತಿದ್ದ ಕಫವು ಬೆವರಿಸುವ ಕ್ರಮಗಳನ್ನು ನಡಿಸುವದರಿಂದ ತೆಳ್ಳಗಾಗಿ ಹರಿದಾಡುತ್ತದೆ.

10. ನ ಸ್ವೇದ್ಯಾಃ ಪಿತ್ತದಾಹಾರ್ತಾ ರಕ್ತಸ್ವೇದಾತಿವರ್ತಿನಃ |
ಕ್ಷೀಣಧಾತುಬಲಾ ರೂಕ್ಷಾ ಗರ್ಭಿಣ್ಯಶ್ಚಾಪಿ ಪಿತ್ತಲಾಃ || (ಚ. 693)

ಬೆವರಿಸುವದಕ್ಕೆ ಅರ್ಹರಲ್ಲದವರು

ಪಿತ್ತದ ಅಥವಾ ಉರಿಯ ಪೀಡೆಯುಳ್ಳವರು, ರಕ್ತ ಅಥವಾ ಬೆವರು ಅತಿಯಾಗಿ ಹೋಗುತ್ತಿರುವವರು, ಧಾತುಕ್ಷೀಣತೆ ಮತ್ತು ಬಲಹೀನತೆಯುಳ್ಳವರು, ರೂಕ್ಷಶರೀರದವರು, ಗರ್ಭಿಣಿಯರು ಮತ್ತು ಪಿತ್ತಪ್ರಕೃತಿಯವರು ಬೆವರಿಸುವದಕ್ಕೆ ಅರ್ಹರಲ್ಲ (ಅಂಥವರನ್ನು ಬೆವರಿಸಬಾರದು).

11. ಕೋಷ್ಣೈಃ ಕಾಮಮುರಃಕಣ್ಠಂ ಸ್ನೇಹಸೇಕೈಃ ಸಶರ್ಕರೈಃ |
ಉತ್ಕಾರಿಕೋಪನಾಹೈಶ್ಚ ಸ್ವೇದಯೇನ್ಮೃದುಭಿಃ ಕ್ಷಣಮ್ ||
ತಿಲೋಮಾಮಾಷಗೋಧೂಮಚೂರ್ಣೈರ್ವಾತಹರೈಃ ಸಹ |
ಸ್ನೇಹೈಶ್ಚೋತ್ಕಾರಿಕಾ ಸಾಮ್ಲೈಃ ಸಕ್ಷೀರೈರ್ವಾ ಕೃತಾ ಹಿತಾ || (ಚ. 693)

ಎದೆ ಮತ್ತು ಕುತ್ತಿಗೆಯನ್ನು ಬೆವರಿಸುವದು

(ಬೆವರಿಸುವದಕ್ಕೆ ಅರ್ಹರಲ್ಲದವರಿಗೆ ಸಹ) ಎದೆಯನ್ನೂ, ಕುತ್ತಿಗೆಯನ್ನೂ ಸಕ್ಕರೆ ಕೂಡಿಸಿದ ಸುಖೋಷ್ಣವಾದ ಸ್ನೇಹಸೇಕ(ಸ್ನೇಹಗಳ ಧಾರೆ)ಗಳಿಂದಲೂ, ಮೃದುವಾದ ಉತ್ಕಾರಿಕೆ ಮತ್ತು ಉಪನಾಹಗಳಿಂದಲೂ, ಕ್ಷಣಕಾಲ ಬೆವರಿಸುವದಕ್ಕೆ ಆಕ್ಷೇಪವಿಲ್ಲ. ಎಳ್ಳು, ಅತಸೀಬೀಜ (ಲಿನ್‌ಸೀಡ್, Linseed), ಉದ್ದು, ಗೋದಿ, ಇವುಗಳ ಚೂರ್ಣಕ್ಕೆ ವಾತಹರವಾದ ಸ್ನೇಹಗಳನ್ನು, (ಕಫವಾತ ಪ್ರಧಾನವಾದಲ್ಲಿ) ಹುಳೀರಸ ಅಥವಾ ದ್ರವಗಳನ್ನು, ಅಥವಾ (ಪಿತ್ತವಾತ ಹೆಚ್ಚು ಇದ್ದಲ್ಲಿ) ಹಾಲನ್ನು, ಸಹ ಕೂಡಿಸಿ ಮಾಡಿದ ಉತ್ಕಾರಿಕೆಯು ಹಿತವಾಗುತ್ತದೆ.

ಪರಾ. ಉತ್ಕಾರಿಕೆ ಮತ್ತು ಉಪನಾಹ ಸ್ವೇದಗಳ ವರ್ಣನಕ್ಕೆ 1ನೇ ಭಾಗದ XIX—74 ನೋಡಿ. ಕುತ್ತಿಗೆಗೂ ಎದೆಗೂ ಮುಂದಾಗಿ ವಾತಹರವಾದ ಯಾವದಾದರೊಂದು ಸ್ನೇಹವನ್ನು ಸುಖೋಷ್ಣವಾಗಿ ಸವರಿ, ಆ ಮೇಲೆ ಹಿಟ್ಟು, ಔಷಧಗಳ ಚೂರ್ಣ, ಸ್ನೇಹ ಮತ್ತು ದ್ರವ ಬೆರಸಿ ಕುದಿಸಿದ ಮುದ್ದೆಯನ್ನು ತೆಳ್ಳಗಿನ ವಸ್ತ್ರದ ತುಂಡಿನಲ್ಲಿ ಕಟ್ಟಿ, ಬಿಸಿಯಾಗಿರುವ ಆ ಪೊಟ್ಟಣದಿಂದ ಒಂದು ಕ್ಷಣಕಾಲ ಬೆವರು ಉಂಟಾಗುವಂತೆ ಮೃದುವಾಗಿ ಒತ್ತುವದು ಪ್ರಶಸ್ತ. ಹಾಗೆ ಬಿಸಿಮಾಡಿದ ಸ್ಥಳಗಳನ್ನು ಒಡನೆ ತಣಿಯದಂತೆ, ಉಣ್ಣೆಯ ವಸ್ತ್ರದಿಂದ ಮುಚ್ಚಿಡುವದು ಅವಶ್ಯ. ಎಲ್ಲಾ ಬಿಕ್ಕು ರೋಗದವರ ಸಂಗತಿಯಲ್ಲಿಯೂ ಈ ಸಂಸ್ಥೆಯಲ್ಲಿ ವಿಧಿಸಲ್ಪಟ್ಟಂತೆ ಉರಃಕಂಠಗಳನ್ನು ಬೆವರಿಸುವದು ಅವಶ್ಯವೆಂತ ವಾ. (ಪು. 280)

12. ತತಃ ಶ್ಲೇಷ್ಮಣಿ ಸಂರುದ್ಧೇ ವಮನಂ ಪಾಯಯೇತ್ತು ತಮ್ |
ಪಿಪ್ಪಲೀಸೈಂಧವಕ್ಷೌದ್ರೈರ್ಯುಕ್ತಂ ವಾತಾವಿರೋಧಿ ಯತ್ ||
ನಿರ್ಹೃತೇ ಸುಖಮಾಪ್ನೋತಿ ಸ ಕಫೇ ದುಷ್ಟವಿಗ್ರಹೇ |
ಸ್ರೋತಃಸು ಚ ವಿಶುದ್ಧೇಷು ಚರತ್ಯವಿಹತೋಽನಿಲಃ || (ಚ. 692)

ವಮನದ ಉಪಯೋಗ

(ಬೆವರಿಸಿ ಉಣ್ಣಿಸಿದ ಮೇಲೆ) ರೋಗಿಯಲ್ಲಿ ಕಫದ ತಡೆ ಕಂಡರೆ, ಅವನಿಗೆ ಸೈಂಧವ ಲವಣ, ಹಿಪ್ಪಲಿ ಮತ್ತು ಜೇನು ಕೂಡಿಸಿದ ವಾಂತಿ ಔಷಧವನ್ನು ಕುಡಿಸಬೇಕು. ಅದು ವಾತಕ್ಕೆ ವಿರೋಧವಿಲ್ಲದ್ದಾಗಿರಬೇಕು. ಆ ದೋಷದ ವಿಗ್ರಹವಾದ ಆ ಕಫವನ್ನು ಹೊರಗೆ ತೆಗೆದುಬಿಟ್ಟಲ್ಲಿ, ರೋಗಿಯು ಸುಖವನ್ನು ಪಡೆಯುತ್ತಾನೆ; ಮತ್ತು ಸ್ರೋತಸ್ಸುಗಳು ಚನ್ನಾಗಿ ಶುದ್ಧವಾದಾಗ್ಗೆ ವಾಯು ಆತಂಕವಿಲ್ಲದೆ ಸಂಚರಿಸುತ್ತದೆ.

13. ನವಜ್ವರಾಮದೋಷೇಷು ರೂಕ್ಷಸ್ವೇದಂ ವಿಲಂಘನಮ್ |
ಸಮೀಕ್ಷ್ಯೋಲ್ಲೇಖನಂ ವಾಪಿ ಕಾರಯೇಲ್ಲವಣಾಮ್ಬುನಾ ||
(ಚ. 693)

ನವಜ್ವರಾದಿಗಳಲ್ಲಿ ಸ್ವೇದನ ವಮನ ಕರ್ಮಗಳು.

ಹೊಸ ಜ್ವರ ಅಥವಾ ಆಮದೋಷ ಇರುವ ರೋಗಿಗಳಿಗೆ ರೂಕ್ಷವಾಗಿ (ಸ್ನೇಹ ಕೂಡಿಸದೆ) ಬೆವರಿಸತಕ್ಕದ್ದು; ಅಥವಾ ಲಂಘನ ಮಾಡಿ(ಸಿ ಕಫವನ್ನು ಆರಿ)ಸಬೇಕು; ಅಥವಾ ಸ್ಥಿತಿ ನೋಡಿಕೊಂಡು, (ವಮನ ಅಗತ್ಯ ಕಂಡರೆ) ಉಪ್ಪುನೀರನ್ನು ಕುಡಿಸಿ ವಾಂತಿಮಾಡಿಸತಕ್ಕದ್ದು.

ಪರಾ. ಆಮದೋಷ ಕೂಡಿಕೊಂಡಿರುವಲ್ಲಿ ಸಾಧಾರಣವಾಗಿ ಆಮಕ್ಕೆ ಉಕ್ತವಾದ (ಲಂಘನ ಪಾಚನಾದಿ) ಕ್ರಮವನ್ನು ಅನುಸರಿಸಬೇಕೆಂತ ವಾ. (ಪು. 280).

14. ಅತಿಯೋಗೋದ್ಧತಂ ವಾತಂ ದೃಷ್ಟ್ವಾ ವಾತಹರೈರ್ಭಿಷಕ್ |
ರಸಾದ್ಯೈರ್ನಾತಿಶೀತೋಷ್ಣೈರಭ್ಯಂಗೈಶ್ಚ ಶಮಂ ನಯೇತ್ ||

ವೃದ್ಧಿಗೊಂಡ ವಾತಕ್ಕೆ ಪ್ರತೀಕಾರ

(ಚ. 693)

ಶೋಧನ ಲಂಘನಾದಿಗಳನ್ನು ಮಾಡಿಸಿದ್ದು ಅತಿಯಾಗಿ ವಾತವು ವೃದ್ಧಿಗೊಂಡದ್ದನ್ನು ಕಂಡರೆ, ವೈದ್ಯನು ವಾತಹರವಾದ ಮತ್ತು ಅತಿ ಶೀತ ಅಥವಾ ಅತಿ ಉಷ್ಣ ಅಲ್ಲದ, ಮಾಂಸ ರಸಾದಿಗಳಿಂದಲೂ, ಅಭ್ಯಂಗಗಳಿಂದಲೂ ಅದನ್ನು ಶಾಂತಮಾಡತಕ್ಕದ್ದು.

15. ಯತ್ಕಿಂಚಿತ್ ಕಫವಾತಘ್ನಮುಷ್ಣಂ ವಾತಾನುಲೋಮನಮ್ |
ಭೇಷಜಂ ಪಾನಮನ್ನಂ ವಾ ತದ್ಧಿತಂ ಶ್ವಾಸಹಿಕ್ಕಿನೇ ||
ವಾತಕೃದ್ವಾ ಕಫಹರಂ ಕಫಕೃದ್ವಾನಿಲಾಪಹಮ್ |
ಕಾರ್ಯ್ಯಂ ನೈಕಾನ್ತಿಕಂ ತಾಭ್ಯಾಂ ಪ್ರಾಯಃ ಶ್ರೇಯೋಽನಿಲಾಪಹಮ್ ||
ಸರ್ವೇಷಾಂ ಬೃಂಹಣೈರ್ಹ್ಯಲ್ಪಃ ಶಕ್ಯಶ್ಚ ಪ್ರಾಯಶೋ ಭವೇತ್ |
ನಾತ್ಯರ್ಥಂ ಶಮನೋ*ಪಾಯೋ ಭೃಶೋಽಶಕ್ಯಂ ಚ ಕರ್ಶನೇ ||
ತಸ್ಮಾಚ್ಛುದ್ಧಾನಶುದ್ಧಾಂಶ್ಚ ಶಮನೈರ್ಬೃಂಹಣೈರಪಿ |
ಹಿಕ್ಕಾಶ್ವಾಸಾರ್ದಿತಾನ್ ಜನ್ತೂನ್ ಪ್ರಾಯಶಃ ಸಮುಪಾಚರೇತ್ ||

ಸಾಮಾನ್ಯ ಚಿಕಿತ್ಸಾವಿಧಾನ

(ಚ. 698)

* 'ಶಮನೇಽಪಾಯೋ' ಎಂಬ ಪಾಠಾನ್ತರ ಕಾಣುತ್ತದೆ (ಪುಟ 283) ಅದು ಸ್ಪಷ್ಟಾರ್ಥ.

ಔಷಧವಾಗಲೀ, ಪಾನವಾಗಲೀ, ಆಹಾರವಾಗಲೀ, ಯಾವದು ಕಫವಾತಹರ, ಉಷ್ಣ ಮತ್ತು ವಾತದ ಗತಿಯನ್ನು ಕ್ರಮಪಡಿಸುವ ಗುಣವುಳ್ಳದ್ದು ಆಗಿರುತ್ತದೋ, ಅದು ಬಿಕ್ಕಟ್ಟಿನಲ್ಲಿಯೂ, ಉಬ್ಬಸದಲ್ಲಿಯೂ, ಹಿತವಾಗುತ್ತದೆ. ಒಂದನ್ನಾಗಿ, ಕಫಹರವಾದರೂ ವಾತವನ್ನುಂಟುಮಾಡುವಂಥಾದ್ದನ್ನಾಗಲೀ, ವಾತಹರವಾದರೂ ಕಫವನ್ನುಂಟುಮಾಡುವಂಥಾದ್ದನ್ನಾಗಲೀ, ಉಪಯೋಗಿಸಬಾರದು; ಹೆಚ್ಚಾಗಿ ವಾತಹರವಾದದ್ದು ಪ್ರಶಸ್ತ. ಒಟ್ಟಾರೆ, ಬೃಂಹಣ (ಪುಷ್ಟಿಕರವಾದವು)ಗಳಿಂದ ಅಪಾಯವು ಅಲ್ಪ, ಹೆಚ್ಚಾಗಿ ರೋಗವು ಸಾಧ್ಯವಾಗುತ್ತದೆ; ಶಮನಗಳಿಂದ ಅತಿಯಾದ ದೋಷ ಬರುವದಿಲ್ಲ; ಕರ್ಶನ(ಕೃಶತೆಯನ್ನುಂಟುಮಾಡುವ ಪ್ರಯೋಗ)ಗಳಿಂದ ಅಪಾಯ ಬಹಳ ಮತ್ತು ರೋಗವು ಅಶಕ್ಯವಾಗುತ್ತದೆ. ಆದ್ದರಿಂದ ಬಿಕ್ಕಟ್ಟು ಅಥವಾ ಉಬ್ಬಸ ವ್ಯಾಧಿಯುಳ್ಳವರಿಗೆ, ಶೋಧನಮಾಡಿಸಿಕೊಂಡವರಾಗಲೀ, ಮಾಡಿಸಿಕೊಳ್ಳದವರಾಗಲೀ, ಹೆಚ್ಚಾಗಿ ಶಮನಕರವಾದ ಪ್ರತೀಕಾರಗಳಿಂದಲೂ ಬೃಂಹಣಕರವಾದವುಗಳಿಂದಲೂ ಸರಿಯಾಗಿ ಉಪಚಾರಮಾಡತಕ್ಕದ್ದು.

16. ಯಷ್ಟ್ಯಾಹ್ವಂ ವಾ ಮಾಕ್ಷಿಕೇಣಾವಪೀಡಃ
ಪಿಪ್ಪಲ್ಯೋ ವಾ ಶರ್ಕರಾಚೂರ್ಣಯುಕ್ತಾಃ ||
ನಾರೀಪಯಃಪಿಷ್ಟಮಶುಕ್ಲಚನ್ದನಮ್
ಘೃತಂ ಸುಖೋಷ್ಣಂ ಚ ಸಸೈನ್ಧವಂ ತಥಾ ||
ಚೂರ್ಣೀಕೃತಂ ಸೈನ್ಧವಮಮ್ಬುನಾ ತಥಾ
ನಿಹನ್ತಿ ಹಿಕ್ಕಾಂ ಚ ಹಿತಂ ಚ ನಸ್ಯತಃ || (ಸು. 849-50)

ನಸ್ಯಯೋಗಗಳು.

ಜ್ಯೇಷ್ಠಮಧುವಿನ ಚೂರ್ಣವನ್ನು ಜೇನಿನಲ್ಲಿ ಕಲಸಿ ಅವಪೀಡವಾಗಿ, ಹಿಪ್ಪಲಿಪುಡಿಯನ್ನು ಸಕ್ಕರೆ ಕೂಡಿಸಿ, ರಕ್ತಚಂದನವನ್ನು ಸ್ತ್ರೀಮೊಲೆಹಾಲಿನಲ್ಲಿ ತೇದಿ, ಸುಖೋಷ್ಣವಾದ ತುಪ್ಪವನ್ನು ಬರೇದಾಗಿ ಅಥವಾ ಸೈಂಧವಲವಣದ ಪುಡಿಯನ್ನು ಕೂಡಿಸಿಕೊಂಡು, ಅಥವಾ ಸೈಂಧವಲವಣದ ಚೂರ್ಣವನ್ನು ನೀರಿನಲ್ಲಿ ಕರಗಿಸಿ, ನಸ್ಯಮಾಡುವದರಿಂದ ಬಿಕ್ಕಟ್ಟು ಪರಿಹಾರವಾಗಿ, ಹಿತವಾಗುತ್ತದೆ.

ಪರಾ 'ಅವಪೀಡ' ನಸ್ಯದ ವರ್ಣನಕ್ಕೆ 1ನೇ ಭಾಗದ XXVI—12 ನೋಡಿ

ಲಶುನಸ್ಯ ಪಲಾಣ್ಡೋರ್ವಾ ಮೂಲಂ ಗೃಂಜನಕಸ್ಯ ವಾ |
ನಾವಯೇಚ್ಚನ್ದನಂ ವಾಪಿ ನಾರೀಕ್ಷೀರೇಣ ಸಂಯುತಮ್ || (ಚ 696)

ಬೆಳ್ಳುಳ್ಳಿಯ ಅಥವಾ ನೀರುಳ್ಳಿಯ ಅಥವಾ ಅರಸಿನ (ಅಡವೀ) ಮೂಲಂಗಿಯ ಗಡ್ಡೆಯನ್ನು, ಅಥವಾ ರಕ್ತಚಂದನವನ್ನು ಸ್ತ್ರೀಮೊಲೆಹಾಲಿನಲ್ಲಿ ತೇದಿ, ನಸ್ಯಮಾಡತಕ್ಕದ್ದು.

ಪರಾ 'ಗೃಂಜನ' ಎಂದರೆ ಕೆಂಪು ನೀರುಳ್ಳಿ ಎಂತ ಅ ದೀ (ಪು 523)

ಅಜಾವಿಮೂತ್ರಮಾಘ್ರಾಯ ಹಿಧ್ಮಾವಾನ್ ಸುಖಮಾಪ್ನುಯಾತ್ |
(ವೈ. ಸಾ. ಸಂ. 157)

ಆಡಿನ ಅಥವಾ ಕುರಿಯ ಮೂತ್ರವನ್ನು ಮೂಸುವದರಿಂದ ಬಿಕ್ಕಟ್ಟಿನ ರೋಗವುಳ್ಳವನು ಸುಖವನ್ನು ಪಡೆಯುವನು.

ತಿಂತ್ರಿಣೀಪತ್ರಸಾರೇಣ ನಸ್ಯಂ ಹಿಕ್ಕಾಸು ಶಸ್ಯತೇ | (ವೈ. ಸಾ. ಸಂ. 157)

ಹುಣಸೆ ಸೊಪ್ಪಿನ ರಸವನ್ನು ನಸ್ಯಮಾಡುವದು ಬಿಕ್ಕಟ್ಟುಗಳಲ್ಲಿ ಪ್ರಶಸ್ತ.

ಪರಾ ಎಲೆಗಳ ರಸದ ಬದಲಾಗಿ ಎಲೆಕಡ್ಡಿಗಳ ಚೂರ್ಣವನ್ನು ಉಪಯೋಗಿಸಬಹುದು

17. ಯುಂಜ್ಯಾದ್ಧೂಪಂ ಶಾಲನಿರ್ಯಾಸಜಾತಂ
ಸೈಪಾಲಂ ವಾ ಗೋವಿಷಾಣೋದ್ಭವಂ ವಾ |
ಸರ್ಪಿಃಸ್ನಿಗ್ಧೈಃ ಚರ್ಮಬಾಲೈಃ ಕೃತಂ ವಾ (ಸು. 850)

ಧೂಮಪಾನ ಯೋಗಗಳು

ರಾಳದ, ಮಣಿಶಿಲೆಯ, ದನದ ಕೊಂಬಿನ, ಅಥವಾ ತುಪ್ಪ ಹಚ್ಚಿದ ಗೋವಿನ ಚರ್ಮದ ಅಥವಾ ರೋಮದ, ಹೊಗೆಯನ್ನು ಪಾನಮಾಡುವದರಿಂದ ಬಿಕ್ಕಟ್ಟು ಪರಿಹಾರವಾಗುವದು.

ಶಲ್ಲಕೀಂ ಗುಗ್ಗುಲಂ ಲೋಹಂ ಪದ್ಮಕಂ ವಾ ಘೃತಪ್ಲುತಮ್ | (ವಾ. 280)

ಶಿಲಾರಸ, ಗುಗ್ಗುಳ, ಅಗಿಲುಗಂಧದ ಚೂರ್ಣ, ಪದ್ಮಕದ ಚೂರ್ಣ, ಇವುಗಳನ್ನು ತುಪ್ಪ ಕೂಡಿಸಿಕೊಂಡು ಕುಟ್ಟಿ ಬೆರಸಿ, ಅದರ ಹೊಗೆಯನ್ನು ತೆಗೆದುಕೊಳ್ಳುವದರಿಂದ ಬಿಕ್ಕಟ್ಟು ಪರಿಹಾರ.

ಪರಾ ಬರೇ ಗುಗ್ಗುಳದ ಹೊಗೆ ಸಹ ಫಲಕಾರಿ ಎಂತ ವಾ (ಪು. 280).

ನಿಧೂರ್ಮಾಂಗಾರನಿಕ್ಷಿಪ್ತಹಿಂಗುಮಾಷರಜೋಭವಃ |
ಹಿಕ್ಕಾಃ ಪಂಚಾಪಿ ಹನ್ತ್ಯಾಶು ಧೂಮಃ ಪೀತೋ ನ ಸಂಶಯಃ ||
(ಭಾ. ಪ್ರ. 376)

ಹೊಗೆಯಿಲ್ಲದ ಬೆಂಕಿಕೆಂಡದ ಮೇಲೆ ಹಿಂಗಿನ ಪುಡಿಯನ್ನೂ, ಉದ್ದಿನ ಪುಡಿಯನ್ನೂ ಹಾಕಿ, ಅದರಿಂದ ಹೊರಡುವ ಹೊಗೆಯನ್ನು ಸೇದುವದರಿಂದ ಐದು ವಿಧದ ಬಿಕ್ಕಟ್ಟುಗಳೂ ನಿಲ್ಲುವದರಲ್ಲಿ ಸಂಶಯವಿಲ್ಲ.

ಲೀನಶ್ಚೇದ್ದೋಷಶೇಷಃ ಸ್ಯಾದ್ಧೂಪೈಸ್ತಂ ನಿರ್ಹರೇದ್ಬುಧಃ |
ಹರಿದ್ರಾಪತ್ರಮೈರಣ್ಡಮೂಲಂ ಲಾಕ್ಷಾಂ ಮನಃಶಿಲಾಮ್ ||
ಮಾಂಸೀಂ ಸದೇವದಾರ್ವೇಲಾಂ* ಪಿಷ್ಟ್ವಾ ವರ್ತಿಂ ಪ್ರಕಲ್ಪಯೇತ್ |
ತಾಂ ಘೃತಾಕ್ತಾಂ ಪಿಬೇದ್ಧೂಮಂ ಯವೈರ್ವಾ ಘೃತಸಂಯುತೈಃ ||

(ಚ. 692)

(ಬೆವರಿಸಿ ವಾಂತಿಮಾಡಿಸಿದ ಮೇಲೆಯೂ) ದೋಷದ ಶೇಷ ಹಿಡಕೊಂಡುಂಟೆಂತಾದರೆ, ಅದನ್ನು ಬುದ್ಧಿವಂತನು ಧೂಪಗಳಿಂದ ಹೊರಗೆ ಹಾಕಬೇಕು. ಅರಸಿನ, ದಾಲ್ಚೀನಿ ಎಲೆ, ಹರಳು ಬೇರು, ಅರಗು, ಮಣಿಶಿಲೆ, ಜಟಾಮಾಂಸಿ, ತುಪ್ಪದೇವದಾರ, ಏಲಕ್ಕಿ,* ಇವುಗಳನ್ನು ಅರೆದು ಕ್ರಮದಂತೆ ಬತ್ತಿಯನ್ನು ಮಾಡಿ, ಅದಕ್ಕೆ ತುಪ್ಪ ಸವರಿ, ಅದರ ಹೊಗೆಯನ್ನು ಪಾನ ಮಾಡಬೇಕು; ಅಥವಾ ಯವೆಗೋದಿಯ ಚೂರ್ಣಕ್ಕೆ ತುಪ್ಪ ಕೂಡಿಸಿ, ಅದರ ಹೂಗೆಯನ್ನು ಸೇದತಕ್ಕದ್ದು.

ಪಠಾ *'ದಾರ್ವಲಂ' ಎಂತ ಪಾಠವಿರುವದೇ ಸರಿಯಾಗಿರಬೇಕು 'ಅಲಂ' ಎಂದರೆ 'ಅರಿದಾಳ' ಬತ್ತಿಯನ್ನು ತಯಾರಿಸುವ ಮತ್ತು ಅದನ್ನು ಉಪಯೋಗಿಸುವ ಕ್ರಮಗಳಿಗೆ 1ನೇ ಭಾಗದ XXV, 4 ಮತ್ತು 9 ನೋಡಿ

18. ದಶಮೂಲೀಶಟೀರಾಸ್ನಾಪಿಪ್ಪಲೀಮೂಲಪೌಷ್ಕರೈಃ |
ಶೃಂಗೀತಾಮಲಕೀಭಾಂರ್ಗೀಗುಡೂಚೀನಾಗರಾಮ್ಬುಭಿಃ ||
ಯವಾಗೂಂ ವಿಧಿನಾ ಸಿದ್ಧಾಂ ಕಷಾಯಂ ವಾ ಪಿಬೇನ್ನರಃ |
ಕಾಸಹೃದ್ಗ್ರಹಪಾರ್ಶ್ವಾರ್ತಿಹಿಕ್ಕಾಶ್ವಾಸಪ್ರಶಾನ್ತಯೇ || (ಚ. 694)

ಗಂಜಿಗೂ ಕಷಾಯಕ್ಕೂ ದಶಮೂಲಾದಿ ಯೋಗ

ದಶಮೂಲಗಳು, ಸಣ್ಣ ಕಚೋರ, ರಾಸ್ನೆ (ಅರತೆ), ಹಿಪ್ಪಲೀಮೂಲ, ಪುಷ್ಕರಮೂಲ, ಕರ್ಕಟಶೃಂಗಿ, ನೆಲನೆಲ್ಲಿ, ಗಂಟುಭಾರಂಗಿ (ನಿರ್ವಿಷ), ಅಮೃತಬಳ್ಳಿ, ಶುಂಠಿ, ಮುಡಿವಾಳ, ಇವುಗಳನ್ನು ಸೇರಿಸಿ ವಿಧಿಪ್ರಕಾರ ತಯಾರಿಸಿದ ಯವಾಗೂ ಗಂಜಿಯನ್ನಾಗಲೀ ಕಷಾಯವನ್ನಾಗಲೀ ಕುಡಿಯುವದರಿಂದ ಕೆಮ್ಮು, ಎದೆ ಹಿಡಕೊಂಡದ್ದು, ಪಕ್ಕಗಳ ಶೂಲೆ, ಬಿಕ್ಕಟ್ಟು ಮತ್ತು ಉಬ್ಬಸ ಶಾಂತವಾಗುತ್ತವೆ.

ಪಠಾ ವಾ ನು ಈ ಯೋಗದಲ್ಲಿ ಮುಡಿವಾಳವನ್ನು ಬಿಟ್ಟು, ಬಿಲ್ಪಪತ್ರೆ ಮತ್ತು ಮುದ್ದಿಯನ್ನು ಕೂಡಿಸಿದ್ದಾನೆ ಮತ್ತು ಮೊದಲಾಗಿ ಕಷಾಯವನ್ನು ಕುಡಿದು, ಅದು ಜೀರ್ಣವಾದ ಮೇಲೆ ಗಂಜಿಯನ್ನು ಕುಡಿಯಬೇಕಾಗಿ ಹೇಳಿರುತ್ತಾನೆ. ಬರೇ ದಶಮೂಲಗಳಿಂದ ತಯಾರಿಸಿದ ಗಂಜಿ ಸುಖ ಆಗಬಹುದೆಂತಲೂ ಬರೆದಿರುತ್ತಾನೆ (ಪು 281)

19. ನಿದಿಗ್ಧಿಕಾಂ ಬಿಲ್ವಮಧ್ಯಂ ಕರ್ಕಟಾಖ್ಯಾಂ ದುರಾಲಭಾಮ್ |
ತ್ರಿಕಣ್ಟಕಂ ಗುಡೂಚೀಂ ಚ ಕುಲತ್ಥಾಂಶ್ಚ ಸಚಿತ್ರಕಾನ್ ||
ಜಲೇ ಪಕ್ತ್ವಾ ರಸಃ ಪೂತೋ ಪಿಪ್ಪಲೀಘೃತಭರ್ಜಿತಃ |
ಸನಾಗರಃ ಸಲವಣ† ಸ್ಯಾದ್ಯೂಷೋ ಭೋಜನೇ ಹಿತಃ ||

ಯೂಷಯೋಗಗಳು.

† 'ಸಲವಣಶ್ಚೋಷ್ಣಃ' ಎಂತ ಮೂಲದಲ್ಲಿರುವದನ್ನು ತಿದ್ದಿಕೊಂಡದೆ

ರಾಸ್ನಾಂ ಬಲಾಂ ಪಂಚಮೂಲಂ ಹ್ರಸ್ವಂ ಮುದ್ಗಾನ್ ಸಚಿತ್ರಕಾನ್ ।
ಪಕ್ತ್ವಾಮ್ಭಸಿ ರಸೇ ತಸ್ಮಿನ್ ಯೂಷಃ ಸಾಧ್ಯಶ್ಚ ಪೂರ್ವವತ್ ॥
(ಚ. 694)

ಕಿರಿಗುಳ್ಳದ ಬೇರು, ಬಿಲ್ಲಪತ್ರೆಕಾಯಿಯ ತಿರಳು, ಕರ್ಕಟಶೃಂಗಿ, ಬಳ್ಳಿತುರಚನ ಬೇರು, ನೆಗ್ಗಿಲಮುಳ್ಳು, ಅಮೃತಬಳ್ಳಿ, ಚಿತ್ರಮೂಲ ಮತ್ತು ಹುರುಳಿ, ಅಥವಾ ರಾಸ್ನೆ (ಅರತೆ), ಕಲ್ಲಂಗಡಲೆಬೇರು, ಹ್ರಸ್ವಪಂಚಮೂಲಗಳು, ಚಿತ್ರಮೂಲ ಮತ್ತು ಹೆಸರು, ಈ ಎರಡು ಯೋಗಗಳ ಔಷಧಗಳನ್ನು ನೀರಿನಲ್ಲಿ ಬೇಯಿಸಿ ಮಾಡಿದ ಸಾರನ್ನು ಶೋಧಿಸಿದ ಮೇಲೆ ಉಪ್ಪನ್ನೂ, ಶುಂಠಿಯನ್ನೂ ಬೆರಸಿ, ಹಿಪ್ಪಲಿಯನ್ನು ತುಪ್ಪದಲ್ಲಿ ಹುರಿದು ಒಗ್ಗರಿಸಿದ ಸಾರು ಊಟಕ್ಕೆ ಹಿತವಾದ್ದು.

ಕಾಸಮರ್ದಕಪತ್ರಾಣಾಂ ಯೂಷಃ ಶೋಭಾಂಜನಸ್ಯ ಚ ।
ಶುಷ್ಕಮೂಲಕಯೂಷಾಶ್ಚ ಹಿಕ್ಕಾಶ್ವಾಸನಿವಾರಣಾಃ ॥ (ಚ. 694)

ಎಲೆಹುರಿಸೊಪ್ಪು, ನುಗ್ಗೆಸೊಪ್ಪು ಮತ್ತು ಒಣಗಿದ ಮೂಲಂಗಿ, ಇವುಗಳ ಸಾರುಗಳು ಬಿಕ್ಕಟ್ಟನ್ನೂ, ಉಬ್ಬಸವನ್ನೂ ನಿವಾರಿಸುವವು.

ಸೂ: ಈ ಸಾರುಗಳಿಗೆ ಉಪ್ಪು ಮುಂತಾದ್ದನ್ನು ಹಿಂದೆ ಹೇಳಿದ ರೀತಿ ಕೂಡಿಸಿಕೊಳ್ಳುವದು. ಸಾರಿನ ಕ್ರಮಕ್ಕೆ 1ನೇ ಭಾಗದ XIV—36 ನೋಡಿ.

20. ಹಿಕ್ಕಾರ್ತಸ್ಯ ಪಯಶ್ಛಾಗಂ ಹಿತಂ ನಾಗರಸಾಧಿತಮ್ ।
ಮಧುಸೌವರ್ಚಲೋಪೇತಂ ಮಾತುಲುಂಗರಸಂ ಪಿಬೇತ್ ॥
(ಭಾ. ಪ್ರ 376)

ಆಡಿನ ಹಾಲಿನ ಮತ್ತು ಮಾದಳ ರಸದ ಉಪಯೋಗ

ಶುಂಠಿ ಹಾಕಿ ಕಾಯಿಸಿದ ಆಡಿನ ಹಾಲು ಬಿಕ್ಕಟ್ಟಿನ ಪೀಡೆಯುಳ್ಳವನಿಗೆ ಹಿತವು. ಮಾದಳಹಣ್ಣಿನ ಬೆಂಡಿನ ರಸಕ್ಕೆ ಜೇನನ್ನೂ ಕರೀ ಉಪ್ಪು(ಸೌವರ್ಚಲವ)ನ್ನೂ ಕೂಡಿಸಿ ಕುಡಿಯಬೇಕು.

21. ಅಪ್ಯಸಾಧ್ಯಾ ಸಯತ್ಯಸ್ತಂ ಹಿಕ್ಕಾ ಕ್ಷೌದ್ರಾವಲೇಹನಾತ್ ।
ಸದ್ಯ ಏವ ಮಹಾಯೋಗಃ ಕಾಶಮೂಲಭವಂ ರಜಃ ॥
ಹಿಕ್ಕಾರ್ತೋ ಮಧುನಾ ಲಿಹ್ಯಾಚ್ಛುಂಠೀಧಾತ್ರೀಕಣಾನ್ವಿತಮ್ ॥
(ಚಿ. ಸಾ. ಸಂ. 260)

ಜೇನಿನ ಪ್ರಯೋಜನ ಮತ್ತು ಕೆಲವು ಚೂರ್ಣಯೋಗಗಳು

ಜೇನನ್ನು ನೆಕ್ಕುವದರಿಂದ ಅಸಾಧ್ಯವಾದ ಬಿಕ್ಕಟ್ಟಾದರೂ ಕೂಡಲೇ ಅಡಗಿಹೋಗುತ್ತದೆ. ಇದು ಮಹಾಯೋಗ. ಕಾಶದರ್ಭೆ(ಮೂಲ. ಆಟ್ಟುದರ್ಭ)ಯ ಬೇರಿನ ಚೂರ್ಣಕ್ಕೆ ಶುಂಠಿ, ನೆಲ್ಲಿಚಟ್ಟು ಮತ್ತು ಹಿಪ್ಪಲಿ, ಇವುಗಳ ಚೂರ್ಣವನ್ನು ಕೂಡಿಸಿ, ಜೇನಿನೊಂದಿಗೆ ಕಲಸಿ ಬಿಕ್ಕಟ್ಟಿನ ಪೀಡೆಯುಳ್ಳವನು ನೆಕ್ಕಬೇಕು.

ವಿಶ್ವಾಶಿವಾಕಣಾಚೂರ್ಣಸ್ಸಸಿತಸ್ಸಮಧುಃ ಸ್ಮೃತಃ ।
ತದ್ವದ್ಧಿ ವಿಶ್ವಗುಡಯೋರ್ಹಿಕ್ಕಾಧಿಕ್ಕಾರಕಾರಕಃ ॥ (ವೈ. ಜೀ. ದೀ. 82)

ಶುಂಠೀ, ಅಣಿಲೆಕಾಯಿ ಸಿಪ್ಪೆ, ಹಿಪ್ಪಲಿ, ಇವುಗಳ ಚೂರ್ಣವನ್ನು ಜೇನು ಮತ್ತು ಸಕ್ಕರೆ ಕೂಡಿಸಿ, ಅಥವಾ ಶುಂಠಿ ಚೂರ್ಣವನ್ನು ಬೆಲ್ಲದಲ್ಲಿ ಕಲಸಿ, ಸೇವಿಸಿದ್ದಲ್ಲಿ ಬಿಕ್ಕಟ್ಟು ದೂರ ವಾಗುವದು.

ಪಿಪ್ಪಲೀ ಶಿಖಿಪಿಚ್ಛಸ್ಯ ಭೂತಿರ್ಮಧುಸಮನ್ವಿತಾ |
ಹಿಕ್ಕಾಂ ಹನ್ತಿ ತಥಾಶ್ವಾಸಂ ಲೀಢಾ ದಿವಸಪಂಚಕಾತ್ ||

(ವೈ. ಸಾ. ಸಂ. 158)

ಹಿಪ್ಪಲಿ ಚೂರ್ಣವನ್ನೂ ನವಿಲು ಗರಿಯ ಬೂದಿಯನ್ನೂ ಜೇನಿನಲ್ಲಿ ಕಲಸಿ ನೆಕ್ಕುತ್ತಾ ಬರಲು, ಬಿಕ್ಕಟ್ಟು ಮತ್ತು ಉಬ್ಬಸ ಐದು ದಿವಸಗಳೊಳಗೆ ಪರಿಹಾರವಾಗುವವು.

22. ಶಟೀಚೋರಕಜೀವನ್ತೀತ್ವಙ್ಮುಸ್ತಂ ಪುಷ್ಕರಾಹ್ವಯಮ್ |
ಸುರಸಂ ತಾಮಲಕ್ಯೇಲಾ ಪಿಪ್ಪಲ್ಯಗುರು ನಾಗರಮ್ ||
ಶಟ್ಯಾದಿ ಚೂರ್ಣ ಬಾಲಕಂ ಚ ಸಮಂ ಚೂರ್ಣಂ ಕೃತ್ವಾಷ್ಟಗುಣಶರ್ಕರಮ್ |
ಸರ್ವಥಾ ತಮಕೇ ಶ್ವಾಸೇ ಹಿಕ್ಕಾಯಾಂ ಚ ಪ್ರಯೋಜಯೇತ್ ||

(ಚ. 696)

ಸಣ್ಣ ಕಚೋರ, ಚೋರಕ, ಜೀವಂತಿಗಡ್ಡೆ, ಲಂವಗಪಟ್ಟೆ, ಭದ್ರಮುಷ್ಟಿ, ಪುಷ್ಕರಮೂಲ, ತುಳಸೀ, ನೆಲನೆಲ್ಲಿ, ಏಲಕ್ಕಿ, ಹಿಪ್ಪಲಿ, ಅಗಿಲುಗಂಧ, ಶುಂಠಿ ಲಾವಂಚ, ಇವುಗಳನ್ನು ಸಮ ಭಾಗವಾಗಿ ಕೂಡಿಸಿ ವಸ್ತ್ರಗಾಲಿತ ಚೂರ್ಣಮಾಡಿ, ಆ ಚೂರ್ಣಕ್ಕೆ (ಪ್ರತಿಯೊಂದು ಔಷಧದ ಪ್ರಮಾಣದ) ಎಂಟು ಪಾಲು ಸಕ್ಕರೆಯನ್ನು ಬೆರಸಿಟ್ಟುಕೊಂಡು, ಅದನ್ನು ತಮಕ ಎಂಬ ಉಬ್ಬಸದಲ್ಲಿ ಮತ್ತು ಬಿಕ್ಕಟ್ಟುರೋಗದಲ್ಲಿ (ಪಾನಭೋಜನಾದಿ) ಎಲ್ಲಾ ವಿಧಗಳಿಂದ ಉಪ ಯೋಗಿಸತಕ್ಕದ್ದು.

ಪರಾ ಚೋರಕ ಎಂಬದಕ್ಕೆ ಕರ್ಪೂರಶುಂಠಿ ಎಂತ ಅರ್ಥ ಬರೆದದ್ದು ಕಾಣುತ್ತದೆ. ಮಲಯಾಳದಲ್ಲಿ ಅಡವಿ ಕಚ್ಚೋಲಂ (ಕಾಡುಕಚೋರ) ಎಂಬದನ್ನು ಉಪಯೋಗಿಸುತ್ತಾರೆ. ಚೋರಕ ಎಂಬದು ಗ್ರಂಥಿಪರ್ಣದ ಭೇದ ಎಂತ ಥಾ ಪ್ರ (ಪು 96) ಗ್ರಂಥಿಪರ್ಣ ಆಸ್ಥಾಂನಲ್ಲಿ ಸಿಗುತ್ತದೆಂತ ಬೃ ಸಿ ಇನ್ನೊಂದು ಗ್ರಂಥದಲ್ಲಿ 'ಚೋರಕ' ಎಂಬಲ್ಲಿ 'ಪುಷ್ಕರ' ಎಂತ ಪಾಠವಿದೆ ಆ ಪಾಠ ಪ್ರಕಾರ ತಾವರೆಮೂಲವನ್ನು ಕೂಡಿಸಬೇಕಾಗುವದು

23. ಹರಿದ್ರಾ ಮರಿಚಂ ದ್ರಾಕ್ಷಾ ಗುಡಂ ರಾಸ್ನಾ ಕಣಾ ಶಟೀ |
ಲಿಹ್ಯಾತ್ತೈಲೇನ ವಿಲಿಹನ್ (?ವಿಲಯನ್) ಶ್ವಾಸಂ ಪ್ರಾಣಹರಾಮಪಿ ||
ಹರಿದ್ರಾದಿ ಲೇಹ ಹಿಕ್ಕಾಂ ಹರತಿ ಪ್ರಬಲಾಂ ಶ್ವಾಸಾತಿಪ್ರಭೂತಂ ನಿವಾರಯತಿ || (ನಿ ರ.)

ಅರಸಿನ, ಕಾಳುಮೆಣಸು, ದ್ರಾಕ್ಷೆ, ಬೆಲ್ಲ, ರಾಸ್ನೆ (ಅರತೆ), ಹಿಪ್ಪಲಿ, ಸಣ್ಣ ಕಚೋರ, ಇವುಗಳ ವಸ್ತ್ರಗಾಲಿತ ಚೂರ್ಣವನ್ನು ಎಳ್ಳೆಣ್ಣೆಯಲ್ಲಿ ಕಲಸಿ ನೆಕ್ಕಬೇಕು. ಅದು ಉಬ್ಬಸ ವನ್ನೂ, ಪ್ರಾಣಹರವಾದ ಮತ್ತು ಪ್ರಬಲವಾದ ಬಿಕ್ಕಟ್ಟನ್ನೂ ಪರಿಹರಿಸುವದು ಮತ್ತು ಅತಿ ಹೆಚ್ಚಾದ ಉಬ್ಬಸವನ್ನು ನಿವಾರಿಸುವದು.

24. ಮಧುನಾ ಕಟುಕಾಚೂರ್ಣಂ ಲೀಢಂ ಹಿಕ್ಕಾನಿವಾರಣಮ್ || (ನಿ. ರ.)

ಕಟುಕರೋಹಿಣಿ ಚೂರ್ಣ. ಕಟುಕರೋಹಿಣಿಯ ಚೂರ್ಣವನ್ನು ಜೇನಿನಲ್ಲಿ ಕಲಸಿ ನೆಕ್ಕಲು, ಬಿಕ್ಕಟ್ಟು ಪರಿಹಾರವಾಗುತ್ತದೆ.

25. ಧಾತ್ರೀ ಚ ಮಾಗಧೀ ಶುಂಠೀ ಕ್ವಾಥಶ್ಶೈಷಾಂ ಸಿತಾಯುತಃ |
ಧಾತ್ರ್ಯಾದಿ ಕಷಾಯ ಹಿನಸ್ತಿ ಹೃದಯೋದ್ಭೂತಾಂ ಹಿಕ್ಕಾಂ ಪ್ರಾಣಾವರೋಧಿನೀಮ್ ||
(ನಿ. ರ.)

ನೆಲ್ಲಿಚಟ್ಟು, ಹಿಪ್ಪಲಿ ಮತ್ತು ಶುಂಠಿ, ಇವುಗಳ ಕಷಾಯವನ್ನು ಸಕ್ಕರೆ ಬೆರಸಿಕೊಂಡು ಸೇವಿಸಲು, ಹೃದಯದಿಂದ ಹೊರಟ ಮತ್ತು ಶ್ವಾಸವನ್ನು ತಡೆಯು ವಂಥಾ ಬಿಕ್ಕಟ್ಟು ಪರಿಹಾರವಾಗುವದು.

26. ಪಿಪ್ಪಲೀಧಾನ್ಯಕೋಶೀರನಿರ್ಯೂಹಸ್ಸಸಿತಾಮಧುಃ |
ಪಿಪ್ಪಲ್ಯಾದಿ ಕಷಾಯ ಪೀತಃ ಪ್ರಮಥಯತ್ಯಾಶು ಹಿಧ್ಮಾಂ ತೃಷ್ಣಾಂ ಚ ದುರ್ಜಯಾಮ್ ||
(ವೈ. ಸಾ. ಸಂ 157)

ಹಿಪ್ಪಲಿ, ಕೊತ್ತುಂಬರಿ, ಲಾವಂಚ, ಇವುಗಳ ಕಷಾಯವನ್ನು, ಜೇನು ಮತ್ತು ಸಕ್ಕರೆ ಬೆರಸಿಕೊಂಡು, ಕುಡಿಯುವದರಿಂದ ಬಿಕ್ಕಟ್ಟು ಮತ್ತು ಜಯಿಸಲು ಕಷ್ಟವಾದ ಬಾಯಾರಿಕೆ ಬೇಗನೆ ಪರಿಹಾರವಾಗುವವು.

27. ಸಕೃದುಷ್ಣಂ ಸಕೃಚ್ಛೀತಂ ವ್ಯತ್ಯಾಸಾದ್ಧಿಕ್ಕಿನಾಂ ಪಯಃ |
ಹಾಲಿನ ಉಪಯೋಗದ ವಿಧಾನ ಪಾನೇ ನಸ್ತಃ ಕ್ರಿಯಾಯಾಂ ವಾ ಶರ್ಕರಾಮಧುಸಂಯುತಮ್ ||
(ಚ. 697)

ಬಿಕ್ಕಟ್ಟಿನವರಿಗೆ ಪಾನಕ್ಕಾಗಲೀ, ನಸ್ಯಕರ್ಮದಲ್ಲಾಗಲೀ ಹಾಲನ್ನು ಉಪಯೋಗಿಸುವಲ್ಲಿ, ಅದಕ್ಕೆ ಸಕ್ಕರೆ ಮತ್ತು ಜೇನನ್ನು ಕೂಡಿಸುವದಲ್ಲದೆ, ಅದನ್ನು ಒಮ್ಮೆಬಿಸಿಯಾಗಿ, ಒಮ್ಮೆ ಶೀತವಾಗಿ (ಕಾಯಿಸಿ ತಣಿಸಿ), ವ್ಯತ್ಯಾಸಮಾಡಿ ಉಪಯೋಗಿಸತಕ್ಕದ್ದು

ಪರಾ ಬಿಸಿಯಾಗಿ ಉಪಯೋಗಿಸುವಾಗ್ಗೆ ಜೇನನ್ನು ಕೂಡಿಸಬಾರದು (ಅ ವೀ 523)

28. ಸ್ತ್ರಿಯಾಃ ಸ್ತನ್ಯೇನ ಸಿದ್ಧಂ ವಾ ಸರ್ಪಿರ್ಮಧುರಕೈರಪಿ |
ಸ್ತನ್ಯಸಿದ್ಧ ಘೃತ ಪೀತಂ ನಸ್ತೋ ನಿಷಿಕ್ತಂ ವಾ ಸದ್ಯೋ ಹಿಕ್ಕಾಂ ನಿಯಚ್ಛತಿ ||
(ಚ. 697)

ಸ್ತ್ರೀಯ ಮೊಲೆಹಾಲಿನಿಂದ, (ಕಲ್ಕವಾಗಿ) ಮಧುರ(ಜೀವನೀಯ)ವರ್ಗದ ಔಷಧಗಳನ್ನು ಕೂಡಿಸಿ, ಕ್ರಮವಾಗಿ ತಯಾರಿಸಿದ ತುಪ್ಪವನ್ನು ಪಾನಮಾಡುವದರಿಂದ, ಅಥವಾ (ನಸ್ಯವಾಗಿ) ಮೂಗಿನೊಳಗೆ ಬಿಡುವದರಿಂದ, ಬಿಕ್ಕಟ್ಟು ಒಡನೆ ಅಡಗುತ್ತದೆ.

29. ಹಿಕ್ಕಾಯಾಮತಿವೃದ್ಧಾಯಾಂ ಭ್ರುವೋರ್ಮಧ್ಯೇ ನಿಷೇಚಯೇತ್ |
ತಣ್ಣೀರಿನ ಧಾರೆ ಮುಂತಾದ್ದು ಶೀತಲೇನಾಮ್ಬುನಾ ಸ್ನಾನಂ ಧೂಮಂ ವಾ ಗುಗ್ಗುಲೋಃ ಪಿಬೇತ್ ||
(ವೈದ್ಯಮನೋರಮಾ)

ಬಿಕ್ಕಟ್ಟು ಅತಿ ಹೆಚ್ಚಾದಾಗ್ಗೆ ಹುಬ್ಬುಗಳ ನಡುವೆ ತಣ್ಣೀರಿನ ಧಾರೆ ಹಿಡಿಯಬೇಕು, ಅಥವಾ ತಣ್ಣೀರಿನಿಂದ ಸ್ನಾನಮಾಡಿಸಬೇಕು, ಅಥವಾ ಗುಗ್ಗುಳದ ಹೊಗೆ ಸೇದಬೇಕು.

30. ಕೂಷ್ಮಾಣ್ಡಪ್ರಭವಂ ಮೂಲಂ ಪೀತ್ವಾ ಭಕ್ತಸ್ಯ ವಾರಿಣಾ |
ಅಜಸ್ರಮುತ್ಥಿತಾಹಿಕ್ಕಾಶಾನ್ತಿರ್ಭವತಿ ತತ್‌ಕ್ಷಣಾತ್ || (ರ. ರ. 352)

ಕೂಷ್ಮಾಂಡದ ಬೇರಿನ ಉಪಯೋಗ

ಬೂದಿಕುಂಬಳದ ಬೇರನ್ನು ಅನ್ನದ ಉಕ್ಕುತೆಳಿಯಲ್ಲಿ ತೇದಿ ಅಥವಾ ಅರೆದು ಪಾನಮಾಡುವದರಿಂದ, ಬಿಡದೆ ಏಳುತ್ತಿರುವ ಬಿಕ್ಕಟ್ಟು ಆಕ್ಷಣ ಶಾಂತವಾಗುತ್ತದೆ.

31. ಹಿಕ್ಕಾಶ್ವಾಸಾನುಬನ್ಧಾ ಯೇ ಶುಷ್ಕೋರಃಕಂಠತಾಲುಕಾಃ |
ಪ್ರಕೃತ್ಯಾ ರೂಕ್ಷದೇಹಾಶ್ಚ ಸರ್ಪಿರ್ಭಿಸ್ತಾನುಪಾಚರೇತ್ || (ಚ. 697)

ಎದೆಗಂಟಲುಗಳು ಒಣಗುವದಕ್ಕೆ

ಬಿಕ್ಕಟ್ಟು ಮತ್ತು ಶ್ವಾಸ ರೋಗಗಳಿಗೆ ಅನುಬಂಧವಾಗಿ ಉಂಟಾದ ಎದೆ, ಗಂಟಲು, ತಾಲುಗಳ ಒಣಗುವಿಕೆಗೆ ಮತ್ತು ಪ್ರಕೃತಿಯಿಂದಲೇ ರೂಕ್ಷ (ಜಿಡ್ಡಿಲ್ಲದ) ಶರೀರಿಗಳಾದವರಿಗೆ ತುಪ್ಪಗಳಿಂದ ಉಪಚಾರಮಾಡತಕ್ಕದ್ದು.

32. ಅಶ್ವತ್ಥವಲ್ಕಲಂ ಶುಷ್ಕಂ ದಗ್ಧಂ ನಿರ್ವಾಪಿತಂ ಜಲೇ |
ತಜ್ಜಲಂ ಪಾನಮಾತ್ರೇಣ ಹಿಕ್ಕಾಂ ಛರ್ದಿಂ ಚ ನಾಶಯೇತ್ || (ನಿ. ರ.)

ಅಶ್ವತ್ಥದ ಕೆತ್ತೆಯ ಉಪಯೋಗ

ಅಶ್ವತ್ಥದ ಕೆತ್ತೆಯನ್ನು (ಬಿಸಿಲಿನಲ್ಲಿ) ಒಣಗಿಸಿ ಸುಟ್ಟು, ಕೊಳ್ಳಿಯನ್ನು ತಣ್ಣೀರಿನಲ್ಲಿ ಅದ್ದಿ, ಆ ನೀರನ್ನು ಕುಡಿದ ಮಾತ್ರದಿಂದ ಬಿಕ್ಕಟ್ಟು ಮತ್ತು ವಾಂತಿ ಪರಿಹಾರವಾಗುವವು

33. ಹಿಕ್ಕಾಶ್ವಾಸವಿಕಾರಾಣಾಂ ನಿದಾನಂ ಯತ್ಪ್ರಕೀರ್ತಿತಮ್ |
ವರ್ಜ್ಯಮಾರೋಗ್ಯಕಾಮೈಸ್ತದ್ಧಿಕ್ಕಾಶ್ವಾಸವಿಕಾರಿಭಿಃ || (ಚ. 697)

ನಿದಾನ ವರ್ಜ್ಯತೆಯ ಆವಶ್ಯಕತೆ

ಬಿಕ್ಕಟ್ಟು ಮತ್ತು ಉಬ್ಬಸ ರೋಗಗಳಿಗೆ ಯಾವದು ನಿದಾನವಾಗಿ ಹೇಳಲ್ಪಟ್ಟದ್ದೋ, ಅದನ್ನು ಆರೋಗ್ಯದ ಆಶೆಯುಳ್ಳ ಬಿಕ್ಕಟ್ಟು ರೋಗದವರೂ ಉಬ್ಬಸ ರೋಗದವರೂ ವರ್ಜ್ಯಮಾಡಬೇಕು.

34. ಏಷಾಂ ಪ್ರಾಣಹರಾ ವರ್ಜ್ಯಾ ಘೋರಾಸ್ತೇ ಹ್ಯಾಶುಕಾರಿಣಃ |
ಭೇಷಜೈಃ ಸಾಧ್ಯಯಾಪ್ಯಾಂಸ್ತು ಕ್ಷಿಪ್ರಂ ಭಿಷಗುಪಾಚರೇತ್ ||
ಉಪೇಕ್ಷಿತಾ ದಹೇಯುರ್ಹಿ ಶುಷ್ಕಂ ಕಕ್ಷಮಿವಾನಲಾಃ || (ಚ. 692)

ಉಪೇಕ್ಷೆಯ ದುಷ್ಪರಿಣಾಮ

(ಪಂಚವಿಧವಾದ) ಉಬ್ಬಸ ಮತ್ತು ಬಿಕ್ಕಟ್ಟುಗಳಲ್ಲಿ ಯಾವವು ಪ್ರಾಣಹರವೋ (ಅಸಾಧ್ಯವೋ), ಅವುಗಳನ್ನು ವೈದ್ಯನು ಚಿಕಿತ್ಸೆಮಾಡದೆ ಬಿಟ್ಟುಬಿಡಬೇಕು ಅವು ಘೋರವಾದವು ಮತ್ತು ಬೇಗನೇ ಕೊನೆಗಾಣಿಸತಕ್ಕಂಥವು. ಸಾಧ್ಯವಾದ (ಎರಡು) ಜಾತಿಯವನ್ನೂ ಮತ್ತು ಯಾಪ್ಯವಾದ (ಒಂದು) ಜಾತಿಯನ್ನೂ ಬೇಗನೇ ಉಪಚರಿಸಬೇಕು; ಯಾಕೆಂದರೆ ಉಪೇಕ್ಷೆ ಮಾಡಿದರೆ ಅವು, ಒಣಗಿದ ಕಾಡನ್ನು ಉರಿಗಳಂತೆ, ರೋಗಿಗಳನ್ನು ಸುಟ್ಟುಬಿಡುವವು.

35. ಮಾವಿನ ಗೊರಟನ್ನು ಸುಟ್ಟು, ಒಳಗಿನ ತಿರುಳಿನ ಭಸ್ಮವನ್ನು ಜೇನಿನಲ್ಲಿ ಕಲಸಿ ನೆಕ್ಕುವದರಿಂದ ಬಿಕ್ಕಟ್ಟು ಪರಿಹಾರವಾಗುತ್ತದೆ.

ಮಾವಿನ ಗೊರಟಿನ ಉಪಯೋಗ

(ವೃದ್ಧವೈದ್ಯಾನುಭವ)

36. (1) ರೋಗಿಯ ಪ್ರಾಯ 25 ವರ್ಷ. 3-4 ದಿನಗಳಿಂದ ಬಿಕ್ಕಟ್ಟು, 8 ದಿನಗಳಿಂದ ಕೆಮ್ಮು, ಕೆಮ್ಮಿಸಿದರೆ ಸೊರೆ ಬರುತ್ತದೆ, ಆರಂಭದಲ್ಲಿ 2 ದಿನ ಜ್ವರ ಬಂದಿತ್ತಂತೆ; ನಾಡಿಗಳೊಳಗೆ ವಾತ ಸ್ಥಾನಚ್ಯುತ, ಪಿತ್ತ ಹೆಚ್ಚಾಗಿ ಹಾಗೆಯೇ, ಕಫ ಅಸ್ಥಿರ.—

ದೃಷ್ಟಫಲಚಿಕಿತ್ಸೆ

ಆಡುಸೋಗೆಯ ರಸ || ಡ್ರಾಂ, ತುಳಸೀ ರಸ || ಡ್ರಾಂ, ನೀರುಳ್ಳಿರಸ || ಡ್ರಾಂ, ಇದರಲ್ಲಿ ಮ. ಜ್ವ. ೧ರಂತೆ, ಸಕ್ಕರೆ ಕೂಡಿಸಿ, ಎರಡು ಸರ್ತಿ ಸೇವಿಸಿದರಿಂದಲೇ ಬಿಕ್ಕಟ್ಟು ಪರಿಹಾರ ಪಥ್ಯಕ್ಕೆ ಬಳ್ಳಿತುರಚನ ಬೇರು ತೊ.| ಹಾಕಿ ಮಾಡಿದ ಗಂಜಿ ಹೇಳಿತ್ತು.

(2) ರೋಗಿಯ ಪ್ರಾಯ 10 ವರ್ಷ. 3 ದಿನಗಳಿಂದ ಬಿಡದೆ ಬಿಕ್ಕಳಿಕೆ, ನೆಗಡಿಯಾಗಿದೆ; ನಾಡಿಗಳೊಳಗೆ ವಾತದಲ್ಲಿ ಒಂದೊಂದಕ್ಕೆ ತಲೆ ಇಲ್ಲ, ಪಿತ್ತ ಸ್ತಬ್ಧ, ಕಫಕ್ಕೆ ತಲೆ ಇಲ್ಲ — ಮಾತುಳಂಗ ರಸಾಯನ ತೊ. || ರಂತೆ ಸೇವಿಸಿ, ಅನುಪಾನವಾಗಿ || ಕುಡ್ತೆ ಹಾಲು. ಈ ಪ್ರಕಾರ 1 ಸರ್ತಿಯ ಔಷಧ ಸೇವಿಸಿದರಿಂದ ಕ್ಷೇಮವಾಯಿತು.

(3) ಪ್ರಾಯ 30 ವರ್ಷ. 7-8 ದಿನಗಳಿಂದ ಬಿಕ್ಕಟ್ಟು, ಬೇರೆ ಬೇರೆ ಚಿಕಿತ್ಸೆ ಮಾಡಿಸಿದ್ದರಿಂದ ಗುಣ ಸಿಕ್ಕಲಿಲ್ಲ, ನಾಡಿಗಳೊಳಗೆ ವಾತಪಿತ್ತಗಳು ಸ್ತಬ್ಧ ಯಾ ಸ್ಥಾನಚ್ಯುತ; ಕಫದಲ್ಲಿ ಒಂದೊಂದರ ತಲೆ ಅಜಲ — ಮಾರ್ಕವಾವಲೇಹ ತೊ. || ರಂತೆ ಸೇವಿಸಿ, ||| ಕುಡ್ತೆ ಹಾಲನ್ನು ಅನುಪಾನವಾಗಿ ಕುಡಿಯ ಹೇಳಿ 4 ಸರ್ತಿಗೆ ಔಷಧ ಕೊಟ್ಟು, ಪುನರ್ನವಿ ಬೇರು (ಕೆಂಪು), ಕದಿಕೆಹುಲ್ಲು ಮತ್ತು ಹಸಿಶುಂಠಿಯನ್ನು ಕೂಡಿಸಿ ಮಾಡಿದ ಗಂಜಿಯನ್ನು, ಹಾಲು ಮತ್ತು ಸಕ್ಕರೆ ಕೂಡಿಸಿ, ಉಣ್ಣ ಹೇಳಲಾಯಿತು — ಗುಣ ಉಂಟು, ಆಗಾಗ್ಗೆ ಸ್ವಲ್ಪ ಸ್ವಲ್ಪ ಬಿಕ್ಕಳು ಒರುತ್ತದಂತೆ, ನಿನ್ನೆ ಮಲ ಹೋಗಲಿಲ್ಲ, ಪಿತ್ತ ಕಫ ನಾಡಿಗಳು ಸ್ತಬ್ಧತರ; ಸ್ವಲ್ಪ ಕೆಮ್ಮೂ ನೆಗಡಿಯೂ ಕಾಣುತ್ತವೆ. — ಕಾಯಿಸಿದ ಹಾಲು ೨ ಡ್ರಾಂ, ಆಡುಸೋಗೆ ಎಲೆಯ ರಸ ೧ ಡ್ರಾಂ, ಶುಂಠಿರಸ || ಡ್ರಾಂ, ಇದರಲ್ಲಿ ಜ್ವರಭೈರವ ಮಾತ್ರೆ ೧ ರಂತೆ, ಕಲ್ಲುಸಕ್ಕರೆ ಪುಡಿ ೨ ಚಿಮಿಟಿ ಕೂಡಿಸಿ, ೬ ಸರ್ತಿಗೆ. — ಬಿಕ್ಕಳಿಕೆ ನಿಂತದೆ, ಮಲಪ್ರವೃತ್ತಿ ಸರಿ. ನೆಗಡಿ ಸ್ವಲ್ಪ ಉಳಿದದರಿಂದಲೂ ಪಿತ್ತಕಫನಾಡಿಗಳಲ್ಲಿ ದೋಷಕಂಡದರಿಂದಲೂ ಚಿಕಿತ್ಸೆ ಮುಂದುವರಿಸಿಯದೆ.

ಮಾರ್ಕವಾವಲೇಹದ ಯೋಗ

ಗರುಗಸ ರಸ ಕುತ್ತಿ || (ಕುಡ್ತೆ ೪||), ಕಜ್ಜಿನ ರಸ ಕುತ್ತಿ ||, ಹಳೇ ಬೂದಿಕುಂಬಳಕಾಯಿಯಿಂದ ಬೆವರಿಸಿ ತೆಗೆದ ರಸ ಕುತ್ತಿ ||, ನೆಲ್ಲಿರಸ ಕುತ್ತಿ ||, (ಹಸಿನಲ್ಲಿ ಸಿಕ್ಕದ ಕಾಲದಲ್ಲಿ ನೆಲ್ಲಿಚಟ್ಟು ಸೇರು ೧|ರ ಕಷಾಯ), ಕಿರಿಗುಳ್ಳ (ಕಲ್ಲಟ್ಟೆ) ಬೇರು ಸೇರು ೧|, ಗುಳ್ಳದ ಬೇರು ಸೇರು ೧|, ಇವುಗಳೆರಡರ ಅಷ್ಟಾವಶೇಷ ಕಷಾಯ ಕುತ್ತಿ||, ಕಲ್ಲುಸಕ್ಕರೆಯ ಪುಡಿ ಮಣ |, ದನದ ತುಪ್ಪ ಕುತ್ತಿ||, (ಚೂರ್ಣಕ್ಕೆ) 1. ಕರ್ಕಟಶೃಂಗಿ, 2. ತುಪ್ಪದೇವದಾರ, 3. ಸಬ್ಬಸಿಗೆ, 4. ಹಿಪ್ಪಲೀಮೂಲ, 5. ಜ್ಯೇಷ್ಠಮಧು, 6. ವಾಯುವಿಳಂಗ, 7. ಭದ್ರಮುಷ್ಟಿ, 8. ಶುದ್ಧಅಶ್ವಗಂಧಿ, 9. ಮರದರಸಿನ, 10. ಅರಸಿನ, 11. ಕಟುಕರೋಹಿಣೀ, 12. ಬಳ್ಳಿತುರಚನ (ಬೀಳುಪಚ್ಚರಂಗಿ) ಬೇರು, 13. ತಾವರೆ ದಂಟು, 14. ಇಂದ್ರಜೀವಿ, 15. ಚಂಗಲಕೋಷ್ಠ, 16. ಓಮ, 17. ಒಡೇಸೋಪಿ, 18. ತಾಳೀಸಪತ್ರೆ, 19. ಹಾವುಮೆಕ್ಕೆಬೇರು (ಸಿಕ್ಕದಾಗ್ಗೆ ಕಾಯಿ), 20. ಸುಗಂಧಿ (ನನ್ನಾರಿ) ಬೇರಿನ ಒಳಗಿನ ಸಿಪ್ಪೆ, ಇವು ೨೦ ಬಗೆಗಳು ತೊ. ೩ರಂತೆ, 21. ಒಣಶುಂಠಿ ತೊ. ೬, 22. ಹಿಪ್ಪಲಿ ತೊ. ೬, 23. ಬಿಳೇ ಕಾಳುಮೆಣಸು ತೊ. ೧||, 24. ಕೊತ್ತುಂಬರಿ

ತೊ. ೧||, 25. ಜೀರಿಗೆ ತೊ. ೧||, 26. ಲವಂಗಪಟ್ಟೆ ತೊ. ೧, ಈ 26 ಬಗೆಗಳ ವಸ್ತ್ರ ಗಾಲಿತ ಚೂರ್ಣ.—ದ್ರವಗಳಲ್ಲಿ ಕಲ್ಲುಸಕ್ಕರೆ ಪುಡಿಯನ್ನು ಕಲಸಿ, ಪಾಕಕ್ಕೆ ಇಟ್ಟು, ಪಾಕ ಬರುವ ಸಮಯದಲ್ಲಿ ಚೂರ್ಣವನ್ನೂ ತುಪ್ಪವನ್ನೂ ಹಾಕಿ ಸರಿಯಾಗಿ ಬೆರಿಕೆಯಾಗುವಂತೆ ಮಗಚಿ, ಕಾಯಿಸಿ, ಸರಿಯಾದ ಲೇಹಪಾಕ ಬರುತ್ತಲೇ, ಪಾತ್ರವನ್ನು ಒಲೆಯಿಂದ ಕೆಳಗಿಳಿಸಿ, ಸ್ವಲ್ಪ ಹೊತ್ತು ಲೇಹವನ್ನು ಮಗಚುತ್ತಾ ಇರಬೇಕು. ಈ ಲೇಹವನ್ನು ಒಂದು ಪಕ್ಷಕಾಲ ಧಾನ್ಯರಾಶಿಯಲ್ಲಿ ಹುಗಿದಿಟ್ಟರೆ ಗುಣ ಹೆಚ್ಚುವದು. ಈ ಲೇಹದಲ್ಲಿ ||ತೊಲೆಯಿಂದ ೧|| ತೊಲೆ ವರೆಗೆ ದಿನಕ್ಕೆ ೨ ಸರ್ತಿ ಸೇವಿಸಿ, ದೋಷಕ್ಕೆ ತಕ್ಕ ಪ್ರಮಾಣದಲ್ಲಿ ಹಾಲನ್ನು ಅನು ಪಾನವಾಗಿ ಕುಡಿಯುವದು. ಅದರಿಂದ ಕಾಮಿಲೆ, ಪಾಂಡು, ಗ್ರಹಣೀ, ಶೋಫೆ, ಅತಿಸಾರ, ಗುಲ್ಮ, ಕೆಮ್ಮು, ಉಬ್ಬಸ, ಬಿಕ್ಕಟ್ಟು, ಕ್ಷಯ, ಕಟಿಗ್ರಹ, ಪಾರ್ಶ್ವಗ್ರಹ, ನರಗಳ ದುರ್ಬಲತೆ ಮತ್ತು ಬೇರೆ ಅನೇಕ ವಾತಪಿತ್ತ ವಿಕಾರಗಳು ಪರಿಹಾರವಾಗುವವು.

37. ಅಜವೋದ, ಅಣಿಲೆಕಾಯಿ, ಅರಗು, ಕರೀತುಳಸಿ, ಕರ್ಕಟಶೃಂಗಿ, ಕಿರಿಗುಳ್ಳ, ಗಣಿಕೆ (ಕಾಗೆಸೊಪ್ಪಿನ ಗಿಡ), ಜೇನು, ದೇವದಾರ, ದೇವದಾಳಿ, ನವಿಲು ಗರಿಯ ಬೂದಿ, ಪಾದರಿಮರ, ಪುಲ್ಲಂಪುರುಚೆ (ಪುಳಿಯಾರಲ್), ಬೆಳ್ಳುಳ್ಳಿ, ಬೇಲದಹಣ್ಣು, ಬೊಗರಿಬೀಜ ಮಣ್ಣುಮಳಲುಗಳ ಸುಟ್ಟ ವಾಸನೆ, ಮಾದಳ (ಸೀ) ಹಣ್ಣು ಮತ್ತು ಸಣ್ಣ ಕಚೋರ (ಶಟೀ ಅಥವಾ ಸಟೀ). (ಉಬ್ಬಸ ರೋಗದ ಅಡಿ ಬರೆಯಲ್ಪಟ್ಟ ಪಟ್ಟಿ ನೋಡಿ)

ವೃಥಗ್ರೋಗೋ ಕ್ತೌಷಧಗಳು

38. ನಿದ್ರೆ, ಸ್ನಿಗ್ಧ ಮತ್ತು ಲಘುವಾದ ಆಹಾರಗಳು, ಉಪ್ಪುಗಳು, ಹಳೆಯವಾದ ಹುರುಳಿ, ಗೋದಿ, ಅಕ್ಕಿ ಮತ್ತು ಯವೆಗೋದಿ, ಜಿಂಕೆ ಮೊದಲಾದ ಜಾಂಗಲ ವರ್ಗದ ಮೃಗಪಕ್ಷಿಗಳ ಮಾಂಸಗಳು, ಪಕ್ವವಾದ ಬೇಲದಹಣ್ಣು, ಬೆಳ್ಳುಳ್ಳಿ, ಪಡುವಲಕಾಯಿ, ಮದಿರಾ (ಮದ್ಯ), ಬಿಸಿನೀರು, ಕಫವಾತಹರವಾದ ಅನ್ನಪಾನ ಗಳು, ಎಳೇ ಮೂಲಂಗಿ, ಎಳೇ ಬಾಳೆಕಾಯಿ, ಬೂದಿಕುಂಬಳದ ಬೆಳೆದ ಕಾಯಿ, ಆಡಿನ ಹಾಲು, ಎಲೆಮುರಿಸೊಪ್ಪು, ಚೊಗರು ಮತ್ತು ಕಹಿ ದ್ರವ್ಯಗಳು.

ಪಥ್ಯವರ್ಗ

39. ಮಲ-ಮೂತ್ರ-ಕೆಮ್ಮು-ತೇಗು-ವಾಯುಗಳ ವೇಗವನ್ನು ತಡೆಯುವದು, ದೂಳು, ಗಾಳಿ, ಬಿಸಿಲು, ವಿರುದ್ಧಾಶನ, ವಿಷ್ಟಂಭಕರವಾದ, ವಿದಾಹಿಕರವಾದ, ರೂಕ್ಷವಾದ ಮತ್ತು ಕಫಕರವಾದ ಆಹಾರಗಳು, ಅವರೆ, ಹಿಟ್ಟು, ಉದ್ದು, ಹಿಂಡಿ, ಆನೂಪವರ್ಗದ ಮಾಂಸ, ಕುರಿಯ ಹಾಲು, ಮೀನು, ಸಾಸಿವೆ, ಹುಳಿ, ತೊಂಡೆಕಾಯಿ, ಗಡ್ಡೆಗೆಣಸುಗಳು, ಎಣ್ಣೆಯಲ್ಲಿ ಹುರಿದ ಪದಾರ್ಥಗಳು, ಬಸಳೆ (ಬಚ್ಚಲು ಸೊಪ್ಪು), ಗುರು ಮತ್ತು ಶೀತವಾದ ಅನ್ನಪಾನಗಳು, ದೋಸೆ, ಸೋರೆಕಾಯಿ, ಬದನೆ, ಎಣ್ಣೆ, ತಣ್ಣೀರಿನ ಪಾನ ಮತ್ತು ಎಮ್ಮೆಯ ಹಾಲು, ತುಪ್ಪ ಮತ್ತು ಮಜ್ಜಿಗೆ.

ಅಪಥ್ಯವರ್ಗ

---

# ಅಧ್ಯಾಯ VII.

## ಉಬ್ಬಸ (ಶ್ವಾಸ). Dyspnœa, asthma

1. ಯೈರೇವ ಕಾರಣೈರ್ಹಿಕ್ಕಾ ಬಹುಭಿಃ ಸಮ್ಪ್ರವರ್ತತೇ |
ತೈರೇವ ಕಾರಣೈಃ ಶ್ವಾಸೋ ಘೋರೋ ಭವತಿ ದೇಹಿನಾಮ್ ||
(ಸು. 852)

ಬಿಕ್ಕಟ್ಟಿನ ಕಾರಣಗಳಿಂದಲೇ ಉಬ್ಬಸ

ಮನುಷ್ಯರಿಗೆ ಬಹು ವಿಧಗಳಾದ ಯಾವ ಕಾರಣಗಳಿಂದ ಬಿಕ್ಕಟ್ಟು ರೋಗ ಉಂಟಾಗುತ್ತದೋ, ಆ ಕಾರಣಗಳಿಂದಲೇ ಘೋರವಾದ ಉಬ್ಬಸರೋಗವು ಉದ್ಭವವಾಗುತ್ತದೆ.

ಷರಾ 'ಶ್ವಾಸೈಕಹೇತುಪ್ರಾಗ್ರೂಪಸಂಖ್ಯಾಪ್ರಕೃತಿಸಂಶ್ರಯಾಃ ಹಿಧ್ಮಾ' ಎಂತ ವಾ (ಪು 197), ಅಂದರೆ ಉಬ್ಬಸಕ್ಕೂ, ಬಿಕ್ಕಟ್ಟಿಗೂ, ಹೇತು, ಪ್ರಾಗ್ರೂಪ, ವಿಭಾಗ ಸಂಖ್ಯೆ, (ಸಮೀಪದ) ಕಾರಣ, ಆಶ್ರಯಸ್ಥಾನ, ಒಂದೇ. ಚರಕ ಸಂಹಿತೆಯಲ್ಲಿ (ಪು 692) 'ಕಾರಣಸ್ಥಾನಮೂಲೈಕ್ಯಾದೇಕಮೇವಚಿಕಿತ್ಸಿತಮ್ ದ್ವಯೋರಪಿ', ಅಂದರೆ ಉಬ್ಬಸಕ್ಕೂ, ಬಿಕ್ಕಟ್ಟಿಗೂ ಕಾರಣ, ಆಶ್ರಯಸ್ಥಾನ ಮತ್ತು ಮೂಲ ಒಂದೇಯಾದ್ದರಿಂದ ಚಿಕಿತ್ಸೆಯೂ ಒಂದೇ. ಈ ಮತಕ್ಕನುಸಾರವಾಗಿ ಚರಕನೂ, ವಾಗ್ಭಟನೂ, ಆ ರೋಗಗಳೆರಡಕ್ಕೆ ನಿದಾನಾದಿಚಿಕಿತ್ಸಾಂತವರೆಗಿನ ವ್ಯಾಖ್ಯೆಯನ್ನು ಒಟ್ಟಾಗಿ ಕೊಟ್ಟಿದ್ದಾರೆ. ಮಾಧವನಿದಾನದಲ್ಲಿಯೂ ಆ ಎರಡು ರೋಗಗಳ ನಿದಾನಾದಿಗಳು ಒಂದೇ ಅಧ್ಯಾಯದಲ್ಲಿವೆ. ಸುಶ್ರುತನು ಮಾತ್ರ ಎರಡು ರೋಗಗಳ ಕಾರಣಗಳು ಒಂದೇ ಎಂತ ಒಪ್ಪಿಕೊಂಡಾಗ್ಯೂ, ಬೇರೆ ಬೇರೆ ಅಧ್ಯಾಯಗಳಿಂದ ಆ ಎರಡು ರೋಗಗಳನ್ನು ವ್ಯಾಖ್ಯಾನಿಸಿದ್ದಾನೆ. ಆದಾಗ್ಯೂ ಹಿಕ್ಕೆಯ ನಿದಾನ ಬರೆಯುವಲ್ಲಿ, ಅದೇ ಹೇತುಗಳಿಂದ ಆ ಎರಡು ರೋಗಗಳಲ್ಲದೆ ಕೆಮ್ಮು ಸಹ ಉತ್ಪನ್ನವಾಗುತ್ತದೆ ಎಂತ ಬರೆದಿದ್ದಾನೆ. ಇವೆಲ್ಲ ತೋರಮಟ್ಟಿನ ವಿಚಾರಗಳೆಂತಲೇ ತಿಳಿಯಬೇಕಾಗುತ್ತದೆ. ಈ ಅಧ್ಯಾಯದ ಕೊನೆಯಲ್ಲಿ ಬರೆಯುವ 'ಪ್ರಕರಣಾಂತ ಟಿಪ್ಪಣೀ' ನೋಡಿ. ನಿದಾನದ ಸವಿಸ್ತಾರವಾದ ವರ್ಣನವು ಹಿಂದಿನ VIನೇ (ಬಿಕ್ಕಟ್ಟಿನ) ಅಧ್ಯಾಯದಲ್ಲಿ ಕೊಡಲ್ಪಟ್ಟಿದೆ

2. ವಿಹಾಯ ಪ್ರಕೃತಿಂ ವಾಯುಃ ಪ್ರಾಣೋಽಥ ಕಫಸಂಯುತಃ |
ಶ್ವಾಸಯತ್ಯೂರ್ಧ್ವಗೋ ಭೂತ್ವಾ ತಂ ಶ್ವಾಸಂ ಪರಿಚಕ್ಷತೇ || (ಸು. 852)

ಶ್ವಾಸದ ಸಂಪ್ರಾಪ್ತಿ

ಪ್ರಾಣವಾಯುವು ತನ್ನ ಪ್ರಕೃತಿಯನ್ನು ಬಿಟ್ಟು, ಕಫವನ್ನು ಕೂಡಿಕೊಂಡು, ಊರ್ಧ್ವಮುಖವಾಗಿ ಶ್ವಾಸವನ್ನುಂಟುಮಾಡುತ್ತದೆ. ಅಂತಹ ಶ್ವಾಸಕ್ಕೆ ಉಬ್ಬಸವೆನ್ನುತ್ತಾರೆ.

3. ಕ್ಷುದ್ರಕಸ್ತಮಕಶ್ಛಿನ್ನೋ ಮಹಾನೂರ್ಧ್ವಶ್ಚ ಪಂಚಧಾ |
ಭಿದ್ಯತೇ ಸ ಮಹಾವ್ಯಾಧಿಃ ಶ್ವಾಸ ಏಕೋ ವಿಶೇಷತಃ || (ಸು. 852)

ಶ್ವಾಸದಲ್ಲಿ ಭೇದಗಳು

ಉಬ್ಬಸ ಎಂಬ ಒಂದೇ ಮಹಾವ್ಯಾಧಿಯಲ್ಲಿ ವಿಶೇಷ ಲಕ್ಷಣಗಳಿಂದ ಕ್ಷುದ್ರಕ, ತಮಕ, ಛಿನ್ನ, ಮಹಾಶ್ವಾಸ, ಊರ್ಧ್ವಶ್ವಾಸ, ಎಂಬದಾಗಿ ಐದು ಭೇದಗಳನ್ನು ಮಾಡುತ್ತಾರೆ.

4. ಪ್ರಾಗ್ರೂಪಂ ತಸ್ಯ ಹೃತ್ಪೀಡಾ ಭಕ್ತದ್ವೇಷೋಽರತಿಃ ಪರಾ |
ಆನಾಹಃ ಪಾರ್ಶ್ವಯೋಃ ಶೂಲಂ ವೈರಸ್ಯಂ ವದನಸ್ಯ ಚ ||
(ಸು. 852)

ಪ್ರಾಗ್ರೂಪ

ಹೃದಯದ ಪೀಡೆ, ಅನ್ನದ್ವೇಷ, ಅತಿಯಾದ ಅಸಂತೋಷ, ಆನಾಹ, ಪಾರ್ಶ್ವಗಳ ಶೂಲೆ, ಬಾಯಿರುಚಿ **ಕೆಟ್ಟಿ**ರುವದು, ಇವು ಉಬ್ಬಸದ **ಪೂರ್ವರೂಪ.**

ಪರಾ ಶ್ವಾಸದ ಗತಿಯು ಕ್ರಮಕ್ಕೆ ವಿರುದ್ಧವಾಗಿರುವದು ಸಹ ಚರಕನ ಪ್ರಕಾರ, ಕೆನ್ನೆಸಿಡಿತ ಸಹ ವಾಗ್ಭಟನ ಪ್ರಕಾರ, ಪೂರ್ವರೂಪದಲ್ಲಿ ಸೇರಿದ್ದು

5. ಕಿಂಚಿದಾರಭಮಾಣಸ್ಯ ಯಸ್ಯ ಶ್ವಾಸಃ ಪ್ರವರ್ತತೇ ।
ನಿಷಣ್ಣಸ್ಯೈತಿ ಶಾನ್ತಿಂ ಚ ಸ ಕ್ಷುದ್ರ ಇತಿ ಸಂಜ್ಞಿತಃ ॥ (ಸು. 852)

ಕ್ಷುದ್ರಶ್ವಾಸದ ಲಕ್ಷಣ

ಯಾವದೊಂದು ಕೆಲಸವನ್ನು ಆರಂಭಿಸುವಾಗ್ಗೆ ಉಬ್ಬಸ ಉಂಟಾಗುವದು ಮತ್ತು ಸುಮ್ಮನೆ ಕೂತಾಗ್ಗೆ ಅದು ಶಾಂತವಾಗುವದು, ಅಂಥಾ ಶ್ವಾಸಕ್ಕೆ 'ಕ್ಷುದ್ರ' ಎಂತ ಹೆಸರು.

ಪರಾ ರೂಕ್ಷತೆಯಿಂದ ಅಥವಾ ಆಯಾಸದಿಂದ ಹೊಟ್ಟೆಯಲ್ಲ ಸಣ್ಣ ವಾಯುವು ಕೆದರಿ ಕ್ಷುದ್ರಶ್ವಾಸವನ್ನುಂಟು ಮಾಡುತ್ತದೆ, ಅದು ಅಂಗಗಳಿಗೆ ಕಷ್ಟಕೊಟ್ಟು ಅತಿಯಾಗಿ ಪೀಡಿಸುವದಿಲ್ಲ, ಇತರ ಶ್ವಾಸಗಳಂತೆ ಶರೀರವನ್ನು ಕೆಡಿಸುವದಿಲ್ಲ, ಸಂಕಟಕಾರಿಯಲ್ಲ, ಅದರಲ್ಲಿ ಅನ್ನಪಾನಗಳ ಸ್ವಾಭಾವಿಕವಾದ ಗತಿಗೆ ತಡೆಯುಂಟಾಗುವದಿಲ್ಲ, ಇಂದ್ರಿಯಗಳ ವ್ಯಾಪಾರಕ್ಕೆ ಭಂಗವಿಲ್ಲ. ಮತ್ತು ಯಾವ ತರದ ರೋಗವನ್ನಾದರೂ ಅದು ಉಂಟುಮಾಡಲಾರದು, ಎಂತ ಚ (ಪು 691)

6. ತೃಟ್ಸ್ವೇದವಮಥುಪ್ರಾಯಃ ಕಂಠಘುರ್ಘುರಿಕಾನ್ವಿತಃ ।
ವಿಶೇಷಾದ್ದುರ್ದಿನೇ ತಾಮ್ಯೇಚ್ಛ್ವಾಸಃ ಸ್ಯಾತ್ತ(?ಸ ತ)ಮಕೋ ಮತಃ ।
ಘೋಷೇಣ ಮಹತಾವಿಷ್ಟಃ ಸಕಾಸಃ ಸಕಫೋ ನರಃ ।
ಯಃ ಶ್ವಸಿತ್ಯಬಲೋಽನ್ನದ್ವಿಟ್ ಸುಪ್ತಸ್ತಮಕಪೀಡಿತಃ ॥
ಸ ಶಾಮ್ಯತಿ ಕಫೇ ಹೀನೇ ಸ್ವಪತಶ್ಚ ವಿವರ್ಧತೇ । (ಸು. 852)

ತಮಕಶ್ವಾಸದ ಲಕ್ಷಣ

ಬಾಯಾರಿಕೆ, ಬೆವರು ಮತ್ತು ವಾಂತಿ ಹೆಚ್ಚಾಗಿರುವದು, ಕಂಠದಲ್ಲಿ ಗುರ್ಗುರು ಶಬ್ದ, ವಿಶೇಷವಾಗಿ ಮೋಡ ಮುಚ್ಚಿಕೊಂಡಿರುವ ದಿನಗಳಲ್ಲಿ ಸಂಕಷ್ಟ ಹೆಚ್ಚಾಗುವದು, ಈ ಲಕ್ಷಣಗಳುಳ್ಳ ಉಬ್ಬಸವು 'ತಮಕ' ಎಂತ ತಿಳಿಯುತ್ತಾರೆ. ಅಂಥಾ ತಮಕ ಎಂಬ ಉಬ್ಬಸದಿಂದ ಪೀಡಿತನಾದ ಮನುಷ್ಯನು ಬಲಹೀನನಾಗಿಯೂ, ಅನ್ನದಲ್ಲಿ ದ್ವೇಷವುಳ್ಳವನಾಗಿಯೂ, ಇರುತ್ತಾನೆ; ನಿದ್ದೆಯಲ್ಲಿರುವಾಗ್ಗೆ ಮಹತ್ತಾದ ಶಬ್ದವುಂಟಾಗಿ ಎದ್ದು, ಕೆಮ್ಮು ಮತ್ತು ಕಫ ಉಳ್ಳವನಾಗಿ ಉಬ್ಬಸಬಿಡುತ್ತಾನೆ; ಕಫ ಕಡಿಮೆಯಾದ ಕೂಡಲೇ ಅದು ಶಮನವಾಗುತ್ತದೆ ಮತ್ತು ಪುನಃ ಮಲಗಿದಾಗ್ಗೆ ವೃದ್ಧಿಯಾಗುತ್ತದೆ.

7. ಮೂರ್ಛಾಜ್ವರಾಭಿಭೂತಸ್ಯ ಜ್ಞೇಯಃ ಪ್ರತಮಕಸ್ತು ಸಃ । (ಸು. 852)

ಪ್ರತಮಕದ ಲಕ್ಷಣ

ಮೂರ್ಛೆ ಮತ್ತು ಜ್ವರಗಳ ಪೀಡೆಯುಳ್ಳ ತಮಕವನ್ನು ಪ್ರತಮಕ ಎಂತ ತಿಳಿಯತಕ್ಕದ್ದು.

ಪರಾ ಪ್ರತಮಕವು ತಮಕದ ಭೇದವೇಯಾದ್ದರಿಂದ ಉಬ್ಬಸದ ವಿಧಗಳು ಐದೇ ಚರಕಸಂಹಿತೆಯಲ್ಲ 'ಸಂತಮಕ' ಎಂಬ ಇನ್ನೊಂದು ಭೇದವು ವಿವರಿಸಲ್ಪಟ್ಟದೆ ಅದು ಸುಶ್ರುತದಲ್ಲಿಯಾಗಲೀ ವಾಗ್ಭಟದಲ್ಲಿಯಾಗಲೀ **ಕಾಣುವದಿಲ್ಲ. (ಕೆಳಗಿನ 8ನೇ ಸಂಖ್ಯೆ ನೋಡಿ) ಅದು ತಮಕದ ಇನ್ನೊಂದು ಭೇದ ಎಂತ ತಿಳಿಯಬೇಕಾಗುತ್ತದೆ. ಸಂತಮಕವು ಪ್ರತಮಕವೇ ಎಂತಲೂ, ಬೇರೆಯವರು ಅದು ಪ್ರತಮಕದ ಉಪಸರ್ಗ ಎಂತ ಹೇಳುತ್ತಾರೆಂತಲೂ ಮ. ವ್ಯಾ (ಪು 100).**

8. ಪ್ರತಿಲೋಮಂ ಯದಾ ವಾಯುಃ ಸ್ರೋತಾಂಸಿ ಪ್ರತಿಪದ್ಯತೇ ।
ಗ್ರೀವಾಂ ಶಿರಶ್ಚ ಸಂಗೃಹ್ಯ ಶ್ಲೇಷ್ಮಾಣಂ ಸಮುದೀರ್ಯ್ಯ ಚ ॥

ತಮಕ, ಪ್ರತಮಕ, ಸಂತಮಕಗಳ ಕುರಿತು ತರಕ

ಕರೋತಿ ಪೀನಸಂ ತೇನ ರುದ್ಧೋ ಘುರ್ಘುರಕಂ ತಥಾ ।
ಅತೀವ ತೀವ್ರವೇಗಂ ಚ ಶ್ವಾಸಂ ಪ್ರಾಣಪ್ರಪೀಡಕಮ್ ॥
ಪ್ರತಾಮ್ಯತ್ಯತಿವೇಗಾಚ್ಚ ಕಾಸತೇ ಸನ್ನಿರುಧ್ಯತೇ ।
ಪ್ರಮೋಹಂ ಕಾಸಮಾನಶ್ಚ ಸ ಗಚ್ಛತಿ ಮುಹುರ್ಮುಹುಃ ॥
ಶ್ಲೇಷ್ಮಣ್ಯಮುಚ್ಯಮಾನೇ ಚ ಭೃಶಂ ಭವತಿ ದುಃಖಿತಃ ।
ತಸ್ಯೈವ ಚ ವಿಮೋಕ್ಷಾನ್ತೇ ಮುಹೂರ್ತಂ ಲಭತೇ ಸುಖಮ್ ॥
ಅಥಾಸ್ಯೋದ್ಧ್ವಂಸತೇ ಕಂಠಃ ಕೃಚ್ಛ್ರಾಚ್ಛಕ್ನೋತಿ ಭಾಷಿತುಮ್ ।
ನ ಚಾಪಿ ನಿದ್ರಾಂ ಲಭತೇ ಶಯಾನಃ ಶ್ವಾಸಪೀಡಿತಃ ॥
ಪಾರ್ಶ್ವೇ ತಸ್ಯಾವಗೃಹ್ಣಾತಿ ಶಯಾನಸ್ಯ ಸಮೀರಣಃ ।
ಆಸೀನೋ ಲಭತೇ ಸೌಖ್ಯಮುಷ್ಣಂ ಚೈವಾಭಿನಂದತಿ ॥
ಉಚ್ಛ್ರಿತಾಕ್ಷೋ ಲಲಾಟೇನ ಸ್ವಿದ್ಯತಾ ಭೃಶಮರ್ತಿಮಾನ್ ।
ವಿಶುಷ್ಕಾಸ್ಯೋ ಮುಹುಃಶ್ವಾಸೋ ಮುಹುಶ್ಚೈವಾವಧಮ್ಯತೇ ॥
ಮೇಘಾಮ್ಬುಶೀತಪ್ರಾಗ್ವಾತೈಃ ಶ್ಲೇಷ್ಮಲೈಶ್ಚಾಭಿವರ್ಧತೇ ।
ಸ ಯಾಪ್ಯಸ್ತಮಕಃ ಶ್ವಾಸಃ ಸಾಧ್ಯೋ ವಾ ಸ್ಯಾನ್ನವೋತ್ಥಿತಃ ॥
ಜ್ವರಮೂರ್ಚ್ಛಾಪರೀತಸ್ಯ ವಿದ್ಯಾತ್ಪ್ರತಮಕನ್ತು ತಮ್ ।
ಉದಾವರ್ತರಜೋಽಜೀರ್ಣಕ್ಲಿನ್ನಕಾಯನಿರೋಧಜಃ ॥
ತಮಸಾ ವರ್ಧತೇಽತ್ಯರ್ಥಂ ಶೀತೈಶ್ಚಾಶು ಪ್ರಶಾಮ್ಯತಿ ।
ಮಜ್ಜತಸ್ತಮಸೀವಾಸ್ಯ ವಿದ್ಯಾತ್ಸನ್ತಮಕನ್ತು ತಮ್ ॥

(ಚ. 690—691)

ವಾಯುವು ವ್ಯತಿಕ್ರಮವಾಗಿ ಸ್ರೋತಸ್ಸುಗಳನ್ನು ಹೊಕ್ಕು, ಕುತ್ತಿಗೆಯನ್ನೂ ತಲೆಯನ್ನೂ ಹಿಡಕೊಂಡು, ಕಫವನ್ನು ಕೆದರಿಸಿ, ನೆಗಡಿಯನ್ನೂ, ಕಫದಿಂದ ತಡೆಯಲ್ಪಟ್ಟ ಘುರ್ಘುರ ಶಬ್ದವನ್ನೂ, ಬಹಳವಾಗಿ ತೀವ್ರವಾದ ವೇಗವುಳ್ಳ ಮತ್ತು ಪ್ರಾಣವನ್ನು ಪೀಡಿಸತಕ್ಕಂಥಾ ಉಬ್ಬಸವನ್ನೂ ಉಂಟುಮಾಡುತ್ತದೆ. ಅದರಿಂದ ಸಂಕಟಪಡುತ್ತಾನೆ, ಅತಿವೇಗದಿಂದ ಕೆಮ್ಮುತ್ತಾನೆ, ಕಫದ ತಡೆಯುಂಟಾಗುತ್ತದೆ, ಕೆಮ್ಮುವಾಗ್ಗೆ ಪದೇ ಪದೇ ಕಣ್ಣುಕತ್ತಲೆ ಹೋಗುತ್ತಾನೆ, ಕಫಹೋಗದಿದ್ದಾಗ್ಗೆ ಅವನಿಗೆ ಬಹಳ ದುಃಖ ಉಂಟಾಗುತ್ತದೆ, ಮತ್ತು ಕಫ ಹೋದ ಮೇಲೆ ಒಂದು ಮುಹೂರ್ತಕಾಲ ಸುಖ ಕಾಣುತ್ತದೆ, ಕಂಠಬಿದ್ದು ಮಾತಾಡಲಿಕ್ಕೆ ಕಷ್ಟದಿಂದ ಶಕ್ತನಾಗುತ್ತಾನೆ, ಮಲಗಿದರೆ ಉಬ್ಬಸದ ಪೀಡೆಯುಂಟಾಗುವದರಿಂದ ನಿದ್ರೆಬರುವದಿಲ್ಲ, ಮಲಗಿದಾಗ್ಗೆ ವಾಯುವು ಪಕ್ಕಗಳನ್ನು ಹಿಡಕೊಳ್ಳುತ್ತದೆ, ಕೂತುಕೊಂಡಿದ್ದಾಗ್ಗೆ ಸುಖ ಕಾಣುತ್ತದೆ, ರೋಗಿಗೆ ಬಿಸಿಯ ಪದಾರ್ಥಗಳಲ್ಲಿ ಸಂತೋಷವಿರುತ್ತದೆ, ಕಣ್ಣುಗಳು ಮೇಲಕ್ಕಾಗಿ, ಹಣೆಗಳು ಬೆವರುತ್ತಾ, ಬಹಳವಾದ ಪೀಡೆಯುಳ್ಳವನಾಗಿ, ಒಣಗಿದ ಬಾಯಿಯುಳ್ಳವನಾಗಿ, ಪದೇ ಪದೇ ಶ್ವಾಸಬಿಡುತ್ತಾನೆ ಮತ್ತು ಪದೇ ಪದೇ (ಆನೆ ಸವಾರಿ ಮಾಡಿದವನಂತೆ) ಸರ್ವಾಂಗವನ್ನು ಚಲಿಸುತ್ತಾನೆ, ಮೋಡ, ಮಳೆ, ಶೀತ, ಮೂಡುಗಾಳಿ

ಮತ್ತು ಕಫಕರವಾದ ಪದಾರ್ಥಗಳು, ಇವುಗಳಿಂದ ವ್ಯಾಧಿ ವೃದ್ಧಿಯಾಗುತ್ತದೆ. ಇಂಥಾ ಉಬ್ಬಸಕ್ಕೆ 'ತಮಕ' ಎಂತ ಹೆಸರು. ಅದು ಯಾಪ್ಯ ಅಥವಾ ಹೊಸತಾದರೆ ಸಾಧ್ಯ. ತಮಕ ಉಬ್ಬಸದಲ್ಲಿ ಜ್ವರ ಮತ್ತು ಮೂರ್ಛೆ ಕಂಡರೆ, ಅದನ್ನು 'ಪ್ರತಮಕ' ಎಂತ ತಿಳಿಯಬೇಕು. ಉದಾವರ್ತರೋಗ, ದೂಳು (ಒಳಗೆ ಸೇರುವದು), ಅಜೀರ್ಣ, ಶರೀರ ಒದ್ದೆಯಾಗುವದು (ಥಂಡಿ), (ಮಲಮೂತ್ರಾದಿಗಳ) ವೇಗನಿರೋಧ, ಈ ಕಾರಣಗಳಿಂದ ಹುಟ್ಟಿದ್ದಾಗಿದ್ದು, ಕತ್ತಲೆ ಸಮಯ ಬಹಳ ಹೆಚ್ಚಾಗುವದು, ಶೀತವಾದವು(ತಂಪಾದವು) ಗಳಿಂದ ಬೇಗನೇ ಶಮನವಾಗುವದು, ಕಣ್ಣು ಕತ್ತಲೆ ಬಂದ ಹಾಗೆ ಆಗುವದು, ಈ ಲಕ್ಷಣಗಳುಳ್ಳ ತಮಕ ಉಬ್ಬಸವು 'ಸಂತಮಕ' ಎಂತ ತಿಳಿಯತಕ್ಕದ್ದು.

ಪರಾ ಕಡೇ ಶ್ಲೋಕದ ಉತ್ತರಾರ್ಧದಲ್ಲ 'ಮಜ್ಜತಃ' ಎಂಬಲ್ಲಿ 'ಮಜ್ಜಾತಃ' ಎಂತಲೂ, 'ತಮ' ಎಂಬಲ್ಲಿ 'ತತ' ಎಂತಲೂ, ಮೂಲದಲ್ಲಿಯೂ ಇನ್ನೊಂದು ಪ್ರತಿಯಲ್ಲಿಯೂ ಕಾಣುತ್ತದೆ ಮಾಧವನಿದಾನದ ಪಾಠವೇ ಸರಿಯಾದ್ದೆಂಬದರಿಂದ ಅದನ್ನು ಇಲ್ಲಿ ಇಟ್ಟುಕೊಂಡದೆ. 'ಕ್ಲಿನ್ನ' ಎಂದರೆ ವಿದಗ್ಧ (ವಿಷಮವಾಗಿ ಪತನವಾದ) ಎಂದು ಅರ್ಥವೆಂತಲೂ, ಅಥವಾ 'ಕ್ಲಿನ್ನಕಾಯ' ಎಂದರೆ ಮುದುಕರು ಎಂತಲೂ ಮಧುಕೋಶ ವ್ಯಾಖ್ಯಾನ ಆದರೆ 'ಕ್ಲಿದ್' ಎಂದರೆ 'ಒದ್ದೆಯಾಗು' ಎಂಬ ಅರ್ಥವನ್ನು ತೆಗೆದುಕೊಳ್ಳುವದೇ ಯುಕ್ತಿಯುಕ್ತವಾಗಿ ಕಾಣುತ್ತದೆ. ಸಂತಮಕ ಪ್ರತಮಕಗಳಲ್ಲಿ ಪಿತ್ತ ಪ್ರಧಾನವಾದ್ದರಿಂದ ಶೀತೋಪಚಾರ ಹಿತ

9. ಆಧ್ಮಾತೋ ದಹ್ಯಮಾನೇನ ವಸ್ತಿನಾ ಸರುಜಂ ನರಃ |
ಸರ್ವಪ್ರಾಣೇನ ವಿಚ್ಛಿನ್ನಂ ಶ್ವಸ್ಯಾಚ್ಛಿನ್ನನ್ತಮಾದಿಶೇತ್ || (ಸು. 852)

ಛಿನ್ನಶ್ವಾಸದ ಲಕ್ಷಣ.

ಹೊಟ್ಟೆಯುಬ್ಬರ, ಮೂತ್ರಕೋಶದ ಜ್ವಾಲೆ, (ಮರ್ಮದಲ್ಲಿ) ನೋವು, ಶ್ವಾಸ ತಡೆದಿರುವದು (ನಿಂತು ನಿಂತು ಶ್ವಾಸ ಬಿಡುವದು), ಶ್ವಾಸ ಬಿಡುವಾಗ್ಗೆ ಪೂರ್ಣ ಬಲವನ್ನುಪಯೋಗಿಸುವದು, ಈ ಲಕ್ಷಣಗಳುಳ್ಳ ಉಬ್ಬಸಕ್ಕೆ 'ಛಿನ್ನ' ಎನ್ನಬೇಕು.

ಪರಾ ಛಿನ್ನಶ್ವಾಸದಲ್ಲಿ ಮರ್ಮ ಕಡಿದ ಹಾಗಿನ ನೋವಿನ ಪೀಡೆ, ಬೆವರು, ಮೂರ್ಛೆ, ಕಣ್ಣುಗಳಲ್ಲಿ ನೀರು, ರಕ್ತವರ್ಣದ ಕಣ್ಣುಗಳು, ಸ್ಮೃತಿ ಇಲ್ಲದಿರುವದು, ಬಾಯಿ ಒಣಗಿರುವದು, ವರ್ಣವಿಕಾರವಾಗಿರುವದು, ನರಳುವದು, ಈ ಲಕ್ಷಣಗಳು ಸಹ ಇರುವವು ಮತ್ತು ಅದರಿಂದ ರೋಗಿಯು ಬೇಗನೇ ಪ್ರಾಣಬಿಡುವನು ಎಂತ ಚ (ಪು 690)

10. ನಿಃಸಂಜ್ಞಃ ಪಾರ್ಶ್ವಶೂಲಾರ್ತಃ ಶುಷ್ಕಕಂಠೋಽತಿಘೋಷವಾನ್ |
ಸಂರಬ್ಧನೇತ್ರಸ್ತ್ವಾಪ್ಯಮ್ಯ ಯಃ ಶ್ವಸ್ಯಾತ್ ಸ ಮಹಾನ್ ಸ್ಮೃತಃ ||
(ಸು. 852-853)

ಮಹಾಶ್ವಾಸದ ಲಕ್ಷಣ

ಸಂಜ್ಞೆ ಇಲ್ಲದಿರುವಿಕೆ, ಪಾರ್ಶ್ವಶೂಲೆ, ಕಂಠ ಒಣಗಿರುವದು, ಅತಿಯಾದ ಶಬ್ದ, ಗಾಬರಿಯಾದ ಕಣ್ಣುಗಳು, ನಿರ್ಬಂಧದಿಂದ (ತಡೆಯುಕ್ತವಾಗಿ) ಶ್ವಾಸಬಿಡುವದು, ಈ ಲಕ್ಷಣಗಳುಳ್ಳ ಉಬ್ಬಸಕ್ಕೆ 'ಮಹಾಶ್ವಾಸ' ಎಂದು ಹೇಳುತ್ತಾರೆ.

ಪರಾ ಮದಬಂದ ಎತ್ತಿನಂತೆ ಗಟ್ಟಿಯಾಗಿ, ಬಿಡದೆ ಮತ್ತು ತಡೆಯಿಂದ ಶ್ವಾಸಬಿಡುವದು, ಮಲಮೂತ್ರಗಳ ಬದ್ಧತೆ, ಮಾತಾಡುವ ಶಕ್ತಿ ಇಲ್ಲದಿರುವದು, ಕಣ್ಣು ಮತ್ತು ಮುಖ ವಿಕಾರವಾಗುವದು, ಆಯಾಸ ಮತ್ತು ಸಂಕಟ ಸಹ ಮಹಾಶ್ವಾಸದ ಲಕ್ಷಣಗಳೊಳಗೆ ಸೇರಿದವು ಎಂತ ಚ (ಪು. 690)

11. ಮರ್ಮಸ್ವಾಯಮ್ಯಮಾನೇಷು ಶ್ವಸನ್ನೂರ್ಧೋ ಮುಹುಶ್ಚ ಯಃ |
ಊರ್ಧ್ವಪ್ರೇಕ್ಷೀ ಹತರವಸ್ತಮೂರ್ಧ್ವಶ್ವಾಸಮಾದಿಶೇತ್ || (ಸು. 853)

ಊರ್ಧ್ವಶ್ವಾಸದ ಲಕ್ಷಣ.

ಯಾರು (ಹೃದಯಾದಿ) ಮರ್ಮಸ್ಥಾನಗಳು ಪೀಡಿಸಲ್ಪಡುವಾಗ್ಗೆ, ದೃಷ್ಟಿಯನ್ನು ಮೇಲಕ್ಕೆ ಮಾಡಿಕೊಂಡು, ಮೂಢನಾಗಿ ಮತ್ತು ಸ್ವರವಿಲ್ಲದವನಾಗಿ ಬೇಗಬೇಗನೇ ಶ್ವಾಸವನ್ನು ಬಿಡುತ್ತಾನೋ, ಅವನ ಉಬ್ಬಸವು 'ಊರ್ಧ್ವಶ್ವಾಸ' ಎನ್ನಬೇಕು.

ಪರಾ ಶ್ವಾಸವನ್ನು ದೀರ್ಘವಾಗಿ ಹೊರಗೆ ಬಿಡುವದಲ್ಲದೆ ಒಳಗೆ ಪುನಃ ಎಳಕೊಳ್ಳದಿರುವದು, ಅತ್ತಿತ್ತ ಕಣ್ಣು ತಿರುಗಿಸುವದು, ಸಂಕಟಪಡುವದು ಸಹ ಊರ್ಧ್ವಶ್ವಾಸದ ಲಕ್ಷಣಗಳೊಳಗೆ ಸೇರಿದವು ಎಂತ ಚ (ಪು. 690) ಮೂಢ ಎಂದರೆ 'ನಿಶ್ಚೇಷ್ಟ' (ಅಂಗಚೇಷ್ಟೆ ಇಲ್ಲದ) ಎಂತ ನಿ. ಸಂ ವ್ಯಾ (ಪು 655)

12. ಕ್ಷುದ್ರಃ ಸಾಧ್ಯತಮಸ್ತೇಷಾಂ ತಮಕಃ ಕೃಚ್ಛ್ರ ಉಚ್ಯತೇ |
ತ್ರಯಃ ಶ್ವಾಸಾ ನ ಸಿಧ್ಯನ್ತಿ ತಮಕೋ ದುರ್ಬಲಸ್ಯ ಚ || (ಸು. 853)

ಸಾಧ್ಯಾಸಾಧ್ಯ ವಿಚಾರ

ಐದು ವಿಧವಾದ ಉಬ್ಬಸಗಳೊಳಗೆ 'ಕ್ಷುದ್ರ' ಎಂಬದು ಅತ್ಯಂತ ಸಾಧ್ಯವು; 'ತಮಕ' ಎಂಬದು ಕಷ್ಟಸಾಧ್ಯ; ಮಿಕ್ಕವು ಮೂರು ಸಾಧ್ಯವಾಗುವದಿಲ್ಲ. ಬಲಹೀನನಾದವನ ತಮಕವೂ ಸಾಧ್ಯವಾಗುವದಿಲ್ಲ.

ಪರಾ ತಮಕವು ಹೊಸತಾದರೆ ಸಾಧ್ಯ, ಹಳೇದಾದರೆ ಯಾಪ್ಯ (ಹಿಂದೆ ಸಂ 8 ನೋಡಿ) ಯಾವ ಜಾತಿಯ ಉಬ್ಬಸವಾದರೂ ಲಕ್ಷಣಗಳು ಸ್ಪಷ್ಟವಾಗಿ ಕಾಣುವ ಮೊದಲು ಮತ್ತು ರೋಗಿಯು ಬಲವಂತನಾಗಿದ್ದರೆ ಸಾಧ್ಯ (ಚ 691—692)

13. ಸ್ನೇಹವಸ್ತಿಂ ವಿನಾ ಕೇಚಿದೂರ್ಧ್ವಂ ಚಾಧಶ್ಚ ಶೋಧನಮ್ |
ಮೃದು ಪ್ರಾಣವತಾಂ ಶ್ರೇಷ್ಠಂ ಶ್ವಾಸಿನಾಮಾದಿಶನ್ತಿ ಹಿ || (ಸು. 853)

ಶೋಧನದ ವಿಧಾನ

ಉಬ್ಬಸವ್ಯಾಧಿಯವರು ಬಲವಂತರಾಗಿದ್ದಾಗ್ಗೆ ಸ್ನೇಹವಸ್ತಿ ಬಿಟ್ಟು, ಇತರ ವಿಧವಾಗಿ ಮೃದುವಾದ ವಮನವಿರೇಚನಗಳನ್ನು ಮಾಡಿಸುವದು ಉತ್ತಮ ಎಂತ ಕೆಲವರು ವಿಧಿಸುತ್ತಾರ

ಬಲೀಯಸಿ ಕಫಗ್ರಸ್ತೇ ವಮನಂ ಸವಿರೇಚನಮ್ |
ದುರ್ಬಲೇ ಚೈವ ರೂಕ್ಷೇ ಚ ತರ್ಪಣಂ ಹಿತಮುಚ್ಯತೇ || (ಸು. 856)

ಕಫ ಹಿಡಕೊಂಡ ಸಂಗತಿಯಲ್ಲಿ ರೋಗಿಯು ಬಲಿಷ್ಠನಾಗಿದ್ದರೆ ವಮನ-ವಿರೇಚನಗಳನ್ನು ಮಾಡಿಸುವದು ಹಿತ. ಬಲಹೀನನಾದವನಿಗೂ, ರೂಕ್ಷಶರೀರದವನಿಗೂ ತರ್ಪಣ ಉಪಚಾರಗಳೇ ಹಿತವಾಗುತ್ತವೆ.

ಪರಾ ವಮನ ವಿರೇಚನ ಮಾಡಿಸುವ ವಿಷಯದಲ್ಲಿ ಚರಕನ ಉಪದೇಶವನ್ನು Vನೇ ಚಿಕ್ಕಟ್ಟಿನ ಅಧ್ಯಾಯದಲ್ಲಿ ಕಾಣಿಸಿಯದೆ ಕಫದಿಂದ ತಡೆಯಲ್ಪಟ್ಟಿರುವ ಸ್ರೋತಸ್ಸುಗಳ ಮಾರ್ಗವನ್ನು ಬಿಡಿಸುವದಕ್ಕಾಗಿ ವಿರೇಚನ (ಶೋಧನ) ಮಾಡಿಸಬಹುದು

14. ಶ್ವಾಸಹಿಕ್ಕಾಪರಿಗತಂ ಸ್ನಿಗ್ಧೈಃ ಸ್ವೇದೈರುಪಾಚರೇತ್ |
ಯುಕ್ತೈರ್ಲವಣತೈಲಾಭ್ಯಾಂ ತೈರಸ್ಯ ಗ್ರಥಿತಃ ಕಫಃ ||
ಸ್ವಸ್ಥೋ ವಿಲಯನಂ ಯಾತಿ ಮಾರುತಶ್ಚಾಸ್ಯ ಶಾಮ್ಯತಿ |
ಸ್ನಿಗ್ಧಂ ಜ್ಞಾತ್ವಾ ತತಶ್ಚೈವ ಭೋಜಯಿತ್ವಾ ರಸೌದನಮ್ |
ವಾತಶ್ಲೇಷ್ಮವಿಬನ್ಧೋ(?ನ್ಧೇ) ವಾ ಭಿಷಗ್ಧೂಮಂ ಪ್ರಯೋಜಯೇತ್ ||
(ಸು. 855-856)

ಸ್ವೇದನ-ಧೂಮಪಾನಗಳ ಪ್ರಯೋಜನ

ಉಬ್ಬಸ ಮತ್ತು ಬಿಕ್ಕಟ್ಟು ಎಂಬ ವ್ಯಾಧಿಗಳು ವ್ಯಾಪಿಸಿಕೊಂಡ ಮನುಷ್ಯನನ್ನು ಉಪ್ಪು ಮತ್ತು ತೈಲ(ಸೈಂಧವಲವಣ ಮತ್ತು ಎಳ್ಳೆಣ್ಣೆ)ಗಳಿಂದ ಕೂಡಿದಂಥ ಮತ್ತು ಸ್ನಿಗ್ಧವಾದಂಥ ಬೆವರಿಸುವ ಯೋಗಗಳಿಂದ ಉಪಚರಿಸಬೇಕು. ಅವುಗಳಿಂದ ಅವನ ಸ್ವಸ್ಥಾನದಲ್ಲಿ ಗಟ್ಟಿ ಕಟ್ಟಿಕೊಂಡಿರುವ ಕಫವು ಕರಗುವದು ಮತ್ತು (ತಡೆಹೋದ್ದರಿಂದ) ಅವನಲ್ಲಿ ವಾಯುವು ಶಾಂತವಾಗುವದು. ಸ್ನೇಹನವಾಯಿತೆಂತ ತಿಳಿದ ಮೇಲೆ ಅನ್ನವನ್ನು ಮಾಂಸರಸದೊಂದಿಗೆ ಉಣ್ಣಿಸತಕ್ಕದ್ದು. ಆ ವಾತಕಫದ ತಡೆಯ ಶೇಷ ಉಳಿದದೆಂತ ಕಂಡರೆ, ವೈದ್ಯನು ಅವನಿಗೆ ಧೂಮಪಾನ ಮಾಡಿಸಿ ಅದನ್ನು ಪರಿಹಾರಮಾಡತಕ್ಕದ್ದು.

ಷರಾ ಈ ವಿಷಯದಲ್ಲಿ ಚರಕನ ಉಪದೇಶವನ್ನು ಬಿಕ್ಕಟ್ಟಿನ ಅಧ್ಯಾಯದಲ್ಲಿ ಕೊಟ್ಟಿರುತ್ತದೆ.

15. ಸ್ವರಸಂ ಶೃಂಗಬೇರಸ್ಯ ಮಾಕ್ಷಿಕೇಣ ಸಮನ್ವಿತಮ್ |
ಶುಂಠೀ ರಸದ ಉಪಯೋಗ
ಪಾಯಯೇಚ್ಛ್ವಾಸಕಾಸಘ್ನಂ ಪ್ರತಿಶ್ಯಾಯಕಫಾಪಹಮ್ ||
(ಭಾ. ಪ್ರ. 379)

ಶುಂಠಿರಸವನ್ನು ಜೇನಿನೊಂದಿಗೆ ಪಾನಮಾಡಿಸಲು, ಉಬ್ಬಸ, ಕೆಮ್ಮು, ನೆಗಡಿ ಮತ್ತು ಕಫ ಪರಿಹಾರವಾಗುವವು.

16. ದಶಮೂಲಸ್ಯ ವಾ ಕ್ವಾಥಃ ಪೌಷ್ಕರೇಣಾವಚೂರ್ಣಿತಃ |
ದಶಮೂಲ ಕಷಾಯ
ಶ್ವಾಸಕಾಸಪ್ರಶಮನಃ ಪಾರ್ಶ್ವಶೂಲನಿವಾರಣಃ || (ಭಾ. ಪ್ರ. 379)

ದಶಮೂಲಗಳ ಕಷಾಯವನ್ನು, ಪುಷ್ಕರಮೂಲದ ಚೂರ್ಣ ಕೂಡಿಸಿಕೊಂಡು, ಪಾನಮಾಡಿದ್ದಲ್ಲಿ ಉಬ್ಬಸ ಮತ್ತು ಕೆಮ್ಮು ಶಮನವಾಗುವದಲ್ಲದೆ ಪಕ್ಕಗಳ ಶೂಲೆಯ ನಿವಾರಣವಾಗುವದು.

17. ವಾಶಾಹರಿದ್ರಾಧನಿಕಾಗುಳೂಚೀಭಾರ್ಙ್ಗೀಕಣಾನಾಗರರಿಂಗಿಣೀನಾಮ್ *|
ವಾಶಾದಿಕಷಾಯ
ಕ್ವಾಥೇನ ಮಾರೀಚರಜೋನ್ವಿತೇನ ಶ್ವಾಸಾ ಕ್ಷಯಂ ಯಾನ್ತಿ ನ ಕಸ್ಯ
ಪುಂಸಃ || (ವೈ ಜೀ. ದೀ. 53)

ಆಡುಸೋಗೆ ಬೇರು, ಅರಸಿನ, ಕೊತ್ತುಂಬರಿ, ಅಮೃತಬಳ್ಳಿ, ಗಂಟುಭಾರಂಗಿ (ನಿರ್ವಿಷದ) ಬೇರು, ಹಿಪ್ಪಲಿ, ಶುಂಠಿ, ಗುಳ್ಳದ ಬೇರು,* ಇವುಗಳ ಕಷಾಯವನ್ನು, ಬಿಳೇ ಕಾಳು ಮೆಣಸಿನ ಚೂರ್ಣವನ್ನು ಕೂಡಿಸಿಕೊಂಡು, ಪಾನಮಾಡುವದರಿಂದ ಯಾವ ಮನುಷ್ಯನ ಉಬ್ಬಸಗಳು ಕ್ಷಯವಾಗುವದಿಲ್ಲ?

* 'ರಿಂಗಿಣೀ' ಎಂಬದು ಮಾಲವದೇಶದಲ್ಲಿ ಪ್ರಸಿದ್ಧವಾದ 'ಕೈವರ್ತಿಕಾ' ಎಂಬ ಬಳ್ಳಿ ಆಗಿರಬೇಕು ಅದಕ್ಕೆ ಶ್ವಾಸಹರಗುಣ ಹೇಳಲ್ಪಟ್ಟದೆ ಅದು ಸಿಕ್ಕದಿದ್ದಾಗ ಗುಳ್ಳದ ಬೇರನ್ನಾಗಲೀ, ಕಿರಿಗುಳ್ಳದ ಬೇರನ್ನಾಗಲೀ ಉಪಯೋಗಿಸಬಹುದು 'ರಿಂಗಿಣೀ'ಗೆ 'ಹೆಗ್ಗುಳ್ಳ' ಎಂತ ಮೂಲದಲ್ಲಿ ಅರ್ಥ ಬರೆದಿರುವದು ಪ್ರತಿನಿಧಿ ಎಂಬ ಅರ್ಥದಲ್ಲಿ ಆದರೆ ಮಾತ್ರ ಸರಿ ಗುಳ್ಳದ ಬೇರಿಗೂ, ಕಿರಿಗುಳ್ಳದ ಬೇರಿಗೂ, ಕಫವಾತಹರ ಮತ್ತು ಶ್ವಾಸಹರ ಗುಣಗಳು ಹೇಳಲ್ಪಟ್ಟವೆ

18. ಶೃಂಗೀಮಹೌಷಧಕಣಾಘನಪೌಷ್ಕರಾಣಾಂ
ಚೂರ್ಣಂ ಶಟೀಮರಿಚಯೋಶ್ಚ ಸಿತಾವಿಮಿಶ್ರಮ್ |
ಶೃಂಗ್ಯಾದಿ ಚೂರ್ಣ
ಕ್ವಾಥೇನ ಪೀತಮಮೃತಾವೃಷಪಂಚಮೂಲ್ಯಾಃ
ಶ್ವಾಸಂ ತ್ರ್ಯಹೇಣ ವಿನಿಹನ್ತಿ ಹಿ ಘೋರರೂಪಮ್ || (ಭಾ. ಪ್ರ. 379)

ಕರ್ಕಟಶೃಂಗಿ, ಶುಂಠಿ, ಹಿಪ್ಪಲಿ, ಭದ್ರಮುಷ್ಟಿ, ಪುಷ್ಕರಮೂಲ, ಸಣ್ಣ ಕಚೋರ, ಕಾಳುಮೆಣಸು, ಇವುಗಳನ್ನು (ಸರೀಪಾಲು ತೆಗೆದುಕೊಂಡು) ಚೂರ್ಣಮಾಡಿ (೧೪ ಪಾಲು) ಸಕ್ಕರೆ ಬೆರಸಿ, ಈ ಚೂರ್ಣವನ್ನು ಅಮೃತಬಳ್ಳಿ, ಆಡುಸೋಗೆ ಬೇರು ಮತ್ತು ಪಂಚಮೂಲಗಳು, ಇವುಗಳ ಕಷಾಯದೊಂದಿಗೆ ಸೇವಿಸಲು, ಘೋರವಾದ ಉಬ್ಬಸವ್ಯಾಧಿಯು ಮೂರು ದಿನಗಳೊಳಗೆ ನಿಶ್ಚಯವಾಗಿ ನಾಶವಾಗುವದು.

ಷರಾ ಪಿತ್ತ ಬಲವಾಗಿದ್ದ (ಪ್ರತಮಕದಲ್ಲಿ) ಹ್ರಸ್ವಪಂಚಮೂಲಗಳನ್ನೂ ಕಫ ಮತ್ತು ವಾತ ಬಲವಾಗಿದ್ದ(ಇತರ ಶ್ವಾಸಗಳ)ಲ್ಲಿ ಬೃಹತ್ಪಂಚಮೂಲಗಳನ್ನೂ ಉಪಯೋಗಿಸತಕ್ಕದ್ದು.

19. ಕೂಷ್ಮಾಂಡಕಶಿಫಾಚೂರ್ಣಂ ಪೀತಂ ಕೋಷ್ಣೇನ ವಾರಿಣಾ |
ಶೀಘ್ರಂ ಶಮಯತಿ ಶ್ವಾಸಂ ಕಾಸಂ ಚಾಪಿ ಸುದಾರುಣಮ್ ||
(ಭಾ. ಪ್ರ. 379)

ಬೂದಿಕುಂಬಳದ ಬೇರಿನ ಉಪಯೋಗ

ಬೂದಿಕುಂಬಳ ಬಳ್ಳಿಯ ಬೇರಿನ ಚೂರ್ಣವನ್ನು ಸುಖೋಷ್ಣವಾದ ನೀರಿನಿಂದ ಕುಡಿಯಿಸಲು, ಉಬ್ಬಸವೂ, ಕಠಿಣವಾದ ಕೆಮ್ಮೂ ಬೇಗನೇ ಶಮನವಾಗುವವು.

20. ತುಲ್ಯಂ ಗುಡಂ ನಾಗರಂ ಚ ಭಕ್ಷ್ಯಯೇನ್ನಾವಯೇತ ವಾ || (ವಾ. 282)

ಶುಂಠೀಚೂರ್ಣ.

ಒಣಶುಂಠಿ ಚೂರ್ಣವನ್ನು ಸರೀ ಪಾಲು ಬೆಲ್ಲದಲ್ಲಿ ಕಲಸಿ ಸೇವಿಸಲು, ಅಥವಾ ನಸ್ಯಮಾಡಲು, ಬಿಕ್ಕಟ್ಟು ಮತ್ತು ಉಬ್ಬಸ ಪರಿಹಾರವಾಗುವವು.

21. ನಿದಿಗ್ಧಿಕಾಂ ಚಾಮಲಕಪ್ರಮಾಣಾಂ, ಹಿಂಗ್ವರ್ಧಯುಕ್ತಾಂ
ಮಧುನಾ ಸುಯುಕ್ತಾಮ್ | ಲಿಹನ್ನರಃ ಶ್ವಾಸನಿಪೀಡಿತೋ ಹಿ,
ಶ್ವಾಸಂ ಜಯತ್ಯೇವ ಬಲಾತ್ ತ್ರ್ಯಹೇಣ || (ಸು 856)

ಹಿಂಗ್ವಾದಿ ಚೂರ್ಣ

(ತುಪ್ಪ ಸವರಿಕೊಂಡು ಹುರಿದ) ಹಿಂಗಿನ ಚೂರ್ಣ ೧ ಪಾಲಿಗೆ, ಕಿರಿಗುಳ್ಳದ ಬೇರಿನ ಚೂರ್ಣ ೨ ಪಾಲು ಸೇರಿಸಿ, ಜೇನಿನಲ್ಲಿ ಚನ್ನಾಗಿ ಕಲಸಿ, ಒಂದು ನೆಲ್ಲಿಕಾಯಿ ಪ್ರಮಾಣ ನೆಕ್ಕುತ್ತಾ ಬರಲು, ಮೂರು ದಿನಗಳಲ್ಲಿ ಉಬ್ಬಸರೋಗವು ಬಲಾತ್ಕಾರವಾಗಿ ಅಡಗುತ್ತದೆನ್ನುವದರಲ್ಲಿ ಸಂದೇಹವಿಲ್ಲ.

ಷರಾ ಚೂರ್ಣವನ್ನು ಜೇನು ಕೂಡಿಸಿ ಗುಳಿಗೆ ಮಾಡಿಟ್ಟುಕೊಂಡು, ಗುಳಿಗೆಯನ್ನು ಸೇವಿಸುವ ಸಮಯದಲ್ಲಿ, ಲೇಹವಾಗುವಂತೆ ಬೇಕಾದಷ್ಟು ಜೇನಿನಲ್ಲಿ ಅದನ್ನು ಕದಡಿಕೊಳ್ಳುವದು ಬಲಹೀನರಾದವರು ಒಂದು ಗುಳಿಗೆಯಲ್ಲಿ ಅರ್ಧ ಬೆಳಗ್ಗೆ, ಅರ್ಧ ಸಂಜೆಯಲ್ಲಿ ಸೇವಿಸಿ ನೋಡುವದು ಒಳ್ಳೇದು

22. ಶೃಂಗೀಕಟುತ್ರಯಫಲತ್ರಯಕಣ್ಟಕಾರೀ
ಭಾರ್ಗೀ ಸಪುಷ್ಕರಜಟಾ ಲವಣಾನಿ ಪಂಚ |
ಚೂರ್ಣಂ ಪಿಬೇದಶಿಶಿರೇಣ ಜಲೇನ ಹಿಕ್ಕಾ-
ಶ್ವಾಸೋರ್ಧ್ವವಾತಕಸನಾರುಚಿಪೀನಸೇಷು || (ಚಿ. ಸಾ. ಸಂ. 266)

ಶೃಂಗ್ಯಾದಿ ಚೂರ್ಣ

ಕರ್ಕಟಶೃಂಗಿ, ತ್ರಿಕಟು, ತ್ರಿಫಲೆ, ಕಿರಿಗುಳ್ಳ, ಗಂಟುಭಾರಂಗಿ (ನಿರ್ವಿಷ), ಪುಷ್ಕರಮೂಲ, ಪಂಚ ಲವಣಗಳು, ಇವುಗಳ ಚೂರ್ಣವನ್ನು ತಣ್ಣಗಲ್ಲದ (ಸುಖೋಷ್ಣವಾದ) ನೀರಿನಲ್ಲಿ ಕಲಸಿ ಪಾನಮಾಡಲು, ಬಿಕ್ಕಟ್ಟು, ಉಬ್ಬಸ, ಊರ್ಧ್ವವಾಯು, ಕೆಮ್ಮು. ಅರುಚಿ ಮತ್ತು ಪೀನಸರೋಗಗಳು ಪರಿಹಾರವಾಗುವವು.

ಪರಾ. ಪಂಚ ಲವಣಗಳು ಎಂದರೆ, ಸಮುದ್ರದ ಉಪ್ಪು, ಸೈಂಧವ ಉಪ್ಪು, ವಿಡಾಲವಣ, ಸೌವರ್ಚಲ (ಕರೀಉಪ್ಪು) ಮತ್ತು ಕಾಚಲವಣ (ರಾ ನಿ 306). 'ಕಾಚಲವಣ' ಎಂದರೆ 'ಬಿಳೀ ಉಪ್ಪು' ಎಂತ ಹೇಳಿ ಅಂಗಡಿಗಾರರು ಒಂದು ದ್ರವ್ಯವನ್ನು ವಿಕ್ರಯಿಸುತ್ತಾರೆ ಧ ನಿ ನಲ್ಲಿ 'ಕಾಚ'ದ ಸ್ಥಾನದಲ್ಲಿ 'ರೋಮಕ' ಉಂಟು ಶಾರ್ಙ್ಗಧರ ಸಂ ಯಲ್ಲಿ (ಪು. 61) ಐದನೇ ಉಪ್ಪಾಗಿ 'ಗಡ' ಹೇಳಲ್ಪಟ್ಟದೆ ಮ ನಿ (ಪು 46) ರೋಮಕಕ್ಕೆ 'ಗಣ್ಣ' ಎಂಬ ಪರ್ಯಾಯಪದವನ್ನು ಹೇಳುತ್ತದೆ ಸುಶ್ರುತನು ಲವಣವರ್ಗದಲ್ಲಿ (ಪು 222—23) 'ಕಾಚ' ಎಂಬ ಹೆಸರಿನ ಉಪ್ಪನ್ನು ಹೇಳುವಲ್ಲ, 'ರೋಮಕ'ವನ್ನು ವರ್ಣಿಸಿದ್ದಾನೆ ಆದ್ದರಿಂದ ಸುಶ್ರುತನ ಪಂಚ ಲವಣಗಳಲ್ಲಿ ರೋಮಕವಲ್ಲದೆ ಕಾಚಲವಣ ಸೇರಿರುವದಿಲ್ಲ ಎಂತ ತಿಳಿಯಬೇಕಾಗುತ್ತದೆ ಶಾ ಸಂಹಿತೆಯ ಇಬ್ಬರು ವ್ಯಾಖ್ಯಾನಕಾರರೊಳಗೆ ಒಬ್ಬರು ಸೌವರ್ಚಲವೇ ಕಾಚ ಎಂತಲೂ, ಇನ್ನೊಬ್ಬರು ವಿಡಾಲವಣವೇ ಕಾಚ ಎಂತಲೂ, ಬರೆದಿರುವದು ನಿರಾಧಾರವಾಗಿ ಕಾಣುತ್ತದೆ ಕಾಚಕ್ಕೆ ಕಫವಾತಹರ ಗುಣ ಹೇಳಲ್ಪಟ್ಟಿರುವದರಿಂದ ಅದನ್ನೇ ಈ ಯೋಗದಲ್ಲಿ ಉಪಯೋಗಿಸಬಹುದು ರೋಮಕದಲ್ಲಿ ಭೇದಿಗುಣ ಮತ್ತು ಮೂತ್ರಕಾರಿ ಗುಣ ವಿಶೇಷವಾಗಿ ಹೇಳಲ್ಪಟ್ಟಿವೆ

23. ಘನವಿಶ್ವಶಿವಾಗುಡಜಾ ಘುಟಿಕಾ ತ್ರಿದಿನಂ ವದನಾಮ್ಬುಜಮಧ್ಯಧೃತಾ |
ಹರತಿ ಶ್ವಸನಂ ಕಸನಂ . . . . || (ವೈ ದೀ. ದೀ. 51)

ಮುಸ್ತಾದಿ ಚೂರ್ಣ

ಭದ್ರಮುಷ್ಟಿ, ಶುಂಠಿ, ಅಣಿಲೆಕಾಯಿ ಸಿಪ್ಪೆ, ಇವುಗಳ ಚೂರ್ಣವನ್ನು ಬೆಲ್ಲದಲ್ಲಿ ಕಲಸಿ ಗುಳಿಗೆ ಮಾಡಿ, ಆ ಗುಳಿಗೆಯನ್ನು ಬಾಯಿಯೊಳಗೆ ಮೂರು ದಿನ ಇಟ್ಟುಕೊಳ್ಳುವದರಿಂದ ಉಬ್ಬಸ ಮತ್ತು ಕೆಮ್ಮು ಪರಿಹಾರವಾಗುವವು.

24. ರಾಸ್ನಾಬಲಾಪದ್ಮಕದೇವದಾರುಫಲತ್ರಿಕತ್ರ್ಯೂಷಣವೇಲ್ಲಚೂರ್ಣಃ |
ಚಿನ್ತಾಮಣಿಃ ಕ್ಷೌದ್ರಘೃತೋಪಪನ್ನಃ ಶ್ವಾಸಾಂಶ್ಚ ಕಾಸಾಂಶ್ಚ ನಿರಾಕರೋತಿ || (ವೈ ಜೀ. ದೀ 52)

ಚಿಂತಾಮಣಿ ಚೂರ್ಣ

ರಾಸ್ನೆಗಡ್ಡೆ (ಅರತೆ), ಕಲ್ಲಂಗಡಲೆ ಬೇರಿನ ಸಿಪ್ಪೆ, ಪದ್ಮಕ, ತುಪ್ಪದೇವದಾರ, ತ್ರಿಫಲೆ, ತ್ರಿಕಟು, ವಾಯುವಿಳಂಗ, ಇವುಗಳ ವಸ್ತ್ರಗಾಲಿತ ಚೂರ್ಣವನ್ನು ತುಪ್ಪದಲ್ಲಿ ಕಲಸಿ, ಜೇನು ಕೂಡಿಸಿಕೊಂಡು, ನೆಕ್ಕುವದರಿಂದ ಉಬ್ಬಸ ಮತ್ತು ಕೆಮ್ಮು ದೂರ ಹೋಗುವವು. ಈ ಚೂರ್ಣಕ್ಕೆ 'ಚಿಂತಾಮಣಿ' ಎಂತ ಹೆಸರು.

25. ಸೇವಿತಂ ಮಧುಖಣ್ಡಾಭ್ಯಾಂ ಚೂರ್ಣಂ ಮರಿಚಜಂ ಯದಿ |
ಕಿಮರ್ಥಂ ಕ್ರಿಯತೇ ಚಿನ್ತಾ ಶ್ವಾಸಕಾಸಪರಾಜಿತೈಃ ||
(ವೈ ಜೀ. ದೀ. 55)

ಕಾಳುಮೆಣಸಿನ ಚೂರ್ಣ

ಬಿಳೀ ಕಾಳುಮೆಣಸಿನ ಚೂರ್ಣಕ್ಕೆ ಕಲ್ಲುಸಕ್ಕರೆ ಪುಡಿ ಕೂಡಿಸಿ, ಜೇನಿನಲ್ಲಿ ಕಲಸಿ ನೆಕ್ಕಿದರೆ, ಉಬ್ಬಸದಿಂದಲೂ ಕೆಮ್ಮಿನಿಂದಲೂ ಸೋತವರು ಚಿಂತೆ ಮಾಡುವದು ಯಾಕೆ? (ಅವು ವಾಸಿಯಾಗುವದರಲ್ಲಿ ಸಂದೇಹವಿಲ್ಲ ಎಂತ ತಾತ್ಪರ್ಯ).

26. ಮರ್ಕಟೀನಾನ್ತು ಬೀಜಾನಾಂ ಚೂರ್ಣಂ ಮಾಕ್ಷಿಕಸರ್ಪಿಷಾ |
ಪ್ರಲಿಹ್ಯಾತ್ ಪ್ರಾತರುತ್ಥಾಯ ಶ್ವಾಸಾರ್ತಃ ಸ್ವಾಸ್ಥ್ಯಮಾಪ್ನುಯಾತ್ ||
(ನಿ. ರ.)

ಮರ್ಕಟೀ ಚೂರ್ಣ

ಸಾಯಿಸೊಣಗಿನ (ನಸುಗುನ್ನಿ) ಬೀಜವನ್ನು (ಹಾಲಿನಲ್ಲಿ ಬೇಯಿಸಿ ಸಿಪ್ಪೆ ತೆಗೆದು ಬಿಸಿಲಿನಲ್ಲಿ ಒಣಗಿಸಿ) ಚೂರ್ಣಮಾಡಿ, ಆ ಚೂರ್ಣವನ್ನು ತುಪ್ಪದಲ್ಲಿ ಕಲಸಿ, ಜೇನು ಕೂಡಿಸಿಕೊಂಡು, ಪ್ರತಿದಿನ ಬೆಳಿಗ್ಗೆ ಎದ್ದು ನೆಕ್ಕಬೇಕು. ಅದರಿಂದ ಉಬ್ಬಸದ ಪೀಡೆಯುಳ್ಳವನು ಸ್ವಸ್ಥನಾದಾನು.

27. ಶ್ವಾಸಾಯಾಸವಿನಾಶಾರ್ಥಮಾಶಯೇತ್ಕದಲೀಫಲಮ್ |
ಶೃತಂ ಮೂತ್ರೇಽಥವಾ ಭೃಷ್ಟಮಥವಾಂಗಾರಪಾಚಿತಮ್ ||
(ವೈದ್ಯಮನೋರಮಾ)

ಬಾಳೆಹಣ್ಣಿನ ಉಪಯೋಗ

ಉಬ್ಬಸದ ಆಯಾಸ ಪರಿಹರಿಸುವದಕ್ಕಾಗಿ ಬಾಳೆಹಣ್ಣನ್ನು ಗೋಮೂತ್ರದಲ್ಲಿ ಬೇಯಿಸಿ, ಅಥವಾ (ತುಪ್ಪದಲ್ಲಿ) ಹುರಿದು, ಅಥವಾ ಬೆಂಕಿ ಕೆಂಡದಿಂದ ಸುಟ್ಟು ತಿನ್ನಬೇಕು.

28. ಗನ್ಧಕಂ ಮರಿಚಂ ಸಾಜ್ಯಂ ಪಿಬೇದ್ವಾತಕಫಾಪಹಮ್ |
ಗನ್ಧಕಂ ಘೃತಪಾನೇನ ಶ್ವಾಸಯಕ್ಷ್ಮಕ್ಷಯಾಪಹಮ್ || (ರ. ರ. 355)

ಗಂಧಕದ ಉಪಯೋಗ

ಶುದ್ಧ ಮಾಡಿದ ಗಂಧಕದ ಪುಡಿಯನ್ನೂ, ಬಿಳೇ ಕಾಳುಮೆಣಸಿನ ಚೂರ್ಣವನ್ನೂ, ತುಪ್ಪದಲ್ಲಿ ಕಲಸಿ ಕುಡಿಯುವದರಿಂದ ವಾತಕಫ ಪರಿಹಾರವಾಗುತ್ತದೆ. ಘೃತಪಾನದಿಂದ ಗಂಧಕವು ಉಬ್ಬಸ, ಯಕ್ಷ್ಮರೋಗ ಮತ್ತು ಕ್ಷಯವನ್ನು ಪರಿಹರಿಸುತ್ತದೆ.

ಷರಾ ಈ ಯೋಗಗಳಲ್ಲಿ ಘೃತಪಾನ ಅವಶ್ಯಕ

29. ಭೃಂಗ(?ಗ)ವಾಶಾವೃಶ್ಚಿಕಾಲೀಕುಣ್ಡಲೀಕಾಕಮಾಚಿಕಾ-
ನಿರ್ಗುಣ್ಡಿಕಾಸಹಾವ್ಯಾಘ್ರರಸೈಶ್ಚಾರ್ದ್ರಕಸಂಭವೈಃ |
ತ್ರಿಫಲಾಘೂಕುರವಕಚಿತ್ರಕಾಗ್ನಿಕಷಾಯಕೈಃ ||
ಏಕವಿಂಶತಿಧಾ ಸಮ್ಯಕ್ ಧ (?ಗ್ಘ)ರ್ಮೇ ಸಂಶೋಷ್ಯ ಯತ್ನತಃ |
ಪೃಥಗ್ವಿಭಾಗಿ(?ವಿ)ತಂ ಗನ್ಧಂ ಮಧುನಾ ಲೇಹಯೇತ್ತತಃ ||
ಕಾಸಶ್ವಾಸಂ (?ಸ)ಪ್ರತಿಶ್ಯಾಯಂ(?ಯ) ಪಿಥ್ಮಾವೃಷ್ಣರ್ಯವಾತಜಿತ್ |
ಮಂಡಲಾರ್ಧಪ್ರಯೋಗೇನ ಕಫಜಾಡ್ಯಾಮಯಾಪಹ(?ಹಮ್) ||
(ವೈ. ಸಾ. ಸಂ. 150)

ಗಂಧಕದ ರಸಾಯನ

ಗರುಗನ ರಸ, ಆಡುಸೋಗೆ ಎಲೆ ರಸ, ಚೇಳುಬಾಲದ ಸೊಪ್ಪಿನ ರಸ, ಅಮೃತಬಳ್ಳಿ ಎಲೆ ರಸ, ಕಾಗೆಹಣ್ಣಿನ ಗಿಡದ (ಗಣಿಕೆಯ) ಸೊಪ್ಪಿನ ರಸ, ಕರೀನುಕ್ಕಿಸೊಪ್ಪಿನ ರಸ, ಲೋಳಿಸರದ ರಸ, ಹರಳುಗಿಡದ ಎಲೆ ರಸ, ಹಸಿಶುಂಠಿ ರಸ, ಮತ್ತು ತ್ರಿಫಲೆ, ತ್ರಾಯಮಾಣ, ಕೆಂಪು

ಗೋರಟೆ, ಚಿತ್ರಮೂಲ, ಎಲೆಹುರಿಸೊಪ್ಪಿನ ಗಿಡ, ಇವುಗಳ ಕಷಾಯಗಳು, ಇವುಗಳೊಳಗೆ ಪ್ರತಿಯೊಂದರಿಂದ ಶುದ್ಧಮಾಡಿದ ಗಂಧಕವನ್ನು ಅರೆದು ಬಿಸಿಲಿನಲ್ಲಿಟ್ಟು ಒಣಗಿಸುವದು. ಈ ಪ್ರಕಾರ ಪ್ರತಿ ದ್ರವದಿಂದ ಇಪ್ಪತ್ತೊಂದು ಸರ್ತಿ ಭಾವನೆ ಮಾಡಿದ ಗಂಧಕವನ್ನು ಜೇನಿನಲ್ಲಿ ಕಲಸಿ ನೆಕ್ಕುತ್ತಾ ಬರಲು, ಅರ್ಧಮಂಡಲ ಕಾಲದಲ್ಲಿ (ಇಪ್ಪತ್ತನಾಲ್ಕು ದಿನಗಳಲ್ಲಿ) ಕೆಮ್ಮು, ಉಬ್ಬಸ, ಪೀನಸ, ಬಿಕ್ಕಟ್ಟು, ಸ್ವರಭಂಗ ಮತ್ತು ವಾತ ಪರಿಹಾರವಾಗುವವಲ್ಲದೆ, ಕಫ ಸಂಬಂಧವಾದ ರೋಗಗಳೆಲ್ಲ ದೂರ ಹೋಗುವವು.

ಷರಾ ಭೂ(ಅವಸೀ) ಎಂಬದು ತ್ರಾಯಮಾಣ ಆಗಿರಬೇಕು. ಅದಕ್ಕೆ 'ನೆಲಗುಳ್ಳ' ಎಂತ ಅರ್ಥ ಬರೆದದ್ದು ಕಾಣುತ್ತದೆ

ಗಂಧಕದ ಶುದ್ಧಿಯ ಸಾಮಾನ್ಯ ಕ್ರಮವು ಹಿಂದೆ 1ನೇ ಅಧ್ಯಾಯದಲ್ಲಿ ವರ್ಣಿಸಲ್ಪಟ್ಟದೆ ಪ್ರತ್ಯೇಕವಾಗಿ ಗಂಧಕವನ್ನೇ ಹೊಟ್ಟೆಗೆ ಸೇವಿಸುವದಾದರೆ, ಅದನ್ನು ಈ ಕೆಳಗೆ ಬರೆದ ಕ್ರಮದಿಂದ ಶುದ್ಧಮಾಡುವದು ಒಳ್ಳೇದು

ಗಂಧಕದ ಶುದ್ಧಿ.

ಸಾಜ್ಯಂ ಭಾಣ್ಡೇ ಪಯಃ ಕ್ಷಿಪ್ತ್ವಾ ಮುಖಂ ವಸ್ತ್ರೇಣ ಬನ್ಧಯೇತ್ |
ತತ್ಪೃಷ್ಠೇ ಚೂರ್ಣಿತಂ ಗನ್ಧಂ ಕ್ಷಿಪ್ತ್ವಾ ಶ್ರಾವೇಣ ರೋಧಯೇತ್ ||
ಭಾಣ್ಡಂ ನಿಕ್ಷಿಪ್ಯ ಭೂಮ್ಯನ್ತ ಊರ್ಧ್ವೇ ದೇಯಂ ಪುಟಂ ಲಘು |
ತತಃ ಕ್ಷೀರೇ ದ್ರುತಂ ಗನ್ಧಂ ಶುದ್ಧಂ ಯೋಗೇಷು ಯೋಜಯೇತ್ ||
(ರ. ರ. 174)

(ಅಗಲ ಬಾಯಿ ಉಳ್ಳ) ಒಂದು ಮಡಿಕೆಯೊಳಗೆ ತುಪ್ಪವನ್ನು ಸವರಿ, ಅದರಲ್ಲಿ (ಅರ್ಧಾಂಶ ತುಂಬುವಷ್ಟು) ಆಕಳ ಹಾಲನ್ನು ಹೊಯಿದು, (ತೆಳುವಾದ) ವಸ್ತ್ರವನ್ನು ಅದರ ಬಾಯಿ ಮುಚ್ಚುವ ಹಾಗೆ ಕಟ್ಟಿ, ಆ ವಸ್ತ್ರದ ಮೇಲೆ ಗಂಧಕದ ಚೂರ್ಣವನ್ನು ಬಿಡಿಸಿ, ಅದರ ಮೇಲೆ ಮಡಿಕೆಯ ಮುಚ್ಚಳವನ್ನಿಟ್ಟು ಸಂದಿಗೆ ದಪ್ಪವಾಗಿ ಮಣ್ಣನ್ನು ಮೆತ್ತಿ ಒಣಗಿಸಿ, ಆ ಮಡಿಕೆಯನ್ನು ಭೂಮಿಯೊಳಗೆ (ಕುತ್ತಿಗೆ ಮಾತ್ರ ಮೇಲೆ ಕಾಣುವ ಹಾಗೆ) ಹುಗಿದು, ಸುತ್ತಲೂ ಮೇಲೂ ಬೆರಣಿಗಳ ಚೂರುಗಳನ್ನು ಹಾಕಿ, ಲಘುಪುಟವಿಟ್ಟಲ್ಲಿ, ಗಂಧಕವು ಕರಗಿ ಮಡಿಕೆಯೊಳಗಿರುವ ಹಾಲಿಗೆ ಬಿದ್ದು ಕಾಳುಗಳಾಗಿ ನಿಲ್ಲುವವು ಆ ಕಾಳುಗಳನ್ನು ತೆಗೆದಿಟ್ಟುಕೊಳ್ಳುವದು; ಅದು ಶುದ್ಧವಾದ ಗಂಧಕ ಮತ್ತು ಎಲ್ಲಾ ಯೋಗಗಳಲ್ಲಿ ಉಪಯೋಗಿಸುವದಕ್ಕೆ ತಕ್ಕದಾದದ್ದು.

30. ಕುಲತ್ಥ ಷಟ್ಪಲ ಘೃತ

ಕುಲತ್ಥಾದ್ದಶಮೂಲಾಚ್ಚ ಭಾರ್ಗ್ಯಾಃ ಪ್ರಸ್ಥಂ ಪೃಥಕ್ ಪೃಥಕ್ |
ಕ್ವಾಥಯಿತ್ವಾ ಜಲದ್ರೋಣೇ ಪಾದಶೇಷೇ ವಿಪಾಚಯೇತ್ ||
ದ್ವಿಕ್ಷೀರಂ ಸರ್ಪಿಷಃ ಪ್ರಸ್ಥಂ ಸಕ್ಷಾರೈಃ ಪಂಚಕೋಲಕೈಃ |
ಪಲಿಕೈಸ್ತೈರ್ಜಯೇತ್ಸಿದ್ಧಂ ಶ್ವಾಸಂ ಕಾಸಂ ಸಪೀನಸಮ್ ||
ಪ್ಲೀಹಹಿಕ್ಕಾಗ್ರಹಣ್ಯರ್ಶೋಗುಲ್ಮಾಂಶ್ಚ ವಿಷಮಜ್ವರಾನ್ |
ಕುಲತ್ಥಷಟ್ಪಲಂ ಸರ್ಪಿರ್ಬಲವರ್ಣಾಗ್ನಿದೀಪನಮ್ || (ರ. ರ. 353)

ಹುರುಳಿ ಸೇರು ೨, ದಶಮೂಲಗಳು ಸೇರಿ ಸೇರು ೨, ಗಂಟುಭಾರಂಗಿ ಸೇರು ೨, ಇವುಗಳಿಗೆ ೧೬ ಪ್ರಸ್ಥ ನೀರಿಟ್ಟು, ೪ ಪ್ರಸ್ಥ ಕಷಾಯ ಮಾಡಿ, ಆ (ಶೋಧಿಸಿದ) ಕಷಾಯಕ್ಕೆ

ಆಕಳ ತುಪ್ಪ ಸೇರು ೨||, ದನದ ಹಾಲು ಪ್ರಸ್ಥ ೨, (ಕಲ್ಕವಾಗಿ) ಯವಕ್ಷಾರ ಮತ್ತು ಪಂಚಕೋಲ(ಹಿಪ್ಪಲಿ, ಹಿಪ್ಪಲೀಮೂಲ, ಶುಂಠಿ, ಕಾಡುಮೆಣಸಿನ ಬೇರು (ಚವ್ಯ) ಮತ್ತು ಚಿತ್ರಮೂಲ)ಗಳನ್ನು ಒಂದೊಂದು ಪಲ ಪ್ರಕಾರ ತೆಗೆದುಕೊಂಡು ಮಾಡಿದ ಚೂರ್ಣ, ಸಹ ಕೂಡಿಸಿ ಪಾಕಮಾಡಿ ಶೋಧಿಸಿಟ್ಟುಕೊಂಡ ತುಪ್ಪದ ಸೇವನದಿಂದ ಉಬ್ಬಸ, ಕೆಮ್ಮು, ಪೀನಸ, ಪ್ಲೀಹವ್ಯಾಧಿ, ಬಿಕ್ಕಟ್ಟು, ಗ್ರಹಣೀರೋಗ, ಮೂಲವ್ಯಾಧಿ, ಗುಲ್ಮ ಮತ್ತು ವಿಷಮ ಜ್ವರಗಳು ಅಡಗುವದಲ್ಲದೆ, ಅಗ್ನಿಯೂ, ಬಲವೂ, ವರ್ಣವೂ ಹೆಚ್ಚುವವು. ಇದಕ್ಕೆ ಕುಲತ್ಥ ಷಟ್ಪಲ ಎಂತ ಹೆಸರು.

31. ಕುಲತ್ಥರಸಸಂಯುಕ್ತಂ ಪಂಚಕೋಲಶೃತಂ ಘೃತಮ್ ।
ದೀಪನಂ ಶ್ವಾಸಕಾಸಘ್ನಂ ಕಫವ್ಯಾಧಿಹರಂ ಪರಮ್ ॥

ಕುಲತ್ಥಾದಿ ಘೃತ

(ಚಿ. ಸಾ. ಸಂ. 267)

ಹುರುಳಿಯ ಕಷಾಯದಲ್ಲಿ ಪಂಚಕೋಲಗಳ (ಸಂ 30 ನೋಡಿ) ಕಲ್ಕದಿಂದ ಕಾಯಿಸಿದ ತುಪ್ಪವು ಉಬ್ಬಸ, ಕೆಮ್ಮು, ಮತ್ತು ಕಫರೋಗಗಳ ಪರಿಹಾರಕ್ಕೆ ಉತ್ತಮವಾದದ್ದು.

32. ಸೌವರ್ಚಲಯವಕ್ಷಾರಕಟುಕಾವ್ಯೋಷಚಿತ್ರಕೈಃ ।
ಘೃತಂ ವಚಾವಿಡಂಗೈಶ್ಚ ಸಾಧಿತಂ ಶ್ವಾಸಶಾನ್ತಯೇ ॥

ಸೌವರ್ಚಲಾದಿ ಘೃತ

(ಚಿ. ಸಾ. ಸಂ. 267)

ಸೌವರ್ಚಲ ಲವಣ (ಕರೀಉಪ್ಪು), ಯವಕ್ಷಾರ, ಕಟುಕರೋಹಿಣಿ, ತ್ರಿಕಟು, ಚಿತ್ರಮೂಲ, ಬಜೆ, ವಾಯುವಿಳಂಗ, ಇವುಗಳಿಂದ ತಯಾರಿಸಲ್ಪಟ್ಟ ತುಪ್ಪವು ಉಬ್ಬಸವನ್ನು ಶಾಂತಮಾಡುತ್ತದೆ.

ಸೂಚನಾ ದ್ರವ ಹೇಳಲ್ಪಡದ್ದರಿಂದ ನೀರನ್ನು ಕೂಡಿಸುವದು. 1ನೇ ಭಾಗದ XX-40 ನೋಡಿ

33. ವಾಸಾತುಲಾಮಷ್ಟಗುಣೇ ಚ ನೀರೇ ವಿಪಾಚ್ಯ ತಾಂ ಪಾದಜಲೇನ ಸಾಕಮ್ ।
ಕ್ಷುಣ್ಣಾಷ್ಟಕಂ ತದ್ವಿಪಚೇಚ್ಚ ವಾಸಾಂ ಪಿಷ್ಟ್ವಾ ಪ್ರಯೋಜ್ಯಾ ಸಕಲಸ್ಯ ತುಲ್ಯಾ ॥
ತತಃ ಸಮುತ್ತಾರ್ಯ ಪಲಾನಿ ಚಾಷ್ಟೌ ಕ್ಷೌದ್ರಸ್ಯ ಚ ದ್ವೇ ಕಿಲ ವಂಶಜಾಯಾಃ ।
ಕ್ಷಿಪೇತ್ತಥಾ ಮಾಗಧಿಕಾಪಲಾರ್ಧಂ ಪಲಂ ಚತುರ್ಜಾತಭವಂ ಪ್ರಯೋಜ್ಯಮ್ ॥
ಯೋಜ್ಯಂ ಪಲಾರ್ಧಂ ಶ್ವಸನೇ ಚ ಕಾಸೇ ಕ್ಷಯೇಽಸ್ರಪಿತ್ತೇ ಕಫಪೀನಸೇ ಚ ।
ಹೃದ್ರೋಗಕಾರ್ಶ್ಯಂ ಕಿಲ ವಿದ್ರಧೌ ಚ ಉರಃಕ್ಷತೇ ಶೋಣಿತವಾನ್ತಿಕೋಪೇ ॥ (ನಿ. ರ.)

ವಾಸಾವಲೇಹ.

೧೦೦ ಪಲ ಆಡುಸೋಗೆ ಬೇರನ್ನು ತುಂಡುಮಾಡಿ ಕುಟ್ಟಿ, ೮ ಪಾಲಷ್ಟು ನೀರು ಹೊಯಿದು, ಕುದಿಸಿ, ಕಾಲಂಶಕ್ಕೆ ಬತ್ತಿಸಿದ ಕಷಾಯವನ್ನು ಶೋಧಿಸಿ, ಅದಕ್ಕೆ ೮ ಸೇರು ಅಣಿಲೆಕಾಯಿಯ ಸಿಪ್ಪೆಯ ಚೂರ್ಣವನ್ನೂ ೨೦|| ಸೇರು ಕಲ್ಲುಸಕ್ಕರೆ ಪುಡಿಯನ್ನೂ ಕೂಡಿಸಿ ಬೇಯಿಸುವದು. ಲೇಹಪಾಕ ಬಂದೊಡನೆ ಪಾತ್ರವನ್ನು ಒಲೆಯಿಂದ ಕೆಳಗೆ ಇಳಿಸಿ, ತಣಿದ ಮೇಲೆ ೮ ಪಲ ಜೇನನ್ನೂ, ಹಿಪ್ಪಲಿ ಪಲ ||, ಬಿದಿರುಪ್ಪು ಪಲ ೨, ನಾಗಕೇಸರ, ಏಲಕ್ಕಿ, ಲವಂಗಪಟ್ಟೆ ಮತ್ತು ದಾಲ್ಚೀನಿ ಎಲೆ, ಇವು ನಾಲ್ಕು ಸೇರಿ ಪಲ ೧, ಇವುಗಳ ವಸ್ತ್ರ ಗಾಲಿತ ಚೂರ್ಣವನ್ನೂ ಕಲಸಿಟ್ಟುಕೊಂಡು, ಅರ್ಧಪಲ ಪ್ರಕಾರ ಉಬ್ಬಸ, ಕೆಮ್ಮು, ಕ್ಷಯ, ರಕ್ತಪಿತ್ತ, ಕಫ, ಪೀನಸ, ಹೃದ್ರೋಗ, ಕೃಶತೆ, ವಿದ್ರಧಿ, ಉರಃಕ್ಷತ, ರಕ್ತವಾಂತಿ, ಈ ರೋಗ ಗಳಲ್ಲಿ ಉಪಯೋಗಿಸತಕ್ಕದ್ದು.

ಪರಾ ಹಿಪ್ಪಲಿ ಮುಂತಾದವುಗಳ ಚೂರ್ಣವನ್ನು ಲೇಹ ಬಿಸಿಯಾಗಿರುವಾಗಲೇ ಬೆರಸಿ, ಜೇನನ್ನು ಮಾತ್ರ ಅದು ಸ್ವಲ್ಪ ತಣಿದ ಮೇಲೆ ಕೂಡಿಸುವದು ಪ್ರಶಸ್ತ

34. ಕುಲತ್ಥಂ ದಶಮೂಲಂ ಚ ತಥೈವ ದ್ವಿಜಯಷ್ಟಿಕಾ |
ಕುಲತ್ಥಗುಡ
ಶತಂ ಶತಂ ಚ ಸಂಗೃಹ್ಯ ಜಲದ್ರೋಣೇ ವಿಪಾಚಯೇತ್ ||
ಪಾದಾವಶೇಷೇ ತಸ್ಮಿಂಸ್ತು ಗುಡಸ್ಯಾರ್ಧತುಲಾಂ ಕ್ಷಿಪೇತ್ |
ಶೀತೀಭೂತೇ ಚ ಪಕ್ವೇ ಚ ಮಧುನೋಽಷ್ಟೌ ಪಲಾನಿ ಚ ||
ಷಟ್ಪಲಾನಿ ತುಗಾಕ್ಷೀರ್ಯಾಃ ಪಿಪ್ಪಲ್ಯಾಶ್ಚ ಪಲದ್ವಯಮ್ |
ತ್ರಿಸುಗನ್ಧಿಕಯುಕ್ತಂ ಚ ಖಾದೇದಗ್ನಿಬಲಂ ಪ್ರತಿ ||
ಶ್ವಾಸಂ ಕಾಸಂ ಜ್ವರಂ ಹಿಕ್ಕಾಂ ನಾಶಯೇತ್ತಮಕಂ ತಥಾ |
ಯೋಗಸಂದರ್ಶನಾದತ್ರ ವೃದ್ಧವೈದ್ಯೋಪದೇಶತಃ ||
ಜಲಂ ಚತುರ್ಗುಣಂ ದೇಯಂ ಸ್ವಲ್ಪತ್ವಾದ್ ದ್ರೋಣವಾರಿಣಾ |
ಮಾನಸಾನ್ನಿಧ್ಯಸಂವಾದಾದ್ದ್ವಿಪಲಂ ತ್ರಿಸುಗನ್ಧಿನಃ ||
(ಚಿ. ಸಾ. ಸಂ 269)

ಹುರುಳಿ ೧೦೦ ಪಲ, ದಶಮೂಲಗಳು ಸೇರಿ ೧೦೦ ಪಲ, ಗಂಟುಭಾರಂಗಿ (ಸಿರ್ವಿಷ) ೧೦೦ ಪಲ, ಇವುಗಳಿಗೆ ೧೬ ಪ್ರಸ್ಥ ನೀರಿಟ್ಟು, ೪ ಪ್ರಸ್ಥಕ್ಕೆ ಬತ್ತಿಸಿ, ಶೋಧಿಸಿದ ಆ ಕಷಾಯಕ್ಕೆ ೫೦ ಪಲ ಹಳೇ ಬೆಲ್ಲ ಹಾಕಿ, ಪಾಕಮಾಡಿ, ಅದು ತಣಿದ ಮೇಲೆ ಎಂಟು ಪಲ ಜೇನನ್ನೂ, ಬಿದಿರುಪ್ಪು ೬ ಪಲ, ಹಿಪ್ಪಲಿ ೨ ಪಲ, ತ್ರಿಸುಗಂಧ (ಏಲಕ್ಕಿ, ದಾಲ್ಚೀನಿ ಎಲೆ ಮತ್ತು ಲವಂಗಪಟ್ಟೆ ಸೇರಿ) ೨ ಪಲ, ಇವುಗಳ ವಸ್ತ್ರಗಾಲಿತ ಚೂರ್ಣವನ್ನೂ, ಬೆರಸಿಟ್ಟು ಕೊಂಡು, ಅಗ್ನಿಬಲಕ್ಕೆ ತಕ್ಕ ಪ್ರಮಾಣದಲ್ಲಿ, ತಿನ್ನುತ್ತಾ ಬಂದಲ್ಲಿ, ಉಬ್ಬಸ, ಕೆಮ್ಮು, ಜ್ವರ, ಬಿಕ್ಕಟ್ಟು ಮತ್ತು ತಮುಕಶ್ವಾಸ ನಾಶವಾಗುವವು. ಯೋಗದ ಪರೀಕ್ಷೆಯಿಂದಲೂ, ವೃದ್ಧ ವೈದ್ಯರ ಉಪದೇಶದಿಂದಲೂ, ಯೋಗದಲ್ಲಿ ಹೇಳಲ್ಪಟ್ಟ ಒಂದು ದ್ರೋಣ ನೀರು ಸಾಲದಂತ ಕಾಣುವದರಿಂದ, ನೀರನ್ನು (ಜೀನಸುಗಳಿಗೆ) ೪ ಪಾಲಷ್ಟು ಹಾಕಬೇಕು. ತ್ರಿಸುಗಂಧ ಯನ್ನು ಸಮೀಪದ ದ್ರವ್ಯದ (ಹಿಪ್ಪಲಿಯ) ತೂಕಕ್ಕೆ ಸಮವಾಗಿ ೨ ಪಲವನ್ನು ಕೂಡಿಸ ತಕ್ಕದ್ದು.

ಪಲಾ ೧೦೦ ಪಲಕ್ಕೆ ೬। ಪ್ರಸ್ಥವಾದ್ದರಿಂದ, ಹುರುಳಿ, ದಶಮೂಲ ಮತ್ತು ಸಿರ್ವಿಷ, ಮೂರರ ತೂಕ ೧೬।। ಪ್ರಸ್ಥವಾಗುತ್ತದೆ ಇದರ ನಾಲ್ಕು ಪಾಲು, ಎಂದರೆ ೬೫ ಪ್ರಸ್ಥ, ನೀರು ಕೂಡಿಸಬೇಕೆಂಬದು ವಿಶೇಷ ಉಪದೇಶ ಎಂತಾಯಿತು ರ ರ (ಪು 353—4)ಲ್ಲಿ "ಕ್ವಾಥತ್ರಯೇ ಜಲದ್ರೋಣತ್ರಯಮೇವ" ಮತ್ತು "ಪಿಪ್ಪಲೀಮಾನಸಾನ್ನಿಧ್ಯಾತ್ರಿಷು ಗನ್ಧಿ ಪಲದ್ವಯಂ" ಎಂತಲೂ ಟಿಪ್ಪಣಿ ಕಾಣುತ್ತದೆ ಅಂದರೆ "ಮೂರು ಕಷಾಯಗಳಿಗೆ ನೀರು ೩ ದ್ರೋಣವೇ" ಮತ್ತು "ಪಿಪ್ಪಲಿಯ ತೂಕ ಸಮಾಪವಿರುವದರಿಂದ ಮೂರರಲ್ಲಿ ಗಂಧಿಪಲ ಎರಡು" ರ ರ. ಪ್ರಕಾರ ಮೂರು ಕಷಾಯಗಳನ್ನು, ಒಂದೊಂದು ದ್ರೋಣ ಪ್ರಕಾರ ನೀರು ಕೂಡಿಸಿ, ಪ್ರತ್ಯಪ್ರತ್ಯೇಕ ಮಾಡುವದಾದರೆ, ಹುರುಳಿಯ ಕಷಾಯವನ್ನು ಮಾತ್ರ ಪಾದಾವಶೇಷ ಮಾಡಿ, ಮಿಕ್ಕ ಎರಡು ಕಷಾಯಗಳನ್ನು ಅಷ್ಟಾವಶೇಷ ಮಾಡುವದು ಪ್ರಶಸ್ತ ಬೆಲ್ಲದ ತೂಕ ೫೦ ಪಲ ಮಾತ್ರವಾದ್ದರಿಂದ, ಅದರ ಪಾಕಕ್ಕೆ ಯೋಗದಲ್ಲಿ ಹೇಳಲ್ಪಟ್ಟ ನಾಲ್ಕು ಪ್ರಸ್ಥಕ್ಕಿಂತ ಹೆಚ್ಚು ಕಷಾಯ ಅಗತ್ಯವಲ್ಲ ದಶಮೂಲಗಳು ಸೇರಿ ೧೦೦ ಪಲ ಎಂತ ಹೇಳಿದಂತೆ, ತ್ರಿಸುಗಂಧಿಗಳು ಸೇರಿ ಎರಡು ಪಲ ಎಂತಲೇ ತಿಳಿಯುವದು ಸರಿಯಾದದ್ದೆಂತ ಕಾಣುತ್ತದ ಕಷಾಯಯುಕ್ತವಾದ ಬೆಲ್ಲ ಪಾಕಕ್ಕೆ ಬಂದ ಕೂಡಲೇ ಪಾತ್ರವನ್ನು ಕೆಳಗೆ ಇಳಿಸಿ, ಅದು ತಣಿದ ಮೇಲೆ ಜೇನು ಬೆರಸುವಾಗ್ಗೆ ಚೂರ್ಣವನ್ನು ಸಹ ಬೆರಿಸುವದಾಗಿ ಯೋಗದಲ್ಲಿ ಕಂಡರೂ, ಚೂರ್ಣವನ್ನು ಪಾಕ ಬಿಸಿಯಿರುವಾಗಲೇ ಕೂಡಿಸಿದರೆ, ಆ ಚೂರ್ಣದಲ್ಲಿ ಅಡಗಿರುವ ಜಲಾಂಶವು ಆರುವದರಿಂದ, ಔಷಧವು ಕೆಡದೆ ದೀರ್ಘಕಾಲ ವೀರ್ಯವುಳ್ಳದ್ದಾಗಿ ಉಳಿಯುತ್ತದ ಜೇನನ್ನು ಮಾತ್ರ ಬಿಸಿ ಆರುವದಕ್ಕೆ ಮೊದಲು ಬೆರಸಬಾರದು

35. ತೈಲಂ ದಶಗುಣೇ ಸಿದ್ಧಂ ಭೃಂಗರಾಜರಸೇ ಶುಭೇ ।
ಪೀಯಮಾನಂ ಯಥಾನ್ಯಾಯಂ ಶ್ವಾಸಕಾಸೌ ವ್ಯಪೋಹತಿ ॥

ಭೃಂಗರಾಜತೈಲ

(ಚಿ. ಸಾ. ಸಂ. 268)

ಹತ್ತು ಪಾಲು ಒಳ್ಳೇ ಗರುಗರಸದಲ್ಲಿ ಕಾಯಿಸಿ ಸಿದ್ಧವಾದ ತೈಲವನ್ನು ವಿಧಿಪ್ರಕಾರ ಪಾನಮಾಡುತ್ತಾ ಬಂದಲ್ಲಿ ಉಬ್ಬಸ ಮತ್ತು ಕೆಮ್ಮು ಬಿಟ್ಟುಹೋಗುತ್ತವೆ.

36. ಅಶ್ವಗನ್ಧ(?ನ್ಧಾ) ಬಲಾ ಲಾಕ್ಷಾ ಪ್ರಸ್ಥಂ ಪ್ರಸ್ಥಂ ಪೃಥಕ್ ಪೃಥಕ್ ।
ಜಲದ್ರೋಣೇ ವಿಪಕ್ತವ್ಯಂ ಚತುರ್ಭಾಗಾವಶೇಷಿತಮ್ ॥
ತೈಲಂ ತ್ರಿಮಾನಿಕಂ ಚೈವ ದಧಿಮಸ್ತು ಚತುರ್ಗುಣಮ್ ।
ಅಶ್ವಗನ್ಧಾಬಲಾಲಾಕ್ಷಾಕೌನ್ತಿ(?ನ್ತೀ)ಕುಷ್ಠಾಬ್ಜಚನ್ದನೈಃ ॥
ನಿಶಾ ತಿಕ್ತ(?ಕ್ತಾ)ಶತಾಹ್ವಾ ಚ ರಾಸ್ನಾಮೂರ್ವಾಚ(?ಜ)ಮೂಲಕೈಃ ।
ಸುರದಾರು ಸಮಂಜಿಷ್ಠಾ ಮಧೂಕೋಶೀರಶಾರಿಬಾ ॥
ಸಮಭಾಗಾನಿ ಸರ್ವಾಣಿ ತೈಲಂ ಸಮ್ಯಗ್ವಿಪಾಚಯೇತ್ ।
ಸರ್ವಜ್ವರಹರಂ ಪಥ್ಯಂ ಶೋಫಘ್ನಂ ಬೃಂಹಣಂ ಪರಮ್ ॥
ಕಾಸಶ್ವಾಸಹರಂ ಚೈವ ಸಪ್ತಧಾತುವಿವರ್ಧನಮ್ ।
ಏತದಭ್ಯಂಜನಂ ಶ್ರೇಷ್ಠಂ ಅಶ್ವಿಭ್ಯಾಂ ನಿರ್ಮಿತಂ ಪುರಾ ॥

ಅಶ್ವಗಂಧಾ ಬಲಾ-ಲಾಕ್ಷಾದಿತೈಲ

(ವೈ ಸಾ. ಸಂ. 121)

ಅಶ್ವಗಂಧಿ ೧ ಪ್ರಸ್ಥ (೨ ಸೇರು), ಕಲ್ಲಂಗಡಲೆ ಬೇರು ೧ ಪ್ರಸ್ಥ, ಕಡ್ಡಿಅರಗು ೧ ಪ್ರಸ್ಥ, ಇವುಗಳ ಪುಡಿಗೆ ೧೬ ಪ್ರಸ್ಥ ನೀರು ಹೊಯಿದು ಕುದಿಸಿ, ೪ ಪ್ರಸ್ಥಕ್ಕೆ ಇಳಿದ ಕಷಾಯವನ್ನು ಶೋಧಿಸಿ, ಅದಕ್ಕೆ ಒಂದೂವರೆ ಪ್ರಸ್ಥ ಎಳ್ಳೆಣ್ಣೆಯನ್ನೂ, ೬ ಪ್ರಸ್ಥ ಮೊಸರ ನೀರನ್ನೂ, (ಕಲ್ಕವಾಗಿ) ಅಶ್ವಗಂಧಿ, ಕಲ್ಲಂಗಡಲೆ ಬೇರು, ಕಡ್ಡಿಅರಗು, ರೇಣಿಕೆ ಬೀಜ, ಚಂಗಲಕೋಷ್ಠ, ಭದ್ರಮುಷ್ಟಿ, ಶ್ರೀಗಂಧ, ಅರಸಿನ, ಕಟುಕರೋಹಿಣೀ, ಸಬ್ಬಸಿಗೆ ಬೀಜ, ರಾಸ್ನೆ (ಅರತೆ), ಹೆಗ್ಗುರುಟಿಗೆ ಬೇರು, ದೇವದಾರು, ಮಂಜಿಷ್ಠ, ಜ್ಯೇಷ್ಠಮಧು, ಲಾಮಂಚ, ಸುಗಂಧಿ ಬೇರು,

ಇವುಗಳನ್ನು ಸಮಭಾಗವಾಗಿ (೧|| ಕರ್ಷ ಪ್ರಕಾರ) ತೆಗೆದುಕೊಂಡು ಮಾಡಿದ ಚೂರ್ಣವನ್ನೂ, ಬೆರಸಿ, ಸರಿಯಾಗಿ ಪಾಕಮಾಡಿ, ಶೋಧಿಸಿ ಇಟ್ಟುಕೊಳ್ಳುವದು. ಈ ತೈಲವು ಸರ್ವಜ್ವರಹರ, ಪಥ್ಯ, ಶೋಫಹರ, ಒಳ್ಳೇ ಪುಷ್ಟಿಕರ, ಕೆಮ್ಮು-ಉಬ್ಬಸಗಳನ್ನು ಪರಿಹರಿಸುತ್ತದೆ ಮತ್ತು ಸಪ್ತಧಾತುಗಳನ್ನು ವೃದ್ಧಿಗೊಳಿಸುತ್ತದೆ. ಅಭ್ಯಂಗನಕ್ಕೆ ಶ್ರೇಷ್ಠವಾದ ಈ ತೈಲವು ಪೂರ್ವದಲ್ಲಿ ಅಶ್ವಿನೀ ದೇವತೆಗಳಿಂದ ನಿರ್ಮಿಸಲ್ಪಟ್ಟದ್ದು.

ಷರಾ ಸಹಸ್ರಯೋಗ(ಪು 19—20)ದಲ್ಲಿ ಕಾಣುವ ಬಲಾಶ್ವಗಂಧಾದಿ ತೈಲಕ್ಕೂ ಇದಕ್ಕೂ, ಕಲ್ಕದಲ್ಲಿ ಮಾತ್ರ ಸ್ವಲ್ಪ ಭೇದ ಕಾಣುತ್ತದೆ ಅದರಲ್ಲಿ ಅಶ್ವಗಂಧಿ, ಕಲ್ಲಂಗಡಲೆ, ಅರಗು, ಕಟುಕರೋಹಿಣೀ, ಹೆಗ್ಗುರುಟಿಗೆ, ಇವು ಐದರ ಬದಲಾಗಿ ದೂರ್ವೆ, ಕಚೋರ, ಅಗಿಲುಗಂಧ, ನೈದಿಲೆ ಮತ್ತು ಪದ್ಮಕೇಸರ ಹೇಳಲ್ಪಟ್ಟಿರುತ್ತವೆ ಪದೇ ಪದೇ ಕಾಸಶ್ವಾಸಗಳ ಪೀಡೆಗೆ ಒಳಗಾಗುವ ಶರೀರದವರಿಗೆ ಅಭ್ಯಂಗಸ್ನಾನ ಮಾಡುವ ವೇಳೆ ಮೈಗೆ ಸವರುವದಕ್ಕೆ ಈ ತೈಲವು ಬಹಳ ಪ್ರಶಸ್ತವಾದ್ದು ಅರಗು ಕಷಾಯಪಾತ್ರದ ಅಡಿ ಹಿಡಿಯದ ಹಾಗೆ, ಅದರ ಪುಡಿಯನ್ನು ತೆಳ್ಳಗಿನ ವಸ್ತ್ರದಲ್ಲಿ ಸಡಿಲಾಗಿ ಕಟ್ಟಿಹಾಕುವದು ಒಳ್ಳೇದು

37. ದೃಷ್ಟಫಲ ಚಿಕಿತ್ಸೆ (1) ರೋಗಿಯ ಪ್ರಾಯ ೪೧ ವರ್ಷ. 1½ ವರ್ಷಗಳಿಂದ ಆಗಾಗ್ಗೆ ಉಬ್ಬಸ ಮತ್ತು ಕೆಮ್ಮು ತೊಡಗುವದು, ಕ್ಷೀಣತೆ, ಪಿತ್ತಕಫನಾಡಿಗಳು ಸ್ಥಾನಚ್ಯುತ-ಆಡುಸೋಗೆ ಬೇರು, ಕಲ್ಲಂಗಡಲೆ ಬೇರು, ಬಿಲ್ವಪತ್ರೆ ಬೇರು, ಅಮೃತ ಬಳ್ಳಿ, ಬಳ್ಳಿತುರಚನ (ಬೀಳುಪಚ್ಚರಂಗಿ) ಬೇರು, ಹಿಪ್ಪಲಿ ಸಹ ತೊ. |ರಂತೆ, ಕಷಾಯದ ಅರ್ಧದಲ್ಲಿ ಅತಿಸಾರಮೂಲಘ್ನ ಮಾತ್ರೆ ೧ರಂತೆ, ಜೇನು ಕೂಡಿಸಿಕೊಂಡು, ದಿನಕ್ಕೆ ೨ ಸರ್ತಿ ಪ್ರಕಾರ ೧೨ ದಿನ; ಅನಂತರ ಆ ಕಷಾಯದ್ರವ್ಯಗಳೊಂದಿಗೆ ಆನೆಕಡೀರು (ಹೆಗ್ಗಲ್ಲಂಗಡಲೆ) ಬೇರು ತೊ. |ನ್ನು ಕೂಡಿಸಿ ಮಾಡಿದ ಕಷಾಯವನ್ನೇ (ಮಾತ್ರೆ ವಿನಾ) ಜೇನು ಕೂಡಿಸಿಕೊಂಡು, ಕೆಲವು ದಿನ; ಅದರನಂತರ ಕೂಷ್ಮಾಂಡರಸಾಯನ. ಈ ಚಿಕಿತ್ಸೆಯಿಂದ ರೋಗಿಗೆ ಕ್ಷೇಮವಾಯಿತು.

ಅತಿಸಾರಮೂಲಘ್ನ ಮಾತ್ರೆಯ ಯೋಗ

ಶುದ್ಧ ವತ್ಸನಾಭಿ, ಶುದ್ಧ ಕರಿ ಉಮ್ಮತ್ತದ ಬೀಜ, ಶುದ್ಧ ಇಂಗಳೀಕ, ಟಂಕಣಕಾರದ ಅರಳು, ಇಪ್ಪೆಹೂವು, ಲವಂಗ, ಸಮುದ್ರಶೋಕಿಬೀಜ, ಅತಿವಿಷೆ, ಈ ಎಂಟು ಬಗೆಗಳನ್ನು ಒಂದೊಂದು ತೊಲೆ ಪ್ರಕಾರ ತೆಗೆದುಕೊಂಡು, ಇಂಗಳೀಕ ಮತ್ತು ಟಂಕಣವಲ್ಲದೆ ಮಿಕ್ಕ ೬ ಬಗೆ ದ್ರವ್ಯಗಳನ್ನು ವಸ್ತ್ರಗಾಲಿತ ಚೂರ್ಣಮಾಡಿ, ಉಮ್ಮತ್ತದ ಬೇರಿನ ಕಷಾಯದಿಂದ ಇಂಗಳೀಕವನ್ನೂ ಟಂಕಣದ ಅರಳನ್ನೂ ನಯವಾಗುವಂತೆ ಸ್ವಲ್ಪ ಹೊತ್ತು ಅರೆದ ಮೇಲೆ, ಚೂರ್ಣವನ್ನು ಕೂಡಿಸಿ, ಒಟ್ಟಾಗಿ ನಾಲ್ಕು ಜಾಮು ಚನ್ನಾಗಿ ಅರೆದು, ಗುಲುಗುಂಜಿಗಾತ್ರದ ಮಾತ್ರೆಗಳನ್ನು ಮಾಡಿ, ನೆಳಲಲ್ಲಿ ಒಣಗಿಸಿಟ್ಟುಕೊಂಡು, ಜೇನಿನಲ್ಲಿ ಅಥವಾ ರೋಗಕ್ಕೆ ತಕ್ಕ ರಸ ಅಥವಾ ಕಷಾಯ ಮುಂತಾದ್ದರಲ್ಲಿ ೧-೨ ಮಾತ್ರೆಗಳನ್ನು ತೇದಿ ಕೊಡಲು, ಪ್ರವಾಹಾತಿಸಾರ, ಆಮಾತಿಸಾರ, ಗ್ರಹಣೀರೋಗ, ರಕ್ತಾತಿಸಾರ, ಮೂಲವ್ಯಾಧಿ, ಕುಕ್ಷಿಶೂಲೆ, ಮಂದಾಗ್ನಿ, ಕ್ರಿಮಿಶೂಲೆ, ಮುಂತಾದ ಅನೇಕ ವ್ಯಾಧಿಗಳು ಪರಿಹಾರವಾಗುವವು; ಉಬ್ಬಸಕ್ಕೆ ಉತ್ತಮವಾದ ಔಷಧ, ಯಾವ ದ್ವಾರದಿಂದ ರಕ್ತಹೋಗುವದಿದ್ದರೂ ಅದನ್ನು ಈ ಮಾತ್ರೆ ಕಟ್ಟಿಸುವದು. ಇದರ ಲೇಪದಿಂದ ಚೇಳಿನ ಕಡಿತದ ಶೂಲೆ ಒಡನೇ ಶಾಂತವಾಗುವದು. ಪಿತ್ತದ ಕೆಲಸವನ್ನು ಇದು ಚುರುಕು ಮಾಡುತ್ತದೆ. ಅರಸಿನಮುಂಡಿಗೆ ವ್ಯಾಧಿಯಲ್ಲಿಯೂ ಉಪಯುಕ್ತವಾದದ್ದು. ಅತಿಸಾರವನ್ನು

ನಿಲ್ಲಿಸಿದಾಗ್ಯೂ, ಗಟ್ಟಿಯಾದ ಮಲವನ್ನು ಒಳಗೆ ನಿಲ್ಲಲಿಕ್ಕೆ ಬಿಡದೆ, ಹೊರಗೆ ಹಾಕುವದು. ಸರಿಯಾದ ಪಥ್ಯದಲ್ಲಿರುವ ರೋಗಿಯಲ್ಲಿ ಇದು ಮಲಬದ್ಧತೆಯನ್ನುಂಟುಮಾಡುವದಿಲ್ಲ. ಇದು ಈ ಮಾತ್ರೆಯ ವಿಶೇಷ ಗುಣ ಎನ್ನಬಹುದು.

ವತ್ಸನಾಭಿಯ ಶುದ್ಧಿಕ್ರಮ Iನೇ ಅಧ್ಯಾಯದಲ್ಲಿ, ಉಮ್ಮತ್ತದ ಬೀಜ, ಇಂಗಳೀಕ ಮತ್ತು ಟಂಕಣದ ಶುದ್ಧಿಕ್ರಮಗಳು Vನೇ ಅಧ್ಯಾಯದಲ್ಲಿ ವಿವರಿಸಲ್ಪಟ್ಟಿರುತ್ತವೆ.

ಕರಿ ಉಮ್ಮತ್ತದ ಹಸೀ ಬೇರು ೧೬ ತೊಲೆಗೆ ೧೨ ಕುಡ್ತೆ ನೀರಿಟ್ಟು, ೧|| ಕುಡ್ತೆಗೆ ಬತ್ತಿಸಿದ ಕಷಾಯವು ಮೇಲಿನ ಯೋಗದಲ್ಲಿ ಹೇಳಲ್ಪಟ್ಟ ಪ್ರಮಾಣದ ದ್ರವ್ಯಗಳನ್ನು ಅರೆಯುವದಕ್ಕೆ ಸಾಕಾಗುವದು.

(2) ರೋಗಿಗೆ 55 ವರ್ಷ. ಉಬ್ಬಸ ಮತ್ತು ಕೆಮ್ಮು, ಕಫ ಹೋಗುವದಕ್ಕೆ ಪ್ರಯಾಸ— ನೀರುಳ್ಳಿರಸ || ಡ್ರಾಂ, ಶುಂಠಿರಸ || ಡ್ರಾಂ, ಜೇನು || ಡ್ರಾಂ, ಇದರಲ್ಲಿ ಅತಿಸಾರ. ಮಾತ್ರೆ ೧ರಂತೆ ದಿನಕ್ಕೆ ೨ ಸರ್ತಿ ಪ್ರಕಾರ ೭ ದಿನ ಸೇವಿಸಿದರಿಂದ ಕ್ಷೇಮ

(3) ರೋಗಿಗೆ 20 ವರ್ಷ. ಉಬ್ಬಸ ಮತ್ತು ಕೆಮ್ಮು, 7-8 ವರ್ಷಗಳಿಂದ ಆಗಾಗ್ಗೆ ಹೆಚ್ಚಾಗುತ್ತದೆ, ನಾಡಿಗಳೊಳಗೆ ಪಿತ್ತಕಫಗಳು ಅಬಲ.—ಶುಂಠಿರಸ ೧ ಡ್ರಾಂ, ನೀರುಳ್ಳಿರಸ ೧ ಡ್ರಾಂ, ಜೇನು ೧ ಡ್ರಾಂ, ಇದರಲ್ಲಿ ಕರ್ಪೂರಾದಿ ೧ರಂತೆ ೭ ದಿನ—ಇದರಿಂದ ಉಬ್ಬಸ ಮತ್ತು ಕೆಮ್ಮು ಪರಿಹಾರ ಅಶಕ್ತಿನಿವೃತ್ತಿಗೂ ಆರೋಗ್ಯಕ್ಕೂ ಅನಂತರ ಕಾಸೀಸಾದಿ ೧ರಂತೆ ಜೇನಿನಲ್ಲಿ ೬ ದಿನ, ದಿನಕ್ಕೆ ೨ ಸರ್ತಿ ಪ್ರಕಾರ.

ಕರ್ಪೂರಾದಿ ಮಾತ್ರೆಯ ಯೋಗ

ಆರತಿ (ಚೀನಿ) ಕರ್ಪೂರ, ಶುದ್ಧ ಇಂಗಳೀಕ, ಟಂಕಣಕಾರದ ಅರಳು, ಜಾಯಿಕಾಯಿ, ಕೊಡಸಿಗನ ಬೀಜ (ಇಂದ್ರಜೀವಿ), ಅಫೀಮು, ಭದ್ರಮುಷ್ಟಿ, ಈ ಏಳು ಬಗೆಗಳನ್ನು ೧ ತೊಲೆ ಪ್ರಕಾರ ಸಮ ಪಾಲು ತೆಗೆದುಕೊಂಡು, ಗರುಗದ ರಸದಲ್ಲಿ ಮೂರು ಜಾಮ ಅರೆದು, ಗುಂಜಾಪ್ರಮಾಣದ ಮಾತ್ರೆ ಮಾಡಿಟ್ಟುಕೊಳ್ಳುವದು. ಈ ಮಾತ್ರೆಯನ್ನು ಅನುಪಾನ ಭೇದದಿಂದ ಜ್ವರ, ಅತಿಸಾರ, ಗ್ರಹಣೀ, ಉಬ್ಬಸ, ಕಾಸ, ಮುಂತಾದ ರೋಗಗಳಲ್ಲಿ ಕೊಡುವದು. ಅರಯುವದಕ್ಕೆ ರಸ ಮುಕ್ಕಾಲು ಕುಡ್ತೆ ಸಾಕಾಗುತ್ತದೆ.

ಕರ್ಪೂರದ ಶುದ್ಧಿ

ಕರ್ಪೂರವನ್ನು ದನದ ಹಾಲಿನಲ್ಲಿ, ಅಥವಾ ತ್ರಿಫಲೆ ಕಷಾಯದಲ್ಲಿ, ಅಥವಾ ಗರುಗನ ರಸದಲ್ಲಿ, ಒಂದು ಜಾಮ ಅರೆದರೆ, ಅದು ಶುದ್ಧವಾಗುತ್ತದೆ ಎಂತ ಉಪದೇಶ ಉಂಟು. ಈ ಮಾತ್ರೆಯನ್ನು ಗರುಗನ ರಸದಿಂದ ಅರೆಯುವದಾದ್ದರಿಂದ, ಕರ್ಪೂರವನ್ನು ಆ ಕ್ರಮದಿಂದ ಪ್ರತ್ಯೇಕ ಶುದ್ಧಿಮಾಡಿಕೊಳ್ಳುವದು ಆವಶ್ಯಕವಲ್ಲ.

ಅಫೀಮಿನ ಶುದ್ಧಿ.

ಅಫೀಮನ್ನು ಹಸಿಶುಂಠಿರಸದಿಂದ ೨೧ ಭಾವನೆ ಕೊಟ್ಟರೆ ಶುದ್ಧಿಯಾಗುತ್ತದೆ ಎಂತ ಬರೆದದ್ದು ಕಾಣುತ್ತದೆ. ಹಾಗೆ ಶುದ್ಧಮಾಡುವದರಿಂದ ರಕ್ತಾತಿಸಾರ ಮುಂತಾದ ಕೆಲವು ಸಂದರ್ಭಗಳಲ್ಲಿ ಬಾಧೆ ಉಂಟಾದೀತು. ಅದಲ್ಲದೆ ಆ ಕ್ರಮದಿಂದ ಅಫೀಮಿನೊಂದಿಗೆ ಸೇರಿಕೊಂಡಿರಬಹುದಾದ ಕಸ ಮುಂತಾದ ಅನ್ಯದ್ರವ್ಯಗಳು ಹೋಗುವದಿಲ್ಲ. ಯಾವ ರಸದಲ್ಲಿಯೂ ಅಫೀಮು ಪೂರ್ಣವಾಗಿ ಕರಗುವದಿಲ್ಲ. ಆದ್ದರಿಂದ ಬೆರಿಕೆ ಇಲ್ಲದ ಶುದ್ಧವಾದ ಅಫೀಮನ್ನೇ ಕೊಂಡುಕೊಳ್ಳುವದು ಮುಖ್ಯವಾದದ್ದು.

ಭದ್ರಮುಷ್ಟಿ ಶುದ್ಧಿ (ಒಣಗಿದ್ದಾದರೆ ನೀರಿನಲ್ಲಿ ನೆನೆಸಿಕೊಂಡು) ಭದ್ರಮುಷ್ಟಿಯ ಕರೀಸಿಪ್ಪೆಯನ್ನು ಹೆರಸಿ ತೆಗೆದು ಉಪಯೋಗಿಸತಕ್ಕದ್ದು.

ಅಫೀಮು, ಭಂಗಿ ಮುಂತಾದ ಅಮಲುದ್ರವ್ಯಕೂಡಿದ ಮಾತ್ರೆಗಳನ್ನು ಬಹಳ ದಿವಸಗಳವರೆಗೆ ಬಿಡದೆ ಕೊಡಬಾರದು. ಉಬ್ಬಸದ ವೇಗ ಶಾಂತವಾದ ಕೂಡಲೇ, ಪುನಃ ರೋಗ ಕಾಣದ ಹಾಗೆ ದೋಷವಿಚಾರದ ಮೇಲೆ ಧಾತು ವೃದ್ಧಿಕರವಾದ ಔಷಧಗಳನ್ನು ಕೊಡತಕ್ಕದ್ದು. ಮುಖ್ಯವಾಗಿ ನರಗಳನ್ನು (nerves) ಬಲಪಡಿಸತಕ್ಕದ್ದು.

(4) ರೋಗಿಗೆ 13 ವರ್ಷ. 3 ವರ್ಷಗಳಿಂದ ಆಗಾಗ್ಗೆ ಉಬ್ಬಸ; ಈ ಸರ್ತಿ 3 ದಿನಗಳಿಂದ ಕೆಮ್ಮು ಸಹ ಉಂಟು. ಆಡುಸೋಗೆ ಬೇರು ತೊಲೆ ೧, ತ್ರಿಕಟು ತೊಲೆ.=(ಅರ್ಧ ಪಾವಲಿ ಅಂದರೆ ೨ ಆ. ಪಾವಲಿತೂಕ)ರಂತೆ ಕಷಾಯದ ಅರ್ಧದಲ್ಲಿ ಅತಿಸಾರ. ಮಾತ್ರೆ |||ರಂತೆ ಜೇನು ಕೂಡಿಸಿ ಕೊಟ್ಟದ್ದರಿಂದ ಗುಣ.

ಆಡುಸೋಗೆ ಎಲೆಯ ರಸ ೧-೨ ಡ್ರಾಂ ಚಮಚೆಯಲ್ಲಿ ಮಾತ್ರೆ ತೇದಿ, ಜೇನನ್ನೂ ಹಿಪ್ಪಲಿಯ ಅಥವಾ ತ್ರಿಕಟುವಿನ ಚೂರ್ಣವನ್ನೂ, ಬೇಕಾದಲ್ಲಿ ಕಲ್ಲುಸಕ್ಕರೆ ಪುಡಿಯನ್ನೂ. ಕೂಡಿಸಿ ಕೊಡುವದು ಅನುಕೂಲ.

38. ಅಣಿಲೆಕಾಯಿ, ಅಮೃತಬಳ್ಳಿ, ಆಡುಸೋಗೆ, ಏಳೆಲೆಬಾಳೆ (ಹಾಲೆ), ಎಕ್ಕೆಹೂವು, ಇಪ್ಪೆಹಣ್ಣು, ಏಲಕ್ಕಿ, ಓರೆಲೆಬೇರು, ಕಚೋರ, ಕಟುಕರೋಹಿಣಿ, ಕರ್ಕಟಶೃಂಗಿ, ಕಾಡುಮೆಣಸಿನ ಬೇರು, ಕಾಳುಮೆಣಸು, ಕಿರಾತಕಡ್ಡಿ, ಕಿರಿಗುಳ್ಳ, ರಾಸ್ಮೆಗಡ್ಡೆ (ಅರತೆ), ಕಿರುಶಿವನಿ (ಕಟ್ಫಲ), ಕೊತ್ತುಂಬರಿ, ಖರ್ಜೂರ. ಗಂಟುಭಾರಂಗಿ, ಗಜಹಿಪ್ಪಲಿ, ಗರುಗ, ಗುಲುಗುಂಜಿ, ಗುಳ್ಳದಬೇರು, ಜಗತೆ, ಜಾಪತ್ರೆ, ಜಾಯಿಕಾಯಿ, ತುಂಬೆ, ದ್ರಾಕ್ಷ, ನೀರುಳ್ಳಿ, ನೆಗ್ಗಿಲಮುಳ್ಳು, ಪಾಡಾವಳಿಗಡ್ಡೆ, ಪಾದ್ರಿ, ಪುಷ್ಕರಮೂಲ, ಪುರುಷರತ್ನ, ಪುಲ್ಲಂಪುರುಜೆ (ಮ.ಲ ಪುಳಿಯಾರಲ), ಒನ್ನಿಮರ (ಶಮೀ), ಬಾವುಂಜಿ (ಮ.ಲ ಕಾಕೋರ್ಲರಿ), ಬಿದಿರುಪ್ಪು, ಮಾದಳ, ಮೂವೆಲೆಬೇರು, ಮೇಷಶೃಂಗಿ, ಯವಕ್ಷಾರ, ರಾಳ, ಶರಪುಂಖ, ಸೀಮಾದಳ, ಶುಂಠಿ, ಸಣ್ಣ ಏಲಕ್ಕಿ (ಮ.ಲ. ಚಿತ್ರೇಲಾ), ಸಣ್ಣ ಕಚೋರ (ಗಂಧಪಲಾಶೀ), ಸಣ್ಣ ಹಾವುಮೆಕ್ಕೆ, ಸೂರ್ಯಕಾಂತಿ (ಸೂರ್ಯಾವರ್ತ), ಹರಳುಬೇರು, ಹಿಪ್ಪಲಿ, ಹಿಪ್ಪಲೀಮೂಲ, ಹೆಬ್ಬೇವು (ಶತಶ್ಲೋಕಿಯಲ್ಲಿ ಕೆಮ್ಮಿಗೂ, ಉಬ್ಬಸಕ್ಕೂ ಒಟ್ಟಾಗಿ ಔಷಧಗಳು ಹೇಳಲ್ಪಟ್ಟಿವೆ.)

ಪೃಥಗ್ರೋಗೋಕ್ತ ಔಷಧಗಳು

39. ಹಗಲು ನಿದ್ರೆ, ಹಳೇಯವಾದ ಅಕ್ಕಿ, ಗೋದಿ, ಹುರುಳಿ ಮತ್ತು ಯವೆ, ಹಳೇತುಪ್ಪ, ಆಡಿನ ಹಾಲು ಮತ್ತು ತುಪ್ಪ, ಜೇನು, ಕಿರಿಗುಳ್ಳ, ಪಡುವಲಕಾಯಿ, (ಎಳೇ) ಬದನೆ, ಬೆಳ್ಳುಳ್ಳಿ, ನಿಂಬೇಹಣ್ಣು, ತೊಂಡೆಕಾಯಿ, ಮಾದಳಹಣ್ಣು, ದ್ರಾಕ್ಷೆ, ಸಣ್ಣ ಏಲಕ್ಕಿ, ಬಿಸಿನೀರು ಮತ್ತು ತ್ರಿಕಟು.

ಪಥ್ಯವರ್ಗ.

ಅಪಥ್ಯವರ್ಗ

40. ಮೂತ್ರಾದಿಗಳ ವೇಗಗಳನ್ನು ತಡೆಯುವದು, ನಸ್ಯ, ವಸ್ತಿ, ಕಡ್ಡಿಗಳಿಂದ ಹಲ್ಲು ಉಜ್ಜುವದು, ದೇಹದಂಡನೆ, ದಾರಿ ನಡೆಯುವದು, ಭಾರ ಹೊರುವದು, ದೂಳು, ಬಿಸಿಲು, ಮೈಥುನ, ವಿಷ್ಟಂಭಿಪದಾರ್ಥಗಳು, ವಿದಾಹಿಪದಾರ್ಥಗಳು, ಆನೂಪವರ್ಗದ ಮಾಂಸ, ಅವರೆ, ಕಫಕರವಾದ ಪದಾರ್ಥಗಳು, ಉದ್ದು, ರಕ್ತಮೋಕ್ಷಣ, ಮೀನುಗಳು, ಗಡ್ಡೆಗಳು, ಸಾಸಿವೆ ಮತ್ತು ರೂಕ್ಷವಾದ, ಗುರುವಾದ ಮತ್ತು ಕಫಕರವಾದ ಅನ್ನಪಾನಗಳು.

ಷರಾ ಕೆಲವು ಗ್ರಂಥಗಳಲ್ಲಿ ಉಬ್ಬಸ, ಕೆಮ್ಮು, ಮತ್ತು ಬಿಕ್ಕಟ್ಟಿಗೆ ಪಥ್ಯಾಪಥ್ಯಗಳು ಏಕರೀತಿಯಾಗಿ ಬರೆಯಲ್ಪಟ್ಟಿವೆ ಹಿಂದ ಬಿಕ್ಕಟ್ಟಿಗೆ ಬರೆಯಲ್ಪಟ್ಟ ಪಥ್ಯಾಪಥ್ಯಗಳ ವಿವರಗಳನ್ನು ನೋಡಿ

ಪ್ರಕರಣಾನ್ತ ಟಿಪ್ಪಣಿ

41. ಶ್ವಾಸವಿಕಾರವು ಮೂರು ವಿಧವಾಗಿ ಕಾಣಬಹುದು. ಹೇಗೆಂದರೆ – (1) ಶ್ವಾಸದ ಸಂಖ್ಯೆಯು ಸೌಖ್ಯಸ್ಥಿತಿದಕ್ಕಿಂತ ಹೆಚ್ಚು ಅಥವಾ ಕಡಿಮೆ ಆಗುವದು. (2) ಉಚ್ಛ್ವಾಸದಿಂದ ಒಳಗೆ ಸೇರುವ ಅಥವಾ ನಿಃಶ್ವಾಸದಿಂದ ಹೊರಗೆ ತಳ್ಳುವ ವಾಯುವಿನ ಪ್ರಮಾಣವು ಸೌಖ್ಯಸ್ಥಿತಿದಕ್ಕಿಂತ ಹೆಚ್ಚು ಅಥವಾ ಕಡಿಮೆ ಆಗುವದು. ಸೌಖ್ಯಸ್ಥಿತಿಯಲ್ಲಿ, ನಿಃಶ್ವಾಸದಲ್ಲಿ ಹೊರಗೆ ಬಿಡುವ ಮತ್ತು ಉಚ್ಛ್ವಾಸದಲ್ಲಿ ಒಳಗೆ ಎಳಕೊಳ್ಳುವ ಗಾಳಿಯ ಪರಿಮಾಣವು ಸುಮಾರು ೩೦ ಘನ ಇಂಚು ಎಂತಲೂ, ನಿಃಶ್ವಾಸಾನಂತರ ಶ್ವಾಸಕೋಶಗಳಲ್ಲಿ ಉಳಿಯುವ ಗಾಳಿಯ ಪರಿಮಾಣವು ೧೦೦ ಘನ ಇಂಚು ಎಂತಲೂ, ಅಧಿಕವಾಗಿ ಸೆಳಕೊಳ್ಳಬಹುದಾದ ಅಥವಾ ಹೊರಗೆ ತಳ್ಳಬಹುದಾದ ಗಾಳಿಯ ಪರಿಮಾಣವು ೧೦೦ ಘನ ಇಂಚು ಎಂತಲೂ, ಪಾಶ್ಚಾತ್ಯ ಶಾಸ್ತ್ರಜ್ಞರು ನಿಶ್ಚಯಿಸಿದ್ದಾರೆ. ಒಂದು ಇಂಚು ಉದ್ದ, ಒಂದು ಇಂಚು ಅಗಲ ಮತ್ತು ಒಂದು ಇಂಚು ಎತ್ತರದ ಎಡೆಯಲ್ಲಿ ಹಿಡಿಯುವ ಪರಿಮಾಣಕ್ಕೆ ಒಂದು ಘನ ಇಂಚು ಎನ್ನುವದಾಗಿರುತ್ತದೆ (3) ಕಂಠದಿಂದ ಶ್ವಾಸಕೋಶಗಳೊಳಗಿನ ವಾಯುಚೀಲಗಳ ವರೆಗಿನ ಶ್ವಾಸಸಂಚಾರದ ಮಾರ್ಗದಲ್ಲಿ ತಡೆಯುಂಟಾಗಿ, ಅಥವಾ ಶ್ವಾಸದ ವ್ಯಾಪಾರವು ಕ್ರಮದಂತೆ ನಡೆಯುವದಕ್ಕೆ ಸಹಕಾರಿಯಾಗಬೇಕಾದ ಯಾವ ಅಂಗವಿಶೇಷವಾದರೂ ಸಹಕರಿಸದರಿಂದ, ಉಚ್ಛ್ವಾಸದಲ್ಲಿ ಆಗಲೀ ನಿಃಶ್ವಾಸದಲ್ಲಿ ಆಗಲೀ ಸಂಕಷ್ಟ ಉಂಟಾಗುವದು. ಈ ಮೂರು ವಿಧದ ಶ್ವಾಸವಿಕಾರದ ರೂಪಗಳು ಈ ಅಧ್ಯಾಯದಲ್ಲಿ ವರ್ಣಿಸಲ್ಪಟ್ಟ ಪಂಚವಿಧ ಶ್ವಾಸಗಳೊಳಗೆ ಅಡಗಿಯವೆ.

ಶ್ವಾಸದ ಸಂಖ್ಯಾವಿಚಾರವು Iನೇ ಭಾಗದ XVII – 26ರಲ್ಲಿಯೂ, ಶ್ವಾಸದ ವ್ಯಾಪಾರಕ್ಕೆ ಸಹಕಾರಿಯಾಗಬೇಕಾದ ಅಂಗವಿಭಾಗಗಳ ವಿಷಯವು ಅದೇ ಪುಸ್ತಕದ II – 125 ರಲ್ಲಿಯೂ ಕಾಣುತ್ತವೆ.

ತನ್ನ ಶಕ್ತಿಯನ್ನು ಮಿಕ್ಕು ಇರುವ ದಣುವನ್ನು ವಹಿಸಿಕೊಂಡಲ್ಲಿ ಯಾರಿಗಾದರೂ ಆರೋಗ್ಯ ಸ್ಥಿತಿಯಲ್ಲಿ ಸಹ ಶ್ವಾಸದ ಸಂಖ್ಯೆಯು ಹೆಚ್ಚುವದು. ಆ ವಿಕಾರವು ವಿಶ್ರಾಂತಿಯಿಂದ ತನ್ನಂತೆ ಅಡಗುತ್ತದೆ. ಅದಕ್ಕೆ ಕಾರಣವಾದ ಆಯಾಸವಾಗಲಿ ರೂಕ್ಷತೆಯಾಗಲಿ ವಿಶೇಷವಿದ್ದರೆ, ಸಕ್ಕರೆ ಮಿಶ್ರ ಹಾಲು, ಸೀಯಾಳದ ನೀರು, ಕಬ್ಬಿನ ರಸ, ಬೆಲ್ಲದ ಪಾನಕ ಮುಂತಾದವುಗಳನ್ನು ಯುಕ್ತಪ್ರಮಾಣದಲ್ಲಿ ಕುಡಿಯಲಿಕ್ಕೆ ಕೊಟ್ಟು, ತರ್ಪಣಕ್ರಮವನ್ನು ನಡಿಸುವದು ಹಿತವಾಗುತ್ತದೆ. ಶರೀರದ, ವಿಶೇಷವಾಗಿ ನರಮಂಡಲದ, ಬಲವು ಕಡಿಮೆಯಾಗಿದ್ದವನಲ್ಲಿ

ಈ ವಿಕಾರವು ಬಹಳವಾಗಿ ಕಾಣುವದು. ಅಂಥವನ ಬಲವೃದ್ಧಿಗಾಗಿ ದೋಷವಿಚಾರದ ಮೇಲೆ, ತಕ್ಕ ಬೃಂಹಣೋಪಚಾರಗಳನ್ನು ನಡಿಸತಕ್ಕದ್ದು. ಇಂಥಾ ಶ್ವಾಸವೇ ಈ ಪ್ರಕರಣದಲ್ಲಿ ವರ್ಣಿಸಲ್ಪಟ್ಟ ಕ್ಷುದ್ರಶ್ವಾಸ ಎಂತ ಕಾಣುತ್ತದೆ. ಹೃದ್ರೋಗವಿರುವವನಲ್ಲಿ, ಆ ವ್ಯಾಧಿಯ ಇತರ ಲಕ್ಷಣ ಯಾವದೂ ತೋರದೆ, ಕ್ಷುದ್ರಶ್ವಾಸ ಮಾತ್ರ ಕಾಣುವದುಂಟು. ಆದ್ದರಿಂದ ಕ್ಷುದ್ರಶ್ವಾಸ ವಿಶೇಷವಾಗಿ ಕಾಣಿಸಿಕೊಳ್ಳುವವನ ಹೃದಯವನ್ನು ಪರೀಕ್ಷಿಸುವದು ಒಳ್ಳೆಯದು. ಮೂರು ನಾಡಿಗಳಲ್ಲಿಯೂ ಕ್ರಮವಾಗಿ ಪದೇ ಪದೇ ಲೋಪ ಕಾಣುವ ಸಂಗತಿಯಲ್ಲಿ, ಹೃದಯದ ವ್ಯಾಪಾರದಲ್ಲಿ ದೋಷವಿರಬೇಕೆಂಬ ಶಂಕೆ ಉಂಟಾಗಬೇಕು. ಆದರೆ ನರಮಂಡಲದ ದುರ್ಬಲತೆಯಿಂದಲೇ ಆ ಲಕ್ಷಣ ಕಾಣುವದುಂಟು. ಪಾಂಡುರೋಗವುಳ್ಳವರಲ್ಲಿಯೂ ಕ್ಷುದ್ರಶ್ವಾಸ ಕಾಣುವದು ಹೆಚ್ಚಾದ್ದರಿಂದ, ರೋಗಿಯ ಕಣ್ಣಿನ ಕೆಳಗಿನ ರೆಪ್ಪೆಯ ಅಂಚನ್ನು ಸ್ವಲ್ಪ ಹೊರಗೆ ಎಳೆದು ಪರೀಕ್ಷಿಸಬೇಕು. ಪಾಂಡುರೋಗಿಯಲ್ಲಿ ರೆಪ್ಪೆಯ ಒಳಭಾಗ ಸಾಧಾರಣವಾಗಿ ಬೆಳ್ಳಗಾಗಿರುತ್ತದೆ. ಸಾರಾಂಶ: ಕ್ಷುದ್ರಶ್ವಾಸ ಕಾಣುವಲ್ಲಿ ಅದು ಅನ್ಯವ್ಯಾಧಿಯ ಲಕ್ಷಣಗಳೊಳಗೆ ಸೇರಿದ್ದೋ ಅಲ್ಲವೋ ಎಂಬದನ್ನು ವಿಚಾರದಿಂದ ಮುಂದಾಗಿ ಗೊತ್ತುಮಾಡಬೇಕು. ಅನ್ಯವ್ಯಾಧಿಯ ಲಕ್ಷಣವಾದಲ್ಲಿ, ಆ ವ್ಯಾಧಿಯ ಚಿಕಿತ್ಸೆಯಿಂದಲೇ ಕ್ಷುದ್ರಶ್ವಾಸದ ಲಕ್ಷಣವೂ ಅಡಗುತ್ತದೆ. ಧಾತುಕ್ಷಯ ಸಂಬಂಧವಾದ ದೌರ್ಬಲ್ಯವೇ ಅದಕ್ಕೆ ಹೇತುವಾಗಿದ್ದಲ್ಲಿ, ಹಿಂದೆ ಸೂಚಿಸಿದಂತೆ ಬೃಂಹಣ ಅಥವಾ ರಸಾಯನ ರೂಪವಾದ ಚಿಕಿತ್ಸೆಯನ್ನು ಮಾಡತಕ್ಕದ್ದು.

ಜ್ವರ, ಅತಿಸಾರ, ಪಾಂಡು, ಮುಂತಾದ ಕೆಲವು ದೌರ್ಬಲ್ಯಕರವಾದ ವ್ಯಾಧಿಗಳ ಅಂತಿಮಾವಸ್ಥೆಯಲ್ಲಿ ಶ್ವಾಸದ ಸಂಖ್ಯೆಯು ಕ್ರಮೇಣ ಏರುತ್ತಾ ಬಂದು, ಪ್ರಾಣೋತ್ಕ್ರಮಣಕ್ಕೆ ಸ್ವಲ್ಪ ಮೊದಲಿನಿಂದ ಕ್ರಮೇಣ ತಗ್ಗುತ್ತಾ ಬರುವದುಂಟು. ಚಿಕಿತ್ಸೆಯು ಶಾಸ್ತ್ರರೀತ್ಯಾ ಜಾಗ್ರತೆಯಿಂದ ನಡೆಯುತ್ತಾ ಬರುವಾಗ್ಗೆ, ಶ್ವಾಸದ ಸಂಖ್ಯೆಯು ಮೊನ್ನೆ ಮಿನಿಟಿಗೆ 26 ಇದ್ದದ್ದು, ನಿನ್ನೆ 28ಕ್ಕೆ, ಈ ಹೊತ್ತು 30ಕ್ಕ ಏರಿದೆಯಾದರೆ, ಆ ರೋಗಿಯು ಇನ್ನು ಐದಾರು ದಿನಗಳಲ್ಲಿ ಸಾಯುತ್ತಾನೆಂತ ಊಹಿಸಬಹುದು. ಸಾಧಾರಣವಾಗಿ ಶ್ವಾಸದ ಸಂಖ್ಯೆಯು ಮಿನಿಟಿಗೆ 40-45ಕ್ಕೆ ಮಿಗುವದಿಲ್ಲ. ಅದು 40ಕ್ಕೆ ಏರಿ, ತಗ್ಗಲಿಕ್ಕೆ ಆರಂಭಿಸಿದರೆ ಅದರನಂತರ ಒಂದು ಮುಹೂರ್ತಕಾಲ ಮಿಕ್ಕು ಅವನು ಬದುಕುವದಿಲ್ಲ. ಕೆಲವು ರೋಗಿಗಳಲ್ಲಿ ಕಡೇ ದಿನ ಮಾತ್ರ ಶ್ವಾಸದ ಸಂಖ್ಯೆ ಏರುವದುಂಟು. ಅಂಥಾ ಸಂಗತಿಯಲ್ಲಿಯೂ ಏರಿಕೆಯು ಕ್ರಮವಾಗಿದ್ದರೆ, ಆ ರೋಗಿ ಇಂತಿಷ್ಟು ಘಂಟೆಯಲ್ಲಿ ಸಾಯುವನೆಂತ ಊಹಿಸಬಹುದು. ಈ ವಿಚಾರದಲ್ಲಿ ತಾತ್ಕಾಲಿಕ ದಣುವಿನಿಂದ ಉಂಟಾದ ಶ್ವಾಸಸಂಖ್ಯಾಧಿಕ್ಯವು ಪ್ರಯೋಜನದ್ದಲ್ಲ. ಅದಲ್ಲದೆ, ಶ್ವಾಸಸಂಚಾರದ ಮಾರ್ಗದಲ್ಲಿ ಉಂಟಾದ ನಿವಾರಣೀಯವಾದ ತಡೆಯ ಲಕ್ಷಣವಾಗಿ ಶ್ವಾಸದ ಸಂಖ್ಯೆಯು ಮಿನಿಟಿಗೆ 50-60ರ ವರೆಗೆ ಏರಿದ್ದರೂ, ಅದು ಅಶುಭ ಸೂಚನೆ ಎಂತ ತಿಳಿಯಲಿಕ್ಕಾಗುವದಿಲ್ಲ.

ಛಿನ್ನಶ್ವಾಸ, ಮಹಾಶ್ವಾಸ ಮತ್ತು ಊರ್ಧ್ವಶ್ವಾಸ ಎಂಬ ಮೂರು ರೋಗಿಯ ಅಂತಿಮಾವಸ್ಥೆಯಲ್ಲಿ ಉಂಟಾಗುವ ಶ್ವಾಸದ ಭೇದಗಳು. ಮಹಾಶ್ವಾಸದ ನಿಃಸಂಜ್ಞತ್ವವೂ, ಊರ್ಧ್ವಶ್ವಾಸದ ಮೂಢತೆಯೂ ಅತ್ಯಂತ ದುರ್ಬಲತೆಯ ಲಕ್ಷಣಗಳೆಂತಲೂ, ಮಹಾಶ್ವಾಸದ ಶುಷ್ಕಕಂಠಕ್ಕೆ ರಸಧಾತುವಿನ ಕ್ಷಯ, ಶಬ್ದಕ್ಕೆ ಕಫದ ತಡೆ, ಮತ್ತು ಪಾರ್ಶ್ವಶೂಲೆಗೆ ಶ್ವಾಸ

ಕೋಶದ ದೋಷ, ಕಾರಣ ಎಂತಲೂ ತಿಳಿಯಬಹುದು. ಛಿನ್ನಶ್ವಾಸವು ಉಂಡುಕದ ಅಥವಾ ಮೂತ್ರಾಶಯದ ವ್ಯಾಪಾರಗಳು ಸರಿಯಾಗಿ ನಡೆಯದರಿಂದ ಮೂತ್ರದೊಂದಿಗೆ ವಿಸರ್ಜನ ವಾಗತಕ್ಕ ಮಲಾಂಶವು ರಕ್ತದೊಳಗೆ ವ್ಯಾಪಿಸಿ ಸಂಭವಿಸುವದಾಗಿರಬೇಕು. ಈ ಮೂರು ಶ್ವಾಸಗಳಲ್ಲಿಯೂ ಹೆಚ್ಚುಕಡಿಮೆಯಾಗಿ ಬೋಧವಿರಬಹುದು. ಈ ಟಿಪ್ಪಣಿಯ ಆರಂಭದಲ್ಲಿ ವರ್ಣಿಸಲ್ಪಟ್ಟ ಶ್ವಾಸವಿಕಾರದ ಮೂರು ರೂಪಗಳೂ ತಮಕಾದಿ ನಾಲ್ಕು ಶ್ವಾಸಗಳಲ್ಲಿಯೂ ಕಲೆತಿರಬಹುದಾದರೂ, ಮೂರನೇ ವಿಧವು ತಮಕ, ಛಿನ್ನ ಮತ್ತು ಮಹಾಶ್ವಾಸ ಎಂಬವುಗಳಲ್ಲಿ ವಿಶೇಷವಾಗಿ ಇರುವಂಥಾದ್ದು.

ಶ್ವಾಸಸಂಚಾರಮಾರ್ಗವಾದ ಕಂಠದಿಂದ ಶ್ವಾಸಕೋಶಗಳೊಳಗಿನ ವಾಯುಚೀಲಗಳ ವರೆಗಿನ ನಾಳಗಳ ಯಾವ ಭಾಗದಲ್ಲಿಯಾದರೂ ಕಫ, ದೂಳು, ಮುಂತಾದ ಅನ್ಯಪದಾರ್ಥ ಗಳು ಹೊಕ್ಕು ನಿಲ್ಲುವದರಿಂದಾಗಲಿ, ವಾತದೋಷಾದಿ ಕಾರಣಗಳಿಂದ ಆ ನಾಳಗಳು ಅಥವಾ ವಾಯುಚೀಲಗಳು ಮುದುರಿಕೊಳ್ಳುವದರಿಂದಾಗಲಿ, ಅವುಗಳೊಳಗೆ ಬಾವು, ಗ್ರಂಥಿ, ವ್ರಣ ಮುಂತಾದ್ದು ಉತ್ಪನ್ನವಾಗುವದರಿಂದಾಗಲಿ, ಶ್ವಾಸಕೋಶಗಳ ಹೊರಪಕ್ಕದಲ್ಲಿರುವ ಅಥವಾ ವಪಾವಹನದ ಅಡಿಯಲ್ಲಿರುವ ಅಂಗವಿಭಾಗಗಳಲ್ಲಿ ದೋಷ ಉಂಟಾಗಿ, ಅವು ಬೇಕಾದ ಹಾಗೆ ಚಲಿಸದೆ ಶ್ವಾಸಕೋಶದ ಸಂಕೋಚನ-ವಿಕಾಸನ ಕರ್ಮಗಳಿಗೆ ತಡೆಯಾಗಿ ನಿಲ್ಲುವದರಿಂದಾಗಲಿ, ಉಬ್ಬಸ ಉಂಟಾಗುತ್ತದೆ. ಅದನ್ನು ದೋಷಸ್ಥಾನವಿಶೇಷದ ಮತ್ತು ಸ್ವರೂಪವಿಶೇಷದ ಮೇಲೆ ವಿಭಾಗಿಸಿ, ಉಬ್ಬಸವೇ ಪ್ರಧಾನಲಕ್ಷಣವಾಗಿರುವ ಆ ವಿಕಾರ ಗಳನ್ನೆಲ್ಲಾ ಪ್ರತ್ಯಪ್ರತ್ಯೇಕ ರೋಗಗಳನ್ನಾಗಿ ಪಾಶ್ಚಾತ್ಯ ವೈದ್ಯಗ್ರಂಥಗಳು ವರ್ಣಿಸುತ್ತವೆ ಅವು ಗಳೆಲ್ಲ ಪ್ರಾಯಶಃ ಆಯುರ್ವೇದದ ತಮಕ, ಪ್ರತಮಕ, ಸಂತಮಕಗಳಲ್ಲಿ ಸೇರುತ್ತವೆ

ಸಾಧಾರಣವಾಗಿ 'ಉಬ್ಬಸ' ಎನ್ನುವ ಸ್ವತಂತ್ರ ವ್ಯಾಧಿಯು, ಅಪಸ್ಮಾರಾದಿಗಳಂತೆ, ಕಾಲಾಂತರಗಳಿಂದ ಒಂದು ಆವೇಶದ ಹಾಗಿನ ವೇಗವನ್ನುಂಟುಮಾಡಿ, ಶ್ವಾಸವನ್ನು ಬಲವಂತ ವಾಗಿ ತಡೆದು, ಬಹಳವಾಗಿ ಪೀಡಿಸುವಂಥ ರೋಗವಾಗಿರುತ್ತದೆ. ಅದರಲ್ಲಿ ಒಂದು ವಿಶೇಷ ತರದ ಸ್ವರ ಉಂಟಾಗುತ್ತದೆ. ಶ್ವಾಸವು ಹೊರಗಾಗಲಿ ಒಳಗಾಗಲಿ ಸಂಚರಿಸದೆ ಕಟ್ಟಿ ಕೊಂಡ ಹಾಗೆ ಕಾಣುತ್ತದೆ. ಈ ಪೀಡೆಯು ಹೆಚ್ಚುಕಡಿಮೆಯಾಗಿ ಕೆಲವು ದಿನಗಳ ವರೆಗೆ ಬಿಡದೆ ಹಿಡಿದಿದ್ದು. ಅನಂತರ ತನ್ನಂತೆ ಅಥವಾ ಔಷಧೋಪಚಾರಗಳಿಂದ ಗುಣವಾಗುತ್ತದೆ. ಪುನಃ ಅಂಥಾ ವೇಗ ತೊಡಗುವ ವರೆಗೆ ಪ್ರಾಯಶಃ ಉಚ್ಛ್ವಾಸ-ನಿಃಶ್ವಾಸಗಳಲ್ಲಿ ಯಾವ ವಿಕಾರವೂ ಕಾಣದಿರಬಹುದು. ಈ ವ್ಯಾಧಿಯು ಶ್ವಾಸಕೋಶಗಳೊಳಗಿನ ವಾಯುಚೀಲ ಗಳಿಗೂ ಅವುಗಳಿಗೆ ಸಂಬಂಧಪಟ್ಟ ತೊಟ್ಟುಗಳ ಹಾಗಿನ ನಾಳದ ಸೂಕ್ಷ್ಮಕೊನೆಗಳಿಗೂ ಮಧ್ಯೇ ತಡೆಯುಂಟಾಗಿ ಸಂಭವಿಸುವದೆಂತ ಕೆಲವರು, ಶ್ವಾಸದ ಕ್ರಮವಾದ ಸಂಚಾರಕ್ಕೆ ಆವಶ್ಯಕ ವಾದ ವಪಾವಹನದ ಚಲನೆಯು ಅದರ ಅಡಿ ಇರುವ ಅನ್ನಾಶಯ ಮೊದಲಾದ ಅಂಗವಿಭಾಗ ಗಳ ದೋಷದಿಂದ ತಡೆಯಲ್ಪಡುವದರಿಂದ ಉಂಟಾಗುವಂಥಾದ್ದೆಂತ ಕೆಲವರು, ಹೀಗೆ ಪಾಶ್ಚಾತ್ಯ ವೈದ್ಯಶ್ರೇಷ್ಠರಲ್ಲಿ ಮತಭೇದ ಇದ್ದ ಹಾಗೆ ಕಾಣುತ್ತದೆ. ಆ ಎರಡು ಪಕ್ಷದವರು ಹೇಳುವ ಹೇತುಗಳು ಸೇರಿ ಉಬ್ಬಸವ್ಯಾಧಿ ಉಂಟಾಗುವದು ಮತ್ತು ಅವುಗಳಲ್ಲಿ ಎರಡ ನೇದು ಪ್ರಧಮದ್ದು ಎಂಬದು ಆಯುರ್ವೇದೀಯ ಮತ ಎಂತ ಉಬ್ಬಸವು ವಾತಕಫಾತ್ಮಕ ಮತ್ತು ಅದರ ಉತ್ಪತ್ತಿಯು ಪಿತ್ತದಿಂದ ಎಂಬ ಉಪದೇಶದಿಂದ ತಿಳಿಯಬಹುದು. ಕಫ

ಹೊರಗೆ ಬರುವ ಲಕ್ಷಣದ ಮೇಲೆ ಉಬ್ಬಸವು ಕಫದಿಂದ ಸಂಭವಿಸಿದ್ದೆಂತ ನೆನಸಬಾರದು. ವ್ಯಾಧಿಯಲ್ಲಿ ಉಂಟಾಗುವ ಒಳಗಿನ ತಡೆಯಿಂದ ಕಫವು ಹೊರಡುತ್ತದೆ ಎಂತ ಒಬ್ಬ ಪಾಶ್ಚಾತ್ಯ ವೈದ್ಯರು ಬರೆದದ್ದು ಕಾಣುತ್ತದೆ. ಇದರಿಂದ "ವಾಯು ಕೋಪಗೊಂಡು ಪ್ರಾಣವಾಹಿಗಳಾದ ಸ್ರೋತಸ್ಸುಗಳನ್ನು ಹೊಕ್ಕು, ಎದೆಯಲ್ಲಿಯ ಕಫವನ್ನು ಕೆದರಿಸಿ, ಘೋರವಾದ ಐದು ಬಿಕ್ಕಟ್ಟುಗಳನ್ನೂ, ಐದು ಉಬ್ಬಸಗಳನ್ನೂ ಉಂಟುಮಾಡುತ್ತವೆ" ಎಂಬ ಚರಕನ ವರ್ಣನವು ಎಷ್ಟು ಸರಿಯಾದದ್ದೆಂಬದು ಸ್ಪಷ್ಟವಾಗುತ್ತದೆ. ಜ್ವರ ಕಾಣುವ ಪ್ರತಮುಕದಲ್ಲಿ ಶ್ವಾಸ ಸಂಚಾರದ ಮಾರ್ಗದಲ್ಲಿ ಬಾವು, ವ್ರಣ ಮುಂತಾದ ದೋಷವಿಶೇಷ ಉಂಟಾಗಿದೆ ಎಂತ ತಿಳಿಯಬಹುದು. ಉಬ್ಬಸದಲ್ಲಿ ಶ್ವಾಸದ ತಡೆ ಯಾವ ಹೇತುವಿನಿಂದ ಉಂಟಾಗಿದೆ ಎಂಬದನ್ನು ತಿಳಿಯಲಿಕ್ಕೆ ಯತ್ನಿಸಬೇಕು. ಪಿತ್ತಾಧಿಕ್ಯವಿರುವಲ್ಲಿ ಮಾಡತಕ್ಕ ಚಿಕಿತ್ಸಾವಿಧಾನವೂ ವಾತಕಫಗಳೇ ಬಲವಾಗಿರುವ ಸಂಗತಿಯಲ್ಲಿ ಉಪಯುಕ್ತವಾದ ಚಿಕಿತ್ಸಾಕ್ರಮವೂ ಬಹಳ ಮಟ್ಟಿಗೆ ವ್ಯತ್ಯಸ್ತವಾಗಿರುವದರಿಂದ, ದೋಷಗಳ ಬಲಾಬಲಕ್ಕೂ, ಶ್ವಾಸದ ತಡೆಯ ಸ್ವರೂಪಕ್ಕೂ, ದೃಷ್ಟಿಯಿಟ್ಟು ಉಪಕ್ರಮಿಸತಕ್ಕದ್ದು

# ಅಧ್ಯಾಯ VIII.

## ಕೆಮ್ಮು (ಕಾಸ Cough).

ಷರಾ ಪಾಶ್ಚಾತ್ಯ ವೈದ್ಯರ ಮತದಲ್ಲಿ ಇದು ಅನ್ಯವಿಕಾರಗಳ ಲಕ್ಷಣವಲ್ಲದೆ ಪ್ರತ್ಯೇಕ ಒಂದು ವ್ಯಾಧಿಯಲ್ಲ ವಾದ್ದರಿಂದ, ಅದರ ಚಿಕಿತ್ಸೆಯು ಆ ಅನ್ಯವಿಕಾರಗಳ ಚಿಕಿತ್ಸೆಗಳಲ್ಲಿ ಅಲ್ಲದೆ ಬೇರೆಯಾಗಿ ಹೇಳಲ್ಪಟ್ಟಿರುವದಿಲ್ಲ ಕಾಸದ ಭೇದಗಳು ಮತ್ತು ಅವುಗಳ ಚಿಕಿತ್ಸಾಕ್ರಮಗಳು ಎದೆ, ಶ್ವಾಸಕೋಶಗಳು, ಶ್ವಾಸನಾಳ, ಗಂಟಲು, ಕಿವಿ ಮತ್ತು ಮೂಗು, ಈ ಅಂಗವಿಭಾಗಗಳಿಗೆ ಸಂಬಂಧಪಟ್ಟ ವ್ಯಾಧಿಗಳ ವರ್ಣನ ಮತ್ತು ಚಿಕಿತ್ಸಾವಸರಗಳಲ್ಲಿ ವಿವರಿಸಲ್ಪಟ್ಟಿರುತ್ತವೆ ಈ ರೋಗಗಳಲ್ಲಿ ಅಲ್ಲದೆ, ಆಮಾಶಯದ ದೋಷ, ಯಕೃತ್ತಿನ ವಿಕಾರ, ಸ್ತ್ರೀಯರ ಗರ್ಭದೋಷ, ಮಕ್ಕಳ ದಂತೋದ್ಭೇದ, ಮುಂತಾದ ಬಹಳ ವ್ಯಾಧಿಗಳಲ್ಲಿ ಕೆಮ್ಮು ಒಂದು ಮುಖ್ಯ ಲಕ್ಷಣವಾಗಿ ಕಾಣುವದುಂಟು ಎಂತ ಅವರ ಒಂದು ಪುಸ್ತಕ ಹೇಳುತ್ತದೆ (Moore's Family Medicine pp 136-7) ಕೆಳಗೆ ಪ್ರಕರಣಾನ್ತ ಟಿಪ್ಪಣೀ ನೋಡಿ

1. ಅಧಃಪ್ರತಿಹತೋ ವಾಯುರೂರ್ಧ್ವಸ್ರೋತಃ ಸಮಾಶ್ರಿತಃ ।
ಉದಾನಭಾವಮಾಪನ್ನಃ ಕಂಠೇ ಸಕ್ತಸ್ತಥೋರಸಿ ॥

ಕಾಸದ ಲಕ್ಷಣ

ಆವಿಶ್ಯ ಶಿರಸಃ ಖಾನಿ ಸರ್ವಾಣಿ ಪ್ರತಿಪೂರಯನ್ ।
ಆಭಂಜನ್ನಾಕ್ಷಿಪನ್ ದೇಹಂ ಹನುಮನ್ಯೇ ತಥಾಕ್ಷಿಣೀ ॥
ನೇತ್ರೇ ಪೃಷ್ಠಮುರಃಪಾರ್ಶ್ವೇ ನಿರ್ಭುಜ್ಯ ಸ್ತಮ್ಭಯಂಸ್ತತಃ ।
ಶುಷ್ಕೋ ವಾ ಸಕಫೋ ವಾಪಿ ಕಸನಾತ್ಕಾಸ ಉಚ್ಯತೇ ॥
ಪ್ರತಿಘಾತವಿಶೇಷೇಣ ತಸ್ಯ ವಾಯೋಃ ಸರಂಹಸಃ ।
ವೇದನಾಶಬ್ದವೈಷಮ್ಯಂ ಕಾಸಾನಾಮುಪಜಾಯತೇ ॥ (ಚ. 699)

ಕೆಳಗಿನಿಂದ ತಡೆಯಲ್ಪಟ್ಟ ವಾಯು ಊರ್ಧ್ವಮಾರ್ಗವನ್ನು ಆಶ್ರಯಿಸಿ, ಉದಾನರೂಪ ವನ್ನು ತಾಳಿ, ಕುತ್ತಿಗೆಯಲ್ಲಿಯೂ ಎದೆಯಲ್ಲಿಯೂ ಅಂಟಿಕೊಂಡು, ತಲೆಯ ಎಲ್ಲಾ ಶಿರೆಗಳನ್ನು ಹೊಕ್ಕು ತುಂಬಿ, ದೇಹವನ್ನೂ, ದವಡೆಗಳನ್ನೂ, ಮನ್ಯೆಗಳನ್ನೂ, ಕಣ್ಣುಗಳನ್ನೂ ಬಾಧಿಸಿ ಮುಂದಕ್ಕೆ ದೂಡಿ, ಕಣ್ಣುಗಳನ್ನೂ, ಬೆನ್ನನ್ನೂ, ಎದೆಯನ್ನೂ ಪಕ್ಕಗಳನ್ನೂ, ಬಗ್ಗಿಸಿ ನಿಲ್ಲಿಸಿ, ಆ ಮೇಲೆ ಕಫಯುಕ್ತವಾಗಿ ಆಗಲಿ, ಒಣಗಿದ್ದಾಗಿ ಆಗಲಿ, ಕೆಮ್ಮಿಸಿ ಹೊರಗೆ ಹೋಗುವದಕ್ಕೆ ಕಾಸ (ಕೆಮ್ಮು) ಎನ್ನುತ್ತಾರೆ. ವೇಗದಿಂದ ಹೊರಡುವ ಆ ವಾಯುವಿನ ರಭಸದಿಂದ (ಅಥವಾ ಪೆಟ್ಟಿನ ವಿಶೇಷದಿಂದ) ಕೆಮ್ಮುಗಳಲ್ಲಿ ನೋವು ಮತ್ತು ಶಬ್ದದ ವಿಕಾರ ಉಂಟಾಗುತ್ತವೆ.

2. ಭವಿಷ್ಯತಸ್ತಸ್ಯ ತು ಕಣ್ಠಕಣ್ಡೂರ್ಭೋಜ್ಯೋಪರೋಧೋ ಗಲತಾಲುಲೇಪಃ ।
ಸ್ವಶಬ್ದವೈಷಮ್ಯಮರೋಚಕೋಽಗ್ನಿಸಾದಶ್ಚ ಲಿಂಗಾನಿ ಭವನ್ತ್ಯಮೂನಿ ॥
(ಸು. 857)

ಕಾಸದ ಪೂರ್ವ ರೂಪ

ಗಂಟಲಲ್ಲಿ ತುರಿಕೆ, ಆಹಾರದ ತಡೆ, ಗಂಟಲಲ್ಲಿ ಮತ್ತು ತಾಲುವಿನಲ್ಲಿ ಲೇಪ (ಅಗ್ರ), ಸ್ವಾಭಾವಿಕವಾದ ಕಂಠಸ್ವರದಲ್ಲಿ ವಿಷಮತ್ವ, ಅರುಚಿ, ಅಗ್ನಿಮಾಂದ್ಯ, ಇವು ಕೆಮ್ಮಿನ ಪೂರ್ವ ರೂಪ.

ಷರಾ. ಕಾಸದ ಸಂಪ್ರಾಪ್ತಿಯಲ್ಲಿ ಕಂಠಸ್ವರವು ಒಡೆದುಹೋದ ಕಂಚಿನ ಶಬ್ದಕ್ಕೆ ಸಮಾನವಾಗುತ್ತದೆಂತ ಸು. (ಪು 857)

3. ಉಕ್ತಾ ಯೇ ಹೇತವೋ ನೃಣಾಂ ರೋಗಯೋಃ ಶ್ವಾಸಹಿಕ್ಕಯೋಃ |
ಕಾಸದ ಹೇತುಗಳು ಕಾಸಸ್ಯಾಪಿ ಚ ವಿಜ್ಞೇಯಾಸ್ತ ಏವೋತ್ಪತ್ತಿಹೇತವಃ || (ಸು. 857).

ಉಬ್ಬಸ ಮತ್ತು ಬಿಕ್ಕಟ್ಟು ರೋಗಗಳು ಮನುಷ್ಯರಿಗೆ ಉಂಟಾಗುವದಕ್ಕೆ ಯಾವ ಹೇತುಗಳು ಹೇಳಲ್ಪಟ್ಟವೋ, ಅವೇ ಕೆಮ್ಮುರೋಗ ಹುಟ್ಟುವದಕ್ಕೂ ಹೇತುಗಳೆಂತ ತಿಳಿಯತಕ್ಕದ್ದು.

ಪರಾ ಹೊಗೆಯ ಅಥವಾ ದೂಳಿನ ಪಟ್ಟು, ಮಲಮೂತ್ರಾದಿಗಳ ಮತ್ತು ಸೀನಿನ ತಡೆ, ಆಹಾರವು ಒಳಗೆ ಮಾರ್ಗತಪ್ಪಿ ಹೋಗುವದು, ವ್ಯಾಯಾಮ ಮತ್ತು ರೂಕ್ಷವಾದ ಆಹಾರಗಳ ಸೇವನ, ಇವು ಕಾಸಕ್ಕೆ ಹೇತುಗಳಾಗಿ ಪುನಃ ಹೇಳಲ್ಪಟ್ಟವೆ (ಸು 857)

4. ಸ ವಾತಪಿತ್ತಪ್ರಭವಃ ಕಫಾಚ್ಚ ಕ್ಷತಾತ್ತಥಾನ್ಯಃ ಕ್ಷಯಜೋಽಪರಶ್ಚ |
ಕಾಸದಲ್ಲಿ ಭೇದಗಳು ಪಂಚಪ್ರಕಾರಃ ಕಥಿತೋ ಭಿಷಗ್ಭಿರ್ವಿವರ್ಧಿತೋ
ಯಕ್ಷ್ಮವಿಕಾರಕೃತ್ಸ್ಯಾತ್ || (ಸು. 857)

ಕೆಮ್ಮುರೋಗವು ವಾತದಿಂದ, ಪಿತ್ತದಿಂದ, ಕಫದಿಂದ, ಕ್ಷತದಿಂದ ಮತ್ತು ಕ್ಷಯದಿಂದ, ಹೀಗೆ ಐದು ಪ್ರಕಾರ ಎಂತ ಪಂಡಿತರು ಹೇಳಿದ್ದಾರೆ. ಅದು ಹೆಚ್ಚಾಗಿ ಬೆಳೆದರೆ, ಯಕ್ಷ್ಮರೋಗವನ್ನುಂಟುಮಾಡೀತು.

ಪರಾ: ಕಾಸವನ್ನು ಬೇಗನೇ ಗುಣಮಾಡದೆ ಬಿಟ್ಟರೆ, ಶ್ವಾಸ, ಕ್ಷಯ, ವಾಂತಿ, ಸ್ವರಭೇದ ಮುಂತಾದ ರೋಗಗಳು ಹುಟ್ಟುತ್ತವೆ ಎಂತ ವಾ. (ಪು 196)

5. ರೂಕ್ಷಶೀತಕಷಾಯಾಲ್ಪಪ್ರಮಿತಾನಶನಂ ಸ್ತ್ರಿಯಃ |
ವೇಗಧಾರಣಮಾಯಾಸೋ ವಾತಕಾಸಪ್ರವರ್ತಕಾಃ ||
ವಾತಜ ಕೆಮ್ಮಿನ ನಿದಾನ ಮತ್ತು ಲಕ್ಷಣ ಹೃತ್ಪಾರ್ಶ್ವೋರಃಶಿರಃಶೂಲಸ್ವರಭೇದಕರೋ ಭೃಶಮ್ |
ಶುಷ್ಕೋರಃಕಂಠವಕ್ತ್ರಸ್ಯಹೃಷ್ಟಲೋಮ್ನಃ ಪ್ರತಾಮ್ಯತಃ ||
ನಿರ್ಘೋಷದೈನ್ಯಕ್ಷಾಮಸ್ಯ ದೌರ್ಬಲ್ಯಕ್ಷಯಮೋಹಕೃತ್ |
ಶುಷ್ಕಕಾಸಃ ಕಫಂ ಶುಷ್ಕಂ ಕೃಚ್ಛ್ರಾನ್ಮುಕ್ತ್ವಾಲ್ಪತಾಂ ವ್ರಜೇತ್ ||
ಸ್ನಿಗ್ಧಾಮ್ಲಲವಣೋಷ್ಣೈಶ್ಚ ಭುಕ್ತಮಾತ್ರೇ ಪ್ರಶಾಮ್ಯತಿ !
ಊರ್ಧ್ವವಾತಸ್ಯ ಜೀರ್ಣೇಽನ್ನೇ ವೇಗವಾನ್ಮಾರುತೋ ಭವೇತ್ ||
(ಚ. 699)

ರೂಕ್ಷವಾದ, ಶೀತವಾದ, ಮತ್ತು ಚೂಗರು ರುಚಿಯ ಆಹಾರಗಳು, ಅಲ್ಪಪ್ರಮಾಣದ (ಅರ್ಧಹೊಟ್ಟೆಯ) ಆಹಾರ, ಉಪವಾಸ, ಸ್ತ್ರೀಸಂಭೋಗ, (ಮಲಮೂತ್ರಾದಿ) ವೇಗಗಳ ತಡ ಮತ್ತು ಆಯಾಸ, ಇವು ವಾತಜ ಕೆಮ್ಮನ್ನು ಉಂಟುಮಾಡುತ್ತವೆ. ಅದರಿಂದ ಹೃದಯ, ಪಕ್ಕಗಳು, ಎದೆ, ತಲೆ, ಈ ಸ್ಥಾನಗಳಲ್ಲಿ ಶೂಲೆ ಮತ್ತು ಸ್ವರಭೇದ ಉಂಟಾಗುತ್ತವೆ. ಎದೆ, ಕಂಠ, ಬಾಯಿ ಮತ್ತು ಮುಖ ಒಣಗಿ, ರೋಮಗಳು ನೆಟ್ಟಗಾಗಿ, ಬಹಳ ಸಂಕಷ್ಟಪಡುವ, ಬಹಳ ಶಬ್ದವುಳ್ಳ, ದೀನನಾದ ಮತ್ತು ಕೃಶನಾದ ಕೆಮ್ಮುರೋಗದವನಿಗೆ ದುರ್ಬಲತೆ, ಕ್ಷಯ ಮತ್ತು ಕಣ್ಣುಕತ್ತಲೆ, ಉಂಟಾಗುತ್ತವ. ಒಣಗಿದ ಕಫವನ್ನು ಕಷ್ಟದಿಂದ ಹೊರಗೆ ಹಾಕಿದ ಮೇಲೆ, ಹೊಟ್ಟು ಕೆಮ್ಮು ಕಡಿಮೆಯಾಗುತ್ತದೆ. ಅದು ಸ್ನಿಗ್ಧವಾದ, ಹುಳಿಯಾದ,

ಉಪ್ಪಾದ ಮತ್ತು ಉಷ್ಣವಾದ ವಸ್ತುಗಳಿಂದ ಮತ್ತು ಆಹಾರವನ್ನು ಉಂಡಕೂಡಲೇ ಶಮನವಾಗುತ್ತದೆ. ಊರ್ಧ್ವಮುಖವಾದ ವಾತವುಳ್ಳವನಲ್ಲಿ ಅನ್ನವು ಜೀರ್ಣವಾದ ಮೇಲೆ ವಾಯುವು ವೇಗವುಳ್ಳದ್ದಾಗುತ್ತದೆ.

ಪರಾ ಹೊಟ್ಟೆಯಲ್ಲಿ ಮತ್ತು ಕೆನ್ನೆಗಳಲ್ಲಿ ಸಹ ಶೂಲೆಯುಂಟಾಗುತ್ತದೆಂತ ಸು (ಪು 857)

6. ಕಟುಕೋಷ್ಣವಿದಾಹ್ಯಮ್ಲಕ್ಷಾರಾಣಾಮತಿಸೇವನಮ್ |
ಪಿತ್ತಕಾಸಕರಂ ಕ್ರೋಧಃ ಸನ್ತಾಪಶ್ಚಾಗ್ನಿಸೂರ್ಯಜಃ ||
ಪೀತನಿಷ್ಠೀವನಾಕ್ಷತ್ವಂ ತಿಕ್ತಾಸ್ಯತ್ವಂ ಸ್ವರಾಮಯಃ |
ಉರೋಧೂಮಾಯನಂ ತೃಷ್ಣಾ ದಾಹೋ ಮೋಹೋ ಽರುಚಿರ್ಭ್ರಮಃ ||
ಪ್ರತತಂ ಕಾಸಮಾನಶ್ಚ ಜ್ಯೋತೀಂಷೀವ ಚ ಪಶ್ಯತಿ |
ಶ್ಲೇಷ್ಮಾಣಂ ಪಿತ್ತಸಂಸೃಷ್ಟಂ ನಿಷ್ಠೀವತಿ ಚ ಪೈತ್ತಿಕೇ || (ಚ 699)

ಪಿತ್ತಜ ಕೆಮ್ಮಿನ ನಿದಾನ ಮತ್ತು ಲಕ್ಷಣ

ಕಾರ, ಉಷ್ಣ, ವಿದಾಹಿ, ಹುಳಿ, ಕ್ಷಾರ, ಇವುಗಳನ್ನು ಅತಿಯಾಗಿ ಸೇವಿಸುವದರಿಂದ, ಸಿಟ್ಟಿನಿಂದ ಮತ್ತು ಅಗ್ನಿಸೂರ್ಯರ ವಿಶೇಷವಾದ ತಾಪದಿಂದ ಪಿತ್ತಜ ಕೆಮ್ಮು ಉಂಟಾಗುತ್ತದೆ. ಕೆಮ್ಮಿಸಿ ಉಗುಳಿದ್ದು ಮತ್ತು ಕಣ್ಣುಗಳು ಅರಸಿನವಾಗಿರುವದು, ಬಾಯಿ ಕಹಿ, ಸ್ವರಭೇದ, ಎದೆಯಲ್ಲಿ ಹೊಗೆಯುಂಟಾಗುವಿಕೆ, ಬಾಯಾರಿಕೆ, ಉರಿ, ಕಣ್ಣುಕತ್ತಲೆ, ಅರುಚಿ, ತಲೆತಿರುಕು, ದೀರ್ಘಕಾಲ ಕೆಮ್ಮಿಸಿ ಜ್ಯೋತಿಗಳ ಹಾಗಿನವುಗಳನ್ನು ಕಾಣುವದು ಮತ್ತು ಹೊರಗೆ ಉಗುಳಿದ ಕಫದಲ್ಲಿ ಪಿತ್ತ ಕೂಡಿರುವದು, ಇವು ಪೈತ್ತಿಕ ಕೆಮ್ಮುರೋಗದ ಲಕ್ಷಣಗಳು.

ಪರಾ ಜ್ವರ, ಬಾಯಿ ಒಣಗುವಿಕೆ ಸಹ ಕಾಣುವವು ಎಂತ ಸು (ಪು. 857)

7. ಗುರ್ವಭಿಷ್ಯನ್ದಿಮಧುರಸ್ನಿಗ್ಧಸ್ವಪ್ನಾವಿಚೇಷ್ಟನೈಃ |
ವೃದ್ಧಃ ಶ್ಲೇಷ್ಮಾನಿಲಂ ರುದ್ಧ್ವಾ ಕಫಕಾಸಂ ಕರೋತಿ ಹಿ ||
ಮನ್ದಾಗ್ನಿತ್ವಾರುಚಿಚ್ಛರ್ದಿಪೀನಸೋತ್ಕ್ಲೇಶಗೌರವೈಃ |
ಲೋಮಹರ್ಷಾಸ್ಯಮಾಧುರ್ಯಕ್ಲೇದಸಂಸದನೈರ್ಯುತಮ್ ||
ಬಹುಲಂ ಮಧುರಂ ಸ್ನಿಗ್ಧಂ ನಿಷ್ಠೀವತಿ ಘನಂ ಕಫಮ್ |
ಕಾಸಮಾನೋಽತಿರುಗ್ವಕ್ಷಃ ಸಂಪೂರ್ಣಮಿವ ಮನ್ಯತೇ ||
(ಚ. 699, 700)

ಕಫಜ ಕೆಮ್ಮಿನ ನಿದಾನ ಮತ್ತು ಲಕ್ಷಣ

ಗುರು, ಅಭಿಷ್ಯನ್ದಿ, ಸಿಹಿ, ಸ್ನಿಗ್ಧ, ಇವುಗಳನ್ನೂ ಅತಿಯಾದ ನಿದ್ರೆಯನ್ನೂ ಸೇವಿಸುವದರಿಂದ ಮತ್ತು ಶ್ರಮವಿಲ್ಲದಿರುವದರಿಂದ ಹೆಚ್ಚಿದ ಕಫವು ವಾಯುವನ್ನು ತಡೆದು ಕಫಜ ಕೆಮ್ಮನ್ನು ಉಂಟುಮಾಡುತ್ತದೆ. ಅಗ್ನಿಮಾಂದ್ಯ, ಅರುಚಿ, ವಾಂತಿ, ನೆಗಡಿ, (ವಾಂತಿಬರುವ ಹಾಗಿನ) ವಾಕರಿಕೆ, ಗುರುತ್ವ, ರೋಮ ನೆಟ್ಟಗಾಗುವಿಕೆ, ಬಾಯಿ ಸಿಹಿ, ಬಾಯಿಂದ ನೀರು ಬಧುವದು, ಆಯಾಸ, ಗಟ್ಟಿಯಾದ, ಸ್ನಿಗ್ಧವಾದ ಮತ್ತು ಸಿಹಿಯಾದ ಕಫವನ್ನು ಬಹಳವಾಗಿ ಉಗುಳುವದು, ಕೆಮ್ಮಿಸುವಾಗ್ಗೆ ಬಹಳ ಎದೆನೋವು ಮತ್ತು ಎದೆ ತುಂಬಿಕೊಂಡ ಹಾಗೆ ಕಾಣುವದು, ಈ ಲಕ್ಷಣಗಳು ಕಫಜ ಕೆಮ್ಮಿನಲ್ಲಿ ಕಾಣುವವು.

ಪರಾ ಬಾಯಿಯಲ್ಲಿ ಆಗ್ರ, ತಲೆನೋವು ಸಹ ಈ ಕೆಮ್ಮಿನಲ್ಲಿ ಕಾಣುವವು ಎಂತ ಸು. (ಪು 857)

8. ಅತಿವ್ಯವಾಯಭಾರಾಧ್ವಯುದ್ಧಾಶ್ವಗಜವಿಗ್ರಹೈಃ ।
ರೂಕ್ಷಸ್ಯೋರಃಕ್ಷತಂ ವಾಯುರ್ಗೃಹೀತ್ವಾ ಕಾಸಮಾವಹೇತ್ ॥
ಕ್ಷತಜ ಕೆಮ್ಮಿನ ನಿದಾನ ಮತ್ತು ಲಕ್ಷಣ
ಸ ಪೂರ್ವಂ ಕಾಸತೇ ಶುಷ್ಕಂ ತತಃ ಷ್ಠೀವೇತ್ಸಶೋಣಿತಮ್ ।
ರುಜಮಾನೇನ ಕಂಠೇನ ವಿರುಗ್ಣೇನೈವ ಚೋರಸಾ ॥
ಸೂಚೀಭಿರಿವ ತೀಕ್ಷ್ಣಾಭಿಸ್ತುದ್ಯಮಾನೇನ ಶೂಲಿನಾ ।
ದುಃಖಸ್ಪರ್ಶೇನ ಶೂಲೇನ ಭೇದಪೀಡಾಭಿತಾಪಿನಾ ॥
ಪರ್ವಭೇದಜ್ವರಶ್ವಾಸತೃಷ್ಣಾವೈಸ್ವರ್ಯಪೀಡಿತಃ ।
ಪಾರಾವತ ಇವಾಕೂಜನ್ ಕಾಸವೇಗಾತ್ಕ್ಷತೋದ್ಭವಾತ್ ॥ (ಚ 700)

ಅತಿಯಾದ ಮೈಥುನ, ಭಾರ ಹೊರುವಿಕೆ, ದಾರಿ ನಡೆ, ಯುದ್ಧ, ಕುದುರೆ-ಆನೆಗಳ ಸವಾರಿ ಮತ್ತು ಕುಸ್ತಿ, ಇವುಗಳಿಂದ ರೂಕ್ಷನಾದವನಲ್ಲಿ ಉಂಟಾಗುವ ಉರಃಕ್ಷತ(ಎದೆಯ ಒಡಕು)ವನ್ನು ವಾಯು ಹಿಡಕೊಂಡು ಕೆಮ್ಮನ್ನು ಉಂಟುಮಾಡುತ್ತದೆ. ಅವನಿಗೆ ಮೊದಲು ಒಣಕೆಮ್ಮು ಉಂಟಾಗಿ, ಕ್ರಮೇಣ ಉಗುಳಿನೊಂದಿಗೆ ರಕ್ತ ಬರುತ್ತದೆ. ಆಗ್ಗೆ ಕಂಠದಲ್ಲಿ ನೋವು, ಎದೆಯಲ್ಲಿ ಕಡಿದ ಹಾಗಿನ (ಅಥವಾ) ಮೊನೆಯುಳ್ಳ ಸೂಜಿಗಳಿಂದ ಚುಚ್ಚಿದ ಹಾಗಿನ ಶೂಲೆ, (ಅಥವಾ) ಮುಟ್ಟಕೂಡದಷ್ಟು ಸೀಳಿದ, ಒತ್ತಿದ ಅಥವಾ ಸುಡುವ ಶೂಲೆ, ಗಂಟುಗಳಲ್ಲಿ ತುಂಡಾದ ಹಾಗಿನ ನೋವು, ಜ್ವರ, ಉಬ್ಬಸ, ಬಾಯಾರಿಕೆ, ಸ್ವರವಿಕಾರದ ಪೀಡ, ಪಾರಿವಾಳದ ಹಾಗಿನ ಕೂಗು, ಇವು ಕ್ಷತದಿಂದುಂಟಾದ ಕೆಮ್ಮಿನ ವೇಗದಿಂದ ಉಂಟಾಗುವ ಲಕ್ಷಣಗಳು.

ಪರಾ ಉರಃಕ್ಷತದ ಹೇತುಗಳೊಳಗೆ ಒಂದು ಅಧ್ಯಯನ ಎಂತ ಸು (ಪ್ರ 857)

9. ವಿಷಮಾಸಾತ್ಮ್ಯಭೋಜ್ಯಾತಿವ್ಯವಾಯಾದ್ವೇಗನಿಗ್ರಹಾತ್ ।
ಘೃಣಿನಾಂ ಶೋಚತಾಂ ನೃಣಾಂ ವ್ಯಾಪನ್ನೇಽಗ್ನೌ ತ್ರಯೋ ಮಲಾಃ ॥
ಕ್ಷಯಜ ಕೆಮ್ಮಿನ ನಿದಾನ ಮತ್ತು ಲಕ್ಷಣ
ಕುಪಿತಾಃ ಕ್ಷಯಜಂ ಕಾಸಂ ಕುರ್ಯುರ್ದೇಹಕ್ಷಯಪ್ರದಮ್ ।
ದುರ್ಗನ್ಧಂ ಹರಿತಂ ರಕ್ತಂ ಷ್ಠೀವೇತ್ಪೂಯೋಪಮಂ ಕಫಮ್ ॥
ಸ್ಥಾನಾದುತ್ಕಾಸಮಾನಶ್ಚ ಹೃದಯಂ ಮನ್ಯತೇ ಚ್ಯುತಮ್ ।
ಅಕಸ್ಮಾದುಷ್ಣಶೀತಾರ್ತೋ ಬಹ್ವಾಶೀ ದುರ್ಬಲಃ ಕೃಶಃ ॥
ಸ್ನಿಗ್ಧಾಚ್ಛಮುಖವರ್ಣತ್ವಕ್ ಶ್ರೀಮದ್ದರ್ಶನಲೋಚನಃ ।
ಪಾಣಿಪಾದತಲೌ ಶ್ಲಕ್ಷ್ಣೌ ಸತತಾಸೂಯಕೋ ಘೃಣೀ ॥
ಜ್ವರೋ ಮಿಶ್ರಾಕೃತಿಸ್ತಸ್ಯ ಪಾರ್ಶ್ವರುಕ್ಪೀನಸೋಽರುಚಿಃ ।
ಭಿನ್ನಸಂಘಾತವರ್ಚಸ್ತ್ವಂ ಸ್ವರಭೇದೋಽನಿಮಿತ್ತತಃ ॥
ಇತ್ಯೇಷಃ ಕ್ಷಯಜಃ ಕಾಸಃ . . । (ಚ. 700)

ವಿಷಮವಾದ ಮತ್ತು ತನ್ನ ದೇಹಕ್ಕೆ ಹಿತವಲ್ಲದ ಭೋಜನ, ಅತಿ ಮೈಥುನ ಮತ್ತು ವೇಗಗಳನ್ನು ತಡೆಯುವದು, ಇವುಗಳ ದೆಸೆಯಿಂದ ಸಮಾಧಾನವಿಲ್ಲದೆ ಶೋಚಿಸುತ್ತಿರುವ ಮನುಷ್ಯರಲ್ಲಿ ಅಗ್ನಿಯು ಕೆಟ್ಟಾಗ್ಗೆ ವಾತಾದಿ ಮೂರು ದೋಷಗಳು ಕೋಪಗೊಂಡು, ಕ್ಷಯಜ ಕೆಮ್ಮನ್ನುಂಟುಮಾಡುತ್ತವೆ. ಆದರಿಂದ ದೇಹದ ಕ್ಷಯ ಉಂಟಾಗುತ್ತದೆ. ಅಂಥಾ ಕೆಮ್ಮುಳ್ಳ

ವಸು ದುರ್ವಾಸನೆಯುಳ್ಳ, ಹಸುರು (ಅಥವಾ) ಕೆಂಪುವರ್ಣದ ಅಥವಾ ಕೀವಿನ ಹಾಗಿನ, ಕಫವನ್ನು ಉಗುಳುವನು; ಕೆಮ್ಮುವಾಗ್ಗೆ ತನ್ನ ಹೃದಯ ಅದರ ಸ್ಥಾನದಿಂದ ಜಾರಿತು ಎಂತ ನೆನಸುತ್ತಾನೆ; ಕಾರಣವಿಲ್ಲದೆ ಒಮ್ಮೆ ಉಷ್ಣದ ಪೀಡೆಯನ್ನೂ ಮತ್ತೊಮ್ಮೆ ಶೀತದ ಪೀಡೆಯನ್ನೂ ಅನುಭವಿಸುತ್ತಾನೆ; ಬಹಳ (ಉಣ್ಣುವ-ತಿನ್ನುವ) ಆಶೆಯುಳ್ಳವನಾಗಿಯೂ, ದುರ್ಬಲನಾಗಿಯೂ, ಕೃಶನಾಗಿಯೂ ಇರುತ್ತಾನೆ; ಜಿಡ್ಡುಳ್ಳ ಮತ್ತು ಸ್ವಚ್ಛವಾದ ಚರ್ಮ ಮತ್ತು ಮುಖದ ವರ್ಣವುಳ್ಳವನಾಗಿಯೂ, ಚೆಲುವಾದ ರೂಪ ಮತ್ತು ಕಣ್ಣುಗಳುಳ್ಳವನಾಗಿಯೂ, ಇರುತ್ತಾನೆ; ಅವನ ಹಸ್ತಪಾದಗಳ ತಲಗಳು ನುಣುಪಾಗಿರುತ್ತವೆ; ಯಾವಾಗಲೂ ಅಸೂಯೆ ಪಡುತ್ತಾ ಬೇಜಾರದಲ್ಲಿ ಇರುತ್ತಾನೆ; ಮತ್ತು ಮಿಶ್ರಲಕ್ಷಣಗಳುಳ್ಳ ಜ್ವರ, ಪಕ್ಕಗಳ ನೋವು, ನೆಗಡಿ, ಅರುಚಿ, ಮಲಕೂಡಿಕೊಂಡು ಒಡೆದು ಹೋಗುವಿಕೆ, ಕಾರಣವಿಲ್ಲದ ಸ್ವರಭೇದ ಸಹ ಕಾಣುವವು; ಇವುಗಳೆಲ್ಲ ಕ್ಷಯಜ ಕೆಮ್ಮಿನ ಲಕ್ಷಣಗಳು.

10. ಇತ್ಯೇಷಃ ಕ್ಷಯಜಃ ಕಾಸಃ ಕ್ಷೀಣಾನಾಂ ದೇಹನಾಶನಃ |
ಯಾಪ್ಯೋ ಬಲವತಾಂ ವಾ ಸ್ಯಾದ್ ಯಾಪ್ಯಸ್ತ್ವೇವಂ ಕ್ಷತೋತ್ಥಿತಃ ||
ಸಾಧ್ಯಾಸಾಧ್ಯ ವಿಚಾರ
ಕದಾಚಿದಪಿ ಸಿಧ್ಯೇತಾಮೇತೌ ಪಾದಗುಣಾನ್ವಿತೌ |
ಸ್ಥವಿರಾಣಾಂ ಜರಾಕಾಸಃ ಸರ್ವೋ ಯಾಪ್ಯಃ ಪ್ರಕೀರ್ತಿತಃ ||
ತ್ರೀನ್ಸಾಧ್ಯಾನ್ಸಾಧಯೇತ್ಪೂರ್ವಾನ್ ಪಥ್ಯೈರ್ಯಾಪ್ಯಾಂಶ್ಚ ಯಾಪಯೇತ್ || (ಚ. 700-1)

ಈ ಕ್ಷಯಜ ಕೆಮ್ಮು ಕ್ಷೀಣರಾದವರ ದೇಹವನ್ನು ನಾಶಮಾಡುವಂಥಾದ್ದು. ಬಲವಂತರಾದವರಲ್ಲಿ ಅದು ಯಾಪ್ಯ. ಹಾಗೆಯೇ ಕ್ಷತದಿಂದ ಉಂಟಾದ ಕೆಮ್ಮು ಯಾಪ್ಯ. ಈ ಎರಡು ವಿಧದ ಕೆಮ್ಮುಗಳು ಒಂದಾನೊಂದು ಸಮಯದಲ್ಲಿ, ಚಿಕಿತ್ಸೆಯ ನಾಲ್ಕು ಪಾದಗಳು ಸರಿಯಾಗಿ ಇದ್ದರೆ, ಸಾಧ್ಯವಾಗುವದುಂಟು. ಮುದುಕರಲ್ಲಿ ಮುದಿತನದಿಂದ ಉಂಟಾದ ಕೆಮ್ಮು ಎಲ್ಲವು ಯಾಪ್ಯ ಎಂತ ಪ್ರಸಿದ್ಧ. ಸಾಧ್ಯವಾದ ಮೊದಲಿನ (ವಾತಜ-ಪಿತ್ತಜ-ಕಫಜ) ಮೂರು ಕೆಮ್ಮುಗಳನ್ನು ತಕ್ಕ ಚಿಕಿತ್ಸೆ ಮಾಡಿ ಸಾಧಿಸಬೇಕು ಮತ್ತು ಯಾಪ್ಯ ಎಂತ ಹೇಳಲ್ಪಟ್ಟವುಗಳನ್ನು ತಕ್ಕ ಪಥ್ಯಗಳಿಂದ ತಡೆಯತಕ್ಕದ್ದು.

ಪರಾ ಕ್ಷಯಜ ಎಂದರೆ ಶುಕ್ರಾದಿ ಧಾತುಕ್ಷಯದಿಂದ ಉತ್ಪನ್ನವಾದ್ದೆಂತಲ್ಲದೆ ರಾಜಯಕ್ಷ್ಮದಿಂದ ಹುಟ್ಟಿದ್ದೆಂತ ಅರ್ಥವಲ್ಲ ಎಂತ ಮ ವ್ಯಾಖ್ಯಾ (ಪುಟ 94) ಆದರೆ, ರಾಜಯಕ್ಷ್ಮ ರೋಗದವನಲ್ಲಿ ವಾತವೇ ಪ್ರಧಾನವಾದ ಮೂರು ದೋಷಗಳು ಕೋಪಗೊಂಡು ಕೆಮ್ಮನ್ನುಂಟುಮಾಡುತ್ತವೆ ಎಂತ ವಾ.ನು ಹೇಳಿ, ಆದರ ಲಕ್ಷಣವಾಗಿ ಮೇಲೆ ಬರೆದ ಕ್ಷಯಜ ಕಾಸದ ಲಕ್ಷಣಗಳನ್ನು ಬರೆದು, ಆ ಕೆಮ್ಮು ಕಂಡನಂತರ ರಾಜಯಕ್ಷ್ಮದ ಎಲ್ಲ ರೂಪಗಳು ಹೊರಗೆ ಬರುತ್ತವೆಂತ ಸ್ಪಷ್ಟವಾಗಿ ಹೇಳಿರುತ್ತಾನೆ (ಪು 195)

11. ರೂಕ್ಷಸ್ಯಾನಿಲಜಂ ಕಾಸಮಾದೌ ಸ್ನೇಹೈರುಪಾಚರೇತ್ |
ಸರ್ಪಿರ್ಭಿರ್ವಸ್ತಿಭಿಃ ಪೇಯಾಯೂಷಕ್ಷೀರರಸಾದಿಭಿಃ ||
ವಾತಜ ಕೆಮ್ಮಿಗೆ ಉಪಕ್ರಮ
ವಾತಘ್ನಸಿದ್ಧೈಃ ಸ್ನೇಹಾದ್ಯೈರ್ಧೂಮೈರ್ಲೇಹೈಶ್ಚ ಯುಕ್ತಿತಃ |
ಅಭ್ಯಂಗೈಃ ಪರಿಷೇಕೈಶ್ಚ ಸ್ನಿಗ್ಧೈಃ ಸ್ವೇದೈಶ್ಚ ಬುದ್ಧಿಮಾನ್ ||
ವಸ್ತಿಭಿರ್ಬದ್ಧವಿಡ್ವಾತಂ ಶುಷ್ಕೋರ್ಧ್ವಂ ಚೋರ್ಧ್ವಭಕ್ತಿಕೈಃ |
ಘೃತೈಃ ಸಪಿತ್ತಂ ಸಕಫಂ ಜಯೇತ್ ಸ್ನೇಹವಿರೇಚನೈಃ || (ಚ. 701)

ವಾತಜ ಕೆಮ್ಮಿನಲ್ಲಿ ರೋಗಿಯು ರೂಕ್ಷನಾಗಿದ್ದರೆ, ಅವನಿಗೆ ಪ್ರಥಮತಃ ಸ್ನೇಹಗಳಿಂದ ಉಪಚರಿಸಬೇಕು. ಬುದ್ಧಿವಂತನಾದವನು ವಾತಹರವಾದ ಔಷಧಗಳಿಂದ ಸಿದ್ಧವಾದ ತುಪ್ಪಗಳಿಂದಲೂ, ವಸ್ತಿಗಳಿಂದಲೂ, ಗಂಜಿ-ಸಾರು-ಹಾಲು-ಮಾಂಸರಸ ಮುಂತಾದವುಗಳಿಂದಲೂ, ಸ್ನೇಹಯುಕ್ತವಾದ ಧೂಮದ ಯೋಗಗಳಿಂದಲೂ, ಲೇಹಗಳಿಂದಲೂ, ಅಭ್ಯಂಗನಗಳಿಂದಲೂ, ಪರಿಷೇಕ(ಧಾರೆ)ಗಳಿಂದಲೂ, ಸ್ನೇಹಯುಕ್ತವಾದ ಬೆವರಿಸುವ ಯೋಗಗಳಿಂದಲೂ, ಯುಕ್ತಿಯಿಂದ (ಸಂಗತ್ಯನುಸಾರವಾಗಿ) ಉಪಚಾರ ಮಾಡುವದಲ್ಲದೆ, ಮಲವನ್ನು ಬದ್ಧ ಮಾಡಿದ ವಾತವನ್ನು ವಸ್ತಿಗಳಿಂದಲೂ, ಒಣಗಿಕೊಂಡು ಮೇಲ್ಮುಖವಾಗಿರುವ ವಾತವನ್ನು, ಪಿತ್ತಯುಕ್ತವಾಗಿದ್ದರೆ, ಊಟದನಂತರ ತುಪ್ಪಗಳನ್ನು ನೆಕ್ಕಿಸುವದರಿಂದಲೂ, ಕಫಯುಕ್ತವಾಗಿದ್ದರೆ, ಸ್ನೇಹವಿರೇಚನಗಳಿಂದಲೂ, ಜಯಿಸತಕ್ಕದ್ದು.

ಷರಾ ಕೆಳಗಿನ 58ನೇ ಸಂಖ್ಯೆ ನೋಡಿ ಪಿತ್ತಯುಕ್ತವಾದ ವಾತಜಕೆಮ್ಮಿಗೆ ಹಾಲುಗಳು ಸಹ ಹಿತ ಎಂತ ವಾ (ಪು 265)

12. ಪಂಚಮೂಲೀಕೃತಕ್ವಾಥಃ ಪಿಪ್ಪಲೀಚೂರ್ಣಸಂಯುತಃ ।
ರಸಾರ್ಧಮಶ್ನತೋ ನಿತ್ಯಂ ವಾತಕಾಸಮುದಸ್ಯತಿ ॥ (ರ. ರ. 338)

ಪಂಚಮೂಲ ಕಷಾಯ ಹ್ರಸ್ವಪಂಚಮೂಲಗಳ ಕಷಾಯವನ್ನು, ಹಿಪ್ಪಲಿಚೂರ್ಣ ಕೂಡಿಸಿಕೊಂಡು, ಸಾರಿನ ಬದಲಿಗೆ ನಿತ್ಯದಲ್ಲು ಊಟಕ್ಕೆ ಉಪಯೋಗಿಸುತ್ತಾ ಬಂದಲ್ಲಿ, ವಾತಕಾಸವು ಅಡಗಿಹೋಗುತ್ತದೆ.

13. ಕಂಟಿ(?ಟ)ಕಾರೀಗುಡೂಚೀಭ್ಯಾಂ ಪೃಥಕ್ತ್ರಿಂಶತ್ಪಲಾದ್ರಸೇ ।
ಪ್ರಸ್ಥಃ ಸಿದ್ಧೋ ಘೃತಾದ್ವಾತಕಾಸನುದ್ವಹ್ನಿದೀಪನಃ ॥ (ಚ 701)

ಕಂಟಕಾರ್ಯಾದಿ ಘೃತ ಕಿರೀಗುಳ್ಳದ ಬೇರು 30 ಪಲದ (ಅಷ್ಟಾವಶೇಷ) ಕಷಾಯ, ಅಮೃತಬಳ್ಳಿ ೩೦ ಪಲದ (ಚಾತುರ್ಭಾಗಾವಶೇಷ) ಕಷಾಯ, ಈ ಕಷಾಯಗಳಲ್ಲಿ ೧ ಪ್ರಸ್ಥ ದನದ ತುಪ್ಪವನ್ನು ಕಾಯಿಸಿಟ್ಟುಕೊಂಡು, ಪಾನಮಾಡುತ್ತಾ ಒಂದಲ್ಲಿ ವಾತಜ ಕೆಮ್ಮು ಪರಿಹಾರವಾಗುವದು ಮತ್ತು ಅಗ್ನಿದೀಪನವಾಗುವದು.

14. ಪಿಪ್ಪಲೀಪಿಪ್ಪಲೀಮೂಲಚವ್ಯಚಿತ್ರಕನಾಗರೈಃ ।
ಧಾನ್ಯಪಾಠಾವಚಾರಾಸ್ನಾಯಷ್ಟ್ಯಾಹ್ವಕ್ಷಾರಹಿಂಗುಭಿಃ ॥
ಪಿಪ್ಪಲ್ಯಾದಿಘೃತ ಕೋಲಮಾತ್ರೈರ್ಘೃತಪ್ರಸ್ಥಾದ್ದಶಮೂಲೀರಸಾಢಕೇ ।
ಸಿದ್ಧಾಂ ಚತುರ್ಥಿಕಾಂ ಪೀತ್ವಾ ಪೇಯಾಮಂಡಂ ಪಿಬೇದನು ॥
ತಚ್ಛ್ವಾಸಕಾಸಹೃತ್ಪಾರ್ಶ್ವಗ್ರಹಣೀದೋಷಗುಲ್ಮನುತ್ ।
ಪಿಪ್ಪಲ್ಯಾದ್ಯಂ ಘೃತಂ ಚೈತದಾತ್ರೇಯೇಣ ಪ್ರಕೀರ್ತಿತಮ್ ॥
(ಚ 701)

ಹಿಪ್ಪಲಿ, ಹಿಪ್ಪಲಿಮೂಲ, ಕಾಡುಮೆಣಸಿನ ಬೇರು, (ಶುದ್ಧ) ಚಿತ್ರಮೂಲದ ಬೇರಿನ ಸಿಪ್ಪೆ, ಶುಂಠಿ, ಕೊತ್ತುಂಬರಿ, ಪಾಡಾವಳಿಗಡ್ಡೆ, ಬಜೆ, ಅರತೆ. ಜ್ಯೇಷ್ಠಮಧು, ಯವಕ್ಷಾರ, (ಹುರಿದ) ಹಿಂಗು, ಇವು ಮುಕ್ಕಾಲು ತೊಲೆ ಪ್ರಕಾರ ಕೂಡಿಸಿ ಮಾಡಿದ ಚೂರ್ಣದ ಕಲ್ಕ,

(೮ ಸೇರು) ದಶಮೂಲಗಳ (ಅಷ್ಟಾವಶೇಷ) ಕಷಾಯ ಪ್ರಸ್ಥ ೪, ದನದ ತುಪ್ಪ ಪ್ರಸ್ಥ ೧, ಇವುಗಳನ್ನು ಕೂಡಿಸಿ ಪಾಕಮಾಡಿದ ಘೃತವನ್ನು ೧ ಪಲ ಪ್ರಕಾರ ಸೇವಿಸಿ ಅನುಪಾನವಾಗಿ ಗಂಜಿಯ ನೀರನ್ನು ಕುಡಿಯತಕ್ಕದ್ದು. ಇದರಿಂದ ಉಬ್ಬಸ, ಕೆಮ್ಮು, ಎದೆಶೂಲೆ, ಪಕ್ಕೆಗಳ ಶೂಲೆ, ಗ್ರಹಣೀದೋಷ, ಗುಲ್ಮ ಸಹ ಪರಿಹಾರವಾಗುವವು. ಇದು ಆತ್ರೇಯನಿಂದ ನಿರ್ಮಿಸಲ್ಪಟ್ಟು ಪ್ರಖ್ಯಾತಿಗೊಂಡ ಪಿಪ್ಪಲ್ಯಾದಿಘೃತ

15. ವಿಡಂಗಂ ನಾಗರಂ ರಾಸ್ನಾಂ ಪಿಪ್ಪಲೀಹಿಂಗುಸೈಂಧವೈಃ ।
ವಿಡಂಗಾದಿ ಚೂರ್ಣ ಭಾರ್ಗೀಂ ಕ್ಷಾರಶ್ಚ ತಚ್ಚೂರ್ಣಂ ಪಿಬೇದ್ವಾ ಘೃತಮಾತ್ರಯಾ ||
ಸಕಫೇ ऽನಿಲಜೇ ಕಾಸೇ ಶ್ವಾಸಹಿಕ್ಕಾಹತಾಗ್ನಿಷು । (ಚ. 702)

ವಾಯುವಿಳಂಗ, ಶುಂಠಿ, ಅರತೆ (ರಾಸ್ನೆ), ಹಿಪ್ಪಲಿ, (ಹುರಿದ) ಹಿಂಗು, ಸೈಂಧವಲವಣ, ಗಂಟುಭಾರಂಗಿ (ನಿರ್ವಿಷದ) ಬೇರು, ಯವಕ್ಷಾರ, ಇವುಗಳ ಚೂರ್ಣವನ್ನು ತಕ್ಕ ಪ್ರಮಾಣದ ತುಪ್ಪ ಕೂಡಿಸಿ, ಸೇವಿಸುವದರಿಂದ ಕಫ ಕೂಡಿದ ವಾತಜ ಕೆಮ್ಮು, ಉಬ್ಬಸ, ಬಿಕ್ಕಟ್ಟು, ಅಗ್ನಿಮಾಂದ್ಯ ಸಹ ಪರಿಹಾರವಾಗುವವು.

16 ದುರಾಲಭಾಂ ಶಟೀಂ ದ್ರಾಕ್ಷಾಂ ಶೃಂಗವೇರಂ ಸಿತೋಪಲಾಮ್ ।
ಲಿಹ್ಯಾತ್ಕರ್ಕಟಶೃಂಗೀಂ ಚ ಕಾಸೇ ತೈಲೇನ ವಾತಜೇ || (ಚ. 702)

ದುರಾಲಭಾದಿ ಚೂರ್ಣ

ಬಳ್ಳಿತುರಚನ ಬೇರು, ಸಣ್ಣ ಕಚೂರ, ದ್ರಾಕ್ಷೆ, ಶುಂಠಿ, ಕರ್ಕಟಶೃಂಗಿ, ಕಲ್ಲುಸಕ್ಕರೆ, ಇವುಗಳ ಚೂರ್ಣವನ್ನು ವಾತಜ ಕೆಮ್ಮಿನಲ್ಲಿ ಎಳ್ಳೆಣ್ಣೆಯಲ್ಲಿ ಕಲಸಿ ನೆಕ್ಕತಕ್ಕದ್ದು.

17 ದುಸ್ಪರ್ಶಾಂ ಪಿಪ್ಪಲೀಂ ಮುಸ್ತಾಂ ಭಾರ್ಙ್ಗೀಂ ಕರ್ಕಟಕೀಂ ಶಟೀಮ್ ।
ಪುರಾಣಗುಡತೈಲಾಭ್ಯಾಂ ಚೂರ್ಣಿತಾನ್ಯವಲೇಹಯೇತ್ ||
ಬೇರೆ ಕೆಲವ ಚೂರ್ಣ ಯೋಗಗಳು ತದ್ವತ್ಸಕೃಷ್ಣಾಂ ಶುಂಠೀಂ ಚ ಸಭಾರ್ಙ್ಗೀಂ ತದ್ವದೇವ ಚ ।
ಪಿಬೇಚ್ಚ ಕೃಷ್ಣಾಂ ಕೋಷ್ಣೇನ ಸಲಿಲೇನ ಸಸೈಂಧವಾಮ್ ||
ಮಸ್ತುನಾ ಸಸಿತಾಂ ಶುಂಠೀಂ ದಧ್ನಾ ವಾ ಕಣರೇಣುಕಾಮ್ ।
(ವಾ. 266)

ಬಳ್ಳಿತುರಚನ ಬೇರು, ಹಿಪ್ಪಲಿ, ಭದ್ರಮುಷ್ಟಿ, ಗಂಟುಭಾರಂಗಿ (ನಿರ್ವಿಷ), ಕರ್ಕಟಶೃಂಗಿ, ಕಚೂರ, ಇವುಗಳ ಚೂರ್ಣವನ್ನು, ಅಥವಾ ಹಿಪ್ಪಲಿ-ಶುಂಠಿಗಳ ಚೂರ್ಣವನ್ನು, ಅಥವಾ ಗಂಟುಭಾರಂಗಿ-ಶುಂಠಿಗಳ ಚೂರ್ಣವನ್ನು, ಹಳೇ ಬೆಲ್ಲ ಮತ್ತು ಎಳ್ಳೆಣ್ಣೆ ಕೂಡಿಸಿಕೊಂಡು, ಸೇವಿಸುವದು. ಹಿಪ್ಪಲಿಚೂರ್ಣಕ್ಕೆ ಸೈಂಧವಲವಣವನ್ನು ಕೂಡಿಸಿ ಸುಖೋಷ್ಣವಾದ ನೀರಿನಿಂದ, ಅಥವಾ ಶುಂಠಿಚೂರ್ಣಕ್ಕೆ ಸಕ್ಕರೆ ಕೂಡಿಸಿ ಮೊಸರನೀರಿನಿಂದ, ಅಥವಾ ಕಾಡು(ಕಾಳ)ಜೀರಿಗೆ ಮತ್ತು ರೇಣಿಕೆ ಬೀಜಗಳ ಚೂರ್ಣವನ್ನು ಮೊಸರಿನಿಂದ, ಕುಡಿಯುವದು.

ಸೈಂಧವಂ ಪಿಪ್ಪಲೀಂ ಭಾಂಗೀಂ ಶೃಂಗವೇರಂ ದುರಾಲಭಾಮ್ ।
ದಾಡಿಮಾಮ್ಲೇನ ಕೋಷ್ಣೇನ ಭಾಂಗೀನಾಗರಮಂಬುನಾ ||
ಪಿಬೇತ್ಖದಿರಸಾರಂ ವಾ ಮದಿರಾದಧಿಮಸ್ತುಭಿಃ ।
ಅಥವಾ ಪಿಪ್ಪಲೀಕಲ್ಕಂ ಘೃತಭೃಷ್ಟಂ ಸಸೈಂಧವಮ್ || (ಚ 703)

ಸೈಂಧವಲವಣ, ಹಿಪ್ಪಲೀ, ಗಂಟುಭಾರಂಗೀ (ನಿರ್ವಿಷ), ಶುಂಠಿ, ಬಳ್ಳಿತುರಚನ ಬೇರು, ಇವುಗಳ ಚೂರ್ಣವನ್ನು ಹುಳಿದಾಳಿಂಬದ ಹಣ್ಣಿನ ರಸದಲ್ಲಿ, ಅಥವಾ ಗಂಟುಭಾರಂಗೀ-ಶುಂಠಿಗಳ ಚೂರ್ಣವನ್ನು ಸುಖೋಷ್ಣವಾದ ನೀರಿನಲ್ಲಿ, ಅಥವಾ ಕಾಚಿನ ಚೂರ್ಣವನ್ನು ಅಥವಾ ತುಪ್ಪದಲ್ಲಿ ಹುರಿದ ಹಿಪ್ಪಲಿಯ ಚೂರ್ಣವನ್ನು ಸೈಂಧವಲವಣಯುಕ್ತವಾಗಿ ಹೆಂಡ, ಮೊಸರು, (ಅಥವಾ) ಮೊಸರ ನೀರಿನಲ್ಲಿ ಕದಡಿ ಪಾನಮಾಡತಕ್ಕದ್ದು.

18. ದಶಮೂಲೀಂ ಸ್ವಯಂಗುಪ್ತಾಂ ಶಂಖಪುಷ್ಪೀಂ ಶಟೀಂ ಬಲಾಮ್ ।
ಹಸ್ತಿಪಿಪ್ಪಲ್ಯಪಾಮಾರ್ಗಪಿಪ್ಪಲೀಮೂಲಚಿತ್ರಕಾನ್ ॥
ಅಗಸ್ತ್ಯ ಹರೀತಕೀ ರಸಾಯನ
ಭಾಂಗೀಂ ಪುಷ್ಕರಮೂಲಂ ಚ ದ್ವಿಪಲಾಂಶಂ ಯವಾಢಕಮ್ ।
ಹರೀತಕೀಶತಂ ಚೈಕಂ ಜಲಪಂಚಾಢಕೇ ಪಚೇತ್ ॥
ಯವೇ ಸ್ವಿನ್ನೇ ಕಷಾಯಂ ತಂ ಪೂತಂ ತಚ್ಚಾಭಯಾಶತಮ್ ।
ಪಚೇದ್ಗುಡತುಲಾಂ ದತ್ವಾ ಕುಡವಂ ಚ ಪೃಥಕ್ ಘೃತಾತ್ ॥
ತೈಲಾತ್ಸಪಿಪ್ಪಲೀಚೂರ್ಣಾತ್ಸಿದ್ಧಶೀತೇ ಚ ಮಾಕ್ಷಿಕಾತ್ ।
ಲಿಹ್ಯಾದ್ದ್ವೇ ಚಾಭಯೇ ನಿತ್ಯಮತಃ ಖಾದೇದ್ರಸಾಯನಾತ್ ॥
ತದ್ವಲೀಪಲಿತಂ ಹನ್ತಿ ವರ್ಣಾಯುರ್ಬಲವರ್ಧನಮ್ ।
ಪಂಚ ಕಾಸಾನ್ ಕ್ಷಯಂ ಕಾ(?ಶ್ವಾ)ಸಂ ಹಿಕ್ಕಾಂ ಸವಿಷಮಜ್ವರಾಮ್ ॥
ಹನ್ಯಾತ್ತಥಾರ್ಶೋಗ್ರಹಣೀಹೃದ್ರೋಗಾರುಚಿಪೀನಸಾನ್ ।
ಅಗಸ್ತ್ಯವಿಹಿತಂ ಶ್ರೇಷ್ಠಂ ರಸಾಯನಮಿದಂ ಶುಭಮ್ ॥ (ಚ 703)

ದಶಮೂಲಗಳು (ಪ್ರತ್ಯೇಕವಾಗಿ), ನಾಯಿಸೋಣಗಿನ ಬೀಜ (ಅಥವಾ ಬೇರು), ಬಿಳೀ ಶಂಖಪುಷ್ಪದ ಬೇರು, ಸಣ್ಣ ಕಚೋರ, ಕಲ್ಲಂಗಡಲೇ ಬೇರು, ಗಜಹಿಪ್ಪಲಿ, ಉತ್ತರಣೆ ಬೇರು, ಹಿಪ್ಪಲಿಮೂಲ, ಶುದ್ಧ ಚಿತ್ರಮೂಲದ ಬೇರು, ಗಂಟುಭಾರಂಗಿ (ನಿರ್ವಿಷದ) ಬೇರು, ಪುಷ್ಕರಮೂಲ, ಇವುಗಳೆಲ್ಲಾ ಎರಡು ಪಲ ಪ್ರಕಾರ, ಯವೆಗೋದಿ ೧ ಆಢಕ, ಅಣಲೆಕಾಯಿ ೧೦೦, ನೀರು ೫ ಆಢಕ, ಇವುಗಳನ್ನು ಒಟ್ಟಾಗಿ ಬೇಯಿಸುವದು; ಯವೆಗೋದಿ ಬೆಂದು ಮೆತ್ತಗಾದ ಮೇಲೆ (ನೀರು ಕಾಲಂಶಕ್ಕೆ ಬತ್ತಿದಾಗ) ಶೋಧಿಸಿ, ಆ ಕಷಾಯವನ್ನೂ ಅಣಲೆ ಕಾಯಿ ೧೦೦ನ್ನೂ, ೧೦೦ ಪಲ ಬೆಲ್ಲವನ್ನೂ, ೧ ಕುಡವ ತುಪ್ಪ, ೧ ಕುಡವ ಎಳ್ಳೆಣ್ಣೆ ಮತ್ತು ೧ ಕುಡವ ಪಿಪ್ಪಲೀಚೂರ್ಣ, ಇವುಗಳನ್ನು ಬೆರಿಸಿ, ಪಾಕಮಾಡುವದು; ಲೇಹಪಾಕ ಬಂದ ಕೂಡಲೆ ಪಾತ್ರವನ್ನು ಒಲೆ ಮೇಲಿಂದ ಕೆಳಗೆ ಇಳಿಸಿ ಮಗಚುತ್ತ, ಲೇಹ ತಣಿದ ಮೇಲೆ ಅದಕ್ಕೆ ೧ ಕುಡವ ಜೇನನ್ನು ಕೂಡಿಸಿಟ್ಟುಕೊಳ್ಳುವದು. ಅದರಿಂದ ಅಣಲೆಕಾಯಿಗಳನ್ನು ಎರಡೆರಡರಂತೆ ಪ್ರತಿದಿನ ತಿಂದು, ರಸಾಯನಭಾಗವನ್ನು ನೆಕ್ಕುತ್ತಾ ಬಂದಲ್ಲಿ, ಚರ್ಮದ ನೆರಿ, ಹಣ್ಣು ಕೂದಲು, ಐದು ವಿಧವಾದ ಕೆಮ್ಮುಗಳು, ಕ್ಷಯ, ಉಬ್ಬಸ, ಬಿಕ್ಕಟ್ಟು, ವಿಷಮ ಜ್ವರ, ಮೂಲವ್ಯಾಧಿ, ಗ್ರಹಣೀರೋಗ, ಹೃದ್ರೋಗ, ಅರುಚಿ ಮತ್ತು ಪೀನಸ ನಾಶವಾಗುವ ವಲ್ಲದೆ, ವರ್ಣ, ಆಯುಷ್ಯ ಮತ್ತು ಬಲ ವೃದ್ಧಿಯಾಗುವವು. ಈ ಶ್ರೇಷ್ಠವೂ ಶುಭಕರವೂ ಆದ ರಸಾಯನವು ಅಗಸ್ತ್ಯ ಋಷಿಗಳಿಂದ ನಿರ್ಮಿತವಾದದ್ದು.

ಪಠಾ: ಆರ್ದ್ರದ್ರವ್ಯದ್ರವದ್ರವ್ಯಪಲೈರಷ್ಟಾಭಿರೇವಚ |
ಶುಷ್ಕದ್ರವ್ಯಚತುಷ್ಕೇಣ ಕುಡವಃ ಸಮುದಾಹೃತಃ ||

(ಚಿ. ಸಾ. ಸಂ. 255)

(ಅಂದರೆ ಹಸಿಪದಾರ್ಥ ಅಥವಾ ದ್ರವಪದಾರ್ಥ ಆದರೆ ೮ ಪಲಗಳಿಂದ, ಒಣಗಿದ ಪದಾರ್ಥವಾದರೆ ೪ ಪಲಗಳಿಂದ, ಒಂದು ಕುಡವ ಎಂತ ಹೇಳಲ್ಪಟ್ಟಿದೆ.) ಈ ಆಧಾರ ಪ್ರಕಾರ ಮೇಲಿನ ಯೋಗದಲ್ಲಿ ತುಪ್ಪ, ಎಣ್ಣೆ ಮತ್ತು ಜೇನನ್ನು ೮ ಪಲ ಪ್ರಕಾರ, ಹಿಪ್ಪಲಿಯ ಚೂರ್ಣವನ್ನು ೪ ಪಲ ಸೇರಿಸತಕ್ಕದ್ದು.

ಯವಗೋಧೂಮಮಾಷಾಶ್ಚ ತಿಲಾಶ್ಚಾಪಿ ನವಾ ಹಿತಾಃ |
ಪುರಾಣಾ ವಿರಸಾ ರೂಕ್ಷಾ ನ ತದರ್ಥಕರಾ ಸ್ಮೃತಾಃ ||

(ಚಿ. ಸಾ. ಸಂ. 255-6)

(ಅಂದರೆ ಯವೆ, ಗೋದಿ, ಉದ್ದು ಮತ್ತು ಎಳ್ಳು ಹೊಸತಾಗಿರುವವು ಹಿತ; ಹಳೇದಾಗಿ, ರುಚಿಕೆಟ್ಟು, ರೂಕ್ಷವಾಗಿದ್ದರೆ, ಅವು ಸಾರ್ಥಕವಲ್ಲ ಎಂತ ತಿಳಿಯುತ್ತಾರೆ.) ಎಂಬ ಪ್ರಮಾಣ ಪ್ರಕಾರ ಯವೆಗೋದಿಯನ್ನು ಹೊಸತಾಗಿರುವದನ್ನೇ ಆರಿಸಿ ಉಪಯೋಗಿಸತಕ್ಕದ್ದು.

'ಹರೀತಕ್ಯೋಽಪಿ ನವಾ ಗ್ರಾಹ್ಯಾಃ' (ಚಿ. ಸಾ. ಸಂ. 256) ಎಂತ ಉಪದೇಶವಿರುವದರಿಂದ ಮೇಲಿನ ಯೋಗಕ್ಕೆ ಹೊಸತಾಗಿರುವ ಅಣಿಲೆಕಾಯಿಗಳನ್ನು ತೆಗೆದುಕೊಳ್ಳಬೇಕು; ಮತ್ತು

ನವಾ ಸ್ನಿಗ್ಧಾ ಘನಾ ವೃತ್ತಾ ಗುರ್ವೀ ಕ್ಷಿಪ್ತಾ ಚ ಯಾಮ್ಭಸಿ |
ನಿಮಜ್ಜೇತ್ಸಾ ಪ್ರಶಸ್ತಾ ಚ ಕಥಿತಾತಿಗುಣಪ್ರದಾ || (ಭಾ. ಪ್ರ. 79)

'ಯಾವ ಅಣಿಲೆಕಾಯಿ ಹೊಸತಾಗಿ, ತೈಲ ಉಳ್ಳದ್ದಾಗಿ, ಗಟ್ಟಿಯಾಗಿ, ಉರುಟಾಗಿ ಮತ್ತು ಭಾರವುಳ್ಳದ್ದಾಗಿ ಇದ್ದು, ನೀರಿನಲ್ಲಿ ಹಾಕಲ್ಪಟ್ಟರೆ ಮುಳುಗುತ್ತದೋ, ಅದು ಪ್ರಶಸ್ತ ಮತ್ತು ಅತ್ಯಂತ ಗುಣಕಾರಿ'. ಆದ್ದರಿಂದ ಅಣಿಲೆಕಾಯಿಗಳು ಅಂಥಾ ಗುಣವಿಶೇಷವುಳ್ಳವಾಗಿರಬೇಕು.

ಅಣಿಲೆಕಾಯಿಯಲ್ಲಿ ಹೊರಗೆ ಸಿಪ್ಪೆ ಅಥವಾ ಮಾಂಸ ಭಾಗ, ಮಧ್ಯೇ ಗೊರಟು ಅಥವಾ ಎಲುಬು, ಅದರೊಳಗೆ ಗರ್ಭ ಅಥವಾ ಮಜ್ಜೆ, ಹೀಗೆ ಮೂರು ಅವಯವಗಳು ಇರುತ್ತವೆ. ಅಣಿಲೆಕಾಯಿಯನ್ನು ಒಣಗಿಸಿ, ಜಜ್ಜಿ, ಗೊರಟನ್ನು ತೆಗೆದುಬಿಟ್ಟು, ಸಿಪ್ಪೆಯನ್ನು ಮಾತ್ರ ಕಷಾಯಾದಿಗಳಿಗೆ ಯೋಗೋಕ್ತ ಪ್ರಮಾಣದಲ್ಲಿ ಉಪಯೋಗಿಸುವದು ರೂಢಿಯಾಗಿರುತ್ತದೆ. ಇದು ವಿಧಿಗನುಸಾರವಾದದ್ದು (ಸು. 167). ಮಜ್ಜೆಯು ತಾರೆಕಾಯಿಯ ಮಜ್ಜೆಯಂತೆ, ಸೀಯಾಗಿ ರುಚಿಯುಳ್ಳದ್ದಾಗಿದ್ದರೂ, ಅದನ್ನು ಔಷಧವಾಗಿ ಉಪಯೋಗಿಸುವದಿಲ್ಲ. ಗೊರಟನ್ನು ಔಷಧವಾಗಿ ಉಪಯೋಗಿಸುವದುಂಟು ಎಂತ ಪುಸ್ತಕಗಳಿಂದ ಕಾಣುತ್ತದೆ. ಅದು ಕರಟದಂತೆ ಬಹಳ ಗಟ್ಟಿಯಾಗಿ, ಬೇಯಿಸಲ್ಪಟ್ಟಾಗ್ಯೂ ಮೆತ್ತಗಾಗುವ ಸ್ವಭಾವದ್ದಲ್ಲವಾದ್ದರಿಂದ, ಕ್ಷಾರರೂಪವಾಗಿಯಲ್ಲದೆ ಔಷಧವಾಗಿ ಉಪಯೋಗಿಸುವದಕ್ಕೆ ಯೋಗ್ಯವಾದ್ದಲ್ಲ.

ಈ ಯೋಗದಲ್ಲಿ ಉಪಯೋಗಿಸಬೇಕಾದ ಅಣಿಲೆಕಾಯಿಗಳ ಸಂಖ್ಯೆಯಲ್ಲದೆ ತೂಕ ಇಂತಿಷ್ಟೆಂತ ಹೇಳಲ್ಪಟ್ಟಿರುವದಿಲ್ಲ; ಗೊರಟನ್ನು ತೆಗೆದುಬಿಡುವ ಪ್ರಸ್ತಾವವೂ ಇಲ್ಲ. ಕೆಲವು

ವ್ಯಾಖ್ಯಾನಕಾರರು ಅಣಿಲೆಕಾಯಿಗಳು ಕಷಾಯಪಾಕದಲ್ಲಿ ಬೆಂದ ಮೇಲೆ, ಅವುಗಳನ್ನು ಲೇಹಪಾಕಕ್ಕೆ ಸೇರಿಸುವದಕ್ಕೆ ಮುಂದಾಗಿ, ಗೊರಟನ್ನು ತೆಗೆದುಬಿಡಬೇಕೆಂತ ಬರೆದಿದ್ದಾರೆ. ಒಬ್ಬರು ಹಾಗೆ ಬೆಂದ ಕಾಯಿಗಳನ್ನು ಸೂಜಿ, ದಬ್ಬಣ ಮುಂತಾದ ಮೊನೆಯುಳ್ಳ ಶಸ್ತ್ರದಿಂದ ಸುತ್ತಲು ಚುಚ್ಚಿ ಗಾಯ ಮಾಡಿ, ರಸಾಯನ ಪಾಕದ ದ್ರವ್ಯಗಳೊಂದಿಗೆ ಸೇರಿಸಬೇಕೆಂತ ಬರೆದಿದ್ದಾರೆ. ಗೊರಟನ್ನು ತೆಗೆದುಬಿಡುವದು ಅಗತ್ಯವಲ್ಲ ಎಂಬದು ಅವರ ಮತ ಎಂತ ಅದರಿಂದ ಸ್ಪಷ್ಟವಾಗುತ್ತದೆ. ಇನ್ನೊಬ್ಬರು ಈ ಎರಡು ಕ್ರಮಗಳನ್ನೂ ಎತ್ತಿರುವದಿಲ್ಲ. ಗೊರಟನ್ನು ತೆಗೆಯಬೇಕೆನ್ನುವವರು ಸಿಪ್ಪೆಭಾಗವನ್ನು, ಯೋಗದಲ್ಲಿ ಉಕ್ತವಾದ ತುಪ್ಪ ಮತ್ತು ತೈಲವಲ್ಲಿ ಹುರಿದುಕೊಂಡು, ರಸಾಯನ ಪಾಕಕ್ಕೆ ಸೇರಿಸಬೇಕೆಂತ ಬರೆದಿದ್ದಾರೆ.

ಇದಲ್ಲದೆ ಯೋಗದಲ್ಲಿ ಅಣಿಲೆಕಾಯಿ ಎರಡನ್ನು ತಿಂದು ರಸಾಯನವನ್ನು ನೆಕ್ಕಬೇಕೆಂತ ಮಾತ್ರವಲ್ಲದೆ, ನೆಕ್ಕಬೇಕಾದ ರಸಾಯನ ಎಷ್ಟು ಎಂಬದು ಸ್ಪಷ್ಟವಾಗಿ ಹೇಳಲ್ಪಟ್ಟಿರುವದಿಲ್ಲ. ಒಂದೊಂದು ಕಾಯಿಯಲ್ಲಿ ಅರ್ಧ ಪಲದಷ್ಟು ರಸಾಯನ ಹಿಡಿದುಕೊಂಡಿರುತ್ತದೆ, ಆದ್ದರಿಂದ ಎರಡು ಕಾಯಿಗಳನ್ನು ತಿನ್ನಬೇಕೆಂತ ಹೇಳಿದ್ದರಿಂದಲೇ ಒಂದು ಪಲದಷ್ಟು ರಸಾಯನವನ್ನು ನೆಕ್ಕಬೇಕೆಂತ ಅರ್ಥವಾಗುತ್ತದೆ ಎಂಬದು ಕೆಲವು ವ್ಯಾಖ್ಯಾನಕಾರರ ಮತ. ಬೇರೆ ಕೆಲವರು ತಿನ್ನಬೇಕಾದ ಅಣಿಲೆಕಾಯಿ ಸಂಖ್ಯೆಯಷ್ಟೇ ನೆಕ್ಕಬೇಕಾದ ರಸಾಯನದ ಪಲ ತೂಕ, ಅಂದರೆ ಎರಡು ಪಲ, ಎಂತ ಬರೆದದ್ದು ಕಾಣುತ್ತದೆ. ಇನ್ನು ಕೆಲವರು ಸೇವಿಸಬೇಕಾದ ರಸಾಯನದ ಪ್ರಮಾಣವನ್ನು, ರೋಗಿಯ ಬಲಾಬಲ ನೋಡಿಕೊಂಡು, ವೈದ್ಯನು ಸಂಗತ್ಯಾನುಸಾರವಾಗಿ ನಿಶ್ಚಯಿಸತಕ್ಕದ್ದು ಎಂತ ಹೇಳಿದ್ದಾರೆ.

ರಸಾಯನ ಪಾಕಾರಂಭಕ್ಕೆ ಮೊದಲೇ ಕಾಯಿಗಳ ಗೊರಟುಗಳನ್ನು ತೆಗೆದುಬಿಟ್ಟರೆ. ಆ ಕಾಯಿಗಳ ಮಾಂಸಭಾಗಗಳು ಪೂರ್ಣವಾಗಿ ಕಡಿಯದೆ ಮತ್ತು ಪುನಃ ಪಾಕದಲ್ಲಿ ಕರಗದೆ ಎಣಿಕೆಗೆ ಬೇರೆ ಬೇರೆಯಾಗಿ ಪಾಕಾನಂತರ ಸಿಕ್ಕುವದು ಕಷ್ಟ. ಅವುಗಳನ್ನು ಸ್ನೇಹಗಳಲ್ಲಿ ಮುಂದಾಗಿ ಹುರಿದರೆ ಬೆಲ್ಲದ ಪಾಕವು ಅವುಗಳಿಗೆ ಅಂಟುವದು ಕಡಿಮೆಯಾಗಬಹುದು. ಸಿಪ್ಪೆಗಳನ್ನು ಕಡಿಯದಂತೆ ಸುರಕ್ಷಿತವಾಗಿಡುವದಕ್ಕೆ ಅದರಿಂದ ಪ್ರಯೋಜನ ಸಿಕ್ಕಲಾರದು. ಹಾಗೆ ಗೊರಟನ್ನು ತೆಗೆಯುವದಾಗಲಿ, ಸಿಪ್ಪೆಯನ್ನು ಹುರಿಯುವದಾಗಲಿ, ಯೋಗಕರ್ತೃಗಳ ಉದ್ದೇಶಕ್ಕೆ ಅಗತ್ಯವಾಗಿ ಕಾಣುವದಿಲ್ಲ. ಕಾಯಿಗಳನ್ನು ಇಡಿಯಾಗಿಯೇ ಇರಿಸಿ ಹೊರಭಾಗದಲ್ಲಿ ಅಲ್ಲಲ್ಲಿ ಚುಚ್ಚಿ ಒಟ್ಟೆಗಳನ್ನು ಮಾಡುವದರಿಂದ ರಸಾಯನಾಂಶವು ಆ ಸಿಪ್ಪೆಗಳೊಳಗೆ ವ್ಯಾಪಿಸುವದಕ್ಕೆ ಸಹಾಯವಾಗುತ್ತದಾದ್ದರಿಂದ ಹಾಗೆ ಮಾಡುವದು ಒಳ್ಳೇದು ಮತ್ತು ನಿರಾಕ್ಷೇಪವಾದದ್ದು.

ರಸಾಯನಕ್ಕೆ ಸೇರಿದ ೧೦೦ ಅಣಿಲೆಕಾಯಿಗಳಲ್ಲಿ ಸರ್ತಿಗೆ ೨ರಂತೆ ತಿನ್ನಬೇಕಾಗಿ ಹೇಳಲ್ಪಟ್ಟದರಿಂದ, ರಸಾಯನವೆಲ್ಲ ೫೦ ಸರ್ತಿಗಳಲ್ಲಿ ಮುಗಿಯಬೇಕೆಂತ ಅರ್ಥವಾಗುತ್ತದೆ. ಬೆಲ್ಲ ಪಲ ೧೦೦, ಘೃತತೈಲಮಧುಹಿಪ್ಪಲಿಗಳ ಪಲ ೨೮ ಮತ್ತು ಕಷಾಯಜೀನಸುಗಳು ಪಲ ೧೨೦ರ ಸಾರ, ಸೇರಿರುವ ರಸಾಯನದ ಭಾರವು ಸುಮಾರು ೧೫೦ ಪಲವಿರಬಹುದೆಂತ ಗಣಿಸಿದರೆ ತಪ್ಪಾಗಲಾರದೆಂತ ಕಾಣುತ್ತದೆ. ಆ ಲೆಕ್ಕದಲ್ಲಿ ಸರ್ತಿಯಲ್ಲ ೩ ಪಲ ಪ್ರಕಾರ ರಸಾಯನವನ್ನು ಸೇವಿಸಬೇಕೆಂತಾಗುತ್ತದೆ. ಒಂದು ಅಣಿಲೆಕಾಯಿಯ ಸಿಪ್ಪೆಯು, ಅದರಲ್ಲಿ ವ್ಯಾಪಿಸಿದ ಮತ್ತು ಅದಕ್ಕೆ ಹಿಡಿದ ರಸಾಯನಾಂಶ ಸೇರಿ, ಅರ್ಧ ಪಲ ಇರಬಹುದೆಂತ ಎಣಿಸಿದರೆ,

ಎರಡು ಅಣಿಲೆಗಳನ್ನು ತಿನ್ನುವದರಿಂದ ೧ ಪಲ ಔಷಧ ಸೇವಿಸಿದ ಹಾಗೆ ಆಗುವದರಿಂದ, ಪ್ರತ್ಯೇಕವಾದ ರಸಾಯನದಿಂದ ಎರಡು ಪಲ ತೂಕ ನೆಕ್ಕಬೇಕಾಗುತ್ತದೆ. ಹಾಗೆ ಸೇವಿಸಿದ ೩ ಪಲ ಔಷಧದಲ್ಲಿ ಅಣಿಲೆಕಾಯಿಯ ಸತ್ವ ಅರ್ಧ ತೊಲೆ ಚೂರ್ಣದಲ್ಲಿರುವಷ್ಟು ಇರಬೇಕು. ವಿರೇಚನಕ್ಕಾಗಿ ಅಣಿಲೆಕಾಯಿಯನ್ನು ಕಷಾಯರೂಪವಾಗಿ ಕೊಡುವಲ್ಲಿ ಅದರ ಪ್ರಮಾಣ ಕರ್ಷ, ಅರ್ಧಪಲ ಅಥವಾ ಪಲ, ಚೂರ್ಣವಾಗಿ ಕೊಡುವದಾದರೆ, ಅದರ ಅರ್ಧ ತೂಕ ದಷ್ಟು, ಅಂದರೆ ಅರ್ಧ ಕರ್ಷ, ಒಂದು ಕರ್ಷ, ಎರಡು ಕರ್ಷ, ಮೃದು, ಮಧ್ಯ, ಕ್ರೂರ ಎಂಬ ಶರೀರಭೇದದ ಮೇಲೆ ಕೊಟ್ಟರೆ ಸಾಕೆಂತ ವಿಧಿಯುಂಟು (ಚಿ. ಸಾ. ಸಂ. 927). ವಿರೇಚನೌಷಧದ ಪ್ರಮಾಣವು ಉತ್ತಮವಾದರೆ ೩೦ ಸರ್ತಿ, ಮಧ್ಯಮವಾದರೆ ೨೦ ಸರ್ತಿ, ಹೀನವಾದರೆ ಹತ್ತು ಸರ್ತಿ, ಭೇದಿಯಾಗುವದು ಎಂತ ಭಾ. ಪ್ರ. (ಪು. 217). ಈ ಕ್ರಮದ ವಿರೇಚನವು ೩ ಪಲ ಅಗಸ್ತ್ಯಹರೀತಕೀರಸಾಯನ ಸೇವಿಸಿದರಿಂದ ಉಂಟಾಗಲಾರದಾದರೂ, ಅದು ರೋಗಿಯಲ್ಲಿ ಅಶಕ್ತಿಯನ್ನುಂಟುಮಾಡುವಷ್ಟು ಭೇದಿಯನ್ನು ಈ ಕಾಲದ ಅಲ್ಪ ಬಲ ವುಳ್ಳ ರೋಗಿಗಳಲ್ಲಿ ಉಂಟುಮಾಡಬಹುದು. ಆದ್ದರಿಂದ ಆ ಪ್ರಮಾಣದ ಕಾಲು ಭಾಗ ದಷ್ಟು ರೋಗಿಗೆ ಕೊಟ್ಟು ನೋಡಿ, ವೈದ್ಯನು ರೋಗಿಗೆ ಸುಖಕರವಾದ ಪ್ರಮಾಣವನ್ನು ಗೊತ್ತುಮಾಡತಕ್ಕದ್ದು

ಕಷಾಯ ದ್ರವ್ಯಗಳೊಂದಿಗೆ ಅಣಿಲೆಕಾಯಿಗಳನ್ನು ಹಾಕುವಲ್ಲಿ ಅವುಗಳನ್ನು ಪ್ರತ್ಯೇಕ ಒಂದು ವಸ್ತ್ರದ ತುಂಡಿನಲ್ಲಿಟ್ಟು ಸಡಿಲಾಗಿ ಪೊಟ್ಲ ಕಟ್ಟಿ ಹಾಕುವ ಸಂಪ್ರದಾಯ ಒಳ್ಳೇದೇ.

ಈ ರಸಾಯನಕ್ಕೆ ಚಾತುರ್ಜಾತ, ಅಂದರೆ, ಲವಂಗಪಟ್ಟೆ-ಲವಂಗಪತ್ರೆ-ಏಲಕ್ಕಿ-ನಾಗ ಕೇಸರಗಳನ್ನು ಕಾಲು ಪಲ ಪ್ರಕಾರ ತೆಗೆದುಕೊಂಡು ಮಾಡಿದ ವಸ್ತ್ರಗಾಲಿತ ಚೂರ್ಣದ ೧ ಪಲವನ್ನು (ಪರಿಮಳಕ್ಕಾಗಿ) ಕೂಡಿಸುತ್ತಾರೆ (ಚಿ. ಸಾ. ಸಂ. 255). ಈ ಚೂರ್ಣವನ್ನೂ, ಪಿಪ್ಪಲಿಚೂರ್ಣವನ್ನೂ, ಲೇಹಪಾಕ ಬಂದು ಪಾತ್ರವನ್ನು ಒಲೆಯಿಂದ ಕೆಳಗೆ ಇಳಿಸುವ ಸಮ ಯದಲ್ಲಿ ಬೆರಿಸುವದು ಸಂಪ್ರದಾಯ. ಹಾಗೆ ಮಾಡಿದರೆ ಚಾತುರ್ಜಾತದ ಪರಿಮಳವೂ ಪಿಪ್ಪಲಿಯ ಕಾರವೂ ಹೆಚ್ಚು ಉಳಿಯುತ್ತವೆ. ಆದರೆ ಈ ಚೂರ್ಣಗಳು ಲೇಹದೊಂದಿಗೆ ಸರಿ ಯಾಗಿ ಕಲಿತು ಚನ್ನಾಗಿ ಬಿಸಿಯಾಗುವದು ಔಷಧ ದೀರ್ಘಕಾಲ ಸುಸ್ಥಿತಿಯಲ್ಲಿ ಉಳಿಯು ವದಕ್ಕೆ ಅಗತ್ಯ.

19. ಭೃಗುಹರೀತಕೀಲೇಹ

ಸಮೂಲವಲ್ಕಛ್ಛದಕಂಟಕಾರ್ಯಾ,—
ಸ್ತುಲಾಂ ತತೋ ದ್ರೋಣಮಿತಂ ಜಲಂ ಚ ।
ಹರೀತಕೀನಾಂ ಶತಮೇಕಪಾತ್ರೇ,
ವಿಪಾಚ್ಯ ಕುರ್ಯಾಚ್ಚರಣಾಂಬುಶೇಷಮ್ ॥
ತಸ್ಮಿನ್ಕಷಾಯೇ ತನುವಸ್ತ್ರಪೂತೇ,
ಹರೀತಕೀಭಿಃ ಸಹಿತಂ ಗುಡಸ್ಯ ।
ತುಲಾಂ ವಿನಿಕ್ಷಿಪ್ಯ ಪಚೇತ್ಸುಪಕ್ವ,—
ಮೇತತ್ಸಮುತ್ತಾರ್ಯ ಸುಶೀತಲಂ ಚ ॥
ಪಲಂ ಪಲಂ ಚಾಪಿ ಕಟುತ್ರಯಂ ಚ,
ತಥಾ ಚತುರ್ಜಾತಪಲಂ ವಿಚೂರ್ಣ್ಯ ।

ಪಲಾನಿ ಷಟ್ ಪುಷ್ಪರಸಸ್ಯ ಚಾಪಿ,
ವಿನಿಕ್ಷಿಪೇತ್ತತ್ರ ವಿಮಿಶ್ರಯೇಚ್ಚ ||
ಪ್ರಯುಜ್ಯಮಾನೋ ವಿಧಿನೈಷಲೇಹೋ,
ಯಥಾಬಲಂ ಚಾಪಿ ಯಥಾsನಲಂ ಚ |
ವಾತಾತ್ಮಕಂ ಪಿತ್ತಕೃತಂ ಕಫೋತ್ಥಂ ತ್ರಿದೋಷಜಾತಾನ್ಯಪಿ ಚಾತ್ರಿ-
ದೋಷಮ್ ||
ಕ್ಷತೋದ್ಭವಂ ಚ ಕ್ಷಯಜಂ ಚ ಕಾಸಂ ಶ್ವಾಸಂ ಚ ಹನ್ಯಾತ್ಸಹಪೀನಸೇನ |
ಯಕ್ಷ್ಮಾಣಮೇಕಾದಶರೂಪಮುಗ್ರಂ,
ಹರೀತಕೀ ಯಾ ಭೃಗುಣೋಪದಿಷ್ಟಾ || (ಭಾ. ಪ್ರ. 374)

ನೆಲಗುಳ್ಳದ ಬೇರು, ಸಿಪ್ಪೆ ಮತ್ತು ಸೊಪ್ಪು ಕೂಡಿ ೧೦೦ ಪಲ, ಅಣಿಲೆಕಾಯಿ ೧೦೦, ಇವುಗಳನ್ನೂ, ೧ ದ್ರೋಣ ನೀರನ್ನೂ, ಒಂದು ಪಾತ್ರೆಯಲ್ಲಿ ಹಾಕಿ ಬೇಯಿಸಿ, ೧ ಆಢಕಕ್ಕೆ ಬತ್ತಿದ ಕೂಡಲೇ, ತೆಳ್ಳಗಿನ ವಸ್ತ್ರದಿಂದ ಶೋಧಿಸಿ, ಆ ಕಷಾಯವನ್ನೂ, ಆ ನೂರು ಅಣಿಲೆ ಕಾಯಿಗಳನ್ನೂ, ೧೦೦ ಪಲ (ಹಳೇ) ಬೆಲ್ಲವನ್ನೂ, ಕೂಡಿಸಿ ಪುನಃ ಬೇಯಿಸುವದು. ಪಾಕ ಬಂದ ಕೂಡಲೇ (ದ್ರಾವಕವನ್ನು) ಒಲೆಯಿಂದ ಕೆಳಗಿಟ್ಟು, ಆರಿದ ಮೇಲೆ ಶುಂಠಿ ಪಲ ೧, ಹಿಪ್ಪಲಿ ಪಲ ೧, ಕಾಳುಮೆಣಸು ಪಲ ೧, ದಾಲ್ಚೀನಿ ಎಲೆ ಕರ್ಷ ೧, ಲವಂಗಪಟ್ಟೆ ಕರ್ಷ ೧, ಏಲಕ್ಕಿ ಕರ್ಷ ೧, ನಾಗಕೇಸರ ಕರ್ಷ ೧, ಇವುಗಳ ವಸ್ತ್ರಗಾಲಿತ ಚೂರ್ಣವನ್ನೂ, ೬ ಪಲ ಜೇನನ್ನೂ ಬೆರಸಿ ಇಟ್ಟುಕೊಂಡು, ಕ್ರಮಪ್ರಕಾರ ರೋಗಿಯ ದೇಹಬಲಕ್ಕೂ, ಅಗ್ನಿಯ ಬಲಕ್ಕೂ ತಕ್ಕ ಪ್ರಮಾಣದಲ್ಲಿ ಸೇವಿಸುತ್ತಾ ಬಂದಲ್ಲಿ, ವಾತಜಕೆಮ್ಮು, ಪೈತ್ತಿಕಕೆಮ್ಮು, ಕಫಜಕೆಮ್ಮು, ತ್ರಿದೋಷಗಳಿಂದುಂಟಾದ ಕೆಮ್ಮು, ದ್ವಂದ್ವದೋಷಗಳಿಂದುಂಟಾದ ಕೆಮ್ಮುಗಳು, ಕ್ಷತಜಕೆಮ್ಮು, ಕ್ಷಯಜಕೆಮ್ಮು, ಉಬ್ಬಸ, ಪೀನಸ, ಹನ್ನೊಂದು ರೂಪಗಳಿಂದ ಕೂಡಿಕೊಂಡಿರುವ ಉಗ್ರವಾದ ಯಕ್ಷ್ಮರೋಗ, ಇವುಗಳೆಲ್ಲಾ ಪರಿಹಾರವಾಗುವವು. ಈ ಹರೀತಕೀ ಲೇಹವು ಭೃಗುಮುನಿಯಿಂದ ಉಪದೇಶಿಸಲ್ಪಟ್ಟದ್ದಾಗಿರುತ್ತದೆ.

ಪಲಾ ಹಿಂದಿನ ಸಂಖ್ಯೆಯ ಅಡಿ ಕಾಣುವ ಪಲಾ ನೋಡಿ. ಇದರಲ್ಲಿ ಬೆಂದ ಅಣಿಲೆಕಾಯಿಗಳನ್ನು ಬೀಜ, ಒಳಗಿನ ಬೀಜಗಳನ್ನು ತೆಗೆದುಬಿಟ್ಟು, ಸಿಪ್ಪೆಯನ್ನು ಮಾತ್ರ ಬೆಲ್ಲ ಪಾಕವಾಗುವಾಗ್ಗೆ ಸೇರಿಸುವದಕ್ಕೆ ಆಕ್ಷೇಪ ಕಾಣುವದಿಲ್ಲ. ತ್ರಿದೋಷಜ ಮತ್ತು ದ್ವಂದ್ವಜ ಕೆಮ್ಮುಗಳೆಂದರೆ 'ಪ್ರಕೃತಿ-ಸಮ-ಸಮವಾಯ' ರೀತಿಯಿಂದ ಕೂಡಿದ ದೋಷಗಳಿಂದ ಉಂಟಾದವು ಎಂತ ತಿಳಿಯಬೇಕಾಗುತ್ತದೆ.

20. ಯವಾಢಕೇ ಸಪ್ತಜಲಾಢಕಾನಿ,
ಹರೀತಕೀನಾನ್ತು ಶತಂ ಗುರೂಣಾಮ್ |
ವಸಿಷ್ಠಹರೀತಕೀ ರಸಾಯನ
ಲೋಹೇ ಕಟಾಹೇ ಸಮಧಿಶ್ರಯಿತ್ವಾ,
ದ್ರವ್ಯಾಣಿ ಚೈತಾನಿ ಸಮಾದಧೀತ ||
ದನ್ತ್ಯಶ್ವಗಂಧಾಚಿರಬಿಲ್ವಮೂಲಂ ಭಲ್ಲಾತಕಂ ಬಿಲ್ವಫಲಂ ನತಂ ಚ |
ಉಭೇ ಹರಿದ್ರೇ ಗಜಪಿಪ್ಪಲೀ ಚ,
ಪತ್ರಾಣಿ ಮೂಲಾನಿ ಚ ಚಿತ್ರಕಸ್ಯ ||
ಪಿಪ್ಪಲ್ಯಪಾಮಾರ್ಗಮಧಾತ್ಮಗುಪ್ತಾ.

ಸರ್ವಾಣಿ ಕುರ್ಯಾತ್ಫಲಸಂಮಿತಾನಿ |
ಏಕತ್ರ ಸರ್ವಾಣಿ ಭಿಷಗ್ವಿದಗ್ಧಾ(?ಧ್ಯಾ)ದ್,
ದ್ವಿಪಂಚಮೂಲೀಂ ಚ ಯವಪ್ರಮಾಣಾಮ್ ||
ಮೃದೂನಿ ಸುಸ್ವಿನ್ನಯವಾನ್ವಿದಿತ್ವಾ,
ಶನೈಃ ಪ್ರಯತ್ನಾದವತಾರಯೇಚ್ಚ |
ವಿಸ್ರಾವ್ಯ ತೇನೈವ ಜಲೇನ ಸಾರ್ಧಂ,
ಪಚೇತ್ಪುರಾಣಸ್ಯ ಶತಂ ಗುಡಸ್ಯ ||
ಭೂಯೋ ಗುರೂಣಾಮಪಿ ತತ್ರ ದದ್ಯಾ,-
ದ್ಧರೀತಕೀನಾಂ ಚ ಸಹಸ್ರಮನ್ಯತ್ |
ಪ್ರಸ್ಥಂ ಪುರಾಣಸ್ಯ ಘೃತಸ್ಯ ದದ್ಯಾ,-
ನ್ನವಸ್ಯ ತೈಲಸ್ಯ ಚ ತಾವದೇವ ||
ಶೀತೇ ಮಧು ಸ್ನೇಹಸಮನ್ತು ದದ್ಯಾ,-
ತ್ಫಲಾನಿ ಚಾಷ್ಟಾವಥ ಪಿಪ್ಪಲೀನಾಮ್ |
ಸಾ ಕಲ್ಕಮಿಶ್ರಾ ತ್ವಥ ಸೇವ್ಯಮಾನಾ,
ಸರ್ವಾನ್ ಜ್ವರಾನ್ನಾಶಯತೀಹ ಮಾಸಾತ್ ||
ಮಾಸದ್ವಯೇನೈವ ಚ ನೇತ್ರರೋಗಾ,-
ನ್ನಿಹನ್ತ್ಯಪೂರ್ವಾಂ ಚ ಕರೋತಿ ದೃಷ್ಟಿಮ್ |
ಕುಷ್ಠಾನಿ ಮಾಸತ್ರಯತೋ ನಿಹನ್ತಿ,
ಪ್ರಭಿನ್ನಕರ್ಣಾಂಗುಲಿನಾಸಿಕಾನಿ ||
ಭಗಂದರಂ ಶ್ಲೀಪದವಾತಗುಲ್ಮಂ,
ಶ್ವಾಸಂ ತಥಾ ಮಾಸಚತುಷ್ಟಯೇನ |
ಸಂಭಕ್ಷಿತಾ ಪಂಚಭಿರೇವ ಮಾಸೈಃ,
ಕರೋತಿ ಕೇಶಾನ್ ಭ್ರಮರಾಂಜನಾಭಾನ್ ||
ಷಡ್ಭಿಸ್ತು ಮಾಸೈಃ ಖಲು ಸಾಪಿ ಕುರ್ಯಾತ್,
ಕೇಶಾನ್ ಸುನೀಲಾನ್ ಘನಕುಂಚಿತಾಗ್ರಾನ್ |
ಸಹಸ್ರವಧ್ಯಾಮಥ ಚೋಪಯುಂಜ್ಯ,
ಬಲಂ ಭವೇದುತ್ತಮಕುಂಜರಸ್ಯ |
ಸ್ವರಂ ಮಯೂರಸ್ಯ ಹಯಸ್ಯ ವೇಗಂ,
ಶರಚ್ಛಶಾಂಕಸ್ಯ ಪರಾಂ ಚ ಕಾನ್ತಿಮ್ |
ಸೌಭಾಗ್ಯಮೇಧಾಸ್ಮೃತಿಸತ್ವಯುಕ್ತೋ,
ಬಲಾನ್ವಿತಃ ಪದ್ಮದಲಾಯತಾಕ್ಷಃ ||
ಜೀವೇತ್ಸಮಾನಾಂ ಚ ಸಹಸ್ರಮುಗ್ರ್ಯಂ,
ಪ್ರಯೋಗಕಾಲಾದಿತಿ ಸತ್ಯವಾಕ್ಯಮ್ |

ಸವಿಾಕ್ಷ್ಯ ಕಲ್ಪಾಂಸ್ತು ಚಕಾರ ಯೋಗಂ,
ಹಿತಾಯ ಲೋಕಸ್ಯ ಮುನಿರ್ವಸಿಷ್ಠಃ || (ಚಿ. ಸಾ. ಸ 256-257)

೨ ಆಢಕ ಯವೆಗೋದಿ, ೭ ಆಢಕ ನೀರು, ೧೦೦ ಭಾರವುಳ್ಳ ಅಣಿಲೆಕಾಯಿಗಳು, ದಂತಿ, ಅಶ್ವಗಂಧಿ, ಹೊಂಗೆ (ನಾಯಿಹಲ್ಲೆ) ಬೇರು, ಗೇರುಕಾಯಿ, ಬಿಲ್ವಪತ್ರೆಕಾಯಿ, ತಗರ, ಅರಸಿನ, ಮರದರಸಿನ, ಗಜಹಿಪ್ಪಲಿ, ಚಿತ್ರಮೂಲದ ಬೇರು ಮತ್ತು ಎಲೆ, ಹಿಪ್ಪಲಿ, ಉತ್ತರಣೆ ಬೇರು, ನಾಯಿಸೊಣಗಿನ (ನಸುಗುನ್ನಿಯ) ಬೀಜ, ಇವುಗಳೆಲ್ಲ ೧ ಪಲ ಪ್ರಕಾರ, ದಶಮೂಲಗಳು (ಒಟ್ಟು ಸೇರಿ) ೨ ಆಢಕ, ಇವುಗಳನ್ನೆಲ್ಲಾ ಒಂದು ಕಬ್ಬಿಣದ ಕಟಾರದಲ್ಲಿ ಹಾಕಿ ಬೇಯಿಸಿ, ಯವೆಯು ಚನ್ನಾಗಿ ಬೆಂದು, ಮೃದುವಾದ ಮೇಲೆ, ಕಟಾರವನ್ನು ಪ್ರಯತ್ನದಿಂದ ಮೆಲ್ಲಗೆ ಒಲೆಯಿಂದ ಕೆಳಗಿಳಿಸಿ, ಶೋಧಿಸಿ ಸಿಕ್ಕುವ ಕಷಾಯಕ್ಕೆ ೧೦೦ ಪಲ ಹಳೇ ಬೆಲ್ಲವನ್ನೂ, ಭಾರವುಳ್ಳ ಬೇರೆ ಅಣಿಲೆಕಾಯಿ ಒಂದು ಸಹಸ್ರವನ್ನೂ, ಹಳೇ ತುಪ್ಪ ೧ ಪ್ರಸ್ಥವನ್ನೂ, ಹೊಸ ಎಳ್ಳೆಣ್ಣೆ ೧ ಪ್ರಸ್ಥವನ್ನೂ ಕೂಡಿಸಿ, ಪುನಃ ಬೇಯಿಸುವದು; ಪಾಕ ಬಂದ ಮೇಲೆ ಪಾತ್ರವನ್ನು ಒಲೆಯಿಂದ ಕೆಳಗಿಳಿಸಿ, ತಣಿದ ಮೇಲೆ ೧ ಪ್ರಸ್ಥ ಜೇನನ್ನೂ, ೮ ಪಲ ಹಿಪ್ಪಲಿ ಚೂರ್ಣವನ್ನೂ ಬೆರಸಿಟ್ಟುಕೊಂಡು, ಕಲ್ಕಮಿಶ್ರವಾದ ಅಣಿಲೆಕಾಯಿಯನ್ನು ಸೇವಿಸುತ್ತಾ ಬರುವದು. ಒಂದು ತಿಂಗಳ ಸೇವನದಿಂದ ಎಲ್ಲಾ ಜಾತಿಯ ಜ್ವರಗಳು ಪರಿಹಾರವಾಗುವವು; ಎರಡು ತಿಂಗಳು ಸೇವಿಸುವದರಿಂದ ಎಲ್ಲಾ ನೇತ್ರರೋಗಗಳು ಹೋಗಿ ಅಪೂರ್ವವಾದ ದೃಷ್ಟಿಯುಂಟಾಗುತ್ತದೆ; ಮೂರು ತಿಂಗಳು ಸೇವಿಸುವದರಿಂದ ಕಿವಿ ಮೂಗು ಬೆರಳುಗಳು ಸಹ ಒಡದು ಕೊಳೆತಿರುವ ಕುಷ್ಠರೋಗಗಳು ನಾಶವಾಗುವವು; ನಾಲ್ಕು ತಿಂಗಳ ಸೇವನದಿಂದ ಭಗಂದರ, ಶ್ಲೀಪದ, ವಾತಗುಲ್ಮ, ಉಬ್ಬಸ ಸಹ ಪರಿಹಾರವಾಗುವವು; ಐದು ತಿಂಗಳು ಸೇವಿಸಿದರೆ ತಲೆಕೂದಲುಗಳು ತುಂಬಿಹುಳದ ಮತ್ತು ಅಂಜನದ ಹಾಗೆ ಕಪ್ಪಾಗುವವು; ಆರು ತಿಂಗಳ ಉಪಯೋಗದಿಂದ ತಲೆಕೂದಲುಗಳು ದಪ್ಪ ಮತ್ತು ಒಳ್ಳೇ ನೀಲವಾಗುವದಲ್ಲದೆ ಅವುಗಳ ತುದಿಗಳಲ್ಲಿ ಕುರುಳು ಉಂಟಾಗುವವು; ಒಂದು ಸಾವಿರ ಅಣಿಲೆಕಾಯಿಗಳನ್ನು ಪೂರಾ ಸೇವಿಸಿದರೆ, ಮನುಷ್ಯನಿಗೆ ಆನೆಯ ಬಲ ಬರುವದಲ್ಲದೆ, ಅವನ ಸ್ವರವು ನವಿಲಿನ ಹಾಗೆ, ಓಟವು ಕುದುರೆಯ ಹಾಗೆ ಮತ್ತು ಕಾಂತಿಯು ಶರತ್ಕಾಲದ ಚಂದ್ರನಂತೆ ಉತ್ತಮ, ಸಹ ಆಗುವವು; ಮತ್ತು ಅವನು ಸಂಪತ್ತು, ಬುದ್ಧಿ, ನೆನವು, ಸತ್ವ ಮತ್ತು ಬಲಯುಕ್ತನಾಗಿಯೂ, ತಾವರೆಹೂವಿನ ಎಸಳುಗಳಂತೆ ವಿಶಾಲವಾದ ಕಣ್ಣುಗಳುಳ್ಳವನಾಗಿಯೂ, ಔಷಧ ಪ್ರಯೋಗಕಾಲದಿಂದ ಒಂದು ಸಾವಿರ ವರ್ಷದ ಪರಮಾವಧಿ ಕಾಲದ ವರೆಗೆ ಬದುಕುವನೆಂಬದು ಸತ್ಯವಾದ ಮಾತು. ವಸಿಷ್ಠಋಷಿಗಳು ಕಲ್ಪಗಳನ್ನು ಶೋಧಿಸಿ, ಲೋಕದ ಹಿತಕ್ಕಾಗಿ ಈ ಯೋಗವನ್ನು ಮಾಡಿದ್ದಾಗಿರುತ್ತದೆ.

ಪರಾ ಈ ಔಷಧದ ಫಲಶ್ರುತಿವರ್ಣನದಲ್ಲಿ ಅತಿಶಯೋಕ್ತಿ ಬಹಳವಾಗಿ ಹೊಳೆಯುತ್ತದಾದರೂ, ಔಷಧವು ಬಹಳ ಪ್ರಯೋಜನಕಾರಿಯಾಗುವದೆಂಬದರಲ್ಲಿ ಸಂದೇಹವಿಲ್ಲ ಹಿಂದೆ 18ನೇ ಸಂಖ್ಯೆಯ ಅಡಿಯಲ್ಲಿ ಬರೆದ ಪರಾ ನೋಡಿ ನೀರಿನ ಪ್ರಮಾಣದ ಆಢಕವು ೧೨೮ ಪಲದ್ದು ಯವೆ ಮುಂತಾದ ಒಣಗಿಲು ಪದಾರ್ಥಗಳ ಆಢಕವು ೬೪ ಪಲದ್ದು, ಎಂತ ತಿಳಿಯದಿದ್ದರೆ, ಏಳು ಆಢಕ ನೀರು ಸಾಲದು ವಾಗ್ಭಟನು ವಸಿಷ್ಠನಿಂದ ಉಕ್ತವಾದ ರಸಾಯನ ಎಂತ ಹೇಳಿ, ಬರೆದಿರುವ ಯೋಗದಲ್ಲಿ ೧೧೦೦ ಅಣಿಲೆಕಾಯಿಗಳನ್ನೂ, ೨ ಆಢಕ ಯವೆಯನ್ನೂ ಒಟ್ಟಾಗಿ ಕಷಾಯದ್ರವ್ಯಗಳೊಂದಿಗೆ ಸೇರಿಸಬೇಕಾಗಿಯೂ, ೮ ಪಾಲು ನೀರನ್ನು ಕಷಾಯಕ್ಕೆ ಉಪಯೋಗಿಸಬೇಕಾಗಿಯೂ, ಅದರಲ್ಲಿ ಬೆಂದ ಅಣಿಲೆಕಾಯಿಗಳನ್ನು ಬೆಲ್ಲದ ಪಾಕದ ಕಷಾಯದೊಂದಿಗೆ ಸೇರಿಸಿ, ಅಗಸ್ತ್ಯಹರೀತಕೀರಸಾಯನದಂತೆ ತಯಾರಿಸಿ, ಅದನ್ನು ಸೇವಿಸುವದಕ್ಕೆ ಹೇಳಲ್ಪಟ್ಟ ಕ್ರಮದಲ್ಲಿಯೇ ವಸಿಷ್ಠೋಕ್ತರಸಾಯನವನ್ನೂ ಉಪಯೋಗಿಸುವದಾಗಿಯೂ ಹೇಳಲ್ಪಟ್ಟದೆ (ಪ 275-6)

ಈ ಯೋಗದಲ್ಲಿ ಕಷಾಯಕ್ಕೆ ಸೇರಿಸಿದ ನೂರು ಅಣಿಲೆಕಾಯಿಗಳನ್ನು ಎರಡನೆ ಲೇಹಪಾಕಕ್ಕೆ ಸೇರಿಸಬೇಕಾಗಿ ಕಾಣುವದಿಲ್ಲ. ಕಷಾಯದ್ರವ್ಯಗಳಲ್ಲಿಯೂ ವಾಗ್ಭಟ ಹೇಳುವ ರಸಾಯನ ಯೋಗಕ್ಕೂ, ಇಲ್ಲಿ ಹೇಳಲ್ಪಟ್ಟದ್ದಕ್ಕೂ ಬಹಳ ಭೇದಕಾಣುತ್ತದೆ. ಅಷ್ಟಾಂಗಸಂಗ್ರಹ ಎಂಬ ಗ್ರಂಥದಲ್ಲಿ ಅಗಸ್ತ್ಯಹರೀತಕೀ, ವಸಿಷ್ಠಹರೀತಕೀ ಎಂಬ ಎರಡು ರಸಾಯನ ಯೋಗಗಳೂ 'ಕ್ಷತಕ್ಷಯಜಕಾಸಚಿಕಿತ್ಸಿತಂ' ಎಂಬ ಅಧ್ಯಾಯದಲ್ಲಿ ಉಕ್ತವಾಗಿವೆ (ಪು II-137) 'ಕಾಸಚಿಕಿತ್ಸಿತಂ' ಎಂಬ ಶಿರೋನಾಮದ ಅಧ್ಯಾಯ ಅದರಲ್ಲಿ ಪ್ರತ್ಯೇಕ ಉಂಟು. ಗೇರುಕಾಯಿಯು ವಿಷಪದಾರ್ಥವಾದರೂ ಇದರಲ್ಲಿ ಅಲ್ಪ ಪ್ರಮಾಣವಾಗಿ ಸೇರುವದರಿಂದ ಅದನ್ನು ಶುದ್ಧಮಾಡಿಕೊಳ್ಳುವದು ಅಗತ್ಯವಲ್ಲ.

21. ಶಿರಸಃ ಸದನೇ ಸ್ರಾವೇ ನಾಸಾಯಾ ಹೃದಿ ತಾಮ್ಯತಿ |
ಕಾಸಪ್ರತಿಶ್ಯಾಯವತಾಂ ಧೂಮಂ ವೈದ್ಯಃ ಪ್ರಯೋಜಯೇತ್ ||
ದಶಾಂಗುಲೋನ್ಮಿತಾಂ ನಾಡೀಂ ಅಥವಾಷ್ಟಾಂಗುಲೋನ್ಮಿತಾಮ್ |
ಶರಾವಸಂಪುಟಚ್ಛಿದ್ರೇ ಕೃತ್ವಾ ಜಿಹ್ಮಾಂ ವಿಚಕ್ಷಣಃ ||
ವೈರೇಚನಂ ಮುಖೇನೈವ ಕಾಸವಾನ್ ಧೂಮಮಾಪಿಬೇತ್ |
ತಮುರಃ ಕೇವಲಂ ಪ್ರಾಪ್ತಂ ಮುಖೇನೈವೋದ್ಧಮೇತ್ಪುನಃ ||
ಸ ಹ್ಯಸ್ಯ ತೈಕ್ಷ್ಣ್ಯಾದ್ವಿಕ್ಷಿಪ್ಯ ಶ್ಲೇಷ್ಮಾಣಮುರಸಿ ಸ್ಥಿತಮ್ |
ನಿಷ್ಕೃಷ್ಯ ಶಮಯೇತ್ಕಾಸಂ ವಾತಶ್ಲೇಷ್ಮಸಮುದ್ಭವಮ್ || (ಚ. 703-704)

ಧೂಮಪಾನದ ವಿಧಾನ

ಕೆಮ್ಮಿನೊಂದಿಗೆ ನೆಗಡಿ, ತಲೆನೋವು, ಮೂಗಿನಿಂದ ನೀರು ಸುರಿಯುವಿಕೆ ಮತ್ತು ಹೃದಯದ ಪೀಡೆ ಇರುವಲ್ಲಿ ವೈದ್ಯನು ಹೊಗೆಯ ಪಾನವನ್ನು ಮಾಡಿಸತಕ್ಕದ್ದು. ಒಂದರ ಮೇಲೆ ಇನ್ನೊಂದನ್ನು ಸಂಪುಟಾಕಾರವಾಗಿ ಮುಚ್ಚಲಿಕ್ಕಾಗುವ ಎರಡು ಗಡಿಗೆಗಳೊಳಗೆ, ಮುಚ್ಚಳದಲ್ಲಿ ಒಂದು ರಂಧ್ರವನ್ನು ಮಾಡಿ, ಆ ರಂಧ್ರದಲ್ಲಿ ಹತ್ತು ಅಂಗುಲ ಅಥವಾ ಎಂಟು ಅಂಗುಲ ಉದ್ದದ ಒಂದು ನಳಿಗೆಯ ಕೆಳತುದಿಯನ್ನು ಕೂಡಿರಿಸಿ, ಕೆಳಗಿನ ಗಡಿಗೆಯಲ್ಲಿ ವಿರೇಚನ ಮಾಡಿಸತಕ್ಕ ಔಷಧವನ್ನೂ ಬೆಂಕಿಕೆಂಡಗಳನ್ನೂ ಹಾಕಿ, ಮುಚ್ಚಳದಿಂದ ಮುಚ್ಚಿದಲ್ಲಿ ನಳಿಗೆಯ ಮುಖದಿಂದ ಹೊರಡುವ ಹೊಗೆಯನ್ನು ಬುದ್ಧಿಶಾಲಿಯಾದ ಕೆಮ್ಮುರೋಗದವನು ತನ್ನ ಬಾಯಿಂದ ಪಾನಮಾಡಬೇಕು, ಮತ್ತು ಎದೆಯೊಳಗೆ ಹೊಕ್ಕ ಆ ಹೊಗೆಯನ್ನೆಲ್ಲಾ ಬಾಯಿಂದಲೇ ಹೊರಗೆ ಬಿಡಬೇಕು. ಆ ಹೊಗೆಯು ತನ್ನ ತೀಕ್ಷ್ಣತೆಯಿಂದ ಎದೆಯಲ್ಲಿ ನಿಂತಿದ್ದ ಕಫವನ್ನು ಹೊರಡಿಸಿ ಹೊರಗೆ ಹಾಕಿ, ವಾತಕಫಗಳಿಂದ ಉಂಟಾದ ಕೆಮ್ಮನ್ನು ನಾಶಮಾಡುವದು.

ಸದಾ 1ನೇ ಭಾಗದ XXV, 1-2 ನೋಡಿ

22. ಮನಃಶಿಲಾಲಮಧುಕಮಾಂಸೀಮುಸ್ತೇಂಗುದ್ಯೈಃ ಪಿಬೇತ್ |
ಧೂಮಂ ತಸ್ಯಾನು ಚ ಕ್ಷೀರಂ ಸುಖೋಷ್ಣಂ ಸಗುಡಂ ಪಿಬೇತ್ ||
ಏಷ ಕಾಸಾನ್ ಪೃಥಗ್ದೋಷಸನ್ನಿಪಾತೋದ್ಭವಾನ್ ಜಯೇತ್ |
ಪ್ರಸಹ್ಯಾಪರಿಸಂಸಿದ್ಧಾನನ್ಯೈರ್ಯೋಗಶತೈರಪಿ || (ಚ. 704)

ಧೂಮಯೋಗ

ಮಣಿಶಿಲೆ, ಅರಿದಾಳ, ಜ್ಯೇಷ್ಠಮಧು, ಜಟಾಮಾಂಸಿ, ಭದ್ರಮುಷ್ಟಿ, ಇಂಗಳದ ಮರನ ಹೂವು, ಇವುಗಳ ಹೊಗೆಯನ್ನು ಪಾನಮಾಡಿ, ಅನುಪಾನವಾಗಿ ಸುಖೋಷ್ಣವಾದ ಹಾಲನ್ನು ಬೆಲ್ಲ ಕೂಡಿಸಿಕೊಂಡು ಕುಡಿಯತಕ್ಕದ್ದು. ವಾತಾದಿ ಒಂದೊಂದು ದೋಷದಿಂದುಂಟಾದದ್ದಾಗಲಿ, ಸನ್ನಿಪಾತದಿಂದುಂಟಾದದ್ದಾಗಲಿ, ಬೇರೆ ನೂರಾರು ಯೋಗಗಳಿಂದ ಸಾಧ್ಯವಾಗದ ಕೆಮ್ಮುಗಳನ್ನು ಈ ಹೊಗೆಯು ಬಲಾತ್ಕಾರದಿಂದ ಜಯಿಸುತ್ತದೆ.

ಸದಾ ಮಣಿಶಿಲೆ, ಅರಿದಾಳ ಸಹ ವಿಷವಸ್ತುಗಳಾದ್ದರಿಂದ ಯೋಗವನ್ನು ಕ್ರಮವಾಗಿ ನಡಿಸುವದರಲ್ಲಿ ಜಾಗ್ರತೆಬೇಕು

23. ಕಾಸೀ ಸಪೀನಸೋ ಧೂಮಂ ಸ್ನೈಹಿಕಂ ವಿಧಿನಾ ಪಿಬೇತ್ |
ಹಿಧ್ಮಾಶ್ವಾಸೋಕ್ತಧೂಮಾಂಶ್ಚ ಕ್ಷೀರಮಾಂಸರಸಾಶನಃ ||
(ವಾ. 266-67)

ಹಿಧ್ಮಾಶ್ವಾಸೋಕ್ತ ಧೂಮುಗಳ ಉಪಯೋಗ

ಕೆಮ್ಮಿನೊಂದಿಗೆ ನೆಗಡಿ ಇರುವಲ್ಲಿ ಸ್ನೇಹಯುಕ್ತವಾದ ಹೊಗೆಯನ್ನು ಮತ್ತು ಬಿಕ್ಕಟ್ಟು-ಉಬ್ಬಸಗಳಿಗೆ ಹೇಳಲ್ಪಟ್ಟ ಹೊಗೆಗಳನ್ನು ವಿಧಿಪ್ರಕಾರ ಪಾನ ಮಾಡಿ, ಹಾಲಿನಿಂದ ಅಥವಾ ಮಾಂಸರಸದಿಂದ ಭೋಜನ ಮಾಡುತ್ತಾ, ಪಥ್ಯದಲ್ಲಿರತಕ್ಕದ್ದು

24. ಮತ್ಸ್ಯೈಕುಕ್ಕುಟವಾರಾಹೈರಾಮಿಷೈರ್ವಾ ಘೃತಾನ್ವಿತೈಃ |
ಸಿದ್ಧಾಂ ಸಸೈಂಧವಾಂ ಪೇಯಾಂ ವಾತಕಾಸೀ ಪಿಬೇನ್ನರಃ || (ಚ. 704)

ವಾತಜ ಕೆಮ್ಮಿನಲ್ಲಿ ಪಥ್ಯ

ಮೀನು, ಕೋಳಿ, ಕಾಡು ಹಂದಿ, ಇವುಗಳ ಮಾಂಸಗಳಿಂದ ತುಪ್ಪ ಮತ್ತು ಸೈಂಧವಲವಣ ಕೂಡಿಸಿ ಮಾಡಿದ ಪೇಯಾ ಎಂಬ ಗಂಜಿಯನ್ನು ವಾತಕಾಸಿಯಾದ ಮನುಷ್ಯನು ಕುಡಿಯಬೇಕು.

ವಾಸ್ತುಕಂ ವಾಯಸೀಶಾಕಂ ಮೂಲಕಂ ಸುನಿಷಣ್ಣಕಮ್ |
ಸ್ನೇಹಾಸ್ತೈಲಾದಯೋ ಭಕ್ಷ್ಯಾಃ ಕ್ಷೀರೇಕ್ಷುರಸಗೌಡಿಕಾಃ ||
ದಧ್ಯಾರನಾಲಾಮ್ಲಫಲಪ್ರಸನ್ನಾಪಾನಮೇವ ಚ |
ಶಸ್ಯತೇ ವಾತಕಾಸೇ ತು ಸ್ವಾದ್ವಮ್ಲಲವಣಾನಿ ಚ || (ಚ 705)

ವಾಸ್ತುಕಶಾಕ, ಕಾಗೇಹಣ್ಣಿನ ಗಿಡದ ಸೊಪ್ಪು, ಮೂಲಂಗಿ, ಸುನಿಷಣ್ಣಕ (ಗೊರಜಿ ಸೊಪ್ಪು), ಸ್ನೇಹಗಳು, ತೈಲ ಮುಂತಾದವು, ಹಾಲು-ಕಬ್ಬಿನರಸ-ಬೆಲ್ಲಗಳನ್ನು ಸೇರಿಸಿ ಮಾಡಿದ ಭಕ್ಷ್ಯಗಳು, ಮೊಸರು, ಗೋದಿಯ ಹುಳಿಗಂಜಿನೀರು, ಹುಳಿಹಣ್ಣುಗಳು (ಮಾದಳ, ದಾಳಿಂಬ ಮುಂತಾದವು), ಮದ್ಯದ ಮೇಲಿನ ನೀರು, ಇವುಗಳು ಸೇರಿದ ಪಾನಕಗಳು, ಸಿಹಿ, ಹುಳಿ ಮತ್ತು ಉಪ್ಪಾದ ಆಹಾರಗಳು, ಸಹ ವಾತಕಾಸದಲ್ಲಿ ಪ್ರಶಸ್ತವು.

25. ಪೈತ್ತಿಕೇ ಸಕಫೇ ಕಾಸೇ ವಮನಂ ಸರ್ಪಿಷಾ ಹಿತಮ್ |
ತಥಾ ಮದನಕಾಶ್ಮರ್ಯಮಧೂಕಕ್ವಥಿತೈರ್ಜಲೈಃ ||
ಯಷ್ಟ್ಯಾಹ್ವಫಲಕಲ್ಕೈರ್ವಾ ವಿದಾರೀಕ್ಷುರಸಾಯು(?ಪ್ಲು)ತೈಃ |
ಹೃತದೋಷಸ್ತತಃ ಶೀತಂ ಮಧುರಂ ಚ ಕ್ರಮಂ ಭಜೇತ್ ||
ಪೈತ್ತೇ ತನುಕಫೇ ಕಾಸೇ ತ್ರಿವೃತಾಂ ಮಧುರೈರ್ಯುತಾಮ್ |
ದದ್ಯಾದ್ಘನಕಫೇ ತಿಕ್ತೈರ್ವಿರೇಕಾರ್ಥೇ ಯುತಾಂ ಭಿಷಕ್ ||
ಸ್ನಿಗ್ಧಶೀತಸ್ತನುಕಫೇ ರೂಕ್ಷಶೀತಃ ಕಫೇ ಘನೇ |
ಕ್ರಮಃ ಕಾರ್ಯಃ ಪರಂ ಭೋಜ್ಯೈಃ ಸ್ನೇಹೈರ್ಲೇಹೈಶ್ಚ ಶಸ್ಯತೇ ||
(ಚ. 705)

ಪೈತ್ತಿಕ ಕೆಮ್ಮಿಗೆ ಉಪಕ್ರಮ.

ಕಫ ಕೂಡಿಕೊಂಡ ಪಿತ್ತಜಕೆಮ್ಮಿನಲ್ಲಿ ವಾಂತಿಯ ಔಷಧವನ್ನು ತುಪ್ಪದಲ್ಲಿ ಕೊಡುವದು ಹಿತ. ಹಾಗೆಯೇ ಮಂಗಾರೆಕಾಯಿ, ಕಾಶ್ಮೀರಿಹಣ್ಣು, ಜ್ಯೇಷ್ಠಮಧು ಇವುಗಳ ಕಷಾಯ ನೀರನ್ನು, ಅಥವಾ ಜ್ಯೇಷ್ಠಮಧು ಮತ್ತು ಮಂಗಾರೆಕಾಯಿಯನ್ನು ಚೂರ್ಣಮಾಡಿ ನೆಲ

ಕುಂಬಳಗಡ್ಡೆ ಮತ್ತು ಕಬ್ಬಿನ ರಸಗಳಲ್ಲಿ ಆ ಚೂರ್ಣವನ್ನು ಕದಡಿ ಕುಡಿದು, ವಮನ ಮಾಡಬೇಕು. ಅದರಿಂದ ದೋಷಗಳು ಹೊರಗೆ ಹೋದ ಮೇಲೆ ಶೀತವಾದ ಮತ್ತು ಸಿಹಿಯಾದ (ಉಪಚಾರ) ಕ್ರಮವನ್ನು ಅವಲಂಬಿಸತಕ್ಕದ್ದು. ಪಿತ್ತಜಕೆಮ್ಮಿನಲ್ಲಿ ಕಫವು ತೆಳ್ಳಗಾಗಿದ್ದರೆ ತಿಗಡೆಚೂರ್ಣವನ್ನು ಸಿಹಿಯಾದ ದ್ರವಗಳಲ್ಲಿ, ಕಫವು ದಪ್ಪವಾಗಿದ್ದರೆ ಆ ಚೂರ್ಣವನ್ನು ಕಹಿಯಾದ ದ್ರವಗಳಲ್ಲಿ, ಕಲಸಿ ಪಂಡಿತನು ವಿರೇಚನ ಮಾಡಿಸುವದಕ್ಕೆ ಕೊಡತಕ್ಕದ್ದು. ಕಫವು ತೆಳ್ಳಗಾಗಿದ್ದಾಗ ಸ್ನಿಗ್ಧ ಮತ್ತು ಶೀತವಾದ, ಕಫವು ದಪ್ಪವಿದ್ದಾಗ ರೂಕ್ಷ ಮತ್ತು ಶೀತವಾದ (ಗಂಜಿ ಮುಂತಾದ) ಕ್ರಮವನ್ನು ನಡಿಸಿ, ಅನಂತರ ತಿಂಡಿಗಳಿಂದಲೂ, ಸ್ನೇಹಗಳಿಂದಲೂ, ಲೇಹಗಳಿಂದಲೂ ಉಪಚರಿಸುವದು ಪ್ರಶಸ್ತವಾಗಿರುತ್ತದೆ.

ಷರಾ ಪಿತ್ತಕಾಸದಲ್ಲಿ ಕಫವು ನೀರಾಗಿದ್ದರೆ ತುಪ್ಪದಲ್ಲಿ ವಾಂತಿಯ ಔಷಧವನ್ನು ಕೊಡುವದಾಗಿ ರ ರ (ಷ 339)

26. ಬಲಾದ್ವಿಬೃಹತೀದ್ರಾಕ್ಷಾವಾಸಾಭಿಃ ಕ್ವಥಿತಂ ಜಲಮ್ ।

ಬಲಾದಿ ಕಷಾಯ ಪಿತ್ತಕಾಸಾಪಹಂ ಪೇಯಂ ಶರ್ಕರಾಮಧುಯೋಜಿತಮ್ ॥

(ಚಿ. ಸಾ. ಸಂ. 212)

ಕಲ್ಲಂಗಡಲೆ ಬೇರು, ಗುಳ್ಳದ ಬೇರು. ಕಿರಿಗುಳ್ಳದ ಬೇರು, ದ್ರಾಕ್ಷೆ, ಆಡುಸೋಗೆ ಬೇರು, ಇವುಗಳ ಕಷಾಯವನ್ನು, ಸಕ್ಕರೆ ಮತ್ತು ಜೇನು ಕೂಡಿಸಿ, ಪಾನ ಮಾಡಿದ್ದಲ್ಲಿ ಪಿತ್ತಜಕೆಮ್ಮು ಪರಿಹಾರವಾಗುವದು.

27. ಶಟೀಹ್ರೀಬೇರಬೃಹತೀ ಶರ್ಕರಾ ವಿಶ್ವಭೇಷಜಮ್ ।

ಶಠ್ಯಾದಿ ಕಷಾಯ ಪಕ್ತ್ವಾ ರಸಂ ಪಿಬೇತ್ಪೂತಂ ಸಘೃತಂ ಪಿತ್ತಕಾಸನುತ್ ॥

(ಚಿ ಸಾ. ಸಂ. 242)

ಕಚೋರ, ಮುಡಿವಾಳ (ಅಥವಾ ಇರುವೇರಿದಂಟು), ಗುಳ್ಳದ ಬೇರು, ಶುಂಠಿ, ಇವುಗಳ ಕಷಾಯವನ್ನು ಶೋಧಿಸಿ, ತುಪ್ಪ ಮತ್ತು ಸಕ್ಕರೆ ಕೂಡಿಸಿಕೊಂಡು, ಸೇವಿಸುವದರಿಂದ ಪಿತ್ತಜ ಕೆಮ್ಮು ನಾಶವಾಗುವದು.

ಷರಾ 'ಹ್ರೀಬೇರಂ' ಎಂಬಲ್ಲಿ 'ಮುಡಿವಾಳ' (ಕರೀಮುಡಿವಾಳ)ವನ್ನು ಕೆಲವು ದೇಶಗಳಲ್ಲಿ, ಇರುವೇರಿ' ದಂಟನ್ನು ಬೇರೆ ಕೆಲವು ದೇಶಗಳಲ್ಲಿ ಉಪಯೋಗಿಸುವದು ವಾಡಿಕೆಯಾಗಿರುತ್ತದೆ

28. ಕಂಟಕಾರೀಯುಗಂ ದ್ರಾಕ್ಷಾ ವಾಸಾಕಚೂರವಾಲಕೈಃ ।

ಸಾಗರೇಣ ಚ ಪಿಪ್ಪಲ್ಯಾ ಕ್ವಥಿತಂ ಸಲಿಲಂ ಪಿಬೇತ್

ಕಂಟಕಾರ್ಯಾದಿ ಕಷಾಯ ಶರ್ಕರಾಮಧುಸಂಯುಕ್ತಂ ಪಿತ್ತಕಾಸಹರಂ ಪರಮ್ ॥ (ಭಾ. 373)

ಗುಳ್ಳದ ಬೇರು, ಕಿರಿಗುಳ್ಳದ ಬೇರು, ದ್ರಾಕ್ಷೆ, ಆಡುಸೋಗೆ ಬೇರು, ಕಚೋರ, ಇರುವೇರಿ (ಅಥವಾ ಮುಡಿವಾಳ), ಶುಂಠಿ, ಹಿಪ್ಪಲಿ, ಇವುಗಳ ಕಷಾಯವನ್ನು, ಸಕ್ಕರೆ ಮತ್ತು ಜೇನು ಕೂಡಿಸಿ, ಕುಡಿಯಬೇಕು; ಅದು ಪಿತ್ತಜಕೆಮ್ಮಿನ ಪರಿಹಾರಕ್ಕೆ ಉತ್ತಮವಾದದ್ದು.

29. ಶರ್ಕರಾಚನ್ದನದ್ರಾಕ್ಷಾಮಧುಧಾತ್ರೀಫಲೋತ್ಪಲೈಃ ।

ಶರ್ಕರಾದಿ ಚೂರ್ಣ ಪೈತ್ತೇ ಸಮುಸ್ತಮರಿಚಃ ಸಕಫೇ ಸಘೃತೋಽನಿಲೇ ॥ (ಚ. 705)

ಶ್ರೀಗಂಧದ ಚೂರ್ಣ, ನೆಲ್ಲಿಚಟ್ಟಿನ ಚೂರ್ಣ, ನೀಲತಾವರೆಗಡ್ಡೆಯ ಚೂರ್ಣ. ಇವುಗಳೊಂದಿಗೆ ಸಕ್ಕರೆ, ದ್ರಾಕ್ಷೆ ಮತ್ತು ಜೇನು ಕೂಡಿಸಿ ಅರೆದು, ಬರೇ ಪೈತ್ತಿಕಕೆಮ್ಮಿನಲ್ಲಿ, ಕಫ ಕೂಡಿಕೊಂಡಿರುವ ಪೈತ್ತಿಕದಲ್ಲಿಯಾದರೆ ಕಾಳುಮೆಣಸು ಮತ್ತು ಭದ್ರಮುಷ್ಟಿಯ ಚೂರ್ಣವನ್ನು ಅವುಗಳೊಂದಿಗೆ ಕೂಡಿಸಿಕೊಂಡು, ವಾತ ಕೂಡಿಕೊಂಡಿರುವ ಪೈತ್ತಿಕದಲ್ಲಿಯಾದರೆ ತುಪ್ಪ ಕೂಡಿಸಿಕೊಂಡು, ನೆಕ್ಕುವದು.

30. ದ್ರಾಕ್ಷಾಮಲಕಖರ್ಜೂರ(?ರಂ) ಪಿಪ್ಪಲೀಮರಿಚಾನ್ವಿತಮ್ ।
ದ್ರಾಕ್ಷಾದಿ ಚೂರ್ಣ ಪಿತ್ತಕಾಸಹರಂ ಹ್ಯೇತಲ್ಲಿಹ್ಯಾತ್ ಮಾಕ್ಷಿಕಸರ್ಪಿಷಾ ॥ (ರ. ರ. 339)

ದ್ರಾಕ್ಷೆ, ನೆಲ್ಲಿ, ಖರ್ಜೂರ, ಹಿಪ್ಪಲಿ, ಕಾಳುಮೆಣಸು, ಇವುಗಳ ಚೂರ್ಣವನ್ನು ತುಪ್ಪದಲ್ಲಿ ಕಲಸಿ, ಜೇನು ಕೂಡಿಸಿಕೊಂಡು, ನೆಕ್ಕಿದ್ದಲ್ಲಿ ಪಿತ್ತಕಾಸ ಪರಿಹಾರವಾಗುವದು.

31. ತ್ವಗೇಲಾವ್ಯೋಷಮೃದ್ವೀಕಾಪಿಪ್ಪಲೀಮೂಲಪೌಷ್ಕರೈಃ ।
ಲಾಜಾಮುಸ್ತಶಟೀರಾಸ್ನಾಧಾತ್ರೀಫಲವಿಭೀತಕೈಃ ॥
ತ್ವಗೇಲಾದಿ ಲೇಹ ಶರ್ಕರಾಕ್ಷೌದ್ರಸರ್ಪಿರ್ಭಿರ್ಲೇಹಃ ಕಾಸವಿನಾಶನಃ ।
ಶ್ವಾಸಂ ಹಿಕ್ಕಾಂ ಕ್ಷಯಂ ಚೈವ ಹೃದ್ರೋಗಂ ಚ ಪ್ರಣಾಶಯೇತ್ ॥
(ಚ. 705-6)

ಲವಂಗಪಟ್ಟೆ, ಏಲಕ್ಕಿ, ತ್ರಿಕಟು, ದ್ರಾಕ್ಷೆ, ಹಿಪ್ಪಲೀಮೂಲ, ಪುಷ್ಕರಮೂಲ, ಭತ್ತದ ಅರಳು, ಭದ್ರಮುಷ್ಟಿ, ಕಚೋರ, ಅರತೆ (ರಾಸ್ನೆ), ನೆಲ್ಲಿಚಟ್ಟು, ಶಾಂತಿಕಾಯಿ ಸಿಪ್ಪೆ, ಇವುಗಳ ಚೂರ್ಣಕ್ಕೆ ಸಕ್ಕರೆ, ತುಪ್ಪ ಮತ್ತು ಜೇನು ಕೂಡಿಸಿ ತಯಾರಿಸಿದ ಲೇಹವು ಕೆಮ್ಮು ನಾಶನಕಾರಿ ಮತ್ತು ಉಬ್ಬಸ, ಬಿಕ್ಕಟ್ಟು, ಕ್ಷಯ, ಹೃದ್ರೋಗ, ಇವುಗಳನ್ನು ಸಹ ನಾಶಮಾಡುತ್ತದೆ.

32. ಕ್ಷೀರಿವೃಕ್ಷಾಂಕುರಕ್ವಾಥೇ ಪಕ್ವಂ ಕ್ಷೀರಸಮಂ ಘೃತಮ್ ।
ಕ್ಷೀರಿಘೃತ ಪಾಯಯೇತ್ಪಿತ್ತಕಾಸಾರ್ತಂ ಮಧುನಾ ವಾವಲೇಹಯೇತ್ ॥
(ಅ. ಸಂ. II-125)

ಹಾಲುಮರಗಳ ಚಿಗುರುಗಳ ಕಷಾಯದಲ್ಲಿ ತುಪ್ಪವನ್ನು, ಸಮ ಪಾಲು ಹಾಲು ಕೂಡಿಸಿಕೊಂಡು, ಕಾಯಿಸಿ (ಶೋಧಿಸಿ), ಆ ತುಪ್ಪವನ್ನು ಪಿತ್ತಕಾಸದ ಪೀಡೆಯುಳ್ಳವನಿಗೆ ಕುಡಿಸಬೇಕು, ಅಥವಾ ಜೇನು ಕೂಡಿಸಿ ನೆಕ್ಕಿಸಬೇಕು.

ಷರಾ: ಪಂಚ ಕ್ಷೀರ ವೃಕ್ಷಗಳು (ಹಾಲುಮರಗಳು) ಎಂದರೆ 1 ಅತ್ತಿ, 2 ಅಶ್ವತ್ಥ, 3 ಆಲ (ಗೋಳಿ), 4 ಕಲ್ಲಾಲ (ಹೂವರಸಿ), ಮತ್ತು 5 ಬಸುರಿ. ಕಲ್ಲಾಲದ ಸ್ಥಾನದಲ್ಲಿ ಕೆಲವು ಕಡೆಗಳಲ್ಲಿ ದಾಗೆ ಮರವನ್ನೂ, ಬೇರೆ ಕೆಲವರು ವೇತಸ(ಬೆತ್ತ)ವನ್ನೂ ಉಪಯೋಗಿಸುತ್ತಾರಂತೆ ಈ ಪಂಚವೃಕ್ಷಗಳ ಕೆತ್ತೆಗಳಿಗೆ ಪಂಚವಲ್ಕಲ ಎನ್ನುವದಾಗಿರುತ್ತದೆ. ತುಪ್ಪವನ್ನು ಹೆಚ್ಚು ಪ್ರಮಾಣದಲ್ಲಿ ಕುಡಿಯುವದು ವಾತಪರಿಹಾರಕ್ಕೂ, ಅಲ್ಪ ಪ್ರಮಾಣದಲ್ಲಿ ನೆಕ್ಕುವದು ಪಿತ್ತಪರಿಹಾರಕ್ಕೂ, ಜೇನು ಕೂಡಿಸಿಕೊಂಡು ನೆಕ್ಕುವದು ಕಫಪರಿಹಾರಕ್ಕೂ, ಪ್ರಶಸ್ತ.

33. ಆಪೋಥ್ಯ ಕ್ಷೀರಿಣಾಂ ಶೃ(?ಶು)ಂಗಾನ್ ಪಚೇತ್ ಕ್ಷೀರಚತುರ್ಗುಣೇ ।
ಅನ್ಯತ್ ಕ್ಷೀರಿಘೃತ. ದ್ರಾಕ್ಷಾಕಲ್ಕೇ ಘೃತಂ ಸಿದ್ಧಂ ಲಿಹ್ಯಾತ್ಪಿತ್ತಕಾಸನುತ್ ॥
(ಚಿ. ಸಾ. ಸಂ. 243)

ಕ್ಷೀರವೃಕ್ಷ(ಹಾಲುಮರ)ಗಳ ಚಿಗುರುಗಳನ್ನು ಜಜ್ಜಿ ನಾಲ್ಕು ಪಾಲು ಹಾಲಿನಲ್ಲಿ ಬೇಯಿಸಿ, ದ್ರಾಕ್ಷೆಯ ಕಲ್ಕದಲ್ಲಿ ತಯಾರಿಸಿದ ತುಪ್ಪವನ್ನು ನೆಕ್ಕುವದರಿಂದ ಪಿತ್ತಕಾಸ ಪರಿಹಾರವಾಗುತ್ತದೆ.

ಪರಾ ಹಾಲಿಗೆ ನಾಲ್ಕು ಪಾಲು ನೀರು ಕೂಡಿಸಿ ಕಾಲಂಶಕ್ಕೆ ಬತ್ತಿಸಿದ ಚಿಗುರುಗಳ ಕಷಾಯವನ್ನು ಶೋಧಿಸಿ, ಆ ಕಷಾಯಕ್ಕೆ ಚಿಗುರುಗಳ ಸಮತೂಕ ತುಪ್ಪವನ್ನೂ, ಕಾಲುಪಾಲು ದ್ರಾಕ್ಷೆಯ ಕಲ್ಕವನ್ನೂ ಬೆರಸಿ, ಕಾಯಿಸುವದು

34. ಖರ್ಜೂರಪಿಪ್ಪಲೀದ್ರಾಕ್ಷಾಸಿತಾಲಾಜಾ(?ಜಾಃ) ಸಮಾಂಸಿ(?ಶಿ)ಕಾಃ |
ಮಧುಸರ್ಪಿರ್ಯುತೋ ಲೇಹಃ ಪಿತ್ತಕಾಸಹರಃ ಪರಃ || (ರ. ರ. 339)

ಖರ್ಜೂರಾದಿ ಲೇಹ

ಖರ್ಜೂರ, ಹಿಪ್ಪಲಿ, ದ್ರಾಕ್ಷೆ, ಸಕ್ಕರೆ, ಭತ್ತದ ಅರಳು, ಇವುಗಳನ್ನು ಸಮಪಾಲು ತೆಗೆದುಕೊಂಡು, ತುಪ್ಪ ಮತ್ತು ಜೇನು ಕೂಡಿಸಿ, ಅರೆದು ಮಾಡಿದ ಲೇಹವು ಪಿತ್ತಕಾಸ ಪರಿಹಾರಕ್ಕೆ ಉತ್ತಮವಾದದ್ದು.

35. ಮಧುರೈರ್ಜಾಂಗಲರಸೈಃ ಶ್ಯಾಮಾಕಯವಕೋದ್ರವಾಃ |
ಮುದ್ಗಾದಿಯೂಷೈಃ ಶಾಕೈಶ್ಚ ತಿಕ್ತಕೈರ್ಮಾತ್ರಯಾ ಹಿತಾಃ
ಘನಶ್ಲೇಷ್ಮಣಿ ಲೇಹಾಸ್ತು ತಿಕ್ತಕಾ ಮಧುಸಂಯುತಾಃ |
ಶಾಲಯಃ ಸ್ಯುಸ್ತನುಕಫೇ ಷಷ್ಟಿಕಾಶ್ಚ ರಸಾದಿಭಿಃ ||
ಶರ್ಕರಾಮ್ಭೋಽನುಪಾನಾರ್ಥೇ ದ್ರಾಕ್ಷೇಕ್ಷೂಣಾಂ ರಸಾನ್ ಪಯಃ |
ಸರ್ವಂ ಚ ಮಧುರಂ ಶೀತಮವಿದಾಹಿ ಪ್ರಶಸ್ಯತೇ || (ಚ. 706)

ಪೈತ್ತಿಕಕಾಸದಲ್ಲಿ ಪಥ್ಯ

ಜಾಂಗಲಮಾಂಸಗಳ ಮಧುರವಾದ (ಹುಳಿ ಸೇರದ) ರಸಗಳಿಂದ, ಹೆಸರು ಮುಂತಾದವುಗಳ ಸಾರುಗಳಿಂದ, ಅಥವಾ ಕಹಿಯಾದ ಶಾಕಗಳಿಂದ, ಶ್ಯಾಮಕ್ಕಿ, ಯವೆಗೋದಿ, ಅಥವಾ ಹಾರಕ ಧಾನ್ಯ, ಇವುಗಳ ಅನ್ನವನ್ನು ಮಿತವಾಗಿ ಸೇವಿಸುವದು ಪೈತ್ತಿಕಕಾಸದಲ್ಲಿ ಹಿತ. ಕಫವು ಗಟ್ಟಿಯಾದಾಗ್ಗೆ ಕಹಿಯಾದ ಲೇಹಗಳನ್ನು ಜೇನು ಕೂಡಿಸಿ ನೆಕ್ಕಿ ಶಾಲ್ಯನ್ನ ಉಣ್ಣಬೇಕು. ಕಫವು ತೆಳ್ಳಗಾದಾಗ್ಗೆ 60 ದಿನಗಳಲ್ಲಿ ಬೆಳೆದ ಅಕ್ಕಿಯ ಅನ್ನವನ್ನು (ಜಾಂಗಲಮಾಂಸಗಳ ಮಧುರವಾದ) ರಸ ಮುಂತಾದವುಗಳಿಂದ ಉಣ್ಣುವದು. ಪಾನಕ್ಕೆ, ಸಕ್ಕರೆ ಪಾನಕ, ದ್ರಾಕ್ಷೆಯ ಮತ್ತು ಕಬ್ಬಿನ ರಸಗಳು ಮತ್ತು ಹಾಲು, ಇವುಗಳನ್ನು ಉಪಯೋಗಿಸುವದು. ವಿದಾಹಿಯಲ್ಲದ್ದು, ಶೀತವಾದದ್ದು ಮತ್ತು ಮಧುರವಾದ್ದು ಎಲ್ಲವೂ ಪೈತ್ತಿಕಕಾಸದಲ್ಲಿ ಪ್ರಶಸ್ತವಾಗಿರುತ್ತವೆ.

36. ಬಲಿನಂ ವಮನೈರಾದೌ ಶೋಧಯೇತ್ಕಫಕಾಸಿನಮ್ || (ಚ. 707)

ಕಫಜಕೆಮ್ಮಿಗೆ ಚಿಕಿತ್ಸಾರಂಭದಲ್ಲಿ ಶೋಧನ

ಕಫಜಕೆಮ್ಮಿನ ರೋಗಿಯು ಬಲವಂತನಾಗಿದ್ದರೆ ಆರಂಭದಲ್ಲಿ ವಮನಕ್ಕೆ ಔಷಧಗಳನ್ನು ಕೊಟ್ಟು ಶೋಧನ (ವಾಂತಿ) ಮಾಡಿಸಬೇಕು.

37. ಕಟ್ಫಲಂ ಕತ್ತೃಣಂ ಭಾರ್ಗೀಂ ಮುಸ್ತಂ ಧಾನ್ಯಂ ವಚಾಭಯಾ |
ಶುಂಠೀಂ ಪರ್ಪಟಕಃ ಶೃಂಗೀ ಸುರಾಹ್ವಂ ಚ ಶೃತಂ ಜಲೇ ||
ಮಧುಹಿಂಗುಯುತಂ ಪೇಯಂ ಕಾಸೇ ವಾತಕಫಾತ್ಮಕೇ |
ಕಂಠರೋಗೇ ಮುಖೇ ಶೂಲೇ ಶ್ವಾಸಹಿಕ್ಕಾಜ್ವರೇಷು ಚ || (ಚ. 707)

ಕಟ್ಫಲಾದಿ ಕಷಾಯ

ಕಿರುಶಿವಸಿ (ಕರಿಂಕುಮಳ್), ಕತ್ತೃಣ (ಸಂಬಾರಹುಲ್ಲು), ಗಂಟುಭಾರಂಗಿ (ನಿರ್ವಿಷ), ಭದ್ರಮುಷ್ಟಿ, ಕೊತ್ತುಂಬರಿ, ಬಜೆ, ಅಣಿಲೆಕಾಯಿ, ಶುಂಠಿ, ಪರ್ಪಟಕ, ಕರ್ಕಟಶೃಂಗಿ, ದೇವದಾರ, ಇವುಗಳ ಕಷಾಯವನ್ನು, ಜೇನು ಮತ್ತು (ಹುರಿದ) ಹಿಂಗಿನ ಪುಡಿ ಕೂಡಿಸಿಕೊಂಡು, ಪಾನಮಾಡಿದ್ದಲ್ಲಿ, ವಾತಕಫಗಳಿಂದುಂಟಾದ ಕೆಮ್ಮು, ಕಂಠರೋಗ, ಮುಖ(ಬಾಯಿ)ರೋಗ, ಶೂಲೆ, ಉಬ್ಬಸ, ಬಿಕ್ಕಟ್ಟು, ಜ್ವರ ಸಹ ಪರಿಹಾರವಾಗುವವು.

ಷರಾ ಚಿ ಸಾ ಸಂ (ಪು. 244)ದಲ್ಲಿ ಇದೇ ಯೋಗವನ್ನು ಬರೆಯುವಲ್ಲಿ ಬಜೆಯು ಬದಲಾಗಿ ಕಲ್ಲಂಗಡಲೆ ಬೇರು ಉಕ್ತವಾಗಿದೆ.

38. ಪಾಠಾಂ ಶುಂಠೀಂ ಶಟೀಂ ಮೂರ್ವಾಂ ಗವಾಕ್ಷೀಂ ಮುಸ್ತಪಿಪ್ಪಲೀಮ್ |
ಪಾಠಾದಿ ಚೂರ್ಣ ಪಿಷ್ಟ್ವಾ ಘರ್ಮಾಂಬುನಾ ಹಿಂಗುಸ್ಯೆಂಧವಾಭ್ಯಾಂ ಯುತಂ ಪಿಬೇತ್ ||
(ಚ 707)

ಪಾಡಾವಳಿಗಡ್ಡೆ, ಶುಂಠಿ, ಕಚೋರ, ಹೆಗ್ಗುರುಟಿಗೆ (ಪೆರುನ್ಕುರುಂಬ), ಪಾವುಮೆಕ್ಕೆ, ಭದ್ರಮುಷ್ಟಿ, ಹಿಪ್ಪಲಿ, ಇವುಗಳ ಚೂರ್ಣವನ್ನು ಬಿಸಿನೀರಿನಿಂದ ಅರೆದು, ಹುರಿದ ಹಿಂಗಿನ ಪುಡಿ ಮತ್ತು ಸೈಂಧವಉಪ್ಪಿನ ಚೂರ್ಣ ಕೂಡಿಸಿಕೊಂಡು, ಪಾನಮಾಡುವದು. (ಇದರಿಂದ ಕಫಜಕೆಮ್ಮು ಪರಿಹಾರವಾಗುವದು.)

39. ನಾಗರಾತಿವಿಷಾಮುಸ್ತಶೃಂಗೀಕರ್ಕಟಕಸ್ಯ ಚ |
ನಾಗರಾದಿ ಚೂರ್ಣ. ಹರೀತಕೀಂ ಶಟೀಂ ಚ್ಯೆವ ತೇನೈವ ವಿಧಿನಾ ಪಿಬೇತ್ || (ಚ. 707)

ಶುಂಠಿ, ಅತಿವಿಡೆ, ಭದ್ರಮುಷ್ಟಿ, ಕರ್ಕಟಶೃಂಗಿ, ಅಣಿಲೆಕಾಯಿ, ಕಚೋರ, ಇವುಗಳನ್ನು ಅದೇ ಕ್ರಮದಿಂದ ಕುಡಿಯಬೇಕು. (ಅಂದರೆ, ಚೂರ್ಣಿಸಿ ಬಿಸಿ ನೀರಿಂದ ಅರೆದು, ಹುರಿದ ಹಿಂಗಿನ ಪುಡಿ ಮತ್ತು ಸೈಂಧವಲವಣದ ಪುಡಿ ಕೂಡಿಸಿಕೊಂಡು, ಪಾನಮಾಡಿದರೆ ಕಫಜಕೆಮ್ಮು ಪರಿಹಾರ).

40. ಆದ್ರಾರ್ದರ್ಧತುಲಾ ಗುಡಾದಪಿ ತಥಾರ್ಧಾವ್ರಂ ಚ ಕುಸ್ತುಂಬರೀ
ದೀಪ್ಯಾಯೋಜರಣತ್ರಿಜಾತಜಲದಾದೇತತ್ಪಚೇದ್ಯುಕ್ತಿತಃ |
ಆದ್ರ್ರಕಾದಿ ಲೇಹ ಲೇಹೋ ರತ್ನಕಳೇ ತವೈವ ಕಥಿತಃ ಪ್ರಾಣಪ್ರಿಯಾಯಾ ಮಯಾ
ಕಾಸಾಶೋರ್ಜ್ವರಪೀನಸಶ್ವಯಥುರುಗ್ಗುಲ್ಮಕ್ಷಯಧ್ವಂಸನಃ ||
(ವೈ. ಜೀ. ದೀ. 51)

ಹಸೀಶುಂಠಿಯ ರಸ ೫೦ ಪಲ, (ಹಳೇ) ಬೆಲ್ಲ ೫೦ ಪಲ, ಕೊತ್ತುಂಬರಿ, ಓಮ, (ಶುದ್ಧ) ಕಬ್ಬಿಣ, ಜೀರಿಗೆ, ತ್ರಿಜಾತ, ಭದ್ರಮುಷ್ಟಿ, ಇವುಗಳನ್ನು ಅರ್ಧ ಪಲ ಪ್ರಕಾರ ತೆಗೆದುಕೊಂಡು ಮಾಡಿದ ವಸ್ತ್ರಗಾಲಿತ ಚೂರ್ಣ ಸಹ, ಸೇರಿಸಿ ಪಾಕಮಾಡಿದ ಲೇಹದ ಸೇವನದಿಂದ ಕೆಮ್ಮು, ಮೂಲವ್ಯಾಧಿ, ಜ್ವರ, ಪೀನಸ, ಶೋಫವ್ಯಾಧಿ, ಗುಲ್ಮ, ಕ್ಷಯ, ಇವುಗಳು ಧ್ವಂಸವಾಗುವವು.

ಷರಾ ಕಬ್ಬಿಣವನ್ನು ಶುದ್ಧಿಮಾಡುವ ಕ್ರಮ ಹಿಂದೆ ಹೇಳಲ್ಪಟ್ಟಿದೆ 'ಅಯಃ' ಅಂದರೆ 'ಅರಪುಡಿ' ಎಂತ ಅರ್ಥ ಬರೆದದ್ದು ಕಾಣುತ್ತದೆ, ಆದರೆ ಕಬ್ಬಿಣದ ಭಸ್ಮವನ್ನು ಉಪಯೋಗಿಸುವದೇ ಪ್ರಶಸ್ತ ಕೆಳಗೆ 70ನೇ ಸಂಖ್ಯೆಯ ಅಡಿ ಷರಾ ನೋಡಿ

41. ತೈಲಭೃಷ್ಟಂ ಚ ಪಿಪ್ಪಲ್ಯಾಃ ಕಲ್ಕಾಕ್ಷಂ ಸಸಿತೋಪಲಮ್ |
ಪಿಪ್ಪಲೀ ಯೋಗ ಪಿಬೇದ್ವಾ ಶ್ಲೇಷ್ಮಕಾಸಘ್ನಂ ಕುಲತ್ಥರಸಸಂಯುತಮ್ || (ಚ. 707)

ಒಂದು ಕರ್ಷ ಹಿಪ್ಪಲಿಯನ್ನು ಎಳ್ಳೆಣ್ಣೆಯಲ್ಲಿ ಹುರಿದು ಚೂರ್ಣಮಾಡಿ, ಕಲ್ಲುಸಕ್ಕರೆ ಪುಡಿ ಕೂಡಿಸಿ, ಹುರುಳಿ ಕಷಾಯದೊಂದಿಗೆ ಪಾನಮಾಡಿದ್ದಲ್ಲಿ, ಕಫಜಕೆಮ್ಮು ನಾಶವಾಗುವದು.

42. ದೇವದಾರು ಶಟೀ ರಾಸ್ನಾ ಕರ್ಕಟಾಖ್ಯಾ ದುರಾಲಭಾ |
ಪಿಪ್ಪಲೀ ನಾಗರಂ ಮುಸ್ತಂ ಪಥ್ಯಾಧಾತ್ರೀಸಿತೋಪಲಾಃ ||
ಕೆಲವು ಲೇಹ ಯೋಗಗಳು ಮಧುತೈಲಯುತಾವೇತೌ ಲೇಹೌ ವಾತಾಸುಗೇ ಕಫೇ |
ಪಿಪ್ಪಲೀ ಪಿಪ್ಪಲೀಮೂಲಂ ಚಿತ್ರಕೋ ಹಸ್ತಿಪಿಪ್ಪಲೀ ||
ಪಥ್ಯಾ ತಾಮಲಕೀ ಧಾತ್ರೀ ಭದ್ರಮುಸ್ತಾನಿ ಪಿಪ್ಪಲೀ |
ದೇವದಾರ್ವಭಯಾ ಮುಸ್ತಂ ಪಿಪ್ಪಲೀ ವಿಶ್ವಭೇಷಜಮ್ ||
ವಿಶಾಲಾ ಪಿಪ್ಪಲೀ ಮುಸ್ತಂ ತ್ರಿವೃತಾ ಚೇತಿ ಲೇಹಯೇತ್ |
ಚತುರೋ ಮಧುನಾ ಲೇಹಾನ್ ಕಫಕಾಸಹರಾನ್ ಭಿಷಕ್ ||
(ಚ 707-708)

ದೇವದಾರ, ಕಚೋರ, ಅರತೆ (ರಾಸ್ನೆ), ಕರ್ಕಟಶೃಂಗಿ, ಒಳ್ಳಿತುರಚಿ ಬೇರು, ಇವುಗಳ ಚೂರ್ಣವನ್ನು, ಅಥವಾ ಹಿಪ್ಪಲಿ, ಶುಂಠಿ, ಭದ್ರಮುಷ್ಟಿ, ಅಣಿಲೆಕಾಯಿ, ನೆಲ್ಲಿಚಟ್ಟು, ಕಲ್ಲು ಸಕ್ಕರೆ, ಇವುಗಳ ಚೂರ್ಣವನ್ನು, ಜೇನು ಮತ್ತು ಎಳ್ಳೆಣ್ಣೆ ಕೂಡಿಸಿಕೊಂಡು, ವಾತ ಕೂಡಿ ಕೊಂಡ ಕಫದ ಕೆಮ್ಮಿನಲ್ಲಿ ನೆಕ್ಕುವದು.

(1) ಹಿಪ್ಪಲಿ, ಹಿಪ್ಪಲಿಮೂಲ, ಚಿತ್ರಮೂಲ, ಗಜಹಿಪ್ಪಲಿ, ಇವುಗಳ ಚೂರ್ಣ, (2) ಅಣಿಲೆಕಾಯಿ, ನೆಲನೆಲ್ಲಿ, ನೆಲ್ಲಿಚಟ್ಟು, ಭದ್ರಮುಷ್ಟಿ, ಹಿಪ್ಪಲಿ, ಇವುಗಳ ಚೂರ್ಣ, (3) ದೇವದಾರ, ಅಣಿಲೆಕಾಯಿ, ಭದ್ರಮುಷ್ಟಿ, ಹಿಪ್ಪಲಿ, ಶುಂಠಿ, ಇವುಗಳ ಚೂರ್ಣ, (4) ಹಾವುಮೆಕ್ಕೆ, ಹಿಪ್ಪಲಿ, ಭದ್ರಮುಷ್ಟಿ, ತಿಗಡೆ, ಇವುಗಳ ಚೂರ್ಣ, ಈ ನಾಲ್ಕು ಚೂರ್ಣ ಯೋಗಗಳೊಳಗೆ ಒಂದನ್ನು ಜೇನಿನಲ್ಲಿ ಕಲಸಿ ವೈದ್ಯನು ನೆಕ್ಕಿಸಬೇಕು; ಅದರಿಂದ ಕಫದ ಕೆಮ್ಮು ಪರಿಹಾರ

43. ದಶಮೂಲಾಢಕೇ ಪ್ರಸ್ಥಂ ಘೃತಸ್ಯಾಕ್ಷಸಮೈಃ ಪಚೇತ್ |
ಪುಷ್ಕರಾಹ್ವಶಟೀಬಿಲ್ವಸುರಸೈರ್ವ್ಯೋಷಹಿಂಗುಭಿಃ
ದಶಮೂಲಾದಿ ಘೃತ ಪೇಯಂ ಪೇಯಾನುಪಾನಂ ತತ್ ಕಾಸೇ ವಾತಕಫಾತ್ಮಕೇ |
ಶ್ವಾಸರೋಗೇಷು ಸರ್ವೇಷು ಕಫವಾತಾತ್ಮಕೇಷು ಚ (ಚ. 708)

ದಶಮೂಲಗಳ ಕಷಾಯ ೧ ಆಢಕದಲ್ಲಿ ೧ ಪ್ರಸ್ಥ ತುಪ್ಪವನ್ನೂ, (ಕಲ್ಕಕ್ಕೆ) ಪುಷ್ಕರ ಮೂಲ, ಕಚೋರ, ಬಿಲ್ವಪತ್ರೆ ಬೇರು, ತುಳಸಿ, ತ್ರಿಕಟು, ಹಿಂಗು, ಇವುಗಳನ್ನು ಒಂದೊಂದು ಕರ್ಷ ಪ್ರಕಾರ ತೆಗೆದುಕೊಂಡು ಮಾಡಿದ ಚೂರ್ಣವನ್ನೂ ಸೇರಿಸಿ, ಪಾಕಮಾಡಿದ ತುಪ್ಪವನ್ನು (ಪೇಯಾ ಎಂಬ) ಗಂಜಿಯ ಅನುಪಾನದಿಂದ ಸೇವಿಸಲು, ವಾತಕಫಾತ್ಮಕವಾದ ಕೆಮ್ಮು ಮತ್ತು ಕಫವಾತಾತ್ಮಕವಾದ ಎಲ್ಲಾ ಉಬ್ಬಸರೋಗಗಳು ವಾಸಿಯಾಗುವವು.

44. ಧೂಮಾಂಸ್ತಾನೇವ ದದ್ಯಾಚ್ಚ ಯೇ ಪ್ರೋಕ್ತಾ ವಾತಕಾಸಿನಾಮ್ |
ಧೂಮಗಳು ಕೋಶಾತಕೀಫಲಾನ್ಮಧ್ಯಂ ಪಿಬೇದ್ವಾ ಸಮನಃಶಿಲಮ್ ||
(ಚ. 708-709)

ವಾತಜಕೆಮ್ಮಿನವರಿಗೆ ಹೇಳಲ್ಪಟ್ಟ ಹೊಗೆಗಳನ್ನೇ ಕಫಜಕೆಮ್ಮಿನಲ್ಲಿಯೂ ಉಪಯೋಗಿಸ ತಕ್ಕದ್ದು; ಅಥವಾ ಕಹಿಹೀರೆಕಾಯಿಯೊಳಗಿನ ಮಧ್ಯದ ನಾರಿನೊಂದಿಗೆ ಮಣಿಶಿಲೆಯನ್ನು ಕೂಡಿಸಿ, ಅದರ ಹೊಗೆಯನ್ನು ಪಾನಮಾಡಿಸಬೇಕು.

45. ತಮಕಃ ಕಫಕಾಸೇ ತು ಸ್ಯಾಚ್ಚೇತ್ಪಿತ್ತಾನುಬನ್ಧಜೇ |
ಪಿತ್ತಕಾಸಕ್ರಿಯಾಂ ತತ್ರ ಯಥಾವಸ್ಥಂ ಪ್ರಯೋಜಯೇತ್ ||
ಸಂಸರ್ಗ ದೋಷ ಗಳಲ್ಲಿ ಪ್ರತಿಕಾರ ವಾತೇ ಕಫಾನುಬನ್ಧೇ ತು ಕುರ್ಯಾತ್ಕಫಹರೀಂ ಕ್ರಿಯಾಮ್ |
ಪಿತ್ತಾನುಬನ್ಧಯೋರ್ವಾತಕಫಯೋಃ ಪಿತ್ತನಾಶಿನೀಮ್
ಆರ್ದ್ರೇ ವಿರೂಕ್ಷಣಂ ಶುಷ್ಕೇ ಸ್ನಿಗ್ಧಂ ವಾತಕಫಾತ್ಮಕೇ |
ಕಾಸೇ ಽನ್ನಪಾನಂ ಕಫಜೇ ಸಪಿತ್ತೇ ತಿಕ್ತಸಂಯುತಮ್ || (ಚ. 709)

ಪಿತ್ತವನ್ನನುಸರಿಸಿ ಬಂದ ಕಫಜಕೆಮ್ಮಿನಲ್ಲಿ 'ತಮಕ' ಶ್ವಾಸವು ಕಂಡರೆ, ಪಿತ್ತಜಕೆಮ್ಮಿಗೆ ಹೇಳಲ್ಪಟ್ಟ ಪ್ರತಿಕ್ರಿಯೆಯನ್ನು ಅವಸ್ಥೆಗೆ ತಕ್ಕ ಹಾಗೆ ಪ್ರಯೋಗಿಸಬೇಕು. ಕಫವನ್ನನುಸರಿಸಿ ಬಂದ ವಾತದೋಷದಲ್ಲಿ ಕಫಹರವಾದ ಕ್ರಿಯೆಯನ್ನು ಮಾಡತಕ್ಕದ್ದು. ಪಿತ್ತವನ್ನನುಸರಿಸಿ ಬಂದ ವಾತಕಫದೋಷಗಳಿಗೆ ಪಿತ್ತಹರವಾದ ಕ್ರಿಯೆಯನ್ನು ನಡಿಸತಕ್ಕದ್ದು. ವಾತಕಫಾತ್ಮಕವಾದ ಕೆಮ್ಮಿನಲ್ಲಿ ಕಫವು ಹಸಿ (ಸಡಿಲು) ಆಗಿದ್ದರೆ ರೂಕ್ಷಣಗುಣವುಳ್ಳ ಅನ್ನಪಾನಗಳನ್ನೂ, ಕಫವು ಒಣಗಿಕೊಂಡಿದ್ದರೆ ಸ್ನಿಗ್ಧವಾದ ಅನ್ನಪಾನಗಳನ್ನೂ ಮತ್ತು ಪಿತ್ತ ಕೂಡಿಕೊಂಡ ಕಫಜಕೆಮ್ಮಿನಲ್ಲಿ ಕಹಿಯುಕ್ತವಾದ ಅನ್ನಪಾನಗಳನ್ನೂ, ಉಪಯೋಗಿಸತಕ್ಕದ್ದು.

46. ನಿರ್ಗುಂಡಿಪತ್ರಸ್ವರಸೇನ ಸಿದ್ಧಂ ಸರ್ಪಿಃ ಕಫೋತ್ಥಂ ವಿನಿಹನ್ತಿ ಕಾಸಮ್ ||
(ಚಿ. ಸಾ. ಸಂ. 241)

ಕಫಜಕೆಮ್ಮಿಗೆ ನಿರ್ಗುಂಡೀಘೃತ

ಕರೀನುಕ್ಕಿ ಸೊಪ್ಪಿನ ರಸದಿಂದ ತಯಾರಿಸಿದ ಘೃತವು ಕಫದಿಂದುಂಟಾದ ಕೆಮ್ಮನ್ನು ನಾಶಮಾಡುತ್ತದೆ.

47. ವಿಭೀತಕಂ ಘೃತಾಭ್ಯಕ್ತಂ ಗೋಶಕೃತ್ಪರಿವೇಷ್ಟಿತಮ್ |
ಶಾಂತಿಕಾಯಿಯ ಯೋಗ ಸ್ವಿನ್ನಮಗ್ನೌ ಹರೇತ್ಕಾಸಂ ಧ್ರುವಮಾಸ್ಯವಿಧಾರಿತಮ್ ||
(ಚಿ. ಸಾ. ಸಂ. 244)

(ಹಸಿ) ಶಾಂತಿಕಾಯಿಗೆ ತುಪ್ಪವನ್ನು ಸವರಿ, ಗೋವಿನ ಸಗಣಿಯನ್ನು ಮೆತ್ತಿ, ಕೆಂಡದಲ್ಲಿ ಹುಗಿದು ಬೇಯಿಸಿ, ಆ ಕಾಯಿಯನ್ನು ಬಾಯಿಯೊಳಗೆ ಇಟ್ಟುಕೊಂಡಲ್ಲಿ, ಕೆಮ್ಮು ನಿಶ್ಚಯವಾಗಿ ಪರಿಹಾರವಾಗುವದು.

48. ವ್ಯೋಷಾಜಮೋದಚಿತ್ರಕಜೀರಕಷಡ್ಗ್ರನ್ಥಿಕಚವ್ಯಕಲ್ಕಿತಮ್ |
ವ್ಯೋಷಾದಿಘೃತ ಸರ್ಪಿಃ ಕಫಕಾಸಹರಂ ವಾಸಕರಸಸಾಧಿತಂ ಸಮಧು
(ಚಿ. ಸಾ. ಸಂ. 244)

ಆಡುಸೋಗೆ ಎಲೆಗಳ ರಸದಲ್ಲಿ, ತ್ರಿಕಟು, ಅಜಮೋದ, ಚಿತ್ರಮೂಲ, ಜೀರಿಗೆ, ಹಿಪ್ಪಲಿ ಮೂಲ, ಕಾಡುಮೆಣಸಿನ ಬೇರು, ಇವುಗಳ ಕಲ್ಕದಿಂದ, ತಯಾರಿಸಿದ ತುಪ್ಪವನ್ನು, ಜೇನು ಕೂಡಿಸಿ, ಸೇವಿಸಿದ್ದಲ್ಲಿ ಕಫಜಕೆಮ್ಮು ಪರಿಹಾರವಾಗುವದು.

49. ಲವಂಗಜಾತೀಫಲಪಿಪ್ಪಲೀನಾಂ ಭಾಗಾನ್ಪ್ರಕಲ್ಪ್ಯಾಕ್ಷಸಮಾನಮಾ-
ಷಾಮ್ ।

ಲಘುಲವಂಗಾದಿ ಚೂರ್ಣ

ಕರ್ಷಾರ್ಧಮೇಕಂ ಮರಿಚಸ್ಯ ದದ್ಯಾತ್ಪಲಾನಿ ಚತ್ವಾರಿ ಮಹೌಷಧಸ್ಯ
ಸಿತಾಸಮಂ ಚೂರ್ಣಮಿದಂ ಪ್ರಸಹ್ಯ ರೋಗಾನಿಮಾಂಸ್ತು ಪ್ರಬಲಾನ್ನಿ-
ಹನ್ತಿ ।
ಕಾಸಜ್ವರಾರೋಚಕಮೇಹಗುಲ್ಮಶ್ವಾಸಾಗ್ನಿಮಾಂದ್ಯಗ್ರಹಣೀಗದೇಷು ॥
(ಚಿ. ಸಾ. ಸಂ. 245)

ಲವಂಗ, ಜಾಯಿಕಾಯಿ, ಹಿಪ್ಪಲಿ, ಇವುಗಳು ೧ ಕರ್ಷ ಪ್ರಕಾರ, ಕಾಳುಮೆಣಸು ಒಂದೂ ವರ ಕರ್ಷ, ಶುಂಠಿ ೪ ಪಲ, (ಮೊತ್ತಕ್ಕೆ) ಸರೀಪಾಲು ಸಕ್ಕರೆ, ಈ ಚೂರ್ಣವು ಕೆಮ್ಮು, ಜ್ವರ, ಅರುಚಿ, ಮೇಹ, ಗುಲ್ಮ, ಉಬ್ಬಸ, ಅಗ್ನಿಮಾಂದ್ಯ, ಗ್ರಹಣೀ, ಈ ರೋಗಗಳನ್ನು ಪ್ರಬಲವಾಗಿ ದ್ದಾಗ್ಯೂ ಬಲಾತ್ಕಾರದಿಂದ ನಾಶಮಾಡುವದು.

ಕರಿ ಮೆಣಸು ಅರ್ಧ ಪಲ ಎಂತ ವಾ ಪ್ರ (ಪು 374) ಮತ್ತು ಚಿ ಸಾ ಸಂ ದ ಇನ್ನೊಂದು ಕಡೆಯಲ್ಲಿ (ಪು 251)

50. ಸಿಂಹಾಸ್ಯಾಮೃತಸಿಂಹೀನಾಂ ಕ್ವಾಥಂ ಮಧುಸಮಾಯುತಮ್ ।
ಪಿಬೇತ್ಸಪಿತ್ತೇ ಕಫಜೇ ಕಾಸೇ ಶ್ವಾಸೇ ಜ್ವರೇ ಕ್ಷಯೇ ॥

ಸಿಂಹಾಸ್ಯಾದಿ ಕಷಾಯ

(ಚಿ. ಸಾ. ಸಂ. 245)

ಆಡುಸೋಗೆ ಬೇರು, ಅಮೃತಬಳ್ಳಿ, ಗುಳ್ಳದ ಬೇರು, ಇವುಗಳ ಕಷಾಯವನ್ನು, ಜೇನು ಕೂಡಿಸಿ, ಪಾನಮಾಡುವದರಿಂದ ಪಿತ್ತಕೂಡಿದ ಕಫಜ ಕೆಮ್ಮು, ಉಬ್ಬಸ, ಜ್ವರ ಮತ್ತು ಕ್ಷಯ ಪರಿಹಾರವಾಗುವವು.

51. ವಾಸಕಃ ಸ್ವರಸಃ ಪೇಯೋ ಮಧುಯುಕ್ತೋ ಹಿತಾಶಿನಾ ।
ಪಿತ್ತಶ್ಲೇಷ್ಮಕೃತೇ ಕಾಸೇ ರಕ್ತಪಿತ್ತೇ ವಿಶೇಷತಃ ॥ (ಚಿ. ಸಾ. ಸಂ. 245)

ಆಡುಸೋಗೆ ರಸದ ಯೋಗ

ಪಿತ್ತಕಫಗಳಿಂದ ಉಂಟಾದ ಕೆಮ್ಮಿನಲ್ಲಿ, ವಿಶೇಷವಾಗಿ ರಕ್ತಪಿತ್ತದಲ್ಲಿ, ಆಡುಸೋಗೆ ಎಲೆಗಳ ರಸವನ್ನು, ಜೇನು ಕೂಡಿಸಿಕೊಂಡು, ಪಾನಮಾಡಿ, ಹಿತವಾದ ಆಹಾರದಲ್ಲಿರಬೇಕು.

52. ಕಂಟಕಾರೀಕೃತಃ ಕ್ವಾಥಃ ಸಕೃಷ್ಣಃ ಸರ್ವಕಾಸಹಾ । (ರ. ರ. 339)

ಕಂಟಕಾರೀ ಕಷಾಯ

ಕಿರಿಗುಳ್ಳದ ಕಷಾಯವನ್ನು, ಹಿಪ್ಪಲಿಚೂರ್ಣ ಕೂಡಿಸಿಕೊಂಡು, ಸೇವಿಸಿದರೆ, ಎಲ್ಲಾ ಕಾಸಗಳು ಪರಿಹಾರವಾಗುವವು.

53. ತಿನ್ತ್ರಿಡೀಪತ್ರಜಃ ಕ್ವಾಥೋ ಹಿಂಗೂ(?ಗು)ಸೈಂಧವಸಂಯುತಃ |
ದುಷ್ಟಕಾಸಂ ಜಯೇದಾಶು ಘನವೃಂದಮಿವಾನಿಲಃ ||

ಹುಣಸೇಸೊಪ್ಪಿನ ಕಷಾಯ

(ರ. ರ. 339-340)

ಹುಣಸೆಸೊಪ್ಪಿನ ಕಷಾಯವು, (ಹುರಿದ) ಹಿಂಗಿನ ಪುಡಿ ಮತ್ತು ಸೈಂಧವಲುಪ್ಪು ಕೂಡಿಸಿಕೊಂಡು, ಸೇವಿಸಲ್ಪಟ್ಟರೆ, ಮೋಡಗಳ ಸಮೂಹವನ್ನು ಗಾಳಿಯು ಹೇಗೋ, ಹಾಗೆ ಅದು ದುಷ್ಟ ಕೆಮ್ಮನ್ನು ಬೇಗನೇ ಜಯಿಸುವದು.

54. ಯವಾನ್ನೈಃ ಕಟುರೂಕ್ಷೋಷ್ಣೈಃ ಕಫಘ್ನೈಶ್ಚಾಪ್ಯುಪಾಚರೇತ್ |
ಪಿಪ್ಪಲೀಕ್ಷಾರಿಕೈರ್ಯೂಷೈಃ ಕೌಲತ್ಥೈರ್ಮೂಲಕಸ್ಯ ಚ ||
ಲಘೂನ್ಯನ್ನಾನಿ ಭುಂಜೀತ ರಸೈರ್ವಾ ಕಟುಕಾನ್ವಿತೈಃ |
ದಾನ್ವವೈಲ್ವ(?ಲ)ರಸೈರ್ಲೇಹ್ಯೈಃ ತಿಲಸರ್ಷಪಬಿಲ್ವಜೈಃ ||
ಮಧ್ವಮ್ಲೋಷ್ಣಾಮ್ಬುತಕ್ರಂ ವಾ ಮದ್ಯಂ ವಾ ನಿಗದಂ ಪಿಬೇತ್ || (ಚ. 707)

ಕಫಜಕೆಮ್ಮಿನಲ್ಲಿ ಪಥ್ಯ

(ಕಫಕಾಸದವನಿಗೆ) ಕಟು, ರೂಕ್ಷ ಮತ್ತು ಉಷ್ಣವಾದ ಮತ್ತು ಕಫಹರವಾದ ದ್ರವ್ಯಗಳ ಸೇರಿಕೆಯಿಂದ ತಯಾರಿಸಲ್ಪಟ್ಟ ಯವಾನ್ನಗಳನ್ನು ಕೊಟ್ಟು ಉಪಚರಿಸಬೇಕು. ಹಿಪ್ಪಲಿ ಯವಕ್ಷಾರಗಳಿಂದ ಕೂಡಿದ ಹುರುಳಿಸಾರಿನಿಂದ, ಅಥವಾ ಮೂಲಂಗಿಸಾರಿನಿಂದ, ಕಟುದ್ರವ್ಯಗಳನ್ನು ಸೇರಿಸಿ ಮಾಡಿದ ಜಾಂಗಲ ಮತ್ತು ಬಿಲೇಶಯ ವರ್ಗಗಳಿಗೆ ಸೇರಿದ ಮಾಂಸಗಳ ರಸಗಳಿಂದ, ಎಳ್ಳು, ಸಾಸಿವೆ ಮತ್ತು ಬಿಲ್ವಪತ್ರೆಕಾಯಿ ಸೇರಿಸಿ ಮಾಡಿದ ಲೇಹಗಳ ಸಮೇತ ಲಘುವಾದ ಅನ್ನಗಳನ್ನು ಅವನು ಉಣ್ಣಬೇಕು; ಮತ್ತು ಪಾನಕ್ಕೆ ಜೇನು ಅಥವಾ (ಮಾದಳ ಮುಂತಾದ) ಹುಳಿರಸಗಳಿಂದ ಕೂಡಿದ ನೀರನ್ನು, ಅಥವಾ ಬಿಸಿನೀರನ್ನು, ಅಥವಾ ಮಜ್ಜಿಗೆಯನ್ನು, ಅಥವಾ (ಶುದ್ಧವಾದ) ಮದ್ಯವನ್ನು, ಕುಡಿಯಬೇಕು.

ಎಳ್ಳು, ಸಾಸಿವೆ ಮತ್ತು ಬಿಲ್ವಪತ್ರೆಕಾಯಿಯಿಂದ ಮಾಡಿದ ಲೇಹಗಳಿಂದ (ಚಟ್ನಿಯಿಂದ) ಎಂಬಲ್ಲಿ 'ಎಳ್ಳು, ಸಾಸಿವೆ, ಬೇವುಗಳ ಎಣ್ಣೆಗಳಿಂದ' ಎಂತ ವಾ. (ಪು 288)

55. ಕಾಸಮಾತ್ಯಯಿಕಂ ಮತ್ವಾ ಕ್ಷತಜಂ ತ್ವರಯಾ ಜಯೇತ್ |
ಮಧುರೈರ್ಜೀವನೀಯೈಶ್ಚ ಬಲಮಾಂಸವಿವರ್ಧನೈಃ (ಚ. 709)

ಕ್ಷತಜ ಕೆಮ್ಮಿಗೆ ಉಪಕ್ರಮ

ಕ್ಷತಜಕೆಮ್ಮು ಅಪಾಯಕರ ಎಂಬುದನ್ನು ತಿಳಿದು, ಬಲವನ್ನೂ ಮಾಂಸವನ್ನೂ ವೃದ್ಧಿಸತಕ್ಕಂಥ ಮಧುರವರ್ಗದ ದ್ರವ್ಯಗಳಿಂದಲೂ, ಜೀವನೀಯಗಳಿಂದಲೂ, ಆ ಕೆಮ್ಮನ್ನು ಬೇಗನೇ ಜಯಿಸಬೇಕು.

ಪಾ ಜೀವನೀಯ ಮತ್ತು ಮಧುರವರ್ಗಗಳ ವಿವರಕ್ಕೆ ಹಿಂದೆ 71ನೇ ಪುಟದಲ್ಲಿ 16ನೇ ಸಂಖ್ಯೆಯಡಿಯ ಪಾ ನೋಡಿ

56. ಪಿಪ್ಪಲೀಮಧುಕಂ ಪಿಷ್ಟಂ ಕಾರ್ಷಿಕಂ ಸಸಿತೋಪಲಮ್ |
ಪ್ರಾಸ್ಥಿಕಂ ಗವ್ಯಮಾಜಂ ತು ಕ್ಷೀರಮಿಕ್ಷುರಸಸ್ತಥಾ ||
ಯವಗೋಧೂಮಮೃದ್ವೀಕಾಚೂರ್ಣಮಾಮಲಕೀರಸಃ |
ತೈಲಂ ಚ ಪ್ರಸೃತಾಂಶಾನಿ ತತ್ಸರ್ವಂ ಮೃದುನಾಗ್ನಿನಾ ||

ಪಿಪ್ಪಲ್ಯಾದಿ ಲೇಹ

ಪಚೇಲ್ಲೇಹಂ ಘೃತಕ್ಷೌದ್ರಯುಕ್ತಃ ಸ ಕ್ಷತಕಾಸನುತ್ ।
ಶ್ವಾಸಹೃದ್ರೋಗಕಾಸೇಷು ಹಿತೋ ವೃದ್ಧಾಲ್ಪರೇತಸೇ ॥ (ಚ. 709)

ಹಿಪ್ಪಲಿ, ಜ್ಯೇಷ್ಠಮಧು ಮತ್ತು ಕಲ್ಲುಸಕ್ಕರೆ, ೧ ಕರ್ಷ ಪ್ರಕಾರ, ಚೂರ್ಣಮಾಡಿ ಆ ಚೂರ್ಣದೊಂದಿಗೆ ೧ ಪ್ರಸ್ಥ ದನದ ಹಾಲು, ೧ ಪ್ರಸ್ಥ ಆಡಿನ ಹಾಲು, ೧ ಪ್ರಸ್ಥ ಕಬ್ಬಿನ ರಸ, ಯವೆಗೋದಿ, ಗೋದಿ, ದ್ರಾಕ್ಷೆ, ಇವುಗಳ ಚೂರ್ಣ ಎರಡು ಪಲ ಪ್ರಕಾರ, ನೆಲ್ಲಿರಸ ೨ ಪಲ, ಎಳ್ಳೆಣ್ಣೆ ೨ ಪಲ, ಇವುಗಳನ್ನೆಲ್ಲಾ ಕೂಡಿಸಿ, ಮೃದುವಾದ ಬೆಂಕಿಯಿಂದ ಬೇಯಿಸಿ ಲೇಹ ಮಾಡಿ, ಆ ಲೇಹವನ್ನು, ತುಪ್ಪ ಮತ್ತು ಜೇನು ಕೂಡಿಸಿಕೊಂಡು, ಸೇವಿಸಿದರೆ ಕ್ಷತಜಕೆಮ್ಮು ನಾಶವಾಗುವದು; ಉಬ್ಬಸ, ಹೃದ್ರೋಗ, ಕೆಮ್ಮು, ಈ ರೋಗದವರಿಗೂ, ಮುದುಕರಿಗೂ, ರೇತಸ್ಸು ಕಡಿಮೆಯಾದವರಿಗೂ ಈ ಲೇಹವು ಹಿತಕರವಾದದ್ದು.

ಪಲಾ ದ್ರವಪದಾರ್ಥದ ಮಾನ ಒಣಗಲಿನದಕ್ಕಿಂತ ದುಬಾರಿಯಾಗಿ ತೆಗೆದುಕೊಳ್ಳಬೇಕೆಂಬ ವಚನ ಕುಡವಕ್ಕೂ ಅದಕ್ಕಿಂತ ಹೆಚ್ಚಿನ ಮಾನಕ್ಕೂ ಸಂಬಂಧಪಟ್ಟದ್ದಾದ್ದರಿಂದ, ಇಲ್ಲಿ ಪ್ರಸ್ಥಕ್ಕೆ ನಾಲ್ಕು ಪಲ ತೆಗೆದು ಕೊಳ್ಳಬಾರದು (ಅ ಸಂ ಇಂ ವ್ಯಾ II-131)

57. ಕ್ಷತಕಾಸಾಭಿಭೂತಾನಾಂ ವೃತ್ತಿಃ ಸ್ಯಾತ್ಪೈತ್ತಕಾಸಿಕೀ ।
ಕ್ಷೀರಸರ್ಪಿರ್ಮಧುಪ್ರಾಯಾ ಸಂಸರ್ಗೇ ತು ವಿಶೇಷಣಮ್ ॥

ಕ್ಷತಜಕೆಮ್ಮಿನ ಚಿಕಿತ್ಸೆಯಲ್ಲಿ ಅವಸ್ಥಾಂತರ ವಿಚಾರ

ವಾತಪಿತ್ತಾರ್ದಿತೇಽಭ್ಯಂಗೋ ಗಾತ್ರಭೇದೇ ಘೃತೈರ್ಹಿತಃ ।
ತೈಲೈರ್ಮಾರುತರೋಗಘ್ನೈಃ ಪೀಡ್ಯಮಾನೇ ಚ ವಾಯುನಾ ॥
ಹೃತ್ಪಾರ್ಶ್ವಾರ್ತಿಷು ಪಾನಂ ಸ್ಯಾಜ್ಜೀವನೀಯಸ್ಯ ಸರ್ಪಿಷಃ ।
ಸದಾಹಂ ಕಾಸಿನೋ ರಕ್ತಂ ಷ್ಠೀವತಃ ಸಬಲೇಽನಲೇ ॥
ಮಾಂಸೋಚಿತೇಭ್ಯಃ ಕಾಸಿಭ್ಯೋ ಲಾವಾದೀನಾಂ ರಸಾ ಹಿತಾಃ ।
ತೃಷ್ಣಾರ್ತಾನಾಂ ಪಯಶ್ಛಾಗಂ ಶರಮೂಲಾದಿಭಿಃ ಶೃತಮ್ ॥
ರಕ್ತೇ ಸ್ರೋತೋಭ್ಯ ಆಸ್ಯಾದ್ವಾಪ್ಯಾಗತೇ ಕ್ಷೀರಜಂ ಘೃತಮ್ ।
ನಸ್ಯಂ ಪಾನಂ ಯವಾಗೂರ್ವಾ ಶ್ರಾನ್ತೇ ಕ್ಷಾಮೇ ಹತಾನಲೇ ॥
ಸ್ತಂಭಾಯಾಸೇಷು ಮಹತೀಂ ಮಾತ್ರಾಂ ವಾ ಸರ್ಪಿಷಃ ಪಿಬೇತ್ ।
ಕುರ್ಯಾದ್ವಾ ವಾತರೋಗಘ್ನಂ ಪಿತ್ತರಕ್ತಾವಿರೋಧಿ ಯತ್ ॥
(ಚ. 709-710)

ಕ್ಷತಜಕೆಮ್ಮಿನವರಿಗೆ ಹಾಲು, ತುಪ್ಪ ಮತ್ತು ಜೇನು ಹೆಚ್ಚಾಗಿರುವ, ಪೈತ್ತಿಕಕೆಮ್ಮಿಗೆ ಹೇಳಲ್ಪಟ್ಟ ಚಿಕಿತ್ಸೆಯನ್ನು ಮಾಡಬೇಕು. ದೋಷಗಳು ಸಂಸರ್ಗವಾಗಿರುವಲ್ಲಿ ವಿಶೇಷ ವೇನೆಂದರೆ:—ವಾತಪಿತ್ತಗಳ ಪೀಡೆಯಿಂದ ಶರೀರದಲ್ಲಿ ಒಡೆದ ಹಾಗಿನ ನೋವು ಇರುವಲ್ಲಿ ತುಪ್ಪಗಳನ್ನು ಹಚ್ಚಿ ಅಭ್ಯಂಗಮಾಡಿಸುವದು ಮತ್ತು ವಾಯುವಿನ ಪೀಡೆ ಇರುವಲ್ಲಿ ವಾತ ರೋಗಹರವಾದ ತೈಲಗಳಿಂದ ಅಭ್ಯಂಗಮಾಡಿಸುವದು ಹಿತ; ಎದೆಯಲ್ಲಿ ಮತ್ತು ಪಕ್ಕಗಳಲ್ಲಿ ನೋವು ಇರುವ ಸಂಗತಿಗಳಲ್ಲಿ, ರೋಗಿಯು ಉರಿಯೊಡನೆ ರಕ್ತವನ್ನು ಉಗುಳುತ್ತಿರುವದಕ್ಕೆ, ಅಗ್ನಿಯು ಬಲವಾಗಿದ್ದರೆ, ಜೀವನೀಯ ವರ್ಗದ ಔಷಧಿಗಳಿಂದ ತಯಾರಿಸಿದ ತುಪ್ಪವನ್ನು ಅವನಿಗೆ ಪಾನಮಾಡಿಸುವದು ಹಿತ; ಮಾಂಸದ ಅಭ್ಯಾಸವುಳ್ಳ ಕೆಮ್ಮುರೋಗದವರಿಗೆ

ಲಾವಾದಿಗಳ ಮಾಂಸಗಳಿಂದ ತಯಾರಿಸಲ್ಪಟ್ಟ ರಸಗಳು ಹಿತವಾಗುವವು; ಬಾಯಾರಿಕೆಯಿಂದ ಕಷ್ಟಪಡುವವರಿಗೆ ಶರಾದಿಪಂಚತೃಣಗಳ ಮೂಲಗಳನ್ನು ಹಾಕಿ ಕಾಯಿಸಿದ ಆಡಿನ ಹಾಲು ಹಿತ; ಸ್ರೋತಸ್ಸುಗಳಿಂದಾಗಲಿ, ಬಾಯಿಯಿಂದಾಗಲಿ ರಕ್ತವು ಹೊರಗೆ ಬರುತ್ತಿದ್ದರೆ, (ಆ ಪಂಚಮೂಲಗಳೊಂದಿಗೆ ಕಾಯಿಸಲ್ಪಟ್ಟ) ಹಾಲಿನಿಂದ ತೆಗೆದ ಬೆಣ್ಣೆಯ ತುಪ್ಪವನ್ನು ನಸ್ಯಕ್ಕೂ, ಪಾನಕ್ಕೂ, ಉಪಯೋಗಿಸುವದು; ಅಗ್ನಿಬಲವಿಲ್ಲದೆ ಬಳಲಿ ಕಂಗಾಲು ಆದವನಿಗೆ (ಬೃಂಹಣ-ದೀಪನಕರವಾದ ಔಷಧಗಳೊಂದಿಗೆ ಮಾಡಿದ) ಯವಾಗೂ ಗಂಜಿಗಳನ್ನು ಕುಡಿಯಕೊಡುವದು; ವಾಯು ಸ್ತಬ್ಧವಾಗಿ ಆಯಾಸಪಡುವ ಸಂಗತಿಗಳಲ್ಲಿ ತುಪ್ಪವನ್ನು ದೊಡ್ಡ ಪ್ರಮಾಣದಲ್ಲಿ ಕುಡಿಸುವದು, ಅಥವಾ ವಾತರೋಗಹರವಾಗಿ ಪಿತ್ತರಕ್ತಕ್ಕೆ ವಿರೋಧಕರವಲ್ಲದ ಚಿಕಿತ್ಸೆಯನ್ನು ಮಾಡುವದು.

ಷರಾ ಎದೆ ಮತ್ತು ಪಕ್ಕಗಳಲ್ಲಿ ನೋವು ಇರುವಲ್ಲಿ ಜೀವನೀಯ ಘೃತವನ್ನು ಪಾನಮಾಡಿಸಬೇಕು ಅಥವಾ ಪಿತ್ತರಕ್ತಕ್ಕೆ ವಿರುದ್ಧವಲ್ಲದ ವಾತರೋಗನಾಶಕವಾದ ಉಪಚಾರಗಳನ್ನು ಮಾಡತಕ್ಕದ್ದಾಗಿ ವಾ (ಪು 272)

58. ಘೃತಸ್ತು ಪಿತ್ತೇಽಭ್ಯಧಿಕೇ ಲಿಹ್ಯಾದ್ವಾತಾಧಿಕೇ ಪಿಬೇತ್ |
ಲೀಢಂ ನಿರ್ವಾಪಯೇತ್ಪಿತ್ತಮಲ್ಪತ್ವಾದ್ದಹ್ತಿ ನಾನಲಮ್
ಆಕ್ರಾಮತ್ಯನಿಲಂ ಪೀತಮೂಷ್ಮಾಣಂ ನಿರುಣದ್ಧಿ ಚ || (ವಾ. 274)

ತುಪ್ಪವನ್ನು ಕುಡಿಯುವದರಲ್ಲಿಯೂ ನೆಕ್ಕುವದರಲ್ಲಿಯೂ ಗುಣಬೇಧ

ಪಿತ್ತವು ಅಧಿಕವಾಗಿದ್ದಾಗ್ಗೆ ತುಪ್ಪವನ್ನು ನೆಕ್ಕಬೇಕು (ಅಂದರೆ ಕಡಿಮೆ ಪ್ರಮಾಣದಲ್ಲಿ ಸೇವಿಸಬೇಕು). ವಾತವು ಅಧಿಕವಾಗಿದ್ದಾಗ್ಗೆ ತುಪ್ಪವನ್ನು ಕುಡಿಯಬೇಕು (ಹೆಚ್ಚು ಪ್ರಮಾಣದಲ್ಲಿ ಸೇವಿಸಬೇಕು). ನೆಕ್ಕುವದರಿಂದ ತುಪ್ಪವು ಪಿತ್ತವನ್ನು ಶಮನಮಾಡುತ್ತದೆ ಮತ್ತು ಅಲ್ಪ ಪ್ರಮಾಣವಾದ್ದರಿಂದ ಅಗ್ನಿಯ ಬಲವನ್ನು ಕೆಡಿಸುವದಿಲ್ಲ. ಕುಡಿದಂಥ ತುಪ್ಪವು ವಾಯುವನ್ನು ಗೆಲ್ಲುತ್ತದಾದರೂ, (ಅಧಿಕ ಪ್ರಮಾಣವಾದ್ದರಿಂದ) ಅಗ್ನಿಯ(ಪ್ರಸಾರ)ವನ್ನು ತಡೆಯುತ್ತದೆ.

59. ವಿಧಿಶ್ಚ ಯಕ್ಷ್ಮವಿಹಿತೋ ಯಥಾವಸ್ಥಂ ಕ್ಷತೇ ಹಿತಃ | (ವಾ. 276)

ಯಕ್ಷ್ಮದ ಚಿಕಿತ್ಸೆ ಕ್ಷತದಲ್ಲಿ

ರಾಜಯಕ್ಷ್ಮದಲ್ಲಿ ಹೇಳಲ್ಪಟ್ಟ ವಿಧಿಯು ಕ್ಷತಜಕೆಮ್ಮಿನಲ್ಲಿಯೂ ಅವಸ್ಥೆಗೆ ತಕ್ಕ ಹಾಗೆ ನಡಿಸಲ್ಪಟ್ಟಲ್ಲಿ ಹಿತವಾಗುವದು.

ಷರಾ ರಾಜಯಕ್ಷ್ಮದ ಚಿಕಿತ್ಸೆಯಲ್ಲಿ ಉಕ್ತವಾದ ಕೂಷ್ಮಾಂಡರಸಾಯನವನ್ನು ಈ ಸಂದರ್ಭದಲ್ಲಿ ವಾಗ್ಭಟನು ಹೇಳಿದ್ದಾನೆ. (ಪು 274)

60. ಮಧುಕಾಷ್ಟಪಲದ್ರಾಕ್ಷಾಪ್ರಸ್ಥಕ್ವಾಥೇ ಪಚೇದ್ ಘೃತಮ್ |
ಪಿಪ್ಪಲ್ಯಷ್ಟಪಲೇ ಕಲ್ಕೇ ಪ್ರಸ್ಥಂ ಸಿದ್ಧೇ ಚ ಶೀತಲೇ |
ಪೃಥಗಷ್ಟಪಲಂ ಕ್ಷೌದ್ರಶರ್ಕರಾಭ್ಯಾಂ ವಿಮಿಶ್ರಯೇತ್ |
ಸಮಸಕ್ತು ಕ್ಷತಕ್ಷೀಣರಕ್ತಗುಲ್ಮೇಷು ತದ್ಧಿತಮ್ || (ವಾ. 273)

ದ್ರಾಕ್ಷಾದಿಘೃತ

ಜ್ಯೇಷ್ಠಮಧು ಪಲ ೮, ದ್ರಾಕ್ಷೆ ೧ ಪ್ರಸ್ಥ, ಇವುಗಳ ಕಷಾಯದಲ್ಲಿ ೧ ಪ್ರಸ್ಥ ತುಪ್ಪವನ್ನೂ, ೮ ಪಲ ಹಿಪ್ಪಲಿಯ ಚೂರ್ಣವನ್ನೂ ಕೂಡಿಸಿ, ಪಾಕಮಾಡಿ ಶೋಧಿಸಿದ ತುಪ್ಪವು ತಣ್ಣಗಾದ

ಮೇಲೆ, ೮ ಪಲ ಜೇನನ್ನೂ ೮ ಪಲ ಸಕ್ಕರೆಯನ್ನೂ ಅದರೊಂದಿಗೆ ಮಿಶ್ರಮಾಡಿಟ್ಟುಕೊಂಡು, ಈ ಘೃತವನ್ನು ತಕ್ಕ ಪ್ರಮಾಣದಲ್ಲಿ ತೆಗೆದುಕೊಂಡು, ಸಮಪಾಲು ಹುರಿದ ಅರಳುಭತ್ತದ ಅಕ್ಕಿಹಿಟ್ಟನ್ನು (ಸಕ್ತು) ಅದರಲ್ಲಿ ಕಲಸಿ, ಸೇವಿಸುವದು. ಇದು ಕ್ಷತದಿಂದ ಕ್ಷೀಣರಾದವರಿಗೂ, ರಕ್ತಗುಲ್ಮರೋಗದವರಿಗೂ, ಹಿತವಾಗಿರುತ್ತದೆ.

61. ಧಾತ್ರೀಫಲವಿದಾರೀಕ್ಷುಜೀವನೀಯರಸಾದ್ ಘೃತಾತ್ ।
ಗವ್ಯಾಜಯೋಶ್ಚ ಪಯಸೋಃ ಪ್ರಸ್ಥಂ ಪ್ರಸ್ಥಂ ವಿಪಾಚಯೇತ್
ಧಾತ್ರ್ಯಾದಿ ರಸಾಯನ, ಸಿದ್ಧಶೀತೇ ಸಿತಾಕ್ಷೌದ್ರದ್ವಿಪ್ರಸ್ಥಂ ವಿನಯೇತ್ತತಃ ।
ಯಕ್ಷ್ಮಾಪಸ್ಮಾರಪಿತ್ತಾಸೃಕ್ಕಾಸಮೇಹಕ್ಷಯಾಪಹಮ್
ವಯಃಸ್ಥಾಪನಮಾಯುಷ್ಯಂ ಮಾಂಸಶುಕ್ರಬಲಪ್ರದಮ್ ।

(ಅ. ಸಂ. II 133)

ನೆಲ್ಲಿಹಣ್ಣಿನ ರಸ ೧ ಪ್ರಸ್ಥ, ನೆಲಕುಂಬಳಗಡ್ಡೆರಸ ೧ ಪ್ರಸ್ಥ, ಕಬ್ಬಿನ ರಸ ೧ ಪ್ರಸ್ಥ, ಜೀವನೀಯಗಣದ ಕಷಾಯ ೧ ಪ್ರಸ್ಥ, ತುಪ್ಪ ೧ ಪ್ರಸ್ಥ, ದನದ ಹಾಲು ೧ ಪ್ರಸ್ಥ, ಆಡಿನ ಹಾಲು ೧ ಪ್ರಸ್ಥ, ಸಹ ಕೂಡಿಸಿ ಪಾಕಮಾಡಿ, ಶೋಧಿಸಿದ ತುಪ್ಪದೊಂದಿಗೆ ಅದು ತಣಿದ ಮೇಲೆ ೧ ಪ್ರಸ್ಥ ಸಕ್ಕರೆ ಮತ್ತು ೧ ಪ್ರಸ್ಥ ಜೇನು ಮಿಶ್ರಮಾಡಿಟ್ಟುಕೊಳ್ಳುವದು. ಈ ತುಪ್ಪವು ರಾಜಯಕ್ಷ್ಮ, ಅಪಸ್ಮಾರ, ಪಿತ್ತರಕ್ತ, ಕೆಮ್ಮು, ಮೇಹ, ಕ್ಷಯ, ಇವುಗಳನ್ನು ನಾಶಮಾಡುವದು, ದೇಹದಾರ್ಢ್ಯವನ್ನು (ವಯಸ್ಸನ್ನು) ಕಾಪಾಡಿ, ಆಯುಷ್ಯವನ್ನು ವೃದ್ಧಿಸುವದು ಮತ್ತು ಮಾಂಸವನ್ನೂ, ಶುಕ್ರವನ್ನೂ, ಬಲವನ್ನೂ, ಹೆಚ್ಚಿಸುವದು.

ಷರಾ ಜೇನನ್ನು ದುಬಾರೆಯಾಗಿ ೭ು ಪಲ ಕೂಡಿಸತಕ್ಕದ್ದು ಎಂತ ಇಂ ವ್ಯಾ

62. ಪಿಬೇನ್ನಾಗಬಲಾಮೂಲಸ್ಯಾರ್ಧಕರ್ಷಾಭಿವರ್ಧಿತಮ್ ।
ಪಲಂ ಕ್ಷೀರಯುತಂ ಮಾಸಂ ಕ್ಷೀರವೃತ್ತಿರನನ್ನಭುಕ್ ॥
ನಾಗಬಲಾ ಮೊದಲಾದವುಗಳ ಕಲ್ಪಗಳು ಏಷ ಪ್ರಯೋಗಃ ಪುಷ್ಟ್ಯಾಯುರ್ಬಲವರ್ಣಕರಃ ಪರಮ್ ।
ಮಂಡೂಕಪರ್ಣ್ಯಾಃ ಕಲ್ಪೋಽಯಂ ಯಷ್ಟ್ಯಾ ವಿಶ್ವೌಷಧಸ್ಯ ಚ

(ವಾ. 274)

ಆನೆಕಡೀರಿನ ಬೇರಿನ ಸಿಪ್ಪೆಯನ್ನು ಪ್ರಥಮ ದಿನ ಅರ್ಧ ಕರ್ಷ, ಎರಡನೆಯ ದಿನ ಒಂದು ಕರ್ಷ, ಮೂರನೆಯ ದಿನ ಒಂದೂವರೆ ಕರ್ಷ, ನಾಲ್ಕನೆಯ ದಿನ ಎರಡು ಕರ್ಷ, ಈ ರೀತಿ ದಿನಕ್ಕೆ ½ ಕರ್ಷ ಪ್ರಕಾರ ವೃದ್ಧಿಯಿಂದ ೮ನೆ ದಿನದಿಂದ ೧ ಪಲ ತೆಗದುಕೊಂಡು, ಹಾಲಲ್ಲಿ ಅರದು, ಪ್ರತಿ ದಿನ ಒಂದು ತಿಂಗಳ ತನಕ ಸೇವಿಸುತ್ತಾ, ಅನ್ನವನ್ನು ಬಿಟ್ಟು ಹಾಲನ್ನೇ ಕುಡಿಯುತ್ತಾ, ಪಥ್ಯದಲ್ಲಿರುವದು. ಈ ಪ್ರಯೋಗವು ದೇಹವನ್ನು ಪುಷ್ಟಿಮಾಡಿ, ಆಯುರ್ಬಲವರ್ಣಗಳನ್ನು ಕೊಡುವುದಕ್ಕೆ ಉತ್ತಮವಾದದ್ದು. ಇದೇ ಕ್ರಮದಲ್ಲಿ ಒಂದೆಲಗವನ್ನೂ, ಜ್ಯೇಷ್ಠಮಧುವನ್ನೂ, ಶುಂಠಿಯನ್ನೂ ಸೇವಿಸಲು ಅವೇ ಗುಣಗಳು ಸಿಕ್ಕುವವು.

ಷರಾ ಈ ಕ್ರಮಗಳನ್ನು ಅಗ್ನಿಬಲವನ್ನೂ ರೋಗದ ಸ್ಥಿತಿಯನ್ನೂ ನೋಡಿಕೊಂಡು ನಡಿಸತಕ್ಕದ್ದು, ಕಲ್ಪಗಳಲ್ಲಿ ಉಕ್ತವಾದ ನಾಲ್ಕು ಔಷಧಗಳ ಗುಣಗಳಲ್ಲಿ ಬಹಳ ಭೇದವಿದೆ

63. ನಿವೃತ್ತೇ ಕ್ಷತದೋಷೇ ತು ಕಫೇ ವೃದ್ಧ ಉರಃ ಶಿರಃ ।
ದಾಲ್ಯೇತೇ ಕಾಸಿನೋ ಯಸ್ಯ ಸ ಧೂಮಾನ್ ನಾ ಪಿಬೇದಿಮಾನ್ ॥
ಧೂಮಪಾನ
ದ್ವೇ ಮೇದೇ ಮಧುಕಂ ದ್ವೇ ಚ ಬಲೇ ತೈಃ ಕ್ಷೌಮಲಕ್ತಕೈಃ ।
ವರ್ತಿಸ್ತೈರ್ಧೂಮಮಾಪೀಯ ಜೀವನೀಯಘೃತಂ ಪಿಬೇತ್ ॥
ಮನಃಶಿಲಾಪಲಾಶಾಜಗಂಧಾತ್ವಕ್‍ಕ್ಷೀರಿನಾಗರೈಃ ।
ಭಾವಯಿತ್ವಾ ಪಿಬೇತ್ ಕ್ಷೌಮಂ ಶರ್ಕರೇಕ್ಷುಗುಡೋದಕಮ್ ॥
ಪಿಷ್ಟ್ವಾ ಮನಃಶಿಲಾಂ ತುಲ್ಯಾಮಾರ್ದ್ರಯಾ ವಟಶುಂಗಯಾ ।
ಸಸರ್ಪಿಷ್ಕಂ ಪಿಬೇದ್ಧೂಮಂ ತಿತ್ತಿರಿಪ್ರತಿಭೋಜನಮ್ ॥ (ಚ. 710)

ಕ್ಷತದೋಷ ವಾಸಿಯಾದ ಮೇಲೆ, ಕಫವು ವೃದ್ಧಿಯಾಗಿ, ಕೆಮ್ಮುಸುವಾಗ್ಗೆ ಎದೆ ಮತ್ತು ತಲೆಯಲ್ಲಿ ಸೀಳಿದ ಹಾಗಿನ ನೋವು ಉಂಟಾದರೆ, ಮುಂದೆ ಹೇಳುವ ಹೊಗೆಗಳನ್ನು ಪಾನ ಮಾಡತಕ್ಕದ್ದು. ಮೇದೆ, ಮಹಾಮೇದೆ, ಕಲ್ಲಂಗಡಲೆ ಬೇರು, ಆನೆಕಲ್ಲಂಗಡಲೆ ಬೇರು, ಇವುಗಳನ್ನು (ನೀರು ಕೂಡಿಸಿಕೊಂಡು ಅರೆದು) ಒಂದು ನಾರಿನ ವಸ್ತ್ರದ ತುಂಡಿಗೆ ಹಚ್ಚಿ, (ಒಣಗಿಸಿ) ಬತ್ತಿಮಾಡಿ, ಅದರ ಹೊಗೆಯನ್ನು ಸೇದಿ, ಜೀವನೀಯ ಘೃತವನ್ನು ಪಾನಮಾಡ ಬೇಕು; (ಅಥವಾ) ಮಣಿಶಿಲೆ, ಪಲಾಶದಬೀಜ, ಅಜಮೋದ, ಬಿದಿರುಪ್ಪು, ಶುಂಠಿ, ಇವು ಗಳನ್ನು (ಅದೇ ಪ್ರಕಾರ) ನಾರಿನ ವಸ್ತ್ರದ ತುಂಡಿಗೆ ಹಚ್ಚಿ, ಬತ್ತಿಮಾಡಿ, ಹೊಗೆಯನ್ನು ಸೇದಿ, ಸಕ್ಕರೆ ನೀರು, ಕಬ್ಬಿನ ಹಾಲು ಅಥವಾ ಬೆಲ್ಲದ ನೀರನ್ನು ಕುಡಿಯಬೇಕು; (ಅಥವಾ) ಮಣಿಶಿಲೆಗೆ ಸಮಪಾಲು ಹಸಿ ಗೋಳಿ ಚಿಗುರನ್ನು ತೆಗೆದುಕೊಂಡು, ಎರಡನ್ನು ತುಪ್ಪ ಕೂಡಿಸಿ ಕೊಂಡು ಅರೆದು, ಆದರ ಹೊಗೆಯನ್ನು ಸೇದಬೇಕು. ಧೂಮಪಾನಾನಂತರ ತಿತ್ತಿರಿ ಪಕ್ಷಿಯ ಮಾಂಸರಸದಿಂದ ಭೋಜನಮಾಡತಕ್ಕದ್ದು.

ಪರಾ ಮೂಲದಲ್ಲಿ 'ಶಿರಃ' ಎಂಬಲ್ಲಿ 'ಕ್ಷತೇ', 'ದಾಲ್ಯೇತೇ' ಎಂಬಲ್ಲಿ 'ದಾಲ್ಯತೇ' ಎಂತ ಇರುವದನ್ನು ಪಾಠಾಂತರ ಪ್ರಕಾರ ತಿದ್ದಿಕೊಂಡಿದೆ.

64. ಪಂಚಾಶಚ್ಚ ಪಲಂ ಸ್ವಿನ್ನಂ ಕೂಷ್ಮಾಂಡಾತ್ ಪ್ರಸ್ಥಮಾಜ್ಯತಃ ।
ಪಕ್ವಂ ಪಲಶತಂ ಖಂಡಂ ವಾಸಾಕ್ವಾಥಾಢಕೇ ಪಚೇತ್ ॥
ವಾಸಾಕೂಷ್ಮಾಂಡ ಕಾವಲೇಹ
ಶುಭ್ರಾ-ಧಾತ್ರೀ-ಘನಾ-ಭಾಂಗೀರ್-ತ್ರಿಸುಗಂಧೈಶ್ಚ ಕಾರ್ಷಿಕೈಃ ।
ಪಿಪ್ಪಲೀಕುಡವಂ ಚೈವ ಮಧುಮಾನಂ ಪ್ರದಾಪಯೇತ್ ॥
ಕಾಸಂ ಶ್ವಾಸಂ ಕ್ಷಯಂ ಹಿಕ್ಕಾಂ ರಕ್ತಪಿತ್ತಂ ಹಲೀಮಕಮ್ ।
ಹೃದ್ರೋಗಮಮ್ಲಪಿತ್ತಂ ಚ ಪೀನಸಂ ಚ ವ್ಯಪೋಹತಿ ॥
ಯುಕ್ತಸರ್ಪಿಷಿ ಕೂಷ್ಮಾಣ್ಡೇ ಪಾಕೇ(?ಕಃ) ಗನ್ಧೇನ ಮುದ್ರಯಾ ।
(ಚಿ. ಸಾ. ಸಂ. 247)

೫೦ ಪಲ ಹಳೇ ಬೂದಿಕುಂಬಳಕಾಯಿ ಹೋಳುಗಳನ್ನು (ಅರ್ಧಾಂಶಕ್ಕೆ ನೀರು ತುಂಬಿದ ಪಾತ್ರೆಯ ಬಾಯಿಗೆ ಕಟ್ಟಿದ ವಸ್ತ್ರದ ಮೇಲೆ ಹಾಕಿ, ಮುಚ್ಚಳ ಮುಚ್ಚಿ, ಸೆಕೆಯಿಂದ) ಬೆವರಿಸಿ, ಮೆತ್ತಗಾದ ಆ ಹೋಳುಗಳನ್ನು (ಅರೆದ ಮೇಲೆ) ಒಂದು ಪ್ರಸ್ಥ ತುಪ್ಪದಲ್ಲಿ ಹಾಕಿ ಬೇಯಿಸಿಟ್ಟು ಕೊಳ್ಳುವದು; (೮ ಸೇರು ಆಡುಸೋಗೆ ಬೇರನ್ನು ಜಜ್ಜಿ, ಅದಕ್ಕೆ ೪ ಆಢಕ ನೀರನ್ನು ಹೊಯಿದು,

ಮಾಡಿದ) ಆಡುಸೋಗೆಕಷಾಯ ೧ ಆಢಕಕ್ಕೆ ೧೦೦ ಪಲ ಕಲ್ಲುಸಕ್ಕರೆ ಪುಡಿಯನ್ನುಹಾಕಿ, ಪಾಕಮಾಡಿ, ಅದು ಪಾಕಕ್ಕೆ ಬರುವ ಸಮಯದಲ್ಲಿ, ಅದರೊಂದಿಗೆ ತುಪ್ಪದಲ್ಲಿ ಬೇಯಿಸಿಟ್ಟ ಕುಂಬಳಕಾಯಿಯನ್ನೂ, ಬಿದಿರುಪ್ಪು, ನೆಲ್ಲಿಚಟ್ಟು, ಭದ್ರಮುಷ್ಟಿ, ಗಂಟುಭಾರಂಗಿ (ಸಿರ್ವಿಷದ) ಬೇರು, ಏಲಕ್ಕಿ, ದಾಲ್ಚೀನಿಯೆಲೆ, ಲವಂಗಪಟ್ಟೆ, ಇವುಗಳನ್ನು ಒಂದೊಂದು ಕರ್ಷ ಪ್ರಕಾರ, ಹಿಪ್ಪಲಿ ೪ ಪಲ, ತೆಗೆದುಕೊಂಡು ಮಾಡಿಟ್ಟಿದ್ದ ವಸ್ತ್ರಗಾಲಿತ ಚೂರ್ಣವನ್ನೂ ಕಲಸಿ, ಸರಿಯಾದ ಲೇಹಪಾಕದಲ್ಲಿ ಇಳಿಸಿ, ಅದು ತಣಿದ ಮೇಲೆ ಅರ್ಧ ಪ್ರಸ್ಥ ಜೇನನ್ನು ಅದರೊಂದಿಗೆ ಬೆರಿಸಿಟ್ಟು ಕೊಳ್ಳುವದು. ಈ ಲೇಹವನ್ನು ಸೇವಿಸುವದರಿಂದ ಕೆಮ್ಮು, ಉಬ್ಬಸ, ಕ್ಷಯ, ಬಿಕ್ಕಟ್ಟು, ರಕ್ತಪಿತ್ತ, ಹಲೀಮಕ, ಹೃದ್ರೋಗ, ಅಮ್ಲಪಿತ್ತ ಮತ್ತು ಪೀನಸ ದೂರವಾಗುವವು. ತುಪ್ಪ ಕೂಡಿದ ಕುಂಬಳಕಾಯಿ ಪಾಕವಾದದ್ದನ್ನು ಪರಿಮಳದಿಂದಲೂ, ಅದರಲ್ಲಿ (ಒತ್ತಿದ ಬೆರಳಿನ) ಮುದ್ರೆ ಕಾಣುವದರಿಂದಲೂ ತಿಳಿಯಬೇಕು.

ಸರಾ ಹಿಂದೆ Vನೇ ಅಧ್ಯಾಯದ ೨೭ನೇ ಸಂಖ್ಯೆಯಲ್ಲಿ ವರ್ಣಿಸಿದ ಕೂಷ್ಮಾಂಡರಸಾಯನದ ಕ್ರಮವನ್ನು ನೋಡಿ, ಕುಂಬಳ ಹೋಳನ್ನು ಬೆವರಿಸಿದ ಸೋಲಿ ಅರೆದು ತುಪ್ಪದಲ್ಲಿ ಹುರಿದು ಕೂಡಿಸುವದರ ಬದಲಾಗಿ, ಅಲ್ಲಿ ಹೇಳಿವಂತೆ ಬಿಸಿಲಿನಲ್ಲಿ ಒಣಗಿಸಿ ದಾಳಕವನ್ನು ತುಪ್ಪದಲ್ಲಿ ಕೆಂಪಾಗುವ ತನಕ ಹುರಿದು ಕುಟ್ಟಿ, ಚೂರ್ಣಮಾಡಿ ಈ ಸಂದರ್ಭದಲ್ಲಿಯೂ ಕೂಡಿಸಬಹುದು

ಈ ಲೇಹದ ಯೋಗವು ರ ರ ದಲ್ಲಿ ಉಂಟು (ಪು ೨11) ಅಲ್ಲಿ "ಏಲೇಯವಿಷ್ವಧಾನ್ಯಾಕಮರಿಚೈಕ್ಶ ಪಲಾಂಶಿಕೈಃ" ಎಂತ ಎರಡನೇ ಶ್ಲೋಕದ ಉತ್ತರಾರ್ಧ ಹೆಚ್ಚಿಗೆ ಕಾಣುತ್ತದೆ ಮತ್ತು ಕೂಷ್ಮಾಂಡಪಾಕದ ವಿಷಯವಾದ ಕಡೇ ಶ್ಲೋಕಾರ್ಧ ಇಲ್ಲ ಏಲಾವಾಲುಕ (ಸುರಸುರಿಕೆ), ತುಂರಿ, ಕೊತ್ತುಂಬರಿ ಮತ್ತು ಕಾಳುಮೆಣಸು ಒಂದೊಂದು ಪಲ ಪ್ರಕಾರ ಚೂರ್ಣಕ್ಕೆ ಕೂಡಿಸಬೇಕೆಂತ ಆ ಪಾಠದಿಂದ ಅರ್ಥವಾಗುತ್ತದೆ ಆ ಯೋಗದ ಕೆಳಗೆ ಕುಂಬಳಕಾಯಿಯ ರಸವನ್ನು ಕೂಡಿಸಬೇಕೆಂತ ಟಿಪ್ಪಣಿ ಉಂಟು ಅಲ್ಲಿ ಹೇಳಿದ ಪ್ರಕಾರ ಮಾಡುವದೇ ಪ್ರಶಸ್ತವಾಗಿ ಕಾಣುತ್ತದೆ

65. ಸಂಪೂರ್ಣರೂಪಂ ಕ್ಷಯಜಂ ದುರ್ಬಲಸ್ಯ ವಿವರ್ಜಯೇತ್ |
ನವೋತ್ಥಿತಂ ಬಲವತಃ ಪ್ರತ್ಯಾಖ್ಯಾಯಾಚರೇತ್ ಕ್ರಿಯಾಮ್
ತಸ್ಮೈ ಬೃಂಹಣಮೇವಾದೌ ಕುರ್ಯಾದಗ್ನೇಶ್ಚ ವರ್ಧನಮ್ |
ಬಹುದೋಷಾಯ ಸಸ್ನೇಹಂ ಮೃದು ದದ್ಯಾದ್ವಿರೇಚನಮ್ ||
ಶಂಪಾಕೇನ ತ್ರಿವೃತಯಾ ಮೃದ್ವೀಕಾರಸಯುಕ್ತಯಾ |
ತಿಲ್ವಕಸ್ಯ ಕಷಾಯೇಣ ವಿದಾರೀಸ್ವರಸೇನ ಚ
ಸರ್ಪಿಃ ಸಿದ್ಧಂ ಪಿಬೇದ್ಯುಕ್ತ್ಯಾಕ್ಷೀಣದೇಹೋ ವಿಶೋಧನಮ್ |
ಹಿತಂ ತದ್ಧಿ ದೇಹಬಲಯೋರಸ್ಯ ಸಂರಕ್ಷಣಂ ಮತಮ್ || (ಚ. 710)

ಕ್ಷಯಜ ಕೆಮ್ಮಿಗೆ ಚಿಕಿತ್ಸೆವಿಧಾನ

ಬಲಹೀನನಾದವನಲ್ಲಿ ಕ್ಷಯಜಕೆಮ್ಮಿನ ಲಕ್ಷಣಗಳು ಸಂಪೂರ್ಣವಾಗಿ ಕಾಣುವ ಸಂಗತಿಯಲ್ಲಿ ಅದಕ್ಕೆ ಚಿಕಿತ್ಸೆಮಾಡದೆ ಬಿಡಬೇಕು. ರೋಗಿಯು ಬಲವಂತನಾಗಿ ರೋಗವು ಹೊಸತಾಗಿದ್ದರೆ, ಸಾಧ್ಯವಾಗುವದು ಕಷ್ಟ ಎಂತ ಹೇಳಿ, ಚಿಕಿತ್ಸೆಯನ್ನು ನಡಿಸಬೇಕು. ಅಂಥವನಿಗೆ ಆರಂಭದಲ್ಲಿ ಪುಷ್ಟಿಕರವಾದ (ಬೃಂಹಣ) ಮತ್ತು ಅಗ್ನಿವೃದ್ಧಿಮಾಡತಕ್ಕಂಥ ಔಷಧೋಪಚಾರಗಳನ್ನೇ ಮಾಡತಕ್ಕದ್ದು. ದೋಷಗಳು ಬಹಳವಾಗಿದ್ದಲ್ಲಿ ಸ್ನೇಹಯುಕ್ತವಾದ ಮೃದು ವಿರೇಚನೌಷಧವನ್ನು ಕೊಡಬೇಕು. ಕಕ್ಕೆಮರದ ಬೇರಿನ ಸಿಪ್ಪೆ (ಅಥವಾ ಕಾಯಿಯ ಚೂರ್ಣ), ತಿಗಡೆ ಚೂರ್ಣ, ದ್ರಾಕ್ಷೇಹಣ್ಣಿನ ರಸ (ಅಥವಾ ದ್ರಾಕ್ಷಾಕಷಾಯ), ಲೋಧ್ರಚಕ್ಕೆಯ ಕಷಾಯ, ನೆಲಕುಂಬಳಗಡ್ಡೆಯ ರಸ, ಇವುಗಳನ್ನು (ಅಥವಾ ಇವುಗಳಲ್ಲಿ ಬೇಕಾದವನ್ನು

ವಿಚಾರಯುಕ್ತವಾಗಿ ಕೂಡಿಸಿ ಪಾಕಮಾಡಿ ಶೋಧಿಸಿದ ಘೃತವನ್ನು, ಕ್ಷೀಣದೇಹದವನು ಶೋಧನಕ್ಕಾಗಿ ದೇಹಬಲಕ್ಕೆ ತಕ್ಕ ಪ್ರಮಾಣದಲ್ಲಿ ಪಾನಮಾಡಬೇಕು. ಈ ಘೃತವು (ಆ ಕ್ಷೀಣದೇಹದವನಿಗೆ) ಹಿತ ಮತ್ತು ಅವನ ದೇಹವನ್ನೂ ಬಲವನ್ನೂ ಕಾಪಾಡತಕ್ಕಂಥಾದ್ದು ಎಂತ ತಿಳಿದಿರುತ್ತಾರೆ.

66. ಪಿತ್ತೇ ಕಫೇ ಚ ಸಂಕ್ಷೀಣೇ ಪರಿಕ್ಷೀಣೇಷು ಧಾತುಷು |
ಘೃತಂ ಕರ್ಕಟಕೀಕ್ಷೀರದ್ವಿಬಲಾಸಾಧಿತಂ ಪಿಬೇತ್ || (ಚ 710)

ಕರ್ಕಟಕ್ಯಾದಿ ಘೃತ.

ಪಿತ್ತಕಫಗಳು ಬಹಳ ಕ್ಷೀಣವಾಗಿ, (ವಾತದ ಪ್ರಬಲತೆಯಿಂದ) ಧಾತುಗಳೆಲ್ಲಾ ಕ್ಷೀಣವಾಗಿರುವಲ್ಲಿ, ಕರ್ಕಟಶೃಂಗಿ, ಹಾಲು, ಕಲ್ಲಂಗಡಲೆ ಬೇರು ಮತ್ತು ಆನೆಕಲ್ಲಂಗಡಲೆಬೇರು, ಇವುಗಳಿಂದ ವಿಧಿಪ್ರಕಾರ ತಯಾರಿಸಲ್ಪಟ್ಟ ತುಪ್ಪವನ್ನು ಕುಡಿಯಬೇಕು.

ಪರಾ ಈ ಯೋಗದಲ್ಲಿ ಕರ್ಕಟಶೃಂಗಿಯನ್ನು ಕಲ್ಕವಾಗಿಟ್ಟುಕೊಂಡು, ಎರಡು ಜಾತಿ ಕಲ್ಲಂಗಡಲೆಗಳ ಕಷಾಯ ಮತ್ತು ಹಾಲು ಕೂಡಿಸಿ, ತುಪ್ಪವನ್ನು ಕಾಯಿಸುವದು

67. ಗುಡೂಚೀಂ ಪಿಪ್ಪಲೀಂ ಮೂರ್ವಾಂ ಹರಿದ್ರಾಂ ಶ್ರೇಯಸೀಂ ವಚಾಮ್ |
ನಿದಿಗ್ಧಿಕಾಂ ಕಾಸಮರ್ದಂ ಪಾಠಾಂ ಚಿತ್ರಕನಾಗರಮ್
ಜಲೇ ಚತುರ್ಗುಣೇ ಪಕ್ತ್ವಾ ಪಾದಶೇಷೇಣ ತತ್ಸಮಮ್ |
ಸಿದ್ಧಂ ಸರ್ಪಿಃ ಪಿಬೇದ್ಗುಲ್ಮಶ್ವಾಸಾತಿಕ್ಷಯಕಾಸನುತ್ || (ಚ. 711)

ಗುಡೂಚ್ಯಾದಿ ಘೃತ

ಅಮೃತಬಳ್ಳಿ, ಹಿಪ್ಪಲಿ, ಹೆಗ್ಗುರುಟಿಗೆ (ಪೆರುಂಕುರುಂಬ), ಅರಸಿನೆ, ರಾಸ್ನೆ (ಅರತೆ), ಬಜೆ, ಕಿರಿಗುಳ್ಳದ ಬೇರು, ಎಲೆಹುರಿ ಬೇರು, ಪಾಡಾವಳಿಗಡ್ಡೆ, ಚಿತ್ರಮೂಲ, ಶುಂಠಿ, ಇವುಗಳಿಗೆ ನಾಲ್ಕು ಪಾಲು ನೀರಿಟ್ಟು ಕಾಲಂಶಕ್ಕೆ ಬತ್ತಿಸಿದ ಕಷಾಯಕ್ಕೆ ಸಮಪಾಲು ತುಪ್ಪ ಕೂಡಿಸಿ, ಪಾಕಮಾಡಿ ಶೋಧಿಸಿಟ್ಟುಕೊಂಡು, ಆ ತುಪ್ಪದ ಪಾನಮಾಡುವದರಿಂದ ಗುಲ್ಮ, ಉಬ್ಬಸ, ಕಠಿಣವಾದ ಕ್ಷಯಕಾಸ, ಸಹ ನಾಶವಾಗುವವು.

68. ಕಾಸಮರ್ದಾಭಯಾಮುಸ್ತಾಪಾಠಾಕಟ್ಫಲನಾಗರೈಃ |
ಪಿಪ್ಪಲ್ಯಾ ಕಟುಕಾದ್ರಾಕ್ಷಾಕಾಶ್ಮರ್ಯೈಃ ಸುರಸೇನ ಚ ||
ಅಕ್ಷಮಾತ್ರೈರ್ಘೃತಪ್ರಸ್ಥಂ ಕ್ಷೀರದ್ರಾಕ್ಷಾರಸಾಢಕೇ |
ಪಚೇಚ್ಛೋಷಜ್ವರಪ್ಲೀಹಸರ್ವಕಾಸಹರಂ ಶಿವಮ್ || (ಚ. 711)

ಕಾಸಮರ್ದಾದಿ ಘೃತ

ಎಲೆಹುರಿ ಬೇರು, ಅಣಿಲೆಕಾಯಿ, ಭದ್ರಮುಷ್ಟಿ, ಪಾಡಾವಳಿಗಡ್ಡೆ, ಕಿರುಶಿವನಿ (ಕರಿಂಕುಮಲ), ಶುಂಠಿ, ಹಿಪ್ಪಲಿ, ಕಟುಕರೋಹಿಣೀ, ದ್ರಾಕ್ಷೆ, ಶಿವನಿ (ಕುಮಳು), ತುಳಸಿ, ಇವುಗಳನ್ನು ಒಂದೊಂದು ಕರ್ಷ ಪ್ರಕಾರ ತೆಗೆದುಕೊಂಡು ಮಾಡಿದ ಚೂರ್ಣಕ್ಕೆ ೧ ಪ್ರಸ್ಥ ತುಪ್ಪ, ೨ ಪ್ರಸ್ಥ ಹಾಲು, ೨ ಪ್ರಸ್ಥ ದ್ರಾಕ್ಷೆಯ ರಸ, ಸಹ ಕೂಡಿಸಿ ಪಾಕಮಾಡಿ, ಶೋಧಿಸಿಟ್ಟುಕೊಳ್ಳುವದು. ಈ ಶುಭವಾದ ತುಪ್ಪದ ಸೇವನದಿಂದ ಶೋಷ, ಜ್ವರ, ಪ್ಲೀಹ, ಸರ್ವ ಕೆಮ್ಮುಗಳು, ಸಹ ಪರಿಹಾರವಾಗುವವು.

69. ಏರಂಡಪತ್ರಕ್ಷಾರಂ ವಾ ವ್ಯೋಷತೈಲಂ ಗುಡಾನ್ವಿತಮ್ ।
ಲಿಹ್ಯಾದೇತೇನ ವಿಧಿನಾ ಸುರಸೈರಂಡಪತ್ರಜಮ್ ॥
ಕೆಲವು ಚೂರ್ಣ ಲೇಹಗಳ ಯೋಗಗಳು
ದ್ರಾಕ್ಷಾಪದ್ಮಕವಾರ್ತಾಕಪಿಪ್ಪಲೀಃ ಕ್ಷೌದ್ರಸರ್ಪಿಷಾ ।
ಲಿಹ್ಯಾತ್ತ್ರ್ಯೂಷಣಚೂರ್ಣಂ ವಾ ಪುರಾಣಗುಡಸರ್ಪಿಷಾ
ಚಿತ್ರಕಂ ತ್ರಿಫಲಾಜಾಜೀಕರ್ಕಟಾಖ್ಯಂ ಕಟುತ್ರಿಕಮ್ ।
ದ್ರಾಕ್ಷಾಂ ಚ ಕ್ಷೌದ್ರಸರ್ಪಿರ್ಭ್ಯಾಂ ಲಿಹ್ಯಾದದ್ಯಾದ್ಗುಡೇನ ವಾ ॥

(ಚ. 712)

ಹರಳೆಲೆಗಳನ್ನು ಸುಟ್ಟು ಬೂದಿಮಾಡಿ, ಆ ಬೂದಿಯನ್ನು ಜೇನು ಮತ್ತು ತುಪ್ಪದಲ್ಲಿ ಕಲಸಿ, ಅಥವಾ ತ್ರಿಕಟುಚೂರ್ಣವನ್ನು ಎಳ್ಳೆಣ್ಣೆಯಲ್ಲಿ ಕಲಸಿ ಬೆಲ್ಲ ಕೂಡಿಸಿ, ನೆಕ್ಕುವದು; ಅಥವಾ ತುಳಸೀಎಲೆ ಮತ್ತು ಹರಳೆಲೆಗಳ ಸುಟ್ಟಬೂದಿಯನ್ನು ಅದೇ ರೀತಿ (ಬೆಲ್ಲ ಮತ್ತು ತೈಲ ಕೂಡಿಸಿ) ನೆಕ್ಕುವದು, ದ್ರಾಕ್ಷೆ, ಪದ್ಮಕಾಷ್ಠ, ಗುಳ್ಳದ ಬೇರು, ಹಿಪ್ಪಲಿ, ಇವುಗಳ ಚೂರ್ಣವನ್ನು ಜೇನು ಮತ್ತು ತುಪ್ಪದಲ್ಲಿ ಕದಡಿ ನೆಕ್ಕುವದು; ಅಥವಾ ತ್ರಿಕಟುಗಳ ಚೂರ್ಣವನ್ನು ಹಳೇ ಬೆಲ್ಲ ಮತ್ತು ತುಪ್ಪ ಕೂಡಿಸಿ ನೆಕ್ಕುವದು. ಚಿತ್ರಮೂಲದ ಬೇರಿನ ಸಿಪ್ಪೆ. ತ್ರಿಫಲೆ, ಜೀರಿಗೆ, ಕರ್ಕಟಶೃಂಗಿ, ತ್ರಿಕಟು, ದ್ರಾಕ್ಷೆ. ಇವುಗಳ ಚೂರ್ಣವನ್ನು ಜೇನು ಮತ್ತು ತುಪ್ಪದಲ್ಲಿ ಕದಡಿ ನೆಕ್ಕುವದು, ಅಥವಾ ಬೆಲ್ಲದಲ್ಲಿ ಕಲಸಿ ತಿನ್ನುವದು.

ಪಠಾ: 'ವ್ಯೋಷತೈಲಂ ಗುಡಾನ್ವಿತಂ' ಎಂಬಲ್ಲಿ 'ವ್ಯೋಷತೈಲಗುಡಾನ್ವಿತಂ' ಎಂತ ವಾ (ಪು 278) ಅದೇ ಸರಿಯಾದ ಪಾಠವಾಗಿರಬೇಕು. ಅದರ ಪ್ರಕಾರ ಮೇಲಿನ ಒಂದನೇ ಶ್ಲೋಕಕ್ಕೆ "ಹರಳೆಲೆ ಬೂದಿಯನ್ನು ತೈಲದಲ್ಲಿ ಕಲಸಿ ತ್ರಿಕಟುಚೂರ್ಣ ಮತ್ತು ಬೆಲ್ಲ ಕೂಡಿಸಿ, ಅಥವಾ ಅದೇ ಪ್ರಕಾರ ತುಳಸಿಯ ಮತ್ತು ಹರಳೆಲೆಯ ಬೂದಿಯನ್ನು ನೆಕ್ಕಬೇಕು ಎಂತ ಅರ್ಥವಾಗುತ್ತದೆ

70. ಜೀವನ್ತೀಂ ಮಧುಕಂ ಪಾಠಾಂ ತ್ವಕ್ಕ್ಷೀರೀಂ ತ್ರಿಫಲಾಂ ಶಟೀಮ್ ।
ಮುಸ್ತೈಲೇ ಪದ್ಮಕಂ ದ್ರಾಕ್ಷಾಂ ದ್ವೇ ಬೃಹತ್ಯೌ ವಿತುನ್ನಕಮ್ ॥
ಜೀವನ್ತ್ಯಾದಿ ಚೂರ್ಣ
ಶಾರಿವಾಂ ಪೌಷ್ಕರಂ ಮೂಲಂ ಕರ್ಕಟಾಖ್ಯಂ ರಸಾಂಜನಮ್ ।
ಪುನರ್ನವಾಂ ಲೋಹರಜಸ್ತ್ರಾಯಮಾಣಾಂ ಯಮಾನಿಕಾಮ್ ॥
ಭಾರ್ಗೀಂ ತಾಮಲಕೀಮೃದ್ಧಿಂ ವಿಡಂಗಂ ಧನ್ವಯಾಸಕಮ್ ।
ಕ್ಷಾರಚಿತ್ರಕಚವ್ಯಾಮ್ಲವೇತಸವ್ಯೋಷದಾರು ಚ ॥
ಚೂರ್ಣೀಕೃತ್ಯ ಸಮಾಂಶಾನಿ ಲೇಹಯೇತ್ ಕ್ಷೌದ್ರಸರ್ಪಿಷಾ ।
ಚೂರ್ಣಾತ್ಪಾಣಿತಲಂ ಪಂಚ ಕಾಸಾನೇಷ ವ್ಯಪೋಹತಿ

(ಚ. 712-713)

ಜೀವಂತಿಗಡ್ಡೆ, ಜ್ಯೇಷ್ಠಮಧು, ಪಾಡಾವಳಿಗಡ್ಡೆ, ಬಿದಿರುಪ್ಪು, ತ್ರಿಫಲೆ, ಕಚೋರ, ಭದ್ರಮುಷ್ಟಿ, ಏಲಕ್ಕಿ, ಪದ್ಮಕಾಷ್ಠ, ದ್ರಾಕ್ಷೆ, ಗುಳ್ಳದ ಬೇರು, ಕಿರೀಗುಳ್ಳದ ಬೇರು, ಕೊತ್ತುಂಬರಿ (ವಿತುನ್ನಕ), ಹಾಲುಬಳ್ಳಿ ಬೇರು (ಸುಗಂಧಿ), ಪುಷ್ಕರಮೂಲ, ಕರ್ಕಟಶೃಂಗಿ, ರಸಾಂಜನ, ಪುನರ್ನವಿ ಬೇರು, (ಶುದ್ಧ) ಕಬ್ಬಿಣದ ಪುಡಿ, ತ್ರಾಯಮಾಣ, ಓಮ, ಗಂಟುಭಾರಂಗಿ (ನಿರ್ವಿಷ), ನೆಲನೆಲ್ಲಿ, ಋದ್ಧಿ, ವಾಯುವಿಳಂಗ, ಬಳ್ಳಿತುರಚಿನ ಬೇರು, ಯವಕ್ಷಾರ, (ಶುದ್ಧ) ಚಿತ್ರಮೂಲ ಬೇರಿನ ಸಿಪ್ಪೆ, ಕಾಡುಮೆಣಸಿನ ಬೇರು, ಅಮ್ಲವೇತಸ (ಇಂಗಿಂಗುಪುಳಿ), ತ್ರಿಕಟು, ದೇವದಾರ,

ಇವುಗಳನ್ನು ಸಮಾಂಶವಾಗಿ ತೆಗೆದುಕೊಂಡು ವಸ್ತ್ರಗಾಲಿತ ಚೂರ್ಣಮಾಡಿ, ೧ ಕರ್ಷ ಪ್ರಮಾಣ ಚೂರ್ಣವನ್ನು ಜೇನು ಮತ್ತು ತುಪ್ಪದಲ್ಲಿ ಕದಡಿ ನೆಕ್ಕುತ್ತಾ ಬಂದಲ್ಲಿ, ಐದು ವಿಧವಾದ ಕೆಮ್ಮುಗಳೂ ಪರಿಹಾರವಾಗುವವು.

ಪರಾ 'ವಿತುನ್ನಕ' ಎಂತ ಪ್ರತ್ಯೇಕ ಒಂದು ವೃಕ್ಷ ಉಂಟೆಂತಲೂ, ಅದರ ತೊಗಟೆ 'ಕೈವರ್ತಮುಸ್ತಾ' ಎಂತಲೂ ಭಾ. ಪ್ರ (ಪು 97) 'ತ್ರಾಯಮಾಣಾ' ಸಿಕ್ಕದಿದ್ದಾಗ ಕೆಲವರು ಕಹಿದರಸಿಯನ್ನು ಉಪಯೋಗಿಸುತ್ತಾರೆಂತ ಕಾಣುತ್ತದೆ. 'ಅಮ್ಲವೇತಸ'ದ ಬದಲಾಗಿ ಪುಳ್ಳಂಪುರಚೆ(ಮಲ ಪುಳಿಯಾರಲ್)ಯನ್ನು ಉಪಯೋಗಿಸುತ್ತಾರೆ, ಆದರೆ ಅಮ್ಲವೇತಸ ಎಂತ ಒಂದು ಹುಳಿರುಚಿಯ ಬೇರನ್ನು ಅಂಗಡಿಗಳಲ್ಲಿ ವಿಕ್ರಯಿಸುತ್ತಾರೆ

'ರಾಜಯಕ್ಷ್ಮ' ಅಧ್ಯಾಯದಲ್ಲಿ ವಿವರಿಸಲ್ಪಟ್ಟ ಅಗ್ನಿರಸವು ರಸರತ್ನಾಕರದಲ್ಲಿ ಕ್ಷಯಜಕಾಸಕ್ಕೆ ಉಕ್ತವಾಗಿದೆ ಅಲ್ಲಿ ಹೇಳಲ್ಪಟ್ಟ ಕ್ರಮದಲ್ಲಿ ತಯಾರಿಸಲ್ಪಟ್ಟ ಲೋಹಭಸ್ಮವನ್ನು ಕಬ್ಬಿಣದ ಪುಡಿಯ ಬದಲಾಗಿ ಉಪಯೋಗಿಸುವದು ಒಳ್ಳೇದು

71. ಲಿಹ್ಯಾನ್ಮರಿಚಚೂರ್ಣಂ ವಾ ಸಘೃತಕ್ಷೌದ್ರಶರ್ಕರಮ್ |
ಮೆಣಸಿನ ಲೇಹ — ಸರ್ವಕಾಸಹರಂ ಶ್ರೇಷ್ಠಂ ಲೇಹಂ ಕಾಸಾರ್ದಿತೋ ನರಃ || (ಚ. 713)

ಕೆಮ್ಮಿನ ಪೀಡೆಯುಳ್ಳವನು ಕಾಳುಮೆಣಸಿನ ಚೂರ್ಣವನ್ನು ಸಕ್ಕರೆ, ತುಪ್ಪ, ಮತ್ತು ಜೇನು ಕೂಡಿಸಿಕೊಂಡು ನೆಕ್ಕಬೇಕು. ಸರ್ವ ಕೆಮ್ಮು ಪರಿಹಾರಕ್ಕೆ ಇದು ಶ್ರೇಷ್ಠವಾದ ಲೇಹ.

72. ಬದರೀಪತ್ರಕಲ್ಕಂ ವಾ ಘೃತಭೃಷ್ಟಂ ಸಸೈಂಧವಮ್ |
ಬೊಗರಿ ಎಲೆಗಳ ಕಲ್ಕ — ಸ್ವರಭೇದೇ ಚ ಕಾಸೇ ಚ ಲೇಹಮೇತತ್ ಪ್ರಯೋಜಯೇತ್ || (ಚ. 713)

ಹಸಿ ಬೊಗರಿ ಎಲೆಗಳನ್ನೂ ಸೈಂಧವ ಉಪ್ಪನ್ನೂ ಅರೆದು ಮಾಡಿದ ಕಲ್ಕವನ್ನು, ತುಪ್ಪ ಕೂಡಿಸಿ ಬೇಯಿಸಿ, ನೆಕ್ಕಲು ಸ್ವರಭೇದ ಮತ್ತು ಕೆಮ್ಮು ಪರಿಹಾರ

73. ಕ್ಷತಕಾಸೇ ಚ ಯೇ ಧೂಮಾಃ ಸಾನುಪಾನಾ ನಿದರ್ಶಿತಾಃ |
ಧೂಮಪಾನ — ಕ್ಷಯಕಾಸೇಽಪಿ ತಾನೇವ ಯಥಾವಸ್ಥಂ ಪ್ರಯೋಜಯೇತ್ || (ಚ. 713)

ಕ್ಷತಜಕೆಮ್ಮಿಗೆ ಯಾವ ಹೊಗೆಗಳು ಮತ್ತು ಅವುಗಳ ಅನುಪಾನಗಳು ಹೇಳಲ್ಪಟ್ಟಿವೆಯೋ, ಅವುಗಳನ್ನೇ ಕ್ಷಯಜಕೆಮ್ಮಿನಲ್ಲಿಯೂ ಅವಸ್ಥೆಗೆ ತಕ್ಕಂತೆ ಪ್ರಯೋಗಿಸಬೇಕು.

74. ಬದರೀದಲಮಾಲಿಪ್ತಂ ಶಿಲಯಾತಪಶೋಷಿತಮ್ |
ಮಣಿಶಿಲೆಯ ಉಪಯೋಗ. — ತದ್ಧೂಮಪಾನಂ ಸಕ್ಷೀರಂ ಮಹಾಕಾಸನಿವಾರಣಮ್ || (ಭಾ. ಪ್ರ. 373)

ಬೊಗರೀ ಎಲೆಗೆ ಮಣಿಶಿಲೆಯನ್ನು ಲೇಪಿಸಿ, ಬಿಸಿಲಲ್ಲಿ ಒಣಗಿಸಿ, ಅದರ ಹೊಗೆಯನ್ನು ಸೇದಿ ಕ್ಷೀರಪಾನ ಮಾಡಿದರೆ, ಮಹಾಕೆಮ್ಮು ಪರಿಹಾರವಾಗುವದು.

75. ದೀಪನಂ ಬೃಂಹಣಂ ಚೈವ ಸ್ರೋತಸಾಂ ಚ ವಿಶೋಧನಮ್ ।
ವ್ಯತ್ಯಾಸಾತ್ ಕ್ಷಯಕಾಸಿಭ್ಯೋ ಬಲ್ಯಂ ಸರ್ವಂ ಮಿತಂ ಹಿತಮ್ ॥
ಸನ್ನಿಪಾತಭವೋ ಽಪ್ಯೇಷ ಕ್ಷಯಕಾಸಃ ಸುದಾರುಣಃ ।
ಸನ್ನಿಪಾತಹಿತಂ ತಸ್ಮಾತ್ಸದಾ ಕಾರ್ಯಂ ಭಿಷಗ್ಜಿತಮ್ ॥
ದೋಷಾನುಬಲಯೋಗಾಚ್ಚ ಹರೇದ್ರೋಗಬಲಾಬಲಮ್ ।
ಕಾಸೇಷ್ವೇಷು ಗರೀಯಾಂಸಂ ಜಾನೀಯಾದುತ್ತರೋತ್ತರಮ್ ॥

ಕ್ಷಯಜಕೆಮ್ಮಿನ ಚಿಕಿತ್ಸೆಯಲ್ಲಿ ಯುಕ್ತಿವಿಶೇಷ

(ಚ. 713)

ಅಗ್ನಿದೀಪನಕಾರಿಯಾದ, ಬೃಂಹಣವಾದ, ಮತ್ತು ಸ್ರೋತಸ್ಸುಗಳನ್ನು ಶೋಧಿಸತಕ್ಕ ಮತ್ತು ಎಲ್ಲಾ ಬಲಪ್ರದವಾದ ಚಿಕಿತ್ಸೆಯು (ಉಪಚಾರಗಳು), ಮಿತವಾಗಿ ಮತ್ತು ಅವಸ್ಥೆಗೆ ತಕ್ಕ ಹಾಗೆ ಉಪಯೋಗಿಸಲ್ಪಟ್ಟಲ್ಲಿ, ಕ್ಷಯಜಕೆಮ್ಮಿನವರಿಗೆ ಹಿತವಾಗುವದು. ಕ್ಷಯಜ ಕೆಮ್ಮು ಸಹ ಸನ್ನಿಪಾತದಿಂದ ಹುಟ್ಟುವಂಥಾದ್ದು ಮತ್ತು ಬಹಳ ಕಠಿಣವಾದ್ದು; ಆದ್ದರಿಂದ ಯಾವಾಗಲೂ ಸನ್ನಿಪಾತಕ್ಕೆ ಹಿತವಾದ ಚಿಕಿತ್ಸೆಯನ್ನು ಮಾಡತಕ್ಕದ್ದು. ದೋಷದ ಬಲಕ್ಕೆ ಸರಿಯಾದ ಯೋಗಗಳನ್ನು ಕಲ್ಪಿಸಿ, ರೋಗದ ಬಲಾಬಲದ ವಿಚಾರದಿಂದ, ರೋಗವನ್ನು ಪರಿಹರಿಸತಕ್ಕದ್ದು. ಕೆಮ್ಮುಗಳೊಳಗೆ ಉತ್ತರೋತ್ತರ (ಅಂದರೆ ವಾತಜಕ್ಕಿಂತ ಪೈತ್ತಿಕ, ಅದಕ್ಕಿಂತ ಕಫಜ, ಅದಕ್ಕಿಂತ ಕ್ಷತಜ, ಅದಕ್ಕಿಂತ ಕ್ಷಯಜ) ಹೆಚ್ಚು ಬಲವಂತವಾದದ್ದೆಂತ ತಿಳಿಯಬೇಕು.

76. ಚೂರ್ಣಂಕಾಕುಭಮಿಷ್ಟಂ ವಾಸಕರಸಭಾವಿತಂ ಬಹುವಾರಾನ್ ।
ಮಧುಘೃತಸಿತೋಪಲಾಭಿರ್ಲೇಹ್ಯಂ ಕ್ಷಯಕಾಸರಕ್ತಹರಮ್ ॥

ಮತ್ತಿಚೂರ್ಣದ ಲೇಹ

(ಭಾ. ಪ್ರ. 373)

ಮತ್ತಿಕೆತ್ತೆಯ ಚೂರ್ಣವನ್ನು ಆಡುಸೋಗೆಎಲೆಗಳ ರಸದಲ್ಲಿ ಬಹು ಸರ್ತಿಯಿಂದ ಭಾವನೆಮಾಡಿಟ್ಟುಕೊಂಡು, ಜೇನು, ತುಪ್ಪ ಮತ್ತು ಕಲ್ಲುಸಕ್ಕರೆ ಮಿಶ್ರಮಾಡಿ ನೆಕ್ಕತಕ್ಕದ್ದು. ಈ ಲೇಹವು ಕ್ಷಯಜಕೆಮ್ಮನ್ನು ಮತ್ತು ರಕ್ತವನ್ನು ಪರಿಹರಿಸುತ್ತದೆ.

77. ಕರ್ಷಃ ಕರ್ಷಾಂಶಪಲಂ ಪಲದ್ವಯಂ ಸ್ಯಾತ್ತತೋ ಽರ್ಧಕರ್ಷಂ ಚ ।
ಮರಿಚಸ್ಯ ಪಿಪ್ಪಲೀನಾಂ ದಾಡಿಮಗುಡಯಾವಶೂಕಾನಾಮ್ ॥
ಸರ್ವೌಷಧಿಭಿರಸಾಧ್ಯಾಃ ಕಾಸಾ ಯೇ ವೈದ್ಯನಿರ್ಮುಕ್ತಾಃ ।
ಅಪಿ ಪೂಯಾಂ ಛರ್ದಯತಾಂ ತೇಷಾಮಿದಮೌಷಧಂ ಪರಮ್ ॥

ಮರಿಚಾದಿ ಚೂರ್ಣ

(ಭಾ. ಪ್ರ. 374)

ಕಾಳುಮೆಣಸು ೧ ಕರ್ಷ, ಪಿಪ್ಪಲಿ ॥ ಕರ್ಷ, ದಾಳಿಂಬದ ಸಿಪ್ಪೆ ೧ ಪಲ, ಬೆಲ್ಲ ೨ ಪಲ, ಯವಕ್ಷಾರ ಅರ್ಧ ಕರ್ಷ, ಇವುಗಳ ಚೂರ್ಣವು ಬೇರೆ ಸರ್ವ ಔಷಧಗಳಿಂದಲೂ ಅಸಾಧ್ಯವಾಗಿ ಕಂಡ ಮತ್ತು ವೈದ್ಯರಿಂದ ತ್ಯಜಿಸಲ್ಪಟ್ಟ ಕೆಮ್ಮುಗಳಿಗೆ, ಕೀವನ್ನು ಉಗುಳುವಂಥವರಿಗೆ ಸಹ, ಉತ್ತಮವಾದ ಔಷಧ.

ಷರಾ ಕರ್ಷಾಂಶ ಎಂದರೆ ೨ ಕರ್ಷ ಎಂತ ವ್ಯಾಖ್ಯಾನ ಬರದದ್ದು ಕಾಣುತ್ತದೆ ಆದರೆ ಇದೇ ಯೋಗವನ್ನು ವರ್ಣಿಸುವಲ್ಲಿ ಚಿ ಸಾ. ಸಂಗ್ರಹವು 'ಕರ್ಷಾರ್ಧ' ಎಂಬ ಸ್ಪಷ್ಟವಾದ ಪಾಠಾಂತರವನ್ನು ಅಂಗೀಕರಿಸಿರುತ್ತದೆ (ಪು 252) ರಸರತ್ನಾಕರದಲ್ಲಿಯೂ ಹಾಗೆಯೇ ಉಂಟು (ಪು 340)

78. ಮರಿಚಂ ಕರ್ಷಮಾತ್ರಂ ಸ್ಯಾತ್ಪಿಪ್ಪಲೀ ಕರ್ಷಸಮ್ಮಿತಾ |
ಅರ್ಧಕರ್ಷೋ ಯವಕ್ಷಾರಃ ಕರ್ಷಯುಗ್ಮಂ ಚ ದಾಡಿಮಮ್ ||
ಮರಿಚಾದಿ ಗುಳಿಗೆ
ಏತಚ್ಚೂರ್ಣೀಕೃತಂ ಯುಂಜ್ಯಾದಷ್ಟಕರ್ಷಗುಡೇನ ಹಿ |
ಶಾಣಪ್ರಮಾಣಾಂ ಗುಟಿಕಾಂ ಕೃತ್ವಾ ವಕ್ತ್ರೇ ವಿಧಾರಯೇತ್ ||
ಅಸ್ಯಾಃ ಪ್ರಭಾವಾತ್ಸರ್ವೇಽಪಿ ಕಾಸಾ ಯಾನ್ತ್ಯೇವ ಸಂಕ್ಷಯಮ್ ||
(ಭಾ ಪ್ರ. 374)

ಕಾಳುಮೆಣಸು ೧ ಕರ್ಷ, ಹಿಪ್ಪಲಿ ೧ ಕರ್ಷ, ಯವಕ್ಷಾರ ಅರ್ಧ ಕರ್ಷ, ದಾಳಿಂಬದ ಹಣ್ಣಿನ ಸಿಪ್ಪೆ ೨ ಕರ್ಷ, ಇವುಗಳ ಚೂರ್ಣದೊಂದಿಗೆ ೮ ಕರ್ಷ ಬೆಲ್ಲ ಕೂಡಿಸಿ, ಶಾಣ (ಕರ್ಷದ ಕಾಲುಭಾಗ) ಪ್ರಮಾಣದ ಗುಳಿಗೆಗಳನ್ನು ಮಾಡಿಟ್ಟುಕೊಂಡು, ಒಂದೊಂದು ಗುಳಿಗೆಯನ್ನು ಬಾಯಿಯೊಳಗೆ ಇಟ್ಟುಕೊಂಡಲ್ಲಿ, ಅದರ ಪ್ರಭಾವದಿಂದ ಎಲ್ಲಾ ಜಾತಿಯ ಕೆಮ್ಮುಗಳು ಕ್ಷಯವಾಗುತ್ತವೆ.

79. ಶುಭೇ ಽಹ್ನಿ ಸುದೇಶಸಂಭೂತಂ ಮೂಲಶತಂ ಸಮ್ಯಗಶ್ವಗನ್ಧಾಯಾಃ |
ಪುಣ್ಯೇಽಹನಿ ಸಂಕ್ಷುಣ್ಣಂ ವಿಪಚೇದ್ದ್ರೋಣೇಽಮ್ಭಸಿ ಚ ವಿದ್ವಾನ್ ||
ಅಶ್ವಗಂಧಾದಿ ಘೃತ
ಜ್ಞಾತ್ವಾಷ್ಟಭಾಗಸಿದ್ಧಂ ಗೃಹ್ಣೀಯಾತ್ತದ್ರಸಂ ಸುಪರಿಪೂತಮ್ |
ದ್ವೇ ಚೈವಾತ್ರ ಪಲಶತೇ ದದ್ಯಾಚ್ಛಾಗಸ್ಯ ಮಾಂಸಸ್ಯ ||
ಸರ್ಪಿಃ ಪ್ರಸ್ಥಮಥೈಕಂ ಗವ್ಯಂ ಚ ಪಯಶ್ಚತುರ್ಗುಣಂ ದದ್ಯಾತ್ |
ಕಲ್ಕಾನಕ್ಷಸಮಾನಾನೂರ್ಧ್ವಮತಃ ಸಂಪ್ರವಕ್ಷ್ಯಾಮಿ ||
ಕಾಕೋಲೀದ್ವಯಮೃದ್ಧೀ ಮೇದೇ ದ್ವೇ ಜೀರಕಂ ಸ್ವಯಂಗುಪ್ತಾಮ್ |
ವೃಷಭಕಮೇಲಾಂ ಮಧುಕಂ ಮೃದ್ವೀಕಾಂ ಯಾಸಪಿಪ್ಪಲ್ಯೌ ||
ಜೀವನ್ತೀಮುಪಕುಲ್ಯಾಂ ಬಲಾಂ ವಿದಾರೀಂ ಶತಾವರೀಂ ಚಾತ್ರ |
ದತ್ವಾ ಸಮ್ಯಗ್ವಿಪಚೇತ್ಸರ್ಪಿರಥೋದ್ಧೃತ್ಯ ಸ್ಥಿತ್ವಾ ಚ ||
ಮಧುಶರ್ಕರಯೋಃ ಕುಡವಂ ದತ್ವಾ ಭಾಂಡೇ ಶುಭೇ ಸ್ಥಿತಂ ಮೃದಿ-
ತಮ್ |
ಲೀಢ್ವಾ ತತ್ಪಾಣಿತಲೇ ಯಥೇಷ್ಟಮಾಹಾರಮಶ್ನೀಯಾತ್ ||
ಕ್ಷೀಣಕ್ಷತಶಿಶುವೃದ್ಧಾಃ ಕ್ಷೀಣೇಂದ್ರಿಯಹೀನಬಲವರ್ಣಮಾಂಸಾಶ್ಚ |
ಪ್ರಾಶ್ಯ ಪ್ರಕುರ್ಯಾತ್ಸದ್ಯಃ ಪುಷ್ಟಿಬಲಾರೋಗ್ಯತೇಜಾಂಸಿ ||
ಉಪಯುಜ್ಯ ಸರ್ಪಿರೇತತ್ಸಪ್ತತಿವರ್ಷೋ ಯುವೇವ ಪುನರ್ಭೂತ್ವಾ |
ಬಹುಶಃ ಸ್ತ್ರಿಯೋಽಧಿಗಚ್ಛೇತ್ ನ ಚಾತ್ರ ಶುಕ್ರಕ್ಷಯಂ ಲಭತೇ ||
ಪುತ್ರಾರ್ಥಿನೀ ಚ ನಾರೀ ಲಭತೇ ಪುತ್ರಾನ್ ವಯಸ್ಯತೀತೇಽಪಿ |
ವನ್ಧ್ಯಾ ಲಭತೇ ಪುತ್ರಂ ಪ್ರಾಶ್ಯೇದಂ ಚಾಶ್ವಗಂಧಾದ್ಯಮ್ ||
ಉಪಭುಂಕ್ತೇ ಯಃ ಪುರುಷೋ ಮಾಸತ್ರಯಂ ದ್ವಿಮಾಸಂ ಮಾಸಂ ವಾ |
ನಾರೀಶತಂ ಸ ಗಚ್ಛೇನ್ನೈವ ಭಜೇದ್ಯೋಷಿತಾಂ ತೃಪ್ತಿಮ್ ||

ಖಾಲಿತ್ಯಬಲೀಪಲಿತೈರ್ನ ಚಾಸ್ಯ ದೇಹೋ ऽಭಿಭೂಯತೇ ಕ್ಷಿಪ್ರಮ್ |
ವಾತವ್ಯಾಧಿಭಿರಾರ್ತ್ತಸ್ತಥೈವ ಹೃದ್ವಸ್ತಿರೋಗಾರ್ತಃ ||
ನ ಚಿರಾದಪಿ ರೋಗಾರ್ತಾ ಭುಂಜಾನಾಃ ಸರ್ಪಿರರೋಗಾ ಭವನ್ತಿ |
ಅತೋ ಜಗದ್ಧಿತಾರ್ಥಿ ಸರ್ಪಿರಿದಂ ವಾಜಿಗಂಧಾಯಾಃ ||
ಶ್ರೇಷ್ಠಂ ವಾಜೀಕರಣಂ ನಿರ್ದ್ದಿಷ್ಟಾವ್ಯಶ್ವಿಭ್ಯಾಂ ಪೂರ್ವಂ ಬಹುಶಃ |
ಪ್ರೋಕ್ತಂ ವೃಷ್ಯಂ ಬಲ್ಯಂ ಕ್ಷಯಕಾಸಹರಂ ಪುಷ್ಟಿಕರಂ ಚ ||
(ಚಿ. ಸಾ. ಸಂ 248-249)

ಒಳ್ಳೇ ಸ್ಥಳದಲ್ಲಿ ಹುಟ್ಟಿ ಬೆಳೆದ ಒಳ್ಳೇ ಅಶ್ವಗಂಧಿಯ ಬೇರನ್ನು ಶುಭದಿನದಲ್ಲಿ ತೆಗೆದು, ತೊಳೆದು, ಒಣಗಿಸಿ, ಅದರಿಂದ ೧೦೦ ಪಲ ಬೇರನ್ನು ಒಳ್ಳೇ ದಿನದಲ್ಲಿ ಕುಟ್ಟಿ ಪುಡಿಮಾಡಿ, ೧೬ ಪ್ರಸ್ಥ ನೀರಲ್ಲಿ ಹಾಕಿ ಬೇಯಿಸಿ, ೨ ಪ್ರಸ್ಥಕ್ಕೆ ಬತ್ತಿದ ಕೂಡಲೇ, ಒಲೆಯಿಂದ ಕೆಳಗಿಳಿಸಿ, ಶೋಧಿಸಿದ ಆ ಕಷಾಯಕ್ಕೆ, ೨೦೦ ಪಲ ಆಡಿನ ಮಾಂಸವನ್ನೂ, ೧ ಪ್ರಸ್ಥ ದನದ ತುಪ್ಪವನ್ನೂ, ೪ ಪ್ರಸ್ಥ ದನದ ಹಾಲನ್ನೂ, ಮುಂದೆ ಹೇಳುವ ಕಲ್ಕಗಳನ್ನೂ ಕೂಡಿಸಿ, ಸರಿಯಾಗಿ ಪಾಕ ಮಾಡುವದು. ಕಲ್ಕಕ್ಕೆ· ಕಾಕೋಲಿ, ಕ್ಷೀರಕಾಕೋಲಿ, ಋದ್ಧಿ, ವೃದ್ಧಿ, ಮೇದೆ, ಮಹಾಮೇದೆ, ಜೀರಿಗೆ, ಕರಿಜೀರಿಗೆ, ನಸುಗುನ್ನಿ (ನಾಯಿಸೊಣಗಿನ) ಬೀಜ, ವೃಷಭಕ, ಏಲಕ್ಕಿ, ಜ್ಯೇಷ್ಠಮಧು, ದ್ರಾಕ್ಷೆ, ಬಳ್ಳಿತುರಚನ ಬೇರು, ಸಣ್ಣಹಿಪ್ಪಲಿ, ಜೀವಂತೀಗಡ್ಡೆ, ಹಿಪ್ಪಲಿ, ಕಲ್ಲಂಗಡಲೆ ಬೇರಿನ ಸಿಪ್ಪೆ, ನೆಲಕುಂಬಳ ಗಡ್ಡೆ, ಶತಾವರೀ ಬೇರಿನ ಮಾಂಸಭಾಗ, ಇವುಗಳನ್ನೆಲ್ಲಾ ಒಂದೊಂದು ಕರ್ಷ ತೂಕ ಪ್ರಕಾರ ತೆಗೆದುಕೊಂಡು, ಚೂರ್ಣಮಾಡಿ ಕೂಡಿಸುವದು. ಪಾಕ ಬಂದ ಕೂಡಲೇ, ಪಾತ್ರೆಯನ್ನು ಒಲೆಯಿಂದ ಕೆಳಗಿಳಿಸಿ, ಶೋಧಿಸಿ ತೆಗೆದುಕೊಂಡ ತುಪ್ಪವು ತಣಿದ ಮೇಲೆ, ಅದರಲ್ಲಿ ೧ ಕುಡವ ಜೇನನ್ನೂ, ೧ ಕುಡವ ಸಕ್ಕರೆಯನ್ನೂ ಹಾಕಿ, ಕಡದು ಮಿಶ್ರಮಾಡಿ, ಒಳ್ಳೇ ಪಾತ್ರದಲ್ಲಿ(ಭರಣಿಯಲ್ಲಿ)ಟ್ಟುಕೊಂಡು, ಪ್ರತಿ ದಿನ ೨ ಕರ್ಷ ಪ್ರಕಾರ ಸೇವಿಸಿ, ಇಷ್ಟಪ್ರಕಾರ ಉಂಡುತಿಂದು ಇರುವದು. ಕ್ಷೀಣರಾದವರೂ, ಕ್ಷತರೂ, ಶಿಶುಗಳೂ, ವೃದ್ಧರೂ, ಇಂದ್ರಿಯ ಕ್ಷೀಣತೆಯುಳ್ಳವರೂ, ವರ್ಣ-ಬಲ-ಮಾಂಸಗಳ ಹೀನತೆಯುಳ್ಳವರೂ ಈ ಘೃತವನ್ನು ಸೇವಿಸುವದರಿಂದ ಅವರಿಗೆ ಪುಷ್ಟಿ, ಬಲ, ಆರೋಗ್ಯ ಮತ್ತು ತೇಜಸ್ಸು ಸದ್ಯದಲ್ಲಿ ಉಂಟಾಗುವವು. ಎಪ್ಪತ್ತು ವರ್ಷದ ಮುದುಕನಾದರೂ ಈ ತುಪ್ಪವನ್ನು ಉಪಯೋಗಿಸುವದರಿಂದ ಪುನಃ ಯೌವನಸ್ಥನಾಗಿ ಸ್ತ್ರೀಸಂಭೋಗದ ಶಕ್ತಿಯನ್ನು ಬಹಳವಾಗಿ ಪಡೆಯುವನು; ಮತ್ತು ಅವನಿಗೆ ಅದರಿಂದ ಶುಕ್ರಕ್ಷಯವು ಉಂಟಾಗುವದಿಲ್ಲ. ಈ ಘೃತದ ಸೇವನದಿಂದ ಪುತ್ರಸಂತತಿಯನ್ನಪೇಕ್ಷಿಸುವ ಸ್ತ್ರೀಯು, ವಯಸ್ಸು ಕಳೆದವಳಾದರೂ, ಪುತ್ರರನ್ನು ಪಡೆಯುವಳು. ಬಂಜೆ ಸ್ತ್ರೀಯೂ ಈ ಅಶ್ವಗಂಧಾದಿ ಘೃತವನ್ನು ಉಪಯೋಗಿಸಿ ಪುತ್ರವತಿಯಾಗುವಳು. ಮೂರು ತಿಂಗಳು, ಎರಡು ತಿಂಗಳು, ಅಥವಾ ಒಂದು ತಿಂಗಳು ವರೆಗೆ ಯಾವ ಮನುಷ್ಯನು ಇದನ್ನು ಉಪಯೋಗಿಸುತ್ತಾನೋ, ಅವನು ನೂರು ಹೆಂಡಂದಿರ ಸಂಭೋಗಮಾಡಿದರೂ ಅವನಿಗೆ ಹೆಂಗಸರ ತೃಪ್ತಿಯಾಗಲಾರದು; ಕೂದಲು ಉದುರುವದು, ನರೆ, ನೆರಿ ಸಹ ಅವನ ದೇಹದಲ್ಲಿ ಬೇಗನೆ ಕಾಣಲಾರವು. ಈ ಘೃತಸೇವನದಿಂದ ವಾತವ್ಯಾಧಿ ಪೀಡಿತರು, ಹೃದ್ರೋಗ-ವಸ್ತಿರೋಗಗಳಿಂದ ಸಂಕಷ್ಟಪಡುವವರು ಮುಂತಾದ ಎಲ್ಲಾ ರೋಗಿಗಳು ಬೇಗನೇ ರೋಗಗಳಿಂದ ವಿಮುಕ್ತರಾಗಿ ಆರೋಗ್ಯವಂತರಾಗುವರು. ಈ ಅಶ್ವಗಂಧಿಘೃತವು ಶ್ರೇಷ್ಠವಾದ

ವಾಜೀಕರಣ, ವೃಷ್ಯ, ಬಲಕಾರಿ, ಕ್ಷಯಕಾಸಹರ ಮತ್ತು ಪುಷ್ಟಿಕರ ಎಂತ, ಅದನ್ನು ಬಹು ಕಡೆ ಉಪಯೋಗಿಸಿ, ಗೊತ್ತುಮಾಡಿ, ಅಶ್ವಿನೀ ದೇವತೆಗಳು ಪೂರ್ವದಲ್ಲಿ ಜಗತ್ತಿನ ಹಿತಕ್ಕಾಗಿ ಅದರ ಯೋಗವನ್ನು ಪ್ರಕಟಿಸಿದ್ದಾಗಿರುತ್ತದೆ.

ಪರಾ ಈ ಯೋಗದ ಮಹಾತ್ಮ್ಯವರ್ಣನದಲ್ಲಿ ಅತಿಶಯೋಕ್ತಿಗಳು ಯಾರಿಗಾದರೂ ಹೊಳೆಯದೆ ಹೋಗಲಾರವು ಆದರೆ ಯೋಗಪ್ರಕಾರ ತಯಾರಿಸಿದ ಘೃತವು ಕ್ಷಯಾದಿಗಳ ಪರಿಹಾರಕ್ಕೆ ಬಹಳ ಪ್ರಯೋಜನಕಾರಿ ಎಂಬದರಲ್ಲಿ ಸಂದೇಹವಿಲ್ಲ ಯೋಗದಲ್ಲಿ ಹಿಪ್ಪಲಿ ಎರಡಾವರ್ತಿ ಉಕ್ತವಾಗಿರುವದರಿಂದ ಅದನ್ನು ವಿಧಿಪ್ರಕಾರ ದುಬಾರೆಯಾಗಿ (೨ ಕರ್ಷ) ಕೂಡಿಸುವದರ ಬದಲಾಗಿ, 'ಪಿಪ್ಪಲೀ' ಎಂಬದಕ್ಕೆ 'ಸಣ್ಣಹಿಪ್ಪಲಿ' ಎಂತ ಅರ್ಥ ಬರೆದದೆ, ಆದರೆ ಅದರ ಸ್ಥಾನದಲ್ಲಿ ಪಾಠಾಂತರವು ಕಾಡು ಉದ್ದಿನ ಬೇರನ್ನು ಹೇಳುತ್ತದೆ, ಮತ್ತು ಅದರಲ್ಲಿ ಮಾಂಸದ ಕಷಾಯವನ್ನು ಪ್ರತ್ಯೇಕವಾಗಿ ಮಾಡಿ ಕೂಡಿಸಬೇಕಾಗಿ ಕಾಣುತ್ತದೆ (ಧ 371-2).

80. ಶುಂಠೀಕಣಾಮರಿಚನಾಗದಲತ್ವಗೇಲಂ
ಚೂರ್ಣೀಕೃತಂ ಕ್ರಮವಿವರ್ಧಿತಮೂರ್ಧ್ವಮನ್ತ್ಯಾತ್ |
ಶುಂಠ್ಯಾದಿ ಸಮ ಶರ್ಕರಚೂರ್ಣ
ಖಾದೇದಿದಂ ಸಮಸಿತಂ ಗುದಜಾಗ್ನಿಮಾಂದ್ಯ-
ಗುಲ್ಮಾರುಚಿಶ್ವಸನಕಂಠಹೃದಾಮಯೇಷು || (ಚಿ. ಸಾ. ಸಂ. 251)

ಏಲಕ್ಕಿ ೧ ಪಾಲು, ಲವಂಗಪಟ್ಟೆ ೨ ಪಾಲು, ದಾಲ್ಚೀನಿ ಎಲೆ ೩ ಪಾಲು, ನಾಗಕೇಸರ ೪ ಪಾಲು, ಕಾಳುಮೆಣಸು ೫ ಪಾಲು, ಹಿಪ್ಪಲಿ ೬ ಪಾಲು, ಶುಂಠಿ ೭ ಪಾಲು, ಇವುಗಳ ಚೂರ್ಣಕ್ಕೆ ಸಮಪಾಲು ಸಕ್ಕರೆ ಬೆರಸಿಟ್ಟುಕೊಂಡು, ಸೇವಿಸುತ್ತಾ ಬಂದಲ್ಲಿ ಮೂಲವ್ಯಾಧಿ, ಅಗ್ನಿಮಾಂದ್ಯ, ಗುಲ್ಮ, ಅರುಚಿ, ಉಬ್ಬಸ, ಕಂಠದ ವ್ಯಾಧಿ, ಹೃದ್ರೋಗ ಸಹ ಪರಿಹಾರವಾಗುವವು.

81. ಘೃತಂ ರಾಸ್ನಾಬಲಾಪಥ್ಯಾಶ್ವದಂಷ್ಟ್ರಾಕಲ್ಕಪಾಚಿತಮ್ |
ಕಂಟಕಾರೀ ಘೃತ. ಕಂಟಕಾರೀರಸೇ ಸರ್ಪಿಃ ಪಂಚಕಾಸನಿಸೂದನಮ್ ||
(ಚಿ. ಸಾ. ಸಂ. 253)

ರಾಸ್ನೆ (ಅರತೆ), ಕಲ್ಲಂಗಡಲೆಬೇರು, ಅಣಲೆಕಾಯಿ, ನೆಗ್ಗಿಲಮುಳ್ಳು, ಇವುಗಳ ಕಲ್ಕದಿಂದ ಕಿರಿಗುಳ್ಳದ ರಸದಲ್ಲಿ (ಕಷಾಯದಲ್ಲಿ) ಕಾಯಿಸಿ ಪಾಕಮಾಡಿದ ತುಪ್ಪವು ಐದು ವಿಧವಾದ ಕೆಮ್ಮನ್ನು ಪರಿಹರಿಸುವದು.

82. ಸಮೂಲಪತ್ರಶಾಖಾಯಾಃ ಕಂಟಕಾರ್ಯಾಸ್ತುಲಾಂ ಶುಭಾಮ್ |
ಕ್ಷುಣ್ಣಾಂ ಪಚೇಜ್ಜಲದ್ರೋಣೇ ಚತುರ್ಭಾಗಾವಶೇಷಿತೇ ||
ಬೃಹತ್ಕಂಟಕಾರೀ ಘೃತ.
ಮಿಶ್ರಿತೇ ತತ್ಕಷಾಯೇ ಽಸ್ಮಿನ್ ಘೃತಪ್ರಸ್ಥಂ ವಿಪಾಚಯೇತ್ |
ಕಲ್ಕಾನ್ ಬಿಲ್ವಪ್ರಮಾಣಾಂಶ್ಚ ತತ್ರೇಮಾನಿ ಪ್ರದಾಪಯೇತ್ ||
ಪಿಪ್ಪಲೀ ಪಿಪ್ಪಲೀಮೂಲಂ ಚಿತ್ರಕೋ ಹಸ್ತಿಪಿಪ್ಪಲೀ |
ಸೌವರ್ಚಲಂ ಯವಕ್ಷಾರೋ ರಾಸ್ನಾ ತ್ರಿಕಟುಕಂ ವಚಾ ||
ಏತತ್ಸರ್ಪಿಃ ಪ್ರಶಂಸನ್ತಿ ಪಂಚಕಾಸನಿವಾರಣಮ್ |
ಶ್ವಾಸಂ ಕಾಸಂ ಪ್ರತಿಶ್ಯಾಯಂ ಶ್ಲೇಷ್ಮಕಾಸಂ ಚ ನಾಶಯೇತ್ ||
ನಿದಿಗ್ಧಿಕಾಘೃತಮಿದಂ ನ ವ್ಯಾಧಿರತಿವರ್ತತೇ |
ಜಾತಶೂಲೋ ಽಪಿ ಸಂವೃದ್ಧೋ ದೇವಸೇನಾಮಿವಾಸುರಾಃ ||
(ಚಿ. ಸಾ. ಸಂ. 253)

ಕಿರಿಗುಳ್ಳದ ನಿರ್ದೋಷವಾದ ಬೇರು, ಎಲೆ, ಶಾಖೆಗಳನ್ನು ೧೦೦ ಪಲ ತೆಗೆದುಕೊಂಡು ಜಜ್ಜಿ, ೧೬ ಪ್ರಸ್ಥ ನೀರಲ್ಲಿ ಹಾಕಿ, ೪ ಪ್ರಸ್ಥಕ್ಕೆ ಬತ್ತುವ ವರೆಗೆ ಕುದಿಸಿ, ಶೋಧಿಸಿದ ಕಷಾಯಕ್ಕೆ ೧ ಪ್ರಸ್ಥ ತುಪ್ಪವನ್ನೂ, ಹಿಪ್ಪಲಿ, ಹಿಪ್ಪಲೀಮೂಲ, ಚಿತ್ರಮೂಲ, ಗಜಹಿಪ್ಪಲಿ, ಸೌವರ್ಚಲವಣ, ಯವಕ್ಷಾರ, ರಾಸ್ನೆ (ಅರತೆ), ತ್ರಿಕಟು, ಬಜೆ, ಇವುಗಳನ್ನು ಒಂದೊಂದು ಪಲ ಪ್ರಮಾಣ ತೆಗೆದುಕೊಂಡು ಚೂರ್ಣಮಾಡಿ, ಆ ಕಲ್ಕವನ್ನೂ ಹಾಕಿ ಪಾಕಮಾಡಿ, ಶೋಧಿಸಿಟ್ಟುಕೊಂಡ ತುಪ್ಪವು ಐದು ವಿಧವಾದ ಕೆಮ್ಮುಗಳ ಪರಿಹಾರಕ್ಕೆ ಉತ್ತಮವೆಂತ ಹೊಗಳುತ್ತಾರೆ. ಅದರ ಸೇವನದಿಂದ ಉಬ್ಬಸ, ಕೆಮ್ಮು, ನೆಗಡಿ, ಕಫಜ ಕಾಸ ಸಹ ನಾಶವಾಗುವವು. ವ್ಯಾಧಿಯು ಬೆಳೆದು ಶೂಲೆ ಉಂಟಾಗಿದ್ದರೂ ಅದು, ಅಸುರರು ದೇವತೆಗಳ ಸೇನೆಗೆ ಹೇಗೆಯೋ ಹಾಗೆ, ಈ ಘೃತಕ್ಕೆ ಎದುರುನಿಲ್ಲಲಾರದು.

83. ಕಂಟಕಾರ್ಯಾಸ್ತುಲಾಂ ಸಮ್ಯಗ್ಜಲದ್ರೋಣೇ ವಿಪಾಚಯೇತ್ ।
ಪಾದಾವಶೇಷಿತೇ ತಸ್ಮಿನ್ ಕಲ್ಕಾನೇತಾನ್ ಪ್ರದಾಪಯೇತ್ ॥
ಕಂಟಕಾರ್ಯಾದಿ ಲೇಹ — ದುರಾಲಭಾ ಛಿನ್ನರುಹಾ ಭಾರ್ಗೀ ಕರ್ಕಟಕಾಹ್ವಯಾ ।
ರಾಸ್ನಾ ಮುಸ್ತಂ ಶಟೀ ಚವ್ಯಂ ಚಿತ್ರಕಂ ತ್ರ್ಯೂಷಣಂ ತಥಾ ।
ಪಲಾಂಶಾನಿ ಪಲಾನ್ಯತ್ರ ಶರ್ಕರಾಯಾಸ್ತು ವಿಂಶತಿಃ ।
ಘೃತತೈಲಪಲಾನ್ಯಸ್ಮಿನಷ್ಟಾವಷ್ಟೌ ಪ್ರದಾಪಯೇತ್ ॥
ಕಲ್ಕೀಕೃತ್ಯ ಘೃತೇ ಶೀತೇ ಮಧುನೋಽಷ್ಟಪಲಂ ಕ್ಷಿಪೇತ್ ।
ಚತುಃಪಲಂ ಪಿಪ್ಪಲೀನಾಂ ತುಗಾಕ್ಷೀರ್ಯಾಶ್ಚತುಃ ಪಲಮ್ ॥
ಏಷ ಲೇಹಃ ಶಮಯತಿ ಪಂಚಕಾಸಾಂಶ್ಚಿರೋತ್ಥಿತಾನ್ ।
(ಚಿ. ಸಾ. ಸಂ. 254)

ಕಿರಿಗುಳ್ಳದ ಬೇರು ೧೦೦ ಪಲವನ್ನು ೧೬ ಪ್ರಸ್ಥ ನೀರಲ್ಲಿ ಹಾಕಿ, ೪ ಪ್ರಸ್ಥಕ್ಕೆ ಬತ್ತಿಸಿ, ಶೋಧಿಸಿದ ಕಷಾಯಕ್ಕೆ, ಬಳ್ಳಿತುರಚನ ಬೇರು, ಅಮೃತಬಳ್ಳಿ, ಗಂಟುಭಾರಂಗಿ (ನಿರ್ವಿಷ), ಕರ್ಕಟಶೃಂಗಿ, ರಾಸ್ನೆ (ಅರತೆ), ಭದ್ರಮುಷ್ಟಿ, ಕಚೋರ, ಕಾಡುಮೆಣಸಿನ ಬೇರು, ಚಿತ್ರಮೂಲ, ತ್ರಿಕಟು, ಇವುಗಳನ್ನು ಒಂದೊಂದು ಪಲ ಪ್ರಕಾರ ತೆಗೆದುಕೊಂಡು, ವಸ್ತ್ರಗಾಲಿತ ಚೂರ್ಣಮಾಡಿ, ಆ ಚೂರ್ಣವನ್ನೂ ೨೦ ಪಲ ಸಕ್ಕರೆಯನ್ನೂ, ೮ ಪಲ ತುಪ್ಪವನ್ನೂ, ೮ ಪಲ ಎಳ್ಳೆಣ್ಣೆಯನ್ನೂ ಕೂಡಿಸಿ ಪಾಕಮಾಡಿ, ಅದರೊಂದಿಗೆ, ತಣಿದ ಮೇಲೆ, ೮ ಪಲ ಜೇನನ್ನೂ, ೪ ಪಲ ಹಿಪ್ಪಲಿಚೂರ್ಣವನ್ನೂ, ೪ ಪಲ ಬಿದಿರುಪ್ಪಿನ ಹುಡಿಯನ್ನೂ ಬೆರಸಿಟ್ಟುಕೊಳ್ಳುವದು. ಈ ಲೇಹದ ಸೇವನದಿಂದ ಐದು ವಿಧವಾದ ಕೆಮ್ಮುಗಳು, ದೀರ್ಘಕಾಲದ್ದಾದರೂ, ಶಮನ ವಾಗುವವು.

84. (1) ರೋಗಿಗೆ 54 ವರ್ಷ. 1 ವರ್ಷದಿಂದ ಕೆಮ್ಮು, ಕಫ ಸಡಿಲು ಉಂಟು, ನಿದ್ರೆ ಕಡಿಮೆ, ಮಲ ದಿನಕ್ಕೊಮ್ಮೆ ಕಪ್ಪಾಗಿ ಹೋಗುತ್ತದೆ; ಪಿತ್ತಕಫ ನಾಡಿಗಳು ವಾತದ್ದಕ್ಕಿಂತ ಸ್ಥಾನದಲ್ಲಿ ಪುಷ್ಟಿಯಾಗಿವೆ.—ಶುಂಠಿ ರಸ ೧॥ ಡ್ರಾಂ, ಜೇನು ೧॥ ಡ್ರಾಂ, ಇದರಲ್ಲಿ ಅತಿ. ೧, ಕಸ್ತೂರ್ಯಾದಿ

ದೃಷ್ಟಫಲ ಚಿಕಿತ್ಸೆ

೧ರಂತೆ ೭ ದಿನ, ದಿನಕ್ಕೆ ೩ ಸರ್ತಿ;—ಅನಂತರ ಅತಿ. ೧, ಮ. ಜ್ವ. ೧ರಂತೆ ಕಲ್ಲುಸಕ್ಕರೆ ಕೂಡಿಸಿ ಅದೇ ರಸಗಳಲ್ಲಿ; ಕ್ಷೇಮ.

(2) ರೋಗಿಗೆ 47 ವರ್ಷ. ಕೆಮ್ಮು ರಾತ್ರಿ ಹೆಚ್ಚು, ಕಫ ಕಡಿಮೆ, ನಿದ್ರೆ ಬರುವದಿಲ್ಲ, ಕಿವಿಯೊಳಗೆ ಸಿಡತ ಮತ್ತು ತುರಿಕೆ, ಮಲ ದಿನಕ್ಕೊಮ್ಮೆ ಹೋಗುತ್ತದೆ.—ಅಮೃತಬಳ್ಳಿ ತೊಲೆ ೧, ಆಡುಸೋಗೆ ಬೇರು ತೊಲೆ |, ಹಿಪ್ಪಲಿ ತೊಲೆ |, ಜ್ಯೇಷ್ಠಮಧು ತೊಲೆ |, ಕಷಾಯದ ಅರ್ಧದಲ್ಲಿ ಜ್ವರಭೈರವ ೧ರಂತೆ ದಿನಕ್ಕೆ ೩ ಸರ್ತಿ ಪ್ರಕಾರ ೫ ದಿನ; ಕಿವಿಯ ಸಂದಿಗೆ ಹೊರಗಿನಿಂದ (ನೀರು ಕೂಡಿಸಿ ಅರೆದ) ಸಾಸಿವೆ ಲೇಪ; ಇದರಿಂದ ಸೌಖ್ಯ.

ಜ್ವರಭೈರವ ಮಾತ್ರೆಯ ಕ್ರಮ

ತ್ರಿಕಟುತ್ರಿಫಲಾಟಂಕವಿಷಗಂಧಕಪಾರದಮ್ ।
ಜಯಪಾಲಸಮಂ ಮರ್ದ್ಯಂ ದ್ರೋಣಪುಷ್ಪೀರಸೈರ್ದಿನಮ್ ॥
ತಾಂಬೂಲೇನ ಸಮಂ ಹ್ಯೇತತ್ಖಾದೇದ್ಗುಂಜಾಮಿತಾಂ ವಟೀಮ್ ।
ಮುದ್ಗಯೂಷಂ ಶಿಖರಿಣೀ ಪಥ್ಯಂ ದೇಯಂ ಪ್ರಯತ್ನತಃ ॥
ನವಜ್ವರಂ ತ್ರಿದೋಷೋತ್ಥಂ ಜೀರ್ಣಂ ಚ ವಿಷಮಜ್ವರಮ್ ।
ದಿನೈಕೇನ ನಿಹನ್ತ್ಯಾಶು ರಸೋಽಯಂ ಜ್ವರಭೈರವಃ ॥

(ರಸರಾಜಸುಂದರ)

ತ್ರಿಕಟು, ತ್ರಿಫಲೆ, ಶುದ್ಧ ಟಂಕಣಖಾರ, ಶುದ್ಧ ವತ್ಸನಾಭಿ, ಶುದ್ಧ ಗಂಧಕ, ಶುದ್ಧ ಪಾದರಸ, ಶುದ್ಧ ಜೇಪಾಳದ ಬೀಜ, ಇವುಗಳನ್ನು ಸಮಪಾಲು ತೆಗೆದುಕೊಂಡು, ತುಂಬೇಸೊಪ್ಪಿನ ರಸದಲ್ಲಿ ೪ ಜಾಮು ಅರೆದು, ಗುಂಜಾಪ್ರಮಾಣ ಮಾತ್ರೆ ಕಟ್ಟಿ, ನೆಳಲಿನಲ್ಲಿ ಒಣಗಿಸಿಟ್ಟು ಕೊಂಡು, ಒಂದು ಮಾತ್ರೆಯನ್ನು ತಾಂಬೂಲದ ಎಲೆಯಲ್ಲಿಟ್ಟು ತಿನ್ನಲು, ಹೊಸಜ್ವರ, ತ್ರಿದೋಷಜ್ವರ, ಜೀರ್ಣ(ಹಳೆ)ಜ್ವರ, ವಿಷಮಜ್ವರ ಸಹ ಒಂದೇ ದಿನದಲ್ಲಿ ಬಿಟ್ಟುಹೋಗುವವು. ಇದಕ್ಕೆ ಜ್ವರಭೈರವ ಎಂತ ಹೆಸರು. ಹೆಸರುಸಾರು ಮತ್ತು ಶಿಖರಿಣೀ ಪಥ್ಯ

ಷರಾ ಜೇಪಾಳದ ತೂಕವನ್ನು ಮಿಕ್ಕ ೧೦ ಬಗೆಗಳ ತೂಕದ ಮೊತ್ತಕ್ಕೆ ಸಮ ಕೂಡಿಸಬೇಕೆಂತ ಅರ್ಥವಾದರೂ, ಅಷ್ಟು ಜೇಪಾಳವನ್ನು ಸೇರಿಸಿದರೆ, ಮಾತ್ರೆಯು ವಿರೇಚನ ಔಷಧವೇ ಆಗುವದು ನಾನು ಹಾಗೆ ಮಾಡುವದಿಲ್ಲ ಈ ಮಾತ್ರೆಯನ್ನು ತುಂಬೀ ರಸ, ಹಾಲು ಮುಂತಾದ ಬೇರೆ ಅನುಪಾನಗಳಿಂದಲೂ ಉಪಯೋಗಿಸಬಹುದು ಮಾತ್ರೆಯನ್ನು ಮೆಣಸಿನಕಾಳಿನ ಗಾತ್ರ ಮಾಡಿಟ್ಟುಕೊಂಡು, ಸಾಧಾರಣವಾಗಿ ಒಂದು ಮಾತ್ರೆ ಕೊಟ್ಟರೆ ಸಾಕಾಗುತ್ತದೆ ಕ್ರಮವಾದ ವಿರೇಚನಕ್ಕೆ ಅಯೋಗ್ಯರಾದ ರೋಗಿಗಳ ಮಲಬದ್ಧತೆಯನ್ನು ಪರಿಹರಿಸುವದಕ್ಕೆ ಮತ್ತು ಮಲಬದ್ಧತೆಯುಳ್ಳ ಜ್ವರರೋಗಿಗೆ ಕೊಡುವದಕ್ಕೆ ಬಹಳ ಉಪಯುಕ್ತವಾದದ್ದು

ಜೇಪಾಳ ಶುದ್ಧಿ

ಜೇಪಾಳದ ಬೀಜವನ್ನು ಸಿಪ್ಪೆ ತೆಗೆದು, ಎಮ್ಮೆಯ ಸಗಣಿಯಲ್ಲಿ ಕಲಸಿ, ಮೂರು ದಿನ ಇಡುವದು; ಅಥವಾ ಗೋಮಯದ ನೀರಿನಲ್ಲಿ ಒಂದು ಜಾಮ ಬೇಯಿಸುವದು; ಅಥವಾ ವಸ್ತ್ರದಲ್ಲಿ ಸಡಿಲಾಗಿ ಪೊಟ್ಟಣ ಕಟ್ಟಿ, ಒಂದು ಗಡಿಗೆಯೊಳಗೆ ಅರ್ಧಾಂಶ ದನವಿನ ಹಾಲನ್ನು ತುಂಬಿಸಿ, ಆ ಗಡಿಗೆಬಾಯಿಗೆ ಅಡ್ಡವಾಗಿ ಒಂದು ಕಡ್ಡಿಯನ್ನಿಟ್ಟು, ಪೊಟ್ಟಣವು ಗಡಿಗೆಯ ಬುಡಕ್ಕೆ ತಾಗದೆ ಹಾಲಿನಲ್ಲಿ ತೇಲುವ ಹಾಗೆ ಅದನ್ನು ಹಗ್ಗದಿಂದ ಕಡ್ಡಿಗೆ ಕಟ್ಟಿದ ಮೇಲೆ, ಆ ಗಡಿಗೆಯನ್ನು ಒಲೆಯ ಮೇಲಿಟ್ಟು ಒಂದು ಜಾಮ ಬೇಯಿಸುವದು. ಇವುಗಳೊಳಗೆ ಯಾವದಾದರೂ ಒಂದು ಕ್ರಮವನ್ನು ನಡಿಸಿದನಂತರ ಜೇಪಾಳದ ಬೀಜವನ್ನು

ಬಿಸಿನೀರಿನಿಂದ ಚೆನ್ನಾಗಿ ತೊಳೆಯುವದು; ಅನಂತರ ಆ ಬೀಜಗಳೊಳಗೆ ಪ್ರತಿಯೊಂದನ್ನು ಸೀಳಿ, ಬೇಳೆಗೆ ಹತ್ತಿಕೊಂಡಿರುವ ಮೊಳಿಕೆಯ ಅಂಶವನ್ನು ಚೂರಿಯಿಂದ ಹೆರಸಿ ಸರಿಯಾಗಿ ತೆಗೆದುಬಿಡಬೇಕು; ಆ ಮೇಲೆ ಆ ಬೇಳೆಗಳನ್ನು ಬಿಸಿಲಲ್ಲಿ ಒಣಗಿಸಿಟ್ಟು ಕೊಳ್ಳಬೇಕು. ಆ ಬೇಳೆಯಲ್ಲಿರುವ ಎಣ್ಣೆಯ ಅಂಶ ಇನ್ನಷ್ಟು ಹೋಗುವ ಹಾಗೆ ಅವುಗಳನ್ನು ಅರೆದು ಹೊಸ ಮಡಿಕೆಗೊ, ವಸ್ತ್ರದ ತುಂಡಿಗೊ ಹಚ್ಚಿ, ಸಿಕ್ಕುವ ಪುಡಿಯನ್ನು ಉಪಯೋಗಿಸಬೇಕೆಂತ ಕೆಲವರು ಹೇಳುತ್ತಾರೆ. ಈ ಕ್ರಮ ನಡಿಸಿದರೆ, ಔಷಧದ ಶಕ್ತಿಯು ಬಹಳ ಕಡಿಮೆಯಾಗುವದು. ಮಾತ್ರಾದಿಗಳಿಗೆ ಕೂಡಿಸುವ ಸಂಗತಿಯಲ್ಲಿ ಅದನ್ನು ಅಷ್ಟು ನಿರ್ವೀರ್ಯರ್ದ್ದನ್ನಾಗಿ ಮಾಡುವದು ಪ್ರಶಸ್ತವಲ್ಲ. ಅಂಕುರಗಳನ್ನು ಸರಿಯಾಗಿ ತೆಗೆಯು ವದೇ ಅತಿ ಮುಖ್ಯ.

(3) ರೋಗಿಗೆ ಪ್ರಾಯ 50 ವರ್ಷ. 3 ತಿಂಗಳಿಂದ ಕೆಮ್ಮು, ಅಮಾವಾಸ್ಯೆ ಸಮಯ ಉಬ್ಬಸ ಆರಂಭಿಸುವದು, 15 ದಿನಗಳಿಂದ ಉಬ್ಬಸವೂ ಉಂಟು; ನಾಡಿಗಳು ಮೂರೂ ಅಸ್ಥಿರ, ವಾತದಲ್ಲಿ ದೋಷ ಹೆಚ್ಚು.—ಅಮೃತಬಳ್ಳಿ ತೊಲೆ ||, ಆಡುಸೋಗೆ ಎಲೆ ತೊಲೆ ||, ಕಲ್ಲಂಗ ಡಲೆ ಬೇರು ತೊಲೆ ||, ಬಳ್ಳಿತುರಚನ ಬೇರು ತೊಲೆ |, ಕಿರಿಗುಳ್ಳದ ಬೇರು ತೊಲೆ |, ಹಿಪ್ಪಲಿ ತೊಲೆ =, ಶುಂಠಿ ತೊಲೆ =, ಬಿಳೇ ಕಾಳುಮೆಣಸು ತೊಲೆ =; ಕಷಾಯದ ಅರ್ಧದಲ್ಲಿ ಅತಿ. ೧, ಕಸ್ತೂರ್ಯಾದಿ ||ರಂತೆ, ಜೇನು ಮತ್ತು ಕಲ್ಲುಸಕ್ಕರೆ ಪುಡಿ ಕೂಡಿಸಿ, ಕೊಟ್ಟದ್ದರಿಂದ ಕ್ಷೇಮ ವಾಗಿದೆ.

(4) ರೋಗಿಗೆ 29 ವರ್ಷ. ಒಂದು ತಿಂಗಳಿಂದ ಕೆಮ್ಮು, ಸಂಜೆ ಸಮಯದಲ್ಲಿ ಮೈಕಾವು, ನಾಡಿಗಳೊಳಗೆ ವಾತ ಸ್ಥಾನಚ್ಯುತ ಮತ್ತು ಕುಪಿತ, ಪಿತ್ತ ಅಸ್ಥಿರ ಮತ್ತು ಅಬಲಿ, ಕಫ ಮತ್ತಷ್ಟು ಅಬಲ ಮತ್ತು ಕೆಲವು ಸ್ತಬ್ಧ. ಮಲ ಸರಿ.—ಅಮೃತಬಳ್ಳಿ ತೊ. ||, ಆಡುಸೋಗೆ ಎಲೆ ತೊ. ||, ಬಳ್ಳಿತುರಚನ ಬೇರು ತೊ. ||, ಶುಂಠಿ ತೊ. |, ಹಿಪ್ಪಲಿ ತೊ. =, ಬಿಳೇಕಾಳು ಮೆಣಸು ತೊ. =, ಕಷಾಯದ ಅರ್ಧದಲ್ಲಿ ವಾ. ಗ. | ಮತ್ತು ಅತಿ. ೧ರಂತೆ, ಜೇನು ಮತ್ತು ಕಲ್ಲುಸಕ್ಕರೆ ಪುಡಿ ಕೂಡಿಸಿ, ಕೊಟ್ಟದ್ದರಿಂದ ಕ್ಷೇಮ.

(5) ರೋಗಿಗೆ 40 ವರ್ಷ. 12 ದಿನಗಳಿಂದ ಕೆಮ್ಮು, ಪ್ರಥಮ 2 ದಿನ ಜ್ವರವಿತ್ತಂತೆ, ಈಗ ಮೂರು ದಿನಗಳಿಂದ ಬಲಪಕ್ಕದಲ್ಲಿ ಕೊಳಿಕೆಬಿದ್ದ ಹಾಗಿನ ಶೂಲೆ, ನಾಲಿಗೆಯ ಅಡಿ ನೀಲ, ಮೂತ್ರ ಕೆಂಪು, ಅರುಚಿ, ಮಲ ಗಟ್ಟಿ, ಮತ್ತು ಅಶಕ್ತಿ.—ಅಮೃತಬಳ್ಳಿ ತೊ. ||, ಕಲ್ಲಂಗಡಲೆ ಬೇರು ತೊ. ||, ನೆಗ್ಗಿಲಮುಳ್ಳು ತೊ. ||, ದ್ರಾಕ್ಷೆ ತೊ. ||, ಹಿಪ್ಪಲಿ ತೊ. |, ಕಷಾಯದ ಅರ್ಧದಲ್ಲಿ ಕಸ್ತೂರ್ಯಾದಿ ೧ರಂತೆ, ಜೇನು ಮತ್ತು ಕಲ್ಲುಸಕ್ಕರೆ ಪುಡಿ ಕೂಡಿಸಿ, ಕೊಟ್ಟದ್ದರಿಂದ ಕ್ಷೇಮ.

(6) ರೋಗಿಗೆ 35 ವರ್ಷ. 1 ತಿಂಗಳಿಂದ ಕೆಮ್ಮು ಮತ್ತು ಉಬ್ಬಸ, ಮೊದಲು ಮೈಲಿಗೆ ರೋಗ ಆಗಿತ್ತಂತೆ, ಮೈಯಲ್ಲಿ ರಕ್ತ ಕಡಿಮೆ, ಅಶಕ್ತಿ; ಮೂರು ನಾಡಿಗಳೂ ಅಸ್ಥಿರ, ಹೆಚ್ಚಾಗಿ ಸ್ಥಾನಚ್ಯುತ.—ಅಮೃತಬಳ್ಳಿ ತೊ. ೧, ಶುಂಠಿ ತೊ. |ರ, ಕಷಾಯ ಅರ್ಧ ಕುಡ್ತೆಯನ್ನು ಶೋಧಿಸಿ, ಅರ್ಧ ಚಾಚಮಚೆ (ಡ್ರಾಂ) ಜೇನು ಮತ್ತು ೩ ಗ್ರೈನ್ (೨ ಗುಲುಗುಂಜಿ) ತೂಕ ಶುದ್ಧ ಅನ್ನಭೇದಿಯನ್ನು ಹಾಕಿ ಕರಗಿಸಿಟ್ಟುಕೊಂಡು, ಅರ್ಧಾಂಶ (ಕಾಲು ಕುಡ್ತೆ) ಪ್ರಕಾರ ದಿನಕ್ಕೆ ೨ ಸರ್ತಿ ಸೇವಿಸುವದು. ಈ ರೀತಿ ಕೆಲವು ಕಾಲ ಮಾಡಿದ್ದರಿಂದ ಕ್ಷೇಮ.

(7) ರೋಗಿಗೆ 25 ವರ್ಷ. 4 ತಿಂಗಳಿಂದ ಕೆಮ್ಮು ಮತ್ತು ಉಬ್ಬಸ, ಅಶಕ್ತಿ, ಹಸಿವೆ ಕಡಿಮೆ, ಒಂದೊಂದು ವೇಳೆ ವಾಂತಿ; ನಾಡಿಗಳು ಮೂರೂ ಅಸ್ಥಿರ, ಪಿತ್ತ ಸ್ಥಾನಕ್ಕೆ ಬಂದಿರುವದು ಅಪರೂಪ.— ಕಲ್ಲಂಗಡಲೆ ಬೇರು, ಆನೆಕಲ್ಲಂಗಡಲೆ ಬೇರು, ಬಿಲ್ಲಪತ್ರೆ ಬೇರು, ಬಳ್ಳಿತುರಚನ ಬೇರು, ಹಿಪ್ಪಲಿ, ನೆಗ್ಗಿಲಮುಳ್ಳು, ಭದ್ರಮುಷ್ಟಿ, ಲವಂಗಪಟ್ಟೆ, ಇವು ತೊ. |ರಂತೆ, ಶುಂಠಿ ತೊ. =, ಕಷಾಯದ ಅರ್ಧದಲ್ಲಿ, ಅತಿ. ||, ಮತ್ತು ಕಸ್ತೂರ್ಯಾದಿ ||ರಂತೆ, ಜೇನು ಮತ್ತು ಕಲ್ಲುಸಕ್ಕರೆ ಪುಡಿ ಕೂಡಿಸಿ, ಸೇವಿಸುತ್ತಾ ಬಂದದರಿಂದ ಕ್ಷೇಮ.

(8) ರೋಗಿಗೆ 45 ವರ್ಷ. ಕೆಲವು ದಿನಗಳಿಂದ ಕೆಮ್ಮು, ಎದೆಯುರಿ, ಅಶಕ್ತಿ.— ವಾತುಳಂಗರಸಾಯನ ತೊ ||ರಂತೆ ೯ ದಿನ, ದಿನಕ್ಕೆ ೨ ಸರ್ತಿ, ಸೇವಿಸಿದರಿಂದ ಕ್ಷೇಮ.

ಪೃಥಗ್ರೋಗೋಕ್ತ ಔಷಧಗಳು

85. ಅಂಕೋಲೆ ಬೀಜ, ಅಗಿಲುಗಂಧ, ಅಣಿಲೆಕಾಯಿ, ಅಮೃತಬಳ್ಳಿ, ಅರಗು, ರಾಸ್ನೆ (ಅರತೆ), ಅರಸಿನ, ಅರಸಿನ ಗೋರಟೆ, ಆಡುಸೋಗೆ, ಆದಿತ್ಯಭಕ್ತ, ಆನೆಮುಂಗು, ಎಕ್ಕೆಬೇರು, ಎಕ್ಕೆಹೂವು, ಎಲೆಹುರಿ, ಏಲಕ್ಕಿ, ಏಳಿಲೆ ಬಾಳೆ (ಹಾಲೆ), ಒಂದೆಲಗ, ಓಮ, ಕಕ್ಕೆಮರ, ಕಚೋರ, ಕಟುಕರೋಹಿಣೀ, ಕತ್ತೃಣ (ಸಂಬಾರಹುಲ್ಲು, ಮಲ. ನಾನ್ಮುಕಪ್ಪುಲ್ಲು), ಕರಿಜೀರಿಗೆ, ಕರೀತುಳಸಿ, ಕರಿನೆಕ್ಕಿ, ಕರ್ಕಟಶೃಂಗಿ, ಕಹಿಬೇವು, ಕಾಚಿನ ಮರ, ಕಾಡುಮೆಣಸಿನ ಬೇರು, ಕಾಳುಮೆಣಸು, ಕಿರಾತಕಡ್ಡಿ, ಕಿರಿಗುಳ್ಳ, ಕೆಂಪು ಗೋರಟೆ (ಕುರುವಕ), ಕೆಂಪು ಮಂದಾರದ ಹೂವು, ಕೋಲಾಂಜನ (ದೊಡ್ಡ ದುಂಪರಾಸ್ನೆ), ಖರ್ಜೂರ, ಗಂಟುಭಾರಂಗಿ (ನಿರ್ವಿಷ), ಗಜಹಿಪ್ಪಲಿ, ಗರುಗ, ಗುಗ್ಗುಳ, ಗುಳ್ಳದ ಬೇರು, ಚಂಗಲಕೋಷ್ಠ, ಚಾತುರ್ಜಾತಕಗಳು, ಚಿತ್ರಮೂಲ, ಜಟಾಮಾಂಸಿ, ಜಾಯಿಕಾಯಿ, ಜಾಪತ್ರೆ, ಜೀರಿಗೆ, ಜ್ಯೋತಿಷ್ಮತಿ (ಭವಂಗ ಬೀಜ—ಮಲ. ಚರಿಪುನ್ನರಿ), ತಾಳೀಸಪತ್ರೆ, ತ್ರಿಫಲೆ, ದಶಮೂಲಗಳು, ದೇವದಾರು, ದೊಡ್ಡಿ ಹುಳಿ, ದ್ರಾಕ್ಷೆ, ಧನ್ವಂಗ (ತಡಸಲುಮರ), ನೀರುಳ್ಳಿ, ನೀಲೀಗಿಡ, ನೆಗ್ಗಿಲಮುಳ್ಳು, ನೆಲನೆಲ್ಲಿ, ನೆಲಮುಚ್ಚಳ (ಗೋಜಿಹ್ವಾ), ಪುರುಷರತ್ನ, ಪುಲ್ಲಂಪುರುಚೆ (ಪುಳಿಯಾರಲ), ಬಜೆ, ಬಳ್ಳಿತುರಚಿ, ಬಿದಿರುಪ್ಪು, ಬಾಕುಚೀ (ಬಾವುಂಚಿ, ಮಲ. ಕಾಕೋರ್ಲರಿ), ಬಾಗೆಮರ, ಬೆಳ್ಳುಳ್ಳಿ, ಮಣಿಶಿಲೆ, ಮದ್ಯ, ಮುತ್ತುಗ, ಮುರಾ (ಅಂಗಾರಕನ ಗಿಡ?), ಮೂಲಂಗಿ, ಮೂವೆಲೆ, ಮೇಷಶೃಂಗಿ, ಮೋಡಿ, ಯವಕ್ಷಾರ, ಲವಂಗ, ಶಮೀ (ಬನ್ನಿ), ಶರಪುಂಖ (ಕಾಡುನೀಲಿ), ಶಾಂತಿ(ತಾರೆ) ಕಾಯಿ, ಶಾಖೋಟ (ಮಿಟ್ಲೆಮರ), ಶುಂಠಿ, ಸಕ್ಕರೆ, ಸಣ್ಣ ಏಲಕ್ಕಿ, ಸಣ್ಣ ಕಚೋರ (ಗಂಧಪಲಾಸಿ), ಸಬ್ಬಸಿಗೆ, ಸರಳ ದೇವದಾರ, ಸಾಸಿವೆ, ಸಿಹಿಮಾದಲ, ಸುರಸುರಿಕೆ (ಏಲವಾಲುಕಂ), ಸೂರ್ಯಕಾಂತಿ, ಹತ್ತಿಎಲೆ, ಹರಳ ಬೇರು, ಹಾಲು, ಹಾಲುಬಳ್ಳಿ (ಸುಗಂಧಿ), ಹಾವುಮೆಕ್ಕೆ, ಹಿಂಗು, ಹಿಪ್ಪಲಿ, ಹುರುಳಿ ಮತ್ತು ಹುಳಿಮಾದಳ.

ಪಥ್ಯವರ್ಗ

86. ಶಾಲ್ಯನ್ನ, 60 ದಿನಕ್ಕೆ ಬೆಳೆದ ಅಕ್ಕಿಯ ಅನ್ನ, ಗೋದಿ, ಶಾಮಕ್ಕಿ, ಯವೆಗೋದಿ, ಉದ್ದು-ಹೆಸರು-ಹುರುಳಿಗಳ ಸಾರು, ಆನೂಪ ಮತ್ತು ಜಾಂಗಲ ವರ್ಗಗಳಿಗೆ ಸೇರಿದ ವಿವಿಧವಾದ ಮಾಂಸಗಳು, ಕಳ್ಳು, ಹಳೇ ತುಪ್ಪ, ಆಡಿನ ಹಾಲು, ಆಡಿನ ತುಪ್ಪ, ಚಕ್ಕೋತುಸೊಪ್ಪು, ಕಾಗೆಹಣ್ಣಿನ ಗಿಡದ (ಗಣಿಕೆ) ಸೊಪ್ಪು, ಗುಳ್ಳದಕಾಯಿ, ಪಡುವಲಕಾಯಿ, ಎಳೇ ಮೂಲಂಗಿ, ಕಿರಿಗುಳ್ಳ, ಎಳೇ ಬಾಳೆಕಾಯಿ, ಎಲೆಹುರಿಸೊಪ್ಪು, ಜೀವಂತೀ, ದ್ರಾಕ್ಷೆ,

ಬೆಳೆದ ಬೂದಿಕುಂಬಳಕಾಯಿ, ತೊಂಡೆ, ಮೂದಳ, ತಾವರೆ, ಆಡುಸೋಗೆ, ಸಣ್ಣ ಏಲಕ್ಕಿ, ಬೆಳ್ಳುಳ್ಳಿ, ಒಗರು-ಕಾರ-ಕಹಿವಸ್ತುಗಳು, ಕಿರುಕಸಾಲೆ, ಕ್ಯೊಹರಿವೆ (ಅಥವಾ ಮುಳ್ಳು ಹರಿವೆ), ತ್ರಿಕಟು, ಬಿಸಿನೀರು, ಜೇನು, ಅರಳು, ಹಗಲು ನಿದ್ರೆ, ಲಘುವಾದ ಆಹಾರ, ಸ್ವೇದ, ವಿರೇಚನ, ವಮನ, ಧೂಮಪಾನ, ಬರಗುಧಾನ್ಯ (ಹಾರಕ).

ಷರಾ ಇವು ಎಲ್ಲವೂ ಎಲ್ಲಾ ಜಾತಿಯ ಕೆಮ್ಮುಗಳಿಗೂ ಪಥ್ಯವಲ್ಲ ಎಂಬದು ಹಿಂದೆ ಚಿಕಿತ್ಸೆಯಲ್ಲಿ ಕಾಣಿಸಿದ ಪಥ್ಯದ ವಿವರಣದಿಂದ ಸ್ಪಷ್ಟವಾಗುವದು.

ಅಪಥ್ಯವರ್ಗ

87. ವಸ್ತಿ, ನಸ್ಯ, ರಕ್ತಮೋಕ್ಷಣ, ವ್ಯಾಯಾಮ, ಹಲ್ಲು ಉಜ್ಜುವದು, ಬಿಸಿಲು, ಕೆಟ್ಟ ಗಾಳಿ, ದೂಳು, ದಾರಿ ನಡಿಕೆ, ವಿಷ್ಟಂಭಿಯಾದ ಪದಾರ್ಥಗಳು, ವಿದಾಹಿ ಪದಾರ್ಥಗಳು, ರೂಕ್ಷ ಪದಾರ್ಥಗಳು, (ಮಲ ಮೂತ್ರಾದಿ) ವೇಗಗಳ ತಡೆ, ದೋಸೆ, ಮೀನು, ಗಡ್ಡೆ, ಸಾಸಿವೆ, ಬಸಳೆ (ಬಚ್ಚಲು) ಸೊಪ್ಪು, ಸೋರೆಕಾಯಿ, ಬದನೆ, ಎಣ್ಣೆ, ಹುಳಿ, ತಣ್ಣೀರು, ಎಮ್ಮೆಯ ಹಾಲು-ಮೊಸರು-ತುಪ್ಪ ಮತ್ತು ಮಜ್ಜಿಗೆ, ದುಷ್ಟವಾದ, ವಿರುದ್ಧವಾದ, ಗುರುವಾದ ಮತ್ತು ಶೀತವಾದ ಅನ್ನಪಾನಗಳು.

ಷರಾ ಇದು ಸಾಮಾನ್ಯವಿಧಿ, ವಿಶೇಷಗಳನ್ನು ಹಿಂದೆ ಚಿಕಿತ್ಸೆಯ ಭಾಗವಾಗಿ ಸಂದರ್ಭಾನುಸಾರ ಹೇಳಿದೆ

ಪ್ರಕರಣಾಂತ ಟಿಪ್ಪಣೀ

88. ಕಾಸದಲ್ಲಿ ದೀರ್ಘವಾದ ಉಚ್ಛ್ವಾಸದ ಮೂಲಕ ಅಧಿಕವಾಗಿ ಸೇದಿಕೊಂಡ ಗಾಳಿಯು ಒಡನೆ ಹೊರಮುಖವಾಗಿ ರಭಸದಿಂದ ಹೊರಟು, ಶ್ವಾಸನಾಳದ ಬಾಗಿಲಿನಂತಿರುವ ಮುಚ್ಚಿಕೊಂಡ ಕಿರುನಾಲಿಗೆಯ ಮೇಲೆ ಬಿದ್ದು, ಅದನ್ನು ಚಾಚಿ, ತನ್ನ ಮಾರ್ಗದಲ್ಲ ತಡೆಯಾಗಿದ್ದ ಅನ್ಯವಸ್ತು ಅಥವಾ ಕಫವನ್ನು ಸಾಧ್ಯವಿದ್ದಲ್ಲಿ ಹಿಡಕೊಂಡು, ಶಬ್ದದೊಡನೆ ಬಾಯಿಯಿಂದ ಹೊರಗೆ ಬರುತ್ತದೆ ಆಗ್ಗೆ ಕಸ ಕಸ ಶಬ್ದವಾಗುವ ಲಕ್ಷಣದ ಮೇಲೆ ಈ ವಿಕಾರಕ್ಕೆ ಕಾಸ ಎಂಬ ಹೆಸರು ಬಂದಿದೆ. ಕಾಸದಲ್ಲಿ ಉಂಟಾಗುವ ಪೀಡೆಗಳು ಚರಕನ ಕಾಸಲಕ್ಷಣದಲ್ಲ ವರ್ಣಿಸಲ್ಪಟ್ಟಿವೆ.

ಕಾಸವು ಬೇರೆ ರೋಗಗಳ ಲಕ್ಷಣಗಳೊಳಗೊಂದಲ್ಲದೆ ಪ್ರತ್ಯೇಕವಾದೊಂದು ರೋಗವಲ್ಲ ಎಂಬದು ಪಾಶ್ಚಾತ್ಯ ವೈದ್ಯರ ಮತ ಎಂತ ಹಿಂದೆ ಹೇಳಿದೆಯಷ್ಟೆ. ಆಯುರ್ವೇದದಲ್ಲಿಯೂ, ಕಫಜ್ವರ, ವಾತಗ್ರಹಣೀ, ವಾತಿಕಅರ್ಶಸ್ಸು, ಶ್ಲೈಷ್ಮಿಕಅರ್ಶಸ್ಸು, ಕಫಜಶೋಷ, ಕ್ಷತ, ತಮಕಶ್ವಾಸ, ವಾತಿಕಛರ್ದಿ, ಆಮಾಶಯದ ವಾತ, ಶ್ಲೈಷ್ಮಿಕಶೂಲೆ ಮುಂತಾದ ಅನೇಕ ವ್ಯಾಧಿಗಳ ಲಕ್ಷಣಗಳೊಳಗೊಂದಾಗಿಯೂ, ಕುಂಭಕಾಮಿಲೆ, ರಕ್ತಪಿತ್ತ, ತೃಷ್ಣಾ, ಪಾನಹತ, ಉದಾವರ್ತ ಮುಂತಾದ ಬಹು ವ್ಯಾಧಿಗಳಲ್ಲಿ ಒಂದು ಉಪಸರ್ಗವ್ಯಾಧಿಯಾಗಿಯೂ ಕಾಸವು ಉಕ್ತವಾಗಿದೆ. ಶ್ವಾಸನಾಳವು ಎದೆಯಲ್ಲಿ ಇತ್ತಟ್ಟಿರುವ ಶ್ವಾಸಕೋಶಗಳಿಗೆ ಸೇರುವದಕ್ಕಾಗಿ ಪ್ರಥಮತಃ ಕವಲೊಡೆಯುವ ಸ್ಥಾನ (ಶ್ವಾಸಕೋಶದ ಮೂಲ)ದಿಂದ ಮುಂದಿನ ಭಾಗವಾದ ಶ್ವಾಸನಾಳದ ಕವಲುಗಳು (Bronchi ಬ್ರೊಂಕಾಯಿ), ಎಂದರೆ ಕಫಾಶಯ, ಕುತ್ತಿಗೆಯ ಊರ್ಧ್ವಭಾಗದಲ್ಲಿರುವ ಶಬ್ದವಹ ಸ್ರೋತಸ್ಸುಗಳ ಆಶ್ರಯಸ್ಥಾನವಾದ ಶ್ವಾಸನಾಳದ ಆದ್ಯಭಾಗ (Larynx ಲಾರಿಂಕ್ಸ್), ಇವೆರಡಕ್ಕೂ ಮಧ್ಯೇ ಇರುವ ಮೃದ್ವಸ್ಥಿಗಳ ಪ್ರಾಕಾರವುಳ್ಳ ಕೆಳಕುತ್ತಿಗೆ (Trachea ಟ್ರೇಕಿಯಾ), ಹೀಗೆ ಶ್ವಾಸನಾಳದಲ್ಲಿ

ಮೂರು ವಿಭಾಗಗಳನ್ನು ಮಾಡಿ, ಅವುಗಳ ಒಳಗಿನ ಕಫಾವರಣದಲ್ಲಿ ಉಂಟಾಗುವ ಶೋಫ ಯುಕ್ತವಾದ ಪಾಕದ ಹೇತುವಿನ ವ್ಯಾಧಿಗಳನ್ನು ಪಾಶ್ಚಾತ್ಯರಲ್ಲಿ (Bronchitis) ಬ್ರೊಂಕಾಯಿಟಿಸ್, (Laryngitis) ಲಾರಿಂಜಾಯಿಟಿಸ್, (Trachitis) ಟ್ರೇಕಿಯಾಯ್ಟಿಸ್, ಎಂಬ ಹೆಸರುಗಳಿಂದ ಬೇರೆ ಬೇರೆಯಾಗಿ ವರ್ಣಿಸಿ, ಚಿಕಿತ್ಸೆಯನ್ನು ಬರೆದಿರುತ್ತಾರೆ. ಅವುಗಳೊಳಗೆ ಲಾರಿಂಜಾಯಿಟಿಸ್ ಮತ್ತು ಟ್ರೇಕಿಯಾಯ್ಟಿಸ್ ಎಂಬವು ಆಯುರ್ವೇದದ ಮುಖರೋಗ ಗಳಲ್ಲಿ ಒಂದಾದ ಗಲರೋಗದ ವಿಶೇಷಗಳು ಎಂತ ಕೆಲವರು ಸಾಧಿಸಬಹುದಾದರೂ, ಬ್ರೊಂಕಾಯಿಟಿಸ್ ಎಂಬ ವ್ಯಾಧಿಯು ಕಾಸಶ್ವಾಸಗಳಲ್ಲಿಯಲ್ಲದೆ ಪ್ರತ್ಯೇಕವಾಗಿ ವರ್ಣಿ ಸಲ್ಪಟ್ಟದ್ದು ಆಯುರ್ವೇದಿಕ ಗ್ರಂಥಗಳಲ್ಲಿ ಕಾಣುವದಿಲ್ಲ. ಈ ಕಾರಣದಿಂದಲೇ ನಾಗೇಂದ್ರ ನಾಥ ಸೇನಗುಪ್ತರು ಆಂಗ್ಲಭಾಷೆಯಲ್ಲಿ ರಚಿಸಿರುವ ಆಯುರ್ವೇದಿಕ ಔಷಧದ ಕ್ರಮ ಎಂಬ ಪುಸ್ತಕದಲ್ಲಿ ಕಾಸವು 'ಬ್ರೊಂಕಾಯಿಟಿಸ್' ಎಂತ ನಾಮಾಂಕಿತವಾದ್ದಾಗಿರಬೇಕು. ಆದರೆ ಸ್ವರಘ್ನವೇ ಮೊದಲಾದ ಗಲರೋಗಗಳಲ್ಲಿ ಕೆಮ್ಮಿಸುವದು ನಿತ್ಯ ಲಕ್ಷಣವಲ್ಲದರಿಂದಲೂ, ಕಾಸದ ಲಕ್ಷಣಗಳೊಳಗೆ ಕಂಠದಲ್ಲಿಯಾಗಲಿ ಎದೆಯಲ್ಲಿಯಾಗಲಿ ಹಿಡಕೊಳ್ಳುವದು (ತಡೆ) ಮತ್ತು ಅದರ ಪೂರ್ವರೂಪದಲ್ಲಿ ಗಲತಾಲು ಲೇಪ ಹೇಳಲ್ಪಟ್ಟಿರುವದಲ್ಲದೆ, ಕ್ಷತಜ-ಕ್ಷಯಜ ಕೆಮ್ಮುಗಳು ಸಹ ಕಾಸದ ವಿಭಾಗಗಳಾಗಿ ಸೇರಿಸಲ್ಪಟ್ಟಿರುವದರಿಂದಲೂ, ಶ್ವಾಸದ ಹೇತು ಗಳೇ ಕಾಸಕ್ಕೂ ಹೇತುಗಳೆಂತ ಬೋಧಿಸಿರುವದರಿಂದಲೂ, ವಾತಿಕ ಕಾಸದಲ್ಲಿ ಹೃದಯ, ಪಕ್ಕ ಗಳು. ಎದೆ, ತಲೆ, ಈ ಸ್ಥಾನಗಳಲ್ಲಿ ಶೂಲೆ ಮತ್ತು ಸ್ವರಭೇದ ಉಂಟಾಗುತ್ತವೆಂತ ವರ್ಣಿಸಲ್ಪ ಟ್ಟಿರುವದರಿಂದಲೂ, ಶ್ವಾಸನಾಳದ ಯಾವ ಭಾಗದಲ್ಲಿ ತಡೆಯುಂಟಾದರೂ ಕೆಮ್ಮು ಸಂಭವಿ ಸುತ್ತದೆ ಮತ್ತು ಅಂಥಾ ತಡೆಯುಂಟಾಗದೆ ಕಾಸದ ಸಂಭವವಿಲ್ಲ ಎಂಬದೇ ಆಯುರ್ವೇದದ ಮತವೆಂತ ಸ್ಪಷ್ಟವಾಗುತ್ತದೆ. ಆದರೆ ಶ್ವಾಸನಾಳದ ಯಾವ ಭಾಗದಲ್ಲಿಯಾಗಲಿ ಬಾವು, ಗಾಯ ಅಥವಾ ಹುಣ್ಣು ಉಂಟಾಗಿದೆಯೋ ಎಂಬದನ್ನು ಪರೀಕ್ಷಿಸಿ ಮುಂದಾಗಿ ನಿರ್ಧರಿಸಿ ಕೊಳ್ಳುವದು ಚಿಕಿತ್ಸಾಸಾಫಲ್ಯಕ್ಕೆ ಮುಖ್ಯವಾದದ್ದೆಂಬದರಲ್ಲಿ ಸಂದೇಹವಿಲ್ಲ. ಯಾಕೆಂದರೆ, ಅಂತಹ ಬಾವು, ಗಾಯ, ಅಥವಾ ಹುಣ್ಣು ಉಂಟಾಗಿರುವಲ್ಲಿ ವಾತಜ ಕೆಮ್ಮಿಗೆ ವಿಧಿಸಲ್ಪಟ್ಟ ಹಾಗಿನ ತೀಕ್ಷ್ಣವಾದ ಔಷಧಗಳನ್ನು ಉಪಯೋಗಿಸದೆ, ಪಿತ್ತಜ ಕಾಸಕ್ಕೆ ಅಥವಾ ಪಿತ್ತಾನು ಬಂಧವುಳ್ಳ ಕಫಜ ಕೆಮ್ಮಿಗೆ ಉಕ್ತವಾದ (ಅಧ್ಯಾಯದ 25ನೇ, 45ನೇ ಸಂಖ್ಯೆಗಳನ್ನು ನೋಡಿ) ಉಪಚಾರಕ್ರಮಗಳನ್ನು ಯಥಾಸ್ಥಿತಿ ನಡಿಸತಕ್ಕದ್ದು.

ಕಾಸದ ವೇಗವು ಹತ್ತನೇ ಶಿರೋನರದ ಮತ್ತು ಅದರ ಕವಲುಗಳ (ಉಪೋದ್ಘಾತದ 3ನೇ ಪರಿಶಿಷ್ಟದ ಸಂ. 11 ನೋಡಿ) ಪರಿಮುಖವಾಗಿ ಶಬ್ದವಹ ಕಂಠನಾಳದಿಂದ, ಕಫಾಶಯ ದಿಂದ, ಶ್ವಾಸಕೋಶಗಳಿಂದ, ಅವುಗಳ ಹೊದಿಕೆಯಿಂದ, ಅಥವಾ ಹೊರಕಿವಿಗಳಿಗೆ ಹೋಗುವ ಆ ನರದ ಕವಲುಗಳಿಂದ, ಹೊರಟು ಹೊರಗೆ ಸಂಚರಿಸುತ್ತದೆಂತ ಒಬ್ಬರು ಪಾಶ್ಚಾತ್ಯ ಡಾಕ್ಟ ರರು ಬರೆದಿರುತ್ತಾರೆ. ಕೆಮ್ಮಿನ ಹಾಗಿನ ವೇಗವು ಉಂಟಾಗಿ, ಅದು ಶ್ವಾಸನಾಳವನ್ನು ದಾಟಿದ ಮೇಲೆ ಬಾಯಿಯಿಂದ ಹೊರಗೆ ಹೊರಡುವದಕ್ಕೆ ಬದಲಾಗಿ, ಬಾಯಿಯ ಹಿಂಭಾಗವು ಮುಚ್ಚಿ ಹೋಗಿ ಮೂಗಿನಿಂದ ಹೊರಗೆ ಹೋಗುವ ವಿಕಾರಕ್ಕೆ ಸೀನು (ಕ್ಷವ) ಎನ್ನುವದು. ಆ ವೇಗವು 5ನೇ ಶಿರೋನರದ ಪರಿಮುಖವಾಗಿ ಸಂಚರಿಸುವದಾಗಿರುತ್ತದೆ. ಬಿಕ್ಕಟ್ಟು (ಹಿಕ್ಕಾ) ಎಂಬದರಲ್ಲಿ ವೇಗವು ಆಮಾಶಯುದಿಂದ ಹೊರಟು ಅದೇ 10ನೇ ಶಿರೋನರದ ಪರಿ

ಮುಖವಾಗಿ ಮೇಲಕ್ಕೆ ಸಂಚರಿಸುತ್ತದೆ; ಅದರಲ್ಲಿಯೂ ಉಚ್ಛ್ವಾಸಾನಂತರದಲ್ಲಿ ಕಿರುನಾಲಿಗೆಯು ಮುಚ್ಚಿಕೊಳ್ಳುತ್ತದೆ; ಮತ್ತು ಅದು ವಪಾವಹನದ ಕ್ಷೋಭದಿಂದ ಆರಂಭಿಸುವಂಥಾದ್ದು.

ನಾಯಿಕೆಮ್ಮು, ಅಥವಾ ಕಪ್ಪೆಕೆಮ್ಮು (Whooping cough ಹೂಪಿಂಗ್ ಕಾಫ್) ಎಂಬದು ಕೆಮ್ಮಿನಂತೆ ಇತರ ರೋಗಗಳ ಲಕ್ಷಣವೆಂತ ಗಣಿಸಲ್ಪಡದೆ, ಒಂದು ಪ್ರತ್ಯೇಕ ರೋಗವಾಗಿ ಪಾಶ್ಚಾತ್ಯ ವೈದ್ಯದಲ್ಲಿ ವರ್ಣಿಸಲ್ಪಟ್ಟಿದೆ ಅದು ಪ್ರಾಯಶಃ ಒಂದು ವರ್ಷ ಪ್ರಾಯದ ನಂತರ ಎಂಟು ವರ್ಷ ಪ್ರಾಯದೊಳಗಿನ ಮಕ್ಕಳಲ್ಲಿ ಸಂಭವಿಸುತ್ತದೆ ಮತ್ತು ಪ್ರಾಯ ಪ್ರಬುದ್ಧರಲ್ಲಿ ಉಂಟಾಗುವದು ಬಹಳ ಅಪರೂಪ. ಒಮ್ಮೆ ಈ ರೋಗದಿಂದ ವಿಮೋಚನ ಹೊಂದಿದವರಲ್ಲಿ ಪುನಃ ಅದೇ ರೋಗ ಉಂಟಾಗುವದು ಇಲ್ಲ ಎನ್ನುವಷ್ಟು ಅಪರೂಪ. ಅದರಲ್ಲಿ ಕೆಮ್ಮಿಸಿ ಹೊರಗೆ ಬರುವ ಕಫದಲ್ಲಿ 'ಬೆಕ್ಟೀರಿಯಮ್ ಪರ್‌ಟುಸ್ಸಿಸ್ (Bacterium Pertussis) ಎಂಬ ಒಂದು ಜಾತಿ ಅಣುರೂಪವಾದ ಕ್ರಿಮಿ ಇರುತ್ತದೆಂತ ಪಾಶ್ಚಾತ್ಯರು ಕಂಡುಹಿಡಿದಿದ್ದಾರೆ. ಆ ಕಫದ ಸಂಪರ್ಕದಿಂದ ಈ ರೋಗವು ಮಗುವಿನಿಂದ ಮಗುವಿಗೆ ಅಂಟಿಕೊಳ್ಳುತ್ತದಂತೆ. ಹೆಚ್ಚುಕಡಿಮೆ ಒಂದೇ ಕಾಲದಲ್ಲಿ ಒಂದು ಊರಿನ ಬಹು ಮನೆಗಳಲ್ಲಿ, ಈ ರೋಗವು ಕಾಣಿಸಿಕೊಳ್ಳುವದನ್ನು ಆಲೋಚಿಸಿ, ಅದಕ್ಕೆ ಋತುವಿಶೇಷದ ಹೇತುವಿರಬಹುದೆಂತ ಅನೇಕರು ಹೇಳುತ್ತಾರೆ. ಗಂಡುಮಕ್ಕಳಿಗಿಂತ ಹೆಣ್ಣುಮಕ್ಕಳಿಗೆ ಈ ರೋಗ ತಗಲುವದು ಹೆಚ್ಚಂತೆ.

ಈ ರೋಗವು ನೆಗಡಿಯೊಂದಿಗೆ ಆರಂಭಿಸಿ, ನೆಗಡಿ ಲಕ್ಷಣಗಳೆಲ್ಲ ಅಡಗಿದ ಮೇಲೆ, ತನ್ನ ವಿಶೇಷ ಲಕ್ಷಣಗಳನ್ನು ತೋರಿಸುತ್ತದೆ. ಆಗ್ಗೆ ಮಗುವಿಗೆ ಒಂದು ಆವೇಶ ಉಂಟಾದ ಹಾಗೆ ಆಗಿ, ಸೆಳವು ಉಂಟಾಗಿ, ಕೆಮ್ಮುಗಳು 15-20ರ ವರೆಗೆ ಮೇಲೆ ಮೇಲೆ ತ್ವರೆಯಾಗಿ ವೇಗದಿಂದ, ಉಸುರೆಳೆಕೊಳ್ಳದೆ ಬಂದು, ಅನಂತರ ಒಂದು ದೀರ್ಘವಾದ ಉಚ್ಛ್ವಾಸ ಕಷ್ಟದಿಂದ ಉಂಟಾಗುತ್ತದೆ. ಆ ಉಚ್ಛ್ವಾಸ ಕಾಲದಲ್ಲಿ ಒಂದು ವಿಶೇಷತರದ ದೊಡ್ಡ ಶಬ್ದ ಕಂಠದಿಂದ ಹೊರಡುವ ದೆಸೆಯಿಂದ ಈ ರೋಗಕ್ಕೆ ಆಂಗ್ಲಭಾಷೆಯಲ್ಲಿ 'ಹೂಪಿಂಗ್‌ಕಾಫ್' (ಬೊಬ್ಬಿಡುವ ಕೆಮ್ಮು) ಎಂಬ ಹೆಸರು ಬಂದಿದೆ. ಆದರೆ ಆ ಶಬ್ದ ಪ್ರಧಾನ ಲಕ್ಷಣವಲ್ಲದಿರುವದು ಉಂಟು. ಹೀಗೆ ಸಾಲು ಕಟ್ಟಿ ಬರುವ ಕೆಮ್ಮಿನ ಎರಡು ಮೂರು ಅಥವಾ ಹೆಚ್ಚು ಆವರ್ತಿಗಳು ಒಂದೇ ಪೆಟ್ಟಿಗೆ ಉಂಟಾಗುವದುಂಟು. ಕೊನೆಗೆ ಸ್ವಚ್ಛವಾದ, ತೆಳ್ಳಗಾದ ಮತ್ತು ನೂಲಾಗಿ ಕಾಣುವಷ್ಟು ಅಂಟುಳ್ಳ ಕಫ ಹೊರಗೆ ಬಂದು, ಅಥವಾ ವಾಂತಿಯಾಗಿ, ಒಮ್ಮೆ ತೊಡಗಿದ ಪೀಡೆಯು ಶಾಂತವಾಗುತ್ತದೆ. ಇಂಥಾ ಆವೇಶವು ಕಠಿಣಸ್ಥಿತಿಯಲ್ಲಿ ಘಂಟೆಗೆ ಒಂದೆರಡು ಸರ್ತಿ ಪ್ರಕಾರ ಉಂಟಾಗುತ್ತದೆ. ಈ ಆವೇಶದ ಕಾಲದಲ್ಲಿ ಮಗುವಿನ ಮುಖವು ಕೆಂಪಾಗಿ ಸ್ವಲ್ಪ ಊದಿಕೊಳ್ಳುತ್ತದೆ; ಕಣ್ಣುಗಳು ಗಾಬರಿಪಟ್ಟ ಹಾಗೆ ಹೊರಗೆ ಬಂದು, ನೀರಿನಿಂದ ತುಂಬಿಕೊಳ್ಳುತ್ತವೆ; ಮತ್ತು ಉಸುರು ಕಟ್ಟಿಕೊಂಡು ನಿಂತ ಹಾಗೆ ಕಾಣುವದುಂಟು. ಆಯಾಸದಿಂದ ಮೈಯೆಲ್ಲ ಬೆವರಿ ತಣ್ಣಗಾಗುವದುಂಟು. ತನ್ನಂತೆ ಮಲ ಹೊರಡುವದುಂಟು. ಕೆಲ ಸರ್ತಿ ಮೂಗಿನಿಂದ, ಬಾಯಿಯಿಂದ, ದವಡೆಯೊಳಗಿನ ಹಲ್ಲುಗಳ ವಸಡುಗಳಿಂದ (ನಿಜ್ಜಿಗಳಿಂದ), ಕಣ್ಣಿನ ರೆಪ್ಪೆಗಳ ಸಂದುಗಳಿಂದ ಮುಂತಾಗಿ ರಕ್ತ ಬರುವದುಂಟು. ಪುನಃ ಆವೇಶ ತೊಡಗುವ ವರೆಗಿನ ಮಧ್ಯಕಾಲದಲ್ಲಿ ಸಾಧಾರಣವಾಗಿ ಅಶಕ್ತಿಯಲ್ಲದೆ ಬೇರೆ ರೋಗಲಕ್ಷಣ ಯಾವದೂ

ಕಾಣದೆ ಮಗುವು ಸೌಖ್ಯದಲ್ಲಿದ್ದಂತೆ ಆಡುತ್ತಿರುತ್ತದೆ. ಹೊಟ್ಟೆ ತುಂಬ ಉಂಡರೆ, ಅತ್ತರೆ, ಸಿಟ್ಟುಗೊಂಡರೆ, ಅಥವಾ ಆಯಾಸಪಟ್ಟರೆ, ಒಡನೆ ಆವೇಶ ಉಂಟಾಗುವದು ಹೆಚ್ಚು. ಅಶಕ್ತಿಯು ಕ್ರಮೇಣ ವೃದ್ಧಿಗೊಳ್ಳುತ್ತದೆ.

ರೋಗದ ಆದ್ಯ ಅವಸ್ಥೆಯ ನೆಗಡಿಯು ಎರಡು-ಮೂರು ಹಪ್ತೆ, ಪ್ರಧಾನ ಲಕ್ಷಣಗಳು ಮೂರು-ನಾಲ್ಕು ಹಪ್ತೆ, ಕಡೇ ಅವಸ್ಥೆಯಾದ ಸಾಧಾರಣ ತರದ ಕೆಮ್ಮು, ಅಶಕ್ತಿ ವಿಶೇಷವಿಲ್ಲದ ಸಂಗತಿಯಲ್ಲಿ, ಕೆಲವು ದಿನ ಮತ್ತು ಇತರ ಸಂಗತಿಯಲ್ಲಿ ಕೆಲವು ಹಪ್ತೆ ಕಾಲ, ಇರುವದು ಸಾಧಾರಣವಾಗಿರುತ್ತದೆ.

ಈ ನಾಯಿಕೆಮ್ಮು ಕೋರ ಮುಂತಾದ ಕೆಲವು ವ್ಯಾಧಿಗಳ ಅನುಬಂಧವಾಗಿ ಉಂಟಾಗುವದುಂಟು. ಈ ರೋಗದ ಅನುಬಂಧವಾಗಿ ಮಕ್ಕಳಚೇಷ್ಟೆ, ಶ್ವಾಸನಾಳದಲ್ಲಿ ರಕ್ತ ವಿಶೇಷವಾಗಿ ಸಂಗ್ರಹಿಸುವದು, ಕಫಾಶಯದ ಪಾಕ ಅಥವಾ ಶೋಫೆ, ಶ್ವಾಸಕೋಶದೊಳಗಿನ ಕೆಲ ಭಾಗಗಳು ನಿರ್ಜೀವ ಆಗುವದು, ಜ್ವರ, ಶ್ವಾಸ, ಮುಂತಾದ ಕೆಲವು ವ್ಯಾಧಿಗಳು ಸಂಭವಿಸುವದುಂಟು. ಆವೇಶರೂಪವಾದ ಕೆಮ್ಮುಗಳು ಬಿಟ್ಟಿರುವ ವಿರಾಮಕಾಲದ ಮಗುವಿನ ಅವಸ್ಥೆಯಿಂದ ಅಂಥಾ ಅನುಬಂಧ ರೋಗಗಳನ್ನು ಗೊತ್ತುಮಾಡುವದು ಸುಲಭವಾಗುತ್ತದೆ. ಬಹು ಚಿಕ್ಕ ಪ್ರಾಯದ ಮತ್ತು ಬಹಳ ಅಶಕ್ತವಾದ ಮಕ್ಕಳಿಗಲ್ಲದೆ ಇತರರಿಗೆ ಅನುಬಂಧ ರೋಗಗಳು ಸಂಭವಿಸಿರದ ವಿನಾ ನಾಯಿಕೆಮ್ಮು ಅನಿಷ್ಟಕರವಾಗುವದಿಲ್ಲ ಎನ್ನಬಹುದು.

ಆಯುರ್ವೇದದಲ್ಲಿ ಈ ನಾಯಿಕೆಮ್ಮಿನ ಸ್ಪಷ್ಟವಾದ ನಿರ್ದೇಶ ಕಾಣುವದಿಲ್ಲ. ನೆಗಡಿಯನ್ನು ಉಪೇಕ್ಷಿಸಿ, ಬೆಳೆಯಲು ಬಿಟ್ಟರೆ ದುಷ್ಟಪ್ರತಿಶ್ಯಾಯ ಉಂಟಾಗುತ್ತದೆಂತಲೂ, ಅದರಿಂದ ನಾಸಾ ರೋಗಗಳು ಸಂಭವಿಸುತ್ತವೆಂತಲೂ, ರಕ್ತಪ್ರತಿಶ್ಯಾಯ ಎಂಬದೊಂದು ರೋಗ ಉಂಟೆಂತಲೂ ಹೇಳಲ್ಪಟ್ಟಿರುತ್ತದಾದರೂ, ಅವುಗಳಲ್ಲಿ ಕೆಮ್ಮು ಪ್ರಧಾನ ಲಕ್ಷಣವಾಗಿ ಉಕ್ತವಾಗಿಲ್ಲ. ಹಾರೀತಸಂಹಿತಾ ಎಂಬ ಗ್ರಂಥದಲ್ಲಿ ವಾತಿಕ, ಪೈತ್ತಿಕ, ಶ್ಲೈಷ್ಮಿಕ, ಸನ್ನಿಪಾತಿಕ, ವಾತಪಿತ್ತಜ, ಕಫಪಿತ್ತಜ, ರಕ್ತಜ, ಕ್ಷಯಜ, ಎಂತ ಕೆಮ್ಮು ಅಷ್ಟ ವಿಧ ಎಂತಲೂ, ಬಾಲಕರ ಕೆಮ್ಮು ಮತ್ತು ಕ್ಷತಜಕೆಮ್ಮು ಸಹ ಬೇರೆ ಎಂತಲೂ ಹೇಳಲ್ಪಟ್ಟಿದೆ.

ಬಾಲಾನಾಂ ಜಾಯತೇ ಕಾಸೋ ಧಾತುವೈಕಲ್ಯಯೋಗತಃ ।
ಏತೇ ಕಾಸಾಃ ಸಮುದ್ದಿಷ್ಟಾ ದಶಭಿರ್ಭಿಷಗೋತ್ತಮೈಃ ॥ (ಹಾ. 199-200)

ಅಂದರೆ, ಮಕ್ಕಳಿಗೆ ಧಾತುವಿಕಾರ ಕೂಡಿಕೊಳ್ಳುವ ದೆಸೆಯಿಂದ ಕೆಮ್ಮು ಉಂಟಾಗುತ್ತದೆ; ಹೀಗೆ ಪಂಡಿತೋತ್ತಮರು ಹತ್ತು ವಿಧವಾಗಿ ಕೆಮ್ಮುಗಳನ್ನು ಉಪದೇಶಿಸಿರುತ್ತಾರೆ.

ಅಲ್ಲಿಯೂ ಮಕ್ಕಳ ಕೆಮ್ಮಿನ ವರ್ಣನ ಬೇರೆ ಕಾಣುವದಿಲ್ಲ. ಇದರಲ್ಲಿ ನಾಯಿಕೆಮ್ಮು ಸೇರಿದ್ದರೆ ಅದರ ವಿಶೇಷಲಕ್ಷಣಗಳು ನಿರ್ದಿಷ್ಟವಾಗದೆ ಇರುತ್ತಿರಲಿಲ್ಲ. ಆದ್ದರಿಂದ ಈ ಕೆಮ್ಮು ಪೂರ್ವದಲ್ಲಿ ಸಾಧಾರಣವಾಗಿ ಇದ್ದಿಲ್ಲ ಎಂತಲೇ ಊಹಿಸಬೇಕಾಗುತ್ತದೆ. "ಹದಿನೇಳನೇ ಶತಮಾನದ ಮಧ್ಯಕ್ಕೆ ಹಿಂದೆ ಯಾವ ವೈದ್ಯಗ್ರಂಥವಾದರೂ ಅದನ್ನು (ಕಪ್ಪೆಕೆಮ್ಮನ್ನು) ವರ್ಣಿಸದೆ ಇರುವದರಿಂದ, ಈ ರೋಗವು ವೈದ್ಯಶಾಸ್ತ್ರದ ಪಿತೃಗಳಿಗೆ ತಿಳಿದಿರಲಿಲ್ಲ, ಅಥವಾ ಆ ಕಾಲದನಂತರ ಆ ರೋಗದ ಪ್ರಧಾನಲಕ್ಷಣವಾದ 'ಹೂಪ್' ಎಂಬ ಶಬ್ದ ಅದರಲ್ಲಿ ಅಧಿಕವಾಗಿರಬೇಕು, ಎಂತ ನಾವು ನಿರ್ಣಯಿಸಬೇಕಾಗುತ್ತದೆ" ಎಂತ ಎಡ್ವರ್ಡ್‌ಸ್ಮಿತ್ ಎಂಬ ಡಾಕ್ಟರರು ಬರೆದಿರುತ್ತಾರೆ (Reynold's System of Medicine, Vol. I., p. 52).

ಹೊಸತಾದ ರೋಗಗಳಿಗೆ ಸಹ ತಕ್ಕ ಚಿಕಿತ್ಸೆಮಾಡುವದಕ್ಕೆ ಸಾಧನವಾಗುವ ಹಾಗೆ ತ್ರಿದೋಷನ್ಯಾಯವು ಆಯುರ್ವೇದದಲ್ಲಿ ವಿವರಿಸಲ್ಪಟ್ಟಿರುವದರಿಂದ, ಈ ರೋಗಕ್ಕೆ ಸಹ ಯುಕ್ತ ಚಿಕಿತ್ಸೆಮಾಡುವದು ಆಯುರ್ವೇದ ಪಂಡಿತರಿಗೆ ಕಷ್ಟವಲ್ಲ.

ಅಧ್ಯಾಯದ 45ನೇ ಸಂಖ್ಯೆಯಲ್ಲಿ ಉಪದೇಶಮಾಡಲ್ಪಟ್ಟ ದೋಷಗಳ ಸಂಸರ್ಗವಿರುವಲ್ಲಿ ಮಾಡತಕ್ಕ ಉಪಚಾರವಿಶೇಷಗಳಿಗೆ ಲಕ್ಷ್ಯ ಇಡುವದು ಮುಖ್ಯವಾದದ್ದು—ನಾಯಿಕೆಮ್ಮಿನ ಆರಂಭದ ಅವಸ್ಥೆಯಾದ ನೆಗಡಿಯಲ್ಲಿ ಪಿತ್ತಾನುಬಂಧವೇ ಹೆಚ್ಚಾಗಿದ್ದು, ವಾತಾನುಬಂಧ ಸೇರಿ, ಅದು ಸಂಕಷ್ಟಕರವಾದ ಎರಡನೇ ಅವಸ್ಥೆಯನ್ನು ಪಡೆಯುತ್ತದೆಂತ ಸಾಧಾರಣವಾಗಿ ಹೇಳಬಹುದು. ವಾತಾನುಬಂಧ ಬಲವಾದ ಹಾಗೆ ನರಗಳ ದುರ್ಬಲತೆಯು ವೃದ್ಧಿಯಾಗಿ ವಿಷಮವಾಗಬಹುದು. ಪಿತ್ತಾನುಬಂಧವಿರುವಲ್ಲಿ ಆಡುಸೋಗೆ ಎಲೆಯ ರಸ, ಸಂಬಾರಬಳ್ಳಿ (ದೊಡ್ಡಿಪತ್ರೆ-ಕರ್ಪೂರವಲ್ಲೀ) ರಸ, ಜೇನು, ಇವುಗಳನ್ನು ಯುಕ್ತಪ್ರಮಾಣದಲ್ಲಿ ಮಿಶ್ರಮಾಡಿ, ಅದರಲ್ಲಿ ಮಹಾಜ್ವರಾಂಕುಶವನ್ನು ಕೊಡುವದು, ಜ್ವರ ಬಲವಾಗಿದ್ದರೆ, ಜೇನಿನ ಬದಲಾಗಿ ಕಲ್ಲುಸಕ್ಕರೆ ಪುಡಿಯನ್ನು ಕೂಡಿಸುವದು, ಕಫ ಕಡಿದುಹೋಗದೆ ಕಷ್ಟಪಡುವಲ್ಲಿ ಹಿಪ್ಪಲಿ ಪುಡಿಯನ್ನು ಅಲ್ಪವಾಗಿ ಕೂಡಿಸಿಕೊಳ್ಳುವದು, ಸಹ ಹಿತವಾಗುತ್ತದೆ. ವಾತಾನುಬಂಧ ವಿಶೇಷ ವಾಗಿರುವಲ್ಲ, ಮೇಲೆ ಹೇಳಲ್ಪಟ್ಟ ರಸಗಳೊಂದಿಗೆ ಹಾಲನ್ನಾಗಲಿ, ನೀರುಳ್ಳಿರಸವನ್ನಾಗಲಿ, ಕೂಡಿಸಿ, ಅದರಲ್ಲಿ ಅತಿಸಾರಮೂಲಮಾತ್ರೆಯನ್ನು ಕೊಡುವದು ಸಫಲವಾಗುತ್ತದೆ. ಕ್ಷೀಣತೆ ಅಧಿಕವಾಗಿದ್ದರೆ, ಅಥವಾ ಕ್ಷಯದ ಲಕ್ಷಣ ಕಂಡರೆ, ಅತಿಸಾರ.ಮಾತ್ರೆಯೊಂದಿಗೆ, ಅಥವಾ ಅದರ ಬದಲಾಗಿ, ಕಸ್ತೂರ್ಯಾದಿ ಮಾತ್ರೆಯನ್ನು ಕೊಡುವದು ಒಳ್ಳೇದು. ಗಟ್ಟಿಪದಾರ್ಥಗಳಲ್ಲಿ ಯಾವದನ್ನಾದರೂ ಹೊಟ್ಟೆಗೆ ಕೊಡಕೂಡದು. ಬಳ್ಳಿತುರಚಿಯ ಬೇರನ್ನು ಕೂಡಿಸಿ ಕಾಯಿಸಲ್ಪಟ್ಟ ಹಾಲನ್ನು ಕಲ್ಲುಸಕ್ಕರೆ ಪುಡಿ ಕೂಡಿಸಿ ಕುಡಿಯ ಕೊಡುವದು ಪ್ರಶಸ್ತ. ಆ ಆಹಾರ ಸಾಲದ್ದಲ್ಲಿ ಯವೆಗೋದಿಗಂಜಿಯ ನೀರನ್ನು ಅದೇ ಹಾಲು ಕೂಡಿಸಿ ಕೊಡಬಹುದು. ಒಳಗೆ ಹುಣ್ಣು, ಅಥವಾ ಗಾಯ, ಅಥವಾ ಬಾವು ಇರುವಲ್ಲಿ, ಅದನ್ನು ಮತ್ತು ಉಬ್ಬಸವನ್ನು ಪರಿಹರಿಸುವದಕ್ಕೆ ಅತಿಸಾರ. ಮಾತ್ರೆ ಪ್ರಶಸ್ತ. ಆಗ್ಗೆ ಹಿಪ್ಪಲಿಯನ್ನು ಉಪಯೋಗಿಸಬಾರದು; ಕಫವನ್ನು ಕಡಿದು ತೆಗೆಯುವದಕ್ಕೆ ಬೇಕಾದಲ್ಲಿ, ಹಿಪ್ಪಲಿ ಬದಲಾಗಿ ನೀರುಳ್ಳಿರಸವನ್ನು ಅಲ್ಪ ಪ್ರಮಾಣದಲ್ಲಿ ಉಪಯೋಗಿಸಬಹುದು. ಅಂಥಾ ಅನುಬಂಧರೋಗ ಗಳಿಲ್ಲದೆ, ವಾತ ಪ್ರಧಾನವಾಗಿರುವಲ್ಲಿ ಕಂಟಕಾರೀಘೃತವನ್ನಾಗಲಿ, ಕಂಟಕಾರ್ಯಾದಿ ಲೇಹವನ್ನಾಗಲಿ ಕೊಡುವದರಿಂದ ಪ್ರಯೋಜನ ಸಿಕ್ಕಬಹುದು.

---

# ಅಧ್ಯಾಯ IX.

## ಸ್ವರಭೇದ (ಸ್ವರಸಾದ, ಸ್ವರೋಪಘಾತ, ಸ್ವರಭಂಗ, ಸ್ವರಾಮಯ)

## Hoarseness; Suppression, loss, or disease of the voice.

1. ಅತ್ಯುಚ್ಚಭಾಷಣವಿಷಾಧ್ಯಯನಾಭಿಘಾತ-
ಶೀತಾದಿಭಿಃ ಪ್ರಕುಪಿತಾಃ ಪವನಾದಯಸ್ತು ।
ನಿದಾನ ಮತ್ತು ವಿಧ
ತೇ ಶಬ್ದವಾಹಿಧಮನೀಷು ಗತಾಃ ಪ್ರತಿಷ್ಠಾಂ
ಹನ್ಯುಃ ಸ್ವರಂ ಭವತಿ ಚಾಪಿ ಹಿ ಷಡ್ವಿಧಃ ಸಃ ॥ (ಸು. 863)
ವಾತಾದಿಭಿಃ ಪೃಥಕ್ಸರ್ವೈರ್ಮೇದಸಾ ಚ ಕ್ಷಯೇಣ ಚ ॥ (ಮಾ ನಿ. 101)

ಅತಿ ಗಟ್ಟಿಯಾಗಿ ಮಾತಾಡುವದು, ವಿಷ, ಅಧ್ಯಯನ (ವೇದಾದಿಗಳನ್ನು ಗಟ್ಟಿಯಾಗಿ ಪಾಠ ಮಾಡುವದು), ಪೆಟ್ಟು, ಶೀತ, ಮುಂತಾದವುಗಳಿಂದ ವಾತಾದಿ ದೋಷಗಳು ಪ್ರಕೋಪ ಗೊಂಡು, ಶಬ್ದವಾಹಿ ಧಮನಿಗಳನ್ನು ಸೇರಿ ನಿಂತು, ಸ್ವರವನ್ನು ನಾಶಮಾಡುವವು. ಅದು (ಸ್ವರಭೇದ ರೋಗವು) ಆರು ವಿಧ: ವಾತಾದಿ ದೋಷಗಳಿಂದ ಪ್ರತ್ಯೇಕವಾಗಿ ಮೂರು, ಒಟ್ಟಾಗಿ ಒಂದು, ಮೇದಸ್ಸಿನಿಂದ ಒಂದು, ಕ್ಷಯದಿಂದ ಒಂದು ಸಹ.

ಷರಾ: ಶಬ್ದವಾಹಿ ಧಮನಿಗಳು ಎರಡು (1ನೇ ಭಾಗದ II-71 ನೋಡಿ)

2. ವಾತೇನ ಕೃಷ್ಣನಯನಾನನಮೂತ್ರವರ್ಚಾ
ಭಿನ್ನಂ ಶನೈರ್ವದತಿ ಗರ್ದಭವತ್ಸ್ವರಂ ಚ ।
ಷಡ್ವಿಧ ಸ್ವರ ಭೇದದ ಲಕ್ಷಣ ಗಳು
ಪಿತ್ತೇನ ಪೀತವದನಾಕ್ಷಿಪುರೀಷಮೂತ್ರೋ
ಭ್ರೂಯಾದ್ಗಲೇನ ಚ ವಿದಾಹಸಮನ್ವಿತೇನ ॥
ಕೃಚ್ಛ್ರಾತ್ಕಫೇನ ಸತತಂ ಕಫರುದ್ಧಕಣ್ಠೋ
ಮನ್ದಂ ಶನೈರ್ವದತಿ ವಾಪಿ ದಿವಾ ವಿಶೇಷಾತ್ ।
ಸರ್ವಾತ್ಮಕೇ ಭವತಿ ಸರ್ವವಿಕಾರಸಮ್ಪ-
ದವ್ಯಕ್ತತಾ ಚ ವಚಸಸ್ತಮಸಾಧ್ಯಮಾಹುಃ ॥
ಧೂಪ್ಯೇತ ವಾಕ್ ಕ್ಷಯಕೃತೇ ಕ್ಷಯಮಾಪ್ನುಯಾಚ್ಚ
ವಾಗೇಷ ವಾಪಿ ಹತವಾಕ್ಪರಿವರ್ಜನೀಯಃ ।
ಅನ್ತರ್ಗತಸ್ವರಮಲಕ್ಷ್ಯಪದಂ ಚಿರೇಣ
ಮೇದೋನ್ವಯಾದ್ವದತಿ ದಿಗ್ಧಗಲೌಷ್ಠತಾಲುಃ ॥ (ಸು. 863-4)

ವಾತಜ(ಸ್ವರಭೇದ)ದಲ್ಲಿ ಕಣ್ಣು, ಮುಖ, ಮೂತ್ರ ಮತ್ತು ಮಲ ಕಪ್ಪಾಗಿ, ರೋಗಿಯು ಒಡಕುಳ್ಳ (ಅಥವಾ ಸ್ಥಿರವಲ್ಲದ) ಮತ್ತು ಕತ್ತೆಯ ಹಾಗಿನ ಸ್ವರದಿಂದ (ಕ್ರೂರವಾಗಿ) ಮೆಲ್ಲಗಾಗಿ ಮಾತಾಡುತ್ತಾನೆ. ಪಿತ್ತಜದಲ್ಲಿ ಮುಖ, ಕಣ್ಣು, ಮಲ, ಮೂತ್ರ ಸಹ ಅರಸಿನವಾಗಿ, ರೋಗಿಯು ಗಂಟಲೊಳಗಿನಿಂದ ಮಾತಾಡುತ್ತಾನೆ; ಮತ್ತು ಅವನಿಗೆ ಗಂಟಲಲ್ಲಿ ಉರಿ ಇರುತ್ತದೆ. ಕಫಜದಲ್ಲಿ ಕಫವು ಯಾವಾಗಲೂ ರೋಗಿಯ ಕಂಠವನ್ನು ಮುಚ್ಚಿಕೊಂಡು ಇರುವ

ದರಿಂದ, ಅವನು ಅಲ್ಪವಾಗಿ ಅಥವಾ ಮೆಲ್ಲಗಾಗಿ, ವಿಶೇಷವಾಗಿ ಹಗಲಿನಲ್ಲಿ, ಕಷ್ಟದಿಂದ ಮಾತಾಡುತ್ತಾನೆ. (ರಾತ್ರಿಯಲ್ಲಿ ಮಾತಾಡುವದಕ್ಕೆ ಕಷ್ಟ ಹೆಚ್ಚಾಗುತ್ತದೆಂತ ತಾತ್ಪರ್ಯ.) ತ್ರಿದೋಷಜದಲ್ಲಿ ಮೇಲಿನ ಎಲ್ಲಾ ವಿಕಾರಲಕ್ಷಣಗಳು ಕೂಡಿರುವದಲ್ಲದೆ, ಮಾತು ಸ್ಪಷ್ಟವಲ್ಲದ್ದಾಗುತ್ತದೆ; ಅದು ಅಸಾಧ್ಯ ಎಂತ ಹೇಳುತ್ತಾರೆ. ಕ್ಷಯದಿಂದುಂಟಾದ್ದರಲ್ಲ ಮಾತು ಹೊಗೆಯ ಹಾಗೆ (ಬಿಸಿಯಾಗಿ) ಹೊರಡುತ್ತದೆ ಮತ್ತು ಕ್ಷಯವನ್ನು ಹೊಂದುತ್ತದೆ; ಅಂಥಾ ಮಾತು ಹೊರಡದ ಸ್ವರಭೇದವು ಚಿಕಿತ್ಸೆ ಮಾಡದೆ ಬಿಡಬೇಕಾದಂಥಾದ್ದು. ಮೇದೋಜದಲ್ಲಿ ರೋಗಿಯ ಗಂಟಲು, ತುಟಿ ಮತ್ತು ತಾಲುಗಳಲ್ಲಿ ಲೇಪ (ಅಗ್ರ)ವಿದ್ದು, ಅವನು ಒಳಗೆಳೆದು ಹೋದ ಸ್ವರದಿಂದ, ಗೊತ್ತಾಗದ ಶಬ್ದಗಳುಳ್ಳ ಮಾತನ್ನು ಸಾವಕಾಶದಿಂದ ಆಡುತ್ತಾನೆ.

ಪಠಾ ಸುಶ್ರುತನ ಈ ವಿಭಾಗವನ್ನೇ ವಾಗ್ಭಟಾದಿ ಮುಂದಿನ ಗ್ರಂಥಕರ್ತರು ಅನುಸರಿಸಿದ್ದಾರೆ ಚರಕನ ಸ್ವರಭೇದ ವಿಭಾಗವು ಹಿಂದೆ Vನೇ ಅಧ್ಯಾಯದ 9ನೆಯ ಸಂಖ್ಯೆಯಲ್ಲಿ ವಿವರಿಸಲ್ಪಟ್ಟದೆ ಈ ಮತಭೇದದ ವಿಮರ್ಶೆಯು ಈ ಪ್ರಕರಣಾಂತ್ಯದ ಟಿಪ್ಪಣಿಯಲ್ಲಿ ಕಾಣುವದು.

1ನೇ ಶ್ಲೋಕದ ಕೊನೆಯಲ್ಲಿ 'ಸ್ವರಂ' ಎಂಬದಕ್ಕೆ 'ಖರಂ', 3ನೇ ಶ್ಲೋಕದಲ್ಲಿ 'ಮನ್ದಂ' ಎಂಬದಕ್ಕೆ 'ಸ್ವಲ್ಪಂ', 5ನೇ ಶ್ಲೋಕದಲ್ಲಿ 'ವಾಪಿ' ಎಂಬದಕ್ಕೆ 'ಚಾಪಿ, ಇತ್ಯಾದಿ ಕೆಲವು ಪಾಠಭೇದಗಳು ಕಾಣುತ್ತವೆ ತಾತ್ಪರ್ಯದಲ್ಲಿ ವಿಶೇಷ ಭೇದವಿಲ್ಲ

3. ಕ್ಷೀಣಸ್ಯ ವೃದ್ಧಸ್ಯ ಕೃಶಸ್ಯ ಚಾಪಿ ಚಿರೋತ್ಥಿತೋ ಯಶ್ಚ ಸಹೋಪಜಾತಃ ।
ಮೇದಸ್ವಿನಃ ಸರ್ವಸಮುದ್ಭವಶ್ಚ ಸ್ವರಾಮಯೋ ಯೋ ನ ಸ ಸಿದ್ಧಿಮೇತಿ ॥ (ಸು. 864)

ಅಸಾಧ್ಯವರ್ಗ

ಬಲಹೀನವಾದ ದೇಹವುಳ್ಳವನಿಗೆ, ಮುದುಕನಿಗೆ ಮತ್ತು ಒಣಗಿದ ದೇಹದವನಿಗೆ ದೀರ್ಘಕಾಲದಿಂದ ಇರುವ ಸ್ವರಜಾಡ್ಯವು, ಹುಟ್ಟುವಾಗಲೇ ಉಂಟಾದದ್ದು, ತ್ರಿದೋಷಗಳಿಂದ ಹುಟ್ಟಿದ್ದು, ಮತ್ತು ಮೇದಸ್ಸು ಅಧಿಕವಾದವನದು, ಸಹ ಸಾಧ್ಯವಾಗುವದಿಲ್ಲ.

4. ಸ್ನಿಗ್ಧಾನ್ ಸ್ವರಾತುರನರಾನಪಕೃಷ್ಟದೋಷಾನ್
ಸಂಯೋಜಯೇದ್ವಮನರೇಚನವಸ್ತಿಭಿಶ್ಚ ।
ನಸ್ಯಾವಪೀಡಮುಖಧಾವನಧೂಮಲೇಹ್ಯೈಃ
ಸಮ್ಪಾದಯೇಚ್ಚ ವಿವಿಧೈಃ ಕಬಲಗ್ರಹೈಶ್ಚ ॥
ಯಃ ಶ್ವಾಸಕಾಸವಿಧಿರಾದಿತ ಏವ ಚೋಕ್ತ-
ಸ್ತಂ ಚಾಪ್ಯಶೇಷಮವತಾರಯಿತುಂ ಯತೇತ ॥ (ಸು. 864)

ಚಿಕಿತ್ಸೋಪಕ್ರಮದ ವಿಧಾನ

ಸ್ವರ ರೋಗದವನ ದೋಷಗಳನ್ನು ಸ್ನೇಹನಪೂರ್ವಕವಾಗಿ ವಮನ-ವಿರೇಚನ-ವಸ್ತಿ ಕ್ರಮಗಳನ್ನು ನಡಿಸುವದರಿಂದ ತೆಗೆದುಬಿಟ್ಟನಂತರ, ನಸ್ಯ, ಅವಪೀಡ, ಮುಖಧಾವನ, ಧೂಮಪಾನ, ಲೇಹ, ಇವುಗಳ ಉಪಯೋಗದಿಂದಲೂ, ನಾನಾ ವಿಧವಾದ ಕವಲಗ್ರಹಗಳಿಂದಲೂ (ರೋಗದ ಪರಿಹಾರವನ್ನು) ಸಂಪಾದಿಸತಕ್ಕದ್ದು; ಅದಲ್ಲದೆ ಶ್ವಾಸಕಾಸ ರೋಗಗಳಿಗೆ ಮೊದಲೇ ಹೇಳಲ್ಪಟ್ಟ ಕ್ರಮಗಳನ್ನೆಲ್ಲ ಈ ರೋಗದಲ್ಲಿಯೂ ನಡಿಸಲಿಕ್ಕೆ ಯತ್ನಿಸತಕ್ಕದ್ದು.

5. ಸ್ವರೋಪಘಾತೇಽನಿಲಜೇ ಭುಕ್ತ್ವೋಪರಿ ಘೃತಂ ಪಿಬೇತ್ |
ಕಾಸಮರ್ದಕವಾರ್ತಾಕಮಾರ್ಕವಸ್ವರಸೈರ್ಯುತಮ್ ||
ವಾತಜ ಸ್ವರಭೇದ ಚಿಕಿತ್ಸೆ
ಪೀತಂ ಘೃತಂ ಹನ್ತ್ಯನಿಲಂ ಸಿದ್ಧಮಾರ್ತಗಲೇ ರಸೇ |
ಯವಕ್ಷಾರಾಜಮೋದಾಭ್ಯಾಂ ಚಿತ್ರಕಾಮಲಕೇಷು ವಾ ||
ದೇವದಾರ್ವಗ್ನಿಕಾಭ್ಯಾಂ ವಾ ಸಿದ್ಧಮಾಜಂ ಸಮಾಕ್ಷಿಕಮ್ |
ಸುಖೋದಕಾನುಪಾನೋ ವಾ ಸಸರ್ಪಿಷ್ಕೋ ಗುಡೌದನಃ || (ಸು. 864)

ವಾತಜ ಸ್ವರಭೇದದಲ್ಲಿ ಎಲೆಹುರಿಸೊಪ್ಪಿನ ರಸ, ಬದನೆಕುಡಿ ರಸ ಮತ್ತು ಗರುಗನ ರಸ ಕೂಡಿಸಿ ಕಾಯಿಸಲ್ಪಟ್ಟ ತುಪ್ಪವನ್ನು ಊಟದನಂತರ ಕುಡಿಯಬೇಕು. ನೀಲ ಗೋರಟೆಯ ರಸದಲ್ಲಿ ಕಾಯಿಸಲ್ಪಟ್ಟ ತುಪ್ಪವನ್ನು ಕುಡಿಯುವದರಿಂದ ವಾತ ಪರಿಹಾರವಾಗುತ್ತದೆ. ಚಿತ್ರಮೂಲ ಮತ್ತು ನೆಲ್ಲಿಚಟ್ಟಿನ ಕಷಾಯದಲ್ಲಿ ಯವಕ್ಷಾರ ಮತ್ತು ಅಜವೋದ ಕೂಡಿಸಿ ಕಾಯಿಸಿದ, ಅಥವಾ ದೇವದಾರು ಮತ್ತು ಚಿತ್ರಮೂಲಗಳ ಕಷಾಯದಿಂದ ಕಾಯಿಸಲ್ಪಟ್ಟ, ಆಡಿನ ತುಪ್ಪವನ್ನು, ಜೇನು ಸಮೇತವಾಗಿ, ಪಾನಮಾಡುವದರಿಂದ, ಅಥವಾ ತುಪ್ಪದೊಂದಿಗೆ ಬೆಲ್ಲದ ಅನ್ನವನ್ನು ಉಂಡು ಅನುಪಾನಕ್ಕೆ ಸುಖೋಷ್ಣವಾದ ನೀರನ್ನು ಉಪಯೋಗಿಸುವದರಿಂದ, ವಾತದೋಷವು ಪರಿಹಾರವಾಗುತ್ತದೆ.

ಷರಾ 'ಆರ್ತಗಲ' ಎಂದರೆ 'ಕಕುಭ' (ಬಿಳೀಮತ್ತಿ) ಎಂತ ನಿ ಸಂ ವ್ಯಾ (ಪು 665), 'ಹಿಂತಾಲ' (ಮುಳ್ಳುತಾಳಿ) ಎಂತ ಇಂ ವ್ಯಾ (ಅ ಸಂ II-151) ಸಾಧಾರಣವಾಗಿ 'ಆರ್ತಗಲ'ಕ್ಕೆ ನೀಲಗೋರಟೆ ಎಂತಲೇ ನಿಘಂಟುಗಳು ಅರ್ಥ ಬರೆದಿರುತ್ತವೆ ಪಾಯಸವನ್ನು ಉಣ್ಣುವದು ಸಹ ವಾತಿಕ ಸ್ವರಭೇದಕ್ಕೆ ಹಿತ ಎಂತ ವಾ (ಪು 385)

6. ಬದರೀಪತ್ರಕಲ್ಕಂ ವಾ ಘೃತಭೃಷ್ಟಂ ಸಸೈನ್ಧವಮ್ || (ವಾ. 286)

ಬೊಗರಿ ಎಲೆಯ ಕಲ್ಕ

ಬೊಗರಿ ಎಲೆಗಳನ್ನು ತುಪ್ಪದಲ್ಲಿ ಹುರಿದು, ಸೈಂಧವ ಉಪ್ಪನ್ನು ಕೂಡಿಸಿ, ಅದರ ಕಲ್ಕವನ್ನು (ಊಟದನಂತರ) ಸೇವಿಸುವದರಿಂದ ವಾತಜ ಸ್ವರಭೇದವು ಪರಿಹಾರವಾಗುವದು.

ಷರಾ ಹಸಿ ಬೊಗರಿಯೆಲೆಗಳನ್ನು ಅರೆದರೆ ಕಲ್ಕವಾಗುತ್ತದೆ ಎಂತ ಇಂ ವ್ಯಾ (ಅ ಸಂ II-151) ಆದರೆ ಅದನ್ನು ತುಪ್ಪದಲ್ಲಿ ಹುರಿದರೆ, ಅದರ ದ್ರವ ಆರಿಹೋಗುವದು ಕಲ್ಕಕ್ಕೆ ಸಾಮಾನ್ಯವಾಗಿ ಮೂರು ಪಲ ದ್ರವವನ್ನು ಕೂಡಿಸಬೇಕೆಂತ ವಾಗ್ಭಟನೇ ಹೇಳಿರುತ್ತಾನೆ (1ನೇ ಭಾಗದ XX-20 ನೋಡಿ)

7. ತೈಲಂ ವಾ ಮಧುಕದ್ರಾಕ್ಷಾಪಿಪ್ಪಲೀಕೃಮಿನುತ್ಫಲೈಃ |
ಹಂಸಪಾದ್ಯಾಶ್ಚ ಮೂಲೇನ ಪಕ್ವಂ ನಸ್ತೋ ನಿಷೇಚಯೇತ್ ||
(ವಾ. 286)

ನಸ್ಯಕ್ಕೆ ಮಧುಕಾದಿ ತೈಲ.

ಜ್ಯೇಷ್ಠಮಧು, ದ್ರಾಕ್ಷೆ, ಹಿಪ್ಪಲಿ, ವಾಯುವಿಳಂಗದ ಕಾಳು, ಹಂಸಪಾದಿಯ ಬೇರು, ಇವುಗಳಿಂದ ಕಾಯಿಸಲ್ಪಟ್ಟ ತೈಲವನ್ನು ನಸ್ಯಮಾಡುವದರಿಂದ ವಾತಜ ಸ್ವರಭೇದವು ವಾಸಿಯಾಗುವದು.

8. ಕ್ಷೀರಾನುಪಾನಂ ಪಿತ್ತೇ ತು ಪಿಬೇತ್ಸರ್ಪಿರತನ್ದ್ರಿತಃ |
ಪೈತ್ತಿಕಸ್ವರಭೇದದ ಚಿಕಿತ್ಸೆ.
ಅಶ್ನೀಯಾಚ್ಚ ಸಸರ್ಪಿಷ್ಕಂ ಯಷ್ಟೀಮಧುಕಪಾಯಸಮ್ ||
ಲಿಹ್ಯಾನ್ಮಧುರಕಾಣಾಂ ವಾ ಚೂರ್ಣಂ ಮಧುಘೃತಾಪ್ಲುತಮ್ |
ಶತಾವರೀಚೂರ್ಣಯೋಗಂ ಬಲಾಚೂರ್ಣಮಥಾಪಿ ವಾ || (ಸು. 864)

ಪಿತ್ತಜ ಸ್ವರಭೇದದಲ್ಲಿ ಘೃತಪಾನಮಾಡಿ ಅನುಪಾನಕ್ಕೆ ಹಾಲನ್ನುಪಯೋಗಿಸಿ ಚುರುಕಾಗಿರಬೇಕು (ಘೃತಪಾನಕ್ಕೆ ನಿದ್ರೆ ಅಪಥ್ಯ); ಮತ್ತು ಜ್ಯೇಷ್ಠಮಧುವನ್ನು ಕೂಡಿಸಿ ಮಾಡಿದ ಪಾಯಸವನ್ನು ತುಪ್ಪ ಬೆರಸಿಕೊಂಡು ಉಣ್ಣಬೇಕು. ಮಧುರವರ್ಗದ ಔಷಧಗಳ ಚೂರ್ಣವನ್ನು, ಶತಾವರಿ ಸೇರಿದ ಯೋಗದ ಚೂರ್ಣವನ್ನು, ಅಥವಾ ಕಲ್ಲಂಗಡಲೆ ಬೇರಿನ ಸಿಪ್ಪೆಯ ಚೂರ್ಣವನ್ನು, ಜೇನು ಮತ್ತು ತುಪ್ಪದಲ್ಲಿ ಕಲಸಿ ನೆಕ್ಕಬೇಕು.

ಷರಾ ಚಿ ಸಾ ಸಂ. (ಪು 271)ದ ಪಾಠ ಪ್ರಕಾರ ಜ್ಯೇಷ್ಠಮಧುವಿನ ಪಾಯಸದ ಬದಲಾಗಿ ಜ್ಯೇಷ್ಠಮಧುವಿನ ಕಷಾಯದಿಂದ ತುಪ್ಪ ಕೂಡಿಸಿಕೊಂಡು ಉಣ್ಣಬಹುದು ಮಧುರವರ್ಗ ಎಂದರೆ ಕಾಕೋಲ್ಯಾದಿ ಎಂತ ಸಿ ಸಂ ವ್ಯಾ. (ಪು 665) ಪಾನಮಾಡುವದಕ್ಕೆ ಹಾಲುಮರಗಳ ಚಿಗುರುಗಳ ಕಷಾಯದಲ್ಲಿ ಅವುಗಳ ಕಲ್ಕದಿಂದ ಕಾಯಿಸಿದ ತುಪ್ಪವನ್ನು ಜೇನು ಕೂಡಿಸಿ ಉಪಯೋಗಿಸುವದು ಎಂತ ವಾ (ಪು 286) ಕೆಳಗಿನ 10ನೇ ಸಂಖ್ಯೆ ನೋಡಿ

9. ಬಲಾವಿದಾರಿಗನ್ಧಾಭ್ಯಾಂ ವಿದಾರ್ಯಾ ಮಧುಕೇನ ಚ |
ಸಿದ್ಧಂ ಸಲವಣಂ ಸರ್ಪಿರ್ನಸ್ಯಂ ಸ್ವರ್ಯಮನುತ್ತಮಮ್ || (ವಾ. 287)

ನಸ್ಯಕ್ಕೆ ಬಲಾದಿ ಘೃತ

ಕಲ್ಲಂಗಡಲೆ ಬೇರು, ಮೂವಲೆ ಬೇರು, ನೆಲಕುಂಬಳಗಡ್ಡೆ, ಜ್ಯೇಷ್ಠಮಧು, ಇವುಗಳಿಂದ ತಯಾರಿಸಿದ ತುಪ್ಪವನ್ನು, ಸೈಂಧವಲವಣ ಕೂಡಿಸಿ, ನಸ್ಯಮಾಡುವದರಿಂದ ಸ್ವರ ಉಂಟಾಗುವದು. ಇದು ಅತ್ಯುತ್ತಮವಾದ ಯೋಗ.

10. ಶುಂಗಾಂಸ್ತ್ವಚಂ ಕ್ಷೀರವತಾಂ ದ್ರುಮಾಣಾಂ
ಸಂಕುಟ್ಯ ದುಗ್ಧೇ ವಿಪಚೇತ್ತು ತೇನ |
ಕಲ್ಕೇನ ಯಷ್ಟೀಮಧುಕಸ್ಯ ಸರ್ಪಿಃ
ಸಿದ್ಧಂ ಪಿಬೇತ್ಸಸ್ಮಧುಶರ್ಕರಾಕ್ತಮ್ || (ಚಿ. ಸಾ. ಸಂ. 271)

ಶುಂಗಾದಿ ಘೃತ

ಹಾಲುಮರಗಳ ಕೊಡಿಗಳನ್ನೂ ಕೆತ್ತೆಗಳನ್ನೂ ಕುಟ್ಟಿ ಹಾಲಿನಲ್ಲಿ ಬೇಯಿಸಿ, ಆ ಹಾಲು ಕಷಾಯದಿಂದಲೂ ಜ್ಯೇಷ್ಠಮಧುವಿನ ಕಲ್ಕದಿಂದಲೂ ಕಾಯಿಸಿದ ತುಪ್ಪವನ್ನು, ಜೇನು ಮತ್ತು ಸಕ್ಕರೆ ಕೂಡಿಸಿಕೊಂಡು, ಪಾನಮಾಡಬೇಕು. (ಅದರಿಂದ ಪಿತ್ತಜ ಸ್ವರಭೇದ ಪರಿಹಾರವಾಗುವದು.)

ಷರಾ 8ನೇ ಸಂಖ್ಯೆಯ ಅಡಿ ಷರಾ ನೋಡಿ

11. ಪೈತ್ತಿಕೇ ತು ವಿರೇಕಃ ಸ್ಯಾತ್ಪಯಶ್ಚ ಮಧುರೈಃ ಶೃತಮ್ |
ಸರ್ಪಿರ್ಗುಡಾ(?ಡೋ) ಜೀವನೀಯಂ ವಾಸಾಸಿದ್ಧಂ ಘೃತಂ ತಥಾ ||
(ಚ. 766)

ಹಾಲು ತುಪ್ಪಗಳ ಪ್ರಯೋಗ

ಪೈತ್ತಿಕ ಸ್ವರಭೇದದಲ್ಲಿ ವಿರೇಚನ, ಮಧುರವರ್ಗದ ದ್ರವ್ಯಗಳನ್ನು ಕೂಡಿಸಿ ಕಾಯಿಸಿದ ಹಾಲು, ತುಪ್ಪಬೆಲ್ಲಗಳು, ಜೀವನೀಯವರ್ಗದ ಔಷಧಗಳಿಂದ ತಯಾರಿಸಲ್ಪಟ್ಟ ತುಪ್ಪ, ಮತ್ತು ಆಡುಸೋಗೆ ಬೇರಿನ ಕಷಾಯದಲ್ಲಿ ಪಾಕಮಾಡಿದ ತುಪ್ಪ ಸಹ, ಹಿತವಾಗುತ್ತವೆ.

ಷರಾ ಉತ್ತರಾರ್ಧಕ್ಕೆ, 'ಸರ್ಪಿರ್ಗುಡೋ ಘೃತಂ ತಿಕ್ತಂ ಜೀವನೀಯಂ ವೃಷಸ್ಯ ವಾ,' ಎಂತ ಪಾಠಾಂತರ ಉಂಟು ಅದರ ಪ್ರಕಾರ "ತುಪ್ಪ, ಬೆಲ್ಲ, ತಿಕ್ತಘೃತ, (ವಾತ ರಕ್ತಕ್ಕೆ ಹೇಳಲ್ಪಟ್ಟ) ಜೀವನೀಯಘೃತ, ಅಥವಾ (ರಕ್ತಪಿತ್ತಕ್ಕೆ ಉಕ್ತವಾದ) ವೃಷಘೃತ" ಎಂತ ಅರ್ಥವಾಗುತ್ತದೆ ಆದರೆ 'ಸರ್ಪಿರ್ಗುಡೌದನ'ವನ್ನು ಸುಶ್ರುತನು ವಾತಜ ಸ್ವರಭೇದಕ್ಕೆ ಹೇಳಿದ್ದಾನೆ. (ಮೇಲಿನ 5ನೇ ಸಂಖ್ಯೆ ನೋಡಿ)

12. ಪಿಬೇತ್ಕಟೂನಿ ಮೂತ್ರೇಣ ಕಫಜೇ ಸ್ವರಸಂಕ್ಷಯೇ |
ಲಿಹ್ಯಾದ್ವಾ ಮಧುತೈಲಾಭ್ಯಾಂ ಭುಕ್ತ್ವಾ ಖಾದೇತ್ಕಟೂನಿ ಚ ||
(ಸು. 765)

ಕಫಜ ಸ್ವರಭೇದ ಚಿಕಿತ್ಸೆ

ಕಫಜ ಸ್ವರಭೇದದಲ್ಲಿ ಕಾರ ರಸದ ವಸ್ತುಗಳ ಚೂರ್ಣವನ್ನು ಗೋಮೂತ್ರದಲ್ಲಿ ಕಲಸಿ ಕುಡಿಯಬೇಕು, ಅಥವಾ ಜೇನು ಮತ್ತು ತೈಲ ಕೂಡಿಸಿಕೊಂಡು ನೆಕ್ಕಬೇಕು; ಮತ್ತು ಊಟದನಂತರ ಕಾರ ದ್ರವ್ಯಗಳನ್ನು ತಿನ್ನಬೇಕು.

13. ಕಟ್ಫಲಾಮಲಕವ್ಯೋಷಂ ಲಿಹ್ಯಾತ್ತೈಲಮಧುಪ್ಲುತಮ್ |
ವ್ಯೋಷಕ್ಷಾರಾಗ್ನಿಚವಿಕಾಭಾರ್ಗೀಪಥ್ಯಾಮಧೂನಿ ವಾ || (ವಾ. 287)

ಕಟ್ಫಲಾದಿ ವ್ಯೋಷಾದಿ ಚೂರ್ಣಗಳು

ಕಟ್ಫಲ (ಕಿರುಶಿವನಿ), ನೆಲ್ಲಿಚಟ್ಟು, ತ್ರಿಕಟು, ಇವುಗಳ ಚೂರ್ಣವನ್ನು ಜೇನಿನಲ್ಲಿ ಕಲಸಿ, ಎಳ್ಳೆಣ್ಣೆ ಕೂಡಿಸಿಕೊಂಡು, ಅಥವಾ ತ್ರಿಕಟು, ಯವಕ್ಷಾರ, ಚಿತ್ರಮೂಲ, ಕಾಡುಮೆಣಸಿನ ಬೇರು, ಗಂಟುಭಾರಂಗಿ (ನಿರ್ವಿಷದ) ಬೇರು, ಅಣಿಲೆಕಾಯಿ, ಇವುಗಳ ಚೂರ್ಣವನ್ನು ಜೇನು ಕೂಡಿಸಿಕೊಂಡು, ನೆಕ್ಕಬೇಕು. (ಅದರಿಂದ ಕಫಜ ಸ್ವರಭೇದ ಪರಿಹಾರವಾಗುತ್ತದೆ.)

14. ಯವೈರ್ಯವಾಗೂಂ ಯಮಕೇ ಕಣಧಾತ್ರೀಕೃತಾಂ ಪಿಬೇತ್ |
ಭುಕ್ತ್ವಾದ್ಯಾತ್ ಪಿಪ್ಪಲೀಂ ಶುಣ್ಠೀಂ (ತೀಕ್ಷ್ಣಂ ವಾ ವಮನಂ ಭಜೇತ್) |
(ವಾ. 287)

ಆಹಾರದೊಂದಿಗೆ ಔಷಧ ಮುಂತಾದ ಉಪಚಾರಗಳು

ಪಿಪ್ಪಲಿ ಮತ್ತು ನೆಲ್ಲಿಚಟ್ಟಿನಿಂದ, ಎಳ್ಳೆಣ್ಣೆ ಮತ್ತು ತುಪ್ಪ ಕೂಡಿಸಿ, ಮಾಡಿದ ಯವೆಗೋದಿಯ ಯವಾಗೂ ಗಂಜಿಯನ್ನು ಕುಡಿಯಬೇಕು; ಅಥವಾ ಉಂಡ ಕೂಡಲೇ ಹಿಪ್ಪಲಿ-ಶುಂಠಿಗಳನ್ನು ತಿನ್ನಬೇಕು. (ಅಥವಾ ತೀಕ್ಷ್ಣವಾದ ವಾಂತಿಯ ಔಷಧವನ್ನು ಉಪಯೋಗಿಸಬೇಕು.)

ಷರಾ ತೀಕ್ಷ್ಣವಾದ ಶಿರೋವಿರೇಚನ ಮತ್ತು ಧೂಮಪಾನ ಸಹ ಕಫಜ ಸ್ವರಭೇದದಲ್ಲಿ ಪ್ರಶಸ್ತ ಎಂತ ಚ (ಸು 766)

15. ಪಿಪ್ಪಲೀಂ ಪಿಪ್ಪಲೀಮೂಲಂ ಮರಿಚಂ ವಿಶ್ವಭೇಷಜಮ್ |
ಪಿಬೇನ್ಮೂತ್ರೇಣ ಮತಿಮಾನ್ ಕಫಜೇ ಸ್ವರಸಂಕ್ಷಯೇ ||
(ಚಿ. ಸಾ. ಸಂ. 271)

ಪಿಪ್ಪಲ್ಯಾದಿ ಚೂರ್ಣ

ಕಫಜ ಸ್ವರಕ್ಷಯದಲ್ಲಿ ಬುದ್ಧಿವಂತನು ಹಿಪ್ಪಲಿ, ಹಿಪ್ಪಲಿಮೂಲ, ಕಾಳುಮೆಣಸು, ಶುಂಠಿ, ಇವುಗಳ ಚೂರ್ಣವನ್ನು ಗೋಮೂತ್ರದಲ್ಲಿ ಅರೆದು ಕುಡಿಯಬೇಕು.

16. ಅಜಮೋದಾಂ ನಿಶಾಂ ಧಾತ್ರೀಂ ಕ್ಷಾರಂ ವಹ್ನಿಂ ವಿಚೂರ್ಣ್ಯ ಚ |
ಮಧುಸರ್ಪಿರ್ಯುತಂ ಲೀಢ್ವಾ ಸ್ವರಭೇದಂ ವ್ಯಪೋಹತಿ ||
(ಚಿ. ಸಾ. ಸಂ. 271)

ಅಜಮೋದಾದಿ ಚೂರ್ಣ

ಅಜಮೋದ, ಅರಸಿನ, ನೆಲ್ಲಿಚಟ್ಟು, ಯವಕ್ಷಾರ, ಚಿತ್ರಮೂಲ, ಇವುಗಳ ಚೂರ್ಣವನ್ನು ಜೇನು ಮತ್ತು ತುಪ್ಪದಲ್ಲಿ ಕಲಸಿ ನೆಕ್ಕುವದರಿಂದ ಸ್ವರಭೇದವು ದೂರವಾಗುವದು.

17. ಫಲತ್ರಿಕತ್ರ್ಯೂಷಣಯಾವಶೂಕಚೂರ್ಣಂ ಚ ಹನ್ಯಾತ್ಸ್ವರಭೇದಮಾಶು ।
ಫಲತ್ರಿಕಾದಿ ಚೂರ್ಣ ಕಿಂ ವಾ ಕುಲತ್ಥಂ ವದನಾನ್ತರಸ್ಥಂ ಸ್ವರಾಮಯಂ ಹನ್ತ್ಯಥ ಪೌಷ್ಕರಂ ವಾ ॥ (ಚಿ. ಸಾ. ಸಂ. 271)

ತ್ರಿಫಲೆ, ತ್ರಿಕಟು, ಯವಕ್ಷಾರ, ಇವುಗಳ ಚೂರ್ಣವನ್ನು, ಅಥವಾ ಹುರುಳಿ ಚೂರ್ಣವನ್ನು, ಅಥವಾ ಪುಷ್ಕರಮೂಲದ ಚೂರ್ಣವನ್ನು, ಬಾಯಿಯೊಳಗೆ ಇಟ್ಟು ಕೊಳ್ಳುವದರಿಂದ ಸ್ವರಭೇದವು ಬೇಗನೇ ನಾಶವಾಗುವದು.

18. ವಾತೇ ಸಲವಣಂ ತೈಲಂ ಪಿತ್ತೇ ಸರ್ಪಿಃ ಸಮಾಕ್ಷಿಕಮ್ ।
ಕಫೇ ಸಕ್ಷಾರಕಟುಕಂ ಕ್ಷೌದ್ರಂ ಕವಲ ಇಷ್ಯತೇ ॥
ಕವಲ ಪ್ರಯೋಗ ಗಲೇ ತಾಲುನಿ ಜಿಹ್ವಾಯಾಂ ದನ್ತಮೂಲೇಷು ಚಾಶ್ರಿತಃ ।
ತೇನ ನಿಷ್ಕೃಷ್ಯತೇ ಶ್ಲೇಷ್ಮಾ ಸ್ವರಶ್ಚಾಶು ಪ್ರಸೀದತಿ ॥
(ಭಾ. ಪ್ರ. 380-81)

ವಾತದಲ್ಲಿ ಸೈಂಧವಲವಣ ಕೂಡಿದ ಎಳ್ಳೆಣ್ಣೆ, ಪಿತ್ತದಲ್ಲಿ ಜೇನು ಕೂಡಿದ ತುಪ್ಪ, ಕಫದಲ್ಲಿ ಯವಕ್ಷಾರ ಮತ್ತು ತ್ರಿಕಟು ಕೂಡಿದ ಜೇನು, ಇವುಗಳ ಕವಲ ಸ್ವರಭೇದ ರೋಗದ ಪರಿಹಾರಕ್ಕೆ ಪ್ರಶಸ್ತವಾಗಿರುತ್ತದೆ. ಅದರಿಂದ ಗಂಟಲು, ತಾಲು, ನಾಲಿಗೆ, ಹಲ್ಲುಗಳ ಬುಡ, ಈ ಸ್ಥಾನಗಳನ್ನು ಆಶ್ರಯಿಸಿಕೊಂಡ ಕಫವು ಹೊರಗೆ ಸೆಳೆಯಲ್ಪಟ್ಟು, ಸ್ವರವು ಬೇಗನೆ ಸ್ವಚ್ಛವಾಗುವದು.

19. ಸ್ವರೋಪಘಾತೇ ಮೇದೋಜೇ ಕಫವದ್ವಿಧಿರಿಷ್ಯತೇ ॥ (ಸು. 865)
ಮೇದೋಜ ಸ್ವರಭೇದದ ಚಿಕಿತ್ಸೆ ಮೇದಸ್ಸಿನಿಂದ ಹುಟ್ಟಿದ ಸ್ವರಭೇದಕ್ಕೆ, ಕಫಜ ಸ್ವರಭೇದಕ್ಕೆ ಹೇಳಿದಂತೆ, ಚಿಕಿತ್ಸೆ ಮಾಡುವದು ಹಿತವಾಗುತ್ತದೆ.

20. ಸರ್ವಜೇ ಕ್ಷಯಜೇ ಚಾಪಿ ಪ್ರತ್ಯಾಖ್ಯಾಯಾಚರೇತ್ಕ್ರಿಯಾಮ್ ॥
(ಸು. 865)
ಸನ್ನಿಪಾತಜ ಮತ್ತು ಕ್ಷಯಜ ಸ್ವರಭೇದಗಳ ಚಿಕಿತ್ಸೆ ಸನ್ನಿಪಾತೇ ಹಿತಾಃ ಸರ್ವಾಃ ಕ್ರಿಯಾ ನ ತು ಶಿರಾವಿಧಿಃ ॥ (ಚ. 766)

ತ್ರಿದೋಷಜ ಮತ್ತು ಕ್ಷಯಜ ಸ್ವರಭೇದಗಳಲ್ಲಿ, ರೋಗವು ಗುಣವಾಗುವಂಥಾದ್ದು ಅಲ್ಲ ಎಂತ ಹೇಳಿ, ವೈದ್ಯನು ಚಿಕಿತ್ಸೆಯನ್ನು ನಡಿಸತಕ್ಕದ್ದು. ತ್ರಿದೋಷಜ ಸ್ವರಭೇದದಲ್ಲಿ ವಾತಾದಿ ದೋಷಗಳಿಗೆ ಹೇಳಲ್ಪಟ್ಟ ಸರ್ವ ಕ್ರಿಯೆಗಳು ಹಿತ, ಆದರೆ ರಕ್ತಮೋಕ್ಷಣ ನಿಷಿದ್ಧವಾಗಿರುತ್ತದೆ.

21. ಶರ್ಕರಾಮಧುಮಿಶ್ರಾಣಿ ಶೃತಾನಿ ಮಧುರೈಃ ಸಹ ।
ಗಟ್ಟಿಮಾತಿನಿಂದಾದ ಸ್ವರಭೇದಕ್ಕೆ ಪಿಬೇತ್ಪಯಾಂಸಿ ಯಸ್ಯೋಚ್ಚೈರ್ವದತೋಽಭಿಹತಃ ಸ್ವರಃ ॥
(ಸು. 865)

ಗಟ್ಟಿಯಾಗಿ ಮಾತಾಡುವದರಿಂದ ಯಾವನ ಸ್ವರವು ಬಿದ್ದುಹೋಗಿಯದೋ ಅವನಿಗೆ ಮಧುರವರ್ಗದ ದ್ರವ್ಯಗಳನ್ನು ಹಾಕಿ ಪಕ್ವಮಾಡಿದ ಹಾಲುಗಳನ್ನು, ಸಕ್ಕರೆ ಮತ್ತು ಜೇನು ಕೂಡಿಸಿ, ಕುಡಿಯ ಕೊಡಬೇಕು.

22. ರಕ್ತಜೇ ಸ್ವರಭೇದೇ ತು ಸಘೃತಾ ಜಾಂಗಲಾ ರಸಾಃ |
ದ್ರಾಕ್ಷಾವಿದಾರೀಕ್ಷುರಸಾಃ ಸಘೃತಕ್ಷೌದ್ರಶರ್ಕರಾಃ ||
ಯಚ್ಚೋಕ್ತಂ ಕ್ಷಯಕಾಸಘ್ನಂ ತಚ್ಚ ಸರ್ವಂ ಚಿಕಿತ್ಸಿತಮ್ |
ಪಿತ್ತಜಸ್ವರಭೇದಘ್ನಂ ಶಿರಾವೇಧಶ್ಚ ರಕ್ತಜೇ || (ಚ. 766)

ರಕ್ತಜ ಸ್ವರಭೇದ ಚಿಕಿತ್ಸೆ

ರಕ್ತಜ ಸ್ವರಭೇದದಲ್ಲಿ ಜಾಂಗಲ ವರ್ಗಗಳ ಮಾಂಸರಸಗಳನ್ನು ತುಪ್ಪ ಕೂಡಿಸಿ ಉಪಯೋಗಿಸುವದು, ಮತ್ತು ದ್ರಾಕ್ಷೇರಸ, ನೆಲಕುಂಬಳಗಡ್ಡೆ ರಸ, ಕಬ್ಬಿನ ರಸ, ಇವುಗಳನ್ನು (ಬೇಕಾದ ಹಾಗೆ) ತುಪ್ಪ, ಜೇನು ಮತ್ತು ಸಕ್ಕರೆ ಕೂಡಿಸಿ ಪಾನಮಾಡುವದು, ಹಿತವಾಗುತ್ತವೆ. ಕ್ಷಯಜ ಕೆಮ್ಮಿನ ಪರಿಹಾರಕ್ಕೆ ಯಾವ ಚಿಕಿತ್ಸೆ ಉಕ್ತವಾಗಿದೆಯೋ ಅದೆಲ್ಲ, ಪೈತ್ತಿಕ ಸ್ವರಭೇದಕ್ಕೆ ಹೇಳಲ್ಪಟ್ಟ ಪರಿಹಾರಗಳು, ಮತ್ತು ರಕ್ತಮೋಕ್ಷಣ ಸಹ ರಕ್ತಜ ಸ್ವರಭೇದದಲ್ಲಿ ಉಪಯುಕ್ತವಾದವು.

23. ತ್ವಗೇಲಾಪಿಪ್ಪಲೀಭಾರ್ಂಗೀಶರ್ಕರಾ ದ್ವಿಗುಣೋತ್ತರಾಃ |
ಮಧ್ವಾಜ್ಯಾಭ್ಯಾಂ ಲಿಹೇದ್ಧನ್ತಿ ಸ್ವರಭೇದಾರುಚಿಕ್ಷಯಮ್ ||
(ವೈ. ಸಾ ಸಂ. 176)

ತ್ವಗೇಲಾದಿ ಚೂರ್ಣ

ಲವಂಗಪಟ್ಟೆ ೧ ಪಾಲು, ಏಲಕ್ಕಿ ೨ ಪಾಲು, ಹಿಪ್ಪಲಿ ೪ ಪಾಲು, ಗಂಟುಭಾರಂಗಿ (ನಿರ್ವಿಷ) ಬೇರು ೮ ಪಾಲು, ಸಕ್ಕರೆ ೧೬ ಪಾಲು, ಇವುಗಳೊಳಗೆ ಪ್ರಥಮ ನಾಲ್ಕು ಬಗೆ ಔಷಧಗಳನ್ನು ವಸ್ತ್ರಗಾಲಿತ ಚೂರ್ಣಮಾಡಿ ಸಕ್ಕರೆಯನ್ನು ಬೆರಸಿಟ್ಟುಕೊಂಡು, ಈ ಚೂರ್ಣವನ್ನು (ಭಿನ್ನಾಂಶ) ಜೇನು-ತುಪ್ಪಗಳಲ್ಲಿ ಕಲಸಿ ನೆಕ್ಕುವದರಿಂದ ಸ್ವರಭೇದ, ಅರುಚಿ, ಮತ್ತು ಕ್ಷಯ ಪರಿಹಾರವಾಗುವವು.

24. ಸ್ವರೋಪಘಾತಂ ಹನ್ಯಾಚ್ಚ ಕ್ಷೀರಂ ವಾ ಸಕಣಂ ಶೃತಮ್ |
(ವೈ. ಸಾ. ಸಂ. 177)

ಹಿಪ್ಪಲಿಯ ಹಾಲು ಕಷಾಯ.

ಹಿಪ್ಪಲಿ ಕೂಡಿಸಿ ಕಾಯಿಸಲ್ಪಟ್ಟ ಹಾಲಿನ ಪಾನದಿಂದ ಸ್ವರಭಂಗವು ನಾಶವಾಗುವದು.

25. ಚವಿಕಾ ಪಿಪ್ಪಲೀಮೂಲಂ ಶೃಂಗೀ ಭಾರ್ಂಗೀ ಝಟಾ ಬಲಾ |
ಗುಳೂಚೀ ಪೌಷ್ಕರಂ ಮೂಲಂ ಸಿಂಹೀ ದಾರುನಿಶಾ ಶಟೀ ||
ಕೋ(?ಕು)ರಣ್ಡಮಜವೋದಂ ಚ ಯವಾನೀ ಸೈಂಧವಂ ತಥಾ |
ಬಿಲ್ವಂ ಚ ಶರಪುಂಖಂ ಚ ಕ್ವಾಥಯೇತ್ತ್ರೈಸ್ತ್ರಿದೋಷಜಿತ್ ||
ಸ್ವರ್ಯಂ ಕಂಠ್ಯಂ ವಿಶೇಷೇಣ ಗಾಯಕಾನಾಂ ಪ್ರಶಸ್ಯತೇ |
(ವೈ. ಸಾ. ಸಂ. 177)

ಚವಿಕಾದಿ ಕಷಾಯ

ಕಾಡುಮೆಣಸಿನ ಬೇರು, ಹಿಪ್ಪಲಿಮೂಲ, ಕರ್ಕಟಶೃಂಗಿ, ಗಂಟುಭಾರಂಗಿ (ನಿರ್ವಿಷ), ನೆಲನೆಲ್ಲಿ, ಕಲ್ಲಂಗಡಲೆ ಬೇರು (ಕಡೀರು), ಅಮೃತಬಳ್ಳಿ, ಪುಷ್ಕರಮೂಲ, ಕಿರಿಗುಳ್ಳದ ಬೇರು, ಮರದರಸಿನ, ಸಣ್ಣ ಕಚೋರ, ಅರಸಿನ ಗೋರಂಟೆ ಬೇರು, ಅಜವೋದ, ಓಮ, ಸೈಂಧವಲವಣ, ಬಿಲ್ಲಪತ್ರೆ ಬೇರು, ಶರಪುಂಖದ (ಕಾಡುನೀಲಿಯ) ಬೇರು, ಇವುಗಳ ಕಷಾಯವು ತ್ರಿದೋಷಹರ, ಕಂಠವನ್ನು ಸರಿಮಾಡಿ ಸ್ವರವನ್ನು ಕೊಡುತ್ತದೆ, ಮತ್ತು ವಿಶೇಷವಾಗಿ ಗಾನಮಾಡುವವರಿಗೆ ಪ್ರಶಸ್ತವಾದದ್ದು.

ಷರಾ ಜೇನನ್ನೂ, ತುಪ್ಪವನ್ನೂ, ಪ್ರಕ್ಷೇಪವಾಗಿ ಉಪಯೋಗಿಸಬೇಕೆಂತ ಅರ್ಥ ಬರೆದವರು ಕೂಡಿಸಿದ್ದಾರೆ. ಸೈಂಧವಲವಣ ಸೇರಿದ ಕಷಾಯಕ್ಕೆ ಅದು ಅಗತ್ಯವಾಗಿ ಕಾಣುವದಿಲ್ಲ

26. ಕಾಕಮಾಚೀದಲರಸೇ ಷಡ್ಗುಣೇ ವಿಪಚೇದ್ಘೃತಮ್ |
ಕಾಕಮಾಚೀ ಘೃತ ಪಿಪ್ಪಲ್ಯಾದಿಪ್ರತೀವಾಪಂ ವೈಸ್ವರ್ಯಶ್ವಾಸಕಾಸಜಿತ್ ||
(ವೈ ಸಾ. ಸಂ. 176)

ಕಾಗೆಹಣ್ಣಿನ ಗಿಡದ (ಗಣಿಕೆ) ಸೊಪ್ಪಿನ ರಸ ೬ ಪಾಲು, ತುಪ್ಪ ೧ ಪಾಲು ಕೂಡಿಸಿ ಕಾಯಿಸಿ, ಪಾಕಮಾಡಿ ಹಿಂಡಿತೆಗೆದ ತುಪ್ಪಕ್ಕೆ ಹಿಪ್ಪಲೀ, ಹಿಪ್ಪಲಿಮೂಲ, ಕಾಡುಮೆಣಸಿನ ಬೇರು, ಶುಂಠಿ, ಚಿತ್ರಮೂಲದ ಬೇರು, ಇವುಗಳ ವಸ್ತ್ರಗಾಲಿತ ಚೂರ್ಣ (ತುಪ್ಪದ ಕಾಲಂಶ) ಬೆರಸಿಟ್ಟುಕೊಂಡು ಸೇವಿಸುವದರಿಂದ ಸ್ವರಭೇದ, ಉಬ್ಬಸ, ಮತ್ತು ಕೆಮ್ಮು ಪರಿಹಾರವಾಗುವವು.

ಷರಾ ತುಪ್ಪಕಾಯಿಸುವಾಗ ಚೂರ್ಣವನ್ನು ಕಲ್ಕವಾಗಿ ಉಪಯೋಗಿಸಬಹುದು

27. ನಿದಿಗ್ಧಿಕಾಪಲಶತಂ ತದರ್ಧಂ ಗ್ರಂಥಿಕಸ್ಯ ಚ |
ಚಿತ್ರಕಸ್ಯ ತದರ್ಧಂ ಚ ದಶಮೂಲಂ ಚ ತತ್ಸಮಮ್ ||
ನಿದಿಗ್ಧಿಕಾದಿ ಲೇಹ ದ್ರೋಣದ್ವಯೇಽಪಾಂ ನಿಃಕ್ವಾಥ್ಯ ಕಷಾಯಾಷ್ಟಕಮಾಹರೇತ್ |
ಪೂತೇ ಕ್ಷಿಪೇತ್ತದರ್ಧಂತು ಪುರಾಣಸ್ಯ ಗುಡಸ್ಯ ಚ ||
ಸರ್ವಮೇಕತ್ರ ಕೃತ್ವಾ ಚ ಲೇಹವತ್ಸಾಧು ಸಾಧಯೇತ್ |
ಅಷ್ಟೌ ಪಲಾನಿ ಪಿಪ್ಪಲ್ಯಾಸ್ತ್ರಿಜಾತಕಪಲಂ ತಥಾ ||
ಮರಿಚಾನಾಂ ಪಲಂತ್ವೇಕಂ ಸರ್ವಮೇಕತ್ರ ಚೂರ್ಣಿತಮ್ |
ಮಧುನಃ ಕುಡವಂ ದತ್ವಾ ತದಶ್ನೀಯಾದ್ಯಥಾನಲಮ್ ||
ಸ್ವರಭೇದಹರಂ ಮುಖ್ಯಂ ಪ್ರತಿಶ್ಯಾಯಹರಂ ಪರಮ್ |
ಶ್ವಾಸಕಾಸಾಗ್ನಿಮಾಂದ್ಯಾರ್ಶೋಗುಲ್ಮಮೇಹಗಲಾಮಯಾನ್ ||
ಆನಾಹಮೂತ್ರಕೃಚ್ಛ್ರಾಣಿ ಹನ್ಯಾದ್ಗ್ರಂಥ್ಯರ್ಬುದಾನಿ ಚ |
(ಚಿ. ಸಾ. ಸಂ. 271-272)

೧೦೦ ಪಲ ಕಿರಿಗುಳ್ಳದ ಬೇರು, ೫೦ ಪಲ ಹಿಪ್ಪಲಿಮೂಲ, ೨೫ ಪಲ ಚಿತ್ರಮೂಲ, ೨೫ ಪಲ ದಶಮೂಲಗಳು, ಇವುಗಳನ್ನು ಕುಟ್ಟಿ ೩೨ ಪ್ರಸ್ಥ ನೀರಲ್ಲಿ ಹಾಕಿ ಕುದಿಸಿ, ೪ ಪ್ರಸ್ಥಕ್ಕೆ ಬತ್ತಿಸಿ, ಶೋಧಿಸಿದ ಆ ಕಷಾಯಕ್ಕೆ ೩೨ ಪಲ ಹಳೇ ಬೆಲ್ಲ ಹಾಕಿ ಲೇಹದಂತೆ ಸರಿಯಾಗಿ ಪಾಕಮಾಡಿ, ೮ ಪಲ ಪಿಪ್ಪಲಿ, ಏಲಕ್ಕಿ, ಲವಂಗಪಟ್ಟೆ, ದಾಲ್ಚೀನಿ ಎಲೆ, ಇವು ಮೂರು ಬಗೆ ಸೇರಿ ೧ ಪಲ, ಕಾಳುಮೆಣಸು ೧ ಪಲ, ಇವುಗಳ ವಸ್ತ್ರಗಾಲಿತ ಚೂರ್ಣವನ್ನು ಬೆರಸಿ, ಒಲೆಯಿಂದ ಕೆಳಗಿರಿಸಿ, ಆ ಲೇಹವು ತಣಿದ ಮೇಲೆ ಅದರೊಂದಿಗೆ ೧ ಕುಡವ ಜೇನು ಕೂಡಿಸಿ, ಇಟ್ಟುಕೊಂಡು, ಅಗ್ನಿಬಲಕ್ಕೆ ತಕ್ಕ ಪ್ರಮಾಣದಲ್ಲಿ ಸೇವಿಸುವದು. ಈ ಲೇಹವು ಮುಖ್ಯವಾಗಿ ಸ್ವರಭೇದಹರ; ನೆಗಡಿ ಪರಿಹಾರಕ್ಕೆ ಉತ್ತಮ, ಮತ್ತು ಉಬ್ಬಸ, ಕೆಮ್ಮು, ಅಗ್ನಿಮಾಂದ್ಯ, ಮೂಲವ್ಯಾಧಿ, ಗುಲ್ಮ, ಮೇಹ, ಗಂಟಲರೋಗಗಳು, ಆನಾಹ, ಮೂತ್ರಕೃಚ್ಛ್ರ, ಗ್ರಂಥಿ, ಅರ್ಬುದ, ಈ ರೋಗಗಳನ್ನು ಸಹ ನಾಶಮಾಡುವದು.

28. ಚವ್ಯಾಮ್ಲವೇತಸಕಟುತ್ರಯತಿನ್ತಿಡೀಕಂ
ತಾಲೀಶಜೀರಕತುಗಾದಹನೈ�ः ಸಮಾಂಶೈः ।
ಚವ್ಯಾದಿ ಚೂರ್ಣ ಚೂರ್ಣಂ ಗುಡಪ್ರಮೃದಿತಂ ತ್ರಿಸುಗನ್ಧಿಯುಕ್ತಂ
ವೈಸ್ವರ್ಯಪೀನಸಕಫಾರುಚಿಷು ಪ್ರಶಸ್ತಮ್ ॥

(ಚಿ. ಸಾ. ಸಂ. 272)

ಕಾಡುಮೆಣಸಿನ ಬೇರು, ಅಮ್ಲವೇತಸ (ಸುಕ್ಕೆಸೊಪ್ಪು, ಇದು ಸಿಕ್ಕದ್ದಲ್ಲಿ ಪುಳ್ಳಂಪುರುಚೆ), ತ್ರಿಕಟು, ಮುರ್ಗಿನಹುಳಿ, ತಾಳೀಸಪತ್ರೆ, ಜೀರಿಗೆ, ಬಿದಿರುಪ್ಪು, ಚಿತ್ರಮೂಲ, ಇವುಗಳನ್ನು ಸಮಾಂಶವಾಗಿ ತೆಗೆದುಕೊಂಡು, ನುಣ್ಣಗಿನ ಚೂರ್ಣ ಮಾಡಿಟ್ಟುಕೊಂಡು, ಬೆಲ್ಲದಲ್ಲಿ ಕಲಸಿ, ಏಲಕ್ಕಿ, ದಾಲ್ಚೀನಿ ಎಲೆ, ಲವಂಗಪಟ್ಟೆ, ಇವುಗಳ ಚೂರ್ಣಸಮೇತವಾಗಿ, ಸೇವಿಸುವದು. ಇದು ಸ್ವರವಿಕಾರ, ಪೀನಸ, ಕಫ, ಅರುಚಿ, ಈ ರೋಗಗಳನ್ನು ಪರಿಹರಿಸುವದಕ್ಕೆ ಪ್ರಶಸ್ತವಾದದ್ದು.

29. ವ್ಯಾಘ್ರೀಸ್ವರಸವಿಪಕ್ವಂ ರಾಸ್ನಾವಾಟ್ಯಾಲಗೋಕ್ಷುರವ್ಯೋಷೈः ।
ಕಂಠಕಾರೀಘೃತ ಸರ್ಪಿः ಸ್ವರೋಪಘಾತಂ ಹನ್ಯಾತ್ಕಾಸಂ ಚ ಪಂಚವಿಧಮ್ ॥

(ಚಿ. ಸಾ. ಸಂ. 272)

ನೆಲಗುಳ್ಳದ ಸ್ವರಸ(ಅಥವಾ ಕಷಾಯ)ದಲ್ಲಿ, ಅರತೆ (ರಾಸ್ನೆ), ಕಲ್ಲಂಗಡಲೆ ಬೇರು, ನೆಗ್ಗಿಲಮುಳ್ಳು, ತ್ರಿಕಟು, ಇವುಗಳ ಕಲ್ಕದಿಂದ ಪಾಕಮಾಡಿದ ತುಪ್ಪವು ಸ್ವರಭೇದವನ್ನೂ, ಐದು ವಿಧವಾದ ಕೆಮ್ಮನ್ನೂ ನಾಶಮಾಡುವದು

ಷರಾ ಸ್ವರಸ ದೊರಕದ್ದಲ್ಲಿ ಒಣಗಿದ ದ್ರವ್ಯಕ್ಕೆ ೮ ಪಾಲು ನೀರಿಟ್ಟು, ಕಾಲಂಶಕ್ಕೆ ಬತ್ತಿಸಿದ ಕಷಾಯವನ್ನಾಗಲಿ, ಅದರ ಚೂರ್ಣ ಮಾಡಿ, ಸಮಪಾಲು ನೀರು ಕೂಡಿಸಿ, ಒಂದು ರಾತ್ರಿ ನೆನೆದ ಮೇಲೆ, ಮಾರಣೆ ದಿನ ಹಿಸುಕಿ ಹಿಂಡಿ ತೆಗೆದ ರಸವನ್ನಾಗಲಿ, ಉಪಯೋಗಿಸಬಹುದಾಗಿ ಮೂಲದಲ್ಲಿಯೇ ಹೇಳಲ್ಪಟ್ಟದೆ

30. ಕಲಿತರುಫಲಸಿನ್ಧುಕಣಾಚೂರ್ಣಂ ತಕ್ರೇಣ ಲೀಢಮಪಹರತಿ ।
ತಾರೇಕಾಯಿ ಚೂರ್ಣ. ಸ್ವರಭೇದಂ ಗೋಪಯಸಾ ಪಿಬತಿ ವಾಮಲಕಚೂರ್ಣಮ್ ॥

(ರ. ರ. 357)

ತಾರೆಕಾಯಿಯ ಸಿಪ್ಪೆ, ಸೈಂಧವಲವಣ, ಹಿಪ್ಪಲಿ, ಇವುಗಳ ಚೂರ್ಣವನ್ನು ಮಜ್ಜಿಗೆಯಲ್ಲಿ ಕಲಸಿ ನೆಕ್ಕುವದರಿಂದಲೂ, ನೆಲ್ಲಿಚಟ್ಟಿನ ಚೂರ್ಣವನ್ನು ದನದ ಹಾಲಲ್ಲಿ ಕಲಸಿ ಕುಡಿಯುವದರಿಂದಲೂ, ಸ್ವರಭೇದವು ಪರಿಹಾರವಾಗುವದು.

31. ಭೃಂಗರಾಜಾಮೃತಾವಲ್ಲೀವಾಸಕದಶಮೂಲಕಾಸಮರ್ದರಸೈः ।
ಸರ್ಪಿः ಸಪಿಪ್ಪಲೀಕಂ ಸಿದ್ಧಂ ಸ್ವರಭೇದಕಾಸಜಿನ್ಮಧುನಾ ॥ (ರ. ರ. 358)

ಭೃಂಗರಾಜಾದ್ಯ ಘೃತ ಗರುಗ ಸಹಮೂಲ, ಅಮೃತಬಳ್ಳಿ, ಆಡುಸೋಗೆ, ದಶಮೂಲಗಳು, ಎಲೆಹುರಿ, ಇವುಗಳ ರಸ(ಅಥವಾ ಕಷಾಯ)ದಲ್ಲಿ ಹಿಪ್ಪಲೀ ಕಲ್ಕದಿಂದ ಪಾಕಮಾಡಿದ ತುಪ್ಪವನ್ನು ಜೇನು ಕೂಡಿಸಿ ಸೇವಿಸಲು, ಸ್ವರಭೇದ ಮತ್ತು ಕೆಮ್ಮು ಪರಿಹಾರ.

ಷರಾ ೪ ಪಾಲು ಕಷಾಯಕ್ಕೆ ೧ ಪಾಲು ತುಪ್ಪ, ಕಾಲುಪಾಲು ಹಿಪ್ಪಲೀ ಚೂರ್ಣದ ಕಲ್ಕ ಎಂತ ವ್ಯಾಖ್ಯೆ ಕಾಣುತ್ತದೆ ಆದರೆ ಗರುಗದ ಸ್ವರಸವನ್ನೂ ಮಿಕ್ಕವುಗಳ ಕಷಾಯವನ್ನೂ ಉಪಯೋಗಿಸುವದು ಒಳ್ಳೇದು ಆಗ್ಗೆ ಸ್ವರಸ ಮತ್ತು ಕಷಾಯ ಸೇರಿ ತುಪ್ಪಕ್ಕೆ ೪ ಪಾಲು ಆದರೆ ಸಾಕು

32. ಪಥ್ಯಾ ಪಾಠಾ ಕಣಾ ಶುಂಠೀ ಸೈನ್ಧವಂ ಮರಿಚಂ ವಚಾ ।
ಶಿಗ್ರು(?ಗ್ರುಃ) ಪ್ರತಿಪಲಂ ಕಲ್ಕಂ ಘೃತಂ ದ್ವಾತ್ರಿಂಶತಂ ಪಲಮ್ ॥
ಪಥ್ಯಾದಿ ಘೃತ
ಘೃತಾಚ್ಚತುರ್ಗುಣಂ ಕ್ಷೀರಂ ಆಜಂ ಸರ್ಪಿರ್ವಿಪಾಚಯೇತ್ ।
ಘೃತಶೇಷಂ ಪಿಬೇನ್ನಿತ್ಯಂ ವಾಙ್ಮೇಧಾಸ್ಮೃತಿಬುದ್ಧಿಕೃತ್ ॥
(ರ. ರ. 358)

ಅಣಿಲೆಕಾಯಿ, ಪಾಡಾವಳಿಗಡ್ಡೆ, ಹಿಪ್ಪಲಿ, ಶುಂಠಿ, ಸೈಂಧವಲವಣ, ಕಾಳುಮೆಣಸು, ಬಜೆ, ನುಗ್ಗೆಬೇರು, ಇವುಗಳನ್ನು ಒಂದೊಂದು ಪಲ ಪ್ರಕಾರ ತೆಗೆದುಕೊಂಡು ಕುಟ್ಟಿ ಚೂರ್ಣ ಮಾಡಿ, ಅದಕ್ಕೆ ೩೨ ಪಲ ತುಪ್ಪವನ್ನೂ, ಮತ್ತು ಆ ತುಪ್ಪಕ್ಕೆ ನಾಲ್ಕು ಪಾಲು ಆಡಿನ ಹಾಲನ್ನು ಕೂಡಿಸಿ, ಪಾಕಮಾಡಿ ಶೋಧಿಸಿದ ತುಪ್ಪದ ಸೇವನದಿಂದ, ಮಾತು, ಜ್ಞಾನಶಕ್ತಿ, ನೆನಪು, ಮತ್ತು ಬುದ್ಧಿ ಅಭಿವೃದ್ಧಿಯಾಗುವವು.

33. ಅಶ್ವಗನ್ಧಾಜಮೋದಾ ಚ ಪಾಠಾ ತ್ರಿಕಟುಕಂ ತ್ರಿಕಮ್ ।
ಶತಪುಷ್ಪಂ ಬ್ರಹ್ಮಬೀಜಂ ಸೈನ್ಧವಂ ಚ ಸಮಂ ಸಮಮ್ ॥
ಅಶ್ವಗಂಧಾದಿ ಚೂರ್ಣ
ಏತದರ್ಧಂ ವಚಾ ಚೈವ ಚೂರ್ಣಿತಂ ಮಧುಸರ್ಪಿಷಾ ।
ಭಕ್ಷಯೇತ್ಕರ್ಷಮಾತ್ರನ್ತು ಜೀರ್ಣಾಗ್ನಿ(?ಗ್ನಿಃ) ಕ್ಷೀರಭೋಜನಮ್ ॥
ಸಹಸ್ರಗ್ರನ್ಥಧಾರೀ ಸ್ಯಾನ್ಮೃತೋ ವಾ ವಾಕ್ಪತಿರ್ಭವೇತ್ ॥
(ರ. ರ. 358)

ಶುದ್ಧ ಅಶ್ವಗಂಧಿ, ಅಜಮೋದ, ಪಾಡಾವಳಿಗಡ್ಡೆ, ತ್ರಿಕಟು, ತ್ರಿಫಲೆ, ಸಬ್ಬಸಿಗೆಬೀಜ, ಪಲಾಶ(ಮುತ್ತುಗ)ದ ಬೀಜ, ಸೈಂಧವಲವಣ, ಇವುಗಳನ್ನು ಸಮಾಂಶವಾಗಿ, ಮತ್ತು ಇವುಗಳ ಒಟ್ಟಿನ ತೂಕಕ್ಕೆ ಅರ್ಧಾಂಶ ಬಜೆಯನ್ನು, ಕೂಡಿಸಿ ಕುಟ್ಟಿ ವಸ್ತ್ರಗಾಲಿತ ಚೂರ್ಣಮಾಡಿ, ಆ ಚೂರ್ಣದಲ್ಲಿ ೧ ಕರ್ಷ ಪ್ರಕಾರ (ಭಿನ್ನಾಂಶ) ಜೇನು ಮತ್ತು ತುಪ್ಪಗಳಲ್ಲಿ ಕಲಸಿ ನೆಕ್ಕುವದು; ಜೀರ್ಣವಾಗಿ ಹಸಿವು ಉಂಟಾದ ಮೇಲೆ, ಹಾಲಿನಿಂದ ಊಟಮಾಡತಕ್ಕದ್ದು. ಈ ಯೋಗದಿಂದ ಸಹಸ್ರ ಗ್ರಂಥಗಳನ್ನು ನೆನಪಿನಲ್ಲಿಡಲಿಕ್ಕೆ ಶಕ್ತನಾಗುತ್ತಾನೆ, ಅಥವಾ ಮೃತನಾದರೆ ಬೃಹಸ್ಪತಿ ಆಚಾರ್ಯನಾಗುವನು.

ಷರಾ ಪಲಾಶದ ಬೀಜವನ್ನು ದನದ ಮಜ್ಜಿಗೆಯಲ್ಲಿ ಒಂದು ರಾತ್ರಿ ನೆನೆಯಿಟ್ಟು ಮಾರಣೆ ದಿನ ಅದರ ಸಿಪ್ಪೆ ತೆಗೆದುಬಿಟ್ಟು, ಬಿಸಿಲಿನಲ್ಲಿ ಒಣಗಿಸಿ ಉಪಯೋಗಿಸುವದು

34. ಬ್ರಾಹ್ಮೀ ವಚಾಭಯಾ ವಾಸಾ ಪಿಪ್ಪಲೀಮಧುಸಂಯುತಾ ।
ಅಸ್ಯಪ್ರಯೋಗಾತ್ಸಪ್ತಾಹಾತ್ಕಿನ್ನರೈಃ ಸಹ ಗೀಯತೇ ॥ (ಭಾ. ಪ್ರ. 381)

ಬ್ರಾಹ್ಮೀವಚಾದಿ ಚೂರ್ಣ

ಒಂದೆಲಗ, ಬಜೆ, ಅಣಿಲೆಕಾಯಿ, ಆಡುಸೋಗೆ, ಹಿಪ್ಪಲಿ, ಇವುಗಳ ಚೂರ್ಣವನ್ನು ಜೇನಿನಲ್ಲಿ ಕಲಸಿ ನೆಕ್ಕುತ್ತಾ ಬರಲು, ಒಂದು ವಾರದಲ್ಲಿ ಕಿನ್ನರರೊಂದಿಗೆ ಹಾಡುವ ಶಕ್ತಿ ಬರುವದು.

35. ಸಹರಿದ್ರಾ ವಚಾ ಕುಷ್ಠಂ ಪಿಪ್ಪಲೀ ವಿಶ್ವಭೇಷಜಮ್ ।
ಅಜಾಜೀ ಚಾಜಮೋದಾ ಚ ಯಷ್ಟೀಮಧುಕಸೈಂಧವಮ್ ॥
ಕಲ್ಯಾಣಕಾವಲೇಹ. ಏತಾನಿ ಸಮಭಾಗಾನಿ ಶ್ಲಕ್ಷ್ಣಚೂರ್ಣಾನಿ ಕಾರಯೇತ್ ।
ತಚ್ಚೂರ್ಣಂ ಸರ್ಪಿಷಾಲೋಢ್ಯ ಪ್ರತ್ಯಹಂ ಭಕ್ಷಯೇನ್ನರಃ ॥
ಏಕವಿಂಶತಿರಾತ್ರೇಣ ಭವೇತ್ ಶ್ರುತಿಧರೋ ನರಃ ।
ಮೇಘದುಂದುಭಿನಿರ್ಘೋಷೋ ಮತ್ತಕೋಕಿಲನಿಸ್ವನಃ ॥
ಜಡಗದ್ಗದಮೂಕತ್ವಂ ಲೇಹಃ ಕಲ್ಯಾಣಕೋ ಜಯೇತ್ ॥
(ರ. ರ. 358-9)

ಅರಸಿನ, ಬಜೆ, ಚಂಗಲಕೋಷ್ಠ, ಹಿಪ್ಪಲಿ, ಶುಂಠಿ, ಜೀರಿಗೆ, ಅಜಮೋದ, ಜ್ಯೇಷ್ಠಮಧು, ಸೈಂಧವಲವಣ, ಇವುಗಳನ್ನು ಸಮಾಂಶವಾಗಿ ತೆಗೆದುಕೊಂಡು ವಸ್ತ್ರಗಾಲಿತ ಚೂರ್ಣಮಾಡಿ, ಆ ಚೂರ್ಣವನ್ನು (ತಕ್ಕ ಪ್ರಮಾಣದಿಂದ) ತುಪ್ಪದಲ್ಲಿ ಕಲಸಿ, ಪ್ರತಿ ದಿನ ನೆಕ್ಕುತ್ತಾ ಬರಲು, ೨೧ ರಾತ್ರಿಗಳಲ್ಲಿ ವೇದಪಾಠಿಯಾಗುತ್ತಾನೆ; ಸ್ವರವು ಗುಡುಗಿನ ಮತ್ತು ಮದ್ದಳೆಯ ಹಾಗೆ ಗಂಭೀರ, ಮತ್ತು ಮದಗೊಂಡ ಕೋಕಿಲೆಯಂತೆ ಕೋಮಲ, ಆಗುವದು; ಮತ್ತು ಬಾಯಿ ಬಾರದ್ದು, ಗದ್ಗದ ಮಾತು, ಮತ್ತು ಜಾಡ್ಯ, ಈ ದೋಷಗಳನ್ನು ಈ ಕಲ್ಯಾಣಕ ಲೇಹವು ಜಯಿಸುವದು.

36. ಸಮೂಲಪತ್ರಮಾದಾಯ ಬ್ರಾಹ್ಮೀಂ ಪ್ರಕ್ಷಾಲ್ಯ ವಾರಿಣಾ ।
ಉದೂಖಲೇ ಕ್ಷೋದಯಿತ್ವಾ ರಸಂ ವಸ್ತ್ರೇಣ ಗಾಲಯೇತ್ ॥
ಸಾರಸ್ವತ ಘೃತ. ರಸೇ ಚತುರ್ಗುಣೇ ತಸ್ಮಿನ್ ಘೃತಪ್ರಸ್ಥಂ ವಿಪಾಚಯೇತ್ ।
ಔಷಧಾನಿ ತು ಪೇಷ್ಯಾಣಿ ತಾನೀಮಾನಿ ಪ್ರದಾಪಯೇತ್ ॥
ಹರಿದ್ರಾ ಮಾಲತೀ ಕುಷ್ಠಂ ತ್ರಿವೃತಾ ಸಹರೀತಕೀ ।
ಏತೇಷಾಂ ಪಲಿಕಾನ್ ಭಾಗಾನ್ ಶೇಷಾಣಿ ಕಾರ್ಷಿಕಾನಿ ಹ ॥
ಪಿಪ್ಪಲ್ಯಾ(?ಲ್ಯ)ಥ ವಿಡಂಗಾನಿ ಸೈನ್ಧವಂ ಶರ್ಕರಾ ವಚಾ ।
ಸರ್ವಮೇತತ್ಸಮಾಲೋಢ್ಯ ಶನೈರ್ಮೃದ್ವಗ್ನಿನಾ ಪಚೇತ್ ॥
ಏತತ್ಪ್ರಾಶಿತಮಾತ್ರೇಣ ವಾಗ್ವಿಶುದ್ಧಿಶ್ಚ ಜಾಯತೇ ।
ಸಪ್ತರಾತ್ರಪ್ರಯೋಗೇಣ ಕಿನ್ನರೈಃ ಸಹ ಗೀಯತೇ ॥
ಅರ್ಧಮಾಸಪ್ರಯೋಗೇಣ ಸೋಮರಾಜವಪುರ್ಭವೇತ್ ।
ಮಾಸಮೇಕಪ್ರಯೋಗೇಣ ಶ್ರುತಮಾತ್ರಸ್ತು ಧಾರಯೇತ್ ॥
ಹನ್ತ್ಯಷ್ಟಾದಶ ಕುಷ್ಠಾನಿ ಅರ್ಶಾಂಸಿ ವಿವಿಧಾನಿ ಚ ।
ಪಂಚ ಗುಲ್ಮಾನ್ ಪ್ರಮೇಹಾಂಶ್ಚ ಕಾಸಂ ಪಂಚವಿಧಂ ಜಯೇತ್ ॥
ವನ್ಧ್ಯಾನಾಂ ಚೈವ ನಾರೀಣಾಂ ನರಾಣಾಮಲ್ಪರೇತಸಾಮ್ ।
ಘೃತಂ ಸಾರಸ್ವತಂ ನಾಮ ಬಲವರ್ಣಾಗ್ನಿವರ್ಧನಮ್ ॥ (ರ. ರ. 359)

ಒಂದೆಲಗ(ತಿಮರೆ)ವನ್ನು ಎಲೆ ಮತ್ತು ಬೇರು ಸಮೇತವಾಗಿ ತೆಗೆದುಕೊಂಡು, ನೀರಿನಿಂದ ತೊಳೆದು, ಒರಳಲ್ಲಿ ಕುಟ್ಟಿ, ಹಿಂಡಿ ತೆಗೆದ ರಸವನ್ನು ವಸ್ತ್ರದಿಂದ ಶೋಧಿಸಿ, ಆ ರಸದ

೪ ಪ್ರಸ್ಥಕ್ಕೆ ೧ ಪ್ರಸ್ಥ ತುಪ್ಪವನ್ನು ಹೊಯಿದು, (ಕಲ್ಕವಾಗಿ) ಅರಸಿನ, ಜಾಜಿಸೊಪ್ಪು, ಚಂಗಲಕೋಷ್ಠ, ತಿಗಡೆ, ಅಣಿಲೆಕಾಯಿ, ಇವು ೧ ಪಲ ಪ್ರಕಾರ, ಹಿಪ್ಪಲಿ, ವಾಯುವಿಳಂಗ, ಸೈಂಧವಲವಣ, ಸಕ್ಕರೆ, ಬಜೆ, ಇವು ೧ ಕರ್ಷ ಪ್ರಕಾರ, ಈ ಹತ್ತು ಬಗೆಗಳ ಚೂರ್ಣವನ್ನು ಅದೇ ರಸದಲ್ಲಿ ಅರೆದು ಕಲಸಿ, ಸಣ್ಣ ಉರಿಯಿಂದ ಪಾಕಮಾಡುವದು. ಈ ಘೃತವನ್ನು ಸೇವಿಸಿದ ಮಾತ್ರದಿಂದ ಮಾತು ಶುದ್ಧವಾಗುತ್ತದೆ; ಏಳು ದಿನ ಸೇವಿಸಿದರೆ, ಕಿನ್ನರರಿಗೆ ಸರಿಯಾಗಿ ಗಾನಮಾಡಬಹುದಾಗುತ್ತದೆ; ಅರ್ಧ ತಿಂಗಳ ಸೇವನದಿಂದ ದೇಹವು ಚಂದ್ರನ ಹಾಗೆ ಆಗುವದು; ಒಂದು ತಿಂಗಳ ಕಾಲ ಸೇವಿಸುವದರಿಂದ ವಿದ್ಯೆಯು ಕೇಳಿದ ಮಾತ್ರಕ್ಕೆ ಜಿತಪಾರವಾಗುತ್ತದೆ; ಮತ್ತು ಹದಿನೆಂಟು ವಿಧವಾದ ಕುಷ್ಠ, ವಿವಿಧವಾದ ಅರ್ಶಸ್ಸು, ಐದು ವಿಧವಾದ ಗುಲ್ಮ ಪ್ರಮೇಹಗಳು, ಐದು ವಿಧವಾದ ಕೆಮ್ಮು ಸಹ ಪರಿಹಾರವಾಗುತ್ತವೆ. ಬಂಜೆಯರಾದ ಹೆಂಗಸರಿಗೂ, ಅಲ್ಪವೀರ್ಯವುಳ್ಳ ಗಂಡಸರಿಗೂ, ಈ ಸಾರಸ್ವತ ಎಂಬ ಘೃತವು ಬಲ-ವರ್ಣ-ಅಗ್ನಿಗಳನ್ನು ವೃದ್ಧಿಮಾಡುವಂಥಾದ್ದು.

ದೃಷ್ಟಫಲ ಚಿಕಿತ್ಸೆ

37. (1) ರೋಗಿಗೆ 48 ವರ್ಷ. ಸ್ವರಭೇದ ಮತ್ತು ಕೆಮ್ಮು, ಆರಂಭದಲ್ಲಿ ನೆಗಡಿ ಮತ್ತು ಮೈಕಾವು ಇತ್ತಂತೆ.—ಕೂಷ್ಮಾಂಡ ರಸಾಯನವನ್ನು ತೊ. |=ರಂತೆ ದಿನಕ್ಕೆ ೩ ಸರ್ತಿ ಪ್ರಕಾರ ಸೇವಿಸುತ್ತಾ ಬಂದದರಿಂದ ಕ್ಷೇಮವಾಯಿತು

(2) ರೋಗಿಗೆ 45 ವರ್ಷ. ಕೆಮ್ಮು ಮತ್ತು ಸ್ವರಭೇದ, ಮಲಪ್ರವೃತ್ತಿ ಸರಿ ಇಲ್ಲ.—ಆಡುಸೋಗೆ ಎಲೆ ರಸ ೨ ಡ್ರಾಂ, ಶುಂಠಿರಸ || ಡ್ರಾಂ, ಜೇನು || ಡ್ರಾಂ, ಇದರಲ್ಲಿ ಕಸ್ತೂರ್ಯಾದಿ ೧ರಂತೆ ದಿನಕ್ಕೆ ೨ ಸರ್ತಿ ಪ್ರಕಾರ ೬ ಸರ್ತಿ; ಕುಡಿಯುವ ಹಾಲಿಗೆ, ಕುಡ್ತೆಗೆ ಕಾಲು ತೊಲೆ ಪ್ರಕಾರ, ಹಿಪ್ಪಲೀಮೂಲವನ್ನು ಹಾಕಿ ಕಾಯಿಸಿಕೊಳ್ಳುವದು.

(3) ರೋಗಿಗೆ 55 ವರ್ಷ. ಕೆಮ್ಮು, ಸ್ವರಭಂಗ, ಮೈ ಬೆವರುತ್ತಿರುವದು, ಮಲಪ್ರವೃತ್ತಿ ಸರಿಯಿಲ್ಲ, ರಾತ್ರಿಕಾಲ ಉಬ್ಬಸ; ಪಿತ್ತಕಫನಾಡಿಗಳು ಸ್ಥಾನಚ್ಯುತ, ಪಿತ್ತದಲ್ಲಿ ದೋಷ ಹೆಚ್ಚು.—ಅಮೃತಬಳ್ಳಿ ತೊ. ||, ಬಿಲ್ವಪತ್ರೆ ಬೇರು ತೊ. ||, ಬಳ್ಳಿತುರಚಿ ಬೇರು ತೊ. ||, ಹಿಪ್ಪಲಿ ತೊ. |, ಇವುಗಳ ಕಷಾಯದ ಅರ್ಧದಲ್ಲಿ ಜ್ವರಭೈರವ ೧ರಂತೆ, ಕಲ್ಲುಸಕ್ಕರೆ ಪುಡಿ ಮತ್ತು ಜೇನು ಕೂಡಿಸಿ, ದಿನಕ್ಕೆ ೨ ಸರ್ತಿ ಪ್ರಕಾರ ೨ ದಿನ. ಅನಂತರ ಅದೇ ಪ್ರಕಾರ ವಾತಾರಿ ||, ಅತಿ. ೧ರಂತೆ ೪ ದಿನ.

(4) ರೋಗಿಗೆ 43 ವರ್ಷ. ದೀರ್ಘಕಾಲದ ಕೆಮ್ಮು, ಸ್ವರಭೇದ, ಅಶಕ್ತಿ, ಅಗ್ನಿಮಾಂದ್ಯ, ಸೊಂಟದಲ್ಲಿ ಸಿಡಿತ, ನಿದ್ದೆ ಕಡಿಮೆ, ಉಂಡರೆ ಉಬ್ಬಸ, ಕಫ ಅಂಟಾಗಿರುವದು; ನಾಡಿಗಳೊಳಗೆ ವಾತ ಅಸ್ಥಿರ, ಪಿತ್ತಕಫಗಳು ಸ್ಥಾನಚ್ಯುತ, ಮೂರೂ ಸೂಕ್ಷ್ಮ—ಕಲ್ಲಂಗಡಲೆ ಬೇರು, ಆನೆಕಲ್ಲಂಗಡಲೆ ಬೇರು, ಬಿಲ್ವಪತ್ರೆ ಬೇರು, ಕಿರಿಗುಳ್ಳದ ಬೇರು, ದ್ರಾಕ್ಷೆ, ಇವು || ತೊಲೆ ಪ್ರಕಾರ; ಹಿಪ್ಪಲಿ, ಶುಂಠಿ, ಭದ್ರಮುಷ್ಟಿ, ಆಡುಸೋಗೆ ಬೇರು ಸಹ ತೊ. |ರ ಪ್ರಕಾರ; ಇವುಗಳ ಕಷಾಯದ ಅರ್ಧದಲ್ಲಿ ಕಸ್ತೂರ್ಯಾದಿ ೧, ಆನಂದಭೈರವಿ ||ರಂತೆ ದಿನಕ್ಕೆ ೨ ಸರ್ತಿ ಪ್ರಕಾರ ೮ ದಿನ, ಜ್ಯೇಷ್ಠಮಧುವಿನ ಪುಡಿ ಮತ್ತು ಜೇನು ಕೂಡಿಸಿ; ಅನಂತರ ಅದೇ ಕಷಾಯದಲ್ಲಿ ವಾತಗಜಾಂಕುಶ ೧ರಂತೆ, ಕಲ್ಲುಸಕ್ಕರೆ ಪುಡಿ ಮತ್ತು ಜೇನು ಕೂಡಿಸಿ.

ಶುದ್ಧ ವತ್ಸನಾಭಿ, ಶುದ್ಧ ಇಂಗಳೀಕ, ಟಂಕಣಕಾರದ ಅರಳು, ಹಿಪ್ಪಲಿ, ಬಿಳೀ ಕಾಳು ಮೆಣಸು, ಶುಂಠಿ, ಲವಂಗ, ಈ ಏಳು ಬಗೆಗಳನ್ನು ಸಮಾಂಶವಾಗಿ ತೆಗೆದು ಕೊಂಡು, ಇಂಗಳೀಕ ಮತ್ತು ಟಂಕಣ ಬಿಟ್ಟು ಮಿಕ್ಕವುಗಳನ್ನು ಕುಟ್ಟಿ ವಸ್ತ್ರಗಾಲಿತ ಚೂರ್ಣಮಾಡಿ, ೭ ಬಗೆಗಳನ್ನೂ ಒಟ್ಟಾಗಿ ಲಿಂಬೇಹಣ್ಣಿನ ರಸದಲ್ಲಿ ನಾಲ್ಕು ಜಾಮ ಅರೆದು, ಗುಲುಗುಂಜೀ ಪ್ರಮಾಣದ ಮಾತ್ರೆಮಾಡಿ, ನೆಳಲಲ್ಲಿ ಒಣಗಿಸಿಟ್ಟುಕೊಂಡು, ೧-೨ ಮಾತ್ರೆಗಳನ್ನು ಶುಂಠೀ ರಸ ಮುಂತಾದ ಆಯಾ ದೋಷಕ್ಕೆ ತಕ್ಕವಾದ ರಸಗಳಲ್ಲಿ ಅಥವಾ ಕಷಾಯಗಳಲ್ಲಿ ಕೊಟ್ಟಲ್ಲಿ, ಜ್ವರ, ಅಜೀರ್ತಿ, ಅತಿಸಾರ, ಕೆಮ್ಮು, ಶೂಲೆ, ಪಿತ್ತವಿಕಾರ, ಮುಂತಾದ ಅನೇಕ ವ್ಯಾಧಿಗಳು ಪರಿಹಾರವಾಗುವವು. ಲವಂಗದ ಹೂವಿನ ತುದಿಯಲ್ಲಿರುವ ಕುಸುಮವನ್ನು ತೆಗೆದುಬಿಟ್ಟು ಮಿಕ್ಕ ಭಾಗವನ್ನುಪಯೋಗಿಸತಕ್ಕದ್ದು. ಈ ಮಾತ್ರೆಯನ್ನು ಎಚ್ಚರವಿಲ್ಲದವರಿಗೆ ಅಂಜನವಾಗಿ ವೀಳ್ಯದೆಲೆ ರಸ ಮುಂತಾದ್ದರಲ್ಲಿ ಉಪಯೋಗಿಸಬಹುದು.

ಆನಂದಭೈರವಿ ಮಾತ್ರೆ

(5) ರೋಗಿಗೆ 24 ವರ್ಷ. ಸ್ವರಭಂಗ, ಗಂಟಲುನೋವು; ಪಿತ್ತನಾಡಿ ಸ್ಥಾನಚ್ಯುತ, ಕಫವೂ ಸ್ವಲ್ಪ ಕಡಿಮೆ ಮಟ್ಟಿಗೆ ಹಾಗೆಯೇ.—ಬಿಲ್ವಾದಿ ಲೇಹ ತೊಲೆ ||ರಂತೆ ದಿನಕ್ಕೆ ೨ ಸರ್ತಿ ಸೇವಿಸಿ, ಕಾಯಿಸಿದ ಹಾಲು || ಕುಡ್ತೆ ಸೇವಿಸಿದರಿಂದ ಕೆಲವು ದಿನಗಳಲ್ಲಿ ಸೌಖ್ಯ.

38. ಅಗಿಲುಗಂಧ, ಅಣಿಲೆಕಾಯಿ, ಅರತೆ (ರಾಸ್ನೆ), ಆಡುಸೋಗೆ, ಏಲಕ್ಕಿ, ಒಂದೆಲಗ (ತಿಮರೆ), ಕರಿಬೇವಿನ ಸೊಪ್ಪು, ಕಾಗೆಹಣ್ಣಿನ (ಗಣಿಕೆ) ಗಿಡ, ಕಾಡು ಮೆಣಸಿನ ಬೇರು, ಕಾಳುಮೆಣಸು, ಕಿರಿಗುಳ್ಳದ ಬೇರು, ಕೋಲಾಂಜನ (ದೊಡ್ಡ ದುಂಪರಾಸ್ನೆ), ಗರುಗ, ಗುಳ್ಳದ ಬೇರು, ಜಾಯಿಕಾಯಿ, ಜೇನು, ಜ್ಯೇಷ್ಠಮಧು, ತಾರೆ(ಶಾಂತಿ)ಕಾಯಿ, ದ್ರಾಕ್ಷೆ, ನಿರ್ವಿಷ (ಗಂಟುಭಾರಂಗಿ), ನೆಲಕುಂಬಳ ಗಡ್ಡೆ, ಲವಂಗ, ಲವಂಗಪಟ್ಟೆ, ಲವಂಗಪತ್ರೆ (ಅಡವಿ ದಾಲ್ಚೀನಿ ಎಲೆ), ಶುಂಠಿ, ಹಿಪ್ಪಲಿ ಮತ್ತು ಹಿಪ್ಪಲಿಮೂಲ.

ಪೃಥಗ್ರೋಗೋಕ್ತೌಷಧಗಳು

39. ಯವೆಗೋದಿ, ಕೆಂಪು ಅಕ್ಕಿ, ಕಾಗೆಹಣ್ಣಿನ ಗಿಡದ (ಗಣಿಕೆ) ಸೊಪ್ಪು, ಜೀವಂತಿ, ಎಳೇ ಮೂಲಂಗಿ, ದ್ರಾಕ್ಷೆ, ಮಾದಳಹಣ್ಣು, ಬೆಳ್ಳುಳ್ಳಿ, ಹಸಿ ಶುಂಠಿ, ಉಪ್ಪು, ವೀಳ್ಯದೆಲೆ, ಕಾಳುಮೆಣಸು ಮತ್ತು ತುಪ್ಪ.

ಪಥ್ಯವರ್ಗ

40. ಎಳೇ ಬೇಲದಕಾಯಿ, ಜೊಗರಾದ ವಸ್ತುಗಳು, ವಮನ, ಹಗಲು ನಿದ್ರೆ ಮತ್ತು ಹರಟುವಿಕೆ.

ಅಪಥ್ಯ

ಪರಾ "ಶ್ವಾಸಕಾಸಹಿಕ್ಕಾವತ್ ಸ್ವರಸಾದೇ ಪಥ್ಯಾಪಥ್ಯೇ" (ವೈ ಸಾ. ಸಂ 178) ಅಂದರೆ ಉಬ್ಬಸ, ಕೆಮ್ಮು, ಮತ್ತು ಬಿಕ್ಕಟ್ಟು ಎಂಬ ರೋಗಗಳಿಗೆ ಹೇಳಲ್ಪಟ್ಟ ಪಥ್ಯಾಪಥ್ಯಗಳೇ 'ಸ್ವರಭೇದ' ರೋಗದಲ್ಲಿಯೂ ಪಥ್ಯಾಪಥ್ಯಗಳಾಗಿರುತ್ತವೆ.

41. ಕಿರುನಾಲಿಗೆಯ ಅಡಿಯಲ್ಲಿ ಶ್ವಾಸನಾಳದ ದ್ವಾರ(glottis)ಕ್ಕೆ ಆವರಣವಾಗಿರುವ ಮೃದ್ವಸ್ಥಿ (cartilage)ಗಳ ಒಳಮೈಯ ಕಫಾವರಣವನ್ನೇ ತಿಪ್ಪಿ (ತಿರಿಚಿ) ರಚಿಸಲ್ಪಟ್ಟ ಹಾಗೆ ತೋರುವ, ಉರುಟು ಮತ್ತು ದಪ್ಪವಾದ, ಎರಡು ಹುರಿಗಳು ಇವೆ. ಇವುಗಳಿಗೆ ಸ್ವರವಾಹಿ ತಂತಿಗಳು (vocal

ಪ್ರಕರಣಾಂತ ಟಿಪ್ಪಣೀ

cords) ಎಂತ ಹೆಸರು. ಮಾತಾಡದೆ ಸುಮ್ಮಗಿರುವಾಗ್ಗೆ ಈ ತಂತಿಗಳ ಮುಂದಿನ ತುದಿಗಳು ಒಂದಕ್ಕೊಂದು ಸಮೀಪವಾಗಿಯೂ ಹಿಂದಿನ ತುದಿಗಳು ದೂರವಾಗಿಯೂ ನಾಳದ ಮಧ್ಯರೇಖೆಯ ಇತ್ತಟ್ಟು ಇರುವದರಿಂದ, ಈ ತಂತಿಗಳ ಆಕಾರವನ್ನು ಇಂಗ್ಲಿಷು ಬರಹದ 'ವಿ' (v) ಅಕ್ಷರಕ್ಕೆ ಹೋಲಿಸುತ್ತಾರೆ. ನಿಃಶ್ವಾಸದಲ್ಲಿ ಈ ತಂತಿಗಳ ಹಿಂದಿನ ತುದಿಗಳು ಸ್ವಲ್ಪ ಸಮೀಪಕ್ಕೆ ಉಚ್ಛ್ವಾಸದಲ್ಲಿ ಸ್ವಲ್ಪ ಅಗಲಕ್ಕೆ ಚಲಿಸುತ್ತವೆ. ಸ್ವರವನ್ನು ಹೊರಡಿಸುವಾಗ ಆ ಹಿಂದಿನ ತುದಿಗಳು ಬಹಳವಾಗಿ ಹತ್ತರಿಸಿ, ತಂತಿಗಳ ಮಧ್ಯದ ಎಡೆಯು ಒಂದು ನೆಟ್ಟಗಿನ ರೇಖೆಯ ಆಕಾರಕ್ಕೆ ಬರುತ್ತದೆ. ಈ ತಂತಿಗಳನ್ನು ಬೇಕಾದಷ್ಟಕ್ಕೆ ಚಾಚಿ ಕಾಯಿಸಲಿಕ್ಕೂ, ಸಡಿಲುಬಿಡುವದಕ್ಕೂ, ಹಿಂದಿನ ತುದಿಗಳನ್ನು ಪರಸ್ಪರ ಸಮೀಪಕ್ಕೆ ಅಥವಾ ದೂರಕ್ಕೆ ಮಾಡಿ ಮಧ್ಯದ ಎಡೆಯನ್ನು ಕಡಿಮೆ ಅಥವಾ ಹೆಚ್ಚು ಮಾಡುವದಕ್ಕೂ, ಸಮೀಪದ ಸೂಕ್ಷ್ಮವಾದ ಮಾಂಸಖಂಡಗಳ ಮತ್ತು ಮೃದ್ವಸ್ಥಿಗಳ ಸಹಾಯದಿಂದ, ಸಾಧ್ಯವಾಗುತ್ತದೆ. ಆದ್ದರಿಂದ ಪಿಟಲಿನ ತಂತಿಗಳಿಂದ ತಾರಕ, ಪಂಚಮ, ಮಂದರಾದಿ ಸ್ವರಭೇದಗಳನ್ನು ಹೊರಡಿಸುವಂತೆ ಜನರು ತಮ್ಮ ಕಂಠದಿಂದ ನಾನಾ ವಿಧವಾದ ಸ್ವರಗಳನ್ನು ಹೊರಡಿಸುವದಕ್ಕೆ ಶಕ್ತರಾಗುತ್ತಾರೆ. ಆ ಸ್ವರಗಳಲ್ಲಿ ನಾಲಿಗೆ, ತುಟಿಗಳು, ಬಾಯಿಯ ಹಿಂದಿನ ಭಾಗ, ತಾಲು, ಹಲ್ಲುಗಳು, ಮುಂತಾದವುಗಳ ಸಹಾಯದಿಂದ, ಭೇದಗಳನ್ನು ಕಲ್ಪಿಸಿ, ನಾವು ಮಾತಾಡುವದಾಗಿರುತ್ತದೆ. ಕಂಠದಿಂದ ಗಾಳಿಯನ್ನು ಬಲವಂತವಾಗಿ ಅಥವಾ ಲಘುವಾಗಿ ಮತ್ತು ಹೆಚ್ಚು ಅಥವಾ ಕಡಿಮೆ ಪ್ರಮಾಣದಲ್ಲಿ ಹೊರಗೆ ಬಿಡುವದಕ್ಕೂ, ಸ್ವರವಾಹಿ ತಂತಿಗಳ ಮತ್ತು ಅವುಗಳಿಗೆ ಸಹಕಾರಿಯಾದ ಮೃದ್ವಸ್ಥಿ, ಮಾಂಸಖಂಡಗಳು ಮುಂತಾದವುಗಳ ವ್ಯಾಪಾರಗಳು ಕ್ರಮದಿಂದ ನಡೆಯುವದಕ್ಕೂ ನರಮಂಡಲದ (ವಾತದ) ಆರೋಗ್ಯವು ಮುಖ್ಯವಾದದ್ದು

ಗತಿಯು ವಾಯುವಿನ ಆತ್ಮರೂಪಗಳೊಳಗೆ ಒಂದಾಗಿರುತ್ತದೆ (1ನೇ ಭಾಗದ V-10 ನೋಡಿ); ವಾಯುವಿನ ಎರಡು ಗುಣಗಳಲ್ಲಿ ಶಬ್ದ ಒಂದು, ಮತ್ತು ಮಾತು, ಗಾನಾದಿ ವಿಶೇಷಗಳು ಪ್ರವರ್ತಿಸುವದು ಉದಾನವಾಯುವಿನಿಂದ (1ನೇ ಭಾಗದ V-6 ನೋಡಿ), ತಲೆಗೆ ಪೆಟ್ಟು ಬೀಳುವದರಿಂದ ಮೂಕತ್ವ, ಗದ್ಗದತ್ವ ಮತ್ತು ಸ್ವರಹಾನಿ ಉಂಟಾಗುತ್ತವೆ (1ನೇ ಭಾಗದ II-101 ನೋಡಿ), ಹೃದಯದಿಂದ ಹೊರಡುವ ಊರ್ಧ್ವಗ ಧಮನಿಗಳಿಂದ ಶಬ್ದ, ನಗೆ ಮತ್ತು ಮಾತು ಉಂಟಾಗುತ್ತವ (1ನೇ ಭಾಗದ II-7 ನೋಡಿ), ಮಿನ್ಮಿನತ್ವ, ಗದ್ಗದ ಮತ್ತು ಮೂಕತ್ವ 80 ವಾತಗಳೊಳಗೆ ಸೇರಿದವು (1ನೇ ಭಾಗದ VII-88 ನೋಡಿ); ರಾಜಯಕ್ಷ್ಮದಲ್ಲಿ ಸ್ವರಭೇದ ಉಂಟಾಗುವದು ವಾತದೋಷದಿಂದ; ಪ್ರತಿಶ್ಯಾಯದಲ್ಲಿ ಸ್ವರೋಪಘಾತ ಉಂಟಾಗುವದು ವಾತದಿಂದ; ಇಂಥಾ ಅನೇಕ ಆಯುರ್ವೇದದ ವಚನಗಳು ಸ್ವರಕ್ಕೂ, ಮಾತಿಗೂ ನರಮಂಡಲದ ಆರೋಗ್ಯಸ್ಥಿತಿಯು ಮುಖ್ಯವಾದದ್ದೆಂಬ ತತ್ವವನ್ನು ಪುಷ್ಟೀಕರಿಸುತ್ತವೆ.

ಕ್ಷಯದಲ್ಲಿ ಹೇಗೋ ಹಾಗೆಯೇ ಮೇದೋರೋಗದಲ್ಲಿಯೂ ನರಮಂಡಲದ ದುರ್ಬಲತೆ ಉಂಟಾಗುತ್ತದೆ; ಮತ್ತು ಪಿತ್ತಕಫಗಳ ದೆಸೆಯಿಂದ ವಾಯುವಿನ ಗತಿಗೆ ಭಂಗಬರುತ್ತದೆ. ಆದ್ದರಿಂದ ಸುಶ್ರುತನ ಸ್ವರಭಂಗರೋಗದ ವಿಭಜನವೇ ಸಮರ್ಪಕವಾದ್ದು. ಅದನ್ನೇ ವಾಗ್ಭಟಾದಿಗಳು ಅನುಸರಿಸಿದ್ದಾರೆ. ಚರಕನು ರಾಜಯಕ್ಷ್ಮದ ಚಿಕಿತ್ಸೆಯಲ್ಲಿ ಕೊಟ್ಟ ಸ್ವರಭೇದದ

ವಿಭಾಗಗಳಲ್ಲಿ ಸಾನ್ನಿಪಾತಿಕ ಕಾಣದಿದ್ದರೂ, ತ್ರಿಮವಿರ್ಾಯ ಚಿಕಿತ್ಸಿತದಲ್ಲಿ ಸ್ವರಭೇದಕ್ಕೆ ಸಂಕ್ಷೇಪವಾಗಿ ಚಿಕಿತ್ಸೆ ಬರೆಯುವ ಸಂದರ್ಭದಲ್ಲಿ ಸಾನ್ನಿಪಾತಿಕ ಸ್ವರಭೇದವನ್ನು ಎತ್ತಿಕೊಂಡಿದ್ದಾನೆ. ಚರಕನ ರಕ್ತಜ ಸ್ವರಭೇದವು ಸುಶ್ರುತನ ಪೈತ್ತಿಕದಲ್ಲಿ, ಪ್ರತಿಶ್ಯಾಯಜ ಮತ್ತು ಕಾಸಜ ಎಂಬವು ಸುಶ್ರುತನ ವಾತಾದಿದೋಷಜ ಸ್ವರಭೇದಗಳಲ್ಲಿ, ಅಡಗಿವೆ ಎಂತ ತಿಳಿಯಬಹುದು. ರಾಜಯಕ್ಷ್ಮದಲ್ಲಿ ಪ್ರತಿಶ್ಯಾಯ ವಾಸಿಯಾದ ಮೇಲೆಯೂ ಸ್ವರಭೇದವಿರುವದುಂಟಾದ್ದರಿಂದ, ಕ್ಷಯಜ ಸ್ವರಭಂಗ ಪ್ರತ್ಯೇಕ ಉಂಟೆಂಬ ಸು.ನ ಮತವೇ ಸರಿ ಕಾಣುತ್ತದೆ.

ಯಾವ ಕಾರಣದಿಂದ ಉಂಟಾದ ಸ್ವರಭೇದವಾದಾಗ್ಯೂ, ಕಂಠದ ಊರ್ಧ್ವಭಾಗದಲ್ಲಿರುವ ಭಾಷಣಯಂತ್ರದಲ್ಲಿ ದೋಷವುಂಟಾಗಿ ಅದು ಸಂಭವಿಸುವದೆಂತಲೂ, ಅದಕ್ಕೆ ಉಪಚಾರಮಾಡುವಲ್ಲಿ, ಪಿತ್ತಕಫಗಳ ಬಾಧೆಯಿದ್ದಲ್ಲಿ ಅದನ್ನು ಪರಿಹರಿಸಿಕೊಳ್ಳುವದಲ್ಲದೆ, ನರಮಂಡಲದ ಬಲವನ್ನು ವೃದ್ಧಿಮಾಡುವದಕ್ಕೂ, ವಾತದ ಗತಿಯನ್ನು ಸರಿಪಡಿಸುವದಕ್ಕೂ ಬೇಕಾದ ಪ್ರಯೋಗಗಳನ್ನು ಉಪಯೋಗಿಸುವದು ಅಗತ್ಯ ಎಂತಲೂ ವೈದ್ಯರು ತಿಳಿಯಬೇಕು.

# ಅಧ್ಯಾಯ X.

## ಬಾಯಾರಿಕೆ (ತೃಷ್ಣಾ, ತೃಷಾ, ಪಿಪಾಸಾ), Thirst.

ತೃಷ್ಣೆಯ ಸಾಮಾನ್ಯ ನಿದಾನ ಮತ್ತು ಸಂಪ್ರಾಪ್ತಿ

1. ಕ್ಷೋಭಾದ್ಭಯಾಚ್ಛ್ರಮಾದಪಿ ಶೋಕಾತ್ಕ್ರೋಧಾದ್ವಿಲಂಘನಾನ್ಮದ್ಯಾತ್ |
ಕ್ಷಾರಾಮ್ಲಲವಣಕಟುಕೋಷ್ಣರೂಕ್ಷಶುಷ್ಕಾನ್ನಸೇವಾಭಿಃ ||
ಧಾತುಕ್ಷಯಗದಕರ್ಷಣವಮನಾದ್ಯತಿಯೋಗಸೂರ್ಯಸನ್ತಾಪೈಃ |
ಪಿತ್ತಾನಿಲೌ ಪ್ರವೃದ್ಧೌ ಸೌಮ್ಯಾನ್ ಧಾತೂಂಶ್ಚ ಶೋಷಯತಃ ||
ರಸವಾಹಿನೀಶ್ಚ ನಾಡೀರ್ಜಿಹ್ವಾಮೂಲಗಲತಾಲುಕ್ಲೋಮ್ನಃ |
ಸಂಶೋಷ್ಯ ನೃಣಾಂ ದೇಹೇ ಕುರುತಸ್ತೃಷ್ಣಾಂ ಮಹಾಬಲಾವೇತೌ ||
ಪೀತಂ ಪೀತಂ ಹಿ ಜಲಂ ಶೋಷಯತಸ್ತಮತೋ ನ ಯಾತಿ ಶಮಮ್ |
ಘೋರವ್ಯಾಧಿಕೃಶಾನಾಂ ಪ್ರಭವತ್ಯುಪಸರ್ಗಭೂತಾ ಸಾ ||

(ಚ. 718)

ಕ್ಷೋಭೆ (ಕಳವಳ), ಭಯ, ಶ್ರಮ, ಶೋಕ, ಸಿಟ್ಟು, ಉಪವಾಸ, ಮದ್ಯಪಾನ, ಕ್ಷಾರ-ಹುಳಿ-ಉಪ್ಪು-ಕಾರ-ಉಷ್ಣ-ರೂಕ್ಷ-ಒಣಗಲು ಆಹಾರಗಳ ಸೇವನ, ಧಾತುಕ್ಷಯ, ರೋಗದಿಂದ ಸಂಭವಿಸಿದ ಕ್ಷೀಣತೆ, ವಮನ ಮುಂತಾದವುಗಳ ಅತಿಯಾದ ಉಪಯೋಗ, ಸೂರ್ಯನ ಸಂತಾಪ, ಇವುಗಳ ದೆಸೆಯಿಂದ ಪಿತ್ತವಾಯುಗಳು ಅತಿಯಾಗಿ ವೃದ್ಧಿಗೊಂಡು, ಸೋಮಗುಣವೇ ಅಧಿಕವಾದ ಧಾತುಗಳನ್ನು ಒಣಗಿಸಿ, ನಾಲಿಗೆಯ ಬುಡ, ಗಂಟಲು, ತಾಲು ಮತ್ತು ಕ್ಲೋಮಗಳಿಗೆ ರಸವನ್ನು ಸಾಗಿಸುವ ನಾಡಿಗಳನ್ನು ಬಹಳವಾಗಿ ಒಣಗಿಸಿ, ಮನುಷ್ಯನ ದೇಹದಲ್ಲಿ ಬಾಯಾರಿಕೆಯನ್ನು ಉಂಟುಮಾಡುತ್ತವೆ. ಆಗ್ಗೆ ಮಹಾ ಬಲವಂತವಾದ ಆ ಪಿತ್ತವಾಯುಗಳು ಕುಡಿದ ಕುಡಿದ ನೀರನ್ನು ಆರಿಸಿಬಿಡುವದರಿಂದ ಬಾಯಾರಿಕೆಯು ಶಾಂತವಾಗುವದಿಲ್ಲ. ಕಠಿಣವಾದ ವ್ಯಾಧಿಗಳ ದೆಸೆಯಿಂದ ಕೃಶವಾದವರಲ್ಲಿ ಅದು ಉಪಸರ್ಗವಾಗಿ ಉತ್ಪನ್ನವಾಗುತ್ತದೆ.

ತೃಷ್ಣೆಯ ವಿಧಗಳು

2. ತಿಸ್ರಃ ಸ್ಮೃತಾಸ್ತಾಃ ಕ್ಷತಜಾ ಚತುರ್ಥೀ
ಕ್ಷಯಾತ್ತಥಾನ್ಯಾಮಸಮುದ್ಭವಾ ಚ |
ಸ್ಯಾತ್ಸಪ್ತಮೀ ಭಕ್ತನಿಮಿತ್ತಜಾ ತು
ಲಿಂಗಾನಿ ತಾಸಾಂ ಶೃಣು ಚೌಷಧಾನಿ || (ಸು. 841)

ವಾತ-ಪಿತ್ತ-ಕಫಗಳಿಂದ ತೃಷ್ಣೆಗಳು ಮೂರು, ೪ನೇದು ಕ್ಷತಜ, ೫ನೇದು ಕ್ಷಯದಿಂದ ಹುಟ್ಟಿದ್ದು, ೬ನೇದು ಆಮದಿಂದ ಉತ್ಪನ್ನವಾದದ್ದು, ೭ನೇದು ಊಟದ ನಿಮಿತ್ತವಾದದ್ದು, ಹೀಗ ಬಾಯಾರಿಕೆ ಏಳು ವಿಧ. ಅವುಗಳ ಲಕ್ಷಣಗಳು ಮತ್ತು ಔಷಧಗಳು ಹೇಳಲ್ಪಡುತ್ತವೆ.

ಪರಾ ವಾತದಿಂದ, ಪಿತ್ತದಿಂದ, ಆಮದಿಂದ, ಕ್ಷಯದಿಂದ ಮತ್ತು ಉಪಸರ್ಗಜ (ಬೇರೆ ರೋಗಗಳನ್ನನುಸರಿಸಿ ಹುಟ್ಟುವಂಥಾದ್ದು), ಹೀಗೆ ತೃಷ್ಣೆಯು ಐದು ವಿಧ ಎಂತ ಚ (ಪು 718) ಬಾಯಾರಿಕೆ ಉಂಟಾಗುವದಕ್ಕೆ ದೇಹದಲ್ಲಿಯ ರಸಧಾತುವು ಅತಿಯಾಗಿ ಕಾದಿರಬೇಕು ಅಥವಾ ಆರಿರಬೇಕು ಅದು ಕಾಯುವದಕ್ಕೆ ಪಿತ್ತದ ಬಿಸಿಯು ಕಾರಣ ಮತು ಆರುವದಕ್ಕೆ ಪಿತ್ತದ ಸಹಾಯವುಳ್ಳ ವಾತ ಹೇತು ಆದ್ದರಿಂದ ಪಿತ್ತ ಅಥವಾ ವಾತದ ವಿನಾ ಬಾಯಾರಿಕೆಯುಂಟಾಗುವದಿಲ್ಲ. ಕಫವನ್ನನುಸರಿಸಿ ಬಂದ ಬಾಯಾರಿಕೆಯಲ್ಲಿ ಕಫವನ್ನೂ, ಭಕ್ತನಿಮಿತ್ತವಾದ್ದರಲ್ಲಿ ಜೀರ್ಣವಾಗದೆ

ಸಿಂತ ಆಹಾರವನ್ನೂ ವಾಂತಿಮಾಡಿಸುವದೊಂದು ವಿಶೇಷವಲ್ಲದೆ, ಮಿಕ್ಕ ಚಿಕಿತ್ಸೆ ವಾತ-ಪಿತ್ತ-ಆಮಜ ಬಾಯಾರಿಕೆಗಳಿಗೆ ಹೇಳಲ್ಪಟ್ಟ ಪ್ರಕಾರವೇ. ಕ್ಷತಜವು ಕ್ಷಯಜದಂತೆ ಉಪಚಾರಾರ್ಹವಾದ್ದು. ಆದ್ದರಿಂದ ಕಫಜ, ಭಕ್ತನಿಮಿತ್ತಜ ಮತ್ತು ಕ್ಷತಜ ಬಾಯಾರಿಕೆಗಳನ್ನು ಪ್ರತ್ಯೇಕ ವಿಧಗಳನ್ನಾಗಿ ಎಣಿಸುವದು ಅಗತ್ಯವಲ್ಲ ಎಂಬದು ಚ.ನ ಮತ. ಉಪಸರ್ಗಜ ತೃಷ್ಣೆಯು ಯಾವ ರೋಗದ ಅವಸ್ಥೆಯಾಗಿ ಸಂಭವಿಸಿಯದೋ ಆದರ ಚಿಕಿತ್ಸೆಯಲ್ಲಿ ಬೇಕಾದ ಭೇದಮಾಡಿ ಪರಿಹಾರ ವಾಗತಕ್ಕದ್ದಾದ್ದರಿಂದ ಆ ಬಾಯಾರಿಕೆಯನ್ನು ಒಂದು ಪ್ರತ್ಯೇಕ ವಿಧವನ್ನಾಗಿ ತಿಳಿಯುವದು ಅಗತ್ಯವಲ್ಲ ಎಂಬದು ಸು ನ ಮತವಾಗಿರಬೇಕು. ವಾತಾದಿ ದೋಷಗಳಿಂದ ಮೂರು, ಸನ್ನಿಪಾತದಿಂದ ಒಂದು, ರಸಕ್ಷಯದಿಂದ ಒಂದು, ಉಪಸರ್ಗದಿಂದ ಒಂದು, ಹೀಗೆ ತೃಷ್ಣೆಯು ಆರು ವಿಧ ಎಂತ ವಾ. (ಪು. 202)

3. ಪ್ರಾಗ್ರೂಪಂ ಮುಖಶೋಷಂ ಸ್ವಲಕ್ಷಣಂ ಸರ್ವದಾಮ್ಬುಕಾಮಿತ್ವಮ್ |
ತೃಷ್ಣಾನಾಂ ಸರ್ವಾಸಾಂ ಲಿಂಗಾನಾಂ ಲಾಘವಮಪಾಯಃ ||
ಮುಖಶೋಷಸ್ವರಭೇದಭ್ರಮಸನ್ತಾಪಪ್ರಲಾಪಸಂಸ್ತಂಭಾನ್ |
ತಾಲ್ವೋಷ್ಠಕಣ್ಠಜಿಹ್ವಾಕರ್ಕಶತಾಂ ಚಿತ್ತನಾಶಂ ಚ ||
ಜಿಹ್ವಾನಿರ್ಗಮಮರುಚಿಂ ಬಾಧಿರ್ಯಂ ಮರ್ಮದೂಯನಂ ಸಾದಮ್ |
ತೃಷ್ಣೋದ್ಭೂತಾ ಕುರುತೇ ಪಂಚವಿಧಾ ಲಿಂಗತಃ ಶೃಣು ತಾಮ್ ||
(ಚ. 718)

ತೃಷ್ಣೆಯ ಪ್ರಾಗ್ರೂಪ ಮತ್ತು ಉಪದ್ರವ

ಬಾಯಿ ಒಣಗುವಿಕೆ ತೃಷ್ಣೆಯ ಪ್ರಾಗ್ರೂಪ; ಸದಾಕಾಲ ನೀರಿಗೆ ಆಶೆಪಡುವಿಕೆ ಅದರ ಸ್ವಂತ (ನಿಜ) ಲಕ್ಷಣ; ಮತ್ತು ಎಲ್ಲಾ ತೃಷ್ಣೆಗಳ ಲಕ್ಷಣಗಳ ಅಗಲಿಕೆ ಸೌಖ್ಯಸ್ಥಿತಿ (ಅಂದರೆ ಆ ಲಕ್ಷಣಗಳೊಳಗೆ ಕೆಲವಾದರೂ ತೃಷ್ಣೆಯಲ್ಲಿ ಇಲ್ಲದಿರುವದಿಲ್ಲ). ಬಾಯಿ ಒಣಗುವಿಕೆ, ಸ್ವರಭೇದ, ಭ್ರಮೆ, ಉರಿ, ಪ್ರಲಾಪ (ಅನರ್ಥಮಾತು), ಸ್ತಬ್ಧತೆ, ತಾಲು-ತುಟಿ-ಕುತ್ತಿಗೆ ಮತ್ತು ನಾಲಿಗೆ ದೊರಗಾಗಿರುವಿಕೆ, ಮನೋವೃತ್ತಿಯ ನಾಶ, ನಾಲಿಗೆ ಹೊರಗೆ ಬರುವದು, ಅರುಚಿ, ಕಿವುಡುತನ, ಮರ್ಮ(ಹೃದಯ)ದಲ್ಲಿ ನೋವು ಮತ್ತು ಕ್ಷೀಣತೆ, ಇವುಗಳನ್ನು ಐದು ವಿಧವಾದ ತೃಷ್ಣೆಯು ಉತ್ಪನ್ನವಾದ ಮೇಲೆ ಉಂಟುಮಾಡುತ್ತದೆ. ಅದರ ಲಕ್ಷಣಗಳು ಮುಂದೆ ಹೇಳಲ್ಪಡುತ್ತವೆ.

ಪರಾ ಮೂಲವಚನದ ತಾತ್ಪರ್ಯವನ್ನು ನಿಃಸಂದೇಹವಾಗಿ ತಿಳಿಯುವದು ಎಲ್ಲರಿಗೂ ಕಷ್ಟವಾಗಿ ತೋರಿದೆ ಎಂತ ಕಾಣುತ್ತದೆ. ವಾಗ್ಭಟ ಮೊದಲಾದ ಅನಂತರದ ಗ್ರಂಥಕಾರರು ತೃಷ್ಣೆಯ ಪೂರ್ವರೂಪದ ಪ್ರಸ್ತಾಪವನ್ನು ಎತ್ತಿರುವದಿಲ್ಲ. ಮುಖಶೋಷಾದಿ ವಿಕಾರಗಳು ಎಲ್ಲಾ ತೃಷ್ಣೆಗಳ ಸಾಮಾನ್ಯ ಲಕ್ಷಣ ಎಂತ ವಾ (ಪು 202). ಅವು ಅತಿಯಾಗಿ ಬೆಳೆದರೆ ಉಪದ್ರವಗಳು, ಸಾಧಾರಣವಾದರೆ ಲಕ್ಷಣಗಳು ಎಂತ ಅ ದೀ (ಪು 550). ಬಿಡದೆ ನೀರು ಕುಡಿಯುವದು, ಅದರಿಂದ ತೃಪ್ತಿಯಾಗದಿರುವದು ಮತ್ತು ಪುನಃ ನೀರಿನ ಅಪೇಕ್ಷೆ, ಈ ಲಕ್ಷಣಗಳು ಯಾರಲ್ಲಿ ಕಾಣುತ್ತವೋ, ಅವನಿಗೆ ತೃಷ್ಣಾರೋಗ ಉಂಟಾಗಿದೆ ಎಂತ ತಿಳಿಯಬೇಕೆಂತ ಹೇಳಿ, ತಾಲು, ತುಟಿ, ಕಂಠ ಮತ್ತು ಬಾಯಿ ಒಣಗುವಿಕೆ, ಉರಿ, ಸೆಕೆ, ಮೂರ್ಛೆ, ತಲೆತಿರುಕು ಮತ್ತು ವಿಶೇಷವಾದ ಪ್ರಲಾಪ, ಇವು ತೃಷ್ಣೆಗಳಲ್ಲಿ, ವಿಶೇಷವಾಗಿ ಅವುಗಳ ಉತ್ಪತ್ತಿ ಕಾಲದಲ್ಲಿ, ತೋರುವ ಪೂರ್ವರೂಪಗಳು ಎಂತ ಸುಶ್ರುತನು ಬರೆದಿರುತ್ತಾನೆ (ಪು 841). 1ನೇ ಶ್ಲೋಕದ ಕೊನೆಯ ಪದವಾದ 'ಅಪಾಯಃ'ಕ್ಕೆ 'ದೇಹನಾಶ' ಎಂಬ ಅರ್ಥವನ್ನು ಬಿಟ್ಟು, ಲಕ್ಷಣಗಳ 'ವಿಶ್ಲೇಷಃ' (ಅಗಲುವಿಕೆ) ಎಂತ ಅರ್ಥ ಮಾಡುವದು ಸಮ ಕಾಣುತ್ತದೆ. ವಾತಾದಿ ದೋಷಜ ತೃಷ್ಣೆಗಳಿಗೆ ಹೇಳಲ್ಪಟ್ಟ ಲಕ್ಷಣಗಳೊಳಗೆ ಯಾವದೂ ಇಲ್ಲದೆ, ತೃಷ್ಣೆಯ ಸ್ವಲಕ್ಷಣ ಎಂತ ಹೇಳಲ್ಪಟ್ಟ 'ಸರ್ವದಾಮ್ಬುಕಾಮಿತ್ವ' ಮಾತ್ರ ಇದ್ದದರಿಂದ ಈ ರೋಗ ಉಂಟಾಗಿದೆ ಎಂತ ತಿಳಿಯಬಾರದು, ಆ ಸ್ವಲಕ್ಷಣ ಸೌಖ್ಯದಲ್ಲಿರುವವರಲ್ಲಿಯೂ ಕಾಣಬಹುದು ಎಂತ ತಿಳಿಸುವದೇ ಆ ಶ್ಲೋಕದ ಉತ್ತರಾರ್ಧದ ಉದ್ದೇಶವಾಗಿರಬೇಕು. ಅಧ್ಯಾಯದ ಕೊನೆಯಲ್ಲಿ, "ಹೇತು, ಸಂಪ್ರಾಪ್ತಿ, ಉಪದ್ರವ, ಐದು ತೃಷ್ಣೆಗಳ ಪ್ರತ್ಯೇಕ ಲಕ್ಷಣಗಳು, ಸಾಧ್ಯಾಸಾಧ್ಯತೆ ಮತ್ತು ಪರಿಹಾರ" 'ಹೇಳಲ್ಪಟ್ಟಿತು' ಎಂತ ಚರಕನು ಹೇಳಿರುವದರಿಂದಲೂ, ಬೇರೆ ಉಪದ್ರವಗಳು ಹೇಳಲ್ಪಡದಿರುವದರಿಂದಲೂ, ಮುಖಶೋಷಾದಿಗಳು ಎಲ್ಲಾ ತೃಷ್ಣೆಗಳಲ್ಲಿ ಕಾಣಬಹುದಾದ ಉಪದ್ರವಗಳಾಗಿಯೇ ಹೇಳಲ್ಪಟ್ಟದ್ದೆಂತ ತಿಳಿಯುವನೇ ಸರಿಯಾದ್ದು.

4. ಅಬ್ಧಾತುಂ ದೇಹಸ್ಥಂ ಕುಪಿತಃ ಪವನೋ ಯದಾ ವಿಶೋಷಯತಿ |
ತಸ್ಮಿನ್ ಶುಷ್ಕೇ ಶುಷ್ಯತ್ಯಬಲಸ್ತೃಷ್ಯತ್ಯಥ ವಿಶುಷ್ಯನ್ ||
ವಾತಜ ತೃಷ್ಣೆಯ ಲಕ್ಷಣ
ನಿದ್ರಾನಾಶಃ ಶಿರಸೋ ಭ್ರಮಸ್ತಥಾ ಶುಷ್ಕವಿರಸಮುಖತಾ ಚ |
ಸ್ರೋತೋಽವರೋಧ ಇತಿ ಚ ಸ್ಯಾಲ್ಲಿಂಗಂ ವಾತತೃಷ್ಣಾಯಾಃ ||
(ಚ. 718)

ಕೋಪಗೊಂಡ ವಾಯು ದೇಹದಲ್ಲಿರುವ ಜಲಧಾತುವನ್ನು ಯಾವಾಗ ಆರಿಸುತ್ತದೋ, ಆಗ್ಗೆ ಮನುಷ್ಯನು ಆ ಶೋಷಣದಿಂದ ಅಬಲನಾಗಿ ಬತ್ತುತ್ತಾನೆ; ಮತ್ತು ಹಾಗೆ ಬತ್ತುತ್ತಾ ಬರುವಾಗ್ಗೆ, (ರಸಧಾತುವಿನ ಕ್ಷಯದಿಂದ) ಅವನಿಗೆ ಬಾಯಾರಿಕೆ ಉಂಟಾಗುತ್ತದೆ. ಹೀಗೆ ಉಂಟಾದ ವಾತತೃಷ್ಣೆಯಲ್ಲಿ ನಿದ್ರೆ ಇಲ್ಲದಿರುವದು, ತಲೆತಿರುಕು, ಬಾಯಿ ಒಣಗಿ ರುಚಿ ಕೆಟ್ಟಿರುವದು, ಸ್ರೋತಸ್ಸುಗಳು ಮುಚ್ಚಿಕೊಳ್ಳುವಿಕೆ, ಈ ಲಕ್ಷಣಗಳು ಉಂಟಾಗುತ್ತವೆ.

ಷರಾ ಕೆನ್ನೆ(ಕಣತಲೆ)ಗಳಲ್ಲಿ, ತಲೆಯಲ್ಲಿ ಮತ್ತು ಕಂಠದಲ್ಲಿ ನೋವು, ಮತ್ತು ತಣ್ಣೀರನ್ನು ಕುಡಿಯುವದರಿಂದ ಬಾಯಾರಿಕೆ ವೃದ್ಧಿಯಾಗುವದು, ಸಹ ವಾತಜ ತೃಷ್ಣೆಯ ಲಕ್ಷಣಗಳೊಳಗೆ ಸೇರಿದವು ಎಂತ ಸು (ಪು 842). ಸ್ರೋತೋನಿರೋಧ ಎಂದರೆ ರಸವನ್ನೂ ನೀರನ್ನೂ ಸಾಗಿಸುವ ಸ್ರೋತಸ್ಸುಗಳಲ್ಲಿ ತಡೆ ಎಂತಲೂ, ಕಿವಿ ಮುಚ್ಚಿಕೊಳ್ಳುವಿಕೆ ಎಂತಲೂ ಬೇರೆ ಬೇರೆ ಅರ್ಥ ಬರೆದದ್ದು ಕಾಣುತ್ತದೆ ವಾ ನು ಸ್ರೋತಸ್ಸಿನ ನಿರೋಧ ಅಥವಾ ಅವರೋಧ ಎಂಬದನ್ನು ಬಿಟ್ಟು, ಶ್ರವಣಜ್ಞಾನದ ಮತ್ತು ಬಲದ ಕ್ಷಯ, ಪರಿಮಳ ತಿಳಿಯಲಾರದಿರುವದು, ಕೃಶತೆ ಮತ್ತು ದೈನ್ಯ ಎಂಬ ಲಕ್ಷಣಗಳನ್ನು ಅಧಿಕವಾಗಿ ಕಾಣಿಸಿರುತ್ತಾನೆ. ಅನ್ನನೀರುಗಳನ್ನು ನುಂಗಿ ಕೆಳಗೆ ಸಾಗಿಸುವದಕ್ಕೆ ಕಷ್ಟವಾಗುವ ಹಾಗಿನ ಮುಖ್ಯ ಸ್ರೋತಸ್ಸಾದ ಅನ್ನನಾಳದಲ್ಲಿಯ ತಡೆಯು ಸ್ರೋತೋನಿರೋಧದಲ್ಲಿ ಸೇರಿದೆ ಎಂತ ತಿಳಿಯಬಹುದು

5. ಪಿತ್ತಂ ಮತಂ ಕುಪಿತಮಾಗ್ನೇಯಂ ಕುಪಿತಂ ತಾಪಯತ್ಯಪಾಂ
ಧಾತುಮ್ |
ಪಿತ್ತಜ ತೃಷ್ಣೆಯ ಲಕ್ಷಣ
ಸನ್ತಪ್ತಃ ಸ ಹಿ ಜನಯೇತ್ತೃಷ್ಣಾಂ ದಾಹೋಲ್ಬಣಾಂ ನೃಣಾಮ್ ||
ತಿಕ್ತಾಸ್ಯತ್ವಂ ಶಿರಸೋ ದಾಹಃ ಶೀತಾಭಿನನ್ದತಾ ಮೂರ್ಚ್ಛಾ |
ಪೀತಾಕ್ಷಿಮೂತ್ರವರ್ಚಸ್ತ್ವಮಾಕೃತಿಃ ಪಿತ್ತತೃಷ್ಣಾಯಾಃ || (ಚ. 718)

ಕೋಪಗೊಂಡ ಪಿತ್ತಕ್ಕೆ ಅಗ್ನಿಗುಣ ಎಂತ ತಿಳಿದಿದ್ದಾರೆ. ಕೋಪಗೊಂಡ ಪಿತ್ತವು (ದೇಹದ) ಜಲಧಾತುವನ್ನು ಕಾಯಿಸುತ್ತದೆ. ಕಾದಂತ ಜಲಧಾತುವು ಜನರಿಗೆ ಉರಿ ಬಹಳವಾದ ಬಾಯಾರಿಕೆಯನ್ನುಂಟುಮಾಡುತ್ತದೆ. ಹೀಗೆ ಉಂಟಾದ ಪಿತ್ತಜತೃಷ್ಣೆಯಲ್ಲಿ ಬಾಯಿ ಕಹಿ, ತಲೆಉರಿ, ಶೀತದಲ್ಲಿ ಸಂತೋಷ, ಮೂರ್ಛೆ, ಕಣ್ಣು-ಮೂತ್ರ-ಮಲ ಸಹ ಅರಸಿನವಾಗಿರುವದು, ಈ ಲಕ್ಷಣಗಳು ಕಾಣುವವು.

ಷರಾ: ಅರುಚಿ, ಪ್ರಲಾಪ, ಕಂಠದಿಂದ ಹೊಗೆ ಬಂದ ಹಾಗೆ ಕಾಣುವದು, ಮತ್ತು ಎಡೆಬಿಡದ ಉರಿ, ಈ ಲಕ್ಷಣಗಳು ಸಹ ಕಾಣುವವೆಂತ ಸು (ಪು 842)

6. ತೃಷ್ಣಾಯಾ ಽಮಪ್ರಭವಾ* ಸಾಪ್ಯಾಗ್ನೇಯಾಮಪಿತ್ತಜನಿತತ್ವಾತ್ |
ಲಿಂಗಂ ತಸ್ಯಾಶ್ಚಾರುಚಿರಾಧ್ಮಾನಕಫಪ್ರಸೇಕೌ ಚ || (ಚ. 718)
ಆಮಜ ತೃಷ್ಣೆಯ ಲಕ್ಷಣ

ಆಮಜ ತೃಷ್ಣೆಯು ಸಹ ಅಗ್ನಿಗುಣದಿಂದ ಉಂಟಾಗುವಂಥಾದ್ದು. ಯಾಕೆಂದರೆ, ಅದಕ್ಕೆ ಹೇತು ಆಮವನ್ನು ಕೂಡಿಕೊಂಡ ಪಿತ್ತವಾಗಿರುತ್ತದೆ. ಅರುಚಿ, ಹೊಟ್ಟೆಯುಬ್ಬರ, ಮತ್ತು ಕಫ ಸುರಿಯುವದು ಆಮಜ ತೃಷ್ಣೆಯ ಲಕ್ಷಣಗಳು.

* ಮೂಲದಲ್ಲಿ 'ತೃಷ್ಣಾಯಾ ಽಹಮ ಪ್ರಭವಾ' ಎಂತ ಉಂಟು

ಷರಾ ದೇಹದ ಅಗ್ನಿಯನ್ನು ಕಫವು ಮುಚ್ಚಿಕೊಳ್ಳುವದರಿಂದ ಅಗ್ನಿಯ ಹಬೆ (ಸೆಕೆ) ಹೋಗುವದಕ್ಕೆ ತಡೆಯುಂಟಾಗಿ, ಅದರಿಂದ ಕಫಜತೃಷ್ಣೆಯುಂಟಾಗುತ್ತದೆಂತಲೂ, ಅದರಲ್ಲಿ ತಲೆಭಾರ, ಅತಿನಿದ್ರೆ, ಬಾಯಿ ಸಿಹಿಯಾಗಿರುವದು, ಅತಿಯಾಗಿ ಬಾಯಿ ಒಣಗುವದು, ಶೈತ್ಯಶೀತ, ಜ್ವರ, ವಾಂತಿ, ಅರುಚಿ, ಚರ್ಮದಲ್ಲಿ ಉರಿ ಮತ್ತು ಅತಿಯಲ್ಲದ ನೀರಿನ ಇಚ್ಛೆ, ಈ ಲಕ್ಷಣಗಳು ಕಾಣುವವು ಎಂತಲೂ, ಆಮಜತೃಷ್ಣೆಯಲ್ಲಿ ವಾತಾದಿ ಮೂರು ದೋಷಗಳ ಲಕ್ಷಣಗಳಲ್ಲದೆ, ಎದೆಶೂಲೆ, ಎಂಜಲು ಬರುತ್ತಿರುವದು, ಆಯಾಸ, ಈ ಲಕ್ಷಣಗಳು ಕಾಣುವವು ಎಂತಲೂ ಸು (ಪು. 842). ಕಂಠದಲ್ಲಿ ಮುಳ್ಳು ಏಳುವದು, ಹೊಟ್ಟೆಯುಬ್ಬರ ಮತ್ತು ಅಜೀರ್ಣ ಸಹ ಕಫಜತೃಷ್ಣೆಯ ಲಕ್ಷಣಗಳೆಂತಲೂ, ತ್ರಿದೋಷಜದಲ್ಲಿ ಮೂರು ದೋಷಗಳ ಲಕ್ಷಣಗಳೂ ಕಾಣುವವು ಎಂತಲೂ ವಾ. (ಪು 202)

7. ದೇಹೋ ರಸಜೋಽಮ್ಬುಭವೋ ರಸಶ್ಚ ತಸ್ಯ ಕ್ಷಯಾಚ್ಚ ತೃಷ್ಯೇತ್ತು ।
ದೀನಸ್ವರಃ ಪ್ರತಾಮ್ಯನ್ ಸಂಶುಷ್ಕಹೃದಯಗಲತಾಲುಃ ॥
(ಚ. 718)

ಕ್ಷಯಜತೃಷ್ಣೆಯ ಲಕ್ಷಣ

ಮನುಷ್ಯನ ದೇಹವು ರಸಧಾತುವಿನಿಂದ ಉಂಟಾಗುವಂಥಾದ್ದು. ಆ ರಸಧಾತು ನೀರಿನಿಂದ ಉದ್ಭವವಾಗುವಂಥಾದ್ದು. ಆದ್ದರಿಂದ ರಸಧಾತು ಕ್ಷಯವಾದಾಗ್ಗೆ ಬಾಯಾರಿಕೆ ಉಂಟಾಗುತ್ತದೆ; ಮತ್ತು ಸ್ವರದ ದೀನತೆ (ದುರ್ಬಲತೆ), ಸಂಕಟ, ಹೃದಯ (ಎದೆ)-ಗಂಟಲು-ತಾಲುಗಳ ಒಣಗುವಿಕೆ, ಈ ಲಕ್ಷಣಗಳು ಕಾಣುವವು.

ಷರಾ ಕ್ಷತ(ಗಾಯಪಟ್ಟವ)ನಿಗೆ ನೋವಿನಿಂದಲೂ, ಅತಿಯಾಗಿ ರಕ್ತಸುರಿದು ಹೋಗುವದರಿಂದಲೂ ತೃಷ್ಣೆಯುಂಟಾಗಿ, ರಾತ್ರಿಹಗಲು ನೀರು ಕುಡಿಯುತ್ತಾ ಇದ್ದಾಗ್ಗೂ ದುಃಖ (ಸಂಕಷ್ಟ) ಪಡುತ್ತಿರುತ್ತಾನೆ, ಅದು ಕ್ಷತಜ ತೃಷ್ಣೆ, ರಸಕ್ಷಯದಿಂದ ಅದೇ ಸಂಕಷ್ಟ ಉಂಟಾಗುತ್ತದೆ, ಅದು ಕ್ಷಯಜತೃಷ್ಣೆ, ಅದು ಸನ್ನಿಪಾತದಿಂದ ಉಂಟಾಗುವಂಥಾದ್ದೆಂತ ಕೆಲವರು ಹೇಳುತ್ತಾರೆ, ದೇಹದ ರಸಕ್ಷಯದ ಲಕ್ಷಣಗಳೆಲ್ಲಾ, (ಅಂದರೆ 1ನೇ ಭಾಗದ V-44ರಲ್ಲಿ ಕಾಣುವ ಹೃತ್ಪೀಡೆ, ನಡುಕು, ಶೋಷ, ಕಣ್ಣುಕತ್ತಲೆ, ಮತ್ತು ಬಾಯಾರಿಕೆ), ಆ ಕ್ಷಯಜತೃಷ್ಣೆಯಲ್ಲಿ ಕಾಣುವವು, ಇದೆಲ್ಲ ಸುಶ್ರುತನ ಹೇಳಿಕೆ (ಪು 842).

8. ಭವತಿ ಖಲು ಸೋಪಸರ್ಗಾತ್ತೃಷ್ಣಾ ಸಾ ಶೋಷಿಣೀ ಕಷ್ಟಾ ।
ಜ್ವರಮೇಹಕ್ಷಯಶೋಷಶ್ವಾಸಾದ್ಯುಪಸೃಷ್ಟದೇಹಾನಾಮ್ ॥
ಸರ್ವಾ ಸ್ವತಿಪ್ರಸಕ್ತಾ ರೋಗಕೃಶಾನಾಂ ವಮಿಪ್ರಸಕ್ತಾನಾಮ್ ।
ಘೋರೋಪದ್ರವಯುಕ್ತಾಸ್ತೃಷ್ಣಾ ಮರಣಾಯ ವಿಜ್ಞೇಯಾಃ ॥
(ಚ. 719)

ಔಪಸರ್ಗಿಕ ತೃಷ್ಣೆಯ ಲಕ್ಷಣ

ತೃಷ್ಣೆಯು ಉಪಸರ್ಗದಿಂದ (ಅನ್ಯವ್ಯಾಧಿಯ ಉಪದ್ರವವಾಗಿ) ಹುಟ್ಟುತ್ತದೆ. ಅದು ಜ್ವರ, ಮೇಹ, ಕ್ಷಯ, ಶೋಷ, ಉಬ್ಬಸ, ಮುಂತಾದ ವ್ಯಾಧಿಗಳಿಂದ ಕೂಡಿಕೊಂಡಿರುವವರಲ್ಲಿ ದೇಹವನ್ನು ಒಣಗಿಸುತ್ತದೆ ಮತ್ತು ಕಷ್ಟಸಾಧ್ಯ. ಅನ್ಯರೋಗದಿಂದ ಕೃಶರಾದವರಿಗೂ, ವಾಂತಿ ಉಂಟಾದವರಿಗೂ, ಅತಿಯಾಗಿ ಬಿಡದೆ ಪೀಡಿಸುವ ಎಲ್ಲಾ ತೃಷ್ಣೆಗಳು ಮತ್ತು ಕಠಿಣವಾದ ಉಪದ್ರವಗಳಿಂದ ಕೂಡಿಕೊಂಡ ತೃಷ್ಣೆಗಳು ಮರಣವನ್ನುಂಟುಮಾಡುವವು ಎಂತ ತಿಳಿಯಬೇಕು.

ಷರಾ ಔಪಸರ್ಗಿಕ ವ್ಯಾಧಿಯ ವಿವರಣಕ್ಕೆ 1ನೇ ಭಾಗದ XIX-27 ನೋಡಿ

9. ನಾಗ್ನಿಂ ವಿನಾ ಹಿ ತರ್ಷಃ ಪವನಾದ್ವಾ ತೌ ಹಿ ಶೋಷಣೇ ಹೇತೂ ।
ಅಬ್ಧಾತೋರತಿವೃದ್ಧಾವಪಾಂ ಕ್ಷಯೇ ತೃಷ್ಯತೇ ನರೋ ಹಿ ॥
ಗುರ್ವನ್ನಪಯಃ ಸ್ನೇಹೈ; ಸಮ್ಮೂರ್ಚ್ಛರ್ದ್ಧಿರ್ವಿದಾಹಕಾಲೇ ಚ ।
ಯಸ್ತೃಷ್ಯೇದ್ಧೃತಮಾರ್ಗೇ ತತ್ರಾಪ್ಯನಿಲಾನಲೌ ಹೇತೂ ॥

ಅನ್ನಪಾನಾದಿಜ ತೃಷ್ಣೆಗಳು

ತೀಕ್ಷ್ಣೋಷ್ಣರೂಕ್ಷಭಾವಾನ್ಮದ್ಯಂ ಪಿತ್ತಾನಿಲೌ ಪ್ರಕೋಪಯತಿ |
ಶೋಷಯತೋಽಪಾಂ ಧಾತುಂ ತಾವೇವ ಮದ್ಯಶೀಲಾನಾಮ್ ||
ತಪ್ತಾಸ್ವಿವ ಸಿಕತಾಸು ಹಿ ತೋಯಮಾಶುಷ್ಯತಿ ಕ್ಷಿಪ್ತಮ್ |
ತೇಷಾಂ ಸನ್ತಪ್ತಾನಾಂ ಹಿಮಜಲಪಾನಾದ್ಭವತಿ ಶರ್ಮ ||
ಶಿಶಿರಸ್ನಾತಸ್ಯೋಷ್ಮಾ ರುದ್ಧಃ ಕೋಷ್ಠಂ ಪ್ರಪದ್ಯ ತರ್ಷಯತಿ |
ತಸ್ಮಾನ್ನೋಷ್ಣಃ ಕ್ಲಾನ್ತೋ ಭಜೇತ ಸಹಸಾ ಜಲಂ ಶೀತಮ್ ||
ಲಿಂಗಂ ಸರ್ವಾಸ್ವೇತಾಸ್ವನಿಲಕ್ಷಯಾತ್ಪಿತ್ತಜಂ ಭವತ್ಯಥ ತು | (ಚ. 719)

ಅಗ್ನಿ (ಪಿತ್ತ), ಅಥವಾ ವಾಯು ಇಲ್ಲದೆ ಬಾಯಾರಿಕೆ ಉಂಟಾಗುವದಿಲ್ಲ, ಅವೆರಡು ಜಲಧಾತುವನ್ನು ಆರಿಸುವದಕ್ಕೆ ಹೇತುಗಳು. ಅವು ಪ್ರಕೋಪಗೊಂಡು ನೀರು ಕ್ಷಯಿಸಿದ್ದಲ್ಲಿ ಮನುಷ್ಯನಿಗೆ ಬಾಯಾರಿಕೆ ಉಂಟಾಗುವದಾಗಿರುತ್ತದೆ. ಗುರುವಾದ ಅನ್ನ, ಹಾಲು ಮತ್ತು ಸ್ನೇಹಗಳು ಕರಗಿ ರೂಪಾಂತರ ಹೊಂದುವಾಗ ಉಂಟಾಗುವ ವಿಶೇಷವಾದ ಪಾಕಕಾಲದಲ್ಲಿ, ಅವು (ಬಿಸಿಯಾದ ಹಬೆಯನ್ನು ತಡೆಯುವಂತೆ) ಮಾರ್ಗವನ್ನು ಹಿಡಕೊಳ್ಳುವದರಿಂದ ಯಾವನಿಗೆ ಬಾಯಾರಿಕೆ ಉಂಟಾಗುತ್ತದೋ, ಅವನ ಬಾಯಾರಿಕೆಗೂ ಅಗ್ನಿವಾಯುಗಳೇ ಹೇತುಗಳು. ಮದ್ಯವು ತೀಕ್ಷ್ಣ, ಉಷ್ಣ ಮತ್ತು ರೂಕ್ಷ ಸ್ವಭಾವದ್ದಾದ್ದರಿಂದ ಪಿತ್ತವಾಯುಗಳನ್ನು ಪ್ರಕೋಪಿಸುತ್ತದೆ; ಅವುಗಳೇ ಮದ್ಯಪಾನದ ಶೀಲವುಳ್ಳವರಲ್ಲಿ ಜಲಧಾತುವನ್ನು ಆರಿಸುವದಾಗಿರುತ್ತದೆ; ಕಾದಂಥ ಮಳಲಿನ ಮೇಲೆ ಹಾಕಲ್ಪಟ್ಟ ನೀರು ಬೇಗನೆ ಆರಿ ಹೋಗುವಂತೆ, ಕಾದ ಶರೀರವುಳ್ಳ ಆ ಮದ್ಯಪಾನಶೀಲದವರಿಗೆ ತಣ್ಣಗಾದ ನೀರನ್ನು ಕುಡಿಯುವದರಿಂದ ಸುಖ ಉಂಟಾಗುತ್ತದೆ. ತಣ್ಣೀರಿನ ಸ್ನಾನದಿಂದ ತಡೆಯಲ್ಪಟ್ಟ ದೇಹದ ಸೆಕೆಯು ಒಳಗೆ ಹೊಟ್ಟೆಗೆ ಹೋಗುತ್ತದೆ, ಅದರಿಂದ ಬಾಯಾರಿಕೆ ಉಂಟಾಗುತ್ತದೆ. ಆದ್ದರಿಂದ ಬಳಲಿ ದೇಹ ಬಿಸಿಯಾಗಿರುವಾಗ್ಗೆ, ಮನುಷ್ಯನು ಒಡನೆ ಶೀತವಾದ ನೀರಿನಲ್ಲಿ ಮುಳುಗಬಾರದು. ಈ ಎಲ್ಲಾ ಸಂಗತಿಗಳಲ್ಲಿ ವಾತವು ಕ್ಷಯಿಸುವದರಿಂದ ಪಿತ್ತದ ಲಕ್ಷಣಗಳು ಕಾಣುತ್ತವೆ.

ಷರಾ ಹುಳಿ ಮತ್ತು ಉಪ್ಪು ಹೆಚ್ಚಾಗಿ ಸೇರಿದ ಆಹಾರವನ್ನು ಉಣ್ಣುವದರಿಂದ ತೃಷೆ ಉಂಟಾಗುತ್ತದೆ ಎಂತ ಸು (ಪು 842) ಸಾಧಾರಣವಾಗಿ ಯಾವ ರಸವಾದರೂ ಅತ್ಯಧಿಕವಾಗಿ ಸೇವಿಸಲ್ಪಟ್ಟರೆ, ಅದನ್ನು ಪಚನಕ್ಕೆ ತಕ್ಕಷ್ಟು ಸೌಮ್ಯಸ್ಥಿತಿಗೆ ತರುವದಕ್ಕಾಗಿ ನೀರಿನ ಅಪೇಕ್ಷೆ (ಬಾಯಾರಿಕೆ) ಉಂಟಾಗುತ್ತದೆ

10. ಕ್ಷೀಣಂ ವಿಚಿತ್ತಂ ಬಧಿರಂ ತೃಷ್ಣಾರ್ತಂ ವಿವರ್ಜಯೇನ್ನಿರ್ಗತಜಿಹ್ವ-
ಮಾಶು || (ಸು. 842)

ಅಸಾಧ್ಯ ಲಕ್ಷಣ

ಕ್ಷೀಣನಾದ, ಬುದ್ಧಿವಿಕಾರ ಹೊಂದಿದ, ಕಿವಿ ಕೇಳಿಸದ ಮತ್ತು ನಾಲಿಗೆ ಹೊರಗೆ ಬಂದ ತೃಷ್ಣಾರೋಗಿಯನ್ನು ಚಿಕಿತ್ಸೆಮಾಡದೆ ಬಿಡತಕ್ಕದ್ದು.

ಷರಾ ಚರಕನ ಮತವು ಹಿಂದಿನ 8ನೇ ಸಂಖ್ಯೆಯಲ್ಲಿ ಕಾಣುತ್ತದೆ

11. ಅಪಾಂ ಕ್ಷಯಾದ್ಧಿ ತೃಷ್ಣಾ ಸಂಶೋಷ್ಯ ನರಂ ಪ್ರಣಾಶಯೇದಾಶು |
ತಸ್ಮಾದೈನ್ದ್ರಂ ತೋಯಂ ಸಮಧು ಪಿಬೇತ್ತದ್ಗುಣಂ ವಾಽನ್ಯತ್ ||
ಕಿಂಚಿತ್ತುವರಾನುರಸಂ ತತ್ರ ಲಘು ಶೀತಲಂ ಸುಗನ್ಧಿ ಸುರಸಮ್ |
ಅನಭಿಷ್ಯನ್ದಿ ಚ ಯತ್ತತ್ ಕ್ಷಿತಿಗತಮಪ್ಯೈನ್ದ್ರವಜ್ಜ್ಞೇಯಮ್ ||

ತೃಷ್ಣೆಗಳಿಗೆ ಸಾಧಾರಣ ಉಪಚಾರಗಳು

ಶೃತಂ ಶೀತಂ ಸಸಿತೋಪಲಮಥವಾ ಶರಪೂರ್ವಪಂಚಮೂಲೇನ |
ಲಾಜಾಶಕ್ತೂನ್ ಸಿತಾಕ್ತಾನ್ ಮಧುಯುತಮೈನ್ದ್ರೇಣ ವಾ ಮನ್ಥಮ್ ||
ವಾಟ್ಯಂ ಪಾಮಯವಾನಾಂ ಶೀತಂ ಮಧುಶರ್ಕರಾಯುಕ್ತಂ ದದ್ಯಾತ್ |
ಪೇಯಾಂ ವಾ ಶಾಲೀನಾಂ ದದ್ಯಾದ್ವಾ ಕೋರದೂಷಾಣಾಮ್ ||
ಪಯಸಾ ಶೃತೇನ ಭೋಜನಮಥವಾ ಮಧುಶರ್ಕರಾಯುತಂ
ಭೋಜ್ಯಮ್ || (ಚ. 719)

ತೃಷ್ಣಾಸು ವಾತಪಿತ್ತಘ್ನೋ ವಿಧಿಃ ಪ್ರಾಯೇಣ ಯುಜ್ಯತೇ |
ಸರ್ವಾಸು ಶೀತೋ ಬಾಹ್ಯಾನ್ತಸ್ತಥಾ ಶಮನಶೋಧನಮ್ ||
(ವಾ. 294)

ಶೀತೇನ ಶೀತವೀರ್ಯೈಶ್ಚ ದ್ರವ್ಯೈಃ ಸಿದ್ಧೇನ ಭೋಜನಮ್ |
ಹಿಮಾಮ್ಬುಪರಿಷಿಕ್ತಸ್ಯ ಪಯಸಾ ಸಸಿತಾಮಧು ||
ರಸೈಶ್ಚಾನಮ್ಲಲವಣೈರ್ಜಾಂಗಲೈರ್ಘೃತಭರ್ಜಿತೈಃ |
ಮುದ್ಗಾದೀನಾಂ ತಥಾ ಯೂಷೈರ್ಜೀವನೀಯರಸಾನ್ವಿತೈಃ || (ವಾ. 295)

ತೃಷ್ಣಾಭಿವೃದ್ಧಾವುದರೇ ಚ ಪೂರ್ಣೇ ತಂ ವಾಮಯೇನ್ಮಾಗಧಿಕೋದ-
ಕೇನ |
ವಿಲೇಪನಂ ಚಾತ್ರ ಹಿತಂ ವದನ್ತಿ ಸ್ಯಾದ್ದಾಡಿಮಾಮ್ರಾತಕಮಾತುಲುಂಗೈಃ ||
ತೃಷ್ಣಾ ಪ್ರಯೋಗೈರಿಹ ಸಾ ನಿವಾರ್ಯಾ
ಶೀತೈಶ್ಚ ಸಮ್ಯಗ್ರಸವೀರ್ಯಜಾತೈಃ |
ಗಣ್ಡೂಷಮಮ್ಲೈರ್ವಿರಸೇ ಚ ವಕ್ತ್ರೇ
ಕುರ್ಯಾಚ್ಛುಭೈರಾಮಲಕಸ್ಯ ಚೂರ್ಣೈಃ ||
ಸುವರ್ಣರೂಪ್ಯಾದಿಭಿರಗ್ನಿತಪ್ತೈ-
ರ್ಲೋಷ್ಟೈಃ ಕೃತಂ ವಾ ಸಿಕತೋಪಲೈರ್ವಾ |
ಜಲಂ ಸುಖೋಷ್ಣಂ ಶಮಯೇತ್ತು ತೃಷ್ಣಾಂ
ಸಶರ್ಕರಂ ಕ್ಷೌದ್ರಯುತಂ ಹಿಮಂ ವಾ || (ಸು. 843)

ಜಲಧಾತುವಿನ ಕ್ಷಯದ ದೆಸೆಯಿಂದ ತೃಷ್ಣೆಯು ಮನುಷ್ಯನನ್ನು ಬಣಗಿಸಿ ಬೇಗನೆ ಅವನ ಪ್ರಾಣವನ್ನು ತೆಗೆದುಬಿಡುವದು. ಆದ್ದರಿಂದ ಆಕಾಶದ ನೀರನ್ನು ಅಥವಾ ಅದೇ ಗುಣವುಳ್ಳ ಬೇರೆ ನೀರನ್ನು ಜೇನು ಕೂಡಿಸಿಕೊಂಡು ಅವನು ಕುಡಿಯಬೇಕು. ಬೇರೆ ನೀರನ್ನು ಕುಡಿಯಬೇಕಾದಲ್ಲಿ, ಕಿಂಚಿತ್ತು ಜೊಗರು ರಸ ಕೂಡಿರುವ, ಹಗುರವಾದ, ಶೀತಲವಾದ, ಪರಿಮಳವುಳ್ಳ, ಒಳ್ಳೆ ರುಚಿಯುಳ್ಳ ಮತ್ತು ಅಭಿಷ್ಯಂದ ಗುಣವಿಲ್ಲದ ನೀರು, ಭೂಮಿಯನ್ನು ಸೇರಿದಂಥಾದ್ದಾದರೂ, ಆಕಾಶದ ನೀರಿಗೆ ಸಮಾನವಾದದ್ದೆಂತ ತಿಳಿಯತಕ್ಕದ್ದು

ಮಿಾ 'ಅಭಿಷ್ಯಂದಿ'ಯ ವರ್ಣನಕ್ಕೆ 1ನೇ ಭಾಗದ III—3 (24) ನೋಡಿ

ಅಥವಾ ತೃಣಪಂಚಮೂಲಗಳ ಬೇರುಗಳನ್ನು ಹಾಕಿ ಕಾಯಿಸಿ ಬತ್ತಿಸಿದ ನೀರನ್ನು ತಣಿಸಿ ಕಲ್ಲುಸಕ್ಕರೆ ಕೂಡಿಸಿ, ಅಥವಾ ಅರಳಿನ ಹಿಟ್ಟಿಗೆ ಸಕ್ಕರೆ ಮತ್ತು ಜೇನು ಕೂಡಿಸಿ

ಕೊಂಡು ಆಕಾಶದ ನೀರಿನ ಯೋಗದಿಂದ ಮಾಡಿದ ಮಂಥವನ್ನು (ಕಡೆದು ಮಾಡಿದ ಪಾನಕವನ್ನು), ಅಥವಾ ಹಸಿ ಯವೆಗೋದಿಯನ್ನು, ತುಪ್ಪ ಸವರಿಕೊಂಡು ಸ್ವಲ್ಪವಾಗಿ ಹುರಿದು, ಬೇಯಿಸಿ ಮಾಡಿದ ಗಂಜಿಯ ನೀರನ್ನು ತಣಿಸಿ, ಜೇನು ಮತ್ತು ಸಕ್ಕರೆ ಕೂಡಿಸಿ, ಅಥವಾ ಶಾಲ್ಯಕ್ಕಿಯ ಅಥವಾ ಹಾರಕಧಾನ್ಯದ ಪೇಯಾ ಎಂಬ ಗಂಜಿಯ ನೀರನ್ನು, ಅವನಿಗೆ ಕುಡಿಯ ಕೊಡಬೇಕು; ಅಥವಾ ಅನ್ನವನ್ನು ಕಾಯಿಸಿ ತಣಿಸಿದ ಹಾಲಿನೊಂದಿಗೆ, ಜೇನು ಮತ್ತು ಸಕ್ಕರೆ ಕೂಡಿಸಿಕೊಂಡು, ಅವನು ಉಣ್ಣಬೇಕು.

ತೃಷ್ಣೆಗಳಲ್ಲಿ ಹೆಚ್ಚಾಗಿ ವಾತಪಿತ್ತಹರವಾದ ವಿಧಿಯನ್ನು ಉಪಯೋಗಿಸುತ್ತಾರೆ. ಎಲ್ಲ ತೃಷ್ಣೆಗಳಲ್ಲಿ ಹೊರಗಿಗೂ ಒಳಗಿಗೂ ಶೀತವಾದ ವಿಧಿ, ಶಮನ-ಶೋಧನಗಳು, ತಣ್ಣೀರಿನ ಪರಿಷೇಕ (ಸ್ನಾನ ಅಥವಾ ಸರ್ವಾಂಗ ಆ ನೀರಿನ ಧಾರೆ), ಶೀತವೀರ್ಯವುಳ್ಳ ದ್ರವ್ಯಗಳನ್ನು ಕೂಡಿಸಿ ಕಾಯಿಸಿ ತಣಿಸಿದ ಹಾಲಿನಿಂದ, ಸಕ್ಕರೆ ಮತ್ತು ಜೇನು ಕೂಡಿಸಿಕೊಂಡು, (ಅಥವಾ) ಉಪ್ಪು ಮತ್ತು ಹುಳಿ ಕೂಡಿಸದೆ ಮಾಡಿದ ಜಾಂಗಲಮಾಂಸದ ರಸಗಳಿಂದ, ತುಪ್ಪದ ಒಗ್ಗರಣೆ ಕೊಟ್ಟುಕೊಂಡು, ಹಾಗೆಯೇ ಹೆಸರು ಮೊದಲಾದ (ಹೆಸರು, ಚಾಣಂಗಿ ಮತ್ತು ಕಡಲೆ ಎಂತ ಚ.) ಧಾನ್ಯಗಳ ಸಾರುಗಳಿಂದ (ಅಥವಾ) ಜೀವನೀಯ ವರ್ಗದ ಔಷಧಗಳನ್ನು ಕೂಡಿಸಿ ಮಾಡಿದ ಸಾರುಗಳಿಂದ ಭೋಜನ ಸಹ ಹಿತವಾಗುತ್ತವೆ.

ಪರಾ ಎಲ್ಲಾ ತೃಷ್ಣೆಗಳಲ್ಲಿಯೂ ಪಿತ್ತಜಕ್ಕೆ ಹೇಳಿದ ವಿಧಿಯನ್ನು ನಡಿಸತಕ್ಕದ್ದು ಅದು ವಿನಾ ಶಾಂತಿ ಇಲ್ಲ (ಸು 843)

ತೃಷ್ಣೆಯು ಅಭಿವೃದ್ಧಿಯಾಗಿ, ಹೊಟ್ಟೆಯು ತುಂಬಕೊಂಡಿದ್ದರೆ, ಅಂಥವನಿಗೆ ಹಿಪ್ಪಲಿ ಕೂಡಿಸಿದ ನೀರನ್ನು ಕುಡಿಸಿ ವಾಂತಿಮಾಡಿಸಬೇಕು. ಅವನಿಗೆ (ಹುಳಿ) ದಾಳಿಂಬ ಅಥವಾ ಅಮಟೆಹಣ್ಣು ಅಥವಾ ಮಾದಳಹಣ್ಣಿನ ಕುಸುಮವನ್ನು (ನಾಲಿಗೆಗೆ) ಲೇಪಿಸುವದು ಹಿತ ಎಂತ ಹೇಳುತ್ತಾರೆ.

ಪರಾ ಕೆಲವರು 'ವಿಲೇಪನಂ' ಎಂಬಲ್ಲಿ 'ವಿಲೋಕನಂ' ಎಂತ ಪದವನ್ನಿಟ್ಟುಕೊಂಡು, ರೋಗಿಯ ಬಾಯಲ್ಲಿ ನೀರು ಬರುವ ಹಾಗೆ ಅವನ ಮುಂದೆ ಬೇರೆಯವರು ಆ ಹುಳಿಹಣ್ಣುಗಳನ್ನು ತಿನ್ನುವದು ಎಂತ ಅರ್ಥ ಬರೆದಿದ್ದಾರೆಂತ ಕಾಣುತ್ತದೆ

ತೃಷ್ಣೆಯನ್ನು ರಸದಿಂದಲೂ ವೀರ್ಯದಿಂದಲೂ ಶೀತವಾದ ಯೋಗಗಳಿಂದ ನಿವಾರಿಸತಕ್ಕದ್ದು.

ಪರಾ 'ತೃಷ್ಣಾ' ಎಂಬಲ್ಲಿ 'ತಿಸ್ರಃ' ಎಂತಲೂ 'ಸಾಸಿವಾಯ್ವಾರ್' ಎಂಬಲ್ಲಿ 'ಸನ್ನಿವಾಯ್ವಾರ್' ಎಂತಲೂ ಪಾಠಾಂತರ ಕಾಣುತ್ತದೆ ಆಗ್ಗೆ ವಾತಾದಿ ದೋಷಗಳಿಂದ ಉಂಟಾದ ಮೂರು ತೃಷ್ಣೆಗಳಿಗ ಮಾತ್ರ ಶೀತಪ್ರಯೋಗಗಳು ಹಿತ ಎಂತ ಅರ್ಥವಾಗುತ್ತದೆ

ಬಾಯಿ ರಸವಿಲ್ಲದೆ ಒಣಗಿದ್ದರೆ, ಹುಳಿದ್ರವ್ಯಗಳಿಂದ ಅಥವಾ ಒಳ್ಳೆ ನೆಲ್ಲಿಯ ಚೂರ್ಣಗಳಿಂದ ಗಂಡೂಷವನ್ನು ಮಾಡಿಸಬೇಕು. ಚಿನ್ನ, ಬೆಳ್ಳಿ ಮುಂತಾದ ಲೋಹಗಳನ್ನು, ಅಥವಾ ಮಣ್ಣಿನ ಹೆಂಟೆಗಳನ್ನು, ಅಥವಾ ಬಿಳೇ (ರಂಗವಲ್ಲಿ) ಕಲ್ಲುಗಳನ್ನು, ಬೆಂಕಿಯಿಂದ ಕಾಯಿಸಿ ನೀರಿನಲ್ಲಿ ಅದ್ದಿ, ಶೋಧಿಸಿದ ಆ ನೀರನ್ನು ಸುಖೋಷ್ಣವಾಗಿ, ಅಥವಾ ಅದನ್ನು ತಣಿಸಿ ಜೇನು ಮತ್ತು ಸಕ್ಕರೆ ಕೂಡಿಸಿ, ಕುಡಿಯುವದರಿಂದ ತೃಷ್ಣೆಯು ಶಮನವಾಗುತ್ತದೆ.

12. ವಾತಘ್ನಮನ್ನಪಾನಂ ಮೃದು ಲಘು ಶೀತಂ ಚ ವಾತತೃಷ್ಣಾಯಾಃ |
ವಾತಜ ತೃಷ್ಣೆಯ ಚಿಕಿತ್ಸೆ ಕ್ಷತಕಾಸನುತ್ ಘೃತಕ್ಷೀರಮೂರ್ದ್ಧ್ವಂ ವಾತತೃಷ್ಣಾಘ್ನಮ್ || (ಚ. 720)

ಮೃದು ಮತ್ತು ಲಘು ಗುಣವುಳ್ಳ ವಾತಹರವಾದ ಅನ್ನಪಾನಗಳನ್ನು

ಶೀತವಾಗಿ ಉಪಯೋಗಿಸುವದು ವಾತಜ ತೃಷ್ಣೆಗೆ ಹಿತವಾಗುತ್ತದೆ. ಕ್ಷತಕಾಸದ ಪರಿಹಾರಕ್ಕೆ ಹೇಳಲ್ಪಟ್ಟ ತುಪ್ಪ ಮತ್ತು ಹಾಲು ಕೂಡಿದ ಔಷಧಗಳು ವಾತತೃಷ್ಣೆಯನ್ನು ನಾಶ ಮಾಡುವವು.

ಷರಾ ಕ್ಷತಕಾಸಹರವಾದ ತುಪ್ಪವನ್ನು ಕುಡಿದು ಅನುಪಾನವಾಗಿ ಹಾಲನ್ನು ಕುಡಿಯುವದು ಎಂತ ಒಬ್ಬರು ಅರ್ಥ ಬರೆದದ್ದು ಕಾಣುತ್ತದೆ 'ಘೃತಂ' ಎಂತ ಇದ್ದಿದ್ದರೆ ಅದೇ ಸರಿಯಾದ ಅರ್ಥ ಎನ್ನಬಹುದಿತ್ತು.

ಪಂಚಾಂಗಿಕಾಃ ಪಂಚಗಣಾ ಯ ಉಕ್ತಾಸ್ತೇಷ್ವಮ್ಬುಸಿದ್ಧಂ ಪ್ರಥಮೇ ಗಣೇ ವಾ |
ಪಿಬೇತ್ಸುಖೋಷ್ಣಂ ಮನುಜೋಽಲ್ಪಶಸ್ತು ತೃಷೋ ವಿಮುಚ್ಯೇತ ಹಿ ವಾತ-
ಜಾಯಾಃ || (ಸು. 813)

(ಹ್ರಸ್ವಪಂಚಮೂಲ, ಬೃಹತ್ಪಂಚಮೂಲ, ವಲ್ಲೀಪಂಚಮೂಲ, ಕಂಟಕಪಂಚಮೂಲ, ತೃಣಪಂಚಮೂಲ ಎಂಬ) ಐದೈದು ದ್ರವ್ಯಗಳುಳ್ಳ ಐದು ಗಣಗಳು ಯಾವವು ಹೇಳಲ್ಪಟ್ಟಿರುತ್ತವೋ ಅವುಗಳನ್ನು, ಅಥವಾ ಪ್ರಥಮ ಗಣದ ಔಷಧಗಳನ್ನು, ಸೇರಿಸಿ ಕಾಯಿಸಲ್ಪಟ್ಟ ನೀರನ್ನು ಸುಖೋಷ್ಣವಾಗಿ ಸ್ವಲ್ಪ ಸ್ವಲ್ಪವಾಗಿ ಕುಡಿಯುವದರಿಂದ ವಾತದಿಂದುಂಟಾದ ಬಾಯಾರಿಕೆಯು ನಿಶ್ಚಯವಾಗಿ ಪರಿಹಾರವಾಗುತ್ತದೆ.

ಷರಾ ಒಂದನೇ ಗಣ ಎಂದರೆ 33 ಗಣಗಳೊಳಗೆ ಒಂದನೇದಾದ ವಿದಾರಿಗಂಧಾದಿ ಎಂತ ನಿ ಸಂ ವ್ಯಾ (ಪು 646) ಆ ಗಣದ ಔಷಧಗಳ ನೀರು ವಾತಜತೃಷ್ಣೆಯಲ್ಲಿ ಪ್ರಶಸ್ತ ಎಂತ ವಾಗ್ಭಟನೂ ಹೇಳಿರುತ್ತಾನೆ (ಪು 295) ಆದರೆ ಪಂಚ ಪಂಚಮೂಲಗಳೊಳಗೆ ಒಂದನೇದಾದ ಹ್ರಸ್ವಪಂಚಮೂಲವು ವಿದಾರಿಗಂಧಾದಿಯಷ್ಟೇ, ಅಥವಾ ಅದಕ್ಕಿಂತ ಹೆಚ್ಚು, ತೃಷ್ಣೆಯ ಶಾಂತಿಗೆ ಪ್ರಯೋಜನಕಾರಿ ಎಂತ ಕಾಣುತ್ತದೆ 'ಅಲ್ಪಶಃ' ಎಂಬಲ್ಲಿ 'ಅಚಿರೇಣ' ಎಂತ ಇರುವ ಪಾಠಾಂತರವು ಸಮರ್ಪಕವಾಗಿ ಕಾಣುವದಿಲ್ಲ ಬಾಯಾರಿಕೆಯುಂಟಾದಲ್ಲಿ ನೀರನ್ನು ಅಲ್ಪವಾಗಿಯೇ ಕುಡಿಯತಕ್ಕದ್ದೆಂಬದು ಮುಖ್ಯ ಉಪದೇಶ. ಬಾಯಾರಿಕೆಗೆ ಕುಡಿಯುವದಕ್ಕೆ ಕಷಾಯದ ನೀರನ್ನು ಮಾಡುವ ಕ್ರಮವು 1ನೇ ಭಾಗದ XX-30ರಲ್ಲಿ ನಿರ್ದಿಷ್ಟವಾಗಿದೆ

ತೃಷ್ಣಾಯಾಂ ಪವನೋತ್ಥಾಯಾಂ ಸಗುಡಂ ದಧಿ ಶಸ್ಯತೇ || (ವಾ. 295)
ವಾತದಿಂದ ಹುಟ್ಟಿದ ತೃಷ್ಣೆಯಲ್ಲಿ ಬೆಲ್ಲ ಕೂಡಿಸಿದ ಮೊಸರು ಪ್ರಶಸ್ತವಾಗಿರುತ್ತದೆ

ಷರಾ ಇದನ್ನು ಅಲ್ಪ ಪ್ರಮಾಣದಲ್ಲಿ ಕೊಟ್ಟು ನೋಡಬೇಕು ಉಪದ್ರವಗಳು ಸೇರಿರುವಲ್ಲಿ ಅದು ಅಹಿತವಾಗಬಹುದು

13. ಪಿತ್ತಘ್ನವರ್ಗೇಣ ಕೃತಃ ಕಷಾಯಃ ಸಶರ್ಕರಃ ಕ್ಷೌದ್ರಯುತಃ ಸುಶೀತಃ |
ಪೀತಸ್ತೃಷಾಂ ಪಿತ್ತಕೃತಾನ್ನಿ(?ಂನಿ)ಹನ್ತಿ ಕ್ಷೀರಂ ಶೃತಂ ವಾಪ್ಯಥ ಜೀವ
ನೀಯೈಃ || (ಸು. 813)

ಪಿತ್ತಜ ತೃಷ್ಣೆಯ ಚಿಕಿತ್ಸೆ

ಪಿತ್ತನಾಶನ ವರ್ಗದ ಔಷಧಗಳಿಂದ ಸಿದ್ಧಮಾಡಿದ ಕಷಾಯವನ್ನು ತಣಿಸಿ, ಶೀತವಾದ ಮೇಲೆ ಜೇನನ್ನೂ ಸಕ್ಕರೆಯನ್ನೂ ಬೆರಸಿ, ಕುಡಿಯುವದರಿಂದ ಪಿತ್ತದಿಂದುಂಟಾದ ತೃಷ್ಣೆಯು ನಾಶವಾಗುವದು; ಅಥವಾ ಜೀವನೀಯವರ್ಗದ ಔಷಧಗಳನ್ನು ಕೂಡಿಸಿ ಕಾಯಿಸಿದ ಹಾಲುಕಷಾಯವನ್ನು ಕುಡಿಯುವದು.

ಷರಾ ಪಿತ್ತಘ್ನವರ್ಗ ಎಂದರೆ ಉತ್ಪಲಾದಿ, ಸಾರಿವಾದಿ ಮತ್ತು ಕಾಕೋಲ್ಯಾದಿ ಔಷಧಗಣಗಳು ಮತ್ತು ಜೀವನೀಯಗಳು ಎಂದರೆ ಕಾಕೋಲ್ಯಾದಿ ಗಣ ಎಂತ ನಿ ಸಂ. ವ್ಯಾ. (ಪು 646) ಆದರೆ ಇದರ ಉಪೋದ್ಘಾತದ 4ನೇ ಪರಿಶಿಷ್ಟದ 6ನೇ ಸಂಖ್ಯೆಯನ್ನೂ, 1ನೇ ಪರಿಶಿಷ್ಟದ 16ನೇ ಸಂಖ್ಯೆಯ ಅಡಿ ಷರಾವನ್ನೂ ನೋಡಿ ಜೀವನೀಯಗಳಿಂದ ತಯಾರಿಸಲ್ಪಟ್ಟ ಹಾಲುಕಷಾಯವನ್ನು ಚರಕನು ವಾತಪಿತ್ತಜತೃಷ್ಣೆಗೆ ಹೇಳಿರುತ್ತಾನೆ.

ಪೈತ್ತೇ ದ್ರಾಕ್ಷಾಚನ್ದನಖರ್ಜೂರೋಶೀರಮಧುಯುತಂ ತೋಯಮ್ ||
(ಚ. 720)

ದ್ರಾಕ್ಷೆ, ಶ್ರೀಗಂಧ, ಖರ್ಜೂರ, ಲಾವಂಚ ಮತ್ತು ಜ್ಯೇಷ್ಠಮಧು, ಇವುಗಳನ್ನು ಸೇರಿಸಿ ಮಾಡಿದ (ಕಷಾಯದ) ನೀರನ್ನು ಕುಡಿಯುವದು ಪಿತ್ತಜ ತೃಷ್ಣೆಯಲ್ಲಿ ಸುಖಕರ.

ವಟವಾತುಲುಂಗವೇತಸಪಲ್ಲವಕುಶಕಾಶಮೂಲಯಷ್ಟ್ಯಾಹ್ವೈಃ |
ಸಿದ್ಧೇಽಪ್ಸ್ವಗ್ನಿನಿಭಾಃ ಕೃಷ್ಣಮೃದಃ ಕೃಷ್ಣಸಿಕತಾ ವಾ ||
ತಪ್ತಾನಿ ನರ (?ವ)ಕಪಾಲಾನ್ಯಥವಾ ನಿರ್ವಾಪ್ಯ ಪಾಯಯೇತಾಚ್ಛಮ್ |
ಅಲ್ಪಪಕ್ವಶರ್ಕರಾಮೃತವಲ್ಲ್ಯುದಕಂ ವಾ ತೃಷಂ ಹನ್ತಿ ||
ಕ್ಷೀರವತಾಂ ಮಧುರಾಣಾಂ ಶೀತಾನಾಂ ಶರ್ಕರಾಮಧುವಿಮಿಶ್ರಾಃ |
ಶೀತಕಷಾಯಾ ಮೃದ್‌ಭೃಷ್ಟಸಂಯುತಾಃ ಪಿತ್ತತೃಷ್ಣಾಘ್ನಾಃ ||
(ಚ. 721)

ಗೋಳಿಯ, ವಾದಳದ ಮತ್ತು ಬೆತ್ತದ ಕುಡಿಗಳು, ದರ್ಭೆಯ ಮತ್ತು ಕಾಶದರ್ಭೆಯ ಬೇರುಗಳು ಮತ್ತು ಜ್ಯೇಷ್ಠಮಧು, ಇವುಗಳ ಕಷಾಯದ ನೀರಿನಲ್ಲಿ ಸುಟ್ಟು, ಕೆಂಡದ ವರ್ಣವಾದ ಕರಿಮಣ್ಣನ್ನು ಅಥವಾ ಕರಿರೇತಿಯನ್ನು, ಅಥವಾ ಕಾಯಿಸಲ್ಪಟ್ಟ ಹೊಸ ಮಡಿಕೆಯ ಓಡುಗಳನ್ನು ಅದ್ದಿ, ಹನಿದ ನೀರನ್ನು ಕುಡಿಸಬೇಕು; ಅಥವಾ ಅಮೃತಬಳ್ಳಿಯ ಕಷಾಯದ ನೀರನ್ನು, ಅಲ್ಪವಾಗಿ ಕಲ್ಲುಸಕ್ಕರೆ ಚೂರ್ಣವನ್ನು ಕೂಡಿಸಿ, ಕುಡಿಯುವದರಿಂದ ಬಾಯಾರಿಕೆಯು ನಿಲ್ಲುತ್ತದೆ. ಹಾಲುಮರಗಳಿಂದ, ಮಧುರವರ್ಗದ ಔಷಧಗಳಿಂದ, ಮತ್ತು ಶೀತವೀರ್ಯದ ಔಷಧಗಳಿಂದ, ತಯಾರಿಸಿದ ಶೀತಕಷಾಯಗಳಲ್ಲಿ ಸುಟ್ಟ ಮಣ್ಣಿನ ಹೆಂಟೆಯನ್ನು ಅದ್ದಿ, ಆ ಕಷಾಯಗಳನ್ನು ಸಕ್ಕರೆ ಮತ್ತು ಜೇನು ಕೂಡಿಸಿಕೊಂಡು, ಪಾನಮಾಡುವದರಿಂದ ಪಿತ್ತಜ ತೃಷ್ಣೆಯು ಪರಿಹಾರವಾಗುತ್ತದೆ.

ಗೋಛಾಗಮಹಿಷೀಕ್ಷೀರಂ ಶೀತಂ ಶರ್ಕರಯಾ ಯುತಮ್ |
ಪಾನಾಶನಾತ್ಪಿತ್ತತೃಷ್ಣಾಂ ಜಯೇದ್ದ್ರಾಕ್ಷಾರಸೋಽಥವಾ ||
(ವೈ. ಸಾ. ಸಂ. 188)

ದನದ, ಆಡಿನ ಅಥವಾ ಎಮ್ಮೆಯ ಹಾಲನ್ನು ಕಾಯಿಸಿ ತಣಿಸಿ, ಸಕ್ಕರೆ ಕೂಡಿಸಿಕೊಂಡು, ಕುಡಿಯುವದಕ್ಕೂ, ಊಟಕ್ಕೂ ಉಪಯೋಗಿಸುವದರಿಂದ, ಅಥವಾ ದ್ರಾಕ್ಷೆಯ ರಸವನ್ನು ಕುಡಿಯುವದರಿಂದ, ಪಿತ್ತಜ ತೃಷ್ಣೆಯು ಅಡಗುವದು.

ದ್ರಾಕ್ಷಾಚನ್ದನಖರ್ಜೂರೀ (?ರಿ) ಪೀತಂ ಮಧುಯುತಂ ಜಲಮ್ |
ತೃಷ್ಣಾಹರಂ ಪಿಬೇದ್ವಾಪಿ ಮಧುನಾ ತಣ್ಡುಲೋದಕಮ್ ||
(ಚಿ. ಸಾ. ಸಂ. 285—6)

ದ್ರಾಕ್ಷೆ, ರಕ್ತಚಂದನ ಮತ್ತು ಖರ್ಜೂರ, ಇವುಗಳ ಕಷಾಯದ ನೀರನ್ನು (ಅಥವಾ ಶೀತ ಕಷಾಯವನ್ನು), ಅಥವಾ ಅಕ್ಕಿ ತೊಳೆದ ನೀರನ್ನು, ಜೇನು ಕೂಡಿಸಿಕೊಂಡು, ಪಾನ ಮಾಡುವದರಿಂದ ತೃಷ್ಣೆಯು ಪರಿಹಾರವಾಗುವದು.

ಕಾಶ್ಮರ್ಯಂ ಶರ್ಕರಾಯುಕ್ತಂ ಚನ್ದನೋಶೀರಧಾನ್ಯಕಮ್ ।
ದ್ರಾಕ್ಷಾಮಧುಕಸಂಯುಕ್ತಂ ಪಿತ್ತತರ್ಷೇ ಜಲಂ ಪಿಬೇತ್ ॥

(ಚಿ. ಸಾ. ಸಂ 285)

ಶಿವನಿಯ (ಕುಮುಳ್) ಹಣ್ಣು, ಶ್ರೀಗಂಧ, ಲಾವಂಚ, ಕೊತ್ತುಂಬರಿ, ದ್ರಾಕ್ಷೆ, ಮತ್ತು ಜ್ಯೇಷ್ಠಮಧು, ಇವುಗಳ ಕಷಾಯದ ನೀರನ್ನು, ಸಕ್ಕರೆ ಕೂಡಿಸಿಕೊಂಡು, ಪಿತ್ತಜ ತೃಷೆಯಲ್ಲಿ ಕುಡಿಯಬೇಕು.

ಪಿತ್ತಜಾಯಾಂ ಸಿತಾಯುಕ್ತಃ ಪಕ್ವೋದುಮ್ಬರಜೋ ರಸಃ ।
ತತ್ಕ್ವಾಥೋ ವಾ ಹಿಮಸ್ತದ್ವತ್ಸಾರಿವಾದಿಗಣಾಮ್ಬು ವಾ ॥ (ವಾ. 295)

ಪೈತ್ತಿಕ ತೃಷೆಯಲ್ಲಿ ಅಂಜೂರದ ಹಣ್ಣಿನ ರಸವನ್ನು, ಅಥವಾ ಅದರ ಕಷಾಯವನ್ನು ಅಥವಾ ಸಾರವಾದಿ ಗಣದ ಔಷಧಗಳಿಂದ ತಯಾರಿಸಿದ ಕಷಾಯದ ನೀರನ್ನು ತಣಿಸಿ, ಸಕ್ಕರೆ ಕೂಡಿಸಿಕೊಂಡು, ಕುಡಿಯಬೇಕು.

14. ಕಫಜ ತೃಷ್ಣೆಯ ಚಿಕಿತ್ಸೆ

ಕಫೋದ್ಭವಾಯಾಂ ವಮನಂ ನಿಮ್ಬಪ್ರಸವವಾರಿಣಾ ।
ಬಿಲ್ವಾಢಕೀಪಂಚಕೋಲದರ್ಭಪಂಚಕಸಾಧಿತಮ್ ॥
ಜಲಂ ಪಿಬೇದ್ರಜನ್ಯಾಂ (?ನ್ಯಾ) ವಾ ಸಿದ್ಧಂ ಸಕ್ಷೌದ್ರಶರ್ಕರಮ್ ।
ಮುದ್ಗಯೂಷಂ ಚ ಸವ್ಯೋಷಪಟೋಲೀನಿಮ್ಬಪಲ್ಲವಮ್ ॥
ಯವಾನ್ನಂ ತೀಕ್ಷ್ಣಕವಲನಸ್ಯಲೇಹಾಂಶ್ಚ ಶೀಲಯೇತ್ ॥

(ವಾ. 295-6)

ಕಫದಿಂದ ಉತ್ಪನ್ನವಾದ ತೃಷೆಯಲ್ಲಿ, ಕಹಿಬೇವಿನ ಚಿಗುರನ್ನು ಸೇರಿಸಿ ಮಾಡಿದ ಕಷಾಯದ ನೀರನ್ನು ಕುಡಿಸಿ, ವಾಂತಿಮಾಡಿಸುವದು. ಅನಂತರ ಬಿಲ್ಲಪತ್ರೆ ಬೇರು, ತೊಗರಿ, ಪಂಚಕೋಲಗಳು ಮತ್ತು ತೃಣಪಂಚಮೂಲಗಳನ್ನು ಕೂಡಿಸಿ ಮಾಡಿದ, ಅಥವಾ ಅರಸಿನ ಸೇರಿಸಿ ಮಾಡಿದ, ಕಷಾಯದ ನೀರನ್ನು (ತಣಿಸಿ), ಸಕ್ಕರೆ ಮತ್ತು ಜೇನನ್ನು ಕೂಡಿಸಿಕೊಂಡು, ಕುಡಿಯಬೇಕು; ತ್ರಿಕಟು, ಕಹಿಪಡುವಲು ಮತ್ತು ಕಹಿಬೇವಿನ ಕುಡಿಯನ್ನು ಕೂಡಿಸಿ ಮಾಡಿದ ಹೆಸರಿನ ಸಾರಿನಿಂದ ಯವೆಗೋದಿಯ ಅನ್ನವನ್ನು ಉಣ್ಣಬೇಕು; ಮತ್ತು ತೀಕ್ಷ್ಣವಾದ ಕವಲವನ್ನೂ, ನಸ್ಯವನ್ನೂ, ಲೇಹಗಳನ್ನೂ ಉಪಯೋಗಿಸುತ್ತಾ ಬರಬೇಕು.

ಷರಾ 1ನೇ ಶ್ಲೋಕದಲ್ಲಿ ಹೇಳಲ್ಪಟ್ಟ ಯೋಗಗಳು ಸುಶ್ರುತದಲ್ಲಿರುವಂಥವು ಅಲ್ಲಿ ಪಂಚಕೋಲಗಳ ಸ್ಥಾನದಲ್ಲಿ ಕಂಟಕಪಂಚಮೂಲಗಳನ್ನು ಅಥವಾ ಹ್ರಸ್ವಪಂಚಮೂಲಗಳನ್ನು ಕೂಡಿಸಬೇಕೆಂಬ ಅರ್ಥದಲ್ಲಿ ಬೇರೆ ಬೇರೆ ಪಾಠಗಳು ಇವೆ ಪಂಚಕೋಲಗಳು, ಪಿತ್ತಶಮನಕ್ಕೆ ವಿರುದ್ಧವಾದ್ದರಿಂದ, ಉಚಿತವಲ್ಲ ಎಂಬ ಪಕ್ಷ ಉಂಟು ಆದರೆ ಕಫಪರಿಹಾರಕ್ಕೆ ತೀಕ್ಷ್ಣವಾದ ಔಷಧಗಳು ಅವಶ್ಯ ಅವುಗಳ ಪ್ರಮಾಣವನ್ನು ತಗ್ಗಿಸಿ ಉಪಯೋಗಿಸಬೇಕಷ್ಟೆ ಹೆಸರಿನ ಸಾರಿನಿಂದ ಉಣ್ಣುವ ಬದಲಾಗಿ ಅದನ್ನು ಕುಡಿಯಬಹುದು.

ತಕ್ರಂ ದ್ರವಂ ಚ ಕಟ್ವಮ್ಲಂ ಕಫತೃಷ್ಣಾನಿಬರ್ಹಣಮ್ ॥

(ಚಿ. ಸಾ. ಸಂ. 286)

ಮಜ್ಜಿಗೆ ಮತ್ತು ಕಾರ-ಹುಳಿ ದ್ರವ್ಯಗಳ (ಕಷಾಯಾದಿ) ದ್ರವಗಳು ಕಫಜ ತೃಷೆಯನ್ನು ಪರಿಹರಿಸುತ್ತವೆ.

15. ವ್ಯೋಷವಚಾಭಲ್ಲಾತಕತಿಕ್ತಕಷಾಯಾಸ್ತಥಾಮತೃಷ್ಣಾಯಾಮ್ |
ಯಚ್ಚೋಕ್ತಂ ಕಫಜಾಯಾಂ ವಮ್ಯಾಂ ತಚ್ಚೈವ ಕಾರ್ಯಂ ಸ್ಯಾತ್ ||
ಸ್ತಮ್ಭಾರುಚ್ಯವಿಪಾಕಾಲಸ್ಯಛರ್ದಿಷು ಕಫಾನುಗಾಂ ತೃಷ್ಣಾಮ್ |
ಜ್ಞಾತ್ವಾ ದಧಿಮಧುತರ್ಪಣಲವಣೋಷ್ಣಜಲೈರ್ವಮನಮಿಷ್ಟಮ್ ||
ದಾಡಿಮಮದನಫಲಂ ವಾಪ್ಯನ್ಯತಮಕಷಾಯಮಥ ಲೇಹಮ್ |
ಪೇಯಮಥವಾ ಹರಿದ್ರಾಮ್ಬು ಶರ್ಕರಾಕ್ಷೌದ್ರಸಂಯುಕ್ತಮ್ (ಚ. 721)

ಆಮಜ ತೃಷ್ಣೆಯ ಚಿಕಿತ್ಸೆ

ತ್ರಿಕಟು, ಬಜೆ, ಗೇರುಕಾಯಿ, ಕಹಿ ದ್ರವ್ಯಗಳು, ಇವುಗಳನ್ನು ಸೇರಿಸಿ ಮಾಡಿದ ಕಷಾಯಗಳು ಆಮಜ ತೃಷ್ಣೆಯಲ್ಲಿ ಹಿತ; ಮತ್ತು ಕಫದ ವಾಂತಿಗೆ ಯಾವ ಪ್ರತೀಕಾರ ಹೇಳಲ್ಪಟ್ಟಿದೊ ಅದನ್ನು ಸಹ ಮಾಡಬೇಕು. ಸ್ತಬ್ಧತೆ, ಅರುಚಿ, ಅಜೀರ್ಣ, ಆಲಸ್ಯ ಮತ್ತು ವಾಂತಿ, ಈ ಲಕ್ಷಣಗಳು ಕಂಡರೆ ತೃಷ್ಣೆಯು ಕಫವನ್ನನುಸರಿಸಿ ಬಂದದ್ದೆಂತ ತಿಳಿದು, ಮೊಸರು, ಜೇನು, (ದ್ರವರೂಪವಾದ) ತರ್ಪಣ, ಉಪ್ಪುನೀರು, ಬಿಸಿನೀರು, ಇವುಗಳೊ(ಳಗೊಂದರೊ)ಂದಿಗೆ ವಮನ ಔಷಧವನ್ನು ಅಥವಾ ದಾಳಿಂಬ ಮತ್ತು ಮಂಗಾರೆಕಾಯಿಯನ್ನು (ಅವುಗಳ ಕಷಾಯವನ್ನು) ಕೊಡುವದು ಹಿತವಾಗುತ್ತದೆ; ಅಥವಾ ಬೇರೆ (ಕಫಜವಾಂತಿ ನಿಲ್ಲಿಸತಕ್ಕ) ಕಷಾಯ ಅಥವಾ ಲೇಹವನ್ನು ಕೊಡುವದು, ಅಥವಾ ಅರಸಿನದ ಕಷಾಯದ ನೀರನ್ನು ಸಕ್ಕರೆ ಮತ್ತು ಜೇನು ಕೂಡಿಸಿ ಕುಡಿಯಬೇಕು.

ಷರಾ ಈ ಅರಸಿನದ ನೀರಿನ ಯೋಗವನ್ನು ವಾ ನು ಕಫಜ ತೃಷ್ಣೆಗೆ ಹೇಳಿದ್ದಾನೆ

ಆಮೋದ್ಭವಾಂ ಬಿಲ್ವವಚಾಯುತಾನಾಂ ಜಯೇತ್ಕಷಾಯೈರಥ ದೀಪ-
ನಾನಾಮ್ |
ಆಮ್ರಾತಭಲ್ಲಾತಬಲಾಯುತಾನಿ ಪಿಬೇತ್ಕಷಾಯಾಣ್ಯಥ ದೀಪನಾನಿ ||
(ಸು. 841)

ಆಮಜತೃಷ್ಣೆಯನ್ನು ಬಿಲ್ಲಪತ್ರೆ ಮತ್ತು ಬಜೆ ಸೇರಿದ ದೀಪನಕರವಾದ ದ್ರವ್ಯಗಳ ಕಷಾಯಗಳಿಂದ ಜಯಿಸತಕ್ಕದ್ದು; ಮತ್ತು ಅಮಟೆಕೆತ್ತೆ, ಗೇರುಕೆತ್ತೆ ಮತ್ತು ಕಲ್ಲಂಗಡಲೆ ಬೇರು ಸೇರಿದ ದೀಪನಕರವಾದ ಕಷಾಯಗಳನ್ನು ಕುಡಿಯಬೇಕು.

ಸರ್ವೈರಾಮಾಚ್ಚ ತದ್ವನ್ತ್ರೀ ಕ್ರಿಯೇಷ್ಟಾ ವಮನಂ ತಥಾ ||
(ವಾ. 296)

ತ್ರಿದೋಷಗಳಿಂದಲೂ ಆಮದಿಂದಲೂ ಉಂಟಾದ ತೃಷ್ಣೆಗಳಲ್ಲಿ, ತ್ರಿದೋಷಗಳನ್ನೂ ಆಮವನ್ನೂ ಪರಿಹರಿಸತಕ್ಕ ಪ್ರತಿಕ್ರಿಯೆಯೂ ವಮನವೂ ಹಿತವಾಗುತ್ತವೆ.

16. ಕ್ಷಯಜಾಯಾಂ ಕ್ಷಯಹಿತಂ ಸರ್ವಂ ಬೃಂಹಣಮೌಷಧಮ್ |
ಕೃಶದುರ್ಬಲರೂಕ್ಷಾಣಾಂ ಕ್ಷೀರಂ ಛಾಗೋ ರಸೋಽಥವಾ ||
ಕ್ಷೀರಂ ಚ ಸೋರ್ಧ್ವವಾತಾಯಾಂ ಕ್ಷಯಕಾಸಹರೈಃ ಶೃತಮ್ |
(ವಾ. 296)

ಕ್ಷಯಜ ತೃಷ್ಣೆಯ ಚಿಕಿತ್ಸೆ

ಕ್ಷಯದಿಂದ ಹುಟ್ಟಿದ ತೃಷ್ಣೆಯಲ್ಲಿ ಕ್ಷಯಕ್ಕೆ ಹಿತವಾದ ಬೃಂಹಣ ಗುಣವುಳ್ಳ ಎಲ್ಲಾ ಔಷಧಗಳು ಹಿತ. ಕೃಶರೂ, ದುರ್ಬಲರೂ, ರೂಕ್ಷಶರೀರದವರೂ ಆದವರಿಗೆ ಹಾಲು ಅಥವಾ

ಆಡಿನ ಮಾಂಸರಸವು ಹಿತವಾಗುತ್ತದೆ. ಊರ್ಧ್ವವಾಯು ಉಂಟಾದ ತೃಷ್ಣೆಯಲ್ಲಿ ಕ್ಷಯದ ಕೆಮ್ಮು ಪರಿಹಾರಕರವಾದ ಔಷಧಗಳನ್ನು ಸೇರಿಸಿ ಕಾಯಿಸಿದ ಹಾಲು ಹಿತ.

ಕ್ಷಯಕಾಸೇನ ತು ತುಲ್ಯಾ ಕ್ಷಯತೃಷ್ಣಾ ಗರೀಯಸೀ ಯಾ ನೃಣಾಮ್ ।
ಕ್ಷೀಣಕ್ಷತಶೋಷಹಿತೈಸ್ತಸ್ಮಾತ್ ತಾ ಭೇಷಜ್ಯೈಃ ಶಮಯೇತ್ ॥
(ಚ. 721)

ಮನುಷ್ಯರಲ್ಲಿ ಕ್ಷಯಜ ತೃಷ್ಣೆಯು ಕ್ಷಯದ ಕೆಮ್ಮಿಗೆ ಸದೃಶವಾದದ್ದು ಮತ್ತು ಅದಕ್ಕೂ ಕಠಿಣವಾದದ್ದು. ಆದ್ದರಿಂದ ಕ್ಷಯ, ಕ್ಷತಕ್ಷೀಣ ಮತ್ತು ಶೋಷಗಳಲ್ಲಿ ಉಂಟಾದ ತೃಷ್ಣೆಗಳನ್ನು ಆ ರೋಗಗಳಿಗೆ ಹಿತವಾದ ತಕ್ಕ (ತೃಷ್ಣಾ ಪರಿಹಾರಕರವಾದ) ಔಷಧಗಳಿಂದ ಉಪಶಮನ ಮಾಡತಕ್ಕದ್ದು.

ಕ್ಷಯೋತ್ಥಿತಾಂ ಕ್ಷೀರಜಲಂ ನಿಹನ್ಯಾನ್ಮಾಂಸೋದಕಂ ವಾಮಧುರೋದಕಂ ವಾ ॥ (ಭಾ. ಪ್ರ. 387)

ಹಾಲು ಕೂಡಿಸಿದ ನೀರು, ಮಾಂಸದ ನೀರು (ರಸ), ಅಥವಾ ಬೆಲ್ಲ ಅಥವಾ ಸಕ್ಕರೆಯ ಪಾನಕವು ಕ್ಷಯದಿಂದ ಹುಟ್ಟಿದ ತೃಷ್ಣೆಯನ್ನು ನಾಶಮಾಡುವದು.

ಷರಾ 'ಮಧುರೋದಕಂ' ಎಂಬಲ್ಲಿ 'ಮಧುಕೋದಕಂ' ಎಂತ ಪಾಠ ಉಂಟು. ಸಡಿಲಾದ ಕಫವಿರುವಲ್ಲಿ ಜೇನು ಕೂಡಿಸಿದ ನೀರನ್ನು, ಕಫ ಒಣಗಿರುವಲ್ಲಿ ಜ್ಯೇಷ್ಠಮಧುವಿನ ಕಷಾಯದ ನೀರನ್ನು, ಪಾನಕದ ಬದಲಾಗಿ ಉಪಯೋಗಿಸಬಹುದು.

17. ಕ್ಷತೋದ್ಭವಾಂ ರುಗ್ವಿನಿವಾರಣೇನ ಜಯೇದ್ರಸಾನಾಮಸೃಜಶ್ಚ ಪಾನೈಃ ॥
(ಸು. 844)

ಕ್ಷತಜ ತೃಷ್ಣೆಯ ಚಿಕಿತ್ಸೆ

ಕ್ಷತದ ತೃಷ್ಣೆಯನ್ನು ಆ ಕ್ಷತದ ನಿವಾರಣದಿಂದಲೂ, ಮಾಂಸರಸಗಳ ಅಥವಾ (ಜಿಂಕೆ ಮೊದಲಾದವುಗಳ) ರಕ್ತದ ಪಾನಗಳಿಂದಲೂ, ಜಯಿಸಬೇಕು.

ಷರಾ ಹಿಂದಿನ 16ನೇ ಸಂಖ್ಯೆ ನೋಡಿ

18. ಗುರ್ವನ್ನಜಾತಾಂ ವಮನೈರ್ಜಯೇಚ್ಚ ಕ್ಷಯಾದೃತೇ ಸರ್ವಕೃತಾಶ್ಚ ತೃಷ್ಣಾಃ ॥ (ಸು. 844)

ಗುರ್ವನ್ನಜ ತೃಷ್ಣೆಯ ಚಿಕಿತ್ಸೆ

ಗುರುಭೋಜನದಿಂದುಂಟಾದ ತೃಷ್ಣೆಯನ್ನೂ, ಕ್ಷಯದಿಂದುಂಟಾದ್ದೊಂದನ್ನು ಬಿಟ್ಟು ಇತರ ಎಲ್ಲಾ ತೃಷ್ಣೆಗಳನ್ನೂ ವಾಂತಿಮಾಡಿಸುವದರಿಂದ ಗೆಲ್ಲಬೇಕು.

ಷರಾ 'ಸರ್ವಕೃತಾಶ್ಚ ತೃಷ್ಣಾಃ' ಎಂಬಲ್ಲಿ 'ಸರ್ವಕೃತಾಂಚತೃಷ್ಣಾಂ' ಎಂತ ಪಾಠವಿಟ್ಟು ತ್ರಿದೋಷಗಳಿಂದ ಉಂಟಾದ ತೃಷ್ಣೆಯನ್ನು ಅಂದರೆ ಆಮಜತೃಷ್ಣೆಯನ್ನು ಎಂತ ವ್ಯಾಖ್ಯಾನ ಬರೆದದ್ದು ಉಂಟು ಆದರೆ ಕಫಜದಲ್ಲಿ ವಾಂತಿಮಾಡಿಸಬೇಕೆಂತ ಸುಶ್ರುತನೇ ಹೇಳಿರುತ್ತಾನೆ ರೋಗಿಯು ಸಾಕಷ್ಟು ಶಕ್ತಿಯುಳ್ಳವನಾದರೆ ಯಾವ ದೋಷದಿಂದ ಉಂಟಾದ ತೃಷ್ಣೆಯಲ್ಲಿಯಾದರೂ ವಮನವು ಗುಣಕರವಾಗುವದು ಎಂಬದೇ ಸಮರ್ಪಕವಾದ ತಾತ್ಪರ್ಯ ಎಂತ ಕಾಣುತ್ತದೆ ಕೆಳಗೆ 29ನೇ ಸಂಖ್ಯೆ ನೋಡಿ.

ಗುರುಭೋಜನದಿಂದ ಬಾಯಾರಿಕೆ ಉಂಟಾದಲ್ಲಿ, ಉಂಡ ಆಹಾರವನ್ನು ವಾಂತಿಮಾಡಿಸಬೇಕು ರೋಗಿಯು ಬಲವಂತನಾದರೆ, ಬಿಸಿನೀರನ್ನು ಕುಡಿದು ಗಂಟಲಿಗೆ ಬೆರಳು ಅಥವಾ ಕಡ್ಡಿಯನ್ನು ಹಾಕಿ ವಾಂತಿಮಾಡತಕ್ಕದ್ದು ಎಂತ ಚ (ಪು 721)

19. ಭಕ್ತೋಪರೋಧಾತ್ತೃಷಿತೋ ಯವಾಗೂಮುಷ್ಣಾಂ ಪಿಬೇನ್ಮಂಥಮಥೋ ಹಿಮಂ ಚ || (ಸು. 844)

ಭಕ್ತೋಪರೋಧದ (ಉಪವಾಸದ) ತೃಷ್ಣೆಗೆ ಉಪಚಾರ

ಅನ್ನ ಬಿಟ್ಟದ್ದರಿಂದ ಉಂಟಾದ ತೃಷ್ಣೆಯುಳ್ಳವನು ಬಿಸಿಯಾದ ಯವಾಗೂ ಗಂಜಿಯನ್ನು ಕುಡಿದು ಅನಂತರ ತಣ್ಣಗಾದ ಮಂಥವನ್ನು ಕುಡಿಯಬೇಕು.

ಪರಾ ಮಂಥದ ವರ್ಣನಕ್ಕೆ 1ನೇ ಭಾಗದ XX-23 ನೋಡಿ ತೆಳುವಾದ ಯವಾಗೂವನ್ನು ಕುಡಿಯಬೇಕೆಂತ ಚ (ಪು 721)

20. ಯಾ ಸ್ನೇಹಪೀತಸ್ಯ ಭವೇಚ್ಚ ತೃಷ್ಣಾ ತತ್ರೋಷ್ಣಮಮ್ಭುಃ ಪ್ರಪಿಬೇನ್ಮನುಷ್ಯಃ || (ಸು. 845)

ಸ್ನೇಹಪಾನದ ತೃಷ್ಣೆಗೆ ಉಪಚಾರ

ಸ್ನೇಹಪಾನಮಾಡಿದವನಿಗೆ ತೃಷ್ಣೆಯುಂಟಾದಾಗ್ಗೆ, ಅವನು ಬಿಸಿನೀರನ್ನು ಚನ್ನಾಗಿ ಕುಡಿಯತಕ್ಕದ್ದು.

ಪರಾ ಈ ತೃಷ್ಣೆಗೂ ತೆಳ್ಳಗಾದ ಯವಾಗೂವನ್ನು ಕುಡಿಯಬೇಕೆಂತ ಚ (ಪು 721).

21. ಸ್ನಿಗ್ಧೇಽನ್ನೇ ಭುಕ್ತೇ ಯಾ ತೃಷ್ಣಾ ಸ್ಯಾತ್ತಾಂ ಗುಡಾಮ್ಬುನಾ ಶಮಯೇತ್ || (ಚ. 722)

ಸ್ನಿಗ್ಧಾನ್ನದ ತೃಷ್ಣೆಗೆ ಉಪಚಾರ

ಸ್ನೇಹಯುಕ್ತವಾದ ಅನ್ನವನ್ನು ಉಂಡಲ್ಲಿ ಉಂಟಾಗುವ ಬಾಯಾರಿಕೆಯನ್ನು ಬೆಲ್ಲದ ನೀರಿನಿಂದ ಉಪಶಮನಮಾಡಬೇಕು.

22. ಮದ್ಯೋದ್ಭವಾಮರ್ಧಜಲಂ ನಿಹನ್ತಿ ಮದ್ಯಂ ತೃಷಾಂ ಯಾಪಿ ಹಿ ಮದ್ಯಪಸ್ಯ || (ಸು. 845)

ಮದ್ಯಪಾನದ ತೃಷ್ಣೆಗೆ ಉಪಚಾರ

ಮದ್ಯಪಾನದ ಶೀಲವಿದ್ದವನಲ್ಲಿ ಮದ್ಯದಿಂದ ತೃಷ್ಣೆ ಉಂಟಾದರೆ, ಅದು ಅರ್ಧಾಂಶ ನೀರು ಬೆರಸಿದ ಮದ್ಯವನ್ನು ಕುಡಿಯುವದರಿಂದ ನಿಲ್ಲುತ್ತದೆ.

ಪರಾ ಆ ಮದ್ಯದ ನೀರು, ಹುಳಿ, ಉಪ್ಪು ಮತ್ತು ಸುಗಂಧದ್ರವ್ಯಯುಕ್ತವಾದ್ದಾಗಬೇಕೆಂತ ಚ. (ಪು 721)

23. ಉಷ್ಣೋದ್ಭವಾಂ ಹನ್ತಿ ಜಲಂ ಸುಶೀತಂ ಸಶರ್ಕರಂ ಚೇಕ್ಷುರಸಂ ತಥಾಮ್ಭುಃ || (ಸು. 845)

ಉಷ್ಣದ ತೃಷ್ಣೆಗೆ ಉಪಚಾರ

ಉಷ್ಣದಿಂದ ಉತ್ಪನ್ನವಾದ ತೃಷ್ಣೆಯನ್ನು ಸಕ್ಕರೆ ಬೆರಸಿದ ಒಳ್ಳೆ ತಣ್ಣಗಾದ ನೀರು, ಕಬ್ಬಿನ ರಸ ಮತ್ತು (ಬರೇ) ನೀರು ನಿಲ್ಲಿಸುತ್ತವೆ.

ಪರಾ ಉಷ್ಣದಿಂದುಂಟಾದದ್ದು ಎಂದರೆ ಹೃದ್ರೋಗದಿಂದ ನೊಂದ ಮನುಷ್ಯನಿಗೆ ಕಡೆಗೆ ಉಂಟಾಗುವಂಥಾದ್ದೆಂತ ನಿ ಸಂ ವ್ಯಾ (ಪು 648) ಆದರೆ ಸೆಕೆಕಾಲದ, ಬಿಸಿಲಿನ, ಅಥವಾ ಬೆಂಕಿಯ ಸೆಕೆಯ ಉಷ್ಣತೆಯಿಂದ ಉಂಟಾದದ್ದೆಂತ ಅರ್ಥಮಾಡಬಾರದೇಕೆ?

24. ತರ್ಷಂ ಮೂರ್ಛಾಭಿಹತಸ್ಯ ರಕ್ತಪಿತ್ತಾಪಹೈರ್ಹನ್ಯಾತ್ | (ಚ. 722)

ಮೂರ್ಛೆಯ ತೃಷೆಗೆ ಪರಿಹಾರ

ಮೂರ್ಛೆ ರೋಗದಿಂದ ಪೀಡಿತನಾದವನ ಬಾಯಾರಿಕೆಯನ್ನು ರಕ್ತಪಿತ್ತಹರಗಳಾದ ಯೋಗಗಳಿಂದ ಪರಿಹರಿಸತಕ್ಕದ್ದು.

25. ಪೂರ್ವಾಮಯಾತುರಃ ಸನ್ದೀನಸ್ತೃಷ್ಣಾರ್ದಿತೋ ಜಲಂ ಕಾಂಕ್ಷನ್ |
ಸ ಲಭೇತ ಸ ಚೇನ್ಮರಣಮಾಶ್ವೇವಾಪ್ನುಯಾದ್ದೀರ್ಘರೋಗಂ ವಾ ||
ತಸ್ಮಾದ್ಧಾನ್ಯಾಮ್ಬು ಪಿಬೇತ್ತೃಷ್ಯನ್ ರೋಗೀ ಸಶರ್ಕರಾಕ್ಷೌದ್ರಮ್ |
ಯದ್ವಾ ತಸ್ಯಾನ್ಯತ್ಸ್ಯಾತ್ಸಾತ್ಮ್ಯಂ ರೋಗಸ್ಯ ತಚ್ಚೇಷ್ಟಮ್ ||
ತಸ್ಯಾಂ ವಿನಿವೃತ್ತಾಯಾಂ ತಜ್ಜನ್ಯೋಪದ್ರವಃ ಸುಖಂ ಜೇತುಮ್ |
ತಸ್ಮಾತ್ತೃಷ್ಣಾಂ ಪೂರ್ವಂ ಜಯೇತ್ ಬಹುಭ್ಯೋಽಪಿ ರೋಗೇಭ್ಯಃ ||
(ಚ. 722)

ಔಪಸರ್ಗಿಕದಲ್ಲಿ ತೃಷ್ಣಾ ಚಿಕಿತ್ಸೆಯ ಪ್ರಧಾನ್ಯತೆ

ಮೊದಲು ಉಂಟಾದ ರೋಗದಿಂದ ಕಂಗೆಟ್ಟು, ತೃಷೆಯುಂಟಾಗಿ, ನೀರನ್ನು ಅಪೇಕ್ಷಿಸುವ ರೋಗಿಗೆ ನೀರು ಸಿಗದಿದ್ದರೆ, ಅವಸು ಬೇಗನೇ ಮೃತ್ಯುವಶನಾಗುವನು, ಅಥವಾ ಅವನಿಗೆ ದೀರ್ಘಕಾಲ ಪೀಡಿಸತಕ್ಕ ಬೇರೆ ರೋಗ ಉಂಟಾಗುವದು; ಆದ್ದರಿಂದ ಅವನ ಬಾಯಾರಿಕೆ ಶಾಂತಮಾಡುವದಕ್ಕೆ ಅವನು ಕೊತ್ತುಂಬರಿನೀರನ್ನು, ಸಕ್ಕರೆ ಮತ್ತು ಜೇನು ಕೂಡಿಸಿ, ಕುಡಿಯಬೇಕು, ಅಥವಾ ಅವನ ರೋಗಕ್ಕೆ ಹಿತವಾದ ಮತ್ತು ಅವನಿಗೆ ಸಾತ್ಮ್ಯವಾದ ಬೇರ (ಕಷಾಯಾದಿ) ಯಾವದಾದರೊಂದನ್ನು ಅವನಿಗೆ ಕೊಡತಕ್ಕದ್ದು. ಅವನ ಆ ಬಾಯಾರಿಕೆ ಪರಿಹಾರವಾದಲ್ಲಿ, ಅದರಿಂದ ಉಂಟಾದ ಉಪದ್ರವವು ಗೆಲ್ಲುವದಕ್ಕೆ ಸುಲಭವಾಗುತ್ತದೆ. ಆದ್ದರಿಂದ ಬೇರೆ ಅನೇಕ ರೋಗಗಳಿಗಿಂತಲೂ ಮುಂದಾಗಿ ತೃಷೆಯನ್ನು ಪರಿಹರಿಸಿಕೊಳ್ಳಬೇಕು.

26. ತೃಷಿತೋ ಮೋಹಮಾಯಾತಿ ಮೋಹಾತ್ಪ್ರಾಣಾನ್ ವಿಮುಂಚತಿ |
ತಸ್ಮಾತ್ಸರ್ವಾಸ್ವವಸ್ಥಾಸು ನ ಕ್ವಚಿದ್ವಾರಿ ವರ್ಜಯೇತ್ ||
ಅನ್ನೇನಾಪಿ ವಿನಾ ಜನ್ತುಃ ಪ್ರಾಣಾನ್ ಧಾರಯತೇ ಚಿರಮ್ |
ತೋಯಾಭಾವೇ ಪಿಪಾಸಾರ್ತಃ ಕ್ಷಣಾತ್ಪ್ರಾಣೈರ್ವಿಮುಚ್ಯತೇ ||
(ಚಿ. ಸಾ. ಸಂ 288)

ಮನುಷ್ಯನಿಗೆ ನೀರಿನ ಆವಶ್ಯಕತೆ

ಬಾಯಾರಿಕೆಯುಳ್ಳವನಿಗೆ ಕಣ್ಣುಕತ್ತಲೆ (ಅಥವಾ ಮೂರ್ಛೆ) ಉಂಟಾಗುತ್ತದೆ; ಮತ್ತು ಆ ಕಣ್ಣುಕತ್ತಲೆಯಿಂದ ಮರಣ ಉಂಟಾಗುತ್ತದೆ. ಆದ್ದರಿಂದ ಸರ್ವ ಅವಸ್ಥೆಗಳಲ್ಲಿಯೂ ಯಾರಿಗಾದರೂ ನೀರನ್ನು ವರ್ಜ್ಯಮಾಡಬಾರದು. ಪ್ರಾಣಿಯು ಅನ್ನಬಿಟ್ಟಾದರೂ ಹೆಚ್ಚು ಕಾಲ ಬದುಕಬಹುದು; ಆದರೆ ಬಾಯಾರಿಕೆಯ ಪೀಡೆಯುಳ್ಳವನಿಗೆ ನೀರು ಸಿಗದಿದ್ದರೆ ಕೂಡಲೆ ಅವನ ಪ್ರಾಣ ಹೋಗುತ್ತದೆ

27. ಶೀತಮುಷ್ಣಂ ಚ ಜಲಂ ಕುತ್ರ ದೇಯಂ ವರ್ಜ್ಯಂ ವಾ ಕುತ್ರೇತ್ಯಾಹ |
ಛರ್ದ್ಯಮ್ಲದಾಹಮೂರ್ಚ್ಛಾರ್ತಮಃಕ್ಲಮಮದಾತ್ಯಯಾಸ್ರವಿಷಪಿತ್ತೇ ||
ಶಸ್ತಂ ಸ್ವಭಾವಶೀತಂ ಶೃತಶೀತಂ ಸನ್ನಿಪಾತೇಽಮ್ಭಃ |
ಹಿಕ್ಕಾಶ್ವಾಸನವಜ್ವರಪೀನಸಘೃತಪೀತಪಾರ್ಶ್ವಗಲರೋಗೇ ||
ಕಫವಾತಕೃತೇ ಸ್ತ್ಯಾನೇ ಸದ್ಯಃ ಶುದ್ಧೇ ಹಿತಮುಷ್ಣಮ್ |
ಪಾಂಡೂದರಪೀನಸಮೇಹಗುಲ್ಮಮನ್ದಾತಿಸಾರೇಷು ||
ಪ್ಲೀಹ್ನಿ ಚ ತೋಯಂ ಹಿತಂ ಕಾಮಮಶಕ್ಯಂ ಪಿಬೇದಲ್ಪಮ್ ||
(ಚ. 722)

ಬಿಸಿನೀರಿನ ಮತ್ತು ತಣ್ಣೀರಿನ ಉಪಯೋಗಕ್ಕೆ ಸಂದರ್ಭಗಳು

ತಣ್ಣೀರನ್ನು ಯಾವ ಸಂಗತಿಯಲ್ಲಿ ಕೊಡಬೇಕು? ಬಿಸಿನೀರನ್ನು ಯಾವಾಗ ಕೊಡ ತಕ್ಕದ್ದು? ಯಾವಾಗ ನೀರನ್ನು ವರ್ಜ್ಯಮಾಡಬೇಕು? ಎಂಬದನ್ನು ಹೇಳುತ್ತಾರೆ: ವಾಂತಿ, ಅಮ್ಲಪಿತ್ತ, ಉರಿ, ಮೂರ್ಛೆ, ಕಣ್ಣುಕತ್ತಲೆ, ಕ್ಲಮ, ಮದಾತ್ಯಯ, ರಕ್ತಪಿತ್ತ, ವಿಷ, ಪಿತ್ತ, ಈ ರೋಗಗಳಲ್ಲಿ ಸ್ವಭಾವಿಕವಾದ ತಣ್ಣೀರು ಪ್ರಶಸ್ತ; ಸನ್ನಿಪಾತದಲ್ಲಿ ಕುದಿಸಿ ತಣಿಸಿದ ನೀರು ಪ್ರಶಸ್ತ; ಬಿಕ್ಕಟ್ಟು, ಉಬ್ಬಸ, ಹೊಸಜ್ವರ, ಪೀನಸ, ಘೃತಪಾನ ಮಾಡಿರುವದು, ಪಾರ್ಶ್ವ ಶೂಲ, ಗಲರೋಗ, ಕಫ-ವಾತದಿಂದ ಗಟ್ಟಿಯಾಗಿರುವಿಕೆ, ಆಗಲೇ (ವಿರೇಚನಾದಿ) ಶೋಧನ ಮಾಡಿಸಿಕೊಂಡದ್ದು, ಈ ಸಂದರ್ಭಗಳಲ್ಲಿ ಬಿಸಿನೀರು ಹಿತ; ಪಾಂಡುರೋಗ, ಉದರವ್ಯಾಧಿ, ಪೀನಸ, ಪ್ರಮೇಹ, ಗುಲ್ಮ, ಮಂದಾಗ್ನಿ, ಅತಿಸಾರ, ಪ್ಲೀಹವ್ಯಾಧಿ, ಈ ವ್ಯಾಧಿಗಳಲ್ಲಿ ರೋಗಿಯು ಹಿತವಾದ ನೀರನ್ನಾದರೂ ಬೇಕಾದಷ್ಟು ಕುಡಿಯಕೂಡದು, ಅಲ್ಪವಾಗಿ ಕುಡಿಯ ಬೇಕು.

28. ತೃಷ್ಣೆಗಳಲ್ಲಿ ತಲೆಗೆ ಲೇಪನಗಳು

ಜಿಹ್ವಾತಾಲುಗಲಕ್ಲೋಮಶೋಷೇ ಮೂರ್ಧನಿ ದಾಪಯೇತ್ |
ಕೇಸರಂ ಮಾತುಲುಂಗಸ್ಯ ಘೃತಸೈನ್ಧವಸಂಯುತಮ್ ||
ದಾಡಿಮಂ ಬದರಂ ಲೋಧ್ರಂ ಕಪಿತ್ಥಂ ಬೀಜಪೂರಕಮ್ |
ಪಿಷ್ಟ್ವಾ ಮೂರ್ಧ್ನಿ ಪ್ರಲೇಪಶ್ಚ ಪಿಪಾಸಾದಾಹನಾಶನಃ ||

(ಚಿ. ಸಾ. ಸಂ. 287)

ನಾಲಿಗೆ, ತಾಲು, ಗಂಟಲು ಮತ್ತು ಕ್ಲೋಮ ಒಣಗಿದಾಗ್ಗೆ ಮಾದಳಹಣ್ಣಿನ ಕುಸುಮ ವನ್ನು, ತುಪ್ಪ ಮತ್ತು ಸೈಂಧವಲವಣ ಕೂಡಿಸಿ, ಅರೆದು ತಲೆಯ ಮೇಲೆ ಲೇಪ ಹಾಕಬೇಕು. ದಾಳಿಂಬದ ಬೀಜ, ಬೊಗರಿ ಬೀಜ, ಲೋಧ್ರ, ಬೇಲದ ಹಣ್ಣು, (ಹುಳಿ) ಮಾದಳಹಣ್ಣಿನ ಕುಸುಮ, ಇವುಗಳನ್ನು ಅರೆದು ತಲೆಗೆ ಲೇಪ ಹಾಕುವದರಿಂಡಲೂ ತೃಷ್ಣೆ ಮತ್ತು ಉರಿ ಶಾಂತವಾಗುವವು.

ಮುಸ್ತಕಂ ಚನ್ದನೋಶೀರಪದ್ಮಕಂ ರಕ್ತಚನ್ದನಮ್ |
ಏತೈಃ ಶಿರಸಿ ಲೇಪೇನ ಕ್ಷಿಪ್ರಂ ತೃಷ್ಣಾಮುದಸ್ಯತಿ || (ರ. ರ. 365)

ಭದ್ರಮುಷ್ಟಿ, ಶ್ರೀಗಂಧ, ಲಾವಂಚ, ಪದ್ಮಕ ಮತ್ತು ರಕ್ತಚಂದನ, ಇವುಗಳನ್ನು (ನೀರಿ ನಿಂದ) ಅರೆದು ತಲೆಗೆ ಲೇಪ ಹಾಕುವದರಿಂದ ತೃಷ್ಣೆಯು ಬೇಗನೇ ಪರಿಹಾರವಾಗುವದು.

29. ಜೇನು ಮತ್ತು ನೀರು ಕೂಡಿಸಿ ವಮನ ಮಾಡಿಸು ವದು

ವಾರಿ ಶೀತಂ ಮಧುಯುಕ್ತಮಾಕಂಠಾದ್ವಾ ಪಿಪಾಸಿತಮ್
ಪಾಯಯೇದ್ವಾಮಯೇಚ್ಚಾಪಿ ತೇನ ತೃಷ್ಣಾ ಪ್ರಶಾಮ್ಯತಿ ||

(ಚಿ. ಸಾ. ಸಂ. 287)

ಬಾಯಾರಿದವನಿಗೆ ಕುತ್ತಿಗೆ ವರೆಗೆ ತಣ್ಣೀರನ್ನು, ಜೇನು ಕೂಡಿಸಿ, ಕುಡಿಸಿ ವಾಂತಿಮಾಡಿಸಬೇಕು; ಅದರಿಂದ ತೃಷೆಯು ಶಮನವಾಗುತ್ತದೆ.

30. ಅರಳುನೀರು ಮತ್ತು ಕಾಶ್ಮೀರೀ ರಸ

ಲಾಜೋದಕಂ ಮಧುಯುತಂ ಶೀತಂ ಗುಡವಿಮರ್ದಿತಮ್ |
ಕಾಶ್ಮರ್ಯಾಃ ಶರ್ಕರಾಯುಕ್ತಂ ಪಿಬೇತ್ತೃಷ್ಣಾರ್ದಿತೋ ರಸಮ್ ||

(ರ. ರ. 364)

ಅರಳನ್ನು ತಣ್ಣೀರಿನಲ್ಲಿ ನೆನೆಸಿ ಹಿಂಡಿ ತೆಗೆದು, ಆ ನೀರಿನಲ್ಲಿ ಬೆಲ್ಲವನ್ನು ಕದಡಿ, ಜೇನು ಕೂಡಿಸಿಕೊಂಡು ಅದನ್ನು, ಅಥವಾ ಕಾಶ್ಮೀರಿ (ಶಿವನ್ನಿ) ಹಣ್ಣಿನ ರಸವನ್ನು ಸಕ್ಕರೆ ಕೂಡಿಸಿಕೊಂಡು, ತೃಷೆಯಿಂದ ಪೀಡಿತನಾದವನು ಕುಡಿಯಬೇಕು.

**ತಣಿದ ಅನ್ನ**

31. ಓದನಂ ರಕ್ತಶಾಲೀನಾಂ ಶೀತಂ ಮಾಕ್ಷಿಕಸಂಯುತಮ್ |
ಭೋಜಯೇತ್ತೇನ ಶಾಮ್ಯೇತ ಛರ್ದಿಸ್ತೃಷ್ಣಾ ಚಿರೋತ್ಥಿತಾ ||
(ರ. ರ. 364)

ಕೆಂಪು ಶಾಲಿ ಅಕ್ಕಿಯ ಅನ್ನವನ್ನು ಶೀತವಾಗಿ, ಜೇನು ಕೂಡಿಸಿಕೊಂಡು, ಉಣ್ಣುವದರಿಂದ ವಾಂತಿ ಮತ್ತು ದೀರ್ಘಕಾಲದ ತೃಷ್ಣೆ ಶಮನವಾಗುವವು.

**ಆಮ್ರಜಂಬು ಕಷಾಯ.**

32. ಆಮ್ರಜಮ್ಬುಕಷಾಯಂ ವಾ ಪಿಬೇನ್ಮಾಕ್ಷಿಕಸಂಯುತಮ್ |
ಛರ್ದಿಂ ಸರ್ವಾಂ ಪ್ರಣುದತಿ ತೃಷ್ಣಾಂ ಚೈವಾಪಕರ್ಷತಿ || (ರ. ರ. 364)

ಮಾವಿನ ಮತ್ತು ನೇರಳೆಯ ಕೆತ್ತೆಗಳ (ಅಥವಾ ಚಿಗುರುಗಳ) ಕಷಾಯವನ್ನು, ಜೇನು ಕೂಡಿಸಿ, ಪಾನಮಾಡುವದರಿಂದ ಎಲ್ಲಾ ವಾಂತಿಗಳು ಮತ್ತು ತೃಷ್ಣೆ ಪರಿಹಾರವಾಗುವವು.

**ದಾಡಿಮಾದಿ ಲೇಹ.**

33. ದಾಡಿಮಸ್ಯ ತು ಬೀಜಾನಿ ಜೀರಕಂ ನಾಗಕೇಸರಮ್ |
ಚೂರ್ಣಂ ಸಶರ್ಕರಾಕ್ಷೌದ್ರೋ ಲೇಹಸ್ತೃಷ್ಣಾನಿವಾರಣಮ್ ||
(ರ. ರ. 364)

ದಾಳಿಂಬದ ಬೀಜ, ಜೀರಿಗೆ, ನಾಗಕೇಸರ, ಬಾಲಮೆಣಸು, ಇವುಗಳನ್ನು ಅರೆದು, ಸಕ್ಕರೆ ಮತ್ತು ಜೇನು ಬೆರಸಿ, ನೆಕ್ಕುವದು. ಇದರಿಂದ ತೃಷೆ ಪರಿಹಾರ.

ಷರಾ 'ಚೂರ್ಣಂ' ಎಂಬದು ಕಂಕೋಲಕ್ಕೆ ಉಂಟೆಂತ ಧ ನಿ, ದಾಳಿಂಬದ ಬೀಜವನ್ನು ಚೂರ್ಣಿಸುವದು ಕಷ್ಟಸಾಧ್ಯ

**ಕೊಳ್ಳಿ ಅದ್ದಿದ ನೀರು**

34. ಶುಷ್ಕಂ ನ್ಯಗ್ರೋಧಕಾಷ್ಠಂ ಚ ದಗ್ಧ್ವಾ ನಿರ್ವಾಪಯೇಜ್ಜಲೇ |
ತಜ್ಜಲಂ ಪಾನಮಾತ್ರೇಣ ಕ್ಷಿಪ್ರಂ ತೃಷ್ಣಾ ವಿನಶ್ಯತಿ || (ರ. ರ. 365)

ಒಣಗಿದ ಗೋಳಿ ಕಟ್ಟಿಗೆಯನ್ನು ಸುಟ್ಟು, ಕೊಳ್ಳಿಯನ್ನು ನೀರಿನಲ್ಲಿ ಅದ್ದಿ, ಆ ನೀರನ್ನು ಶೋಧಿಸಿ ಪಾನಮಾಡುವದರಿಂದಲೇ ತೃಷ್ಣೆಯು ಬೇಗನೇ ನಾಶವಾಗುವದು.

**ಶ್ರೀಗಂಧದ ನೀರು.**

35. ಪಲೈಕಂ ಚನ್ದನಂ ತೋಯೈರ್ದ್ವಾತ್ರಿಂಶದ್ಗುಣೈಃ ಪಚೇತ್ |
ಅರ್ಧಶೇಷಂ ಪಿಬೇನ್ನಿತ್ಯಂ ದಾಹತೃಷ್ಣಾಜ್ವರಾಪಹಮ್ || (ರ. ರ. 365)

ಒಂದು ಪಲ ಶ್ರೀಗಂಧದ ಪುಡಿಗೆ ೩೨ ಪಾಲು ನೀರಿಟ್ಟು, ನೀರು ಅರ್ಧಾಂಶಕ್ಕೆ ಬತ್ತುವ ವರೆಗೆ ಕುದಿಸಿ, ಆ ನೀರನ್ನು (ಶೋಧಿಸಿ) ಕುಡಿಯುತ್ತಾ ಬಂದಲ್ಲಿ ಉರಿ, ಬಾಯಾರಿಕೆ ಮತ್ತು ಜ್ವರ ಪರಿಹಾರವಾಗುವವು.

36. ದ್ರಾಕ್ಷಾಖರ್ಜೂರಕೋಲಾನಾಂ ಪ್ರತಿ ಪಂಚ ಪಲಂ ಭವೇತ್ ।
ಪಚೇದಷ್ಟಗುಣೇ ತೋಯೇ ಪಾದಶೇಷಂ ಸುಶೀತಲಮ್ ॥
ತ್ವಗೇಲಾಪತ್ರಕಂ ಚೂರ್ಣಂ ಪ್ರತಿ ನಿಷ್ಕದ್ವಯಂ ಕ್ಷಿಪೇತ್ ।
ಕ್ಷೌದ್ರಂ ಚ ಪಲಚತ್ವಾರಿ ಪಾನಾತ್ತೃಷ್ಣಾಸ್ರಶೋಷಜಿತ್ ॥

ದ್ರಾಕ್ಷಾಖರ್ಜೂರಾದಿ ಕಷಾಯ

(ರ. ರ. 365)

ದ್ರಾಕ್ಷೆ, ಖರ್ಜೂರ, ಬೊಗರೀ ಹಣ್ಣು, ಇವುಗಳನ್ನು ಐದೈದು ಪಲ ಪ್ರಕಾರ ತೆಗೆದುಕೊಂಡು, (ದ್ರವ್ಯಸಮುದಾಯದ) ಎಂಟು ಪಾಲಷ್ಟು ನೀರು ಹೊಯಿದು, ಕಾಲಂಶಕ್ಕೆ ನೀರು ಬತ್ತುವ ವರೆಗೆ ಕುದಿಸಿ, ಶೋಧಿಸಿದ ಆ ಕಷಾಯವು ತಣಿದ ಮೇಲೆ, ಲವಂಗಪಟ್ಟೆ, ದಾಲ್ಚೀನಿ ಎಲೆ, ಏಲಕ್ಕಿ, ಇವುಗಳನ್ನು ಎರಡೆರಡು ಕರ್ಷ ಪ್ರಕಾರ ತೆಗೆದುಕೊಂಡು ಕುಟ್ಟಿ ಮಾಡಿದ ಚೂರ್ಣವನ್ನೂ ನಾಲ್ಕು ಪಲ ಜೇನನ್ನೂ ಆ ಕಷಾಯದೊಂದಿಗೆ ಬೆರಸಿಟ್ಟುಕೊಂಡು, ಪಾನ ಮಾಡುವದರಿಂದ ಬಾಯಾರಿಕೆ, ರಕ್ತಪಿತ್ತ ಮತ್ತು ಶೋಷ ಪರಿಹಾರವಾಗುವವು.

37. ಮುಸ್ತಪರ್ಪಟಕೋದೀಚ್ಯಭತ್ರಾಖ್ಯೋಶೀರಚಸ್ದನೈಃ ।
ಶೃತಂ ಶೀತಂ ಜಲಂ ದದ್ಯಾತ್ತೃಡ್‍ದಾಹಜ್ವರಶಾನ್ತಯೇ ॥

ಮುಸ್ತಾದಿ ಕಷಾಯ

(ಭಾ. ಪ್ರ. 387)

ಭದ್ರಮುಷ್ಟಿ, ಪರ್ಪಾಟಕ, ಮುಡಿವಾಳ, ಕೊತ್ತುಂಬರಿ, ಲಾವಂಚ, ಶ್ರೀಗಂಧ, ಇವುಗಳಿಂದ ಕಾಯಿಸಿದ ನೀರನ್ನು ತಣಿಸಿ ಕೊಡಲು ತೃಷೆ, ಉರಿ, ಜ್ವರ, ಸಹ ಶಾಂತವಾಗುವವು.

38. ಆಸ್ತರಣಮಾರ್ದ್ರವಾಸಃ ಪ್ರಾವರಣಂ ಚಾರ್ದ್ರವಾಸಃ ಸ್ಯಾತ್ ।
ತೇನ ಪಿಪಾಸಾ ಶಾಮ್ಯತಿ ದಾಹಶ್ಚೋಗ್ರೋಽಪಿ ದೇಹಿನಾಂ ನಿಯತಮ್ ॥

ಒದ್ದೆವಸ್ತ್ರದ ಉಪಯೋಗ

(ಭಾ. ಪ್ರ. 387)

ಒದ್ದೆವಸ್ತ್ರವನ್ನು ಹಾಸಿಕೊಂಡು, ಒದ್ದೆವಸ್ತ್ರವನ್ನು ಹೊದ್ದುಕೊಳ್ಳುವದರಿಂದ ಜನರ ಬಾಯಾರಿಕೆಯು ಮತ್ತು ಉರಿ, ಕಠಿಣವಾದದ್ದಾದಾಗ್ಯೂ, ನಿಶ್ಚಯವಾಗಿ ಶಾಂತವಾಗುವವು.

39. ಪ್ರಾತಃ ಶರ್ಕರಯೋಪೇತಃ ಕ್ವಾಥೋ ಧಾನ್ಯಾಕಸಂಭವಃ ।
ಜಯೇತ್ತೃಷ್ಣಾಂ ತಥಾ ದಾಹಂ ಭವೇತ್ಸ್ರೋತೋವಿಶೋಧನಮ್ ॥

ಕೊತ್ತುಂಬರಿ ಕಷಾಯ

(ಭಾ. ಪ್ರ. 387)

ಕೊತ್ತುಂಬರಿಯ ಕಷಾಯವನ್ನು, ಸಕ್ಕರೆ ಕೂಡಿಸಿ, ಉದಯಕಾಲದಲ್ಲಿ ಪಾನಮಾಡಲು ತೃಷ್ಣೆಯೂ, ಉರಿಯೂ, ಪರಿಹಾರವಾಗುವದಲ್ಲದೆ, ಸ್ರೋತಸ್ಸುಗಳು ಶುದ್ಧವಾಗುವವು.

40. ಆಮಲಂ ಕಮಲಂ ಕುಷ್ಠಂ ಲಾಜಾಶ್ಚ ವಟರೋಹಕಮ್ ।
ಏತಚ್ಚೂರ್ಣಸ್ಯ ಮಧುನಾ ಗುಟಿಕಾಂ ಧಾರಯೇನ್ಮುಖೇ ॥
ತೃಷ್ಣಾಂ ಪ್ರವೃದ್ಧಾಂ ಹನ್ತ್ಯೇಷಾ ಮುಖಶೋಷಂ ಚ ದಾರುಣಮ್ ॥

ಆಮಲಾದಿ ಗುಳಿಗೆ

(ಭಾ. ಪ್ರ. 387)

ನೆಲ್ಲಿಚಟ್ಟು, ತಾವರೆದಂಟು, ಚಂಗಲಕೋಷ್ಠ, ಅರಳು, ಗೋಳಿಚಿಗುರು, ಇವುಗಳನ್ನು ಚೂರ್ಣಿಸಿ, ಜೇನಿನಿಂದ ಗುಳಿಗೆಗಳನ್ನು ಮಾಡಿಟ್ಟುಕೊಂಡು, ಆ ಗುಳಿಗೆಯನ್ನು ಬಾಯಿಯೊಳಗೆ ಧರಿಸಿಕೊಳ್ಳುವದರಿಂದ, ಬಹಳವಾಗಿ ಬೆಳೆದ ತೃಷ್ಣಾರೋಗವೂ ಕಠಿಣವಾದ ಬಾಯಿಒಣಗುವಿಕೆಯೂ ಪರಿಹಾರವಾಗುವವು.

41. ಮಧುಕಂ ಜೀರಕಂ ಕುಷ್ಠಂ ಶುಂಠೀಸ್ಸೈಂಧವಮಾಕ್ಷಿಕಮ್ ।
ಮಧುಕಾದಿ ಲೇಹ. ಜಂಬೀರಸಿತಯಾ ಮಿಶ್ರಂ ಲಿಹ್ಯಾತ್ತೃಷ್ಣಾನಿವಾರಣಮ್ ॥
(ವೈ. ಸಾ. ಸಂ. 187)

ಜ್ಯೇಷ್ಠಮಧು, ಜೀರಿಗೆ, ಚಂಗಲಕೋಷ್ಠ, ಶುಂಠಿ, ಸೈಂಧವಲವಣ, ಇವುಗಳ ಚೂರ್ಣಕ್ಕೆ ಜೇನು, ಲಿಂಬೆಹಣ್ಣಿನ ರಸ, ಮತ್ತು ಸಕ್ಕರೆ ಕೂಡಿಸಿ, ನೆಕ್ಕುವದರಿಂದ ತೃಷ್ಣೆಯು ಪರಿಹಾರವಾಗುವದು.

42. ಕುಸ್ತುಂಬರೀನಾಗರಪರ್ಪಟಾನಾಂ ಜಂಬೂಪ್ರವಾಳಾಧ್ಯುಷಿತಂ ಚ ಪಾಥಃ(?ಧವುಃ) ।
ಕುಸ್ತುಂಬರ್ಯಾದಿ ಕಷಾಯದ ನೀರು ಪ್ರಾತಃ ಪಿಬೇತ್ಪುಷ್ಪರಸಪ್ರಗಾಢಂ ತೃಷ್ಣಾಂ ವಿಜೇತುಂ ಯದಿ ಚೇತ್ಪ್ರಯತ್ನಃ ॥ (ವೈ. ಸಾ. ಸಂ. 188)

ಬಾಯಾರಿಕೆಯನ್ನು ನಿಲ್ಲಿಸಬೇಕೆಂತ ಪ್ರಯತ್ನವಿದ್ದರೆ, ಕೊತ್ತುಂಬರಿ, ಶುಂಠಿ, ಪರ್ಪಾಟಕ, ನೇರಳೆಚಿಗುರು, ಇವುಗಳನ್ನು ಜಜ್ಜಿ, ನೀರಿನಲ್ಲಿ ಒಂದು ರಾತ್ರಿ ನೆನೆಸಿಟ್ಟು, ಬೆಳಿಗ್ಗೆ ಆ ನೀರನ್ನು, ಜೇನು ಕೂಡಿಸಿಕೊಂಡು, ಕುಡಿಯತಕ್ಕದ್ದು.

43. ಕ್ಷೀರೇಕ್ಷುರಸಗುಡೋದಕಸಿತೋಪಲಾದ್ಯೈಃ ಕ್ಷೌದ್ರಶೀಧುಮಾರ್ದ್ವೀಕೈಃ ।
ಗಂಡೂಷಗಳು ವೃಕ್ಷಾಮ್ಲಮಾತುಲುಂಗೈರ್ಗಂಡೂಷಾಸ್ತಾಲುಶೋಷಘ್ನಾಃ । (ಚ. 720)

ಹಾಲು, ಕಬ್ಬಿನರಸ, ಬೆಲ್ಲದ ಪಾನಕ, ಕಲ್ಲುಸಕ್ಕರೆ ಮುಂತಾದವುಗಳಿಂದಲೂ, ಜೇನು, ಕಬ್ಬಿನರಸದ ಮದ್ಯ, ದ್ರಾಕ್ಷೆಹಣ್ಣಿನ ರಸ (ಮದ್ಯ ಅಥವಾ ಕಷಾಯ), ಇವುಗಳಿಂದಲೂ, ಮುರ್ಗಿನಹುಳಿ ಹಣ್ಣಿನ ರಸ(ಅಥವಾ ಕಷಾಯ)ದಿಂದಲೂ, ಮಾದಳಹಣ್ಣಿನ ಕುಸುಮದ ರಸದಿಂದಲೂ, ಗಂಡೂಷಗಳನ್ನು ಮಾಡುವದರಿಂದಲೂ, ತಾಲುವಿನ ಒಣಗುವಿಕೆ ನಿಲ್ಲುವದು.

44. ಅಣಿಲೆಕಾಯಿ, ಅಮೃತಬಳ್ಳಿ, ಅರಳು, ಅರಳುಗುಂಡಿನ ಹಿಟ್ಟು, ಅಶೋಕ,
ಪ್ರಥಗ್ರೋಗೋಕ್ತೌಷಧಗಳು ಆಡುಸೋಗೆ, ಇಪ್ಪೆಹೂವು, ಏಲಕ್ಕಿ, ಕಬ್ಬು, ಕವಳಿಕಾಯಿ (ಕರಂಡೆಹುಳಿ), ಕರ್ಕಟಶೃಂಗಿ, ಕಹಿಪಡುವಲು, ಕಹಿಬೇವು, ಕಾಶದರ್ಭೆ, ಕಿರಾತಕಡ್ಡಿ, ಕುಶದರ್ಭೆ, ಕೊಡಸಿಗ, ಕೊತ್ತುಂಬರಿ, ಕೊಳವಳಿಕೆ, ಖರ್ಜೂರ, ಗಂಡುದೂರ್ವೆ, ಗುಲುಗುಂಜಿ, ಗೋಪಿಚಂದನ, ಜಾಲಿ (ಕರಿಜಾಲಿ, ಗೊಬ್ಬಳಿ), ಜೇನು, ಜ್ಯೇಷ್ಠಮಧು, ತಾರೆ(ಶಾಂತಿ)ಕಾಯಿ, ತಾವರೆಕೇಸರ, ತಾವರೆದಂಟು, ತಾವರೆದಳ, ದಾಳಿಂಬದ ಹಣ್ಣು, ದೊಡ್ಡಿಹುಳಿ, ದ್ರಾಕ್ಷೆ, ಧಾತಕೀಕುಸುಮ, ನಾಗಕೇಸರ, ನೀರು, ನೀಲದೂರ್ವೆ, ನೆಲನೆಲ್ಲಿ, ನೆಲ್ಲಿ, ಪಚ್ಚೆಕರ್ಪೂರ, ಪರ್ಪಾಟಕ, ಪಲಾಶದಹೂವು, ಪಾದರಿ, ಪ್ರಿಯಂಗು,

ಬಳ್ಳಿತುರಚಿ ಬೇರು, ಬಾಳೆಗಡ್ಡೆ, ಬಿದಿರುಪ್ಪು, ಬಿಳಿದೂರ್ವೆ, ಬೇಲದಹಣ್ಣು, ಭದ್ರಮುಷ್ಟಿ, ಮಾದಳಹಣ್ಣು, ಮುಂಜದರ್ಭೆ, ಮುರ್ಗಿನಹುಳಿ, ಮುಳ್ಳುಸವತೇಕಾಯಿ, ರಕ್ತಚಂದನ, ರಾಜಾದನ (ಮಲ. ಪಳಮುಣ್ಣಾಲ-ಹಾದರಿಮರ), ರೇಣಿಕೆಬೀಜ, ಲಾವಂಚ, ವಡುವಾರದ ಮರ (ವೇಲ್ಲನ್ಸರ), ಶತಾವರಿ ಬೇರು, ಶಿವನ್ನಿ (ಕಾಶ್ಮೀರ) ಹಣ್ಣು, ಶಿವಮಲ್ಲಿಗಿಡ (ಮಲ. ಮಣಲಿ), ಶ್ರೀಗಂಧ, ಸಕ್ಕರೆ, ಸಿಂದೂರಿ (ಭಂಗಾರಕಾಯಿ, ರಂಗುಮಾಲೆ, ಮಲ. ಕುಪ್ಪ ಮಂಜಳ), ಸಿಹಿಲಿಂಬೆ, ಸೀಯಾಳದ ನೀರು, ಸುರಸುರಿಕೆ (ಏಲಾವಾಲುಕ), ಹಾಲು, ಹಾಲುಬಳ್ಳಿ (ಸುಗಂಧಿ) ಬೇರು, ಹೆಗ್ಗುರುಟಿಗೆ ಬೇರು (ಮಲ. ಪೆರುನ್ನುರುಮ್ಬು) ಮತ್ತು ಹೆಸರಿನ ಕಟ್ಟು.

ಪಥ್ಯವರ್ಗ

45. ನಿದ್ರೆ, ಸ್ನಾನ, ಕೋದ್ರವ (ಹಾರಕ) ಧಾನ್ಯ, ಶಾಲ್ಯಕ್ಕಿ, ಪೇಯಾ-ವಿಲೇಪೀ ಎಂಬ ಗಂಜಿಗಳು, ಹುರಿದ ಹೆಸರುಬೇಳೆಯ, ಮಸೂರಧಾನ್ಯದ ಮತ್ತು ಕಡಲೆ ಬೇಳೆಯ ಕಟ್ಟುಗಳು, ಬಾಳೆಹೂವು, ಬೂದಿಕುಂಬಳಕಾಯಿ, ಬಚ್ಚಲ ಸೊಪ್ಪು (ಬಸಳೆ), ಲಿಂಬೆಹಣ್ಣು, ದನದ ಹಾಲು, ಕಹಿವಸ್ತುಗಳು, ಸಿಹಿವಸ್ತುಗಳು, ಎಳೇ ತಾಳಿಕಾಯಿಯ ನೀರು, ತಣ್ಣೀರು ಮತ್ತು ತಂಪಾದ ಲೇಪಗಳು.

ಅಪಥ್ಯವರ್ಗ

46. ತೈಲಗಳು, ಅಂಜನ, ಬೆವರಿಸುವದು, ಹೊಗೆ ಸೇದುವದು, ಮೈದಣಿಕೆ, ನಸ್ಯ, ಬಿಸಿಲು, ದಂತಕಾಷ್ಠ, ಗುರು ಆಹಾರ, ಹುಳಿ, ಉಪ್ಪು, ಚೊಗರು, ಕಾರ, ಸ್ತ್ರೀಸಂಗ, ತೀಕ್ಷ್ಣಪದಾರ್ಥ ಮತ್ತು ದೋಷವುಳ್ಳ (ಕೆಟ್ಟ) ನೀರು.

ಪ್ರಕರಣಾಂತ ಟಿಪ್ಪಣೀ

47. ಬಾಯಾರಿಕೆಯು ಜ್ವರ, ಮಧುಮೇಹ, ಅಮ್ಲಪಿತ್ತದ ಭೇದ, ಮುಂತಾದ ಬೇರೆ ರೋಗಗಳಲ್ಲಿ ಕಾಣುವ ಲಕ್ಷಣವಲ್ಲದೆ ಪ್ರತ್ಯೇಕವಾದೊಂದು ರೋಗವಲ್ಲ ಎಂಬದು ಪಾಶ್ಚಾತ್ಯ ವೈದ್ಯರ ಮತವಾದ್ದರಿಂದ, ಅವರ ಗ್ರಂಥಗಳಲ್ಲಿ ತೃಷ್ಣೆಯ ಚಿಕಿತ್ಸೆಯನ್ನು ನಿದಾನಾದಿ ಕ್ರಮದಿಂದ ಪ್ರತ್ಯೇಕವಾಗಿ ಬರೆದದ್ದು ಕಾಣುವದಿಲ್ಲ. "ಬಾಯಾರಿಕೆಯ ಉಪಶಮನಕ್ಕ ಶುದ್ಧವಾದ ನೀರನ್ನು ಯಾವಾಗಲಾದರೂ ಉಪಯೋಗಿಸಬಹುದು" ಎಂಬ ಅರ್ಥದ ಉಪದೇಶವು ಡಾಕ್ಟರ್ ಮೂರ್ ದೊರೆಗಳಿಂದ ರಚಿತವಾದ ಪುಸ್ತಕದಲ್ಲಿ ಪ್ರಕಟಿಸಲ್ಪಟ್ಟದೆ. ಬಾಯಾರಿಕೆಯ ಶಮನಕ್ಕೆ ನೀರನ್ನು ಕೊಡುವದು ಅತ್ಯಗತ್ಯವಾದಾಗ್ಯೂ, ಅದನ್ನು ತಣ್ಣಗಾಗಿ, ಬಿಸಿಯಾಗಿ, ಸ್ವಲ್ಪವಾಗಿ, ಅಥವಾ ಸಂಸ್ಕಾರ ಮಾಡಿಕೊಂಡು, ದೋಷವಿಚಾರದಿಂದ ಕೊಡಬೇಕು, ಮತ್ತು ಶಿರೋಲೇಪ, ಗಂಡೂಷ, ಆರ್ದ್ರ ವಸ್ತ್ರಪರಿಸ್ತರಣ, ಮೊದಲಾದ ಅನೇಕ ಅನ್ಯ ಉಪಚಾರಗಳು ಸಹ ಅಗತ್ಯವಾಗಬಹುದು; ಎಂತ ಆಯುರ್ವೇದ ಹೇಳುತ್ತದೆಂಬದು ಈ ಅಧ್ಯಾಯದಿಂದ ತಿಳಿದುಬರುವದು.

# ಅಧ್ಯಾಯ XI.

## ಅರುಚಿ (ಅರೋಚಕ, ಭಕ್ತೋಪಘಾತ, ಭಕ್ತದ್ವೇಷ, ಸಭಕ್ತಚ್ಛಂದ, ಅಭಕ್ತಚ್ಛಂದ)

## Distaste, Disrelish, Anorexy.

1. ದೋಷೈಃ ಪೃಥಕ್ ಸಹ ಚ ಚಿತ್ತವಿಪರ್ಯಯಾಚ್ಚ ಭಕ್ತಾಯನೇಷು ಹೃದಿ ಚಾವತತೇ ಪ್ರಗಾಢಮ್ ।
ನಾನ್ನೇ ರುಚಿರ್ಭವತಿ ತಂ ಭಿಷಜೋ ವಿಕಾರಂ ಭಕ್ತೋಪಘಾತಮಿಹ ಪಂಚವಿಧಂ ವದನ್ತಿ ॥ (ಸು. 877)

ಐದು ವಿಧವಾದ ಅರುಚಿಯ ನಿದಾನ

ವಾತಾದಿ ದೋಷಗಳಿಂದ ಪೃಥಕ್ ಮೂರು, ಸನ್ನಿಪಾತದಿಂದ ಒಂದು, ಮನಸ್ಸಿನ ಕೆಡುವಿಕೆಯಿಂದ ಒಂದು, ಹೀಗೆ ಐದು ಕಾರಣಗಳಿಂದ, ಆಹಾರ ಇಳಿದು ಹೋಗುವ ಮಾರ್ಗಗಳಲ್ಲಿಯೂ, ಹೃದಯದಲ್ಲಿಯೂ, ಬಹಳವಾಗಿ ದೋಷ ಉಂಟಾಗುವದರಿಂದ ಆಹಾರದಲ್ಲಿ ರುಚಿಯಾಗುವದಿಲ್ಲ. ಆ ಐದು ವಿಧವಾದ ವಿಕಾರವನ್ನು ಪಂಡಿತರು 'ಭಕ್ತೋಪಘಾತ' (ಅನ್ನದ ವ್ಯಾಧಿ ಅಥವಾ ನಾಶ) ಎಂತ ಕರೆಯುತ್ತಾರೆ.

ಷರಾ ಮನಸ್ಸಿನ ಕೆಡುವಿಕೆ ಎಂಬ ಸ್ಥಾನದಲ್ಲಿ "ಶೋಕಭಯಾತಿಲೋಭಕ್ರೋಧೈರ್ಮನೋಘ್ನಾಶನಗನ್ಧರೂಪೈ ।" ಎಂತ ಚರಕ (ಪು 759)—ಅಂದರೆ ಶೋಕ, ಭಯ, ಅತಿಯಾದ ಲೋಭ, ಅತಿಯಾದ ಸಿಟ್ಟು, ಮತ್ತು ಮನಸ್ಸಿಗೆ ಅಸಹ್ಯ ತರದ ಆಹಾರ, ವಾಸನೆ ಮತ್ತು ರೂಪ ಇವುಗಳಿಂದ—, ಮನಸ್ಸಂತಾಪದಿಂದ ಎಂತ ವಾ (ಪು 200) ದೋಷಗಳು ನಾಲಿಗೆಯನ್ನೂ ಹೃದಯವನ್ನೂ ಆಶ್ರಯಿಸಿಕೊಂಡು ಈ ರೋಗವನ್ನುಂಟುಮಾಡುವದೆಂತ ಸಹ ವಾ ಇಲ್ಲಿ 'ಹೃದಯ' ಎಂಬದು 'ಮನಸ್ಸಿನ ಅಧಿಷ್ಠಾನ' ಎಂಬ ಅರ್ಥದಲ್ಲಿ

2. ಉಕ್ತಂ ಹಿ ವೃದ್ಧಭೋಜೇನ-
ಪ್ರಕ್ಷಿಪ್ತಸ್ತು ಮುಖೇ ಚಾನ್ನಂ ಜಂತೋರ್ನ ಸ್ವದತೇ ಮುಹುಃ ।
ಅರೋಚಕಃ ಸ ವಿಜ್ಞೇಯೋ ಭಕ್ತದ್ವೇಷಮತಃ ಶೃಣು ॥
ಚಿನ್ತಯಿತ್ವಾ ತು ಮನಸಾ ದೃಷ್ಟ್ವಾ ಶ್ರುತ್ವಾಽಪಿ ಭೋಜನಮ್ ।
ದ್ವೇಷಮಾಯಾತಿ ಯೋ ಜನ್ತುರ್ಭಕ್ತದ್ವೇಷಃ ಸ ಉಚ್ಯತೇ ॥
ಯಸ್ಯ ನಾನ್ನೇ ಭವೇಚ್ಛ್ರದ್ಧಾ ಸೋಽಭಕ್ತಚ್ಛನ್ದ ಉಚ್ಯತೇ ।
ಕುಪಿತಸ್ಯ ಭಯಾರ್ತಸ್ಯ ಯಶ್ಚ ಭಕ್ತನಿರೋಧಜಃ ॥
(ಮಾ. ಸಿ. ಮ. ವ್ಯಾ. 104)

ಅರೋಚಕ, ಭಕ್ತದ್ವೇಷ, ಅಭಕ್ತಚ್ಛಂದ ಎಂಬವುಗಳ ವ್ಯಾಖ್ಯಾನ

ವೃದ್ಧಭೋಜರು ಹೇಳಿದ್ದಾರೇನೆಂದರೆ,

ಬಾಯಿಯೊಳಗೆ ಹಾಕಲ್ಪಟ್ಟ ಅನ್ನವು ಮನುಷ್ಯನಿಗೆ ಪದೇ ಪದೇ ರುಚಿಸದೆ (ಮೆಚ್ಚದೆ) ಹೋಗುವಂಥಾದ್ದನ್ನು 'ಅರೋಚಕ' ಎಂತ ತಿಳಿಯಬೇಕು. ಉಣ್ಣುವ ಆಹಾರವನ್ನು ಮನಸ್ಸಿನಿಂದ ನೆನಸಿ, ನೋಡಿ, ಅಥವಾ ಕೇಳಿಯೇ ಯಾವನಿಗೆ ಅದರಲ್ಲಿ ದ್ವೇಷ ಉಂಟಾಗುತ್ತದೋ, ಅವನ ರೋಗವು 'ಭಕ್ತದ್ವೇಷ (ಅನ್ನದ್ವೇಷ)' ಎಂತ ಕರೆಯಲ್ಪಡುತ್ತದೆ. ಯಾರಲ್ಲಿ ಕೋಪಗೊಂಡದ್ದರಿಂದ, ಭಯಪಟ್ಟದ್ದರಿಂದ, ಅಥವಾ ಅನ್ನ ಬಿಟ್ಟಿರುವದರಿಂದ, ಅನ್ನದಲ್ಲಿ ಶ್ರದ್ಧೆ ಇಲ್ಲದಿರುತ್ತದೋ ಅವನಿಗೆ 'ಅಭಕ್ತಚ್ಛಂದ' ಎನ್ನುತ್ತಾರೆ.

ಷರಾ ಮೇಲೆ ಎತ್ತಿ ತೆಗೆದ ಭಾಗದ ಕೊನೆಯ ಶ್ಲೋಕವನ್ನು 'ಚಿಕಿತ್ಸಾಸಾರ ಸಂಗ್ರಹ', 'ಭಾವಪ್ರಕಾಶ' ಮುಂತಾದ ಗ್ರಂಥಕಾರರು ಬೇರೆ ಬೇರೆ ವಿಧವಾಗಿ ಪಾಠಾಂತರ ಮಾಡಿಕೊಂಡಿದ್ದಾರೆ. ಕೆಲವರು ಅದರಲ್ಲಿ ಹೇಳುವ ರೋಗದವನಿಗೆ

'ಸಭಕ್ತಛಂದ', ಎಂತ ಹೆಸರು ಎಂಬ ಹಾಗಿನ ಪಾಠವನ್ನು ಇಟ್ಟಿದ್ದಾರೆ 'ಭಕ್ತಛಂದ' ಎಂದರೆ ಸಾಧಾರಣವಾಗಿ 'ಅನ್ನದ ಆಶೆ ಅಥವಾ ಇಚ್ಛೆ' ಎಂತ ಅರ್ಥ ಅದ್ದರಿಂದ 'ಅಭಕ್ತಛಂದಃ' ಎಂದರೆ 'ಅನ್ನದ ಇಚ್ಛೆಯಿಲ್ಲದ ಅರುಚಿಯವ' ಎಂತ ಅರ್ಥವಾಗುತ್ತದೆ 'ಸಭಕ್ತಛಂದ' ಎಂದರೆ ಅನ್ನದ ಇಚ್ಛೆ ಅಥವಾ ಹಸಿವೆಯಿದ್ದು ಊಟದಲ್ಲಿ ರುಚಿಪಡದವ ಎಂತ ಅರ್ಥ ಮಾಡಬಹುದು ಸಾರಾಂಶ ಕೋಪಗೊಂಡವನಿಗಾಗಲೀ, ಭಯಪಟ್ಟವನಿಗಾಗಲೀ, ಅನ್ನಬಿಟ್ಟವನಿಗಾಗಲೀ, ಹಸಿವೆಯು ಅಥವಾ ಬಾಯಿ ರುಚಿಯು, ಇತರ ರೋಗದಿಂದಾಗುವಂತೆ, ಕೆಟ್ಟಿರುವದಿಲ್ಲ, ಸ್ವಾಭಾವಿಕವಾಗಿಯೇ ಇರುತ್ತದೆ; ಅಂದರೆ ಬಾಯಿ ಕಹಿ, ಸಿಹಿ ಇತ್ಯಾದಿ ವಿಕಾರದ ರುಚಿಯುಳ್ಳದ್ದಾಗುವದಿಲ್ಲ ಅನ್ನದ ಶ್ರದ್ಧೆ ಇಲ್ಲದಿರುವದಕ್ಕೆ ಹೇತುವಾದ ಮನೋವೈಕಲ್ಯದ ಪರಿಹಾರವಾದ ಕೂಡಲೇ ಅಂಥವನು ಸರಿಯಾಗಿ ಊಟಮಾಡುತ್ತಾನೆ ಆ ಆಗಂತು ಹೇತುವು ದೋಷಗಳನ್ನು ಕೆಡಿಸುವದಕ್ಕೆ ಮೊದಲೇ ಅರುಚಿ ಪರಿಹಾರವಾಗಬಹುದು ಸಾಧಾರಣವಾಗಿ 'ಅರುಚಿ' ಎಂಬದರಲ್ಲಿ ಭಕ್ತದ್ವೇಷ ಮತ್ತು ಅಭಕ್ತಚ್ಛಂದ ಸೇರಿರುತ್ತವೆ ಅಗ್ನಿಮಾಂದ್ಯ ಅಥವಾ ಅಜೀರ್ಣ ಬೇರೆ

3. ಹೃಚ್ಛೂಲಪೀಡನಯುತಂ ವಿರಸಾನನತ್ವಂ
ವಾತಾತ್ಮಕೇ ಭವತಿ ಲಿಂಗಮರೋಚಕೇ ತು || (ಸು. 877)

ವಾತಜ ಅರುಚಿಯ ಲಕ್ಷಣ

ವಾತಜ ಅರೋಚಕದಲ್ಲಿ ಬಾಯಿರುಚಿ ಕೆಟ್ಟಿರುವದರೊಂದಿಗೆ ಎದೆ ಶೂಲೆಯ ಪೀಡೆ ಕಾಣುವದು.

ಷರಾ ಹಲ್ಲುಗಳಲ್ಲಿ ಜುಮ್ಮು ಮತ್ತು ಬಾಯಿಯ ಚೊಗರು ರುಚಿ ವಾತಜ ಅರುಚಿಯ ಲಕ್ಷಣವೆಂತ ಚ (ಪು. 759) 'ವಿರಸಾನನತ್ವಂ' ಎಂದರೆ ಬಾಯಿ ಒಣಗಿರುವದು ಎಂತ ಅರ್ಥ ಮಾಡಬಹುದು

4. ಹೃದ್ದಾಹಚೋಷ್ಮಬಹುತಾ ಮುಖತಿಕ್ತತಾ ಚ
ಮೂರ್ಛಾ ಸತೃಡ್ ಭವತಿ ಪಿತ್ತಕೃತೇ ತಥೈವ (ಸು. 877)

ಪಿತ್ತಜ ಅರುಚಿಯ ಲಕ್ಷಣ

ಎದೆಯಲ್ಲಿ ಉರಿ ಮತ್ತು ಹೀರಿದ ಹಾಗಿನ ವೇದನೆ ಬಹಳವಾಗಿರುವದು, ಬಾಯಿ ಕಹಿಯಾಗಿರುವದು, ಬಾಯಾರಿಕೆ ಮತ್ತು ಮೂರ್ಛೆ ಪಿತ್ತಜ ಅರುಚಿಯಲ್ಲಿ ಕಾಣುವವು.

ಷರಾ ಬಾಯಿಯು ಒಣಗಿ, ಬಿಸಿಯಾಗಿ ಮತ್ತು ದುರ್ಗಂಧವುಳ್ಳದ್ದಾಗಿರುವದು ಮತ್ತು ರುಚಿಯು ಕಹಿ ಅಥವಾ ಹುಳಿಯಾಗಿರುವದು ಪಿತ್ತದಿಂದ ಎಂತ ಚ (ಪು 759)

5. ಕಂಡೂಗುರುತ್ವಕಫಸಂಸ್ರವಸಾದತನ್ದ್ರಾಃ
ಶ್ಲೇಷ್ಮಾತ್ಮಕೇ ಮಧುರಮಾಸ್ಯಮರೋಚಕೇ ತು || (ಸು. 877)

ಕಫಜ ಅರುಚಿಯ ಲಕ್ಷಣ

ತುರಿಕೆ, ಭಾರ, ಕಫಸುರಿಯುವಿಕೆ, ಜಡತ್ವ, ತಂದ್ರೆ ಮತ್ತು ಬಾಯಿ ಸಿಹಿಯಾಗುವಿಕೆ, ಇವು ಕಫಜ ಅರುಚಿಯ ಲಕ್ಷಣಗಳು.

ಷರಾ 'ಸಾದತನ್ದ್ರಾಃ' ಎಂಬಲ್ಲಿ 'ನುಂಗುವದಕ್ಕೆ ಶಕ್ತನಲ್ಲದಿರುವದು' ಎಂಬ ಅರ್ಥವಾಗುವ ಹಾಗೆ 'ಕಣ್ಠಸಾದಾಃ' ಎಂತ ಕೆಲವರು ಪಾಠವಿಟ್ಟುಕೊಳ್ಳುತ್ತಾರೆ ಎಂತ ಸಿ ಸಂ ವ್ಯಾ (ಪು 677) ಬಾಯಿ ಉಪ್ಪು ಅಥವಾ ಸಿಹಿಯಾಗಿ, ಅಂಟಾಗಿ, ಶೀತವಾಗಿ, ಭಾರವಾಗಿ, (ಕಟ್ಟಿದ ಹಾಗೆ) ಬದ್ಧವಾಗಿ, ಲೇಪ (ಅಗ್ರ) ಉಳ್ಳದ್ದಾಗುವದು ಕಫಜ ಅರುಚಿಯ ಲಕ್ಷಣ ಎಂತ ಚ (ಪು 759)

6. ಸರ್ವಾತ್ಮಕೇ ಪವನಪಿತ್ತಕಫಾ ಬಹೂನಿ
ರೂಪಾಣ್ಯಥಾಸ್ಯ ಹೃದಯೇ ಸಮುದೀರಯನ್ತಿ || (ಸು. 877)

ತ್ರಿದೋಷಜ ಅರುಚಿಲಕ್ಷಣ

ತ್ರಿದೋಷಜದಲ್ಲಿ ವಾತಪಿತ್ತಕಫಗಳು ರೋಗಿಯ ಹೃದಯದಲ್ಲಿ ಬಹು ಆದ ಲಕ್ಷಣಗಳನ್ನು ಹೊರಡಿಸುತ್ತವೆ.

ಷರಾ ತ್ರಿದೋಷಜ ಅರುಚಿಯೂ, ತ್ರಿದೋಷಜ ಹೃದ್ರೋಗವೂ ಲಕ್ಷಣಗಳಿಂದ ಬಹಳ ಮಟ್ಟಿಗೆ ಸಮಾನ ಎಂತ ಸಿ. ಸಂ ವ್ಯಾ (ಪು. 677) ತ್ರಿದೋಷಜ ಅರುಚಿಯಲ್ಲಿ ಬಾಯಿಯ ರುಚಿಯು ಬಹು ರಸಗಳಿಂದ ಕೂಡಿಕೊಂಡಿರುತ್ತದೆ ಎಂತ ಚ (ಪು 759)

7. ಸಂರಾಗಶೋಕಭಯವಿಪ್ಲುತಚೇತಸಸ್ತು
ಚಿನ್ತಾತ್ಕೃತೋ ಭವತಿ ಸೋಽಶುಚಿದರ್ಶನಾಚ್ಚ || (ಸು. 877)

ಚಿತ್ತವಿಪರ್ಯಯಜ ಅರುಚಿಯ ಲಕ್ಷಣ

ಸಿಟ್ಟು (ಕಾಮ ಎಂತ ನಿ. ಸಂ. ವ್ಯಾ.), ಶೋಕ, ಭಯ, ಇವುಗಳಿಂದ ಕೆಡಿಸಲ್ಪಟ್ಟ ಮನಸ್ಸಿನಿಂದಲೂ, ಚಿಂತೆಯಿಂದಲೂ, (ಅಮೇಧ್ಯಾದಿ) ಅಶುಚಿ ಪದಾರ್ಥಗಳ ದರ್ಶನದಿಂದಲೂ ಅದು (ಅರೋಚಕವು) ಸಂಭವಿಸುತ್ತದೆ.

ಷರಾ: ಈ ಹೇತುಗಳೊಳಗೆ ಯಾವದರಿಂದ ಯಾವ ದೋಷವು ಕೆಡುತ್ತದೋ, ಆ ದೋಷಜ ಅರುಚಿಯ ಲಕ್ಷಣಗಳು ಆ ಹೇತುವಿನ ಅರುಚಿಯಲ್ಲಿ ಕಾಣುತ್ತವೆ ಎಂತ ವಾ. (ಪು 201) ಈ ವಿಧದ ಅರುಚಿಗಳಲ್ಲಿ ಬಾಯಿಯ ರಸವು ಕೆಡದೆ ಸ್ವಾಭಾವಿಕ ಸ್ಥಿತಿಯಲ್ಲಿಯೇ ಇರುತ್ತದೆ ಎಂತ ಚ (ಪು 759)

8. ಅರುಚೌ ಕವಲಗ್ರಹಾಃ ಧೂಮಾಃ ಸಮುಖಧಾವನಾಃ |
ಮನೋಜ್ಞಮನ್ನಪಾನಂ ಚ ಹರ್ಷಣಾಶ್ವಾಸನಾನಿ ಚ || (ಚ. 759)
ವಸ್ತಿಃ ಸಮೀರಣೇ ಪಿತ್ತೇ ವಿರೇಕಂ ವಮನಂ ಕಫೇ |
ಕುರ್ಯಾದ್ ಹೃದ್ಯಾನುಕೂಲಾನಿ ಹರ್ಷಣಂ ಚ ಮನೋಘ್ನಜೇ ||
(ಚ. 759—60)

ಅರುಚಿಗಳ ಚಿಕಿತ್ಸಾ ವಿಧಾನ

ಬಾಯಿಯೊಳಗೆ ಕವಲಗಳನ್ನಿಟ್ಟುಕೊಳ್ಳುವದು, ಧೂಮಪಾನಗಳು, ಬಾಯಿಮುಕ್ಕಳಿಸುವ ಯೋಗಗಳು, ಮನೋಹರವಾದ ಅನ್ನಪಾನಗಳು, ಹರ್ಷಿಸುವಿಕೆಗಳು, ಸಮಾಧಾನಮಾಡುವ ಉಪಾಯಗಳು ಸಹ, ಅರುಚಿಯಲ್ಲಿ ಉಪಯುಕ್ತವಾದ ಉಪಚಾರಗಳು.

ವಾತದಲ್ಲಿ ವಸ್ತಿ, ಪಿತ್ತದಲ್ಲಿ ವಿರೇಚನ ಮತ್ತು ಕಫದಲ್ಲಿ ವಮನ ಸಹ ಹಿತವಾಗಿರುತ್ತದೆ. ಮನಸ್ಸು ಕೆಟ್ಟು ಸಂಭವಿಸಿದ ಅರುಚಿಯಲ್ಲಿ ರೋಗಿಗೆ ಮೆಚ್ಚಿಕೆಯಾದ ಮತ್ತು ಬಯಕೆಯಾದ ಅನ್ನಪಾನಗಳನ್ನು ಕೊಡುವದಲ್ಲದೆ, ಹರ್ಷವನ್ನು (ಗೆಲುವನ್ನು) ಉಂಟುಮಾಡತಕ್ಕದ್ದು.

ಷರಾ ಮೂರು ದೋಷಗಳಲ್ಲಿಯೂ ದೋಷಕ್ಕೆ ತಕ್ಕ ಅನುಪಾನದಿಂದ ವಾಂತಿಮಾಡಿಸಬೇಕಾಗಿ ಸು (ಪು 878) ವಸ್ತಿ ಎಂಬದು ಆಸ್ಥಾಪನ ವಸ್ತಿ ಮೃದುವಾದ ಶಿರೋವಿರೇಚನ ಸಹ ಹಿತ ಎಂತ ಸು (ಪು 879)

9. ಪಾನಾನಿ ಚ ವಿಚಿತ್ರಾಣಿ ಭಕ್ಷ್ಯಾಣಿ ವಿವಿಧಾನಿ ಚ |
ಕರ್ಪೂರಾದಿಸುಗಂಧೀನಿ ಪ್ರಯುಂಜೀತ ಯಥಾವಿಧಿ || (ರ ರ. 360)

ಅನ್ನಪಾನಗಳ ವಿಧಾನ

ವಿಚಿತ್ರವಾದ ಪಾನಕಗಳು, ನಾನಾ ವಿಧವಾದ ಭಕ್ಷ್ಯಗಳು, ಪಚ್ಚೆ ಕರ್ಪೂರ ಮುಂತಾದ ಪರಿಮಳದ್ರವ್ಯಗಳು, ಇವುಗಳನ್ನು (ಅರುಚಿ ಪರಿಹಾರಕ್ಕಾಗಿ) ವಿಧಿಪ್ರಕಾರ ಉಪಯೋಗಿಸತಕ್ಕದ್ದು.

10. ಅರುಚೌ ಚ ಪ್ರಯೋಕ್ತವ್ಯಂ ಶ್ವಾಸಕಾಸಹಿತಾನ್ರಸಾನ್ |
ಗಂಡೂಷಂ ಕಾರಯೇತ್ಪೂರ್ವಂ ಪಶ್ಚಾದನ್ನಂ ಚ ಭೋಜಯೇತ್ ||
(ವೈ. ಸಾ. ಸಂ. 178-179)

ಅರುಚಿಗೆ ಶ್ವಾಸಕಾಸದ ಪಥ್ಯ ಮತ್ತು ಗಂಡೂಷಕಾಲ

ಉಬ್ಬಸ ಮತ್ತು ಕೆಮ್ಮು ರೋಗಗಳಲ್ಲಿ ಹಿತವಾಗಿ ಹೇಳಲ್ಪಟ್ಟ (ಸಾರು ಮುಂತಾದ) ರಸಗಳನ್ನು ಅರುಚಿಯಲ್ಲಿಯೂ ಪ್ರಯೋಗಿಸತಕ್ಕದ್ದು; ಮತ್ತು ಮೊದಲಾಗಿ ರೋಗಿಗೆ ಗಂಡೂಷವನ್ನು ಮಾಡಿಸಿ, ಅನಂತರ ಅನ್ನವನ್ನು ಉಣ್ಣಿಸತಕ್ಕದ್ದು.

ಷರಾ ಹುರುಳಿ, ತೊಗರಿ ಅಥವಾ ಹೆಸರಿನ ಸಾರು ಮತ್ತು ಹಿಂಗು ಮತ್ತು ತ್ರಿಕಟು ಸೇರಿದ ಚಟ್ನಿ ಮುಂತಾದ ಮೇಲೋಗರ ಭೋಜನಕ್ಕೆ ಹಿತ ಎಂತ ಹಾ (ಪು 155).

11. ಕುಷ್ಠಸೌವರ್ಚಲಾಜಾಜೀ ಶರ್ಕರಾ ಮರಿಚಂ ಬಿಡಮ್ ।
ಧಾತ್ರ್ಯೇಲಾಪದ್ಮಕೋಶೀರಪಿಪ್ಪಲ್ಯುತ್ಪಲಚನ್ದನಮ್ ॥
ದೋಷಗಳಿಗೆ ತಕ್ಕವಾದ ಕವಲಗಳು
ಲೋಧ್ರಂ ತೇಜೋವತೀ ಪಥ್ಯಾ ತ್ರ್ಯೂಷಣಂ ಸಯವಾಗ್ರಜಮ್ ।
ಆರ್ದ್ರದಾಡಿಮನಿರ್ಯಾಸಾಶ್ಚಾಜಾಜೀಶರ್ಕರಾಯುತಾಃ ॥
ಸತೈಲಮಾಕ್ಷಿಕಾಸ್ತ್ವೇತೇ ಚತ್ವಾರಃ ಕವಲಗ್ರಹಾಃ ।
ಚತುರೋಽರೋಚಕಾನ್ ಹನ್ಯುರ್ವಾತಾದ್ಯೇಕಜಸರ್ವಜಾನ್ ॥

(ಚ. 759)

ವಾತಜ ಅರುಚಿಯಲ್ಲಿ ಚಂಗಲಕೋಷ್ಠ, ಸೌವರ್ಚಲಲವಣ, ಜೀರಿಗೆ, ಸಕ್ಕರೆ, ಕಾಳು ಮೆಣಸು ಮತ್ತು ಬಿಡಾಲವಣ; ಪಿತ್ತಜ ಅರುಚಿಯಲ್ಲಿ ನೆಲ್ಲಿಚಟ್ಟು, ಏಲಕ್ಕಿ, ಪದ್ಮಕಾಷ್ಠ, ಲಾವಂಚ, ಹಿಪ್ಪಲಿ, ನೈದಿಲೆ, ಶ್ರೀಗಂಧ; ಕಫಜ ಅರುಚಿಯಲ್ಲಿ ಲೋಧ್ರ, ತೇಜೋವತೀ (ದೊಡ್ಡ ಕಂಗೊಂದಿ), ಅಣಿಲೆಕಾಯಿ, ತ್ರಿಕಟು, ಯವಕ್ಷಾರ; ತ್ರಿದೋಷಜ ಅರುಚಿಯಲ್ಲಿ ಹಸಿ ಶುಂಠಿರಸ ಮತ್ತು ದಾಳಿಂಬದ ಹಣ್ಣಿನ ರಸ, ಜೀರಿಗೆ ಮತ್ತು ಸಕ್ಕರೆ ಕೂಡಿಸಿ, ಈ ನಾಲ್ಕು ಯೋಗಗಳ ಔಷಧಗಳನ್ನು ಎಳ್ಳೆಣ್ಣೆ ಮತ್ತು ಜೇನು ಯುಕ್ತವಾಗಿ ಬಾಯಿಯೊಳಗೆ ಇಟ್ಟು ಕೊಂಡರೆ, ವಾತಾದಿದೋಷಗಳಿಂದುಂಟಾಗುವ (ಏಕದೋಷಜಗಳು 3, ತ್ರಿದೋಷಜ 1 ಹೀಗೆ) ನಾಲ್ಕು ವಿಧವಾದ ಅರೋಚಕಗಳು ಪರಿಹಾರವಾಗುವವು.

12. ವಾತೇ ವಚಾಮ್ಬುವಮನಂ ಕೃತವಾನ್ಪಿಬೇಚ್ಚ ಸ್ನೇಹೈಃ ಸುರಾಭಿರಥವೋಷ್ಣ-
ವಾತಾರುಚಿಗೆ ಪ್ರತಿಕ್ರಿಯೆ
ಜಲೇನ ಚೂರ್ಣಮ್ । ಕೃಷ್ಣಾವಿಡಂಗಯವಭಸ್ಮಹರೇಣುಭಾಂರ್ಗೀರಾ-
ಸ್ನೈಲಹಿಂಗುಲವಣೋತ್ತಮನಾಗರಾಣಾಮ್ ॥

(ಸು. 878)

ವಾತಜ ಅರುಚಿಯಲ್ಲಿ ಬಜೆಯ ಕಷಾಯದ ನೀರಿನಿಂದ ವಾಂತಿಮಾಡಿಸಿದ ಮೇಲೆ ರೋಗಿಗೆ, ಹಿಪ್ಪಲಿ ವಾಯುವಿಳಂಗ, ಯವಕ್ಷಾರ, ರೇಣಿಕೆ ಬೀಜ, ಗಂಟುಭಾರಂಗಿ (ಸಿರ್ಪಿಷ), ಅರತೆ (ರಾಸ್ಮೆಗಡ್ಡೆ), ಏಲಕ್ಕಿ, ಹಿಂಗು, ಸೈಂಧವಲವಣ, ಶುಂಠಿ, ಇವುಗಳ ಚೂರ್ಣವನ್ನು ಸ್ನೇಹ ಗಳಲ್ಲಿ, ಕಳ್ಳುಗಳಲ್ಲಿ, ಅಥವಾ ಬಿಸಿನೀರಿನಲ್ಲಿ ಕಲಸಿ ಕುಡಿಯಕೊಡಬೇಕು.

ಷರಾ ಎಲ್ಲಾ ಸಂಗತಿಗಳಲ್ಲಿಯೂ ವಮನಕ್ಕೆ ಮಾಯಿಫಲವನ್ನು ಕೂಡಿಸಿಕೊಳ್ಳಬೇಕು ಎಂತ ರ ರ (ಪು 360) ವಾ.ನು 'ರಾಸ್ನಾ' ಬದಲಾಗಿ ದ್ರಾಕ್ಷೆಯನ್ನು ಮತ್ತು ಸ್ನೇಹಗಳ ಬದಲಾಗಿ ತುಪ್ಪವನ್ನು ಹೇಳಿದ್ದಾನೆ (ಪು 287)

13. ಪಿತ್ತೇ ಗುಡಾಂಬುಮಧುರೈರ್ವಮನಂ ಪ್ರಶಸ್ತಂ
ಲೇಹಃ ಸಸೈನ್ಧವಸಿತಾಮಧುಸರ್ಪಿರಿಷ್ಟಃ ॥ (ಸು. 878)

ಪಿತ್ತಾರುಚಿಗೆ ಪ್ರತೀಕಾರ

ಪಿತ್ತಜ ಅರುಚಿಯಲ್ಲಿ ಸಿಹಿದ್ರವ್ಯಗಳ ಚೂರ್ಣವನ್ನು ಬೆಲ್ಲದ ನೀರಿನಲ್ಲಿ ಕಲಸಿ ಕುಡಿಸಿ ವಾಂತಿಮಾಡಿಸುವದು ಪ್ರಶಸ್ತ; ಮತ್ತು ಸೈಂಧವ ಲವಣ, ಸಕ್ಕರೆ, ಜೇನು ಮತ್ತು ತುಪ್ಪ ಕೂಡಿಸಿ ನೆಕ್ಕಿಸುವದು ಹಿತ.

ಷರಾ 'ಲೇಹಃ' ಎಂಬ ಸ್ಥಾನದಲ್ಲಿ 'ಸ್ನೇಹಃ' ಎಂಬ ಪಾಠವು ಮೂಲದಲ್ಲಿಯೂ, ಬೇರೆ ಕೆಲವು ಗ್ರಂಥಗಳಲ್ಲಿಯೂ ಕಾಣುತ್ತದೆ ಸ್ನೇಹಗಳೊಳಗೆ ವಾತಪಿತ್ತ ದೋಷಗಳಿಗೆ ಉಕ್ತವಾದ (1ನೇ ಭಾಗದ XIX-59 ನೋಡಿರಿ) ತುಪ್ಪವು ಯೋಗದಲ್ಲಿ ಪ್ರತ್ಯೇಕವಾಗಿ ಹೇಳಲ್ಪಟ್ಟದೆ ಮತ್ತು ಸ್ನೇಹಪಾನವು ಅರುಚಿಯಲ್ಲಿ ನಿಷಿದ್ಧ (1ನೇ ಭಾಗದ XIX-48 ನೋಡಿರಿ). ಅದಲ್ಲದೆ ವಾ ನು ಇದು ಲೇಹಯೋಗ ಎಂತ ಸ್ಪಷ್ಟವಾಗಿ ಹೇಳಿರುತ್ತಾನೆ. ಆದ್ದರಿಂದ ರ ರದಲ್ಲಿ ಕಾಣುವ 'ಲೇಹ' ಎಂಬ ಪಾಠವನ್ನೇ ಇಲ್ಲಿ ಅವಲಂಬಿಸಿಯದೆ.

14. ನಿಮ್ಬಾಮ್ಬುವಾಮಿತವತಃ ಕಫಜೇ ಽನುಪಾನಂ
ರಾಜದ್ರುಮಾಮ್ಬು ಮಧುನಾ ತು ಸದೀಪ್ಯಕಂ ಸ್ಯಾತ್ |
ಚೂರ್ಣಂ ಯದುಕ್ತಮಥವಾ ಽನಿಲಜೇ ತದೇವ || (ಸು. 878)

ಕಫಜ ಅರುಚಿಗೆ ಪ್ರತಿಕ್ರಿಯೆ

ಕಫಜ ಅರುಚಿಯಲ್ಲಿ ಕಹಿಬೇವಿನ ಕಷಾಯದ ನೀರಿನಿಂದ ವಾಂತಿ ಮಾಡಿಸಿ, ಅನುಪಾನವಾಗಿ ಕಕ್ಕೆಮರದ ಬೇರಿನ ಕಷಾಯವನ್ನು, ಓಮದ ಪುಡಿ ಮತ್ತು ಜೇನು ಕೂಡಿಸಿ, ಕೊಡಬೇಕು; ಅಥವಾ ವಾತಜ ಅರುಚಿಗೆ ಹೇಳಿದ ಚೂರ್ಣವನ್ನೇ ಕೊಡುವದು.

ವರಾ ವಾಂತಿಯನಂತರ ಊಟ ಕೊಟ್ಟ ಮೇಲೆ ರಾಜದ್ರುಮಕಷಾಯವನ್ನು ಕೊಡುವದಾಗಿ ಸಿ ಸಂ ವ್ಯಾ.

15. ಸರ್ವೈಶ್ಚ ಸರ್ವಕೃತಮೇವಮುಪಕ್ರಮೇತ || (ಸು. 878)

ತ್ರಿದೋಷಜ ಅರುಚಿಗೆ ಪ್ರತಿಕ್ರಿಯೆ.

ತ್ರಿದೋಷಜ ಅರುಚಿಯಲ್ಲಿ ವಾತಾದಿ ದೋಷಗಳಿಗೆ ಹೇಳಲ್ಪಟ್ಟ ಎಲ್ಲ ಯೋಗಗಳ ಕೂಡಿಕೆಯಿಂದ ಅದೇ ಪ್ರಕಾರ ಉಪಕ್ರಮಿಸತಕ್ಕದ್ದು.

16. ಇಚ್ಛಾಭಿಘಾತಭಯಶೋಕಹತೇ ಽನ್ತರಗ್ನೌ
ಭಾವಾನ್ ಭವಾಯ ವಿತರೇತ್ಖಲು ಶಕ್ಯರೂಪಾನ್ |
ಅರ್ಥೇಷು ಚಾಪ್ಯಪಚಿತೇಷು ಪುನರ್ಭವಾಯ
ಪೌರಾಣಿಕೈಃ ಶ್ರುತಿಪಥ್ಯರನುಮಾನಯೇತ್ತಮ್ ||
ದೈನ್ಯಂ ಗತೇ ಮನಸಿ ಬೋಧನಮತ್ರ ಶಸ್ತಂ
ಯದ್ಯತ್ಪ್ರಿಯಂ ತದುಪಸೇವ್ಯಮರೋಚಕೇ ತು || (ಸು. 879)

ಆಗಂತು ವರ್ಗದ ಅರುಚಿಗೆ ಉಪಚಾರ ಕ್ರಮ

ಇಚ್ಛಾಪೂರ್ತಿಗೆ ಭಂಗ ಉಂಟಾದದ್ದರಿಂದ, ಭಯದಿಂದ ಮತ್ತು ದುಃಖದಿಂದ ಜಠರಾಗ್ನಿಯು ಕೆಟ್ಟು ಉಂಟಾದ ಅರುಚಿಯಲ್ಲಿ, ರುಚಿ ಹುಟ್ಟಿ ಸೌಖ್ಯವಾಗುವದಕ್ಕೆ ಇಚ್ಛಿಸಲ್ಪಟ್ಟ ಪದಾರ್ಥಗಳನ್ನು ಸಾಧ್ಯವಾದರೆ ಸಂಪಾದಿಸಿ ರೋಗಿಗೆ ಕೊಡಬೇಕು, ಮತ್ತು ಆ ಪದಾರ್ಥಗಳು ನಷ್ಟವಾಗಿ ಹೋದ ಸಂಗತಿಯಲ್ಲಿ ರುಚಿಯನ್ನುಂಟುಮಾಡುವದಕ್ಕೆ ಅವನಿಗೆ ಪುರಾಣದ ವಚನಗಳಿಂದ ಸಮಾಧಾನ ಹೇಳಬೇಕು. ಮನಸ್ಸು (ನೊಂದು) ದೀನವಾಗಿದ್ದದರಿಂದ ಅರುಚಿ ಸಂಭವಿಸಿದ್ದಾದರೆ ಅವನಿಗೆ (ತಕ್ಕ ರೀತಿಯಿಂದ) ಬೋಧಿಸುವದು ಪ್ರಶಸ್ತ. ಅರುಚಿಯಲ್ಲ ರೋಗಿಗೆ ಯಾವದು ಯಾವದು ಪ್ರಿಯವೊ ಅದನ್ನು ಅವನು ಸೇವಿಸಬೇಕು.

17. ತ್ರೀಣ್ಯೂಷಣಾನಿ ರಜನೀತ್ರಿಫಲಾಯುತಾನಿ
ಚೂರ್ಣೀಕೃತಾನಿ ಯವಶೂಕವಿಮಿಶ್ರಿತಾನಿ |
ಕ್ಷೌದ್ರಾಪ್ರಯುತಾನಿ ವಿತರೇನ್ಮುಖಧಾವನಾರ್ಥ-
ಮನ್ಯಾನಿ ತಿಕ್ತಕಟುಕಾನಿ ಚ ಭೇಷಜಾನಿ || (ಸು. 879)

ಅರುಚಿಗಳಲ್ಲಿ ಬಾಯಿ ತೊಳೆಯುವದಕ್ಕೆ ಔಷಧಗಳು

ತ್ರಿಕಟು, ತ್ರಿಫಲೆ, ಅರಸಿನ, ಇವುಗಳ ಚೂರ್ಣಗಳನ್ನು, ಯವಕ್ಷಾರ ಮಿಶ್ರಮಾಡಿಕೊಂಡು, ಜೇನಿನಲ್ಲಿ ಕಲಸಿ, ಮತ್ತು ಬೇರೆ ಕಹಿ ಮತ್ತು ಕಾರ ರುಚಿಗಳುಳ್ಳ ಔಷಧಗಳನ್ನು (ಅದೇ ಪ್ರಕಾರ), ಬಾಯಿ ತೊಳೆಯುವದಕ್ಕ ಕೊಡಬೇಕು.

ವಿಟ್ ಚೂರ್ಣಮಧುಸಂಯುಕ್ತೋ ರಸೋ ದಾಡಿಮಸಮ್ಭವಃ |
ಅಸಾಧ್ಯಮಪಿ ಸಂಹನ್ಯಾದರುಚಿಂ ವಕ್ತ್ರಧಾವಿತಃ || (ರ. ರ. 360)

ದಾಳಿಂಬದ ಹಣ್ಣಿನ ರಸಕ್ಕೆ ಬಿಡಾಲವಣ ಮತ್ತು ಜೇನು ಬೆರಸಿ, ಅದರಿಂದ ಬಾಯಿ ತೊಳೆದರ, ಅಸಾಧ್ಯವಾದ ಅರುಚಿಯಾದರೂ ಪರಿಹಾರವಾಗುವದು.

ಸರಾ 'ವಿಟ್‌ಚೂರ್ಣ' ಎಂಬಲ್ಲಿ 'ವಿಡಂಗ' ಎಂತ ಪಾಠಾಂತರವಿರುವಲ್ಲಿ ಬಿಡಾಲವಣದ ಬದಲಾಗಿ ವಾಯು ವಿಳಂಗದ ಚೂರ್ಣವನ್ನು ಕೂಡಿಸಬೇಕೆಂತ ಅರ್ಥವಾಗುತ್ತದೆ

ಅಮ್ಲಿಕಾಗುಡತೋಯಂ ಚ ತ್ವಗೇಲಾಮರಿಚಾನ್ವಿತಮ್ ।
ಅಭಕ್ತಛನ್ದರೋಗೇಷು ಶಸ್ತಂ ಕವಲಧಾರಣಮ್ ॥ (ರ. ರ. 361)

ಹುಣಸೆ ಹುಳಿ ಮತ್ತು ಬೆಲ್ಲ ಕದಡಿದ ನೀರಿಗೆ ಲವಂಗಪಟ್ಟೆ, ಏಲಕ್ಕಿ ಮತ್ತು ಕಾಳು ಮಣಸು, ಇವುಗಳ ಪುಡಿಯನ್ನು ಕೂಡಿಸಿ, ಅದನ್ನು ಬಾಯಿಯೊಳಗಿಟ್ಟುಕೊಂಡು ಉಗಿಯುವದು 'ಅಭಕ್ತಛನ್ದ' ರೋಗಗಳಲ್ಲಿ ಪ್ರಶಸ್ತ.

ಯವಕ್ಷಾರಸ್ತು ಕರ್ಷೈಕಂ ದ್ವಾತ್ರಿಂಶದ್ಗುಣಕೈರ್ಜಲೈಃ ।
ಪಾದಶೇಷಂ ಹರೇತ್ಕ್ವಾಥಂ ಶ್ಲೇಷ್ಮಘ್ನಂ ಮುಖಶುದ್ಧಕೃತ್ ॥ (ರ.ರ. 361)

ಯವಕ್ಷಾರ ೧ ಕರ್ಷಕ್ಕೆ ೮ ಪಲ ನೀರಿಟ್ಟು ಕಾಯಿಸಿ ಕಾಲಂಶಕ್ಕೆ ಬತ್ತಿಸಿದ ಕಷಾಯವು (ಬಾಯಿ ಮುಕ್ಕಳಿಸುವದರಿಂದ) ಕಫವನ್ನು ನಾಶಮಾಡುವದು ಮತ್ತು ಬಾಯಿಯನ್ನು ಶುದ್ಧಮಾಡುವದು.

ಕಪಿತ್ಥಮಜ್ಜತ್ರಿಕಟುಚೂರ್ಣಂ ಕ್ಷೌದ್ರಸಿತಾಯುತಮ್ ।
ಅರೋಚಕೇಷು ಸರ್ವೇಷು ಪ್ರಸನ್ನಂ ಧಾರಯೇನ್ಮುಖೇ ॥ (ರ. ರ 362)

ಬೇಲದ ಹಣ್ಣಿನ ತಿರುಳನ್ನು, ತ್ರಿಕಟುಗಳ ಚೂರ್ಣ, ಸಕ್ಕರೆ ಮತ್ತು ಜೇನು ಕೂಡಿಸಿ ಕೊಂಡು, ಎಲ್ಲಾ ಅರುಚಿಗಳಲ್ಲಿ ಬಾಯಿಯೊಳಗೆ ಇಟ್ಟುಕೊಳ್ಳುವದು ಹಿತ.

18 ಅರುಚಿಗಳಲ್ಲಿ ಪಾನಕ್ಕೆ ಕಷಾಯಗಳು.

ಮುಸ್ತಾದ್ರಾಕ್ಷಾಮೃತಾಶುಂಠೀಕಿರಾತತಿಕ್ತಕಂ ಜಲೈಃ ।
ಕ್ವಾಥಯಿತ್ವಾ ಪಿಬೇದುಷ್ಣಮಾಸ್ಯವೈರಸ್ಯಶಾನ್ತಯೇ । (ರ. ರ. 362)

ಭದ್ರಮುಷ್ಟಿ, ದ್ರಾಕ್ಷಿ, ಅಮೃತಬಳ್ಳಿ, ಶುಂಠಿ, ಕಿರಾತಕಡ್ಡಿ, ಇವುಗಳ ಕಷಾಯವನ್ನು ಬಿಸಿಯಾಗಿ ಕುಡಿಯುವದರಿಂದ ಬಾಯಿಯ ರುಚಿವಿಕಾರವು ಶಾಂತವಾಗುವದು.

ಚವಿಕಾಪಿಪ್ಪಲೀಮೂಲಮರೀಚೌಷಧಜೀರಕೈಃ ।
ಸಬಿಲ್ವೈಃ ಕ್ವಥಿತಂ ವಾರಿ ಭಕ್ತದ್ವೇಷನಿವಾರಣಮ್ ॥
(ವೈ ಸಾ. ಸಂ. 179)

ಕಾಡುಮೆಣಸಿನ ಬೇರು, ಹಿಪ್ಪಲಿಮೂಲ, ಕಾಳುಮೆಣಸು, ಶುಂಠಿ, ಜೀರಿಗೆ, ಬಿಲ್ವಪತ್ರೆ ಬೇರು, ಇವುಗಳ ಕಷಾಯ(ದಪಾನ)ದಿಂದ ಅನ್ನದ್ವೇಷ ಪರಿಹಾರವಾಗುವದು.

19. ತಾಳೀಸಾದಿ ಚೂರ್ಣ

ತಾಳೀಸಪತ್ರಂ ಮರಿಚಂ ನಾಗರಂ ಪಿಪ್ಪಲೀ ಶುಭಾ ।
ಯಥೋತ್ತರಂ ಭಾಗವೃದ್ಧ್ಯಾ ತ್ವಗೇಲೇ ಚಾರ್ಧಭಾಗಿಕೇ ॥
ತದ್ರುಚ್ಯಂ ದೀಪನಂ ಚೂರ್ಣಂ ಕಣಾಷ್ಟಗುಣಶರ್ಕರಮ್ ।
ಕಾಸಶ್ವಾಸಾರುಚಿಛರ್ದಿಪ್ಲೀಹಹೃತ್ಪಾರ್ಶ್ವಶೂಲಜಿತ್ ॥
ಪಾಂಡುಜ್ವರಾತಿಸಾರಘ್ನಂ ಮೂಢವಾತಾನುಲೋಮನಮ್ ॥
(ಅ ಸಂ. II-153)

೧ ಪಾಲು ತಾಳೀಸಪತ್ರೆ, ೨ ಪಾಲು ಕಾಳುಮೆಣಸು, ೩ ಪಾಲು ಶುಂಠಿ, ೪ ಪಾಲು ಹಿಪ್ಪಲಿ, ೫ ಪಾಲು ಬಿದಿರುಪ್ಪು, ಅರ್ಧಭಾಗೆ ಲವಂಗಪಟ್ಟೆ, ಅರ್ಧಭಾಗ ಏಲಕ್ಕಿ, ಇವುಗಳ ವಸ್ತ್ರಗಾಲಿತ ಚೂರ್ಣಕ್ಕೆ ಹಿಪ್ಪಲಿಯ ಎಂಟು ಪಾಲಷ್ಟು (ಅಂದರೆ ೩೨ ಭಾಗ) ಸಕ್ಕರೆಯನ್ನು ಬೆರಸಿಟ್ಟುಕೊಂಡು, ತಕ್ಕ ಪ್ರಮಾಣದಲ್ಲಿ ಸೇವಿಸುವದರಿಂದ ಉಬ್ಬಸ, ಕೆಮ್ಮು, ಅರುಚಿ, ವಾಂತಿ, ಪ್ಲೀಹವ್ಯಾಧಿ, ಎದೆಶೂಲೆ, ಪಕ್ಕಗಳ ಶೂಲೆ, ಪಾಂಡು, ಜ್ವರಾತಿಸಾರ, ಸಹ ಪರಿಹಾರ ವಾಗುವವು; ಮತ್ತು ಮೂಢವಾದ ವಾತವು ಕ್ರಮಗತಿಗೆ ಬರುವದು. ಈ ಚೂರ್ಣವು ರುಚಿಯುಳ್ಳದ್ದು ಮತ್ತು ದೀಪನಕಾರಿ.

ಷರಾ 'ಶುಭಾ' ಎಂಬದು 'ಪಿಪ್ಪಲೀ'ಗೆ ವಿಶೇಷಣ ಎಂತ ತಿಳಿದು ಬಿದಿರುಪ್ಪನ್ನು ಈ ಚೂರ್ಣಕ್ಕೆ ಸೇರಿಸದವರು ಇದ್ದಾರೆಂತ ಕಾಣುತ್ತದೆ ಆದರೆ ಶಾ ದಲ್ಲಿ ಈ ಯೋಗವು ವಂಶಲೋಚನವನ್ನು ಸ್ಪಷ್ಟವಾಗಿ ಸೇರಿಸಿಯೇ ಬರೆಯಲ್ಪಟ್ಟಿ ರುತ್ತದೆ (ಪು. 69-70) ಅಲ್ಲಿ ಸಕ್ಕರೆಯನ್ನು ಪಾಕಮಾಡಿ, ಆ ಪಾಕದಲ್ಲಿ ತಾಳೀಸಾದಿಗಳ ಚೂರ್ಣವನ್ನು ಕಲಸಿ ಗುಳಿಗೆಗಳನ್ನು ಮಾಡಿಟ್ಟುಕೊಂಡು, ಮೋದಕವನ್ನಾಗಿ ಉಪಯೋಗಿಸಲೂ ಬಹುದು ಎಂತ ಹೇಳಲ್ಪಟ್ಟದೆ

20. ತುಲ್ಯಾರ್ದ್ರಕಾಂ ಗುಡತುಲಾ(ಂ) ವಿಪಚೇತ್ತ್ರಿಜಾತ-

ಆರ್ದ್ರಕಾದಿ ಲೇಹ — ವ್ಯೋಷಾಬ್ದಜೀರಕವರಾಳಕದೀಪ್ಯಕಾದ್ಯೈಃ |

ಸಂಚೂರ್ಣಿತೈಃ ಪಲಮಿತೈಃ ಪ್ರತಿವಾಪಕೈಸ್ತೈ

ರ್ಯುಕ್ತಾಂ(ಕ್ತಾ) ಗುಡಾರ್ಧಮಧುನಾರುಚಿಶೋಫಹಾರೀ ।

(ವೈ. ಸಾ. ಸಂ 180)

೧ ತುಲೆ (೧೦೦ ಪಲ) ಬೆಲ್ಲವನ್ನು ಅಷ್ಟೇ ಶುಂಠೀರಸವನ್ನು ಬೆರಸಿ ಪಾಕಮಾಡಿ, ಪ್ರಕ್ಷೇಪ(ಮೇಲ್ಪುಡಿ)ವಾಗಿ ಏಲಕ್ಕಿ, ಲವಂಗಪತ್ರೆ, ಲವಂಗಪಟ್ಟೆ, ತ್ರಿಕಟು, ಭದ್ರಮುಷ್ಟಿ, ಜೀರಿಗೆ, ಲವಂಗ, ಅಜವೋದ ಮುಂತಾದವುಗಳನ್ನು ಒಂದೊಂದು ಪಲ ಪ್ರಕಾರ ತೆಗೆದು ಕೊಂಡು ಮಾಡಿದ ವಸ್ತ್ರಗಾಲಿತ ಚೂರ್ಣವನ್ನು ಬೆರಸಿ, (ಅದು ತಣಿದ ಮೇಲೆ) ೫೦ ಪಲ ಜೇನನ್ನು ಕಲಸಿ, ಇಟ್ಟುಕೊಂಡು, (ತಕ್ಕ ಪ್ರಮಾಣದಲ್ಲಿ) ಸೇವಿಸುವದರಿಂದ ಅರುಚಿಯೂ, ಶೋಫವೂ ಪರಿಹಾರವಾಗುವವು.

ಷರಾ. ೨ನೇ ಚರಣದ ಅಂತ್ಯದಲ್ಲಿರುವ 'ಆದ್ಯ' ಎಂಬ ಪದವನ್ನು ಬಿಟ್ಟೇ ಅರ್ಥ ಬರೆದದ್ದು ಕಾಣುತ್ತದೆ, 'ದೀಪ್ಯ ಕಾದ್ಯೈಃ' ಎಂಬ ಪದ ಸರಿಯಾದ್ದಾದರೆ, 'ಅಜಮೋದ ಮುಂತಾದವು' ಎಂತಲೇ ಅರ್ಥ ಮಾಡಬೇಕಾಗುತ್ತದ, ಮತ್ತು ಅಗ್ಗಿ ದೀಪನಕಾರಿ ಮತ್ತು ಸುವಾಸನೆಯುಳ್ಳ (ಗಂಧಮೆಣಸು, ಅಡಿಕೆ, ಮುಂತಾದ) ಅನ್ಯ ಪದಾರ್ಥಗಳನ್ನು ಸಹ ಸೇರಿಸ ಬಹುದೆಂಬದು ಯೋಗಕರ್ತೃಗಳ ಅಭಿಪ್ರಾಯ ಎಂತ ತಿಳಿಯಬೇಕು ಅನ್ಯದ್ರವ್ಯಗಳನ್ನು ಸಹ ಸೇರಿಸುವಲ್ಲಿ ಪ್ರತಿವಾಪಕ ದ್ರವ್ಯಗಳ ಒಟ್ಟು ತೂಕವು ೧೦ ಪಲಕ್ಕೆ ಮಿಗದಂತೆ ಪ್ರತಿಯೊಂದರ ಪ್ರಮಾಣವನ್ನು ತಗ್ಗಿಸಿಕೊಳ್ಳಬೇಕಾದೀತು

21. ಶೃಂಗವೇರರಸಂ ಚೈವ ಮಧುನಾ ಸಹ ಯೋಜಯೇತ್ |

ಶುಂಠಿರಸದ ಉಪಯೋಗ — ಅರುಚಿಶ್ವಾಸಕಾಸಘ್ನಂ ಪ್ರತಿಶ್ಯಾಯಕಫಾಪಹಮ್ ||

(ಚಿ. ಸಾ. ಸಂ. 274)

ಹಸಿಶುಂಠಿರಸವನ್ನು, ಜೇನು ಕೂಡಿಸಿಕೊಂಡು, ಉಪಯೋಗಿಸುವದ ರಿಂದ ಅರುಚಿ, ಉಬ್ಬಸ, ಕೆಮ್ಮು, ನೆಗಡಿ ಮತ್ತು ಕಫದೋಷ ಪರಿಹಾರವಾಗುವವು.

22. ಭೋಜನಾಗ್ರೇ ಸದಾ ಪಥ್ಯಂ ಜಿಹ್ವಾಕಣ್ಠವಿಶೋಧನಮ್ |

ಲವಣಾರ್ದ್ರಕ ಭಕ್ಷಣ. — ಅಗ್ನಿಸಂದೀಪನಂ ಹೃದ್ಯಂ ಲವಣಾರ್ದ್ರಕಭಕ್ಷಣಮ್ ||

(ಚಿ. ಸಾ. ಸಂ. 274)

ಊಟದ ಆರಂಭದಲ್ಲಿ ಹಸಿಶುಂಠಿ ಮತ್ತು ಉಪ್ಪನ್ನು (ಕೂಡಿಸಿ ಅರೆದ ಚಟ್ಣಿಯನ್ನು) ತಿನ್ನುವದು ಯಾವಾಗಲೂ ಪಥ್ಯ ಮತ್ತು ಮನಸ್ಸಿಗೆ ಒಪ್ಪುವಂಥಾದ್ದು; ಅವರಿಂದ ನಾಲಿಗೆ ಮತ್ತು ಕಂಠ ಚನ್ನಾಗಿ ಶುದ್ಧವಾಗುವದಲ್ಲದೆ, ಅಗ್ನಿಯು ಒಳ್ಳೇ ಚುರುಕಾಗುವದು.

23. ದ್ವೇ ಪಲೇ ದಾಡಿಮಾದಷ್ಟೌ ಖಂಡಾದ್ವ್ಯೋಷಾತ್ಪಲತ್ರಯಮ್ ।
ದಾಡಿಮಾದಿ ಚೂರ್ಣ ತ್ರಿಸುಗನ್ಧಿ ಪಲಂ ಚೈಕಂ ಚೂರ್ಣಮೇಕತ್ರ ಕಾರಯೇತ್ ॥
ದೀಪನಂ ರೋಚನಂ ಹೃದ್ಯಂ ಪೀನಸಜ್ವರಕಾಸಜಿತ್ ॥
(ಚಿ. ಸಾ. ಸಂ. 275)

ದಾಳಿಂಬದ ಕಾಯಿ ೨ ಪಲ, ಕಲ್ಲುಸಕ್ಕರೆ ೮ ಪಲ, ತ್ರಿಕಟು ೩ ಪಲ, ತ್ರಿಸುಗಂಧಿ ೧ ಪಲ, ಇವುಗಳನ್ನು ಒಟ್ಟಾಗಿ ಸೇರಿಸಿ ಮಾಡಿದ ಚೂರ್ಣವು ಅನ್ನದೀಪನಕಾರಿ, ರುಚಿಕರ, ಮನೋಹರ ಮತ್ತು ನೆಗಡಿಯನ್ನೂ, ಜ್ವರವನ್ನೂ, ಕೆಮ್ಮನ್ನೂ ಪರಿಹರಿಸತಕ್ಕಂಥಾದ್ದು.

ಶಾ ಭಾ ಪ್ರ ದ ಶಾರದಲ್ಲಿ ತ್ರಿಕಟು ಇಲ್ಲ ಮತ್ತು ಸಕ್ಕರೆಯು ೬ ಪಲ (ಪು 382) ಒಣಗಿದ ದಾಳಿಂಬದ ಕಾಯಿ ಸಿಗದಲ್ಲಿ ದಾಳಿಂಬದ ಓಡನ್ನು ಉಪಯೋಗಿಸಬಹುದು, ಹುಳಿ-ಸಿಹಿ ಬೆರೆತಿರುವ ಜಾತಿಯ ದಾಳಿಂಬವು ಹುಳಿ ಅಥವಾ ಸಿಹಿ ಜಾತಿಯದಕ್ಕಿಂತ ಒಳ್ಳೇದು

24. ಲವಂಗಕಂಕೋಲಮುಶೀರಚನ್ದನಂ ನತಂ ಸನೀಲೋತ್ಪಲಕೃಷ್ಣಜೀರಕಮ್ ।
ಲವಂಗಾದಿ ಚೂರ್ಣ ಏಲಾ ಸಕೃಷ್ಣಾಗುರುಭೃಂಗಕೇಸರಂ ಕಣಾ ಸವಿಶ್ವಾ ನಲದಂ ಸಹಾಮ್ಬುನಾ ॥
ಕರ್ಪೂರಜಾತೀಫಲವಂಶರೋಚನಂ ಸಿತಾಷ್ಟಭಾಗಂ ಸಮಸೂಕ್ಷ್ಮಚೂರ್ಣಿತಮ್ ।
ಸುರೋಚನಂ ತರ್ಪಣಮಗ್ನಿದೀಪನಂ ಬಲಪ್ರದಂ ವೃಷ್ಯತಮಂ ತ್ರಿದೋಷನುತ್ ॥
ಉರೋವಿಬನ್ಧಂ ತಮಕಂ ಗಲಗ್ರಹಂ ಸಶ್ವಾಸಯಕ್ಷ್ಮಾರುಚಿಪೀನಸಂ ತಥಾ ।
ಗ್ರಹಣ್ಯತೀಸಾರಮಥಾಸೃಜಃ ಕ್ಷಯಂ ಪ್ರಮೇಹರೋಗಂ ಚ ನಿಹನ್ತಿ ಸತ್ವರಮ್ ॥ (ಚಿ. ಸಾ. ಸಂ. 276)

ಲವಂಗ, ಬಾಲಮೆಣಸು, ಲಾವಂಚ, ಶ್ರೀಗಂಧ, ತಗರ, ನೀಲತಾವರೆ, ಕರಿಜೀರಿಗೆ, ಏಲಕ್ಕಿ, (ಕರೀ) ಅಗಿಲುಗಂಧ, ಲವಂಗಪಟ್ಟೆ, ನಾಗಕೇಸರ, ಹಿಪ್ಪಲಿ, ಶುಂಠಿ, ಜಟಾಮಾಂಸಿ, ಮುಡಿವಾಳ (ಅಥವಾ ಇರುವೇರಿ), ಪಚ್ಚೆಕರ್ಪೂರ, ಜಾಯಿಕಾಯಿ, ಬಿದಿರುಪ್ಪು, ಇವುಗಳನ್ನೆಲ್ಲಾ ಒಂದೊಂದು ಭಾಗ ಪ್ರಕಾರ ಕೂಡಿಸಿ ಮಾಡಿದ ಒಳ್ಳೆ ಸಣ್ಣಗಾದ ಚೂರ್ಣಕ್ಕೆ ೮ ಭಾಗ ಸಕ್ಕರೆ ಬೆರಸಿಟ್ಟುಕೊಂಡ ಚೂರ್ಣವು ಒಳ್ಳೇ ರುಚಿಕರ, ತೃಪ್ತಿಕಾರಿ, ಅಗ್ನಿದೀಪನಕಾರಿ, ಬಲಕಾರಿ, ಉತ್ತಮವಾದ ವೃಷ್ಯ, ತ್ರಿದೋಷಹರ; ಮತ್ತು ಎದೆ ಹಿಡಕೊಂಡದ್ದು, ತಮಕಶ್ವಾಸ, ಗಂಟಲು ಹಿಡಕೊಂಡದ್ದು, ಉಬ್ಬಸ, ರಾಜಯಕ್ಷ್ಮ, ಅರುಚಿ, ಪೀನಸ, ಗ್ರಹಣಿ, ಅತಿಸಾರ, ರಕ್ತಕ್ಷಯ ಮತ್ತು ಪ್ರಮೇಹ, ಈ ರೋಗಗಳನ್ನೆಲ್ಲಾ ಬೇಗನೇ ಪರಿಹರಿಸತಕ್ಕಂಥಾದ್ದು.

ಷರಾ ಭಾ. ಪ್ರ ದ ಪಾರ ಪ್ರಕಾರ ಸಕ್ಕರೆಯನ್ನು ಮಿಕ್ಕ ಜೀನಸುಗಳ ಚೂರ್ಣದ ತೂಕಕ್ಕೆ ಎರಡು ಪಾಲು ಸೇರಿಸತಕ್ಕದ್ದು (ಪು 382) ಶಾ ನ ಲವಂಗಾದಿ ಚೂರ್ಣದಲ್ಲಿ ಸಕ್ಕರೆಯು ಮಿಕ್ಕ ಚೂರ್ಣದ ಸಮ ಅರ್ಧ ಪಾಲು (ಶಾ. 64), ಒಬ್ಬರು ವ್ಯಾಖ್ಯಾನಕಾರರು ಸಕ್ಕರೆ ಸಮಪಾಲು ಎಂತ ಬರೆದಿದ್ದಾರೆ ಇದೆಲ್ಲವು ಯಾವದು ಯಾವದರ ಅರ್ಥ ಎಂಬವರಲ್ಲಿ ಭಿನ್ನಾಭಿಪ್ರಾಯದ ಫಲ

25. ರಾಜಿಕಾಜೀರಕೌ ಭೃಷ್ಟೌ ಭೃಷ್ಟಂ ಹಿಂಗು ಸನಾಗರಮ್ |
ಸೈನ್ಧವಂ ದಧಿ ಗೋಃ ಸರ್ವಂ ವಸ್ತ್ರಪೂತಂ ಪ್ರಕಲ್ಪಯೇತ್ ||
ತಾವನ್ಮಾತ್ರಂ ಕ್ಷಿಪೇತ್ತತ್ರ ಯಥಾಸ್ಯಾದ್ರುಚಿರುತ್ತಮಾ |
ತಕ್ರಮೇತದ್ಭವೇತ್ಸದ್ಯೋ ರೋಚನಂ ವಹ್ನಿವರ್ಧನಮ್ ||

**ಮಜ್ಜಿಗೆಯ ಉಪಯೋಗ.**

(ಭಾ. ಪ್ರ. 382)

ಸಾಸಿವೆ, ಜೀರಿಗೆ, ಹಿಂಗು, ಶುಂಠಿ, ಇವುಗಳನ್ನು ಪ್ರತ್ಯೇಕವಾಗಿ ತುಪ್ಪದಲ್ಲಿ ಹುರಿದು, ಚೂರ್ಣಿಸಿ, ಆ ಚೂರ್ಣವನ್ನೂ ಸೈಂಧವಲವಣದ ಪುಡಿಯನ್ನೂ ದನದ ಮೊಸರಿನಲ್ಲಿ ಕಲಸಿ, ವಸ್ತ್ರಗಾಲಿತ ಮಾಡಿ, ಆ ದ್ರವಕ್ಕೆ ಉತ್ತಮವಾದ ರುಚಿಗೆ ಬೇಕಾದಷ್ಟು ದನದ ಮಜ್ಜಿಗೆಯನ್ನು ಕೂಡಿಸುವದು. ಈ ಮಜ್ಜಿಗೆಯ ಉಪಯೋಗದಿಂದ ಕೂಡಲೆ ರುಚಿಯುಂಟಾಗುತ್ತದೆ ಮತ್ತು ಅಗ್ನಿ ವೃದ್ಧಿಯಾಗುತ್ತದೆ

ಷರಾ ಸಾಸಿವೆ ಮುಂತಾದವುಗಳನ್ನು ಸಹ ರುಚಿಗೆ ಬೇಕಾದಷ್ಟು ಹೆಚ್ಚು ಕಡಿಮೆ ಪ್ರಮಾಣದಿಂದ ಉಪಯೋಗಿಸುವದು ಮಜ್ಜಿಗೆಯನ್ನು ಮೊಸರಿನೊಂದಿಗೆ ಮುಂದಾಗಿ ಕಲಸಿ, ಅನಂತರ ವಸ್ತ್ರಗಾಲಿತ ಮಾಡುವದು ಸುಲಭವಾದೀತು

26. ಸಮ್ಯಗಾವರ್ತಿತಂ ದುಗ್ಧಂ ನಿಬದ್ಧಂ ದಧಿ ಮಾಹಿಷಮ್ |
ಏಕೀಕೃತ್ಯ ಪಟೇ ಘೃಷ್ಟಂ ಶುಭ್ರಶರ್ಕರಯಾ ಸಮಮ್ ||
ಏಲಾಲವಂಗಕರ್ಪೂರಮರಿಚೈಶ್ಚ ಸಮನ್ವಿತಮ್ |
ನಾಮ್ನಾ ಶಿಖರಿಣೀ ಕುರ್ಯಾದ್ರುಚಿಂ ಸಕಲವಲ್ಲಭಾಮ್ ||

**ಶಿಖರಿಣೀ ಎಂಬ ಯೋಗದ ಉಪಯೋಗ**

(ಭಾ. ಪ್ರ. 382)

ಚನ್ನಾಗಿ ಕಾಯಿಸಿ ಬತ್ತಿಸಿದ ಹಾಲು, ಗಟ್ಟಿಯಾದ ಎಮ್ಮೆ ಮೊಸರು, ಸಮಪಾಲು ಶುಭ್ರವಾದ ಸಕ್ಕರೆ, ಇವುಗಳನ್ನು ಒಟ್ಟಾಗಿ ಬೆರಸಿ, ಮಡಿಯಾದ ವಸ್ತ್ರದ ಮೇಲೆ ಹಾಕಿಕೊಂಡು ತಿಕ್ಕಿ ಶೋದಿಸಿ, ಆ ದ್ರವಕ್ಕೆ ಏಲಕ್ಕಿ, ಲವಂಗ, ಪಚ್ಚಕರ್ಪೂರ ಮತ್ತು ಕಾಳುಮೆಣಸು, ಇವುಗಳ ಚೂರ್ಣವನ್ನು ಕೂಡಿಸಿ ಮಾಡಿದ ಶಿಖರಿಣೀ ಎಂಬದು (ಮಜ್ಜಿಗೆಯು) ಸಕಲರಿಗೂ ಪ್ರಿಯವಾದ ರುಚಿಯನ್ನುಂಟುಮಾಡುವದು.

ಷರಾ ಶಿಖರಿಣೀ ಅಥವಾ ರಸಾಲವನ್ನು ತಯಾರಿಸುವ ಕ್ರಮವನ್ನು ಇನ್ನೊಂದು ಕಡೆಯಲ್ಲಿ ಭಾವಪ್ರಕಾಶವೇ ಹೀಗೆ ವರ್ಣಿಸಿರುತ್ತದೆ —

ನೀರಿಲ್ಲದ ಹುಳಿ ಎಮ್ಮೆ ಮೊಸರು ೧ ಆಢಕ, ಶುಭ್ರವಾದ ಸಕ್ಕರೆ ೨ ಪ್ರಸ್ಥ, ಇವುಗಳನ್ನು ಬೆರಸಿ ಶುಚಿಯಾದ ವಸ್ತ್ರದ ಮೇಲೆ ಸ್ವಲ್ಪಸ್ವಲ್ಪವಾಗಿ ಹಾಕಿ ೨ ಆಢಕ ಹಾಲನ್ನು ಕೂಡಿಸಿಕೊಂಡು ತಿಕ್ಕಿ ಹೊಸತಾದ ಮಣ್ಣಿನ ಗಡಿಗೆಯೊಳಗೆ ಶೋಧಿಸಿ ಇಳಿಸಬೇಕು, ಆ ಮೇಲೆ ಅದಕ್ಕೆ ಏಲಕ್ಕಿ ಕಾಳು, ಲವಂಗ, ಪಚ್ಚಕರ್ಪೂರ ಮತ್ತು ಕಾಳುಮೆಣಸು, ಇವುಗಳನ್ನು (ಚೂರ್ಣಿಸಿ) ಬೆರಿಸಬೇಕು (ಪು 167) ಬರೇ ಮೊಸರನ್ನು (ಹಾಲು ಕೂಡಿಸದೆ) ಸಕ್ಕರೆ, ಜೇನು, ತುಪ್ಪ, ಕಾಳುಮೆಣಸು ಮತ್ತು ಏಲಕ್ಕಿ ಕೂಡಿಸಿಕೊಂಡು ಕಡೆದ ಮಜ್ಜಿಗೆ, ಪರಿಮಳಕ್ಕೆ ತಕ್ಕ ಪಚ್ಚಕರ್ಪೂರವನ್ನು ಮಿಶ್ರಮಾಡಿದ್ದು ರಸಾಲಾ ಅಥವಾ ಶಿಖರಾ ಎಂತ ಮ ನಿ (ಪು 125) ೩೨ ಪಲ ಮೊಸರು, ೮ ಪಲ ಸಕ್ಕರೆ, ಕಾಳುಮೆಣಸು ಅರ್ಧ ಪಲವಾದರೆ (ಅಂದರೆ ಅವನ್ನು ರುಚಿಗೆ ತಕ್ಕಷ್ಟು ಹೆಚ್ಚು ಕಡಿಮೆ ಮಾಡಬಹುದು), ಅದಕ್ಕೆ ಸಮಪಾಲು ಲವಂಗಪಟ್ಟೆ

ಮತ್ತು ಏಲಕ್ಕಿ (ಎರಡೂ ಕೂಡಿ), ಜೇನು ಮತ್ತು ತುಪ್ಪ ಆದರ ಅರ್ಧ, ಇವುಗಳನ್ನೆಲ್ಲ ಬೆರಸಿ ಬೆಳ್ಳಗಿನ ವಸ್ತ್ರದಲ್ಲಿ ಶೋಧಿಸಿ, ಕರ್ಪೂರದ ಪರಿಮಳವುಳ್ಳ ಮಡಿಕೆಯೊಳಗೆ ಹಾಕಿ ನೆಳಲಲ್ಲಿ ಇಟ್ಟುಕೊಂಡದ್ದು ತಿಖರಿಣೀ ಎಂತ ಧ ನಿ (ಪು 302.)

27. ಯವಾನೀತಿನ್ತಿಡೀಕಾಮ್ಲವೇತಸೌಷಧದಾಡಿಮಮ್ ।
ಕೃತ್ವಾ ಕೋಲಂ ಚ ಕರ್ಷಾಂಶಂ ಸಿತಾಯಾಶ್ಚ ಚತುಷ್ಪಲಮ್ ॥
ಧಾನ್ಯಸೌವರ್ಚಲಾಜಾಜೀವರಾಂಗಂ ಚಾರ್ಧಕಾರ್ಷಿಕಮ್ ।
ಪಿಪ್ಪಲೀನಾಂ ಶತಂ ಚೈಕಂ ದ್ವೇ ಶತೇ ಮರಿಚಸ್ಯ ಚ ॥
ಚೂರ್ಣಮೇತತ್ ಪರಂ ರುಚ್ಯಂ ಗ್ರಾಹಿ ಹೃದ್ಯಂ ಹಿನಸ್ತಿ ಚ ।
ವಿಬನ್ಧಕಾಸಹೃತ್ಪಾರ್ಶ್ವಪ್ಲೀಹಾರ್ಶೋಗ್ರಹಣೀಗದಾನ್ ॥ (ವಾ. 288)

ಯವಾನೀಖಾಣ್ಡವ ಚೂರ್ಣ

ಓಮ, ಹುಣಸೆ ಹುಳಿ, ಅಮ್ಲವೇತಸ, ಶುಂಠಿ, (ಹುಳಿ) ದಾಳಿಂಬದ ಬೀಜ, ಬೊಗರೀ ಹಣ್ಣು, ಇವುಗಳನ್ನು ಒಂದೊಂದು ಕರ್ಷ ಪ್ರಕಾರ, ಸಕ್ಕರೆ ೪ ಪಲ, ಕೊತ್ತುಂಬರಿ, ಸೌವರ್ಚಲ (ಕರಿ) ಉಪ್ಪು, ಜೀರಿಗೆ, ಲವಂಗಪಟ್ಟೆ, ಇವುಗಳನ್ನು ಅರ್ಧ ಕರ್ಷ ಪ್ರಕಾರ, (ಸಣ್ಣ) ಹಿಪ್ಪಲಿ ೧೦೦, ಮೆಣಸಿನಕಾಳು ೨೦೦, ತೆಗೆದುಕೊಂಡು ಮಾಡಿದ ಚೂರ್ಣವು ಉತ್ತಮವಾದ ರುಚಿಕರ, ಗ್ರಾಹಿ, ಮನಸ್ಸಿಗೆ ಒಪ್ಪುವಂಥಾದ್ದು, ಮತ್ತು ಮಲಬದ್ಧತೆ, ಕೆಮ್ಮು, ಎದೆನೋವು, ಪಕ್ಕಗಳ ಶೂಲೆ. ಪ್ಲೀಹರೋಗ, ಮೂಲವ್ಯಾಧಿ. ಗ್ರಹಣೀ, ಈ ರೋಗಗಳನ್ನು ಕೊಲ್ಲುತ್ತದೆ.

ಷರಾ ಈ ಚೂರ್ಣದ ಯೋಗವು 'ಯವಾನೀಖಾಣ್ಡವ' ಎಂಬ ಹೆಸರಿನಿಂದ ಶಾರ್ಙ್ಗಧರ ಸಂಹಿತಾದಿ ಬೇರೆ ಗ್ರಂಥಗಳಲ್ಲಿ ಬೇರೆ ಶ್ಲೋಕರೂಪವಾಗಿ ಕೊಡಲ್ಪಟ್ಟಿದೆ ಅಲ್ಲಿ ಹಿಪ್ಪಲಿ ೧೦ ಶಾಣ, (ಅಂದರೆ ೨|| ಕರ್ಷ) ಮತ್ತು ಕಾಳುಮೆಣಸು ೨|| ಶಾಣ, ಎಂತ ಹೇಳಲ್ಪಟ್ಟಿದೆ ಮತ್ತು ಆ ಚೂರ್ಣವು ಪಾಂಡುರೋಗ, ಜ್ವರ, ವಾಂತಿ, ಶೋಷ, ಅತಿಸಾರ, ಆನಾಹ, ಮಂದಾಗ್ನಿ ಮತ್ತು ನಾಲಿಗೆಗೆ ಮತ್ತು ಗಂಟಲಿಗೆ ಸಂಬಂಧಪಟ್ಟ ರೋಗಗಳು, ಇವುಗಳನ್ನು ಸಹ ಜಯಿಸುವದೆಂತ ಫಲಶ್ರುತಿಯಲ್ಲಿ ಕಾಣುತ್ತದೆ

28. ಚಿತ್ತವಿಪರ್ಯಯಜ ಅರುಚಿಯಲ್ಲದೆ ಇತರ ಅರುಚಿಗಳಲ್ಲಿ ಬಿಲ್ವಾದಿ ಲೇಹವು (ಮುಂದೆ 'ವಾಂತಿ' ಪ್ರಕರಣದಲ್ಲಿ—ಅ XV—ವಿವರಿಸಲ್ಪಡುವದು) ಸಾಧಾರಣವಾಗಿ ಬಹಳ ಫಲಕಾರಿಯಾಗುತ್ತದೆ. ವಾತಪಿತ್ತಗಳ ದೋಷಗಳು ಹೆಚ್ಚು ಇರುವಲ್ಲಿ ಅನುಪಾನವಾಗಿ ಹಾಲನ್ನು ಕುಡಿಯಲಿಕ್ಕೆ ಕೊಡಬೇಕು. ಹಿಂದೆ IXನೇ ಅಧ್ಯಾಯದ 37ನೇ ಸಂಖ್ಯೆಯಲ್ಲಿ ವರ್ಣಿತವಾದ 'ಆನಂದಭೈರವಿ' ಮಾತ್ರೆಯನ್ನು ಶುಂಠಿ ರಸದಲ್ಲಿ, ಅಥವಾ ಜೀರಿಗೆಯ ಕಷಾಯದಲ್ಲಿ, ಸಕ್ಕರೆ-ಜೇನುಗಳನ್ನು ದೋಷವಿಚಾರದ ಮೇಲೆ ಬೇಕಾದಷ್ಟು ಪ್ರಕ್ಷೇಪವಾಗಿ ಕೂಡಿಸಿಕೊಂಡು ಕೊಡುವದರಿಂದ, ಆಮಾಶಯದ ಕೆಲಸವು ಕ್ರಮಪಟ್ಟು ರುಚಿಯುಂಟಾಗುತ್ತದೆ. ಈ ಮಾತ್ರೆಯನ್ನು ಅನ್ಯರೋಗಲಕ್ಷಣವಾದ ಅರುಚಿಗಳಲ್ಲಿಯೂ ಪ್ರಾಯಶಃ ಸಾರ್ಥಕವಾಗಿ ಉಪಯೋಗಿಸಬಹುದು.

ದೃಷ್ಟಫಲ ಚಿಕಿತ್ಸೆ

29 ಆನೆಮುಂಗು, ಇಟ್ಟೇವು (ಸ್ಥೌಣೇಯಕ), ಉತ್ತರಣೆ, (ಬಿಳೇ) ಎಕ್ಕೆ ಹೂವು, ಏಲಕ್ಕಿ, ಒಣ ಅಡಿಕೆ, ಓಮ, ಕಕ್ಕೆ, ಕರಂಡೆಹುಳಿ (ಕವಳಿಕಾಯಿ), ಕರಿಜೀರಿಗೆ, ಕರ್ಕಟಶೃಂಗಿ, ಕಹಿದರಸಿ (ಝುರಸೀ), ಕಹಿಬೇವು, ಕಾಚು, ಕಾಡುಮೆಣಸಿನ ಬೇರು, ಕಾಳುಮೆಣಸು, ಕಿರಿ ಕರಂಡೆ (ಮುಣ್ಡೀ), ಕಿರು

ಪೃಥಗ್ರೋಗೋಕ್ತ ಔಷಧಗಳು

ಶಿವನಿ (ಕಟ್ಫಲ), ಖುರಾಸಾನಿ ಓಮ, ಕೊತ್ತುಂಬರಿ, ಕೋಲಾಂಜನ, ಗಂಧ (ಬಾಲ)ಮೆಣಸು, ಗುಳ್ಳ, ಚಂಗಲಕೋಷ್ಟ, ಜೀರಿಗೆ, ಜ್ಯೇಷ್ಠಮಧು, ತಾಳೀಸಪತ್ರೆ, ದಾಲ್ಚೀನಿ ಎಲೆ, ದಾಳಿಂಬ, ದೊಡ್ಡ ಕಂಗೊಂದಿ (ತೇಜಸ್ವಿನೀ—ಮಲ. ಚರುಪುನ್ನರಿ), ನೆಕ್ಕಿ, ನೇರಳು, ಪದ್ಮಕ, ಪಾದರಿ, ಪುಷ್ಕರಮೂಲ, ಪುಳಿಯಾರ್ಲ (ಪುಲ್ಲಂಪುರುಚೆ), ಬಾವುಂಜಿ (ಮಲ. ಕಾಕೋರ್ಲರಿ), ಬೆಳ್ಳುಳ್ಳಿ, ಭದ್ರಮುಷ್ಟಿ, ಮರುಗ, ಮಲ್ಲಿಗೆ, ಮಾದಳ, ಮಾವಿನ ಹೂವು, ಮುಡಿವಾಳ, ಲವಂಗ, ಲವಂಗಪಟ್ಟೆ, ಲಿಂಬೆಹಣ್ಣು, ಶುಂಠಿ, ಸಕ್ಕರೆ, ಸಿಹಿ ಲಿಂಬೆಹಣ್ಣು, ಸುಗಂಧಿ ಬೇರು, ಸೂರ್ಯಾವರ್ತ (ಸೂರ್ಯಕಾನ್ತಿ?), ಸೇಪು ಹಣ್ಣು, ಸೈಂಧವಲವಣ, ಹಸಿ ಶುಂಠಿ, ಹಿಂಗು ಪತ್ರೀ, ಹಿಪ್ಪಲಿ, ಹಿಪ್ಪಲಿಮೂಲ ಮತ್ತು ಹೊಮ್ಮುಗಳು (ಜಲಪಿಪ್ಪಲೀ).

30. ಪಥ್ಯವರ್ಗ ಗೋದಿ, ಹೆಸರು, ಕೆಂಪು ಅಕ್ಕಿಗಳು, ಅರುವತ್ತು ದಿನಗಳ ಬೆಳೆಕೆಯ ಅಕ್ಕಿಗಳು, ಕಾಡುಹಂದಿ-ಮೊಲ-ಆಡು-ಜಿಂಕೆಗಳ ಮಾಂಸಗಳು, ಕಾಶೀ (ಸಣ್ಣ) ಬೂದಿ ಕುಂಬಳಕಾಯಿ, ಬೆತ್ತದ ಚಿಗುರು, ಎಳೇ ಮೂಲಂಗಿ, ಬದನೆಕಾಯಿ, ನುಗ್ಗೆ ಕೋಡು, ಬಾಳೆ (ಹಣ್ಣು), ದಾಳಿಂಬ, ಪಡುವಲಕಾಯಿ, ಮಾದಳಹಣ್ಣು, ತುಪ್ಪ, ಹಾಲು, ಎಳೇ ತಾಳಿಸೀಯಾಳ, ಬೆಳ್ಳುಳ್ಳಿ, ಸೂರಣದ ಗಡ್ಡೆ, ದ್ರಾಕ್ಷೆಹಣ್ಣು, ಮಾವಿನಹಣ್ಣು (ರಸಾಲಂ), ಲಾವಂಚ ಕೂಡಿಸಿ ಕಾಯಿಸಿದ ನೀರು (ನಲದಾಮ್ಬು), ಹುಳಿಸಿದ ಗಂಜಿ, ಮದ್ಯ, ಮೊಸರು ಸಕ್ಕರೆಗಳಿಂದ ತಯಾರಿಸಲ್ಪಟ್ಟ ರಸಾಲಾ ಅಥವಾ ಶಿಖರಿಣೀ, ಮೊಸರು, ಮಜ್ಜಿಗೆ, ಹಸಿ ಶುಂಠಿ, ಗಂಧಮೆಣಸು, ಖರ್ಜೂರ, ಪಕ್ವವಾದ ಬೇಲದ ಹಣ್ಣು, ಬೊಗರಿ ಹಣ್ಣು, ತಾಳಿ ತಿರುಳಿನೊಳಗಿನ ಬೆಂಡು, ಪಚ್ಚೆಕರ್ಪೂರ, ಸಕ್ಕರೆ, ಓಮ, ಕಾಳುಮೆಣಸು, ಹಿಂಗು, ಸಿಹಿ-ಹುಳಿ-ಕಹಿ ರಸಗಳು, ಮೈ ಉಜ್ಜಿಸಿಕೊಳ್ಳುವದು ಮತ್ತು ವಿಚಿತ್ರವಾದ ಅನ್ನ ಪಾನಗಳು.

31. ಅಪಥ್ಯವರ್ಗ ಕೆಮ್ಮು-ತೇಗು-ಹಸಿವೆ-ನಿದ್ರೆ-ವಾಂತಿಗಳ ವೇಗಗಳನ್ನು ತಡೆಯುವದು, ಮನಸ್ಸಿಗೆ ಒಪ್ಪದ ಆಹಾರ, ರಕ್ತವಿಮೋಚನ, ಸಿಟ್ಟು, ಲೋಭ, ಭಯ, ಶೋಕ, ದುರ್ವಾಸನೆ ಮತ್ತು ಬಿಸಿಲಲ್ಲಿ ನಿಲ್ಲುವದು (ಸೂರ್ಯಸೇವೆ).

32. ಪ್ರಕರಣಾನ್ತ ಟಿಪ್ಪಣೀ ಅರುಚಿಯನ್ನು ಅಗ್ನಿಮಾಂದ್ಯ, ಜ್ವರ, ಅಮ್ಲಪಿತ್ತ ಮುಂತಾದ ರೋಗಗಳ ಒಂದು ಲಕ್ಷಣವನ್ನಾಗಿ ಅಲ್ಲದೆ ಪ್ರತ್ಯೇಕ ರೋಗವನ್ನಾಗಿ ವರ್ಣಿಸಿದ್ದು ಪಾಶ್ಚಾತ್ಯ ವೈದ್ಯಗ್ರಂಥಗಳಲ್ಲಿ ಕಾಣುವದಿಲ್ಲ. ಸಾಧಾರಣವಾಗಿ ರುಚಿಯ ಜ್ಞಾನವು ಉಂಟಾಗುವದು ನಾಲಿಗೆಯಿಂದ ಎಂತ ಹೇಳಿದಾಗ್ಯೂ, ಬಾಯಿ, ನಾಲಿಗೆ, ತಾಲು ಮತ್ತು ಮೂಗಿನಲ್ಲಿ ಅದಕ್ಕಾಗಿ ರಚಿತವಾಗಿರುವ ಕೆಲವು ಸೂಕ್ಷ್ಮವಾದ ಏರ್ಪಾಡುಗಳು, ಅವುಗಳಿಗೂ ಮಿದುಳಿಗೂ ಮಧ್ಯ ತಂತಿಸರಿಗೆಗಳಂತೆ ಇರುವ ಮಿದುಳಿನ 1ನೇ, 5ನೇ, 9ನೇ ಜತೆ ನರಗಳು, ಮಿದುಳು, ರಸನಬುದ್ಧಿ ಮತ್ತು ಮನಸ್ಸು, ಇವುಗಳ ವ್ಯಾಪಾರಗಳು ಕ್ರಮವಾಗಿ ನಡಿಯದೆ ನಮಗೆ ರುಚಿ ಎಂಬ ಇಂದ್ರಿಯಜ್ಞಾನವು ಉಂಟಾಗಲಾರದು ಎಂಬದು ಉಪೋದ್ಘಾತದ 3ನೇ ಪರಿಶಿಷ್ಟವನ್ನು, ವಿಶೇಷವಾಗಿ ಅದರ 17ನೇ, 21ನೇ ಮತ್ತು 22ನೇ ಸಂಖ್ಯೆಗಳನ್ನು, ಓದಿದ್ದಲ್ಲಿ ಗೊತ್ತಾಗುವದು.

# ಅಧ್ಯಾಯ XII.

## ದಾಹ (ಉರಿ, ಸುಡುತ, ಜ್ವಾಲೆ)

## Burning pain all over the body

1. ದಾಹಾಃ ಸಪ್ತ ಮತಾಸ್ತಥಾ |
ದಾಹದ ಸಪ್ತವಿಧ — ರಕ್ತಪಿತ್ತಾತ್ತಥಾ ರಕ್ತಾತ್ತೃಷ್ಣಾಯಾಃ ಪಿತ್ತತಸ್ತಥಾ ||
ಧಾತುಕ್ಷಯಾನ್ಮರ್ಮಘಾತಾದ್ರಕ್ತಪೂರ್ಣೋದರಾದಪಿ || (ಶಾ. 24)

1. ರಕ್ತಪಿತ್ತದಿಂದ (ಮದ್ಯಪಾನಜ), 2. ರಕ್ತದಿಂದ, 3 ಬಾಯಾರಿಕೆಯಿಂದ, 4. ಪಿತ್ತದಿಂದ, 5. ಧಾತುಕ್ಷಯದಿಂದ, 6. ಮರ್ಮಘಾತದಿಂದ (ಮರ್ಮಕ್ಕೆ ಪೆಟ್ಟು ಬೀಳುವದರಿಂದ), ಮತ್ತು 7. ರಕ್ತಪೂರ್ಣೋದರದಿಂದ (ಉದರದಲ್ಲಿ ರಕ್ತ ತುಂಬುವದರಿಂದ), ಹೀಗೆ ದಾಹಗಳು ಏಳು ಎಂತ ತಿಳಿದಿದ್ದಾರೆ.

ಷರಾ ಮಾಧವನಿದಾನಾದಿಗಳಲ್ಲಿ 1ನೇ ದಾಹವು 'ಮದ್ಯಪಾನಜ' ಎಂತ ಹೇಳಿ ಸುಶ್ರುತನು ಕೊಟ್ಟಿರುವ ಅದರ ಸಂಪ್ರಾಪ್ತಿಯೇ ಬರೆಯಲ್ಪಟ್ಟಿರುತ್ತದೆ 'ರಕ್ತಪಿತ್ತಜ'ವನ್ನು ಬೇರೆಯಾಗಿ ಆ ಗ್ರಂಥಕಾರರು ಹೇಳಿರುವದಿಲ್ಲ. ಕೆಳಗಿನ 2ನೇ ಸಂಖ್ಯಯಡಿ ಷರಾವನ್ನು ನೋಡಿ

2 ತ್ವಚಂ ಪ್ರಾಪ್ತಸ್ತು ಪಾನೋಷ್ಮಾ ಪಿತ್ತರಕ್ತಾಭಿಮೂರ್ಛಿತಃ |
ಮದ್ಯಪಾನಜ ದಾಹದ ಸಂಪ್ರಾಪ್ತಿ — ದಾಹಂ ಪ್ರಕುರುತೇ ಘೋರಂ ಪಿತ್ತವತ್ತತ್ರ ಭೇಷಜಮ್ ||
(ಸು. 837-8)

ಮದ್ಯಪಾನದಿಂದ ಉತ್ಪನ್ನವಾದ ಆವಿಯು, ಪಿತ್ತರಕ್ತದಿಂದ ವೃದ್ಧಿಗೊಂಡು, ಚರ್ಮಕ್ಕೆ ಹೋಗಿ ಕಠಿನವಾದ ಉರಿಯನ್ನುಂಟುಮಾಡುತ್ತದೆ. ಅದಕ್ಕೆ ಪಿತ್ತದಂತೆ ಚಿಕಿತ್ಸೆಮಾಡತಕ್ಕದ್ದು.

ಷರಾ ಈ ದಾಹಕ್ಕೆ ರಕ್ತದಲ್ಲಿಯ ಪಿತ್ತ ಕೆದರುವದು ಸನ್ನಿಕೃಷ್ಟ ನಿದಾನವಾದ್ದರಿಂದ, ತಾನು ಅದನ್ನು ರಕ್ತಪಿತ್ತಜ ಎಂತ ಹೇಳಿದ್ದಾಗಿರಬೇಕು ಪಿತ್ತದ ಸ್ವಾಭಾವಿಕ ಗುಣಗಳಲ್ಲಿ ಉರಿಯು ಒಂದಾದ್ದರಿಂದ, ಪಿತ್ತ ವಿನಾ ಉರಿಯುಂಟಾಗಲಾರದಾದ್ದರಿಂದ ಮತ್ತು ಪಿತ್ತಜ, ರಕ್ತಜ ಉರಿಗಳು ಪ್ರತ್ಯೇಕವಾಗಿ ಗಣನಮಾಡಲ್ಪಟ್ಟಿರುವದರಿಂದ, ಈ ದಾಹವನ್ನು, ಧಾತುಕ್ಷಯಜ ಮೊದಲಾದವುಗಳಂತೆ, ವಿಪ್ರಕೃಷ್ಟ ನಿದಾನದ ಮೇಲೆ ಮದ್ಯಪಾನಜ ಎಂತ ತಿಳಿಯುವದೇ ಸರಿಯಾದ್ದೆಂತ ಇತರರು ತಿಳಿದಿರಬಹುದು 9ನೇ ಸಂಖ್ಯೆಯಡಿಯ ಷರಾ ನೋಡಿ

3. ಕೃತ್ಸ್ನದೇಹಾನುಗಂ ರಕ್ತಮುದ್ರಿಕ್ತಂ ದಹತಿ ಧ್ರುವಮ್ |
ರಕ್ತಜ ದಾಹದ ನಿದಾನ — ಸ ಉಷ್ಯತೇ ತೃಷ್ಯತೇ ಚ ತಾಮ್ರಾಭಸ್ತಾಮ್ರಲೋಚನಃ ||
ಲೋಹಗನ್ಧಾಂಗವದನೋ ವಹ್ನಿನೇವಾವಕೀರ್ಯ್ಯತೇ ||
(ಮಾ. ನಿ. 120)

ಇಡೀ ದೇಹವನ್ನು ಅನುಸರಿಸಿಕೊಂಡಿರುವ ರಕ್ತವು ಕೆದರಿದಾಗ ಸರ್ವಾಂಗ ಸುಡುತ ಉಂಟಾಗುತ್ತದೆ; ಅವನಿಗೆ ಸೆಕೆ ಮತ್ತು ಬಾಯಾರಿಕೆ ಉಂಟಾಗುತ್ತವೆ; ಅವನು ತಾಮ್ರದ ಹಾಗೆ ಕೆಂಪಾಗುತ್ತಾನೆ; ಅವನ ಕಣ್ಣುಗಳು ತಾಮ್ರವರ್ಣವಾಗುತ್ತವೆ; ಅವನ ದೇಹದಲ್ಲಿ ಮತ್ತು ಬಾಯಿಯಲ್ಲಿ ಲೋಹದ ವಾಸನೆಯುಂಟಾಗುತ್ತದೆ; ಮತ್ತು ಅವನಿಗೆ ಬೆಂಕಿಮಧ್ಯ ಇದ್ದ ಹಾಗಿನ ಪೀಡೆಯುಂಟಾಗುತ್ತದೆ.

4. ತೃಷ್ಣಾನಿರೋಧಾದಬ್ಧಾತೌ ಕ್ಷೀಣೇ ತೇಜಃ ಸಮುದ್ಧತಮ್ ।
ತೃಷ್ಣೋದ್ಭವ ದಾಹದ ನಿದಾನ. ಸ ಬಾಹ್ಯಾಭ್ಯನ್ತರಂ ದೇಹಂ ಪ್ರದಹೇನ್ಮನ್ದಚೇತಸಃ ||
ಸಂಶುಷ್ಕಗಲತಾಲ್ವೋಷ್ಠೋ ಜಿಹ್ವಾಂ ನಿಷ್ಕೃಷ್ಯ ವೇಪತೇ ||
(ಮಾ. ನಿ 120)

ಮಂದಬುದ್ಧಿಯಿಂದ ಬಾಯಾರಿಕೆಯನ್ನು ತಡೆದರೆ, ಶರೀರದಲ್ಲಿಯ ಜಲಧಾತು ಕಡಿಮೆಯಾಗಿ ತೇಜೋಧಾತು ವೃದ್ಧಿಗೊಳ್ಳುತ್ತದೆ; ಮತ್ತು ಅದು ಅವನ ದೇಹವನ್ನು ಹೊರಗೂ ಒಳಗೂ ಸುಟ್ಟುಬಿಡುತ್ತದೆ. ಅಂಥವನ ಗಂಟಲು, ತಾಲು ಮತ್ತು ತುಟಿಗಳು ಬಹಳವಾಗಿ ಒಣಗುತ್ತವೆ ಮತ್ತು ಅವನು ತನ್ನ ನಾಲಿಗೆಯನ್ನು ಹೊರಗೆ ಮಾಡಿಕೊಂಡು ನಡುಗುತ್ತಾನೆ.

ಚರಾ 'ತೃಷ್ಣಾಜ'ವನ್ನು 'ಪಿತ್ತಜ'ದೊಂದಿಗೆ ಸೇರಿಸಿ, 'ಕ್ಷತಜ' ಎಂಬದನ್ನು ಬೇರೆಯಾಗಿ ಚಿ ಸಾ ಸಂ (ಪು 299) ದಲ್ಲಿ ಗಣನಮಾಡಿದ್ದು ಕಾಣುತ್ತದೆ.

5. ಪಿತ್ತಜ್ವರಸಮಃ ಪಿತ್ತಾತ್ಸ ಚಾಪ್ಯಸ್ಯ ವಿಧಿಃ ಸ್ಮೃತಃ || (ಮಾ. ನಿ 120)
ಪಿತ್ತಜ ದಾಹದ ನಿದಾನಾದಿ. ಪಿತ್ತದಿಂದುಂಟಾದ ದಾಹವು ಪಿತ್ತಜ್ವರಕ್ಕೆ ಸಮಾನವಾದ್ದು. ಅದರ ವಿಧಿಯನ್ನೇ ಇದರಲ್ಲಿಯೂ ಅನುಸರಿಸಬೇಕೆಂತ ತಿಳಿದಿದ್ದಾರೆ.

6. ಧಾತುಕ್ಷಯೋತ್ಥೋ ಯೋ ದಾಹಸ್ತೇನ ಮೂರ್ಛಾತೃಡರ್ದಿತಃ ।
ಕ್ಷಾಮಸ್ವರಃ ಕ್ರಿಯಾಹೀನಃ ಸ ಸೀದೇದ್ಭೃಶಪೀಡಿತಃ (ಮಾ. ನಿ. 120)
ಧಾತುಕ್ಷಯಜ ದಾಹದ ಲಕ್ಷಣ ಧಾತುಕ್ಷಯಜ ಎಂತ ಹೇಳಲ್ಪಟ್ಟ ದಾಹದಲ್ಲಿ ಮೂರ್ಛೆ ಮತ್ತು ತೃಷೆಯ ಪೀಡೆಯುಂಟಾಗುತ್ತವೆ, ಸ್ವರ ಕುಂದುತ್ತದೆ; ಮತ್ತು ತಕ್ಕ ಚಿಕಿತ್ಸೆ ಮಾಡದಿದ್ದರೆ, ರೋಗಿಯು ಬಹಳವಾಗಿ ಪೀಡಿಸಲ್ಪಟ್ಟು ಸಾಯುವನು.

7. ಮರ್ಮಾಘಾತಜೋಽಪ್ಯಸ್ತಿ ಸೋಽಸಾಧ್ಯಃ ಸಪ್ತಮೋ ಮತಃ ||
(ಮಾ. ನಿ. 120)
ಮರ್ಮಾಘಾತಜ ದಾಹ (ಶಿರಸ್ಸು, ಹೃದಯ, ವಸ್ತಿ ಮುಂತಾದ) ಮರ್ಮಸ್ಥಾನಗಳಿಗೆ ಪೆಟ್ಟು ಬೀಳುವದರಿಂದಲೂ ದಾಹ ಉಂಟಾಗುತ್ತದೆ. ಏಳನೇ (ಶಾ. ನ ಪ್ರಕಾರ ಒನೇ) ದಾದ ಆ ದಾಹವು ಅಸಾಧ್ಯ.

8. ಅಸೃಜಃ ಪೂರ್ಣಕೋಷ್ಠಸ್ಯ ದಾಹೋಽನ್ಯಃ ಸ್ಯಾತ್ಸುದುಸ್ತರಃ ||
(ಮಾ. ನಿ. 120)
ರಕ್ತಪೂರ್ಣೋದರಜ ದಾಹ (ಶಸ್ತ್ರಪ್ರಹಾರಾದಿ ಕಾರಣಗಳಿಂದ) ರಕ್ತವು ಕೋಷ್ಠದೊಳಗೆ (ಸ್ಥಾನಾಂತರಗಳಲ್ಲಿ) ತುಂಬುವದರಿಂದ ಉಂಟಾಗುವ ದಾಹವು ಇನ್ನೊಂದು, ಅದು ಬಹಳ ಕಷ್ಟಸಾಧ್ಯವಾದದ್ದು.

9. ಸಮಾನಃ ಸಂಕ್ರುದ್ಧೋ ರುಧಿರಮಪಿ ಪಿತ್ತಂ ತ್ವಚಿ ಗತಃ[1] ।
ದಾಹದ ಸಾಮಾನ್ಯ ಸಂಪ್ರಾಪ್ತಿ, ಲಕ್ಷಣ ಮತ್ತು ಚಿಕಿತ್ಸಾ ವಿಧಾನ. ನರಸ್ಯಾಂಗೇ ದಾಹಂ ಜನಯತಿ ಸದಾ[2] ಘೋರಮಪಿ ಚ ||
ಕ್ವಚಿದ್ದನ್ತೋದ್ಘರ್ಷೋ ಭವತಿ ಮನುಜೇ[3] ದಾಹಜನಿತೋ ।
ಭವೇತ್ ಶೀತಸ್ಯಾರ್ತಿಃ ಶ್ವಸನಮಪಿ ವಾ ಶೋಷಮರತಿಃ ||

[1] 'ಗತೇ', [2] 'ಭವತಿ ನಿತರಾಂ', [3] 'ಮನುಜಾಂ', ಎಂತ ಮೂಲದಲ್ಲಿ ಉಂಟು.

ಪಿತ್ತಜ್ವರಸಮಾನಾನಿ ಲಕ್ಷಣಾನಿ ಭಿಷಗ್ವರ! |
ಪಿತ್ತಜ್ವರವದಾರಭ್ಯಾ ಕ್ರಿಯಾ ದೋಷೋಪಶಾನ್ತಯೇ || (ಹಾ. 215)

ಸಮಾನವಾಯು ಬಹಳವಾಗಿ ಕೋಪಗೊಂಡು ಚರ್ಮದಲ್ಲಿಯ ರಕ್ತವನ್ನೂ ಪಿತ್ತವನ್ನೂ ಕೂಡಿಕೊಂಡಲ್ಲಿ, ಮನುಷ್ಯನ ಅಂಗದಲ್ಲಿ (ಶರೀರದಲ್ಲಿ) ನಿರಂತರವಾದ ಮತ್ತು ಕಠಿಣವಾದ ಉರಿಯು ಉಂಟಾಗುತ್ತದೆ. ಆ ದಾಹದಿಂದ ಕೆಲವರಲ್ಲಿ ಹಲ್ಲುಕಡಿಯುವಿಕೆ, ಕೆಲವರಲ್ಲಿ ಶೀತದ ಪೀಡೆ ಮತ್ತು ಕೆಲವರಲ್ಲಿ ಉಬ್ಬಸ ಅಥವಾ ಶೋಷ ಮತ್ತು ನಿರುಲ್ಲಾಸ ಉಂಟಾಗುತ್ತವೆ. ದಾಹದ ಲಕ್ಷಣಗಳು ಪಿತ್ತಜ್ವರದ ಲಕ್ಷಣಗಳಿಗೆ ಸಮಾನ ಮತ್ತು ಪಿತ್ತಜ್ವರಕ್ಕೆ ಹೇಳಿದಂತೆ ಅದರ ದೋಷಶಾಂತಿಗಾಗಿ ಪ್ರತಿಕ್ರಿಯೆಯನ್ನು ಆರಂಭಿಸತಕ್ಕದ್ದು.

ಷರಾ ಮುದ್ರಿತವಾದ ಹಾರೀತ ಸಂಹಿತೆಯ ಪ್ರತಿಯಲ್ಲಿ ತಿದ್ದಿಕೊಳ್ಳಲಿಕ್ಕೆ ಕಷ್ಟವಾದ ವ್ಯಾಕರಣಾಶುದ್ಧತೆಗಳು ಅಲ್ಲಲ್ಲಿ ಬಹಳವಾಗಿ ಕಾಣುತ್ತವೆ ಸಮರ್ಪಕವಾದ ಅರ್ಥ ಸ್ಪಷ್ಟವಾಗಿರುವಲ್ಲಿ ಆ ದೋಷಕ್ಕೆ ಲಕ್ಷ್ಯವಿಡದೆ, ಅದರಲ್ಲಿಯ ವಚನಗಳನ್ನು ಈ ಗ್ರಂಥದಲ್ಲಿ ಅಗತ್ಯ ಕಂಡಮಟ್ಟಿಗೆ ಎತ್ತಿಕೊಂಡದೆ

ಮೇಲೆ 2ನೇ ಸಂಖ್ಯೆಯಲ್ಲಿ ಎತ್ತಿಕೊಂಡ ಸುಶ್ರುತನ ವಚನದಲ್ಲಿರುವ 'ತು ಪಾನೋಷ್ಮಾ' ಎಂಬದರ ಬದಲಾಗಿ 'ಸಮಾನೋಷ್ಮಾ' ಎಂತ ಪಾಠಾಂತರವಿರುವದು ಕಾಣುತ್ತದೆ ಆಗ್ಗೆ ಆ ವಚನವು ಮದ್ಯಪಾನದ ದಾಹವನ್ನು ಕುರಿತು ಉಕ್ತವಾದ್ದಾದಾಗ್ಯೂ, ಅದು ಸಾಧಾರಣವಾಗಿ ಚರ್ಮದಲ್ಲಿ ಉರಿ ಉಂಟಾಗುವ ಕ್ರಮವನ್ನು ವರ್ಣಿಸಿದ ಹಾಗೆ ಆಗುತ್ತದೆ ಆ ವಕ್ಯವನ್ನು ಹಿಡಕೊಂಡು ಹಾರೀತನು ಈ ಸಂಖ್ಯೆಯಲ್ಲಿಯ 1ನೇ ಶ್ಲೋಕವನ್ನು ಬರೆದದ್ದಾಗಿ ಕಾಣುತ್ತದೆ ಆದರೆ ಉರಿಯು ಚರ್ಮದಲ್ಲಿ ಮಾತ್ರವಲ್ಲದೆ ಇತರ ಅಂಗವಿಭಾಗಗಳಲ್ಲಿ, ಕೆಲ ವೇಳೆ ದೇಹದೊಳಗೆ ಉಂಟಾಗುವದುಂಟು ಚರಕನು ಬೇರೆಬೇರೆಯಾಗಿ ಹೆಸರು ಕಾಣಿಸಿದ 40 ಪಿತ್ತವಿಕಾರಗಳಲ್ಲಿ ವಿದಾಹ, ಅಂತರ್ದಾಹ, ಅಂಸದಾಹ, ತ್ವಗ್ದಾಹ ಮತ್ತು ಮಾಂಸದಾಹಗಳಲ್ಲದೆ ದಾಹವನ್ನು ಪ್ರತ್ಯೇಕವಾಗಿ ಸೇರಿಸಿರುತ್ತಾನೆ ಪಿತ್ತದ ಆತ್ಮರೂಪಗಳಲ್ಲಿ ಬಂದು ಉಷ್ಣತೆ ಮತ್ತು ಪಿತ್ತವು ಶರೀರಾವಯವವನ್ನು ಹೊಕ್ಕು ಮಾಡುವ ಕರ್ಮಗಳಲ್ಲಿ ಒಂದು ದಾಹ ಎಂತ ಹೇಳಿರುವದರಿಂದ, ಪಿತ್ತಪ್ರಕೋಪ ಕಾರಣಗಳೇ ದಾಹಕ್ಕೂ ಕಾರಣ ಎಂತಲೂ ಪಿತ್ತಶಾಂತಿಗೆ ಹೇಳಲ್ಪಟ್ಟ ಉಪಚಾರಗಳಿಂದ ದಾಹವೂ ಶಮನವಾಗುವದೆಂತಲೂ ಸ್ಪಷ್ಟವಾಗುವದರಿಂದ, ಮತ್ತು ಪಿತ್ತಜ್ವರ, ರಕ್ತಪಿತ್ತ, ಆಮ್ಲಪಿತ್ತ, ಮದಾತ್ಯಯ ಮುಂತಾದ ರೋಗಗಳಲ್ಲಿ ಕಾಣಬಹುದಾದ ದಾಹಕ್ಕೆ ಆಯಾ ಪ್ರಕರಣದಲ್ಲಿ ತಕ್ಕ ಪ್ರತೀಕಾರ ಹೇಳಲ್ಪಟ್ಟಿರುವದರಿಂದ, ದಾಹವನ್ನು ಪ್ರತ್ಯೇಕವಾಗಿ ನಿದಾನಾದಿ ಕ್ರಮದಿಂದ ವರ್ಣಿಸುವದು ಅಗತ್ಯವಲ್ಲ ಎಂತ ಎಣಿಸಿ ಚರಕನು ಹಾಗೆ ಮಾಡದೆ ಬಿಟ್ಟದ್ದಾಗಿರಬೇಕು ಸುಶ್ರುತ ಮತ್ತು ವಾಗ್ಭಟ ಸಹ ದಾಹವನ್ನು ಪ್ರತ್ಯೇಕ ರೋಗವನ್ನಾಗಿ ವ್ಯಾಖ್ಯಾನಿಸಿರುವದಿಲ್ಲ ಆದರೆ ತಕ್ಕ ಪರಿಹಾರವನ್ನು ನಿಶ್ಚಯಿಸುವಲ್ಲಿ ನಿದಾನಕ್ಕೂ ಲಕ್ಷ್ಯ ಇಡುವದು ಅಗತ್ಯವಾದ್ದರಿಂದ, ಚಿಕಿತ್ಸಕರ ಸೌಕರ್ಯಕ್ಕಾಗಿ ದಾಹವನ್ನು ಹೇತು ಭೇದದ ಮೇಲೆ ವಿಂಗಡಿಸಿ, ಚಿಕಿತ್ಸೆ ಬರೆಯುವದು ಉಪಯುಕ್ತ ಎಂತ ಆಲೋಚಿಸಿ, ಮಾಧವಕರಾದಿಗಳು ಈ ಪ್ರಕರಣವನ್ನು ಬರೆಯಲು ತೊಡಗಿದರೆಂತ ಊಹಿಸಬಹುದು

ರೋಗಿಯು 'ಉರಿಯನ್ನು ತಡೆಯಲಾರೆ' ಎಂತ ಬೊಬ್ಬಿಡುವ ಕಾಲದಲ್ಲಿ ಅವನ ಮೈಯು ಮುಟ್ಟುವಿಕೆಗೆ ಹೆಚ್ಚುತಣ್ಣಗಾಗಿರುವದುಂಟು ಅದನ್ನೇ 'ಶೀತಪೀಡೆ' ಎಂತ ಹಾರೀತನು ದಾಹದ ಲಕ್ಷಣಗಳೊಳಗೆ ಒಂದನ್ನಾಗಿ ಹೇಳಿದ್ದಾಗಿರಬೇಕು

ಬೆಂಕಿಯ ಶಕ್ತಿಯಿಂದ ಚಲಿಸತಕ್ಕ ಯಂತ್ರದಲ್ಲಿ ಬಿಸಿಯನ್ನು ತಕ್ಕ ಪ್ರಮಾಣದಲ್ಲಿರಿಸುವದಕ್ಕೆ ನೀರು ಹೇಗೆ ಅಗತ್ಯವೋ, ಹಾಗೆ ನಮ್ಮ ಶರೀರದ ಬಿಸಿಯನ್ನು ಮಿತವಾಗಿ ಕಾಪಾಡುವದಕ್ಕೆ ಜಲಧಾತು ಅಗತ್ಯ ಅದು ಕಡಿಮೆಯಾದಾಗ್ಗೆ, ಅದನ್ನು ಸೂಚಿಸುವದಕ್ಕಾಗಿ ನಮ್ಮಲ್ಲಿ ಬಾಯಾರಿಕೆಯುಂಟಾಗುತ್ತದೆ ಆ ಸೂಚನೆಯನ್ನು ಗಮನಿಸದೆ ಬಿಟ್ಟರೆ, ಉರಿಜ್ವಾಲೆಗಳು ಉಂಟಾಗುತ್ತವೆ. ಅದು ತೃಷ್ಣಾನಿರೋಧಜ ದಾಹ

10 ಸರ್ವ ಏವ ವಿವರ್ಜ್ಯಾಸ್ತು ಶೀತಗಾತ್ರೇಷು ದೇಹಿನಃ ||
(ಚಿ. ಸಾ. ಸಂ. 299)

ಅಸಾಧ್ಯ ಲಕ್ಷಣ

ರೋಗಿಯ ಶರೀರವು ಶೀತವಾಗಿ ಕಂಡರೆ, ಅವನ ದಾಹವು ಯಾವ ವಿಧದ್ದಾದರೂ ಅದನ್ನು ಚಿಕಿತ್ಸೆಮಾಡದೆ ಬಿಡತಕ್ಕದ್ದು. (ಅದು ಅಸಾಧ್ಯ.)

ಷರಾ ಹಿಂದಿನ 7ನೇ 8ನೇ ಸಂಖ್ಯೆಗಳನ್ನು ನೋಡಿ.

11. ಕುಶಕಾಶೇಕ್ಷುಮೂಲಾನಾಂ ಮುಶೀರಂ ಘನವಾಲು(ಲ)ಕೌ |
ಕುಶಾದಿ ಕಷಾಯ ಕ್ವಾಥಃ ಶರ್ಕರಯಾಯುಕ್ತಃ ಶೀತದಾಹಂ ನಿಯಚ್ಛತಿ || (ಹಾ 215)

ದರ್ಭೆ, ಕಾಶದರ್ಭೆ ಮತ್ತು ಕಬ್ಬುಗಳ ಬೇರುಗಳು, ಲಾವಂಚ, ಭದ್ರಮುಷ್ಟಿ, ಮುಡಿವಾಳ, ಇವುಗಳ ಕಷಾಯವನ್ನು, ಸಕ್ಕರೆ ಕೂಡಿಸಿಕೊಂಡು, ಪಾನಮಾಡುವದರಿಂದ ಶೀತಯುಕ್ತವಾದ ಉರಿಯು ಅಡಗುತ್ತದೆ.

12. ಪರ್ಪಟಃ ಸಘನೋಶೀರಃ ಕ್ವಥಿತಃ ಶರ್ಕರಾನ್ವಿತಃ |
ಪರ್ಪಟಾದಿ ಕಷಾಯ. ಶೀತಪಾನಂ ನಿಹನ್ತ್ಯಾಶು ದಾಹ್ಯಂ ಪಿತ್ತಜ್ವರಂ ನೃಣಾಮ್ ||
(ಹಾ. 215)

ಪರ್ಪಾಟಕ, ಭದ್ರಮುಷ್ಟಿ, ಲಾವಂಚ, ಇವುಗಳ ಕಷಾಯವನ್ನು ತಣಿಸಿ, ಸಕ್ಕರೆ ಕೂಡಿಸಿ, ಪಾನಮಾಡಿದ್ದಲ್ಲಿ, ದಾಹವೂ ಪಿತ್ತಜ್ವರವೂ ಬೇಗನೆ ನಾಶವಾಗುತ್ತವೆ.

13. ಪಟೀರಪರ್ಪಟೋಶೀರನೀರನೀರದನೀರಜೈಃ |
ಚಂದನಾದಿ ಕಷಾಯ ಮೃಣಾಲಮಿಸಿಧಾನ್ಯಾಕಪದ್ಮಕಾಮಲಕೈಃ ಕೃತಃ ||
ಅರ್ಧಶಿಷ್ಟಃ ಸಿತಾಶೀತಃ ಪೀತಃ ಕ್ಷೌದ್ರಸಮನ್ವಿತಃ |
ಕ್ವಾಥೋ ವ್ಯಪೋಹಯೇದ್ದಾಹಂ ನೃಣಾಂ ಚ ಪರಮೋಲ್ಬಣಮ್ ||
(ಭಾ. ಪ್ರ. 398)

ಶ್ರೀಗಂಧ, ಪರ್ಪಾಟಕ, ಲಾವಂಚ, ಮುಡಿವಾಳ, ಭದ್ರಮುಷ್ಟಿ, ಕಮಲದ ದಂಟು, ಕಮಲದ ಹೂವು, ಸಬ್ಬಸಿಗೆ, ಕೊತ್ತುಂಬರಿ, ಪದ್ಮಕ, ನೆಲ್ಲಿಚಟ್ಟು, ಇವುಗಳಿಗೆ ನಾಲ್ಕುಪಾಲಷ್ಟು ನೀರಿಟ್ಟು, ಅರ್ಧಾಂಶ ಉಳಿಯುವಷ್ಟಕ್ಕೆ ಬತ್ತಿಸಿದ ಕಷಾಯದ ನೀರನ್ನು ತಣಿಸಿ, ಸಕ್ಕರೆ ಮತ್ತು ಜೇನು ಕೂಡಿಸಿಕೊಂಡು, ಪಾನಮಾಡುವದರಿಂದ, ಮನುಷ್ಯರ ಅತಿಯಾಗಿ ವೃದ್ಧಿಗೊಂಡ ದಾಹವು ಪರಿಹಾರವಾಗುವದು.

14. ಪಾಯಯೇತ್ಕಮಲಸ್ಯಾಮ್ಬುಃ ಶರ್ಕರಾಮ್ಬುಃ ಪಯೋಽಪಿ ಚ |
ಪಾನವಿಶೇಷಗಳು ಕ್ಷೀರಮಿಕ್ಷುರಸಂ ಚಾಪಿ ಕಾರಯೇತ್ಪಿತ್ತಜಿದ್ವಿಧಿಮ್ || (ಭಾ. ಪ್ರ. 398)

ಕುಡಿಯುವದಕ್ಕೆ ಕಮಲದ ಹೂವು ಹಾಕಿಟ್ಟ ನೀರನ್ನು, ಸಕ್ಕರೆ ಮಿಶ್ರ ನೀರನ್ನು, (ಶುದ್ಧ) ನೀರನ್ನು, ಹಾಲನ್ನು ಮತ್ತು ಕಬ್ಬಿನ ರಸವನ್ನು ಕೊಟ್ಟು, ಪಿತ್ತಶಮನಕರವಾದ ವಿಧಿಯನ್ನು ನಡಿಸತಕ್ಕದ್ದು.

15. ಪರಿಸೇಕಾವಗಾಹೇಷು ವ್ಯಜನಾನಾಂ ಚ ಸೇವನೇ |
ತಂಪಾದ ನೀರಿನ ಉಪಯೋಗ. ಶಸ್ಯತೇ ಶಿಶಿರಂ ತೋಯಂ ತೃಷ್ಣಾದಾಹೋಪಶಾನ್ತಯೇ ||
(ರ. ರ. 369)

ಪರಿಷೇಕ(ಧಾರೆ ಹಿಡಿಯುವದು ಮತ್ತು ಒದ್ದೆ ವಸ್ತ್ರದಿಂದ ಒತ್ತಡ, ಇವು)ಗಳಿಗೂ, ನೀರಿನಲ್ಲಿ ಕೂತು ಮಾಡುವ ಸ್ನಾನಗಳಿಗೂ, ಬೀಸಣಿಗೆಗಳ ಸೇವನಕ್ಕೂ,

ಧಂಡಿಯಾದ ನೀರನ್ನು ಉಪಯೋಗಿಸುವದು, ತೃಷೆ ಮತ್ತು ಉರಿ ಉಪಶಾಂತಿಗೆ, ಪ್ರಶಸ್ತ ವಾಗಿರುತ್ತದೆ.

16. ಸುಪ್ಯಾದ್ದಾಹಾರ್ದಿತೋಽಮ್ಭೋಜಕದಲೀದಲಸಂಸ್ತರೇ ।

ಪರ್ಣಸಂಸ್ತರ. (ಚಿ. ಸಾ. ಸಂ. 297)

ದಾಹ ಪೀಡಿತನಾದವನು ಕಮಲದ ಎಲೆಗಳ ಮತ್ತು ಬಾಳೆ ಎಲೆಗಳ ಮೇಲೆ ಮಲಗತಕ್ಕದ್ದು.

17. ಛಾದಯೇತ್ತಸ್ಯ ಸರ್ವಾಂಗಮಾರಣಾಲಾರ್ದ್ರವಾಸಸಾ ॥

ಒದ್ದೆ ವಸ್ತ್ರದ ಹೊದಿಕೆ (ಚಿ. ಸಾ. ಸಂ. 297)

ಉರಿ ಪೀಡೆಯುಳ್ಳವನ ಸರ್ವಾಂಗವನ್ನು ಹುಳಿ ಗಂಜಿನೀರಿನಲ್ಲಿ ತೋಯಿಸಿದ ವಸ್ತ್ರದಿಂದ ಮುಚ್ಚಬೇಕು.

18. ಹ್ರೀಬೇರಪದ್ಮಕೋಶೀರಚನ್ದನಾಮ್ಬುಜವಾರಿಣಾ ।

ಅವಗಾಹನ ಸ್ನಾನ ಸಮ್ಪೂರ್ಣಾಮವಗಾಹೇತ ದ್ರೋಣೀಂ ದಾಹಾರ್ದಿತೋ ನರಃ ॥

(ಭಾ. ಪ್ರ. 398)

ಮುಡಿವಾಳ, ಪದ್ಮಕ, ಲಾವಂಚ, ರಕ್ತಚಂದನ, ತಾವರೆ, ಇವುಗಳನ್ನು ಸೇರಿಸಿ ಕಾಯಿಸಿ, ತಣಿದ ನೀರನ್ನು ದೋಣಿ ಆಕಾರದ ಒಂದು ಮರದ ಪಾತ್ರದಲ್ಲಿ ತುಂಬಿ, ಅದರಲ್ಲಿ ಉರಿಯ ಪೀಡೆಯುಳ್ಳ ಮನುಷ್ಯನು ಕೂತು ಸ್ನಾನಮಾಡಬೇಕು.

ಷರಾ 'ಚನ್ದನಾಮ್ಬುಜ' ಎಂಬಲ್ಲಿ 'ಚನ್ದನಕ್ಶ್ಲೋದ' ಎಂತ ಪಾಠಾಂತರ ಉಂಟು ಅದರ ಪ್ರಕಾರ ತಾವರೆಯನ್ನು ಬಿಟ್ಟು, ಮಿಕ್ಕವುಗಳ ಚೂರ್ಣವನ್ನು ನೀರಿಗೆ ಕೂಡಿಸಿದರೆ ಸಾಕು, ಅವುಗಳನ್ನ ಸೇರಿಸಿ ಕುದಿಸುವದು ಅಗತ್ಯವಿಲ್ಲ. ಆದರೆ ನೀರಿನ ದೋಷ ಉಂಟಾಗದಂತೆ ಕುದಿಸಿ ತಣಿಸಿದ ನೀರನ್ನು ಉಪಯೋಗಿಸುವದೇ ಲೇಸು

19. ಲಾಮಜ್ಜಕೇನ ಯುಕ್ತೇನ ಚನ್ದನೇನಾನುಲೇಪಯೇತ್ ॥ (ಭಾ. ಪ್ರ. 398)

ಚಂದನಾದಿ ಲೇಪ ಶ್ರೀಗಂಧವನ್ನೂ ಲಾವಂಚವನ್ನೂ ಚೂರ್ಣಿಸಿ ಅರೆದು, ಸರ್ವಾಂಗ ಲೇಪಿಸುವದು ಉರಿಶಾಂತಿಗೆ ಹಿತ.

ಷರಾ 'ಯುಕ್ತೇನ' ಎಂಬಲ್ಲಿ 'ಶುಕ್ತೇನ' ಎಂತ ಪಾಠಾಂತರ ಉಂಟು (ರ ರ 368). ಆಗ್ಗೆ ಲಾವಂಚವನ್ನೂ, ಶ್ರೀಗಂಧವನ್ನೂ ಶುಕ್ತದಿಂದ ಅರೆದು ಲೇಪಿಸುವದೆಂತ ಅರ್ಥವಾಗುತ್ತದೆ

20. ಜಮ್ಬ್ವಾಮ್ರಪಲ್ಲವಾನ್ ನಿಮ್ಬಂ ಬೀಜಪೂರರಸೇನ ತು ।

ಜಂಬ್ವಾದಿ ಲೇಪ ಪಿಷ್ಟ್ವಾ ಪ್ರಲೇಪನಂ ದಾಹೇ ಶೀಘ್ರಂ ಸುಖಮಭೀಪ್ಸತಿ ॥ (ಹಾ. 215)

ನೇರಳೆ, ಮಾವು ಮತ್ತು ಕಹಿಬೇವು, ಇವುಗಳ ಎಲೆಗಳನ್ನು ಮಾದಳ ಹಣ್ಣಿನ ರಸದಿಂದ ಅರೆದು ಲೇಪಿಸುವದರಿಂದ, ಉರಿಯು ಬೇಗನೇ ಶಾಂತವಾಗಿ, ಸುಖವುಂಟಾಗುತ್ತದೆ.

21. ಮಾತುಲುಂಗರಸಕ್ಷೌದ್ರಪ್ರಲೇಪಾದ್ದಾಹನಾಶನಮ್ ॥

ಮಾದಳ ರಸದ ಲೇಪ (ಚಿ. ಸಾ. ಸಂ. 298)

ಮಾದಳ ಹಣ್ಣಿನ ರಸವನ್ನೂ ಜೇನನ್ನೂ ಮಿಶ್ರಮಾಡಿ ಲೇಪಿಸುವದರಿಂದ ಉರಿಯು ನಾಶವಾಗುತ್ತದೆ.

22. ಶ್ಲಕ್ಷ್ಣಸೂಕ್ಷ್ಮಕೃತೋ ಲೇಪಶ್ಚನ್ದನಸ್ಯಾಪಿ ದಾಹನುತ್ ||
(ಚಿ. ಸಾ. ಸಂ. 297)

ಚಂದನ ಲೇಪ

ಶ್ರೀಗಂಧ ಒಂದನ್ನೇ (ಕಾಯಿಸಿ ತಣಿಸಿದ ನೀರಿನಿಂದ) ತೇದಿ, ತೆಳ್ಳಗಾಗಿ ಲೇಪಿಸುವದರಿಂದ ಉರಿಯು ಪರಿಹಾರವಾಗುತ್ತದೆ.

23. ಉತ್ತಾನಸ್ಯ ಪ್ರಸುಪ್ತಸ್ಯ ನಾಭೇರುಪರಿ ಧಾರಯೇತ್ |
ಕಾಂಸ್ಯಪಾತ್ರಂ ತಥಾ ಹೃದ್ಯಂ ಧಾರಾಭಿಃ ಶೀತವಾರಿಣಃ ||
ಪೂರಯೇತ್ಸತತಂ ಯತ್ನಾತ್ತೇನ ಸೌಖ್ಯಂ ಸಮಶ್ನುತೇ || (ಹಾ. 215)

ನೀರಿನ ಧಾರೆ

ರೋಗಿಯನ್ನು ಅಂಗಾತವಾಗಿ ಮಲಗಿಸಿ, ಹೊಕ್ಕಳಿನ ಮೇಲೆ ಹಿತವಾದ ಒಂದು ಕಂಚಿನ ಪಾತ್ರವನ್ನಿಟ್ಟು, ಅದರ ಮೇಲೆ ಪ್ರಯತ್ನದಿಂದ ಶೀತವಾದ ನೀರಿನ ಧಾರೆಗಳನ್ನು ಬಿಡದೆ ಹಿಡಿದು ತುಂಬಿಸಬೇಕು ಅದರಿಂದ (ಉರಿ ಪರಿಹಾರವಾಗಿ) ಅವನು ಸೌಖ್ಯವನ್ನು ಪಡೆಯುತ್ತಾನೆ.

24. ಕ್ಷೀರೈಃ ಕ್ಷೀರಕಷಾಯೈಶ್ಚ ಸುಶೀತೈಶ್ಚನ್ದನಾನ್ವಿತೈಃ |
ಅನ್ತರ್ದಾಹಂ ಪ್ರಶಮಯೇದೇತೈಶ್ಚಾನ್ಯೈಃ ಸುಶೀತಲೈಃ ||
(ಚಿ. ಸಾ. ಸಂ. 297)

ಒಳಗಿನ ಉರಿಗೆ ಪರಿಹಾರ

ತಣ್ಣಗಾದ ಹಾಲುಗಳಿಂದಲೂ, ಶ್ರೀಗಂಧ ಕೂಡಿಸಿ ಕಾಯಿಸಿದ ತಣ್ಣಗಾದ ಹಾಲುಕಷಾಯಗಳಿಂದಲೂ, ಬೇರೆ ಒಳ್ಳೇ ತಂಪಾದ ಪಾನಗಳಿಂದಲೂ ಒಳಗಿನ ಉರಿಯನ್ನು ಶಮನಮಾಡತಕ್ಕದ್ದು.

ಷರಾ ಇದು ವಿಶೇಷವಾಗಿ ಧಾತುಕ್ಷಯಜ ದಾಹದಲ್ಲಿ ಉಪಯುಕ್ತವಾದದ್ದು

25. ಧಾತುಕ್ಷಯೋತ್ಥೇ ಕುರ್ವೀತ ಕ್ಷೀರಮಾಂಸಾದಿಬೃಂಹಣಮ್ |
ಕುಶಾದಿಶಾಲಿಪರ್ಣೀಭಿರ್ಜೀರ(ವ)ಕಾದ್ಯೇನ* ಸಾಧಿತಮ್ ||
ತೈಲಂ ಘೃತಂ ವಾ ದಾಹಘ್ನಂ ವಾತಪಿತ್ತವಿನಾಶನಮ್ || (ರ. ರ. 369)

ಧಾತುಕ್ಷಯೋತ್ಥ ದಾಹಕ್ಕೆ ಪ್ರತೀಕಾರ.

ಧಾತುಕ್ಷಯದಿಂದ ಹುಟ್ಟಿದ ದಾಹದಲ್ಲಿ ರೋಗಿಗೆ ಹಾಲು, ಮಾಂಸ ಮುಂತಾದವುಗಳಿಂದ ಬೃಂಹಣವನ್ನು ಮಾಡತಕ್ಕದ್ದು. ತೃಣಪಂಚಮೂಲಗಳ ಮತ್ತು ಹ್ರಸ್ವಪಂಚಮೂಲಗಳ ಕಷಾಯದಿಂದಲೂ, ಅಷ್ಟವರ್ಗದ (ಜೀವಕಾದಿ) ಕಲ್ಕದಿಂದಲೂ, ತುಪ್ಪವನ್ನು ಅಥವಾ ತೈಲವನ್ನು ಕಾಯಿಸಿ ಪಾನಾದಿಗಳಿಗೆ ಉಪಯೋಗಿಸಿದ್ದಲ್ಲಿ ದಾಹ ಶಾಂತವಾಗುವದು; ಮತ್ತು ವಾತಪಿತ್ತದೋಷಗಳು ಪರಿಹಾರವಾಗುವವು.

*'ಜೀವಕಾದ್ಯೇನ' ಎಂಬಲ್ಲಿ 'ಜೀವಕರ್ಷಭ' ಎಂತ ಪಾಠಾಂತರ ಕಾಣುತ್ತದೆ (ಚಿ ಸಾ ಸಂ 284) ಅದು ಸರಿಯಾದರೆ, ಅಷ್ಟವರ್ಗದಲ್ಲಿ ಜೀವಕ, ಋಷಭಕ, ಎಂಬ ಎರಡನ್ನೇ ತೆಗೆದುಕೊಳ್ಳಬೇಕಾಗುತ್ತದೆ ಅವೆರಡರಲ್ಲಿ ಮಿಕ್ಕ ಆರಕ್ಕಿಂತ ಹೆಚ್ಚು ದಾಹಪರಿಹಾರಗುಣ ಉಂಟೆಂತ ಕಾಣುತ್ತದೆ. ಅದು ಹೇಗಿದ್ದರೂ ಅಷ್ಟವರ್ಗದ ಔಷಧಗಳು ಈಗ ದೊರೆಯದೆ ಅವುಗಳಿಗೆ ಪ್ರತಿನಿಧಿ ದ್ರವ್ಯಗಳನ್ನು ಉಪಯೋಗಿಸುವದೇ ವಾಡಿಕೆಯಾದ್ದರಿಂದ ಮತ್ತು ಆ ಪ್ರತಿನಿಧಿಗಳೊಳಗೆ ಜೀವಕರ್ಷಭಕಗಳ ಪ್ರತಿನಿಧಿಯಾದ ನೆಲಕುಂಬಳದ ಗಡ್ಡೆಯಲ್ಲಿ ದಾಹಶಮನಮಾಡುವ ಗುಣ ಹೆಚ್ಚಿರುವದರಿಂದ, ಆ ಗಡ್ಡೆಯನ್ನೇ ಕಲ್ಕವಾಗಿ ಉಪಯೋಗಿಸುವದು ಒಳ್ಳೇದು.

26. ಚತುರ್ಗುಣೇ ಶತಾವರ್ಯಾ ವಾಸ(?ರಸೇ)ಕ್ಷೀರಂ ಚತುರ್ಗುಣಮ್ |
ಮಹತ್ಕಲ್ಯಾಣಕ ಘೃತ
ಸರ್ಪಿಃ ಪ್ರಸ್ಥಂ ಬಲಾಜಾಜೀ ಮಂಜಿಷ್ಠಾ ಪೀವರೀ ಸಿತಾ ||
ಕಾಕೋಲ್ಯೌ ಮಧು ಮೇದೇ ದ್ವೇ ಋದ್ಧೀ ದ್ವೇ ದೇವದಾರು ಚ |
ಏಷಾಮಷ್ಟಪಲೈಃ ಕಲ್ಕೈಃ ಪಚೇತ್ಕಲ್ಯಾಣಕಂ ಮಹತ್ ||
ಬೃಂಹಣೀಯಂ ವಿಶೇಷೇಣ ಪರಂ ಪುಷ್ಟಿಕರಂ ಮತಮ್ |
ಅರ್ದಿತಂ ಕರ್ಣಶೂಲಂ ಚ ನೇತ್ರರೋಗಂ ಸುದಾರುಣಮ್ ||
ದಾಹೋನ್ಮಾದಮಪಸ್ಮಾರಂ ವಾತರುಕ್(?ಗ್) ವಾತಶೋಣಿತಮ್ |
ಉದಾವರ್ತಂ ಗುಲ್ಮರೋಗಂ ಹೃದ್ರುಜಂ ಮೂತ್ರಕೃಚ್ಛ್ರಕಮ್ ||
ಮೂತ್ರಬಂಧೋಪದಂಶಂ ಚ ಗ್ರಹಣೀಮತಿದುಸ್ತರಾಮ್ |
ಗುದಾಂಕುರಂ ಮಂದಮಗ್ನಿಂ ಶ್ವಾಸರುಗ್ವಿಷಮಜ್ವರಾ ||
ಹಲೀಮಕಂ ತಥಾ ಶೂಲಂ ರಕ್ತಪಿತ್ತಸ್ವರಕ್ಷಯಮ್ |
ಕಾಸಂ ಚೈವ ಸ್ವರಂ ಭಿನ್ನಂ ಛರ್ದಿಂ ತೃಷ್ಣಾಂ ಪ್ರಮೇಹಕಮ್ ||
ಸ್ತ್ರೀಣಾಂ ರುಜಂ ಜಯೇತ್ ಶೀಘ್ರಂ ಕ್ಷಯರೋಗಂ ಸಕಾಮಲಮ್ |
ಏಕಜಂ ದ್ವಂದ್ವಜಂ ಚೈವ ತಥೈವ ಸಾನ್ನಿಪಾತಿಕಮ್ ||
ಸರ್ವರೋಗಂ ನಿಹನ್ತ್ಯೇತತ್ ಮಹತ್ಕಲ್ಯಾಣಕಂ ಘೃತಮ್ ||
(ರ. ರ. 369-370)

ತುಪ್ಪ ೧ ಪ್ರಸ್ಥ, ಶತಾವರಿ ರಸ ೪ ಪ್ರಸ್ಥ, ಹಾಲು ೪ ಪ್ರಸ್ಥ, (ಕಲ್ಕಕ್ಕೆ) ಕಲ್ಲಂಗಡಲೆಬೀರು, ಜೀರಿಗೆ, ಮಂಜಿಷ್ಠ, ಮೂವೆಲೆಬೇರು, ಅರಸಿನ, ಕಾಕೋಲೀ, ಕ್ಷೀರಕಾಕೋಲೀ, ಜ್ಯೇಷ್ಠ ಮಧು, ಮೇದೆ, ಮಹಾಮೇದೆ, ಋದ್ಧಿ, ವೃದ್ಧಿ, ದೇವದಾರ, ಇವುಗಳ ಒಟ್ಟು ತೂಕ ೮ ಪಲ ವಾಗುವಷ್ಟು ತೆಗೆದುಕೊಂಡು ಮಾಡಿದ ಚೂರ್ಣದ ಕಲ್ಕ, ಇವುಗಳನ್ನೆಲ್ಲ ಕೂಡಿಸಿ, ಕಾಯಿಸಿದ ತುಪ್ಪಕ್ಕೆ 'ಮಹತ್ಕಲ್ಯಾಣಕಘೃತ' ಎಂಬದಾಗಿ ಹೆಸರು. ಇದು ಬಲ ಕೊಡುವಂಥಾದ್ದು; ಮತ್ತು ವಿಶೇಷವಾಗಿ ಪುಷ್ಟಿಕರ ಅದರಿಂದ ಅರ್ದಿತವ್ಯಾಧಿ, ಕಿವಿಶೂಲೆ, ಕಠಿಣವಾದ ನೇತ್ರರೋಗ, ದಾಹ, ಉನ್ಮಾದ, ಅಪಸ್ಮಾರ, ವಾತವ್ಯಾಧಿ, ವಾತಶೋಣಿತ, ಉದಾವರ್ತ, ಗುಲ್ಮರೋಗ, ಎದೆನೋವು, ಮೂತ್ರಕೃಚ್ಛ್ರ, ಮೂತ್ರಸಿಕ್ಕು, ಉಪದಂಶ, ಅತಿಕಠಿಣವಾದ ಗ್ರಹಣೀ, ಆಸನದ ಮೊಳೆ, ಮಂದಾಗ್ನಿ, ಉಬ್ಬಸ, ವಿಷಮಜ್ವರ, ಹಲೀಮಕ, ಶೂಲೆ, ರಕ್ತಪಿತ್ತ, ಸ್ವರಭಂಗ, ಕೆಮ್ಮು, ಸ್ವರಭೇದ, ವಾಂತಿ, ಬಾಯಾರಿಕೆ, ಪ್ರಮೇಹ, ಸ್ತ್ರೀಯರ ರೋಗ, ಕ್ಷಯರೋಗ, ಕಾಮಿಲೆ, ಇವುಗಳು ಬೇಗನೆ ವಾಸಿಯಾಗುವವು; ಮತ್ತು ವಾತಾದಿ ಒಂದೊಂದು ದೋಷದಿಂದ, ಅಥವಾ ದ್ವಂದ್ವದೋಷಗಳಿಂದ, ಅಥವಾ ಸನ್ನಿಪಾತದಿಂದ, ಉಂಟಾದ ಎಲ್ಲಾ ರೋಗಗಳನ್ನೂ ಈ ಮಹತ್ಕಲ್ಯಾಣಕಘೃತವು ನಾಶಮಾಡುವದು.

ಷರಾ ಈ ಯೋಗದಲ್ಲಿ ಕುಡವಕ್ಕೆ ೮ ಪಲ ಪ್ರಕಾರ ಪ್ರಸ್ಥ ಎಂದರೆ ೬೪ ಪಲ ಎಂತ ತಿಳಿಯಬೇಕು ಹಿಂದಿನ VIIIನೇ ಅಧ್ಯಾಯದ 18ನೇ ಸಂಖ್ಯೆಯಡಿ ಷರಾ ನೋಡಿ. ಇದೇ ಹೆಸರಿನ ಬೇರೊಂದು ಘೃತದ ಯೋಗ 'ಸಹಸ್ರ ಯೋಗ' ಎಂಬ ಮಲಯಾಳ ಗ್ರಂಥದಲ್ಲಿ ಕಾಣುತ್ತದೆ.

27. ಆಮಲಕ್ಯಾಶ್ಚ ಕುಡವಂ ಸುಸ್ವಿನ್ನಂ ನಿಷ್ಕುಲೀಕೃತಮ್ |
ಪ್ರಸ್ಥೇನ ಪಯಸಃ ಪಿಷ್ಟ್ವಾ ಪಚೇತ್ ಪ್ರಸ್ಥೇ ಚ ಸರ್ಪಿಷಿ ||

ಆಮಲಕ್ಯಾದಿ ಖಂಡ

ಪ್ರಸ್ಥಂ ದತ್ವಾ ಸಿತಾಯಾಶ್ಚ ವಾಸಾಪಲಚತುಷ್ಟಯಮ್ |
ಜೀರಕಂ ಮರಿಚಂ ಕೃಷ್ಣಾಂ ಚಾತುರ್ಜಾತಂ ಕ್ಷಿಪೇತ್ಪುನಃ ||
ಕರ್ಷಂ ದತ್ವಾ ತತಃ ಸ್ನಿಗ್ಧೇ ಭಾಂಡೇ ಧೃತ್ವೋಪಭೋಜಯೇತ್ |
ದಾಹಂ ಸುದುರ್ಜಯಂ ಹನ್ತಿ ಮೂರ್ಚ್ಛಾಂ ಛರ್ದಿಂ ಚಿರೋತ್ಥಿತಾಮ್ ||
(ಚಿ. ಸಾ. ಸಂ. 298)

ನಾಲ್ಕು ಪಲ ನೆಲ್ಲಿಹಣ್ಣನ್ನು ಸೆಕೆಯಲ್ಲಿ ಬೆವರಿಸಿ ಬೀಜ ತೆಗೆದುಬಿಟ್ಟು, ೧ ಪ್ರಸ್ಥ ಹಾಲಿನಿಂದ ಅರೆದು, ಅದಕ್ಕೆ ೧ ಪ್ರಸ್ಥ ತುಪ್ಪ, ೧ ಪ್ರಸ್ಥ ಸಕ್ಕರೆ, ಮತ್ತು ೪ ಪಲ ಆಡುಸೋಗೆಎಲೆಗಳ ರಸ, ಮತ್ತು ಜೀರಿಗೆ, ಕಾಳುಮೆಣಸು, ಹಿಪ್ಪಲಿ, ಚಾತುರ್ಜಾತ, ಈ ಏಳು ಬಗೆಗಳಲ್ಲಿ ಪ್ರತಿಯೊಂದು ೧ ಕರ್ಷ ಪ್ರಕಾರ ತೆಗೆದುಕೊಂಡು ಮಾಡಿದ ಚೂರ್ಣ ಸಹ, ಕೂಡಿಸಿ ಕಾಯಿಸಿದ ಅಡಿಗೆಯನ್ನು ತುಪ್ಪ ಸವರಿದ ಬಾನಿಯಲ್ಲಿರಿಸಿಕೊಂಡು, (ಪ್ರಮಾಣದಲ್ಲಿ) ಸೇವಿಸುತ್ತಾ ಬಂದಲ್ಲಿ ಜಯಿಸಲು ಕಷ್ಟವಾದ ದಾಹ, ಮೂರ್ಚ್ಛೆ ಮತ್ತು ದೀರ್ಘಕಾಲದ ವಾಂತಿ ನಾಶವಾಗುವವು.

28. ರಕ್ತೋದ್ರೇಕದ ದಾಹಕ್ಕೆ ಪ್ರತಿಕ್ರಿಯೆ.

ತಂ ವಿಲಂಘ್ಯ ವಿಧಾನೇನ ಸಂಸೃಷ್ಟಾಹಾರಮಾಚರೇತ್ |
ಪ್ರಶಾಮ್ಯತ್ಯಥವಾ ದಾಹೋ ರಸೈಸ್ತೃಪ್ತಸ್ಯ ಜಾಂಗಲೈಃ ||
ಶಾಖಾಶ್ರಯಂ (?ಯೇ) ಯಥಾ ನ್ಯಾಯಂ ರೋಹಿಣೀಂ ವ್ಯಧಯೇಚ್ಛಿ-
ರಾಮ್ (ಚಿ. ಸಾ. ಸಂ 298)

ರಕ್ತೋದ್ರೇಕದಿಂದ ದಾಹ ಉಂಟಾದವನಿಗೆ ವಿಧಿಪ್ರಕಾರ ಲಂಘನ ಮಾಡಿಸಿದನಂತರ, ಶೋಧನ ಮಾಡಿಸಿಕೊಂಡವನಿಗೆ ಹೇಳಲ್ಪಟ್ಟ ಆಹಾರವನ್ನು ಕೊಡಬೇಕು, ಅಥವಾ ಜಾಂಗಲವರ್ಗದ ಮಾಂಸಗಳಿಂದ ಮಾಡಿದ ರಸಗಳನ್ನು ಕೊಟ್ಟು, ತೃಪ್ತಿಪಡಿಸಿದ್ದಲ್ಲಿ ಉರಿಯು ಶಮನವಾಗುವದು. ದಾಹವು ಕೈಕಾಲುಗಳಲ್ಲಿ ಉಂಟಾದ ಸಂಗತಿಯಲ್ಲಿ, ವಿಧಿಯನ್ನನುಸರಿಸಿ (ರಕ್ತತುಂಬಿ) ಕೆಂಪಾದ ಶಿರೆಯನ್ನು ಚುಚ್ಚಿ ರಕ್ತಮೋಕ್ಷಣ ಮಾಡತಕ್ಕದ್ದು.

ಷರಾ ಕೆಟ್ಟಿರುವ ರಕ್ತವನ್ನು ತೆಗೆಯದೆ ಬಿಟ್ಟರೆ ಕುರ, ದಾಹ, ಕೆಂಪು ವರ್ಣ, ಉರಿ, ಸಿಡಿತ ಸಹ ಉಂಟಾಗುತ್ತವೆ (ಸು 50).

29. ರಕ್ತಪೂರ್ಣಕೋಷ್ಠದ ದಾಹಕ್ಕೆ ಪ್ರತಿಕ್ರಿಯೆ

ಅಸೃಜಾ ಪೂರ್ಣಕೋಷ್ಠಸ್ಯ ದಾಹೋಽನ್ಯಃ ಸ್ಯಾತ್ಸುದುಸ್ತರಃ |
ವಿಧಿಃ ಸದ್ಯೋವ್ರಣೇಯೋಕ್ತಸ್ತಸ್ಯ ಲಕ್ಷಣಮೇವ ಚ ||
(ಚಿ. ಸಾ. ಸಂ. 299)

ಕೋಷ್ಠದಲ್ಲಿ ರಕ್ತ ತುಂಬಿಕೊಂಡಾಗ್ಗೆ ಬಹಳ ಕಠಿಣವಾದ ದಾಹ ಉಂಟಾಗುತ್ತದೆ. ಅದರ ಲಕ್ಷಣವೂ ಪ್ರತೀಕಾರವೂ ಸದ್ಯೋವ್ರಣಕ್ಕೆ ಹೇಳಲ್ಪಟ್ಟಂತೆಯೇ ಆಗಿರುತ್ತವೆ.

ಷರಾ ಕೋಷ್ಠ ಎಂಬದರಲ್ಲಿ ಆಮಾಶಯ, ಅಗ್ನ್ಯಾಶಯ, ಪಕ್ವಾಶಯ, ಮೂತ್ರಾಶಯ, ರಕ್ತಾಶಯ, ಹೃದಯ ಉಂಡುಕ ಮತ್ತು ಪುಪ್ಪುಸ ಸೇರುತ್ತವೆ (ಸು 386) ಪೆಟ್ಟು ತಾಗಿದ ಅಥವಾ ಹಿಸುಕುವಿಕೆಯಿಂದ ಯಾವದಾದರೊಂದು ಅಂಗವು ಎಲುಬಿನ ಸಮೇತವಾಗಿ ಬಾತುಕೊಂಡು, ಅಥವಾ ಠಿಕ್ಕಾಟು ಮುಂತಾದ್ದರಿಂದ ಯಾವದಾದರೊಂದು ಅಂಗದ ಚರ್ಮವು ಹೋಗಿ, ರಕ್ತ ಸುರಿಯದೆ ಕಟ್ಟಿಕೊಂಡಲ್ಲಿ ಆ ಅಂಗದಲ್ಲಿ ಉರಿ ಮತ್ತು ಬಿಸಿ ಉಂಟಾಗುತ್ತವೆ. ಅವುಗಳ ಶಾಂತಿಗೋಸ್ಕರ ಶೀತವಾದ ಲೇಪಗಳನ್ನು ಮಾಡಬೇಕು, ಅಥವಾ ಶೀತಲವಾದ ಧಾರೆ ಅಥವಾ ಒತ್ತಡ ಕೊಡಬೇಕು, ಎಂತ ಸುಶ್ರುತನು ಸದ್ಯೋವ್ರಣ ಚಿಕಿತ್ಸೆಯಲ್ಲಿ ಹೇಳಿದ್ದಾನೆ (ಸು 386-387)

ಪೃಥಗ್ರೋಗೋಕ್ತ ಔಷಧಗಳು.

30. ಅಂಬಟೆ ಹಣ್ಣು, ಅಗರುಬೀಟೆ (ಶಿಂಶಪಾ—ಮಲ. ಇರುವುಳ್), ಅಣಿಲೆಕಾಯಿ, ಅಮೃತಬಳ್ಳಿ, ಅಶೋಕ, ಆಡುಸೋಗೆ, ಇಪ್ಪೆಯ ಹಣ್ಣು ಮತ್ತು ಹೂವು, ಉಡಿಮರ (ಜಿಂಗಿನೀ), ಕಟುಕರೋಹಿಣೀ, ಕರಿತಿಗಡೆ, ಕಲ್ಲುನಾರು, ಕಾಡುಹರಳು, ಕಾಶದರ್ಭೆ, ಕಾಶ್ಮರಿ (ಕುಮಿಳ್) ಹಣ್ಣು, ಕಿರಾತಕಡ್ಡಿ, ಕುಂಟನೇರಳು, ಕೊತ್ತುಂಬರಿ, ಗಂಡುದೂರ್ವೆ, ಗೋಳಿ, ಜಟಾಮಾಂಸಿ, ಜಲಹಿಪ್ಪಲಿ, ಜ್ಯೇಷ್ಠಮಧು, ತಾವರೆಎಲೆ, ತಾವರೆಕೇಸರ, ತಾವರೆದಂಟು, ತಾಳಿಸೀಯಾಳ, ದಂತಿ, ದಾಳಿಂಬ, ದೇವದಾರ, ದ್ರಾಕ್ಷೆ, ನೀಲದೂರ್ವೆ, ನೆಲಕುಂಬಳ, ಪಚ್ಚೆಕರ್ಪೂರ, ಪದ್ಮಕ, ಪರೂಷಕ, ಪರ್ಪಾಟಕ, ಪಾಡಾವಳಿಗಡ್ಡೆ (ಪಾಠಾ), ಬಸುರಿಮರ, ಬಾಳೆ, ಬಿಳಿದೂರ್ವೆ, ಬೂರುಗದ ಮೇಣ, ಬೆತ್ತ(ದ ಸೊಪ್ಪು ಅಥವಾ ಚಿಗುರು), ಬೊಗರಿ, ಮಾವಿನ ಬೀಜ, ಮುಂಜದರ್ಭೆ, ಮುಳ್ಳುಸವತೆ, ಮೊರವೆ (ನೊರಂಟೆ), ಲಾವಂಚ, ಶಿಲಾರಸ, ಶಿವಮಲ್ಲಿ (ದೊಡ್ಡರೆಂಜೆ), ಶೃಂಗಾಟಕ (ನೀರನೆಗ್ಗಿಲು), ಶ್ರೀಗಂಧ, ಸುಲೆಮಾನಿ ಖರ್ಜೂರ, ಹಂಸಪಾದಿ, ಹಾವಸೆ (ಶೈವಾಲ) ಮತ್ತು ಹುಳುಗಿಲಹುಲ್ಲು (ನಲ—ಮಲ. ನಾಂಜನಪುಲ್ಲು)

ಪಥ್ಯವರ್ಗ

31. ಶಾಲಿಗಳು, ಅರುವತ್ತು ದಿನಗಳಲ್ಲಿ ಬೆಳೆದ ಒತ್ತ್ರದ ಅಕ್ಕಿಗಳು, ಹೆಸರು, ಮಸೂರ (ಚಾಣಂಗಿ), ಕಡಲೆ, ಯವೆಗೋದಿ, ಅರಳುಗಂಜಿ, ಅರಳಿನ ಹಿಟ್ಟುಗಳು (ಲಾಜಶಕ್ತವಃ), ಸಕ್ಕರೆ, ನೂರಾವರ್ತಿ ತೊಳೆದ ಘೃತ, ಹಾಲು, ಹಾಲನಿಂದ ತೆಗೆದ ಬೆಣ್ಣೆ, ಒಂದಿಕುಂಬಳಕಾಯಿ, ಸವತೆಕಾಯಿ, ಬಾಳೆಹಣ್ಣು, ಹಲಸಿನ ಹಣ್ಣು, ಸಿಹಿದಾಳಿಂಬದ ಹಣ್ಣು, ಪಡುವಲಕಾಯಿ, ದ್ರಾಕ್ಷೆ, ನೆಲ್ಲಿಹಣ್ಣು, ಕೋಡುಧಾನ್ಯ (ಶಿಂಬೀ), ತೊಂಡಕಾಯಿ, ಖರ್ಜೂರ, ಕೊತ್ತುಂಬರಿ, ಸಬ್ಬಸಿಗೆ, ಕಹಿದ್ರವ್ಯಗಳು, ಅಭ್ಯಂಗ, ಸ್ನಾನ, ಶೀತವಾದ ಧಾರೆ, ಶೀತವಾದ ಲೇಪ, ಶೀತವಾದ ನೀರು, ತಣ್ಣಗಿನ ಗಾಳಿ, ಸಿಹಿರಸ, ಜಾಂಗಲ ವರ್ಗದ ಮಾಂಸಗಳ ರಸಗಳು, ಚಂದ್ರಕಿರಣ, ಇತ್ಯಾದಿ.

ಅಪಥ್ಯವರ್ಗ

32. ವಿರುದ್ಧವಾದ ಅನ್ನಪಾನಗಳು, ಸಿಟ್ಟು, ವೇಗದ ತಡ, ಆನೆಕುದುರೆಗಳ ಸವಾರಿ, ದಾರಿನಡೆ, ಕ್ಷಾರಗಳು, ಪಿತ್ತಕರವಾದ ವಸ್ತುಗಳು, ದೇಹದಂಡನೆ, ಬಿಸಿಲು, ಮಜ್ಜಿಗೆ, ತಾಂಬೂಲ, ಜೇನು, ಇಂಗು, ಮೈಥುನ, ಕಾರ, ಕಹಿ ಮತ್ತು ಬಿಸಿ (ಉಷ್ಣ)

ಸಂ: ಕಹಿ ರುಚಿಯ ಪದಾರ್ಥಗಳು ಪಥ್ಯಾಪಥ್ಯಗಳೆರಡರಲ್ಲಿಯೂ ಸೇರಿಸಲ್ಪಟ್ಟಿವೆ ಕಹಿಯಲ್ಲಿ ಪಿತ್ತಹರ ಗುಣವೂ ಕಫಹರ ಗುಣವೂ ಇರುತ್ತವೆ. ಒಂದನೇ ಗುಣಕ್ಕೆ ಕಾರಣವಾದ ಸೌಮ್ಯತ್ವವು ಅಧಿಕವಾಗಿರುವ ಕಹಿಗಳು ದಾಹದಲ್ಲಿ ಪಥ್ಯ, ಎರಡನೇ ಗುಣಕ್ಕೆ ಕಾರಣವಾದ ರೂಕ್ಷತ್ವವೂ ಲಘುತ್ವವೂ ಅಧಿಕವಾಗಿರುವ ಕಹಿ ಪದಾರ್ಥಗಳು ಅಪಥ್ಯ ಎಂತ ತಿಳಿಯಬೇಕು (1ನೇ ಭಾಗದ IV 25 6 ನೋಡಿ) ಈ ಭೇದವನ್ನು ಮನಸ್ಸಿನಲ್ಲಿಟ್ಟುಕೊಂಡು, ದಾಹದಲ್ಲಿ ಪಿತ್ತದೊಂದಿಗೆ ವಾತಕಫಗಳ ಪೀಡೆಗಳು ಸೇರಬಹುದಾದ್ದರಿಂದ, ಸಾಧಾರಣವಾಗಿ ಪಿತ್ತರಕ್ತ ದೋಷಗಳು ಬಲವಾಗಿರುವಲ್ಲಿ ಸೌಮ್ಯವಾದ ಮಧುರ-ತಿಕ್ತ-ಕಷಾಯ ರುಚಿಗಳುಳ್ಳ ಔಷಧಗಳ ಉಪಯೋಗದಿಂದ, ವಾತದ ಲಕ್ಷಣ ಕಾಣುವಲ್ಲಿ ಸ್ನಿಗ್ಧಗುಣವುಳ್ಳ ಮಧುರಾಮ್ಲ ರುಚಿಗಳುಳ್ಳ ಪದಾರ್ಥಗಳನ್ನು ಕೂಡಿಸಿಕೊಂಡು ಮೇಲೆ 25ನೇ ಸಂಖ್ಯೆಯಲ್ಲಿ ಬೋಧಿಸಲ್ಪಟ್ಟ ಕ್ರಮದಿಂದ, ಕಫದ ಲಕ್ಷಣ ತೋರುವಲ್ಲಿ ಕಷಾಯ ರುಚಿಯುಳ್ಳ ಔಷಧಗಳನ್ನು ಸೇರಿಸಿಕೊಂಡು 20ನೇ ಸಂಖ್ಯೆಯಲ್ಲಿ ವರ್ಣಿಸಲ್ಪಟ್ಟ ಕ್ರಮದಿಂದ, ವಾತಕಫಗಳೆರಡರ ಲಕ್ಷಣಗಳು ಸಹ ತೋರುವಲ್ಲಿ ಮೇಲೆ 21ನೇ ಸಂಖ್ಯೆಯಲ್ಲಿ ಕಾಣುವಂತೆ ಸಹ, ರೋಗಗಳನ್ನು ಕಲ್ಪಿಸಿ ಚಿಕಿತ್ಸೆ ಮಾಡತಕ್ಕದ್ದು

33. ಡಾಕ್ಟರ ಮೂರರ ಪುಸ್ತಕದಲ್ಲಿ (ಪು. 93) ಪಾದದಾಹದ ಕುರಿತು ಈ ಕೆಳಗಿನ ಅಭಿಪ್ರಾಯದ ಮಾತುಗಳಿವೆ. "ಪಾದಗಳ ಅಡಿತಲಗಳಲ್ಲಿ ಸ್ವಲ್ಪ ಅಸುಖ ಕರವಾದ ಬಿಸಿ ಕಾಣುವದು ಮೊದಲುಗೊಂಡು ಪಾದಗಳಲ್ಲಿಯೂ ಕಾಲು ಗಳಲ್ಲಿಯೂ ಅತ್ಯಂತ ಸಂಕಷ್ಟಕರವಾದ ಉರಿಯುಂಟಾಗಿ, ನಿದ್ರೆ ಬಾರದೆ, ಆರೋಗ್ಯ ಕೆಡುವಷ್ಟು ಹೆಚ್ಚಿನ ವರೆಗೆ ಈ ಉರಿಯು ಹೆಚ್ಚುಕಡಿಮೆಯಾಗಿ ಇರಬಹುದು. ಅದು ಕೆಲವು ಸಂದರ್ಭಗಳಲ್ಲಿ ಬೇರೆ ಯಾವ ವ್ಯಾಧಿಗೂ ಸಂಬಂಧವಿಲ್ಲದೆ ಉಂಟಾಗುತ್ತದೆ; ಬೇರೆ ಕೆಲವು ಸಂಗತಿಗಳಲ್ಲಿ ಜ್ವರ, ಮಲದೋಷ, ವಾತ, ಅಥವಾ 'ಬೆರಿಬೆರಿ'(ರಕ್ತ ಆರಿ ಉಂಟಾಗುವ ಶೋಫ)ಯ ಅನುಬಂಧವಾಗಿ ಅದು ಕಾಣುತ್ತದೆ. ಅದರ ನಿದಾನ ಗೊತ್ತಾಗ ಲಿಲ್ಲ. ಕೆಲವರು ಅದನ್ನು ವಿಷಮಜ್ವರ ದೋಷದ ಶೇಷ ಎಂತಲೂ, ಬೇರೆ ಕೆಲವರು ಅದು ನರಸಂಬಂಧವಾದ ವಾತ (rheumatism)ದ ಲಕ್ಷಣ ಎಂತಲೂ ತಿಳಿಯುತ್ತಾರೆ. ರಕ್ತನಾಳ ಗಳಲ್ಲಿ ಕಠಿಣವಾದ ವ್ಯಾಧಿ ಸಂಭವಿಸದ ಹಾಗೆ ಬೇಗನೆ ಅದಕ್ಕೆ ಜಾಗ್ರತೆಯಿಂದ ಚಿಕಿತ್ಸೆಮಾಡ ತಕ್ಕದ್ದು". ಸರ್ವಾಂಗ ದಾಹದ ಅಥವಾ ಇತರ ಅಂಗದಾಹಗಳ ನಿದಾನವಾಗಲಿ, ಚಿಕಿತ್ಸೆ ಯಾಗಲಿ, ಪ್ರತ್ಯೇಕ ಹೇಳಲ್ಪಟ್ಟದ್ದು ಪಾಶ್ಚಾತ್ಯ ವೈದ್ಯಗ್ರಂಥಗಳಲ್ಲಿ ಕಾಣುವದಿಲ್ಲ.

ಪ್ರಕರಣಾಂತ ಟಿಪ್ಪಣೀ.

# ಅಧ್ಯಾಯ XIII.

## ಹೃದ್ರೋಗ. (Heart Disease.)

1. ವ್ಯಾಯಾಮತೀಕ್ಷ್ಣಾತಿವಿರೇಕವಸ್ತಿಚಿನ್ತಾಭಯತ್ರಾಸಮದಾತಿಚಾರಾಃ |
ಛರ್ದ್ಯಾಮಸನ್ಧಾರಣಕರ್ಷಣಾನಿ ಹೃದ್ರೋಗಕರ್ತ್ಯಾಣಿ ತಥಾಭಿಘಾತಃ ||
(ಚ. 748)

ಹೃದ್ರೋಗದ ಸಾಮಾನ್ಯ ನಿದಾನ.

ವ್ಯಾಯಾಮ, ತೀಕ್ಷ್ಣಾಹಾರ, ಅತಿಯಾದ ವಿರೇಚನ-ವಸ್ತಿ-ಚಿಂತೆ-ಭಯ-ದಿಗಿಲುಗಳು, ಮದಾತ್ಯಯ, ವಾಂತಿ, ಆಮ, ವೇಗಗಳ ತಡೆ, (ಉಪವಾಸ, ಶುಷ್ಕ, ರೂಕ್ಷ ಮತ್ತು ಅಲ್ಪವಾದ ಭೋಜನ ಮುಂತಾದ) ಬತ್ತಿಸುವ ಕರ್ಮಗಳು ಮತ್ತು ಪೆಟ್ಟು, ಇವು ಹೃದ್ರೋಗಕ್ಕೆ ಕರ್ತೃಗಳು.

ಷರಾ: ಅಗ್ನಿಬಲ ಕಡಿಮೆಯಾದ್ದರಿಂದ ಸರಿಯಾಗಿ ಪಕ್ವವಾಗದ ರಸಕ್ಕೆ ಆಮ ಎನ್ನುವದು (ಚಿ ಸಾ ಸಂ. 446) ಸುಶ್ರುತನು ಹೇಳುವ ಕಾರಣಗಳೊಳಗೆ (ಪು. 815) ಉಷ್ಣ ಅನ್ನವು 'ತೀಕ್ಷ್ಣ'ದಲ್ಲಿ, ರೂಕ್ಷ ಅನ್ನವು 'ಕರ್ಷಣ'ಗಳಲ್ಲಿ, ಮತ್ತು ವಿರುದ್ಧಾಶನ, ಅಧ್ಯಶನ, ಅಜೀರ್ಣಭೋಜನ ಮತ್ತು ಅಸಾತ್ಮ್ಯ ಭೋಜನ ಎಂಬವು 'ಆಮ'ದಲ್ಲಿ ಅಡಗಿಯವೆ ಮಾ ನಿದಲ್ಲಿ (ಪು 158) ಹೇಳಲ್ಪಟ್ಟ ಹೇತುಗಳೊಳಗೆ ಕಷಾಯ-ತಿಕ್ತ-ಶ್ರಮಗಳು ಸಹ ಕರ್ಷಣಗಳಲ್ಲಿ ಅಡಗಿದವು
'ಮದಾತಿಚಾರಃ' (ಮದಾತ್ಯಯ) ಎಂದರೆ ಕ್ರಮಬಿಟ್ಟು ಮದ್ಯಪಾನ ಮಾಡುವದು 'ಅತಿಯಾದ ದಾಂನಡಿಗೆ' ಎಂಬ ಅರ್ಥದಲ್ಲಿ 'ಅತಿಚಾರ' ಎಂಬದನ್ನು ಒಂದು ಪ್ರತ್ಯೇಕ ಪದವನ್ನಾಗಿ ಎಣಿಸಲೂ ಬಹುದು

2. ವೈವರ್ಣ್ಯಮೂರ್ಛಾಜ್ವರಕಾಸಹಿಕ್ಕಾಶ್ವಾಸಾಸ್ಯವೈರಸ್ಯತೃಷಾಃ ಪ್ರಮೋಹಾಃ |
ಛರ್ದಿಃ ಕಫೋತ್ಕ್ಲೇಶರುಜೋಽರುಚಿಶ್ಚ ಹೃದ್ರೋಗಜಾಃ ಸ್ಯುರ್ವಿವಿಧಾಸ್ತಥಾನ್ಯೇ || (ಚ. 748)

ಹೃದ್ರೋಗದಲ್ಲಿ ಸಂಭವಿಸುವ ಉಪದ್ರವಗಳು

ವರ್ಣವಿಕಾರ, ಮೂರ್ಛೆ, ಜ್ವರ, ಕೆಮ್ಮು, ಬಿಕ್ಕಟ್ಟು, ಉಬ್ಬಸ, ಬಾಯಿ ರುಚಿ ವಿಕಾರವಾಗುವಿಕೆ, ಬಾಯಾರಿಕೆ, ಬಹಳವಾದ ಕಣ್ಣುಕತ್ತಲೆಗಳು, ವಾಂತಿ, ಕಫದ ವಾಕರಿಕೆಯ ಪೀಡೆ, ಅರುಚಿ ಮತ್ತು ವಿವಿಧವಾದ ಬೇರೆ ಪೀಡೆಗಳು ಹೃದ್ರೋಗದಿಂದ ಉಂಟಾಗುತ್ತವೆ.

3. ದೂಷಯಿತ್ವಾ ರಸಂ ದೋಷಾ ವಿಗುಣಾ ಹೃದಯಂ ಗತಾಃ |
ಕುರ್ವನ್ತಿ ಹೃದಯೇ ಬಾಧಾಂ ಹೃದ್ರೋಗಂ ತಂ ಪ್ರಚಕ್ಷತೇ ||
ಚತುರ್ವಿಧಃ ಸ ದೋಷೈಶ್ಚ ಪಂಚಮಃ ಕ್ರಿಮಿಭಿಸ್ತಥಾ || (ಸು. 816)

ಹೃದ್ರೋಗದ ಸಂಪ್ರಾಪ್ತಿ ಮತ್ತು ವಿಧಗಳು

ವಾತಾದಿ ದೋಷಗಳು (ಹಿಂದೆ ವಿವರಿಸಲ್ಪಟ್ಟ ಹೇತುಗಳಿಂದ) ವಿಕಾರ ಹೊಂದಿ, ರಸಧಾತುವನ್ನು ಕೆಡಿಸಿ, ಹೃದಯವನ್ನು ಪ್ರವೇಶಿಸಿ, ಅಲ್ಲಿ ಬಾಧೆಯನ್ನುಂಟುಮಾಡುತ್ತವೆ. ಅದಕ್ಕೆ ಹೃದ್ರೋಗ ಎನ್ನುತ್ತಾರೆ. ಅದು (ವಾತಜ, ಪಿತ್ತಜ, ಕಫಜ, ಸನ್ನಿಪಾತಜ, ಹೀಗೆ) ದೋಷಗಳಿಂದ ನಾಲ್ಕು, ಕ್ರಿಮಿಗಳಿಂದ ಒಂದು, ಹೀಗೆ ಐದು ವಿಧ.

ಷರಾ ಈ ಪಂಚ ವಿಧ ಹೃದ್ರೋಗಗಳು ಗುಲ್ಮನಿದಾನದಲ್ಲಿ ಹೇಳಲ್ಪಟ್ಟ ಹೇತುಗಳಿಂದಲೇ ಹುಟ್ಟುವಂಥವು ಎಂತ ವಾ. (ಪು 201)

4. ಶೋಕೋಪವಾಸವ್ಯಾಯಾಮಶುಷ್ಕರೂಕ್ಷಾಲ್ಪಭೋಜನೈಃ ।
ವಾಯುರಾವಿಶ್ಯ ಹೃದಯಂ ಜನಯತ್ಯುತ್ತಮಾಂ ರುಜಮ್ ॥
ವೇಪಥುರ್ವೇಷ್ಟನಂ ಸ್ತಮ್ಭಃ ಪ್ರಮೋಹಃ ಶೂನ್ಯತಾ ದ್ರವಃ ।
ಹೃದಿ ವಾತಾತುರೇ ರೂಪಂ ಜೀರ್ಣೇ ಚಾತ್ಯರ್ಥವೇದನಾ ॥

ವಾತಜ ಹೃದ್ರೋಗದ ನಿದಾನ ಮತ್ತು ಲಕ್ಷಣ

(ಚ. 93)

ದುಃಖ, ಉಪವಾಸ, ವ್ಯಾಯಾಮ, ಶುಷ್ಕ ಅಥವಾ ರೂಕ್ಷ ಅಥವಾ ಅಲ್ಪವಾದ ಭೋಜನಗಳು, ಈ ಹೇತುಗಳಿಂದ ವಾಯು (ಕೋಪಗೊಂಡು) ಹೃದಯವನ್ನು ಹೊಕ್ಕು ಕಠಿಣವಾದ ವ್ಯಾಧಿಯನ್ನುಂಟುಮಾಡುತ್ತದೆ. ನಡುಕು, ಸುತ್ತು ಬಿಗಿದ ಹಾಗಿನ ನೋವು, ತಡೆ, ಬಹಳವಾದ ಕಣ್ಣುಕತ್ತಲೆ, ಶೂನ್ಯವಾಗುವಿಕೆ, ಕುಣಿಯುವದು, ಮತ್ತು ಆಹಾರ ಜೀರ್ಣವಾಗಿದ್ದ ಕಾಲದಲ್ಲಿ ವೇದನೆಯು ಅತಿಯಾಗುವದು, ಇವು ವಾತಜಹೃದ್ರೋಗದ ಲಕ್ಷಣಗಳು.

ಷರಾ ಹೃದಯುವನ್ನು ಎಳೆದು ವಿಸ್ತರಿಸಿದ ಹಾಗೆ, (ಸೂಜಿಯಿಂದ) ಚುಚ್ಚಿದ ಹಾಗೆ, (ಮಂತಿನಿಂದ) ಕಡೆದ ಹಾಗೆ, (ಗರಗಸದಿಂದ) ಸೀಳಿದ ಹಾಗೆ, (ಕತ್ತಿಯಿಂದ) ಕಡಿದ ಹಾಗೆ, (ಕುಠಾರದಿಂದ) ಪುಡಿಮಾಡಿದ ಹಾಗೆ, ಕಾಣುವ ವೇದನೆಗಳು ಉಂಟಾಗುತ್ತವೆ ಎಂತ ಸು (ಪು 816) ಕಾರಣವಿಲ್ಲದ ದೈನ್ಯತೆ, ಶೋಕ, ಭಯ, ಶಬ್ದವನ್ನು ಸಹಿಸಲಾರದಿರುವಿಕೆ, ಶ್ವಾಸದ ತಡೆ ಮತ್ತು ನಿದ್ರೆ ಕಡಿಮೆಯಾಗುವದು, ಈ ಲಕ್ಷಣಗಳು ಸಹ ಕಾಣುವವು ಎಂತ ವಾ (ಪು. 201) 'ದ್ರವಃ' ಎಂಬಲ್ಲಿ 'ದರಃ' ಎಂತಲೂ, 'ಶ್ರಮಃ' ಎಂತಲೂ ಪಾಠಾಂತರ ಇವೆ ಎಂತ ಕಾಣುತ್ತದೆ ಆಗಲೂ ಹೃದಯದ ಗತಿ ಹೆಚ್ಚುವದು ಎಂತ ಅರ್ಥ

5. ಉಷ್ಣಾಮ್ಲಲವಣಕ್ಷಾರಕಟುಕಾಜೀರ್ಣಭೋಜನೈಃ ।
ಮದ್ಯಕ್ರೋಧಾತಪೈಶ್ಚಾಶು ಹೃದಿ ಪಿತ್ತಂ ಪ್ರಕುಪ್ಯತಿ ॥
ಹೃದ್ದಾಹಸ್ತಿಕ್ತತಾ ವಕ್ತ್ರೇ ಕ್ಲಮಃ ಪಿತ್ತಾಮ್ಲಕೋದ್ಗರಃ ।
ತೃಷ್ಣಾ ಮೂರ್ಛಾ ಭ್ರಮಃ ಸ್ವೇದಃ ಪಿತ್ತಹೃದ್ರೋಗಲಕ್ಷಣಮ್ ॥

ಪಿತ್ತಜ ಹೃದ್ರೋಗದ ನಿದಾನ ಮತ್ತು ಲಕ್ಷಣ

(ಚ. 93)

ಬಿಸಿಯಾದ, ಹುಳಿಯಾದ, ಉಪ್ಪಾದ, ಕ್ಷಾರಗುಣವುಳ್ಳ, ಕಾರವಾದ ಮತ್ತು ಅಜೀರ್ಣಕರವಾದ ಭೋಜನಗಳು, ಮದ್ಯಪಾನ, (ಅತಿಯಾದ) ಸಿಟ್ಟು, ಬಿಸಿಲು, ಈ ಹೇತುಗಳಿಂದ ಹೃದಯದಲ್ಲಿ ಪಿತ್ತವು ಬೇಗನೆ ಪ್ರಕೋಪಗೊಳ್ಳುತ್ತದೆ. ಹೃದಯದಲ್ಲಿ ಉರಿ, ಬಾಯಿ ಕಹಿಯಾಗುವದು, ಕ್ಲಮ, ಪಿತ್ತದ ಹುಳಿತೇಗು, ಬಾಯಾರಿಕೆ, ಮೂರ್ಛೆ, ತಲೆತಿರುಕು, ಬೆವರುವದು, ಇವು ಪಿತ್ತಜಹೃದ್ರೋಗದ ಲಕ್ಷಣ.

ಷರಾ ಬಾಯಿಯಿಂದ ಹೊಗೆ ಬರುವದು, ಮುಖ ಒಣಗುವದು, ಹೃದಯದೊಳಗೆ ಸೆಕೆ ಸಹ, ಪಿತ್ತಜ ಹೃದ್ರೋಗದ ಲಕ್ಷಣಗಳು ಎಂತ ಸು. (ಪು 816), ಅರಸಿನ ವರ್ಣ ಉಂಟಾಗುವದು ಮತ್ತು ಜ್ವರ, ಸಹ ಇದರ ಲಕ್ಷಣಗಳಲ್ಲಿ ಸೇರಿದವು ಎಂತ ವಾ (ಪು 201)

6. ಅತ್ಯಾದಾನಂ ಗುರು ಸ್ನಿಗ್ಧಮಚಿನ್ತನಮಚೇಷ್ಟನಮ್ ।
ನಿದ್ರಾಸುಖಂ ಚಾಭ್ಯಧಿಕಂ ಕಫಹೃದ್ರೋಗಲಕ್ಷಣಮ್* ॥
ಹೃದಯಂ ಕಫಹೃದ್ರೋಗೇ ಸುಪ್ತಂ ಸ್ತಿಮಿತಭಾರಿಕಮ್ ।
ತನ್ದ್ರಾರುಚಿಪರೀತಸ್ಯ ಭವತ್ಯಶ್ಮಾವೃತಂ ಯಥಾ ॥ (ಚ. 93)

ಕಫಜ ಹೃದ್ರೋಗದ ನಿದಾನ ಮತ್ತು ಲಕ್ಷಣ

* 'ಕಾರಣಮ್' ಎಂತ ಪಾಠಾಂತರ ಉಂಟು

ಅತಿಯಾದ ಆಹಾರ, ಗುರುಭೋಜನ, ಸ್ನೇಹಯುಕ್ತವಾದ ಆಹಾರ, ಚಿಂತೆಯಿಲ್ಲದಿರುವಿಕೆ, ಶರೀರಕ್ಕೆ ಕೆಲಸವಿಲ್ಲದಿರುವಿಕೆ, ಮತ್ತು ಅತಿಯಾದ ನಿದ್ರೆಸುಖ, ಕಫಹೃದ್ರೋಗಕ್ಕೆ ಕಾರಣ. ಅದರಲ್ಲಿ ಎದೆಯು ನಿದ್ರೆಯಲ್ಲಿದ್ದ ಹಾಗೆ, ಸ್ತಬ್ಧವಾಗಿ, ಭಾರವಾಗಿ ಮತ್ತು ಕಲ್ಲಿನಿಂದ ಮುಚ್ಚಲ್ಪಟ್ಟ ಹಾಗೆ, ಇರುತ್ತದೆ; ಮತ್ತು ರೋಗಿಗೆ ಅರುಚಿ ಮತ್ತು ತಂದ್ರೆಯುಂಟಾಗುತ್ತವೆ.

ಪರಾ ಕೆಮ್ಮು, ಅಗ್ನಿಮಾಂದ್ಯ, ಉಗುಳು, ಹೆಚ್ಚು ನಿದ್ರೆ, ಮತ್ತು ಜ್ವರ ಸಹ, ಇದರ ಲಕ್ಷಣ ಎಂತ ವಾ (ಪು 202), ಬಾಯಿ ಸಿಹಿ ಆಗುವದು ಸಹ ಇದರ ಲಕ್ಷಣ ಎಂತ ಸು (ಪು 816)

ತ್ರಿದೋಷಜ ಮತ್ತು ಕ್ರಿಮಿಜ ಹೃದ್ರೋಗಗಳ ನಿದಾನ ಮತ್ತು ಲಕ್ಷಣ

7 ಹೇತುಲಕ್ಷಣಸಂಸರ್ಗಾದುಚ್ಯತೇ ಸಾನಿಪಾತಿಕಃ ।
ತ್ರಿದೋಷಜೇ ತು ಹೃದ್ರೋಗೇ ಯೋ ದುರಾತ್ಮಾ ನಿಷೇವತೇ ॥
ತಿಲಕ್ಷಾರಗುಡಾದೀನಿ ಗ್ರನ್ಥಿಸ್ತಸ್ಯೋಪಜಾಯತೇ ।
ಮರ್ಮೈಕದೇಶೇ ಸಂಕ್ಲೇದಂ ರಸಶ್ಚಾಸ್ಯೋಪಗಚ್ಛತಿ ॥
ಸಂಕ್ಲೇದಾತ್ ಕ್ರಿಮಯಶ್ಚಾಸ್ಯ ಭವನ್ತ್ಯುಪಹತಾತ್ಮನಃ ।
ಮರ್ಮೈಕದೇಶೇ ತೇ ಜಾತಾಃ ಸರ್ಪನ್ತೋ ಭಕ್ಷಯನ್ತಿ ಚ ।
ತುದ್ಯಮಾನಂ ಸ್ವಹೃದಯಂ ಸೂಚೀಭಿರಿವ ಮನ್ಯತೇ ।
ಛಿದ್ಯಮಾನಂ ಯಥಾ ಶಸ್ತ್ರೈರ್ಜಾತಕಣ್ಡೂಮಹಾರುಜಮ್ ॥
ಹೃದ್ರೋಗಂ ಕ್ರಿಮಿಜಂ ತ್ವೇತೈರ್ಲಿಂಗೈರ್ಬುದ್ಧ್ವಾ ಸುದಾರುಣಮ್ ।
ತ್ವರೇತ ಜೇತುಂ ತಂ ವಿದ್ವಾನ್ ವಿಕಾರಂ ಶೀಘ್ರಕಾರಿಣಮ್ (ಚ. 94)

ಮೇಲೆ ಹೇಳಿದ ವಾತಾದಿಜ ಹೃದ್ರೋಗಗಳ ಹೇತುಗಳು ಮತ್ತು ಲಕ್ಷಣಗಳು ಕೂಡಿಕೊಂಡಿರುವ ಹೃದ್ರೋಗವು ಸಾನ್ನಿಪಾತಿಕ ಎಂತ ಹೇಳಲ್ಪಡುತ್ತದೆ. ಆ ತ್ರಿದೋಷಜ ಹೃದ್ರೋಗ ಉಂಟಾಗಿರುವಾಗ್ಗೆ ಯಾವ ದುರಾತ್ಮನು ಎಳ್ಳು, ಕ್ಷಾರ, ಬೆಲ್ಲ ಮುಂತಾದವುಗಳನ್ನು ಸೇವಿಸುತ್ತಾನೋ, ಅವನ ಹೃದಯದ ಒಂದು ಕಡೆಯಲ್ಲಿ ಗ್ರಂಥಿ ಉತ್ಪನ್ನವಾಗುತ್ತದೆ; ಮತ್ತು ರಸಧಾತು ಸಂಕ್ಲೇದ (ಗರ್ಭೋತ್ಪತ್ತಿಯ ಆದ್ಯದ್ರವ) ರೂಪವನ್ನು ಪಡೆಯುತ್ತದೆ. ಆ ಸಂಕ್ಲೇದದಿಂದ ಹೃದಯದ ಒಂದು ಭಾಗದಲ್ಲಿ ಕ್ರಿಮಿಗಳು ಹುಟ್ಟಿ ಹರಿದು, ಆ ಪಾಪಾತ್ಮನ ಹೃದಯವನ್ನು ತಿನ್ನುತ್ತವೆ. ಆಗ್ಗೆ ಅವನಿಗೆ ತನ್ನ ಹೃದಯವು ಸೂಜಿಗಳಿಂದ ಚುಚ್ಚಲ್ಪಟ್ಟ ಹಾಗೆ ಕಾಣುತ್ತದೆ ಮತ್ತು ಶಸ್ತ್ರಗಳಿಂದ ಕಡಿದ ಹಾಗಿನ ಮಹತ್ತಾದ ನೋವೂ, ತುರಿಕೆಯೂ ಉಂಟಾಗುತ್ತವೆ. ಈ ಲಕ್ಷಣಗಳಿಂದ ಕ್ರಿಮಿಜ ಹೃದ್ರೋಗವನ್ನು ತಿಳಿದು, ಬಹು ಕಠಿಣ ಮತ್ತು ಶೀಘ್ರಕಾರಿ (ಬೇಗನೆ ಪರಿಣಾಮ ಹೊಂದುವ ಸ್ವಭಾವದ್ದು) ಆದ ಆ ವಿಕಾರವನ್ನು ಬೇಗನೆ ಜಯಿಸಲಿಕ್ಕೆ ವಿದ್ವಾಂಸನು ಪ್ರಯತ್ನಿಸತಕ್ಕದ್ದು.

ಪರಾ ವಾಕರಿಕೆ, ಉಗುಳು, ಎದೆ ಹಾರುವದು, ಕಣ್ಣುಕತ್ತಲೆ, ಅರುಚಿ, ಕಣ್ಣು ಕೆಂಪೊತ್ತಿದ ಕಪ್ಪು (ಶ್ಯಾವ) ವರ್ಣವಾಗುವದು, ಶೋಷ, ಸಹ ಕ್ರಿಮಿಜ ಹೃದ್ರೋಗದ ಲಕ್ಷಣಗಳು ಎಂತ ಸು. (ಪು 816)

ವಾತಜ ಹೃದ್ರೋಗಕ್ಕೆ ಉಪಕ್ರಮ

8. ವಾತೋಪಸೃಷ್ಟೇ ಹೃದಯೇ ವಾಮಯೇತ್ ಸ್ನಿಗ್ಧಮಾತುರಮ್ ।
ದ್ವಿಪಂಚಮೂಲಕ್ವಾಥೇನ ಸಸ್ನೇಹಲವಣೇನ ತು ॥
ಪಿಪ್ಪಲ್ಯೇಲಾವಚಾಹಿಂಗುಯವಭಸ್ಮಾನಿ ಸೈನ್ಧವಮ್ ।
ಸೌವರ್ಚಲಮಥೋ ಶುಂಠೀಮಜಮೋದಾಂ ಚ ಚೂರ್ಣಿತಮ್ ॥

ಫಲಧಾನ್ಯಾಮ್ಲಕೌಲತ್ಥದಧಿಮದ್ಯಾಸವಾದಿಭಿಃ |
ಪಾಯಯೇತ ವಿಶುದ್ಧಂ ಚ ಸ್ನೇಹೇನಾನ್ಯತಮೇನ ವಾ ||
ಭೋಜಯೇಜ್ಜೀರ್ಣಶಾಲ್ಯನ್ನಂ ಜಾಂಗಲೈಃ ಸಘೃತೈ ರಸೈಃ |
ವಾತಘ್ನಸಿದ್ಧಂ ತೈಲಂ ಚ ದದ್ಯಾದ್ವಸ್ತಿಂ ಪ್ರಮಾಣತಃ || (ಸು. 816)

ವಾತಜ ಹೃದ್ರೋಗದಲ್ಲಿ ರೋಗಿಗೆ ಸ್ನೇಹನ ಮಾಡಿ, ಸ್ನೇಹ ಮತ್ತು ಸೈಂಧವಲವಣ ಸಮೇತವಾದ ದಶಮೂಲಗಳ ಕಷಾಯದಿಂದ (ಮಂಗಾರೆಕಾಯಿಯ ಚೂರ್ಣ ಕೂಡಿಸಿ ಕೊಟ್ಟು) ವಾಂತಿ ಮಾಡಿಸಬೇಕು; ಅದರಿಂದ ದೇಹ ಶುದ್ಧವಾದ ಮೇಲೆ ಅವನಿಗೆ ಹಿಪ್ಪಲಿ, ಏಲಕ್ಕಿ, ಬಜೆ, (ಹುರಿದ) ಹಿಂಗು, ಯವಕ್ಷಾರ, ಸೈಂಧವಲವಣ, ಸೌವರ್ಚಲಲವಣ (ಕರಿ ಉಪ್ಪು) ಮತ್ತು ಅಜಮೋದ, ಇವುಗಳ ಚೂರ್ಣವನ್ನು ಮುರ್ಗಿನ ಹುಳಿಯ ಸಾರು, ಹುಳಿ ಗಂಜಿನೀರು, ಹುರುಳಿಯ ಕಷಾಯ, ಮೊಸರು, ಮದ್ಯ, ಆಸವ ಮುಂತಾದ ದ್ರವಗಳೊಂದಿಗೆ, ಅಥವಾ ಸ್ನೇಹಗಳೊಳಗೆ ಒಂದರೊಂದಿಗೆ, ಕಲಸಿ ಕುಡಿಸಬೇಕು; ಭೋಜನಕ್ಕೆ ಹಳೇ ಶಾಲ್ಯಕ್ಕಿ ಅನ್ನವನ್ನು ಜಾಂಗಲ ಮಾಂಸಗಳ ರಸಗಳೊಂದಿಗೆ ತುಪ್ಪ ಕೂಡಿಸಿ ಕೊಡಬೇಕು, ಮತ್ತು ವಾತ ಹರವಾದ ಔಷಧಗಳಿಂದ ತಯಾರಿಸಲ್ಪಟ್ಟ ತೈಲವನ್ನು ಪಾನಕ್ಕೂ ವಸ್ತಿಗೂ ಪ್ರಮಾಣವರಿತು ಉಪಯೋಗಿಸತಕ್ಕದ್ದು.

ಷರಾ 'ಫಲ' ಎಂದರೆ ಮಾದಳ ಮುಂತಾದ ಫಲಗಳ ರಸ ಎಂತ ನಿ ಸಂ ವ್ಯಾ (ಪು 622) ಆದರೆ 'ಫಲಾಮ್ಲ' ಎಂತ ಮುರ್ಗಿನಹುಳಿಗೆ ಹೆಸರು ಉಂಟು, ಮತ್ತು ಅದಕ್ಕೆ ಹೃದ್ರೋಗ ಪರಿಹರಿಸುವ ಗುಣ ಹೇಳಲ್ಪಟ್ಟದೆ 'ಮದ್ಯಾಸವಾದಿ' ಎಂಬಲ್ಲಿ 'ಮಧ್ವಾಸವಾದಿ' ಎಂತ ಪಾಠಾಂತರವಿದೆ. 'ಮಧ್ವಾಸವ' ಎಂದರೆ ಇಪ್ಪೆಹೂವಿನಿಂದ ತಯಾರಿಸಲ್ಪಟ್ಟ ಆಸವ. ಅದರಲ್ಲಿ ವಾತಹರ ಗುಣವಿಲ್ಲ

ಚರಕನು ಕಫಜ ಹೃದ್ರೋಗದಲ್ಲಿ ಮಾತ್ರ ವಮನವನ್ನು ಹೇಳಿದ್ದಾನೆ. ಅನಂತರದ ಗ್ರಂಥಕಾರರಲ್ಲಿ ಕೆಲವರು ಚರಕನ ಮತವನ್ನು, ಬೇರೆ ಕೆಲವರು ಸುಶ್ರುತನ ಮತವನ್ನು ಅನುಸರಿಸಿದ್ದಾರೆ ಕಫಾನುಬಂಧವಿಲ್ಲದಿದ್ದರೆ ಮತ್ತು ರೋಗಿಯು ಅಬಲಿಯಾಗಿದ್ದರೆ ವಮನ ಪ್ರಶಸ್ತವಲ್ಲ ತೀಕ್ಷ್ಣವಾದ ವಮನ ಸರ್ವದಾ ನಿಷಿದ್ಧ ಕೆಳಗಿನ 14ನೇ ಸಂಖ್ಯೆ ನೋಡಿ

ಹೃದ್ರೋಗೇ ವಾತಜೇ ತೈಲಂ ಮಸ್ತುಸೌವೀರತಕ್ರವತ್ |
ಪಿಬೇತ್ಸುಖೋಷ್ಣಂ ಸವಿಡಂ ಗುಲ್ಮಾನಾಹಾರ್ತಿಜಿಚ್ಚ ತತ್ ||
ತೈಲಂ ಚ ಲವಣೈಸ್ಸಿದ್ಧಂ ಸಮೂತ್ರಾಮ್ಲಂ ತಥಾಗುಣಮ್ || (ವಾ. 292)

ವಾತಜ ಹೃದ್ರೋಗದಲ್ಲಿ ತೈಲವನ್ನು (ಹುಳಿ)ಮೊಸರನೀರು, ಹುಳಿಗಂಜಿನೀರು ಮತ್ತು ಮಜ್ಜಿಗೆಯೊಂದಿಗೆ, ವಿಡಾಲವಣವನ್ನು ಕೂಡಿಸಿಕೊಂಡು ಸುಖೋಷ್ಣವಾಗಿ ಕುಡಿಯಬೇಕು, ಅದರಿಂದ ಗುಲ್ಮ-ಆನಾಹಗಳ ಪೀಡೆ ಸಹ ಪರಿಹಾರವಾಗುವದು. ಗೋಮೂತ್ರ ಮತ್ತು (ಹುಳಿಗಂಜಿನೀರು ಮುಂತಾದ) ಹುಳಿ ದ್ರವಗಳಲ್ಲಿ (ಪಂಚ)ಲವಣಗಳನ್ನು ಸೇರಿಸಿ ಕಾಯಿಸಲ್ಪಟ್ಟ ತೈಲ ಅದೇ ಗುಣವುಳ್ಳದ್ದು.

ಷರಾ ಚರಕನು ವಿಡಾಲವಣದ ಸ್ಥಾನದಲ್ಲಿ ಲವಣವನ್ನು (ಸೈಂಧವಲವಣವನ್ನು) ಹೇಳಿದ್ದಾನೆ 2ನೇ ಯೋಗದಲ್ಲಿ 'ಮೂತ್ರಾಮ್ಲ' ಎಂಬಲ್ಲಿ 'ಮೂತ್ರಾಮ್ಬು' ಎಂತ ಚ. (ಪು. 749) ಅದರ ಪ್ರಕಾರ ಹುಳಿ ದ್ರವಗಳ ಬದಲಾಗಿ ಬರೇ ನೀರನ್ನು ಕೂಡಿಸಿದರೆ ಸಾಕೆಂತ ಅರ್ಥವಾಗುತ್ತದೆ

9. ಪುನರ್ನವಾಂ ದಾರು ಸಪಂಚಮೂಲೇ(?ಲಾಂ) ರಾಸ್ನಾಂ ಯವಾನ್ ಬಿಲ್ವ-ಕುಲತ್ಥಕೋಲಮ್ |

ಪುನರ್ನವಾದಿ ತೈಲ

ಪಕ್ತ್ವಾ ಜಲೇ ತೇನ ವಿಪಾಚ್ಯ ತೈಲಮಭ್ಯಂಗಪಾನೇ ಽನಿಲಹೃದ್ಗದೋಽಯಮ್ (?ದಘ್ನಮ್) || (ಚ. 749)

ಪುನರ್ನವಿಬೇರು, ದೇವದಾರ, ಪಂಚಮೂಲ, ರಾಸ್ಮೆಗಡ್ಡೆ (ಅರತೆ), ಯವೆಗೋದಿ, ಬಿಲ್ವ ಪತ್ರೆ, ಹುರುಳಿ, ಬೊಗರಿ, ಇವುಗಳ ಕಷಾಯದಲ್ಲಿ ಪಾಕಮಾಡಿದ ತೈಲವು, ಅಭ್ಯಂಗನಕ್ಕೂ ಪಾನಕ್ಕೂ ಉಪಯೋಗಿಸುವದರಿಂದ, ವಾತಜ ಹೃದ್ರೋಗವನ್ನು ನಾಶಮಾಡುವದು.

ಪರಾ ಈ ತೈಲವನ್ನು ನಸ್ಯಕ್ಕೂ, ಪಾನಕ್ಕೂ, ವಸ್ತಿಗೂ ಉಪಯೋಗಿಸುವದಾಗಿ ವಾ (ಪು 292) ಆವನು ಸ್ಪಷ್ಟ ವಾಗಿ ಒಂದೇ ಪಂಚಮೂಲವನ್ನು ಹೇಳಿದ್ದಾನೆ

10. ಹರೀತಕ್ಯಾದಿ ಘೃತ

ಹರೀತಕೀನಾಗರಪುಷ್ಕರಾಹ್ವೈರ್ವಯಃಕಯಸ್ಥಾಲವಣೈಶ್ಚ ಕಲ್ಕೈಃ |
ಸಹಿಂಗುಭಿಃ ಸಾಧಿತಮಗ್ರ್ಯಸರ್ಪಿರ್ಗುಲ್ಮೇ ಸಹೃತ್ಪಾರ್ಶ್ವಗದೇ
ऽನಿಲೋತ್ಥೇ || (ಚ. 749)

ಅಣಿಲೆಕಾಯಿ, ಶುಂಠಿ, ಪುಷ್ಕರಮೂಲ, ಕ್ಷೀರಕಾಕೋಲಿ, ಕಾಕೋಲಿ, ಸೈಂಧವಲವಣ, ಹಿಂಗು, ಇವುಗಳ ಕಲ್ಕದಿಂದ ಸಾಧಿಸಿದ ತುಪ್ಪವು ವಾತದಿಂದ ಉಂಟಾದ ಗುಲ್ಮ, ಎದೆರೋಗ ಮತ್ತು ಪಾರ್ಶ್ವಶೂಲೆಗಳಲ್ಲಿ ಶ್ರೇಷ್ಠವಾದದ್ದು

ಪರಾ 'ವಯಃಕಯಸ್ಥಾ' ಎಂಬದಕ್ಕೆ ಅಮೃತಬಳ್ಳಿಯ ಸ್ವರಸವನ್ನು ತೆಗೆದುಕೊಳ್ಳುವದು ಎಂತ ಅ ದೀ (ಪು 581) ಆದರೆ ವಾ ನು ಈ ಯೋಗವನ್ನು ಬರೆಯುವಲ್ಲಿ ವಯಸ್ಥಾ, ಕಾಯಸ್ಥಾ ಎಂಬ ಎರಡು ದ್ರವ್ಯಗಳನ್ನು ಪ್ರತ್ಯೇಕವಾಗಿ ಹೇಳಿದ್ದಾನೆ ಕಯಸ್ಥಾ ಎಂಬ ಹೆಸರು ಕಾಕೋಲಿಗೆ ಮಾತ್ರ ಕಾಯಸ್ಥಾ ಎಂಬದು ಆದಕ್ಕೂ, ಎರಡು ಜಾತಿ ಏಲಕ್ಕಿ ಮುಂತಾದ ಅನೇಕ ಬೇರೆ ದ್ರವ್ಯಗಳಿಗೂ, ಹೆಸರಾಗಿದೆ. ವಯಸ್ಥಾ ಎಂಬದು ಕ್ಷೀರಕಾಕೋಲಿ, ಸಣ್ಣ ಏಲಕ್ಕಿ ಮುಂತಾದ ಅನೇಕ ದ್ರವ್ಯಗಳಿಗೆ ಉಪಯೋಗಿಸಲ್ಪಡುವ ಹೆಸರು ಕಾಕೋಲಿ, ಕ್ಷೀರಕಾಕೋಲಿ, ಎಂಬ ಎರಡು ದ್ರವ್ಯಗಳನ್ನು ಅಥವಾ ಏಲಕ್ಕಿ, ಸಣ್ಣ ಏಲಕ್ಕಿ ಎಂಬ ಎರಡು ದ್ರವ್ಯಗಳನ್ನು ಚ ನು ಹೇಳಿದ್ದಾಗಿರಬೇಕು ಮೊದಲಿನ ಎರಡು ದ್ರವ್ಯಗಳು ಲಭ್ಯವಲ್ಲದರಿಂದ ಏಲಕ್ಕಿ, ಸಣ್ಣ ಏಲಕ್ಕಿಗಳನ್ನು ಉಪಯೋಗಿಸುವದೇ ಒಳ್ಳೇದು ದ್ರವ ಹೇಳಲ್ಪಡದಿರುವದರಿಂದ ನೀರನ್ನು ಪಾಕಕ್ಕೆ ವಿಧಿಪ್ರಕಾರ ಸೇರಿಸಬೇಕು

11. ಪುಷ್ಕರಾದಿ ಕಲ್ಕ.

ಸಪುಷ್ಕರಾಹ್ವಂ ಫಲಪೂರಮೂಲಂ ಮಹೌಷಧಂ ಶಟ್ಯಭಯಾ ಚ
ಕಲ್ಕಾಃ |
ಕ್ಷಾರಾಮ್ಬುಸರ್ಪಿರ್ಲವಣೈರ್ವಿಮಿಶ್ರಾಃ ಸ್ಯುರ್ವಾತಹೃದ್ರೋಗವಿಕರ್ತಿ-
ಕಾಘ್ನಾಃ || (ಚ. 749)

ಪುಷ್ಕರಮೂಲ, ಮಾದಳದ ಬೇರು, ಶುಂಠಿ, ಕಚೋರ, ಅಣಿಲೆಕಾಯಿ, ಇವುಗಳ ಚೂರ್ಣವನ್ನು ನೀರಿನಿಂದ ಅರೆದು, ಯವಕ್ಷಾರ, ತುಪ್ಪ, ಮತ್ತು ಸೈಂಧವಲವಣ ಕೂಡಿಸಿ ಮಾಡಲ್ಪಟ್ಟ ಕಲ್ಕಗಳು ವಾತ ಹೃದ್ರೋಗವನ್ನೂ ವಿಕರ್ತಿಕಾ (ಕತ್ತರಿಯಿಂದ ಕತ್ತರಿಸಿದ ಹಾಗಿನ) ಶೂಲೆಯನ್ನೂ ನಾಶಮಾಡುವವು.

ಪರಾ ನೀರಿನ ಸ್ಥಾನದಲ್ಲಿ (ಮಾದಳದ ಹುಳಿ, ಹುಳಿಗಂಜಿನೀರು ಮುಂತಾದ) ಹುಳಿಯನ್ನು ಕೂಡಿಸಬೇಕೆಂತ ವಾ ನ ಪಾಠ ಪ್ರಕಾರ ಅರ್ಥವಾಗುತ್ತದೆ (ಪು 292)

12. ಪೌಷ್ಕರಾದಿ ಕಷಾಯ

ಕ್ವಾಥಃ ಕೃತಃ ಪೌಷ್ಕರಮಾತುಲುಂಗಪಲಾಶಭೂತೀಕಶಟೀಸುರಾಹ್ವೈಃ |
ಸಶುಂಠ್ಯಜಾಜೀ ದ್ವಿವಚಾ ಯವಾನೀ ಸಕ್ಷಾರ ಉಷ್ಣೋ ಲವಣಶ್ಚ
ಪೇಯಃ || (ಚ. 749)

ಪುಷ್ಕರಮೂಲ, ಮಾದಳದ ಬೇರು, ಪಲಾಶ, ಸಂಬಾರ ಹುಲ್ಲು (ಮಲ. ನಾಸ್ಮುಕಪುಲ್ಲು), ಕಚೋರ, ದೇವದಾರ, ಶುಂಠಿ, ಜೀರಿಗೆ, ಬಜೆ, ಬಿಳೀ ಬಜೆ, ಓಮ, ಯವ

ಕ್ಷಾರ, ಮತ್ತು ಸೈಂಧವಲವಣ, ಇವುಗಳ ಕಷಾಯವನ್ನು ಬಿಸಿಯಾಗಿ ಕುಡಿಯುವದರಿಂದ, ವಾತಜ ಹೃದ್ರೋಗ ಪರಿಹಾರವಾಗುವದು.

13. ಸ್ಯಾತ್ ತ್ರ್ಯೂಷಣಂ ದ್ವೇ ತ್ರಿಫಲೇ ಸಪಾರೇ ನಿದಿಗ್ಧಿಕಾಗೋಕ್ಷುರಕೌ ಬಲೇ ದ್ವೇ ।

ತ್ರ್ಯೂಷಣಾದಿ ಘೃತ

ಋದ್ಧಿಸ್ತ್ರುಟಿಸ್ತಾಮಲಕೀಸ್ವಗುಪ್ತಾ ಮೇದೇ ಮಧೂಕಂ ಮಧುಕಂ ಸ್ಥಿರಾ ಚ ॥
ಶತಾವರೀ ಜೀವಕಪೃಶ್ನಿಪರ್ಣ್ಯೌ ದ್ರವ್ಯೈರಿಮೈರಕ್ಷಸಮೈಃ ಸುಪಿಷ್ಟೈಃ ।
ಪ್ರಸ್ಥಂ ಘೃತಸ್ಯೇಹ ಪಚೇದ್ವಿಧಿಜ್ಞಃ ಪ್ರಸ್ಥೇನ ದಧ್ನಸ್ತ್ವಥ ಮಾಹಿಷಸ್ಯ ॥
ಮಾತ್ರಾಂ ಪಲಂ ಚಾರ್ಧಪಲಂ ಪಿಚುಂ ವಾ ಪ್ರಯೋಜಯೇನ್ಮಾಕ್ಷಿಕ ಸಂಪ್ರಯುಕ್ತಮ್ ।
ಶ್ವಾಸೇ ಸಕಾಸೇ ತ್ವಥ ಪಾಣ್ಡುರೋಗೇ ಹಲೀಮಕೇ ಹೃದ್ಗ್ರಹಣೀಪ್ರ-ದೋಷೇ ॥ (ಚ. 719)

ತ್ರಿಕಟು, ತ್ರಿಫಲೆ, ಪರೂಷಕಹಣ್ಣು, ಕಾಶ್ಮೀರಿ(ಶಿವನಿ)ಹಣ್ಣು, ದ್ರಾಕ್ಷೆ, ಪಾಡಾವಳಿ ಗಡ್ಡೆ, ಕಿರಿಗುಳ್ಳದ ಬೇರು, ನೆಗ್ಗಿಲಮುಳ್ಳು, ಕಲ್ಲಂಗಡಲೆಬೇರು, ಹೆಗ್ಗಲ್ಲಂಗಡಲೆ(ಆನೆ ಕಡೀರು)ಬೇರು, ಋದ್ಧಿ, ಸಣ್ಣ ಏಲಕ್ಕಿ, ನೆಲನೆಲ್ಲಿ, ನಾಯಿಸೊಣಗಿನ (ನಸುಗುನ್ನಿ) ಬೇರು, ಮೇದೆ, ಮಹಾಮೇದೆ, ಇಪ್ಪೆಹೂವು, ಜ್ಯೇಷ್ಠಮಧು, ಮೂವೆಲೆಬೇರು, ಶತಾವರಿಬೇರು, ಜೀವಕ, ಓರೆಲೆಬೇರು, ಇವುಗಳನ್ನೆಲ್ಲಾ ಒಂದು ಕರ್ಷ ಪ್ರಕಾರ ತೆಗೆದುಕೊಂಡು, ಚೂರ್ಣ ಮಾಡಿ, ಆ ಚೂರ್ಣದ ಕಲ್ಕದಿಂದ ಒಂದು ಪ್ರಸ್ಥ ತುಪ್ಪವನ್ನು, ಒಂದು ಪ್ರಸ್ಥ ಎಮ್ಮೆ ಮೊಸರು ಕೂಡಿಸಿಕೊಂಡು, ಕಾಯಿಸಿ ಪಾಕಮಾಡಿ ಹಿಂಡಿ ಇಟ್ಟುಕೊಂಡ ತುಪ್ಪದಿಂದ, ಒಂದು ಪಲ, ಅರ್ಧ ಪಲ, ಅಥವಾ ಒಂದು ಕರ್ಷ ಪ್ರಕಾರ, ಜೇನು ಸಹಿತವಾಗಿ, ಪ್ರಯೋಗಿಸುತ್ತಾ ಬರುವದರಿಂದ ಉಬ್ಬಸ, ಕೆಮ್ಮು, ಪಾಂಡುರೋಗ, ಹಲೀಮಕ, ಹೃದ್ರೋಗ ಮತ್ತು ಗ್ರಹಣೀದೋಷ ಪರಿಹಾರವಾಗುವವು.

ಪರಾ ಎರಡನೇ ತ್ರಿಫಲೆಯಾದ ಸ್ವಾದು ತ್ರಿಫಲೆ ಎಂಬದು ದ್ರಾಕ್ಷಿ, ಖರ್ಜೂರ ಮತ್ತು ದಾಳಿಂಬ ಎಂತಲೂ, ದ್ರಾಕ್ಷೆ, ಖರ್ಜೂರ, ಶಿವನೀ ಹಣ್ಣು ಎಂತಲೂ ಪಕ್ಷಗಳಿವೆ (ಧ ನಿ 299) 2ನೇ ತ್ರಿಫಲೆಯನ್ನು ಬಿಟ್ಟು, ಗುಳ್ಳದ ಬೇರನ್ನು ಸೇರಿಸಿ ಈ ಯೋಗವನ್ನು ಬರೆದಿರುವದು ಕಾಣುತ್ತದೆ (ಅ ಸಂ. II–160)

14. ದೀಪ್ತೇಽಗ್ನೌ ಸದ್ರವಾಯಾಮೇ ಹೃದ್ರೋಗೇ ವಾತಿಕೇ ಹಿತಮ್ ।

ಪಥ್ಯಾಹಾರ

ಕ್ಷೀರಂ ದಧಿ ಗುಡಃ ಸರ್ಪಿರೌದಕಾನೂಪಮಾಮಿಷಮ್ ॥
ಏತಾನ್ಯೇವ ಚ ವರ್ಜ್ಯಾನಿ ಹೃದ್ರೋಗೇಷು ಚತುರ್ಷ್ವಪಿ ।
ಶೇಷೇಷು ಸ್ತಮ್ಭಜಾಡ್ಯಾಮಸಂಯುಕ್ತೇಽಪಿ ಚ ವಾತಿಕೇ ॥
ಕಫಾನುಬನ್ಧೇ ತಸ್ಮಿಂಸ್ತು ರೂಕ್ಷೋಷ್ಣಾಮಾಚರೇತ್ ಕ್ರಿಯಾಮ್ ॥
(ವಾ. 293)

ಹಾರುವಿಕೆ ಅಥವಾ ಕುಣಿಯುವಿಕೆ ಮತ್ತು ಸೆಳೆಯುವಿಕೆ ಇರುವ ವಾತಜ ಹೃದ್ರೋಗದಲ್ಲಿ ಅಗ್ನಿಯು ಚುರುಕಾಗಿದ್ದರೆ, ಹಾಲು, ಮೊಸರು, ಬೆಲ್ಲ, ತುಪ್ಪ, ಆನೂಪಮಾಂಸ, ಮತ್ತು

ಜಲಚರ ಮಾಂಸ ಹಿತ; ಇವೇ ಇತರ ನಾಲ್ಕು ಹೃದ್ರೋಗಗಳಲ್ಲಿಯೂ, ಸ್ತಬ್ಧತೆ, ಜಾಡ್ಯ ಅಥವಾ ಆಮ ಯುಕ್ತವಾದ ವಾತಜ ಹೃದ್ರೋಗದಲ್ಲಿಯೂ, ವರ್ಜ್ಯಮಾಡಬೇಕಾದಂಥವು (ಅಹಿತ). ವಾತಿಕ ಹೃದ್ರೋಗದಲ್ಲಿ ಕಫಾನುಬಂಧವಿದ್ದರೆ ರೂಕ್ಷವಾದ ಮತ್ತು ಉಷ್ಣವಾದ ಪ್ರತಿಕ್ರಿಯೆಗಳನ್ನು ನಡಿಸತಕ್ಕದ್ದು.

ಪರಾ ದೋಷವಿಚಾರದಿಂದ ಔಷಧಗಳನ್ನು ಸೇರಿಸಿ ಕಾಯಿಸಲ್ಪಟ್ಟ ಹಾಲು-ತುಪ್ಪಗಳಿಗೆ ಈ ನಿಷೇಧವು ತಗಲ ತಕ್ಕದ್ದಲ್ಲ

15. ಬಲಾತೈಲಂ ಸಹೃದ್ರೋಗಃ ಪಿಬೇದ್ವಾ ಸುಕುಮಾರಕಮ್ |
ಯಷ್ಟ್ಯಾಹ್ವಾ ಶತಪಾಕಂ ವಾ ಮಹಾಸ್ನೇಹಂ ತಥೋತ್ತಮಮ್ ||
ರಾಸ್ನಾಜೀವಕಜೀವನ್ತೀಬಲಾವ್ಯಾಘ್ರೀಪುನರ್ನವೈಃ |
ಭಾರ್ಙ್ಗೀಸ್ಥಿರಾವಚಾವ್ಯೋಷೈರ್ಮಹಾಸ್ನೇಹಂ ವಿಪಾಚಯೇತ್ |
ದಧಿಪಾದಂ ತಥಾಮ್ಲೈಶ್ಚ ಲಾಭತಃ ಸ ನಿಷೇವಿತಃ |
ತರ್ಪಣೋ ಬೃಂಹಣೋ ಬಲ್ಯೋ ವಾತಹೃದ್ರೋಗನಾಶನಃ || (ವಾ. 293)

ಪಾನಕ್ಕೆ ಪ್ರಶಸ್ತ ಸ್ನೇಹಗಳು

ಹೃದ್ರೋಗವುಳ್ಳವನು (ವಾತವ್ಯಾಧಿ ಪ್ರಕರಣದಲ್ಲಿ ವರ್ಣಿಸಲ್ಪಟ್ಟ) ಬಲಾತೈಲವನಾಗಲಿ, (ವೃದ್ಧಿಚಿಕಿತ್ಸೆಯಲ್ಲಿ ವಿವರಿಸಲ್ಪಟ್ಟ) 'ಸುಕುಮಾರ' ರಸಾಯನವನ್ನಾಗಲಿ, ಜ್ಯೇಷ್ಠ ಮಧುವಿನ ಶತಪಾಕವನ್ನಾಗಲಿ ಕುಡಿಯಬೇಕು. (ಮುಂದೆ ವರ್ಣಿಸಿದಂತೆ ಕಾಯಿಸಲ್ಪಟ್ಟ) ಮಹಾಸ್ನೇಹವು (ತುಪ್ಪ, ಮಜ್ಜೆ, ವಸೆ ಮತ್ತು ಎಳ್ಳೆಣ್ಣೆ ಕೂಡಿದ ಚತುಃಸ್ನೇಹ) ಉತ್ತಮವಾದದ್ದು. ರಾಸ್ನೆಗಡ್ಡೆ, ಜೀವಕ, ಜೀವಂತಿಗಡ್ಡೆ, ಕಲ್ಲಂಗಡಲೆಬೇರು, ಕಿರಿಗುಳ್ಳದ ಬೇರು, ಪುನರ್ನವಿಬೇರು, ಗಂಟುಭಾರಂಗಿ (ನಿರ್ವಿಷದ ಬೇರು), ಮೂವೆಲೆಬೇರು, ಬಜೆ, ತ್ರಿಕಟು, ಇವುಗಳ ಕಲ್ಕದಿಂದ ಚತುಃಸ್ನೇಹವನ್ನು, ನಾಲ್ಕು ಪಾಲು ಮೊಸರನ್ನೂ, ದೊರಕಿದ (ಮಾದಳ ಹುಳಿ ಮುಂತಾದ) ಹುಳಿಗಳನ್ನೂ ಕೂಡಿಸಿ, ಕಾಯಿಸಿಟ್ಟುಕೊಂಡು, (ತಕ್ಕ ಪ್ರಮಾಣದಲ್ಲಿ) ಸೇವಿಸುವದರಿಂದ ತರ್ಪಣ ಉಂಟಾಗುತ್ತದೆ, ಪುಷ್ಟಿಯಾಗುತ್ತದೆ, ಬಲ ಬರುತ್ತದೆ ಮತ್ತು ವಾತಜಹೃದ್ರೋಗ ನಾಶವಾಗುತ್ತದೆ.

ಪರಾ ಹುಳಿ ದ್ರವಗಳು ಒಟ್ಟುಸೇರಿ ಮಹಾ ಸ್ನೇಹಕ್ಕೆ ಸಮಪಾಲು

16. ಪ್ರಯೋಜ್ಯಂ ವಾತಹೃದ್ರೋಗೇ ಪಯೋ ವೈರಣ್ಡಸಾಧಿತಮ್ ||
(ವೈ. ಸಾ ಸಂ. 185)

ಹಾಲುಕಷಾಯ

ವಾತಹೃದ್ರೋಗದಲ್ಲಿ ಹರಳು ಬೇರಿನಿಂದ ತಯಾರಿಸಲ್ಪಟ್ಟ ಹಾಲುಕಷಾಯವನ್ನು ಪ್ರಯೋಗಿಸತಕ್ಕದ್ದು.

17. ದಶಮೂಲಬಲಾಮಹೌಷಧಾನಾಂ ಪ್ರಪಿಬೇದದ್ರಿಜತುಪ್ರಗಾಢಮಮ್ಭಃ |
ಪವನೋತ್ತರಹೃದ್ವ್ಯಥೋರುರೋಗಶ್ವಸನೋರು (?ರಃ) ಕ್ಷತಗುಲ್ಮಶೂಲತಪ್ತಃ || (ವೈ. ಸಾ. ಸಂ. 186)

ಶಿಲಾಜತುವಿನ ಉಪಯೋಗ

ದಶಮೂಲಗಳು, ಕಲ್ಲಂಗಡಲೆಬೇರು, ಶುಂಠಿ, ಇವುಗಳ ಕಷಾಯದಲ್ಲಿ ಶಿಲಾಜತುವನ್ನು ಕೂಡಿಸಿಕೊಂಡು, ಅದನ್ನು ಪಾನಮಾಡುವದರಿಂದ, ವಾತದೋಷ ಪ್ರಧಾನವಾದ ಹೃದ್ರೋಗ ಎಂಬ ಮಹಾವ್ಯಾಧಿ, ಉಬ್ಬಸ, ಉರಃಕ್ಷತ ಮತ್ತು ಗುಲ್ಮದ ಶೂಲೆ, ಇವುಗಳ ಪೀಡೆಯು ಪರಿಹಾರವಾಗುತ್ತದೆ.

18. ಶ್ರೀಪರ್ಣೀಮಧುಕಕ್ಷೌದ್ರಸಿತೋತ್ಪಲಜಲೈರ್ವಮೇತ್ |
ಪಿತ್ತೋಪಸೃಷ್ಟೇ ಹೃದಯೇ ಸೇವೇತ ಮಧುರೈಃ ಶೃತಮ್ ||
ಘೃತಂ ಕಷಾಯಾಂಶ್ಚೋದ್ದಿಷ್ಟಾನ್ ಪಿತ್ತಜ್ವರವಿನಾಶನಾನ್ |
ತೃಪ್ತಸ್ಯ ಚ ರಸೈರ್ಮುಖ್ಯೈರ್ಜಾಂಗಲೈಃ ಸಘೃತೈರ್ಭಿಷಕ್ ||
ಸಕ್ಷೌದ್ರಂ ವಿತರೇದ್ಬಸ್ತಿಂ ತೈಲಂ ಮಧುಕಸಾಧಿತಮ್ || (ಸು. 816-817)

ಪಿತ್ತಜ ಹೃದ್ರೋಗಕ್ಕೆ ಉಪಕ್ರಮ

ಪೈತ್ತಿಕಹೃದ್ರೋಗದಲ್ಲಿ ಕಾಶ್ಮೀರ(ಶಿವನ್ನಿ), ಜ್ಯೇಷ್ಠಮಧು, ನೈದಿಲೆ, ಇವುಗಳ ಕಷಾಯದ ನೀರಿನಲ್ಲಿ, ಜೇನು ಸಕ್ಕರೆ ಸಹಿತವಾಗಿ, ವಮನ ಔಷಧಿ (ಮಂಗಾರೆಕಾಯಿ) ಕೊಟ್ಟು ವಾಂತಿ ಮಾಡಿಸತಕ್ಕದ್ದು. ಅನಂತರ ಸಿಹಿ ದ್ರವ್ಯಗಳ ಕಷಾಯವನ್ನು ಕೂಡಿಸಿ ಪಾಕಮಾಡಿದ ಘೃತವನ್ನೂ, ಪಿತ್ತಜ್ವರಹರವಾಗಿ ಹೇಳಲ್ಪಟ್ಟ ಕಷಾಯಗಳನ್ನೂ, ಸೇವಿಸತಕ್ಕದ್ದು. ತುಪ್ಪವನ್ನು ಸೇರಿಸಿ ಮಾಡಿದ ಮುಖ್ಯವಾದ (ಜಿಂಕೆ ಮೊದಲಾದ) ಜಾಂಗಲಮಾಂಸಗಳ ರಸಗಳಿಂದ ರೋಗಿಯನ್ನು ತೃಪ್ತಿಪಡಿಸಿದನಂತರ, ಜ್ಯೇಷ್ಠಮಧುವಿನಿಂದ (ಅಂದರೆ ಅದರ ಕಷಾಯ-ಕಲ್ಕಗಳಿಂದ) ಪಾಕಮಾಡಿದ ತೈಲಕ್ಕೆ ಜೇನುಕೂಡಿಸಿ, ಅದರಿಂದ ವೈದ್ಯನು ವಸ್ತಿಯನ್ನು ಕೊಡತಕ್ಕದ್ದು.

ಪರಾ ವಾಂತಿಮಾಡಿಸುವ ವಿಷಯದಲ್ಲಿ ಹಿಂದೆ 8ನೇ ಸಂಖ್ಯೆಯ ಅಡಿಯಲ್ಲಿ ಬರೆದ ಪರಾ ನೋಡಿ 'ಉತ್ಪಲ' ಎಂಬಲ್ಲಿ 'ಗುಡ ಎಂಬ ಪಾಠಾಂತರವಿದೆ' (ಚಿ. ಸಾ ಸಂ. 448) ಆ ಪ್ರಕಾರ ನೈದಿಲೆ ಬಿಟ್ಟು ಸಕ್ಕರೆಯೊಂದಿಗೆ ಬೆಲ್ಲ ಹಾಕಿಕೊಳ್ಳ ಬೇಕೆಂತ ಅರ್ಥವಾಗುತ್ತದೆ. ಅದು ಯುಕ್ತವಾಗಿ ಕಾಣುವದಿಲ್ಲ

ಶೀತಾಃ ಪ್ರದೇಹಾಃ ಪರಿಷೇಚನಂ ಚ ತಥಾ ವಿರೇಕೋ ಹೃದಿ ಪಿತ್ತ-
ದುಷ್ಟೇ |
ದ್ರಾಕ್ಷಾಸಿತಾಕ್ಷೌದ್ರಪರೂಷಕೈಃ ಸ್ಯಾಚ್ಛುದ್ಧೇ ತು ಪಿತ್ತಾಪಹಮನ್ನ-
ಪಾನಮ್ || (ಚ. 749)

ಪೈತ್ತಿಕಹೃದ್ರೋಗದಲ್ಲಿ ಶೀತವಾದ ಲೇಪಗಳು, ಪರಿಷೇಚನ (ಚಿಮುಕಿಸುವದು, ಧಾರೆ ಹಿಡಿಯುವದು ಅಥವಾ ಒದ್ದೆವಸ್ತ್ರದಿಂದ ಒತ್ತಡ), ಮತ್ತು ದ್ರಾಕ್ಷೆ, ಸಕ್ಕರೆ, ಜೇನು, ಪರೂಷಕ, ಇವುಗಳನ್ನು ಕೂಡಿಸಿದ ವಿರೇಚನ ಸಹ ಹಿತವಾಗುವವು. ದೇಹ ಶುದ್ಧವಾದ ಮೇಲೆ ಪಿತ್ತಹರವಾದ ಅನ್ನಪಾನಗಳನ್ನು ಕೊಡತಕ್ಕದ್ದು.

ಪರಾ ಕೆಳಗಿನ 27ನೇ ಸಂಖ್ಯೆಯಲ್ಲಿ ವಿರೇಚನ ವಿಷಯವಾಗಿ ಕೊಟ್ಟ ಉಪದೇಶ ನೋಡಿ

ಯಷ್ಟ್ಯಾಹ್ವಕಾತಿಕ್ತಕರೋಹಿಣೀಭ್ಯಾಂ ಕಲ್ಕಂ ಪಿಬೇಚ್ಚಾಪಿ ಸಿತಾಜಲೇನ |
ಕ್ಷತೇಷು ಸರ್ಪೀಂಷಿ ಹಿತಾನಿ ಸರ್ಪಿರ್ಗುಡಾಶ್ಚ ಯೇ ತಾನ್ ಪ್ರಸಮೀಕ್ಷ್ಯ
ಸಮ್ಯಕ್ ||
ದದ್ಯಾತ್ ಭಿಷಕ್ ಧನ್ವರಸಾಂಶ್ಚ ಗವ್ಯಕ್ಷೀರಾಶಿನಾಂ ಪಿತ್ತಹೃದಾಮ-
ಯೇಷು |
ತೈರೇವ ಸರ್ವೇ ಪ್ರಶಮಂ ಪ್ರಯಾನ್ತಿ ಪಿತ್ತಾಮಯಾಃ ಶೋಣಿತ-
ಸಂಶ್ರಯಾ ಯೇ || (ಚ. 749)

ಜ್ಯೇಷ್ಠಮಧು ಮತ್ತು ಕಟುಕರೋಹಿಣಿಯನ್ನು ಚೂರ್ಣಿಸಿ, ನೀರಿನಿಂದ ಅರೆದು ಸಕ್ಕರೆ ಕೂಡಿಸಿ ಕುಡಿಯಬೇಕು. ಕ್ಷತರೋಗಗಳಲ್ಲಿ ಯಾವ ಘೃತಗಳು ಮತ್ತು ತುಪ್ಪ ಕೂಡಿದ ಗುಡಗಳು ಹಿತವಾಗುತ್ತವೋ ಅವುಗಳನ್ನು ವೈದ್ಯನು ಚನ್ನಾಗಿ ನೋಡಿಕೊಂಡು (ಯುಕ್ತವಾಗಿ ಕಂಡವುಗಳನ್ನು), ಮತ್ತು ಜಾಂಗಲಮಾಂಸಗಳ ರಸಗಳನ್ನು ಪಿತ್ತಜಹೃದ್ರೋಗಗಳಲ್ಲಿ

ಕೊಟ್ಟು, ಗೋಕ್ಷೀರದ ಪಥ್ಯದಲ್ಲಿರಿಸತಕ್ಕದ್ದು. ಅವುಗಳಿಂದಲೇ ರಕ್ತವನ್ನು ಆಶ್ರಯಿಸಿ ಕೊಂಡಂಥ ಸರ್ವ ಪಿತ್ತರೋಗಗಳು ಶಮನವಾಗುತ್ತವೆ.

ಸಂಪಾ ಕ್ಷತಕಶ್ಕೂ, ಪಿತ್ತಜ್ವರಕಕ್ಕೂ ಉಕ್ತವಾದ ಬಾಹ್ಯಪರಿಮಾರ್ಜನ, ಅಭ್ಯಂಗಾದಿಗಳು ಮತ್ತು ಒಳಗಿನ ಶೋಧನಗಳು ಪಿತ್ತಹೃದ್ರೋಗದಲ್ಲಿ ಹಿತ ಎಂತ ವಾ (ಪು 293)

19. ಅರ್ಜುನಸ್ಯ ತ್ವಚಾ ಸಿದ್ಧಂ ಕ್ಷೀರಂ ಯೋಜ್ಯಂ ಹೃದಾಮಯೇ |
ಹಾಲುಕಷಾಯಗಳು ಸಿತಯಾ ಪಂಚಮೂಲ್ಯಾ ವಾ ಬಲಯಾ ಮಧುಕೇನ ವಾ ||
(ಚಿ. ಸಾ. ಸಂ. 148)

ಹೃದ್ರೋಗದಲ್ಲಿ ಬಿಳೀ ಮತ್ತಿಕೆತ್ತೆ ಹಾಕಿ ಕಾಯಿಸಿದ ಹಾಲನ್ನು ಅಥವಾ ಹ್ರಸ್ವಪಂಚ ಮೂಲಗಳಿಂದ ತಯಾರಿಸಿದ ಹಾಲನ್ನು ಸಕ್ಕರೆ ಕೂಡಿಸಿ, ಅಥವಾ ಕಲ್ಲಂಗಡಲೆ ಬೇರು ಹಾಕಿ ಕಾಯಿಸಿದ ಹಾಲನ್ನು ಜ್ಯೇಷ್ಠಮಧುವಿನ ಚೂರ್ಣ ಕೂಡಿಸಿ, ಕೊಡತಕ್ಕದ್ದು.

ಸಂ· ಬಿಳೀ ಮತ್ತಿ ದೊರೆಯದಲ್ಲಿ ಬಣಪಿಸ (ಕರಿಮತ್ತಿಯ) ಕೆತ್ತೆಯನ್ನು ಉಪಯೋಗಿಸಬಹುದು

20. ಘೃತೇನ ದುಗ್ಧೇನ ಗುಡಾಂಭಸಾ ವಾ ಪಿಬನ್ತಿ ಚೂರ್ಣಂ ಕಕುಭಸ್ಯ ಚೋಯೇ |
ಮತ್ತಿಚೂರ್ಣ ಹೃದ್ರೋಗಜೀರ್ಣಜ್ವರರಕ್ತಪಿತ್ತಂ ಹತ್ವಾ ಭವೇಯುಶ್ಚಿರಜೀವಿನಸ್ತೇ ||
(ಚಿ ಸಾ. ಸಂ. 448)

ಬಿಳೀ ಮತ್ತಿಕೆತ್ತೆಯ ಚೂರ್ಣವನ್ನು ತುಪ್ಪದಿಂದ, ಹಾಲಿನಿಂದ, ಅಥವಾ ಬೆಲ್ಲದ ನೀರಿನಿಂದ ಯಾರು ಕುಡಿಯುತ್ತಾರೋ, ಅವರು ಹೃದ್ರೋಗ, ಜೀರ್ಣಜ್ವರ, ರಕ್ತಪಿತ್ತ, ಇವುಗಳಿಂದ ವಿಮುಕ್ತರಾಗಿ ಚಿರಜೀವಿಗಳಾಗುವರು.

21. ದ್ರಾಕ್ಷಾಬಲಾಶ್ರೇಯಸಿಶರ್ಕರಾಭಿಃ ಖರ್ಜೂರವೀರರ್ಷಭಕೋತ್ಪಲೈಶ್ಚ |
ದ್ರಾಕ್ಷಾದಿ ಘೃತ ಕಾಕೋಲಿಮೇದಾಯುಗಜೀವಕೈಶ್ಚ ಕ್ಷೀರೇ ಚ ಸಿದ್ಧಂ ಮಹಿಷೀಘೃತಂ-ಸ್ಯಾತ್ (ಚ. 719)

ದ್ರಾಕ್ಷೆ, ಕಲ್ಲಂಗಡಲೆಬೇರು, ಸಾಡಾವಳಿಗಡ್ಡೆ (ಅಗಳುಶುಂಠಿ?), ಸಕ್ಕರೆ, ಖರ್ಜೂರ, ಕ್ಷೀರಕಾಕೋಲಿ, ಋಷಭಕ, ನೈದಿಲೆಗಡ್ಡೆ, ಕಾಕೋಲಿ, ಮೇದೆ, ಮಹಾಮೇದೆ, ಜೀವಕ, ಇವುಗಳ ಕಲ್ಕದಿಂದ (ಎಮ್ಮೆ) ಹಾಲಿನಲ್ಲಿ ಕಾಯಿಸಿದ ಎಮ್ಮೆ ತುಪ್ಪವು ಪೈತ್ತಿಕ ಹೃದ್ರೋಗವನ್ನು ಪರಿಹರಿಸತಕ್ಕಂಥಾದ್ದು.

ಸಂಪಾ 'ಶ್ರೇಯಸೀ' ಎಂದರೆ 'ಗಜಪಿಪ್ಪಲಿ ಎಂತ ಅ , ರಾಸ್ನಾ (ಅರತೆ) ಎಂತ ಅ ದೀಪಿಕಾ (ಪು 582), ಆದರೆ ಆವೆರಡು ಹೃದ್ರೋಗಕ್ಕೆ ಉಕ್ತವಾದವಲ್ಲ 'ಶ್ರೇಯಸೀ' ಶಬ್ದವು ಹೃದ್ರೋಗಕ್ಕೆ ಉಕ್ತವಾದ ಪಾಡಾವಳಿಗಡ್ಡೆ ('ಪಾಠಾ')ಗೂ ಬರುತ್ತದೆ

22. ವಚಾನಿಂಬಕಷಾಯಾಭ್ಯಾಂ ವಾನ್ತಂ ಹೃದಿ ಕಫಾತ್ಮಕೇ |
ಕಫಜಹೃದ್ರೋಗಕ್ಕೆ ಉಪಕ್ರಮ ಚೂರ್ಣನ್ತು ಪಾಯಯೇತೋಕ್ತಂ ವಾತಜೇ ಭೋಜಯೇಚ್ಚ ತಮ್ ||
(ಸು. 817)

ಕಫಹೃದ್ರೋಗಕ್ಕೆ ಬಜೆ ಮತ್ತು ಕಹಿಬೇವು, ಇವುಗಳ ಕಷಾಯದ ನೀರಿನಿಂದ ವಾಂತಿಮಾಡಿಸಿ, ಆ ಮೇಲೆ ವಾತಜಹೃದ್ರೋಗದಲ್ಲಿ ಹೇಳಲ್ಪಟ್ಟ (ಪಿಪ್ಪಲ್ಯಾದಿ) ಚೂರ್ಣವನ್ನು ಕುಡಿಯಕೊಟ್ಟು, (ಅದರೊಂದಿಗೆ) ಭೋಜನಮಾಡಿಸತಕ್ಕದ್ದು.

ಸ್ವಿನ್ನಸ್ಯ ವಾನ್ತಸ್ಯ ವಿಲಂಘಿತಸ್ಯ ಕ್ರಿಯಾ ಕಫಘ್ನೀ ಕಫಮರ್ಮರೋಗೇ |
ಕೌಲತ್ಥಧಾನ್ಯೈಶ್ಚ ರಸೈರ್ಯವಾನ್ನೈಃ ಪಾನಾನಿ ತೀಕ್ಷ್ಣಾನಿ ಚ ಶರ್ಕರಾಣಿ || (ಚ. 750)

ಕಫಜಹೃದ್ರೋಗದಲ್ಲಿ ರೋಗಿಗೆ ಸ್ವೇದನ, ವಮನ ಮತ್ತು ಲಂಘನಕ್ರಮಗಳನ್ನು ನಡಿಸಿದ ಮೇಲೆ ಕಫಹರವಾದ ಕ್ರಿಯೆಗಳನ್ನು ನಡಿಸುವದು; ಹುರುಳಿ ಮತ್ತು ಕೊತ್ತುಂಬರಿ ಸಾರುಗಳಿಂದ ಯವೆಗೋದಿಯ ಅನ್ನವನ್ನು ಕೊಡುವದು; ಮತ್ತು ತೀಕ್ಷ್ಣವಾದ ಪಾನಕಗಳನ್ನು, ಸಕ್ಕರೆ ಕೂಡಿಸಿ, ಕೊಡುವದು.

ಷರಾ ವಾಗ್ಭಟನ ವಿಧಿಯಲ್ಲಿ ಹುರುಳಿ ಕೂಡಿದ ಜಾಂಗಲಮಾಂಸದ ರಸ ಹೇಳಲ್ಪಟ್ಟಿದೆ, 'ಧಾನ್ಯೈಶ್ಚ' ಎಂಬಲ್ಲಿ ವಾಗ್ಭಟನ 'ಧನ್ವೋತ್ಥ' ಎಂಬ ಪದ ಇಟ್ಟರೆ ಅದೇ ಅರ್ಥವಾಗುತ್ತದೆ ಪಾನಗಳ ಸ್ಥಾನದಲ್ಲಿ ವಾ ಸು ಮದ್ಯಗಳನ್ನು ಹೇಳಿದ್ದಾನೆ. (ಪು 294) 'ಶರ್ಕರಾಣಿ' ಎಂಬಲ್ಲಿ 'ಶಂಕರಾಣಿ' ಎಂತ ಪಾಠಾಂತರ ಉಂಟೆಂತ ಕಾಣುತ್ತದೆ ಅದರ ಪ್ರಕಾರ ತೀಕ್ಷ್ಣವಾಗಿಯೂ, ಆರೋಗ್ಯಕರವಾಗಿಯೂ ಇರುವ ಪಾನಗಳನ್ನು ಕೊಡುವದು ಎಂತ ಅರ್ಥವಾಗುತ್ತದೆ

23 ಕೃಷ್ಣಾಶಟೀಪುಷ್ಕರಮೂಲರಾಸ್ನಾವಚಾಭಯಾನಾಗರಚೂರ್ಣಕಂ ಚ | (ಚ. 750)

ಕೃಷ್ಣಾದಿ ಚೂರ್ಣ

ಹಿಪ್ಪಲಿ, ಕಚೋರ, ಪುಷ್ಕರಮೂಲ, ರಾಸ್ಮೆಗಡ್ಡೆ (ಅರತೆ), ಬಜೆ, ಅಣಿಲೆಕಾಯಿ, ಶುಂಠಿ, ಇವುಗಳ ಚೂರ್ಣವನ್ನು (ಗೋಮೂತ್ರದಲ್ಲಿ ಅಥವಾ ಬಿಸಿನೀರಿನಲ್ಲಿ) ಕೊಡುವದು. (ಇದರಿಂದ ಕಫಜಹೃದ್ರೋಗ ಪರಿಹಾರ.)

24. ಉದುಂಬರಾಶ್ವತ್ಥವಟಾರ್ಜುನಾಖ್ಯೇ ಪಲಾಶರೋಹೀತಕಖಾದಿರೇ ಚ |
ಕ್ವಾಥೇ ತ್ರಿವೃತ್ತ್ರ್ಯೂಷಣಚೂರ್ಣಸಿದ್ಧೋ ಲೇಹಃ ಕಫಘ್ನೋ ऽಶಿಶಿರಾಮ್ಬುಯುಕ್ತಃ (ಚ. 750)

ಉದುಂಬರಾದಿ ಲೇಹ

ಅತ್ತಿ, ಅಶ್ವತ್ಥ, ಗೋಳಿ, ಬಿಳೇ ಮತ್ತಿ, ಪಲಾಶ, ಸ್ವಾಮಿಮರ (ಕೆಮ್ಮರ),* ಇವುಗಳ ಚಕ್ಕೆ ಮತ್ತು ಖದಿರ ತಿರುಳು, ಇವುಗಳ ಕಷಾಯದಲ್ಲಿ ತಿಗಡೆ ಮತ್ತು ತ್ರಿಕಟುಗಳ ಚೂರ್ಣ ಕೂಡಿಸಿ ತಯಾರಿಸಿದ ಲೇಹವನ್ನು, ಬಿಸಿನೀರಿನ ಅನುಪಾನದಿಂದ, ಕೊಡಲು ಕಫ ಹೃದ್ರೋಗ ಪರಿಹಾರವಾಗುವದು.

*ಇದರ ಸ್ಥಾನದಲ್ಲಿ ಮುಳ್ಳುಮುತ್ತಗವನ್ನು ಉಪಯೋಗಿಸುವ ಪದ್ಧತಿಯುಂಟು

25. ಶಿಲಾಹ್ವಯಂ ವಾ ಭಿಷಗಪ್ರಮತ್ತಃ ಪ್ರಯೋಜಯೇತ್ಕಲ್ಪವಿಧಾನದೃಷ್ಟಮ್ |
ಪ್ರಾಶ್ಯಾ ತಥಾಗಸ್ತ್ಯಹರೀತಕೀ ಚ ರಸಾಯನಂ ಬ್ರಾಹ್ಮ್ಯಮಥಾಮಲಕ್ಯಾಃ || (ಚ. 750)

ಶಿಲಾಜತುವಿನ ಮತ್ತು ಅಗಸ್ತ್ಯಹರೀತಕೀಯ ಉಪಯೋಗ

ವೈದ್ಯನು ಶಿಲಾಜತುವನ್ನು ವಿಧಿ ಪ್ರಕಾರ ಎಚ್ಚರಿಕೆಯಿಂದ ಉಪಯೋಗಿಸತಕ್ಕದ್ದು; ಮತ್ತು (ಹಿಂದೆ 'ಕಾಸ' ಪ್ರಕರಣದಲ್ಲಿ ವರ್ಣಿಸಲ್ಪಟ್ಟ) ಅಗಸ್ತ್ಯಹರೀತಕೀ ರಸಾಯನವನ್ನು, ಬ್ರಾಹ್ಮೀರಸಾಯನವನ್ನು, ಮತ್ತು ನೆಲ್ಲಿಯ ರಸಾಯನವನ್ನು, ನೆಕ್ಕಿಸಬೇಕು.

ಷರಾ ಶಿಲಾಜತುವಿನ ಪ್ರಯೋಗವು ರಸಾಯನ ಅಧ್ಯಾಯದಲ್ಲಿ ವಿವರಿಸಲ್ಪಟ್ಟಿದೆ 'ಪ್ರಾಶ್ಯಾ' ಎಂಬಲ್ಲಿ 'ಪ್ರಾಶಃ' ಎಂತ ಪದವಿಟ್ಟು ಚ್ಯವನಪ್ರಾಶ ಎಂತ ಅರ್ಥ ಬರೆದದ್ದು ಕಾಣುತ್ತದೆ (ಅ ಧೀ 582).

26. ಸೂಕ್ಷ್ಮೈಲಾ ಮಾಗಧೀಮೂಲಂ ಪ್ರಲೀಢಂ ಸರ್ಪಿಷಾ ಸಹ |
ನಾಶಯತ್ಯಾಶು ಹೃದ್ರೋಗಂ ಗುಲ್ಮಾನಪಿ ವಿಶೇಷತಃ ||

ಸೂಕ್ಷ್ಮೈಲಾದಿ ಚೂರ್ಣ

(ಚಿ. ಸಾ. ಸಂ. 449)

ಸಣ್ಣ ಏಲಕ್ಕಿ ಮತ್ತು ಹಿಪ್ಪಲಿಮೂಲವನ್ನು ಚೂರ್ಣಿಸಿ, ತುಪ್ಪದಲ್ಲಿ ಕಲಸಿ, ನೆಕ್ಕಲು ವಿಶೇಷವಾಗಿ ಹೃದ್ರೋಗ ಮತ್ತು ಗುಲ್ಮಗಳು ಬೇಗನೆ ಪರಿಹಾರವಾಗುವವು.

27. ತ್ರಿದೋಷಜೇ ಲಂಘನಮಾದಿತಃ ಸ್ಯಾತ್
ಅನ್ನಂ ಚ ಸರ್ವತ್ರ ಹಿತಂ ವಿಧೇಯಮ್ |
ಹೀನಾತಿಮಧ್ಯತ್ವಮವೇಕ್ಷ್ಯ ಚೈವ
ಕಾರ್ಯಂ ತ್ರಯಾಣಾಮಪಿ ಕರ್ಮ ಶಸ್ತಮ್ ||
ಭುಕ್ತೇ ಽಧಿಕಂ ಜೀರ್ಯತಿ ಶೂಲಮಲ್ಪಂ
ಜೀರ್ಣೇ ಸ್ಥಿತಂ ಚೇತ್ ಸುರದಾರುಕುಷ್ಠಮ್ |
ಸತಿಲ್ವಕಂ ದ್ವೇ ಲವಣೇ ವಿಡಂಗ-
ಮುಷ್ಣಾಂಬುನಾ ಸಾತಿವಿಷಂ ಪಿಬೇತ್ಸಃ ||
ಜೀರ್ಣೇ ಽಧಿಕೇ ಸ್ನೇಹವಿರೇಚನಂ ಸ್ಯಾತ್
ಫಲೈರ್ವಿರೇಚ್ಯೋ ಯದಿ ಜೀರ್ಯಮಾಣೇ |
ತ್ರಿಷ್ವೇವ ಕಾಲೇಷ್ವಧಿಕೇ ತು ಶೂಲೇ
ತೀಕ್ಷ್ಣಂ ಹಿತಂ ಮೂಲವಿರೇಚನಂ ಸ್ಯಾತ್ ||
ಪ್ರಾಯೋ ಽನಿಲೋ ರುದ್ಧಗತಿಃ ಪ್ರಕುಪ್ಯ-
ತ್ಯಾಮಾಶಯೇ ಶೋಧನಮೇವ ತಸ್ಮಾತ್ |
ಕಾರ್ಯಂ ತಥಾ ಲಂಘನಪಾಚನಂ ಚ
ಸರ್ವಂ ಕ್ರಿಮಿಘ್ನಂ ಕ್ರಿಮಿಹೃದ್ಗದೇ ಚ || (ಚ. 750)

ತ್ರಿದೋಷಜ ಮತ್ತು ಕ್ರಿಮಿಜ ಹೃದ್ರೋಗಗಳ ಚಿಕಿತ್ಸಾವಿಧಾನ

ತ್ರಿದೋಷಜ ಹೃದ್ರೋಗದಲ್ಲಿ ಪ್ರಥಮತಃ ಲಂಘನಮಾಡಿಸತಕ್ಕದ್ದು; ಮತ್ತು ಎಲ್ಲಾ ಸಂಗತಿಯಲ್ಲಿಯೂ (ದೋಷದ ಲಕ್ಷ್ಯೆಯಿಂದ) ಹಿತವಾದ ಆಹಾರವನ್ನು ವಿಧಿಸಬೇಕು. ಪ್ರಕೋಪಗೊಂಡ ದೋಷಗಳೊಳಗೆ ಹೀನಬಲವಾದದ್ದು ಯಾವದು? ಅತಿಬಲವಾದದ್ದು ಯಾವದು? ಮಧ್ಯಮಾವಸ್ಥೆಯದು ಯಾವದು? ಎಂಬದನ್ನು ನೋಡಿಕೊಂಡು, ಮೂರು ದೋಷಗಳಿಗೂ ಪ್ರಶಸ್ತವಾದ ಪ್ರತಿಕ್ರಿಯೆಯನ್ನು ಮಾಡತಕ್ಕದ್ದು. ಉಂಡ ಕೂಡಲೇ ಹೆಚ್ಚು ಶೂಲೆಯಿದ್ದು, ಆಹಾರ ಜೀರ್ಣವಾಗುವಾಗ್ಗೆ ಶೂಲೆ ಅಲ್ಪವಾಗಿ, ಜೀರ್ಣದ ಕೆಲಸ ಮುಗಿದಾಗ್ಗೆ ಶೂಲೆ ನಿಂತುಹೋಗುವದು; ಇಂಥಾ ಶೂಲೆಯುಳ್ಳ ರೋಗಿಗೆ ದೇವದಾರ, ಚಂಗಲಕೋಷ್ಠ, ಲೋಧ್ರ, ಸೈಂಧವಲವಣ, ಸೌವರ್ಚಲಲವಣ, ವಾಯುವಿಳಂಗ, ಅತಿಬಜೆ (ಅತಿವಿಷೆ), ಇವುಗಳ ಚೂರ್ಣವನ್ನು ಬಿಸಿನೀರಲ್ಲಿ ಕಲಸಿ ಕೊಡುವದು; ಆಹಾರ ಜೀರ್ಣವಾದ ಮೇಲೆ ಶೂಲೆ ಅಧಿಕವಾಗುವ ಸಂಗತಿಯಲ್ಲಿ ಸ್ನೇಹವಿರೇಚನ(ಹರಳೆಣ್ಣೆ ಮುಂತಾದ್ದು)ವನ್ನು ಕೊಡುವದು; ಆಹಾರ ಜೀರ್ಣವಾಗುವ ಕಾಲದಲ್ಲಿ ಶೂಲೆ ಹೆಚ್ಚಾಗುವದಾದರೆ, ಫಲರೂಪವಾದ (ಅಣಲೆಕಾಯಿ, ನೆಲ್ಲಿ, ತಾರೆ, ಹರಳುಬೀಜ ಮುಂತಾದ) ವಿರೇಚನವನ್ನು ಕೊಡುವದು,

ಆ ಮೂರು ಕಾಲಗಳಲ್ಲಿಯೂ ಶೂಲೆ ಅಧಿಕವಾಗುವದಾದರೆ, (ತಿಗಡೆ ಮುಂತಾದ) ಬೇರುಗಳ ತೀಕ್ಷ್ಣವಾದ ವಿರೇಚನ ಕೊಡುವದು; ಸಹ ಹಿತವಾಗುವದು. ಹೆಚ್ಚಾಗಿ ಆಮಾಶಯದಲ್ಲಿರುವ ವಾಯುವಿನ ಗತಿಗೆ ತಡೆಯುಂಟಾಗಿ ಅದು ಕೋಪಗೊಳ್ಳುತ್ತದಾದ್ದರಿಂದ ಶೋಧನವನ್ನೇ ಮಾಡಿಸತಕ್ಕದ್ದು. ಹಾಗೆಯೇ (ವಾತದ ಗತಿಯನ್ನು ಕ್ರಮಪಡಿಸುವದಕ್ಕಾಗಿ) ಲಂಘನ-ಪಾಚನ ವಿಧಿಗಳನ್ನು ಸಹ ನಡಿಸಬೇಕು. ಕ್ರಿಮಿಜ ಹೃದ್ರೋಗದಲ್ಲಿ ಕ್ರಿಮಿಹರವಾದ ಸರ್ವ(ಉಪಚಾರ)ವನ್ನು ಮಾಡತಕ್ಕದ್ದು.

ಕ್ರಿಮಿಹೃದ್ರೋಗಿಣಂ ಸ್ನಿಗ್ಧಂ ಭೋಜಯೇತ್ರಿಶಿತೌದನಮ್ ।
ದಧ್ನಾ ವಾ ಪಲಲೋಪೇತಂ ತ್ರ್ಯಹಂ ಪಶ್ಚಾದ್ವಿರೇಚಯೇತ್ ॥
ಸುಗನ್ಧಿಭಿಃ ಸಲವಣೈರ್ಯೋಗೈಃ ಸಾಜಾಜಿಶರ್ಕರೈಃ ।
ವಿಡಂಗಗಾಢೈಃ (?ಢಂ)ಧಾನ್ಯಾಮ್ಲಂ ಪಾಯಯೇತಾಪ್ಯನನ್ತರಮ್ ॥
ಹೃದಯಸ್ಥಾಃ ಪತನ್ತ್ಯೇವಮಧಸ್ತಾತ್ ಕ್ರಿಮಯೋ ನೃಣಾಮ್ ।
ಯವಾನ್ನಂ ವಿತರೇಚ್ಚಾಸ್ಯ ಸವಿಡಂಗಮತಃ ಪರಮ್ ॥ (ಸು. 817)

ಕ್ರಿಮಿಹೃದ್ರೋಗಿಯನ್ನು ಮೂರು ದಿನ ಮಾಂಸ ಮತ್ತು ಸ್ನೇಹಯುಕ್ತವಾದ ಅನ್ನದಿಂದ, ಅಥವಾ ಹುರಿದ ಎಳ್ಳಿನ ಚೂರ್ಣ ಮತ್ತು ಮೊಸರಿನಿಂದ ಕೂಡಿದ ಅನ್ನದಿಂದ ಉಣ್ಣಿಸಿ, ಆ ಮೇಲೆ ಸೈಂಧವಲವಣಯುಕ್ತವಾದ ವಿರೇಚನ ಯೋಗಗಳಿಗೆ, ಪರಿಮಳದ್ರವ್ಯಗಳನ್ನೂ, ಜೀರಿಗೆಚೂರ್ಣವನ್ನೂ, ಸಕ್ಕರೆಯನ್ನೂ ಕೂಡಿಸಿ, ಅವುಗಳನ್ನು ಕುಡಿಸಿ ವಿರೇಚನಮಾಡಿಸಬೇಕು; ಅನಂತರ ಹುಳಿಸಿದ ಗಂಜಿನೀರನ್ನು, ವಾಯುವಿಳಂಗದ ಚೂರ್ಣವನ್ನು ಚನ್ನಾಗಿ ಸೇರಿಸಿ, ಕುಡಿಸಬೇಕು; ಹೀಗೆ ಮಾಡುವದರಿಂದ ಮನುಷ್ಯರ ಹೃದಯದಲ್ಲಿದ್ದ ಕ್ರಿಮಿಗಳು ಕೆಳಗೆ ಬೀಳುತ್ತವೆ. ಅದರ ಮೇಲೆ ಯವೆಗೋದಿಯ ಅನ್ನವನ್ನು, ವಾಯುವಿಳಂಗದ ಚೂರ್ಣ ಸಹಿತವಾಗಿ, ಉಣ್ಣಲಿಕ್ಕೆ ಕೊಡತಕ್ಕದ್ದು.

ಪಂ॥ 1 ನೇ ಶ್ಲೋಕದ ಉತ್ತರಾರ್ಧದಲ್ಲಿರುವ 'ವಾ'ದ ಸ್ಥಾನದಲ್ಲಿ 'ಚ' ಇರುವ ಪಾಠದ ಪ್ರಕಾರ ಸ್ನೇಹಯುಕ್ತವಾದ ಮಾಂಸದ ಅನ್ನದೊಂದಿಗೇನೇ ಎಳ್ಳಿನ ಪುಡಿಯನ್ನೂ, ಮೊಸರನ್ನೂ ಕೂಡಿಸಬೇಕೆಂತ ಅರ್ಥವಾಗುತ್ತದೆ 'ವಿಡಂಗಗಾಢೈಃ' ಎಂಬ ಪಾಠವನ್ನಿಟ್ಟುಕೊಂಡರೆ ವಾಯುವಿಳಂಗವನ್ನು ವಿರೇಚನದ ಔಷಧದೊಂದಿಗೆ ಸೇರಿಸಿ, ಅನಂತರ ಬರೇ ಹುಳಿ ಗಂಜಿನೀರನ್ನು ಕೊಡುವದೆಂತ ಅರ್ಥವಾಗುತ್ತದೆ ವಿರೇಚನದ್ರವ್ಯ ಕಲ್ಪದಲ್ಲಿ ಹೇಳಲ್ಪಟ್ಟ ಸುಗಂಧಗಳು ತ್ರಿಜಾತ (ಏಲಕ್ಕಿ, ಲವಂಗಪತ್ರ ಮತ್ತು ಲವಂಗಪಟ್ಟೆ) ಲವಣಯುಕ್ತವಾದ ಯೋಗಗಳು ಮತ್ತು ಸುಗಂಧಿಯೋಗಗಳು ಬೇರೆಬೇರೆಯಾಗಿ ನಿ ಸಂ. ವ್ಯಾ (1) ತಿಗಡೆ, ಶುಂಠಿ ಮತ್ತು ಅಣಿಲೆಕಾಯಿ ಸಮಭಾಗ, ಬೇಯಿಸಿದ ಅಡಿಕೆ, ವಾಯುವಿಳಂಗದ ತಿರುಳು, ಕಾಳುಮೆಣಸು ಮತ್ತು ದೇವದಾರ ಸೇರಿ ಅರ್ಧಭಾಗ, ಇವುಗಳ ಚೂರ್ಣವನ್ನು ಗೋಮೂತ್ರದಲ್ಲಿ ಕಲಸಿ, ಸೈಂಧವಲವಣ ಕೂಡಿಸಿಕೊಂಡು, ಕುಡಿಯುವದು, (2) ತಿಗಡೆ ಚೂರ್ಣಕ್ಕೆ ಕಾಲುಭಾಗ ಲವಂಗಪಟ್ಟೆ, ಲವಂಗಪತ್ರೆ ಮತ್ತು ಕಾಳುಮೆಣಸಿನ ಚೂರ್ಣವನ್ನು ಕೂಡಿಸಿ, ಜೇನಿನಲ್ಲಿ ಕಲಸಿ, ಸಕ್ಕರೆ ಕೂಡಿಸಿಕೊಂಡು, ಕೊಡುವದು (ಸುಖಶರೀರದವಂಗೆ ಯುಕ್ತವಾದ ವಿರೇಚನ), ವಿರೇಚನದ್ರವ್ಯವಿಕಲ್ಪದಲ್ಲಿ (ಸು 162 63)ಕಾಣುವ ಯೋಗಗಳಲ್ಲಿ ಸೇರಿದ ಇವೆರಡೇ ಈ ಸಂದರ್ಭದಲ್ಲಿ ಹೇಳಲ್ಪಟ್ಟವು ಎಂತ ಆ ವ್ಯಾಖ್ಯಾನವು ಹೇಳುತ್ತದೆ ಆದರೆ ಅಣಿಲೆಕಾಯಿ, ವಾಯುವಿಳಂಗ, ಸೈಂಧವಲವಣ, ಶುಂಠಿ, ತಿಗಡೆ, ಕಾಳುಮೆಣಸು, ಇವುಗಳ ಚೂರ್ಣವನ್ನು ಗೋಮೂತ್ರದಲ್ಲಿ ಕೊಡುವದು, ಅಣಿಲೆಕಾಯಿಯನ್ನು ಪಿಪ್ಪಲ್ಯಾದಿ ಕಷಾಯದಲ್ಲಿ ಅರೆದು ಸೈಂಧವಲವಣ ಕೂಡಿಸಿ ಕೊಡುವದು, ಮುಂತಾದ ಬೇರೆ ಯೋಗಗಳು ಆ ಕಲ್ಪದಲ್ಲಿ ಇವೆ ಸಾರಾಂತ ಮೂಲದಲ್ಲಿ ಹೇಳಲ್ಪಟ್ಟ ಉಪದೇಶಗಳಿಗೆ ಲಕ್ಷ್ಯ ಇಟ್ಟು, ಹೊಸದಾಗಿ ಯೋಗವನ್ನು ಕಲ್ಪಿಸಿ, ವಿರೇಚನಕ್ಕೆ ಕೊಡಬೇಕೆಂಬದೇ ಸುಶ್ರುತನ ತಾತ್ಪರ್ಯ ಎಂತ ಕಾಣುತ್ತದೆ.

28. ಚೂರ್ಣಂ ಪುಷ್ಕರಜಂ ಲಿಹ್ಯಾತ್ ಮಾಕ್ಷಿಕೇಣ ಸಮಾಯುತಮ್ ।
ಪೌಷ್ಕರ ಚೂರ್ಣ ಹೃಚ್ಛೂಲಶ್ವಾಸಕಾಸಘ್ನಂ ಕ್ಷಯಹಿಕ್ಕಾನಿವಾರಣಮ್ ॥
(ಚಿ. ಸಾ. ಸಂ. 450)

ಪುಷ್ಕರಮೂಲದ ಚೂರ್ಣವನ್ನು ಜೇನಿನಲ್ಲಿ ಕಲಸಿ ನೆಕ್ಕಲು ಹೃದಯದ ಶೂಲೆ, ಉಬ್ಬಸ ಮತ್ತು ಕೆಮ್ಮು ಪರಿಹಾರವಾಗುವವು; ಕ್ಷಯ ಮತ್ತು ಬಿಕ್ಕಟ್ಟು ನಿವಾರಣೆ ಯಾಗುವವು.

29. ಹಿಂಗು ಸೌವರ್ಚಲಂ ವಿಶ್ವಂ ದಾಡಿಮಂ ಸಾಮ್ಲವೇತಸಮ್ |
ಹಿಂಗು ಪಂಚಕ ಚೂರ್ಣ　ಚೂರ್ಣಮುಷ್ಣಾಂಬುನಾ ಪೇಯಂ ಶ್ವಾಸಹೃದ್ರೋಗಶಾನ್ತಯೇ ||
(ಚಿ. ಸಾ. ಸಂ. 450)

(ಹುರಿದ) ಇಂಗು, ಸೌವರ್ಚಲ (ಕರೀ) ಲವಣ, ಶುಂಠಿ, ದಾಳಿಂಬ, ಅಮ್ಲವೇತಸ (ಸಿಗದಲ್ಲಿ ಪುಳ್ಳಂಪುರುಚೆ—ಮಲ. ಪುಳಿಯಾರಲ), ಇವುಗಳ ಚೂರ್ಣವನ್ನು ಬಿಸಿನೀರಲ್ಲಿ ಕಲಸಿ ಪಾನಮಾಡಲು, ಉಬ್ಬಸ ಮತ್ತು ಹೃದ್ರೋಗ ಶಾಂತವಾಗುವವು.

30 ಹಿಂಗೂಗ್ರಗಂಧಾವಿಡಪಿಶ್ವಕೃಷ್ಣಾಕುಷ್ಠಾಭಯಾಚಿತ್ರಕಯಾವಶೂಕಮ್ |
ಹಿಂಗೂಗ್ರಗಂಧಾದಿ ಚೂರ್ಣ　ಪಿಬೇತ್ ಸಸೌವರ್ಚಲಪುಷ್ಕರಾಢ್ಯಂ ಯವಾಂಭಸಾ ಶೂಲಹೃದಾಮ-
ಯಘ್ನಮ್ || (ಚಿ. ಸಾ. ಸಂ 451)

(ಹುರಿದ) ಇಂಗು, ಬಜೆ, ಬಿಡಾಲವಣ, ಶುಂಠಿ, ಹಿಪ್ಪಲಿ, ಚಂಗಲ ಕೋಷ್ಠ, ಅಣಿಲೆಕಾಯಿಸಿಪ್ಪೆ, ಚಿತ್ರಮೂಲದ ಸಿಪ್ಪೆ, ಯವಕ್ಷಾರ, ಸೌವರ್ಚಲ (ಕರೀ) ಲವಣ, ಪುಷ್ಕರಮೂಲ, ಇವುಗಳ ಚೂರ್ಣವನ್ನು ಯವೆಗೋಧಿಯ ತಿಳೀ ಗಂಜಿನೀರಿನಲ್ಲಿ ಕೊಡಲು, ಶೂಲ ಮತ್ತು ಹೃದ್ರೋಗ ಪರಿಹಾರವಾಗುವವು.

31. ದಶಮೂಲಕಷಾಯನ್ತು ಲವಣಕ್ಷಾರಯೋಜಿತಮ್ |
ದಶಮೂಲ ಕಷಾಯ　ಕಾಸಂ ಶ್ವಾಸಂ ಚ ಹೃದ್ರೋಗಂ ಗುಲ್ಮಶೂಲಂ ಚ ನಾಶಯೇತ್ ||
(ಚಿ. ಸಾ. ಸಂ. 451)

ದಶಮೂಲಗಳ ಕಷಾಯಕ್ಕೆ ಸೈಂಧವಲವಣ ಮತ್ತು ಯವಕ್ಷಾರ ಕೂಡಿಸಿ ಸೇವಿಸಲು, ಕೆಮ್ಮು, ಉಬ್ಬಸ, ಹೃದ್ರೋಗ, ಗುಲ್ಮ, ಶೂಲ, ಸಹ ನಾಶವಾಗುವವು.

32. ಹರೀತಕೀ ವಚಾ ರಾಸ್ನಾ ಪಿಪ್ಪಲ್ಯೋ ವಿಶ್ವಭೇಷಜಮ್ |
ಹರೀತಕ್ಯಾದಿ ಚೂರ್ಣ　ಶಟೀ ಪುಷ್ಕರಮೂಲಂ ಚ ಚೂರ್ಣಂ ಹೃದ್ರೋಗನಾಶನಮ್ ||
(ಚಿ. ಸಾ. ಸಂ. 451)

ಅಣಿಲೆಕಾಯಿಯ ಸಿಪ್ಪೆ, ಬಜೆ, ಅರತೆ, ಹಿಪ್ಪಲಿ, ಶುಂಠಿ. ಕಚೋರ, ಪುಷ್ಕರಮೂಲ, ಇವುಗಳ ಚೂರ್ಣವು ಹೃದ್ರೋಗವನ್ನು ನಾಶಮಾಡುವಂಥಾದ್ದು.

33. ಪುಟದಗ್ಧಂ ಹರಿಣಶೃಂಗಂ ಪಿಷ್ಟಂ ಗವ್ಯೇನ ಸರ್ಪಿಷಾ ಪಿಬತಃ |
ಶೃಂಗಭಸ್ಮ　ಹೃತ್ಪೃಷ್ಠಶೂಲಮಚಿರಾದುಪೈತಿ ಶಾನ್ತಿಂ ಸುಕಷ್ಟಮಪಿ ||
(ಚಿ. ಸಾ. ಸಂ. 451)

ಜಿಂಕೆಕೊಂಬನ್ನು ಪುಟಕ್ಕೆ ಇಟ್ಟು ಸುಟ್ಟು, ಅರೆದ ಚೂರ್ಣವನ್ನು ದನದ ತುಪ್ಪದಿಂದ ಸೇವಿಸಲು, ಹೃದಯದ ಮತ್ತು ಬೆನ್ನಿನ ಶೂಲೆ, ಬಹು ಕಷ್ಟ ಜಾತಿದಾದರೂ, ಬೇಗನೆ ಶಮನ ವಾಗುತ್ತದೆ.

ಷರಾ ಶೃಂಗವನ್ನು ಲಿಂಬೆರಸದಲ್ಲಿ ಅಥವಾ ಹುಣಸೆಸೊಪ್ಪಿನ ರಸದಲ್ಲಿ ಒಂದು ದಿನ ನೆನೆ ಇಟ್ಟು, ಬಿಸಿನೀರಿನಿಂದ ತೊಳೆದು, ಅಗಸೆಸೊಪ್ಪನ್ನು ಅರೆದು ಕೊಳವೆ ಮಾಡಿ ಅದರೊಳಗೆ ಹಾಗೆ ಶುದ್ಧಮಾಡಿದ ಶೃಂಗವನ್ನಿಟ್ಟು, ಅರ್ಧಗಜ ಪುಟವನ್ನು ಕೊಟ್ಟಲ್ಲಿ ಶುದ್ಧ ಭಸ್ಮವಾಗುವದು (ವೃದ್ಧವೈದ್ಯ)

ಶೃಂಗದ ಪುಡಿಯನ್ನು ಹೊಸ ಮಡಿಕೆಯಲ್ಲಿಟ್ಟು ಮುಚ್ಚಳ ಮುಚ್ಚಿ, ಮಣ್ಣಿನಿಂದ ಸಂದು ಬಂಧಮಾಡಿ, ಒಲೆಯ ಮೇಲಿಟ್ಟು ಅಡಿಯಿಂದ ಬೆಂಕಿ ಕೊಟ್ಟು ಸುಟ್ಟು, ಭಸ್ಮಮಾಡುವದಾಗಿ ರ ರ (ಪು 430)

34. ಗೋಧೂಮಕಕುಭಶ್ಚೂರ್ಣಂ ಛಾಗಪಯೋ ಗವ್ಯಸರ್ಪಿಷಾ ಪಕ್ವಮ್ ।
ಗೋಧೂಮಾದಿ ಅಡಿಗೆ
ಮಧುಶರ್ಕರಾಸಮೇತಂ ಶಮಯತಿ ಹೃದ್ರೋಗಮುದ್ಧತಂ ಪುಂಸಾಮ್ ॥
(ಚಿ. ಸಾ. ಸಂ. 451)

ಗೋದಿ ಮತ್ತು ಬಿಳೀ ಮತ್ತಿ ತೊಗಟೆಯ ಚೂರ್ಣವನ್ನು ದನದ ತುಪ್ಪದಲ್ಲಿ ಹುರಿದು, ಆಡಿನ ಹಾಲಿನಲ್ಲಿ ಬೇಯಿಸಿ, ಸಕ್ಕರೆ ಮತ್ತು ಜೇನನ್ನು ಕೂಡಿಸಿಕೊಂಡು, ಪಾನ ಮಾಡಲು, ಬಲಿತಿದ್ದ ಹೃದ್ರೋಗವು ಶಮನವಾಗುವದು.

35. ಮುಖ್ಯಂ ಶತಾರ್ಧಂ ತು ಹರೀತಕೀನಾಂ ಸೌವರ್ಚಲಸ್ಯಾಪಿ ಪಲದ್ವಯಂ ಚ ।
ವಲ್ಲಭಘೃತ
ಸಿದ್ಧಂ ಘೃತಂ ವಲ್ಲಭಕಂ ಹಿ ನಾಮ್ನಾ ಹೃತ್ಕಾಸಗುಲ್ಮೋದರಮಾರುತಘ್ನಮ್ ॥ (ಚಿ. ಸಾ ಸಂ. 451)

ಪ್ರಶಸ್ತವಾದ ಐವತ್ತು ಅಣಿಲೆಕಾಯಿಗಳ ಸಿಪ್ಪೆಯನ್ನು ಕುಟ್ಟಿ ಆ ಚೂರ್ಣಕ್ಕೆ ಎರಡು ಪಲ ಸೌವರ್ಚಲಲವಣ (ಕರೀ ಉಪ್ಪು)ವನ್ನೂ, ಒಂದು ಪ್ರಸ್ಥ ದನದ ತುಪ್ಪವನ್ನೂ ಕೂಡಿಸಿ (ನಾಲ್ಕು ಪ್ರಸ್ಥ ನೀರನ್ನು ಕೂಡಿಸಿಕೊಂಡು), ಕಾಯಿಸಿ ಪಕ್ವಮಾಡಿದ ತುಪ್ಪಕ್ಕೆ 'ವಲ್ಲಭ' ಎಂತ ಹೆಸರು. ಅದು ಹೃದ್ರೋಗ, ಕೆಮ್ಮು, ಗುಲ್ಮ, ಮತ್ತು ಉದರದಲ್ಲಿಯ ವಾಯುವನ್ನು ಪರಿಹಾರಮಾಡುವದು.

ಷರಾ ನಾಲ್ಕು ಪ್ರಸ್ಥ ಹಾಲನ್ನು ಸಹ ಕೂಡಿಸಿ ಮಾಡಿದ 'ಕ್ಷೀರವಲ್ಲಭ' ಘೃತವು ಅಪತಂತ್ರಕ ವ್ಯಾಧಿಗೆ ಸಹ ಶ್ರೇಷ್ಠವಾದ ಪರಿಹಾರ (ಚಿ ಸಾ ಸಂ 451) ಈ ಎರಡು ಯೋಗಗಳು ಅನೇಕ ಗ್ರಂಥಗಳಲ್ಲಿ ಹೃದ್ರೋಗದ ಅಧ್ಯಾಯದಲ್ಲಿ ಕಾಣುತ್ತವೆ ಆದರೆ ಕೆಲವರು 'ಹೃತ್ಕಾಸ' ಎಂಬಲ್ಲಿ 'ಹೃಲ್ಲಾಸ' ಎಂಬ ಪದವನ್ನಿಟ್ಟಿದ್ದಾರೆ 'ಹೃಲ್ಲಾಸ' ಎಂದರೆ ಎದೆ ಹಾರುವದು ಅಥವಾ ಕುಣಿಯುವದು ಅಥವಾ ತಲ್ಲಣ (4ನೇ ಸಂಖ್ಯೆ ನೋಡಿ) ಎಂತ ಅರ್ಥ ಮಾಡಬೇಕು, ಸಾಧಾರಣವಾಗಿ ನಿಘಂಟುಗಳು ಹೇಳುವಂತೆ ಬಿಕ್ಕಟ್ಟು ಅಲ್ಲ ರ ರ ದಲ್ಲಿ (ಪು 467) ಕಾಣುವ 'ಹೃದ್ರೋಗ' ಎಂಬ ಪಾಠವೇ ಯುಕ್ತವಾಗಿ ಕಾಣುತ್ತದೆ

36. ಪಾರ್ಥಸ್ಯ ಕಲ್ಕಂ(?) ಸ್ವರಸೇನ ಸಿದ್ಧಂ ಶಸ್ತಂ ಘೃತಂ ಸರ್ವಹೃದಾಮಯಘ್ನಮ್ ॥ (ಚಿ. ಸಾ. ಸಂ. 451)
ಅರ್ಜುನಘೃತ

ಬಿಳೀಮತ್ತಿತೊಗಟೆಯ ಕಷಾಯ ಮತ್ತು ಕಲ್ಕದಿಂದ ಪಕ್ವಮಾಡಿದ ತುಪ್ಪವು ಸರ್ವ ಹೃದ್ರೋಗಗಳ ನಾಶನಕ್ಕೂ ಪ್ರಶಸ್ತವಾದದ್ದು.

37. ಘೃತಂ ಬಲಾನಾಗಬಲಾರ್ಜುನಾಂಬು-
ಬಲಾದಿ ಘೃತ ಸಿದ್ಧಂ ಸಯಷ್ಟೀಮಧುಕಲ್ಕಪಾದಮ್ ।
ಹೃದ್ರೋಗಶೂಲಂ ಕ್ಷತರಕ್ತಪಿತ್ತ-
ಕಾಸಾನಿಲಾಸೃಕ್ ಶಮಯತ್ಯುದೀರ್ಣಮ್ ॥ (ಚಿ. ಸಾ. ಸಂ 151)

ಕಲ್ಲಂಗಡಲೆ (ಕಡೀರು)-ಬೇರು, ಆನೆಕಲ್ಲಂಗಡಲೆ-ಬೇರು, ಬಿಳೇಮತ್ತಿ-ತೊಗಟು, ಇವುಗಳ ಕಷಾಯದಲ್ಲಿ, (ತುಪ್ಪಕ್ಕೆ) ಕಾಲಂಶ ಜ್ಯೇಷ್ಠಮಧುವಿನ ಕಲ್ಕದೊಂದಿಗೆ, ಪಕ್ವಮಾಡಿದ ತುಪ್ಪವು ಹೃದ್ರೋಗವನ್ನೂ, ಶೂಲೆಯನ್ನೂ, ಕ್ಷತವನ್ನೂ, ರಕ್ತಪಿತ್ತವನ್ನೂ, ಕೆಮ್ಮನ್ನೂ, ವಾತರಕ್ತವನ್ನೂ, ಕಠಿಣವಾಗಿದ್ದರೂ, ಶಮನಮಾಡುವದು.

38. ಮಾತುಲುಂಗಸ್ಯ ಮೂಲಂ ಚ ಚೂರ್ಣಮುಷ್ಣಾಂಬುನಾ ಪಿಬೇತ್ ।
ಮಾದಳ ಬೇರಿನ ಚೂರ್ಣ ಮದ್ಯೇನ ವಾ ಜಯೇದ್ಗುಲ್ಮಂ ಹೃದ್ರೋಗಶೂಲಮಾಶು ತತ್ ॥
(ರ. ರ. 168)

ಮಾದಳಬೇರಿನ ಚೂರ್ಣವನ್ನು ಬಿಸಿನೀರಿನಲ್ಲಿ ಅಥವಾ ಮದ್ಯದಲ್ಲಿ ಕಲಸಿ, ಪಾನಮಾಡುವದರಿಂದ ಗುಲ್ಮ, ಹೃದ್ರೋಗ ಮತ್ತು ಎದೆಶೂಲೆ ಬೇಗನೆ ಪರಿಹಾರವಾಗುವವು.

39 ಭೃಷ್ಟಂ ಘೃಷ್ಟಂ ತೈಲಯುಕ್ತಂ ಪ್ರಲಿಪ್ತಂ
ಸೈಂಧವದ ಲೇಪ ಸಿಂಧೂದ್ಭೂತಂ ಹೃದ್ರುಜಾಯಾಂ ಪ್ರಶಸ್ತಮ್ ॥ (ವೈ. ಸಾ. ಸಂ. 186)

ಸೈಂಧವಲವಣವನ್ನು ಹುರಿದು, ಎಳ್ಳೆಣ್ಣೆ ಕೂಡಿಸಿಕೊಂಡು ಅರೆದು, ಲೇಪಿಸುವದು ಹೃದ್ರೋಗದ ಪರಿಹಾರಕ್ಕೆ ಪ್ರಶಸ್ತವಾದದ್ದು.

ಸೂ॰ 'ಘೃಷ್ಟಂ' ಎಂಬಲ್ಲಿ ಘೃಷ್ಟಂ', 'ಪ್ರಲಿಪ್ತಂ' ಎಂಬಲ್ಲಿ 'ಪ್ರರಿಕ್ತಂ' ಮತ್ತು 'ಹೃದ್ರುಜಾಯಾಂ' ಎಂಬಲ್ಲಿ 'ಹೃದ್ರುಜಾಯ' ಎಂತ ಮೂಲದಲ್ಲಿ ಕಾಣುವ ತಪ್ಪುಗಳನ್ನು ತಿದ್ದಿಕೊಂಡದೆ ಅಲ್ಲಿಯೂ ಅರ್ಥ ಇದೇ ಬರೆಯಲ್ಪಟ್ಟಿದೆ

40. ಸೈಂಧವಂ ಸಯವಕ್ಷಾರಂ ಪೀತಂ ಕೋಷ್ಣೇನ ಸರ್ಪಿಷಾ ।
ಸೈಂಧವ-ಯವ ಕ್ಷಾರಗಳ ಪಾನ ಹೃದ್ರೋಗೋರಃಕ್ಷತಶ್ವಾಸಗುಲ್ಮಾನಿಲಹರಂ ಪರಮ್ ॥
(ವೈ. ಸಾ. ಸಂ 186)

ಸೈಂಧವಲವಣದ ಚೂರ್ಣವನ್ನು, ಯವಕ್ಷಾರ ಕೂಡಿಸಿಕೊಂಡು, ಬಿಸಿ ತುಪ್ಪದಲ್ಲಿ ಕಲಸಿ ಪಾನಮಾಡುವದು ಹೃದ್ರೋಗ, ಉರಃಕ್ಷತ, ಶ್ವಾಸ, ಗುಲ್ಮ, ಮತ್ತು ವಾಯು, ಇವುಗಳನ್ನು ಪರಿಹರಿಸುವದಕ್ಕೆ ಉತ್ತಮವಾದದ್ದು

41 ಹಿಂಗುಸೈಂಧವಶುಂಠೀನಾಂ ಚೂರ್ಣಂ ಶುಂಠ್ಯಂಬುನಾ ಪಿಬೇತ್ ।
ಹಿಂಗ್ವಾದಿ ಚೂರ್ಣ ಹೃತ್ಪಾರ್ಶ್ವಾರ್ತ್ಯನಿಲಾನಾಹಗುಲ್ಮಪ್ಲೀಹೋದರಾಪಹಮ್ ॥
(ವೈ. ಸಾ. ಸಂ. 186)

(ಹುರಿದ) ಇಂಗು, ಸೈಂಧವಲವಣ ಮತ್ತು ಶುಂಠಿ, ಇವುಗಳ ಚೂರ್ಣವನ್ನು ಶುಂಠಿ ಕಷಾಯದಲ್ಲಿ ಕಲಸಿ ಕುಡಿಯಬೇಕು; ಅದರಿಂದ ಹೃದಯದ ಪೀಡೆ, ಪಾರ್ಶ್ವದ ನೋವು, ವಾಯು, ಆನಾಹ, ಗುಲ್ಮ, ಪ್ಲೀಹೋದರ ಸಹ ಪರಿಹಾರವಾಗುವವು.

ದೃಷ್ಟಫಲ ಚಿಕಿತ್ಸೆ

42. ರೋಗಿಯ ಪ್ರಾಯ 15 ವರ್ಷ. ನಾಡಿಗಳೊಳಗೆ ಕೆಲವು ವೇಗದಿಂದ, ಕೆಲವು ಮಂದವಾಗಿ ಬಡಿಯುತ್ತವೆ; ಒಂದೊಂದು ಲೋಪ; ಪಿತ್ತ ಪ್ರಾಯಶಃ ಸ್ಥಾನ ಚ್ಯುತ; ಹೃದಯದ ಸ್ಥಾನದಲ್ಲಿ ಎದೆಯ ಮೇಲೆ ಬೆರಳಿಟ್ಟು ಇನ್ನೊಂದು ಬೆರಳಿನಿಂದ ತಟ್ಟಿದರೆ ಒಳಗೆ ನೋವು ಉಂಟಾಗುತ್ತದೆ; ಮೂತ್ರ ಸ್ವಲ್ಪ ಹೆಚ್ಚು; ಮಲಪ್ರವೃತ್ತಿ ಮತ್ತು ಹಸಿವೆ ಸರಿ — ಬಲಾದಿಘೃತ ತೊಲೆ=($\frac{1}{೪}$)ರಂತೆ, ಸಕ್ಕರೆ ಕೂಡಿಸಿ, ದಿನಕ್ಕೆರಡು ಸರ್ತಿ ಪ್ರಕಾರ ೧೨ ದಿನ; ಅನಂತರ ಕಾಸೀಸಾದಿಮಾತ್ರೆಯನ್ನು ಅರ್ಧಾಂಶ ಜೇನು ಮಿಶ್ರವಾದ ತುಪ್ಪದಲ್ಲಿ ರಕ್ತವೃದ್ಧಿಗೆ, ಇದರಿಂದ ಕ್ಷೇಮವಾಯಿತು.

ಪರಾ ಡಾಕ್ಟರರು ಹೃದಯ ಸರಿ ಇಲ್ಲ ಎಂತ ಒಬ್ಬ ಗೃಹಸ್ಥರಿಗೆ ಹೇಳಿದ್ದರು ಮತ್ತು ಅವರು ದೀರ್ಘಕಾಲ ಆಗಾಗ್ಗೆ ಎದೆನೋವಿನಿಂದ ಸಂಕಷ್ಟಪಡುತ್ತಿದ್ದರು ಅವರು ಈ ಬಲಾದಿಘೃತದ (37ನೇ ಸಂಖ್ಯೆ ನೋಡಿ) ಸೇವನದಿಂದ ಪೂರ್ಣ ಸೌಖ್ಯ ಹೊಂದಿರುತ್ತಾರೆ ಬೇರೆ ಅನೇಕರು ಸಹ ಈ ಘೃತದಿಂದ ಪ್ರಯೋಜನಪಡೆದಿದ್ದಾರೆ

(2) ರೋಗಿಯ ಪ್ರಾಯ 32 ವರ್ಷ. ಅಜೀರ್ಣ, ಅನಿದ್ರೆ, ಅತಿಹಸಿವೆ, ಎದೆಸುಡತ, ಉಗುಳು. ಅದರೊಂದಿಗೆ ಕೆಲವು ವೇಳೆ ರಕ್ತಮಿಶ್ರವಿರುವದು, ಸ್ವಪ್ನೇಂದ್ರಿಯ, ಮಲ ದಿನಕ್ಕೆ 2-3 ಸರ್ತಿ, ಹೊಟ್ಟೆ ಕೂಗುವದು, ಮೂತ್ರದಲ್ಲಿ ಉರಿ, ಮೈಯುರಿ, ಈ ಲಕ್ಷಣಗಳು 4 ತಿಂಗಳಿಂದ ಇವೆ; ವಾತ ಅಸ್ಥಿರ, ಪಿತ್ತ ಅಬಲಿ, ಸ್ಥಾನಚ್ಯುತ ಅಥವಾ ಸ್ತಬ್ಧ, ಕಫ ಸದಾ ಸ್ಥಾನಚ್ಯುತ.—ಅಮೃತಶರ್ಕರೆಯನ್ನು ೩ ಗ್ರೈನ್ ಪ್ರಕಾರ ತುಪ್ಪ-ಸಕ್ಕರೆಗಳಲ್ಲಿ ಕಲಸಿ ದಿನಕ್ಕೆ ೨ ಸರ್ತಿ ಪ್ರಕಾರ ೮ ದಿನ ಸೇವಿಸಿದರಿಂದ ಎದೆಯುರಿ ಮತ್ತು ರಕ್ತಮಿಶ್ರ ಉಗುಳು ಪರಿಹಾರವಾದವು. — ನಾಡಿಗಳೊಳಗೆ ವಾತಬಲ, ಕಫ ಅಬಲಿ. — ಅಮೃತಬಳ್ಳಿ ತೊ. ||, ಕಲ್ಲಂಗಡಲೆ ಬೇರು ತೊ. ||, ಆನೆಕಡೀರು-ಬೇರು ತೊ. ||. ಬಿಲ್ವಪತ್ರೆ-ಬೇರು ತೊ. ||, ಇವುಗಳ ಕಷಾಯದ ಅರ್ಧದಲ್ಲಿ ವಾತಗಜಾಂಕುಶಮಾತ್ರೆ ೧ರಂತೆ, ಜ್ಯೇಷ್ಠಮಧುವಿನ ಚೂರ್ಣ ಕೂಡಿಸಿಕೊಂಡು, ಕೆಲವು ದಿನ ಸೇವಿಸಿದರಿಂದ ಕ್ಷೇಮವಾಯಿತು.

(3) ರೋಗಿಯ ಪ್ರಾಯ 22 ವರ್ಷ. ಎದೆನೋವು, ಎದೆಯುರಿ ಮತ್ತು ಅಶಕ್ತಿ, ನಾಡಿಗಳು ಮೂರೂ ಅಸ್ಥಿರ, ಕೆಲವು ವೇಳೆ ಸ್ತಬ್ಧ, ವಾತದಲ್ಲಿ ದೋಷ ಹೆಚ್ಚು, ಮಲ ಮತ್ತು ಹಸಿವ ಸರಿ. — ಕಲ್ಲಂಗಡಲೆ-ಬೇರು ತೊ. ||, ಆನೆಕಲ್ಲಂಗಡಲೆ-ಬೇರು ತೊ. ||, ಲವಂಗಪಟ್ಟೆ ತೊ. |, ಇವುಗಳ ಕಷಾಯದ ಅರ್ಧದಲ್ಲಿ ಕಸ್ತೂರ್ಯಾದಿ ೧ರಂತೆ, ಜ್ಯೇಷ್ಠಮಧುವಿನ ಪುಡಿ ಕೂಡಿಸಿಕೊಂಡು, ದಿನಕ್ಕೆ ೨ ಸರ್ತಿ ಪ್ರಕಾರ, ೬ ದಿನ, ಅನಂತರ ಅದೇ ಕಷಾಯದಲ್ಲಿ ವಾ. ಗ. ೧ರಂತೆ ೩ ದಿನ, ಸೇವಿಸಿದರಿಂದ ಕ್ಷೇಮವಾಯಿತು.

(4) ಪ್ರಾಯ 25 ವರ್ಷ. ಎದೆಬಡಿತ, ಎತ್ತರ ಹತ್ತುವದಕ್ಕೆ ಪ್ರಯಾಸ, ರಕ್ತ ಕಡಿಮೆ, ಇಂದ್ರಿಯದ ಬಲ ಕಡಿಮೆಯಂತೆ, ಮಲ ಬದ್ಧತರ, ಪ್ರಕೃತ ನೆಗಡಿ ಮತ್ತು ಕೆಮ್ಮು ಉಂಟಾಗಿವೆ; ನಾಡಿಗಳ ವೇಗ ಹೆಚ್ಚು, ವಾತ ಸದಾ ಸ್ಥಾನಚ್ಯುತ, ಮಲದ ವರ್ಣ ಕಪ್ಪು.—ಕಲ್ಲಂಗಡಲೆ-ಬೇರು, ಅಮೃತಬಳ್ಳಿ, ಆಡುಸೋಗೆ-ಬೇರು, ಹರಳು-ಬೇರು, ಬಿಳೇ ಕಾಳುಮೆಣಸು, ಇವು ತೊ. |-($\frac{1}{೪}$) ಪ್ರಕಾರ: ಕಷಾಯದ ಅರ್ಧದಲ್ಲಿ ಜ್ವರಭೈರವ ||, ವಾ. ಗ. ||ರಂತೆ, ಕಲ್ಲುಸಕ್ಕರೆ ಪುಡಿ ಮತ್ತು ಜೇನು ಕೂಡಿಸಿಕೊಂಡು, ದಿನಕ್ಕೆ ೨ ಸರ್ತಿ ಪ್ರಕಾರ ೩ ದಿನ, ಅನಂತರ ರಕ್ತವೃದ್ಧಿಗೆ ಕಾಸೀಸಾದಿಮಾತ್ರೆ ೧ ರಂತೆ ತುಪ್ಪ-ಸಕ್ಕರೆಗಳಲ್ಲಿ ೧೨ ಸರ್ತಿ (೬ ದಿನ), ಸೇವಿಸಿದರಿಂದ ಕ್ಷೇಮವಾಗಿದೆ.

43 ಅಜಮೋದ, ಅಣಿಲೆಕಾಯಿ, ಅಮೃತಬಳ್ಳಿ, ಅರಗು, ಆಕಾಶಬಳ್ಳಿ (ನೆಲಮುಟ್ಟದ ಬಳ್ಳಿ), ಆಡುಸೋಗೆ, ಆನೆಮುಂಗು, ಉತ್ತರಣೆ, ಕಕ್ಕೆಮರ, ಕಲ್ಲಂಗಡಲೆ, ಕಲ್ಲುಹೂವು (ಮಲ. ಕಲ್ಪಾಚಿ), ಕಿರಿಗುಳ್ಳ, ಖರ್ಜೂರ, ಗಣಿಕೆ (ಕಾಗೆ ಹಣ್ಣಿನ ಗಿಡ), ಜಾಯಿಕಾಯಿ, ಜಿಂಗಿನೀ (ಉಡಿಮರ), ತುಳಸಿ, ತ್ರಾಯಮಾಣಾ, ದಶಮೂಲಗಳು, ದಾಳಿಂಬ, ದೇವದಾರ, ದೊಡ್ಡ ದುಂಪರಾಸ್ಮೆ (ಕೋಲಾಂಜನ), ದೊಡ್ಡಿಹುಳಿ, ನೀರುಪಿಪ್ಪಲಿ (ಜಲಪಿಪ್ಪಲೀ-ಹೊಮ್ಮುಗುಳು?), ನೀರುಳ್ಳಿ, ನೆಗ್ಗಿಲುಮುಳ್ಳು, ನೆಲಮುಚ್ಚಳು (ಎತ್ತಿನ ನಾಲಿಗೆ ಗಿಡ), ಪಂಚಲವಣಗಳು, ಪನ್ನೀರುಗುಲಾಬು (ಶತಪತ್ರೀ), ಪಾಡಾವಳಿಗಡ್ಡೆ (ಪಾರಾ), ಪಾದರಿಮರ, ಪುನರ್ನವಿಬೇರು, ಪುಲ್ಲಂಪುರುಚೆ (ಮಲ. ಪುಳಿಯಾರಲ), ಬೆಳ್ಳುಳ್ಳಿ, ಮಹಾಶತಾವರೀ, ಮಾದಳ, ಮುಡಿವಾಳ, ಮುರ್ಗಿನಹುಳಿ (ಪುನರ್ಪುಳಿ), ಯವಕ್ಷಾರ, ರಾಸ್ಮೆಗಡ್ಡೆ (ಅರತೆ), ಲವಂಗಪಟ್ಟೆ, ಶುಂಠಿ, ಸಂಬಾರಹುಲ್ಲು (ಮಲ. ನಾಸ್ಮುಕಪ್ಪುಲ್ಲು), ಸಬ್ಬಸಿಗೆ, ಸರ್ಜಕ್ಷಾರ, ಹಿಂಗು, ಹಿಂಗುಪತ್ರೀ (ಮಲ. ಕರಿಕ್ಕಾಯಂ) ಹುಲುಗಿಲು (ನಲ—ಮಲ. ನಾಂಬಣಪ್ಪುಲ್ಲು) ಮತ್ತು ಹಗ್ಗುರುಟಿಗೆ (ಮಲ ಪೆರುನ್ನುರುನ್ನ, ಮೂರ್ವಾ)

ಪೃಥಗ್ರೋಗೋಕ್ತೌಷಧಗಳು

44. ಬೆವರಿಸುವದು, ವಿರೇಚನ, ವಮನ, ಲಂಘನ, ವಸ್ತಿ, ಲೇಪಹಾಕುವದು, ಹಳೇ ಕೆಂಪು ಶಾಲ್ಯಕ್ಕಿಗಳು, ಜಾಂಗಲ ಮೃಗಪಕ್ಷಿಗಳ ಸಾರುಗಳು, ಹೆಸರು ಸಾರು, ಹುರುಳಿಸಾರು, ಪಡುವಲಕಾಯಿ, ಬಾಳೆಕಾಯಿ, ಹಳೇ ಕಗ್ಗುಂಬಳ ಕಾಯಿ, ದಾಳಿಂಬ, ಹೊಸ ಮೂಲಂಗಿ, ಹರಳೆಣ್ಣೆ, ಆಕಾಶದ ನೀರು, ಸೈಂಧವಲವಣ, ದ್ರಾಕ್ಷೆ, ಮಚ್ಚಿಗೆ, ಹಳೇ ಬೆಲ್ಲ, ಶುಂಠಿ, ಓಮ, ಬೆಳ್ಳುಳ್ಳಿ, ಚಂಗಲಕೋಷ್ಠ, ಕೊತ್ತಂಬರಿ, ಕಾಳುಮೆಣಸು, ಸೌವೀರ, ಶುಕ್ತ, ಹಸಿಶುಂಠಿ, ಜೇನು, ವಾರುಣೀ ಮದ್ಯದ ನೀರು (ವಾರುಣೀ ರಸ), ಕಸ್ತೂರಿ, ಶ್ರೀಗಂಧ ಮತ್ತು ತಾಂಬೂಲ.

ಪಥ್ಯವರ್ಗ

45 ಬಾಯಾರಿಕೆಯ, ವಾಂತಿಯ, ಮೂತ್ರದ, ವಾಯುವಿನ, ಶುಕ್ರದ, ಕೆಮ್ಮಿನ, ತೇಗಿನ, ಶ್ರಮದ, ಶ್ವಾಸದ, ಮಲದ ಮತ್ತು ಕಣ್ಣೀರಿನ ವೇಗಗಳನ್ನು ತಡೆಯುವದು, ಸಹ್ಯಾದ್ರಿ ಮತ್ತು ವಿಂಧ್ಯಾಪರ್ವತಗಳಿಂದ ಹೊರಟ ನದಿಗಳ ನೀರು, ಕುರಿಯ ಹಾಲು, ಕೆಟ್ಟ ನೀರು, ಚೊಗರುಪದಾರ್ಥಗಳು, ವಿರುದ್ಧಾಹಾರವಿಹಾರ, ಬಿಸಿ-ಗುರು-ಕಫ ಪದಾರ್ಥಗಳು, ಹಳೇ ಸತ್ರಶಾಕ, ಕ್ಷಾರ, ಇಪ್ಪೆಹೂವು, ದಂತಕಾಷ್ಠದ ಉಪಯೋಗ ಮತ್ತು ರಕ್ತಮೋಕ್ಷಣ.

ಅಪಥ್ಯವರ್ಗ

46. ಹೃದಯದ ಸ್ವಾಭಾವಿಕವಾದ ಸ್ಥಾನ, ರೂಪ, ರಚನೆ, ಕೆಲಸ ಮುಂತಾದ ವಿವರಗಳನ್ನು ಪಾಶ್ಚಾತ್ಯರೀತ್ಯಾ 1ನೇ ಭಾಗದ II-126ನೇ ಸಂಖ್ಯೆಯಲ್ಲಿ ವಿವರಿಸಿಯದೆಯಷ್ಟೆ. ಆ ಹೃದಯಕ್ಕೆ ಸಂಬಂಧಪಟ್ಟ ವಿಕಾರಗಳನ್ನೂ, ಅವುಗಳಿಗೆ ಉಪಯುಕ್ತವಾದ ಚಿಕಿತ್ಸೋಪಚಾರಗಳನ್ನೂ, ನಿರೂಪಿಸುವದಕ್ಕೆ ರೇಯಿನೋಲ್ಡ್ಸ ಸಿಸ್ಟಂ ಆಫ್ ಮೆಡಿಸಿನ್ (A system of medicine by J. R. Reynolds) ಎಂಬ ಗ್ರಂಥದಲ್ಲಿ 814 ಪುಟಗಳ ಒಂದು ಇಡೀ ಪುಸ್ತಕವು ವಿನಿಯೋಗಿಸಲ್ಪ

ಪ್ರಕರಣಾಂತ ಟಿಪ್ಪಣೀ

ಟ್ಟಿದೆ. ಇದರಿಂದ ಹೃದ್ರೋಗ ಎಂಬ ವಿಷಯವು ಎಷ್ಟು ಅಗಾಧ ಎಂಬದನ್ನು ಊಹಿಸಬಹುದು. ಪಾಶ್ಚಾತ್ಯ ವೈದ್ಯದಲ್ಲಿ ಕಾಣುವ ಹೃದ್ರೋಗದ ಪ್ರಧಾನ ವಿಭಾಗಗಳು ಯಾವವೆಂದರೆ —

(1) ಗರ್ಭದೋಷದಿಂದ ಉಂಟಾಗುವ ಹೃದಯದ ರಚನಾವಿಕಾರ (Malformation of the heart).

(2) ಹೃದಯವು ತನ್ನ ಸ್ವೈಜಿಕ ಸ್ಥಾನವನ್ನು ಬಿಟ್ಟು ಇರುವದು (Malposition or Displacement of the heart)

(3) ಇಡೀ ಹೃದಯವು ಸ್ಥೂಲವಾಗುವದು (Hypertrophy of the heart)

(4) ಇಡೀ ಹೃದಯವು ಕ್ಷಯಿಸುವದು ಅಥವಾ ಕೃಶವಾಗುವದು (Atrophy of the heart)

(5) ಹೃದಯದ ಹೊದಿಕೆಯು ಬಾಯುವದು (Pericarditis)

(6) ಹೃದಯದ ಹೊದಿಕೆಯ ಎರಡು ಪದರುಗಳು ಒಂದಕ್ಕೊಂದು ಅಂಟಿಕೊಳ್ಳುವದು (Adherent Pericardium)

(7) ಹೃದಯದ ಹೊದಿಕೆಯ ಪದರುಗಳ ಮಧ್ಯದ ಎಡೆಯಲ್ಲಿ ನೀರು ತುಂಬುವದು (Hydro-Pericardium)

(8) ಆ ಪದರುಗಳ ನಡುವೆ ಇರುವ ಎಡೆಯಲ್ಲಿ ವಾಯು ತುಂಬಿಕೊಳ್ಳುವದು (Pneumo-Pericardium)

(9) ಆ ಎಡೆಯಲ್ಲಿ ನೀರು ಮತ್ತು ವಾಯು ತುಂಬುವದು (Pneumo-Hydro-Pericardium).

(10) ಆ ಎಡೆಯಲ್ಲಿ ರಕ್ತ ತುಂಬಿಕೊಳ್ಳುವದು (Hæmo-Pericardium).

(11) ಹೃದಯದ ಗೋಡೆಗಳ ಹಾಗಿರುವ ಮಾಂಸವೇಷ್ಟನಗಳು ಬಾಯುವದು (Carditis)

(12) ಹೃದಯದೊಳಗಿನ ಮಾಂಸಖಂಡಗಳು ಬಾಯುವದು (Myo-carditis)

(13) ಹೃದಯದ ಹೊದಿಕೆಯ ಒಳಪದರಿನಲ್ಲಿ ಬಾವು (Endo-carditis)

(14) ಹೃದಯದ ಅಂಕಣಗಳ ವಿಸ್ತರಿಸುವಿಕೆ ಅಥವಾ ವೃದ್ಧಿ (Dilatation or Hypertrophy of the cavities).

(15) ಹೃದಯದ ಅಂಕಣಗಳ ದ್ವಾರಗಳಲ್ಲಿ ನಾಲ್ಕಕ್ಕೆ ಇರುವ ಮುಚ್ಚಳಗಳೊಳಗೆ ಯಾವದರಲ್ಲಿಯಾದರೂ ತಡೆಯುಂಟಾಗುವದು (Stenosis), ಅಥವಾ ಅಶಕ್ತಿಯಿಂದ ರಕ್ತದ ಅಂಶ ಹಿಂದಕ್ಕೆ ಬರುವದು (Regurgitation).

(16) ಹೃದಯದ ಎಡಭಾಗದಲ್ಲಿ, ಹೆಚ್ಚಾಗಿ ಕೆಳ ಅಂಕಣದಲ್ಲಿ, ಉಂಟಾಗುವ ಸ್ಫೋಟಕ (ಗುಳ್ಳೆ ಹಾಗಿನ ಉಬ್ಬುವಿಕೆ — Aneurism of the heart).

(17) ಹೃದಯದಲ್ಲಿ ಉಂಟಾಗುವ ಮೇದೋರೋಗ (Fatty Degeneration)

(18) ಹೃದಯದಲ್ಲಿ ಉತ್ಪನ್ನವಾಗುವ ಕ್ಷಯದ ಮೊಳಕೆ ಅಥವಾ ಸೂಕ್ಷ್ಮಗಡ್ಡೆ, (Tubercle), ಫರಂಗಿಹುಣ್ಣು (Syphilis), ದುಷ್ಟವ್ರಣ (Cancer), ಮುಂತಾದ ಅಧಿರೋಹಗಳು (ಹೊಸ ಬೆಳಿಕೆಗಳು — New growths)

(19) ಎದೆಯ ಕೋಲೆಲುಬಿನ ಅಡಿಯಲ್ಲಿ ಸಂಭವಿಸುವ ಅತಿ ತೀವ್ರವಾದ ವೇದನೆ (Angina Pectoris).

(20) ಹೃದಯದ ಸ್ಫೋಟನ (ಒಡಯುವಿಕೆ—Rupture of the heart).

(21) ಎದೆಯ ಅಧಿಕಾರ (ಕೆಲಸ)ದಲ್ಲಿ ವ್ಯತಿಕ್ರಮಗಳು (Functional disorders of the heart)—(ಉಬ್ಬಸ, ನೋವು, ಆಯಾಸ, ತಲೆತಿರುಕು, ತಲೆನೋವು, ಮೂರ್ಛೆ, ಅತಿಬೆವರು, ಕೈಕಾಲುಗಳ ಕೊನೆಗಳಲ್ಲಿ ತಣಸು, ಕೋಪ, ಎದೆಯ ಕುಣಿತ (ತಲ್ಲಣ) ಮುಂತಾದ ಲಕ್ಷಣಗಳುಳ್ಳಂಥವು)

ಇವುಗಳು ಮತ್ತು ಇವುಗಳ ಪ್ರವಿಭಾಗಗಳು ಸೇರಿ, ಹೃದ್ರೋಗದ ವಿಧಗಳು ಸಾಧಾರಣವಾಗಿ ಐವತ್ತು ಎಂತ ಪಾಶ್ಚಾತ್ಯ ಡಾಕ್ಟರರು ಹೇಳುವದುಂಟು ಅವುಗಳೊಳಗೆ ಅನೇಕ ವಿಕಾರಗಳು ಅನ್ಯ ವ್ಯಾಧಿಗಳ ಲಕ್ಷಣಗಳಾಗಿ ಸಂಭವಿಸತಕ್ಕಂಥವು, ಅವುಗಳಿಗೆ ಪ್ರತ್ಯೇಕ ಚಿಕಿತ್ಸೆ ಬೇಕಾಗುವದಿಲ್ಲ, ಕೆಲವು ಚಿಕಿತ್ಸೆಗೆ ಒಳಪಡತಕ್ಕವಲ್ಲ, ಮತ್ತು ಕೆಲವು ವಿಕಾರಗಳು ಸಂಭವಿಸಿದ ವಿದ್ಯಮಾನವು ಮರಣಾನಂತರ ಮೃತಶರೀರದ ಶೋಧನದಿಂದ ತಿಳಿಯಬಹುದಾದವಲ್ಲದೆ, ರೋಗಿಯ ಜೀವಮಾನಕಾಲದಲ್ಲಿ ನಿರ್ಧಾರವಾಗಿ ಗೊತ್ತುಮಾಡಲು ಶಕ್ಯವಾದವಲ್ಲ.

ಆಯುರ್ವೇದದಲ್ಲಿಯೂ ವಾತದ ಕ್ಷಯ, ರಸದ ಕ್ಷಯ, ಓಜಸ್ಸಿನ ಕ್ಷಯ, ವಿದ್ರಧಿ, ಶ್ವಯಥು, ಗುಲ್ಮ, ಆವರಣರೋಗ. ವಾತರೋಗ, ಶೂಲೆ, ಪಾಂಡುರೋಗ, ಅಪತಂತ್ರಕ, ರಸಗತದೋಷ, ಸನ್ನಿಪಾತಜ್ವರ, ವಾತಿಕಜ್ವರ, ಕಾಮಜಜ್ವರ (ಸುಖಸನ್ನಿ), ಮುಂತಾದ ವ್ಯಾಧಿಗಳ ಲಕ್ಷಣಗಳೊಳಗೆ ಹೃದ್ರೋಗ ಅಥವಾ ಹೃತ್ಪೀಡೆ ಹೇಳಲ್ಪಟ್ಟದೆ, ಮತ್ತು ಅಂಥಾ ಸಂಗತಿಗಳಲ್ಲಿ ಸಾಧಾರಣವಾಗಿ ಹೃತ್ಪೀಡೆಗೆ ಪ್ರತ್ಯೇಕವಾಗಿ ಚಿಕಿತ್ಸೆ ಹೇಳಲ್ಪಟ್ಟಿರುವದಿಲ್ಲ.

ಯಾವ ಕ್ರಮದಲ್ಲಯಾದರೂ ವ್ಯಾಧಿಯ ರೂಪದಕ್ಕಿಂತಲೂ ಅದರ ಹೇತುವೇ ಚಿಕಿತ್ಸೆಗೆ ಮುಖ್ಯವಾದ್ದರಿಂದಲೂ, ಹೃದ್ರೋಗದ ರೂಪಾಂತರಗಳು ಎಷ್ಟು ಇದ್ದರೂ ಹೇತುಭೇದದ ಮೇಲೆ ಆ ರೋಗವು ಐದೇ ವಿಧ ಮತ್ತು ಆ ಐದು ವಿಧಗಳಿಗೆ ಉಪದೇಶ ಮಾಡಲ್ಪಟ್ಟ ಬೇರ ಬೇರೆ ಚಿಕಿತ್ಸಾವಿಧಾನಗಳಿಂದ ಉಪಚಾರ ಮಾಡಿದ್ದಲ್ಲಿ ಹೃದ್ರೋಗವು, ವರ್ಣಿಸಲ್ಪಡದ ರೂಪವುಳ್ಳದ್ದಾದಾಗ್ಯೂ, ಸಾಧ್ಯವರ್ಗದ್ದಾದರೆ ವಾಸಿಯಾಗುವದು ಎಂಬದು ಆಯುರ್ವೇದದ ಸಿದ್ಧಾಂತವಾದ್ದರಿಂದಲೂ, ಪಾಶ್ಚಾತ್ಯ ವೈದ್ಯದಲ್ಲ ಕಾಣುವ ರೋಗದ ರೂಪಾಂತರಗಳನ್ನೆಲ್ಲಾ ನಿರ್ಧಾರವಾಗಿ ತಿಳಿಯಲು ಯತ್ನಿಸುವದು ಆಯುರ್ವೇದೀಯ ಚಿಕಿತ್ಸಕರಿಗೆ ಹೆಚ್ಚು ಅಗತ್ಯವಲ್ಲ ಎನ್ನಬಹುದು. ಆದರೆ ಚೇತನಾಸ್ಥಾನವಾದ ಹೃದಯದಲ್ಲ ಸಂಭವಿಸಿದ ದೋಷಕ್ಕೆ ಚಿಕಿತ್ಸೆಮಾಡುವಲ್ಲ, ಅಥವಾ ಅನ್ಯರೋಗಕ್ಕೆ ಚಿಕಿತ್ಸೆಮಾಡುವಲ್ಲಿ ಹೃದಯದ ದೋಷಕ್ಕೆ ತಕ್ಕ ಲಕ್ಷ್ಯವಿಡದೆ, ವೈದ್ಯರು ಮಾಡಬಹುದಾದ ಅಲ್ಪ ತಪ್ಪಿತದ ದೆಸೆಯಿಂದ ರೋಗಿಗೆ ಪರಿಹಾರವಿಲ್ಲದ ಮಹತ್ತಾದ ಕೆಡಕು ಅಥವಾ ಮರಣ ಸಂಭವಿಸಬಹುದೆಂಬದನ್ನೂ, ಹೃದ್ರೋಗಕ್ಕೆ ಹೇಳಲ್ಪಟ್ಟ ಪರಿಹಾರಗಳಲ್ಲಿ ದ್ರವ್ಯಗುಣವಿಚಾರದ ದೃಷ್ಟಿಯಿಂದ ಬಹಳ ಅಭ್ಯಂತರ ಕಾಣುತ್ತದೆಂಬದನ್ನೂ, ಒಂದು ವಿಧದ ವಾತಿಕ ಹೃದಯರೋಗದಲ್ಲಿ ಪಥ್ಯವಾದ ಹಾಲು, ಮೊಸರು, ತುಪ್ಪ, ಬೆಲ್ಲ ಮುಂತಾದವು ಇತರ ಹೃದ್ರೋಗಗಳಲ್ಲಿ ಅಪಥ್ಯ (14ನೇ ಸಂಖ್ಯೆ ನೋಡಿ) ಎಂಬ ಉಪದೇಶವನ್ನೂ ಆಲೋಚಿಸಿದರೆ, ಮೇಲೆ ವಿವರಿಸಲ್ಪಟ್ಟ ಹೃದ್ರೋಗದ ರೂಪಭೇದಗಳನ್ನು ಸಹ ನಮ್ಮ ಪಂಡಿತರು ತಿಳಿಯುವದು ಎಷ್ಟು

ಉಪಯುಕ್ತ ಎಂಬದು ಯಾರಿಗಾದರೂ ಹೊಳೆಯದಿರಲಾರದು. ಹೃದಯದಲ್ಲಿ ವ್ರಣಗಳು, ಮೇದಸ್ಸಂಬಂಧವಾದ ಸ್ಫೋಟಕ, ವೃದ್ಧಿ ಮೊದಲಾದ ವಿಕಾರಗಳು, ಕ್ರಿಮಿದೋಷಗಳು, ಕಫವೃದ್ಧಿ, ಮುಂತಾದ ಲಕ್ಷಣವಿರುವಲ್ಲಿ ಹಾಲು, ಮೊಸರು, ಬೆಲ್ಲ ಮುಂತಾದ ದ್ರವ್ಯಗಳು ಅಹಿತ ಎಂಬದು ಸ್ಪಷ್ಟವೇ.

ಹೃದಯದ ವ್ಯಾಪಾರದಿಂದ ಸ್ವಾಭಾವಿಕವಾಗಿ ಉಂಟಾಗುವ ಶಬ್ದಗಳಲ್ಲಿ ಯಾವ ಭೇದ ಉಂಟಾಗಿದೆ ಎಂಬದನ್ನು ಸೂಕ್ಷ್ಮವಾಗಿ ಕೇಳಿ, ಆ ಭೇದದ ಆಧಾರದಿಂದ ಹೃದಯದಲ್ಲಿ ಸಂಭವಿಸಿರುವ ವಿಕಾರವನ್ನು ಊಹಿಸುವದಕ್ಕೆ ಅನುಕೂಲವಾಗುವ ಹಾಗೆ ರಚಿಸಲ್ಪಟ್ಟಿರುವ ಸ್ಟೆತೊಸ್ಕೋಪ್ (Stethoscope) ಎಂಬ ಉರಃಪರೀಕ್ಷಣ ಯಂತ್ರವನ್ನು ಡಾಕ್ಟರರು ಉಪಯೋಗಿಸುವಂತೆ ಆಯುರ್ವೇದೀಯ ಚಿಕಿತ್ಸೆಯನ್ನು ನಡಿಸುವವರಲ್ಲಿ ಅನೇಕರು ಉಪಯೋಗಿಸುವದುಂಟು. ಅದರ ಸಾರ್ಥಕಕ್ಕೆ ಹೃದಯದ ಸಹಜವಾದ ಅಧಿಷ್ಠಾನ, ರೂಪ, ರಚನೆ ಮತ್ತು ಅಧಿಕಾರಗಳನ್ನು ಕುರಿತು ಬಹು ಸೂಕ್ಷ್ಮವಾದ ಪರಿಜ್ಞಾನವೂ ಸ್ವಾನುಭವವೂ ಅಗತ್ಯ. ಸಾಧಾರಣವಾಗಿ ಮೂರು ನಾಡಿಗಳಲ್ಲಿಯೂ ಕ್ರಮವಾದ ಲೋಪಗಳು ಕಂಡರೆ, ವಿಶೇಷವಾಗಿ ಆ ಲಕ್ಷಣದೊಂದಿಗೆ ನಾಡಿಗಳು ಅತಿ ಬಲವಂತವಾಗಿ ಅಥವಾ ಅತಿ ಕ್ಷೀಣವಾಗಿ ಇದ್ದರೆ, ಅಥವಾ ಅವುಗಳ ಗತಿಯಲ್ಲಿ ಗಲಿಬಿಲಿ ಕಂಡರೆ, ಆ ರೋಗಿಯಲ್ಲಿ ಹೃದ್ರೋಗ ಇರಬಹುದೆಂಬ ಶಂಕೆಯಿಂದ ಈ ಪ್ರಕರಣದಲ್ಲಿ ಪಂಚವಿಧವಾದ ಹೃದ್ರೋಗಕ್ಕೆ ಹೇಳಲ್ಪಟ್ಟ ಲಕ್ಷಣಗಳು ಕಾಣುತ್ತವೋ ಎಂಬದನ್ನು ಪರೀಕ್ಷಿಸಿ ತಿಳಿಯಬೇಕು. ಹೃದಯದ ಸ್ಥಾನದಲ್ಲಿ ನೋವು, ಕುಣಿಯುವಿಕೆ ಮುಂತಾದ ಲಕ್ಷಣಗಳನ್ನು ರೋಗಿಯು ಹೇಳುವ ಸಂಗತಿಯಲ್ಲಿ, ಆ ಸ್ಥಾನದಲ್ಲಿ ವೈದ್ಯನು ತನ್ನ ಎಡಕೈಯ ಎರಡು ಬೆರಳುಗಳನ್ನು ಇಟ್ಟು ಬಲಕೈಯ ಎರಡು ಬೆರಳುಗಳಿಂದ ಲಘುವಾಗಿ ತಟ್ಟಿದರೆ ಒಳಗೆ ನೋವಾಗುತ್ತದೋ ಎಂಬದನ್ನು ತಿಳಿಯಬೇಕು. ನೋಯುತ್ತದೆನ್ನುವದಾದರೆ ಒಳಗೆ ಆ ಸ್ಥಾನದಲ್ಲಿ ರಕ್ತಪಿತ್ತಸಂಬಂಧವಾದ ಬಾವು, ವ್ರಣ ಮುಂತಾದ್ದು ಇರಬೇಕೆಂತ ಊಹಿಸಬಹುದು. ಹಾಗೆಯೇ ಸಾಧ್ಯವಿರುವ ಎಲ್ಲಾ ಕ್ರಮಗಳಿಂದ ಹೃದ್ರೋಗದ ಅಸ್ತಿತ್ವವನ್ನೂ ಅದರ ವಿಧವನ್ನೂ ಗೊತ್ತುಮಾಡಿಕೊಂಡು, ಅದಕ್ಕೆ ತಕ್ಕ ಉಪಚಾರಗಳನ್ನು ಸೂಕ್ಷ್ಮವಿಚಾರದಿಂದ ವೈದ್ಯನು ನಡಿಸತಕ್ಕದ್ದು. ಹೃದಯವು ಅಬಲಿಯಾಗಿದ್ದವನು ಕಾಫಿ, ಚಾ, ಕೊಕೋ, ಹೊಗೆಸೊಪ್ಪು, ಮದ್ಯ, ತೀಕ್ಷ್ಣ ವಸ್ತುಗಳು ಮುಂತಾದ ಉತ್ತೇಜನಕರವಾದ ಪದಾರ್ಥಗಳನ್ನೂ, ಅಫೀಮು, ಉಮ್ಮತ್ತ, ಭಂಗಿ ಮುಂತಾದ ಹೃದಯದ ಗತಿಯನ್ನು ಮಂದಮಾಡತಕ್ಕ ಪದಾರ್ಥಗಳನ್ನೂ ಉಪಯೋಗಿಸದಂತೆ ಉಪದೇಶಮಾಡತಕ್ಕದ್ದು, ಹಾಗೆಯೇ ವ್ಯಾಯಾಮ, ತ್ವರೆಯಾಗಿ ನಡೆಯುವದು, ಭಾರ ಹೊರುವದು, ಎತ್ತರಕ್ಕೆ ಹತ್ತುವದು ಮುಂತಾದ ಹೃದಯದ ಕೆಲಸವನ್ನು ಹೆಚ್ಚಿಸುವ ಶ್ರಮವನ್ನೂ ಅವನು ವರ್ಜಿಸತಕ್ಕದ್ದು; ಆಮಾಶಯವು ತುಂಬಿಕೊಂಡು ವಪಾವಹನವನ್ನು ಎತ್ತಿ ಹೃದಯಕ್ಕೆ ಪೀಡೆಯುಂಟಾಗದಂತೆ ಅನ್ನಪಾನಗಳಲ್ಲಿ ಅವನು ಮಿತವಾಗಿರತಕ್ಕದ್ದಲ್ಲದೆ, ವಾಯುಪದಾರ್ಥಗಳನ್ನು ವಿಶೇಷವಾಗಿ ಭುಂಜಿಸಬಾರದು; ಮತ್ತು ಮಲ ಬದ್ಧವಾಗದ ಹಾಗೆ ಜಾಗ್ರತೆ ತೆಗೆದುಕೊಳ್ಳಬೇಕು.

---

# ಅಧ್ಯಾಯ XIV.

## ಕ್ಷತಕ್ಷೀಣ (ಉರಃಕ್ಷತ, Hæmoptysis).

1 ಧನುಷಾಯಸ್ಯತೋ ಽತ್ಯರ್ಥಂ ಭಾರಮುದ್ವಹತೋ ಗುರುಮ್ |
ಪತತೋ ವಿಷಮೋಚ್ಚೇಭ್ಯೋ ಯುಧ್ಯಮಾನಸ್ಯ ಚಾಧಿಕೈಃ ||
ವೃಷಂ ಹಯಂ ವಾ ಧಾವನ್ತಂ ದಮ್ಯಂ ವಾನ್ಯಂ ನಿಗೃಹ್ಣತಃ |
ಶಿಲಾಕಾಷ್ಠಾಶ್ಮನಿರ್ಘಾತಾನ್ ಕ್ಷಿಪತೋ ನಿಘ್ನತಃ ಪರಾನ್ ||
ಅಧೀಯಮಾನಸ್ಯಾತ್ಯುಚ್ಚೈರ್ದೂರಂ ವಾ ವ್ರಜತೋ ದ್ರುತಮ್ |
ಮಹಾನದೀಂ ವಾ ತರತೋ ಗಜೈರ್ವಾ ಸಹ ಧಾವತಃ ||
ಸಹಸೋತ್ಪತತೋ ದೂರಂ ತೂರ್ಣಂ ಚಾತಿಪ್ರನೃತ್ಯತಃ |
ತಥಾನ್ಯೈಃ ಕರ್ಮಭಿಃ ಕ್ರೂರೈರ್ಭೃಶಮಭ್ಯಾಹತಸ್ಯ ವಾ ||
ವಿಕ್ಷತೇ ವಕ್ಷಸಿ ವ್ಯಾಧಿರ್ಬಲವಾನ್ ಸಮುದೀರ್ಯತೇ |
ಸ್ತ್ರೀಷು ಚಾತಿಪ್ರಸಕ್ತಸ್ಯ ರೂಕ್ಷಾಲ್ಪಪ್ರಮಿತಾಶಿನಃ ||
ಉರೋ ನಿರುಜ್ಯತೇ ತಸ್ಯ ಭಿದ್ಯತೇ ಽಥ ವಿದಹ್ಯತೇ || (ಚ 622)

ಕ್ಷತಕ್ಷೀಣದ ನಿದಾನ

ಬಿಲ್ಲುಬಾಣಗಳ ಪ್ರಯೋಗದಿಂದ ಅತಿಯಾಗಿ ಆಯಾಸಪಡುವದು, ಭಾರವಾದ ಹೊರೆಯನ್ನು ಹೊರುವದು, ಎತ್ತರವಾದ ಬೆಟ್ಟದ ತುದಿಗಳಿಂದ ಕೆಳಗೆ ಬೀಳುವದು, ತನಗಿಂತ ಬಲಿಷ್ಠರೊಂದಿಗೆ ಯುದ್ಧಮಾಡುವದು, ಓಡುತ್ತಿರುವ ಎತ್ತನ್ನು, ಅಥವಾ ಕುದುರೆಯನ್ನು, ಅಥವಾ ಕೈವಶಮಾಡಿಕೊಳ್ಳಬೇಕಾದ (ಆನೆ, ಒಂಟೆ, ಮುಂತಾದ) ಬೇರೆ ಪ್ರಾಣಿಯನ್ನು ಹಿಡಿದು ನಿಲ್ಲಿಸುವದು, ಶಿಲೆಯನ್ನು, ಕಟ್ಟಿಗೆಯನ್ನು, ಕಲ್ಲನ್ನು, ಅಥವಾ ಒಗೆಯುವ ಆಯುಧವನ್ನು ಎಸೆಯುವದು, ಶತ್ರುಗಳನ್ನು ಹೊಡೆಯುವದು, ಅತಿಗಟ್ಟಿಯಾಗಿ ಅಧ್ಯಯನ ಮಾಡುವದು, ದೂರದವರೆಗೆ ತ್ವರಿತವಾಗಿ ನಡೆಯುವದು, ಮಹಾನದಿಯನ್ನು ಈಸಿ ದಾಟುವದು, ಆನೆಗಳೊಂದಿಗೆ ಓಡುವದು, ಸಾಹಸದಿಂದ ದೂರಕ್ಕೆ ಹಾರುವದು, ಅತಿಯಾಗಿ ತ್ವರಿತದಿಂದ ನರ್ತನಮಾಡುವದು, ಅಥವಾ ಬೇರೆ ಕ್ರೂರವಾದ ಕರ್ಮಗಳಿಂದ ಚನ್ನಾಗಿ ಪೆಟ್ಟುತಾಗುವದು, ಇವುಗಳ ದೆಸೆಯಿಂದ ಎದೆಯಲ್ಲಿ ಹಿಂಸೆ (ಕ್ಷತ) ಉಂಟಾದರೆ, (ಉರಃಕ್ಷತ ಎಂಬ) ಬಲವಂತವಾದ ವ್ಯಾಧಿಯು ಉತ್ಪನ್ನವಾಗುತ್ತದೆ. ಮತ್ತು ಅತಿಯಾಗಿ ಸ್ತ್ರೀಯರಲ್ಲಿ ಸಂಗಮಾಡಿದ, ಅಥವಾ ರೂಕ್ಷವಾದ ಮತ್ತು ಪ್ರಮಾಣದಲ್ಲಿ ಅಲ್ಪವಾದ ಆಹಾರಗಳನ್ನು ಉಣ್ಣುತ್ತಿರುವ, ಮನುಷ್ಯನ ಎದೆಯಲ್ಲಿ ನೋವು, ಒಡಕು ಮತ್ತು ಉರಿ ಉಂಟಾಗುತ್ತವೆ.

ವರಾ 'ವಿದಹ್ಯತೇ' ಎಂಬಲ್ಲಿ 'ವಿಭಜ್ಯತೇ (ಭಾಗವಾಗುತ್ತದೆ) ಎಂಬ ಪಾಠಾಂತರ ಉಂಟು ಅದೇ ಸರಿಯಾದದ್ದು, ಉರಿ ಉಂಟಾಗಲಿಕ್ಕೆ ಕಾರಣವಿಲ್ಲ ಎಂತ ಮ ವ್ಯಾ (ಪು 91) ಆದರೆ ಉರಃಕ ತದಲ್ಲಿ ಎದೆ ಬಹಳ ಸುಡುತ್ತದೆ ಎಂತ ಸು ಹೇಳಿದ್ದಾನೆ (ಪು 798) ಹಿಂದಿನ Vನೇ ಅ. ೨ನೇ ಸಂ ನೋಡಿ

2. ಪ್ರಪೀಡ್ಯತೇ ತತಃ ಪಾರ್ಶ್ವೇ ಶುಷ್ಯತ್ಯಂಗಂ ಪ್ರವೇಪತೇ |
ಕ್ರಮಾದ್ವೀರ್ಯಂ ಬಲಂ ವರ್ಣೋ ರುಚಿರಗ್ನಿಶ್ಚ ಹೀಯತೇ ||

ಕ್ಷತಕ್ಷೀಣದ ಲಕ್ಷಣ ಮತ್ತು ಪೂರ್ವರೂಪ

ಜ್ವರೋ ವ್ಯಥಾ ಮನೋದೈನ್ಯಂ ವಿಡ್ಭೇದೋಽಗ್ನಿವಧಸ್ತಥಾ ।
ದುಷ್ಟಃ ಶ್ಯಾವಃ ಸುದುರ್ಗನ್ಧಃ ಪೀತೋ ವಿಗ್ರಥಿತೋ ಬಹುಃ ॥
ಕಾಸಮಾನಸ್ಯ ಚ ಶ್ಲೇಷ್ಮಾ ಸರಕ್ತಃ ಸಂಪ್ರವರ್ತತೇ ।
ಸಕ್ಷತಃ ಕ್ಷೀಯತೇಽತ್ಯರ್ಥಂ ತಥಾ ಶುಕ್ರೌಜಸೋಃ ಕ್ಷಯಾತ್ ॥
ಅವ್ಯಕ್ತಂ ಲಕ್ಷಣಂ ತಸ್ಯ ಪೂರ್ವರೂಪಮಿತಿ ಸ್ಮೃತಮ್ ।
ಉರೋರುಕ್ ಶೋಣಿತಚ್ಛರ್ದಿಃ ಕಾಸೋ ವೈಶೇಷಿಕಃ ಕ್ಷತೇ ।
ಕ್ಷೀಣೇ ಸರಕ್ತಮೂತ್ರತ್ವಂ ಪಾರ್ಶ್ವಪೃಷ್ಠಕಟಿಗ್ರಹಃ (ಚ. 622-3)

ಉರಃಕ್ಷತದಿಂದ ಪಕ್ಕಗಳಲ್ಲಿ ಬಹಳವಾದ ಪೀಡೆ, ದೇಹ ಬತ್ತುವದು, ನಡುಕು, ಕ್ರಮೇಣ ವೀರ್ಯ, ಬಲ, ವರ್ಣ, ರುಚಿ ಮತ್ತು ಅಗ್ನಿ ಕ್ಷಯಿಸುವದು, ಜ್ವರ, ವ್ಯಥ, ಮನಸ್ಸಿನ ದೀನತೆ (ನಿಸ್ತೂಕತೆ), ಮಲಭೇದಿ (ಸಡಲಿಕೆ), ಅಗ್ನಿನಾಶ, ಸಹ ಉಂಟಾಗುವದಲ್ಲದೆ, ಕೆಮ್ಮುವಾಗ್ಗೆ ದೋಷಯುಕ್ತವಾದ, ಕಪಿಶ ಅಥವಾ ಅರಸಿನ ವರ್ಣದ, ದುರ್ವಾಸನೆಯುಳ್ಳ, ಗಂಟುಕಟ್ಟಿ ಕೊಂಡಿರುವ ಮತ್ತು ರಕ್ತಯುಕ್ತವಾದ ಕಫ ಬಹಳ ಹೊರಗೆ ಬರುತ್ತದೆ. ಹಾಗೆಯೇ ಶುಕ್ರದ ಮತ್ತು ಓಜಸ್ಸಿನ ಕ್ಷಯದಿಂದ ಕ್ಷತವುಳ್ಳವನು ಅತಿಯಾಗಿ ಕ್ಷಯಿಸುತ್ತಾನೆ (ಕ್ಷೀಣನಾಗುತ್ತಾನೆ). ಈ ಲಕ್ಷಣಗಳು ತೋರಿಸಿಕೊಳ್ಳದೆ ಸೂಕ್ಷ್ಮವಾಗಿರುವದು ಅದರ ಪೂರ್ವರೂಪ ಎಂತ ಹೇಳುತ್ತಾರೆ. ಎದೆನೋವು, ರಕ್ತವಾಂತಿ ಮತ್ತು ವಿಶೇಷವಾದ ಕೆಮ್ಮು ಕ್ಷತದ (ವಿಶೇಷ) ಲಕ್ಷಣ. ಕ್ಷೀಣದಲ್ಲಿ ಮೂತ್ರವು ರಕ್ತಮಿಶ್ರವಾಗಿರುವದು ಮತ್ತು ಪಾರ್ಶ್ವಗಳಲ್ಲಿಯೂ, ಬೆನ್ನಿನಲ್ಲಿಯೂ, ಸೊಂಟದಲ್ಲಿಯೂ ಹಿಡಿತ, ಈ ಲಕ್ಷಣಗಳು ಕಾಣುವವು.

ಷರಾ ಚರಕನು ಶೋಷನಿದಾನದಲ್ಲಿ ಸಾಹಸದಿಂದ ಉರಃಕ್ಷತ ಉಂಟಾಗಿ, ಅದರ ಪರಿಣಾಮವಾಗಿ ಶೋಷ ಉಂಟಾಗುತ್ತದೆಂತಲೂ, ಹಾಗೆಯೇ ರೂಕ್ಷವಾದ ಅಥವಾ ಅಲ್ಪವಾದ ಆಹಾರದಿಂದ ರಸಕ್ಷಯ, ಅತಿಯಾದ ಸ್ತ್ರೀಸಂಭೋಗದಿಂದ ಶುಕ್ರಕ್ಷಯ, ಉಂಟಾಗಿ ಆ ಕ್ಷಯದಿಂದ ಶೋಷ ಉಂಟಾಗುತ್ತದೆಂತಲೂ, ಶೋಷದ ನಾಲ್ಕು ಕಾರಣಗಳೊಳಗೆ ಸಾಹಸ ಮತ್ತು ಕ್ಷಯ ಎಂಬ ಎರಡು ಕಾರಣಗಳ ಕುರಿತು ಬರೆದಿರುತ್ತಾನೆ ಶುಕ್ರಕ್ಷಯದ ಪರಿಣಾಮವಾಗಿ ಆಗಲಿ, ರಸಕ್ಷಯದ ಪರಿಣಾಮವಾಗಿ ಆಗಲಿ, ಉರಃಕ್ಷತ ಉಂಟಾಗುತ್ತದೆಂತ ಅಲ್ಲಿ ಹೇಳಲಿಲ್ಲ ಶುಕ್ರಕ್ಷಯದಲ್ಲಿ ರಕ್ತವು ಶುಕ್ರಮಾರ್ಗವಾಗಿ ಸ್ರವಿಸುತ್ತದೆಂತ ಮಾತ್ರ ಹೇಳಿದ್ದಾನೆ ಈ ಪ್ರಕರಣದಲ್ಲಿ ರೂಕ್ಷಾಲ್ಪ ಅಶನಗಳಿಂದಲೂ ಅತಿವ್ಯವಾಯದಿಂದಲೂ ಉರಃಕ್ಷತ ಉಂಟಾಗಬಹುದೆಂತ ಹೇಳಲ್ಪಟ್ಟದೆ ಸುಶ್ರುತನು ಉರಃಕ್ಷತದ ಹೇತುಗಳೊಳಗೆ ಅತಿಮೈಥುನವನ್ನು ಹೇಳಿದ್ದಾನೆ, ಉಪವಾಸಾದಿಯನ್ನು ಹೇಳಲಿಲ್ಲ ಮತ್ತು ಶೋಷಪ್ರಕರಣದಲ್ಲಿ ಉರಃಕ್ಷತವನ್ನು ನಿದಾನ ಮತ್ತು ಲಕ್ಷಣಗಳಿಂದ ವರ್ಣಿಸಿ, ಅದು ಶೋಷದ ಭೇದವಲ್ಲ, ಕ್ಷಯದಭೇದ, ಕ್ಷಯಕ್ಕೆ ಆಯಾ ಧಾತುಭೇದದ ಮೇಲೆ ಉಪದೇಶ ಮಾಡಲ್ಪಟ್ಟ ಸಾಧಾರಣ ಕ್ರಮದಿಂದ ಉಪಚಾರಮಾಡಬೇಕು, ಎಂತ ಹೇಳಿಬಿಟ್ಟಿದ್ದಾನೆ ಚರಕನು ನಿದಾನಭಾಗದಲ್ಲಿ ಶೋಷವನ್ನು ವರ್ಣಿಸಿ, ಚಿಕಿತ್ಸಾಭಾಗದಲ್ಲಿ 'ರಾಜಯಕ್ಷ್ಮಚಿಕಿತ್ಸಿತಂ' ಎಂಬ ಹೆಸರಿನಿಂದ 15 ಪುಟದ ಒಂದು ಅಧ್ಯಾಯವನ್ನೂ, 'ಕ್ಷತಕ್ಷೀಣಚಿಕಿತ್ಸಿತಂ' ಎಂಬ ಶಿರೋನಾಮದಿಂದ 8 ಪುಟದ ಒಂದು ಅಧ್ಯಾಯವನ್ನೂ, ಬೇರೆ ಬೇರೆ ಬರೆದಿರುತ್ತಾನಲ್ಲದೆ, ಶೋಷಕ್ಕೆ ಒಟ್ಟಾಗಿ ಚಿಕಿತ್ಸೆಯನ್ನು ಬರೆದಿರುವದಿಲ್ಲ, ಮತ್ತು ರಾಜಯಕ್ಷ್ಮಕ್ಕೆ ಚಿಕಿತ್ಸೆ ಬರೆಯುವಲ್ಲಿ ಯಕ್ಷ್ಮಿಗಳ ಬಲ ಮಾಂಸಗಳ ವೃದ್ಧಿಗೆ ಮುಂದೆ ಕ್ಷತಕ್ಷೀಣಚಿಕಿತ್ಸೆಯಲ್ಲಿ ಉಪದೇಶಮಾಡಲ್ಪಡುವ ಪಥ್ಯವನ್ನು ಪ್ರಯೋಗಿಸಬೇಕೆಂತಲೂ, ಈ ಕ್ಷತಕ್ಷೀಣ ಪ್ರಕರಣದಲ್ಲಿ ಕ್ಷತಕ್ಷೀಣ ರೋಗವನ್ನು ಉಪೇಕ್ಷಿಸಿದರೆ ಅನುಬಂಧವಾಗಿ ಯಕ್ಷ್ಮರೋಗ ಬರುತ್ತದಾದ್ದರಿಂದ, ಆ ರೋಗ ಬರುವದಕ್ಕೆ ಮೊದಲಾಗಿ ಬೇಗನೇ ಕ್ಷತಕ್ಷೀಣವನ್ನು ಜಯಿಸಬೇಕೆಂತಲೂ, ಬರೆದಿರುತ್ತಾನೆ ಚಿ ಸಾ. ಸಂ ದಲ್ಲಿ ಈ ಪ್ರಕರಣಕ್ಕೆ 'ಕ್ಷತಕ್ಷಯಾಧಿಕಾರ' ಎಂಬ ಶಿರೋನಾಮ ಕೊಡಲ್ಪಟ್ಟದೆ ಇದರಿಂದ ಯಾವ ಕಾರಣದಿಂದಾದರೂ ಉರಃಕ್ಷತ ಉಂಟಾದಲ್ಲಿ ಅದಕ್ಕೂ, ಕ್ಷಯಗಳಿಗೂ, ತ್ರಿದೋಷಗಳು ಮತ್ತು ರಾಜಯಕ್ಷ್ಮದ ಸಮಸ್ತ ಲಕ್ಷಣಗಳು ಅವುಗಳಲ್ಲಿ ಉಂಟಾಗಲಿಲ್ಲವಾದರೆ, ಈ ಅಧ್ಯಾಯದಲ್ಲಿ ಉಪದೇಶಮಾಡಲ್ಪಟ್ಟ ಪ್ರಕಾರ ಚಿಕಿತ್ಸೆ ಮಾಡತಕ್ಕದ್ದೆಂಬದು ಚರಕನ ಮತ ಎಂತ ಸ್ಪಷ್ಟವಾಗುತ್ತದೆ ಈ ವಿಚಾರದಲ್ಲಿ ಉರಃಕ್ಷತವಿಲ್ಲದೇನೇ ರಕ್ತವಾಂತಿ ಮತ್ತು ರಕ್ತಮಿಶ್ರವುಳ್ಳ ಕಫ ಉಂಟಾಗಬಹುದೆಂಬದನ್ನು ನೆನಪಿನಲ್ಲಿಟ್ಟುಕೊಳ್ಳಬೇಕು ಕ್ಷತದ ಕೆಮ್ಮಿನಲ್ಲಿ ರಕ್ತಮಿಶ್ರವಾದ ಉಗುಳು, ಮತ್ತು ಕ್ಷಯಜ ಕೆಮ್ಮಿನಲ್ಲಿ ದುರ್ಗಂಧವುಳ್ಳ, ಹಸರು ಮತ್ತು ರಕ್ತವರ್ಣದ, ಕೀವಿನ ಹಾಗಿನ ಕಫದ ಉಗುಳು, ಬರುತ್ತದೆಂತ ಹಿಂದೆ ಹೇಳಲ್ಪಟ್ಟದೆ ಕೆಳಗಿನ 28ನೇ ಸಂಖ್ಯೆ ನೋಡಿ

3 ಅಲ್ಪಲಿಂಗಸ್ಯ ದೀಪ್ತಾಗ್ನೇಃ ಸಾಧ್ಯೋ ಬಲವತೋ ನರ(ವ)ಃ |
ಗತೇ ಸಂವತ್ಸರೇ ಯಾಪ್ಯಃ ಸರ್ವಲಿಂಗನ್ತು ವರ್ಜಯೇತ್ || (ಚ. 623)

ಸಾಧ್ಯಾಸಾಧ್ಯ ವಿಚಾರ

ಚುರುಕಾದ ಅಗ್ನಿಯುಳ್ಳ ಮತ್ತು ಬಲವಂತನಾದ ರೋಗಿಯಲ್ಲಿ, ರೋಗದ ಲಕ್ಷಣಗಳು ಅಲ್ಪವಾಗಿದ್ದು, ರೋಗವು ಹೊಸತಾಗಿದ್ದರೆ, ಅದು ಸಾಧ್ಯ. ಒಂದು ವರ್ಷಕಾಲ ಕಳೆದ ಮೇಲೆ ಅದು ಯಾಪ್ಯ. ರೋಗದ ಸರ್ವ ಲಕ್ಷಣಗಳು ಕಾಣುವ ರೋಗಿಯನ್ನು ಚಿಕಿತ್ಸೆಮಾಡದೆ ಬಿಡಬೇಕು (ಅಂದರೆ ಅಂಥಾದ್ದು ಅಸಾಧ್ಯ).

4. ಉರೋ ಮತ್ವಾ ಕ್ಷತಂ ಲಾಕ್ಷಾಂ ಪಯಸಾ ಮಧುಸಂಯುತಾಮ್ |
ಸದ್ಯ ಏವ ಪಿಬೇಜ್ಜೀರ್ಣೇ ಪಯಸಾದ್ಯಾತ್ ಸಶರ್ಕರಮ್ ||
ಪಾರ್ಶ್ವವಸ್ತಿರುಜಶ್ಚಾಲ್ಪಪಿತ್ತಾಗ್ನಿಸ್ತಾಂ ಸುರಾಯುತಾಮ್ |
ಭಿನ್ನವಿಟ್ಕಃ ಸಮುಸ್ತಾತಿವಿಷಾಂ ಪಾಠಾಂ ಸವತ್ಸಕಾಮ್ ||
ಲಾಕ್ಷಾಂ ಸರ್ಪಿರ್ಮಧೂಚ್ಛಿಷ್ಟಂ ಜೀವನೀಯಗಣಂ ಸಿತಾಮ್ |
ತ್ವಕ್‍ಕ್ಷೀರೀಸಮ್ಮಿ(ಮಿ)ತಂ ಕ್ಷೀರೇ ಪಕ್ತ್ವಾ ದೀಪ್ತಾನಲಃ ಪಿಬೇತ್
ಇಕ್ಷ್ವಾಲಿಕಬಿಸಗ್ರನ್ಥಿಪದ್ಮಕೇಶರಚನ್ದನೈಃ |
ಶೃತಂ ಪಯೋ ಮಧುಯುತಂ ಸನ್ಧಾನಾರ್ಥಂ ಪಿಬೇತ್ ಕ್ಷತೀ ||
(ಚ 623)

ಕ್ಷತದ ಸಂಧಾನಕರವಾದ ಔಷಧಯೋಗಗಳು

ಎದೆಯೊಳಗೆ ಕ್ಷತವಾಗಿದೆ ಎಂತ ತಿಳಿದ ಕೂಡಲೇ, ಕಡ್ಡಿಅರಗನ್ನು ನುಣ್ಣಗಾಗಿ ಚೂರ್ಣಿಸಿ, ಆ ಚೂರ್ಣವನ್ನು ಹಾಲಿನಲ್ಲಿ ಕಲಸಿ, ಜೇನು ಕೂಡಿಸಿಕೊಂಡು, ಪಾನಮಾಡತಕ್ಕದ್ದು. ಅದು ಜೀರ್ಣವಾದ ಮೇಲೆ ಹಾಲಿನಿಂದ ಅನ್ನವನ್ನು, ಸಕ್ಕರ ಕೂಡಿಸಿಕೊಂಡು, ಉಣ್ಣಬೇಕು. ಪಾರ್ಶ್ವಗಳಲ್ಲಿಯೂ ವಸ್ತಿಯಲ್ಲಿಯೂ ನೋವಿರುವ ರೋಗಿಯ ಪಿತ್ತವೂ ಅಗ್ನಿಯೂ ಅಲ್ಪವಾಗಿದ್ದರೆ, ಆ ಅರಗಿನ ಚೂರ್ಣವನ್ನು ಮದ್ಯದಲ್ಲಿ ಕಲಸಿ ಕುಡಿಯಬೇಕು; ಮಲ ಒಡೆದದ್ದಾಗಿದ್ದರೆ (ತೆಳ್ಳಗಾಗಿದ್ದರೆ), ಭದ್ರಮುಷ್ಟಿ, ಅತಿವಿಷ, ಪಾಡಾವಳಿಗಡ್ಡೆ ಮತ್ತು ಕೊಡಸಿಗನ ಚಕ್ಕ, ಇವುಗಳ ಚೂರ್ಣವನ್ನು ಅರಗಿನ ಚೂರ್ಣದೊಂದಿಗೆ ಕೂಡಿಸಿಕೊಳ್ಳಬೇಕು. ರೋಗಿಯ ಅಗ್ನಿಯು ಚುರುಕಾಗಿದ್ದರೆ, ಅರಗು, ತುಪ್ಪ, ಜೇನುಮೇಣ, ಜೀವನೀಯ ಗಣದ ಔಷಧಗಳು, ಸಕ್ಕರೆ, ಬಿದಿರುಪ್ಪು ಮತ್ತು ಗೋದಿಹಿಟ್ಟು, ಇವುಗಳನ್ನು ಹಾಲಿನಲ್ಲಿ ಬೇಯಿಸಿ ಕುಡಿಯಬೇಕು. ಕಾಶದರ್ಭೆ, ತಾವರೆದಂಟು, ಭದ್ರಮುಷ್ಟಿ, ತಾವರೆಕೇಸರ, ಶ್ರೀಗಂಧ, ಇವುಗಳನ್ನು ಕೂಡಿಸಿ ಮಾಡಿದ ಹಾಲುಕಷಾಯವನ್ನು, ಜೇನು ಕೂಡಿಸಿಕೊಂಡು, ಕ್ಷತ ರೋಗಿಯು ಪಾನಮಾಡುವದರಿಂದ ಗಾಯವು (ಒಡಕು) ಕೂಡಿಕೊಳ್ಳುವದು.

ಪಠಾ 3ನೇ ಶ್ಲೋಕದಲ್ಲಿ ‘ಸಮ್ಮಿತಂ’ ಎಂಬದರ ಬದಲಾಗಿ ‘ಸಮಿತಂ’ ಎಂತ ಪಾಠವಿಟ್ಟು ‘ಸಮಿತ’ ಎಂದರೆ ಗೋಧಿಹಿಟ್ಟು ಎಂತ ಇಂದು ವ್ಯಾ. (ಅ ಸಂ II 130) ‘ಸಮಿತಾ’ ಎಂದರೆ ಗೋಧಿಹಿಟ್ಟು ‘ಸಮಿತ’ ಶಬ್ದ ಆ ಅರ್ಥದಲ್ಲಿ ಕಾಣಲಿಲ್ಲ ‘ಸಮ್ಮಿತಂ’ ಎಂತ ಪಾಠವಿಟ್ಟುಕೊಂಡರೆ ಗೋಧಿಹಿಟ್ಟನ್ನು ಬಿಟ್ಟು, ಮಿಕ್ಕವುಗಳನ್ನೇ ಹಾಲಿನಲ್ಲಿ ಬೇಯಿಸಿ, ಆ ಹಾಲನ್ನು ಕುಡಿಯುವದೆಂತ ಅರ್ಥವಾಗುವದು ಜೀವನೀಯಗಣದ ಎಲ್ಲಾ ಔಷಧಗಳ ಒಟ್ಟು ತೂಕವೂ ಮಿಕ್ಕ ದ್ರವ್ಯಗಳಲ್ಲಿ ಪ್ರತಿಯೊಂದರ ತೂಕವೂ ಅರಗಿನ ತೂಕಕ್ಕೆ ಸಮಾನ ಗ್ರಂಥಿ ಎಂದರೆ ಪಿಪ್ಪಲಿಮೂಲ ಎಂತಲೇ ಒಂದು ಪುಸ್ತಕದಲ್ಲಿ ಅರ್ಥ ಬರೆಯಲ್ಪಟ್ಟದ್ದು ಕಾಣುತ್ತದೆ. ಕ್ಷತಸಂಧಾನಕ್ಕೆ ಅದರ ತೀಕ್ಷ್ಣತೆಯು ವಿರುದ್ಧವಾಗಬಹುದಾದ್ದರಿಂದ, ಭದ್ರಮುಷ್ಟಿ ಎಂಬ ಅರ್ಥವನ್ನು ತೆಗೆದುಕೊಳ್ಳುವದೇ ಯುಕ್ತವಾಗಿ ತೋರುತ್ತದೆ

ರಕ್ತಷ್ಠೀವೀ ಪಿಬೇತ್ಸಿದ್ಧಂ ಲಾಕ್ಷಾರಸಪಯೋಘೃತೈಃ |
ವರ್ಷಾಭೂಶರ್ಕರಾಮುಸ್ತಶಾಲಿತಣ್ಡುಲಜಂ ರಜಃ ||
ಲಾಕ್ಷಾಚೂರ್ಣನ್ತು ಸುಕೃತಂ ಕ್ಷೌದ್ರಾಜ್ಯೇನ ಸಮನ್ವಿತಮ್ |
ಸಕೃಲ್ಲೀಢಂ ಶಮಯತಿ ಶೋಷೋದ್ಭೂತಾಂ ವಮಿಂ ತಥಾ ||
(ಚಿ. ಸಾ. ಸಂ 236)

ಪುನರ್ನವಿಬೇರಿನ ಚೂರ್ಣ, ಸಕ್ಕರೆ, ಭದ್ರಮುಷ್ಟಿಯ ಚೂರ್ಣ ಶಾಲ್ಯಕ್ಕಿಪುಡಿ, ಇವುಗಳನ್ನು, ಅರಗಿನ ಕಷಾಯ, ಹಾಲು ಮತ್ತು ತುಪ್ಪ ಕೂಡಿಸಿ, ಬೇಯಿಸಿ (ಮಾಡಿದ ಹಾಲು-ಕಷಾಯ ಅಥವಾ ಪಾಯಸವನ್ನು) ಕುಡಿಯುವದರಿಂದ ರಕ್ತದ ಉಗುಳು ವಾಸಿಯಾಗುವದು. ಹಾಗೆಯೇ, ಅರಗಿನ ಬಹು ನುಣ್ಣಗಿನ ಚೂರ್ಣವನ್ನು ತುಪ್ಪದಲ್ಲಿ ಕಲಸಿ, ಜೇನು ಕೂಡಿಸಿಕೊಂಡು, ಒಮ್ಮೆ ನೆಕ್ಕುವದರಿಂದ ರಕ್ತದ ಉಗುಳು ಮತ್ತು ಶೋಷದಿಂದ ಉತ್ಪನ್ನವಾದ (ರಕ್ತ) ವಾಂತಿ ಶಮನವಾಗುವವು.

5. ಜ್ವರ ಮತ್ತು ಉರಿಯುಳ್ಳ ಕ್ಷತಕ್ಕೆ ಉಪಚಾರ

ಯವಾನಾಂ ಚೂರ್ಣಮಾದಾಯ ಕ್ಷೀರಸಿದ್ಧಂ ಘೃತಪ್ಲುತಮ್ |
ಜ್ವರದಾಹೇ ಸಿತಾಕ್ಷೌದ್ರಶಕ್ತೂನ್ ವಾ ಪಯಸಾ ಪಿಬೇತ್ || (ಚ. 623)

ಜ್ವರ ಮತ್ತು ಉರಿಯುಳ್ಳ ಕ್ಷತದಲ್ಲಿ ಯವೆಗೋದಿಯ ಹಿಟ್ಟನ್ನು ಹಾಲಿನಲ್ಲಿ ಬೇಯಿಸಿ, ತುಪ್ಪ ಕೂಡಿಸಿಕೊಂಡು, ಅಥವಾ ಯವೆಗೋದಿಯ ಹುರಿದ ಹಿಟ್ಟನ್ನು ಹಾಲಿನಲ್ಲಿ ಕಲಸಿ, ಸಕ್ಕರೆ ಮತ್ತು ಜೇನು ಕೂಡಿಸಿಕೊಂಡು, ರೋಗಿಯು ಕುಡಿಯತಕ್ಕದ್ದು.

6. ಗಂಟುಗಳಲ್ಲಿ ನೋವಿರುವ ಕೆಮ್ಮಿಗೆ ಉಪಚಾರ

ಕಾಸೀ ಪರ್ವಾಸ್ಥಿಶೂಲೀ ಚ ಲಿಹ್ಯಾತ್ ಸಘೃತಮಾಕ್ಷಿಕಾಃ |
ಮಧೂಕಮಧುಕದ್ರಾಕ್ಷಾತ್ವಕ್ಕ್ಷೀರೀಪಿಪ್ಪಲೀಬಲಾಃ || (ಚ. 623)

ಕೆಮ್ಮು, ಮತ್ತು ಗಂಟಲುಬುಗಳ ನೋವುಳ್ಳಾತನು, ಇಪ್ಪೇ ಹೂವು, ಜ್ಯೇಷ್ಠಮಧು, ದ್ರಾಕ್ಷೆ, ಬಿದಿರುಪ್ಪು, ಹಿಪ್ಪಲಿ ಮತ್ತು ಕಲ್ಲಂಗಡಲೆಬೇರಿನ ಸಿಪ್ಪೆ, ಇವುಗಳ ಚೂರ್ಣವನ್ನು ತುಪ್ಪದಲ್ಲಿ ಕಲಸಿ, ಜೇನು ಕೂಡಿಸಿಕೊಂಡು, ನೆಕ್ಕತಕ್ಕದ್ದು.

7. ಏಲಾದಿ ಗುಟಿಕಾ

ಏಲಾಪತ್ರತ್ವಚೋಽರ್ದ್ಧಾಕ್ಷಾಃ ಪಿಪ್ಪಲ್ಯರ್ಧಪಲಂ ತಥಾ |
ಸಿತಾಮಧುಕಖರ್ಜೂರಮೃದ್ವೀಕಾಶ್ಚ ಪಲೋನ್ಮಿತಾಃ ||
ಸಂಚೂರ್ಣ್ಯ ಮಧುನಾ ಯುಕ್ತಾ ಗುಲಿಕಾಃ ಸಮ್ಪ್ರಕಲ್ಪಯೇತ್ |
ಅಕ್ಷಮಾತ್ರಾಂ ತತಶ್ಚೈಕಾಂ ಭಕ್ಷಯೇನ್ನಾ ದಿನೇ ದಿನೇ ||
ಕಾಸಂ ಶ್ವಾಸಂ ಜ್ವರಂ ಹಿಕ್ಕಾಂ ಛರ್ದಿಂ ಮೂರ್ಚ್ಛಾಂ ಮದಂ ಭ್ರಮಮ್ |
ರಕ್ತನಿಷ್ಠೀವನಂ ತೃಷ್ಣಾಂ ಪಾರ್ಶ್ವಶೂಲಮರೋಚಕಮ್ ||
ಶೋಷಪ್ಲೀಹಾಢ್ಯವಾತಾಂಶ್ಚ ಸ್ವರಭೇದಂ ಕ್ಷತಂ ಕ್ಷಯಮ್ |
ಗುಲಿಕಾ ತರ್ಪಣೀ ವೃಷ್ಯಾ ರಕ್ತಪಿತ್ತಂ ಚ ನಾಶಯೇತ್ || (ಚ. 623)

ಏಲಕ್ಕಿ, ದಾಲ್ಚೀನಿಯ ಎಲೆ, ಲವಂಗಪಟ್ಟೆ, ಇವು ಅರ್ಧ ಕರ್ಷ ಪ್ರಕಾರ, ಹಿಪ್ಪಲಿ ಅರ್ಧ ಪಲ, ಸಕ್ಕರೆ, ಜ್ಯೇಷ್ಠಮಧು, ಖರ್ಜೂರ, ದ್ರಾಕ್ಷೆ, ಇವು ಒಂದು ಪಲ ಪ್ರಕಾರ, ಕೂಡಿಸಿ ಕುಟ್ಟಿ ಚೂರ್ಣಮಾಡಿ, ಜೇನಿನಿಂದ ಕಾಲು ಪಲ ತೂಕದ ಗುಳಿಗೆಗಳನ್ನು ಮಾಡಿಟ್ಟುಕೊಂಡು, ಪ್ರತಿ ದಿನ ಒಂದೊಂದು ಗುಳಿಗೆ ಪ್ರಕಾರ ತಿನ್ನುತ್ತಾ ಬಂದಲ್ಲಿ, ಕೆಮ್ಮು, ಉಬ್ಬಸ, ಜ್ವರ, ಬಿಕ್ಕಟ್ಟು, ವಾಂತಿ, ಮೂರ್ಛೆ, ಮದ, ತಲೆತಿರುಕು, ರಕ್ತದ ಉಗುಳು, ಬಾಯಾರಿಕೆ, ಪಕ್ಕದ ಶೂಲ, ಅರುಚಿ, ರಾಜಯಕ್ಷ್ಮ, ಪ್ಲೀಹ, ಆಢ್ಯವಾತ, ಸ್ವರಭೇದ, ಕ್ಷತ, ಕ್ಷಯ, ರಕ್ತಪಿತ್ತ, ಇವುಗಳೆಲ್ಲಾ ನಾಶವಾಗುವವು. ಈ ಗುಳಿಕೆಯು ತರ್ಪಣ ಮತ್ತು ವೃಷ್ಯಗುಣಗಳುಳ್ಳದ್ದು.

8 ರಕ್ತೇಽತಿವೃತ್ತೇ ದಕ್ಷಾಣ್ಡಂ ಯೂಷ್ಯಸ್ತೋಯೇನ ವಾ ಪಿಬೇತ್ ।
ಚಟಕಾಂಡರಸಂ ವಾಪಿ ರಕ್ತಂ ವಾ ಛಾಗಜಾಂಗಲಮ್ ॥ (ಚ. 621)

ರಕ್ತಕಾರಿದವನಿಗೆ ಉಪಚಾರ

ರಕ್ತವು ಅತಿಯಾಗಿ ಹೊರಗೆ ಪ್ರವೃತ್ತಿಸಿದ ಸಂಗತಿಯಲ್ಲಿ ಕೋಳಿ ಮೊಟ್ಟೆಯನ್ನು ಸಾರುಗಳೊಂದಿಗೆ ಅಥವಾ ನೀರಿನೊಂದಿಗೆ ಕುಡಿಯಬೇಕು, ಅಥವಾ ಗುಬ್ಬಿಮೊಟ್ಟೆಯ ರಸವನ್ನು, ಅಥವಾ ಆಡಿನ ರಕ್ತವನ್ನು, ಅಥವಾ ಜಾಂಗಲ ಮೃಗಗಳ ರಕ್ತವನ್ನು, ಕುಡಿಯತಕ್ಕದ್ದು

ಸಂರಾ ರಕ್ತವು ಯಾವ ಮಾರ್ಗವಾಗಿ ಹೊರಟುಬರುತ್ತದೋ, ಅದಕ್ಕೆ ತಕ್ಕ ಹಾಗೆ (ರಕ್ತಪಿತ್ತದಂತೆ) ಚಿಕಿತ್ಸೆ ಮಾಡಬೇಕಾಗಿ ವಾ (ಪು 272)

9. ಚೂರ್ಣಂ ಪೌನರ್ನವಂ ರಕ್ತಶಾಲಿತಣ್ಡುಲಶರ್ಕರಮ್ ।
ರಕ್ತಷ್ಠೀವೀ ಪಿಬೇತ್ಸಿದ್ಧಂ ದ್ರಾಕ್ಷಾರಸಪಯೋಘೃತೈಃ ॥
ಮಧೂಕಮಧುಕಕ್ಷೀರಸಿದ್ಧಂ ವಾ ತಣ್ಡುಲೀಯಕಮ್ ॥ (ಚ 621)

ರಕ್ತದ ಉಗುಳಿಗೆ ಪರಿಹಾರಗಳು

ರಕ್ತವನ್ನು ಉಗುಳುತ್ತಿರುವವನು ಪುನರ್ನವಿಬೇರಿನ ಚೂರ್ಣವನ್ನೂ, ಶಾಲ್ಯಕ್ಕಿಯನ್ನೂ, ದ್ರಾಕ್ಷರಸ ಮತ್ತು ಹಾಲಿನಲ್ಲಿ, ಸಕ್ಕರೆ ಮತ್ತು ತುಪ್ಪ ಕೂಡಿಸಿಕೊಂಡು, ಬೇಯಿಸಿ, ಅಥವಾ ಕೈಹರುವೆ(ಅಥವಾ ಮುಳ್ಳುಹರುವೆ)ಯ ಸೊಪ್ಪನ್ನು ಹಾಲನಲ್ಲಿ, ಜ್ಯೇಷ್ಠ ಮಧುಎನ ಮತ್ತು ಇಪ್ಪೆಹೂವಿನ ಚೂರ್ಣ ಕೂಡಿಸಿಕೊಂಡು ಬೇಯಿಸಿ, ಕುಡಿಯಬೇಕು

10. ಬಲಾಶ್ವಗನ್ಧಾ ಶ್ರೀಪರ್ಣೀ ಬಹುಪತ್ರೀ ಪುನರ್ನವಾ ।
ಪಯಸಾ ನಿತ್ಯಮಭ್ಯಸ್ತಾಃ ಶಮಯನ್ತಿ ಕ್ಷತಕ್ಷಯಮ್
(ಚಿ ಸಾ. ಸಂ. 236)

ಕ್ಷತಕ್ಷಯಕ್ಕೆ ಬಲಾಶ್ವಗಂಧಾದಿ ಚೂರ್ಣ

ಕಲ್ಲಂಗಡಲೆಬೇರಿನ ಸಿಪ್ಪೆ, ಅಶ್ವಗಂಧಿ, ಕಾಶ್ಮೀರಿಹಣ್ಣು, ನೆಲನೆಲ್ಲಿ, ಪುನರ್ನಪಿಬೇರು, ಇವುಗಳ ಚೂರ್ಣವನ್ನು ನಿತ್ಯದಲ್ಲೂ ಹಾಲಿನೊಂದಿಗೆ ಸೇವಿಸುವ ಅಭ್ಯಾಸದಿಂದ ಕ್ಷತಕ್ಷಯವು ಶಮನವಾಗುತ್ತದೆ.

ಪರಾ 'ಬಹುಪತ್ರೀ' ಎಂಬಲ್ಲಿ 'ಬಹುಪುತ್ರೀ ಎಂತ ಪಾಠಾಂತರ ಉಂಟು (ಭಾ ಪ್ರ 370). 'ಬಹುಪುತ್ರೀ' ಎಂದರೆ ಹಲವುಮಕ್ಕಳತಾಯಿ (ಶತಾವರೀ).

11. ಶರ್ಕರಾಂ ಯವಗೋಧೂಮಂ ಜೀವಕರ್ಷಭಕೌ ಮಧು ।
ಶೃತಕ್ಷೀರಾನುಪಾನಂ ವಾ ಲಿಹ್ಯಾತ್ ಕ್ಷೀಣಃ ಕ್ಷತಃ ಕೃಶಃ ॥
ಕ್ರವ್ಯಾತ್ಪಿಶಿತನಿರ್ಯೂಹಂ ಘೃತಭೃಷ್ಟಂ ಪಿಬೇಚ್ಚ ಸಃ ।
ಪಿಪ್ಪಲೀಕ್ಷೌದ್ರಸಂಯುಕ್ತಂ ಮಾಂಸಶೋಣಿತವರ್ಧನಮ್ ॥ (ವಾ. 272)

ಯವಾದಿ ಚೂರ್ಣ ಮತ್ತು ಮಾಂಸರಸ

ಯವಗೋಧಿ, ಗೋಧಿ, ಜೀವಕ, ಋಷಭಕ, ಇವುಗಳ ಚೂರ್ಣವನ್ನೂ, ಸಕ್ಕರೆಯನ್ನೂ, ಜೇನಿನಲ್ಲಿ ಕಲಸಿ ನೆಕ್ಕಿ, ಅನುಪಾನವಾಗಿ ಕಾಯಿಸಿ ಬತ್ತಿಸಿದ ಹಾಲನ್ನು ಕ್ಷತನೂ, ಕ್ಷೀಣನೂ, ಕೃಶನೂ ಆದ ರೋಗಿಯು ಕುಡಿಯಬೇಕು, ಮತ್ತು ಮಾಂಸಾಶಿ ಮೃಗಗಳ ಮಾಂಸದ ಸಾರನ್ನು, ತುಪ್ಪದಿಂದ ಒಗ್ಗರಿಸಿ, ಜೇನು ಮತ್ತು ಹಿಪ್ಪಲಿಪುಡಿ ಕೂಡಿಸಿಕೊಂಡು, ಕುಡಿಯ ತಕ್ಕದ್ದು. ಇದರಿಂದ ಅವನ ಮಾಂಸವೂ ರಕ್ತವೂ ವೃದ್ಧಿಯಾಗುತ್ತವೆ.

ಪರಾ ಈ ಯೋಗಗಳು ಸಹ ಚರಕ ಸಂಹಿತೆಯಲ್ಲಿ ಇರುವಂಥವು 'ಗೋಧೂಮಂ' ಎಂಬಲ್ಲಿ 'ಕ್ಷೌದ್ರ' ಎಂತ ಅಲ್ಲಿ ಉಂಟು (ಚ 624) ಆ ಪಾಠ ಪ್ರಕಾರ ಗೋಧಿಯನ್ನು ಬಿಟ್ಟು ಜ್ಯೇಷ್ಠಮಧುವನ್ನು ಕೂಡಿಸಬೇಕಾಗುತ್ತದೆ

12. ನ್ಯಗ್ರೋಧೋದುಮ್ಬರಾಶ್ವತ್ಥಪ್ಲಕ್ಷಶಾಲಪ್ರಿಯಂಗುಭಿಃ |
ನ್ಯಗ್ರೋಧಾದಿ ಕ್ಷೀರಘೃತ
ತಾಲಮಸ್ತಕಜಮ್ಬೂತ್ವಕ್‌ಪಿಯಾಲೈಶ್ಚ ಸಪದ್ಮಕೈಃ ||
ಸಾಶ್ವಕರ್ಣೈಃ ಶೃತಾತ್ ಕ್ಷೀರಾದ್ದ(?ದ)ದ್ಯಾಜ್ಜಾತೇನ ಸರ್ಪಿಷಾ |
ಶಾಲ್ಯೋದನಂ ಕ್ಷತೋರಸ್ಕಃ ಕ್ಷೀಣಶುಕ್ರಶ್ಚ ಮಾನವಃ || (ಚ 624)

ಗೋಳಿ, ಅತ್ತಿ, ಅಶ್ವತ್ಥ, ಬಸುರಿ, ಧೂಪದ ಮರ, ಇವುಗಳ ಚಕ್ಕೆಗಳು, ಪ್ರಿಯಂಗು, ತಾಳಿಯ ಎಳೇ ಕೊಂಬು, ನೇರಳೆಚಕ್ಕೆ, ಮೊರವೆ (ಮೊರಂಟೆ) ಬೀಜ, ಪದ್ಮಕ, ಅಸಿನಮರದ ಚಕ್ಕೆ, ಇವುಗಳನ್ನು ಸೇರಿಸಿ ಕಾಯಿಸಿ ಬತ್ತಿಸಿದ ಹಾಲುಕಷಾಯದಿಂದ ತೆಗೆದ ತುಪ್ಪದಿಂದ ಶಾಲ್ಯನ್ನವನ್ನು ಉರಃಕ್ಷತನೂ, ಶುಕ್ರಕ್ಷೀಣನಾದವನೂ ಉಣ್ಣಬೇಕು

13. ಯಷ್ಟ್ಯಾಹ್ವಾನಾಗಬಲಯೋಃ ಕ್ವಾಥೇ ಕ್ಷೀರಸಮಂ ಘೃತಮ್ |
ಯಷ್ಟ್ಯಾಹ್ವಾದಿ ಘೃತ
ಪಯಸ್ಯಾಪಿಪ್ಪಲೀವಾಂಶೀಕಲ್ಕಸಿದ್ಧಂ ಕ್ಷತೇ ಶುಭಮ್ || (ಚ. 624)

ಜ್ಯೇಷ್ಠಮಧು, ಆನೆಕಲ್ಲಂಗಡಲೆಬೇರು, ಇವುಗಳ ಕಷಾಯದಲ್ಲಿ ತುಪ್ಪ, ಸಮಪಾಲು ಹಾಲು, ಮತ್ತು ಕ್ಷೀರಕಾಕೋಲಿ, ಹಿಪ್ಪಲಿ, ಬಿದಿರುಪ್ಪು, ಈ ಮೂರು ಜೀನಸುಗಳ ಕಲ್ಕ, ಸಹ ಕೂಡಿಸಿ ಪಕ್ವಮಾಡಿದ ಘೃತವು ಕ್ಷತರೋಗದಲ್ಲಿ ಕ್ಷೇಮ ಕರವಾಗುತ್ತದೆ.

14. ಕೋಲಲಾಕ್ಷಾರಸೇ ತದ್ವತ್ ಕ್ಷೀರಾಷ್ಟಗುಣಸಾಧಿತಮ್ |
ಕೋಲಾದಿಘೃತ
ಕಲ್ಕೈಃ ಕಟ್ವಮ್ಲದಾರ್ವೀತ್ವಗ್ವತ್ಸಕತ್ವಕ್‌ಫಲೈರ್ಘೃತಮ್ || (ಚ. 624)

ಬೊಗರೀ ಚಕ್ಕೆ ಮತ್ತು ಅರಗಿನ ಕಷಾಯದಲ್ಲಿ ತುಪ್ಪ, ಅದರ ಎಂಟು ಪಾಲು ಹಾಲು, ಮತ್ತು ಪ್ರಿಯಂಗು, ಅಮ್ಲವೇತಸ (ಸುಕ್ಕೆಬೇರು?), ಮರದರಸಿನದ ಚಕ್ಕೆ, ಲವಂಗಪಟ್ಟೆ, ಕೊಡಸಿಗನ ಚಕ್ಕೆ, ಜಾಯಿಕಾಯಿ, ಈ ಜೀನಸುಗಳ ಕಲ್ಕ ಸಹ ಕೂಡಿಸಿ, ಕಾಯಿಸಿದ ತುಪ್ಪವು ಕ್ಷತರೋಗವನ್ನು ಪರಿಹರಿಸುವದು.

ಪರಾ ಕಟ್ವಮ್ಲ ಎಂಬಲ್ಲಿ 'ಕಟ್ವಂಗ' ಎಂತ ಪದವನ್ನಿಟ್ಟದ್ದು ಕಾಣುತ್ತದೆ ಅದರ ಪ್ರಕಾರ ಪ್ರಿಯಂಗು ಮತ್ತು ಅಮ್ಲವೇತಸ ಬಿಟ್ಟು ಆನೆಮುಂಗಿನ ಬೇರನ್ನು ಕೂಡಿಸಬೇಕಾಗುವದು. 'ದಾರ್ವೀತ್ವಕ್' ಎಂಬದನ್ನು ಒಂದೇ ಪದ ವನ್ನಾಗಿ ಎಣಿಸಿದರೆ ಲವಂಗಪಟ್ಟೆ ಬೇಡ 'ಫಲೈಃ' ಎಂಬಲ್ಲಿ 'ದಲೈಃ' ಎಂತ ಪಾಠಾಂತರ ಉಂಟು ಆಗ್ಗೆ ಜಾಯಿಕಾಯಿ ಯನ್ನು ಬಿಟ್ಟು ಲವಂಗಪತ್ರೆಯನ್ನು ಕೂಡಿಸುವದಾಗುತ್ತದೆ ಆನೆಮುಂಗು, ಮರದರಸಿನ, ಕೊಡಸಿಗನಚಕ್ಕೆ ಮತ್ತು ಲವಂಗಪತ್ರೆ, ಇವು ನಾಲ್ಕೇ ಕಲ್ಕಕ್ಕೆ ಎಂತ ಇಂ ವ್ಯಾ (ಅ ಸಂ II-132)

15.　ಮಧುಕಾಷ್ಟಪಲಂ(?ಲ)ದ್ರಾಕ್ಷಾಪ್ರಸ್ಥಕ್ವಾಥೇ ಘೃತಂ ಪಚೇತ್ |
ಶಕ್ತುಪ್ರಯೋಗ　ಪಿಪ್ಪಲ್ಯಷ್ಟಪಲೇ ಕಲ್ಕೇ ಪ್ರಸ್ಥಂ ಸಿದ್ಧೇ ಚ ಶೀತಲೇ ||
ಪೃಥಗಷ್ಟಪಲಂ ಕ್ಷೌದ್ರಂ(?ದ್ರ)ಶರ್ಕರಾಭ್ಯಾಂ ವಿಮಿಶ್ರಯೇತ್ |
ಸಮಂ ಶಕ್ತು ಕ್ಷತಕ್ಷೀಣೇ(?ಣ) ರಕ್ತಗುಲ್ಮೇಷು ತದ್ಧಿತಮ್ || (ಚ. 625)

೮ ಪಲ ಜ್ಯೇಷ್ಠಮಧು ಮತ್ತು ೧ ಪ್ರಸ್ಥ ದ್ರಾಕ್ಷೆ, ಇವುಗಳ ಕಷಾಯದಲ್ಲಿ ೧ ಪ್ರಸ್ಥ ತುಪ್ಪವನ್ನೂ, ಕಲ್ಕವಾಗಿ ೮ ಪಲ ಹಿಪ್ಪಲಿಚೂರ್ಣವನ್ನೂ, ಕೂಡಿಸಿ ಕಾಯಿಸಿ, ಪಾಕಮಾಡಿ ಶೋಧಿಸಿದ ಘೃತವು ಆರಿದ ಮೇಲೆ, ಅದರೊಂದಿಗೆ ೮ ಪಲ ಜೇನು, ೮ ಪಲ ಸಕ್ಕರೆ ಮತ್ತು ೧ ಪ್ರಸ್ಥ ಸಕ್ತು ಬೆರಸಿಟ್ಟುಕೊಂಡು ಸೇವಿಸುತ್ತಾ ಬರುವದು. ಈ ಸಕ್ತು ಕ್ಷತಕ್ಷೀಣ ರೋಗಗಳಲ್ಲಿಯೂ, ರಕ್ತಗುಲ್ಮದಲ್ಲಿಯೂ ಹಿತಕಾರಿಯಾಗುತ್ತದೆ.

ಷರಾ ಸಕ್ತು ಎಂದರೆ ಹುರಿದ ಯವೆಗೋಧಿಯ ಚೂರ್ಣ ಎಂಬುದು ಸಾಧಾರಣವಾದ ತಿಳುವಳಿಕೆ ಭತ್ತವನ್ನು ಅರಳುಮಾಡುವಾಗ್ಗೆ ಅರಳಾಗದೆ ಉಳಿದ ಭತ್ತದ ಅಕ್ಕಿಯ ಹಿಟ್ಟನ್ನು ಸಹ ಉಪಯೋಗಿಸಬಹುದು. ಅಥವಾ ಅಕ್ಕಿಯನ್ನೇ ಹುರಿದು ಮಾಡಿದ ಹಿಟ್ಟನ್ನು ಉಪಯೋಗಿಸಬಹುದು

16　ಧಾತ್ರೀಫಲವಿದಾರೀಕ್ಷುಜೀವನೀಯರಸಾದ್ ಘೃತಾತ್ |
ಧಾತ್ರ್ಯಾದಿಘೃತ　ಛಾಗಗೋಪಯಸೋಶ್ಚೈವ ಸಪ್ತ ಪ್ರಸ್ಥಾನ್ ಪಚೇದ್ಭಿಷಕ್ ||
ಸಿದ್ಧಶೀತೇ ಸಿತಾಕ್ಷೌದ್ರದ್ವಿಪ್ರಸ್ಥಂ ವಿನಯೇತ್ತತಃ |
ಯಕ್ಷ್ಮಾಪಸ್ಮಾರಪಿತ್ತಾಸೃಕ್ಕಾಸಮೋಹಕ್ಷಯಾಪಹಮ್ ||
ವಯಃಸ್ಥಾಪನಮಾಯುಷ್ಯಂ ಮಾಂಸಶುಕ್ರಬಲಪ್ರದಮ್ |
ಘೃತನ್ತು ಪಿತ್ತೇಽಭ್ಯಧಿಕೇ ಲಿಹ್ಯಾದ್ವಾತೇಽಧಿಕೇ ಪಿಬೇತ್ ||
ಲೀಢಂ ನಿರ್ವಾಪಯೇತ್ಪಿತ್ತಮಲ್ಪತ್ವಾದ್ಧನ್ತಿ ನಾನಿ(?ನ)ಲಮ್ |
ಆಕ್ರಾಮತ್ಯನಿಲಂ ಪೀತಮುಷ್ಮಾಣಂ ನಿರುಣದ್ಧಿ ಚ ||
ಕ್ಷಾಮಕ್ಷೀಣಕೃಶಾಂಗಾನಾಮೇತಾನ್ಯೇವ ಘೃತಾನಿ ಚ |
ತ್ವಕ್ಕ್ಷೀರೀಶರ್ಕರಾಲಾಜಚೂರ್ಣೈಃ ಪಾನಾನಿ* ಯೋಜಯೇತ್ ||
(ಚ. 626)

ನೆಲ್ಲಿರಸ ೧ ಪ್ರಸ್ಥ, ನೆಲಕುಂಬಳಗಡ್ಡೆಯ ರಸ ೧ ಪ್ರಸ್ಥ, ಕಬ್ಬಿನ ರಸ ೧ ಪ್ರಸ್ಥ, ಜೀವಕ, ಋಷಭಕ, ಮೇದೆ, ಮಹಾಮೇದೆ, ಕಾಕೋಲಿ, ಕ್ಷೀರಕಾಕೋಲಿ, ಜ್ಯೇಷ್ಠಮಧು, ಜೀವಂತಿಗಡ್ಡೆ, ಕಾಡುಉದ್ದು, ಕಾಡುಹೆಸರು, ಈ ಹತ್ತು ಬಗೆಗಳ ಕಷಾಯ ೧ ಪ್ರಸ್ಥ, ಆಡಿನ ಹಾಲು ೧ ಪ್ರಸ್ಥ, ದನದ ಹಾಲು ೧ ಪ್ರಸ್ಥ, ತುಪ್ಪ ೧ ಪ್ರಸ್ಥ, ಈ ೭ ಪ್ರಸ್ಥಗಳನ್ನು ಕೂಡಿಸಿ ಕಾಯಿಸಿ. ಪಾಕ ನೋಡಿಕೊಂಡು, ತುಪ್ಪವನ್ನು ಹಿಂಡಿ ತೆಗೆದು, ತಣಿದ ಮೇಲೆ ೧ ಪ್ರಸ್ಥ ಸಕ್ಕರೆ ಮತ್ತು ೧ ಪ್ರಸ್ಥ ಜೇನು ಹಾಕಿ, ಕದಡಿ ಕೂಡಿಸಿಟ್ಟುಕೊಂಡು ಸೇವಿಸುತ್ತಾ ಬಂದಲ್ಲಿ, ಯಕ್ಷ್ಮರೋಗ, ಅಪಸ್ಮಾರ, ಪಿತ್ತರಕ್ತ, ಕೆಮ್ಮು, ಮೂರ್ಛೆ, ಕ್ಷಯ, ಸಹ ಪರಿಹಾರವಾಗುವವು. ಈ ಘೃತದಿಂದ ವೃದ್ಧಾಪ್ಯವು ತಡೆಯಲ್ಪಡುವದು, ಆಯುಷ್ಯ ವೃದ್ಧಿಯಾಗುವದು, ಮತ್ತು ಮಾಂಸ, ಶುಕ್ರ, ಬಲ, ಸಹ ಉಂಟಾಗುವವು. ತುಪ್ಪವನ್ನು ಪಿತ್ತ ಅಧಿಕವಾದ ಸಂಗತಿಯಲ್ಲಿ ನೆಕ್ಕಬೇಕು (ಅಲ್ಪ ಪ್ರಮಾಣದಲ್ಲಿ ಕೊಡತಕ್ಕದ್ದು); ಮತ್ತು ವಾತ ಅಧಿಕವಾಗಿದ್ದಲ್ಲಿ ಕುಡಿಯತಕ್ಕದ್ದು;

ನೆಕ್ಕುವದರಿಂದ ಪಿತ್ತವು ಶಾಂತವಾಗುವದು ಮತ್ತು ಅಲ್ಪವಾದ್ದರಿಂದ ವಾಯುವು (?ಅಗ್ನಿಯು) ನಾಶವಾಗುವದಿಲ್ಲ; ತುಪ್ಪವನ್ನು ಕುಡಿದರೆ ವಾಯುವು ಜಯಿಸಲ್ಪಡುವದು ಮತ್ತು ಉಷ್ಣತೆ(ಅಗ್ನಿ)ಯು ತಡೆಯಲ್ಪಡುವದು (ಕಡಿಮೆಯಾಗುವದು). ಬಲಹೀನ, ಕ್ಷೀಣ, ಕೃಶವಾದ ಅಂಗಗಳುಳ್ಳವರಿಗೆ ಇದೇ ಘೃತವನ್ನು ಬಿದಿರುಪ್ಪು, ಸಕ್ಕರೆ ಮತ್ತು ಅರಳಿನ ಹಿಟ್ಟನ್ನು ಕೂಡಿಸಿ ಪಾನಮಾಡಿಸಬೇಕು.

ಪರಾ *'ಸ್ತ್ಯಾನಾಸಿ' ಎಂತ ಪಾಠಾಂತರ ಉಂಟು ಆಗ್ಗೆ ಗಟ್ಟಿಯಾದ ತುಪ್ಪವನ್ನು ನೆಕ್ಕಿಸ ಅಥವಾ ತಿನ್ನಿಸಬೇಕೆಂತ ಅರ್ಥವಾಗುತ್ತದೆ. ಚೂರ್ಣ ಬೆರಸಿದ ತುಪ್ಪಕ್ಕೆ ಸ್ವಲ್ಪ ಜೇನನ್ನು ಕೂಡಿಸಿ ಗುಳಿಗೆಮಾಡಿ ತಿಂದು, ಅನುಪಾನವಾಗಿ ಹಾಲು ಕುಡಿಯುವದರಿಂದ ರೇತಸ್ಸು, ವೀರ್ಯ, ಬಲ, ಪುಷ್ಟಿ ಸಹ ಬೇಗನೇ ಉಂಟಾಗುತ್ತವೆ (ಅ ಸಂ II 134)

17. ದ್ರಾಕ್ಷಾಂ ನವಾಮಾಮಲಕೀಮಾತ್ಮಗುಪ್ತಾಂ ಪುನರ್ನವಾಮ್ ।
ಶತಾವರೀಂ ವಿದಾರೀಂ ಚ ಸಮಾಂಶಾಂ ಪಿಪ್ಪಲೀಂ ತಥಾ ॥
ಪೃಥಗ್ದಶಪಲಾನ್ ಭಾಗಾನ್ ಪಲಾನ್ಯಷ್ಟೌ ಚ ನಾಗರಾತ್ ।
ಯಷ್ಟ್ಯಾಹ್ವಸೌವರ್ಚಲಯೋರ್ದ್ವಿಪಲಂ ಮರಿಚಸ್ಯ ಚ ॥
ಕ್ಷೀರತೈಲಘೃತಾನಾಂ ಚ ತ್ರ್ಯಾಢಕೇ ಶರ್ಕರಾಶತೇ ।
ಕ್ವಥಿತೇ ತಾನಿ ಚೂರ್ಣಾನಿ ದತ್ವಾ ಬಿಲ್ವಸಮಾನ್ ಗುಡಾನ್ ॥
ಕುರ್ಯಾತ್ ತಾನ್ ಭಕ್ಷಯೇತ್ ಕ್ಷೀಣಃ ಕ್ಷತಶುಷ್ಕಶ್ಚ ಮಾನವಃ ।
ತೇನ ಸದ್ಯೋ ರಸಾದೀನಾಂ ವೃದ್ಧ್ಯಾ ಪುಷ್ಟಿಂ ಸ ವಿನ್ದತಿ ॥
(ಚ. 627)

ದ್ರಾಕ್ಷಾವಿಸರ್ಪಿ ಗುಡಕ (ಗುಳಿಗೆ)

ದ್ರಾಕ್ಷೆ, ಹೊಸ ನೆಲ್ಲಿ, ನಸುಗುನ್ನಿಬೀಜ (ನಾಯಿಸೋಣಗು), ಪುನರ್ನವಿಬೇರು, ಶತಾವರಿಬೇರು, ನೆಲಕುಂಬಳಗಡ್ಡೆ, ಹಿಪ್ಪಲಿ, ಇವುಗಳಲ್ಲಿ ಪ್ರತಿಯೊಂದು ಹತ್ತು ಪಲ, ಶುಂಠಿ ೮ ಪಲ, ಜ್ಯೇಷ್ಠಮಧು ೧ ಪಲ, ಸೌವರ್ಚಲಲವಣ (ಕರಿ ಉಪ್ಪು) ೧ ಪಲ, ಕಾಳುಮೆಣಸು ೨ ಪಲ, ಇವುಗಳನ್ನು ಚೂರ್ಣಿಸಿ ಇಟ್ಟುಕೊಂಡು, ಹಾಲು ೧ ಆಢಕ, ಎಳ್ಳೆಣ್ಣೆ ೧ ಆಢಕ, ತುಪ್ಪ ೧ ಆಢಕ, ಸಕ್ಕರೆ ೧೦೦ ಪಲ, ಇವುಗಳನ್ನು ಒಟ್ಟಾಗಿ ಕುದಿಸಿ, ಪಾಕ ಬಂದೊಡನೆ ಆ ಚೂರ್ಣವನ್ನು ಬೆರಸಿ, ಪಲ ಪ್ರಮಾಣ ಗುಳಿಗೆ ಮಾಡಿಟ್ಟುಕೊಂಡು, ಅವುಗಳನ್ನು ಕ್ಷೀಣನೂ, ಕ್ಷತದಿಂದ ಒಣಗಿದ ಶರೀರದವನೂ, ಆದ ಮನುಷ್ಯನು ತಿನ್ನಬೇಕು. ಅದರಿಂದ ಒಡನೆ ರಸಾದಿ ಧಾತುಗಳು ವೃದ್ಧಿಗೊಂಡು ಅವನಿಗೆ ಪುಷ್ಟಿಯುಂಟಾಗುತ್ತದೆ.

18. ವಸ್ತಿದೇಶೇ ವಿಕುರ್ವಾಣೇ ಸ್ತ್ರೀಪ್ರಸಕ್ತಸ್ಯ ಮಾರುತೇ ।
ವಾತಘ್ನಾನ್ ಬೃಂಹಣಾನ್ ವೃಷ್ಯಾನ್ ಯೋಗಾಂಸ್ತಸ್ಯ ಪ್ರಯೋಜಯೇತ್ ॥ (ಚ. 628)

ಸ್ತ್ರೀಪ್ರಸಕ್ತಿಯ ಕ್ಷೀಣತೆಗೆ ಉಪಚಾರ

ಅತಿಯಾಗಿ ಸ್ತ್ರೀಸಂಗ ಮಾಡಿದವನಲ್ಲಿ ವಾಯುವು ವಸ್ತಿ ಸ್ಥಾನದಲ್ಲಿ ವಿಕಾರವನ್ನುಂಟುಮಾಡುವಾಗ್ಗೆ ವಾತಹರವಾದ, ಪುಷ್ಟಿಕರವಾದ ಮತ್ತು ವೃಷ್ಯ(ಶುಕ್ರ ವೃದ್ಧಿಕರ)ವಾದ ಯೋಗಗಳನ್ನು ಅಂಥವನಿಗೆ ಪ್ರಯೋಗಿಸತಕ್ಕದ್ದು.

19. ಶರ್ಕರಾಪಿಪ್ಪಲೀಚೂರ್ಣೈಃ ಸರ್ಪಿಷಾ ಮಾಕ್ಷಿಕೇಣ ವಾ (?ಚ) |
ಪಂಚಸಾರ ಕ್ಷೀರಪಾನ ಸಂಯುಕ್ತಂ ವಾ ಶೃತಂ ಕ್ಷೀರಂ ಪಿಬೇತ್ ಕಾಸಜ್ವರಾಪಹಮ್ ||
(ಚ. 628)

ಕಾಯಿಸಿ ಬತ್ತಿಸಿದ ಹಾಲನ್ನು, ಸಕ್ಕರೆ, ಹಿಪ್ಪಲಿಪುಡಿ, ತುಪ್ಪ ಮತ್ತು ಜೇನು ಕೂಡಿಸಿ, (ಸ್ತ್ರೀಸಹವಾಸದ ದೋಷವುಳ್ಳವನು) ಕುಡಿಯತಕ್ಕದ್ದು. ಅದರಿಂದ ಕೆಮ್ಮು ಮತ್ತು ಜ್ವರ ಸಹ ಪರಿಹಾರವಾಗುವವು.

ಪರಾ 'ಮಾಕ್ಷಿಕೇಣ ಚ' ಎಂತ ಇರುವ ಪಾಠ(ಅ ಸಂ II-136)ವೇ ಸರಿ ಕಾಣುತ್ತದೆ. ಉತ್ತರಾರ್ಧದಲ್ಲಿ 'ವಾ' ಇರುವದರಿಂದ ಹಾಲಿನ ಹದಿನಾರನೇ ಒಂದು ಅಂಶ ಹಿಪ್ಪಲಿ ಮತ್ತು ಅಷ್ಟೇ ಸಕ್ಕರೆ ಕೂಡಿಸಿ ಮಾಡಿದ ಹಾಲುಕಷಾಯವನ್ನು, ಜೇನು ಮತ್ತು ತುಪ್ಪವನ್ನು ಕೂಡಿಸಿಕೊಂಡು, ಸಹ ಕುಡಿಯಬಹುದೆಂತ ಅರ್ಥಮಾಡಬಹುದು

20. ಫಲಾಮ್ಲಂ ಸರ್ಪಿಷಾ ಭೃಷ್ಟಂ ವಿದಾರೀಕ್ಷುರಸೇ ಶೃತಮ್ |
ಫಲಾಮ್ಲಾದಿ ಸಾರು ಸ್ತ್ರೀಷು ಕ್ಷೀಣಃ ಪಿಬೇದ್ಯೂಷಂ ಜೀವನಂ ಬೃಂಹಣಂ ಪರಮ್ ||
(ಚ. 628)

ಫಲಾಮ್ಲ, ನೆಲಕುಂಬಳದ ಗಡ್ಡೆಯ ರಸ ಮತ್ತು ಕಬ್ಬಿನ ರಸ ಕೂಡಿಸಿ ತಯಾರಿಸಿದ (ಹೆಸರು ಮುಂತಾದ್ದರ) ಸಾರನ್ನು, ತುಪ್ಪದಿಂದ ಒಗ್ಗರಿಸಿ, ಸ್ತ್ರೀಯರ ಸಂಭೋಗದಿಂದ ಕ್ಷೀಣನಾದವನು ಕುಡಿಯಬೇಕು; ಅದು ಬದುಕಿಸುವಂಥಾದ್ದು ಮತ್ತು ಉತ್ತಮವಾದ ಬೃಂಹಣ (ಪುಷ್ಟಿಕರ ಯೋಗ).

ಪರಾ 'ಫಲಾಮ್ಲ' ಎಂದರೆ 'ದಾಳಿಂಬ, ಹುಣಸೆ ಮುಂತಾದ ಫಲಗಳ ಹುಳಿ' ಎಂತ ಇಂ ವ್ಯಾ (ಅ ಸಂ II-136) ಆದರೆ 'ಫಲಾಮ್ಲ' ಎಂಬ ಹೆಸರು ಮರ್ಗಿನ ಹುಳಿಗೂ ಉಂಟು

21. ಶಕ್ತೂನಾಂ ವಸ್ತ್ರಪೂತಾನಾಂ ಮನ್ಥಂ ಕ್ಷೌದ್ರಘೃತಾನ್ವಿತಮ್ |
ಶಕ್ತುವಿನ ಮಂಥ ಯಾವನ್ನಾ(?ಯವಾನ್ನ) ಸಾತ್ಮ್ಯೇ ದೀಪ್ತಾಗ್ನಿಃ ಕ್ಷತಕ್ಷೀಣಃ ಪಿಬೇನ್ನರಃ ||
(ಚ. 628)

ಕ್ಷತಕ್ಷೀಣನಾದ ಮನುಷ್ಯನು, ತನಗೆ ಯವೆಯ ಅನ್ನ ಸಾತ್ಮ್ಯವಾಗಿದ್ದರೆ ಮತ್ತು ಅಗ್ನಿ ಚುರುಕಾಗಿದ್ದರೆ, ಶಕ್ತುಗಳನ್ನು (ಹುರಿದ ಯವೆಗೋದಿ ಅಥವಾ ಅಕ್ಕಿ ಪುಡಿಗಳನ್ನು) ವಸ್ತ್ರಗಾಲಿತ ಮಾಡಿ, ಆ ನುಣ್ಣಗಿನ ಹಿಟ್ಟಿನಿಂದ, ಜೇನು ಮತ್ತು ತುಪ್ಪ ಕೂಡಿಸಿ, ಮಾಡಿದ ಮಂಥವನ್ನು ಕುಡಿಯಬೇಕು.

ಪರಾ 'ಮಂಥ'ದ ಕ್ರಮಕ್ಕೆ 1ನೇ ಭಾಗದ XX-23 ನೋಡಿರಿ

22. ದೀಪ್ತೇಽಗ್ನೌ ವಿಧಿರೇಷಃ ಸ್ಯಾನ್ಮನ್ದೇ ದೀಪನಪಾಚನಃ |
ಯಕ್ಷ್ಮಿಣಾಂ ವಿಹಿತೋ ಗ್ರಾಹೀ ಭಿನ್ನೇ ಶಕೃತಿ ಚೇಷ್ಯತೇ || (ಚ. 628)

ಮಲ ಸಡಿಲಾದ ದ್ದಕ್ಕೆ ಚಿಕಿತ್ಸೆ ಅಗ್ನಿಯು ಚುರುಕಾಗಿದ್ದಾಗ್ಗೆ ಈ (ಹಿಂದೆ ವರ್ಣಿಸಿದ ಬೃಂಹಣ) ವಿಧಿಯು ಯುಕ್ತವಾದದ್ದು. ಅಗ್ನಿಯು ಮಂದವಾಗಿದ್ದರೆ ದೀಪನ ಪಾಚನಕರ ಯೋಗಗಳನ್ನು ಉಪಯೋಗಿಸತಕ್ಕದ್ದು; ಮತ್ತು ಮಲವು ಒಡದಿದ್ದರೆ (ತೆಳ್ಳಗಾಗಿದ್ದರೆ) ಯಕ್ಷ್ಮರೋಗದಲ್ಲಿ ವಿಹಿತವಾದ ಗ್ರಾಹಿಗುಣವುಳ್ಳ ಯೋಗಗಳು (ಕ್ಷತಕ್ಷೀಣರಿಗೂ) ಪ್ರಶಸ್ತವಾಗಿರುತ್ತವೆ.

ಪರಾ 'ಗ್ರಾಹಿ' ಶಬ್ದದ ವ್ಯಾಖ್ಯಾನಕ್ಕೆ 1ನೇ ಭಾಗದ III-3 (13) ನೋಡಿ.

23. ಪಲಿಕಂ ಸೈಂಧವಂ ಶುಂಠೀ ದ್ವೇ ಚ ಸೌವರ್ಚಲಾತ್ ಪಲೇ |
ಸೈಂಧವಾದಿ ಚೂರ್ಣ
ಕುಡವಾಂಶಾನಿ ವೃಕ್ಷಾಮ್ಲಂ ದಾಡಿಮಂ ಪತ್ರಸ(?ಮ)ರ್ಜಕಾತ್ ||
ಏಕೈಕಂ ಮರಿಚಾಜಾಜ್ಯೋರ್ಧಾನ್ಯಕಾದ್ವೇ ಚತುರ್ಥಿಕೇ |
ಶರ್ಕರಾಯಾಃ ಪಲಾನ್ಯತ್ರ ದಶ ದ್ವೇ ಚ ಪ್ರದಾಪಯೇತ್ ||
ಕೃತ್ವಾ ಚೂರ್ಣಮತೋ ಮಾತ್ರಾಮನ್ನಪಾನೇ ಪ್ರಯೋಜಯೇತ್ |
ರೋಚನಂ ದೀಪನಂ ಬಲ್ಯಂ ಪಾಶ್ವ(?ಶ್ವಾ)ರ್ತಿಶ್ವಾಸಕಾಸನುತ್ |
(ಚ. 628-629)

ಸೈಂಧವಲವಣ ೧ ಪಲ, ಶುಂಠಿ ೧ ಪಲ, ಸೌವರ್ಚಲಲವಣ ೨ ಪಲ, ಮುರ್ಗಿನಹುಳಿ ೪ ಪಲ, ದಾಳಿಂಬ ೪ ಪಲ, ನಾಯಿತುಳಸಿ ಎಲೆ ೪ ಪಲ, ಕಾಳುಮೆಣಸು ೧ ಪಲ, ಜೀರಿಗೆ ೧ ಪಲ, ಕೊತ್ತುಂಬರಿ ೨ ಪಲ, ಸಕ್ಕರೆ ೧೨ ಪಲ, ಇವುಗಳನ್ನು ವಸ್ತ್ರಗಾಲಿತ ಚೂರ್ಣಮಾಡಿಟ್ಟುಕೊಂಡು, ಅದನ್ನು ಅನ್ನಪಾನಗಳೊಂದಿಗೆ ತಕ್ಕ ಪ್ರಮಾಣದಲ್ಲಿ ಪ್ರಯೋಗಿಸುವದರಿಂದ ರುಚಿ, ಅಗ್ನಿದೀಪನ, ಮತ್ತು ಬಲವುಂಟಾಗುವದಲ್ಲದೆ, ಪಾರ್ಶ್ವಶೂಲೆ, ಉಬ್ಬಸ ಮತ್ತು ಕೆಮ್ಮು ನಾಶವಾಗುವವು.

ಪರಾ 'ಪತ್ರಸರ್ಜಕಾತ್' ಎಂಬಲ್ಲಿ 'ಪತ್ರಮಾರ್ಜಕಂ' ಎಂತ ಪಾ. (ಪು 276)

24. ಏಕಾ ಷೋಡಶಿಕಾ ಧಾನ್ಯಾದ್ದ್ವೇ ಽಜಾಜ್ಯಜಮೋದಯೋಃ |
ಷಾಡವ
ತಾಭ್ಯಾಂ ದಾಡಿಮವೃಕ್ಷಾಮ್ಲದ್ವಿರ್ದ್ವಿಃ ಸೌವರ್ಚಲಾತ್ ಪಲಮ್ ||
ಶುಂಠ್ಯಾಃ ಕರ್ಷಂ ದಧಿತ್ಥಸ್ಯ ಮಧ್ಯಾತ್ ಪಂಚ ಪಲಾನಿ ಚ |
ತಚ್ಚೂರ್ಣಂ ಷೋಡಶಪಲೇ ಶರ್ಕರಾಯಾ ವಿಮಿಶ್ರಯೇತ್ ||
ಷಾಡವೋ ಽಯಂ ಪ್ರದೇಯಃ ಸ್ಯಾದನ್ನಪಾನೇಷು ಪೂರ್ವವತ್ ||
(ಚ. 629)

ಕೊತ್ತುಂಬರಿ ೧ ಕರ್ಷ, ಜೀರಿಗೆ ೨ ಕರ್ಷ, ಅಜಮೋದ ೨ ಕರ್ಷ, ದಾಳಿಂಬದ ಸಿಪ್ಪೆ ೮ ಕರ್ಷ, ಮುರ್ಗಿನಹುಳಿ ೮ ಕರ್ಷ, ಸೌವರ್ಚಲಲವಣ ೧ ಪಲ, ಶುಂಠಿ ೧ ಕರ್ಷ, ಬೇಲದ ಹಣ್ಣಿನ ತಿರುಳು ೫ ಪಲ, ಇವುಗಳನ್ನು ನುಣ್ಣಗೆ ಚೂರ್ಣಮಾಡಿ, ೧೬ ಪಲ ಸಕ್ಕರೆಯನ್ನು ಆ ಚೂರ್ಣದೊಂದಿಗೆ ಬೆರಸಿಟ್ಟುಕೊಳ್ಳಬೇಕು, ಈ 'ಷಾಡವ' ಎಂಬ ಚೂರ್ಣವನ್ನು ಅನ್ನಪಾನಗಳೊಂದಿಗೆ ಮೊದಲು (ಸೈಂಧವಾದಿ ಚೂರ್ಣಕ್ಕೆ) ಹೇಳಿದಂತೆ ಉಪಯೋಗಿಸತಕ್ಕದ್ದು—(ಅಂದರೆ ಮಿತವಾಗಿ ಉಪಯೋಗಿಸಿದರೆ ಅಲ್ಲಿ ಹೇಳಿದ ಗುಣಗಳು ಸಿಗುವವು).

ಪರಾ 'ಷೋಡಶಿಕಾ' ಎಂದರೆ ಪಲ ಎಂಬಿತ್ಯಾದಿ ಅರ್ಥ ಬರೆದಷ್ಟು ಆ ಟೀಯಲ್ಲಿ ಕಾಣುತ್ತದೆ ಹಾಗೆ ಮಾಡಿದರೆ ಸಕ್ಕರೆಯ ಪ್ರಮಾಣ ಕಡಿಮೆಯಾಗುತ್ತದೆ ಇಲ್ಲಿ ಬರೆದ ಅರ್ಥ ಇಂ. ವ್ಯಾ ಕ್ಕೆ ಸರಿಯುಂಟು (ಅ. ಸಂ II-138)

25. ಪಿಬೇನ್ನಾಗಬಲಾಮೂಲಸ್ಯಾರ್ಧಕರ್ಷವಿವರ್ಧನಮ್ |
ನಾಗಬಲಾದಿ ಕಲ್ಪಗಳು.
ಪಲಂ ಕ್ಷೀರಯುತಂ ಮಾಸಂ ಕ್ಷೀರವೃತ್ತಿರನನ್ನಭುಕ್ ||
ಏಷಃ ಪ್ರಯೋಗಃ ಪುಷ್ಟ್ಯಾಯುರ್ಬಲಾರೋಗ್ಯಕರಃ ಪರಃ |
ಮಂಡೂಕಪರ್ಣ್ಯಾಃ ಕಲ್ಪೋ ಽಥ ಶುಂಠೀಮಧುಕಯೋಸ್ತಥಾ ||
(ಚ. 629)

ಆನೆಕಲ್ಲಂಗಡಲೆಬೇರಿನ ಚೂರ್ಣವನ್ನು ಅರ್ಧ ಕರ್ಷ ಪ್ರಮಾಣ ಹಿಡಿದು, ದಿನಕ್ಕೆ ಅರ್ಧ

ಕರ್ಷ ಪ್ರಕಾರ ೧ ಪಲದ ವರೆಗೆ ಏರಿಸಿ, ಹಾಲಿನಲ್ಲಿ ಅರೆದು ಒಂದು ತಿಂಗಳು ಪರ್ಯಂತ ಕುಡಿಯುತ್ತಾ, ಅನ್ನ ಉಣ್ಣದೆ ಹಾಲು ಕುಡಿಯುತ್ತಾ ಇರತಕ್ಕದ್ದು. ಈ ಪ್ರಯೋಗವು ಪುಷ್ಟಿ, ಆಯುರ್ವೃದ್ಧಿ, ಬಲ ಮತ್ತು ಆರೋಗ್ಯ ಉಂಟುಮಾಡುವದಕ್ಕೆ ಉತ್ತಮವಾದದ್ದು. ಒಂದೆಲಗದ ಚೂರ್ಣವನ್ನೂ, ಶುಂಠಿ ಮತ್ತು ಜ್ಯೇಷ್ಠಮಧುಗಳೆರಡರ ಚೂರ್ಣವನ್ನೂ ಉಪಯೋಗಿಸುವ ಯೋಗವು ಹಾಗೆಯೇ ಆಗಿರುತ್ತದೆ.

26. ಯದ್ಯತ್ ಸನ್ತರ್ಪಣಂ ಶೀತಮವಿದಾಹಿ ಹಿತಂ ಲಘು ।
ಪಥ್ಯಾನ್ನ ಪಾನಗಳು — ಅನ್ನಪಾನಂ,ನಿಷೇವ್ಯಂ ತತ್ ಕ್ಷತಕ್ಷೀಣೈಃ ಸುಖಾರ್ಥಿಭಿಃ ॥
ಯಚ್ಚೋಕ್ತಂ ಯಕ್ಷ್ಮಿಣಾಂ ಪಥ್ಯಂ ಕಾಸಿನಾಂ ರಕ್ತಪಿತ್ತಿನಾಮ್ ।
ತಚ್ಚ ಕುರ್ಯಾದಪೇಕ್ಷ್ಯಾಗ್ನಿಂ ವ್ಯಾಧಿಂ ಸಾತ್ಮ್ಯಬಲಾಂಸ್ತಥಾ ।
ಉಪೇಕ್ಷಿತೋ ಭವೇತ್ ತಸ್ಮಿನ್ನನುಬನ್ಧೋ ಹಿ ಯಕ್ಷ್ಮಣಃ ।
ಪ್ರಾಗೇವಾಗಮನಾತ್ತಸ್ಯ ತಸ್ಮಾತ್ತಂ ತ್ವರಯಾ ಜಯೇತ್ ॥ (ಚ. 629)

ಸಂತರ್ಪಣ(ತೃಪ್ತಿಕರ)ವಾದ, ಶೀತವಾದ, ವಿದಾಹಿಯಲ್ಲದ, ಹಿತವಾದ ಮತ್ತು ಲಘುವಾದ ಅನ್ನಪಾನಗಳು ಯಾವ ಯಾವವು ಇರುತ್ತವೋ ಅವುಗಳನ್ನು ಸುಖವನ್ನಪೇಕ್ಷಿಸುವ ಕ್ಷತಕ್ಷೀಣ ರೋಗಿಗಳು ಸೇವಿಸತಕ್ಕದ್ದು; ಮತ್ತು ಕೆಮ್ಮಿನವರಿಗೂ, ರಕ್ತಪಿತ್ತವ್ಯಾಧಿಯವರಿಗೂ, ಯಕ್ಷ್ಮರೋಗದವರಿಗೂ ಯಾವ ಪಥ್ಯವು ಹೇಳಲ್ಪಟ್ಟದೋ ಅದನ್ನು ಅವರು ಅಗ್ನಿಬಲವನ್ನೂ, ದೇಹಬಲವನ್ನೂ, ಸಾತ್ಮ್ಯ(ಹಿತ)ವನ್ನೂ, ವ್ಯಾಧಿಯ ಬಲವನ್ನೂ ಆಲೋಚಿಸಿಕೊಂಡು ಉಪಯೋಗಿಸತಕ್ಕದ್ದು. ಈ ಕ್ಷತಕ್ಷೀಣರೋಗವನ್ನು ಉಪೇಕ್ಷೆಮಾಡಿದರೆ ಅದರ ಅನುಬಂಧವಾಗಿ ಯಕ್ಷ್ಮರೋಗವು ಪ್ರಾಪ್ತವಾಗುತ್ತದೆ. ಆದ್ದರಿಂದ ಆ ಯಕ್ಷ್ಮರೋಗವು ಬರುವದರೊಳಗೆನೇ ಈ ರೋಗವನ್ನು ತ್ವರೆಯಿಂದ ಜಯಿಸತಕ್ಕದ್ದು.

ಪರಾ ವಾ ಸು ಕ್ಷತಕ್ಷಯ ಪರಿಹಾರಗಳೊಳಗೆ ಕೂಷ್ಮಾಂಡ-ರಸಾಯನ, ವಶಿಷ್ಠಹರೀತಕೀ-ರಸಾಯನ ಮತ್ತು ಅಗಸ್ತ್ಯಹರೀತಕೀ-ರಸಾಯನವನ್ನು ಕಾಣಿಸಿದ್ದಾನೆ

27. (೧) ಪ್ರಾಯ ೩೨ ವರ್ಷ. ಉಗುಳಿನಲ್ಲಿ ರಕ್ತ, ನೆನಪು ಕಡಿಮೆ, ತಲೆಯಲ್ಲಿ ಹರಿದ ಹಾಗೆ ಕಾಣುವದು ಮತ್ತು ಕೂತಾಗ್ಗೆ ಸೊಂಟದಲ್ಲಿ ಕೊಳಿಕೆ ಹಾಕಿದ ಹಾಗೆ ಆಗುವದು.—ಕಡೀರು ತೊ. ೧, ಆನೆಕಡೀರು ತೊ. ೧, ಬಿಲ್ವಪತ್ರೆಬೇರು ತೊ. ೧, ಜ್ಯೇಷ್ಠಮಧು ತೊ. ೧, ನೆಗ್ಗಿಲಮುಳ್ಳು ತೊ. ೧, ಗುಳ್ಳದ ಬೇರು ತೊ. ೧ ಇವುಗಳನ್ನು ಚೂರ್ಣಿಸಿ, ೧ ತೊ. ಚೂರ್ಣಕ್ಕೆ ||| ಕುಡುತೆ ದನದ ಹಾಲು ಮತ್ತು ೩ ಕುಡುತೆ ನೀರು ಹೊಯಿದು, ಹಾಲುಕಷಾಯಮಾಡಿ, ಶೋಧಿಸಿ, ತೊ. = ಕಲ್ಲುಸಕ್ಕರೆ ಪುಡಿ ಕೂಡಿಸಿಕೊಂಡು, ದಿನಕ್ಕೆ ೨ ಸರ್ತಿ ಪ್ರಕಾರ, ಸೇವಿಸುತ್ತಾ ಬರುವದು. ಇದರಿಂದ ಕ್ಷೇಮವಾಗಿದೆ.

ದೃಷ್ಟಫಲಚಿಕಿತ್ಸೆ

(೨) ಪ್ರಾಯ ೨೩ ವರ್ಷ. ದೀರ್ಘಕಾಲದಿಂದ ಕೆಮ್ಮು, ಆಗಾಗ್ಗೆ ಕಫದೊಂದಿಗೆ ರಕ್ತ ಹೋಗುವದು; ವಾತನಾಡಿ ಸ್ಥಾನಚ್ಯುತ, ಪಿತ್ತಕಫಗಳು ಸ್ತಬ್ಧ — ಕಲ್ಲಂಗಡಲೆಬೇರು, ಆನೆಕಡೀರುಬೇರು, ಬಿಲ್ವಪತ್ರೆಬೇರು, ಆಡುಸೋಗೆ, ಭದ್ರಮುಷ್ಟಿ, ಕಾಡುಮೆಣಸಿನ ಬೇರು ಸಹ ತೊಲೆ || ಪ್ರಕಾರ, ಕಷಾಯದ ಅರ್ಧದಲ್ಲಿ ಅತಿ. ||, ಮ. ಜ್ವ. || ರಂತೆ, ಕಲ್ಲುಸಕ್ಕರೆ ಮತ್ತು ಜೇನು ಕೂಡಿಸಿ, ೪ ದಿನ — ಇದರಿಂದ ಕೆಮ್ಮು, ಕಫ ಸಹ ಕಡಿಮೆಯಾಗಿವೆ; ನಾಡಿ

ಗಳಲ್ಲಿ ಕಫದೋಷ ಕಡಿಮೆಯಾಗಿದೆ.—ಕಲ್ಲಟ್ಟಿಯ (ಕಿರಿಗುಳ್ಳದ) ಬೇರು ಮತ್ತು ಬಳ್ಳಿ ತುರಚನ ಬೇರು ಕೂಡಿಸಿ, ಪ್ರತಿಯೊಂದರ ಪ್ರಮಾಣ ತೊ. ।=ಗೆ ತಗ್ಗಿಸಿ, ಅದೇ ಮಾತ್ರೆ ಇನ್ನು ೪ ದಿನ.—ಗುಣವೇ ಅಲ್ಲದೆ ಅವಗುಣವಿಲ್ಲ; ನಾಡಿಗಳು ಸರಿಬಲ, ಆದರೆ ಅಸ್ಥಿರ—ಅದೇ ಕಷಾಯದಲ್ಲಿ ಕಸ್ತೂರ್ಯಾದಿ ||, ಮ. ಚ್ವ || ರಂತೆ ೩ ದಿನ—ಗುಣ ಉಂಟು; ನಾಡಿಗಳು ಸ್ಥಾನದಲ್ಲಿ, ವಾತಬಲ, ಮೂರರಲ್ಲಿಯೂ ಒಂದೊಂದು ಲೋಪ.—ಅದೇ ಪ್ರಕಾರ ೧೨ ದಿನ; ಹಾಲನ್ನು ಹೆಚ್ಚಾಗಿ ಉಪಯೋಗಿಸ ಹೇಳಿದೆ. ಅದರಿಂದ ಕ್ಷೇಮವಾಗಿದೆ.

ಪ್ರಕರಣಾಂತ ಟಿಪ್ಪಣೀ

28. (ಉರಃ)ಕ್ಷತದ ರಕ್ತ ಹೊರಡುವದು ಎದೆಯಿಂದ, ಅಂದರೆ ಸಾಧಾರಣವಾಗಿ ಶ್ವಾಸಕೋಶಗಳಲ್ಲಿ ಅಥವಾ ಕಫಾಶಯದಲ್ಲಿ ಯಾವದಾದರೊಂದು ರಕ್ತದ ನಾಳ ಅಥವಾ ಶಿರೆ ಒಡೆದು ಅಲ್ಲಿಂದ ಆಗಿರುತ್ತದೆ. ರಕ್ತ ಬರುವದು ಅಲ್ಪವಾಗಿ ಉಗುಳಿನೊಂದಿಗೆ ಲಾಂಛನ ಅಥವಾ ರೇಖಾರೂಪವಾಗಿ ಕಾಣಬಹುದು, ಅಥವಾ ಅಧಿಕವಾಗಿ ಪ್ರವಾಹರೂಪವನ್ನು ತಾಳಬಹುದು. ಎರಡನೇ ಸಂಗತಿಯಲ್ಲಿ ಅಮ್ಲಪಿತ್ತದ ಅಥವಾ ರಕ್ತಪಿತ್ತದ ಲಕ್ಷಣವಾಗಿ ಆಮಾಶಯದಿಂದ ಹೊರಡುವ ರಕ್ತ ಪ್ರವಾಹವು ಉರಃಕ್ಷತದ ಲಕ್ಷಣ ಎಂಬ ತಪ್ಪು ಗ್ರಹಿಕೆ ಉಂಟಾಗುವ ಸಂಭವ ಉಂಟು ಆದರೆ ಆಮಾಶಯದಿಂದ ರಕ್ತ ಹೊರಡುವದಕ್ಕೆ ಮೊದಲು ರೋಗಿಗೆ ಹೊಟ್ಟೆಯಲ್ಲಿ ಸಂಕಟ ಉಂಟಾಗುತ್ತದೆ ಮತ್ತು ರಕ್ತವು ವಾಂತಿಯಾಗಿ ಬರುತ್ತದೆ; ಅದಲ್ಲದೆ ಹೊರಗೆ ಬರುವ ರಕ್ತದ ಆಕಾರ ಮತ್ತು ವರ್ಣ ಆಮಾಶಯದೊಳಗಿರುವ ರಸಗಳ ಸಂಯೋಗವಿಶೇಷಗಳಿಂದ ಭೇದ ಪಟ್ಟಿರುತ್ತವೆ. ಕ್ಷತದ ರಕ್ತವು ಕೆಮ್ಮಿಗಿಯೇ ಹೊರಗೆ ಬರುವಂಥಾದ್ದು; ಮತ್ತು ಹಾಗೆ ರಕ್ತ ಹೊರಡುವದಕ್ಕೆ ಮೊದಲು, ಗಂಟಲಲ್ಲಿ ತುರಿಕೆಯುಂಟಾದ ಮತ್ತು ಎದೆ ಭಾರವಾದ, ಅಥವಾ ಒತ್ತಲ್ಪಟ್ಟ, ಹಾಗಿನ ಲಕ್ಷಣಗಳು ಕಾಣುತ್ತವೆ; ಅದಲ್ಲದೆ ಹೊರಗೆ ಬಂದ ರಕ್ತವು ಆರಂಭದಲ್ಲಿ ಶುಭ್ರ ಕೆಂಪಾಗಿ, ಕ್ರಮೇಣ, ಕಪ್ಪುವರ್ಣದ್ದಾಗಿ ನೊರೆಯಿಂದ ಅಥವಾ ಕಫದಿಂದ ಕೂಡಿಕೊಂಡು ಇರುತ್ತದೆ, ಮತ್ತು ಅದರ ಪೂರ್ವಾವಸ್ಥೆಯಲ್ಲಿಯೂ ಉತ್ತರಾವಸ್ಥೆಯಲ್ಲಿಯೂ ಪದೇಪದೇ ಕೆಮ್ಮು ಉಂಟಾಗಿ ಉಗುಳಿನಲ್ಲಿ ರಕ್ತದ ಲಾಂಛನ ಕಾಣುತ್ತದೆ. ತಕ್ಕ ಚಿಕಿತ್ಸೆ ಮಾಡದೆ ಬಿಟ್ಟರೆ, ಉರಃಕ್ಷತದ ಗಾಯವು ಹುಣ್ಣಿನ ರೂಪವನ್ನು ಹೊಂದುವದರಿಂದ, ಉಗುಳಿನಲ್ಲಿ ದುರ್ವಾಸನೆ ಮತ್ತು ಕೀವು ಉಂಟಾಗುವವು. ರಕ್ತವು ಪ್ರವಾಹಿಸಿ ಬಹಳವಾಗಿ ಹೋದರೆ ರೋಗಿಯು ಬೇಗನೆ ಸಾಯುವನು. ಕೆಮ್ಮಾಗಲಿ, ವಾಂತಿಯಾಗಲಿ ಇಲ್ಲದೆ ಬಾಯಿಂದ ರಕ್ತಬರುವ ಸಂಗತಿಯಲ್ಲಿ, ಅದರೊಂದಿಗೆ ನೊರೆಯಾಗಲಿ ಕಫವಾಗಲಿ ಇಲ್ಲದಿದ್ದರೆ, ಅದು ಹಲ್ಲುಗಳ (ನಿಜಿಯಿಂದ) ವಸಡಿನಿಂದ, ಅಥವಾ ಬಾಯಿಯ ಇತರ ಭಾಗದಿಂದ, ಹೊರಟಂಥಾದ್ದಾಗಿರಬೇಕೆಂತ ಊಹಿಸಿ, ತಕ್ಕ ಪರೀಕ್ಷೆಯಿಂದ ನಿಶ್ಚಯಮಾಡತಕ್ಕದ್ದು. ಎದೆಯಿಂದಲ್ಲದೆ ಇತರ ಯಾವ ಅಂಗವಿಭಾಗದಿಂದ ರಕ್ತಬಂದಾಗ್ಯೂ, ಅದು ಉರಃಕ್ಷತದ ಲಕ್ಷಣವಲ್ಲ.

ಶೋಷದಂತೆ ಕ್ಷತಕ್ಷೀಣವೂ ತ್ರಿದೋಷಜನ್ಯ. ವಾತವು ಪಿತ್ತವನ್ನು ಕೆದರಿಸಿ, ಒಡಕನ್ನೂ ಕ್ಷಯವನ್ನೂ ಉಂಟುಮಾಡುವಂಥಾದ್ದು. ಆರಂಭದಲ್ಲಿ ಸಾಧಾರಣವಾಗಿ ಕಫವು ಕ್ಷಯವಾಗಿರುತ್ತದೆ; ಕ್ರಮೇಣ ಅದು ಸಹ ವೃದ್ಧಿಗೊಳ್ಳುತ್ತದೆ.

# ಅಧ್ಯಾಯ XV.

## ವಾಂತಿ (ಛರ್ದಿ, ವಮಿ — Vomiting).

1. ದೋಷೈಃ ಪೃಥಕ್ ತ್ರಿಪ್ರಭವಾಶ್ಚತಸ್ರೋ ದ್ವಿಷ್ಟಾರ್ಥಯೋಗಾದಪಿ ಪಂಚವಿಧಾ ಸ್ಯಾತ್ ॥ (ಚ. 714)

ವಾಂತಿಯ ವಿಧಗಳು.

ದೋಷಗಳು ಒಂದೊಂದಾಗಿ ಮತ್ತು ಒಟ್ಟಾಗಿ ಉಂಟುಮಾಡುವಂಥವು ಸೇರಿ ನಾಲ್ಕು, ಅಸಹ್ಯಪದಾರ್ಥಗಳ ಸಂಘಟನದಿಂದ ಸಂಭವಿಸುವಂಥಾದ್ದು ಒಂದು, ಹೀಗೆ ವಾಂತಿ ಐದು ವಿಧ.

ಷರಾ ಈ ಐದನೇದು ಆಗಂತು 2ನೇ ಸಂಖ್ಯೆ ನೋಡಿ

2. ಬೀಭತ್ಸಜಾ ದೌಹೃದಾಮಜಾ ಚ ಯಾಸಾತ್ಮ್ಯತೋ ವಾ ಕ್ರಿಮಿಜಾ ಚ ಯಾ ಹಿ ।
ಸಾ ಪಂಚಮೀ ತಾಶ್ಚ ವಿಭಾವಯೇತ್ತು ದೋಷೋಚ್ಛ್ರಯೇಣೈವ ಯಥೋಕ್ತಮಾದೌ ॥ (ಸು. 846)

ಆಗಂತು ಛರ್ದಿಯ ಭೇದ ಮತ್ತು ದೋಷವ್ಯವಸ್ಥೆ

ಹೇಸುವಿಕೆ(ಅಸಹ್ಯತೆ)ಯಿಂದ, ಬಸುರಿಯ ಬಯಕೆಯಿಂದ, ಆಮದಿಂದ, ಒಗ್ಗದ ಅನ್ನಪಾನಗಳಿಂದ, ಕ್ರಿಮಿಗಳಿಂದ, ಉಂಟಾಗುವ ವಾಂತಿಗಳು ಐದನೇ ವಿಧ. ಅವುಗಳಲ್ಲಿ ಮೊದಲು (ದೋಷಜ ವಾಂತಿಗಳನ್ನು ಕುರಿತು) ಹೇಳಲ್ಪಟ್ಟ ಕ್ರಮದಿಂದ ಯಾವ ದೋಷಗಳು ವೃದ್ಧಿಗೊಂಡಿವೆ ಎಂಬದನ್ನು ಪರೀಕ್ಷಿಸಿಯೇ ಭೇದವನ್ನು ಮಾಡತಕ್ಕದ್ದು.

ಷರಾ ಚರಕನು ಆಗಂತು ಛರ್ದಿಯ ಹೇತುಗಳೊಳಗೆ ಬೀಭತ್ಸಜವನ್ನು ಮಾತ್ರ ದ್ವಿಷ್ಟಾರ್ಥಸಂಯೋಗ ಎಂಬ ಹೆಸರಿನಿಂದ ವರ್ಣಿಸಿ, ಮಿಕ್ಕವುಗಳನ್ನು ಬಿಟ್ಟಿರುತ್ತಾನೆ ಅವನ ಮತದಲ್ಲಿ ಆಮಜಾ ಮತ್ತು ಅಸಾತ್ಮ್ಯಜಾ ಛರ್ದಿಗಳು ತ್ರಿದೋಷಜದಲ್ಲಿ ಸೇರಿದವು ಮತ್ತು ಮಿಕ್ಕವು ಅನ್ಯವಿಕಾರದ ಲಕ್ಷಣಗಳು ಕೆಳಗಿನ 9ನೇ ಸಂಖ್ಯೆ ನೋಡಿ.

3. ಛಾದಯನ್ನಾನನಂ ವೇಗೈರರ್ದಯನ್ನಂಗಭಂಜನೈಃ ।
ನಿರುಚ್ಯತೇ ಛರ್ದಿರಿತಿ ದೋಷೋ ವಕ್ತ್ರಂ ಪ್ರಧಾವಿತಃ ॥
ದೋಷಾನುದೀರಯನ್ ವೃದ್ಧಾನುದಾನೋ ವ್ಯಾನಸಂಗತಃ ।
ಊರ್ಧ್ವಮಾಗಚ್ಛತಿ ಭೃಶಂ ವಿರುದ್ಧಾಹಾರಸೇವಿನಾಮ್ ॥ (ಸು. 845)

ಛರ್ದಿಶಬ್ದದ ನಿರುಕ್ತಿ ಮತ್ತು ಆ ರೋಗದ ಸಂಪ್ರಾಪ್ತಿ

ಬಾಯಿಯನ್ನು ಮುಚ್ಚಿ, ಅಂಗಗಳು ಮುರಿದ ಹಾಗಿನ ಪೀಡೆಯನ್ನುಂಟುಮಾಡಿ, ದೋಷವು ವೇಗಗಳಿಂದ (ಆಮಾಶಯದಿಂದ) ಮುಖದ ಕಡೆಗೆ ಓಡಿಬರುವದು ಛರ್ದಿ, ಎಂತ ಅದರ ವ್ಯುತ್ಪತ್ತಿ—('ಛಾದನ' ಮತ್ತು 'ಅರ್ದನ' ಇರುವದರಿಂದ ಛರ್ದಿ). ವಿರುದ್ಧವಾದ ಆಹಾರಗಳನ್ನು ಸೇವಿಸುವವರಲ್ಲಿ ವೃದ್ಧಿಗೊಂಡ ದೋಷಗಳನ್ನು ವ್ಯಾನವಾಯುವಿನೊಂದಿಗೆ ಕಲಿತುಕೊಂಡ ಉದಾನವಾಯುವು ಕೆದರಿಸುತ್ತಾ ಬಹಳವಾಗಿ (ಅಥವಾ ಬಹು ಸರ್ತಿ) ಮೇಲಕ್ಕೆ ಬರುತ್ತದೆ.

ಷರಾ ಎಲ್ಲಾ ವಾಂತಿಗಳಲ್ಲಿಯೂ ಆಮಾಶಯದಲ್ಲಿಯ ವಸ್ತುಗಳು ಕೆಳಗೆ ಹೋಗುವದರ ಬದಲಾಗಿ ಮೇಲಕ್ಕೆ ಬರುತ್ತವೆ ಕೆಳಗಿನ 12ನೇ ಸಂಖ್ಯೆ ನೋಡಿ.

4. ಹೃಲ್ಲಾಸೋದ್ಗಾರರೋಧೌ ಚ ಪ್ರಸೇಕೋ ಲವಣಸ್ತನುಃ ।

ಛರ್ದಿಯ ಪೂರ್ವರೂಪ ದ್ವೇಷೋಽನ್ನಪಾನೇ ಚ ಭೃಶಂ ವಮೀನಾಂ ಪೂರ್ವಲಕ್ಷಣಮ್ ॥

(ಸು. 845)

ಎದೆಯಲ್ಲಿ ತಲ್ಲಣ, ತೇಗು ಬಾರದಿರುವದು, ಬಾಯಿಯಿಂದ ಉಪ್ಪಾದ ಮತ್ತು ತೆಳ್ಳಗಾದ ಎಂಜಲು ಬರುವದು, ಅನ್ನಪಾನಗಳಲ್ಲಿ ಬಹಳ ದ್ವೇಷ, ಇವು ವಾಂತಿಗಳ ಪೂರ್ವರೂಪ.

ಷರಾ ಈ ಶ್ಲೋಕವನ್ನು ಬೇರೆ ವಿಧವಾಗಿ ಬರೆದದ್ದು ಕಾಣುತ್ತದೆ ಅದರ ಪ್ರಕಾರ ಬಾಯಿಯಿಂದ ಕಫ ಬರುವದು, ಎದೆಯಲ್ಲಿ ವಾಕರಿಕೆ ಸಂಕಟ ಮತ್ತು ಅನ್ನದಲ್ಲಿ ಅಸಂತೋಷ (ಅಥವಾ ದ್ವೇಷ) ವಾಂತಿಯ ಪೂರ್ವರೂಪ ಅದು ಚರಕನ ಉಪದೇಶಕ್ಕೆ ಸರಿಯಾದದ್ದು

5. ವ್ಯಾಯಾಮತೀಕ್ಷ್ಣೌಷಧಶೋಕರೋಗಭಯೋಪವಾಸಾದ್ಯತಿಕರ್ಷಿತಸ್ಯ ।

ವಾತಛರ್ದಿಯ ಹೇತು ಮತ್ತು ಲಕ್ಷಣ

ಕ್ರುದ್ಧೋ ಮಹಾಸ್ರೋತಸಿ ಮಾತರಿಶ್ವಾ ದೋಷಾನ್ ಸಮುತ್ಕ್ಲಿಶ್ಯ ತದೂರ್ಧ್ವಮಸ್ಯನ್ ॥

ಆಮಾಶಯೋದ್ರೇಕಕೃತಾಂ ಚ ಮರ್ಮ
  ಪ್ರಪೀಡಯನ್ ಛರ್ದಿಮುದೀರಯೇಚ್ಚ ।
ಹೃತ್ಪಾರ್ಶ್ವಪೀಡಾಮುಖಶೋಷಮೂರ್ಧ-
  ನಾಭ್ಯರ್ತಿಕಾಸಸ್ವರಭೇದತೋದೈಃ ॥
ಉದ್ಗಾರಶಬ್ದಪ್ರಬಲಂ ಸಫೇನಂ
  ವಿಚ್ಛಿನ್ನಕೃಷ್ಣಂ ತನುಕಂ ಕಷಾಯಮ್ ।
ಕೃಚ್ಛ್ರೇಣ ಚಾಲ್ಪಂ ಮಹತಾ ಚ ವೇಗೇ-
  ನಾರ್ತೋಽನಿಲಾಚ್ಛರ್ದಯತೀಹ ದುಃಖಮ್ ॥ (ಚ. 714)

ದೇಹದಂಡನೆ, ತೀಕ್ಷ್ಣವಾದ ಔಷಧ, ಶೋಕ, ರೋಗ, ಭಯ, ಉಪವಾಸ, ಮುಂತಾದ ಕಾರಣಗಳಿಂದ ಅತಿಯಾಗಿ ಕೃಶನಾದವನ ಅನ್ನನಾಳದಲ್ಲಿರುವ ವಾಯುವು ಕೋಪಗೊಂಡು, ದೋಷಗಳನ್ನು ಕೆದರಿಸಿ ಅಲ್ಲಿಂದ ಮೇಲಕ್ಕೆ ದೂಡುತ್ತಾ, ಹೃದಯವನ್ನು ಪೀಡಿಸುತ್ತಾ, ಆಮಾಶಯದ ಉದ್ರೇಕದಿಂದುಂಟಾಗುವಂಥಾ ವಾಂತಿಯನ್ನು ಪ್ರೇರೇಪಿಸುತ್ತದೆ. ಆ ವಾತಛರ್ದಿಯಲ್ಲಿ, ಎದೆಯಲ್ಲಿಯೂ ಪಕ್ಕಗಳಲ್ಲಿಯೂ ಪೀಡೆ, ಬಾಯಿ ಒಣಗುವದು, ತಲೆ ನೋವು, ನಾಭಿಯಲ್ಲಿ ನೋವು, ಕೆಮ್ಮು, ಸ್ವರಭೇದ, ಚುಚ್ಚಿದ ಹಾಗಿನ ನೋವು, ಪ್ರಬಲವಾದ ತೇಗಿನ ಶಬ್ದ, ಮಹತ್ತಾದ ವೇಗದ ಪೀಡೆ, ಅಲ್ಪವಾಗಿಯೂ, ನೊರೆಯುಳ್ಳದ್ದಾಗಿಯೂ, ತೆಳ್ಳಗಾಗಿಯೂ, ಕಪ್ಪಾಗಿಯೂ, ಚೊಗರು ರುಚಿಯುಳ್ಳದ್ದಾಗಿಯೂ ಇರುವ ವಾಂತಿಯನ್ನು ತಡೆದು ತಡೆದು ಕಷ್ಟದಿಂದ ಮಾಡುವದು, ಸಂಕಟ, ಈ ಲಕ್ಷಣಗಳು ಕಾಣುವವು.

ಷರಾ ಬೆನ್ನುನೋವು, ಆಹಾರ ಜೀರ್ಣವಾದಾಗ ಅಧಿಕವಾಗುವಿಕೆ ಮತ್ತು ಶ್ರಮ ಸಹ ವಾತಜಛರ್ದಿಯ ಲಕ್ಷಣ ಎಂತ ಸು. (ಪು 846)

6. ಅಜೀರ್ಣಕಟ್ವಮ್ಲವಿದಾಹ್ಯಶೀತ್ರೈರಾಮಾಶಯೇ ಪಿತ್ತಮುದೀರ್ಣವೇಗಮ್ ।

ಪಿತ್ತಛರ್ದಿಯ ಹೇತು ಮತ್ತು ಲಕ್ಷಣ

ರಸಾಯನೀಭಿರ್ವಿಸೃತಂ ಪ್ರಪೀಡ್ಯ ಮರ್ಮೋರ್ಧ್ವಮಾಗಮ್ಯ ವಮಿಂ ಕರೋತಿ ॥

ಮೂರ್ಛಾಪಿಪಾಸಾಮುಖಶೋಷಮೂರ್ಧತಾಲ್ವಕ್ಷಿಸನ್ತಾಪತಮೋ
ಭ್ರಮಾರ್ತಃ |
ಪಿತ್ತಂ ಭೃಶೋಷ್ಣಂ ಹರಿತಂ ಸತಿಕ್ತಂ ಧೂಮ್ರಂ ಚ ಪಿತ್ತೇನ ವಮೇತ್ಸ-
ದಾಹಮ್ || (ಚ. 714)

ಅಜೀರ್ಣ, ಕಾರ, ಹುಳಿ, ವಿದಾಹಿ ಮತ್ತು ಉಷ್ಣ ಪದಾರ್ಥಗಳ ಸೇವನದಿಂದ ಆಮಾಶಯದಲ್ಲಿ ಪಿತ್ತವು ಕೆದರಿದ ವೇಗವುಳ್ಳದ್ದಾಗಿ, ರಸವಾಹಿ ಶಿರೆಗಳ ಪರಿಮುಖ ಪಸರಿಸಿ ಮೇಲಕ್ಕೆ ಬಂದು, ಮರ್ಮ(ಹೃದಯ)ವನ್ನು ಬಹಳವಾಗಿ ಪೀಡಿಸಿ, ವಾಂತಿಯನ್ನುಂಟುಮಾಡುತ್ತದೆ. ಆ ಪಿತ್ತಜ ವಾಂತಿಯಲ್ಲಿ, ರೋಗಿಯು ಮೂರ್ಛೆ, ಬಾಯಾರಿಕೆ, ಬಾಯಿ ಆರುವದು, ತಲೆಯಲ್ಲಿಯೂ, ತಾಲುವಿನಲ್ಲಿಯೂ, ಕಣ್ಣುಗಳಲ್ಲಿಯೂ ಉರಿ, ಕಣ್ಣುಕತ್ತಲೆ, ತಲೆತಿರುಕು, ಇವುಗಳಿಂದ ಪೀಡಿಸಲ್ಪಟ್ಟು, ಬಹಳ ಬಿಸಿಯಾದ, ಹಸರಾದ, ಕಹಿಕೂಡಿದ, ಕಪ್ಪೊತ್ತಿದ ಕೆಂಪು ವರ್ಣದ ಮತ್ತು ಉರಿಯುಳ್ಳ ಪಿತ್ತವನ್ನು ವಾಂತಿಮಾಡುವನು.

ಪರಾ ಬಾಯಿ ಕಹಿ ಅಥವಾ ಕಾರ ರುಚಿಯುಳ್ಳದ್ದಾಗುವದು, ವಾಂತಿ ಹುಳಿಯಾಗಿರುವದು, ಅದು ರಕ್ತಮಿಶ್ರ ಅರಸಿನ ವರ್ಣವಾಗಿರುವದು ಮತ್ತು ಜ್ವರ ಸಹ ಪಿತ್ತಜ ಛರ್ದಿಯ ಲಕ್ಷಣ ಎಂತ ಸು (ಪು 846).

7. ಕಫಛರ್ದಿಯ ಹೇತು ಮತ್ತು ಲಕ್ಷಣ

ಸ್ನಿಗ್ಧಾತಿಗುರ್ವಾಮವಿದಾಹಿಭೋಜ್ಯೈಃ
ಸ್ವಪ್ನಾದಿಭಿಶ್ಚೈವ ಕಫೋಽತಿವೃದ್ಧಃ |
ಉರಃಶಿರೋಮರ್ಮರಸಾಯನೀಶ್ಚ
ಸರ್ವಾಃ ಸಮಾವೃತ್ಯ ವಮಿಂ ಕರೋತಿ ||
ತನ್ದ್ರಾಸ್ಯಮಾಧುರ್ಯಕಫಪ್ರಸೇಕ-
ಸನ್ತೋಷನಿದ್ರಾರುಚಿಗೌರವಾರ್ತ್ತಃ |
ಸ್ನಿಗ್ಧಂ ಘನಂ ಸ್ವಾದು ಕಫಂ ವಿಶುದ್ಧಂ
ಸಲೋಮಹರ್ಷೋಽಲ್ಪರುಜಂ ವಮೇತ್ತು || (ಚ. 714-715)

ಸ್ನಿಗ್ಧ, ಅತಿಗುರು, ಹಸಿ ಮತ್ತು ವಿದಾಹಿಯಾದ ಪದಾರ್ಥಗಳ ಭೋಜನಗಳಿಂದಲೂ, (ಹಗಲು) ನಿದ್ರೆ ಮುಂತಾದ ಹೇತುಗಳಿಂದಲೂ, ಕಫವು ಅತಿಯಾಗಿ ವೃದ್ಧಿಗೊಂಡು, ಎದೆ, ತಲೆ, ಹೃದಯ ಮತ್ತು ಎಲ್ಲಾ ರಸವಾಹಿ ಶಿರೆಗಳನ್ನು ಹೊಕ್ಕು ತಡೆದು, ವಾಂತಿಯನ್ನುಂಟುಮಾಡುತ್ತದೆ. ಆ ಕಫಜ ಛರ್ದಿಯಲ್ಲಿ ರೋಗಿಯು ತಂದ್ರೆ, ಬಾಯಿ ಸಿಹಿಯಾಗುವದು, ಕಫ ಸುರಿಯುವದು, ತೃಪ್ತಿ (ಹೊಟ್ಟೆ ತುಂಬಿರುವದು), ನಿದ್ರೆ, ಅರುಚಿ, ಮೈಭಾರ, ಇವುಗಳಿಂದ ಪೀಡಿತನಾಗಿ, ಸ್ನಿಗ್ಧವಾದ, ಗಟ್ಟಿಯಾದ, ಸಿಹಿಯಾದ ಮತ್ತು ಸ್ವಚ್ಛವಾದ ಕಫವನ್ನು, ರೋಮಾಂಚಯುಕ್ತವಾಗಿ ಅಲ್ಪವಾದ ಸಂಕಟದಿಂದ, ವಾಂತಿಮಾಡುವನು.

ಪರಾ ವಾಂತಿಮಾಡಿದ್ದು ಬಿಳಿದಾಗಿ ಮತ್ತು ತಣ್ಣಗಾಗಿರುವದು, ಮತ್ತು ಅಂಗಗಳಲ್ಲಿ ಬಳಲಿಕೆ (ಸಾದ), ಸಹ ಕಫಜ ಛರ್ದಿಯ ಲಕ್ಷಣ ಎಂತ ಸು (ಪು 846)

8. ತ್ರಿದೋಷಛರ್ದಿಯ ಹೇತು, ಲಕ್ಷಣ, ಮತ್ತು ಅಸಾಧ್ಯಾವಸ್ಥೆ

ಸಮಶ್ನತಃ ಸರ್ವರಸಾನ್ ಪ್ರಸಕ್ತ-
ಮಾಮಪ್ರದೋಷರ್ತ್ತುವಿಪರ್ಯಯೈಶ್ಚ |
ಸರ್ವೇ ಪ್ರಕೋಪಂ ಯುಗಪತ್ಪ್ರಪನ್ನಾ-
ಶ್ಛರ್ದಿಂ ತ್ರಿದೋಷಾಂ ಜನಯನ್ತಿ ದೋಷಾಃ ||

ಶೂಲಾವಿಪಾಕಾರುಚಿದಾಹತೃಷ್ಣಾ-
ಶ್ವಾಸಪ್ರಮೋಹಪ್ರಬಲಾ ಪ್ರಸಕ್ತಮ್ |
ಛರ್ದಿಸ್ತ್ರಿದೋಷಾತ್ ಲವಣಾಮ್ಲನೀಲ-
ಸಾನ್ದ್ರೋಷ್ಣರಕ್ತಂ ವಮತಾಂ ನೃಣಾಂ ಸ್ಯಾತ್ ||
ವಿಟ್ಸ್ವೇದಮೂತ್ರಾಮ್ಬುವಹಾನಿ ವಾಯುಃ
ಸ್ರೋತಾಂಸಿ ಸಂರುದ್ಧ್ಯ ಯದೋರ್ಧ್ವಮೇತಿ |
ಉತ್ಸನ್ನದೋಷಸ್ಯ ತದಾಚಿತಂ ತಂ
ದೋಷಂ ಸಮುದ್ಧೂಯ ನರಸ್ಯ ಕೋಷ್ಠಾತ್ ||
ವಿಣ್ಮೂತ್ರಯೋಸ್ತತ್ ಸಮವರ್ಣಗನ್ಧಂ
ತೃಟ್ಶ್ವಾಸಹಿಕ್ಕಾರ್ತಿಯುತಂ ಪ್ರಸಕ್ತಮ್ |
ಪ್ರಚ್ಛರ್ದಯೇದ್ದುಷ್ಟಮಿಹಾತಿವೇಗಾತ್
ಭಯಾರ್ದಿತಶ್ಚಾಶು ವಿನಾಶಮೇತಿ || (ಚ. 715)

(ಮಧುರಾದಿ) ಎಲ್ಲಾ ರಸಗಳನ್ನು ಬಿಡದೆ ಭುಂಜಿಸುತ್ತಿರುವವನಲ್ಲಿ ಆಮದೋಷವು ಪ್ರಬಲವಾಗುವದರಿಂದ, ಅಥವಾ ವಿಪರೀತವಾದ ಋತುಭೇದಗಳಿಂದ, ವಾತಾದಿ ಎಲ್ಲಾ ದೋಷಗಳು ಒಂದೇ ಕಾಲದಲ್ಲಿ ಕೋಪಗೊಂಡು ತ್ರಿದೋಷಜ ಛರ್ದಿಯನ್ನುಂಟುಮಾಡುತ್ತವೆ. ಆಗ್ಗೆ ಶೂಲೆ, ಅಜೀರ್ಣ, ಅರುಚಿ, ಉರಿ, ಬಾಯಾರಿಕೆ, ಉಬ್ಬಸ ಮತ್ತು ಕಣ್ಣುಕತ್ತಲೆ ಪ್ರಬಲವಾಗಿ, ಉಪ್ಪಾದ, ಹುಳಿಯಾದ, ನೀಲವರ್ಣದ, ದಪ್ಪವಾದ, ಬಿಸಿಯಾದ ಮತ್ತು ಕೆಂಪುವರ್ಣದ ವಾಂತಿಯು ಎಡೆಬಿಡದೆ ಮನುಷ್ಯರಲ್ಲಿ ಉಂಟಾಗುವದು. ಉದ್ರೇಕವಾದ ದೋಷಗಳೊಳಗೆ ವಾಯುವು ಮಲ-ಮೂತ್ರ-ಬೆವರು-ನೀರುಗಳನ್ನು ಸಾಗಿಸುವ ಶಿರೆಗಳಲ್ಲಿ ತಡೆಯನ್ನುಂಟುಮಾಡಿ, ಕೋಷ್ಠದಲ್ಲಿ ಸಂಗ್ರಹವಾದ ದೋಷವನ್ನು ಕೋಷ್ಠದಿಂದ ಮೇಲಕ್ಕೆ ದೂಡಿಕೊಂಡು, ಯಾವಾಗ ಮೇಲೆ ಬರುತ್ತದೋ, ಆಗ್ಗೆ ಮನುಷ್ಯನು ಮಲಮೂತ್ರಗಳಿಗೆ ಸಮಾನವಾದ ವಾಸನೆ ಮತ್ತು ವರ್ಣವುಳ್ಳ ದುಷ್ಟ ದೋಷವನ್ನು ಎಡೆಬಿಡದೆ ಅತಿವೇಗದಿಂದ ವಾಂತಿಮಾಡುತ್ತಾನೆ ಮತ್ತು ಅವನಿಗೆ ಬಾಯಾರಿಕೆ, ಉಬ್ಬಸ, ಬಿಕ್ಕಟ್ಟು ಮತ್ತು ಭಯ, ಇವುಗಳ ಪೀಡೆಯುಂಟಾಗುತ್ತದೆ; ಅಂಥಾ ರೋಗಿಯು ಬೇಗನೇ ನಾಶವನ್ನು ಹೊಂದುತ್ತಾನೆ.

ಷರಾ ಮಲಮೂತ್ರಗಳ ವಾಸನೆಯುಂಟಾಗುವದು ಸ್ಥೂಲಾಂತ್ರ ಮತ್ತು ಉಂಡುಕಗಳ ಅಧಿಕಾರ ಭಂಗದ ಸೂಚನೆ ಮೇಲೆ 3ನೇ 4ನೇ ಶ್ಲೋಕಗಳಲ್ಲಿ ವಿವರಿಸಲ್ಪಟ್ಟ ದುರ್ಲಕ್ಷಣಗಳು ತ್ರಿದೋಷಜದಲ್ಲಿ ಮಾತ್ರವಲ್ಲದೆ ಎಲ್ಲಾ ವಾಂತಿಗಳಲ್ಲಿಯೂ ಉಂಟಾಗಬಹುದೆಂಬ ಪಕ್ಷ ಉಂಟಂತೆ (ಮ ವ್ಯಾ. 106) ಆದರೆ ಕೆಳಗಿನ 11ನೇ ಸಂಖ್ಯೆ ನೋಡಿ

9. ದ್ವಿಷ್ಟಪ್ರತೀಪಾಶುಚಿಪೂತ್ಯಮೇಧ್ಯ-
ಬೀಭತ್ಸಗನ್ಧಾಶನದರ್ಶನೈಶ್ಚ |
ಯಶ್ಛರ್ದಯೇತ್ತಪ್ತಮನಾ ಮನೋಘ್ನೈ
ರ್ದ್ವಿಷ್ಟಾರ್ಥಸಂಯೋಗಭವಾ ಮತಾ ಸಾ || (ಚ. 715)

ದ್ವಿಷ್ಟಾರ್ಥಸಂಯೋಗಜ ಛರ್ದಿ ಲಕ್ಷಣ

ತನಗೆ ದ್ವೇಷವುಳ್ಳ, ಅಹಿತವಾದ, ಅಶುಚಿಯಾದ, ದುರ್ವಾಸನೆಯುಳ್ಳ, ಮಲಿನವಾದ ಅಥವಾ ಅಸಹ್ಯವಾದ, ಪದಾರ್ಥಗಳ ವಾಸನೆ, ಅಥವಾ ಅವುಗಳನ್ನು ನೋಡುವದು ಅಥವಾ ತಿನ್ನುವದು, ಮನಸ್ಸನ್ನು ಕೆಡಿಸತಕ್ಕಂಥ ಈ ಕಾರಣಗಳಿಂದ ಮನಸ್ತಾಪ ಉಂಟಾಗಿ ಸಂಭವಿಸುವ ವಾಂತಿಯನ್ನು ದ್ವಿಷ್ಟಾರ್ಥಸಂಯೋಗದಿಂದುಂಟಾದದ್ದೆಂತ ತಿಳಿಯುತ್ತಾರೆ.

10. ಶೂಲಹೃಲ್ಲಾಸಬಹುಲಾ ಕೃಮಿಜಾ ಚ ವಿಶೇಷತಃ |
ಕೃಮಿಹೃದ್ರೋಗತುಲ್ಯೇನ ಲಕ್ಷಣೇನ ಚ ಲಕ್ಷಿತಾ || (ಸು. 846)

ಕ್ರಿಮಿಯಿಂದುಂಟಾದ ಛರ್ದಿಯಲ್ಲಿ ಶೂಲೆಯೂ, ಎದೆಯ ತಲ್ಲಣವೂ ಹೆಚ್ಚಾಗಿರುವದು ವಿಶೇಷವಲ್ಲದೆ, ಇತರ ಲಕ್ಷಣಗಳು ಕೃಮಿಜ ಹೃದ್ರೋಗದ ಲಕ್ಷಣಗಳಿಗೆ ಸಮಾನವಾಗಿರುವವು.

ಷರಾ ಹೃಲ್ಲಾಸ ಎಂದರೆ ಥುತ್ಕರಿಸುವದು ಎಂತ ನಿ ಸಂ ವ್ಯಾ (ಪು 649)

11. ಕ್ಷೀಣಸ್ಯ ಯಾ ಛರ್ದಿರತಿಪ್ರವೃದ್ಧಾ ಸೋಪದ್ರವಾ ಶೋಣಿತಪೂಯ-
ಯುಕ್ತಾ |
ಅಸಾಧ್ಯ ಲಕ್ಷಣ
ಸಚನ್ದ್ರಿಕಂ(?ಕಾಂ) ತಾಂ ಪ್ರವದನ್ತ್ಯಸಾಧ್ಯಾಂ ಸಾಧ್ಯಾಂ ಚಿಕಿತ್ಸೇ-
ದನುಪದ್ರವಾಂ ಚ || (ಚ. 715)

ಕ್ಷೀಣನಾದವನಿಗೆ ಉಂಟಾದ ವಾಂತಿಯು ಅತಿಯಾಗಿ ಬೆಳೆದು ಉಪದ್ರವಗಳಿಂದ ಕೂಡಿಕೊಂಡಿದ್ದು, ವಾಂತಿಮಾಡಿದ್ದರಲ್ಲಿ ರಕ್ತ, ಕೀವು ಮತ್ತು ಚಂದ್ರಿಕೆ ಕಾಣುವದಾದರೆ, ಅಂಥಾ ವಾಂತಿಯು ಅಸಾಧ್ಯವೆಂತ ಹೇಳುತ್ತಾರೆ. ಉಪದ್ರವಗಳಿಂದ ಕೂಡಿರದ ಸಾಧ್ಯವಾದ ಛರ್ದಿಗೆ ಚಿಕಿತ್ಸೆಮಾಡತಕ್ಕದ್ದು.

ಷರಾ ಮೇದಸ್ಸು ಮುಂತಾದ ಧಾತುಗಳ ಜಿಡ್ಡು ಹೊರಗೆ ಬರುವಂಥಾದ್ದು ನವಿಲಿನ ಬಾಲದಲ್ಲಿ ಕಾಣುವ ಚಂದ್ರಿಕೆಗಳ ಹಾಗೆ ಕಾಣುತ್ತದೆ ಎಂತ ಮಧುಕೋಶ ವ್ಯಾ ಹೇಳುತ್ತದೆ (ಪು 107). ಚಂದ್ರಾಕಾರವಾಗಿ ಮಿಂಚುವಂಥಾ ದ್ರವ್ಯಕ್ಕೆ ಚಂದ್ರಿಕೆ ಎನ್ನುವದು ಕೆಳಗಿನ 19ನೇ ಸಂಖ್ಯೆ ನೋಡಿ

12. ಆಮಾಶಯೋತ್ಕ್ಲೇಶಭವಾ ಹಿ ಸರ್ವಾ-
ಶ್ಛರ್ದ್ಯೋ ಮತಾ ಲಂಘನಮೇವ ತಸ್ಮಾತ್ |
ಚಿಕಿತ್ಸೋಪಕ್ರಮದ ಸಾಮಾನ್ಯ ವಿಧಾನ
ಪ್ರಾಕ್ಕಾರಯೇನ್ಮಾರುತಜಾಂ ವಿಮುಚ್ಯ
ಸಂಶೋಧನಂ ವಾ ಕಫಪಿತ್ತಹಾರಿ ||
ಚೂರ್ಣಾನಿ ಲಿಹ್ಯಾನ್ಮಧುನಾಭಯಾನಾಂ
ಹೃದ್ಯಾನಿ ವಾ ಯಾನಿ ವಿರೇಚನಾನಿ |
ಮದ್ಯೈಃ ಪಯೋಭಿಶ್ಚ ಯುತಾನಿ ಯುಕ್ತ್ಯಾ
ನಯನ್ತ್ಯಧೋ ದೋಷಮುದೀರ್ಣಮೂರ್ಧ್ವಮ್ ||
ವಲ್ಲೀಫಲಾದ್ಯೈರ್ವಮನಂ ಪಿಬೇದ್ವಾ
ಯೋ ದುರ್ಬಲಸ್ತಂ ಶಮನೈಶ್ಚಿಕಿತ್ಸೇತ್ |
ರಸೈರ್ಮನೋಜ್ಞೈರ್ಲಘುಭಿರ್ವಿಶುಷ್ಕೈ-
ರ್ಭಕ್ಷ್ಯೈಃ ಸಭೋಜ್ಯೈರ್ವಿವಿಧೈಶ್ಚ ಪಾನೈಃ || (ಚ. 715)

ಎಲ್ಲಾ ಛರ್ದಿಗಳು ಆಮಾಶಯದಲ್ಲಿ ದೋಷಪ್ರಕೋಪ ಉಂಟಾಗಿ ಸಂಭವಿಸುವದೆಂತ ತಿಳಿದಿದ್ದಾರಾದ್ದರಿಂದ, ಆರಂಭದಲ್ಲಿ ವಾತಜ ಛರ್ದಿಯಲ್ಲದಿದ್ದರೆ ಲಂಘನವನ್ನೇ ಮಾಡಿಸತಕ್ಕದ್ದು, ಅಥವಾ ಕಫಪಿತ್ತಹರವಾದ ಶೋಧನೌಷಧಗಳನ್ನು ಕೊಡತಕ್ಕದ್ದು. ಅಣಿಲೆ ಕಾಯಿಗಳ ಚೂರ್ಣಗಳನ್ನು ಜೇನಿನಲ್ಲಿ ಕಲಸಿ ನೆಕ್ಕಬೇಕು. (ಅದರಿಂದ) ಅಥವಾ ಬೇರೆ ಮನಸ್ಸಿಗೆ ಹಿತವಾದ ವಿರೇಚನೌಷಧಗಳನ್ನು ಮದ್ಯಗಳೊಂದಿಗೆ ಅಥವಾ ಹಾಲುಗಳೊಂದಿಗೆ ಯುಕ್ತಿಯಿಂದ ಕೊಡುವದರಿಂದ, ಊರ್ಧ್ವಮುಖವಾಗಿ ಎದ್ದಂಥ ದೋಷವು ಕೆಳಗೆ ಒಯ್ಯಲ್ಪಡುತ್ತದೆ. ಅಥವಾ ವಲ್ಲೀಫಲ (ಕಹಿ ಹೀರೆಕಾಯಿ) ಮುಂತಾದವುಗಳಿಂದ ಮಾಡಿದ ವಮನೌಷಧವನ್ನು ಕುಡಿಯಬೇಕು ರೋಗಿಯು ದುರ್ಬಲನಾಗಿದ್ದರೆ ಅವನಿಗೆ ಶಮನಕರವಾದ ಯೋಗಗಳಿಂದಲೂ, ಅವನಿಗೆ ಪ್ರಿಯವಾದ (ಮಾಂಸ)ರಸಗಳು, ಲಘುವಾದ ಒಣ (ದ್ರವರಹಿತವಾದ) ಭಕ್ಷ್ಯಗಳು ಮತ್ತು ಅಶನಗಳು, ಮತ್ತು ವಿವಿಧವಾದ ಪಾನಗಳು, ಇವುಗಳಿಂದಲೂ, ಚಿಕಿತ್ಸೆಮಾಡತಕ್ಕದ್ದು.

ಪರಾ ದೋಷಗಳು ಬಹಳವಾಗಿರುವ ಸಂಗತಿಯಲ್ಲಿ ವಾಂತಿಗೆ ಔಷಧ ಕೊಡುವದು ಹಿತವೆಂತ ತಿಳಿಯುತ್ತಾರೆಂತಲೂ, ಅದಲ್ಲದಿದ್ದರೆ ದೋಷಕ್ಕೆ ತಕ್ಕವಾಗಿ ವಿರೇಚನ ಮಾಡಿಸತಕ್ಕದ್ದೆಂತಲೂ ಸು (ಪು 846) ವಿರೇಚನ ಔಷಧವನ್ನು ಹಾಲು ಮತ್ತು ಮದ್ಯಗಳಲ್ಲದೆ, ಹಣ್ಣುಗಳ ರಸಗಳೊಂದಿಗೂ ಕೊಡಬಹುದೆಂತ ವಾ (ಪು 290) ಛರ್ದಿಯು ವಾತಜವಾದರೆ ಮತ್ತು ರೋಗಿಯು ದುರ್ಬಲನಾದರೆ ಲಂಘನ ಶೋಧನ ಕ್ರಮಗಳನ್ನು ನಡಿಸದೆ ಶಮನಕ್ರಮದಿಂದಲೇ ಚಿಕಿತ್ಸೆಮಾಡತಕ್ಕದ್ದು ಲಂಘನಾನಂತರ ಎಲ್ಲರಿಗೂ ಶಮನಕ್ರಮವನ್ನೇ ನಡಿಸುವದು ಲಂಘನವು ಎಲ್ಲಾ ಛರ್ದಿಗಳಲ್ಲಿ ಹಿತವೆಂತಲ್ಲದೆ ವಾತಜದಲ್ಲಿ ವರ್ಜ್ಯ ಎಂತ ಸು ನು ಹೇಳಿರುವದಿಲ್ಲ (ಪು 846)

ಯಥಾಸ್ವಂ ಚ ಕಷಾಯಾಣಿ ಜ್ವರಘ್ನಾನಿ ಪ್ರಯೋಜಯೇತ್ ||

(ಸು. 847)

ಆಯಾ ದೋಷಗಳಿಗೆ ಯುಕ್ತವಾದ ಜ್ವರಹರಕಷಾಯಗಳನ್ನು (ಛರ್ದಿಯಲ್ಲಿ) ಪ್ರಯೋಗಿಸಬೇಕು.

13. ಹನ್ಯಾತ್ ಕ್ಷೀರಘೃತಂ ಪೀತಂ ಛರ್ದಿಂ ಪವನಸಂಭವಾಮ್ |
ಮುದ್ಗಾಮಲಕಯೂಷೋ ವಾ ಸಸರ್ಪಿಷ್ಕಃ ಸಸೈಂಧವಃ ||
ಯವಾಗೂಂ ಮಧುಮಿಶ್ರಾಂ ವಾ ಪಂಚಮೂಲೀಕೃತಾಂ ಪಿಬೇತ್ ||

ವಾತಜಛರ್ದಿಗೆ ಚಿಕಿತ್ಸೆ

(ಸು. 847)

ವಾತಛರ್ದಿಯು ಹಾಲು ಕೂಡಿದ ತುಪ್ಪವನ್ನು (ಅಥವಾ ಹಾಲಿನಿಂದ ತೆಗೆದ ತುಪ್ಪವನ್ನು) ಪಾನಮಾಡುವದರಿಂದ, ಅಥವಾ ಹೆಸರುಬೇಳೆಗೆ ನೆಲ್ಲಿ ಕೂಡಿಸಿಕೊಂಡು ಮಾಡಿದ ಸಾರನ್ನು, ತುಪ್ಪ ಮತ್ತು ಸೈಂಧವಲವಣ ಕೂಡಿಸಿ, ಪಾನಮಾಡುವದರಿಂದ, ನಾಶವಾಗುವದು; ಅಥವಾ ಹ್ರಸ್ವಪಂಚಮೂಲಗಳನ್ನು ಹಾಕಿ ಮಾಡಿದ ಯವಾಗೂ ಗಂಜಿಯನ್ನು, ಜೇನು ಕೂಡಿಸಿಕೊಂಡು, ಪಾನಮಾಡಬೇಕು.

ವಾತ್ರ ಹಿತಂ ಸ್ನೇಹವಿರೇಚನಮ್ || (ಚ. 847)

ವಾತಛರ್ದಿಯಲ್ಲಿ ಸ್ನೇಹವಿರೇಚನವು ಹಿತ.

ವಾತಾತ್ಮಜೇ ಹೃದ್ಗದಕಾಸಯುಕ್ತೋ
ನರಃ ಪಿಬೇತ್ಸೈನ್ಧವವದ್ಘೃತನ್ತು ।
ಸಿದ್ಧಂ ತಥಾ ಧಾನ್ಯಕನಾಗರಾಭ್ಯಾಂ
ದಧ್ನಾ ಚ ತೋಯೇನ ಚ ದಾಡಿಮಸ್ಯ ॥
ವ್ಯೋಷೇಣ ಯುಕ್ತಾಂ ಲವಣೈಸ್ತ್ರಿಭಿಶ್ಚ
ಘೃತಸ್ಯ ಮಾತ್ರಾಮಥವಾ ವಿದಧ್ಯಾತ್ ।
ಸ್ನಿಗ್ಧಾನಿ ಹೃದ್ಯಾನಿ ಚ ಭೋಜನಾನಿ
ರಸೈಃ ಸಯೂಷೈರ್ದಧಿದಾಡಿಮಾಮ್ಲೈಃ ॥ (ಚ. 715)

ವಾತಛರ್ದಿಯಲ್ಲಿ ಎದೆನೋವು ಮತ್ತು ಕೆಮ್ಮು ಉಳ್ಳ ಮನುಷ್ಯನು ತುಪ್ಪವನ್ನು, ಸೈಂಧವಲವಣ ಕೂಡಿಸಿಕೊಂಡು, ಕುಡಿಯತಕ್ಕದ್ದು; ಅಥವಾ ಕೊತ್ತುಂಬರಿ ಮತ್ತು ಶುಂಠಿಯ ಕಲ್ಕದಿಂದ, ಮೊಸರು ಮತ್ತು ದಾಳಿಂಬದ ಕಷಾಯ ಕೂಡಿಸಿ, ಕಾಯಿಸಿದ ತುಪ್ಪವನ್ನು ಸೈಂಧವ ಕೂಡಿಸಿಕೊಂಡು ಕುಡಿಯಬೇಕು, ಅಥವಾ ತ್ರಿಕಟು ಮತ್ತು ತ್ರಿಲವಣ(ಸೈಂಧವ, ವಿಡಾಲವಣ, ಸೌವರ್ಚಲ)ಗಳ ಚೂರ್ಣವನ್ನು ಬೆರಸಿಕೊಂಡು ತುಪ್ಪವನ್ನು ಪ್ರಮಾಣವರಿತು ಕುಡಿಯಬೇಕು, ಮತ್ತು ಪ್ರಿಯವಾದ (ಒಗ್ಗುವ) ಭೋಜನಗಳನ್ನು ಸ್ನಿಗ್ಧವಾಗಿ, ಮಾಂಸರಸಗಳಿಂದ ಅಥವಾ ಸಾರುಗಳಿಂದ, ಹುಳಿಮೊಸರು ಮತ್ತು ದಾಳಿಂಬದ ರಸ ಕೂಡಿಸಿಕೊಂಡು, ಉಣ್ಣತಕ್ಕದ್ದು.

ಷರಾ ಸೈಂಧವ ಯುಕ್ತವಾಗಿ ಕುಡಿಯುವ ತುಪ್ಪವು ಕಿಂಚಿತ್ ಬಿಸಿಯಾಗಿರಬೇಕು, ಸಮ ಪಾಲು ನೀರು ಇರುವ ಹಾಲನ್ನು ಕುಡಿಯಬಹುದು, ಮೊಸರು ಮತ್ತು ದಾಳಿಂಬದ ರಸ ಕೂಡಿದ ಭೋಜನ ಸ್ವಲ್ಪ ಬಿಸಿಯಾಗಿರಬೇಕು ಮತ್ತು ಅದಕ್ಕೆ ಶುಂಠಿ ಚೂರ್ಣ ಮತ್ತು ಸೈಂಧವಲವಣ ಕೂಡಿಸಿಕೊಳ್ಳಬೇಕು, ಎಂತ ಸಹ ವಾ (ಪು 291)

ಆಮಲಕ್ಯಾ ರಸೇನಾಥ ಘೃಷ್ಟಂ ಚನ್ದನಕಂ ಮಧು ।
ಗುಟಿಕಾಮಲಮಾನೇನ ಲೇಹೋ ಹನ್ತಿ ವಮಿಂ ಧ್ರುವಮ್ ॥
(ಹಾ. 204)

ಶ್ರೀಗಂಧವನ್ನು ಚೂರ್ಣಿಸಿ ನೆಲ್ಲಿರಸದಿಂದ ಅರೆದು, ನೆಲ್ಲಿಹಣ್ಣಿನ ಗಾತ್ರ ಗುಳಿಗೆ ಮಾಡಿಟ್ಟುಕೊಂಡು, ಜೇನಿನಲ್ಲಿ ತೇದಿ ನೆಕ್ಕುವದರಿಂದ ವಾಂತಿಯು ನಿಶ್ಚಯವಾಗಿ ನಿಲ್ಲುತ್ತದೆ.

ಸಗುಡಂ ದಾಡಿಮಂ ದ್ರಾಕ್ಷಾ ಪಥ್ಯಾ ವಾ ನಾಗರಗುಡಯುಕ್ತಾ ।
ತ್ರಿವೃತಾ ನಾಗರಮಥವಾ ಗುಡೇನ ಯುಕ್ತಂ ವಮಿಂ ದಧತಿ ॥
(ಹಾ. 204)

ದಾಳಿಂಬದ ಹಣ್ಣಿನ ಸಿಪ್ಪೆಯ ಚೂರ್ಣವನ್ನು ಬೆಲ್ಲದೊಂದಿಗೆ, ಅಥವಾ ದ್ರಾಕ್ಷೆ, ಅಣಿಲೆಕಾಯಿಸಿಪ್ಪೆ ಮತ್ತು ಶುಂಠಿ, ಇವುಗಳ ಚೂರ್ಣವನ್ನು ಬೆಲ್ಲದೊಡನೆ, ಅಥವಾ ತಿಗಡೆ ಮತ್ತು ಶುಂಠಿಯ ಚೂರ್ಣವನ್ನು ಬೆಲ್ಲದೊಡನೆ, ಸೇವಿಸುವದರಿಂದ ವಾಂತಿ ಪರಿಹಾರ.

14. ಪಿತ್ತಛರ್ದಿಯ ಚಿಕಿತ್ಸೆ

ಪಿತ್ತಾತ್ಮಿಕಾಯಾಮನುಲೋಮನಾರ್ಥಂ
ದ್ರಾಕ್ಷಾವಿದಾರೀಕ್ಷುರಸೈಸ್ತ್ರಿವೃತ್ಸ್ಯಾತ್ ।
ಕಫಾಶಯಸ್ಥನ್ತ್ವತಿಮಾತ್ರವೃದ್ಧಂ
ಪಿತ್ತಂ ಹರೇತ್ಸ್ವಾದುಭಿರೂರ್ಧ್ವಮೇವ ॥

ಶುದ್ಧಾಯ ಕಾಲೇ ಮಧುಶರ್ಕರಾಭ್ಯಾಂ
ಲಾಜೈಶ್ಚ ಮನ್ಥಂ ಯದಿ ವಾಪಿ ಪೇಯಾಮ್ ।
ಪ್ರದಾಪಯೇನ್ಮುದ್ಗರಸೇನ ವಾಪಿ
ಶಾಲ್ಯೋದನಂ ಜಾಂಗಲಜೈ ರಸೈರ್ವಾ ॥ (ಚ. 716)

ಪಿತ್ತಛರ್ದಿಯಲ್ಲಿ ದೋಷವನ್ನು ಕ್ರಮಪಡಿಸುವದಕ್ಕಾಗಿ (ಪಿತ್ತವನ್ನು ಅದರ ಸಹಜವಾದ ಕೆಳಮಾರ್ಗಕ್ಕೆ ತರುವದಕ್ಕಾಗಿ) ದ್ರಾಕ್ಷೆರಸ, ನೆಲಕುಂಬಳಗಡ್ಡೆರಸ, ಮತ್ತು ಕಬ್ಬಿನ ರಸ, ಇವುಗಳೊಂದಿಗೆ ತಿಗಡೆಚೂರ್ಣವನ್ನು ಕೊಡತಕ್ಕದ್ದು. ಕಫಾಶಯದಲ್ಲಿ ಅತಿಯಾಗಿ ವೃದ್ಧಿಯಾಗಿ ನಿಂತಂಥ ಪಿತ್ತವನ್ನು, ಸಿಹಿಯಾದ ಔಷಧಗಳನ್ನು ಕೊಟ್ಟು, ಊರ್ಧ್ವ ಮುಖದಿಂದಲೇ (ವಾಂತಿಮಾಡಿಸಿಯೇ) ಪರಿಹರಿಸತಕ್ಕದ್ದು. ದೇಹವು ಶುದ್ಧವಾದ ಮೇಲೆ (ರೋಗಿಗೆ) ತಕ್ಕಕಾಲದಲ್ಲಿ ಜೇನು ಮತ್ತು ಸಕ್ಕರೆ ಕೂಡಿಸಿಕೊಂಡು ಅರಳಿನ ಮಂಥವನ್ನು ಅಥವಾ ಪೇಯಾ ಎಂಬ ಗಂಜಿಯನ್ನು, ಅಥವಾ ಹೆಸರುಬೇಳೆ ಸಾರಿನಿಂದ ಅಥವಾ ಜಾಂಗಲ ಮಾಂಸಗಳ ರಸದಿಂದ ಶಾಲ್ಯನ್ನವನ್ನು ಕೊಡತಕ್ಕದ್ದು.

ಪರಾ ವಾಂತಿಗೆ ಸಿಹಿ ಮತ್ತು ಕಹಿ ದ್ರವ್ಯಗಳನ್ನು ಉಪಯೋಗಿಸುವದಾಗಿ ವಾ (ಪು 291) ವಿರೇಚನಕ್ಕೆ ಉಪಯೋಗಿಸಬೇಕಾದ ರಸಗಳಲ್ಲಿ ನೆಲಕುಂಬಳವನ್ನು ಬಿಟ್ಟಿದ್ದಾನೆ

ಪಿತ್ತೋಪಶಮನೀಯಾನಿ ಪಾನಾನಿ ಶಿಶಿರಾಣಿ ಚ ।
ಕಷಾಯಾಣ್ಯುಪಯುಕ್ತಾನಿ ಘ್ನನ್ತಿ ಪಿತ್ತಕೃತಾಂ ವಮಿಾಮ್ ॥ (ಸು 847)

ಪಿತ್ತಶಮನಕರವಾದ ತಣ್ಣಗಿನ ಪಾನಗಳೂ ಕಷಾಯಗಳೂ ಉಪಯೋಗಿಸಲ್ಪಟ್ಟಲ್ಲಿ ಪಿತ್ತಛರ್ದಿಯನ್ನು ನಾಶಮಾಡುವವು.

ಪರಾ 'ಪಾನಾನಿ' ಎಂಬಲ್ಲಿ 'ಪಾಕ್ಯಾನಿ' ಎಂತ ಪಾಠಾಂತರ ಅಗ್ಗೆ ಪಿತ್ತಶಮನದ ಶೀತ ಕಷಾಯಗಳನ್ನು ಸಹ ಉಪಯೋಗಿಸಬಹುದು ಎಂತ ಅರ್ಥವಾಗುತ್ತದೆ, ಬೇರೆ ಪಾನಗಳ ಪ್ರಸ್ತಾಪವಿಲ್ಲ ಪಿತ್ತಶಮನದ ಕಷಾಯ ಎಂದರೆ ಪಿತ್ತಜ್ವರಶಮನ ಕಷಾಯ ಎಂತ ನಿ ಸಂ ವ್ಯಾ (ಪು. 650)

ದ್ರಾಕ್ಷಾರಸಂ ವಾಪಿ ಪಿಬೇತ್ಸುಶೀತಂ ಮೃದ್ಭೃಷ್ಟಲೋಷ್ಟಪ್ರಭವಂ ಜಲಂ ವಾ ।
ಜಂಬ್ವಾಮ್ರಯೋಃ ಪಲ್ಲವಜಂ ಕಷಾಯಂ ಪಿಬೇತ್ಸುಶೀತಂ ಮಧು-ಸಂಯುತಂ ವಾ ॥
ನಿಶಿ ಸ್ಥಿತಂ ವಾರಿ ಸಮುದ್ಗಕೃಷ್ಣಂ ಸೋಶೀರಧಾನ್ಯಂ ಚಣಕೋದಕಂ ವಾ ॥ (ಚ. 716)

ದ್ರಾಕ್ಷೆರಸವನ್ನು ಪಾನಮಾಡುವದು,— ಮಣ್ಣಿನ ಹೆಂಟೆಯನ್ನು ಸುಟ್ಟು ನೀರಿಗೆ ಹಾಕಿ ಹನಿಸಿ, ಆ ನೀರನ್ನು ತಣ್ಣಗಾಗಿ ಕುಡಿಯುವದು,— ಅಥವಾ ನೇರಳೆ ಮತ್ತು ಮಾವಿನ ಕುಡಿಗಳ ಕಷಾಯವನ್ನು ತಣಿಸಿ, ಜೇನು ಕೂಡಿಸಿಕೊಂಡು, ಪಾನಮಾಡುವದು — ಅಥವಾ ಹೆಸರು, ಹಿಪ್ಪಲಿ, ಲಾವಂಚ, ಕೊತ್ತುಂಬರಿ, ಕಡಲೆ ಸಹ ಒಂದು ರಾತ್ರಿಕಾಲ ನೀರಿನಲ್ಲಿ ನೆನೆಸಿ, ಬೆಳಗ್ಗೆ ಆ ನೀರನ್ನು ಕುಡಿಯುವದು — (ಈ ಯೋಗಗಳಿಂದ ಪಿತ್ತಛರ್ದಿಯು ಪರಿಹಾರವಾಗುವದು).

ಪರಾ ಹೆಸರು-ಹಿಪ್ಪಲಿಗಳ ನೀರು ಬೇರೆ, ಲಾವಂಚ-ಕೊತ್ತಂಬರಿಗಳ ನೀರು ಬೇರೆ, ಕಡಲೆ ನೀರು ಬೇರೆ, ಹೀಗೆ ಮೂರು ಯೋಗಗಳು ಬೇರೆ ಬೇರೆ ಎಂತ ಅ. ಹೃ. ಅದರೆ ಕಡಲೆ ಬಿಟ್ಟು ವಿಕ್ಕವುಗಳನು ಒಟ್ಟಾಗಿ ಉಪಯೋಗಿಸುವದಾಗಿ ವಾ (ಪು 291)

ಜಂಬ್ವಾಮ್ರಾದಿ ಕಷಾಯ

ಜಂಬ್ವಾಮ್ರಪಲ್ಲವೋಶೀರವಟಶೃಂಗಾವರೋಹಜಃ ।
ಕ್ವಾಥಃ ಕ್ಷೌದ್ರಯುತಃ ಪೀತಃ ಶೀತೋ ವಾ ವಿನಿಯಚ್ಛತಿ ॥
ಛರ್ದಿಂ ಜ್ವರಮತೀಸಾರಂ ಮೂರ್ಚ್ಛಾಂ ತೃಷ್ಣಾಂ ಚ ದುರ್ಜಯಾಮ್ ।
(ವಾ. 291)

ನೇರಳೆಕುಡಿ, ಮಾವಿನ ಕುಡಿ, ಲಾವಂಚ, ಗೋಳಿಯ ಗೆಲ್ಲುಗಳಿಂದ ಹೊರಟ ಬೇರು, ಇವುಗಳ ಪಕ್ವ ಕಷಾಯವನ್ನು ಅಥವಾ ಶೀತ ಕಷಾಯವನ್ನು, ಜೇನು ಕೂಡಿಸಿಕೊಂಡು, ಪಾನಮಾಡುವದರಿಂದ ವಾಂತಿ, ಜ್ವರ, ಅತಿಸಾರ, ಮೂರ್ಛೆ, ಕಠಿಣವಾದ ಬಾಯಾರಿಕೆ ಸಹ ನಿಲ್ಲುವವು.

ಪರಾ 'ವಟಶೃಂಗಾವರೋಹಜಃ' ಎಂಬಲ್ಲಿ 'ವಟಾಶ್ವತ್ಥಾಂಕುರೋದ್ಭವಃ' ಎಂತ ಪಾಠಾಂತರವಿರುವಲ್ಲಿ ಗೋಳಿಯ ಮತ್ತು ಅಶ್ವತ್ಥದ ಚಿಗುರುಗಳು ಎಂತ ಅರ್ಥವಾಗುವದು

ಚನ್ದನೇನಾಕ್ಷಮಾತ್ರೇಣ ಸಂಯೋಜ್ಯಾಮಲಕೀರಸಮ್ ।
ಪಿಬೇನ್ಮಾಕ್ಷಿಕಸಂಯುಕ್ತಂ ಛರ್ದಿಸ್ತೇನ ನಿವಾರ್ಯತೇ ॥
(ಚಿ. ಸಾ. ಸಂ. 279)

ಕಾಲು ಪಲ ಶ್ರೀಗಂಧದ ಚೂರ್ಣವನ್ನು ನೆಲ್ಲಿರಸದಲ್ಲಿ ಕಲಸಿ, ಜೇನು ಕೂಡಿಸಿಕೊಂಡು, ಪಾನಮಾಡುವದರಿಂದ ಛರ್ದಿಯು ಪರಿಹಾರವಾಗುತ್ತದೆ.

ಪರಾ. ಮೊದಲು ಸ್ವಲ್ಪ ಭೇದದಿಂದ ಈ ಯೋಗವು ವಾತಛರ್ದಿಗೆ ಉಕ್ತವಾಗಿದೆ 13ನೇ ಸಂಖ್ಯೆ ನೋಡಿ.

ಚನ್ದನಂ ಚ ಮೃಣಾಲಂ ಚ ಬಾಲಕಂ ತಗರಂ ವೃಷಮ್ (?ಷಃ) ।
ಸತಂಡುಲೋದಕಕ್ಷೌದ್ರಃ ಕಲ್ಕಃ ಪೀತೋ ವಮಿಂ ಜಯೇತ್ ॥
(ಚಿ. ಸಾ. ಸಂ. 279)

ಶ್ರೀಗಂಧ, ತಾವರೆದಂಟು ಇರುವೇರಿದಂಟು, ತಗರ, ಆಡುಸೋಗೆಬೇರಿನ ಸಿಪ್ಪೆ, ಇವುಗಳನ್ನು ಅಕ್ಕಚ್ಚಿನೀರಿನಲ್ಲಿ ಅರೆದು, ಜೇನು ಕೂಡಿಸಿ, ಕುಡಿಯುವದರಿಂದ ಛರ್ದಿಯು ಜಯಿಸಲ್ಪಡುವದು.

ಪರಾ 'ವೃಷಂ' ಎಂಬ ಪದವನ್ನೇ ಇಟ್ಟುಕೊಂಡರೆ, ನವಿಲಿನ ಕಾಲದ ಬೂದಿಯನ್ನು ಉಪಯೋಗಿಸಬೇಕಾಗುವದು

ಕಷಾಯೋ ಭೃಷ್ಟಮುದ್ಗಸ್ಯ ಸಲಾಜಮಧುಶರ್ಕರಃ ।
ಛರ್ದ್ಯತೀಸಾರತೃಟ್‌ದಾಹಜ್ವರಘ್ನಃ ಸಂಪ್ರಕಾಶಿತಃ ॥
(ಚಿ. ಸಾ. ಸಂ. 279)

ಹುರಿದ ಹೆಸರುಬೇಳೆ ಮತ್ತು ಅರಳು, ಇವುಗಳ ಕಷಾಯ ಮಾಡಿ, ಜೇನು ಮತ್ತು ಸಕ್ಕರೆ ಕೂಡಿಸಿಕೊಂಡು, ಪಾನಮಾಡುವದರಿಂದ ವಾಂತಿ, ಅತಿಸಾರ, ಬಾಯಾರಿಕೆ, ಉರಿ, ಮತ್ತು ಜ್ವರ ನಾಶವಾಗುತ್ತವೆಂತ ಕಂಡದೆ.

ಕ್ವಾಥಃ ಪರ್ಪಟಜಃ ಪೀತಃ ಸಕ್ಷೌದ್ರಃ ಛರ್ದಿನಾಶನಃ ॥
(ಚಿ. ಸಾ. ಸಂ. 279)

ಪರ್ಪಾಟಕದ ಕಷಾಯವನ್ನು ಜೇನು ಸಮೇತವಾಗಿ ಕುಡಿಯುವದರಿಂದ ಛರ್ದಿ ನಾಶವಾಗುವದು.

ಗುಡೂಚೀತ್ರಿಫಲಾನಿಂಬವಟೋಲೈಃ ಕ್ವಥಿತಂ ಪಿಬೇತ್ |
ಗುಡೂಚ್ಯಾದಿ ಕಷಾಯ. ಕ್ಷೌದ್ರಯುಕ್ತಂ ನಿಹನ್ತ್ಯಾಶು ಛರ್ದಿಂ ಪಿತ್ತಾಮ್ಲಸಂಭವಾಮ್ ||
(ಚಿ. ಸಾ. ಸಂ. 279)

ಅಮೃತಬಳ್ಳಿ, ತ್ರಿಫಲೆ, ಕಹಿಬೇವಿನ ಚಕ್ಕೆ, ಕಹಿಪಡುವಲು, ಇವುಗಳ ಕಷಾಯವನ್ನು ಜೇನು ಸಮೇತವಾಗಿ ಪಾನಮಾಡುವದರಿಂದ ಪಿತ್ತದ ಹುಳಿಯಿಂದ (ಅಮ್ಲ ಪಿತ್ತದಿಂದ) ಉಂಟಾದ ಛರ್ದಿಯು ನಾಶವಾಗುವದು.

ಸರ್ಪಿಃಕ್ಷೌದ್ರಸಿತೋಪೇತಾನ್ ಲಾಜಶಕ್ತೂನ್ ಪಿಬೇತ್ತಥಾ |
ಪಿತ್ತಛರ್ದಿಶ್ಚ ತೇನಾಶು ಪ್ರಶಾಮ್ಯತಿ ಸುದುಸ್ತರಾ ||
(ಚಿ. ಸಾ. ಸಂ. 279)

ಅರಳಿನ ಹಿಟ್ಟನ್ನು (ಶಕ್ತುವನ್ನು ನೀರಿನಲ್ಲಿ ಕಲಸಿ), ತುಪ್ಪ, ಜೇನು ಮತ್ತು ಸಕ್ಕರೆ ಸಮೇತ ವಾಗಿ ಕುಡಿಯುವದರಿಂದ ಕಠಿಣವಾದ ಪಿತ್ತಛರ್ದಿಯು ಬೇಗನೆ ಶಾಂತವಾಗುವದು.

ಪರ್ಪಟಂ ಸಗುಡಂ ಕ್ವಾಥಂ ಶೀತಲಂ ಪಾಯಯೇನ್ನೃಣಾಮ್ |
ಹನ್ತಿ ವಾನ್ತಿಂ ಮಹಾಘೋರಾಂ ಸಪಿತ್ತಾಂ ಭ್ರಮಸಂಯುತಾಮ್ ||
(ಹಾ. 204)

ಪರ್ಪಾಟಕದ ಕಷಾಯವನ್ನು ತಣಿಸಿ, ಬೆಲ್ಲ ಕೂಡಿಸಿ, ಪಾನಮಾಡುವದರಿಂದ ಮಹಾ ಘೋರವಾದ ಮತ್ತು ಭ್ರಮಯುಕ್ತವಾದ ಪಿತ್ತದ ವಾಂತಿಯು ನಾಶವಾಗುವದು

ಕಾಕೋಲೀ ಕಾಕಮಾಚೀ ಚ ಕ್ವಾಥಂ ಶರ್ಕರಯಾ ಯುತಮ್ |
ಲಾಜಾಶರ್ಕರ(?)ಸಂಯುಕ್ತಂ ಹನ್ತಿ ಪಿತ್ತವಮಿಂ ನೃಣಾಮ್ ||
(ಹಾ. 204)

ಕಾಕೋಲಿ ಮತ್ತು ಕಾಗೆಹಣ್ಣಿನ ಗಿಡದ ಬೇರು, ಇವುಗಳ ಕಷಾಯವನ್ನು, ಶರ್ಕರೆ ಮತ್ತು ಅರಳಿನ ಹಿಟ್ಟು ಕೂಡಿಸಿಕೊಂಡು, ಕುಡಿಯುವದರಿಂದ ಪಿತ್ತವಾಂತಿಯು ಪರಿಹಾರವಾಗುವದು.

ಪರಾ 'ಕ್ವಾಥ' ಶಬ್ದ ನಪುಂಸಕದಲ್ಲಿರುವದು ನಿಘಂಟುಗಳಲ್ಲಿ ಕಾಣುವದಿಲ್ಲ

ಮಾತುಲುಂಗರಸಶ್ಚೈವ ಪಥ್ಯಾಶರ್ಕರಯಾಯುತಃ |
ಹನ್ತಿ ಕಾಸಂ ಪಿತ್ತಭವಂ ವಮಿಂ ಶೀಘ್ರಂ ನಿಯಚ್ಛತಿ || (ಹಾ. 204)

ಮಾದಳಹಣ್ಣಿನ ರಸವನ್ನು ಅಣಿಲೆಕಾಯಿಸಿಪ್ಪೆಯ ಚೂರ್ಣ ಮತ್ತು ಸಕ್ಕರೆ ಸಮೇತ ವಾಗಿ ಪಾನಮಾಡುವದರಿಂದ, ಪಿತ್ತದಿಂದುಂಟಾದ ಕಾಸ ಮತ್ತು ವಾಂತಿ ಶೀಘ್ರವಾಗಿ ಶಾಂತ ವಾಗುವವು.

ದೃಷ್ಟ್ವಾ ಪಿತ್ತವಮಿಂ ಘೋರಾಂ ಸದಾಹಭ್ರಮದಾಯಿನೀಮ್ |
ತಸ್ಯಾರಗ್ವಧಪತ್ರಾಣಿ ಮಧುಶರ್ಕರಯಾನ್ವಿತಮ್ ||
ಕ್ಷೀರಪಾನಂ ಪ್ರಶಸ್ತಂ ವಾ ಮುಸ್ತಾಶರ್ಕರಯಾನ್ವಿತಮ್ ||
(ಹಾ. 204)

ಉರಿ ಮತ್ತು ತಲೆತಿರುಕನ್ನುಂಟುಮಾಡಿದ ಘೋರವಾದ ಪಿತ್ತಜವಾಂತಿಯುಳ್ಳವನಿಗೆ ಕಕ್ಕೆ ಮರದ ಎಲೆಗಳ ಹಾಲುಕಷಾಯವನ್ನು, ಜೇನು ಮತ್ತು ಸಕ್ಕರೆಯನ್ನು ಕೂಡಿಸಿ, ಪಾನ

ಮಾಡಿಸುವದು, ಅಥವಾ ಭದ್ರಮುಷ್ಟಿ ಹಾಕಿ ಮಾಡಿದ ಹಾಲುಕಷಾಯವನ್ನು ಸಕ್ಕರೆ ಸಮೇತವಾಗಿ ಕುಡಿಯುವದಕ್ಕೆ ಕೊಡುವದು, ಪ್ರಶಸ್ತವಾಗಿರುತ್ತದೆ.

ಸರಾ ಬರೇ ಕಾಯಿಸಿದ ಹಾಲನ್ನು ಸಕ್ಕರೆ ಕೂಡಿಸಿ ಪಾನಮಾಡುವದರಿಂದ ಪಿತ್ತಛರ್ದಿಯು ನಿಲ್ಲುತ್ತದೆ (ಹಾ 203) ಸಮ ಪಾಲು ನೀರುಳ್ಳ ಕಾಯಿಸಲ್ಪಟ್ಟ ಹಾಲು ಹಿಂದೆ ವಾತಛರ್ದಿಯಲ್ಲಿ ಪಾನಕ್ಕೆ ಹೇಳಲ್ಪಟ್ಟಿದೆ.

ಅಶ್ವತ್ಥವಲ್ಕಲಂ ಶುಷ್ಕಂ ದಗ್ಧ್ವಾ ನಿರ್ವಾಪಿತಂ ಜಲೇ |
ತಜ್ಜಲಂ ಪಾನಮಾತ್ರೇಣ ಛರ್ದಿಂ ಜಯತಿ ದುಸ್ತರಾಮ್ || (ರ. ರ. 363)

ಅಶ್ವತ್ಥದ ತೊಗಟನ್ನು ಒಣಗಿಸಿ, ಸುಟ್ಟು ಉರಿಯುವಾಗ್ಗೆ ನೀರಲ್ಲಿ ಅದ್ದಿ ತೆಗೆದುಬಿಟ್ಟು, ಆ ನೀರನ್ನು (ಶೋಧಿಸಿ) ಪಾನಮಾಡುವದರಿಂದಲೇ ಕಠಿಣವಾದ ಛರ್ದಿಯು ಜಯಿಸಲ್ಪಡುತ್ತದೆ.

15 ಕಫಾತ್ಮಿಕಾಯಾಂ ವಮನಂ ಪ್ರಶಸ್ತಂ ಸಪಿಪ್ಪಲೀಸರ್ಷಪನಿಂಬತೋಯೈಃ |
ಪಿಂಡೀತಕೈಃ ಸೈಂಧವಸಂಪ್ರಯುಕ್ತೈರ್ವಮ್ಯಾಂ ಕಫಾಮಾಶಯಶೋಧನಾರ್ಥಮ್ || (ಚ. 716)

ಕಫಜಛರ್ದಿ ಚಿಕಿತ್ಸೆ

ಕಫಾತ್ಮಕವಾದ ಛರ್ದಿಯಲ್ಲಿ ಹಿಪ್ಪಲಿ, ಸಾಸಿವೆ, ಕಹಿಬೇವು, ಇವುಗಳ ಕಷಾಯದ ನೀರಿನಲ್ಲಿ ಮಂಗಾರೆಕಾಯಿಯ ಚೂರ್ಣ ಮತ್ತು ಸೈಂಧವಲವಣ ಕಲಸಿ, ಕಫಾಶಯ ಮತ್ತು ಆಮಾಶಯಗಳ ಶೋಧನಕ್ಕಾಗಿ, ವಾಂತಿಗೆ ಕೊಡುವದು ಪ್ರಶಸ್ತ

ಸರಾ ಬಲಹೀನನ ಸಂಗತಿಯಲ್ಲಿ ವಾಂತಿಯ ಬದಲಾಗಿ ಉಪವಾಸಮಾಡಿಸತಕ್ಕದ್ದೆಂತ ವಾ (ಪು 291).

ಗೋಧೂಮಶಾಲೀನ್ ಸಯವಾನ್ ಪುರಾಣಾನ್
ಯೂಷೈಃ ಪಟೋಲಾಮೃತಚಿತ್ರಕಾಣಾಮ್ |
ವ್ಯೋಷಸ್ಯ ನಿಂಬಸ್ಯ ಚ ತಕ್ರಸಿದ್ಧೈ
ಯೂರ್ಷೈಃ ಫಲಾಮ್ಲೈಃ ಕಟುಭಿಸ್ತಥಾದ್ಯಾತ್ | (ಚ. 716)

(ವಮನಾನಂತರ) ಹಳೇ ಗೋದಿ, ಹಳೇ ಶಾಲ್ಯಕ್ಕಿ, ಅಥವಾ ಹಳೇ ಯವೆಯ ಅನ್ನಗಳನ್ನು ಪಡವಲು, ಅಮೃತಬಳ್ಳಿ ಮತ್ತು ಚಿತ್ರಮೂಲಗಳನ್ನು ಕೂಡಿಸಿ ಮಾಡಿದ ಸಾರುಗಳಿಂದ, ಅಥವಾ ತ್ರಿಕಟು, ಕಹಿಬೇವು ಮತ್ತು ಮಜ್ಜಿಗೆ ಕೂಡಿಸಿ ಮಾಡಿದ ಸಾರುಗಳಿಂದ, ಅಥವಾ ಕಾರದ್ರವ್ಯಗಳನ್ನು ಕೂಡಿಸಿಕೊಂಡು ಹುಳಿ (ಮಾದಳ ಮುಂತಾದ) ಹಣ್ಣುಗಳ ರಸಗಳಿಂದ, ಉಣ್ಣಬೇಕು.

ಲಿಹ್ಯಾತ್ತಥೈವ ತ್ರಿಫಲಾವಿಡಂಗಚೂರ್ಣಂ ವಿಡಂಗಪ್ಲವಯೋಃ ರಸಂ ವಾ |
ಸಜಾಂಬವಂ ವಾ ಬದರಸ್ಯ ಚೂರ್ಣಂ ಮುಸ್ತಾಯುತಾಂ ಕರ್ಕಟಸ್ಯ ಶೃಂಗೀಮ್ ||
ದುರಾಲಭಾಂ ವಾ ಮಧುಸಂಪ್ರಯುಕ್ತಾಂ ಲಿಹ್ಯಾತ್ಕಫಛರ್ದಿವಿನಿಗ್ರಹಾರ್ಥಮ್ || (ಚ. 716)

ತ್ರಿಫಲೆ ಮತ್ತು ವಾಯುವಿಳಂಗದ ಚೂರ್ಣವನ್ನು ಜೇನಿನಲ್ಲಿ ಕಲಸಿ ನೆಕ್ಕಬೇಕು; ಅಥವಾ ವಾಯುವಿಳಂಗ ಮತ್ತು ಕೈವರ್ತಮುಸ್ತಗಳ ಕಷಾಯವನ್ನು, ಜೇನು ಕೂಡಿಸಿಕೊಂಡು, ಕುಡಿಯಬೇಕು; ಅಥವಾ ನೇರಳೆ ಮತ್ತು ಬೊಗರಿ ಹಣ್ಣುಗಳ (ಸಿಪ್ಪೆಗಳ ಅಥವಾ ಬೀಜಗಳ

ತಿರುಳಿನ) ಚೂರ್ಣವನ್ನಾಗಲಿ, ಭದ್ರಮುಷ್ಟಿ ಮತ್ತು ಕರ್ಕಟಶೃಂಗಿಯ ಚೂರ್ಣವನ್ನಾಗಲಿ, ಬಳ್ಳಿತುರಚನ ಬೇರಿನ ಚೂರ್ಣವನ್ನಾಗಲಿ, ಜೇನಿನಲ್ಲಿ ಕಲಸಿ ನೆಕ್ಕಬೇಕು. ಇದರಿಂದೆಲ್ಲ ಕಫಜಛರ್ದಿಯು ನಾಶವಾಗುವದು.

ಷರಾ 2ನೇ ಯೋಗವಾದ ವಾಯುವಿಳಂಗ ಮತ್ತು ಕೈವರ್ತಮುಸ್ತಗಳನ್ನು ಚೂರ್ಣಿಸಿ ಜೇನಿನಲ್ಲಿ ನೆಕ್ಕುವದೆಂತ ಅ ಸಂ (II-158) ಆ 2ನೇ ಯೋಗದಲ್ಲಿಯೂ 1ನೇ ಯೋಗದಲ್ಲಿಯೂ ಚೂರ್ಣಕ್ಕೆ ತುಂಬಿಯನ್ನು ಕೂಡಿಸಿಕೊಳ್ಳಬೇಕಾಗಿ ಭಾ ಪ್ರ (ಪು 384)

ಮನಃಶಿಲಾಯಾಃ ಫಲಪೂರಕಸ್ಯ ರಸೈಃ ಕಪಿತ್ಥಸ್ಯ ಚ ಪಿಪ್ಪಲೀನಾಮ್ ।
ಕ್ಷೌದ್ರೇಣ ಚೂರ್ಣಂ ಮರಿಚೈಶ್ಚ ಯುಕ್ತಂ ಲಿಹನ್ ಜಯೇಚ್ಛರ್ದಿ-
ಮುದೀರ್ಣವೇಗಮ್ ॥ (ಚ. 717)

ಮಣಿಶಿಲೆ, ಹಿಪ್ಪಲಿ ಮತ್ತು ಕಾಳುಮೆಣಸು, ಇವುಗಳ ಚೂರ್ಣವನ್ನು ಮಾದಳ ಹಣ್ಣಿನ ಮತ್ತು ಬೇಲದ ಹಣ್ಣಿನ ರಸಗಳಲ್ಲಿ ಕಲಸಿ, ಜೇನು ಕೂಡಿಸಿಕೊಂಡು, ನೆಕ್ಕುವದರಿಂದ ಕೆದರಿಕೊಂಡ ವೇಗವುಳ್ಳ ವಾಂತಿಯು ಜಯಿಸಲ್ಪಡುವದು.

ಷರಾ ಮಣಿಶಿಲೆ ಮುಂತಾದ ಮೂರು ಜೀನಸುಗಳಿಗೆ ಸಮ ಪಾಲು ಅರಳಿನ ಚೂರ್ಣವನ್ನು ಕೂಡಿಸಿಕೊಳ್ಳಬೇಕೆಂಬ ಬೇರೊಂದು ಯೋಗ ಕಾಣುತ್ತದೆ (ಚಿ ಸಾ ಸಂ 282) ಮಣಿಶಿಲೆಯು ತಾಳಕದಂತೆ ವಿಷಪದಾರ್ಥವಾದ್ದರಿಂದ, ಅದನ್ನು ಶುದ್ಧಿಮಾಡಿಕೊಳ್ಳದೆ. ಅಥವಾ ಪ್ರಮಾಣವನ್ನು ಮಿಕ್ಕಿ, ಮತ್ತು ಅದರಿಂದುಂಟಾಗಬಹುದಾದ ದೋಷಕ್ಕೆ ತಕ್ಕ ಪರಿಹಾರ ತಿಳಿಯದೆ, ಹೊಟ್ಟೆಗೆ ಕೊಡಬಾರದು ಅದರ ಶುದ್ಧಿಕ್ರಮ ಬಹು ವಿಧವಾಗಿ ವರ್ಣಿಸಲ್ಪಟ್ಟಿದೆ. ಅಗಸೆ ಸೊಪ್ಪಿನ ರಸದಲ್ಲಿ, ಅಥವಾ ತುಂಬಿ ರಸದಲ್ಲಿ, ಏಳು ಸರ್ತಿ ಭಾವನೆಮಾಡುವದು ಒಂದು ವಿಧ ಭಾ. ಪ್ರ ದಲ್ಲಿ ಅದನ್ನು ಆಡಿನ ಮೂತ್ರದಲ್ಲಿ ಮೂರು ದಿನ ಡೋಲಾಯಂತ್ರದಲ್ಲಿ ಬೇಯಿಸಿ, ಅನಂತರ ಏಳು ಸರ್ತಿ ಆಡಿನ ಪಿತ್ತದಿಂದ ಭಾವನೆಕೊಡಬೇಕೆಂತ ಬರೆಯಲ್ಪಟ್ಟದೆ ಶಾ ನು ಹಾಗೆಯೇ ಹೇಳಿದ್ದಾನೆ ಅದರ ಗುಢಾರ್ಥ ದೀಪಿಕೆ ಎಂಬ ವ್ಯಾಖ್ಯೆಯಿಂದ ಮಣಿಶಿಲೆಯನ್ನು ಜಯಂತಿರಸದಿಂದ ಅರೆದು ಬಿಸಿಲಿನಲ್ಲಿ ಒಣಗಿಸಿದರೆ ಅದು ಶುದ್ಧವಾಗುತ್ತದೆಂಬ ಪಕ್ಷ ಉಂಟೆಂತ ಕಾಣುತ್ತದೆ ಲಿಂಬೆರಸದಿಂದಾಗಲಿ, ಶುಂಠಿರಸದಿಂದಾಗಲಿ ಅರೆದು, ಒಣಗಿಸಿದರೆ ಅದು ಶುದ್ಧವಾಗುತ್ತದೆಂಬ ಪಕ್ಷವೂ ಉಂಟು ಪ್ರಮಾಣವನ್ನು ಕುರಿತು ಅರ್ಧರತಿ (ಗುಲುಗುಂಜಿಯ ಮುಕ್ಕಾಲು ಪಾಲು) ಕೊಡಬಹುದೆಂತ ಒಂದು ಗ್ರಂಥದಲ್ಲಿ ಬರೆಯಲ್ಪಟ್ಟದ್ದು ಕಾಣುತ್ತದೆ ದನದ ಹಾಲನ್ನು, ಜೇನು ಕೂಡಿಸಿಕೊಂಡು, ಮೂರು ದಿನ ಪಾನ ಮಾಡುವದರಿಂದ ಮಣಿಶಿಲೆ ಸೇವನದಿಂದ ಉಂಟಾದ ವಿಕಾರವು ಪರಿಹಾರವಾಗುವದು ಮಣಿಶಿಲೆಯನ್ನು ಡೋಲಾಯಂತ್ರದಿಂದ ಸ್ವೇದನ ಮಾಡುವಲ್ಲಿ ಅದನ್ನು, ಬಾಳೆ ಎಲೆಯನ್ನು ಸುತ್ತಿ, ನಾಲ್ಕು ಪದರುಳ್ಳ ವಸ್ತ್ರದ ತುಂಡಿನಲ್ಲಿಟ್ಟು, ಪೊಟ್ಟಣ ಕಟ್ಟಿಕೊಳ್ಳಬೇಕೆಂತ ದೀ. ವ್ಯಾಖ್ಯೆ (ಪು 252).

16. ಯೈಷಾ ಪೃಥಕ್ತ್ವೇನ ಮಯಾ ಕ್ರಿಯೋಕ್ತಾ ತಾಂ ಸನ್ನಿಪಾತೇಽಪಿ
ಸಮೀಕ್ಷ್ಯ ಬುದ್ಧ್ಯಾ ।
ದೋಷರ್ತುರೋಗಾಗ್ನಿಬಲಾನ್ಯವೇಕ್ಷ್ಯ ಪ್ರಯೋಜಯೇಚ್ಛಾಸ್ತ್ರವಿದ-
ಪ್ರಮತ್ತಃ ॥ (ಚ. 717)

ತ್ರಿದೋಷಜ ವಾಂತಿಗೆ ಚಿಕಿತ್ಸೆ

(ವಾತಾದಿಜಗಳಿಗೆ) ಬೇರೆ ಬೇರೆಯಾಗಿ ಯಾವ (ಪ್ರತಿ) ಕ್ರಿಯೆಯು ಹೇಳಲ್ಪಟ್ಟದೋ, ಅದನ್ನು ಸನ್ನಿಪಾತದಲ್ಲಿಯೂ ದೋಷ-ಋತು-ರೋಗಬಲ-ಅಗ್ನಿಬಲಗಳಿಗೆ ದೃಷ್ಟಿ ಇತ್ತು, ಶಾಸ್ತ್ರ ತಿಳಿದಂಥ ವೈದ್ಯನು ಬುದ್ಧಿಚಾತುರ್ಯದಿಂದಲೂ, ಎಚ್ಚರಿಕೆಯಿಂದಲೂ ಪ್ರಯೋಗಿಸತಕ್ಕದ್ದು.

ಪಿಷ್ಟ್ವಾ ಧಾತ್ರೀಫಲಂ ದ್ರಾಕ್ಷಾಂ ಶರ್ಕರಾಂ ಚ ಪಲೋನ್ಮಿತಾಮ್ ।
ದತ್ವಾ ಮಧುಪಲಂ ಚೈವ ಕುಡವಂ ಸಲಿಲಸ್ಯ ಚ ।
ವಾಸಸಾ ಗಾಲಿತಂ ಪೀತಂ ಹಂತಿ ಛರ್ದಿಂ ತ್ರಿದೋಷಜಾಮ್ ॥
(ಚಿ. ಸಾ. ಸಂ. 280-81)

ನೆಲ್ಲಿಹಣ್ಣು ೧ ಪಲ, ದ್ರಾಕ್ಷೆ ೧ ಪಲ, ಸಕ್ಕರೆ ೧ ಪಲ, ಇವುಗಳನ್ನು, ಜೇನು ೧ ಪಲ, ನೀರು ೪ ಪಲ ಸಹ ಕೂಡಿಸಿಕೊಂಡು, ಅರೆದು ವಸ್ತ್ರದಿಂದ ಗಾಳಿಸಿ, ಆ ರಸವನ್ನು ಪಾನ ಮಾಡಲು ತ್ರಿದೋಷಜ ವಾಂತಿಯು ನಾಶವಾಗುವದು.

ಮಸೂರಸಕ್ತುವಃ ಕ್ಷೌದ್ರಂ ಮರ್ದಿತಾ ದಾಡಿಮಾಂಭಸಾ |
ಪೀತಾ ನಿವಾರಯತ್ಯಾಶು ಛರ್ದಿಂ ದೋಷತ್ರಯೋದ್ಭವಾಮ್ ||
(ಚಿ. ಸಾ. ಸಂ. 281)

ಚಾಣಂಗಿ (ಚನ್ನಂಗಿ) ಧಾನ್ಯದ ಹುರಿದ ಹಿಟ್ಟನ್ನು ದಾಳಿಂಬದ ಹಣ್ಣಿನ ರಸದಲ್ಲಿ ಅರೆದು, ಜೇನು ಸೇರಿಸಿಕೊಂಡು ಕುಡಿಯಲು, ತ್ರಿದೋಷಜ ಛರ್ದಿಯು ಬೇಗ ಪರಿಹಾರವಾಗುತ್ತದೆ.

ತ್ರಿಫಲಸ್ಯ ಗುಡೂಚ್ಯಾ ವಾ ಕಷಾಯೋ ಮಧುಸಂಯುತಃ |
ಪೇಯಶ್ಛರ್ದಿತ್ರಯೇ ಶೀತೋ ಮೂರ್ವಾ ವಾ ತಂಡುಲಾಮ್ಬುನಾ ||
(ಚಿ. ಸಾ. ಸಂ. 281)

ಬಿಲ್ವಪತ್ರೆಬೇರಿನ ಸಿಪ್ಪೆಯ ಕಷಾಯವನ್ನಾಗಲಿ, ಅಮೃತಬಳ್ಳಿಯ ಕಷಾಯವನ್ನಾಗಲಿ ತಣಿಸಿ, ಜೇನು ಕೂಡಿಸಿಕೊಂಡು, ಪಾನಮಾಡುವದರಿಂದಲೂ, ಹೆಗ್ಗುರುಟಿಗೆ (ಪೆರುಂಕುರುಂಬ) ಬೇರಿನ ಚೂರ್ಣವನ್ನು ಅಕ್ಕಚ್ಚಿನಲ್ಲಿ ಅರೆದು ಕುಡಿಯುವದರಿಂದಲೂ, ಮೂರು ವಿಧವಾದ ಛರ್ದಿಗಳು ನಾಶವಾಗುವವು.

ಯುಕ್ತಾಮ್ಲಲವಣಾಃ ಪಿಷ್ಟಾಃ ಕುಸ್ತುಂಬುರ್ಯೋಽಥವಾ ಹಿತಾಃ |
ತಂಡುಲಾಂಬುಯುತಂ ಖಾದೇತ್ ಕಪಿತ್ಥಂ ತ್ರ್ಯೂಷಣೇನ ವಾ ||
(ಚಿ. ಸಾ. ಸಂ. 281)

ಕೊತ್ತುಂಬರಿಯನ್ನು ಮಜ್ಜಿಗೆಯಲ್ಲಿ ಅರೆದು, ಸೈಂಧವಲವಣವನ್ನು ಕೂಡಿಸಿಕೊಂಡು ಕುಡಿಯುವದರಿಂದಲೂ, ಬೇಲದ ಹಣ್ಣಿನ ತಿರಳನ್ನು ತ್ರಿಕಟುವಿನ ಸಮೇತ ಅಕ್ಕಚ್ಚಿನಲ್ಲಿ ಅರೆದು ತಿನ್ನುವದರಿಂದಲೂ, ತ್ರಿದೋಷಜ ವಾಂತಿಯು ಪರಿಹಾರವಾಗುವದು.

ಏಲಾದಿಚೂರ್ಣ

ಏಲಾಲವಂಗಗಜಕೇಶರಕೋಲಮಜ್ಜ-
ಲಾಜಾಪ್ರಿಯಂಗುಘನಚನ್ದನಪಿಪ್ಪಲೀನಾಮ್ |
ಚೂರ್ಣಂ ಸಿತಾಮಧುಯುತಂ ಮನುಜೋ ವಿಲಿಹ್ಯ
ಛರ್ದಿಂ ನಿಹನ್ತಿ ಕಫಮಾರುತಪಿತ್ತಜಾಂ ಚ || (ಚಿ. ಸಾ. ಸಂ. 281)

ಏಲಕ್ಕಿ, ಲವಂಗ, ನಾಗಕೇಸರ, ಬೊಗರಿಬೀಜದ ತಿರುಳು, ಅರಳು, ಪ್ರಿಯಂಗು, ಭದ್ರ ಮುಷ್ಟಿ, ಶ್ರೀಗಂಧ, ಹಿಪ್ಪಲಿ, ಇವುಗಳ ಚೂರ್ಣವು, ಸಕ್ಕರೆ ಮತ್ತು ಜೇನಿನೊಂದಿಗೆ, ನೆಕ್ಕಲ್ಪಟ್ಟಲ್ಲಿ ಕಫವಾತಪಿತ್ತಗಳಿಂದ ಹುಟ್ಟಿದ ವಾಂತಿಯನ್ನು ನಾಶಮಾಡುತ್ತದೆ.

ಜಾತ್ಯಾರಸಃ ಕಪಿತ್ಥಸ್ಯ ಪಿಪ್ಪಲೀಮರಿಚಾನ್ವಿತಃ |
ಕ್ಷೌದ್ರೇಣ ಯುಕ್ತಃ ಶಮಯೇಲ್ಲೇಹೋಽಯಂ ಛರ್ದಿಮುಲ್ಬಣಾಮ್ ||
(ಚಿ. ಸಾ. ಸಂ. 282)

ನೆಲ್ಲಿರಸದಲ್ಲಿ ಬೇಲದಹಣ್ಣಿನ ತಿರುಳನ್ನು ಅರೆದು, ಹಿಪ್ಪಲಿ, ಕಾಳುಮೆಣಸು, ಜೇನು, ಇವುಗಳನ್ನು ಕೂಡಿಸಿ, ಮಾಡಿದ ಲೇಹವು ಉತ್ಕಟವಾದ ಛರ್ದಿಯನ್ನು ಶಮನಮಾಡುವದು.

ಲಾಜಾಕಪಿತ್ಥಮಧುಮಾಗಧಿಕೋಷಣಾನಾಂ
ಕ್ಷೌದ್ರಾಭಯಾತ್ರಿಕಟುಧಾನ್ಯಕಜೀರಕಾಣಾಮ್ |
ಪಥ್ಯಾಮೃತಾಮರಿಚಮಾಕ್ಷಿಕಪಿಪ್ಪಲೀನಾಂ
ಲೇಹಾಸ್ತ್ರಯಃ ಸಕಲವಮ್ಯರುಚಿಪ್ರಶಾನ್ತ್ಯೈ ||
(ಚಿ. ಸಾ. ಸಂ. 281-82)

ಅರಳು, ಬೇಲದಹಣ್ಣು, ಹಿಪ್ಪಲಿ, ಕಾಳುಮೆಣಸು, ಇವುಗಳ ಚೂರ್ಣವನ್ನಾಗಲಿ, ಅಣಿಲೆಕಾಯಿ, ತ್ರಿಕಟು, ಕೊತ್ತುಂಬರಿ, ಜೀರಿಗೆ, ಇವುಗಳ ಚೂರ್ಣವನ್ನಾಗಲಿ, ಅಣಿಲೆಕಾಯಿ, ಅಮೃತಬಳ್ಳಿ, ಕಾಳುಮೆಣಸು, ಹಿಪ್ಪಲಿ, ಇವುಗಳ ಚೂರ್ಣವನ್ನಾಗಲಿ, ಜೇನಿನಲ್ಲಿ ಕಲಸಿ ನೆಕ್ಕಲು ಸಕಲ ಛರ್ದಿಗಳು ಮತ್ತು ಅರುಚಿ ಶಾಂತವಾಗುವವು.

ನಿಂಬಾಮ್ರಪಲ್ಲವಗವೇಧುಕಧಾನ್ಯಮೇವ
ಹ್ರೀಬೇರವಾರಿ ಮಧುನಾ ಪಿಬತೋಽಲ್ಪಮಲ್ಪಮ್ |
ಛರ್ದಿಃ ಪ್ರಯಾತಿ ಶಮನಂ ತ್ರಿಸುಗನ್ಧಿಯುಕ್ತಾ
ಲೀಢಾ ನಿಹನ್ತಿ ಮಧುನಾ ಸ(?ಸು)ದುರಾಲಭಾ ವಾ ||
(ಚಿ. ಸಾ. ಸಂ. 282)

ಕಹಿಬೇವಿನ ಚಿಗುರು, ಮಾವಿನ ಚಿಗುರು, ಕಾವೀಕಲ್ಲು, ಕೊತ್ತುಂಬರಿ, ಇರುವೇರಿದಂಟು, ಇವುಗಳ ನೀರನ್ನು (ಪಾನಕಷಾಯವನ್ನು), ಜೇನು ಕೂಡಿಸಿಕೊಂಡು, ಅಲ್ಪ ಅಲ್ಪವಾಗಿ ಕುಡಿಯುವದರಿಂದ ಛರ್ದಿಯು ಶಮನವಾಗುತ್ತದೆ. ಇಲ್ಲವೆ ಬಳ್ಳಿತುರಚನ ಬೇರಿನ ಚೂರ್ಣವನ್ನು, ಏಲಕ್ಕಿ, ದಾಲ್ಚೀನಿತೊಗಟು ಮತ್ತು ದಾಲ್ಚೀನಿಎಲೆ, ಇವುಗಳ ಚೂರ್ಣವನ್ನು ಕೂಡಿಸಿಕೊಂಡು, ಜೇನಿನಲ್ಲಿ ಕಲಸಿ ನೆಕ್ಕಲು ಛರ್ದಿಯು ನಾಶವಾಗುತ್ತದೆ.

ಷರಾ ಕಾವೀಕಲ್ಲನ್ನು ಹಸುವಿನ ಹಾಲಿನಿಂದ ಅರೆದು ಒಣಗಿಸಿ, ಅಥವಾ ತುಪ್ಪ ಸವರಿ ಸ್ವಲ್ಪವಾಗಿ ಹುರಿದು, ಶುದ್ಧಿಮಾಡಿಕೊಳ್ಳಬೇಕು

ಸೌವರ್ಚಲಮಜಾಜ್ಯಶ್ಚ ಪಿಪ್ಪಲೀ ಮರಿಚಾನಿ ಚ |
ಯುಕ್ತೋಽಯಂ ಮಧುನಾ ಲೇಹಃ ಶ್ರೇಷ್ಠಃ ಛರ್ದಿನಿವಾರಣಃ ||
(ಚಿ. ಸಾ. ಸಂ. 282)

ಸೌವರ್ಚಲಲವಣ (ಕರೀ ಉಪ್ಪು), ಜೀರಿಗೆ, ಹಿಪ್ಪಲಿ, ಕಾಳುಮೆಣಸು, ಇವುಗಳ ಚೂರ್ಣವನ್ನು ಜೇಸಿನಲ್ಲಿ ಕಲಸಿ ನೆಕ್ಕುವದು ಛರ್ದಿನಿವಾರಣಕ್ಕೆ ಶ್ರೇಷ್ಠವಾದದ್ದು.

ಶಠೀ ದಾರ್ವ್ಯಭಯಾ ಶುಂಠೀ ಮಾಗಧೀ ಘೃತಸಂಯುತಾ |
ಶಟ್ಯಾದಿ ಚೂರ್ಣ. ಚೂರ್ಣಂ ತಕ್ರೇಣ ಸಂಯುಕ್ತಂ ಹನ್ತಿ ಛರ್ದಿಂ ತ್ರಿದೋಷಜಾಮ್ ||
(ಹಾ. ಸಂ. 203)

ಕಚೋರ, ಮರದರಸಿನ, ಅಣಿಲೆಕಾಯಿಸಿಪ್ಪೆ, ಶುಂಠಿ, ಹಿಪ್ಪಲಿ, ಇವುಗಳ ಚೂರ್ಣವನ್ನು ಮಜ್ಜಿಗೆಯಲ್ಲಿ ಕಲಸಿ, ತುಪ್ಪ ಕೂಡಿಸಿಕೊಂಡು. ಪಾನಮಾಡುವದರಿಂದ ತ್ರಿದೋಷಜ ವಾಂತಿಯು ಪರಿಹಾರವಾಗುತ್ತದೆ.

ಪದ್ಮಕಾದಿ ಘೃತ

ಪದ್ಮಕಾಮೃತನಿಮ್ಬಾನಾಂ ಧಾನ್ಯಚನ್ದನಯೋಃ ಪಚೇತ್ |
ಕಲ್ಕೇ ಕ್ವಾಥೇ ಚ ಹವಿಷಃ ಪ್ರಸ್ಥಂ ಛರ್ದಿನಿವಾರಣಮ್ ||
ತೃಷ್ಣಾರುಚಿಪ್ರಶಮನಂ ದಾಹಜ್ವರಹರಂ ಪರಮ್ ||

(ಚಿ. ಸಾ. ಸಂ. 283)

ಪದ್ಮಕ, ಅಮೃತಬಳ್ಳಿ ಮತ್ತು ಕಹಿಬೇವು (ಪ್ರತಿಯೊಂದು ४ ತೊಲೆ), ಇವುಗಳ ಕಲ್ಕದಿಂದಲೂ, ಕೊತ್ತುಂಬರಿ ಮತ್ತು ಶ್ರೀಗಂಧ (ಒಂದೊಂದು ಸೇರು), ಇವುಗಳ ಕಷಾಯದಿಂದಲೂ, ಪಕ್ವಮಾಡಿದ ತುಪ್ಪದ ಪ್ರಸ್ಥವು ಛರ್ದಿನಿವಾರಣ ಮಾಡುತ್ತದೆ; ಬಾಯಾರಿಕೆಯನ್ನೂ, ಅರುಚಿಯನ್ನೂ ಶಮನಮಾಡುತ್ತದೆ; ಮತ್ತು ದಾಹ ಜ್ವರಪರಿಹಾರಕ್ಕೆ ಉತ್ತಮವಾದದ್ದು.

ಚನ್ದನಂ ಮಧುಕಂ ಕ್ಷೀರಂ ಪೀತಂ ರುಧಿರವಾನ್ತಿಜಿತ್ || (ರ. ರ. 364)

ಶ್ರೀಗಂಧ ಮತ್ತು ಜ್ಯೇಷ್ಠಮಧುವಿನ ಚೂರ್ಣವನ್ನು ಹಾಲಿನಲ್ಲಿ ಕಲಸಿ (ಅಥವಾ ಅದರ ಹಾಲುಕಷಾಯವನ್ನು), ಪಾನಮಾಡುವದರಿಂದ ರಕ್ತವಾಂತಿಯು ನಿಲ್ಲುವದು.

ಬಿಲ್ವಾದಿ ಕಷಾಯ

ಬಿಲ್ವಧಾನ್ಯಕಬಲಾಮಹೌಷಧೈರ್ಲಾಜಮುದ್ಗಸಹಿತೈಶ್ಶೃತಂ ಜಲಮ್ |
ಛರ್ದಿಮಾಶು ಪಿಬತಃ ಸಶರ್ಕರಂ ಹನ್ತಿ ವಾತಕಫಪಿತ್ತಜಾಮಪಿ ||

(ವೈ. ಸಾ. ಸಂ. 182)

ಬಿಲ್ವಪತ್ರೆಬೇರು, ಕೊತ್ತುಂಬರಿ, ಕಲ್ಲಂಗಡಲೆಬೇರು (ಕಡೀರು), ಶುಂಠಿ, ಅರಳು' ಹೆಸರು, ಇವುಗಳ ಕಷಾಯವನ್ನು, ಸಕ್ಕರೆ ಬೆರಸಿಕೊಂಡು, ಪಾನಮಾಡುವದರಿಂದ ತ್ರಿದೋಷಗಳಿಂದ ಹುಟ್ಟಿದ ವಾಂತಿಯಾದರೂ ಪರಿಹಾರವಾಗುತ್ತದೆ.

ಪಾಠಾದಿ ಕಷಾಯ

ಪಾಠಾಮ್ಬುಜೋಶೀರಸುಗನ್ಧಿಬಿಲ್ವದ್ರಾಕ್ಷಾಯವಾನ್ಯೌಷಧಧನ್ವಯಾಸೈಃ |
ಕಪಿತ್ಥಲಾಜೈಃ ಸಲಿಲಂ ಪ್ರಸಿದ್ಧಂ ಪ್ರಸಕ್ತಮುದ್ಗಾರಮಪಾಕರೋತಿ ||

(ವೈ. ಸಾ. ಸಂ. 183)

ಪಾಡಾವಳಿಗಡ್ಡೆ, ತಾವರೆದಂಟು, ಲಾವಂಚ, ಕೊತ್ತುಂಬರಿ, ಬಿಲ್ವಪತ್ರೆ, ದ್ರಾಕ್ಷೆ, ಓಮ, ಶುಂಠಿ, ಬಳ್ಳಿತುರಚ, ಬೇಲದ ಹಣ್ಣು, ಅರಳು, ಇವುಗಳ ನೀರು (ಪಾನಕಷಾಯ) ನಿತ್ಯವಾದ ವಾಂತಿಯನ್ನು ಪರಿಹಾರಮಾಡುತ್ತದೆಂಬದು ಪ್ರಸಿದ್ಧ.

ಪರಾ 'ಸುಗಂಧ' ಎಂದರೆ 'ಸೂಗದೆ' ಎಂತ ಅರ್ಥ ಬರದದ್ದಕ್ಕೆ ಆಧಾರ ಕಾಣುವದಿಲ್ಲ

ಕಾರ್ಪಾಸಾಸ್ಥ್ಯಾದಿ ಚೂರ್ಣ.

ಕಾರ್ಪಾಸಾಸ್ಥಿತ್ರುಟೀಕೃಷ್ಣಾಲಾಜಚೂರ್ಣಂ ಸಶರ್ಕರಮ್ |
ಲೇಹಯೇಚ್ಛರ್ದಿನಾಶಾಯ ರಹಸ್ಯಮಿದಮುತ್ತಮಮ್ ||
ಅಬ್ಧಿನೇತ್ರಾಗ್ನಿಋತುಭಿಃ ಪಕ್ಷಸಂಖ್ಯಾಕ್ರಮೇಣ ತು ||

(ವೈ ಸಾ. ಸಂ. 183)

ಹತ್ತಿಬೀಜದ ತಿರುಳು ನಾಲ್ಕು ಪಾಲು, ಏಲಕ್ಕಿ ಎರಡು ಪಾಲು, ಹಿಪ್ಪಲಿ ಮೂರು ಪಾಲು, ಅರಳು ಆರು ಪಾಲು, ಸಕ್ಕರೆ ಹದಿನೈದು ಪಾಲು, ಈ ಕ್ರಮದಲ್ಲಿ ಕೂಡಿಸಿ ಮಾಡಿದ ಚೂರ್ಣವನ್ನು ಸೇವಿಸುವದು ಛರ್ದಿಯ ನಾಶನಕ್ಕೆ ಉತ್ತಮ ಎಂಬದು ರಹಸ್ಯ.

ತ್ರಿಂಶದ್ಬಿಲ್ವಂ ವಿಲ್ವಮೂಲಂ ತತಃ ಕುಂಭೇ ऽಂಭಸಃ ಪಚೇತ್ ।
ಬಿಲ್ವಾದಿ ಲೇಹ ಅಷ್ಟಭಾಗಾವಶೇಷೇ ऽಸ್ಮಿನ್ ಕಷಾಯೇಷು(?ಸು)ಪರಿಶ್ರುತೇ ॥
ತ್ರಿಂಶದಾಮ್ರಂ ಗುಡಂ ದತ್ವಾ ಸಮ್ಯಕ್ಪಾಕೇ ऽವತಾರಯೇತ್ ।
ತ್ರಿಪಲಂ ಶೃಂಗಿ(?ಗ)ಬೇರಸ್ಯ ಮರೀಚಸ್ಯ ಚತುಷ್ಪಲಮ್ ॥
ಪಿಪ್ಪಲ್ಯಾಃ ಕುಡಬಾರ್ಧಂ ಚ ಚವಿಕಾಯಾಃ ಪ್ರಕುಂಚಕಮ್ ।
ಮುಷ್ಟಿಸ್ತಾಳೀಸಪತ್ರಸ್ಯ ಮುಷ್ಟ್ಯರ್ಧಂ ಕೇಸರಸ್ಯ ಚ ॥
ದ್ವೇ ಪಲೇ ಪಿಪ್ಪಲೀಮೂಲಾ ಚಿತ್ರಕಾಚ್ಚ ಪಲಂ ತಥಾ ।
ಪೃಥಕ್ತ್ರಿಜಾತಾತ್ಕರ್ಷಾಂಶಂ ಜೀರಕಾಚ್ಚ ಪಲದ್ವಯಮ್ ॥
ಸಂಚೂರ್ಣ್ಯ ತಸ್ಮಿನ್ವಿಚರೇತ್ ಯುಕ್ತ್ಯಾ ಪುಷ್ಪರಸಂ ಕ್ಷಿಪೇತ್ ।
ಏಷ ಬಿಲ್ವಾದಿಕೋ ಲೇಹಃ ಸರ್ವಛರ್ದಿನಿವಾರಕಃ ॥
ಹೃದ್ರೋಗಕಾಮಿಲಾಗುಲ್ಮಗ್ರಹಣ್ಯರುಚಿಪೀನಸಾನ್ ।
ಹಿಧ್ಮಾಕಾಸಕ್ರಿಮೀನ್ ಶ್ವಾಸಪ್ಲೀಹಾನಾಹಗಳಾಮಯಾನ್ ॥
ಅರ್ಶಾಂಸಿ ಪಾಂಡುರೋಗಂ ಚ ಹನ್ಯಾಚ್ಛೀಘ್ರಂ ನ ಸಂಶಯಃ ॥
(ವೈ. ಸಾ ಸಂ. 184)

ಮೂವತ್ತು ಪಲ ಬಿಲ್ವಪತ್ರೆಬೇರನ್ನು ಜಜ್ಜಿ ಪುಡಿಮಾಡಿ, ಒಂದು ಕುಂಭ ನೀರಿನಲ್ಲಿ ಹಾಕಿ, ಎಂಟನೆಯ ಒಂದು ಭಾಗ ನೀರು ಉಳಿಯುವ ವರೆಗೆ ಕುದಿಸಿ, ಆ ಕಷಾಯವನ್ನು ಚೆನ್ನಾಗಿ ಶೋಧಿಸಿಕೊಂಡು, ಅದರಲ್ಲಿ ಮೂವತ್ತು ಪಲ ಹಳೇ ಬೆಲ್ಲವನ್ನು ಹಾಕಿ ಪಾಕ ಮಾಡಿ, ಸರಿಯಾದ ಪಾಕ ಬರುತ್ತಲೇ, ಒಲೆಯಿಂದ ಕೆಳಗೆ ಇಳಿಸಿ, ಅದರಲ್ಲಿ ಬೆರಸ ತಕ್ಕ ಚೂರ್ಣ ಯಾವದೆಂದರೆ.—ಶುಂಠಿ ೩ ಪಲ, ಬಿಳೇ ಕಾಳುಮೆಣಸು ೪ ಪಲ, ಹಿಪ್ಪಲಿ ೨ ಪಲ, ಕಾಡುಮೆಣಸಿನ ಬೇರು ೧ ಪಲ, ತಾಳೀಸಪತ್ರೆ ೧ ಪಲ, ನಾಗಕೇಸರ ಅರ್ಧ ಪಲ, ಹಿಪ್ಪಲಿಮೂಲ ೨ ಪಲ, ಚಿತ್ರಮೂಲದ ಬೇರು ೧ ಪಲ, ಏಲಕ್ಕಿ, ಲವಂಗಪಟ್ಟೆ, ದಾಲ್ಚೀನಿಎಲೆ, ಇವು ಮೂರೂ ಕಾಲು ಪಲ ಪ್ರಕಾರ, ಜೀರಿಗೆ ೨ ಪಲ, ಇವುಗಳ ವಸ್ತ್ರ ಗಾಲಿತ ಚೂರ್ಣವನ್ನು ಆ ಪಾಕದೊಂದಿಗೆ ಸರಿಯಾಗಿ ಬೆರಸಿ, ತಣಿದ ಮೇಲೆ ಹದಿನೈದು ಪಲ ಜೇನು ಹೊಯಿದು ಕಲಸಿ, (ಬಾನಿಯಲ್ಲಿ) ಇಟ್ಟುಕೊಳ್ಳುವದು. ಈ ಬಿಲ್ವಾದಿ ಲೇಹ ಸರ್ವ ಛರ್ದಿಗಳನ್ನು ನಿವಾರಿಸತಕ್ಕಂಥಾದ್ದು; ಮತ್ತು ಹೃದ್ರೋಗ, ಕಾಮಿಲೆ, ಗುಲ್ಮ, ಗ್ರಹಣೀ, ಅರುಚಿ, ಪೀನಸ, ಬಿಕ್ಕಟ್ಟು, ಕೆಮ್ಮು, ಕ್ರಿಮಿ, ಉಬ್ಬಸ, ಪ್ಲೀಹವ್ಯಾಧಿ, ಆನಾಹ (ಹೊಟ್ಟೆ ಯುಬ್ಬರ), ಗಂಟಲರೋಗಗಳು, ಮೂಲವ್ಯಾಧಿಗಳು, ಪಾಂಡುರೋಗ, ಇವುಗಳನ್ನೆಲ್ಲಾ ಶೀಘ್ರದಲ್ಲಿ ಪರಿಹರಿಸುವದರಲ್ಲಿ ಸಂದೇಹವಿಲ್ಲ.

ಷರಾ ಬಿಲ್ವಪತ್ರೆಯ ಬೇರಿನ ಒಳಗಿನ ಸಿಪ್ಪೆಯನ್ನೇ ಉಪಯೋಗಿಸುವದು ಉತ್ತಮ, ಸಿಕ್ಕದಿದ್ದರೆ ಒಳಗಿನ ಕಾಷ್ಠ ಸಹಿತವಾಗಿ ಉಪಯೋಗಿಸಬಹುದು ಮುಖ್ಯವಾದಂಥ ಮಾಂಸಭಾಗವಾದ ಸಿಪ್ಪೆಯನ್ನು ಬಿಟ್ಟು, ಕಾಷ್ಠವನ್ನೇ ಉಪ ಯೋಗಿಸುವ ಪದ್ಧತಿ ತಪ್ಪು (1ನೇ ಭಾಗದ XIX-19 ನೋಡಿ) ಚಿತ್ರಮೂಲದ ಬೇರನ್ನು ಒಂದು ರಾತ್ರಿಕಾಲ ಸುಣ್ಣದ ತಿಳಿನೀರಿನಲ್ಲಿ ನೆನಸಿ, ಮಾರಣೆ ದಿನ ತೊಳೆದು, ಒಳಗಿನ ಕಾಷ್ಠವನ್ನು ತೆಗೆದುಬಿಟ್ಟು, ಸಿಪ್ಪೆಯನ್ನು ಬಿಸಿಲಿನಲ್ಲಿ ಒಣಗಿಸಿ ಉಪಯೋಗಿಸತಕ್ಕದ್ದು

17. ಬೀಭತ್ಸಜಾಮಬೀಭತ್ಸೈರ್ಹೇತುಭಿಃ ಸಂಹರೇದ್ವಮಿಮ್ ।
ದೌಹೃದೋತ್ಥಾಂ ವಮಿಂ ಹೃದ್ಯೈಃ ಕಾಂಕ್ಷಿತೈರ್ವಸ್ತುಭಿರ್ಜಯೇತ್ ॥

ಲಂಘನೈರ್ವಮನೈರ್ವಾಪಿ ಸಾತ್ಮ್ಯೈರ್ವಾ ಽಸಾತ್ಮ್ಯಸಂಭವಾಮ್ |
ಆಗಂತುಛರ್ದಿ ಚಿಕಿತ್ಸೆ — ಕ್ರಿಮಿಹೃದ್ರೋಗವಚ್ಚಾಪಿ ಸಾಧಯೇತ್ಕ್ರಿಮಿಜಾಂ ವಮಿಮ್ ||
ಯಥಾದೋಷಂ ಚ ವಿತರೇಚ್ಛಸ್ತಂ ವಿಧಿಮನನ್ತರಮ್ |
ಪವನಘ್ನೀ ಚಿರೋತ್ಥಾಸು ಪ್ರಯೋಜ್ಯಾ ಛರ್ದಿಷು ಕ್ರಿಯಾ ||
(ಚಿ. ಸಾ. ಸಂ. 283)

ಮನಸ್ಸಿಗೆ ಅಸಹ್ಯತೆಯುಂಟಾಗಿ ಬಂದ ವಾಂತಿಯನ್ನು ಅಂಥಾ ಅಸಹ್ಯತೆ ಹೋಗುವ ಹಾಗಿನ (ಅನುಕೂಲವಾದ ಮಾತು, ನಂಬಿಸುವಿಕೆ, ಪುರಾಣದ ಕಥೆ, ಪ್ರೇಮ ಮುಂತಾದ) ಕರ್ಮಗಳಿಂದ ಪರಿಹರಿಸತಕ್ಕದ್ದು. ಬಸುರಿಯ ಬಯಕೆಯ ವಾಂತಿಯನ್ನು ಅವಳಿಗೆ ಪ್ರಿಯ ವಾದ ಮತ್ತು ಅಪೇಕ್ಷೆಯಿರುವ ವಸ್ತುಗಳನ್ನು ಕೊಟ್ಟು ಗೆಲ್ಲಬೇಕು. ದೇಹಕ್ಕೆ ಒಗ್ಗದ ಆಹಾರಪಾನಗಳಿಂದ ಬಂದ ವಾಂತಿಯನ್ನು ಲಂಘನಮಾಡಿಸಿ, ಅಥವಾ ವಾಂತಿಮಾಡಿಸಿ, ಅಥವಾ ಒಗ್ಗುವ ವಸ್ತುಗಳನ್ನು ಕೊಟ್ಟು, ಪರಿಹರಿಸಬೇಕು. ಕ್ರಿಮಿಜ ವಾಂತಿಯನ್ನು ಕ್ರಿಮಿ ಹೃದ್ರೋಗದಂತೆ (ಚಿಕಿತ್ಸೆಮಾಡಿ) ಗೆಲ್ಲಬೇಕು. ಆ ಮೇಲೆ ಕೆದರಿದಂಥ ವಾತಾದಿ ದೋಷ ಗಳನ್ನು ನೋಡಿಕೊಂಡು ಆಯಾ ದೋಷಕ್ಕೆ ಪ್ರಶಸ್ತವಾದ ವಿಧಿಯನ್ನು ನಡಿಸತಕ್ಕದ್ದು. ದೀರ್ಘಕಾಲದ ವಾಂತಿಗಳಲ್ಲಿ ವಾತಹರವಾದ ಉಪಚಾರಗಳನ್ನು ಪ್ರಯೋಗಿಸತಕ್ಕದ್ದು.

ಪರಾ ಅಸಹ್ಯಪಟ್ಟು ಉಂಟಾದ್ದಕ್ಕೆ ಅತ್ಯಂತ ಮನೋಹರವಾದವುಗಳಿಂದ, ಬಯಕೆಯದಕ್ಕೆ ಅಪೇಕ್ಷಿತವಾದ ಫಲ ಗಳಿಂದ, ಆಮದ್ದಕ್ಕೆ ಲಂಘನ ವಮನಗಳಿಂದ, ಅಸಾತ್ಮ್ಯದ್ದಕ್ಕೆ ಸಾತ್ಮ್ಯಗಳಿಂದ, ಕ್ರಿಮಿದ್ದಕ್ಕೆ ಕ್ರಿಮಿಹೃದ್ರೋಗದ ಹಾಗೆ ಸಾಧಿಸಿ, ಅನಂತರ ದೋಷಕ್ಕೆ ತಕ್ಕ ಹಾಗಿನ ಪ್ರಶಸ್ತ ಚಿಕಿತ್ಸೆಯನ್ನು ಮಾಡತಕ್ಕದ್ದು ಎಂತ ಸು (ಪು 847)

18. ಆಮಜೇ ಶೂಲರೋಗಾರ್ತಿಃ ಪರ್ವಭೇದೋ ಭ್ರಮಃ ಕ್ಲಮಃ |
ಆಮಜಛರ್ದಿ ಲಕ್ಷಣ — ಶೋಷಃ ಶಿರೋವ್ಯಥಾ ಕ್ಲೇದೋ ನೇತ್ರೇ ಗಂಭೀರಮಿಚ್ಛತಿ ||
ಖಲ್ಲೀ ವಾ ಽಚೇತನಂ ವಾಪಿ ಅಜೀರ್ಣಾಜ್ಜಾಯತೇ ವಮಿಃ |
ಸಾಪಿ ಸ್ನಿಗ್ಧಾ ಚ ರೂಕ್ಷಾ ಚ ದ್ವಿವಿಧಾ ಜಾಯತೇ ವಮಿಃ || (ಹಾ. 203)

(ಅಜೀರ್ಣದ ಹೇತುವಿನಿಂದ ಉಂಟಾಗುವ) ಆಮಜಛರ್ದಿಯಲ್ಲಿ ಹೊಟ್ಟೆಶೂಲೆ, ಗಂಟು ಗಳಲ್ಲಿ ಒಡೆದ ಹಾಗಿನ ವೇದನೆ, ತಲೆತಿರುಕು, ಕ್ಲಮ, ಶೋಷ, ತಲೆನೋವು, (ಮೈ) ಒದ್ದೆಯಾ ಗಿರುವದು, ಕಣ್ಣಿನಲ್ಲಿ ಕುಳಿಬೀಳುವದು, ಖಲ್ಲೀ ಎಂಬ ವಾತವ್ಯಾಧಿ, ಅಥವಾ ಸಂಜ್ಞೆತಪ್ಪು ವದು, ಈ ಲಕ್ಷಣಗಳು ಕಾಣಬಹುದು. ಆ ವಾಂತಿಯಲ್ಲಿ ಸ್ನಿಗ್ಧ (ಜಿಡ್ಡುಳ್ಳದ್ದು), ರೂಕ್ಷ (ಜಿಡ್ಡಿ ಲ್ಲದ್ದು), ಎಂಬ ಎರಡು ವಿಧಗಳಿವೆ.

19. ಗಂಭೀರನೇತ್ರೋ ವಮತೇ ವಿಡ್ಬನ್ಧೋ ವಾತಿಸಾರ್ಯತೇ |
ಗಾತ್ರೇ ಖಲ್ಲೀಕರಂ ಶೂಲಂ ತಥಾ ಶೋಥಾತಿಮೂರ್ಚ್ಛನಾ ||
ಆಮಜಛರ್ದಿಯಲ್ಲಿ ಅಸಾಧ್ಯ ಲಕ್ಷಣ — ವಿಕಲಾಂಗೋ ಭ್ರಮಾರ್ತಶ್ಚ ಭ್ರಮನ್ತಂ ಪಶ್ಯತೇ ಜಗತ್ |
ಶಿರೋ ಽತ್ರಿರ್ವೇಪತೇ ಽತ್ಯರ್ಥಂ ಕರಪಾದೌ ಹಿಮೋಪಮೌ ||
ಏತೈರ್ಲಿಂಗೈಸ್ತು ಸಂಯುಕ್ತಾಂ ಛರ್ದಿಂ ದೂರೇ ಪರಿತ್ಯಜೇತ್ |
ಅಸಾಧ್ಯಾ ಸರ್ವಯೋಗೈಸ್ತು ಸಾಪ್ಯಜೀರ್ಣಾ ಸುಧೀಮತಾ ||
(ಹಾ. 203)

ಕಣ್ಣುಗಳಲ್ಲಿ ಕುಳಿಬಿದ್ದಿರುವದು, ವಾಂತಿ, ಮಲಬದ್ಧತೆ ಅಥವಾ ಅತಿಸಾರ, ಶರೀರದಲ್ಲಿ ಖಲ್ಲೀವ್ಯಾಧಿಯ ಶೂಲೆ, ಊದು, ಅತಿಯಾಗಿ ಮೂರ್ಛೆ ಹೋಗುವದು, ಅಂಗಗಳಲ್ಲಿ ಕಲೆ ಇಲ್ಲದಿರುವದು, ತಲೆತಿರುಕು, ಲೋಕವೇ ತಿರುಗುತ್ತಿರುವ ಹಾಗೆ ಕಾಣುವದು, ತಲೆ ನೋವು, ಅತಿಯಾದ ನಡುಕು, ಕೈಕಾಲುಗಳು ಹಿಮದಂತೆ ತಣ್ಣಗಿರುವದು, ಈ ಲಕ್ಷಣಗಳಿಂದ ಕೂಡಿದ ಛರ್ದಿಯನ್ನು ದೂರದಿಂದಲೇ ಬಿಟ್ಟುಬಿಡಬೇಕು. ಅಂಥಾ ಅಜೀರ್ಣ(ಆಮ)ವು ಸರ್ವ ಯೋಗಗಳಿಂದಲೂ, ಒಳ್ಳೇ ಬುದ್ಧಿಶಾಲಿಯಿಂದಾದರೂ, ವಾಸಿಮಾಡುವದಕ್ಕೆ ಅಸಾಧ್ಯ ವಾಗಿರುತ್ತದೆ.

20. ಛರ್ದಿಯಲ್ಲಿ ಉಪಚಾರ ವಿಶೇಷ

ಭುಂಜೀತ ಭುಂಜೀತ ಪಿಬೇಚ್ಚ ಭೂಯೋ ಲಿಹೇಚ್ಚ ಖಾದೇದ್ರಸಗನ್ಧವನ್ತಿ ।
ಚಿರಪ್ರವೃತ್ತಾನಚಿರಪ್ರವೃತ್ತಾನುದ್ಗಾರದೋಷಾನಪಹನ್ತುಕಾಮಃ(ಮಃ) ||
(ವೈ. ಸಾ. ಸಂ. 185)

ಹಳೇದಾಗಲಿ ಹೊಸದಾಗಲಿ ವಾಂತಿಯ ದೋಷಗಳನ್ನು ಜಯಿಸಲಪೇಕ್ಷಿಸುವವನು ಯುಕ್ತವಾದ ರಸ ಮತ್ತು ಗಂಧವುಳ್ಳ ಆಹಾರಾದಿಗಳನ್ನು ಪದೇ ಪದೇ ಉಣ್ಣುತ್ತಾ, ಕುಡಿಯುತ್ತಾ, ನೆಕ್ಕುತ್ತಾ, ತಿನ್ನುತ್ತಾ ಇರತಕ್ಕದ್ದು, (ಅಂದರೆ ಸೇವಿಸಿದ ಆಹಾರಾದಿಗಳು ವಾಂತಿಯಾಗುತ್ತವೆ ಎಂಬದರಿಂದ ಉಪವಾಸ ಮಾಡಬಾರದು).

ನ ಚೋಷ್ಣತೋಯಪಾನಂ ಚ ನಾತಿಭೋಜನಮೇವ ಚ ।
ನ ಧಾವನಂ ಚ ಕರ್ತವ್ಯಂ ವರ್ಜಯೇದ್ವಮನಾರ್ದಿತೇ(?ತಃ) || (ಹಾ. ಸಂ.206)

ಛರ್ದಿರೋಗದಲ್ಲಿ ಬಿಸಿನೀರಿನ ಪಾನ, ಅತಿಯಾದ ಭೋಜನ, (ಕ್ರಮವಾದ ಬಾಯಿ) ತೊಳೆಯುವಿಕೆ, ಇವುಗಳನ್ನು ವರ್ಜ್ಯಮಾಡಬೇಕು.

21. ಛರ್ದಿಯಲ್ಲಿ ಉಪಯುಕ್ತವಾದ ಕೆಲವು ಘೃತಗಳು

ಮಹಾಕಲ್ಯಾಣಕಂ ಸರ್ಪಿಃ ಕಲ್ಯಾಣಕಮಥಾಪಿ ವಾ ।
ಶತಾವರೀಘೃತಂ ವಾಪಿ ತೃಷ್ಣಾಛರ್ದಿನಿವಾರಣಮ್ ||
(ಚಿ. ಸಾ. ಸಂ. 284)

(ಬೇರೆ ಕಡೆಗಳಲ್ಲಿ ಹೇಳಲ್ಪಟ್ಟ) ಮಹಾಕಲ್ಯಾಣಕಘೃತ, ಕಲ್ಯಾಣಕಘೃತ, ಅಥವಾ ಶತಾವರಿಘೃತ, ಬಾಯಾರಿಕೆಯನ್ನೂ ಛರ್ದಿಯನ್ನೂ ನಿವಾರಿಸತಕ್ಕಂಥಾದ್ದು.

ಪರಾ ಮಹಾಕಲ್ಯಾಣಕಘೃತದ ಯೋಗ ಪು 369ರಲ್ಲಿ, ಕಲ್ಯಾಣಕಘೃತದ ಯೋಗ ಪು 134ಲ್ಲಿ, ಕಾಣುತ್ತದೆ ಶತಾವರೀಘೃತ ಎಂಬದು ರಕ್ತಪಿತ್ತೋಕ್ತ ಬೃಹಚ್ಛತಾವರೀಘೃತವಾಗಿರಬೇಕು

22. ಛರ್ದಿಯ ಉಪದ್ರವಗಳು.

ಕಾಸಶ್ವಾಸೌ ಜ್ವರಸ್ತೃಷ್ಣಾ ಹಿಕ್ಕಾ ವೈಚಿತ್ಯಮೇವ ಚ ।
ಹೃದ್ರೋಗಸ್ತಮಕಶ್ಚೈವ ಜ್ಞೇಯಾಃ ಛರ್ದೇರುಪದ್ರವಾಃ ||
(ಚಿ. ಸಾ. ಸಂ. 284)

ಕೆಮ್ಮು, ಉಬ್ಬಸ, ಜ್ವರ, ಬಾಯಾರಿಕೆ, ಬಿಕ್ಕಟ್ಟು, ಚಿತ್ತವಿಕಾರ, ಹೃದ್ರೋಗ, ತಮಕಶ್ವಾಸ, ಇವು ಛರ್ದಿಯಲ್ಲಿ ಬರಬಹುದಾದ ಉಪದ್ರವಗಳು ಎಂತ ತಿಳಿಯತಕ್ಕದ್ದು.

23. ಛರ್ದ್ಯುತ್ಥಿತಾನಾಂ ಚ ಚಿಕಿತ್ಸಿತಾತ್ ಸ್ವಾ-
ಚ್ಚಿಕಿತ್ಸಿತಂ ಕಾರ್ಯಮುಪದ್ರವಾಣಾಮ್ |
ಅತಿಪ್ರವೃತ್ತಾಸು ವಿರೇಚನಸ್ಯ ಕರ್ಮಾತಿಯೋಗೈರ್ವಿಹಿತಂ ವಿಧೇ-
ಯಮ್ ||
ವಮಿಪ್ರಸಂಗಾತ್ಪವನೋಽಪ್ಯವಶ್ಯಂ ಧಾತುಕ್ಷಯಾದ್ವೃದ್ಧಿಮುಪೈತಿ
ತಸ್ಮಾತ್ |
ಚಿರಪ್ರವೃತ್ತಾಸ್ವನಿಲಾಪಹಾನಿ ಕಾರ್ಯಾಣ್ಯುಪಸ್ತಮ್ಭನಬೃಂಹಣಾನಿ ||
(ಚ. 717)

ದೀರ್ಘಕಾಲದ ಛರ್ದಿಗೆ ಮತ್ತು ಉಪದ್ರವಗಳಿಗೆ ಚಿಕಿತ್ಸೆ

ಛರ್ದಿಯಿಂದ ಉತ್ಪನ್ನವಾದ ಉಪದ್ರವಗಳಿಗೆ ಆಯಾ ರೋಗಕ್ಕೆ ಉಕ್ತವಾದ ಚಿಕಿತ್ಸೆಯನ್ನು ಮಾಡತಕ್ಕದ್ದು. ವಮನಗಳು ಅತಿಯಾದ ಸಂಗತಿಯಲ್ಲಿ (ಪಂಚಕರ್ಮಗಳೊಳಗೆ) ವಿರೇಚನ ಅತಿಯಾದ್ದಕ್ಕೆ ವಿಧಿಸಲ್ಪಟ್ಟ ಕರ್ಮವನ್ನು ಮಾಡತಕ್ಕದ್ದು. ವಾಂತಿ ಅತಿಯಾಗಿ ಆಗುವದರಿಂದ ಧಾತುಕ್ಷಯವಾಗಿ ವಾಯುವು ಅವಶ್ಯವಾಗಿ ವೃದ್ಧಿಯಾಗುತ್ತದೆ. ಆದ್ದರಿಂದ ದೀರ್ಘಕಾಲದ ವಾಂತಿಗಳಿಗೆ ವಾಯುಹರವಾದ ಸ್ತಂಭನ-ಬೃಂಹಣ ಯೋಗಗಳನ್ನು ಪ್ರಯೋಗಿಸತಕ್ಕದ್ದು.

ಪರಾ ವಾಂತಿಗೆ ಕೊಟ್ಟ ಔಷಧವು ಅತಿಯಾದ್ದಕ್ಕೆ ಯಾವ ಸ್ತಂಭನ-ಬೃಂಹಣ ಯೋಗಗಳು ಹೇಳಲ್ಪಟ್ಟವೋ, ಅವುಗಳನ್ನು ವಾಂತಿಯಲ್ಲಿ ಪ್ರಯೋಗಿಸತಕ್ಕದ್ದು ಎಂತ ವಾ (ಪು 292) ಆ ಸ್ತಂಭನ ಬೃಂಹಣ ಯೋಗಗಳು ವಮನಾತಿಯೋಗದಲ್ಲಿಯೂ ವಿರೇಚನಾತಿಯೋಗದಲ್ಲಿಯೂ ಸಾಮಾನ್ಯವಾಗಿ ಉಪಯುಕ್ತವಾದವು

ದೃಷ್ಟಫಲ ಚಿಕಿತ್ಸೆ

24. ಅತಿಸಾರಮೂಲಘ್ನ ಮಾತ್ರೆಯನ್ನಾಗಲಿ, ಆನಂದಭೈರವಿ ಮಾತ್ರೆಯನ್ನಾಗಲಿ ಜೇನಿನಲ್ಲಿ ತೇದಿ ನೆಕ್ಕಿಸುವದರಿಂದ ಸಾಧಾರಣವಾಗಿ ಛರ್ದಿ ಪರಿಹಾರವಾಗುತ್ತದೆ. ಕ್ರಿಮಿಗಳು ಕೆದರಿರುವಲ್ಲಿ, ಜೇನಿನೊಂದಿಗೆ ನೀರುಳ್ಳಿರಸ ಅಥವಾ ಹಾಗಲ ಸೊಪ್ಪಿನ ರಸವನ್ನು ಅನುಪಾನಕ್ಕೆ ಸೇರಿಸಿಕೊಳ್ಳುವದರಿಂದ ಹೆಚ್ಚು ಪ್ರಯೋಜನ ಸಿಕ್ಕುತ್ತದೆ. ಈ ಅಧ್ಯಾಯದಲ್ಲಿರುವ ಉಪದೇಶಗಳಿಗೆ ಅನುಗುಣವಾಗಿ ಅವಸ್ಥಾವಿಶೇಷಗಳಲ್ಲಿ ಯುಕ್ತವಾದ ಅನುಪಾನವನ್ನು ಕಲ್ಪಿಸಿ ಅದೇ ಮಾತ್ರೆಗಳನ್ನು ಉಪಯೋಗಿಸಬೇಕು. ಆಮದೋಷವಿರುವಲ್ಲಿ ಆನಂದಭೈರವಿ ವಿಶೇಷವಾಗಿ ಉಪಯುಕ್ತವಾದದ್ದು.

ಪೃಥಗ್ರೋಗೋಕ್ತೌಷಧಗಳು

25. ಅಗರುಬೀಟಿಮರ (ಶಿಂಶಿಪಾ—ಮಲ. ಇರುಪ್ಪುಳ್ಮರಂ), ಅಜಮೋದ, ಅಣಿಲೆಕಾಯಿ, ಅತಿವಿಡೆ, ಅಮೃತಬಳ್ಳಿ, (ಭತ್ತದ) ಅರಳು, ಆಡುಸೋಗೆ, ಉತ್ತರಣೆ, ಏಲಕ್ಕಿ, ಒಣಶುಂಠಿ, ಒರೆಲೆಬೇರು, ಕರಿಜೀರಿಗೆ, ಕರ್ಕಟಶೃಂಗಿ, ಕಸ್ತೂರಿ, ಕಹಿಬೇವು, ಕುಂಕುಮಕೇಸರ, ಕೊಡಸಿಗನಬೀಜ (ಇಂದ್ರಜೀವ), ಕೊತ್ತುಂಬರಿ, ಖರ್ಜೂರ, ಗಣಿಕೆ (ಕಾಗೆಹಣ್ಣಿನ ಗಿಡ), ಜಾಪತ್ರೆ, ಜಾಯಿಕಾಯಿ, ಜೀರಿಗೆ, ಜೇನು, ಜ್ಯೇಷ್ಠಮಧು, ತಾರೆ(ಶಾಂತಿ)ಕಾಯಿ, ತಾಳೀಸಪತ್ರೆ, ದಾಳಿಂಬ, ದೊಡ್ಡಿಹುಳಿ, ನಾಗಕೇಸರ, ನಾಗಪುಷ್ಪೀ, ನೇರಳೆ, ಪಚ್ಚೆಕರ್ಪೂರ, ಪದ್ಮಕ, ಪಾದರಿಮರ, ಪಾಡಾವಳಿಗಡ್ಡೆ (ಪಾಠಾ), ಪುಲ್ಲಂಪುರುಚೆ (ಮಲ. ಪುಳಿಯಾರಲ), ಬಡೇಸೋಪಿ, ಬಳ್ಳಿತುರಚನ ಬೇರು, ಬಾವುಂಚಿ (ಮಲ. ಕಾರ್ಕೋಲರಿ), ಬಿಲ್ವಪತ್ರೆ, ಬೇಲದ ಹಣ್ಣು, ಬೊಗರಿ, (ಸುಟ್ಟ) ಮಣ್ಣಿನ

ಹೆಂಟೆ, ಮಾದಳ, ಮಾವಿನ ಚಿಗುರು, ಮಾವಿನಬೀಜ (ಗೊರಟು), ಮುಡಿವಾಳ, ಮೂವೆಲೆ ಬೇರು, ಲವಂಗ, ಶ್ರೀಗಂಧ, ಸಕ್ಕರೆ, ಸಕ್ತು, ಸಿಂದೂರಿ (ಭಂಗಾರದಕಾಯಿ), ಸೀಯಾಳದ ನೀರು, ಸೀಲಿಂಬೆ, ಸುರಸುರಿಕೆ (ಏಲಾವಾಲುಕ), ಸೋಪಿ (ಉಪಕುಂಚೀ) ಹಾಲು, ಮತ್ತು ಹುಚ್ಚುಬೇವು.

26. ವಿರೇಚನ, ವಮನ, ಲಂಘನ, ಸ್ನಾನ, ಮೈಯುಜ್ಜುವದು, ಅರಳುಗಂಜಿಯ ನೀರು, ಹಳೆಯವಾದ ಅರ್ವತ್ತು ದಿನಗಳ ಬೆಳಿಕೆಯ ಶಾಲ್ಯಕ್ಕಿ ಮತ್ತು ಹೆಸರು, ಬಟಾಣಿ, ಗೋದಿ, ಯವೆ, ಜೇನು, ಮೊಲ-ನವಿಲು-ತಿತ್ತಿರಿ-ಲಾವ ಮುಂತಾದ ಜಾಂಗಲ ಮೃಗಪಕ್ಷಿಗಳ ಮನೋಹರವಾದ ಮತ್ತು ನಾನಾ ರಸ-ಗಂಧ-ರೂಪಗಳುಳ್ಳ ಮಾಂಸರಸಗಳು, ಸಾರುಗಳು, ಕೊತ್ತುಂಬರಿ, ತೆಂಗಿನಕಾಯಿ, ಪಕ್ವವಾದ ಲಿಂಬೆಯ, ನೆಲ್ಲಿಯ, ಮಾವಿನ, ಬೊಗರಿಯ, ದ್ರಾಕ್ಷೆಯ ಮತ್ತು ಬೇಲದ ಹಣ್ಣುಗಳು, ದಾಳಿಂಬ, ಮಾದಳ, ಬಾಯಿಕಾಯಿ, ಸಕ್ಕರೆ, ಹಿತವಾದ ಮತ್ತು ಮನಸ್ಸಿಗೆ ಪ್ರೀತಿಕರವಾದ ಭಕ್ಷ್ಯಗಳು, ಉಂಡ ಕೂಡಲೆ ಮುಖಕ್ಕೆ ತಣ್ಣೀರಿನ ಸೇಚನ (ಚಿಮುಕಿಸುವದು), ಶ್ರೀಗಂಧ, ಚಂದ್ರನ ಕಿರಣ, ಮನೋಹರವಾದ ಪರಿಮಳದ ಲೇಪನಗಳು, ಸುಗಂಧವುಳ್ಳ ಪುಷ್ಪಗಳು-ಪಾನಗಳು ಮತ್ತು ಫಲಗಳು, ಮತ್ತು ತನ್ನ ಮನಸ್ಸಿಗೆ ಹಿತವಾದ ರೂಪ-ರಸ-ಗಂಧ-ಸ್ಪರ್ಶ ಮತ್ತು ಶಬ್ದ (ಗಾನ ಮುಂತಾದದ್ದು).

ಪಥ್ಯವರ್ಗ

27. ನಸ್ಯ, ವಸ್ತಿ, ಬೆವರಿಸುವದು, ಸ್ನೇಹಪಾನ, ರಕ್ತಮೋಕ್ಷಣ, ಕಡ್ಡಿಯಿಂದ ಹಲ್ಲುಜ್ಜುವದು, ದ್ರವಯುಕ್ತವಾದ ಅನ್ನ, ಅಸಹ್ಯತೆಯನ್ನುಂಟುಮಾಡುವಂಥವುಗಳ ದರ್ಶನ, ಭಯ, ರೇಗುವದು (ಉದ್ವೇಗ), ಬಿಸಿಯಾದ, ಸ್ನಿಗ್ಧವಾದ, ಸಾತ್ಮ್ಯವಲ್ಲದ, ಮನಸ್ಸಿಗೆ ಒಗ್ಗದ ಮತ್ತು ತನಗೆ ವಿರೋಧವಾದ ಅನ್ನಗಳು, ಬಾಳೆಹಣ್ಣು, ಅವರೆ, ಇಪ್ಪೆಹೂವು, ಸಣ್ಣ ಏಲಕ್ಕಿ, ಸಾಸಿವೆ, ದೇವದಾಳಿ, ವ್ಯಾಯಾಮ, ಅಂಜನ, ಹೀರೆಕಾಯಿ ಮತ್ತು ಆಳಿಂಬೆ (ಲಾಂಬು).

ಅಪಥ್ಯವರ್ಗ

28. ಛರ್ದಿಯು ಆಮಾಶಯ, ಕರುಳುಗಳು, ಮಿದುಳು, ಹೃದಯ, ಗರ್ಭಕೋಶ, ಅಂಡಗಳು, ಉಂಡುಕಗಳು, ನರಮಂಡಲ, ಮುಂತಾದ ಅಂಗವಿಭಾಗಗಳಿಗೆ ಸಂಬಂಧಪಟ್ಟ ಕೆಲವು ವ್ಯಾಧಿಗಳಲ್ಲಿಯೂ, ಜ್ವರ, ವಿಷೂಚೀ, ವಿಷ ಮುಂತಾದ ಕೆಲವು ಸರ್ವಾಂಗಸಂಶ್ರಯವಾದ ರೋಗಗಳಲ್ಲಿಯೂ, ತೋರಬಹುದಾದ ಒಂದು ಲಕ್ಷಣವಲ್ಲದೆ, ಪ್ರತ್ಯೇಕ ವ್ಯಾಧಿ ಅಲ್ಲ ಎಂಬದು ಪಾಶ್ಚಾತ್ಯ ವೈದ್ಯರ ಮತವಾಗಿರುತ್ತದೆ. ಆದರೆ ಅಂಥ ಅನ್ಯರೋಗಗಳಿಗೆ ಚಿಕಿತ್ಸೆ ಬರೆಯುವ ಸಂದರ್ಭಗಳಲ್ಲಿ ಛರ್ದಿಗೆ ಪ್ರತ್ಯೇಕವಾಗಿ ಪರಿಹಾರ ಬರೆಯಲ್ಪಟ್ಟದ್ದು ಬಹು ಕಡೆ ಕಾಣುತ್ತದೆ. ಆಯುರ್ವೇದ ಸಹ ಮದಾತ್ಯಯ, ಪಾನವಿಭ್ರಮ, ಪಾನಹತ, ಕಫಜ-ಪೈತ್ತಿಕ ಮತ್ತು ವಾತಪೈತ್ತಿಕ ಜ್ವರಗಳು, ಅಜೀರ್ಣ, ವಿಷೂಚೀ, ತ್ರಿದೋಷಜ ಪಾಂಡು, ರಕ್ತಪಿತ್ತ, ಶೋಷ, ಪೈತ್ತಿಕ ಕಾಸ, ಕಫೋನ್ಮಾದ, ವಾತಿಕ ಅಪಸ್ಮಾರ, ಪೈತ್ತಿಕ ಆವರಣ ರೋಗ, ಊರುಸ್ತಮ್ಭ,

ಪ್ರಕರಣಾಂತ ಟಿಪ್ಪಣಿ

ಆಮವಾತ, ಆಮಶೂಲ, ಕಫಾತ್ಮಕ ಪರಿಣಾಮಶೂಲ, ಗುಲ್ಮ, ಅಶ್ಮರೀಶರ್ಕರಾ, ಕಫ ಪ್ರಮೇಹ, ಕಫಾತ್ಮಕಶೋಥ, ಅಸಾಧ್ಯಶ್ವಯಥು, ಅಸಾಧ್ಯಅಪಚೀ, ಅಸಾಧ್ಯವಿದ್ರಧಿ, ವ್ರಣ, ಉದರ್ದ, ಊರ್ಧ್ವಗ ಅಮ್ಲಪಿತ್ತ, ಶ್ಲೇಷ್ಮಪಿತ್ತ, ವಾತಪೈತ್ತಿಕ ವಿಸರ್ಪ, ವಿಸ್ಫೋಟ, ಮುಂತಾದ ರೋಗಗಳಲ್ಲಿ ಪೂರ್ವರೂಪವಾಗಿ, ಲಕ್ಷಣವಾಗಿ, ಉಪಸರ್ಗವಾಗಿ, ಅಥವಾ ಅನುಬಂಧವಾಗಿ ಛರ್ದಿಯು ಕಾಣಬಹುದೆಂತ ಹೇಳಿ, ಆ ರೋಗಗಳಿಗೆ ಚಿಕಿತ್ಸೆ ಬರೆಯುವಲ್ಲಿ ಬೇಕಾದಾಗ್ಗೆ ಛರ್ದಿಗೆ ವಿಶೇಷ ಉಪಚಾರಗಳನ್ನು ಉಪದೇಶಮಾಡಿರುತ್ತದೆ. ಆದಾಗ್ಯೂ ಸಾಧಾರಣವಾಗಿ ಛರ್ದಿಯಲ್ಲಿ ಅನ್ನನಾಳದ, ವಿಶೇಷವಾಗಿ ಆಮಾಶಯದ, ನೈಜಿಕ ಗತಿಯು ವಿಪರೀತವಾಗಿ, ಅಂದರೆ ಅಧೋಮುಖವಾಗಿರತಕ್ಕಂಥಾದ್ದು ಊರ್ಧ್ವಮುಖವಾಗಿ, ಅಲ್ಲಿ ಸಂಗ್ರಹವಾದ ಪದಾರ್ಥಗಳು ಮೇಲಕ್ಕೆ ಬಂದು, ಬಾಯಿಯಿಂದ ಹೊರಗೆ ಹೋಗುವ ವಿಶೇಷ ಲಕ್ಷಣವಿದ್ದು, ಅಂಥಾ ಛರ್ದಿಯು ಈ ಅಧ್ಯಾಯದಲ್ಲಿ ವರ್ಣಿಸಲ್ಪಟ್ಟ ಕ್ರಮದಲ್ಲಿ ಹೇತುಭೇದದ ಮೇಲೆ ಚಿಕಿತ್ಸೆಮಾಡುವದರಿಂದ ಪ್ರಾಯಶಃ ಪರಿಹಾರವಾಗುವದರಿಂದ, ಛರ್ದಿಯನ್ನು ಪ್ರತ್ಯೇಕ ವ್ಯಾಧಿಯಾಗಿ ನಿದಾನಾದಿ ಕ್ರಮದಿಂದ ಆಯುರ್ವೇದವು ವರ್ಣಿಸಿದ್ದರ ಉಪಯುಕ್ತತೆಯು ಸ್ಪಷ್ಟವಾಗುತ್ತದೆ.

---

# ಅಧ್ಯಾಯ XVI.

## ಜ್ವರ. (Fever, Pyrexia.)

1. ಸ್ವೇದಾವರೋಧಃ ಸನ್ತಾಪಃ ಸರ್ವಾಂಗಗ್ರಹಣಂ ತಥಾ |

ಜ್ವರದ ಸಾಮಾನ್ಯ ಲಕ್ಷಣ

ವಿಕಾರಾ ಯುಗಪದ್ಯಸ್ಮಿನ್ ಜ್ವರಃ ಸ ಪರಿಕೀರ್ತಿತಃ || (ಸು. 754-5)

ಬೆವರಿನ ತಡೆ, ಸನ್ತಾಪ (ವಿಶೇಷವಾದ ಬಿಸಿ), ಸರ್ವಾಂಗಗಳ ಹಿಡಿಯುವಿಕೆ (ಪೀಡಿಸುವಿಕೆ), ಈ ವಿಕಾರಗಳು ಯಾವ ರೋಗದಲ್ಲಿ ಒಟ್ಟಾಗಿ ಕಾಣುತ್ತವೋ, ಅದು ಜ್ವರ ಎಂತ ಕೀರ್ತಿಗೊಂಡದೆ.

ಷರಾ ಜ್ವರದಲ್ಲಿ ಬೆವರಿನ ತಡೆ ಇಲ್ಲದಿರಬಹುದು ಕೆಳಗೆ 18ನೇ ಸಂಖ್ಯೆ ನೋಡಿ

ಜ್ವರಪ್ರತ್ಯಾತ್ಮಿಕಂ ಲಿಂಗಂ ಸನ್ತಾಪೋ ದೇಹಮಾನಸಃ || (ಚ. 149)

ಶರೀರದ ಮತ್ತು ಮನಸ್ಸಿನ ಸಂತಾಪವು ಜ್ವರದ ನಿತ್ಯ ಲಕ್ಷಣ.

ವೈಚಿತ್ಯಮರತಿಗ್ಲಾನಿರ್ಮನಸಸ್ತಾಪಲಕ್ಷಣಮ್ |
ಇನ್ದ್ರಿಯಾಣಾಂ ಚ ವೈಕೃತ್ಯಂ ದೇಹಸನ್ತಾಪಲಕ್ಷಣಮ್ || (ಚ. 149)

ಮನಸ್ಸಿನ ಗಲಿಬಿಲಿ (ಅಸಮಾಧಾನ), ಉಲ್ಲಾಸವಿಲ್ಲದಿರುವಿಕೆ, ಆಯಾಸ, ಇವು ಮನಸ್ಸಿನ ತಾಪದ ಲಕ್ಷಣ; ಮತ್ತು ಇಂದ್ರಿಯಗಳಲ್ಲಿ (ಇಂದ್ರಿಯ ವ್ಯಾಪಾರಗಳಲ್ಲಿ) ವಿಕಾರ ಉಂಟಾಗುವದು ದೇಹದಲ್ಲಿ ಉಂಟಾದ ಸಂತಾಪದ ಲಕ್ಷಣ.

ಷರಾ ಮನಸ್ಸಿನ ಸಂತಾಪ, ದೇಹದ ಸಂತಾಪ, ಇವೆರಡೂ ಜ್ವರದಲ್ಲಿ ನಿತ್ಯವಾಗಿ ಇರುತ್ತವೆ 'ಸಂತಾಪ' ಶಬ್ದಕ್ಕೆ 'ಬಹಳವಾದ ಬಿಸಿ' ಎಂಬ ಅರ್ಥವೂ, 'ಸಂಕಷ್ಟ ಅಥವಾ ಪೀಡೆ' ಎಂಬ ಅರ್ಥವೂ ಉಂಟು 'ಸರ್ವಾಂಗ ಗ್ರಹಣಂ' ಎಂದರೆ ಸರ್ವಾಂಗದಲ್ಲಿ ವೇದನೆ ಎಂತ ಮ. ವ್ಯಾ (ಪು 23)

2. ಸಂಸೃಷ್ಟಾಃ ಸನ್ನಿಪತಿತಾಃ ಪೃಥಗ್ವಾ ಕುಪಿತಾ ಮಲಾಃ |

ಜ್ವರದ ಸಂಪ್ರಾಪ್ತಿ

ರಸಾಖ್ಯಂ ಧಾತುಮನ್ವೇತ್ಯ ಪಕ್ತಿಂ ಸ್ಥಾನಾನ್ನಿರಸ್ಯ ಚ ||
ಸ್ವೇನ ತೇನೋಷ್ಮಣಾ ಚೈವ ಕೃತ್ವಾ ದೇಹೋಷ್ಮಣೋ ಬಲಮ್ |
ಸ್ರೋತಾಂಸಿ ರುದ್ಧ್ವಾ ಸಂಪ್ರಾಪ್ತಾಃ ಕೇವಲಂ ದೇಹಮುಲ್ಬಣಾಃ ||
ಸನ್ತಾಪಮಧಿಕಂ ದೇಹೇ ಜನಯನ್ತಿ ನರಾ(?ರ)ಸ್ತದಾ |
ಭವತ್ಯತ್ಯುಷ್ಣಸರ್ವಾಂಗೋ ಜ್ವರಿತಸ್ತೇನ ಚೋಚ್ಯತೇ ||
ಸ್ರೋತಸಾಂ ಸನ್ನಿರುದ್ಧತ್ವಾತ್ ಸ್ವೇದಂ ನಾ ನಾಧಿಗಚ್ಛತಿ || (ಚ 456-7)

ವಾತಾದಿ ದೋಷಗಳು ಒಂದೊಂದಾಗಿ, ದ್ವಂದ್ವವಾಗಿ, ಅಥವಾ ಒಟ್ಟಾಗಿ ಕೋಪಗೊಂಡು, ರಸಧಾತುವನ್ನು ಕೂಡಿಕೊಂಡು, ಪಚನಾಗ್ನಿಯನ್ನು ಅದರ ಸ್ಥಾನದಿಂದ ಹೊರಗೆ ತಳ್ಳಿ, ತಮ್ಮ ಮತ್ತು ಆ ಬಿಸಿಯಿಂದ ದೇಹದ ಬಿಸಿಯನ್ನು ಬಲಪಡಿಸಿ, ಸ್ರೋತಸ್ಸುಗಳನ್ನು ಮುಚ್ಚಿಬಿಟ್ಟು, ಇಡೀ ದೇಹವನ್ನು ಆಕ್ರಮಿಸಿ, ಪ್ರತ್ಯಕ್ಷವಾಗಿ ದೇಹದಲ್ಲಿ ಸಂತಾಪವನ್ನು (ಬಿಸಿಯನ್ನು) ಅಧಿಕಮಾಡುತ್ತವೆ. ಆಗ್ಗೆ ಮನುಷ್ಯನ ಸರ್ವಾಂಗವು ಅತಿ ಬಿಸಿಯಾಗುತ್ತದೆ. ಅದರಿಂದ ಅವನಿಗೆ ಜ್ವರ ಉಂಟಾಗಿದೆ ಎನ್ನುತ್ತಾರೆ ಸ್ರೋತಸ್ಸುಗಳು ಮುಚ್ಚಿಕೊಂಡಿರೋಣದಿಂದ ಜ್ವರರೋಗಿಗೆ ಬೆವರು ಬರುವದಿಲ್ಲ.

3. ಆಲಸ್ಯಂ ನಯನೇ ಸಾಸ್ರೇ ಜೃಮ್ಭಣಂ ಗೌರವಂ ಕ್ಲಮಃ |
ಜ್ವಲನಾತಪವಾಯ್ವಮ್ಬುಭಕ್ತಿದ್ವೇಷಾವನಿಶ್ಚಿತೌ ||
ಅವಿಪಾಕಾಸ್ಯವೈರಸ್ಯಂ ಹಾನಿಶ್ಚ ಬಲವರ್ಣಯೋಃ |
ಶೀಲವೈಕೃತಮಲ್ಪಂ ಚ ಜ್ವರಲಕ್ಷಣಮಗ್ರಜಮ್ || (ಚ. 449)

ಜ್ವರದ ಪೂರ್ವ ರೂಪ

ಆಲಸ್ಯ, ಕಣ್ಣುಗಳಲ್ಲಿ ನೀರು ತುಂಬುವದು, ಆಕಳಿಕೆ, ಮೈಭಾರ, ಶ್ರಮ, ಬೆಂಕಿ-ಬಿಸಿಲು-ಗಾಳಿ-ನೀರುಗಳಲ್ಲಿ ನಿಶ್ಚಿತವಲ್ಲದ ಪ್ರೀತಿ ಮತ್ತು ದ್ವೇಷ (ಒಮ್ಮೆ ಹಿತ ಒಮ್ಮೆ ಅಹಿತ ಕಾಣುವದು), ಅಜೀರ್ಣ, ಬಾಯಿರುಚಿ ಕೆಡುವದು, ಬಲವರ್ಣಗಳ ಹಾನಿ, ಶೀಲ(ಸ್ವಭಾವ)ದಲ್ಲಿ ಅಲ್ಪವಾದ ವಿಕಾರ, ಇವು ಜ್ವರದ ಪೂರ್ವರೂಪ.

ಪರಾ ಮೈನೋವು, ರೋಮಾಂಚ, ಕಣ್ಣುಕತ್ತಲೆ, ಉಲ್ಲಾಸವಿಲ್ಲದಿರುವಿಕೆ, ಛಳಿ ಸಹ ಪೂರ್ವರೂಪದಲ್ಲಿ ಸೇರಿದ ವೆಂತಲೂ, ವಾತದಲ್ಲಿ ಆಕಳಿಕೆ, ಪಿತ್ತದಲ್ಲಿ ಕಣ್ಣುರಿ, ಮತ್ತು ಕಫದಲ್ಲಿ ಅನ್ನದ ರುಚಿ ಇಲ್ಲದಿರುವಿಕೆ, ಹೆಚ್ಚಾಗಿರುವ ದೆಂತಲೂ ಸು (ಪು 756) ಮೈ ಬಗ್ಗುವಿಕೆ, ಅತಿನಿದ್ರೆ, ಹಿತೋಪದೇಶದಲ್ಲಿ ಅಹಿತ, ಹುಳಿ-ಕಾರ-ಉಪ್ಪುಗಳಲ್ಲಿ ಪ್ರೀತಿ, ಸಿಹಿ ಭಕ್ಷ್ಯಗಳಲ್ಲಿಯೂ, ಬಾಲಕರಲ್ಲಿಯೂ ದ್ವೇಷ, ಬಾಯಾರಿಕೆ ಸಹ, ಪ್ರಾಗ್ರೂಪದಲ್ಲಿ ಸೇರಿದವೆಂತ ವಾ (ಪು 186-187)

4. ದೋಷೈಃ ಪೃಥಕ್ಸಮಸ್ತೈಶ್ಚ ದ್ವಂದ್ವೈರಾಗನ್ತುರೇವ ಚ |
ಅನೇಕಕಾರಣೋತ್ಪನ್ನಃ ಸ್ಮೃತಸ್ತ್ವಷ್ಟವಿಧೋ ಜ್ವರಃ || (ಸು. 755)

ಜ್ವರದ ವಿಧಗಳು.

ಅನೇಕ ಕಾರಣಗಳಿಂದ ಉತ್ಪನ್ನವಾಗುವ ಜ್ವರವು ವಾತಾದಿ ದೋಷಗಳಿಂದ ಪೃಥಕ್ ಮೂರು, ದ್ವಂದ್ವಗಳಾಗಿ ಮೂರು, ಮತ್ತು ಸನ್ನಿಪಾತ ಒಂದು, ಆಗನ್ತು ಒಂದು, ಹೀಗೆ ಎಂಟು ವಿಧ ಎಂತ ತಿಳಿಯುತ್ತಾರೆ.

ದ್ವಿವಿಧೋ ವಿಧಿಭೇದೇನ ಜ್ವರಃ ಶಾರೀರಮಾನಸಃ |
ಪುನಶ್ಚ ದ್ವಿವಿಧೋ ದೃಷ್ಟಃ ಸೌಮ್ಯಶ್ಚಾಗ್ನೇಯ ಏವ ಚ ||
ಅನ್ತರ್ವೇಗೋ ಬಹಿರ್ವೇಗೋ ದ್ವಿವಿಧಃ ಪುನರುಚ್ಯತೇ |
ಪ್ರಾಕೃತೋ ವೈಕೃತಶ್ಚೈವ ಸಾಧ್ಯಶ್ಚಾಸಾಧ್ಯ ಏವ ಚ ||
ಪುನಃ ಪಂಚವಿಧೋ ದೃಷ್ಟೋ ದೋಷಕಾಲಬಲಾಬಲಾತ್ |
ಸನ್ತತಃ ಸತತೋಽನ್ಯೇದ್ಯುಸ್ತೃತೀಯಕಚತುರ್ಥಕೌ |
ಪುನರಾಶ್ರಯಭೇದೇನ ಧಾತೂನಾಂ ಸಪ್ತಧಾ ಮತಃ |
ಭಿನ್ನಃ ಕಾರಣಭೇದೇನ ಪುನರಷ್ಟವಿಧೋ ಜ್ವರಃ || (ಚ. 449)

ಜ್ವರವು (ಚಿಕಿತ್ಸಾ)ವಿಧಿ ಭೇದದ ಮೇಲೆ ಶರೀರ ಸಂಬಂಧವಾದದ್ದು, ಮನಸ್ಸಂಬಂಧವಾದದ್ದು ಎಂತ ಎರಡು ವಿಧ; ಉಷ್ಣಜ್ವರ, ಶೀತಜ್ವರ ಎಂತ ಪುನಃ ಎರಡು ವಿಧ; ಹೊರಜ್ವರ, ಒಳಜ್ವರ, ಎಂತ ಪುನಃ ಎರಡು ವಿಧ; (ಪ್ರಕೃತಿಗೆ ಅನುಗುಣವಾದ) ಪ್ರಾಕೃತಜ್ವರ, ವೈಕೃತಜ್ವರ, ಎಂತ ಎರಡು ವಿಧ; ಸಾಧ್ಯ, ಅಸಾಧ್ಯ ಎಂತ ಎರಡು ವಿಧ; ಪುನಃ ದೋಷಕಾಲದ ಬಲಾಬಲದ ಮೇಲೆ ಸಂತತ, ಸತತ, ಅನ್ಯೇದ್ಯುಷ್ಕ, ತೃತೀಯಕ, ಚತುರ್ಥಕ ಎಂತ ಐದು ವಿಧ; ಪುನಃ (ರಸಾದಿ) ಧಾತುಗಳಲ್ಲಿ ಜ್ವರವು ಆಶ್ರಯಿಸಿಕೊಂಡ ಸ್ಥಾನದ ಭೇದದ ಮೇಲೆ ಏಳು ವಿಧ;

ಪುನಃ ಕಾರಣಗಳ (ದೋಷಗಳ) ಭೇದದ ಮೇಲೆ (ಹಿಂದೆ ವಿವರಿಸಿದಂತೆ) ಎಂಟು ವಿಧ ಎಂತ ತಿಳಿದಿದ್ದಾರೆ.

ಷರಾ ಸಾಮ, ನಿರಾಮ, ಎಂತ ಎರಡು ವಿಧ, ಎಂಬ ವಿಭಾಗ ಸಹ ಉಂಟೆಂತ ವಾ. (ಪು. 190)

5. ಶಾರೀರವಮಾನಸ ಭೇದ.

ಶಾರೀರೋ ಜಾಯತೇ ಪೂರ್ವಂ ದೇಹೇ ಮನಸಿ ಮಾನಸಃ ||
(ಚ. 419)

ಶಾರೀರಜ್ವರವು ದೇಹದಲ್ಲಿ ಮತ್ತು ಮಾನಸಿಕಜ್ವರವು ಮನಸ್ಸಿನಲ್ಲಿ ಆರಂಭಿಸುತ್ತದೆ.

6. ಉಷ್ಣಶೀತ ಭೇದ

ವಾತಪಿತ್ತಾತ್ಮಕಃ ಶೀತಮುಷ್ಣಂ ವಾತಕಫಾತ್ಮಕಃ |
ಇಚ್ಛತ್ಯುಭಯಮೇತತ್ತು ಜ್ವರೋ ವ್ಯಾಮಿಶ್ರಲಕ್ಷಣಃ ||
ಯೋಗವಾಹಃ ಪರಂ ವಾಯುಃ ಸಂಯೋಗಾದುಭಯಾರ್ಥಕೃತ್ |
ದಾಹಕೃತ್ತೇಜಸಾ ಯುಕ್ತಃ ಶೀತಕೃತ್ ಸೋಮಸಂಶ್ರಯಾತ್ || (ಚ. 449)

ವಾತಪಿತ್ತಜ್ವರದಲ್ಲಿ ಶೀತದ ಅಪೇಕ್ಷೆ, ವಾತಕಫಜ್ವರದಲ್ಲಿ ಉಷ್ಣದ ಅಪೇಕ್ಷೆ, ಮಿಶ್ರಲಕ್ಷಣವುಳ್ಳ ಜ್ವರದಲ್ಲಿ ಎರಡರಲ್ಲಿಯೂ ಅಪೇಕ್ಷೆಯುಂಟಾಗುತ್ತದೆ. ವಾಯುವು ಶ್ರೇಷ್ಠನಾದ ಯೋಗವಾಹಿ (ಸಂಗಾತದವನ ಕೆಲಸ ಮಾಡಿಸತಕ್ಕವ); ಅಗ್ನಿ(ಪಿತ್ತ)ಯೊಂದಿಗೆ ಕೂಡಿದರೆ ಉರಿಯನ್ನೂ, ಸೋಮ(ಕಫ)ದೊಡನೆ ಕೂಡಿಕೊಂಡರೆ ಶೀತವನ್ನೂ, ಹೀಗೆ ಸಂಯೋಗದಿಂದ ಆ ಎರಡು ಕರ್ಮಗಳನ್ನು ಮಾಡುತ್ತಾನೆ.

7. ಅಂತರ್ವೇಗ ಬಹಿರ್ವೇಗಗಳ ಭೇದ

ಅನ್ತರ್ದಾಹೋಽಧಿಕಸ್ತೃಷ್ಣಾ ಪ್ರಲಾಪಃ ಶ್ವಸನಂ ಭ್ರಮಃ |
ಸನ್ಧ್ಯಸ್ಥಿಶೂಲಮಸ್ವೇದೋ ದೋಷವರ್ಚೋವಿನಿಗ್ರಹಃ ||
ಅನ್ತರ್ವೇಗಸ್ಯ ಲಿಂಗಾನಿ ಜ್ವರಸ್ಯೈತಾನಿ ಲಕ್ಷಯೇತ್ |
ಸನ್ತಾಪೋಽಭ್ಯಧಿಕೋ ಬಾಹ್ಯಸ್ತೃಷ್ಣಾದೀನಾಂ ಚ ಮಾರ್ದವಮ್ ||
ಬಹಿರ್ವೇಗಸ್ಯ ಲಿಂಗಾನಿ ಸುಖಸಾಧ್ಯತ್ವಮೇವ ಚ || (ಚ. 449-450)

(ಹೊರಗಿನದಕ್ಕಿಂತಲೂ) ಅಧಿಕವಾಗಿ ಒಳಗೆ ಜ್ವಾಲೆ, ಬಾಯಾರಿಕೆ, ಹರಟುವದು, ಉಬ್ಬಸ, ತಲೆತಿರುಕು, ಸಂದುಗಳಲ್ಲಿಯೂ, ಎಲುಬುಗಳಲ್ಲಿಯೂ ನೋವು, ಬೆವರಿಲ್ಲದಿರುವಿಕೆ, ದೋಷ ಮತ್ತು ಮಲ ಬದ್ಧವಾಗಿರುವದು, ಇವು ಅಂತರ್ವೇಗವುಳ್ಳ ಜ್ವರದ ಲಕ್ಷಣಗಳು; (ಒಳಗಿನದಕ್ಕಿಂತ) ಹೊರಗೆ ಅಧಿಕವಾದ ಬಿಸಿ, ಬಾಯಾರಿಕೆ ಮೊದಲಾದವುಗಳು ಮೃದುವಾಗಿರುವದು, ಮತ್ತು ಸುಲಭಸಾಧ್ಯವಾಗಿರುವಿಕೆ, ಇವು ಬಹಿರ್ವೇಗವುಳ್ಳ ಜ್ವರದ ಲಕ್ಷಣಗಳು.

8. ಪ್ರಾಕೃತ ವೈಕೃತಗಳ ಭೇದ

ಪ್ರಾಕೃತಃ ಸುಖಸಾಧ್ಯಸ್ತು ವಸನ್ತಶರದುದ್ಭವಃ |
ಕಾಲಪ್ರಕೃತಿಮುದ್ದಿಶ್ಯ ಪ್ರೋಚ್ಯತೇ ಪ್ರಾಕೃತೋ ಜ್ವರಃ ||
ಉಷ್ಣಮುಷ್ಣೇನ ಸಂವೃದ್ಧಂ ಪಿತ್ತಂ ಶರದಿ ಕುಪ್ಯತಿ |
ಚಿತಃ ಶೀತೇ ಕಫಶ್ಚೈವಂ ವಸನ್ತೇ ಸಮುದೀರ್ಯತೇ || * * *
ಪ್ರಾಯೇಣಾನಿಲಜೋ ದುಃಖಃ ಕಾಲೇಷ್ವನ್ಯೇಷು ವೈಕೃತಃ || (ಚ. 450)

ಜ್ವರವು ಪ್ರಾಕೃತ ಎಂಬದು ಕಾಲಪ್ರಕೃತಿಯ ಮೇಲೆ; ವಸಂತ ಮತ್ತು ಶರದೃತುಗಳಲ್ಲಿ ಉಂಟಾಗುವ ಪ್ರಾಕೃತಜ್ವರವು ಸುಲಭವಾಗಿ ವಾಸಿಯಾಗುತ್ತದೆ. ಇತರ ಕಾಲಗಳಲ್ಲಿ ಪ್ರಕೃತಿಗೆ ವಿರೋಧವಾಗಿ ಉಂಟಾಗುವ ಜ್ವರವು ಮತ್ತು ಬಹಳ ಮಟ್ಟಿಗೆ (ವರ್ಷಋತುವಿನಲ್ಲಿ) ವಾತಪ್ರಕೋಪದಿಂದುಂಟಾಗುವ (ಪ್ರಾಕೃತ)ಜ್ವರವು ವಾಸಿಮಾಡುವದಕ್ಕೆ ಕಷ್ಟವಾದವು. (ವರ್ಷಋತುವಿನ ಹುಳಿವಿಪಾಕದಿಂದ) ವೃದ್ಧಿಹೊಂದಿದ ಉಷ್ಣಸ್ವಭಾವದ ಪಿತ್ತವು ಶರದೃತುವಿನಲ್ಲಿ (ಬಿಸಿಲಿನ) ಉಷ್ಣದಿಂದ ಕೋಪಗೊಳ್ಳುತ್ತದೆ. ಹಾಗೆಯೇ ಶೀತಕಾಲದಲ್ಲಿ (ಹೇಮಂತ ಋತುವಿನಲ್ಲಿ) ಕೂಡಿದಂಥ ಕಫವು ವಸಂತಋತುವಿನಲ್ಲಿ ಕೆದರುತ್ತದೆ.

ವರಾ 1ನೇ ಭಾಗದ VIII, 9—10 ಸಂಖ್ಯೆಗಳನ್ನೂ, ಮುಂದೆ ಚಿಕಿತ್ಸೆಯನ್ನೂ (117ನೇ ಸಂಖ್ಯೆ) ನೋಡಿ

9. ಬಲವತ್ಸ್ವಲ್ಪದೋಷೇಷು ಜ್ವರಃ ಸಾಧ್ಯೋ ಽನುಪದ್ರವಃ ।
ಹೇತುಭಿರ್ಬಹುಭಿರ್ಜಾತೋ ಬಲಿಭಿರ್ಬಹುಲಕ್ಷಣಃ ॥
(ಸಾಧ್ಯಾಸಾಧ್ಯ ಲಕ್ಷಣಗಳು) ಜ್ವರಃ ಪ್ರಾಣಾನ್ತಕೃದ್ಯಶ್ಚ ಶೀಘ್ರಮಿನ್ದ್ರಿಯನಾಶನಃ ।
ಸಪ್ತಾಹಾದ್ವಾ ದಶಾಹಾದ್ವಾ ದ್ವಾದಶಾಹಾತ್ತಥೈವ ಚ ॥
ಸಪ್ರಲಾಪಭ್ರಮಶ್ವಾಸಃ ತೀಕ್ಷ್ಣೋ ಹನ್ಯಾಜ್ಜ್ವರೋ ನರಮ್ ।
ಜ್ವರಃ ಕ್ಷೀಣಸ್ಯ ಶೂನಸ್ಯ ಗಂಭೀರೋ ದೈರ್ಘ್ಯರಾತ್ರಿಕಃ ॥
ಅಸಾಧ್ಯೋ ಬಲವಾನ್ ಯಶ್ಚ ಕೇಶಸೀಮನ್ತಕೃಜ್ಜ್ವರಃ ॥
(ಚ. 450-51)

ರೋಗಿಗಳು ಬಲವಂತರಾಗಿಯೂ, ದೋಷಗಳು ಅಲ್ಪವಾಗಿಯೂ, ಜ್ವರದೊಂದಿಗೆ ಉಪದ್ರವಗಳು ಕೂಡಿಕೊಳ್ಳದೆಯೂ, ಇರುವ ಸಂಗತಿಯಲ್ಲಿ ಜ್ವರವು ಸಾಧ್ಯ. ಅನೇಕ ಬಲವಂತವಾದ ದೋಷಗಳಿಂದ ಉಂಟಾಗಿ, ಬಹಳ ಲಕ್ಷಣಗಳು ಕೂಡಿಕೊಂಡ ಜ್ವರವೂ, ಇಂದ್ರಿಯಗಳ ಶಕ್ತಿಯನ್ನು ಶೀಘ್ರವಾಗಿ ನಾಶಮಾಡುವ ಜ್ವರವೂ, ಪ್ರಾಣವನ್ನು ಅಂತ್ಯಮಾಡುವವು. ಪ್ರಲಾಪ, ಭ್ರಮ ಮತ್ತು ಉಬ್ಬಸವುಳ್ಳ ಕಠಿಣವಾದ ಜ್ವರವು ಮನುಷ್ಯನನ್ನು (ವಾತದ್ದಾದರೆ) ಏಳು ದಿನಗಳಲ್ಲಿ, ಅಥವಾ (ಪಿತ್ತದ್ದಾದರೆ) ಹತ್ತು ದಿನಗಳಲ್ಲಿ, ಅಥವಾ (ಕಫದ್ದಾದರೆ) ಹನ್ನೆರಡು ದಿನಗಳಲ್ಲಿ, ಕೊಲ್ಲುವದು. ಕ್ಷೀಣನಾಗಿ, ಮೈಬಾತ(ಊದಿಕೊಂಡ)ವನಿಗೆ ದೀರ್ಘಕಾಲ ಬಿಡದೆ ಬರುವ ಗಂಭೀರವಾದ (ಅಂತರ್ವೇಗವುಳ್ಳ) ಜ್ವರವೂ, ತಲೆಕೂದಲುಗಳನ್ನು ಬಕ್ತಲೆಯಂತೆ ವಿಭಾಗಮಾಡುವಂಥ ಬಲವಾದ ಜ್ವರವೂ, ಅಸಾಧ್ಯವಾಗಿರುತ್ತವೆ.

ವರಾ 10ನೇ ಸಂಖ್ಯೆಯಡಿಯ ವರಾ ನೋಡಿ

10. ಜ್ವರಃ ಪಂಚವಿಧಃ ಪ್ರೋಕ್ತೋ ಮಲಕಾಲಬಲಾಬಲಾತ್ ।
ಪ್ರಾಯಶಃ ಸನ್ನಿಪಾತೇನ ಭೂಯಸಾ ತೂಪದಿಶ್ಯತೇ ॥
(ಸಂತತಾದಿ ಪಂಚವಿಧ ಜ್ವರಗಳಲ್ಲಿ ಸಂತತ) ಸನ್ತತಃ ಸತತೋ ಽನ್ಯೇದ್ಯುಸ್ತೃತೀಯಕಚತುರ್ಥಕೌ ।
ಧಾತುಮೂತ್ರಶಕೃದ್ವಾಹಿಸ್ರೋತಸಾಂ ವ್ಯಾಪಿನೋ ಮಲಾಃ ॥
ತಾಪಯನ್ತಸ್ತನುಂ ಸರ್ವಾಂ ತುಲ್ಯದೂಷ್ಯಾದಿವರ್ಧಿತಾಃ ।
ಬಲಿನೋ ಗುರವಸ್ತಬ್ಧಾ ವಿಶೇಷೇಣ ರಸಾಶ್ರಿತಾಃ ॥

ಸನ್ತತಂ ನಿಷ್ಪ್ರತಿದ್ವಂದ್ವಾ ಜ್ವರಂ ಕುರ್ಯುಃ ಸುದುಸ್ಸಹಮ್ ।
ಮಲಂ ಜ್ವರೋಷ್ಮಾ ಧಾತೂನ್ ವಾ ಸ ಶೀಘ್ರಂ ಕ್ಷಪಯೇತ್ತತಃ ।
ಸರ್ವಾಕಾರಂ ರಸಾದೀನಾಂ ಶುದ್ಧ್ಯಾಽಶುದ್ಧ್ಯಾಽಪಿ ವಾ ಕ್ರಮಾತ್ ।
ವಾತಪಿತ್ತಕಫೈಃ ಸಪ್ತದಶದ್ವಾದಶವಾಸರಾನ್ ॥
ಪ್ರಾಯೋಽನುಯಾತಿ ಮರ್ಯಾದಾಂ ಮೋಕ್ಷಾಯ ಚ ವಧಾಯ ಚ ।
ಇತ್ಯಗ್ನಿವೇಶಸ್ಯ ಮತಂ ಹಾರೀತಸ್ಯ ಪುನಃ ಸ್ಮೃತಿಃ ।
ದ್ವಿಗುಣಾ ಸಪ್ತಮೀ ಯಾವನ್ನವಮ್ಯೇಕಾದಶೀ ತಥಾ ॥
ಏಷಾ ತ್ರಿದೋಷಮರ್ಯಾದಾ ಮೋಕ್ಷಾಯ ಚ ವಧಾಯ ಚ ।
ಶುದ್ಧ್ಯಶುದ್ಧೌ ಜ್ವರಃ ಕಾಲಂ ದೀರ್ಘಮಪ್ಯನುವರ್ತತೇ ॥ (ವಾ. 191)

ದೋಷಕಾಲದ ಬಲಾಬಲದ ಮೇಲೆ ಜ್ವರವು ಸಂತತ, ಸತತ, ಅನ್ಯೇದ್ಯುಷ್ಕ, ತೃತೀಯಕ ಮತ್ತು ಚತುರ್ಥಕ ಎಂತ ಐದು ವಿಧವಾಗಿ ಹೇಳಲ್ಪಟ್ಟದೆ. ಅವು ಹೆಚ್ಚು ಪಕ್ಷ ಸನ್ನಿಪಾತದಿಂದ; ಆದರೆ ಯಾವ ದೋಷವು ಅಧಿಕವಾಗಿರುತ್ತದೋ ಅದರ ಲಕ್ಷ್ಯೆಯಿಂದ ಉಪದೇಶ ಮಾಡಲ್ಪಡುತ್ತದೆ. (ವಾತಾದಿ ಮೂರು) ದೋಷಗಳು (ರಸಾದಿ ಏಳು) ಧಾತುಗಳನ್ನೂ, ಮೂತ್ರವನ್ನು ಮತ್ತು ಮಲವನ್ನು ಸಾಗಿಸುವ ಸ್ರೋತಸ್ಸುಗಳನ್ನೂ ವ್ಯಾಪಿಸಿ, ಇಡೀ ಶರೀರವನ್ನು ಕಾಯಿಸುತ್ತಾ, ದೂಷ್ಯಾದಿ(ರಸಾದಿ ಧಾತುಗಳು ಮುಂತಾದವು)ಗಳ ಸಹಾಯದಿಂದ ವೃದ್ಧಿಗೊಂಡು, ಬಲವಂತವಾಗಿ, ಗುರುವಾಗಿ ಮತ್ತು ಸ್ತಬ್ಧವಾಗಿ ಮತ್ತು ಎದುರಿಲ್ಲದೆ, ಹೆಚ್ಚಾಗಿ ರಸಧಾತುವನ್ನಾಶ್ರಯಿಸಿಕೊಂಡಿದ್ದು, ಸಹಿಸಲಿಕ್ಕೆ ಬಹು ಕಷ್ಟವಾದ ಸಂತತ ಜ್ವರವನ್ನುಂಟುಮಾಡುವವು. ಆ ಜ್ವರದ ಬಿಸಿಯು ಮಲವನ್ನು (ಮಲಮೂತ್ರಗಳನ್ನು) ಆಗಲಿ ಧಾತುಗಳನ್ನು ಆಗಲಿ ಬೇಗನೆ ಸರ್ವ ವಿಧದಿಂದ ಕೆಡಿಸುತ್ತದೆ ರಸಾದಿಗಳು (ವಾತಾದಿ ಮೂರು ದೋಷಗಳು, ರಸಾದಿ ಸಪ್ತಧಾತುಗಳು, ಮಲ, ಮೂತ್ರ, ಈ ಹನ್ನೆರಡು ಆಶ್ರಯಗಳು) ಶುದ್ಧವಾಗಿ ಜ್ವರದಿಂದ ವಿಮೋಚನ ಹೊಂದುವದಕ್ಕೆ, ಅಥವಾ ಅಶುದ್ಧವಾಗಿ ಮರಣ ಸಂಭವಿಸುವದಕ್ಕೆ, ಅವಧಿಯಾಗಿ ವಾತದ್ದಾದರೆ ಏಳು ದಿನ, ಪಿತ್ತದ್ದಾದರೆ ಹತ್ತು ದಿನ, ಕಫದ್ದಾದರೆ ಹನ್ನೆರಡು ದಿನ, ಬಹುಪಕ್ಷ ಜ್ವರವು ಬಿಡದೆ ಬರುತ್ತದೆ. ಇದು ಅಗ್ನಿವೇಶನ ಮತ. ಹಾರೀತನ ಮತ ಪ್ರಕಾರ ಏಳು, ಒಂಭತ್ತು, ಹನ್ನೊಂದು, ಇವುಗಳ ಎರಡರಷ್ಟು (ಹದಿನಾಲ್ಕು, ಹದಿನೆಂಟು ಮತ್ತು ಇಪ್ಪತ್ತೆರಡು ದಿನಗಳ) ಕಾಲ ವಿಮೋಚನಕ್ಕಾಗಲಿ ವಧೆಗಾಗಲಿ ತ್ರಿದೋಷದ ಮೇರೆಯಾಗಿರುತ್ತದೆ. (ರಸಾದಿ ಹನ್ನೆರಡು ಆಶ್ರಯಸ್ಥಾನಗಳಲ್ಲಿ) ಕೆಲವು ಶುದ್ಧವಾಗಿ ಕೆಲವು ಶುದ್ಧವಾಗದೆ ಇದ್ದಲ್ಲಿ, ಜ್ವರವು ದೀರ್ಘಕಾಲದ ವರೆಗೂ ಹಿಡಿದುಕೊಂಡಿರುತ್ತದೆ.

ಷರಾ ಈ ವರ್ಣನದಲ್ಲಿ ಹಾರೀತನ ಮತ ಎಂಬ ಅಂಶ ಬಿಟ್ಟು ಮಿಕ್ಕದ್ದೆಲ್ಲವು ಚರಕನ ಮತವನ್ನನುಸರಿಸಿ ಬರೆಯಲ್ಪಟ್ಟಂಥಾದ್ದು ಜ್ವರವು ಐದು ವಿಧ ಎಂತ ಹೇಳಿದರಿಂದ ಬಿಡದೆ ಬರುವ ಸ್ವಭಾವದ ಎಲ್ಲಾ ಜ್ವರಗಳು ಸಂತತದಲ್ಲಿ ಸೇರಿದವೆಂತ ತೋರಿದರೂ, ಅದರ ಸಂಪ್ರಾಪ್ತಿ, ಲಕ್ಷಣ, ಮುಂತಾದ ವರ್ಣನದಿಂದ (ದೋಷಕಾಲ ಬಲಾಬಲಾತ್) ಜ್ವರದ ಕಾಲದಲ್ಲಿ ಹೆಚ್ಚು ಕಡಿಮೆ ತೋರುವ ಜ್ವರ ವಿಶೇಷದ ವಿಭಾಗದಲ್ಲಿ ಸಂತತವು ಒಂದನೇದೆಂತಲೇ ಅರ್ಥಮಾಡಬೇಕಾಗುತ್ತದೆ ಶಾರ್ಙ್ಗಧರಾದಿ ಕಾಲಾಂತರದ ಅನೇಕ ಗ್ರಂಥಗಳು ವಿಷಮಜ್ವರವು ಐದು ವಿಧ, ಅವುಗಳೊಳಗೆ ಸಂತತ ಒಂದನೇದು, ಎಂತ ಹೇಳುತ್ತವೆ ಆ ಅಭಿಪ್ರಾಯವು ನಿರಾಕ್ಷೇಪವಾದದ್ದಲ್ಲ, ಆದರೆ ಅದನ್ನು ಕುರಿತು ಇಲ್ಲಿ ವಿಮರ್ಶಿಸುವದು ಉಪಯುಕ್ತವಾಗಿ ಕಾಣುವದಿಲ್ಲ ಚರಕನು ಸಂತತ ಜ್ವರವನ್ನು ವರ್ಣಿಸುವದಕ್ಕೆ ಮೊದಲೇ, ಅಸಾಧ್ಯ ಜ್ವರಗಳನ್ನು ವರ್ಣಿಸುವಲ್ಲಿ ಸಾಮಾನ್ಯವಾಗಿ ಪ್ರಲಾಪ, ಭ್ರಮೆ ಮತ್ತು ಶ್ವಾಸಯುಕ್ತವಾದ ತೀಕ್ಷ್ಣ ಜ್ವರವು ಮನುಷ್ಯನನ್ನು ಏಳು, ಹತ್ತು, ಅಥವಾ ಹನ್ನೆರಡು ದಿನಗಳಲ್ಲಿ ಕೊಲ್ಲುವದೆಂತ ಹೇಳಿದ್ದಾನೆ (ಹಿಂದಿನ 9ನೇ ಸಂಖ್ಯೆ ನೋಡಿ) ಈ ವಿಶೇಷ ಲಕ್ಷಣ ಸಾಧಾ

ರಣವಾದ ಸನ್ನಿಪಾತ ಜ್ವರಗಳಿಗೆ ಹೇಳಲ್ಪಟ್ಟದ್ದು ಚರಕನ ಸಂಹಿತೆಯಲ್ಲಿ ಕಾಣುವದಿಲ್ಲ, ಮತ್ತು ಏಳು, ಹತ್ತು, ಹನ್ನೆರಡು ದಿನಗಳ ಕಾಲದ ವರೆಗೆ ಜ್ವರವು ಬಿಡದೆ ಬಂದು, ವಾಸಿಯಾಗುವ ಲಕ್ಷಣ ಸಂತತಕ್ಕೆ ಮಾತ್ರ ಹೇಳಲ್ಪಟ್ಟದೆ ಇದರಿಂದ ಸಂತತ ಜ್ವರವು ಈಗ ಟ್ಯಾಫೈಡ್ ಫಿವರ್ (typhoid fever) ಎಂತ ಪಾಶ್ಚಾತ್ಯರು ಹೇಳುವ ತ್ರಿದೋಷಜನ್ಯವಾದ ವಾಯಿದೆ ಜ್ವರ ಎಂತಲೂ, ಅದು ಇತರ ಸಾಧಾರಣವಾದ ದೋಷಜನ್ಯ ಜ್ವರಗಳಿಂದ ಭಿನ್ನವಾದದ್ದೆಂತಲೂ ಚರಕನು ತಿಳಿದಿದ್ದ ಎಂತ ಭಾಸವಾಗುತ್ತದೆ ಸುಶ್ರುತನು ಏಳು, ಹತ್ತು, ಅಥವಾ ಹನ್ನೆರಡು ದಿನಗಳ ಪರ್ಯಂತ ಯಾವ ಜ್ವರವು ಬಿಡದೆ ಸರಣಿಯಾಗಿ ಬರುತ್ತದೋ ಅದು ಸಂತತ ಜ್ವರ ಎಂತ ವರ್ಣಿಸಿದ್ದಾನಲ್ಲದೆ, ಆ ಅವಧಿಯೊಳಗೆ ಅದು ರೋಗಿಯನ್ನು ಕೊಲ್ಲಬಹುದೆಂತ ಹೇಳಲಿಲ್ಲ. ಆದರೆ ತ್ರಿದೋಷಜ ಜ್ವರಗಳ ವರ್ಣನಾವಸರದಲ್ಲಿ ಜ್ವರವು ಏಳನೇ, ಹತ್ತನೇ, ಅಥವಾ ಹನ್ನೆರಡನೇ ದಿನದಲ್ಲಿ (ದಿನದೊಳಗೆ ಅಲ್ಲ) ಪುನಃ ಹೆಚ್ಚು ಘೋರವಾಗಿ, ರೋಗಿಯನ್ನು ಕೊಲ್ಲುತ್ತದೆ, ಅಥವಾ ಶಾಂತಿಯನ್ನು ಹೊಂದುತ್ತದೆಂತ ಹೇಳಿದ್ದಾನೆ. ಇದರಿಂದ ಟ್ಯಾಫೈಡ್ ಜ್ವರವು ಸಾಧಾರಣವಾದ ತ್ರಿದೋಷಜನ್ಯ ಜ್ವರಗಳೊಳಗೆ ಸೇರಿದ್ದು ಮತ್ತು ಸಂತತ ಜ್ವರ ಎಂಬದು ಬೇರೆ ರಸರಕ್ತಾಶ್ರಿತ ಏಕದೋಷಜನ್ಯಜ್ವರ ಎಂತ ಸುಶ್ರುತನು ತಿಳಿದಿದ್ದನೆಂತ ಕಾಣುತ್ತದೆ ಈ ಸುಶ್ರುತನ ಮತವನ್ನಾಧರಿಸಿ, ಸಂತತ ಜ್ವರವು ಏಕದೋಷಜವಾದ್ದರಿಂದಲೂ, ಅದರಿಂದುಂಟಾಗುವ ದುರ್ಬಲತೆಯು ಸ್ವಲ್ಪವಾದ್ದರಿಂದಲೂ, ಅದು ಸುಖಸಾಧ್ಯ ಎಂತ ಕೀರ್ತಿಗೊಂಡದೆ ಎಂತ ಕೆಲವು ಗ್ರಂಥಕಾರರು ಬರೆದಿರುತ್ತಾರೆ (ನಿ ಸಂ. ವ್ಯಾ 571) ಆದರೆ ಸಂತತಕ್ಕೆ ಆಶ್ರಯಸ್ಥಾನಗಳು ಧಾತ್ವಾದಿ ಹನ್ನೆರಡು ಎಂತಲೂ, ಕಾಲ ಮತ್ತು ಪ್ರಕೃತಿ ಸಹ ದೋಷಗಳಿಗೆ ಸಹಾಯಕರವಾಗಿಯೇ ಇರುತ್ತವೆಂತಲೂ, ಆದ್ದರಿಂದ ಆ ಜ್ವರವು ತೀಘ್ರಕಾರಿ ಮತ್ತು ಸಹಿಸಲಿಕ್ಕೆ ಬಹಳ ಕಷ್ಟವಾದ್ದೆಂತಲೂ ಚ ನು ಸ್ಪಷ್ಟವಾಗಿ ಹೇಳಿದ್ದಾನೆ ಸಂತತಾದಿ ಐದು ವಿಧವಾದ ಜ್ವರವು ಹೆಚ್ಚಾಗಿ ಸನ್ನಿಪಾತದ (ತ್ರಿದೋಷದ) ಲಕ್ಷಣ ಯುಕ್ತವಾಗಿರುವದು ಕಂಡಾಗ್ಯೂ, ಸನ್ನಿಪಾತದಲ್ಲಿ ಯಾವ ದೋಷವು ಹೆಚ್ಚಾಗಿ ಕಾಣುತ್ತದೊ ಅದೇ ಆ ಜ್ವರಕ್ಕೆ ಕಾರಣ ಎಂತ ಪ್ರಸಿದ್ಧ ಎಂತಲೂ, ಋತುವಿನ, ಅಹೋರಾತ್ರಿಯ, ದೋಷದ ಮತ್ತು ಮನಸ್ಸಿನ ಬಲಾಬಲದ ಮೇಲೂ, ಕರ್ಮವಿಪಾಕದಿಂದಲೂ, ಜ್ವರವು ಆಯಾ ಕಾಲಭೇದವನ್ನು ಹೊಂದುತ್ತದೆ, ಅಂದರೆ ಒಂದು ವಿಧವಾಗಿ ಆರಂಭಿಸಿದ ಜ್ವರ ಇನ್ನೊಂದು ವಿಧವಾಗುತ್ತದೆ ಎಂತಲೂ, ಚರಕನು ಹೇಳಿದ್ದಾನೆ (ಪು 452). ಹದಿಮೂರು ವಿಧವಾದ ಸನ್ನಿಪಾತ ಜ್ವರಗಳ ವಿಮೋಚನಕ್ಕೆ ಪರಮಾವಧಿಕಾಲವನ್ನು ಬೇರೆ ಬೇರೆಯಾಗಿ ವರ್ಣಿಸಿದ್ದು ಕಾಣುತ್ತದೆ (80ನೇ ಸಂಖ್ಯೆ ನೋಡಿ) ಅವುಗಳೊಳಗೆ ಸಂತತ ಎಂಬ ಹೆಸರಿನದು ಇರುವದಿಲ್ಲ ವಾಯಿದೆ ಜ್ವರದ ಲಕ್ಷಣಗಳನ್ನು ಬಹಳವಾಗಿ ಹೋಲುವ ವಿಷಮಜ್ವರ (malarial fever) ಉಂಟು, ಮತ್ತು ಇವೆರಡರ ಭೇದವನ್ನು ಖಂಡಿತವಾಗಿ ತಿಳಿಯಲು ರೋಗಿಯ ರಕ್ತಾದಿಗಳಲ್ಲಿ ಕಾಣುವ ಅಣುಜೀವಿಗಳ (germs) ಶೋಧನೆ ಅಗತ್ಯ, ಎಂತ ಪಾಶ್ಚಾತ್ಯ ವೈದ್ಯ ಗ್ರಂಥಗಳು ಹೇಳುತ್ತವೆ (ಈ ಅಧ್ಯಾಯದ ಕೊನೆಯಲ್ಲಿ ಬರೆದ ಪ್ರಕರಣಾಂತ ಟಿಪ್ಪಣಿಯನ್ನು ನೋಡಿ) ಇದನ್ನೆಲ್ಲಾ ಆಲೋಚಿಸಿದಲ್ಲಿ ರಸಧಾತುವನ್ನು ಮಾತ್ರ ಆಶ್ರಯಿಸಿಕೊಂಡಿರುವ ಸಂತತ ಜ್ವರವು ವಿಷಮ (malaria) ಜ್ವರಗಳಿಗೆ ಸೇರಿದ್ದೆಂತಲೂ, ಧಾತ್ವಾದಿ ಹನ್ನೆರಡು ಸ್ಥಾನಗಳನ್ನು ಆಶ್ರಯಮಾಡಿಕೊಂಡ ಜ್ವರವು ವಾಯಿದೆಜ್ವರ ಎಂತಲೂ, ತೋರುತ್ತದೆ

11. ಅಹೋರಾತ್ರೇ ಸತತಕೋ ದ್ವೌ ಕಾಲಾವನುವರ್ತತೇ |
ಅನ್ಯೇದ್ಯುಷ್ಕಸ್ತ್ವಹೋರಾತ್ರಾದೇಕಕಾಲಂ ಪ್ರವರ್ತತೇ ||
ತೃತೀಯಕಸ್ತೃತೀಯೇಽಹ್ನಿ ಚತುರ್ಥೇಽಹ್ನಿ ಚತುರ್ಥಕಃ ||

ಸತತಾದಿ ಜ್ವರಗಳ ಲಕ್ಷಣಭೇದ

(ಸು. 759)

(ಜ್ವರ ಹಗಲು ಬಂದು ಬಿಟ್ಟು, ಪುನಃ ರಾತ್ರಿ ಬಂದು ಬಿಡುವ, ಅಥವಾ) ಒಂದು ಹಗಲೂ ರಾತ್ರಿಯ ದಿನದಲ್ಲಿ ಎರಡು ಸರ್ತಿ ಬರುವ ಜ್ವರಕ್ಕೆ 'ಸತತಕ' ಎಂತಲೂ, (ಹಗಲು ಪೂರಾ ಬಿಟ್ಟು ರಾತ್ರಿ, ಅಥವಾ ರಾತ್ರಿ ಪೂರಾ ಬಿಟ್ಟು ಹಗಲು, ಹೀಗೆ) ಒಂದು ಹಗಲೂರಾತ್ರಿ ಕೂಡಿದ ದಿನದಲ್ಲಿ ಒಂದು ಸರ್ತಿ ಬರುವ ಜ್ವರಕ್ಕೆ 'ಅನ್ಯೇದ್ಯುಷ್ಕ' ಎಂತಲೂ, ಮೂರನೇ ದಿನ (ಅಂದರೆ ಮಧ್ಯೇ ಒಂದು ದಿನ ಬಿಟ್ಟು) ಬರುವ ಜ್ವರಕ್ಕೆ 'ತೃತೀಯಕ' ಎಂತಲೂ, ಮತ್ತು ನಾಲ್ಕನೇ ದಿನ (ಅಂದರೆ ಮಧ್ಯೇ ಎರಡು ದಿನ ಬಿಟ್ಟು) ಬರುವ ಜ್ವರಕ್ಕೆ 'ಚತುರ್ಥಕ' ಎಂತಲೂ ಹೆಸರು.

12. ಕಫಸ್ಥಾನೇಷು ವಾ ದೋಷಸ್ತಿಷ್ಠನ್ ದ್ವಿತ್ರಿಚತುರ್ಷು ವಾ |
ವಿಪರ್ಯಯಾಖ್ಯಾನ್ ಕುರುತೇ ವಿಷಮಾನ್ ಕೃಚ್ಛ್ರಸಾಧನಾನ್ ||

ವಿಷಮ ವಿಪರೀತ ಜ್ವರಗಳು.

(ಸು. 758)

ಕಫಸ್ಥಾನಗಳೊಳಗೆ (1ನೇ ಭಾಗದ V, 24-25 ನೋಡಿ) ಎರಡು, ಮೂರು, ನಾಲ್ಕ ರಲ್ಲಿ ದೋಷವು ನಿಂತು, ವಾಸಿಮಾಡುವದಕ್ಕೆ ಕಷ್ಟವಾದ ವಿಪರ್ಯಯ (ವಿಪರೀತ) ಎಂಬ ವಿಷಮಜ್ವರಗಳನ್ನು ಉಂಟುಮಾಡುತ್ತದೆ.

ಷರಾ. ದೋಷವು ಕಫಸ್ಥಾನಗಳೊಳಗೆ ಶಿರಸ್ಸಿನಿಂದ ಕಂಠಕ್ಕೆ, ಕಂಠದಿಂದ ಹೃದಯಕ್ಕೆ, ಹೃದಯದಿಂದ ಆಮಾಶಯಕ್ಕೆ ಹೋಗುವದಕ್ಕೆ ಒಂದು ಹಗಲೂರಾತ್ರಿಕಾಲ ಬೇಕಾಗುವದರಿಂದ, ಹೃದಯದ ದೋಷವು ಆಮಾಶಯಕ್ಕೆ ಬಂದು ಜ್ವರವನ್ನುಂಟುಮಾಡುವ ದಿನ, ಕಂಠದಲ್ಲಿಯ ದೋಷವು ಹೃದಯಕ್ಕೆ ಮತ್ತು ಶಿರಸ್ಸಿನಲ್ಲಿಯ ದೋಷವು ಕಂಠಕ್ಕೆ ಬಂದು ನಿಂತು, ಮಾರಣೆ ದಿನ ಪುನಃ ಹೃದಯದಲ್ಲಿ ನಿಂತಿದ್ದ ದೋಷವು ಆಮಾಶಯಕ್ಕೆ ಬಂದು ಜ್ವರವನ್ನುಂಟುಮಾಡುತ್ತದೆ, ಆ ದಿನ ಕಂಠದಲ್ಲಿದ್ದ ದೋಷವು ಹೃದಯಕ್ಕೆ ಬರುತ್ತದೆ, ಅದು ಮೂರನೇ ದಿನ ಆಮಾಶಯಕ್ಕೆ ಬಂದು ಜ್ವರವನ್ನುಂಟುಮಾಡುತ್ತದೆ ಹೀಗೆ ಮೂರು ದಿನ ಜ್ವರ ತಪ್ಪದೆ ಬಂದು, ನಾಲ್ಕನೇ ದಿನ ಜ್ವರ ಇಲ್ಲದಿರುತ್ತದೆ ಇದು ಚಾತುರ್ಥಕ ವಿಪರ್ಯಯ. ಇದೇ ರೀತಿ ಮಧ್ಯ ಎರಡು ದಿನ ಜ್ವರ ಬಂದು, ಹಿಂದಿನ ಮುಂದಿನ ಒಂದೊಂದು ದಿನ ಜ್ವರವಿಲ್ಲದಿರುವದುಂಟು. ಅದು ತ್ರ್ಯಾಹಿಕ ವಿಪರ್ಯಯ ಹಾಗೆಯೇ ಅನ್ಯೇದ್ಯುಷ್ಕದಲ್ಲಿ ಒಂದು ರಾತ್ರಿ ಅಥವಾ ಒಂದು ಹಗಲು ಜ್ವರ ಬರುವದರ ಬದಲಾಗಿ ಇಡೀ ದಿನ ಜ್ವರ ಬಂದು, ಒಂದು ಅರ್ಧ ಹೊತ್ತು ಮಾತ್ರ ಬಿಡುವದುಂಟು ಅದು ಅನ್ಯೇದ್ಯುಷ್ಕ ವಿಪರ್ಯಯ ಆದರೆ ವಾಗ್ಭಟನ ಪ್ರಕಾರ ಎರಡು ದಿನ ತಪ್ಪದೆ ಜ್ವರ ಬಂದು ಒಂದು ದಿನ ಬಿಡುವಂಥಾದ್ದು ಚತುರ್ಥಕವಿಪರ್ಯಯ (ಪು 192) ಕೆಳಗಿನ 13ನೇ ಸಂಖ್ಯೆಯ ಅಡಿ ಷರಾ ನೋಡಿ

13. ಸಂತತಾದಿಜ್ವರಗಳಲ್ಲಿ ದೋಷಸ್ಥಾನ.

ಸನ್ತತಂ ರಸರಕ್ತಸ್ಥಃ ಸೋಽನ್ಯೇದ್ಯುಃ ಪಿಶಿತಾಶ್ರಿತಃ ।
ಮೇದೋಗತಸ್ತೃತೀಯೇಽಹ್ನಿ ತ್ವಸ್ಥಿಮಜ್ಜಗತಃ ಪುನಃ ॥
ಕುರ್ಯಾಚ್ಚಾತುರ್ಥಕಂ ಘೋರಮನ್ತಕಂ ರೋಗಸಂಕರಮ್ ।
ಕೇಚಿದ್ಭೂತಾಭಿಷಂಗೋತ್ಥಂ ಬ್ರುವತೇ ವಿಷಮಜ್ವರಮ್ ॥ (ಸು. 759)

ರಸರಕ್ತಗಳಲ್ಲಿ ನಿಂತ ದೋಷವು 'ಸಂತತ' ಜ್ವರವನ್ನೂ, ಮಾಂಸವನ್ನಾಶ್ರಯಿಸಿಕೊಂಡ ದೋಷವು 'ಅನ್ಯೇದ್ಯುಃ' ಎಂಬ ಜ್ವರವನ್ನೂ, ಮೇದಸ್ಸನ್ನು ಹೊಕ್ಕುಕೊಂಡ ದೋಷವು 'ತೃತೀಯಕ' ಜ್ವರವನ್ನೂ, ಎಲುಬುಮಜ್ಜೆಗಳನ್ನು ಆಶ್ರಯಿಸಿಕೊಂಡ ದೋಷವು ಕಠಿಣವಾದ, ಬಹು ರೋಗಗಳಿಂದ ಕೂಡಿಕೊಂಡ, ಮತ್ತು ಯಮರೂಪವಾದ 'ಚಾತುರ್ಥಕ' ಜ್ವರವನ್ನೂ, ಉಂಟುಮಾಡುತ್ತದೆ. ಕೆಲವರು ವಿಷಮಜ್ವರವು ಭೂತದ ಆವೇಶದಿಂದ ಉಂಟಾಗುವದೆಂತ ಹೇಳುತ್ತಾರೆ.

ಷರಾ ದೋಷವು ಸತತದಲ್ಲಿ ರಕ್ತಧಾತುವನ್ನು, ಅನ್ಯೇದ್ಯುಷ್ಕದಲ್ಲಿ ಮೇದೋವಾಹಿ ನಾಡಿಗಳನ್ನು, ತ್ರ್ಯಾಹಿಕದಲ್ಲಿ ಅಸ್ಥಿಯನ್ನು, ಚಾತುರ್ಥಕದಲ್ಲಿ ಮಜ್ಜೆಯನ್ನು, ಹೆಚ್ಚಾಗಿ ಆಶ್ರಯಿಸಿರುವದಾದರೂ, ರಕ್ತವನ್ನು ಕೂಡಿಕೊಂಡೇ ಅನ್ಯೇದ್ಯುಷ್ಕವನ್ನು, ಮಾಂಸದ ಸ್ರೋತಸ್ಸುಗಳನ್ನು ಅನುಸರಿಸಿಯೇ ತ್ರ್ಯಾಹಿಕವನ್ನು, ಮೇದಸ್ಸಿನ ಮಾರ್ಗವನ್ನು ಕೂಡಿಕೊಂಡೇ ಚಾತುರ್ಥಿಯನ್ನುಂಟುಮಾಡುತ್ತದೆಂತ ಚ. (ಪು 451-452) ವಾಗ್ಭಟನು ಸುಶ್ರುತನಂತೆ ಸತತದಲ್ಲಿ ರಕ್ತವೂ, ಅನ್ಯೇದ್ಯುಷ್ಕದಲ್ಲಿ ಮಾಂಸವೂ, ತ್ರ್ಯಾಹಿಕದಲ್ಲಿ ಮೇದಸ್ಸೂ, ದೋಷಕ್ಕೆ ಸ್ಥಾನ ಎಂತ ಹೇಳಿ, ಚಾತುರ್ಥಿಯಲ್ಲಿ ಮೇದಸ್ಸು, ಮಜ್ಜೆ, ಅಸ್ಥಿ, ಇವು ಮೂರರೊಳಗೆ ಒಂದು, ಮತ್ತು ಬೇರೆಯವರ ಪಕ್ಷದಲ್ಲಿ ಮಜ್ಜೆ ಒಂದೇ, ದೋಷದ ಸ್ಥಾನ ಎಂತಲೂ, ಅಸ್ಥಿ ಮತ್ತು ಮಜ್ಜೆ, ಇವೆರಡರಲ್ಲಿ ದೋಷ ಇದ್ದಾಗ್ಗೆ ಎರಡು ದಿನ ಬಿಡದೆ ಜ್ವರ ಬಂದು, ಅನಂತರ ಒಂದು ದಿನ ಬಿಡುವ ಲಕ್ಷಣವುಳ್ಳ ಚತುರ್ಥಕ-ವಿಪರ್ಯಯ ಉಂಟಾಗುತ್ತದೆಂತಲೂ, ಅದು (ವಾತಾದಿ) ದೋಷಗಳಿಂದ ಮೂರು ವಿಧ ಎಂತಲೂ ಹೇಳಿದ್ದಾನೆ (ಪು 192) ಎರಡು ಧಾತುಗಳಲ್ಲಿ ನಿಂತಿದ್ದ ವಾತಾದಿ ದೋಷಗಳು ಬೇರೆ ಬೇರೆಯಾಗಿ ಮೂರು ವಿಧವಾದ ಚಾತುರ್ಥಕ-ವಿಪರ್ಯಯ ಜ್ವರವನ್ನುಂಟುಮಾಡುತ್ತವೆ ಎಂತ ಚರಕನೂ ಹೇಳಿದ್ದಾನೆ (ಪು 452).

14. ತ್ರ್ಯಾಹಿಕ, ಚಾತುರ್ಥಿಕಗಳಲ್ಲಿ ಜ್ವರವೇಗಕ್ಕೂ ಶಾಂತಿಗೂ ಕಾರಣ.

ಅಧಿಶೇತೇ ಯಥಾ ಭೂಮಿಂ ಬೀಜಂ ಕಾಲೇ ಚ ರೋಹತಿ ।
ಅಧಿಶೇತೇ ತಥಾ ಧಾತುಂ ದೋಷಃ ಕಾಲೇ ಚ ಕುಪ್ಯತಿ ॥
ತೇ ವೃದ್ಧಿಂ ಬಲಕಾಲಂ ಚ ಪ್ರಾಪ್ಯ ದೋಷಾಸ್ತೃತೀಯಕಮ್ ।
ಚತುರ್ಥಕಂ ಚ ಕುರ್ವನ್ತಿ ಪ್ರತ್ಯನೀಕಂ ಬಲಕ್ಷಯಾತ್ ॥

ಕೃತ್ವಾ ವೇಗಂ ಗತಬಲಾಃ ಶ್ಲೇಷ್ಮಸ್ಥಾನೇ ವ್ಯವಸ್ಥಿತಾಃ ।
ಪುನರ್ವಿವೃದ್ಧಾಃ ಸ್ವೇ ಕಾಲೇ ಜ್ವರಯನ್ತಿ ನರಂ ಮಲಾಃ ॥ (ಚ. 452)

(ಸಸ್ಯಾದಿಗಳ) ಬೀಜವು (ಅನುಕೂಲವಾದ ಕಾಲವು ಬರುವ ವರೆಗೆ) ಭೂಮಿಯೊಳಗೆ ಅಡಗಿದ್ದು ತನ್ನ (ಅನುಕೂಲದ) ಕಾಲದಲ್ಲಿ ಹೇಗೆ ಮೊಳೆಯುತ್ತದೋ, ಹಾಗೆಯೇ ದೋಷವು (ರಸಾದಿ) ಧಾತುಗಳೊಳಗೆ ಒಂದರಲ್ಲಿ ಅಡಗಿ ನಿಂತು (ತನಗೆ ಅನುಕೂಲವಾದ) ಕಾಲದಲ್ಲಿ ಕೋಪಗೊಳ್ಳುತ್ತದೆ. ಆ ದೋಷಗಳು ತಮಗೆ ಬಲಕರವಾದ ಕಾಲ ಒದಗಿ ವೃದ್ಧಿಯನ್ನು ಪಡೆದು ತ್ರ್ಯಾಹಿಕ, ಚಾತುರ್ಥಿಕ ಜ್ವರಗಳನ್ನು ಉಂಟುಮಾಡುತ್ತವೆ; ಮತ್ತು ಅವುಗಳ ಬಲವು ಕಡಿಮೆಯಾಗುವ ದೆಸೆಯಿಂದ ಜ್ವರವು ಶಾಂತವಾಗುತ್ತದೆ. ವೇಗವನ್ನು ಕಾಣಿಸಿ ಅದರ ದೆಸೆಯಿಂದ ಬಲ ಕಳಕೊಂಡ ದೋಷಗಳು ಶ್ಲೇಷ್ಮಸ್ಥಾನದಲ್ಲಿ ನಿಂತುಕೊಳ್ಳುತ್ತವೆ ಮತ್ತು ಪುನಃ ತಮ್ಮ ಕಾಲ ಬಂದಾಗ್ಗೆ ವೃದ್ಧಿಯನ್ನು ಹೊಂದಿ ಮನುಷ್ಯರಲ್ಲಿ ಜ್ವರವನ್ನುಂಟುಮಾಡುತ್ತವೆ.

ಷರಾ ಗಾಳಿಯು ಬೀಸುವದರಿಂದ ಸಾಗರವು ಹ್ಯಾಗೆ ತುಳುಕುತ್ತದೋ ಹಾಗೆ ವಾತದಿಂದ ಕೆದರಿಸಲ್ಪಟ್ಟ ದೋಷಗಳು ಜ್ವರಗಳನ್ನುಂಟುಮಾಡುತ್ತವೆ, ಮತ್ತು ವೇಗ ಉಂಟಾದಾಗ್ಗೆ ಮಹಾ ಸಮುದ್ರದ ನೀರು ಉಕ್ಕಿ ದಡವನ್ನು ಮೀರಿ ಹೋಗಿ, ವೇಗ ನಿಂತಕೂಡಲೇ ಆ ನೀರು ಸಾಗರದೊಳಗೆ ಮೊದಲಿದ್ದಲ್ಲಿಯೇ ಪುನಃ ಹ್ಯಾಗೆ ಅಡಗುತ್ತದೋ, ಹಾಗೆಯೇ ದೋಷಗಳ ವೇಗಾರಂಭವಾದ ಕೂಡಲೇ ಜ್ವರ ಉಂಟಾಗಿ ವೇಗಹಾನಿಯಾದಾಗ್ಗೆ ಜ್ವರವು ಶಾಂತವಾಗುತ್ತದೆ (ಸು 759-60) ಸುಶ್ರುತನ ಈ ವರ್ಣನವು ಬಿಟ್ಟುಬರುವ ಸತತಾದಿ ಎಲ್ಲಾ ಜ್ವರಗಳಿಗೆ ಸಂಬಂಧಪಟ್ಟು ಬರೆಯಲ್ಪಟ್ಟದೆ ತ್ರ್ಯಾಹಿಕ ಚಾತುರ್ಥಕ್ಕೆ ಮಾತ್ರ ಸಂಬಂಧಪಟ್ಟು ಅಲ್ಲ ತ್ರ್ಯಾಹಿಕ ಚಾತುರ್ಥಿಕ ಜ್ವರಗಳಲ್ಲಿ ವಾತದ ದೋಷವೇ ಅಧಿಕ (ಸು 758) ಹಿಂದೆ 12ನೇ ಸಂಖ್ಯೆಯಲ್ಲಿ ವಿಷಮ ವಿಪರ್ಯಯಜ್ವರಕ್ಕೆ ಕಾರಣವಾಗಿ ಹೇಳಲ್ಪಟ್ಟ ದೋಷಾಶ್ರಿತ ಕಫಸ್ಥಾನಭೇದಗಳು ಸತತಾದಿ ವಿಷಮಜ್ವರಗಳಿಗೆ ಸಹ ಕಾರಣ ಎಂತ ಕೆಲವು ವ್ಯಾಖ್ಯಾನಕಾರರು ತಿಳಿದಿದ್ದಾರೆಂತ ಕಾಣುತ್ತದೆ

15. ಕಫಪಿತ್ತಾತ್ತ್ರಿಕಗ್ರಾಹೀ ಪೃಷ್ಠಾದ್ವಾತಕಫಾತ್ಮಕಃ ।
ವಾತಪಿತ್ತಾಚ್ಛಿರೋಗ್ರಾಹೀ ತ್ರಿವಿಧಃ ಸ್ಯಾತ್ತೃತೀಯಕಃ ॥
ಚತುರ್ಥಕೋ ದರ್ಶಯತಿ ಪ್ರಭಾವಂ ದ್ವಿವಿಧಂ ಜ್ವರಃ ।
ಜಂಘಾಭ್ಯಾಂ ಶ್ಲೈಷ್ಮಿಕಃ ಪೂರ್ವಂ ಶಿರಸ್ತೋಽನಿಲಸಂಭವಃ ॥ (ಚ. 452)

ತ್ರ್ಯಾಹಿಕ ಚಾತುರ್ಥಿಕಗಳಲ್ಲಿ ದೋಷಸ್ಥಿತ್ಯ

ಸೊಂಟದ ನಡು(ತ್ರಿಕ)ವಿನಲ್ಲಿ ನೋವು ಕಾಣಿಸುವ ತ್ರ್ಯಾಹಿಕ ಜ್ವರವು ಕಫಪಿತ್ತದಿಂದ, ಬೆನ್ನಿನಲ್ಲ ನೋವು ಕಾಣಿಸುವ ಜ್ವರವು ವಾತಕಫದಿಂದ, ತಲೆಯಲ್ಲಿ ನೋವು ಕಾಣಿಸುವ ಜ್ವರವು ವಾತಪಿತ್ತದಿಂದ; ಹೀಗೆ ತ್ರ್ಯಾಹಿಕಜ್ವರವು ಮೂರು ವಿಧ. ಚಾತುರ್ಥಿಕಜ್ವರದಲ್ಲಿ ಎರಡು ಮುಂಗಾಲುಗಳಲ್ಲಿ ಮೊದಲಾಗಿ ನೋವು ಕಾಣಿಸುವಂಥಾದ್ದು ಕಫಾಧಿಕ್ಯದಿಂದ, ತಲೆಯಲ್ಲಿ ಮೊದಲಾಗಿ ನೋವು ಕಾಣಿಸುವಂಥಾದ್ದು ವಾತಾಧಿಕ್ಯದಿಂದ, ಹೀಗೆ ಎರಡು ವಿಧ.

16. ಗುರುತ್ವಂ ಶೀತಮುದ್ವೇಗಃ ಸದನಂ ಛರ್ದ್ಯರೋಚಕೌ ।
ರಸಸ್ಥಿತೇ ಬಹಿಸ್ತಾಪಃ ಸಾಂಗಮರ್ದೋ ವಿಜೃಂಭಣಮ್ ॥
ರಕ್ತೋತ್ಥಾ(?ತ್ಥಾಃ) ಪಿಡಕಾಸ್ತೃಷ್ಣಾ ಸರಕ್ತಂ ಷ್ಠೀವನಂ ಮುಹುಃ ।
ದಾಹರಾಗಭ್ರಮಮದಾಃ ಪ್ರಲಾಪೋ ರಕ್ತಸಂಸ್ಥಿತೇ ॥
ಅನ್ತರ್ದಾಹೋಽಧಿಕಸ್ತೃಷ್ಣಾ ಗ್ಲಾನಿಃ ಸಂಸೃಷ್ಟವಿಟ್ಕತಾ ।
ದೌರ್ಗನ್ಧ್ಯಂ ಗಾತ್ರವಿಕ್ಷೇಪೋ ಜ್ವರೇ ಮಾಂಸಸ್ಥಿತೇ ಭವೇತ್ ॥

ರಸಾದಿಧಾತುಗಳಲ್ಲಿಯ ಜ್ವರಗಳ ಲಕ್ಷಣಗಳು ಮತ್ತು ಸಾಧ್ಯಾಸಾಧ್ಯತೆ

ಸ್ವೇದಸ್ತೀವ್ರಾ ಪಿಪಾಸಾ ಚ ಪ್ರಲಾಪಾರತ್ಯಭೀಕ್ಷ್ಣಶಃ ।
ಸ್ವಗನ್ಧಾಸ್ಯಾಸಹತ್ವಂ ಚ ಮೇದಃಸ್ಥೇ ಗ್ಲಾನ್ಯರೋಚಕೌ ॥
ವಿರೇಕವಮನೇ ಚೋಭೇ ಸಾಸ್ಥಿಭೇದಂ ಪ್ರಕೂಜನಮ್ ।
ವಿಕ್ಷೇಪಣಂ ಚ ಗಾತ್ರಾಣಾಂ ಶ್ವಾಸಶ್ಚಾಸ್ಥಿಗತೇ ಜ್ವರೇ ॥
ಹಿಕ್ಕಾ ಶ್ವಾಸಸ್ತಥಾ ಕಾಸಸ್ತಮಸಶ್ಚಾತಿದರ್ಶನಮ್ ।
ಮರ್ಮಚ್ಛೇದೋ ಬಹಿಃ ಶೈತ್ಯಂ ದಾಹೋಽನ್ತಶ್ಚೈವ ಮಜ್ಜಗೇ ॥
ಶುಕ್ರಸ್ಥಾನಗತೇ ಶುಕ್ರಮೋಕ್ಷಂ ಕೃತ್ವಾ ವಿನಾಶ್ಯ ಚ ।
ಪ್ರಾಣವಾಯ್ವಗ್ನಿಸೋಮೈಶ್ಚ ಸಾರ್ಧಂ ಗಚ್ಛತ್ಯಸೌ ವಿಭುಃ ॥
ರಸರಕ್ತಾಶ್ರಿತಃ ಸಾಧ್ಯೋ ಮೇದೋಮಾಂಸಗತಶ್ಚ ಯಃ ।
ಅಸ್ಥಿಮಜ್ಜಗತಃ ಕೃಚ್ಛ್ರಃ ಶುಕ್ರಸ್ಥೋ ನೈವ ಸಿಧ್ಯತಿ ॥
(ಚ. 452-453)

ದೇಹಭಾರ, ಚಳಿ, ಉದ್ವೇಗ (ಎದೆಯಿಂದ ನೀರು ಉಕ್ಕಿ ಮೇಲಕ್ಕೆ ಬರುವ ವೇಗ, ವಾಕರಿಕೆ*), ಬಳಲಿಕೆ (ಬೇಜಾರು), ವಾಂತಿ, ಅರುಚಿ, ಹೊರಗೆ (ಚರ್ಮದಲ್ಲಿ) ಸುಡತ, ಅಂಗಗಳಲ್ಲಿ ಅರತದ ನೋವು, ಮತ್ತು ಆಕಳಿಕೆ, ಇವು ರಸಧಾತುವಿನಲ್ಲಿರುವ ಜ್ವರದ ಲಕ್ಷಣಗಳು ರಕ್ತದಿಂದ ಹೊರಟ ಬೊಕ್ಕೆಗಳು, ಬಾಯಾರಿಕೆ, ಪದೇಪದೇ ರಕ್ತಮಿಶ್ರವಾದ ಉಗುಳು, ಉರಿ, ಹಟ, ಚಿತ್ತಭ್ರಮೆ, ಮದ ಮತ್ತು ಹರಟುವಿಕೆ, ಇವು ರಕ್ತಧಾತುವಿನಲ್ಲಿಯ ಜ್ವರದ ಲಕ್ಷಣಗಳು. ಒಳಗೆ ಉರಿ ಅಧಿಕವಾಗಿರುವದು, ಬಾಯಾರಿಕ, ಆಯಾಸ, ಸಡಿಲಾದ ಮಲ, (ಮೈಯಲ್ಲಿ) ದುರ್ವಾಸನೆ, ಮತ್ತು ಶರೀರವನ್ನು ಅತ್ತಿತ್ತ ಒಗೆಯುವದು, ಇವು ಮಾಂಸಧಾತುವಿನಲ್ಲಿಯ ಜ್ವರದ ಲಕ್ಷಣಗಳು. ಬೆವರು, ಕಠಿಣವಾದ ಬಾಯಾರಿಕೆ, ಹರಟುವಿಕೆ, ಯಾವಾಗಲೂ ಅಸಂತೋಷ (ಉಲ್ಲಾಸವಿಲ್ಲದಿರುವಿಕೆ), ಬಾಯಿಯಲ್ಲಿ ಮೇದಸ್ಸಿನ ವಾಸನೆ, ಸಹನಶಕ್ತಿಯಿಲ್ಲದಿರುವಿಕೆ, ಆಯಾಸ ಮತ್ತು ಅರುಚಿ, ಇವು ಮೇದಸ್ಸಿನಲ್ಲಿಯ ಜ್ವರದ ಲಕ್ಷಣಗಳು ವಾಂತಿ ಮತ್ತು ಅತಿಸಾರ ಎರಡೂ ಇರುವದು, ಎಲುಬಿನಲ್ಲಿ ಒಡೆದ ನೋವು, ಬಹಳವಾಗಿ ನರಳುವದು, ಅಂಗಗಳನ್ನು ಅತ್ತಿತ್ತ ಒಗೆಯುವದು, ಮತ್ತು ಉಬ್ಬಸ, ಇವು ಎಲುಬಿನಲ್ಲಿಯ ಜ್ವರದ ಲಕ್ಷಣಗಳು. ಬಿಕ್ಕಟ್ಟು, ಉಬ್ಬಸ, ಕೆಮ್ಮು, ಅತಿಯಾದ ಕಣ್ಣುಕತ್ತಲೆ, ಮರ್ಮಗಳಲ್ಲಿ ಕಡಿದ ನೋವು, ಹೊರಗೆ ಶೀತವಾಗಿರುತ್ತಾ ಒಳಗೆ ಉರಿಯುವದು, ಇವು ಮಜ್ಜೆಯನ್ನಾಶ್ರಯಿಸಿದ ಜ್ವರದ ಲಕ್ಷಣಗಳು. ಶುಕ್ರಸ್ಥಾನಕ್ಕೆ ಹೋದ ಜ್ವರದಲ್ಲಿ ಶುಕ್ರ ಸುರಿದುಹೋಗಿ ಮತ್ತು ನಾಶವಾಗಿ, ಪ್ರಾಣ ಮತ್ತು ವಾಯು-ಅಗ್ನಿ-ಸೋಮ (ವಾತ-ಪಿತ್ತ-ಕಫ)ಗಳೊಂದಿಗೆ ಜೀವನು ಹೊರಟುಹೋಗುತ್ತಾನೆ. ರಸ, ರಕ್ತ, ಮಾಂಸ, ಮೇದಸ್ಸು, ಇವುಗಳಲ್ಲಿ ನಿಂತಿರುವ ಜ್ವರವು ಸಾಧ್ಯ; ಎಲುಬು-ಮಜ್ಜೆಗಳಲ್ಲಿ ನಿಂತ ಜ್ವರವು ಕಷ್ಟಸಾಧ್ಯ; ಶುಕ್ರದಲ್ಲಿಯ ಜ್ವರವು ಎಂದೂ ಸಾಧ್ಯವಾಗುವದಲ್ಲ.

*ಇದೇ ಅರ್ಥದ 'ಹೃದಯೋತ್ಕ್ಲೇಶಃ' ಎಂಬ ಪದ ಮಾ ನಿ.ದಲ್ಲಿ ಕಾಣುತ್ತದೆ (ಪು 41)

ಪರಾ: ಮಜ್ಜಗ-ಶುಕ್ರಗಗಳೆರಡೂ ಅಸಾಧ್ಯ ಎಂತ ವಾ (ಅ. ಸಂ. II-22).

17. ರೂಕ್ಷಲಘುಶೀತವ್ಯಾಯಾಮ-ವಮನವಿರೇಚನಾಸ್ಥಾಪನ-ಶಿರೋವಿರೇಚನಾತಿಯೋಗ-ವೇಗಸನ್ಧಾರಣಾನಶನಾಭಿಘಾತವ್ಯವಾಯೋದ್ವೇಗ-ಶೋಕಶೋಣಿತಾತಿಸೇಕಜಾಗರಣವಿಷಮಶರೀರನ್ಯಾಸೇಭ್ಯೋಽತಿಸೇವಿತೇಭ್ಯೋ ವಾಯುಃ ಪ್ರಕೋಪಮಾಪದ್ಯತೇ | ಸ ಯದಾ ಪ್ರಕುಪಿತಃ ಪ್ರವಿಶ್ಯಾಮಾಶಯಮುಷ್ಮಣಃ ಸ್ಥಾನಮುಷ್ಮಣಾ ಸಹ ಮಿಶ್ರೀಭೂತ ಆದ್ಯಮಾಹಾರಪರಿಣಾಮಧಾತುಂ ರಸನಾಮಾನಮನ್ವವೇದ್ಯ(?ತ್ಯ) ರಸಸ್ವೇದವಹಾನಿ ಚ ಸ್ರೋತಾಂಸಿ ಚ ಪಿಧಾಯ ಅಗ್ನಿಂ ಉಪಹತ್ಯ ಪಕ್ತಿಸ್ಥಾನಾದುಷ್ಮಾಣಂ ಬಹಿಃ ನಿರಸ್ಯ ಕೇವಲಂ ಶರೀರಮನುಪದ್ಯತೇ ತದಾ ಜ್ವರಮಭಿನಿರ್ವರ್ತಯತಿ | ತಸ್ಯೇಮಾನಿ ಲಿಂಗಾನಿ ಭವನ್ತಿ | ತದ್ಯಥಾ, ವಿಷಮಾರಂಭವಿಸರ್ಗಿತ್ವಮೂ(?ಮು)ಷ್ಮಣೋ ವೈಷಮ್ಯಂ ತೀವ್ರತನುಭಾವಾನವಸ್ಥಾನಾನಿ ಜ್ವರಸ್ಯ ಜರಣಾನ್ತೇ ದಿವಸಾನ್ತೇ ಘರ್ಮಾನ್ತೇ ವಾ ಜ್ವರಾಭ್ಯಾಗಮನಮಭಿವೃದ್ಧಿರ್ವಾ ಜ್ವರಸ್ಯ ವಿಶೇಷೇಣ ಪರುಷಾರುಣವರ್ಣತ್ವಂ ನಖನಯನವದನಮೂತ್ರಪುರೀಷತ್ವಚಾಮತ್ಯರ್ಥಂ ಕ್ಲಿ(?ಕ್ಲ)ಪ್ತೀಭಾವಶ್ಚಾನೇಕವಿಧೋಪಮಾಶ್ಚ ಚಲಾಚಲಾಶ್ಚ ವೇದನಾಃ ತೇಷಾಂ ತೇಷಾಮಂಗಾವಯವಾನಾಮ್ ತದ್ಯಥಾ ಪಾದಯೋಃ ಸುಪ್ತತಾ ಪಿಂಡಿಕಯೋರುದ್ವೇಷ್ಟನಂ ಜಾನುನೋಃ ಕೇವಲಾನಾಂ ಚ ಸನ್ಧೀನಾಂ ವಿಶ್ಲೇಷಣಮೂರ್ವೋಃ ಸಾದಃ ಕಟೀಪಾರ್ಶ್ವಪೃಷ್ಠಸ್ಕಂಧಬಾಹ್ವಂಸೋರಸಾಂ ಚ ಭಗ್ನರುಗ್ಣಮೃದಿತಮಥಿತಚಟಿತಾವಪೀಡಿತಾವತುನ್ನತ್ವಮಿವ ಹನ್ವೋರಪ್ರಸಿದ್ಧಿಃ ಸ್ವನಶ್ಚ ಕರ್ಣಯೋಃ ಶಂಖಯೋರ್ನಿಸ್ತೋದಃ ಕಷಾಯಾಸ್ಯತ್ವಮಾಸ್ಯವೈರಸ್ಯಂ ವಾ ಮುಖತಾಲುಕಂಠಶೋಷಃ ಪಿಪಾಸಾ ಹೃದಯಗ್ರಹಃ ಶುಷ್ಕಛರ್ದಿಃ ಶುಷ್ಕಕಾಸಃ ಕ್ಷವಥೂದ್ಗಾರವಿನಿಗ್ರಹೋಽನ್ನರಸಖೇದಃ ಪ್ರಸೇಕಾರೋಚಕಾವಿಪಾಕಾಃ ವಿಷಾದವಿಜೃಂಭಾವಿನಾಮವೇಪಥುಶ್ರಮ-ಭ್ರಮ-ಪ್ರಲಾಪಜಾಗರಣಲೋಮಹರ್ಷದನ್ತಹರ್ಷಾಸ್ತಥೋಷ್ಮಾಭಿಪ್ರಾಯತಾ ನಿದಾನೋಕ್ತಾನಾಮನುಪಶ(?ಶ)ಯೋ ವಿಪರೀತೋಪಚ(?ಶ)ಯಶ್ಚೇತಿ ವಾತಜ್ವರಲಿಂಗಾನಿ ಸ್ಯುಃ ||

(ಚ. 203-204)

ವಾತಜ್ವರದ ನಿಧಾನ ಮತ್ತು ಲಕ್ಷಣ

ರೂಕ್ಷ, ಲಘು ಮತ್ತು ಶೀತಗುಣವುಳ್ಳ ಅನ್ನಪಾನಗಳು, ವ್ಯಾಯಾಮ, ವಮನ, ವಿರೇಚನ, ಆಸ್ಥಾಪನವಸ್ತಿ, ಶಿರೋವಿರೇಚನ, ಇವುಗಳನ್ನು ಅತಿಯಾಗಿ ಉಪಯೋಗಿಸುವದರಿಂದಲೂ, (ಮಲಮೂತ್ರಾದಿ) ವೇಗಗಳ ತಡೆ, ಉಪವಾಸ, ಗುದ್ಯಾಡುವದು, ಮೈಥುನ, ರೇಗುವಿಕೆ, ಶೋಕ, ಅತಿಯಾದ ರಕ್ತಸುರಿಯುವಿಕೆ, ಜಾಗರಣ, ಶರೀರವನ್ನು ವಿಷಮವಾಗಿ ಇಡುವದು, ಇವುಗಳನ್ನು ಅತಿಯಾಗಿ ಸೇವಿಸುವದರಿಂದಲೂ, ವಾಯುವು ಪ್ರಕೋಪಗೊಳ್ಳುತ್ತದೆ. ಪ್ರಕೋಪಗೊಂಡ ಆ ವಾಯು ಯಾವಾಗ ಅಗ್ನಿಯ ಸ್ಥಾನವಾದ ಆಮಾಶಯವನ್ನು ಪ್ರವೇಶಿಸಿ, ಅಗ್ನಿಯೊಂದಿಗೆ ಕಲೆತುಕೊಂಡು, ಆಹಾರದ ಫಲಿತವಾಗಿ ಉಂಟಾಗುವ ಧಾತುಗಳೊಳಗೆ ಒಂದನೇದಾದ ರಸಧಾತುವನ್ನು ಕೂಡಿಕೊಂಡು, ರಸವನ್ನೂ ಬೆವರನ್ನೂ ಸಾಗಿಸುವ ಸ್ರೋತಸ್ಸುಗಳನ್ನು ಮುಚ್ಚಿ, ಅಗ್ನಿಯನ್ನು ನೊಂದಿಸಿ, ಬಿಸಿಯನ್ನು ಪಚನಸ್ಥಾನದಿಂದ ಹೊರಗೆ ತಳ್ಳಿ, ಇಡೀ ಶರೀರವನ್ನು ಹಿಂಬಾಲಿಸಿ ಸಂಚರಿಸುತ್ತದೋ, ಆಗ್ಗೆ ಜ್ವರ ಉಂಟಾಗುತ್ತದೆ. ಅದರ ಲಕ್ಷಣಗಳು ಹೇಗೆಂದರೆ:—ಬಿಸಿಯು ವಿಷಮವಾಗಿ ಆರಂಭಿಸುವದು ಮತ್ತು ಬಿಡುವದು, ವಿಷಮ ಸ್ವಭಾವ, ಜ್ವರದ ತೀವ್ರತೆಯಲ್ಲಿಯೂ ಲಘುತ್ವದಲ್ಲಿಯೂ ಒಂದೇ ಸ್ಥಿತಿಯಿಲ್ಲದಿರುವಿಕೆ, ಆಹಾರದ ಜೀರ್ಣದ ಅಂತ್ಯದಲ್ಲಿ, ಹಗಲಿನ ಅಂತ್ಯಭಾಗದಲ್ಲಿ, ಅಥವಾ ಉಷ್ಣ

ಕಾಲದ ಅಂತ್ಯದಲ್ಲಿ, ಜ್ವರಬರುವದು ಅಥವಾ ವೃದ್ಧಿಯಾಗುವದು, ಉಗುರು-ಕಣ್ಣು-ಮುಖ-ಮೂತ್ರ-ಮಲಗಳು ಮತ್ತು ಚರ್ಮ ನಾನಾವರ್ಣಮಿಶ್ರವಾಗಿ ಅಥವಾ ಅರುಣ (ಕೆಂಪೊತ್ತಿದ ಕಪ್ಪು) ವರ್ಣವಾಗಿ ಇರುವದು ಮತ್ತು ಅವುಗಳಲ್ಲಿ ಕತ್ತರಿಸಿದ ಹಾಗಿನ ಅಥವಾ ಕಡಿದ ಹಾಗಿನ ಸ್ಥಿತಿ*, ಮತ್ತು ಅನೇಕ ವಿಧದ ಹೋಲುವೆಗಳುಳ್ಳ, ಸಂಚರಿಸುವ, ಅಥವಾ ಚಲನೆಯಿಲ್ಲದ ವೇದನೆಗಳು (ವಾಯುವಿನಿಂದ ಹಿಡಿಯಲ್ಪಟ್ಟ) ಆಯಾ ಅಂಗಗಳಲ್ಲಿ ಅಥವಾ ಅವಯವಗಳಲ್ಲಿ ಉಂಟಾಗುವದು,—ಅವು ಹೇಗೆಂದರೆ, ಪಾದಗಳಲ್ಲಿ ಜುಮುಜುಮು, ಮುಂಗಾಲುಗಳ ಮಾಂಸಖಂಡಗಳಲ್ಲಿ ಬಿಗಿ, ಮೊಣಗಂಟುಗಳಲ್ಲಿಯೂ ಶರೀರದ ಎಲ್ಲಾ ಸಂದುಗಳಲ್ಲಿಯೂ ಅಗಲಿದ ಹಾಗಿನ ವೇದನೆ, ತೊಡೆಗಳಲ್ಲಿ ಬತ್ತಿಬರುವಿಕೆ, ಸೊಂಟ-ಪಕ್ಕ-ಬೆನ್ನು-ಭುಜದ ಬುಡ-ತೋಳು-ಹೆಗಲು-ಎದೆಗಳಲ್ಲಿ ಒಡೆದ, ಬೊಗ್ಗಿಸಿದ, ಹಿಸುಕಿದ, ಕಡಿದ, ಸಿಡಿಯುವ, ಹಿಂಡಿದ ಮತ್ತು ಚುಚ್ಚಿದ ಹಾಗಿನ ನೋವುಗಳು,—ದವಡೆಗಳು ಒಳಗೆ ಎಳಕೊಳ್ಳುವದು, ಕಿವಿಗಳೊಳಗೆ ಶಬ್ದ, ಕಣ್ಣೆಸಿಡಿತ, ಬಾಯಿಯಲ್ಲಿ ರುಚಿ ಚೊಗರಾಗುವದು ಅಥವಾ ರುಚಿ ತಿಳಿಯದಿರುವದು, ಬಾಯಿ-ತಾಲು-ಗಂಟಲುಗಳು ಒಣಗುವಿಕೆ, ಬಾಯಾರಿಕೆ, ಎದೆ ಹಿಡಕೊಳ್ಳುವದು, ಒಣವಾಂತಿ, ಒಣಕೆಮ್ಮು, ಸೀನಾಗಲಿ ತೇಗಾಗಲಿ ಬಾರದಿರುವದು, ಅನ್ನದ ರಸದಿಂದ ಸಂಕಟವಾಗುವದು, ಬಾಯಿಯಿಂದ ಎಂಜಲು ಬರುತ್ತಿರುವದು, ಅರುಚಿ, ಪಚನವಿಲ್ಲದಿರುವಿಕೆ, ದುಃಖ, ಆಕಳಿಕೆ, ಶರೀರ ಬೊಗ್ಗಿರುವದು, ನಡುಕು, ಶ್ರಮ, ಭ್ರಮೆ, ಹರಟುವಿಕೆ, ನಿದ್ರೆಬಾರದಿರುವಿಕೆ, ರೋಮಾಂಚ, ಹಲ್ಲುಗಳಲ್ಲಿ ಜುಮ್ಮು, ಬಿಸಿಯಲ್ಲಿ ಇಚ್ಛೆ, ನಿದಾನವಾಗಿ ಹೇಳಲ್ಪಟ್ಟವುಗಳಿಂದ ಉಪಶಮನವಾಗದಿರುವದು ಮತ್ತು ತದ್ವಿರುದ್ಧವಾದವುಗಳಿಂದ ಜ್ವರ ಶಾಂತವಾಗುವದು; ಇವುಗಳೆಲ್ಲ ವಾತಜ್ವರದ ಲಕ್ಷಣಗಳಾಗಿರುವವು.

*ಇದರ ಸ್ಥಾನದಲ್ಲಿ 'ಮಲಾನಾಮಪ್ರವರ್ತನಂ' (ಮಲಗಳ ಪ್ರವೃತ್ತಿ ಆಗವಿರುವದು) ಎಂಬ ಲಕ್ಷಣ ವಾ ಹೇಳಿದ್ದಾನೆ (ಪು 187).

18. ಉಷ್ಣಾಮ್ಲಲವಣಕ್ಷಾರಕಟುಕಾಜೀರ್ಣಭೋಜನೇಭ್ಯೋಽತಿಸೇವಿತೇಭ್ಯಸ್ತಥಾತಿತೀಕ್ಷ್ಣಾತಪಾಗ್ನಿಸನ್ತಾಪ-ಶ್ರಮ-ಕ್ರೋಧ-ವಿಷಮಾಹಾರೇಭ್ಯಃ ಪಿತ್ತಂ ಪ್ರಕೋಪಮಾಪದ್ಯತೇ। ತದ್ಯಥಾ(?ದಾ) ಪ್ರಕುಪಿತಮಾಮಾಶಯಾದೇವೋಷ್ಮಾಣಮುಪಸಂಸೃಜ್ಯಾದ್ಯಮಾಹಾರಪರಿಣಾಮಧಾತುಂ ರಸನಾಮಾನಮನ್ವಾವೇದ್ಯ(?ನ್ವವೇತ್ಯ) ರಸಸ್ವೇದವಹಾನಿ ಚ ಸ್ರೋತಾಂಸಿ ಪಿಧಾಯ ದ್ರವತ್ವಾದಗ್ನಿಮುಪಹತ್ಯ ಪಕ್ತಿಸ್ಥಾನಾದೂ(?ದು)ಷ್ಮಾಣಂ ಬಹಿರ್ದ್ವಾರಂ ನಿರಸ್ಯ ಪ್ರಪೀಡಯನ್(?ತ್) ಕೇವಲಂ ಶರೀರಮುಪ(?ಮನುಪ್ರ)ಪದ್ಯತೇ ತದಾಜ್ವರಮಭಿನಿರ್ವರ್ತಯತಿ। ತಸ್ಯೇಮಾನಿ ಲಿಂಗಾನಿ ಭವನ್ತಿ। ತದ್ಯಥಾ, ಯುಗಪದೇವ ಕೇವಲೇ ಶರೀರೇ ಜ್ವರಾಭ್ಯಾಗಮನಮಭಿವೃದ್ಧಿರ್ವಾ, ಭುಕ್ತಸ್ಯ ವಿದಾಹಕಾಲೇ ಮಧ್ಯನ್ದಿನೇಽರ್ಧರಾತ್ರೇ ಶರದಿ ವಾ ವಿಶೇಷೇಣ ಕಟುಕಾಸ್ಯತಾ ಘ್ರಾಣಮುಖಕಂಠೋಷ್ಠತಾಲುಪಾಕಸ್ತೃಷ್ಣಾ ಭ್ರಮೋ ಮದೋ ಮೂರ್ಚ್ಛಾ ಪಿತ್ತಚ್ಛರ್ದನಮತೀಸಾರೋಽನ್ನದ್ವೇಷಃ ಸದನಂ ಸ್ವೇದಃ ಪ್ರಲಾಪೋ ರಕ್ತಕೋಠಾಭಿನಿರ್ವೃತ್ತಿಃ ಶರೀರೇ ಹರಿತಹಾರಿದ್ರತ್ವಂ ನಖನಯನವದನಮೂತ್ರಪುರೀಷತ್ವಚಾಮತ್ಯರ್ಥಮುಷ್ಮ

ಪಿತ್ತಜ್ವರದ ನಿದಾನ ಮತ್ತು ಲಕ್ಷಣಗಳು.

ಣಸ್ತೀವ್ರಭಾವೋ ಽತಿಮಾತ್ರಂ ದಾಹಃ ಶೀತಾಭಿಪ್ರಾಯತಾ ನಿದಾನೋಕ್ತಾನಾಮನುಪಚ(?ಶ) ಯೋ ವಿಪರೀತೋಪಚ(ಶ)ಯಶ್ಚೇತಿ ಪಿತ್ತಜ್ವರಲಿಂಗಾನಿ ಭವನ್ತಿ ||　　(ಚ. 204)

ಬಿಸಿ, ಹುಳಿ, ಉಪ್ಪು, ಕ್ಷಾರ, ಕಾರ ಮತ್ತು ಅಜೀರ್ಣಕರವಾದ ಪದಾರ್ಥಗಳ ಭೋಜನಗಳನ್ನು ಅತಿಯಾಗಿ ಸೇವಿಸಿದರಿಂದಲೂ, ಅತಿ ತೀಕ್ಷ್ಣವಾದ ಬಿಸಿಲು ಮತ್ತು ಅಗ್ನಿಯ ಸೆಕೆಯಿಂದಲೂ, ಶ್ರಮ, ಸಿಟ್ಟು, ವಿಷಮವಾದ ಆಹಾರ, ಇವುಗಳಿಂದಲೂ, ಪಿತ್ತವು ಪ್ರಕೋಪಗೊಳ್ಳುತ್ತದೆ. ಹಾಗೆ ಕೋಪಗೊಂಡ ಪಿತ್ತವು ಆಮಾಶಯದಿಂದಲೇ ಅಗ್ನಿಯನ್ನು ಕೂಡಿಕೊಂಡು, ಆಹಾರದ ಫಲಿತವಾಗಿ ಉಂಟಾಗುವ ಧಾತುಗಳಲ್ಲಿ ಪ್ರಥಮದ್ದಾದ ರಸಧಾತುವಿನೊಂದಿಗೆ ಹೊರಟು, ರಸವನ್ನೂ ಬೆವರನ್ನೂ ಸಾಗಿಸತಕ್ಕಂಥ ಸ್ರೋತಸ್ಸುಗಳನ್ನು ಮುಚ್ಚಿ, ತನ್ನ ದ್ರವಸ್ವಭಾವದಿಂದ ಅಗ್ನಿಯನ್ನು ನೊಂದಿಸಿ, ಪಚನಸ್ಥಾನದಿಂದ ಬಿಸಿಯನ್ನು ಹೊರಗೆ ತಳ್ಳಿ, ಪೀಡಿಸುತ್ತಾ ಇಡೀ ಶರೀರವನ್ನು ಯಾವಾಗ ವ್ಯಾಪಿಸುತ್ತದೋ, ಆಗ್ಗೆ ಜ್ವರ ಉಂಟಾಗುತ್ತದೆ. ಅದರ ಲಕ್ಷಣಗಳು ಹ್ಯಾಗಂದರೆ—ವಿಶೇಷವಾಗಿ ಉಂಡ ಆಹಾರವು ಪಚನವಾಗುವ ಕಾಲದಲ್ಲಿ, ಮಧ್ಯಾಹ್ನದಲ್ಲಿ, ಅರ್ಧರಾತ್ರಿಯಲ್ಲಿ, ಅಥವಾ ಶರತ್ಕಾಲದಲ್ಲಿ, ಶರೀರದಲ್ಲೆಲ್ಲಾ ಏಕಕಾಲದಲ್ಲಿಯೇ (ಒಟ್ಟಾಗಿಯೇ) ಜ್ವರಬರುವದು ಅಥವಾ ಅಭಿವೃದ್ಧಿಗೊಳ್ಳುವದು, ಬಾಯಿ ಕಹಿಯಾಗಿರುವದು, ಮೂಗು-ಬಾಯಿ-ಗಂಟಲು-ತುಟಿ-ತಾಲುಗಳು ಬೆಂದಿರುವದು, ಬಾಯಾರಿಕೆ, ಭ್ರಮೆ, ಮದ, ಮೂರ್ಛೆ, ಪಿತ್ತವಾಂತಿ, ಅತಿಸಾರ, ಅನ್ನದಲ್ಲಿ ದ್ವೇಷ, ಆಯಾಸ, ಬೆವರು, ಹರಟುವದು, ಶರೀರದಲ್ಲಿ ಕೆಂಪು ದಡಿಕೆಗಳೇಳುವದು, ಉಗುರು-ಕಣ್ಣು-ಮುಖ-ಮೂತ್ರ-ಮಲ-ಚರ್ಮಗಳು ಅತಿಯಾಗಿ ಹಸುರು ಅಥವಾ ಅರಸಿನವರ್ಣವಾಗುವದು, ತೀವ್ರವಾದ ಮೈಬಿಸಿ, ಅತಿಯಾದ ಉರಿ, ಶೀತ ಪದಾರ್ಥಗಳಲ್ಲಿ ಇಚ್ಛೆ, ನಿದಾನದಲ್ಲಿ ಹೇಳಲ್ಪಟ್ಟವುಗಳ ಉಪಯೋಗದಿಂದ ಶಾಂತವಾಗದಿರುವದು, ತದ್ವಿರುದ್ಧವಾದವುಗಳ ಉಪಯೋಗದಿಂದ ಉಪಶಮನವಾಗುವದು, ಇವು ಪಿತ್ತಜ್ವರದ ಲಕ್ಷಣಗಳು ಆಗಿರುತ್ತವೆ.

ಪರಾ ರಕ್ತ ಉಗುಳುವದು ಮತ್ತು ಶ್ವಾಸದ ದುರ್ವಾಸನೆ ಸಹ ಪಿತ್ತಜ್ವರದ ಲಕ್ಷಣಗಳೆಂತ ವಾ (ಪು 187)

ಕಫಜ್ವರದ ನಿದಾನ ಮತ್ತು ಲಕ್ಷಣಗಳು.

19. ಸ್ನಿಗ್ಧಮಧುರಗುರುಶೀತ-ಪಿಚ್ಛಿಲಾಮ್ಲ-ಲವಣ-ದಿವಾಸ್ವಪ್ನ-ಹರ್ಷ(?ಷಾ)ವ್ಯಾಯಾಮೇಭ್ಯೋ ಽತಿಸೇವಿತೇಭ್ಯಃ ಶ್ಲೇಷ್ಮಾ ಪ್ರಕೋಪಮಾಪದ್ಯತೇ | ಸ ಯದಾ ಪ್ರಕುಪಿತಃ ಪ್ರವಿಶ್ಯಾಮಾಶಯಮೂ(?ಮು)ಷ್ಮಣಾ ಸಹ ಮಿಶ್ರೀಭೂತವಾದ್ಯ(?ಭೂಯಾದ್ಯ)ಮಾಹಾರಪರಿಣಾಮಧಾತುಂ ರಸನಾಮಾನಮನ್ವವೇತ್ಯ ರಸಸ್ವೇದವಹಾನಿ ಚ ಸ್ರೋತಾಂಸಿ ಪಿಧಾಯಾಗ್ನಿಮುಪಹತ್ಯ ಪಕ್ತಿಸ್ಥಾನಾದೂ(?ದು)ಷ್ಮಾಣಂ ವಾ(?)ಬಹಿಃ ನಿರಸ್ಯ ಪ್ರಪೀಡಯನ್ ಕೇವಲಂ ಶರೀರಮುಪ(?ಮನುಪ್ರ)ಪದ್ಯತೇ ತದಾ ಜ್ವರಮಭಿನಿರ್ವರ್ತಯತಿ | ತಸ್ಯೇಮಾನಿ ಲಿಂಗಾನಿ ಭವನ್ತಿ | ತದ್ಯಥಾ, ಯುಗಪದೇವ ಕೇವಲೇ ಶರೀರೇ ಜ್ವರಾಭ್ಯಾಗಮನಮಭಿವೃದ್ಧಿರ್ವಾ ಭುಕ್ತಮಾತ್ರೇ ಪೂರ್ವಾಹ್ಣೇ ಪೂರ್ವರಾತ್ರೇ ವಸಂತಕಾಲೇ ವಾ ವಿಶೇಷೇಣ ಗುರುಗಾತ್ರತ್ವಮನನ್ನಾಭಿಲಾಷಃ ಶ್ಲೇಷ್ಮಪ್ರಸೇಕೋ ಮುಖಸ್ಯ ಚ ಮಾಧುರ್ಯಂ ಹೃಲ್ಲಾಸೋ ಹೃದಯೋಪಲೇಪಃ ಸ್ತಿಮಿ(ತ)ತ್ವಂ ಛರ್ದಿರ್ಮೃದ್ವಗ್ನಿತಾ ನಿದ್ರಾಯಾ ಆಧಿಕ್ಯಃ ಸ್ತಂಭಃ ತನ್ದ್ರಾ ಶ್ವಾಸಃ ಕಾಸಃ ಪ್ರತಿಶ್ಯಾಯಃ ಶೈತ್ಯಂ ಶ್ವೈತ್ಯಂ ಚ ನಯನನಖವದನಮೂತ್ರಪುರೀಷತ್ವಚಾಮತ್ಯರ್ಥಂ ಶೀತಪಿಡಕಾ ಭೃಶಮಂಗೇಭ್ಯ

ಉತ್ತಿಷ್ಠತಿ(?ನ್ತಿ) ಉಷ್ಣಾಭಿಪ್ರಾಯತಾ ನಿದಾನೋಕ್ತಾನಾಮನುಪಚ(?ಶ)ಯೋ ವಿಪರೀತೋಪಚ(?ಶ)ಯಶ್ಚೇತಿ ಶ್ಲೇಷ್ಮಜ್ವರಲಿಂಗಾನಿ ಭವನ್ತಿ || (ಚ. 204—205)

ಜಿಡ್ಡುಳ್ಳ-ಸಿಹಿ-ಗುರು-ಶೀತ-ಬೊಂಪುಳ್ಳ-ಹುಳಿ-ಉಪ್ಪಾದ ಪದಾರ್ಥಗಳು, ಹಗಲು ನಿದ್ರೆ, ಹರ್ಷ, ದೇಹದಂಡನೆ ಇಲ್ಲದಿರುವಿಕೆ, ಇವುಗಳನ್ನು ಅತಿಯಾಗಿ ಸೇವಿಸಿದರಿಂದ ಕಫವು ಪ್ರಕೋಪಗೊಳ್ಳುತ್ತದೆ. ಹಾಗೆ ಪ್ರಕೋಪಗೊಂಡ ಕಫವು ಆಮಾಶಯವನ್ನು ಹೊಕ್ಕು, ಅಲ್ಲಿಯ ಬಿಸಿಯೊಂದಿಗೆ ಮಿಶ್ರವಾಗಿ, ಆಹಾರದ ಪಚನದಿಂದುತ್ಪನ್ನವಾಗುವ ಧಾತುಗಳೊಳಗೆ ಒಂದನೇದಾದ ರಸಧಾತುವನ್ನು ಅನುಸರಿಸಿಕೊಂಡು, ರಸವನ್ನೂ ಬೆವರನ್ನೂ ಸಾಗಿಸತಕ್ಕಂಥ ಸ್ರೋತಸ್ಸುಗಳನ್ನು ಮುಚ್ಚಿಬಿಟ್ಟು, ಅಗ್ನಿಯನ್ನು ನಾಶಮಾಡಿ, ಪಚನಸ್ಥಾನದಿಂದ ಬಿಸಿಯನ್ನು ಹೊರಗೆ ಹಾಕಿ, ಯಾವಾಗ ಪೀಡಿಸುತ್ತಾ ಇಡೀ ಶರೀರವನ್ನು ವ್ಯಾಪಿಸುತ್ತದೋ, ಆಗ್ಗೆ ಜ್ವರ ಉಂಟಾಗುತ್ತದೆ. ಅದರ ಲಕ್ಷಣಗಳು ಹ್ಯಾಗಂದರೆ:—ವಿಶೇಷವಾಗಿ ಉಂಡಕೂಡಲೇ, ಪೂರ್ವಾಹ್ನದಲ್ಲಿ, ಪೂರ್ವರಾತ್ರಿಯಲ್ಲಿ, ಅಥವಾ ವಸಂತಕಾಲದಲ್ಲಿ, ಇಡೀ ಶರೀರದಲ್ಲಿ ಏಕಕಾಲದಲ್ಲಿಯೇ, ಜ್ವರಬರುವದು ಅಥವಾ ವೃದ್ಧಿಯಾಗುವದು, ಶರೀರ ಭಾರಕಾಣುವದು, ಅನ್ನದ ಅಭಿಲಾಷೆ ಇಲ್ಲದಿರುವದು, ಬಾಯಿಯಿಂದ ಎಂಜಲು ಸುರಿಯುವದು, ಬಾಯಿ ಸಿಹಿಯಾಗಿರುವದು, ಎದೆ ತಳ್ಳಣಿಸುವಿಕೆ (ಹೃಲ್ಲಾಸ), ಹೃದಯದಲ್ಲಿ ಉಪಲೇಪ, ಮೈ ಒದ್ದೆಯಾಗಿರುವದು, ವಾಂತಿ, ಅಗ್ನಿ ಮಂದವಾಗಿರುವದು, ನಿದ್ರೆ ಅಧಿಕವಾಗಿರುವದು, ಸ್ತಬ್ಧತೆ, ತಂದ್ರೆ, ಉಬ್ಬಸ, ಕೆಮ್ಮು, ನೆಗಡಿ, ಶೈತ್ಯ, ಕಣ್ಣು-ಉಗುರು-ಮುಖ-ಮೂತ್ರ-ಮಲ-ಚರ್ಮಗಳು ಅತಿಯಾಗಿ ಬೆಳ್ಳಗಾಗಿರುವಿಕೆ, ಅಂಗಗಳಿಂದ ಶೀತವಾದ ಬೊಕ್ಕೆಗಳು ತುಂಬ ಏಳುವದು, ಬಿಸಿಯಲ್ಲಿ ಇಷ್ಟತೆ, ನಿದಾನದಲ್ಲಿ ಹೇಳಲ್ಪಟ್ಟವುಗಳ ಉಪಯೋಗದಿಂದ ಶಾಂತವಾಗದಿರುವಿಕೆ, ತದ್ವಿರುದ್ಧವಾದವುಗಳ ಉಪಯೋಗದಿಂದ ಶಾಂತಿಯುಂಟಾಗುವದು, ಇವು ಕಫಜ್ವರದ ಲಕ್ಷಣಗಳು ಆಗಿರುತ್ತವೆ.

ಪರಾ ಜಾಡ್ಯ, ಸ್ರೋತಸ್ಸುಗಳಲ್ಲಿ ತಡೆ, ಜ್ವರದ ವೇಗ ಅಲ್ಪವಾಗಿರುವದು, ಸಹ ಕಫಜ್ವರದ ಲಕ್ಷಣ ಎಂತ ನಾ (ಪು 187)

20. ವಿಷಮಾಶನಾದನಶನಾದನ್ನಸ್ಯ ಅಪರಿವರ್ತಾದೃತುವ್ಯಾಪತ್ತೇಃ ಅಸಾತ್ಮ್ಯಗನ್ಧೋಪಘ್ರಾಣಾತ್ ವಿಷೋಪಹತಸ್ಯೋದಕಸ್ಯ ಉಪಯೋಗಾದ್ಗರೇಭ್ಯೋ ಗಿರೀಣಾಮುಪಶ್ಲೇಷಾತ್ ಸ್ನೇಹಸ್ವೇದವಮನವಿರೇಚನಾಸ್ಥಾಪನಾನುವಾಸನಶಿರೋವಿರೇಚನಾನಾಂ ಅಯಥಾವತ್ಪ್ರಯೋಗಾತ್ ಸ್ತ್ರೀಣಾಂ ಚ ವಿಷಮಪ್ರಜನನಾತ್ ಪ್ರಜಾತಾನಾಂ ಚ ಮಿಥ್ಯೋಪಚಾರಾದ್ಯಥೋಕ್ತಾನಾಂ ಚ ಹೇತೂನಾಂ ಮಿಶ್ರೀಭಾವಾದ್ಯಥಾನಿದಾನಂ ದ್ವಂದ್ವಾನಾಮನ್ಯತಮಃ ಸರ್ವೇ ವಾ ತ್ರಯೋ ದೋಷಾ ಯುಗಪತ್ಪ್ರಕೋಪಮಾಪದ್ಯನ್ತೇ | ತೇ ಪ್ರಕುಪಿತಾಸ್ತಯೈವಾನುಪೂರ್ವ್ಯಾ ಜ್ವರಮಭಿನಿರ್ವರ್ತಯನ್ತಿ | ತತ್ರ ಯಥೋಕ್ತಾನಾಂ ಜ್ವರಲಿಂಗಾನಾಂ ಮಿಶ್ರೀಭಾವವಿಶೇಷದರ್ಶನಾದ್ದ್ವಾಂದ್ವಿಕಮನ್ಯತಮಂ ಜ್ವರಂ ಸಾನ್ನಿಪಾತಿಕಂ ವಾ ವಿದ್ಯಾತ್ || (ಚ. 205)

ದ್ವಂದ್ವಜ, ತ್ರಿದೋಷಜ ಜ್ವರಗಳ ನಿದಾನ ಮತ್ತು ಅವುಗಳ ಲಕ್ಷಣಗಳ ಸಾಮಾನ್ಯ ನಿರೂಪಣ.

ವಿಷಮವಾದ ಊಟದಿಂದ, ಊಟ ಮಾಡದಿರುವದರಿಂದ, ಅನ್ನ ಕರಗದಿರುವದರಿಂದ, ಋತುಗಳ ಕೆಡಕಿನಿಂದ, ಹಿತವಲ್ಲದ ವಾಸನೆಯನ್ನು ಮೂಸುವದರಿಂದ, ವಿಷದಿಂದ ಕೆಟ್ಟಿರುವ

ನೀರಿನ ಉಪಯೋಗದಿಂದ, ಕೃತ್ರಿಮ ವಿಷಗಳಿಂದ, ಬೆಟ್ಟಗಳ ಸಾಮೀಪ್ಯದಿಂದ, ಸ್ನೇಹನ-ಸ್ವೇದನ-ವಮನ-ವಿರೇಚನ-ಆಸ್ಥಾಪನ-ಅನುವಾಸನ-ಶಿರೋವಿರೇಚನಗಳನ್ನು (1ನೇ ಭಾಗ ನೋಡಿ) ಕ್ರಮತಪ್ಪಿ ಪ್ರಯೋಗಿಸುವದರಿಂದ, ಸ್ತ್ರೀಯರಲ್ಲಿ ವಿಷಮವಾದ ಪ್ರಸವದಿಂದ ಮತ್ತು ಹೆತ್ತ ಬಾಣಂತಿಯರಿಗೆ ಕ್ರಮಕ್ಕೆ ವ್ಯತಿರಿಕ್ತವಾಗಿ ಉಪಚಾರಮಾಡುವದರಿಂದ, ಮತ್ತು ವಾತಾದಿ ಜ್ವರಗಳ ನಿದಾನದಲ್ಲಿ (ಹಿಂದೆ) ಹೇಳಲ್ಪಟ್ಟ ಹೇತುಗಳು ಮಿಶ್ರವಾಗುವದರಿಂದ, ದ್ವಂದ್ವಗಳೊಳಗೊಂದು (ವಾತಪಿತ್ತ, ವಾತಕಫ ಅಥವಾ ಪಿತ್ತಕಫ), ಅಥವಾ ಮೂರು ದೋಷಗಳೆಲ್ಲ ಏಕಕಾಲದಲ್ಲಿ ಕೋಪಗೊಳ್ಳುತ್ತವೆ. ಪ್ರಕೋಪಗೊಂಡ ದೋಷಗಳು ಅದೇ (ಹಿಂದೆ ಹೇಳಲ್ಪಟ್ಟ) ಕ್ರಮದಲ್ಲಿ ಜ್ವರವನ್ನುಂಟುಮಾಡುತ್ತವೆ. ಆಗ್ಗೆ ಮೊದಲು ವಿವರಿಸಲ್ಪಟ್ಟ ಜ್ವರಲಕ್ಷಣಗಳು ಮಿಶ್ರವಾಗಿ ಕಾಣುವ ಭೇದದ ಮೇಲೆ ದ್ವಂದ್ವಗಳೊಳಗೆ ಒಂದರಿಂದ, ಅಥವಾ ಸನ್ನಿಪಾತದಿಂದ ಉಂಟಾದ ಜ್ವರ ಎಂತ ತಿಳಿಯತಕ್ಕದ್ದು.

ಷರಾ ಈ ವರ್ಣನವು ರೋಗೋತ್ಪಾದಕ ಅಣುಜೀವಿಗಳೇ ಕಾರಣವೆಂತ ಪಾಶ್ಚಾತ್ತ್ಯರು ತಿಳಿಯುವ ಟ್ಯಾಫೈಡ್, ಮಲೇರಿಯಾ, ಮುಂತಾದ ಅನೇಕ ಜ್ವರಗಳ ಹೇತುಗಳನ್ನು ಒಳಪಡಿಸುವಷ್ಟು ವಿಸ್ತಾರವಾಗಿ ಇರುತ್ತದೆ

21. ಶಿರೋರುಕ್ ಪರ್ವಣಾಂ ಭೇದೋ ದಾಹೋ ರೋಮ್ಣಾಂ ಪ್ರಹರ್ಷಣಮ್ |
ವಾತಪಿತ್ತ ಜ್ವರದ ಲಕ್ಷಣ ಕಂಠಾಸ್ಯಶೋಷೋ ವಮಥುಸ್ತೃಷ್ಣಾ ಮೂರ್ಚ್ಛಾ ಭ್ರಮೋಽರುಚಿಃ |
ಸ್ವಪ್ನನಾಶೋಽತಿವಾಗ್ ಜೃಮ್ಭಾ ವಾತಪಿತ್ತಜ್ವರಾಕೃತಿಃ || (ಚ. 453)

ತಲೆನೋವು, ಗಂಟುಗಳ ಒಡೆತ, ಉರಿ, ರೋಮಾಂಚ, ಗಂಟಲು-ಬಾಯಿಗಳ ಒಣಗುವಿಕೆ, ವಾಂತಿ, ಬಾಯಾರಿಕೆ, ಮೂರ್ಚ್ಛೆ, ತಲೆತಿರುಕು. ಅರುಚಿ, ನಿದ್ರೆಇಲ್ಲದಿರುವದು, ಅತಿ ಮಾತು, ಆಕಳಿಕೆ, ಇವು ವಾತಪಿತ್ತ ಜ್ವರದ ಲಕ್ಷಣಗಳು.

ಷರಾ ಅರತಿ (ಉಲ್ಲಾಸವಿಲ್ಲದಿರುವಿಕೆ) ಸಹ ಈ ಜ್ವರದ ಲಕ್ಷಣ ಎಂತ ವಾ (ಪು 188).

22 ಶೀತಕೋ ಗೌರವಂ ತನ್ದ್ರಾ ಸ್ತೈಮಿತ್ಯಂ ಪರ್ವಣಾಂ ರುಕ್ |
ವಾತಶ್ಲೇಷ್ಮ ಜ್ವರದ ಲಕ್ಷಣ ಶಿರೋಗ್ರಹಃ ಪ್ರತಿಶ್ಯಾಯಃ ಕಾಸಃ ಸ್ವೇದಾಪ್ರವರ್ತನಮ್ ||
ಸನ್ತಾಪೋ ಮಧ್ಯವೇಗಶ್ಚ ವಾತಶ್ಲೇಷ್ಮಜ್ವರಾಕೃತಿಃ || (ಚ. 453)

ಚಳಿ, ಮೈಭಾರ, ತಂದ್ರೆ, ಮೈ ಒದ್ದೆಯಾಗಿರುವಿಕೆ, ಗಂಟುಗಳ ನೋವು, ತಲೆನೋವು, ನೆಗಡಿ, ಕೆಮ್ಮು, ಬೆವರು ಬಾರದಿರುವದು, ಜ್ವರದ ವೇಗ ಮಧ್ಯಮವಾಗಿರುವದು, ಇವು ವಾತಕಫಜ್ವರದ ಲಕ್ಷಣಗಳು.

ಷರಾ 'ಸ್ವೇದಾಪ್ರವರ್ತನಮ್' ಎಂದರೆ 'ಬೆವರು ಬಾರದಿರುವದು' ಎಂಬ ಸಾಧಾರಣವಾದ ಅರ್ಥವನ್ನು ಆ ವೀ. ಅಂಗೀಕರಿಸಿಯದೆ ಆದರೆ 'ಸ್ವೇದ-ಅ-ಪ್ರವರ್ತನಂ' ಎಂತ ವಿಭಾಗಿಸಿ ಬೆವರು ಬರುವದು ಎಂತ ವ್ಯಾಖ್ಯಾನಕಾರರು ಅರ್ಥ ಬರೆದದ್ದು ಸಹ ಕಾಣುತ್ತದೆ (ಮ ವ್ಯಾ 27) ಮಲಬದ್ಧತೆ, ಕಣ್ಣುಕತ್ತಲೆ, ಉಬ್ಬಸ ಮತ್ತು ಭ್ರಮೆ ಸಹ, ಈ ಜ್ವರದ ಲಕ್ಷಣ ಎಂತ ವಾ (ಪು 188)

23. ಮುಹುರ್ದಾಹೋ ಮುಹುಃ ಶೀತಂ ಸ್ವೇದಸ್ತಮ್ಭೋ ಮುಹುರ್ಮುಹುಃ |
ಕಫಪಿತ್ತಜ್ವರದ ಲಕ್ಷಣ. ಮೋಹಃ ಕಾಸೋಽರುಚಿಸ್ತೃಷ್ಣಾ ಶ್ಲೇಷ್ಮಪಿತ್ತಪ್ರವರ್ತನಮ್ ||
ಲಿಪ್ತತಿಕ್ತಾಸ್ಯತಾ ತನ್ದ್ರಾ ಶ್ಲೇಷ್ಮಪಿತ್ತಜ್ವರಾಕೃತಿಃ || (ಚ. 453)

ಒಮ್ಮೆ ಉರಿ ಮತ್ತು ಒಮ್ಮೆ ಚಳಿ, ಒಮ್ಮೆ ಬೆವರುವದು ಮತ್ತು ಒಮ್ಮೆ ಬೆವರಿಲ್ಲದಿರುವದು, ಕೆಮ್ಮು, ಅರುಚಿ, ಬಾಯಾರಿಕೆ, ಕಫ ಮತ್ತು ಪಿತ್ತ ಬಾಯಿಂದ ಬರುವದು, ಬಾಯಿಯಲ್ಲಿ ಮೂರ್ಛೆ, ಅಗ್ರ ಮತ್ತು ಕಹಿರುಚಿ, ಮತ್ತು ತನ್ದ್ರಿ, ಇವು ಕಫಪಿತ್ತಜ್ವರದ ಲಕ್ಷಣಗಳು.

24. ಸನ್ನಿಪಾತಜ್ವರಸ್ಯೋರ್ಧ್ವಂ ತ್ರಯೋದಶವಿಧಸ್ಯ ಹಿ |
ಪ್ರಾಕ್ಸೂತ್ರಿತಸ್ಯ ವಕ್ಷ್ಯಾಮಿ ಲಕ್ಷಣಂ ವೈ ಪೃಥಕ್ಪೃಥಕ್ |

ಹದಿಮೂರು ವಿಧವಾದ ಸನ್ನಿಪಾತ ಜ್ವರದ ಲಕ್ಷಣಗಳು.

ವಾತಪಿತ್ತೋಲ್ಬಣೇ ವಿದ್ಯಾಲ್ಲಿಂಗಂ ಮನ್ದಕಫೇ ಜ್ವರೇ |
ಭ್ರಮಃ ಪಿಪಾಸಾ ದಾಹಶ್ಚ ಗೌರವಂ ಶಿರಸೋ ಽತಿರುಕ್ || (1)
ಶೈತ್ಯಂ ಕಾಸೋ ಽಅರುಚಿಸ್ತನ್ದ್ರಾ ಪಿಪಾಸಾ ದಾಹರುಗ್ ವ್ಯಥಾ |
ವಾತಶ್ಲೇಷ್ಮೋಲ್ಬಣೇ ವ್ಯಾಧೌ ಲಿಂಗಂ ಪಿತ್ತಾವರೇ ವಿದುಃ || (2)
ಛರ್ದಿಃ ಶೈತ್ಯಂ ಮುಹುರ್ದಾಹಸ್ತೃಷ್ಣಾ ಮೋಹೋ ಽಸ್ಥಿವೇದನಾ |
ಮನ್ದವಾತೇ ವ್ಯವಸ್ಯನ್ತೇ ಲಿಂಗಂ ಪಿತ್ತಕಫೋಲ್ಬಣೇ || (3)
ಸಂಧ್ಯಸ್ಥಿಶಿರಸಃ ಶೂಲಂ ಪ್ರಲಾಪೋ ಗೌರವಂ ಭ್ರಮಃ |
ವಾತೋಲ್ಬಣೇ ಸ್ಯಾದ್ ದ್ವ್ಯನುಗೇ ತೃಷ್ಣಾ ಕಂಠಾಸ್ಯಶೋಷತಾ (4)
ರಕ್ತವಿಣ್ಮೂತ್ರತಾ ದಾಹಃ ಸ್ವೇದಸ್ತೃಡ್ಬಲಸಂಕ್ಷಯಃ |
ಮೂರ್ಚ್ಛಾ ಚಾತಿ ತ್ರಿದೋಷೇ ಸ್ಯಾಲ್ಲಿಂಗಂ ಪಿತ್ತೇ ಗರೀಯಸಿ || (5)
ಆಲಸ್ಯಾರುಚಿಹೃಲ್ಲಾಸದಾಹಸ್ತೃಷ್ಣಾವಮಿ(?ವಮ್ಯರತಿ)ಭ್ರಮೈಃ |
ಕಫೋಲ್ಬಣಂ ಸನ್ನಿಪಾತಂ ತನ್ದ್ರಾಕಾಸೇನ ಚಾದಿಶೇತ್ (6)
ಪ್ರತಿಶ್ಯಾ ಛರ್ದಿರಾಲಸ್ಯಂ ತನ್ದ್ರಾರುಚ್ಯಗ್ನಿಮಾರ್ದವಮ್ |
ಹೀನವಾತೇ ಪಿತ್ತಮಧ್ಯೇ ಚಿಹ್ನಂ ಶ್ಲೇಷ್ಮಾಧಿಕೇ ಮತಮ್ (7)
ಹಾರಿದ್ರಮೂತ್ರನೇತ್ರತ್ವಂ ದಾಹಸ್ತೃಷ್ಣಾ ಭ್ರಮೋ ಽರುಚಿಃ |
ಹೀನವಾತೇ ಮಧ್ಯಕಫೇ ಲಿಂಗಂ ಪಿತ್ತಾಧಿಕೇ ಮತಮ್ || (8)
ಶಿರೋರುಗ್ವೇಪಥುಃ ಶ್ವಾಸಃ ಪ್ರಲಾಪಶ್ಛರ್ದ್ಯರೋಚಕಾಃ |
ಹೀನಪಿತ್ತೇ ಮಧ್ಯಕಫೇ ಲಿಂಗಂ ವಾತಾಧಿಕೇ ಮತಮ್ || (9)
ಶೀತಕಂ ಗೌರವಂ ತನ್ದ್ರಾ ಪ್ರಲಾಪೋ ಽಸ್ಥಿಶಿರೋಽತಿರುಕ್ |
ಹೀನಪಿತ್ತೇ ವಾತಮಧ್ಯೇ ಲಿಂಗಂ ಶ್ಲೇಷ್ಮಾಧಿಕೇ ವಿದುಃ || (10)
ಪರ್ವಭೇದೋ ಽಗ್ನಿಮಾನ್ದ್ಯಂ ಚ ತೃಷ್ಣಾ ದಾಹೋ ಽರುಚಿರ್ಭ್ರಮಃ |
ಕಫಹೀನೇ ವಾತಮಧ್ಯೇ ಲಿಂಗಂ ಪಿತ್ತಾಧಿಕೇ ವಿದುಃ || (11)
ಶ್ವಾಸಕಾಸಪ್ರತಿಶ್ಯಾಯಾ ಮುಖಶೋಷೋ ಽತಿಪಾರ್ಶ್ವರುಕ್ |
ಕಫಹೀನೇ ಪಿತ್ತಮಧ್ಯೇ ಲಿಂಗಂ ವಾತಾಧಿಕೇ ಮತಮ್ || (12)
* * * ಕ್ಷಣೇ ದಾಹಃ ಕ್ಷಣೇಶೀತಮಸ್ಥಿಸನ್ಧಿಶಿರೋರುಜಃ |
ಸಾಸ್ರಾವೇ ಕಲುಷೇ ರಕ್ತೇ ನಿರ್ಭುಗ್ನೇ ಚಾಪಿ ದರ್ಶನೇ
ಸಸ್ವನೌ ಸರುಜೌ ಕರ್ಣೌ ಕಂಠಃ ಶೂಕೈರಿವಾವೃತಃ |
ತನ್ದ್ರಾ ಮೋಹಃ ಪ್ರಲಾಪಶ್ಚ ಕಾಸಃ ಶ್ವಾಸೋ ಽರುಚಿರ್ಭ್ರಮಃ ||

ಪರಿದಗ್ಧಾ ಖರಸ್ಪರ್ಶಾ ಜಿಹ್ವಾ ಸ್ರಸ್ತಾಂಗತಾ ಪರಮ್ ।
ಷ್ಠೀವನಂ ರಕ್ತಪಿತ್ತಸ್ಯ ಕಫೇನೋನ್ಮಿಶ್ರಿತಸ್ಯ ಚ ॥
ಶಿರಸೋ ಲೋಠನಂ ತೃಷ್ಣಾ ನಿದ್ರಾನಾಶೋ ಹೃದಿ ವ್ಯಥಾ ।
ಸ್ವೇದಮೂತ್ರಪುರೀಷಾಣಾಂ ಚಿರಾದ್ದರ್ಶನಮಲ್ಪಶಃ ॥
ಕೃಶತ್ವಂ ನಾತಿ ಗಾತ್ರಾಣಾಂ ಪ್ರತತಂ ಕಣ್ಠಕೂಜನಮ್ ।
ಕೋಠಾನಾಂ ಶ್ಯಾವರಕ್ತಾನಾಂ ಮಣ್ಡಲಾನಾಂ ಚ ದರ್ಶನಮ್ ॥
ಮೂಕತ್ವಂ ಸ್ರೋತಸಾಂ ಪಾಕೋ ಗುರುತ್ವಮುದರಸ್ಯ ಚ ।
ಚಿರಾತ್ ಪಾಕಶ್ಚ ದೋಷಾಣಾಂ ಸನ್ನಿಪಾತಜ್ವರಾಕೃತಿಃ ॥ (13) (ಚ. 453-55)

ಹದಿಮೂರು ವಿಧವಾದ ಸನ್ನಿಪಾತಜ್ವರಗಳೊಳಗೆ,

(1) ವಾತಪಿತ್ತ ಅಧಿಕವಾಗಿ ಕಫ ಮಂದವಾದ ಜ್ವರದ ಲಕ್ಷಣಗಳು —ಭ್ರಮೆ, ಬಾಯಾರಿಕೆ, ಉರಿ, ಮೈಭಾರ, ಮತ್ತು ಅತಿಯಾದ ತಲೆನೋವು

ಪರಾ ವಾತಪಿತ್ತ ಅಧಿಕವಾದ ಸನ್ನಿಪಾತದಲ್ಲಿ ಜ್ವರ, ಮದ, ಬಾಯಾರಿಕೆ, ಬಾಯಿ ಒಣಗುವಿಕೆ, ನಿಶ್ಚೈತನ್ಯ, ಹೊಟ್ಟೆಯುಬ್ಬರ, ಅರುಚಿ, ತಂದ್ರೆ, ಕೆಮ್ಮು, ಉಬ್ಬಸ, ಭ್ರಮೆ, ಮತ್ತು ಆಯಾಸ, ಈ ಲಕ್ಷಣಗಳು ಸಂಭವಿಸುತ್ತವೆ ಈ ಜ್ವರದ ಹೆಸರು ವಿಧು (ಚಿ ಸಾ ಸಂ 32)

(2) ವಾತಕಫ ಅಧಿಕವಾಗಿ ಪಿತ್ತ ಮಂದವಾದ ಜ್ವರದ ಲಕ್ಷಣಗಳು·—ಚಳಿ, ಕೆಮ್ಮು, ಅರುಚಿ, ತಂದ್ರೆ, ಬಾಯಾರಿಕೆ, ಉರಿ, ಮೈನೋವು, ಮತ್ತು ಸಂಕಟ.

ಪರಾ ಕಫವಾತ ಅಧಿಕವಾದ ಸನ್ನಿಪಾತದಲ್ಲಿ ಶೀತ (ಚಳಿ) ಜ್ವರ, ಮೂರ್ಛೆ, ಸೀನು, ಬಾಯಾರಿಕೆ, ಪಕ್ಕದಲ್ಲಿ ಹಿಡಕೊಳ್ಳುವದು, ಶೂಲೆ, ಬೆವರದಿರುವಿಕೆ, ಬಿಕ್ಕಳು, ಮತ್ತು ಉಬ್ಬಸ ಉಂಟಾಗುತ್ತವೆ ಈ ಜ್ವರದ ಹೆಸರು 'ಶೀಘ್ರಮಾರೀ' ಇದು ಅಸಾಧ್ಯ ಈ ಜ್ವರದವನು ಒಂದು ಹಗಲೂರಾತ್ರಿ ಬದುಕುವದಿಲ್ಲ (ಚಿ ಸಾ ಸಂ 32)

(3) ಪಿತ್ತಕಫ ಅಧಿಕವಾಗಿ ವಾತ ಮಂದವಾದ ಜ್ವರದ ಲಕ್ಷಣಗಳು —ವಾಂತಿ, ಒಮ್ಮೆ ಚಳಿ ಮತ್ತು ಒಮ್ಮೆ ಉರಿ, ಬಾಯಾರಿಕೆ, ಮೂರ್ಛೆ, ಮತ್ತು ಎಲುಬುಗಳಲ್ಲಿ ನೋವು.

ಪರಾ· ಪಿತ್ತಕಫ ಅಧಿಕವಾದ ಸನ್ನಿಪಾತದಲ್ಲಿ, ಒಳಗೆ ಉರಿ ಮತ್ತು ಹೊರಗೆ ಶೀತ, ಅಧಿಕವಾದ ಬಾಯಾರಿಕೆ, ಬಲಪಕ್ಕದಲ್ಲಿ ಶೂಲೆ, ಬಾಯಿ ಒಣಗುವಿಕೆ, ಗಂಟಲು ಹಿಡಕೊಳ್ಳುವದು, ರಕ್ತವನ್ನೂ ಪಿತ್ತವನ್ನೂ ಕಷ್ಟದಿಂದ ಉಗುಳುವದು, ಗಂಟಲಲ್ಲಿ ನೋವು, ಮಲ ಸಡಿಲುವದು, ಉಬ್ಬಸ, ಬಿಕ್ಕಳು, ಮತ್ತು ನಿಶ್ಚೈತನ್ಯ ಉಂಟಾಗುವವು ಈ ಜ್ವರದ ಹೆಸರು 'ಫಲ್ಗು' (ಚಿ ಸಾ ಸಂ 32)

(4) ವಾತ ಅಧಿಕವಾಗಿ ಪಿತ್ತಕಫಗಳು ಮಂದವಾದ ಜ್ವರದ ಲಕ್ಷಣಗಳು:—ಬಾಯಾರಿಕೆ, ಗಂಟಲು ಮತ್ತು ಬಾಯಿ ಒಣಗುವಿಕೆ, ಸಂದುಗಳಲ್ಲಿ, ಎಲುಬುಗಳಲ್ಲಿ ಮತ್ತು ತಲೆಯಲ್ಲಿ ಶೂಲೆ, ಪ್ರಲಾಪ, ಮೈಭಾರ, ಮತ್ತು ಭ್ರಮೆ.

ಪರಾ ವಾತಾಧಿಕ್ಯವುಳ್ಳ ಸನ್ನಿಪಾತದಲ್ಲಿ ಕೆಮ್ಮು, ಉಬ್ಬಸ, ಕಣ್ಣುಕತ್ತಲೆ, ಮೂರ್ಛೆ, ಪ್ರಲಾಪ, ಭ್ರಮೆ, ನಡುಕು, ಪಕ್ಕಗಳಲ್ಲಿ ನೋವು, ಆಕಳಿಕೆ, ಬಾಯಿಯಲ್ಲಿ ಒಗರು ರುಚಿ, ಈ ಲಕ್ಷಣಗಳು ಸಂಭವಿಸುವವು ಈ ಜ್ವರದ ಹೆಸರು 'ಏಕಘೋರಕ' ಇದು ಬಹಳ ಕಠಿಣವಾದದ್ದು (ಚಿ ಸಾ. ಸಂ 32)

(5) ಪಿತ್ತ ಅಧಿಕವಾಗಿ ವಾತಕಫಗಳು ಮಂದವಾದ ಜ್ವರದ ಲಕ್ಷಣಗಳು.—ಬಾಯಾರಿಕೆ, ಮಲಮೂತ್ರಗಳು ರಕ್ತವರ್ಣವಾಗುವಿಕೆ, ಉರಿ, ಬೆವರು, ಬಲ ಬಹಳ ಕ್ಷಯಿಸುವದು, ಮತ್ತು ಮೂರ್ಛೆ.

ಷರಾ ಪಿತ್ತಾಧಿಕ್ಯವುಳ್ಳ ಸನ್ನಿಪಾತದಲ್ಲಿ ಅತಿಸಾರ, ಭ್ರಮೆ, ಮೂರ್ಛೆ, ಬಾಯಿಹುಣ್ಣು, ಶರೀರದಲ್ಲಿ ರಕ್ತವರ್ಣದ ಬಿಂದುಗಳು, ಚುಕ್ಕೆಗಳು ಮತ್ತು ತೀವ್ರವಾದ ಉರಿ, ಉಂಟಾಗುತ್ತವೆ. ಈ ಸನ್ನಿಪಾತಕ್ಕೆ 'ಆಶುಕಾರಿ' ಎನ್ನುತ್ತಾರೆ (ಚಿ ಸಾ. ಸಂ, 32)

(6) ಕಫಾಧಿಕ್ಯವುಳ್ಳ ಸನ್ನಿಪಾತಜ್ವರದ ಲಕ್ಷಣಗಳು.—ಆಲಸ್ಯ, ಅರುಚಿ, ಹೃಲ್ಲಾಸ*, ಉರಿ, ವಾಂತಿ, ಉಲ್ಲಾಸವಿಲ್ಲದಿರುವಿಕೆ, ಭ್ರಮೆ, ತಂದ್ರೆ ಮತ್ತು ಕೆಮ್ಮು

*ಹೃಲ್ಲಾಸ ಅಂದರೆ ಎದೆಯಲ್ಲಿ ಉತ್ಕ್ಲೇಶ (ವಾಕರಿಕೆಯ ಸಂಕಟ) ಉಂಟಾಗಿ ಸಂಭವಿಸುವ ಪ್ರಸೇಕ (ಬಾಯಿಯಿಂದ ನೀರು ಬರುವದು) ಎಂತ ಇಂ ವ್ಯಾ (ಅ ಸಂ II-18), ಎದೆಯು ತಲ್ಲಣಿಸುವಿಕೆ ನಿಘಂಟುಗಳೆಲ್ಲಾ ಸಾಧಾರಣವಾಗಿ ಹೃಲ್ಲಾಸಕ್ಕೆ 'ಬಿಕ್ಕಟ್ಟು' ಎಂತ ಅರ್ಥ ಬರೆದಿರುತ್ತವೆ

ಷರಾ. ಜಾಡ್ಯ, ರಾತ್ರಿ ನಿದ್ರೆ ಬಂದಾಗ್ಯೂ ಗದ್ಗದ ಮಾತು ಕಣ್ಣುಗಳು ಸ್ತಬ್ಧವಾಗಿರುವಿಕೆ, ಬಾಯಿ ಸಿಹಿರುಚಿಯುಳ್ಳದ್ದಾಗುವದು, ಈ ಲಕ್ಷಣಗಳು ಕಫಾಧಿಕ್ಯವುಳ್ಳ ಸನ್ನಿಪಾತದಲ್ಲಿ ಕಾಣುವವು ಈ ಸನ್ನಿಪಾತಕ್ಕೆ ಮುನಿಗಳು 'ಕಂಪನ' ಎಂಬ ಹೆಸರನ್ನಿಟ್ಟಿದ್ದಾರೆ (ಚಿ. ಸಾ ಸಂ 32)

(7) ವಾತ ಹೀನ, ಪಿತ್ತ ಮಧ್ಯಮ, ಕಫಾಧಿಕ, ಆದ ಜ್ವರದ ಲಕ್ಷಣಗಳು —ಸೆಗಡಿ, ವಾಂತಿ, ಆಲಸ್ಯ, ತಂದ್ರೆ, ಅರುಚಿ, ಮತ್ತು ಅಗ್ನಿಮಾಂದ್ಯ.

ಷರಾ ವಾತ-ಪಿತ್ತ-ಕಫಗಳು ಕ್ರಮವಾಗಿ ಹೀನ-ಮಧ್ಯ-ಅಧಿಕವಾದಾಗ್ಗೆ ಆಯಾ ದೋಷಗಳ ಪೀಡೆಗಳು, ಅಲ್ಪವಾದ ಶೂಲೆ, ಸೊಂಟದಲ್ಲಿ ಚುಚ್ಚಿದಹಾಗಿನ ನೋವು, ನಡುವಿನಲ್ಲಿ (ಸೊಂಟದ ಹಿಂಬದಿ) ಉರಿ, ಸಂಕಟ, ಭ್ರಮೆ, ಬಹಳವಾದ ಆಯಾಸ, ತಲೆ-ವಸ್ತಿ-ಮನ್ಯೆ ಹೃದಯಗಳಲ್ಲಿ ಮತ್ತು ಮೂತಿನಲ್ಲಿ ಪೀಡೆ, ನಿಶ್ಚೈತನ್ಯ, ಉಬ್ಬಸ ಬಿಕ್ಕಟ್ಟು, ಕೆಮ್ಮು, ಜಾಡ್ಯ, ಮತ್ತು ಸಂಜ್ಞೆಯಿಲ್ಲದಿರುವಿಕೆ ಕಾಣುವವು ಈ ಸನ್ನಿಪಾತ ಜ್ವರಕ್ಕೆ 'ವೈದಾರಿಕಾ' ಎಂತ ಹೆಸರು. ಅದು ಬಹು ಕಠಿಣವಾದ್ದು, ಅದು ಉತ್ಪನ್ನವಾದೊಡನೆ ಅದನ್ನು ವಾಸಿಮಾಡಬೇಕು ಅದರಲ್ಲಿ ಕಿವಿಯ ಬುಡದಲ್ಲಿ ಬಹು ಕಠಿಣವಾದ ಬೊಕ್ಕೆ ಉಂಟಾಗುತ್ತದೆ, ಅದರಿಂದ ಬದುಕುವದು ಕಷ್ಟ, ಮೂರು ರಾತ್ರಿ ಕಳೆದ ಮೇಲೆ ಇದಕ್ಕೆ ಚಿಕಿತ್ಸೆ ಮಾಡುವದು ವ್ಯರ್ಥ (ಚಿ ಸಾ ಸಂ 33)

(8) ವಾತ ಹೀನ, ಕಫ ಮಧ್ಯಮ, ಪಿತ್ತ ಅಧಿಕ, ಆಗಿರುವ ಜ್ವರದ ಲಕ್ಷಣಗಳು — ಮೂತ್ರವೂ ಕಣ್ಣುಗಳೂ ಅರಸಿನ ವರ್ಣವಾಗುವದು, ಉರಿ, ಬಾಯಾರಿಕೆ, ಭ್ರಮೆ, ಮತ್ತು ಅರುಚಿ.

ಷರಾ ಹೀನ-ಪ್ರವೃದ್ಧ ಮಧ್ಯಗಳಾದ ವಾತ-ಪಿತ್ತ-ಕಫಗಳಿಂದ ಸನ್ನಿಪಾತ ಉಂಟಾದಾಗ್ಗೆ, ಹಿಂದೆ ಹೇಳಲ್ಪಟ್ಟ ರೋಗಗಳೇ ದೋಷ, ಬಲ ಮತ್ತು ಆಶ್ರಯಗಳಿಗೆ ತಕ್ಕ ಹಾಗೆ ಸಂಭವಿಸುತ್ತವೆ ಎದೆ ಉರಿಯುತ್ತದೆ, ಯಕೃತ್-ಪ್ಲೀಹ-ಅಂತ್ರ ಫುಪ್ಪುಸಗಳು ಪಾಕವಾಗುತ್ತವೆ, ಮತ್ತು ಊರ್ಧ್ವಮುಖವಾಗಿಯೂ ಕೆಳಮುಖವಾಗಿಯೂ ಅತಿಯಾಗಿ ಕೀವು ಮತ್ತು ರಕ್ತ ಹೊರಗೆ ಹೋಗುತ್ತವೆ. ಈ ಸನ್ನಿಪಾತಕ್ಕೆ 'ಯಾಮ್ಯ' ಎಂತ ಹೆಸರು (ಚಿ ಸಾ ಸಂ 34)

(9) ಪಿತ್ತ ಹೀನ, ಕಫ ಮಧ್ಯಮ, ವಾತ ಅಧಿಕ, ಆದ ಜ್ವರದ ಲಕ್ಷಣಗಳು.—ತಲೆನೋವು, ಮೈನಡುಕು, ಉಬ್ಬಸ, ಪ್ರಲಾಪ, ವಾಂತಿ ಮತ್ತು ಅರುಚಿ.

ಷರಾ ಪ್ರವೃದ್ಧ-ಹೀನ-ಮಧ್ಯಗಳಾದ ವಾತ-ಪಿತ್ತ-ಕಫಗಳಿಂದುಂಟಾದ ಸನ್ನಿಪಾತದಲ್ಲಿ ದೋಷ-ಬಲ-ಆಶ್ರಯಗಳಿಗೆ ಸರಿಯಾಗಿ ಅದೇ ರೋಗಗಳೇ ಉಂಟಾಗುವದಲ್ಲದೆ, ಪ್ರಲಾಪ, ಆಯಾಸ, ಕಣ್ಣುಕತ್ತಲೆ, ನಡುಕು, ಮೂರ್ಛೆ, ನಿರುಲ್ಲಾಸ ಮತ್ತು ಭ್ರಮೆ ಸಂಭವಿಸುತ್ತವೆ, ಮತ್ತು ಕಡೆಗೆ ಮನ್ಯಾಸ್ತಂಭ ಉಂಟಾಗಿ ಸಾಯುವದು ಇದರಲ್ಲಿ ವಿಶೇಷ ಈ ಜ್ವರಕ್ಕೆ 'ಕ್ರಕಚ' ಎಂತ ಹೆಸರು (ಚಿ. ಸಾ ಸಂ 34)

(10) ಪಿತ್ತ ಹೀನ, ವಾತ ಮಧ್ಯಮ ಮತ್ತು ಕಫ ಅಧಿಕ, ಆದ ಜ್ವರದ ಲಕ್ಷಣಗಳು.—ಚಳಿ, ಮೈಭಾರ, ತಂದ್ರೆ, ಪ್ರಲಾಪ, ಮತ್ತು ಎಲುಬುಗಳಲ್ಲಿಯೂ ತಲೆಯಲ್ಲಿಯೂ ಅತಿಯಾದ ನೋವು.

ಷರಾ ಮಧ್ಯ-ಹೀನ-ಅಧಿಕವಾದ ವಾತಾದಿ ದೋಷಗಳಿಂದ ಸನ್ನಿಪಾತ ಉಂಟಾದಾಗ್ಗೆ ದೋಷ-ಬಲ-ಆಶ್ರಯಗಳಿಗೆ ಸರಿಯಾದ ರೋಗಗಳು ಉತ್ಪನ್ನವಾಗುವದಲ್ಲದೆ, ಒಳಗೆ ವಿಶೇಷವಾದ ಉರಿ, ಮಾತಾಡುವದಕ್ಕೆ ಶಕ್ತಿಯಿಲ್ಲದಿರುವಿಕೆ,

ಮುಖಮಂಡಲವು ಅರಗಿನ ಹಾಗೆ ರಕ್ತವರ್ಣವಾಗುವದು, ಪ್ರಯತ್ನಪಟ್ಟು ಸೆಳೆದಾಗ್ಯೂ ಕಫವು ಎದೆಯಿಂದ ಹೊರಗೆ ಹೋಗದಿರುವದು, ಪಕ್ಕದಲ್ಲಿ ಬಾಣವನ್ನು ನೆಟ್ಟಹಾಗಿನ ನೋವು, ಹೃದಯದಲ್ಲಿ ಅಗಿದಹಾಗಿನ ವೇದನೆ, ನಿಶ್ಚೈತನ್ಯ, ಉಬ್ಬಸ ಮತ್ತು ಬಿಕ್ಕಳು ದಿನೇ ದಿನೇ ವೃದ್ಧಿಯಾಗುವದು, ನಾಲಿಗೆಯು ಸುಟ್ಟು ದೊರಗಾಗಿರುವದು, ಗಂಟಲಲ್ಲಿ ಸುಂಕುಗಳ ಹಾಗಿನ ಮುಳ್ಳು ಮುಚ್ಚಿಕೊಳ್ಳುವದು, ಮಲಮೂತ್ರಗಳ ವಿಸರ್ಜನ ಗೊತ್ತಾಗದಿರುವದು, ಪಾರಿವಾಳದಂತೆ ಕೂಗುವದು, ಅತಿಯಾಗಿ ಕಫ ತುಂಬಿಕೊಳ್ಳುವದು, ಬಾಯಿ, ತುಟಿ ಮತ್ತು ತಾಲು ಒಣಗುವದು, ತಂದ್ರೆ, ಅತಿಯಾಗಿ ನಿದ್ರೆಯ ಪೀಡೆ, ಅಗ್ನಿನಾಶ, ಮುಖದ ಛಾಯೆ ಕೆಡುವದು, ನಿರುಲ್ಲಾಸ, ಯಾವಾಗಲೂ ಆಗದವುಗಳನ್ನು ಇಚ್ಛಿಸುವದು, ಬಹಳವಾಗಿ ಸೆಳೆದು ಅಲ್ಪವಾಗಿ ರಕ್ತವನ್ನುಗುಳುವದು, ಈ ಲಕ್ಷಣಗಳು ಕಾಣುವವು ಇದು 'ಕರ್ಕೋಟಕ' ಎಂಬ ಹೆಸರುಳ್ಳ ಅತಿ ಕಠಿಣವಾದ ಸನ್ನಿಪಾತ (ಚ ಶಾ ಸಂ 33)

(11) ಕಫ ಹೀನ, ವಾತ ಮಧ್ಯಮ, ಪಿತ್ತ ಅಧಿಕ, ಆದ ಜ್ವರದ ಲಕ್ಷಣಗಳು — ಗಂಟುಗಳಲ್ಲಿ ಒಡೆತ, ಅಗ್ನಿಮಾಂದ್ಯ, ಬಾಯಾರಿಕೆ, ಉರಿ, ಅರುಚಿ, ಮತ್ತು ಭ್ರಮೆ

ಪರಾ ಮಧ್ಯ-ಪ್ರವೃದ್ಧ-ಹೀನ ಆದ ವಾತಾದಿ ದೋಷಗಳಿಂದ ಸನ್ನಿಪಾತ ಉಂಟಾದಾಗ್ಯೆ, ಅದೇ ಹಿಂದೆ ಹೇಳಿದ ರೋಗಗಳು ದೋಷಬಲಾಶ್ರಯಗಳಿಗೆ ಸರಿಯಾಗಿ ಉಂಟಾಗುವದಲ್ಲದೆ, ಕಣ್ಣುಕತ್ತಲೆ, ಪ್ರಲಾಪ, ಮೂರ್ಛೆ, ಮನ್ಯಾಸ್ತಂಭ, ತಲೆ ಬಿಗಿಯುವದು ಕೆಮ್ಮು, ಉಬ್ಬಸ, ಭ್ರಮೆ, ತಂದ್ರೆ, ಎಚ್ಚರವಿಲ್ಲದಿರುವಿಕೆ, ಎದೆಯಲ್ಲಿ ನೋವು, (ಮೂಗು, ಬಾಯಿ ಮುಂತಾದ) ಛಿದ್ರಗಳಿಂದ ರಕ್ತ ಹೊರಡುವದು, ಕಣ್ಣುಗಳು ರಕ್ತವರ್ಣವಾಗಿಯೂ ಸ್ತಬ್ಧವಾಗಿಯೂ ಇರುವದು, ಈ ವಿಶೇಷ ಲಕ್ಷಣಗಳು ಕಾಣುವವು ಇದರಲ್ಲಿ ಮೂರು ದಿನಗಳೊಳಗೆ ಮೃತ್ಯು ಉಂಟಾಗುವದು ಈ ಸನ್ನಿಪಾತಕ್ಕೆ ಮುನಿಗಳು 'ಪಾಕಲ' ಎಂತ ಹೆಸರಿಟ್ಟಿದ್ದಾರೆ (ಭಾ ಪ್ರ 287)

(12) ಕಫ ಹೀನ, ಪಿತ್ತ ಮಧ್ಯಮ, ವಾತ ಅಧಿಕ, ಆದ ಜ್ವರದ ಲಕ್ಷಣಗಳು — ಉಬ್ಬಸ ಕೆಮ್ಮು, ನೆಗಡಿ, ಬಾಯಿ ಒಣಗುವಿಕೆ, ಮತ್ತು ಪಕ್ಕಗಳಲ್ಲಿ ಅತಿಯಾದ ನೋವು.

ಪರಾ ಪ್ರವೃದ್ಧ-ಮಧ್ಯ ಹೀನ ಆದ ವಾತ ಪಿತ್ತ-ಕಫಗಳಿಂದ ಉಂಟಾದ ಸನ್ನಿಪಾತ ಜ್ವರದಲ್ಲಿ ಅದೇ ಹಿಂದೆ ಹೇಳಿದ ರೋಗಗಳೇ ದೋಷಬಲಕ್ಕೆ ಸರಿಯಾಗಿ ಉಂಟಾಗುವದಲ್ಲದೆ, ಪ್ರಲಾಪ, ಆಯಾಸ, ಬಹಳವಾದ ಕಣ್ಣುಕತ್ತಲೆ, ನಡುಕು, ಮೂರ್ಛೆ, ಅತಿಯಾದ ಭ್ರಮೆ, ಒಂದು ಪಕ್ಕ ಸ್ವಾಧೀನವಿಲ್ಲದಿರುವಿಕೆ, ಈ ಲಕ್ಷಣಗಳು ವಿಶೇಷವಾಗಿ ಕಾಣುವವು 'ಸಮ್ಮೋಹಕ' ಎಂಬ ಹೆಸರುಳ್ಳ ಈ ಸನ್ನಿಪಾತವು ಬಹು ಕಠಿಣವಾದದ್ದು (ಭಾ ಪ್ರ 287)

(13) ಮೂರು ದೋಷಗಳೂ ಅಧಿಕವಾಗಿ ಉಂಟಾಗುವ ಜ್ವರದ ಲಕ್ಷಣಗಳು.— ಒಂದು ಕ್ಷಣದಲ್ಲಿ ಉರಿ ಮತ್ತೊಂದು ಕ್ಷಣದಲ್ಲಿ ಚಳಿ, ಎಲುಬುಗಳಲ್ಲಿ, ಸಂದುಗಳಲ್ಲಿ ಮತ್ತು ತಲೆಯೊಳಗೆ ನೋವು, ಕಣ್ಣುಗಳು ನೀರನ್ನು ಸುರಿಸುತ್ತಾ, ಕಲಂಕಿತವಾಗಿಯೂ, ಕೆಂಪಾಗಿಯೂ, ಚಟ್ಟೆಯಾಗಿಯೂ ಇರುವದು, ಕಿವಿಗಳೊಳಗೆ ಶಬ್ದ ಮತ್ತು ನೋವು, ಕಂಠವು ಸುಂಕುಗಳ ಹಾಗಿನ ಮುಳ್ಳುಗಳಿಂದ ಮುಚ್ಚಲ್ಪಟ್ಟಿರುವದು, ಕಣ್ಣುಕತ್ತಲೆ, ಪ್ರಲಾಪ, ಕೆಮ್ಮು, ಉಬ್ಬಸ, ಅರುಚಿ, ಭ್ರಮೆ, ನಾಲಿಗೆಯ ಮೇಲ್ಭಾಗ ಸುಟ್ಟ ಹಾಗೆ ಮತ್ತು ದೊರಗಾಗಿ ಇರುವದು, ಅಂಗಗಳು ಬಹಳ ಸಡಿಲಾಗಿರುವದು (ಸ್ವಾಧೀನವಿಲ್ಲದಿರುವದು), ಕಫಮಿಶ್ರವುಳ್ಳ ರಕ್ತಪಿತ್ತಗಳನ್ನು ಉಗಿಯುತ್ತಿರುವದು, ತಲೆಯನ್ನು ಅತ್ತಿತ್ತ ಅಲ್ಲಾಡಿಸುವದು, ಬಾಯಾರಿಕೆ, ನಿದ್ರೆ ಇಲ್ಲದಿರುವಿಕೆ, ಹೃದಯದಲ್ಲಿ ನೋವು, ಕಾಲಾಂತರದಲ್ಲಿ ಅಲ್ಪವಾಗಿ ಬೆವರು, ಮೂತ್ರ ಮತ್ತು ಮಲ ಕಾಣುವದು, ಅತಿಯಲ್ಲದ ಶರೀರದ ಕೃಶತೆ, ಕಂಠದಲ್ಲಿ ಎಡೆಬಿಡದೆ ನರಕುವದು, ಕೆಂಪಾದ ಅಥವಾ ಕಪ್ಪೊತ್ತಿದ ಕೆಂಪು ವರ್ಣದ ಕೋರಗಳು ಮತ್ತು ಮಂಡಲಗಳು (ತುರಿಕೆಯುಳ್ಳ ದಡಿಕೆಗಳ ಭೇದಗಳು) ಕಾಣುವದು, ಮೂಕತ್ವ, ಸ್ರೋತಸ್ಸುಗಳಲ್ಲಿ ಪಾಕ (ಬೆಂದ ಹುಣ್ಣು), ಹೊಟ್ಟೆ ಭಾರವಾಗುವದು, ಮತ್ತು ದೋಷಗಳು ವಿಳಂಬದಿಂದ ಪಾಕವಾಗುವದು.

ಪರಾ· ಮೂರು ದೋಷಗಳೂ ಕೆದರಿ ಉಂಟಾದ ಸನ್ನಿಪಾತದಲ್ಲಿ ಆ ಮೂರು ದೋಷಗಳಿಗೆ ಉಕ್ತವಾದ ಲಕ್ಷಣಗಳೆಲ್ಲಾ ಕಾಣುವವು, ವ್ಯಾಧಿಗಳಲ್ಲಿ ಅದು ಕಠಿಣವಾದ್ದು, ಸಿಡಿಲು, ಬೆಂಕಿ, ಶಸ್ತ್ರಗಳಿಗೆ ಸಮಾನವಾದ್ದು, ಅಂಗಗಳೂ ದೃಷ್ಟಿಯೂ ಸ್ತಬ್ಧವಾಗಿ, ಉಬ್ಬಸವೇ ಮುಖ್ಯ ಲಕ್ಷಣವಾಗಿರುತ್ತದೆ, ಅದು ಮೂರು ರಾತ್ರಿಗಳನಂತರ ರೋಗಿಯ ಪ್ರಾಣವನ್ನು ಅಪಹರಿಸುತ್ತದೆ; ಅಂಥಾ ಅವಸ್ಥೆಯಲ್ಲಿರುವವನನ್ನು ನೋಡಿ ಮೂಢರಲ್ಲಿ ಕೆಲವರು ಅವನಿಗೆ ಆಕಾಲದಲ್ಲಿ ಸಂಚರಿಸುತ್ತಿರುವ ರಾಕ್ಷಸರ ಪೀಡೆ ಎಂತ, ಕೆಲವರು ದುರ್ಗೆಯೋ, ಯಕ್ಷಿಣಿಯೋ, ಬ್ರಹ್ಮರಾಕ್ಷಸರೋ, ಅವನನ್ನು ಬೆದರಿಸಿದ್ದಾರೆಂತ, ಕೆಲವರು ಪಿಶಾಚಿಗಳ, ಗುಹ್ಯಕರ, ಅಥವಾ ಅಂಥಾ ಬೇರೆ ಜೀವಿಗಳ ಪೆಟ್ಟು ಅವನ ತಲೆಗೆ ಬಿದ್ದದೆಂತ, ಕೆಲವರು ಕುಲದೇವತೆಗಳ ಪೂಜೆಯನ್ನು ಮಾಡದೆ ಅವನು ತಪ್ಪಿದರಿಂದ ಕುಲದೇವತೆಗಳು ಅವನನ್ನು ಪೀಡಿಸುತ್ತವೆ ಎಂತ, ಬೇರೆ ಕೆಲವರು ಅವನಿಗೆ ನವಗ್ರಹಗಳ ಪೀಡೆಯುಂಟಾಗಿದ ಎಂತ, ಮತ್ತು ಇನ್ನೂ ಕೆಲವರು ಅವನಿಗೆ ಕೃತ್ರಿಮ ವಿಷಹಾಕಿದ್ದಾರೆಂತ ಹೇಳುತ್ತಾರೆ ಈ ಸನ್ನಿಪಾತಕ್ಕೆ 'ಕೂಟಪಾಕಲ' ಎಂತ ವೈದ್ಯರು ಹೇಳುತ್ತಾರೆ (ಭಾ ಪ್ರ 286-7)

25. ಕುಂಭೀಪಾಕಃ ಪ್ರೋರ್ಣುನಾವಃ ಪ್ರಲಾಪೀ ಹ್ಯಂತ್ರದಾರ್ಹೋ ದಣ್ಡ
ಪಾತೋಽನ್ತಕಶ್ಚ ।
ಏಣೀದಾಹಶ್ಚಾಥ ಹಾರಿದ್ರಸಂಜ್ಞೋ ಭೇದಾ ಏತೇ ಸನ್ನಿಪಾತಜ್ವರಸ್ಯ ॥
ಅಜಘೋಷಭೂತಹಾಸೌ ಯನ್ತ್ರಾಪೀಡಶ್ಚ ಸನ್ನ್ಯಾಸಃ ।
ಸಂಶೋಷೀ ಚ ವಿಶೇಷಾಸ್ತಸ್ಯೈವೋಕ್ತಾಸ್ತ್ರಯೋದಶಾನ್ಯತ್ರ ॥
(ಭಾ. ಪ್ರ 289)

ಸನ್ನಿಪಾತದಲ್ಲಿ ಕುಂಭೀಪಾಕಾದಿ ೧೩ ಭೇದಗಳು

1. ಕುಂಭೀಪಾಕ, 2. ಪ್ರೋರ್ಣುನಾವ, 3. ಪ್ರಲಾಪೀ, 4. ಅಂತರ್ದಾಹ, 5. ದಂಡಪಾತ, 6. ಅಂತಕ, 7. ಏಣೀದಾಹ, 8. ಹಾರಿದ್ರ, 9. ಅಜಘೋಷ, 10. ಭೂತಹಾಸ, 11. ಯಂತ್ರಾಪೀಡ, 12. ಸನ್ಯಾಸ, ಮತ್ತು 13. ಸಂಶೋಷೀ, ಇವು ಅನ್ಯಕಡೆಯಲ್ಲ ವರ್ಣಿಸಲ್ಪಟ್ಟ ಸನ್ನಿಪಾತಜ್ವರವ ಹದಿಮೂರು ಭೇದಗಳು.

ಪರಾ ಇವುಗಳ ಲಕ್ಷಣವರ್ಣನವನ್ನು ಇಲ್ಲಿ ಲೋಪಿಸಿಯದೆ ಆ ವರ್ಣನದ ಕೊನೆಯಲ್ಲಿ "ಇವುಗಳಲ್ಲೆಲ್ಲ ನಾರಾಯಣ ದೇವರೇ ವೈದ್ಯ, ಗಂಗೆಯ ನೀರೇ ಔಷಧ, ಸೌಖ್ಯಕ್ಕೆ ಏಕಕಾರಣನೂ ನಿತ್ಯನೂ ಆದ ಮೃತ್ಯುಂಜಯನನ್ನು ಧ್ಯಾನಿಸಬೇಕು" ಎಂತ ಉಂಟು ಇವುಗಳು ಮತ್ತು ಹಿಂದಿನ ಸಂಖ್ಯೆಯ ಪರಾದಲ್ಲಿ ವರ್ಣಿಸಲ್ಪಟ್ಟ 'ವಿಧು' ಮೊದಲಾವುಗಳು ಸನ್ನಿಪಾತಜ್ವರದ ಅಂತಿಮಾವಸ್ಥೆಯ ಭೇದಗಳೆಂತ ತಿಳಿಯಬೇಕು ಈ ಕುಂಭೀಪಾಕಾದಿ ಭೇದಗಳ ಲಕ್ಷಣವರ್ಣನದಲ್ಲಿ ದೋಷಭೇದವನ್ನು ಹೇಳಿರುವದಿಲ್ಲ

26. ವಾತಪಿತ್ತಕಫೈರ್ಯುಕ್ತಃ ಪ್ರದಾಹಃ ಸ್ಯಾತ್ತ್ರಿದೋಷಜಃ ।
ಸ ಚ ರಕ್ತೇನ ಸಂಯುಕ್ತೋ ಜ್ವರಃ ಸ್ಯಾತ್ಸಾನ್ನಿಪಾತಿಕಃ ।
ನ ರಕ್ತೇನ ವಿನಾ ವಿದ್ಧಿ ಜ್ವರಂ ವೈ ಸಾನ್ನಿಪಾತಿಕಮ್ ।
ಕ್ವಾಥೈಃ ಪಚನಕೈರ್ದೋಷಾಃ ಪ್ರಶಮಂ ಯಾನ್ತಿ ಮಾನವೇ ॥
ತಸ್ಮಾತ್ಪ್ರಶಮಿತೇ ದೋಷೇ ರಕ್ತಂ ನೈವ ವಿಲೀಯತೆ ।
ತೇನೈವ ಜಾಯತೇ ಶೋಥಃ ಕರ್ಣಮೂಲೇ ತು ದಾರುಣಃ ॥
(ಹಾ. 120)

ಸನ್ನಿಪಾತದಲ್ಲಿ ರಕ್ತದೋಷ

ವಾತಪಿತ್ತಕಫಗಳ ದೋಷದಿಂದ ಉಂಟಾಗುವ ಮಹಾ ಜ್ವರವು ತ್ರಿದೋಷಜ. ಆ ಜ್ವರವು ರಕ್ತದೊಂದಿಗೆ ಸೇರಿಕೊಂಡಲ್ಲಿ ಅದಕ್ಕೆ 'ಸನ್ನಿಪಾತ' ಎನ್ನುವರು. ರಕ್ತದೋಷ ಸೇರದ ವಿನಾ ಸನ್ನಿಪಾತಜ್ವರ ಉಂಟಾಗುವದಿಲ್ಲ. ಪಾಚನಕರವಾದ ಕಷಾಯಗಳಿಂದ ಮನುಷ್ಯನ (ವಾತಾದಿ) ದೋಷಗಳು ಶಮನವಾಗುತ್ತವೆ. ಆದರೆ ಅದರಿಂದ ರಕ್ತದ ದೋಷ ಅಡಗುವದಿಲ್ಲ. ಆ ರಕ್ತದೋಷದಿಂದಲೇ ಕಿವಿಯ ಬುಡದಲ್ಲಿ ಕಠಿಣವಾದ ಬಾವು ಉಂಟಾಗುತ್ತದೆ.

ಷರಾ: ಈ ಕಾರಣದಿಂದ ರಕ್ತದೋಷಕ್ಕೆ ಪ್ರತೀಕಾರವಾಗಿ ರಕ್ತಮೋಕ್ಷಣಾದಿ ಕ್ರಮಗಳನ್ನು ನಡಿಸಬೇಕಾಗಿಯೂ ಹೇಳಿದ್ದಾನೆ (ಹಾ 120)

27: ಶೀತಾಂಗಸ್ತ್ರಿಮಲೋದ್ಭವಜ್ವರಗಣೇ ತನ್ದ್ರೀ ಪ್ರಲಾಪೀ ತತೋ
ರಕ್ತಷ್ಠೀವಯಿತಾ ಚ ತತ್ರ ಗಣಿತಃ ಸಂಭುಗ್ನನೇತ್ರಸ್ತಥಾ ।
ಸಾಭಿನ್ಯಾಸಕಜಿಹ್ವಕಶ್ಚ ಕಥಿತಃ ಪ್ರಾಕ್ಸನ್ಧಿಗೋಽಥಾಂತಕೋ
ರುಗ್ದಾಹಃ ಸಹಚಿತ್ತವಿಭ್ರಮ ಇಹ ದ್ವೌ ಕರ್ಣಕಂಠಗ್ರಹೌ ||
(ಭಾ. ಪ್ರ. 288)

ಸನ್ನಿಪಾತಜ್ವರದಲ್ಲಿ ಶೀತಾಂಗಾದಿ ೧೩ ಭೇದಗಳು

(1) ಶೀತಾಂಗ, (2) ತಂದ್ರೀ, (3) ಪ್ರಲಾಪಕ, (4) ರಕ್ತಷ್ಠೀವೀ (5) ಸಂಭುಗ್ನನೇತ್ರ, (6) ಅಭಿನ್ಯಾಸಕ, (7) ಜಿಹ್ವಕ, (8) ಸಂಧಿಗ, (9) ಅಂತಕ, (10) ರುಗ್ದಾಹ, (11) ಚಿತ್ತವಿಭ್ರಮ, (12) ಕರ್ಣಗ್ರಹ (ಕರ್ಣಿಕ), (13) ಕಂಠಗ್ರಹ (ಕಂಠಕುಬ್ಜ), ಇವು ತ್ರಿದೋಷಗಳಿಂದ ಹುಟ್ಟಿದ ಜ್ವರಗಳ ಲೆಕ್ಕದಲ್ಲಿ ಸೇರಿದವು.

(೧) ಹಿಮಶಿಶಿರಶರೀರಃ ಸನ್ನಿಪಾತಜ್ವರೋ ಯಃ ಶ್ವಸನಕಸನಹಿಕ್ಕಾಮೋಹಕಂಪಪ್ರಲಾಪೈಃ ।
ಕ್ಲಮಬಹುಕಫವಾತಾದಾಹವಮ್ಯಂಗಪೀಡಾಸ್ವರವಿಕೃತಿಭಿರಾರ್ತಃ ಶೀತಗಾತ್ರಃ ಸ ಉಕ್ತಃ || (ಭಾ. ಪ್ರ. 288)

ಶೀತಾಂಗ ಲಕ್ಷಣ

ಶರೀರವು ಹಿಮದಂತೆ ತಣ್ಣಗಿರುವದು ಅಲ್ಲದೆ ಉಬ್ಬಸ, ಕೆಮ್ಮು, ಬಿಕ್ಕಟ್ಟು, ಮೂರ್ಛೆ, ನಡುಕು, ಪ್ರಲಾಪ, ಆಯಾಸ, ಬಹಳವಾದ ಕಫ, ವಾಯು, ಉರಿ, ವಾಂತಿ, ಮೈನೋವು, ಸ್ವರವಿಕಾರಗಳ ಪೀಡೆ, ಸಹ ಶೀತಗಾತ್ರ (ಶೀತಾಂಗ) ಸನ್ನಿಪಾತಜ್ವರದ ಲಕ್ಷಣಗಳು.

(೨) ತಂದ್ರಾಽತೀವ ತತಸ್ತೃಷಾ ಽತಿಸರಣಂ ಶ್ವಾಸೋ ಽಧಿಕಃ ಕಾಸರುಕ್ ಸನ್ತಪ್ತಾತಿತನುರ್ಗಲೇ ಶ್ವಯಥುನಾ ಸಾರ್ಧಂ ಚ ಕಂಡೂಕಫಃ । ಸುಶ್ಯಾಮಾ ರಸನಾ ಕ್ಲಮಃ ಶ್ರವಣಯೋರ್ಮಾನ್ದ್ಯಂ ಚ ದಾಹಸ್ತಥಾ ಯತ್ರ ಸ್ಯಾತ್ಸ ಹಿ ತನ್ದ್ರಿಕೋ ನಿಗದಿತೋ ದೋಷತ್ರಯೋತ್ಥೋ ಜ್ವರಃ || (ಭಾ. ಪ್ರ 288)

ತಂದ್ರಿಕದ ಲಕ್ಷಣ

ಅತಿಯಾದ ತಂದ್ರೆ, ಬಾಯಾರಿಕೆ, ಅತಿಸಾರ, ಬಹಳ ಉಬ್ಬಸ, ಕೆಮ್ಮಿನ ಬಾಧೆ, ಮೈ ಬಹಳ ಕಾಯುವದು, ಕಂಠದಲ್ಲಿ ಬಾವು, ತುರಿಕೆ ಮತ್ತು ಕಫ, ನಾಲಿಗೆಯು ಬಹಳ ಕಪ್ಪು (ಅಥವಾ ಕಪ್ಪೊತ್ತಿದ ನೀಲ), ಆಯಾಸ, ಕಿವಿಮಂದತೆ, ಮತ್ತು ಉರಿ, ಈ ಲಕ್ಷಣಗಳು ಯಾವ ಜ್ವರದಲ್ಲಿ ಕಾಣುತ್ತವೋ, ಅದು ತ್ರಿದೋಷದಿಂದುಂಟಾದ 'ತಂದ್ರಿಕ' ಎಂತ ಹೇಳುತ್ತಾರೆ.

(೩) ಯತ್ರ ಜ್ವರೇ ಸಿಥಿಲದೋಷನಿತಾಂತರೋಷಜಾತೇ ಪ್ರಲಾಪಬಹುಲಾಃ ಸಹಸೋತ್ಥಿತಾಶ್ಚ ।
ಕಮ್ಪವ್ಯಥಾಪತನದಾಹವಿಸಂಜ್ಞತಾಃ ಸ್ಯುರ್ನಾಮ್ನಾ ಪ್ರಲಾಪಕ ಇತಿ ಪ್ರಥಿತಃ ಪೃಥಿವ್ಯಾಮ್ || (ಭಾ. ಪ್ರ. 288)

ಪ್ರಲಾಪಕದ ಲಕ್ಷಣ

ಮೂರು ದೋಷಗಳು ಬಹಳವಾಗಿ ಕೆದರಿ ಉಂಟಾದ ಯಾವ ಸನ್ನಿಪಾತಜ್ವರದಲ್ಲಿ ಬಹಳವಾದ ಪ್ರಲಾಪಗಳು ಮತ್ತು ಒಡನೆ ಉಂಟಾದ ಮೈನಡುಕು, ವ್ಯಥೆ, ಕುಂದುವಿಕೆ, ಉರಿ, ಮತ್ತು ಎಚ್ಚರತಪ್ಪುವಿಕೆ ಕಾಣುತ್ತವೋ, ಅದು ಲೋಕದಲ್ಲಿ 'ಪ್ರಲಾಪಕ' ಎಂಬ ಹೆಸರಿನಿಂದ ಪ್ರಖ್ಯಾತವಾಗಿದೆ.

ಪರಾ 'ಪತನಂ' ಎಂಬದಕ್ಕೆ ಅಮಾನುಷ ಶಕ್ತಿ ಎಂತ ಅರ್ಥಮಾಡಬಹುದು ಆದರ ಸಾಧಾರಣ ಅರ್ಥ "ಬೀಳುವಿಕೆ".

ರಕ್ತಷ್ಠೀವಿಯ ಲಕ್ಷಣ

(೪) ನಿಷ್ಠೀವೋ ರುಧಿರಸ್ಯ ರಕ್ತಸದೃಶಂ ಕೃಷ್ಣಂ ತನೌ ಮಂಡಲಂ
ಲೌಹಿತ್ಯಂ ನಯನೇ ತೃಷಾರುಚಿವಮಿಶ್ವಾಸಾತಿಸಾರಭ್ರಮಾಃ |
ಆಧ್ಮಾನಂ ಚ ವಿಸಂಜ್ಞತಾ ಚ ಪತನಂ ಹಿಕ್ಕಾಂಗಪೀಡಾ ಭೃಶಂ
ರಕ್ತಷ್ಠೀವಿನಿ ಸನ್ನಿಪಾತಜನಿತೇ ಲಿಂಗಂ ಜ್ವರೇ ಜಾಯತೇ ||
(ಭಾ. ಪ್ರ. 288-89)

ಶುದ್ಧರಕ್ತಸದೃಶವಾದ ರಕ್ತವನ್ನು ಉಗುಳುವದು, ಮೈಯಲ್ಲಿ ಕಪ್ಪುವರ್ಣದ ಮಂಡಲಗಳು, ಕಣ್ಣುಗಳು ಕೆಂಪಾಗಿರುವದು, ಬಾಯಾರಿಕೆ, ಅರುಚಿ, ವಾಂತಿ, ಉಬ್ಬಸ, ಅತಿಸಾರ, ಭ್ರಮ, ಹೊಟ್ಟೆಯುಬ್ಬರ, ಎಚ್ಚರವಿಲ್ಲದಿರುವಿಕೆ, ಕುಂದುತ್ತಾ ಬರುವದು (ಅಥವಾ ಅಮಾನುಷ ಶಕ್ತಿ), ಬಿಕ್ಕಟ್ಟು ಮತ್ತು ಅಂಗಗಳಲ್ಲಿ ಬಹಳವಾದ ಪೀಡೆ, ಇವು ಸನ್ನಿಪಾತದಿಂದುಂಟಾಗುವ 'ರಕ್ತಷ್ಠೀವಿ' ಎಂಬ ಜ್ವರದ ಲಕ್ಷಣಗಳು.

ಭುಗ್ನನೇತ್ರದ ಲಕ್ಷಣ

(೫) ಭೃಶಂ ನಯನವಕ್ರತಾ ಶ್ವಸನಕಾಸತನ್ದ್ರಾ ಭೃಶಂ
ಪ್ರಲಾಪಮದವೇಪಥುಃ ಶ್ರವಣಹಾನಿಮೋಹಸ್ತಥಾ |
ಪುರೋ ನಿಖಿಲದೋಷಜೇ ಭವತಿ ಯತ್ರ ಲಿಂಗಂ ಜ್ವರೇ
ಪುರಾತನಚಿಕಿತ್ಸಕೈಃ ಸ ಇಹ ಭುಗ್ನನೇತ್ರೋ ಮತಃ || (ಭಾ. ಪ್ರ. 289)

ಕಣ್ಣುಗಳು ಬಹಳ ಓರೆಯಾಗಿರುವದು, ಉಬ್ಬಸ, ಕೆಮ್ಮು, ತಂದ್ರೆ, ಹೆಚ್ಚಾದ ಪ್ರಲಾಪ, ಮದ, ನಡುಕು, ಕಿವಿಕೇಳಿಸದಿರುವದು, ಭ್ರಮೆ, ಈ ಲಕ್ಷಣಗಳು ಮುಂದಾಗಿ ಯಾವ ಸನ್ನಿಪಾತಜ್ವರದಲ್ಲಿ ಉಂಟಾಗುತ್ತವೋ, ಅದನ್ನು ಪುರಾತನ ಚಿಕಿತ್ಸಕರು 'ಭುಗ್ನನೇತ್ರ' ಎಂತ ತಿಳಿದಿದ್ದಾರೆ.

ಅಭಿನ್ಯಾಸದ ಲಕ್ಷಣ.

(೬) ದೋಷಾಸ್ತೀವ್ರತರಾ ಭವನ್ತಿ ಬಲಿನಃ ಸರ್ವೇಽಪಿ ಯತ್ರ ಜ್ವರೇ
ಮೋಹೋಽತೀವ ವಿಚೇಷ್ಟತಾ ವಿಕಲತಾ ಶ್ವಾಸೋ ಭೃಶಂ ಮೂಕತಾ |
ದಾಹಶ್ಚಿಕ್ಕನಮಾನನಂ ಚ ದಹನೋ ಮನ್ದೋ ಬಲಸ್ಯ ಕ್ಷಯಃ
ಸೋಽಭಿನ್ಯಾಸ ಇತಿ ಪ್ರಕೀರ್ತಿತ ಇಹ ಪ್ರಾಜ್ಞೈರ್ಭಿಷಗ್ಭಿಃ ಪುರಾ || (ಭಾ. ಪ್ರ. 289)

ಸರ್ವ ದೋಷಗಳು ಬಲವಂತವಾಗಿಯೂ, ಬಹಳ ತೀವ್ರವಾಗಿಯೂ ಇದ್ದು, ಅತಿಯಾದ ಭ್ರಮ, ಅಂಗಚಲನವಿಲ್ಲದಿರುವದು, ಮುಖದ ಕಳೆ ವಿಕಾರವಾಗುವದು, ಹೆಚ್ಚು ಉಬ್ಬಸ, ಮಾತಿಲ್ಲದಿರುವದು, ಉರಿ, ಮುಖದಲ್ಲಿ ಜಿಡ್ಡು, ಅಗ್ನಿಮಾಂದ್ಯ, ಬಲಕ್ಷಯ, ಈ ಲಕ್ಷಣಗಳು

ಯಾವ ಸನ್ನಿಪಾತಜ್ವರದಲ್ಲಿ ಕಾಣುತ್ತವೋ, ಅದನ್ನು ಪುರಾತನದ ಪ್ರಾಜ್ಞ ವೈದ್ಯರು 'ಅಭಿನ್ಯಾಸ' ಎಂತ ವರ್ಣಿಸಿದ್ದಾರೆ.

ಜಿಹ್ವಕದ ಲಕ್ಷಣ

(೭) ತ್ರಿದೋಷಜನಿತೇ ಜ್ವರೇ ಭವತಿ ಯತ್ರ ಜಿಹ್ವಾ ಭೃಶಂ
ವೃತಾ ಕಠಿಣಕಂಟಕೈಸ್ತದನು ನಿರ್ಭರಂ ಮೂಕತಾ |
ಶ್ರುತಿಕ್ಷತಿಬಲಕ್ಷತಿಶ್ವಸನಕಾಸಸನ್ತಪ್ತಯಃ
ಪುರಾತನಭಿಷಗ್ವರಾಸ್ತಮಿಹ ಜಿಹ್ವಕಂ ಚಕ್ಷತೇ || (ಭಾ. ಪ್ರ. 289)

ಯಾವ ತ್ರಿದೋಷಜ್ವರದಲ್ಲಿ ನಾಲಿಗೆಯು ಕಠಿಣವಾದ (ಗಟ್ಟಿಯಾದ) ಮುಳ್ಳುಗಳಿಂದ ಬಹಳವಾಗಿ ಮುಚ್ಚಿಕೊಂಡಿರುವದು, ಬಹಳವಾದ ಮೂಕತನ, ಕಿವಿ ಕೇಳಿಸದಿರುವದು, ಬಲಕ್ಷಯ, ಕೆಮ್ಮು, ಉಬ್ಬಸ ಮತ್ತು ಸಂತಾಪ, ಈ ಲಕ್ಷಣಗಳು ಉಂಟಾಗುತ್ತವೋ, ಅದಕ್ಕೆ ಪೂರ್ವಿಕರಾದ ವೈದ್ಯಶ್ರೇಷ್ಠರು 'ಜಿಹ್ವಕ' ಎಂತ ಹೇಳುತ್ತಾರೆ.

ಸಂಧಿಗದ ಲಕ್ಷಣ

(೮) ವ್ಯಥಾತಿಶಯಿತಾ ಭವೇಚ್ಛ(?ಚ್ಛ್ವ)ಯಥುಸಂಯುತಾ ಸನ್ಧಿಷು
ಪ್ರಭೂತಕಫತಾ ಮುಖೇ ವಿಗತನಿದ್ರತಾ ಕಾಸರುಕ್ |
ಸಮಸ್ತಮಿತಿ ಕೀರ್ತಿತಂ ಭವತಿ ಲಕ್ಷ್ಮ ಯತ್ರ ಜ್ವರೇ
ತ್ರಿದೋಷಜನಿತೇ ಬುಧೈಃ ಸ ಹಿ ನಿಗದ್ಯತೇ ಸನ್ಧಿಗಃ || (ಭಾ. ಪ್ರ. 289)

ಸಂದುಗಳಲ್ಲಿ ಬಾವು ಮತ್ತು ಅತಿಯಾದ ನೋವು, ಬಾಯಿಯಲ್ಲಿ ಬಹಳವಾದ ಕಫ, ನಿದ್ರೆ ಇಲ್ಲದಿರುವಿಕೆ, ಕೆಮ್ಮಿನ ಬಾಧೆ, ಮತ್ತು ತ್ರಿದೋಷಜ ಜ್ವರದಲ್ಲಿ ಸಾಧಾರಣವಾಗಿ ವರ್ಣಿಸಲ್ಪಟ್ಟ ಸಮಸ್ತ ಲಕ್ಷಣಗಳು ಯಾವ ಜ್ವರದಲ್ಲಿ ಉಂಟಾಗುತ್ತವೋ, ಆ ಜ್ವರಕ್ಕೆ ಪ್ರಾಜ್ಞರು 'ಸಂಧಿಗ' ಎನ್ನುತ್ತಾರೆ.

ಅಂತಕದ ಲಕ್ಷಣ

(೯) ಯಸ್ಮಿನ್ ಲಕ್ಷಣಮೇತದಸ್ತಿ ಸಕಲೈರ್ದೋಷೈರುದೀತೇ ಜ್ವರೇ
ಽಜಸ್ರಂ ಮೂರ್ಧವಿಧೂನನಂ ಸಕಸನಂ ಸರ್ವಾಂಗಪೀಡಾಧಿಕಾ |
ಹಿಕ್ಕಾಶ್ವಾಸಸದಾಹಮೋಹಸಹಿತಾ ದೇಹೇ ಽತಿಸನ್ತಪ್ತತಾ
ವೈಕಲ್ಯಂ ಚ ವೃಥಾ ವಚಾಂಸಿ ಮುನಿಭಿಃ ಸಂಕೀರ್ತಿತಃ ಸೋಽನ್ತಕಃ ||
(ಭಾ. ಪ್ರ. 289)

ತಲೆಯನ್ನು ಎಡೆಬಿಡದೆ ಅಲ್ಲಾಡಿಸುತ್ತಿರುವದು, ಕೆಮ್ಮು, ಸರ್ವಾಂಗದಲ್ಲಿ ಅಧಿಕವಾದ ನೋವು, ಬಿಕ್ಕಟ್ಟು, ಉಬ್ಬಸ, ಉರಿ, ಮೂರ್ಛೆ, ಮೈಯಲ್ಲಿ ಅತಿಯಾದ ಬಿಸಿ, (ಮುಖದ) ಕಲೆ ಕೆಟ್ಟಿರುವದು, ಮತ್ತು ಉದ್ದೇಶವಿಲ್ಲದ ಮಾತುಗಳು, ಈ ಲಕ್ಷಣಗಳು ತ್ರಿದೋಷಗಳ ಕೆದರುವಿಕೆಯಿಂದ ಉಂಟಾದ ಯಾವ ಜ್ವರದಲ್ಲಿ ಕಾಣುತ್ತವೋ, ಅದನ್ನು ಮುನಿಗಳು 'ಅಂತಕ' ಎಂತ ವರ್ಣಿಸಿದ್ದಾರೆ.

ರುಗ್ದಾಹದ ಲಕ್ಷಣ.

(೧೦) ದಾಹೋ ಽಧಿಕೋ ಭವತಿ ಯತ್ರ ತೃಷಾ ಚ ತೀವ್ರಾ
ಶ್ವಾಸಪ್ರಲಾಪವಿರುಚಿಭ್ರಮಮೋಹಪೀಡಾಃ |
ಮನ್ಯಾಹನುವ್ಯಥನಕಂಠರುಜಃ ಶ್ರಮಶ್ಚ
ರುಗ್ದಾಹಸಂಜ್ಞ ಉದಿತಸ್ತ್ರಿಭವೋ ಜ್ವರೋ ಽಯಮ್ || (ಭಾ. ಪ್ರ. 289)

ಅಧಿಕವಾದ ಉರಿ, ತೀವ್ರವಾದ ಬಾಯಾರಿಕೆ, ಉಬ್ಬಸ, ಪ್ರಲಾಪ, ಅರುಚಿ, ಭ್ರಮೆ, ಮೂರ್ಛೆಯ ಪೀಡೆ, ಕುತ್ತಿಗೆಯ ಹಿಂಬದಿಯಲ್ಲಿಯೂ ದವಡೆಗಳಲ್ಲಿಯೂ ಕಂಠದಲ್ಲಿಯೂ ನೋವು, ಮತ್ತು ಶ್ರಮ, ಈ ಲಕ್ಷಣಗಳುಳ್ಳ ತ್ರಿದೋಷಜ್ವರಕ್ಕೆ 'ರುಗ್ದಾಹ' ಎಂತ ಹೆಸರು.

(೧೧) ಗಾಯತಿ ನೃತ್ಯತಿ ಹಸತಿ ಪ್ರಲಪತಿ ವಿಕೃತಂ ನಿರೀಕ್ಷ್ಯತೇ ಮುಹ್ಯೇತ' ।

ಚಿತ್ತವಿಭ್ರಮದ ಲಕ್ಷಣ.

ದಾಹವ್ಯಥಾಭಯಾತೋರ್ ನರಸ್ತು ಚಿತ್ತಭ್ರಮೇ ಜರೇ ಭವತಿ ॥

(ಭಾ. ಪ್ರ. 289)

ಹಾಡುವದು, ಕುಣಿಯುವದು, ನಗುವದು, ಹರಟುವದು, ವಿಕಾರವಾಗಿ ನೋಡುವದು, ಮೂರ್ಛೆ, ಉರಿಯ ಸಂಕಷ್ಟ, ಮತ್ತು ಭಯದ ಪೀಡೆ, ಇವು 'ಚಿತ್ತವಿಭ್ರಮ' ಎಂಬ ಜ್ವರದಲ್ಲಿ ಕಾಣುವ ಲಕ್ಷಣಗಳು.

(೧೨) ದೋಷತ್ರಯೇಣ ಜನಿತಾ ಕಿಲ ಕರ್ಣಮೂಲೇ ತೀವ್ರಾ ಜ್ವರೇ ಭವತಿ ತು ಶ್ವಯಥುರ್ವ್ಯಥಾ ಚ ।

ಕರ್ಣಗ್ರಹದ ಲಕ್ಷಣ'

ಕಂಠಗ್ರಹೋ ಬಧಿರತಾ ಶ್ವಸನಂ ಪ್ರಲಾಪಃ ಪ್ರಸ್ವೇದಮೋಹದಹನಾನಿ ಚ ಕರ್ಣಿಕಾಖ್ಯೇ ॥ (ಭಾ. ಪ್ರ. 289)

ಕಿವಿಯ ಬುಡದಲ್ಲಿ ಕಠಿಣವಾದ ಬಾವು ಮತ್ತು ನೋವು, ಕುತ್ತಿಗೆ ಹಿಡಕೊಳ್ಳುವದು, ಕಿವುಡತನ, ಉಬ್ಬಸ, ಪ್ರಲಾಪ, ವಿಶೇಷವಾದ ಬೆವರು, ಮೂರ್ಛೆ, ಮತ್ತು ಸುಡತ, ಈ ಲಕ್ಷಣಗಳು 'ಕರ್ಣಿಕಾ' ಎಂಬ ತ್ರಿದೋಷಜ್ವರದಲ್ಲಿ ಉಂಟಾಗುತ್ತವೆ.

(೧೩) ಕಂಠಃ ಶೂಕಶತಾವರುದ್ಧವದತಿಶ್ವಾಸಃ ಪ್ರಲಾಪೋ ಽರುಚಿ
ದರ್ಾಹೋ ದೇಹರುಜಾ ತೃಷಾಪಿ ಚ ಹನುಸ್ತಮ್ಭಃ ಶಿರೋರ್ತಿ-
ಸ್ತಥಾ ।

ಕಂಠಕುಬ್ಜದ ಲಕ್ಷಣ

ಮೋಹೋ ವೇಪಥುನಾ ಸಹೇತಿ ಸಕಲಂ ಲಿಂಗಂ ತ್ರಿದೋಷಜ್ವರೇ
ಯತ್ರ ಸ್ಯಾತ್ಸ ಹಿ ಕಂಠಕುಬ್ಜ ಉದಿತಃ ಪ್ರಾಚ್ಯೈಶ್ಚಿಕಿತ್ಸಾಬುಧೈಃ ॥
(ಭಾ. ಪ್ರ. 289)

ಕಂಠದಲ್ಲಿ ನೂರಾರು ಸುಂಕು(ಭತ್ತದ ಮುಳ್ಳು)ಗಳು ಚುಚ್ಚಿ ಹಿಡಕೊಂಡ ಹಾಗೆ ಕಾಣುವದು, ಅತಿಯಾದ ಉಬ್ಬಸ, ಪ್ರಲಾಪ, ಅರುಚಿ, ಉರಿ, ಮೈನೋವು, ಬಾಯಾರಿಕೆ, ದವಡೆಗಳು ಸ್ತಬ್ಧವಾಗಿರುವದು, ತಲೆನೋವು, ಮೂರ್ಛೆ, ನಡುಕು, ಸಹ (ತ್ರಿದೋಷಗಳ) ಸಕಲ ಲಕ್ಷಣಗಳೂ ಯಾವ ತ್ರಿದೋಷಜ್ವರದಲ್ಲಿ ಕಾಣುತ್ತವೋ, ಅದು 'ಕಂಠಕುಬ್ಜ' ಎಂತ ಪೂರ್ವಿಕ ವೈದ್ಯಜ್ಞರು ಹೇಳಿರುತ್ತಾರೆ.

28. ಸನ್ನಿಗಸ್ತೇಷು ಸಾಧ್ಯಃ ಸ್ಯಾತ್ತನ್ದ್ರಿಕಶ್ಚಿತ್ತವಿಭ್ರಮಃ ।
ಕರ್ಣಿಕೋ ಜಿಹ್ವಕಃ ಕಂಠಕುಬ್ಜಃ ಪಂಚಾಪಿ ಕಷ್ಟಕಾಃ ॥
ರುಗ್ದಾಹಸ್ತ್ವತಿಕಷ್ಟೇನ ಸಂಸಾಧ್ಯಸ್ತೇಷು ಭಾಷಿತಃ ।
ರಕ್ತಷ್ಠೀವೀ ಭುಗ್ನನೇತ್ರಃ ಶೀತಗಾತ್ರಃ ಪ್ರಲಾಪಕಃ ॥
ಅಭಿನ್ಯಾಸೋ ಽನ್ತಕಶ್ಚೈತೇ ಷಡಸಾಧ್ಯಾಃ ಪ್ರಕೀರ್ತಿತಾಃ ॥

ಶೀತಾಂಗಾದಿ ಹದಿಮೂರು ಸನ್ನಿಪಾತಗಳ ಸಾಧ್ಯಾಸಾಧ್ಯತೆ

(ಭಾ. ಪ್ರ. 289)

ಹದಿಮೂರು ಸನ್ನಿಪಾತಗಳೊಳಗೆ ಸಂಧಿಗ ಎಂಬ ವ್ಯಾಧಿಯು ಸಾಧ್ಯ, ತಂದ್ರಿಕ, ಚಿತ್ತ ವಿಭ್ರಮ, ಕರ್ಣಿಕ, ಜಿಹ್ವಿಕ, ಕಂಠಕುಬ್ಜ, ಇವು ಐದು ಕಷ್ಟದಿಂದ ಸಾಧ್ಯ, ರುಗ್ದಾಹ ಎಂಬದು ಅತಿ ಕಷ್ಟದಿಂದ ಸಾಧ್ಯ, ಎಂತ ಹೇಳಲ್ಪಟ್ಟದೆ; ರಕ್ತಷ್ಠೀವಿ, ಭುಗ್ನನೇತ್ರ, ಶೀತಗಾತ್ರ, ಪ್ರಲಾಪಕ, ಅಭಿನ್ಯಾಸ, ಅಂತಕ, ಎಂಬ ಆರು ಅಸಾಧ್ಯ ಎಂತ ಪ್ರಸಿದ್ಧ.

29. ದೋಷೇ ವಿವೃದ್ಧೇ ನಷ್ಟೇ ऽಗ್ನೌ ಸರ್ವಸಂಪೂರ್ಣಲಕ್ಷಣಃ |
ಸನ್ನಿಪಾತಜ್ವರೋ ऽಸಾಧ್ಯಃ ಕೃಚ್ಛ್ರಸಾಧ್ಯಸ್ತ್ವತೋ ऽನ್ಯಥಾ ||
(ಚ. 455)

ಸನ್ನಿಪಾತ ಜ್ವರದ ಸಾಧ್ಯಾಸಾಧ್ಯತೆ ಕುರಿತು ಚರಕ

ದೋಷಗಳು ಬಹಳ ವೃದ್ಧಿಯಾಗಿದ್ದು, ಅಗ್ನಿಯು ನಷ್ಟವಾಗಿ, ತ್ರಿದೋಷಗಳ ಲಕ್ಷಣಗಳು ಸಂಪೂರ್ಣವಾಗಿ ಕಾಣುತ್ತವೆಯಾದರೆ, ಅಂಥಾ ಸನ್ನಿಪಾತಜ್ವರವು ಅಸಾಧ್ಯ. ಇತರ ಸಂಗತಿಗಳಲ್ಲಿ ಅದು ಕಷ್ಟದಿಂದ ಸಾಧ್ಯವಾಗುತ್ತದೆ.

ಸರಾ ಸನ್ನಿಪಾತಜ್ವರದ ಸಂಪೂರ್ಣ ಲಕ್ಷಣಗಳ ವರ್ಣನ ಹಿಂದ 24ನೇ ಸಂಖ್ಯೆಯಲ್ಲಿ ಕಾಣುತ್ತದೆ 'ವಿವೃದ್ಧೇ ಎಂಬಲ್ಲಿ ವಿಬದ್ಧೇ' ಎಂಬ ಪದವನ್ನಿಟ್ಟು, 'ಮಲಬದ್ಧವಾಗಿದ್ದಲ್ಲಿ' ಎಂತ ಅರ್ಥ ಬರೆದದ್ದು ಕಾಣುತ್ತದೆ (ಮೂ ನಿ 32)

ಸನ್ನಿಪಾತಜ್ವರಸ್ಯಾನ್ತೇ ಕರ್ಣಮೂಲೇ ಸುದಾರುಣಃ |
ಶೋಥಃ ಸಂಜಾಯತೇ ತೇನ ಕಶ್ಚಿದೇವ ಪ್ರಮುಚ್ಯತೇ
ರಕ್ತಾವಸೇಚನೈಃ ಶೀಘ್ರಂ ಸರ್ಪಿಷ್ಪಾನೈಶ್ಚ ತಂ ಜಯೇತ್ || (ಚ. 470)

ಸನ್ನಿಪಾತಜ್ವರದ ಅಂತ್ಯದಲ್ಲಿ ಕಿವಿಯ ಬುಡದಲ್ಲಿ ಬಹು ಕಠಿನವಾದ ಬಾವು ಉಂಟಾಗುತ್ತದೆ. ಅದರಿಂದ ಯಾವನಾದರೊಬ್ಬ ಮಾತ್ರ (ಅಪರೂಪವಾಗಿ) ವಿಮೋಚನ ಹೊಂದುತ್ತಾನೆ. ಅದನ್ನು ಬೇಗನೆ ರಕ್ತಮೋಕ್ಷಣಗಳಿಂದಲೂ ಘೃತಪಾನಗಳಿಂದಲೂ ಜಯಿಸ ತಕ್ಕದ್ದು.

30 ಸನ್ಧಿಕೇ(?ಗೇ) ವಾಸರಾಃ ಸಪ್ತ ಚಾನ್ತಕೇ ದಶವಾಸರಾಃ |
ರುಗ್ದಾಹೇ ವಿಂಶತಿಶ್ಚಿತ್ತವಿಭ್ರಮೇ ಚೈಕವಿಂಶತಿ ||
ಶೀತಾಂಗೇ ಪಕ್ಷಮೇಕನ್ತು ತಾನ್ದ್ರಿಕೇ ಪಂಚವಿಂಶತಿ |
ವಿಜ್ಞೇಯಾ ವಾಸರಾಃ ಪ್ರೋಕ್ತಾಃ ಕಣ್ಠಕುಬ್ಜೇ ತ್ರಯೋದಶ ||
ಕರ್ಣಿಕೇ ಚ ತ್ರಯೋ ಮಾಸಾ ಭ(?ಭು)ಗ್ನನೇತ್ರೇ ದಿನಾಷ್ಟಕಮ್ |
ರಕ್ತಷ್ಠೀವಿ ದಶಾಹಾನಿ ಪ್ರಲಾಪೇ ಚ ಚತುರ್ದಶ ||
ಜಿಹ್ವಿಕೇ ಷೋಡಶದಿನಾನ್ಯಭಿನ್ಯಾಸೇ ತು ಪಕ್ಷಕಮ್ |
ಪರಮಾವಧಿರಿತ್ಯೇವಂ ಸನ್ನಿಪಾತವಿಮೋಚನೇ|| (ವೈ. ಸಾ. ಸಂ. 89)

ಹದಿಮೂರು ಸನ್ನಿಪಾತಜ್ವರಗಳಲ್ಲಿ ವಿಮೋಚನಕ್ಕೆ ಕಾಲಾವಧಿ

ಸನ್ನಿಪಾತ ವಿಮೋಚನಕ್ಕೆ ಸಂಧಿಗ ಎಂಬ ಸನ್ನಿಪಾತದಲ್ಲಿ ಏಳು ದಿನ, ಅಂತಕದಲ್ಲಿ ಹತ್ತು ದಿನ, ರುಗ್ದಾಹದಲ್ಲಿ ಇಪ್ಪತ್ತು ದಿನ, ಚಿತ್ತವಿಭ್ರಮದಲ್ಲಿ ಇಪ್ಪತ್ತೊಂದು ದಿನ, ಶೀತಾಂಗದಲ್ಲಿ ಒಂದು ಪಕ್ಷ, ತಾಂದ್ರಿಕದಲ್ಲಿ ಇಪ್ಪತ್ತೈದು ದಿನ, ಕಂಠಕುಬ್ಜದಲ್ಲಿ ಹದಿಮೂರು ದಿನ, ಕರ್ಣಿಕದಲ್ಲಿ ಮೂರು ತಿಂಗಳು, ಭುಗ್ನನೇತ್ರದಲ್ಲಿ ಎಂಟು ದಿನ, ರಕ್ತಷ್ಠೀವಿಯಲ್ಲಿ ಹತ್ತು ದಿನ, ಪ್ರಲಾಪದಲ್ಲಿ ಹದಿನಾಲ್ಕು ದಿನ, ಜಿಹ್ವಿಕೆಯಲ್ಲಿ ಹದಿನಾರು ದಿನ, ಮತ್ತು ಅಭಿನ್ಯಾಸದಲ್ಲಿ ಒಂದು ಪಕ್ಷ, ಹೀಗೆ ಪರಮಾವಧಿಕಾಲವಾಗಿರುತ್ತದೆ.

31. ಆಗನ್ತುರಷ್ಟಮೋ ಯಸ್ತು ಸ ನಿರ್ದಿಷ್ಟಶ್ಚತುರ್ವಿಧಃ |
ಅಭಿಘಾತಾಭಿಷಂಗಾಭ್ಯಾಮಭಿಚಾರಾಭಿಶಾಪತಃ || (ಚ. 455)

ಆಗಂತುಜ್ವರದ ಭೇದಗಳು

ಜ್ವರವಿಭಾಗದಲ್ಲಿ ಎಂಟನೇದಾಗಿ ಹೇಳಲ್ಪಟ್ಟ ಆಗಂತುಜ್ವರ ಎಂಬದು, 1. ಅಭಿಘಾತದಿಂದ, 2. ಅಭಿಷಂಗದಿಂದ. 3. ಅಭಿಚಾರದಿಂದ, 4. ಅಭಿಶಾಪದಿಂದ, ಹೀಗೆ ನಾಲ್ಕು ವಿಧ ಆಗಿರುತ್ತದೆ.

32. ಶಸ್ತ್ರಲೋಷ್ಟ್ರಕಶಾಕಾಷ್ಠಮುಷ್ಟ್ಯರತ್ನಿತಲದ್ವಿಜೈಃ |
ತದ್ವಿಧೈಶ್ಚ ಹತೇ ಗಾತ್ರೇ ಜ್ವರಃ ಸ್ಯಾದಭಿಘಾತಜಃ ||
ತತ್ರಾಭಿಘಾತಜೋ ವಾಯುಃ ಪ್ರಾಯೋ ರಕ್ತಂ ಪ್ರದೂಷಯನ್ |
ಸವ್ಯಥಾಶೋಥವೈವರ್ಣ್ಯಂ ಕರೋತಿ ಸರುಜಂ ಜ್ವರಮ್ || (ಚ. 455)

ಅಭಿಘಾತಜ್ವರದ ನಿದಾನ ಮತ್ತು ಲಕ್ಷಣ

ಶಸ್ತ್ರ, ಮಣ್ಣಿನ ಹೆಂಟೆ, ಕಶೆ, ದಂಟೆ, ಮುಷ್ಟಿ, ಕೈಮೊಣಗಂಟು, ಹಸ್ತ, ಹಲ್ಲು, ಇವುಗಳ ಮತ್ತು ಹಾಗಿನ ಬೇರೆಯವುಗಳ ಪೆಟ್ಟು ದೇಹಕ್ಕೆ ಬೀಳುವದರಿಂದ ಅಭಿಘಾತಜ ಜ್ವರ ಉಂಟಾಗುತ್ತದೆ. ಅದರಲ್ಲಿ ಪೆಟ್ಟಿನಿಂದ ಕೆದರಿದ ವಾಯು, ಹೆಚ್ಚು ಪಕ್ಷ, ರಕ್ತವನ್ನು ಬಹಳವಾಗಿ ಕೆಡಿಸಿ, (ಪೆಟ್ಟು ಬಿದ್ದ ಸ್ಥಳದಲ್ಲಿ) ನೋವುಳ್ಳ ಬಾವನ್ನು, ವರ್ಣವಿಕಾರವನ್ನು ಮತ್ತು (ಸರ್ವಾಂಗ) ನೋವುಳ್ಳ ಜ್ವರವನ್ನು ಉಂಟುಮಾಡುತ್ತದೆ.

33. ಕಾಮಶೋಕಭಯಕ್ರೋಧೈರಭಿಷಕ್ತಸ್ಯ ಯೋ ಜ್ವರಃ |
ಸೋಽಭಿಷಂಗಜ್ವರೋ ಜ್ಞೇಯೋ ಯಶ್ಚ ಭೂತಾಭಿಷಂಗಜಃ |
ಕಾಮಶೋಕಭಯಾದ್ವಾಯುಃ ಕ್ರೋಧಾತ್ಪಿತ್ತಂ ತ್ರಯೋ ಮಲಾಃ |
ಭೂತಾಭಿಷಂಗಾತ್ ಕುಪ್ಯನ್ತಿ ಭೂತಸಾಮಾನ್ಯಲಕ್ಷಣಃ ||
ಭೂತಾಧಿಕಾರೇ ವ್ಯಾಖ್ಯಾತಂ ತದಷ್ಟವಿಧಲಕ್ಷಣಮ್ |
ವಿಷವೃಕ್ಷಾನಿಲಸ್ಪರ್ಶಾತ್ ತಥಾನ್ಯೈರ್ವಿಷಸಂಭವೈಃ ||
ಅಭಿಷಕ್ತಸ್ಯ ಚಾಪ್ಯಾಹುರ್ಜ್ವರಮೇಕೇಽಭಿಷಂಗಜಮ್ |
ಚಿಕಿತ್ಸಯಾ ವಿಷಘ್ನ್ಯೈವ ಪ್ರಶಮಂ ಲಭತೇ ನರಃ || (ಚ. 455-6)

ಅಭಿಷಂಗಜ ಜ್ವರದ ಸಂಪ್ರಾಪ್ತಿ

ಕಾಮ, ಶೋಕ, ಭಯ, ಕೋಪ, ಇವುಗಳ ಆವೇಶದಿಂದ ಉಂಟಾಗುವ ಜ್ವರವೂ, ಭೂತಗಳು ಹಿಡಿದು ಉಂಟಾಗುವ ಜ್ವರವೂ, ಅಭಿಷಂಗ ಜ್ವರ ಎಂತ ತಿಳಿಯಬೇಕು. ಕಾಮ-ಶೋಕ-ಭಯಗಳಿಂದ ವಾಯು, ಕೋಪದಿಂದ ಪಿತ್ತ, ಮತ್ತು ಭೂತಾವೇಶದಿಂದ ವಾತ-ಪಿತ್ತ-ಕಫಗಳು ಮೂರೂ, ಕೋಪಗೊಳ್ಳುತ್ತವೆ. ಹಿಂದೆ (ಉನ್ಮಾದ ಅಧ್ಯಾಯದ) ಭೂತಪ್ರಕರಣದಲ್ಲಿ ಅಷ್ಟವಿಧವಾದ ಭೂತಗಳು ಮತ್ತು ಅವುಗಳ ವಿಶೇಷ ಲಕ್ಷಣಗಳು ವರ್ಣಿಸಲ್ಪಟ್ಟವೆ. ಭೂತಾಭಿಷಂಗಜ್ವರದಲ್ಲಿ ಆಯಾ ಭೂತದ ಲಕ್ಷಣಗಳಿಗೆ ಸದೃಶವಾದ ಲಕ್ಷಣಗಳು ಕಾಣುವವು. ವಿಷಜಾತಿಮರಗಳ ಗಾಳಿಯ ಸ್ಪರ್ಶದಿಂದ, ಹಾಗೆಯೇ ವಿಷಹೇತುಗಳಾದ ಅನ್ಯದ್ರವ್ಯಗಳು ಮೈಯೊಳಗೆ ಸೇರುವದರಿಂದ, ಸಂಭವಿಸುವ ಜ್ವರವು ಅಭಿಷಂಗಜ ಜ್ವರಗಳೊಳಗೆ ಸೇರಿದ್ದೆಂತ ಕೆಲವರು ಹೇಳುತ್ತಾರೆ. ಅಂಥ ಜ್ವರ ರೋಗಿಗೆ ವಿಷನಾಶನಕರವಾದ ಚಿಕಿತ್ಸೆಯಿಂದಲೇ ಉಪಶಮನವಾಗುತ್ತದೆ.

ಪರಾ ಅಷ್ಟವಿಧ ಭೂತಗಳೆಂದರೆ ದೇವ, ಋಷಿ, ಪಿತೃ, ಗಂಧರ್ವ, ಯಕ್ಷ, ರಾಕ್ಷಸ, ಪಿಶಾಚ ಮತ್ತು ಬ್ರಹ್ಮ ರಾಕ್ಷಸ ಎಂತ ಚರಕ ಸುಶ್ರುತನು ಈ ಭೂತಗಳೊಳಗೆ ಋಷಿ ಮತ್ತು ಬ್ರಹ್ಮರಾಕ್ಷಸ ಎಂಬವರನ್ನು ಬಿಟ್ಟು ನಾಗ ಮತ್ತು ಅಸುರ ಎಂಬವರನ್ನು ಕೂಡಿಸಿಕೊಂಡಿದ್ದಾನೆ ಹಿಂದಿನ 1ನೇ ಅಧ್ಯಾಯದ 5ನೇ ಸಂಖ್ಯೆ ನೋಡಿ

34. ಧ್ಯಾನನಿಃಶ್ವಾಸಬಹುಲಂ ಲಿಂಗಂ ಕಾಮಜ್ವರೇ ಸ್ಮೃತಮ್ ।
ಶೋಕಜೇ ಬಾಷ್ಪಬಹುಲಂ ತ್ರಾಸಪ್ರಾಯಂ ಭಯಜ್ವರೇ ॥
ಕ್ರೋಧಜೇ ಬಹುಸಂರಂಭಂ ಭೂತಾವೇಶೇ ತ್ವಮಾನುಷಮ್ ।
ಮೂರ್ಛಾಮೋಹಮದಗ್ಲಾನಿಭೂಯಿಷ್ಠಂ ವಿಷಸಮ್ಭವೇ ।
ಕೇಷಾಂಚಿದೇಷಾಂ ಲಿಂಗಾನಾಂ ಸನ್ತಾಪೋ ಜಾಯತೇ ಪುರಃ ।
ಪಶ್ಚಾತ್ತುಲ್ಯಸ್ತು ಕೇಷಾಂಚಿದೇಷು ಕಾಮಜ್ವರಾದಿಷು ॥
ಕಾಮಾದಿಜಾನಾಮುದ್ದಿಷ್ಟಂ ಜ್ವರಾಣಾಂ ಯದ್ವಿಶೇಷಣಮ್ ।
ಕಾಮಾದಿಜಾನಾಂ ರೋಗಾಣಾಮನ್ಯೇಷಾಮಪಿ ತತ್ ಸ್ಮೃತಮ್
(ಚ. 456)

ಅಭಿಷಂಗಜ್ವರಗಳ ವಿಶೇಷ ಲಕ್ಷಣಗಳು

ಚಿಂತಿಸುತ್ತಿರುವಿಕೆ ಮತ್ತು ಬಹಳವಾಗಿ ಶ್ವಾಸಬಿಡುವದು ಕಾಮಜ್ವರದ ಲಕ್ಷಣ ಎಂತ ತಿಳಿದಿದ್ದಾರೆ. ಶೋಕದಿಂದ ಸಂಭವಿಸಿದ ಜ್ವರದಲ್ಲಿ ಬಹಳವಾಗಿ ಕಣ್ಣೀರು ಸುರಿಯುವದು, ಭಯಜ ಜ್ವರದಲ್ಲಿ ಹೆದರುವಿಕೆ ಹೆಚ್ಚಾಗಿರುವದು, ಕ್ರೋಧಜದಲ್ಲಿ ಬಹಳವಾಗಿ ರೇಗುವದು (ಸಿಟ್ಟುಗೊಳ್ಳುವದು), ಭೂತಾವೇಶದಲ್ಲಿ ಮನುಷ್ಯವರ್ಗದ್ದಲ್ಲದ ಚರ್ಯೆ, ಮತ್ತು ವಿಷಜ ಜ್ವರದಲ್ಲಿ ಮೂರ್ಛೆ, ಭ್ರಮೆ, ಮದ ಮತ್ತು ಗ್ಲಾನಿ ಬಹಳವಾಗಿರುವಿಕೆ, ಲಕ್ಷಣಗಳಾಗಿರುತ್ತವೆ. ಕೆಲವರಲ್ಲಿ ಈ ಲಕ್ಷಣಗಳು ತೋರುವದಕ್ಕೆ ಮುಂದಾಗಿ ಜ್ವರ ಉಂಟಾಗುತ್ತದೆ, ಕೆಲವರಲ್ಲಿ ಅನಂತರ; ಮತ್ತು ಕೆಲವರಲ್ಲಿ ಲಕ್ಷಣಗಳೊಂದಿಗೆ ಏಕಕಾಲದಲ್ಲಿ ಕಾಮಜ್ವರಾದಿಗಳಲ್ಲಿ ಮೈಕಾವು ಉಂಟಾಗುತ್ತದೆ. ಕಾಮಾದಿ ಹೇತುಗಳಿಂದ ಉಂಟಾದ ಜ್ವರಗಳಿಗೆ ಯಾವ ವಿಶೇಷ ಲಕ್ಷಣ ಹೇಳಲ್ಪಟ್ಟಿತೋ, ಅದು ಕಾಮಾದಿ ಕಾರಣಗಳಿಂದ ಹುಟ್ಟುವ ಬೇರೆ ರೋಗಗಳಿಗೂ ಲಕ್ಷಣ ಎಂತ ತಿಳಿದಿದ್ದಾರೆ.

(ಅಭಿಷಂಗಾತ್) ಗ್ರಹೇಣಾಸ್ಮಿನ್ನಕಸ್ಮಾದ್ಧಾಸರೋದನೇ ।
ಓಷಧೀಗನ್ಧಜೇ ಮೂರ್ಛಾ ಶಿರೋರುಗ್ವೇಪಥುಃ ಕ್ಷವಃ ।
ವಿಷಾನ್ಮೂರ್ಛಾತಿಸಾರಾಸ್ಯಶ್ಯಾವತಾದಾಹಹೃದ್ಗದಾಃ ।
ಕ್ರೋಧಾತ್ಕಮ್ಪಃ ಶಿರೋರುಕ್ ಚ ಪ್ರಲಾಪೋ ಭಯಶೋಕಜೇ ।
ಕಾಮಾದ್ಭ್ರಮೋ ಽರುಚಿರ್ದಾಹೋ ಹ್ರೀನಿದ್ರಾಧೀಧೃತಿಕ್ಷಯಃ ।
ಗ್ರಹಾದೌ ಸನ್ನಿಪಾತಸ್ಯ ಭಯಾದೌ ಮರುತಸ್ತ್ರಯೇ ।
ಕೋಪಃ ಕೋಪೇ ಽಪಿ ಪಿತ್ತಸ್ಯ . . . . . . . (ವಾ. 189)

ಅಭಿಷಂಗಜ್ವರಗಳೊಳಗೆ ಗ್ರಹಗಳ ಆವೇಶದಿಂದುಂಟಾದ್ದರಲ್ಲಿ ಅಕಾರಣವಾಗಿ ನಗುವದು ಮತ್ತು ಅಳುವದು, ಗಿಡಗಳ ವಾಸನೆಯಿಂದ ಸಂಭವಿಸಿದ್ದರಲ್ಲಿ ಮೂರ್ಛೆ, ತಲೆನೋವು, ನಡುಕು ಮತ್ತು ಸೀನು, ವಿಷಜದಲ್ಲಿ ಮೂರ್ಛೆ, ಅತಿಸಾರ, ಮುಖ ಶ್ಯಾವ(ಕಪಿಶ)ವರ್ಣವಾಗುವಿಕೆ, ಉರಿ ಮತ್ತು ಹೃದ್ರೋಗ, ಕ್ರೋಧಜದಲ್ಲಿ ನಡುಕು ಮತ್ತು ತಲೆನೋವು, ಭಯದಿಂದಾಗಲಿ ಶೋಕದಿಂದಾಗಲಿ ಉಂಟಾದ್ದರಲ್ಲಿ ಪ್ರಲಾಪ (ಹರಟುವಿಕೆ), ಮತ್ತು ಕಾಮಜ

ದಲ್ಲಿ ಭ್ರಮೆ, ಅರುಚಿ, ಉರಿ. ಮತ್ತು ನಾಚಿಕೆಯ, ನಿದ್ರೆಯ, ಬುದ್ಧಿಯ ಮತ್ತು ಧೃತಿಯ ಕ್ಷಯ. ಹೀಗೆ ಲಕ್ಷಣಗಳು ಕಾಣುತ್ತವೆ. ಗ್ರಹ, ಓಷಧಿಗಂಧ, ವಿಷ, ಈ ಮೂರು ಹೇತುಗಳ ಜ್ವರಗಳಲ್ಲಿ ಸನ್ನಿಪಾತದ (ಮೂರು ದೋಷಗಳ), ಭಯ, ಶೋಕ, ಮತ್ತು ಕಾಮ, ಈ ಹೇತುಗಳಿಂದ ಸಂಭವಿಸುವ ಮೂರು ಜ್ವರಗಳಲ್ಲಿ ವಾತದ, ಮತ್ತು ಕ್ರೋಧಜದಲ್ಲಿ ಪಿತ್ತದ, ಕೋಪ ಉಂಟಾಗುತ್ತದೆ.

ಪರಾ ಭೂತಾಭಿಷಂಗದಲ್ಲಿ ನಡುಕು ಮತ್ತು ಉದ್ವೇಗ ಸಹ ಲಕ್ಷಣ ಎಂತ ಸು (ಪು 760)

35. ಅಭಿಚಾರಾಭಿಶಾಪಾಭ್ಯಾಂ ಸಿದ್ಧಾನಾಂ ಯಃ ಪ್ರವರ್ತತೇ |
ಸನ್ನಿಪಾತಜ್ವರೋ ಘೋರಃ ಸ ವಿಜ್ಞೇಯಃ ಸುದುಃಸಹಃ ||
ಸನ್ನಿಪಾತಜ್ವರಸ್ಯೋಕ್ತಂ ಲಿಂಗಂ ಯತ್ ತಸ್ಯ ತತ್ ಸ್ಮೃತಮ್ |
ಚಿತ್ತೇನ್ದ್ರಿಯಶರೀರಾಣಾಮರ್ತಯೋಽನ್ಯಾಶ್ಚ ನೈಕಶಃ
ಪ್ರಯೋಗಸ್ತ್ವಭಿಚಾರಸ್ಯ ದೃಷ್ಟ್ವಾ ಶಾಪಸ್ಯ ಚೈವ ಹಿ |
ಸ್ವಯಂ ಶ್ರುತ್ವಾನುಮಾನೇನ ಲಕ್ಷ್ಯತೇ ಪ್ರಶಮೇನ ವಾ ||
ವೈವಿಧ್ಯಾದಭಿಚಾರಸ್ಯ ಶಾಪಸ್ಯ ಚ ತದಾತ್ಮಕೇ |
ಯಥಾಕರ್ಮಪ್ರಯೋಗೇಣ ಲಕ್ಷಣಂ ಸ್ಯಾತ್ ಪೃಥಗ್ವಿಧಮ್ ||

ಅಭಿಚಾರಜ ಮತ್ತು ಅಭಿಶಾಪಜ ಜ್ವರಗಳ ಲಕ್ಷಣಗಳು

(ಚ. 456)

ಮಂತ್ರಸಿದ್ಧಿಯುಳ್ಳವರ ಮಂತ್ರವಾದ-ಕ್ರಮಗಳಿಂದಾಗಲ ಶಾಪಗಳಿಂದಾಗಲಿ ಯಾವ ಜ್ವರ ಉಂಟಾಗುತ್ತದೋ, ಅದು ಸನ್ನಿಪಾತ ಜ್ವರ, ಘೋರವಾದದ್ದು, ಮತ್ತು ಸಹಿಸಲು ಬಹಳ ಕಷ್ಟವಾದದ್ದು; ಅದರ ಲಕ್ಷಣ ಸನ್ನಿಪಾತಜ್ವರಕ್ಕೆ ಹೇಳಲ್ಪಟ್ಟಂಥಾ ಲಕ್ಷಣವೇ ಎಂತ ತಿಳಿದಿದ್ದಾರೆ, ಅದಲ್ಲದೆ ಮನಸ್ಸು, ಇಂದ್ರಿಯ ಮತ್ತು ಶರೀರಗಳ ಬೇರ ಅನೇಕ ಪೀಡೆಗಳು ಉಂಟಾಗುತ್ತವೆ. ಅಭಿಚಾರ ಮತ್ತು ಶಾಪ ವಿವಿಧವಾದ್ದರಿಂದ ಪ್ರಯೋಗಿಸಲ್ಪಟ್ಟ ಕರ್ಮಭೇದಕ್ಕನುಸಾರವಾಗಿ ತತ್ಸಂಬಂಧವಾದ ಜ್ವರದಲ್ಲಿ ಲಕ್ಷಣವು ಬೇರೆ ಬೇರೆ ವಿಧವಾಗಿ ಇರುವದು. ಈ ಅಭಿಚಾರ ಮತ್ತು ಶಾಪದ ಪ್ರಯೋಗವನ್ನು ಸ್ವತಃ ನೋಡಿ, ಅಥವಾ ಕೇಳಿ, ಅಥವಾ ಊಹಿಸಿ. ಅಥವಾ ಉಪಶಮನ ಯಾವದರಿಂದ ಉಂಟಾಗುತ್ತದೆಂಬದನ್ನು ತಿಳಿದು, ಗೊತ್ತುಮಾಡುತ್ತಾರೆ.

ಪರಾ ಅಭಿಚಾರಿಕ-ಮಂತ್ರಗಳ ದೆಸೆಯಿಂದ ಮುಂದಾಗಿ ಮನಸ್ಸಿನಲ್ಲಿ, ಆ ಮೇಲೆ ದೇಹದಲ್ಲಿ, ತಾಪ ಉಂಟಾಗುತ್ತದ, ಅದರನಂತರ ಗುಳ್ಳೆಗಳು ಏಳುವದು, ಬಾಯಾರಿಕೆ, ಭ್ರಮೆ, ಉರಿ, ಮೂರ್ಛೆ, ಈ ಲಕ್ಷಣಗಳು ಉಂಟಾಗಿ, ಜ್ವರವು ದಿನೇ ದಿನೇ ವೃದ್ಧಿಯಾಗುತ್ತದೆ ಎಂತ ವಾ (ಪು. 189-90)

36. ರೋಗಾಣಾಂತು ಸಮುತ್ಥಾನಾದ್ವಿದಾಹಾಗನ್ತುತಸ್ತಥಾ |
ಜ್ವರೋಽಪರಃ ಸಂಭವತಿ ತೈಸ್ತೈರನ್ಯೈಶ್ಚ ಹೇತುಭಿಃ ||
ದೋಷಾಣಾಂ ಸ ತು ಲಿಂಗಾನಿ ಕದಾಚಿನ್ನಾತಿವರ್ತತೇ || (ಸು. 760)

ಬೇರೆ ಜ್ವರಗಳು.

(ಬೇರೆ) ರೋಗಗಳ ಉತ್ಪತ್ತಿಯ ದೆಸೆಯಿಂದ, ವಿಶೇಷವಾದ ಸುಡತದಿಂದ, ಅಥವಾ ಬೇರೆ ಆಗಂತುವಿನ ದೆಸೆಯಿಂದ, ಆಯಾ ರೋಗದ ಹೇತುಗಳು ಅಥವಾ (ಜ್ವರಕರವಾದ) ಬೇರೆ ಹೇತುಗಳು ಬೇರೆ ಜ್ವರವನ್ನುಂಟುಮಾಡುತ್ತವೆ. ಆದರೆ ಆ ಜ್ವರವು ಯಾವಾಗಲಾದರೂ ವಾತಾದಿ ದೋಷಗಳ ಲಕ್ಷಣಗಳನ್ನು ಮಿಕ್ಕಿರುವದಿಲ್ಲ.

ಸರಾ 'ವಿದಾಹಾಗನ್ತುತಃ' ಎಂದರೆ ವಿದ್ರಧಿ ಮೊದಲಾದ ಅನ್ಯರೋಗಗಳ ಪಾಕದಿಂದ ಮತ್ತು ಅವುಗಳ ಅಭಿಘಾತದಿಂದ, ಅಂದರೆ ಅಪಕ್ವವಾದ ವಿದ್ರಧಿಗೆ ಪೆಟ್ಟು ಬೀಳುವದು ಮುಂತಾದ ಆಗಂತುವಿನಿಂದ, ಎಂತ ನಿ ಸಂ ವ್ಯಾ (ಪು 572) ಸಾಮಾನ್ಯವಾಗಿ ಜ್ವರಹೇತುಗಳನ್ನು ವರ್ಣಿಸುವಲ್ಲಿ ಅಭಿಘಾತವಲ್ಲದೆ, ರೋಗೋತ್ಥಾನವನ್ನೂ, ವ್ರಣಪಾಕವನ್ನೂ, ಹೆಂಗಸರ ಹೆರಿಗೆಸಂಕಟ, ಮೊಲೆಹಾಲು ಉಂಟಾಗುವದು ಮುಂತಾದ ವಿವಿಧವಾದ ಆಗಂತುವನ್ನೂ ಆ ಹೇತುಗಳೊಳಗೆ ಸು ನು ಸೇರಿಸಿದ್ದಾನೆ (ಪು 575) ಅಂಥಾ ಹೇತುಗಳಿಂದ ಸಂಭವಿಸಿದ ಜ್ವರಗಳ ನಿದಾನ ಮತ್ತು ಲಕ್ಷಣಗಳನ್ನು ಹೇಳುವದಕ್ಕಾಗಿ ಈ ಪ್ರವಚನ ಉಂಟಾದ್ದೆಂತ ಕಾಣುತ್ತದೆ ವಾ ನು ದಾಹಾದಿ ಹೇತುಗಳ ಜ್ವರವನ್ನು ಅಭಿಘಾತಜದಲ್ಲಿ ಸೇರಿಸಿದ್ದಾನೆ ಚ.ನು ತೀಕ್ಷ್ಣವಾದ ಬಿಸಿಲಿನ ಅಥವಾ ಅಗ್ನಿಯ ಸಂತಾಪವು ಪಿತ್ತಜ್ವರದ ಹೇತುಗಳಲ್ಲಿ ಒಂದು ಎಂತ ಹೇಳಿದ್ದಾನೆ

37. ಸ್ವಸ್ಥಾನಾತ್ಪ್ರಚ್ಯುತೇ ಚಾಗ್ನೌ ಪ್ರಾಯಶಸ್ತರುಣೇ ಜ್ವರೇ ।
ಅರುಚಿಶ್ಚಾವಿಪಾಕಶ್ಚ ಗುರುತ್ವಮುದರಸ್ಯ ಚ ॥
ಹೃದಯಸ್ಯಾವಿಶುದ್ಧಿಶ್ಚ ತನ್ದ್ರಾ ಚಾಲಸ್ಯಮೇವ ಚ ।
ಜ್ವರೋಽವಿಸರ್ಗೀ ಬಲವಾನ್ ದೋಷಾಣಾಮಪ್ರವರ್ತನಮ್ ॥
ಲಾಲಾಪ್ರಸೇಕೋ ಹೃಲ್ಲಾಸೋ ಕ್ಷುನ್ನಾಶೋಽವಿಶದಂ ಮುಖಮ್ ।
ಸ್ತಬ್ಧಸುಪ್ತಗುರುತ್ವಂ ಚ ಗಾತ್ರಾಣಾಂ ಬಹುಮೂತ್ರತಾ ।
ನ ವಿಡ್ಜೀರ್ಣಾ ನ ಚ ಗ್ಲಾನಿರ್ಜ್ವರಸ್ಯಾಮಸ್ಯ ಲಕ್ಷಣಮ್ ।
* * * ಕ್ಷುತ್ಕ್ಷಾಮತಾ ಲಘುತ್ವಂ ಚ ಗಾತ್ರಾಣಾಂ ಜ್ವರಮಾರ್ದವಮ್ ॥
ದೋಷಪ್ರವೃತ್ತಿರಷ್ಟಾಹೋ ನಿರಾಮಜ್ವರಲಕ್ಷಣಮ್ ॥ (ಚ. 157)

ಸಾಮಜ್ವರ-ನಿರಾಮಜ್ವರಗಳ ಲಕ್ಷಣಗಳು

ಅಗ್ನಿಯು ತನ್ನ ಸ್ಥಾನವನ್ನು ಬಿಟ್ಟಿರುವಾಗ್ಗೆ, ಮತ್ತು ಸಾಧಾರಣವಾಗಿ ತರುಣ ಜ್ವರದಲ್ಲಿ, ಅರುಚಿ, ಜೀರ್ಣವಾಗದಿರುವದು, ಹೊಟ್ಟೆ ಭಾರವಾಗುವದು, ಎದೆಯಲ್ಲಿ ಕಲ್ಮಷ, ತಂದ್ರ, ಆಲಸ್ಯ, ಜ್ವರ ಬಿಡದೆ ಬಲವಂತವಾಗಿರುವದು, (ಮಲಸಂಬಂಧವಾದ) ದೋಷಗಳ ಪ್ರವೃತ್ತಿಯಿಲ್ಲದಿರುವದು, ಜೊಲ್ಲು ಸುರಿಯುವದು, ಎದೆ ತಲ್ಲಣಿಸುವಿಕೆ, ಹಸಿವೆಯ ನಾಶ, ಬಾಯಿಯಲ್ಲಿ ಅಗ್ರ ಅವಯವಗಳು ಸ್ತಬ್ಧವಾಗಿಯೂ, ನಿದ್ರಿಸಿದಂತೆ ನಿರ್ಜೀವವಾಗಿಯೂ, ಭಾರವಾಗಿಯೂ ಇರುವಿಕೆ, ಬಹಳ ಮೂತ್ರ, ಜೀರ್ಣವಾಗಿರದ ಮಲ, ದಣಿವು ಇಲ್ಲದಿರುವಿಕೆ, ಈ ಲಕ್ಷಣಗಳು ಕಾಣುವದರಿಂದ ಜ್ವರವು ಆಮವಾಗಿದೆ ಎಂತ ತಿಳಿಯತಕ್ಕದ್ದು. * * * ಅಲ್ಪವಾದ ಹಸಿವೆ, ದೇಹವು ಲಘುವಾಗಿ ಕಾಣುವದು, ಜ್ವರವು ಮೃದುವಾಗುವದು, ಮಲಪ್ರವೃತ್ತಿ, ಎಂಟು ದಿನ, ಇವು ನಿರಾಮ (ಆಮವಿಲ್ಲದ) ಜ್ವರದ ಲಕ್ಷಣ.

ಸರಾ ಹರ್ಷವಿಲ್ಲದಿರುವಿಕೆ, ಅತಿಮೂತ್ರ ಮತ್ತು ಬೆವರುವಿರುವಿಕೆ ಸಹ, ಆಮಜ್ವರದ ಲಕ್ಷಣ ಎಂತ ಸು (ಪು 762) 'ದೋಷಾಣಾಂ ಅಪ್ರವರ್ತನಮ್' ಎಂದರೆ ಮಲಬಂಧವಾದ ದೋಷಗಳು ಹೊರಗೆ ಹೋಗದಿರುವದು ಎಂತ ಆ ದೀ 'ದೋಷಾಪ್ರವೃತ್ತಿ' ಎಂದರೆ ವಾತಾದಿ ದೋಷಗಳು ಚಿತ್ತಲವಾಗಿರುವಿಕೆ ಎಂತ ನಿ ಸಂ ವ್ಯಾ ಶೌಚ ಮೂತ್ರ, ಬೆವರು ಮುಂತಾದ ಮಲಗಳು ಕ್ರಮವಾಗಿ ಹೋಗದಿರುವದು ವಾತಾದಿ ದೋಷಗಳ ಚಲನೆ ಸರಿಯಿಲ್ಲದ್ದರಿಂದ ಎಂತ ತಿಳಿದರೆ, ಈ ಎರಡು ಅರ್ಥಗಳು ಸರಿಕಾಣಬಹುದು ಸುಶ್ರುತನು ಚರಕನ ನಿರಾಮಜ್ವರದ ಲಕ್ಷಣಗಳೊಳಗೆ ಅಲ್ಪವಾದ ಹಸಿವು ಮತ್ತು ಎಂಟು ದಿನಗಳು ಎಂಬವುಗಳನ್ನು ಬಿಟ್ಟು, "ಜ್ವರವು ಮೃದುವಾಗಿ, ದೇಹವು ಲಘುವಾಗಿ, ಮಲಗಳು ಹೊರಗೆ ಚಲಿಸುತ್ತಿದ್ದಲ್ಲಿ, ದೋಷವು ಪಕ್ವವಾಯಿತೆಂತ ತಿಳಿಯಬೇಕು ಮತ್ತು ಆಗ್ಗೆ ಜ್ವರಕ್ಕೆ ಔಷಧವನ್ನು ಕೊಡತಕ್ಕದ್ದು" ಎಂತ ಬರೆದಿದ್ದಾನೆ, ಮತ್ತು ಅದರನಂತರ ಆಮಜ್ವರದ ಲಕ್ಷಣಗಳನ್ನು ಹೇಳಿ, ಏಳು ದಿನಗಳನಂತರ ಔಷಧವನ್ನು ಕೊಡಬೇಕಾಗಿ ಕೆಲವರು ಆಲೋಚಿಸುತ್ತಾರೆ, ಹತ್ತು ದಿನಗಳನಂತರ ಔಷಧವನ್ನು ಕೊಡತಕ್ಕದ್ದೆಂತ ಬೇರೆ ಕೆಲವರು ನಿಶ್ಚಯಿಸಿದ್ದಾರೆ ಎಂತಲೂ, ಅಲ್ಪಕಾಲದ ಜ್ವರರೋಗಿಗಾದರೂ, ಹೆಚ್ಚಾಗಿ ಪಿತ್ತಜ್ವರದಲ್ಲಿ, ದೋಷಪಾಕ ಉಂಟಾದ ಕೂಡಲೇ, ತಕ್ಕ ಔಷಧವನ್ನು ಕೊಡತಕ್ಕದ್ದೆಂತಲೂ, ಆಮದೋಷವುಳ್ಳವನಿಗೆ ಶೋಧನ ಔಷಧವನ್ನು ಕೊಟ್ಟರೆ ಅದು ಜ್ವರವನ್ನು ಪುನಃ ಜ್ವಲಿಸುತ್ತದೆ ಮತ್ತು ಶಮನ ಔಷಧವನ್ನು ಕೊಟ್ಟರೆ ಅದು ವಿಷಮಜ್ವರವನ್ನುಂಟುಮಾಡುತ್ತದೆ ಎಂತಲೂ, ಬರೆದಿದ್ದಾನೆ (56ನೇ ಸಂಖ್ಯೆ ನೋಡಿ) ಇದರಿಂದ ಆಮಜ್ವರ ಎಂದರೆ ದೋಷಪಾಕವಾಗದ ಸಾಮಾನ್ಯಜ್ವರವಲ್ಲ, ರಸದೋಷವುಳ್ಳ

ಜ್ವರ ಎಂತಲೂ, ಆ ಜ್ವರಕ್ಕೆ ಮಾತ್ರ ಏಳು ಅಥವಾ ಹತ್ತು ದಿನಗಳ ವರೆಗೆ ಔಷಧ ಕೊಡಕೂಡದೆಂಬ ನಿಯಮವಲ್ಲದೆ, ಇತರ ಜ್ವರಗಳಲ್ಲಿ ಆ ಕಾಲಗಳಿಗೆ ಮುಂಚಿತವಾಗಿಯಾದರೂ ದೋಷಪಾಕದ ಲಕ್ಷಣ ಕಂಡಕೂಡಲೇ ಔಷಧವನ್ನು ಕೊಡತಕ್ಕದ್ದೆಂತಲೂ, ಸುಶ್ರುತನ ಮತವಾಗಿ ಕಾಣುತ್ತದೆ. ಇದನ್ನು ಆಧರಿಸಿಯೇ ಕಾಲಾಂತರದ ಪಂಡಿತರು ವಾತಪಿತ್ತಜ್ವರದಲ್ಲಿ ಐದನೇ ದಿನ, ಪಿತ್ತಕಫಜ್ವರದಲ್ಲಿ ಏಳನೇ ದಿನ ಮತ್ತು ವಾತಕಫಜ್ವರದಲ್ಲಿ ಏಳು ದಿನಗಳ ಅನಂತರ, ಔಷಧ ಕೊಡತಕ್ಕದ್ದೆಂತ ಹೇಳಿದ್ದಾಗಿರಬೇಕು (ಚಿ ಸಾ ಸಂ 25) ಚರಕಾಚಾರ್ಯನು ಮೇಲೆ ಎತ್ತಿಕೊಂಡ ವಚನಗಳಿಗನುಸಾರವಾಗಿ 'ಸರ್ವಧಾತುಗಳನ್ನು ಹೊಕ್ಕು ನಿಂತ ಮಲಗಳು (ದೋಷಗಳು) ಏಳು ದಿನಗಳಲ್ಲಿ ಪಕ್ವವಾಗುವದರಿಂದ ಹೆಚ್ಚಾಗಿ ಎಂಟನೆಯ ದಿನದಲ್ಲಿ ಜ್ವರವು ನಿರಾಮ ಎಂತ ಹೇಳಲ್ಪಡುತ್ತದೆಂತ ಪ್ರತ್ಯೇಕ ಹೇಳಿರುತ್ತಾನೆ (ಪು 469) ಅದಲ್ಲದೆ ಕೆಲವು ಸಂದರ್ಭದಲ್ಲಿ ಏಳು ದಿನಗಳಲ್ಲಿ ಜ್ವರವು ಪಾಕವಾಗಿ, ಬಿಸಿಯ ಮೃದುತ್ವವುಂಟಾಗದಿರುವದುಂಟು, ಮತ್ತು ಅಂಥಾ ಸಂಗತಿಯಲ್ಲಿ ಲಂಘನ, ಅಲ್ಪ ಅಶನ ಮುಂತಾದ ಉಕ್ತ ಕ್ರಮಗಳನ್ನು ಹತ್ತು ದಿನಗಳ ವರೆಗೆ ನಡಿಸಿ, ಅನಂತರ ಕಷಾಯಗಳಿಂದ ಉಪಚರಿಸಬೇಕು, ಎಂತ ಬರೆದಿರುತ್ತಾನೆ ಪುನಃ ಯಾವ ಜ್ವರಗಳು ಆಮವುಳ್ಳ(ಸಾಮ)ವೋ, ಯಾವವು ಕಫಜವೋ ಮತ್ತು ಯಾವವು ಕಫಪಿತ್ತಜ್ವರಗಳೋ, ಅವುಗಳಲ್ಲಿ ಲಂಘನ ಕ್ರಮವನ್ನು ಲಂಘನಾರ್ಹರಿಗೆ ನಡಿಸತಕ್ಕದ್ದು ಎಂತ ಹೇಳಿದ್ದಾನೆ ಇದರಿಂದ ಚರಕನು ಉಕ್ತವಾದ ಆಮಜ್ವರದ ಲಕ್ಷಣವಿಲ್ಲದ ಜ್ವರದಲ್ಲಿಯಾದರೂ, ಏಳು ದಿನಗಳ ವರೆಗೆ ಔಷಧ ಕೊಡಕೂಡದೆಂಬದು ತನ್ನ ಮತ ಎಂತ ತಿಳಿಸುವದಕ್ಕಾಗಿ ನಿರಾಮಜ್ವರದ ಲಕ್ಷಣಗಳೊಳಗೆ ಎಂಟನೆ ದಿನವಾಗಿರುವದೊಂದು ಲಕ್ಷಣವನ್ನು ಸೇರಿಸಿರಬೇಕು ಹೀಗೆ ಮತಭೇದವಿರಕೂಡದೆಂಬದರಿಂದ ಕೆಲವರು ದೋಷಪಾಕವುಂಟಾದಲ್ಲಿ ಏಳು ದಿನ ಕಾಲಕ್ಕೆ ಮುಂಚಿತವಾದರೂ ಔಷಧವನ್ನು ಕೊಡಬೇಕೆಂಬ ಸುಶ್ರುತನ ವಚನವು ಆಮತ್ವವು ಅತ್ಯಲ್ಪತವಾಗಿರದ ಸಂದರ್ಭಕ್ಕೆ ಮತ್ತು ಪಾಚನ ಔಷಧ ಕೊಡುವ ವಿಧಿಗೆ ಮಾತ್ರ ಸಂಬಂಧಪಟ್ಟದ್ದೆಂತ ಅರ್ಥಮಾಡಿದ್ದಾರೆ

ಸಾಮತೆಯು ದ್ವಿವಿಧ ಒಂದು ರಸದ ಸಾಮತೆ, ಎರಡನೇದು ದೋಷದ ಸಾಮತೆ ಈ ಸಂಖ್ಯೆಯ ವಚನದಲ್ಲಿ ವರ್ಣಿಸಲ್ಪಟ್ಟ ಜೊಲ್ಲು ಸುರಿಯುವಿಕೆ ಮುಂತಾದ ಅನೇಕ ಲಕ್ಷಣಗಳು ಒಂದನೇದಕ್ಕೇನೇ ಸಂಬಂಧಪಟ್ಟವು ದೋಷಸಾಮತೆಯುಳ್ಳ ಜ್ವರವೇ ತರುಣಜ್ವರ (ಮ ವ್ಯಾ 45-6) ಅದರಲ್ಲಿ ರಸಸಾಮತೆಯ ಲಕ್ಷಣಗಳು ಸಂಪೂರ್ಣವಾಗಿ ಕಾಣದಿದ್ದರೂ, ಆಹಾರದ ಮತ್ತು ಔಷಧದ ನಿಯಮದ ಮಟ್ಟಿಗೆ ಅದು 'ನಿರಾಮ' ಎಂತ ಭಾವಿಸಬಾರದು ಎಂಬದು ಚರಕನ ಮತ ಸಾಧಾರಣವಾಗಿ ರಸಪಾಕ ವಿನಾ ದೋಷಪಾಕವಿಲ್ಲ, ದೋಷಪಾಕ ವಿನಾ ಜ್ವರದ ಪಾಕ (ಉಪಶಮನ) ಇಲ್ಲ ಎಂತ ಭಾ ಪ್ರದ ವ್ಯಾಖ್ಯಾನಗಾರ (ಪು. 267) ಚನ್ನಾಗಿ ಪಾಕವಾಗದೆ ಮತ್ತು ಕೂಡಿಕೊಳ್ಳದೆ ಇರುವ, ದುರ್ಗಂಧವುಳ್ಳ, ಬಹು ಪಿಚ್ಛಿಲವಾದ, ಸರ್ವಾಂಗಗಳಿಗೂ ಆಯಾಸ ಕೊಡತಕ್ಕ ರಸಕ್ಕೆ ಆಮ ಎನ್ನುವದು, ಅದರಿಂದ ಕೂಡಿದ ದೋಷಗಳೂ, ದೂಷ್ಯಗಳೂ, ಅವುಗಳಿಂದ ಉಂಟಾದ ರೋಗಗಳೂ ಸಾಮಾ. ಎಂತ ಬುದ್ಧಿವಂತರು ತಿಳಿಯುತ್ತಾರೆ ಎಂತ ಭಾ. ಪ್ರ (ಪು 254)

38. ಜ್ವರವೇಗೋಽಧಿಕಂ ತೃಷ್ಣಾ ಪ್ರಲಾಪಃ ಶ್ವಸನಂ ಭ್ರಮಃ ।
ಮಲಪ್ರವೃತ್ತಿರುತ್ಕ್ಲೇಶಃ ಪಚ್ಯಮಾನಸ್ಯ ಲಕ್ಷಣಮ್ ॥ (ವಾ. 190)

ಪಚನವಾಗುತ್ತಿರುವ ಜ್ವರದ ಲಕ್ಷಣ

ಜ್ವರವೇಗವು ಅಧಿಕವಾಗಿರುವದು, ಬಾಯಾರಿಕೆ, ಅಲ್ಲಸಲ್ಲದ ಮಾತು (ಪ್ರಲಾಪ), ಉಬ್ಬಸ. ಭ್ರಮೆ, ಮಲಪ್ರವೃತ್ತಿ, ವಾಕರಿಕೆಸಂಕಟ, ಇವು ಪಾಕವಾಗುತ್ತಿರುವ ಜ್ವರದ ಲಕ್ಷಣ.

ಷರಾ ಈ ಲಕ್ಷಣಗಳು ಜ್ವರದ ತರುಣಾವಸ್ಥೆಯ ಕೊನೆಯಲ್ಲಿ ಪಕ್ವಾವಸ್ಥೆಗೆ ಮೊದಲು ಕಾಣುವಂಥವು

39. ಆಸಪ್ತರಾತ್ರಾತ್ತರುಣಂ ಜ್ವರಮಾಹುರ್ಮನೀಷಿಣಃ ।
ದ್ವಾದಶಾಹಮುಭಿವ್ಯಾಪ್ಯ ಮಧ್ಯಂ ಜೀರ್ಣಂ ತತಃ ಪರಮ್ ॥ (ಭಾ. ಪ್ರ. 258)

ಜ್ವರದ ತರುಣ, ಮಧ್ಯ, ಜೀರ್ಣ, ಎಂಬ ಅವಸ್ಥೆಗಳು

ಜ್ವರವು ಏಳು ದಿನಗಳ ಪರ್ಯಂತ ತರುಣ, ಅನಂತರ ಹನ್ನೆರಡನೇ ದಿನದ ವರೆಗೆ ಮಧ್ಯ, ಹದಿಮೂರನೇ ದಿನದಿಂದ ಜೀರ್ಣ, ಎಂತ ಜ್ಞಾನಿಗಳು ಹೇಳುತ್ತಾರೆ.

ಯೋ ದ್ವಾದಶೇಭ್ಯೋ ದಿವಸೇಭ್ಯ ಊರ್ಧ್ವಂ ದೋಷತ್ರಯೇಭ್ಯೋ ದ್ವಿಗುಣೇಭ್ಯ ಊರ್ಧ್ವಮ್ । ನೃಣಾಂ ತನೌ ತಿಷ್ಠತಿ ಮನ್ದವೇಗೋ ಭಿಷಗ್ಭಿರುಕ್ತೋ ಜ್ವರ ಏಷ ಜೀರ್ಣಃ ॥ (ಭಾ. ಪ್ರ. 311)

ಮನುಷ್ಯರ ಶರೀರದಲ್ಲಿ ಹನ್ನೆರಡು ದಿವಸಗಳನಂತರ, ತ್ರಿದೋಷ ಜ್ವರವಾದರೆ ಇಪ್ಪತ್ತು ನಾಲ್ಕು ದಿನಗಳನಂತರ, ಯಾವ ಜ್ವರವು ಮಂದವೇಗವುಳ್ಳದ್ದಾಗಿ ನಿಲ್ಲುತ್ತದೋ, ಅದಕ್ಕೆ ವೈದ್ಯರು ಜೀರ್ಣಜ್ವರ ಎನ್ನುತ್ತಾರೆ.

ಸರಾ ಹದಿನಾಲ್ಕು ದಿನಗಳನಂತರ ನಿಂತ ಜ್ವರವು ಜೀರ್ಣ ಎಂತ ಇನ್ನೊಂದು ಪಕ್ಷ ಮೂರು ಹಪ್ತೆ ಕಳೆದು, ಜ್ವರವು ಮಂದವಾಗಿದ್ದು, ಅಗ್ನಿಮಾಂದ್ಯ ಮತ್ತು ಪ್ಲೀಹದೋಷ ಉಂಟಾದಾಗ್ಗೆ, ಜ್ವರವು ಜೀರ್ಣ ಎನ್ನುವದೆಂತ ಮತ್ತೊಂದು ಪಕ್ಷ "ಜೀರ್ಣತಾಮವಿಪರ್ಯಾಸಾತ್ಸಪ್ತರಾತ್ರಂ ಚ ಲಂಘನಾತ್" ಎಂತ ವಾ. (ಪು 190), ಎಂದರೆ "ಆಮಜ್ವರದ ಲಕ್ಷಣ ಹೋಗಿ ಪಕ್ವಜ್ವರದ ಲಕ್ಷಣ ಉಂಟಾದಲ್ಲಿಂದ ಮತ್ತು ಏಳು ದಿನದ ಲಂಘನದಿಂದ ಜ್ವರವು ಜೀರ್ಣ ಎನ್ನಿಸಿಕೊಳ್ಳುತ್ತದೆ. ಇದರಿಂದ ಏಳು ದಿನಗಳ ಕಾಲದೊಳಗೆ ಜ್ವರವು ಯಾವಾಗಲಾದರೂ ಜೀರ್ಣವಾಗುವದಿಲ್ಲ ಮತ್ತು ಏಳು ದಿನಗಳನಂತರವೂ ಆಮಜ್ವರದ ಲಕ್ಷಣ ಅಡಗದಿದ್ದ ಜ್ವರವನ್ನು ಜೀರ್ಣ ಎಂತ ತಿಳಿಯಬಾರದು ಎಂತ ಹೇಳಿದ ಹಾಗಾಯಿತು ಚರಕನಾಗಲಿ ಸುಶ್ರುತನಾಗಲಿ ಕಾಲನಿಯಮದ ಮೇಲೆ ಜ್ವರದ ಮೂರು ಅವಸ್ಥೆಗಳನ್ನು ಪ್ರತ್ಯೇಕಿಸಿದ್ದು ಕಾಣುವದಿಲ್ಲ ಜ್ವರದ ದೋಷದಲ್ಲಿ ಉಂಟಾಗುವ ಭೇದಗಳನ್ನೇ ಮುಖ್ಯವಾಗಿ ಆಧರಿಸಿ, ಅದಕ್ಕೆ ಉಪಚಾರಗಳನ್ನು ಅವಸ್ಥಾನುಸಾರ ಭಿನ್ನವಾಗಿ ನಡಿಸತಕ್ಕದ್ದಾದರೂ, ಆ ಭೇದಗಳುಂಟಾಗುವದಕ್ಕೆ ಕಾಲಗತಿಯು ಒಂದು ಕಾರಣವಾಗುತ್ತದೆಂಬದು ಅವರ ಮತವಾಗಿ ಕಾಣುತ್ತದೆ

40. ಸವಜ್ವರೇ ದಿವಾಸ್ವಪ್ನಸ್ನಾನಾಭ್ಯಂಗಾನ್ನಮೈಥುನಮ್ ।
ಕ್ರೋಧಪ್ರವಾತವ್ಯಾಯಾಮಕಷಾಯಾಂಶ್ಚ ವಿವರ್ಜಯೇತ್ ॥

ತರುಣಜ್ವರದಲ್ಲಿ ವರ್ಜ್ಯಗಳು

(ಚ. 457)

ಹೊಸ ಜ್ವರದಲ್ಲಿ ಹಗಲುನಿದ್ರೆ, ಸ್ನಾನ, ಅಭ್ಯಂಗ, ಅನ್ನ, ಮೈಥುನ, ಸಿಟ್ಟು, ಬೀಸುವ ಗಾಳಿ, ಮೈದಂಡನೆ ಮತ್ತು (ಚೊಗರು ರುಚಿಯುಳ್ಳ ದ್ರವ್ಯಗಳ) ಕಷಾಯ, ಇವುಗಳನ್ನು ರೋಗಿಯು ವರ್ಜಿಸತಕ್ಕದ್ದು.

ಸರಾ ಅನ್ನ ಎಂದರೆ ಆಹಾರ ಹೊಸ ಜ್ವರದಲ್ಲಿ ದೋಷಪಾಕದ ಉದ್ದಿಶ್ಯ, ರೋಗಿಯು ಹೆಚ್ಚಾಗಿ ಗುರುವಾದ, ಉಷ್ಣವಾದ, ಸ್ನಿಗ್ಧವಾದ, ಸೀಯಾದ ಮತ್ತು ಚೊಗರಾದ ಆಹಾರಗಳನ್ನು ಬಿಡಬೇಕೆಂತ ಇನ್ನೊಂದು ಕಡೆ (ಚ 461) ಲಂಘನದ ಪ್ರಶಸ್ಯತೆ ಕೆಳಗಿನ 41ನೇ ಸಂಖ್ಯೆಯಲ್ಲಿ ವರ್ಣಿತವಾಗಿದೆ ವಾತಜ್ವರದಲ್ಲಿಯಾದರೂ ಆರಂಭದಲ್ಲಿ ಅತಿ ಗುರುವಾದ ಅಥವಾ ಅತಿಸ್ನಿಗ್ಧವಾದ ಆಹಾರವನ್ನು ರೋಗಿಯು ಸೇವಿಸಬಾರದು (ಚ 469)

41 ಜ್ವರೇ ಲಂಘನಮೇವಾದಾವುಪದಿಷ್ಟಮೃತೇ ಜ್ವರಾತ್ ।
ಕ್ಷಯಾನಿಲಭಯಕ್ರೋಧಕಾಮಶೋಕಶ್ರಮೋದ್ಭವಾತ್
ಲಂಘನೇನ ಕ್ಷಯಂ ನೀತೇ ದೋಷೇ ಸನ್ಧುಕ್ಷಿತೇಽನಲೇ ।
ವಿಜ್ವರತ್ವಂ ಲಘುತ್ವಂ ಚ ಕ್ಷುಚ್ಚೈವಾಸ್ಯೋಪಜಾಯತೇ ।
ಪ್ರಾಣಾವಿರೋಧಿನಾ ಚೈನಂ ಲಂಘನೇನೋಪಪಾದಯೇತ್ ।
ಬಲಾಧಿಷ್ಠಾನಮಾರೋಗ್ಯಂ ಯದರ್ಥೋಽಯಂ ಕ್ರಿಯಾಕ್ರಮಃ ॥

ಜ್ವರದ ಆದಿಯಲ್ಲಿ ಲಂಘನವಿಧಿ

(ಚ. 457)

ಕ್ಷಯದಿಂದ, ವಾತದಿಂದ, ಭಯದಿಂದ, ಸಿಟ್ಟಿನಿಂದ, ಕಾಮದಿಂದ, ಶೋಕದಿಂದ, ಅಥವಾ ಶ್ರಮದಿಂದ ಉಂಟಾದ ಜ್ವರದಲ್ಲಿ ವಿನಾ ಇತರ ಯಾವ ಜ್ವರದಲ್ಲಿಯಾದರೂ ಆರಂಭದಲ್ಲಿ ಲಂಘನವೇ ಉಪದೇಶಿಸಲ್ಪಟ್ಟದೆ. ಲಂಘನದಿಂದ ದೋಷವು ಕ್ಷಯ ಹೊಂದಿ, ಅಗ್ನಿಯು ಚುರುಕಾದರೆ, ಜ್ವರವು ಹೋಗಿ, ರೋಗಿಗೆ ದೇಹವು ಲಘುವಾಗಿ, ಹಸಿವು ಉಂಟಾಗುತ್ತದೆ. ಆದ್ದರಿಂದ, ಚಿಕಿತ್ಸಾಕ್ರಮದ ಉದ್ದೇಶವಾದ ಆರೋಗ್ಯವು ಬಲವನ್ನಾಧರಿಸಿರುವದರಿಂದ ಆ ಬಲಕ್ಕೆ ವಿರೋಧವಿಲ್ಲದ ರೀತಿಯಲ್ಲಿ, ರೋಗಿಯಿಂದ ಲಂಘನವನ್ನು ಮಾಡಿಸಿ, ಅದರ ಪ್ರಯೋಜನವನ್ನು ಸಂಪಾದಿಸತಕ್ಕದ್ದು.

ಪರಾ ಹಳೇ ಜ್ವರದಲ್ಲಿಯೂ, ಕ್ಷತಜದಲ್ಲಿಯೂ ಲಂಘನವು ಹಿತವಲ್ಲ, ಅವುಗಳನ್ನು ಶಮನಗಳಿಂದಲೇ ಉಪಚರಿಸಬೇಕು ಎಂತ ಚ (ಪು 469) ಲಂಘನವನ್ನು ರೋಗಿಯ ಬಲವನ್ನೂ ದೋಷವನ್ನೂ ನೋಡಿಕೊಂಡು ಮಾಡಿಸತಕ್ಕದ್ದು ಎಂತ ಸು (ಪು 374)

42. ಊರ್ಧ್ವಮಾರುತತೃಷ್ಣಾಕ್ಷುನ್ಮುಖಶೋಷಶ್ರಮಾನ್ವಿತೈಃ ।
ನ ಕಾರ್ಯಂ ಗರ್ಭಿಣೀವೃದ್ಧಬಾಲದುರ್ಬಲಭೀರುಭಿಃ ॥ (ಸು. 374)

ಸಾಧಾರಣವಾಗಿ ಲಂಘನಾರ್ಹರಲ್ಲದವರು

ಊರ್ಧ್ವವಾಯು, ಬಾಯಾರಿಕೆ, ಹಸಿವು, ಬಾಯಿ ಒಣಗುವಿಕೆ, ಶ್ರಮ, ಈ ಲಕ್ಷಣವುಳ್ಳವರು, ಬಸುರಿಯರು, ಮುದುಕರು, ಬಾಲಕರು, ಬಲಹೀನರು, ಮತ್ತು ಹೇಡಿಗಳು ಅಪತರ್ಪಣವನ್ನು (ಲಂಘನವನ್ನು) ಮಾಡಬಾರದು.

ಪರಾ ಜ್ವರರೋಗದಲ್ಲಿ ಇಂಥವರಿಗೆ ಸಹ ಲಂಘನಮಾಡಿಸಬಾರದೆಂತ ಸು (ಪು 761) ಅವರಿಗೆಲ್ಲ (ಉಕ್ತಕ್ರಮದಿಂದ) ಶಮನಕರವಾದ ಉಪಚಾರಗಳನ್ನು ನಡಿಸಬೇಕು ಎಂತ ಚ. (ಪು 469)

43. ಸೃಷ್ಟಮಾರುತವಿಣ್ಮೂತ್ರಂ ಕ್ಷುತ್ಪಿಪಾಸಾಸಹಂ ಲಘುಮ್ ।
ಪ್ರಸನ್ನಾತ್ಮೇನ್ದ್ರಿಯಂ ಕ್ಷಾಮಂ ನರಂ ವಿದ್ಯಾತ್ಸುಲಂಘಿತಮ್ ॥ (ಸು. 761)

ಸರಿಯಾದ ಲಂಘನದ ಲಕ್ಷಣ

ವಾಯು, ಮಲ ಮತ್ತು ಮೂತ್ರ, ಇವುಗಳ ವಿಸರ್ಜನ, ಹಸಿವೆಯನ್ನೂ ಬಾಯಾರಿಕೆಯನ್ನೂ ಸಹಿಸಲಾರದಿರುವಿಕೆ, (ದೇಹದ) ಲಘುತ್ವ, ಅಂತಃಕರಣದ ಮತ್ತು ಇಂದ್ರಿಯಗಳ ಪ್ರಸನ್ನತೆ, ಮತ್ತು ಅಶಕ್ತಿ (ಹೈರಾಣ), ಇವು ಸರಿಯಾಗಿ ಲಂಘನವಾದ್ದರ ಲಕ್ಷಣ ಎಂತ ತಿಳಿಯತಕ್ಕದ್ದು.

ಪರಾ ಇಂದ್ರಿಯಗಳ ಪ್ರಸನ್ನತೆ ಮತ್ತು ಕ್ಷಾಮತ್ವ ಬಿಟ್ಟು ಎದೆ, ತೇಗು, ಕಂಠ ಮತ್ತು ಬಾಯಿ ಶುದ್ಧವಾಗುವದು, ತಂದ್ರೆಯೂ ಕ್ಲಮವೂ ಇಲ್ಲದಿರುವದು, ಬೆವರು ಉಂಟಾಗುವದು ಮತ್ತು ವಾಯಿರುಚಿ, ಇವುಗಳನ್ನು ಲಂಘನಸಾಕಾದ್ದರ ಲಕ್ಷಣಗಳೊಳಗೆ ಚ ನು ಸೇರಿಸಿದ್ದಾನೆ (ಪು 122)

44. ಬಲಕ್ಷಯಸ್ತೃಷಾಶೋಷಸ್ತನ್ದ್ರಾನಿದ್ರಾಭ್ರಮಕ್ಲಮಾಃ ।
ಉಪದ್ರವಾಶ್ಚ ಶ್ವಾಸಾದ್ಯಾಃ ಸಮ್ಭವನ್ತ್ಯತಿಲಂಘನಾತ್ ॥ (ಸು. 761)

ಅತಿಯಾದ ಲಂಘನದ ಲಕ್ಷಣ

ಬಲಹಾನಿ, ಬಾಯಾರಿಕೆ, ಬಾಯಿ ಒಣಗುವಿಕೆ, ತಂದ್ರೆ, ನಿದ್ರೆಬಾರದಿರುವದು, ತಲೆತಿರುಕು, ಶ್ರಮಪಟ್ಟಹಾಗಿನ ಆಯಾಸ, ಮತ್ತು ಉಬ್ಬಸ ಮೊದಲಾದ ಉಪದ್ರವಗಳು, ಅತಿಲಂಘನದಿಂದ ಸಂಭವಿಸುತ್ತವೆ.

ಪರಾ ಗಂಟುಗಳಲ್ಲಿ ಒಡೆತ, ಅಂಗಗಳಲ್ಲಿ ನೆಳೆತ, ಕೆಮ್ಮು, ಹಸಿವೆಯ ನಾಶ, ಅರುಚಿ, ಕಣ್ಣು ಕಿವಿಗಳ ದುರ್ಬಲತೆ ಪದೇಪದೇ ಮನೋಭ್ರಾಂತಿ ಊರ್ಧ್ವವಾಯು, ಹೃದಯದಲ್ಲ ಆಯಾಸ ಮತ್ತು ಅಗ್ನಿಹಾನಿ ಸಹ ಅತಿಲಂಘನದಿಂದ ಉಂಟಾಗುತ್ತವೆ ಎಂತ ಚಿ ಸಾ. ಸಂ (ಪು 15-16)

45. ಕಫೋತ್ಕ್ಲೇಶಃ ಸಹೃಲ್ಲಾಸಃ ಷ್ಠೀವನಂ ಚ ಮುಹುರ್ಮುಹುಃ ।
ಕಣ್ಠ(?ಣ್ಠಾ)ಸ್ಯಹೃದಯಾಶುದ್ಧಿಸ್ತನ್ದ್ರಾ ಸ್ಯಾದ್ಧೀನಲಂಘನೇ (ಭಾ. ಪ್ರ. 253)

ಹೀನಲಂಘನದ ಲಕ್ಷಣ

ಕಫದ ವಾಕರಿಕೆ, ಎದೆ ತಲ್ಲಣಿಸುವಿಕೆ, ಪದೇ ಪದೇ ಉಗುಳುತ್ತಿರುವದು, ಕಂಠ, (ಬಾಯಿ), ಮತ್ತು ಹೃದಯ ಶುದ್ಧವಿಲ್ಲದಿರುವಿಕೆ, ತಂದ್ರೆ ಸಹ ಲಂಘನ ಕಡಿಮೆಯಾದಾಗ್ಗೆ ಕಾಣುವವು.

46. ಸರ್ವಜ್ವರೇಷು ಸಪ್ತಾಹಂ (?ಸುಲಘು) ಮಾತ್ರಾವದ್ಭೋಜನಂ ಹಿತಮ್ |
ಜ್ವರದಲ್ಲಿ ಆಹಾರ ನಿಯಮ
ವೇಗಾಪಾಯೇ ಽನ್ಯಥಾ ತದ್ಧಿ ಜ್ವರವೇಗಾಭಿವರ್ಧನಮ್ ||
ಜ್ವರಿತೋ ಹಿತಮಶ್ನೀಯಾದ್ಯದ್ಯಪ್ಯಸ್ಯಾರುಚಿರ್ಭವೇತ್ |
ಅನ್ನಕಾಲೇ ಹ್ಯಭುಂಜಾನಃ ಕ್ಷೀಯತೇ ಮ್ರಿಯತೇ ಽಥವಾ ||
ಗುರ್ವಭಿಷ್ಯನ್ದ(?ನ್ದ್ಯ)ಕಾಲೇ ಚ ಜ್ವರೀ ನಾದ್ಯಾತ್ಕಥಂಚನ |
ನ ತು ತಸ್ಯಾಹಿತಂ ಭುಕ್ತಮಾಯುಷೇ ವಾ ಸುಖಾಯ ವಾ ||
(ಸು. 765)

ಎಲ್ಲಾ ಜ್ವರಗಳಲ್ಲಿ ಜ್ವರದ ವೇಗ ಇಳಿದಿದ್ದಾಗ್ಗೆ ಬಹು ಲಘುವಾದ ಭೋಜನವನ್ನು ಮಿತವಾಗಿ (ಲೆಕ್ಕದಲ್ಲಿ) ಮಾಡುವದು ಹಿತ; ಯಾಕೆಂದರೆ ಇದಕ್ಕೆ ವ್ಯತಿರಿಕ್ತವಾಗಿ ಮಾಡಿದ ಭೋಜನದಿಂದ ಜ್ವರದ ವೇಗವು ಅಭಿವೃದ್ಧಿಯಾಗುತ್ತದೆ. ಜ್ವರರೋಗಿಯು, ಅರುಚಿ ಇದ್ದಾಗಲಾದರೂ, ಹಿತವಾದ ಆಹಾರವನ್ನು ಉಣ್ಣತಕ್ಕದ್ದು ಭೋಜನಕಾಲದಲ್ಲಿ ಉಣ್ಣದ ರೋಗಿಯು ಕ್ಷಯಿಸುತ್ತಾನೆ ಅಥವಾ ಸಾಯುತ್ತಾನೆ. ಆದರೆ ಗುರುವಾದ ಮತ್ತು ಅಭಿಷ್ಯನ್ದಕರವಾದ ಆಹಾರವನ್ನು ಮತ್ತು ಅಕಾಲದಲ್ಲಿ ಹ್ಯಾಗಾದರೂ ತಿನ್ನಬಾರದು. ಅಹಿತವಾದ್ದನ್ನು ಉಂಡರೆ, ಅದು ಅವನ ಆಯುಸ್ಸಿಗೂ ಅಲ್ಲ, ಸುಖಕ್ಕೂ ಅಲ್ಲ.

ಪರಾ ಅಭಿಷ್ಯನ್ದಿ'ಯ ಅರ್ಥಕ್ಕೆ 1ನೇ ಭಾಗದ ಪು 73, ಸಂ 24 ನೋಡಿ. 'ಸಪ್ತಾಹಂ' ಎಂಬಲ್ಲಿ 'ಸುಲಘು' ಎಂತ ಪಾಠವಿಟ್ಟು, "ಸಪ್ತಾಹಂ ಮಾತ್ರವಲ್ಲಘು ಭೋಜಯೇತ್" ಎಂಬ ಪಾಠ ನಿಬಂಧಗಳಲ್ಲಿ ಕಾಣುವದಿಲ್ಲ ಎಂತ ನಿ. ಸಂ ವ್ಯಾ (ಪು 577) 'ಸಪ್ತಾಹಂ' ಎಂಬ ಪಾಠವನ್ನಿಟ್ಟು ಆ ಪ್ರಥಮ ಶ್ಲೋಕವು ವಿಷಮಜ್ವರಕ್ಕೆ ಸಂಬಂಧಪಟ್ಟದ್ದೆಂತ ಭಾ ಪ್ರ ದ ವ್ಯಾಖ್ಯಾ (ಪು 268) ಅದು ಸರಿಯಾಗಿ ಕಾಣುವದಿಲ್ಲ ಮೂಲದಲ್ಲಿ ಈ ವಚನದನಂತರ ವಿಷಮಜ್ವರದ ಪ್ರಸ್ತಾವ ಬಂದದಷ್ಟೆ 2ನೇ 3ನೇ ಶ್ಲೋಕಗಳ ವಿಷಯು ಜೀರ್ಣಜ್ವರಕ್ಕೆ ಸಂಬಂಧಪಟ್ಟದ್ದೆಂತ ನಿ. ಸಂ ವ್ಯಾ ತರುಣಜ್ವರದಲ್ಲಿ ಅನ್ನಕಾಲದಲ್ಲಿ ಹಿತವಾದ್ದೆಂತ ಹೇಳಲ್ಪಟ್ಟ ಔಷಧದ ಯವಾಗೂ ಗಂಜಿಯು ಭೋಜನದಲ್ಲಿ ಸೇರಿದ್ದೆಂತ ಎಣಿಸಬಹುದಾದರೆ, ಇಲ್ಲಿ ಹೇಳಲ್ಪಟ್ಟ ವಿಷಯು ಸರ್ವ ಜ್ವರಕ್ಕೂ ಸಾಮಾನ್ಯವಾದ್ದೆಂತ ತಿಳಿಯಬಹುದು

47. ಲಂಘನಂ ಲಂಘನೀಯಸ್ತು ಕುರ್ಯಾದ್ದೋಷಾನುರೂಪತಃ |
ಅನಶನಕ್ಕೆ ಕಾಲಾವಧಿ
ತ್ರಿರಾತ್ರಮೇಕರಾತ್ರಂ ವಾ ಽಹೋರಾತ್ರಮಥವಾ ಜ್ವರೇ ||
(ಭಾ ಪ್ರ 252)

ಜ್ವರರೋಗಿಯು ಲಂಘನಕ್ಕರ್ಹನಾಗಿದ್ದರೆ ಮೂರು ರಾತ್ರಿ, ಒಂದು ರಾತ್ರಿ, ಅಥವಾ ಒಂದು ಹಗಲೂರಾತ್ರಿ ಕಾಲ, ದೋಷದ ಸ್ಥಿತಿಗನುಸಾರವಾಗಿ, ಉಪವಾಸವನ್ನು ಮಾಡತಕ್ಕದ್ದು

ಆನದ್ಧಸ್ತಿಮಿತೈರ್ದೋಷೈರ್ಯಾವನ್ತಂ ಕಾಲಮಾತುರಃ |
ಕುರ್ಯಾದನಶನಂ ತಾವತ್ತತಃ ಸಂಸರ್ಗಮಾಚರೇತ್ || (ಸು. 761)

ಜ್ವರರೋಗಿಯಲ್ಲಿ (ಆಮದ ದೆಸೆಯಿಂದ) ಸ್ತಬ್ಧವಾದ ದೋಷಗಳ ಬಿಗಿ ಎಷ್ಟು ಕಾಲ ಇರುತ್ತದೋ, ಅಷ್ಟರ ವರೆಗೆ ಅವನು ಆಹಾರವನ್ನು ಪೂರ್ಣವಾಗಿ ಬಿಟ್ಟಿದ್ದು, ಅನಂತರ (ಗಂಜಿ ನೀರು ಮುಂತಾದ ಅಲ್ಪ ಆಹಾರವನ್ನು ಸೇವಿಸಿ) ಅಪೂರ್ಣ ಲಂಘನವನ್ನು ಆಚರಿಸಬೇಕು.

ಪರಾ ದೋಷಗಳೂ ಅಗ್ನಿಯೂ ಸ್ಥಿರವಾಗಿಲ್ಲದವನಿಗೆ ಲಂಘನದಿಂದ ದೋಷ ಪಾಚನವಾಗಿ ಜ್ವರ ಪರಿಹಾರವಾಗುತ್ತದೆ, ಅಗ್ನಿದೀಪನ ಉಂಟಾಗುತ್ತದೆ, ಆಹಾರದ ಇಚ್ಛೆಯೂ, ಬಾಯಿರುಚಿಯೂ, ದೇಹದ ಲಘುತ್ವವೂ ದೊರೆಯುತ್ತವೆ, ಎಂತ ಸುಶ್ರುತನೇ ಲಂಘನದ ಗುಣವರ್ಣನದಲ್ಲಿ ಬರೆದಿರುತ್ತಾನೆ ಇದನ್ನೂ, ಲಂಘನ ಸರಿಯಾದ್ದರ, ಅತಿಯಾದ್ದರ,

ಮತ್ತು ಕಡಿಮೆಯಾದ್ದರ (ಹಿಂದೆ ಕೊಟ್ಟಿರುವ) ಲಕ್ಷಣಗಳನ್ನೂ ಆಲೋಚಿಸಿಕೊಂಡು ಲಂಘನವಮಾಡಿಸತಕ್ಕದ್ದು. ಬೂದಿ ಮುಚ್ಚಿಕೊಂಡ ಬೆಂಕಿಯಂತೆ ಜಠರಾಗ್ನಿಯು ಆಮದಿಂದ ಮುಚ್ಚಲ್ಪಟ್ಟಿರುವ ದೆಸೆಯಿಂದ ಆಹಾರವು ಪಚನವಾಗುವದಿಲ್ಲ ವಾದ್ದರಿಂದ ದೋಷವು ಪಚನ(ನಿರಾಮ)ವಾಗುವ ವರೆಗೆ ಜ್ವರರೋಗಿಯು ಉಪವಾಸವನ್ನು ಮಾಡತಕ್ಕದ್ದು ಎಂತ ವಾ (ಪು 248-249) ಶುದ್ಧ ಉಪವಾಸದ ಕಾಲದಲ್ಲಿಯೂ ಬಾಯಾರಿಕೆಯನ್ನು ತಡೆಯದಾರದು

48. ಲಂಘನಂ ಸ್ವೇದನಂ ಕಾಲೋ ಯವಾಗ್ವಸ್ತಿಕ್ತಕೋ ರಸಃ |
ತರುಣಜ್ವರದಲ್ಲಿ ದೋಷಪಾಚನಗಳು ಪಾಚನಾನ್ಯವಿಪಕ್ವಾನಾಂ ದೋಷಾಣಾಂ ತರುಣೇ ಜ್ವರೇ || (ಚ. 457)

ಉಪವಾಸ, ಬೆವರಿಸುವದು, ಕಾಲ, (ದೋಷಕ್ಕೆ ತಕ್ಕಂಥ ಔಷಧವನ್ನು ಕೂಡಿಸಿ ಮಾಡಿದ) ಯವಾಗೂ ಗಂಜಿಗಳು ಮತ್ತು ಕಹಿರಸ ತರುಣಜ್ವರದಲ್ಲಿ ಅಪಕ್ವವಾದ ದೋಷಗಳನ್ನು ಪಾಚನಮಾಡುವದಕ್ಕೆ ಸಾಧನಗಳು.

ಸರಾ ಇವುಗಳನ್ನು, ಅವಸ್ಥಾಭೇದವನ್ನು ನೋಡಿಕೊಂಡು, ಅಥವಾ ಕ್ರಮದಿಂದ, ನಡಿಸತಕ್ಕದ್ದು (ವಾ 249)

49. ತೃಷ್ಯತೇ ಸಲಿಲಂ ಚೋಷ್ಣಂ ದದ್ಯಾದ್ವಾತಕಫಜ್ವರೇ |
ಮದ್ಯೋತ್ಥೇ ಪೈತ್ತಿಕೇ ವಾ ಽಥ ಶೀತಲಂ ತಿಕ್ತಕೈಃ ಶೃತಮ್ ||
ಬಾಯಾರಿಕೆಗೆ ಪಾನಗಳು ದೀಪನಂ ಪಾಚನಂ ಚೈವ ಜ್ವರಘ್ನಮುಭಯಂ ಹಿ ತತ್ |
ಸ್ರೋತಸಾಂ ಶೋಧನಂ ಬಲ್ಯಂ ರುಚಿಸ್ವೇದಕರಂ ಶಿವಮ್ || (ಚ. 457)

ಬಾಯಾರಿದವನಿಗೆ ವಾತಕಫಜ್ವರಗಳಲ್ಲಿ ಬಿಸಿನೀರನ್ನೂ, ಮದ್ಯದಿಂದ ಉತ್ಪನ್ನವಾದ ಜ್ವರದಲ್ಲಿ ಅಥವಾ ಪಿತ್ತಜ್ವರದಲ್ಲಿ ಕಹಿಯಾದ ಔಷಧಗಳನ್ನು ಕೂಡಿಸಿ ಕಾಯಿಸಿ ಬತ್ತಿಸಿ, ತಣಿಸಿದ ಕಷಾಯದ ನೀರನ್ನೂ, ಕೊಡತಕ್ಕದ್ದು. ಇವೆರಡೂ ಅಗ್ನಿದೀಪನಕಾರಿ, ಪಾಚನಕಾರಿ, ಜ್ವರಹರ, ಸ್ರೋತಸ್ಸುಗಳನ್ನು ಶೋಧಿಸತಕ್ಕಂಥವು, ಬಲಕಾರಿ, ರುಚಿಯನ್ನೂ ಬೆವರನ್ನೂ ಉಂಟುಮಾಡತಕ್ಕಂಥವು ಮತ್ತು ಆರೋಗ್ಯಕರ.

ಸರಾ ಬಾಯಾರಿಕೆಗೆ ಕಷಾಯದ ನೀರನ್ನು ಮಾಡುವ ಕ್ರಮ 1ನೇ ಭಾಗದ XX-30ರಲ್ಲಿ ಇದೆ ಬಿಸಿನೀರನ್ನು ಅಲ್ಪಾಲ್ಪವಾಗಿ ಕೊಡತಕ್ಕದ್ದು ವಾತಕಫಜ್ವರಗಳಲ್ಲಿ ತಣ್ಣೀರು ಮತ್ತು ಪಿತ್ತಜ್ವರದಲ್ಲಿ ಬಿಸಿನೀರು ದೋಷವೃದ್ಧಿಕರ (ವಾ 249)

50. ಉದ್ರಿಕ್ತಪಿತ್ತೇ ದವಥುದಾಹಮೋಹಾತಿಸಾರಿಣೇ |
ಷಡಂಗಕಷಾಯ ನೀರಿನ ಉಪಯೋಗ. ವಿಷಮದ್ಯೋತ್ಥಿತೇ ಗ್ರೀಷ್ಮೇ ಕ್ಷತಕ್ಷೀಣೇ ಽಸ್ರಪಿತ್ತಿನಿ ||
ಘನಚನ್ದನಶುಣ್ಠ್ಯಮ್ಬುಪರ್ಪಟೋಶೀರಸಾಧಿತಮ್ |
ಶೀತಂ ತೇಭ್ಯೋ ಹಿತಂ ತೋಯಂ ಪಾಚನಂ ತೃಟ್(?ಡ್)ಜ್ವರಾಪಹಮ್ ||
(ವಾ. 249)

ಪಿತ್ತ ಉದ್ರೇಕವಾದಲ್ಲಿ, ಕಣ್ಣು ಮುಂತಾದ ಇಂದ್ರಿಯಗಳ ಉರಿ, ಮೈಯುರಿ, ಮೂರ್ಛೆ ಮತ್ತು ಅತಿಸಾರ ಇರುವಲ್ಲಿ, ವಿಷದಿಂದಾಗಲಿ ಮದ್ಯದಿಂದಾಗಲಿ ಉಂಟಾದ ಜ್ವರದಲ್ಲಿ, ಗ್ರೀಷ್ಮಋತುವಿನಲ್ಲಿ, ಉರಃಕ್ಷತದಿಂದ ಕ್ಷೀಣನಾದವನಿಗೆ ಮತ್ತು ರಕ್ತಪಿತ್ತರೋಗಿಗೆ. ಭದ್ರಮುಷ್ಟಿ, ಶ್ರೀಗಂಧ, ಒಣಶುಂಠಿ, ಮುಡಿವಾಳ, ಪರ್ಪಾಟಕ, ಲಾಮಂಚ, ಇವು ಆರು ಔಷಧಗಳನ್ನು (ಪ್ರಸ್ಥನೀರಿಗೆ ಕರ್ಷ ಪ್ರಕಾರ) ಕೂಡಿಸಿ, ಕಾಯಿಸಿ, (ಅರ್ಧ ಪ್ರಸ್ಥಕ್ಕೆ) ಬತ್ತಿಸಿ, ತಣಿಸಿದ ತಣ್ಣಗಿನ ನೀರು ಹಿತವಾಗಿರುತ್ತದೆ; ಅದು ಪಾಚನವನ್ನು ಮಾಡಿ, ಜ್ವರವನ್ನೂ ಬಾಯಾರಿಕೆಯನ್ನೂ ಪರಿಹರಿಸುತ್ತದೆ.

ಷರಾ ಈ ವಚನದಲ್ಲಿ ಸೂಚಿತರಾದವರಿಗೆ ಬಿಸಿನೀರಾಗಲಿ, ಬಿಸಿಕಷಾಯವಾಗಲಿ ಹಿತವಲ್ಲ ಪಿತ್ತಜ್ವರದಲ್ಲಿಯೂ ತರುಣಾವಸ್ಥೆಯಲ್ಲಿ ಅಜೀರ್ಣಸಂಬಂಧವಾದ ಆಮ ಇದ್ದೇ ಇರುತ್ತದೆಂಬದರಿಂದಲೂ, ಇತರ ಶೀತ ದ್ರವ್ಯಗಳು ಮತ್ತು ನೀರು ದೋಷಕಾರಕವಾಗದ ಹಾಗೂ, ಕಾರರುಚಿ ಪ್ರಧಾನವಾದ ಶುಂಠಿ ಸೇರಿದಾಗ್ಯೂ, ಇದು ಕಹಿ ದ್ರವ್ಯಗಳ ಪಾನೀಯ ಎನ್ನಿಸಿಕೊಂಡದೆ ಮುಡಿವಾಳ ಅಥವಾ ಕರೀಮುಡಿವಾಳದ ಸ್ಥಾನದಲ್ಲಿ ಕೆಲವರು ಇರುವೇರಿ ದಂಟನ್ನು ಉಪಯೋಗಿಸುತ್ತಾರೆ

51. ಉಷ್ಮಾ ಪಿತ್ತಾದೃತೇ ನಾಸ್ತಿ ಜ್ವರೋ ನಾಸ್ತ್ಯೂಷ್ಮಣಾ ವಿನಾ ।
ತಸ್ಮಾತ್ಪಿತ್ತವಿರುದ್ಧಾನಿ ತ್ಯಜೇತ್ಪಿತ್ತಾಧಿಕೇ ऽಧಿಕಮ್ ॥ (ವಾ. 249)

ಜ್ವರದಲ್ಲಿ ಪಿತ್ತ ಪ್ರಧಾನತೆ

ಪಿತ್ತ ವಿನಾ ಬಿಸಿಯುಂಟಾಗುವದಿಲ್ಲ; ಬಿಸಿ ವಿನಾ ಜ್ವರ ಇರುವದಿಲ್ಲ; ಆದ್ದರಿಂದ ಜ್ವರದಲ್ಲಿ, ಹೆಚ್ಚಾಗಿ ಪಿತ್ತಾಧಿಕ್ಯವಿದ್ದಲ್ಲಿ, ಪಿತ್ತಕ್ಕೆ ವಿರುದ್ಧ(ಕೋಪಕರ)ವಾದವುಗಳನ್ನು ಬಿಡತಕ್ಕದ್ದು.

ಷರಾ ದೋಷಗಳು ಕೂಡಿಕೊಂಡಿರುವ ಜ್ವರಗಳಲ್ಲಿ ಮೊದಲಾಗಿ ಪಿತ್ತವನ್ನೇ ತೆಗೆದುಬಿಡಬೇಕು, ಯಾಕೆಂದರೆ ಅದು ವಿಶೇಷವಾಗಿ ಜ್ವರಪೀಡಿತರಲ್ಲಿ, ನಿವಾರಿಸುವದಕ್ಕೆ ಹೆಚ್ಚು ಕಷ್ಟವಾದ್ದು (ಚಿ. ಸಾ ಸಂ 35) ಇದು ಸನ್ನಿಪಾತ ಜ್ವರದ ವಿಷಯವಲ್ಲ

52. ಕಫಪ್ರಧಾನಾನುತ್ಕ್ಲಿಷ್ಟಾನ್ ದೋಷಾನಾಮಾಶಯಸ್ಥಿತಾನ್ ।
ಬುದ್ಧ್ವಾ ಜ್ವರಕರಾನ್ ಕಾಲೇ ವಮ್ಯಾನಾಂ ವಮನೈರ್ಹರೇತ್ ॥
ಅನುಪಸ್ಥಿತದೋಷಾಣಾಂ ವಮನಂ ತರುಣೇ ಜ್ವರೇ ।
ಹೃದ್ರೋಗಂ ಶ್ವಾಸಮಾನಾಹಂ ಮೋಹಂ ಚ ಜನಯೇದ್ ಭೃಶಮ್ ॥
ಸರ್ವದೇಹಾನುಗಾಃ ಸಾಮಾ ಧಾತುಸ್ಥಾ ದುಃಖನಿರ್ಹರಾಃ ।
ದೋಷಾಃ ಫಲೇಭ್ಯ ಆಮೇಭ್ಯಃ ಸ್ವರಸಾ ಇವ ಸಾತ್ಯಯಾಃ ॥
(ಚ. 458)

ವಮನದ ಪ್ರಯೋಗ

ಜ್ವರಕರವಾದ ದೋಷಗಳು ಕಫಪ್ರಧಾನವಾಗಿ, ಆಮಾಶಯದಲ್ಲಿ ನಿಂತು, ಸಡಿಲಿ, ಉನ್ಮುಖವಾಗಿ ಇವೆ ಎಂತ ತಿಳಿದು, ರೋಗಿಯು ವಮನಕ್ಕೆ ಅರ್ಹನಾಗಿದ್ದರೆ, ಯುಕ್ತಕಾಲದಲ್ಲಿ ಆ ದೋಷಗಳನ್ನು ವಮನಯೋಗಗಳಿಂದ ತೆಗೆದುಬಿಡಬೇಕು. ಹಾಗೆ ಹೊರಗೆ ಬರುವದಕ್ಕೆ ತಯಾರಾಗಿರದ ದೋಷಗಳನ್ನು ತರುಣಜ್ವರದಲ್ಲಿ ವಾಂತಿಮಾಡಿಸುವದರಿಂದ, ಹೃದ್ರೋಗ, ಉಬ್ಬಸ, ಆನಾಹ ಮತ್ತು ಮೂರ್ಛೆ, ಹೆಚ್ಚಾಗಿ ಉಂಟಾಗುವವು. ಆಮಯುಕ್ತವಾಗಿ ಸರ್ವ ದೇಹವನ್ನು ವ್ಯಾಪಿಸಿ ಧಾತುಗಳಲ್ಲಿ ನಿಂತಿರುವ ದೋಷಗಳನ್ನು ತೆಗೆಯುವದು, ಎಳೇ ಕಾಯಿಗಳಿಂದ ಸ್ವರಸಗಳನ್ನು ತೆಗೆಯುವದು ಹೇಗೋ ಹಾಗೆ, ಬಹು ಕಷ್ಟ ಮತ್ತು ಕೇಡನ್ನುಂಟುಮಾಡುವ ಸಂಭವವುಳ್ಳದ್ದು.

ಷರಾ ದೋಷವು ಆಮಾಶಯದಲ್ಲಿದ್ದು, ಉತ್ಕ್ಲೇಶ (ಮೇಲಕ್ಕೆ ಬರುವ ವಾಕರಿಕೆ ಮುಂತಾದ ಸಂಕಟ) ಉಂಟಾಗಿದ್ದರೆ, ವಮನಮಾಡಿಸುವದೇ ಉತ್ತಮ, (ಅನಶನವಲ್ಲ) ಎಂತ ಸು (ಪು 761) ದೋಷವು ವೃದ್ಧಿಗೊಂಡು ಚಲಿಸುತ್ತಾ ಮೇಲಕ್ಕೆ ಬರುವ ಲಕ್ಷಣವುಳ್ಳದ್ದಾಗಿ ಮತ್ತು ಕಫಪ್ರಧಾನವಾಗಿ ಇರುವದಲ್ಲದೆ, ಎದೆಯಲ್ಲಿ ಸಂಕಟ, ಬಾಯಿಂದ ಎಂಜಲು ಅಥವಾ ನೀರು ಬರುವದು, ಅನ್ನದ್ವೇಷ, ಕೆಮ್ಮು, ವಿಷೂಚಿಕೆ, ಈ ಲಕ್ಷಣ ಕಂಡರೆ, ಆಗಲೇ ಉಂಡವನಿಗುಂಟಾದ ಜ್ವರದಲ್ಲಿ, ಮತ್ತು ವಿಶೇಷವಾಗಿ ಸಾಮಜ್ವರದಲ್ಲಿ, ರೋಗಿಯು ವಮನಕ್ಕೆ ಅರ್ಹನಾಗಿದ್ದರೆ, ವಮನವನ್ನು ಮಾಡಿಸುವದು ಪ್ರಶಸ್ತ ಮತ್ತು ಅಂಥಾ ಸಂದರ್ಭದಲ್ಲಿ ವಾಂತಿಮಾಡಿಸದಿದ್ದರೆ ಉಬ್ಬಸ, ಅತಿಸಾರ, ಮೂರ್ಛೆ, ಹೃದ್ರೋಗ ಮತ್ತು ವಿಷಮಜ್ವರ ಉಂಟಾಗುತ್ತವೆ ಎಂತ ವಾ. (ಪು 248). ಸಾಧಾರಣವಾಗಿ ವಮನಕ್ಕೆ ಅಯೋಗ್ಯರು ಯಾರೆಂಬದು Iನೇ ಭಾಗದ XXI-10ರಲ್ಲಿ ನಿರ್ದಿಷ್ಟವಾಗಿದೆ

53. ವಮಿತಂ ಲಂಘಿತಂ ಕಾಲೇ ಯವಾಗೂಭಿರುಪಾಚರೇತ್ ।
ತರುಣಜ್ವರದಲ್ಲಿ ಗಂಜಿಗಳು ಪಥ್ಯ.
ಯಥಾಸ್ವೌಷಧಸಿದ್ಧಾಭಿರ್ಮಣ್ಡಪೂರ್ವಾಭಿರಾದಿತಃ ॥
ಯಾವಜ್ಜ್ವರಮೃದೂಭಾವಾತ್ ಷಡಹಂ ವಾ ವಿಚಕ್ಷಣಃ ।
ತಸ್ಯಾಗ್ನಿರ್ದೀಪ್ಯತೇ ತಾಭಿಃ ಸಮಿದ್ಭಿರಿವ ಪಾವಕಃ ॥
ತಾಶ್ಚ ಭೇಷಜಸಂಯೋಗಾಲ್ಲಘುತ್ವಾಚ್ಚಾಗ್ನಿದೀಪನಾಃ ।
ವಾತಮೂತ್ರಪುರೀಷಾಣಾಂ ದೋಷಾಣಾಂ ಚಾನುಲೋಮನಾಃ ॥
ಸ್ವೇದನಾಯ ದ್ರವೌಷ್ಣತ್ವಾದ್ದ್ರವತ್ವಾತ್ತೃಟ್ಪ್ರಶಾನ್ತಯೇ ।
ಆಹಾರಭಾವಾತ್ಪ್ರಾಣಾಯ ಸರತ್ವಾಲ್ಲಾಘವಾಯ ಚ
ಜ್ವರಘ್ನ್ಯೋ ಜ್ವರಸಾತ್ಮ್ಯತ್ವಾತ್ತಸ್ಮಾತ್ಪೇಯಾಭಿರಾದಿತಃ ।
ಜ್ವರಾನುಪಚರೇದ್ಧೀಮಾನೃತೇ ಮದ್ಯಸಮುತ್ಥಿತಾತ್ ॥ (ಚ 458)

ವಮನ ಮತ್ತು ಲಂಘನ ಮಾಡಿಸಲ್ಪಟ್ಟ ಜ್ವರರೋಗಿಗೆ ಆರಂಭದಿಂದ ದೋಷಕ್ಕೆ ತಕ್ಕವಾದ ಔಷಧಗಳನ್ನು ಸೇರಿಸಿ ತಯಾರಿಸಲ್ಪಟ್ಟ ಮಂಡ, ಪೇಯಾ, ವಿಲೇಪೀ, ಯವಾಗೂ ಎಂಬ ಚತುರ್ವಿಧವಾದ ಗಂಜಿಗಳನ್ನು, ಮಂಡವೇ ಆದಿಯಾಗಿ, (ಅಗ್ನಿಬಲ ನೋಡಿಕೊಂಡು), ಯುಕ್ತ ಆಹಾರಕಾಲದಲ್ಲಿ ಕೊಟ್ಟು, ಜ್ವರವು ಮೃದುವಾಗುವ ತನಕ, ಅಥವಾ ಆರು ದಿನ, ಬುದ್ಧಿಶಾಲಿಯಾದ ವೈದ್ಯನು ಉಪಚರಿಸತಕ್ಕದ್ದು. ಆ ಗಂಜಿಗಳಿಂದ ಆ ರೋಗಿಯ ಪಚನಾಗ್ನಿಯು, ಸಮಿದೆಗಳಿಂದ ಬೆಂಕಿಯು ಹೇಗೋ ಹಾಗೆ, ಚುರುಕಾಗುತ್ತದೆ; ಆ ಗಂಜಿಗಳು, ಔಷಧಗಳು ಸೇರಿರುವ ದೆಸೆಯಿಂದಲೂ ಲಘುವಾದ್ದರಿಂದಲೂ ಅಗ್ನಿದೀಪನವನ್ನು ಮಾಡಿ, ವಾಯು-ಮೂತ್ರ-ಮಲಗಳನ್ನು ಮತ್ತು ದೋಷಗಳನ್ನು ಕ್ರಮವಾದ ಗತಿಗೆ ತರುತ್ತವೆ; ದ್ರವತ್ವದಿಂದಲೂ ಬಿಸಿಯಿಂದಲೂ ಬೆವರುವಿಕೆಯನ್ನೂ, ದ್ರವತ್ವದಿಂದ ಬಾಯಾರಿಕೆಯ ಶಾಂತಿಯನ್ನೂ, ಆಹಾರದ್ರವ್ಯವಾದ್ದರಿಂದ ಪ್ರಾಣರಕ್ಷಣವನ್ನೂ, ಸರತ್ವಗುಣವುಳ್ಳನಾದ್ದರಿಂದ (ದೇಹದ) ಲಘುತ್ವವನ್ನೂ ಮತ್ತು ಜ್ವರಕ್ಕೆ ಹಿತವಾದ್ದರಿಂದ ಜ್ವರನಾಶನವನ್ನೂ ಉಂಟು ಮಾಡುತ್ತವೆ. ಆದ್ದರಿಂದ ಬುದ್ಧಿವಂತನಾದ ವೈದ್ಯನು ಮದ್ಯಪಾನದಿಂದುಂಟಾದ ಜ್ವರ ವಿನಾ ಇತರ ಜ್ವರಗಳನ್ನು ಆರಂಭದಿಂದ ಗಂಜಿಗಳಿಂದ ಉಪಚರಿಸತಕ್ಕದ್ದು.

ಷರಾ ಗಂಜಿಗಳಿಗೆ ಔಷಧಗಳನ್ನು ಸಾಧಾರಣವಾಗಿ ಪಾನೀಯಕ್ಕೆ ಹೇಳಲ್ಪಟ್ಟ ಪ್ರಮಾಣದಲ್ಲಿ ಸೇರಿಸಬೇಕು (1ನೇ ಭಾಗದ XX-30ನೇ ಸಂಖ್ಯೆ ನೋಡಿ) ಕಷಾಯಕ್ಕೂ ಅನ್ನಕ್ಕೂ ಬೇರೆ ಬೇರೆ ಪಾತ್ರಗಳನ್ನಿಟ್ಟು, ಅಕ್ಕಿಯು ಸ್ವಲ್ಪ ಬೆಂದು ಮುಗುಳಕ್ಕಿ ಆದ ಕೂಡಲೇ, ಅದನ್ನು ಕುದಿಯುತ್ತಿರುವ ಕಷಾಯಕ್ಕೆ ಹಾಕಿ, ಬೇಯಿಸಿ, ತಕ್ಕ ಪ್ರಮಾಣಕ್ಕೆ ಬತ್ತಿಸುವದು ಒಳ್ಳೇ ಕ್ರಮ ಯಾವ ಸಂದರ್ಭದಲ್ಲಿ ಎಷ್ಟರವರೆಗೆ ಶುದ್ಧ ಉಪವಾಸ (ಅನಶನ) ಮತ್ತು ವಮನ ಮಾಡಿಸಬೇಕೆಂತ ಹಿಂದೆ ಹೇಳಲ್ಪಟ್ಟ ಉಪದೇಶವನ್ನು ಅನುಸರಿಸಿ, ಅನಂತರ ಮಂಡಾದಿ ಗಂಜಿಗಳನ್ನು ಕೊಡತಕ್ಕದ್ದು ಆರು ದಿನಗಳಲ್ಲಿ ಜ್ವರವು ಮೃದುವಾಗದೆ ಕಠಿಣವಾಗಿಯೇ ನಿಂತರೆ, ಅನಂತರವೂ ಯವಾಗೂ ಉಪಚಾರವನ್ನು ನಡಿಸಬೇಕೆಂತ ತಾತ್ಪರ್ಯ ಗಂಜಿ ನಿಷಿದ್ಧವಾದ ಸಂದರ್ಭ 54ನೇ ಸಂಖ್ಯೆಯಲ್ಲಿ ವರ್ಣಿತವಾಗಿದೆ

54. ಮದಾತ್ಯಯೇ ಮದ್ಯನಿತ್ಯೇ ಗ್ರೀಷ್ಮೇ ಪಿತ್ತಕಫಾಧಿಕೇ ।
ಊರ್ಧ್ವಗೇ ರಕ್ತಪಿತ್ತೇ ಚ ಯವಾಗೂರ (?ರ್ನ)ಹಿತಾ ಜ್ವರೇ ॥
ಗಂಜಿಪಥ್ಯಕ್ಕೆ ಅರ್ಹರಲ್ಲದವರು
ತತ್ರ ತರ್ಪಣಮೇವಾಗ್ರೇ ಪ್ರಯೋಜ್ಯಂ ಲಾಜಶಕ್ತುಭಿಃ ।
ಜ್ವರಾಪಹೈಃ ಫಲರಸೈರ್ಯುಕ್ತಂ ಸಮಧುಶರ್ಕರಮ್ ॥

ದ್ರಾಕ್ಷಾದಾಡಿಮಖರ್ಜೂರಪಿಯಾಲೈಃ ಸಪರೂಷಕೈಃ ।
ತರ್ಪಣಾರ್ಹೇಷು ಕರ್ತವ್ಯಂ ತರ್ಪಣಂ ಜ್ವರಶಾಂತಯೇ ॥
ತತಃ ಸಾತ್ಮ್ಯಬಲಾಪೇಕ್ಷೀ ಭೋಜಯೇಜ್ಜೀರ್ಣತರ್ಪಣಮ್ ।
ತನುನಾ ಮುದ್ಗಯೂಷೇಣ ಜಾಂಗಲಾನಾಂ ರಸೇನ ವಾ ॥ (ಚ. 458)

ಮದಾತ್ಯಯದಲ್ಲಿ, ನಿತ್ಯ ಮದ್ಯ ಸೇವಿಸುವ ಅಭ್ಯಾಸವುಳ್ಳವನ ಸಂಗತಿಯಲ್ಲಿ, ಗ್ರೀಷ್ಮ ಋತುವಿನಲ್ಲಿ, ಕಫಪಿತ್ತಗಳು ಅಧಿಕವಾಗಿರುವಲ್ಲಿ ಮತ್ತು ಊರ್ಧ್ವಗತಿಯುಳ್ಳ ರಕ್ತಪಿತ್ತದಲ್ಲಿ, ಜ್ವರಕ್ಕೆ ಗಂಜಿಯು ಅಹಿತವಾಗುತ್ತದೆ. ಅಂತಹ ಸಂದರ್ಭಗಳಲ್ಲಿ ಜ್ವರಹರವಾದ ಹಣ್ಣುಗಳ ರಸಗಳಿಂದ ಯುಕ್ತವಾದ ಅರಳಿನ ಹಿಟ್ಟುಗಳಿಂದ, ಜೇನು ಮತ್ತು ಸಕ್ಕರೆ ಕೂಡಿಸಿಕೊಂಡು, ತರ್ಪಣವನ್ನೇ ಆರಂಭದಲ್ಲಿ ಪ್ರಯೋಗಿಸತಕ್ಕದ್ದು.

ತರ್ಪಣಾರ್ಹರಾದ ರೋಗಿಗಳಿಗೆ ಜ್ವರಶಾಂತಿಗಾಗಿ ದ್ರಾಕ್ಷೆಹಣ್ಣು, ದಾಳಿಂಬದ ಹಣ್ಣು, ಖರ್ಜೂರದ ಹಣ್ಣು, ಮೊರವೆಹಣ್ಣು, ಪರೂಷಕದ ಹಣ್ಣು, ಇವುಗಳನ್ನು ಕೂಡಿಸಿ ತರ್ಪಣವನ್ನು ಮಾಡತಕ್ಕದ್ದು. ಅನಂತರ ಆ ತರ್ಪಣ ಜೀರ್ಣವಾದರೆ, ರೋಗಿಗೆ ಯಾವದು ಹಿತ ಎಂಬ ದನ್ನೂ ಅವನ ಬಲವನ್ನೂ ನೋಡಿಕೊಂಡು, ತೆಳ್ಳಗಾದ ಹೆಸರು ಸಾರಿನಿಂದ ಅಥವಾ ಜಾಂಗಲ ಮಾಂಸದ ರಸದಿಂದ ಅವನನ್ನು ಉಣ್ಣಿಸಬಹುದು.

ಸರಾ ಹುಳಿಯಾದ ಅಥವಾ ಹುಳಿಯಿಲ್ಲದ ಸಾರುಗಳಿಂದ ಅಥವಾ ಜಾಂಗಲರಸಗಳಿಂದ, ಹಿತವಾದ ಹಾಗೆ, ಉಪಚರಿಸಬೇಕಾಗಿ ಸು (ಪು 764) ಕಫವು ಪಿತ್ತಸ್ಥಾನಕ್ಕೆ ಹೋಗಿ ನಿಂತರೆ ಮತ್ತು ಬಾಯಾರಿಕೆ, ವಾಂತಿ, ಮತ್ತು ಉರಿಯ ಬಾಧೆ ಇದ್ದರೆ ಸಹ ಗಂಜಿ ಆಗದು ಎಂತ ವಾ (ಪು. 250) 'ದ್ರಾಕ್ಷಾ' ಇತ್ಯಾದಿ 3ನೇ ಶ್ಲೋಕ ಕೆಲವು ಪ್ರತಿಗಳಲ್ಲಿ ಕಾಣುವದಿಲ್ಲ

55 *ಪಾಚನಂ ಶಮನೀಯಂ ವಾ ಕಷಾಯಂ ಪಾಯಯೇತ್ತು ತಮ್ ।
ಜ್ವರಿತಂ ಷಡಹೇ ऽತೀತೇ ಲಘ್ವನ್ನಪ್ರತಿಭೋಜಿತಮ್* ॥
ಸ್ತಭ್ಯಂತೇ ನ ವಿಪಚ್ಯಂತೇ ಕುರ್ವಂತಿ ವಿಷಮಜ್ವರಮ್ ।
ದೋಷಾ ಬದ್ಧಾಃ ಕಷಾಯೇಣ ಸ್ತಂಭಿತ್ವಾತ್ತ(ತ್ತ್ವಾ)ರುಣೇ ಜ್ವರೇ ॥
ನ ತು ಕಲ್ಪನಮುದ್ದಿಶ್ಯ ಕಷಾಯಃ ಪ್ರತಿಷಿಧ್ಯತೇ ।
ಯಃ ಕಷಾಯಃ ಕಷಾಯಃ ಸ್ಯಾತ್ ಸ ವರ್ಜ್ಯಸ್ತರುಣಜ್ವರೇ ॥
ಯೂಷೈರಮ್ಲೈರನಮ್ಲೈರ್ವಾ ಜಾಂಗಲೈರ್ವಾ ರಸೈರ್ಹಿತೈಃ ।
ದಶಾಹಂ ತಾವದಶ್ನೀಯಾಲ್ಲಘ್ವನ್ನಂ ಜ್ವರಶಾಂತಯೇ ॥ (ಚ. 459)

ಜ್ವರದ ಮಧ್ಯಾವಸ್ಥೆಯಲ್ಲಿ ಉಪಚಾರ

*ಪ್ರಥಮಶ್ಲೋಕದ ಪ್ರಥಮಚರಣವಾಗಿ ಜೀವಾನಂದನ ಪ್ರತಿಯಲ್ಲಿ ಕಾಣುವ "ಪಾಚನೀಯಂ ಶಮನೀಯಂ" ಮತ್ತು ಕಡೇ ಚರಣವಾಗಿ ಕಾಣುವ "ಲಘ್ವನ್ನಂ ಪ್ರತಿಭೋಜಯೇತ್" ಎಂಬ ಪಾಠದಕ್ಕಿಂತ ಇದು ಸ್ಪಷ್ಟ ಮತ್ತು ಯುಕ್ತವಾಗಿ ಕಾಣುತ್ತದೆ ವಾಗ್ಭಟನ ವಚನವು ಇದಕ್ಕನುಸಾರವಾಗಿ ಇದೆ

ಜ್ವರರೋಗಿಗೆ ಆರು ದಿನ ಕಳೆದಾಗ್ಗೆ ಲಘುವಾದ ಅನ್ನವನ್ನು ಉಣ್ಣಿಸಿ, ಪಾಚನಕಷಾಯವನ್ನಾಗಲಿ, ಶಮನಕಷಾಯವನ್ನಾಗಲಿ, ಕುಡಿಸಬೇಕು. ತರುಣಜ್ವರದಲ್ಲಿ ಕಷಾಯವನ್ನು ಕೊಡುವದರಿಂದ ದೋಷಗಳು ತಡೆಯಲ್ಪಟ್ಟು ಸ್ತಬ್ಧವಾಗಿ ನಿಲ್ಲುತ್ತವಲ್ಲದೆ, ಪಚನ

ವಾಗುವದಿಲ್ಲ; ಮತ್ತು ಅದರ ಸ್ತಂಭನ ಗುಣದ ದೆಸೆಯಿಂದ ದೋಷಗಳು ವಿಷಮಜ್ವರವನ್ನುಂಟುಮಾಡುತ್ತವೆ. (ಸ್ವರಸಾದಿ ಪಂಚ ಕಷಾಯ) ಕಲ್ಪನವನ್ನು ಉದ್ದೇಶಿಸಿ ಕಷಾಯವನ್ನು ನಿಷೇಧಿಸುವದಿಲ್ಲ. ಯಾವ ಕಷಾಯವು ಚೊಗರು ರುಚಿಯುಳ್ಳದ್ದೋ, ಅದು ತರುಣಜ್ವರದಲ್ಲಿ ವರ್ಜ್ಯನಾಗಿರುತ್ತದೆ. ಹತ್ತು ದಿನಗಳು ಕಳೆಯುವ ವರೆಗೆ ಜ್ವರಶಾಂತಿಗಾಗಿ ಲಘುವಾದ ಅನ್ನವನ್ನು, ಹುಳಿರಸಯುಕ್ತವಾದ ಅಥವಾ ಹುಳಿ ಕೂಡದ ಸಾರುಗಳಿಂದಾಗಲಿ ಹಿತವಾದ ಜಾಂಗಲ ಮಾಂಸರಸಗಳಿಂದಾಗಲಿ, (ರೋಗಿಯು) ಉಣ್ಣಬೇಕು.

ಷರಾ ದೋಷವು ಬಹಳವಾಗಿದ್ದದರಿಂದ ಲಂಘನಾನಂತರ ಯವಾಗೂ(ಗಂಜಿ)ಗಳಿಂದ ದೋಷವು ಪಾಕವಾಗದೆ ಅಗ್ನಿಯು ಮಂದವಾಗಿದ್ದರೆ, ಏಳು ದಿನಗಳನಂತರ ಅವನನ್ನು ಜ್ವರಹರವಾದ ಮತ್ತು ಬಾಯಿಯ ಒಣಗುವಿಕೆ, ಬಾಯಾರಿಕೆ ಮತ್ತು ಅರುಚಿ, ಇವುಗಳನ್ನು ನಾಶನಮಾಡತಕ್ಕಂಥ ಪಾಚನಕಷಾಯಗಳಿಂದ ಉಪಚರಿಸಬೇಕು ಎಂತ ಸು (ಪು 762) ಶುದ್ಧ ಉಪವಾಸ ಮತ್ತು ಪೇಯಾದಿ ಗಂಜಿಗಳಿಂದ ಆರು ದಿನ ಉಪಚರಿಸಿ ಏಳನೇ ದಿನದಿಂದ, ದೋಷ ಪಾಚನವಾಗಿರದಿದ್ದರೆ ಉಕ್ತವಾದ ಪಾಚನಕಷಾಯಗಳಿಂದ, ದೋಷ ಪಕ್ವವಾದ ಲಕ್ಷಣ ಕಂಡರೆ ಶಮನಕಷಾಯಗಳಿಂದ, ರೋಗಿಯನ್ನು ಉಪಚರಿಸತಕ್ಕದ್ದು ಎಂಬದು ಮೇಲಿನ ಚ ನ ವಚನದ ಸಾಧಾರಣವಾಗಿ ತೋರುವ ಅರ್ಥ ಆದರೆ ಜ್ವರಾರಂಭ ದಿನದಿಂದ ಆರು ದಿನ ಕಳೆದ ಮೇಲೆ ಏಳನೇ ದಿನ ಲಘುವಾದ ಆಹಾರವನ್ನು ಕೊಟ್ಟು, ಎಂಟನೆ ದಿನ ಕಷಾಯವನ್ನು ಕೊಡತಕ್ಕದ್ದೆಂಬದು ವಾಕ್ಯದ ಅರ್ಥ ಎಂತ ಆ ದೀ (ಪು 408) ಜ್ವರವು ಹೆಚ್ಚಾಗಿ ಎಂಟನೇ ದಿನ ನಿರಾಮ ಎನ್ನಿಸಿಕೊಳ್ಳುತ್ತದೆ ಎಂತ ಚರಕನು ಹೇಳಿರುವದಕ್ಕೂ (ಮೇಲಿನ 36ನೇ ಸಂಖ್ಯೆ ನೋಡಿ), ಮೇಲಿನ ಸುಶ್ರುತನ ವಚನಕ್ಕೂ, ಅನುಗುಣವಾಗಿ ಹಾಗೆ ಅರ್ಥಮಾಡಿದ್ದು ಆದರೆ ಏಳನೇ ದಿನದಿಂದಲೇ ಔಷಧವನ್ನು ಕೊಡಬೇಕೆಂಬ ಪಕ್ಷವೂ ಉಂಟೆಂತ ವಾ (ಪು. 251) ಆರು ದಿನಗಳನಂತರ ಲಂಘನಾದಿ ಕ್ರಮಗಳಿಂದ ದೋಷಗಳು ಪಕ್ವವಾದ್ದಲ್ಲಿ, ಉಳಿದಿರಬಹುದಾದ ದೋಷಕ್ಕೆ ಪಾಚನಕಷಾಯವನ್ನಾಗಲಿ ಶಮನಕಷಾಯವನ್ನಾಗಲಿ (ಅವಸ್ಥಾಭೇದದ ಮೇಲೆ) ಕೊಡುವದು ಪ್ರಶಸ್ತ ಎಂತ ವಾ (ಪು 251) ದೋಷಪಾಕವಾದ್ದನ್ನು ಜ್ವರವು ಮೃದುವಾಗಿ, ದೇಹವು ಲಘುವಾಗಿ, ಮಲಪ್ರವೃತ್ತಿ ಸರಿಯಾಗುವದರಿಂದ (36ನೇ ಸಂಖ್ಯೆಯ ಷರಾ ನೋಡಿ) ತಿಳಿಯಬೇಕು ಆಮದೋಷವುಳ್ಳವನಿಗೆ ಶೋಧನ ಔಷಧ ಕೊಟ್ಟಲ್ಲಿ ಜ್ವರವು ಹೆಚ್ಚುತ್ತದೆ ಮತ್ತು ಶಮನ ಔಷಧ ಕೊಟ್ಟಲ್ಲಿ ವಿಷಮಜ್ವರ ಉಂಟಾಗುತ್ತದೆ ಎಂತ ಸು (ಪು 763) ಆಮದೋಷವು ಪ್ರಬಲವಾಗಿದ್ದರೆ ಹತ್ತನೇ ದಿನದಿಂದ ಸಹ ಔಷಧವನ್ನು ಕೊಡಕೂಡದು ಎಂತ ವಾ (ಪು 251) ಇದರಿಂದೆಲ್ಲ ತಿಳಿಯಬೇಕಾದ್ದೇನೆಂದರೆ, ದೋಷದ ಆಮತ್ವ ಏಳು ದಿನಗಳೊಳಗೆ ಲಂಘನದಿಂದ ಪರಿಹಾರವಾದಾಗ್ಗೆ ರಸದ ಆಮತ್ವವು ನಿಃಶೇಷವಾಗಿ ಹೋಗದೆ ಅಲ್ಪವಾಗಿ ಇರಬಹುದು, ಆಗ್ಗೆ ಪಾಚನ ಔಷಧವನ್ನು ಕೊಡುವದು, ರಸದ ಆಮತ್ವವು ಸಹ ಹೋಗಿ ಜ್ವರ ಉಳಿದರೆ ಶಮನ ಔಷಧವನ್ನು ಕೊಡುವದು, ಆಗ್ಗೆ ಜ್ವರವು ಜೀರ್ಣ ಎನ್ನಿಸಿಕೊಳ್ಳುತ್ತದೆ, ಮತ್ತು ರಸದ ಆಮತ್ವವು ಪ್ರಬಲವಾಗಿಯೇ ನಿಂತರೆ ಹತ್ತು ದಿನಗಳ ವರೆಗೂ ಔಷಧವನ್ನು ಕೊಡದಾರದು ತರುಣಜ್ವರದಲ್ಲಿ ಔಷಧ ಕೊಡಕೂಡದೆಂತ ಇದ್ದರೂ, ಗಂಜಿಗಳಿಗೆ, ಪಾನೀಯಕಷಾಯಗಳಿಗೆ, ಶೋಧನಗಳಿಗೆ ವಗೈರೆ ಔಷಧಗಳ ಯೋಗಗಳು ಹೇಳಲ್ಪಟ್ಟಿವೆ ಆದ್ದರಿಂದ ತರುಣಜ್ವರಗಳಲ್ಲಿ ಕಷಾಯಗಳೇ ನಿಷಿದ್ಧವಲ್ಲ, ಚೊಗರು ರುಚಿಯುಳ್ಳ ಕಷಾಯಗಳು ಮಾತ್ರ ನಿಷಿದ್ಧ ಎಂತ ಈ ಸಂಖ್ಯೆಯ ವಚನದಲ್ಲಿ ಸ್ಪಷ್ಟವಾಗಿ ಹೇಳಲ್ಪಟ್ಟಿದ್ದು. ಚೊಗರು ಪದಾರ್ಥಗಳಿಗೆ ಪಿತ್ತಕಫಗಳನ್ನು ಪರಿಹರಿಸುವ ಗುಣ ಉಂಟೆಂಬದರಿಂದ ಪಿತ್ತಕಫಜ್ವರಗಳ ತರುಣಾವಸ್ಥೆಯಲ್ಲಿ ಅವುಗಳನ್ನು ಉಪಯೋಗಿಸದಾರದು (ವಾ. 257) ಕೆಳಗಿನ 56ನೇ ಸಂಖ್ಯೆ ನೋಡಿ

56\. ಸಪ್ತರಾತ್ರಾತ್ಪರಂ ಕೇಚಿನ್ಮನ್ಯನ್ತೇ ದೇಯಮೌಷಧಮ್ ।
ದಶರಾತ್ರಾತ್ಪರಂ ಕೇಚಿದ್ದಾತವ್ಯಮಿತಿ ನಿಶ್ಚಿತಾಃ ॥
ಪೈತ್ತಿಕೇ ವಾ ಜ್ವರೇ ದೇಯಮಲ್ಪಫಲಸಮುತ್ಥಿತೇ ।
ಅಚಿರಜ್ವರಿತಸ್ಯಾಪಿ ದೇಯಂ ಸ್ಯಾದ್ದೋಷಪಾಕತಃ ॥
ಭೇಷಜಂ ಹ್ಯಾಮದೋಷಸ್ಯ ಭೂಯೋ ಜ್ವಲಯತಿ ಜ್ವರಮ್ ।
ಶೋಧನಂ ಶಮನೀಯನ್ತು ಕರೋತಿ ವಿಷಮಜ್ವರಮ್ ॥
ಚ್ಯವಮಾನಂ ಜ್ವರೋತ್ಕ್ಲಿಷ್ಟಮುಪೇಕ್ಷೇತ ಮಲಂ ಸದಾ ।
ಅತಿಪ್ರವರ್ತಮಾನಂ ಚ ಸಾಧಯೇದತಿಸಾರವತ್ ॥

ಜ್ವರದಲ್ಲಿ ಔಷಧಾರಂಭಕಾಲ

ಯದಾ ಕೋಷ್ಠಾನುಗಾಃ ಪಕ್ವಾ ವಿಬದ್ಧಾಃ ಸ್ರೋತಸಾಂ ಮಲಾಃ ।
ಅಚಿರಜ್ವರಿತಸ್ಯಾಪಿ ತದಾ ದದ್ಯಾದ್ವಿರೇಚನಮ್ ॥
ಪಕ್ವೋ ಹ್ಯನಿರ್ಹೃತೋ ದೋಷೋ ದೇಹೇ ತಿಷ್ಠನ್ ಮಹಾತ್ಯಯಮ್ ।
ವಿಷಮಂ ವಾ ಜ್ವರಂ ಕುರ್ಯಾದ್ಬಲವ್ಯಾಪದಮೇವ ಚ ।
ತಸ್ಮಾನ್ನಿರ್ಹರಣಂ ಕಾರ್ಯ್ಯಂ ದೋಷಾಣಾಂ ವಮನಾದಿಭಿಃ ॥

(ಸು. 762-63)

ಜ್ವರದಲ್ಲಿ ಔಷಧವನ್ನು ಏಳು ರಾತ್ರಿಗಳು ಕಳೆದನಂತರ ಕೊಡತಕ್ಕದ್ದು ಎಂತ ಕೆಲವರು ತಿಳಕೊಳ್ಳುತ್ತಾರೆ, ಹತ್ತು ರಾತ್ರಿಗಳನಂತರ ಕೊಡತಕ್ಕದ್ದೆಂತ ಕೆಲವರು ನಿಶ್ಚಯಿಸಿದ್ದಾರೆ. (ಆದರೆ), ಪಿತ್ತಜ್ವರದಲ್ಲಿ, ಅಥವಾ ಜ್ವರದಲ್ಲಿ ದೋಷಲಕ್ಷಣಗಳು ಅಲ್ಪವಾಗಿದ್ದಲ್ಲಿ, ಇತ್ತಲಾಗಿನ (ಏಳು ರಾತ್ರಿ ಕಳೆಯದ) ಜ್ವರರೋಗಿಗಾದರೂ ದೋಷಗಳು ಪಾಕವಾದ ನಂತರ ಔಷಧವನ್ನು ಕೊಡತಕ್ಕದ್ದು. ಆಮದೋಷವುಳ್ಳ ಜ್ವರರೋಗಿಗೆ ಶೋಧನ ಔಷಧವನ್ನು ಕೊಡುವದರಿಂದ ಜ್ವರವು ಪುನಃ ಜ್ವಲಿಸುತ್ತದೆ; ಮತ್ತು ಶಮನ ಔಷಧವನ್ನು ಕೊಟ್ಟರೆ ವಿಷಮಜ್ವರ ಉಂಟಾಗುತ್ತದೆ. ಜ್ವರದಿಂದ ಸಡಿಲಿ ಹೊರಗೆ ಹೋಗುತ್ತಿರುವ ಮಲವನ್ನು ಯಾವಾಗಲಾದರೂ ಉಪೇಕ್ಷಿಸಬೇಕು (ಅಂದರೆ ಅದನ್ನು ಕಟ್ಟಿಸಲಿಕ್ಕೆ ಯತ್ನಿಸಬಾರದು). ಮಲಪ್ರವೃತ್ತಿ ಅತಿಯಾದರೆ, ಅದಕ್ಕೆ ಅತಿಸಾರದಂತೆ ಉಪಚರಿಸಿ ವಾಸಿಮಾಡತಕ್ಕದ್ದು. ಸ್ರೋತಸ್ಸುಗಳಲ್ಲಿಯ ಪಕ್ವವಾದ ಮಲಗಳು ಕೋಷ್ಠಕ್ಕೆ ಬಂದು ಬದ್ಧವಾಗಿದ್ದರೆ, ಸ್ವಲ್ಪಕಾಲದ (ಏಳು ದಿನ ಕಳೆಯದ) ಜ್ವರದವನಿಗಾದರೂ ವಿರೇಚನ (ಶೋಧನ) ಔಷಧವನ್ನು ಕೊಡತಕ್ಕದ್ದು. ಯಾಕೆಂದರೆ, ಪಕ್ವವಾದ ದೋಷವನ್ನು ಹೊರಗೆ ತೆಗೆಯದಿದ್ದರೆ, ಅದು ದೇಹದಲ್ಲಿ ನಿಂತು ಮಹಾಕಷ್ಟವನ್ನು ಅಥವಾ ವಿಷಮಜ್ವರವನ್ನು ಮತ್ತು ಬಲಹಾನಿಯನ್ನು ಉಂಟುಮಾಡುವದು. ಆದ್ದರಿಂದ (ಅಂಥಾ) ದೋಷಗಳನ್ನು ವಮನ ಮುಂತಾದ ಕ್ರಮಗಳಿಂದ ಹೊರಗೆ ತೆಗೆದುಬಿಡತಕ್ಕದ್ದು.

‘ಮಲ’ ಎಂಬಲ್ಲಿ ‘ಕಾಲ’ ಎಂತ ಪಾಠಾಂತರ ಉಂಟು

ಜ್ವರದ ತರುಣಾವಸ್ಥೆಯಲ್ಲಿ ಲಂಘನ, ಮಧ್ಯಮಾವಸ್ಥೆಯಲ್ಲಿ ಪಾಚನ, ಅಂತಿಮಾವಸ್ಥೆಯಲ್ಲಿ ಶಮನೌಷಧ, ಜ್ವರ ಬಿಟ್ಟ ಮೇಲೆ ವಿರೇಚನವನ್ನು ಉಪಯೋಗಿಸತಕ್ಕದ್ದೆಂಬ ಸಾಧಾರಣ ವಿಧಿಗೆ ಇದು ಅಪವಾದ.

ಹಿಂದಿನ 55ನೇ ಸಂಖ್ಯೆಯನ್ನೂ ಕೆಳಗೆ 57ನೇ ಸಂಖ್ಯೆಯ ಅಡಿ ಬರೆದ ಪಾಠವನ್ನೂ ನೋಡಿ

57. ಪ್ರಾಕ್ಕರ್ಮ ವಮನಂ ಚಾಸ್ಯ ಕಾರ್ಯಮಾಸ್ಥಾಪನಂ ತಥಾ ।
ವಿರೇಚನಂ ತಥಾ ಕುರ್ಯಾಚ್ಛಿರಸಶ್ಚ ವಿರೇಚನಮ್ ॥

ಅವಸ್ಥಾನುಸಾರ ವಿಶೇಷ ಉಪಚಾರಗಳು

ಕ್ರಮೇಣ ಬಲಿನೇ ದೇಯಂ ವಮನಂ ಶ್ಲೈಷ್ಮಿಕೇ ಜ್ವರೇ ।
ಪಿತ್ತಪ್ರಾಯೇ ವಿರೇಕಸ್ತು ಕಾರ್ಯಃ ಪ್ರಶಿಥಿಲಾಶಯೇ ॥
ಸರುಜೇಽನಿಲಜೇ ಕಾರ್ಯಂ ಸೋದಾವರ್ತ್ತೇ ನಿರೂಹಣಮ್ ।
ಕಟೀಪೃಷ್ಠಗ್ರಹಾರ್ತಸ್ಯ ದೀಪ್ತಾಗ್ನೇರನುವಾಸನಮ್ ॥
ಶಿರೋಗೌರವಶೂಲಘ್ನಮಿನ್ದ್ರಿಯಪ್ರತಿಬೋಧನಮ್ ।
ಕಫಾಭಿಪನ್ನೇ ಶಿರಸಿ ಕಾರ್ಯಂ ಮೂರ್ಧ್ದವಿರೇಚನಮ್ ॥

ದುರ್ಬಲಸ್ಯ ಸಮಾಧ್ಮಾತಮುದರಂ ಸರುಜಂ ದಿಹೇತ್ ।
ದಾರುಹೈಮವತೀಕುಷ್ಠಶತಾಹ್ವಾಹಿಂಗುಸೈನ್ಧವೈಃ ॥
ಅಮ್ಲಪಿಷ್ಟೈಃ ಸುಖೋಷ್ಣೈಶ್ಚ ಪವನೇ ತೂರ್ಧ್ವಮಾಗತೇ ।
ರುದ್ಧಮೂತ್ರಪುರೀಷಾಯ ಗುದೇ ವರ್ತಿಂ ನಿಧಾಪಯೇತ್ ॥
ಪಿಪ್ಪಲೀಪಿಪ್ಪಲೀಮೂಲಯವಾನೀಚವ್ಯಸಾಧಿತಮ್ ।
ಪಾಯಯೇತ ಯವಾಗೂಂ ವಾ ಮಾರುತಾದ್ಯನುಲೋಮನೀಮ್ ॥
(ಸು. 763)

(ಪಕ್ವವಾದ ದೋಷ ಬದ್ಧವಾಗಿದ್ದ) ಜ್ವರರೋಗಿಗಳ ದೋಷನಿರ್ಹರಣ ಕ್ರಮಗಳಲ್ಲಿ ಪ್ರಥಮದಲ್ಲಿ ವಮನ; ಆ ಮೇಲೆ ಕ್ರಮವಾಗಿ, ಆಸ್ಥಾಪನ-ವಿರೇಚನ-ಶಿರೋವಿರೇಚನಗಳನ್ನು ನಡಿಸತಕ್ಕದ್ದು. ಕಫಜ್ವರದಲ್ಲಿ ರೋಗಿಯು ಬಲವಂತನಾಗಿದ್ದರೆ ವಮನಮಾಡಿಸಬೇಕು. ಪಿತ್ತವೇ ಅಧಿಕವಾಗಿರುವ ಜ್ವರದಲ್ಲಿ, ಆಶಯವು (ಪಕ್ವಾಶಯವು) ಸಡಿಲಾಗಿದ್ದರೆ, ವಿರೇಚನವನ್ನು ಮಾಡಿಸತಕ್ಕದ್ದು. ವಾತಜ್ವರದಲ್ಲಿ ನೋವು ಮತ್ತು ಉದಾವರ್ತ ಇರುವ ಸಂಗತಿಯಲ್ಲಿ ನಿರೂಹವನ್ನು ಉಪಯೋಗಿಸುವದು; ಸೊಂಟ ಮತ್ತು ಬೆನ್ನು ಹಿಡಿದು ಸಂಕಟಪಡುವವನಿಗೆ, ಅಗ್ನಿಯು ಚುರುಕಾಗಿದ್ದರೆ, ಅನುವಾಸನವನ್ನು ಮಾಡಿಸುವದು. ತಲೆಯಲ್ಲಿ ಕಫ ಅಧಿಕವಾಗಿದ್ದು, ತಲೆಭಾರ ಮತ್ತು ಶೂಲೆ ಇರುವಲ್ಲಿ, ಶಿರೋವಿರೇಚನವನ್ನು ಮಾಡಿಸುವದು; ಅದರಿಂದ ಇಂದ್ರಿಯಗಳ ಎಚ್ಚರಿಕೆ ಸಹ ಉಂಟಾಗುತ್ತದೆ. ದುರ್ಬಲನಾದ ಜ್ವರರೋಗಿಗೆ, ಹೊಟ್ಟೆ ಉಬ್ಬರಿಕೊಂಡು ನೋವು ಉಂಟಾದ ಸಂಗತಿಯಲ್ಲಿ, ದೇವದಾರ, ಬಜೆ, ಚಂಗಲಕೋಷ್ಠ, ಸಬ್ಬಸಿಗೆ, ಹಿಂಗು, ಸೈಂಧವಲವಣ, ಇವುಗಳ ಚೂರ್ಣವನ್ನು ಹುಳಿರಸದಿಂದ ಅರೆದು, ಸುಖೋಷ್ಣವಾಗಿ ಹೊಟ್ಟೆಮೇಲೆ ಲೇಪ ಹಾಕಬೇಕು. ವಾಯು ಊರ್ಧ್ವಮುಖವಾಗಿ ಮಲಮೂತ್ರಗಳ ತಡೆಯುಂಟಾಗಿರುವ ರೋಗಿಗೆ, ಆಸನದೊಳಗೆ ಬತ್ತಿಯನ್ನಿಡಬೇಕು, ಅಥವಾ, ವಾತಾದಿ ದೋಷಗಳನ್ನು ಕ್ರಮಪಡಿಸುವದಕ್ಕಾಗಿ, ಹಿಪ್ಪಲಿ, ಹಿಪ್ಪಲೀಮೂಲ, ಓಮ, ಕಾಡುಮೆಣಸಿನ ಬೇರು, ಇವುಗಳನ್ನು ಕೂಡಿಸಿ ತಯಾರಿಸಿದ ಗಂಜಿಯನ್ನು ಕುಡಿಸಬೇಕು.

ಷರಾ ಈ ಶೋಧನಗಳು ಸಾಧಾರಣವಾಗಿ ಜ್ವರದ ಮಧ್ಯಮಾವಸ್ಥೆಯಲ್ಲಿ, ದೋಷಗಳು ಪಕ್ವವಾಗಿದ್ದರೆ ಆರು ದಿನಗಳೊಳಗೆ ಸಹ, ವಿಹಿತ ಎಂಬದು ಸುಶ್ರುತನ ಮತ ಚರಕನು ಹತ್ತು ದಿನ ಕಳೆದನಂತರ (ಜೀರ್ಣಜ್ವರದಲ್ಲಿ) ಕಫ-ಪಿತ್ತ-ವಾತ ಜ್ವರಗಳನ್ನು ಕ್ರಮವಾಗಿ ವಮನ-ವಿರೇಚನ-ವಸ್ತಿಗಳಿಂದ ಉಪಚರಿಸಬೇಕೆಂತ ಸಾಮಾನ್ಯವಾಗಿ ಹೇಳಿ (ಪು 470), ಕಷಾಯ, ಘೃತಪಾನ, ಹಾಲು, ಪಥ್ಯವಿಶೇಷ, ಈ ಉಪಚಾರಗಳಿಂದ ಜ್ವರವು ಯಾವಾಗ ಶಮನವಾಗುವದಿಲ್ಲವೋ, ಆಗ್ಗೆ ರೋಗಿಯು ಬಲದಲ್ಲಿಯೂ ಮಾಂಸದಲ್ಲಿಯೂ ಕ್ಷೀಣವಾಗಿರದಿದ್ದರೆ, ವಿರೇಚನರೂಪವಾದ ಶಮನ ಕ್ರಿಯೆಯನ್ನು ನಡಿಸತಕ್ಕದ್ದು ಎಂತ ವಿಧಿಸಿದ್ದಾನೆ (ಪು 459) ಜ್ವರದಿಂದ ಕ್ಷೀಣನಾದವನಿಗೆ ವಮನವಾಗಲಿ ವಿರೇಚನವಾಗಲಿ ಹಿತವಲ್ಲ, ಅಂಥವನಿಗೆ ಹಾಲು ಕೊಟ್ಟು, ಅಥವಾ ನಿರೂಹವಸ್ತಿಗಳಿಂದ, ದೋಷಗಳನ್ನು ತೆಗೆಯಬೇಕು ಪುರಾಣಜ್ವರದಲ್ಲಿ ಕಫಪಿತ್ತಗಳು ಕ್ಷೀಣವಾಗಿಯೂ, ಅಗ್ನಿಯು ಬಲವಾಗಿಯೂ, ಮಲಗಳು ಬಹಳ ಬದ್ಧವಾಗಿಯೂ, ಇದ್ದರೆ ಅನುವಾಸನವನ್ನು ರೋಗಿಗೆ ಉಪಯೋಗಿಸತಕ್ಕದ್ದು (ಚ 460) ಶಿರೋವಿರೇಚನ ಸಹ ಜೀರ್ಣಜ್ವರದಲ್ಲಿ ಮಾತ್ರ ಯುಕ್ತವಾಗಿ ಹೇಳಲ್ಪಟ್ಟದೆ (ಚ 459-60).

58. ಅತ ಊರ್ಧ್ವಂ ಕಫೇ ಮನ್ದೇ ವಾತಪಿತ್ತೋತ್ತರೇ ಜ್ವರೇ ।
ಘೃತಪಾನ
ಪರಿಪಕ್ವೇಷು ದೋಷೇಷು ಸರ್ಪಿಷ್ಪಾನಂ ಯಥಾಮೃತಮ್ ॥
ನಿರ್ದಶಾಹಮಪಿ ಜ್ಞಾತ್ವಾ ಕಫೋತ್ತರಮಲಂಘಿತಮ್ ।
ನ ಸರ್ಪಿಃ ಪಾಯಯೇತ್ ವೈದ್ಯಃ ಕಷಾಯೈಸ್ತಮುಪಾಚರೇತ್ ॥ (ಚ. 459)

ಜ್ವರಾರಂಭವಾಗಿ ಹತ್ತು ದಿನಗಳು ಕಳೆದನಂತರ, ಕಫವು ಮಂದವಾಗಿ, ವಾತಪಿತ್ತಗಳು ಅಧಿಕವಾಗಿದ್ದು, ದೋಷಗಳು ಸರಿಯಾಗಿ ಪಕ್ವವಾಗಿರುವ ಸಂಗತಿಯಲ್ಲಿ, ಘೃತಪಾನವು ಅಮೃತಕ್ಕೆ ಸಮಾನವಾಗುತ್ತದೆ. ಹತ್ತು ದಿನಗಳು ಕಳೆದಾಗ್ಯೂ, ರೋಗಿಗೆ ಲಂಘನ ಸಾಲದೆ ಕಫವೇ ಅಧಿಕವಾಗಿರುತ್ತದೆ ಎಂತ ತಿಳಿದು, ವೈದ್ಯನು ತುಪ್ಪವನ್ನು ರೋಗಿಗೆ ಕುಡಿಸ ಬಾರದು; ಅಂಥವನಿಗೆ ಕಷಾಯಗಳಿಂದಲೇ ಉಪಚಾರ ಮಾಡಬೇಕು.

ಷರಾ ಕಷಾಯಗಳಿಂದಲೂ, ವಮನಗಳಿಂದಲೂ, ಲಂಘನಗಳಿಂದಲೂ, ಲಘು ಭೋಜನಗಳಿಂದಲೂ, ಒಣಗಿದವನ ಜ್ವರಗಳು ಯಾವಾಗ ಶಾಂತವಾಗುವದಿಲ್ಲವೋ, ಆಗ್ಗ ಅವನಿಗೆ ಔಷಧದ ತುಪ್ಪವನ್ನು ಕೊಡುವದಾಗಿ ಇನ್ನೊಂದು ಕಡೆ (ಚ 463) ಹೇಳಿದ್ದು ಹಳೇಜ್ವರದ ವಿಷಯ ಎಂತಲೂ, ಇಲ್ಲಿ ಹೇಳಲ್ಪಟ್ಟ ವಚನವು ಜ್ವರದ ಮಧ್ಯಾವಸ್ಥೆಯ ವಿಷಯ ಎಂತಲೂ ತಿಳಿಯಬೇಕು

ವಾಂತಿಯಿಂದಲೂ ವಿರೇಚನದಿಂದಲೂ ದೇಹ ಶುದ್ಧವಾದ ಮೇಲೆಯೂ ಜ್ವರವು ಶಾಂತವಾಗದಿದ್ದರೆ, ಮತ್ತು ದೋಷಗಳ ಶೇಷದಿಂದ ರೋಗಿಯು ರೂಕ್ಷನಾಗಿದ್ದರೆ, ಅವನಿಗೆ ತುಪ್ಪವನ್ನು ಕೊಟ್ಟು ಗುಣಮಾಡಬೇಕೆಂತಲೂ, ಹನ್ನೆರಡು ದಿನಗಳೊಳಗೆ ದೋಷಗಳು ತಮ್ಮ ತಮ್ಮ ಸ್ಥಾನಗಳನ್ನು ಸೇರುತ್ತವಾದ್ದರಿಂದ, ಹನ್ನೆರಡು ದಿನಗಳನಂತರ ಎಲ್ಲಾ ಜ್ವರಗಳಲ್ಲಿಯೂ ಔಷಧಯುಕ್ತವಾದ ತುಪ್ಪವನ್ನು ರೋಗಿಗೆ ಕೊಡಬಹುದೆಂತಲೂ ಸು (ಪು 763 64 ಮತ್ತು 778)

59. ಕೃಶೋ ಽಲ್ಪದೋಷೋ ದೀನಶ್ಚ ನರೋ ಜೀರ್ಣಜ್ವರಾರ್ದಿತಃ |
ಜ್ವರದಲ್ಲಿ ಹಾಲಿನ ಉಪಯೋಗ
ವಿಬದ್ಧಃ ಸೃಷ್ಟದೋಷಶ್ಚ ರೂಕ್ಷಃ ಪಿತ್ತಾನಿಲಜ್ವರೀ ||
ಪಿಪಾಸಾರ್ತ್ತಃ ಸದಾಹೋ ವಾ ಪಯಸಾ ಸ ಸುಖೀ ಭವೇತ್ |
ತದೇವ ತು ಪಯಃ ಪೀತಂ ತರುಣೇ ಹನ್ತಿ ಮಾನವಮ್ || (ಸು. 764)

ಯಾವ ಮನುಷ್ಯನು ಜೀರ್ಣಜ್ವರದ ಪೀಡೆಯುಳ್ಳವನಾಗಿ ಕೃಶನೂ ಅಲ್ಪದೋಷವುಳ್ಳವನೂ ದೀನ(ಕಂಗೆಟ್ಟವ)ನೂ ಆಗಿರುತ್ತಾನೋ, ಮತ್ತು ಪಿತ್ತವಾತಜ್ವರದಿಂದ ರೂಕ್ಷನೂ, ಬಾಯಾರಿಕೆಯಿಂದಾಗಲಿ ಉರಿಯಿಂದಾಗಲಿ ಪೀಡಿತನೂ, ಬದ್ಧ ಅಥವಾ ಸಡಿಲಾದ ಮಲವುಳ್ಳವನೂ, ಆಗಿರುತ್ತಾನೋ, ಅಂಥವನು ಹಾಲಿನ ಉಪಯೋಗದಿಂದ ಸುಖವನ್ನು ಹೊಂದುತ್ತಾನೆ; ಆದರೆ ಅದೇ ಹಾಲು ತರುಣಜ್ವರದಲ್ಲಿ ಕುಡಿಯಲ್ಪಟ್ಟರೆ ರೋಗಿಯನ್ನು ಕೊಲ್ಲುತ್ತದೆ.

ಷರಾ ಜ್ವರವು ನಿರಾಮವಾಗಿದ್ದು, ದೋಷಗಳೊಳಗೆ ಕಫ ಬಹಳ ಕ್ಷೀಣವಾಗಿ ವಾತಪಿತ್ತಗಳೇ ಪ್ರಧಾನವಾಗಿರುವಲ್ಲಿ ಹಾಲು ಪ್ರಶಸ್ತ ಎಂತ ತಾತ್ಪರ್ಯ. (ಔಷಧಗಳನ್ನು ಕೂಡಿಸಿ) ಸಂಸ್ಕಾರ ಮಾಡಿದ ಹಾಲನ್ನು ಬಿಸಿಯಾಗಿಯೋ, ತಣ್ಣಗಾಗಿಯೋ, ಅಥವಾ ಧಾರೋಷ್ಣ ಹಾಲನ್ನೋ, ಯಾವದು ಉಚಿತ ಎಂತ ನಿಶ್ಚಯಿಸಿ, ಉಪಯೋಗಿಸಬೇಕೆಂತ ವಾ (ಪು 256)

60. ಅಭ್ಯಂಗಾಂಶ್ಚ ಪ್ರದೇಹಾಂಶ್ಚ ಸಸ್ನೇಹಾನ್ ಸಾವಗಾಹನಾನ್ |
ಅಭ್ಯಂಗ ಮತ್ತು ಸ್ನಾನಗಳಿಗೆ ಕಾಲ.
ವಿಭಜ್ಯ ಶೀತೋಷ್ಣಕೃತಾನ್ ಕುರ್ಯ್ಯಾಜ್ಜೀರ್ಣಜ್ವರೇ ಭಿಷಕ್ ||
ತೈರಾಶು ಹಿ ಶಮಂ ಯಾತಿ ಬಹಿರ್ಮಾರ್ಗಗತೋ ಜ್ವರಃ |
ಲಭನ್ತೇ ಸುಖಮಂಗಾನಿ ಬಲಂ ವರ್ಣಶ್ಚ ವರ್ದ್ಧತೇ || (ಚ. 460)

ಅಭ್ಯಂಗಗಳನ್ನೂ, ಲೇಪಗಳನ್ನೂ, ಸ್ನೇಹಗಳ ಮತ್ತು ಮುಳುಗುಸ್ನಾನಗಳ ಸಮೇತವಾಗಿ, ಜೀರ್ಣಜ್ವರದಲ್ಲಿ ಶೀತಜ್ವರ, ಉಷ್ಣಜ್ವರ ಎಂಬ ಭೇದದ ಮೇಲೆ (ಬೇಕಾದ ಹಾಗೆ) ಉಷ್ಣ ಅಥವಾ ಶೀತ ವೀರ್ಯದ ಔಷಧಗಳನ್ನು ಉಪಯೋಗಿಸಿ, ಬಿಸಿಯಾಗಿಯೋ ತಣ್ಣಗಾಗಿಯೋ, ವೈದ್ಯನು ಮಾಡಿಸತಕ್ಕದ್ದು. ಅವುಗಳಿಂದ ಹೊರ ಮಾರ್ಗಗಳನ್ನು ಹೊಂದಿ

ನಿಂತ ಜ್ವರವು ಶಮನವಾಗುವದು, ಅಂಗಗಳಿಗೆ ಸುಖವಾಗುವದು ಮತ್ತು ಬಲವರ್ಣಗಳು ವೃದ್ಧಿಗೊಳ್ಳುವವು.

ಪರಾ ಜ್ವರವು ಚರ್ಮದಲ್ಲಿಕ್ಕಿಂತ ಒಳಗೆ ಅಧಿಕವಾಗಿದ್ದಲ್ಲಿ ಅಭ್ಯಂಗಾದಿಗಳು ಪ್ರಶಸ್ತವಲ್ಲ.

61. ಧೂಪ ಮತ್ತು ಅಂಜನಗಳ ಪ್ರಯೋಗ

ಧೂಪನಾಂಜನಯೋಗೈಶ್ಚ ಯಾನ್ತಿ ಜೀರ್ಣಜ್ವರಾಃ ಶಮಮ್ ।
ತ್ವಙ್ಮಾತ್ರಶೇಷೋ(?ಷಾ) ಯೇಷಾಂ ಚ ಭವತ್ಯಾಗನ್ತುರನ್ವಯಃ ॥ (ಚ. 460)

ಚರ್ಮದಲ್ಲಿ ಮಾತ್ರ ಉಳಿದ ಜೀರ್ಣಜ್ವರಗಳು ಮತ್ತು ಯಾವವುಗಳಿಗೆ ಆಗಂತುವು ಸೇರಿಕೆಯಾಗಿವೆಯೋ ಅಂಥವು ಧೂಪನ ಮತ್ತು ಅಂಜನ ಯೋಗಗಳಿಂದ ಶಮನವಾಗುತ್ತವೆ.

ಪರಾ ಆಗಂತು ಜ್ವರದಲ್ಲಿ ಹಿಂದೆ ವರ್ಣಿಸಲ್ಪಟ್ಟ ಅಭ್ಯಂಗಾದಿಗಳು ಸಹ ಹಿತ ಎಂತ ವಾ. (ಪು 258)

62. ಜ್ವರವಿಮೋಚನ ಲಕ್ಷಣ

ವಿಗತಕ್ಲಮಸನ್ತಾಪಮವ್ಯಥಂ ವಿಮಲೇನ್ದ್ರಿಯಮ್ ।
ಯುಕ್ತಂ ಪ್ರಕೃತಿಸತ್ತ್ವೇನ ವಿದ್ಯಾತ್ಪುರುಷಮಜ್ವರಮ್ ॥ (ಚ. 473)

ಆಯಾಸವೂ ಸಂತಾಪವೂ ವಿಮೋಚನವಾಗುವದು, ಸಂಕಟವಿಲ್ಲದಿರುವದು, ಇಂದ್ರಿಯಗಳಲ್ಲಿ ಕಲಂಕವಿಲ್ಲದಿರುವದು, ಸಹಜವಾದ ಬಲ ಕೂಡುವದು, ಈ ಲಕ್ಷಣಗಳುಳ್ಳ ಮನುಷ್ಯನಲ್ಲಿ ಜ್ವರವಿಲ್ಲ ಎಂತ ತಿಳಿಯಬಹುದು.

ಲಘುತ್ವಂ ಶಿರಸಃ ಸ್ವೇದೋ ಮುಖಮಾಪಾಣ್ಡು ಪಾಕಿ ಚ ।
ಕ್ಷವಥುಶ್ಚಾನ್ನಕಾಂಕ್ಷಾ ಚ ಜ್ವರಮುಕ್ತಸ್ಯ ಲಕ್ಷಣಮ್ । (ಸು. 778)

ತಲೆ ಹಗುರವಾಗುವದು, ಬೆವರು, ಮುಖವು ಹಣ್ಣಾಗಿ (ಬಾಡಿ) ಬಿಳುಪೊತ್ತಿರುವದು, ಸೀನು ಮತ್ತು ಅನ್ನದ ಇಚ್ಛೆ, ಇವು ಜ್ವರ ಬಿಟ್ಟವನ ಲಕ್ಷಣ.

ಪರಾ ದೇಹ ಹಗುರವಾಗುವದು, ಮನೋವ್ಯಾಪಾರದ ಸಹಜ ಸ್ಥಿತಿ, ಅನ್ನದ ಆಶೆ, ತಲೆಯಲ್ಲಿ ತುರಿಕೆ, ಇವು ಸಹ ಜ್ವರಬಿಟ್ಟ ಲಕ್ಷಣಗಳೊಳಗೆ ಸೇರಿದವಾಗಿ ವಾ (ಪು 192-3)

ವೈಬಿಸಿ ಸ್ವಸ್ಥಸ್ಥಿತಿಗೆ ಇಳಿದ ಮಾತ್ರದಿಂದ ಜ್ವರವಿಮೋಚನ ಆಯಿತೆಂತ ತಿಳಿಯಬಾರದು

63. ಜ್ವರವಿಮೋಚನಕ್ಕೆ ಪೂರ್ವರೂಪ.

ಧಾತೂನ್ ಪ್ರಕ್ಷೋಭಯನ್ ದೋಷೋ ಮೋಕ್ಷಕಾಲೇ ऽವಲೀಯತೇ ।
ತೇನ ವ್ಯಾಕುಲಚಿತ್ತಸ್ತು ಮ್ರಿಯಮಾಣ ಇವೇಹತೇ ॥ (ಸು. 778)

ಜ್ವರಬಿಡುವ ಕಾಲದಲ್ಲಿ ದೋಷವು (ರಸಾದಿ) ಧಾತುಗಳನ್ನು ಚನ್ನಾಗಿ ಕುಲುಗಿಸಿ ಅಡಗುತ್ತದಾದ್ದರಿಂದ, ರೋಗಿಯ ಮನಸ್ಸಿನಲ್ಲಿ ವ್ಯಾಕುಲ ಉಂಟಾಗಿ ಸಾಯುವಂಥವನ ಹಾಗೆ ನಟಿಸುತ್ತಾನೆ.

ಪರಾ ನರಳುವದು, ವಾಂತಿ, ನಾನಾ ಅಂಗಚೇಷ್ಟೆ, ಉಬ್ಬಸ, ವರ್ಣವಿಕಾರ, ಅಂಗಗಳು ಬೆವರುವದು, (ಅಂಗಗಳು) ನಡುಗುವದು, ಪದೇ ಪದೇ ಜ್ವರ ಅಡಗುವದು, ಪ್ರಲಾಪ, ಸರ್ವಾಂಗ ಉಷ್ಣವಾಗುವದು, ಅಂಗಗಳು ಶೀತವಾಗುವದು, ಸಂಜ್ಞೆ ತಪ್ಪುವದು, ಜ್ವರವೇಗದ ಪೀಡೆ, ಸಿಟ್ಟುಗೊಂಡವನ ಹಾಗೆ ನೋಡುವದು, ಮಲವು ದೋಷಯುಕ್ತವಾಗಿ, ತೆಳ್ಳಗಾಗಿ, ಶಬ್ದಯುಕ್ತವಾಗಿ, ವೇಗದಿಂದ ಸ್ರವಿಸುವದು, ಈ ಲಕ್ಷಣಗಳು ಬಹುದೋಷವುಳ್ಳ ರೋಗಿಯಲ್ಲಿ ಬಲವಂತವಾಗಿ, ಹೆಚ್ಚಾಗಿ ಹೊಸತಾಗಿ, ಇರುವ ಜ್ವರವು, ಒಳ್ಳೇ ಚಿಕಿತ್ಸೆಯಿಂದ ದೋಷಗಳು ಪಾಕವಾಗಿ, ಬಿಡುವ ಸಂಧ

ರ್ಭದಲ್ಲಿ, ಕಾಣುತ್ತವೆಂತ ಬುದ್ಧಿವಂತನು ತಿಳಿಯತಕ್ಕದ್ದು; ಮತ್ತು ದೀರ್ಘಕಾಲದ ಜ್ವರಗಳು ದೋಷದ ದೆಸೆಯಿಂದ ಕಠಿಣವಾದ ವೇಗವನ್ನು ತೋರಿಸಿ, ಕ್ರಮದಿಂದ ಶಾಂತವಾಗುವ ಸಂದರ್ಭದಲ್ಲಿ ಅವುಗಳ ವಿಮೋಚನವು ಭಯಂಕರವಾಗಿರುವದಿಲ್ಲ ಎಂತ ಚ (ಪು 473)

ಜ್ವರವಿಮೋಚನಾನಂತರ ಮತ್ತು ಜ್ವರಕಾಲದಲ್ಲಿ ರೋಗಿಯ ಪರಾಂಬರಿಕೆ

64. ಪರಿಷೇಕಾವಗಾಹಾಂಶ್ಚ ಸ್ನೇಹಾನ್ ಸಂಶೋಧನಾನಿ ಚ |
ಸ್ನಾನಾಭ್ಯಂಗದಿವಾಸ್ವಪ್ನಶೀತವ್ಯಾಯಾಮಯೋಷಿತಃ ||
ನ ಭಜೇತ ಜ್ವರೋತ್ಸೃಷ್ಟೋ ಯಾವನ್ನೋ ಬಲವಾನ್ ಭವೇತ್ |
ತ್ಯಕ್ತಸ್ಯಾಪಿ ಜ್ವರೇಣಾಶು ದುರ್ಬಲಸ್ಯಾಹಿತೈರ್ಜ್ವರಃ ||
ಪ್ರತ್ಯಾಪನ್ನೋ ದಹೇದ್ದೇಹಂ ಶುಷ್ಕಂ ವೃಕ್ಷಮಿವಾನಲಃ |
ತಸ್ಮಾತ್ಕಾರ್ಯಃ ಪರೀಹಾರೋ ಜ್ವರಮುಕ್ತೇನ ಜನ್ತುನಾ ||
ಯಾವನ್ನ ಪ್ರಕೃತಿಸ್ಥಃ ಸ್ಯಾದ್ದೋಷತಃ ಪ್ರಾಣತಸ್ತಥಾ |
ಜ್ವರೇ ಪ್ರಮೋಹೋ ಭವತಿ ಸ್ವಲ್ಪೈರಪ್ಯವಚೇಷ್ಟಿತೈಃ ||
ನಿಷಣ್ಣಂ ಭೋಜಯೇತ್ತಸ್ಮಾನ್ಮೂತ್ರೋಚ್ಚಾರೌ ಚ ಕಾರಯೇತ್ |
ಅರೋಚಕೇ ಗಾತ್ರಸಾದೇ ವೈವರ್ಣ್ಯೇ ಽಂಗಮಲಾದಿಷು ||
ಶಾನ್ತಜ್ವರೋ ಽಪಿ ಶೋಧ್ಯಃ ಸ್ಯಾದನುಬನ್ಧಭಯಾನ್ನರಃ |
ನ ಜಾತು ತರ್ಪಯೇತ್ಪ್ರಾಜ್ಞಃ ಸಹಸಾ ಜ್ವರಕರ್ಷಿತಮ್ ||
ತೇನ ಸನ್ದೂಷಿತೋ ಹ್ಯಸ್ಯ ಪುನರೇವ ಭವೇಜ್ಜ್ವರಃ || (ಸು. 765-766)

ನೀರನ್ನು ಸುರಿಸಿಕೊಳ್ಳುವದು (ಧಾರೆ), ನೀರಿನ(ಕಟಾಹಾದಿಗಳ)ಲ್ಲಿ ಮುಳುಗುವದು, ಸ್ನೇಹಗಳ ಉಪಯೋಗ, ಚನ್ನಾಗಿ ಶೋಧನ ಮಾಡಿಸುವ ಕ್ರಮಗಳು, ಸ್ನಾನ, ಅಭ್ಯಂಗ, ಹಗಲುನಿದ್ರೆ, ಶೀತೋಪಚಾರ, ದೇಹದಂಡನೆ, ಸ್ತ್ರೀಸಂಗ, ಇವುಗಳನ್ನು ಜ್ವರಮುಕ್ತನಾದವನು, (ಪುನಃ) ಬಲವಂತನಾಗುವತನಕ, ಬಿಡತಕ್ಕದ್ದು. ಜ್ವರ ಬಿಟ್ಟ ಮೇಲೆಯೂ ಬಲಹೀನನಾದ ರೋಗಿಗೆ ಅಹಿತ ಸೇವನಗಳಿಂದ ಮರುಕಳಿಸಿ ಬರುವ ಜ್ವರವು, ಒಣಗಿದ ಮರವನ್ನು ಅಗ್ನಿಯು ಸುಡುವಂತೆ, ಅವನ ದೇಹವನ್ನು ಸುಟ್ಟುಬಿಡುವದು. ಆದ್ದರಿಂದ ಜ್ವರದಿಂದ ವಿಮುಕ್ತನಾದ ಮನುಷ್ಯನು (ವಾತಾದಿ) ದೋಷಗಳ ವಿಚಾರದಲ್ಲಿಯೂ, ಬಲದಲ್ಲಿಯೂ, ಸ್ವಸ್ಥಸ್ಥಿತಿಯನ್ನು ಹೊಂದುವ ವರೆಗೆ ಪರಿಹಾರಗಳ ವಿಧಿಯನ್ನು ಅನುಸರಿಸತಕ್ಕದ್ದು. ಜ್ವರದಲ್ಲಿ ಸ್ವಲ್ಪವಾದ ಮೈದಣಿಕೆಗಳಿಂದ ಸಹ ಮೂರ್ಛೆಯುಂಟಾಗುತ್ತದಾದ್ದರಿಂದ, ಉಣ್ಣಿಸುವಾಗಲೂ, ಮೂತ್ರ ಮತ್ತು ಮಲವಿಸರ್ಜನ ಮಾಡಿಸುವಾಗಲೂ, ರೋಗಿಯನ್ನು ಆಧರಿಸತಕ್ಕದ್ದು. ಜ್ವರ ಶಾಂತವಾದ ಮೇಲೆಯೂ ಅರುಚಿ, ಮೈನೋವು, ಮತ್ತು ಅಂಗ-ಮಲಾದಿಗಳಲ್ಲಿ ವಿಕಾರ ವರ್ಣ, ಕಾಣುವದಾದರೆ, ಆ ರೋಗಿಗೆ ಅನುಬಂಧದ ಭಯಕ್ಕಾಗಿ (ಜ್ವರ ಪುನಃ ಬಾರದ ಹಾಗೆ ಅಥವಾ ಬೇರೆ ರೋಗ ಹಿಂಬಾಲಿಸದ ಹಾಗೆ) ಶೋಧನವನ್ನು ಮಾಡಿಸತಕ್ಕದ್ದು. ಪ್ರಾಜ್ಞರಾದವರು ಜ್ವರದಿಂದ ಒಣಗಿದ ರೋಗಿಗೆ ಒಮ್ಮೆಯೇ ತೃಪ್ತಿಕರವಾದ ಆಹಾರಗಳನ್ನು ಕೊಡಬಾರದು; ಯಾಕೆಂದರೆ ಅದರಿಂದ ಅವನಿಗೆ ದೋಷ ಉಂಟಾಗಿ ಜ್ವರವು ಪುನಃ ಉಂಟಾಗುವದು.

ಪಠಾ ಪ್ರಥಮ ಶ್ಲೋಕದ ಸ್ಥಾನದಲ್ಲಿ "ಶೀತತೋಯದಿವಾಸ್ವಪ್ನಕ್ರೋಧವ್ಯಾಯಾಮಯೋಷಿತಃ" ಎಂತಲೂ, 3ನೇ ಶ್ಲೋಕದ ಕೊನೆಯಲ್ಲಿ "ಜ್ವರಮುಕ್ತೈರ್ವಿರಿಕ್ತವತ್" ಎಂತಲೂ, ಕಡೇ ಶ್ಲೋಕದ ಪ್ರಥಮ ಚರಣವಾಗಿ "ನ ಜಾತು ಸ್ನಾಪಯೇತ್ ಪ್ರಾಜ್ಞಃ" ಎಂತಲೂ ಪಾಠಾಂತರ ಕಾಣುತ್ತದೆ. ಅದು ಸಮಂಜಸವಾಗಿ ಕಾಣುವದಿಲ್ಲ.

65. ರಕ್ತಶಾಲ್ಯಾದಯಃ ಶಸ್ತಾಃ ಪುರಾಣಾಃ ಷಷ್ಟಿಕೈಃ ಸಹ ।
ಯವಾಗ್ವೋದನಲಾಜಾರ್ಥೇ ಜ್ವರಿತಾನಾಂ ಜ್ವರಾಪಹಾಃ ॥
ಅಮ್ಲಾಭಿಲಾಷೀ ತಾಮೇವ ದಾಡಿಮಾಮ್ಲಾಂ ಸನಾಗರಾಮ್ ।
ಸೃಷ್ಟವಿಟ್ಪೈತ್ತಿಕೋ ವಾಥ ಶೀತಾಂ ಮಧುಯುತಾಂ ಪಿಬೇತ್ ॥
ಲಾಜಪೇಯಾಂ ಸುಖಜರಾಂ ಪಿಪ್ಪಲೀನಾಗರೈಃ ಶೃತಾಮ್ ।
ಪಿಬೇಜ್ಜ್ವರೀ ಜ್ವರಹರಾಂ ಕ್ಷುದ್ವಾನಲ್ಪಾಗ್ನಿರಾದಿತಃ ॥
ಪೇಯಾಂ ವಾ ರಕ್ತಶಾಲೀನಾಂ ಪಾರ್ಶ್ವವಸ್ತಿಶಿರೋರುಜಿ ।
ಶ್ವದಂಷ್ಟ್ರಾಕಂಟಕಾರಿಭ್ಯಾಂ ಸಿದ್ಧಾಂ ಜ್ವರಹರಾಂ ಪಿಬೇತ್ ॥
ಜ್ವರಾತಿಸಾರೀ ಪೇಯಾಂ ವಾ ಪಿಬೇತ್ ಸಾಮ್ಲಾಂ ಶೃತಾಂ ನರಃ ।
ಪೃಶ್ನಿಪರ್ಣೀಬಲಾಬಿಲ್ವನಾಗರೋತ್ಪಲಧಾನ್ಯಕೈಃ ॥
ಶೃತಾಂ ವಿದಾರೀಗನ್ಧಾದ್ಯೈರ್ದೀಪನೀಂ ಸ್ವೇದನೀಂ ನರಃ ।
ಕಾಸೀ ಶ್ವಾಸೀ ಚ ಹಿಕ್ಕೀ ಚ ಯವಾಗೂಂ ಜ್ವರಿತಃ ಪಿಬೇತ್ ॥
ವಿಬದ್ಧವರ್ಚಾಃ ಸಯವಾಃ(?ವಾಂ) ಪಿಪ್ಪಲ್ಯಾಮಲಕೈಃ ಶೃತಾಮ್ ।
ಸರ್ಪಿಷ್ಮತೀಂ ಪಿಬೇತ್ಪೇಯಾಂ ಜ್ವರೀ ದೋಷಾನುಲೋಮನೀಮ್ ॥
ಕೋಷ್ಠೇ ವಿಬದ್ಧೇ ಸರುಜಿ ಪಿಬೇತ್ಪೇಯಾಂ ಶೃತಾಂ ಜ್ವರೀ ।
ಮೃದ್ವೀಕಾಪಿಪ್ಪಲೀಮೂಲಚವ್ಯಾಮಲಕನಾಗರೈಃ ॥
ಪಿಬೇತ್ಸಬಿಲ್ವಾಂ ಪೇಯಾಂ ವಾ ಜ್ವರೇ ಸಪರಿಕರ್ತಿಕೇ ।
ಬಲಾವೃಕ್ಷಾಮ್ಲಕೋಲಾಮ್ಲಕಲಶೀಧಾವನೀಶೃತಾಮ್ ॥
ಅಸ್ವೇದನಿದ್ರಸ್ತೃಷ್ಣಾರ್ತಃ ಪಿಬೇತ್ಪೇಯಾಂ ಸಶರ್ಕರಾಮ್ ।
ನಾಗರಾಮಲಕೈಃ ಸಿದ್ಧಾಂ ಘೃತಭೃಷ್ಟಾಂ ಜ್ವರಾಪಹಾಮ್ ॥

(ಚ. 460-61)

ಜ್ವರರೋಗಿಗಳಿಗೆ ಪಥ್ಯವಾದ ಗಂಜಯೋಗಗಳು

ಅರುವತ್ತು ದಿನಗಳಲ್ಲಿ ಬೆಳೆಯುವ ಭತ್ತಗಳು, ರಕ್ತಶಾಲಿಗಳು, ಮುಂತಾದ ಹಳೇ ಭತ್ತಗಳು ಜ್ವರದವರಿಗೆ ಕೊಡತಕ್ಕ ಗಂಜಿ, ಅನ್ನ ಮತ್ತು ಅರಳುಗಳಿಗೆ ಉಪಯೋಗಿಸುವದಕ್ಕೆ ಪ್ರಶಸ್ತ. ಅವುಗಳಲ್ಲಿ ಜ್ವರಹರ ಗುಣವಿರುತ್ತದೆ. ಅಲ್ಪವಾದ ಅಗ್ನಿಯುಳ್ಳವನಿಗೆ ಹಸಿವೆ ಉಂಟಾದಾಗ್ಗೆ ಆರಂಭದಲ್ಲಿ ಹಿಪ್ಪಲಿ ಮತ್ತು ಶುಂಠಿ ಕೂಡಿಸಿ ಬತ್ತಿಸಿದ, ಸುಲಭವಾಗಿ ಜೀರ್ಣ ವಾಗುವ ಗುಣವುಳ್ಳ ಮತ್ತು ಜ್ವರಹರವಾದ, ಅರಳುಗಂಜಿಯನ್ನು ಕುಡಿಯಕೊಡತಕ್ಕದ್ದು. ಹುಳಿಯ ಅಪೇಕ್ಷೆಯುಳ್ಳವನು ದಾಳಿಂಬದ ಹುಳಿ ಮತ್ತು ಶುಂಠಿ ಕೂಡಿಸಿಕೊಂಡು ಅದೇ ಗಂಜಿಯನ್ನು ಕುಡಿಯಬೇಕು. ಮಲ ಸಡಲಿರುವ ಪಿತ್ತಜ್ವರದವನು ಗಂಜಿಯನ್ನು ತಣಿಸಿ, ಜೇನು ಕೂಡಿಸಿಕೊಂಡು, ಕುಡಿಯಬೇಕು. ಕೆಂಪು ಶಾಲ್ಯಕ್ಕಿಗಳಿಂದ, ನೆಗ್ಗಿಲಮುಳ್ಳು ಮತ್ತು ಕಿರಿಗುಳ್ಳದ ಬೇರು ಕೂಡಿಸಿ, ತಯಾರಿಸಿದ ಜ್ವರಹರವಾದ ಗಂಜಿಯನ್ನು ಪಕ್ಕಗಳಲ್ಲಿ, ವಸ್ತಿ ಯಲ್ಲಿ ಮತ್ತು ತಲೆಯಲ್ಲಿ ಶೂಲೆ ಇರುವ ಜ್ವರರೋಗಿಯು ಕುಡಿಯತಕ್ಕದ್ದು. ಜ್ವರಾತಿಸಾರ ವುಳ್ಳವನು ಓರೆಲೆಬೇರು, ಕಲ್ಲಂಗಡಲೆಬೇರು (ಕಡೀರು), ಬಿಲ್ವಪತ್ರೆಬೇರು, ಶುಂಠಿ, ನೈದಿಲೆ ಗಡ್ಡೆ ಮತ್ತು ಕೊತ್ತುಂಬರಿ, ಇವುಗಳ ಕೂಡುವಿಕೆಯಿಂದ ತಯಾರಿಸಿದ ಗಂಜಿಯನ್ನು (ದಾಳಿಂಬದ ಹುಳಿ ಕೂಡಿಸಿ) ಹುಳಿಯಾಗಿ ಕುಡಿಯಬೇಕು. ಕೆಮ್ಮು, ಉಬ್ಬಸ, ಬಿಕ್ಕಟ್ಟು,

ಈ ಲಕ್ಷಣಗಳುಳ್ಳ ಜ್ವರರೋಗಿಯು ವಿದಾರಿಗಂಧಾದಿಗಣದ ಔಷಧಗಳನ್ನು ಕೂಡಿಸಿ ಮಾಡಲ್ಪಟ್ಟ ಅಗ್ನಿದೀಪನಕರವಾದ ಮತ್ತು ಬೆವರಿಸುವ ಗುಣವುಳ್ಳ ಗಂಜಿಯನ್ನು ಕುಡಿಯತಕ್ಕದ್ದು. ಮಲಬದ್ಧತೆಯುಳ್ಳ ಜ್ವರರೋಗಿಯು ಹಿಪ್ಪಲಿ ಮತ್ತು ನೆಲ್ಲಿ ಕೂಡಿಸಿ, (ಅಕ್ಕಿಯೊಂದಿಗೆ) ಯವಧಾನ್ಯವನ್ನು ಬೆರಿಸಿ, ಮಾಡಿದ ಗಂಜಿಯನ್ನು, ತುಪ್ಪ ಕೂಡಿಸಿಕೊಂಡು, ಕುಡಿಯಬೇಕು; ಅದರಿಂದ ದೋಷಗಳು ಕ್ರಮುಗತಿಗೆ ಬರುತ್ತವೆ. ಹೊಟ್ಟೆ ಬಿಗಿದು ನೋವು ಉಂಟಾದಾಗ್ಗೆ ಜ್ವರರೋಗಿಯು ದ್ರಾಕ್ಷೆ, ಹಿಪ್ಪಲಿಮೂಲ, ಕಾಡುಮೆಣಸಿನ ಬೇರು, ನೆಲ್ಲಿ ಮತ್ತು ಶುಂಠಿ ಕೂಡಿಸಿ ತಯಾರಿಸಿದ ಗಂಜಿಯನ್ನು ಕುಡಿಯಬೇಕು 'ಪರಿಕರ್ತ್ರಿಕೆ' (ಕತ್ತರಿಸಿದ ಹಾಗಿನ) ವೇದನೆಯುಳ್ಳ ಜ್ವರರೋಗಿಯು ಬಿಲ್ವಪತ್ರೆಬೇರು, ಕಲ್ಲಂಗಡಲೆಬೇರು, ಮುರ್ಗಿನಹುಳಿ, ಬೊಗರಿಹುಳಿ, ಓರೆಲೆಬೇರು, ನೆಲಗುಳ್ಳದ ಬೇರು, ಇವುಗಳನ್ನು ಸೇರಿಸಿ ಮಾಡಿದ ಗಂಜಿಯನ್ನು ಕುಡಿಯಬೇಕು. ಬೆವರದೆ, ನಿದ್ರೆಬಾರದೆ, ಬಾಯಾರಿಕೆಯಿಂದ ಪೀಡಿತನಾದವನು ಶುಂಠಿ ಮತ್ತು ನೆಲ್ಲಿಯನ್ನು ಕೂಡಿಸಿ ತಯಾರಿಸಲ್ಪಟ್ಟ ಜ್ವರಹರವಾದ ಗಂಜಿಯನ್ನು, ಸಕ್ಕರೆ ಮತ್ತು ಸ್ವಲ್ಪ ತುಪ್ಪ ಕೂಡಿಸಿಕೊಂಡು, ಕುಡಿಯತಕ್ಕದ್ದು.

ಪರಾ ಮೇಲಿನ ಶ್ಲೋಕಗಳೊಳಗೆ 2ನೇದನ್ನು 3ನೇದಾಗಿ, 3ನೇದನ್ನು 2ನೇದಾಗಿ ಇಟ್ಟ ಪಾಠಾಂತರ ಕಾಣುತ್ತದೆ ಅದೇ ಸರಿಯಾದ್ದೆಂತ ಕಾಣುವದರಿಂದ ಹಾಗೆಯೇ ಅರ್ಥ ಬರೆದದೆ. "ಮೊದಲಾಗಿ ಜೀರ್ಣಕ್ಕೆ ಸುಲಭವಾದ ಅರಳಿನ ಗಂಜಿಯನ್ನು ಶುಂಠಿ ಹಿಪ್ಪಲಿ ಮತ್ತು ಕೊತ್ತುಂಬರಿ ಕೂಡಿಸಿ ತಯಾರಿಸಿ, ಸೈಂಧವಲವಣವನ್ನು ಕೂಡಿಸಿಕೊಂಡು, ಕುಡಿಯಬೇಕು ಮತ್ತು ಹುಳಿ ಬೇಕಾದವನಿಗೆ ದಾಳಿಂಬದ ಹುಳಿಯನ್ನು ಕೂಡಿಸಿ ಅದನ್ನು ಕೊಡಬೇಕು" ಎಂತ ವಾ. (ಪು 250) ಕಫಜ್ವರರೋಗಿಗೆ ಲಂಘನದಿಂದ ಅಗ್ನಿಯು ಅಲ್ಪವಾಗಿ ಉಂಟಾದಾಗ್ಗೆ ಈ ಕ್ರಮವನ್ನು ನಡಿಸತಕ್ಕದ್ದು, ವಿದಾರಿಗಂಧಾದಿ ಎಂದರೆ ಹ್ರಸ್ವಪಂಚಮೂಲ ಎಂತ ಅ ದೀ "ಕೆಮ್ಮು, ಉಬ್ಬಸ ಮತ್ತು ಬಿಕ್ಕಟ್ಟು ಉಳ್ಳವನು ಹ್ರಸ್ವ ಪಂಚಮೂಲಗಳಿಂದ ತಯಾರಿಸಲ್ಪಟ್ಟ ಗಂಜಿಯನ್ನೂ, ಕಫದ ಪೀಡೆಯಿದ್ದರೆ ಬೃಹತ್ಪಂಚಮೂಲಗಳನ್ನು ಕೂಡಿಸಿ ಮಾಡಲ್ಪಟ್ಟ ಯವೆಗೋಧಿಯ ಗಂಜಿಯನ್ನೂ, ಕುಡಿಯಬೇಕಾಗಿ" ವಾ (ಪು 250) ಪರಿಕರ್ತ್ರಿಕೆಗೆ ಹೇಳಲ್ಪಟ್ಟ ಯೋಗದಿಂದ ವಾಗ್ಭಟನು ಕಲ್ಲಂಗಡಲೆ ಬೇರನ್ನು ಬಿಟ್ಟಿದ್ದಾನೆ ಸಾಧಾರಣವಾಗಿ ಗಂಜಿಯನ್ನು ತಯಾರಿಸುವದಕ್ಕೆ ಹಸಿಶುಂಠಿ ಮತ್ತು ನೆಗ್ಗಿಲವುಳ್ಳನ್ನೂ, ಕೆಮ್ಮು ಮತ್ತು ಕಫದ ಪೀಡೆಯಿದ್ದಾಗ ಅವುಗಳೊಂದಿಗೆ ಬಳ್ಳಿತುರಚಿನ ಬೇರನ್ನೂ, ಉರಿಬಾಯಾರಿಕೆ ಮುಂತಾದ ಪಿತ್ತದ ಬಾಧೆ ಕಂಡಾಗ ಶುಂಠಿ ಮತ್ತು ನೆಗ್ಗಿಲೊಂದಿಗೆ ಕವಿಕೆಹುಲ್ಲನ್ನೂ, ಅತಿಸಾರವಿದ್ದಾಗ ಶುಂಠಿ ನೆಗ್ಗಿಲು, ಬಳ್ಳಿತುರಚಿ ಮತ್ತು ಬಿಲ್ವಪತ್ರೆಬೇರನ್ನೂ, ದೋಷಬಲಾಬಲದ ಮೇಲೆ ಪ್ರಮಾಣ ವ್ಯತ್ಯಾಸದಿಂದ, ಕೂಡಿಸುವದರಿಂದ ಹಿತವಾಗುತ್ತದೆಂತ ಅನುಭವದಿಂದ ಕಂಡದೆ ಉಪೋದ್ಘಾತದ 29ನೇ ಸಂಖ್ಯೆ ನೋಡಿ ಔಷಧದ್ರವ್ಯಗಳ ಒಟ್ಟು ತೂಕ, ತೀಕ್ಷ್ಣದ್ರವ್ಯವಾದರೆ ಒಂದು ಕರ್ಷ, ಮೃದುದ್ರವ್ಯಗಳಾದರೆ ಒಂದು ಪಲ, ಮಧ್ಯಸ್ಥಿತಿದಾದರೆ ಅರ್ಧ ಪಲ ಎಂತ ವೃದ್ಧವೈದ್ಯವ್ಯವಹಾರ ಎಂಬ ಆಧಾರದ ಮೇಲೆ ವ್ಯಾಖ್ಯಾನಕಾರರು ಬರೆದದ್ದು ಕಾಣುತ್ತದೆ ದಿನಕ್ಕೆ ಎರಡು ಸರ್ತಿ ಗಂಜಿ ಮಾಡುವಲ್ಲಿ, ಈ ಪ್ರಮಾಣದ ಅರ್ಧಾಂತ ಒಂದು ಸರ್ತಿಗೆ ಸಾಕು

ಲಘುನಾ ಪಂಚಮೂಲೇನ ಪಿಪ್ಪಲ್ಯಾ ಸಹ ಧಾನ್ಯಯಾ |
ಮಹತ್ಯಾ ಪಂಚಮೂಲ್ಯಾಥ ವ್ಯಾಘ್ರೀದುಸ್ಪರ್ಶಗೋಕ್ಷುರೈಃ ||
ಸಂಸಿದ್ಧಂ ಭಿಷಗಾಹಾರಂ ಪ್ರಯುಂಜೀತ ಯಥಾಕ್ರಮಮ್ |
ವಾತಪಿತ್ತೇ ಶ್ಲೇಷ್ಮಪಿತ್ತೇ ಕಫವಾತೇ ತ್ರಿದೋಷಜೇ ||
ವಾತೇ ವಾ ಸಕಫೇ ಪಿತ್ತೇ ಸಾಮೇ ವಾ ತರುಣೇ ಜ್ವರೇ |
ಯವಮಣ್ಡಂ ಪ್ರಶಂಸನ್ತಿ ಪಟೋಲಮಗಧಾನ್ವಿತಮ್ || (ಚಿ. ಸಾ ಸಂ 16)
ಪಾಚನೋ ದೀಪನಃ ಸೋಷ್ಣೋ ಲಾಜಮಣ್ಡೋ ಯತಃ ಸ್ಮೃತಃ |
ದಶಮೂಲಾದಿಸಿದ್ಧಃ ಸ ಸನ್ನಿಪಾತಜ್ವರೇ ಹಿತಃ ||
ಲಾಜೈರ್ವಾ ತಣ್ಡುಲೈರ್ಭೃಷ್ಟೈರ್ಲಾಜಮಣ್ಡಃ ಪ್ರಕೀರ್ತಿತಃ |
ಶ್ಲೇಷ್ಮಪಿತ್ತಹರೋ ಗ್ರಾಹೀ ಪಿಪಾಸಾಜ್ವರಜಿನ್ಮತಃ || (ನಿ. ರ)

ವಾತಪಿತ್ತಜ್ವರದಲ್ಲಿ ಹ್ರಸ್ವಪಂಚಮೂಲಗಳನ್ನೂ, ಕಫಪಿತ್ತಜ್ವರದಲ್ಲಿ ಹಿಪ್ಪಲಿ ಮತ್ತು ಕೊತ್ತುಂಬರಿಯನ್ನೂ, ಕಫವಾತಜ್ವರದಲ್ಲಿ ಬೃಹತ್ಪಂಚಮೂಲಗಳನ್ನೂ, ಸನ್ನಿಪಾತಜ್ವರದಲ್ಲಿ ಕಿರಿಗುಳ್ಳದ ಬೇರು, ಬಳ್ಳಿತುರಚನ ಬೇರು ಮತ್ತು ನೆಗ್ಗಿಲಮುಳ್ಳು, ಇವುಗಳನ್ನೂ, ಕೂಡಿಸಿ ತಯಾರಿಸಲ್ಪಟ್ಟ (ಗಂಜಿ ಮೊದಲಾದ) ಆಹಾರವನ್ನು ವೈದ್ಯನು ಪ್ರಯೋಗಿಸತಕ್ಕದ್ದು. ಕಹಿ ಪಡುವಲ ಬೇರು ಮತ್ತು ಹಿಪ್ಪಲಿ ಸೇರಿಸಿ ಮಾಡಿದ ಯವೆಗೋಧಿಯ ಗಂಜಿನೀರನ್ನು ವಾತ ಜ್ವರದಲ್ಲಿ, ಅಥವಾ ಕಫಯುಕ್ತವಾದ ಪಿತ್ತಜ್ವರದಲ್ಲಿ, ಅಥವಾ ಆಮದೋಷವುಳ್ಳ ಜ್ವರದಲ್ಲಿ, ಅಥವಾ ತರುಣಜ್ವರದಲ್ಲಿ, ಪ್ರಶಸ್ತವಾಗಿ ಹೇಳುತ್ತಾರೆ (ಚಿ. ಸಾ. ಸಂ). ಅರಳಿನ ಬಿಸಿ ಗಂಜಿ ನೀರು ದೀಪನ ಮತ್ತು ಪಾಚನ ಗುಣವುಳ್ಳದ್ದಾದ್ದರಿಂದ, ದಶಮೂಲಗಳು ಮೊದಲಾದವು ಗಳಿಂದ ತಯಾರಿಸಲ್ಪಟ್ಟ ಆ ಗಂಜಿ ನೀರು ಸನ್ನಿಪಾತಜ್ವರದಲ್ಲಿ ಹಿತವಾಗಿರುತ್ತದೆ. ಅರಳಿ ನಿಂದಾಗಲಿ ಹುರಿದ ಅಕ್ಕಿಯಿಂದಾಗಲಿ ಮಾಡಿದ ಗಂಜಿಯು ಅರಳಿನ ಗಂಜಿ ಎಂತ ಕೀರ್ತಿ ಗೊಂಡದೆ; ಅದು ಕಫಪಿತ್ತಹರ, ಬಾಯಾರಿಕೆಯುಳ್ಳ ಜ್ವರವನ್ನು ಪರಿಹರಿಸತಕ್ಕಂಥಾದ್ದು ಮತ್ತು ಗ್ರಾಹಿಗುಣವುಳ್ಳದ್ದು ಎಂತ ತಿಳಿದಿದ್ದಾರೆ. (ನಿ. ರ.)

ತಿಕ್ತಃ ಪಿತ್ತೇ ವಿಶೇಷೇಣ ಪ್ರಯೋಜ್ಯಃ ಕಟುಕಃ ಕಫೇ |
ಪಿತ್ತಶ್ಲೇಷ್ಮಹರತ್ವೇಽಪಿ ಕಷಾಯಸ್ತು ನ ಶಸ್ಯತೇ ||
ನವಜ್ವರೇ . . . . . . . (ವಾ. 251)

ಪಿತ್ತಜ್ವರದಲ್ಲಿ ಕಹಿರಸವೂ, ಕಫಜ್ವರದಲ್ಲಿ ಕಾರರಸವೂ ವಿಶೇಷವಾಗಿ ಪ್ರಯೋಗಿಸಲ್ಪಡ ತಕ್ಕಂಥಾದ್ದು. ಚೊಗರುರುಚಿಯು ಪಿತ್ತಕಫಹರಕ್ಕಾಗಿಯಾದರೂ ತರುಣಜ್ವರದಲ್ಲಿ ಪ್ರಶಸ್ತವಲ್ಲ.

ಷರಾ ತುಪ್ಪವೂ ಜೇನೂ ಸಾಧಾರಣವಾಗಿ ಜ್ವರಕ್ಕೆ, ವಿಶೇಷವಾಗಿ ತರುಣಜ್ವರಕ್ಕೆ, ಅಹಿತ ಎಂತ ತಿಳಿದಿರಬೇಕು

66. ಸಂಸೃಷ್ಟಾನ್ ಸನ್ನಿಪತಿತಾನ್ ಬುದ್ಧ್ವಾ ತರತಮೈಃ ಸಮೈಃ |
ಜ್ವರಾನ್ ದೋಷಕ್ರಮಾಪೇಕ್ಷೀ ಯಥೋಕ್ತೈರೌಷಧೈರ್ಜಯೇತ್ ||
ವರ್ಧನೇನೈಕದೋಷಸ್ಯ ಕ್ಷಪಣೇನೋಚ್ಛ್ರಿತಸ್ಯ ವಾ |
ಕಫಸ್ಥಾನಾನುಪೂರ್ವ್ಯಾ ವಾ ಸನ್ನಿಪಾತಜ್ವರಂ ಜಯೇತ್ ||
(ಚ. 170)

ತಾರತಮ್ಯವುಳ್ಳ ದೋಷಗಳಿಂದ ಉಂಟಾದ ದ್ವಂದ್ವಜ ಮತ್ತು ಸನ್ನಿಪಾತ ಜ್ವರಗಳ ಚಿಕಿತ್ಸಾ ವಿಧಾನ

ದೋಷಗಳಲ್ಲಿ ಒಂದಕ್ಕಿಂತ ಒಂದು ಬಲವಾಗಿರುವ ದ್ವಂದ್ವಜ ಮತ್ತು ಸನ್ನಿಪಾತ ಜ್ವರಗಳನ್ನು ಮತ್ತು ಮೂರು ದೋಷಗಳು ಸಮಬಲವಾಗಿರುವ ಸನ್ನಿಪಾತ ಜ್ವರ ವನ್ನು, ಯಾವ ದೋಷಕ್ಕೆ ಮುಂದಾಗಿ ಪರಿಹಾರ ಮಾಡತಕ್ಕದ್ದು ಮತ್ತು ಯಾವ ಪರಿಹಾರ ವನ್ನು ಯಾವ ಕಾಲ ಅಥವಾ ಸಂದರ್ಭದಲ್ಲಿ ಉಪಯೋಗಿಸತಕ್ಕದ್ದು ಎಂಬ ವಿಧಿಗೆ ಲಕ್ಷ್ಯ ವಿಟ್ಟು, ಉಕ್ತವಾದ ಔಷಧಗಳ ಕ್ರಮವಾದ ಉಪಯೋಗದಿಂದ ಜಯಿಸತಕ್ಕದ್ದು. ದೋಷ ಗಳು ಹೀನ-ಮಧ್ಯ-ಅಧಿಕವಾಗಿರುವ ಸನ್ನಿಪಾತಗಳಲ್ಲಿ ಹೀನವಾದ ದೋಷವನ್ನು ವೃದ್ಧಿ ಗೊಳಿಸಿ, ಅಥವಾ ಅಧಿಕವಾದ ದೋಷವನ್ನು ಕಡಿಮೆ ಮಾಡಿ, ಮತ್ತು ಮೂರು ದೋಷಗಳೂ ಸಮಬಲವಾಗಿರುವಲ್ಲಿ ಮುಂದಾಗಿ ಕಫಕ್ಕೆ (ಅನಂತರ ಪಿತ್ತಕ್ಕೆ, ಅದರನಂತರ ವಾತಕ್ಕೆ) ಚಿಕಿತ್ಸೆಮಾಡಿ, ಸನ್ನಿಪಾತ ಜ್ವರಗಳನ್ನು ಜಯಿಸತಕ್ಕದ್ದು.

ಟಿಪ್ಪಣಿ ಹಿಂದೆ ಉಪೋದ್ಘಾತದ 22ನೇ ಸಂಖ್ಯೆಯಲ್ಲಿ (ಪು 28) ದೋಷಗಳಿಗೂ ರಸಗಳಿಗೂ ಇರುವ ಶತ್ರುತ್ವ-ಮಿತ್ರತ್ವವನ್ನು ವರ್ಣಿಸಿಯದೆ. ಆ ಉಪದೇಶ ಪ್ರಕಾರ ವಾತ-ಪಿತ್ತ-ಕಫಗಳು ಕ್ರಮವಾಗಿ ಹೀನ-ಮಧ್ಯಾಧಿಕವಾಗಿರುವಲ್ಲಿ ಕಫಶಮನಕರವಾದ ಕಟು-ತಿಕ್ತಗಳನ್ನು ಉಪಯೋಗಿಸಿದರೆ, ಅದರಿಂದಲೇ ವಾತದ ಹೀನತೆಯು ಶಮನವಾಗಬೇಕು. ಹಾಗೆಯೇ ಆ ದೋಷಗಳು ಹೀನಾಧಿಕ-ಮಧ್ಯಸ್ಥಿತಿಯಲ್ಲಿರುವಾಗ್ಗೆ ಹೀನವಾದ ವಾತದ ವೃದ್ಧಿಗಾಗಿ ತಿಕ್ತ ಕಷಾಯವನ್ನು ಕೊಟ್ಟರೆ ಅದರಿಂದಲೇ ಪಿತ್ತಾಧಿಕ್ಯವು ಶಮನವಾಗಬೇಕು ಹೀಗಿನ ವಿಚಾರದ ಮೇಲೆ ಯೋಗಗಳನ್ನು ಕಲ್ಪಿಸಿ, ತಾರತಮ್ಯವುಳ್ಳ ಸನ್ನಿಪಾತಜ ಜ್ವರಗಳನ್ನು ಜಯಿಸಬೇಕೆಂಬದು ಮೇಲಿನ 2ನೇ ಶ್ಲೋಕದಲ್ಲಿ ಅಡಗಿದ ಉಪದೇಶವಾಗಿರುತ್ತದೆ ಸಮಬಲದ ತ್ರಿದೋಷಗಳಲ್ಲಿ ಮುಂದಾಗಿ ಕಫಕ್ಕೆ ಚಿಕಿತ್ಸೆಮಾಡಬೇಕೆಂದದ್ದು ಸಾಮಾನ್ಯವಾಗಿ ಜ್ವರದಲ್ಲಿ ಪಿತ್ತಕ್ಕೆ ಮುಂದಾಗಿ ಚಿಕಿತ್ಸೆಮಾಡತಕ್ಕದ್ದೆಂಬ ಸುಶ್ರುತನ ಉಪದೇಶಕ್ಕೆ ಅಪವಾದ ಎಂತ ತಿಳಿಯಬೇಕು ಕಫಾಧಿಕ್ಯವು ಸಾಧಾರಣವಾಗಿ ಅಂತಿಮಾವಸ್ಥೆಯ ಲಕ್ಷಣವಾದ್ದರಿಂದ, ಶ್ವಾಸದ ಚಲನೆಗೆ ತಡೆಯುಂಟಾಗದ ಹಾಗೂ, ಕೈಕಾಲುಗಳು ಮುಂದಾಗಿ ಶರೀರವು ತಣ್ಣಗಾಗದ ಹಾಗೂ, ಕಫವನ್ನು ಮುಂಚಿತವಾಗಿ ಶಮನಮಾಡಿಕೊಳ್ಳಬೇಕೆಂಬದು ಸರಿಯಾದ್ದು ದ್ವಂದ್ವಜದಲ್ಲಿ ಯಾವ ದೋಷವು ಹೆಚ್ಚು ಬಲವಂತವೋ ಅದಕ್ಕೆ ಮುಂದಾಗಿ ಉಪಕ್ರಮಿಸಬೇಕು (ಭಾ ಪ್ರ 291)

ಹೀನಸ್ಯ ವರ್ಧನಾದ್ಧಾನಿರ್ವೃದ್ಧಯೋರಿತಿ ನಿಶ್ಚಯಃ |
ಹಾಯನಾದತಿವೃದ್ಧಸ್ಯ ಹೀನಯೋರ್ವೃದ್ಧಿಸಮ್ಭವಃ ||
ತತಃ ಸಮತ್ವಂ ದೋಷಾಣಾಂ . . . (ಚಿ. ಸಾ. ಸಂ 35)

ಹೀನವಾದ ದೋಷವನ್ನು ವೃದ್ಧಿಗೊಳಿಸುವದರಿಂದ ವೃದ್ಧಿಗೊಂಡಿದ್ದ ಮಿಕ್ಕ ಎರಡು ದೋಷಗಳು ಕಡಿಮೆಯಾಗುತ್ತವೆಂಬದು ನಿಶ್ಚಯ. ಅತಿವೃದ್ಧಿಯಾದ ದೋಷವನ್ನು ಕಡಿಮೆ ಮಾಡುವದರಿಂದ ಹೀನವಾಗಿದ್ದ ಮಿಕ್ಕ ಎರಡು ದೋಷಗಳ ವೃದ್ಧಿಯುಂಟಾಗುತ್ತದೆ ಅದರಿಂದ ದೋಷಗಳು ಸಮತ್ವವನ್ನು ಹೊಂದುತ್ತವೆ.

ಟಿಪ್ಪಣಿ ದ್ವಿದೋಷೋಲ್ಬಣ ಸನ್ನಿಪಾತಗಳು ಮೂರರಲ್ಲಿ ಮಂದವಾದ್ದು ಮಿಕ್ಕೆರಡಕ್ಕೆ ಹೀನವಾದ್ದರಿಂದ, ಅದನ್ನು ವೃದ್ಧಿಗೊಳಿಸಿದರೆ ಉಲ್ಬಣವಾದ ಎರಡು ದೋಷಗಳು ಕಡಿಮೆಯಾಗುತ್ತವೆ, ಏಕದೋಷೋಲ್ಬಣ ಸನ್ನಿಪಾತಗಳು ಮೂರರಲ್ಲಿ ಉಲ್ಬಣವಾದ್ದಕ್ಕೆ ಮಿಕ್ಕೆರಡು ಹೀನವಾದ್ದರಿಂದ ಅದನ್ನು ಕಡಿಮೆಮಾಡಿದರೆ ಹೀನವಾದೆರಡು ದೋಷಗಳು ವೃದ್ಧಿಗೊಳ್ಳುತ್ತವೆ, ಮತ್ತು ಹೀನ-ಮಧ್ಯಾಧಿಕವಾಗಿರುವ ದೋಷಗಳಿಂದ ಸಂಭವಿಸುವ ಆರು ಸನ್ನಿಪಾತಗಳಲ್ಲಿ ಹಾಗೆಯೇ ಹೀನವಾದ್ದನ್ನು ವೃದ್ಧಿಗೊಳಿಸಿದರೆ ಅಥವಾ ಅಧಿಕವಾದ್ದನ್ನು ಕಡಿಮೆಮಾಡಿದರೆ ದೋಷಗಳು ಸಮವಾಗುತ್ತವೆ ಎಂಬದು ಮೇಲಿನ ಉಪದೇಶದ ಅರ್ಥವಾಗಿಕಾಣುತ್ತದೆ ಕೆಲವು ವ್ಯಾಖ್ಯಾನಕಾರರು ಚರಕನ ವಚನದಲ್ಲಿ ಉಲ್ಬಣವಾದ್ದರ ಕ್ಷಪಣ ಎಂಬದಕ್ಕೆ ಉಚ್ಛ್ರಿತವಾದ ಎರಡು ದೋಷಗಳ ಕ್ಷಪಣ ಸಹ ಎಂತ ಅರ್ಥಮಾಡಿದ್ದು ಕಾಣುತ್ತದೆ ಆದರೆ ಮಂದ ಅಥವಾ ಮಧ್ಯಸ್ಥಿತಿಯ ದೋಷವನ್ನು ವೃದ್ಧಿಗೊಳಿಸುವ ಅಥವಾ ಕ್ಷಯಿಸುವ ಅಗತ್ಯವಿಲ್ಲ ಅದಲ್ಲದೆ ಚಿ ಸಾ ಸಂ.ದ ವಚನದಲ್ಲಿ ಅತಿವೃದ್ಧದೋಷದ ಹಾಯನ ಎಂತ ಇರುವದರಿಂದಲೂ, ಉಳಿದವೆರಡೆಂತ ದ್ವಿವಚನದಿಂದ ಹೇಳಲ್ಪಟ್ಟಿರುವದರಿಂದಲೂ, ಹಾಗೆಯೇ ವರ್ಧನದಲ್ಲಿ ಉಳಿದ ವೃದ್ಧದೋಷಗಳೆರಡೆಂತ ಸೂಚಿಸುವದಕ್ಕೆ ದ್ವಿವಚನ ಉಪಯೋಗಿಸಲ್ಪಟ್ಟಿರುವದರಿಂದಲೂ, ಚರಕನು ಸಹ ಒಂದು ದೋಷವನ್ನು ವೃದ್ಧಿಗೊಳಿಸುವದರಿಂದ ಎಂತ ಸ್ಪಷ್ಟವಾಗಿ ಹೇಳಿರುವದರಿಂದಲೂ, ವೃದ್ಧಿಗೊಳಿಸಬೇಕಾದ್ದು ಅಥವಾ ಕ್ಷಯಿಸಬೇಕಾದ್ದು ಒಂದೇ ದೋಷ ಎಂತ ಸ್ಪಷ್ಟವಾಗುತ್ತದ ಚಿ ಸಾ ಸಂ ದ ವಚನವು ಚರಕನ ಉಪದೇಶದ ಆಧಾರದ ಮೇಲೆಯೇ ಹೊರಟದ್ದು ಮತ್ತು ಅದೇ ಅರ್ಥವುಳ್ಳದ್ದು ಆಗಿರಬೇಕು ಆದರೆ ಒಂದು ದೋಷವನ್ನು ಶಮನಮಾಡತಕ್ಕ ಔಷಧದಲ್ಲಿ ಬೇರೊಂದು ದೋಷವನ್ನು ವೃದ್ಧಿಗೊಳಿಸುವ ಗುಣ ಮತ್ತು ಒಂದು ದೋಷವನ್ನು ವೃದ್ಧಿಗೊಳಿಸುವಂಥಾದ್ದರಲ್ಲಿ ಬೇರೊಂದು ದೋಷವನ್ನು ಶಮನಮಾಡುವ ಗುಣ ಇರುವದು ಮಾತ್ರವಲ್ಲದೆ, ಒಂದು ದೋಷವನ್ನು ಹೆಚ್ಚಿಸಿ, ಮಿಕ್ಕೆರಡನ್ನು ಶಮನಮಾಡುವ ಮತ್ತು ಒಂದನ್ನು ಕಡಿಮೆ ಮಾಡಿ, ಮಿಕ್ಕೆರಡನ್ನು ವೃದ್ಧಿಗೊಳಿಸುವ ಔಷಧಗಳು ಇವೆ ಉದಾಹರಣವಾಗಿ, ಮಧುರದಿಂದ ಕಫವೃದ್ಧಿ ಮತ್ತು ವಾತಪಿತ್ತಗಳ ಶಮನ, ತಿಕ್ತ-ಕಷಾಯಗಳಿಂದ ವಾತವೃದ್ಧಿ ಮತ್ತು ಪಿತ್ತಕಫಗಳ ಶಮನ, ಅಮ್ಲಲವಣಗಳಿಂದ ವಾತಶಮನ ಮತ್ತು ಪಿತ್ತಕಫಗಳ ವೃದ್ಧಿ, ಉಂಟಾಗುತ್ತವೆ ಈ ವಿಚಾರದ ಮೇಲೆ ಹೀನ-ಮಧ್ಯ-ವೃದ್ಧ ಸ್ಥಿತಿಯಲ್ಲಿರುವ ದೋಷಗಳನ್ನು ಸಮಪಡಿಸುವದಕ್ಕೆ ಬೇಕಾದ ಹಾಗೆ ಔಷಧಗಳನ್ನು ಉಪಯೋಗಿಸಬೇಕೆಂಬದೇ ಮೇಲಿನ ಉಪದೇಶಗಳ ಮುಖ್ಯ ತಾತ್ಪರ್ಯವಾಗಿರಬೇಕು

ಅಂಶಾಂಶಂ ಯತ್ರ ದೋಷಾಣಾಂ ವಿವೇಕ್ತುಂ ನೈವ ಶಕ್ನುಯಾತ್ |
ಕ್ರಿಯಾಂ ಸಾಧಾರಣೀಂ ತತ್ರ ವಿದಧೀತ ಚಿಕಿತ್ಸಕಃ ||

ಲಂಘನಂ ವಾಲುಕಾಸ್ವೇದೋ ನಸ್ಯಂ ನಿಷ್ಠೀವನಂ ತಥಾ |
ಅವಲೇಹಾಂಜನಂ ಚೈವ ಪ್ರಾಕ್ಪ್ರಯೋಜ್ಯಂ ತ್ರಿದೋಷಜೇ ||
ಕ್ರಿಯಾಭಿಸ್ತುಲ್ಯರೂಪಾಭಿಃ ಕ್ರಿಯಾಸಾಂಕರ್ಯಮಿಷ್ಯತೇ |
ಭಿನ್ನರೂಪತಯಾ ತಾಸ್ತು ನ ಹಿ ಕುರ್ವನ್ತಿ ದೂಷಣಮ್ ||
(ಭಾ. ಪ್ರ. 291)

(ಸನ್ನಿಪಾತದಲ್ಲಿ) ದೋಷಗಳ ಅಂಶಾಂಶ ಭೇದಗಳನ್ನು ಗೊತ್ತುಮಾಡಲಿಕ್ಕೆ ಸಾಧ್ಯವಾಗದಲ್ಲಿ, ವೈದ್ಯನು (ಮೂರಕ್ಕೂ) ಸಾಧಾರಣವಾದ ಪ್ರತಿಕ್ರಿಯೆಯನ್ನು ವಿಧಿಸತಕ್ಕದ್ದು. ತ್ರಿದೋಷಜ ಜ್ವರದಲ್ಲಿ ಮುಂದಾಗಿ ಲಂಘನ, ವಾಲುಕಾಸ್ವೇದ ಎಂಬ ಬೆವರಿಸುವ ಕ್ರಮ, ನಸ್ಯ, ಕಫವನ್ನು ಉಗುಳಿಸುವದು, ನೆಕ್ಕುವ ಮದ್ದು ಮತ್ತು ಅಂಜನ, ಇವುಗಳನ್ನು ಪ್ರಯೋಗಿಸಬೇಕು. ಸಮಾನಗುಣವುಳ್ಳ ಬೇರೆ ಬೇರೆ ಪ್ರತಿಕ್ರಿಯೆಗಳನ್ನು ಒಟ್ಟಾಗಿ ನಡಿಸುವದು ಅಗತ್ಯವಾಗುತ್ತದೆ. ಅವುಗಳ ರೂಪಭೇದದಿಂದ ದೋಷ ಉಂಟಾಗುವದಿಲ್ಲ.

ಷರಾ ಕೊಟ್ಟ ಔಷಧದ ವೇಗ ಶಾಂತವಾಗದೆ, ಹೊಸ ಔಷಧವನ್ನು ಕೊಡಕೂಡದೆಂಬ ಸೂತ್ರವು ಈ ಉಪದೇಶಕ್ಕೆ ಯಾಕೆ ವಿರುದ್ಧವಲ್ಲ ಎಂಬದನ್ನು ಕಡೇ ಶ್ಲೋಕವು ವರ್ಣಿಸಿದ್ದಾಗಿರುತ್ತದೆ

67. ಪಾಕ್ಯಂ ಶೀತಕಷಾಯಂ ವಾ ಮುಸ್ತಪರ್ಪಟಕಂ ಪಿಬೇತ್ |
ಸನಾಗರಂ ಪರ್ಪಟಕಂ ಪಿಬೇದ್ವಾ ಸದುರಾಲಭಮ್ ||
ಕಿರಾತತಿಕ್ತಕಂ ಮುಸ್ತಂ ಗುಡೂಚೀವಿಶ್ವಭೇಷಜಮ್ |
ಪಾಠಾಮುಶೀರಂ ಸೋದೀಚ್ಯಂ ಪಿಬೇದ್ವಾ ಜ್ವರಶಾನ್ತಯೇ ||
ಜ್ವರಘ್ನಾ ದೀಪನಾಶ್ಚೈತೇ ಕಷಾಯಾ ದೋಷಪಾಚನಾಃ |
ತೃಷ್ಣಾರುಚಿಪ್ರಶಮನಾ ಮುಖವೈರಸ್ಯನಾಶನಾಃ || (ಚ. 462)

ಸಾಮಾನ್ಯ ದೋಷ ಪಾಚನ ಕಷಾಯ

(1) ಭದ್ರಮುಷ್ಟಿ ಮತ್ತು ಪರ್ಪಾಟಕ, (2) ಶುಂಠಿ ಮತ್ತು ಪರ್ಪಾಟಕ, (3) ಪರ್ಪಾಟಕ ಮತ್ತು ಬಳ್ಳಿತುರಚನ ಬೇರು, (4) ನೆಲಬೇವು, ಭದ್ರಮುಷ್ಟಿ, ಅಮೃತಬಳ್ಳಿ ಮತ್ತು ಶುಂಠಿ, ಅಥವಾ (5) ಪಾಡಾವಳಿಗಡ್ಡೆ, ಲಾಮಂಚ ಮತ್ತು ಮುಡಿವಾಳ, ಇವುಗಳ ಕಷಾಯವನ್ನು ಪಾಕಮಾಡಿಯಾಗಲಿ, ಶೀತವಾಗಿಯಾಗಲಿ, ಮಾಡಿ ಜ್ವರಶಮನಕ್ಕಾಗಿ ಕುಡಿಯತಕ್ಕದ್ದು. ಈ ಕಷಾಯಗಳಿಂದ ಅಗ್ನಿದೀಪನ ಮತ್ತು ದೋಷಪಾಚನ ಉಂಟಾಗಿ, ಜ್ವರವು ನಾಶವಾಗುತ್ತದೆ, ಬಾಯಾರಿಕೆಯೂ ಅರುಚಿಯೂ ಶಮನವಾಗುತ್ತವೆ ಮತ್ತು ಬಾಯಿಯ ರಸವಿಕಾರ ಪರಿಹಾರವಾಗುತ್ತದೆ.

ಷರಾ. ಶೀತಕಷಾಯದ ಕ್ರಮಕ್ಕೆ 1ನೇ ಭಾಗದ XX-19 ನೋಡಿ.

ನಾಗರಂ ದೇವಕಾಷ್ಠಂ ಚ ಧಾನ್ಯಕಂ ಬೃಹತೀದ್ವಯಮ್ |
ದದ್ಯಾತ್ಪಾಚನಕಂ ಪೂರ್ವಂ ಜ್ವರಿತಾನಾಂ ಜ್ವರಾಪಹಮ್ ||
(ಚಿ. ಸಾ. ಸಂ. 19)

ಶುಂಠಿ, ದೇವದಾರ, ಕೊತ್ತುಂಬರಿ, ಗುಳ್ಳದ ಬೇರು, ಕಿರಿಗುಳ್ಳದ ಬೇರು, ಇವುಗಳ ಕಷಾಯವನ್ನು ಜ್ವರರೋಗದವರಿಗೆ ಮುಂದಾಗಿ, ಪಾಚನವಾಗಿಯೂ ಜ್ವರಹರವಾಗಿಯೂ, ಕೊಡತಕ್ಕದ್ದು.

68. ಪಿಪ್ಪಲೀಸಾರಿವಾದ್ರಾಕ್ಷಾಶತಪುಷ್ಪಾಹರೇಣುಭಿಃ |
ಕೃತಃ ಕಷಾಯಃ ಸಗುಡೋ ಹನ್ಯಾಚ್ಛ್ವಸನಜಂ ಜ್ವರಮ್ ||
ವಾತಜ್ವರಕ್ಕೆ ಕಷಾಯಾದಿ ಶೃತಶೀತಕಷಾಯಂ ವಾ ಗುಡೂಚ್ಯಾಃ ಪೇಯಮೇವ ತು |
ಬಲಾದರ್ಭಶ್ವದಂಷ್ಟ್ರಾಣಾಂ ಕಷಾಯಂ ಪಾದಶೇಷಿತಮ್ ||
ಶರ್ಕರಾಘೃತಸಂಯುಕ್ತಂ ಪಿಬೇದ್ವಾತಜ್ವರಾಪಹಮ್ |
ಶತಪುಷ್ಪಾ ವಚಾ ಕುಷ್ಠಂ ದೇವದಾರುಹರೇಣುಕಾಃ ||
ಕುಸ್ತುಂಬುರೂಣಿ ನಲದಂ ಮುಸ್ತಂ ಚೈವಾಶು ಸಾಧಯೇತ್ |
ಕ್ಷೌದ್ರೇಣ ಸಿತಯಾ ಚಾಪಿ ಯುಕ್ತಃ ಕ್ವಾಥೋ ಽನಿಲಾತ್ಮಕೇ ||
ದ್ರಾಕ್ಷಾಗುಡೂಚೀಕಾಶ್ಮರ್ಯತ್ರಾಯಮಾಣಾಃ ಸಸಾರಿವಾಃ |
ನಿಃಕ್ವಾಥ್ಯ ಸಗುಡಂ ಕ್ವಾಥಂ ಪಿಬೇದ್ವಾತಕೃತೇ ಜ್ವರೇ ||
ಗುಡೂಚ್ಯಾಃ ಸ್ವರಸೋ ಗ್ರಾಹ್ಯಃ ಶತಾವರ್ಯಾಶ್ಚ ತತ್ಸಮಃ |
ನಿಹನ್ಯಾತ್ಸಗುಡಃ ಪೀತಃ ಸದ್ಯೋ ಽನಿಲಕೃತಂ ಜ್ವರಮ್ ||
ಘೃತಾಭ್ಯಂಗಸ್ವೇದಲೇಪಾನವಸ್ಥಾಸು ಚ ಯೋಜಯೇತ್ ||
(ಸು. 766-767)

(1) ಹಿಪ್ಪಲಿ, ಸುಗಂಧಿಯ (ನಾಮದ) ಬೇರು, ದ್ರಾಕ್ಷೆ, ಸಬ್ಬಸಿಗೆಬೀಜ, ರೇಣುಕೆಬೀಜ, ಇವುಗಳ ಕಷಾಯವನ್ನು, ಬೆಲ್ಲ ಕೂಡಿಸಿ, ಪಾನಮಾಡುವದರಿಂದ ವಾತಜ್ವರ ಪರಿಹಾರ.

(2) ಅಮೃತಬಳ್ಳಿಯನ್ನು ಬೇಯಿಸಿ ಬತ್ತಿಸಿದ ಕಷಾಯವನ್ನು, ಅಥವಾ ಅದರ ಶೀತ ಕಷಾಯವನ್ನು ಕುಡಿಯಬೇಕು.

(3) ಕಲ್ಲಂಗಡಲೆಬೇರು, ದರ್ಭೆಬೇರು, ನೆಗ್ಗಿಲಮುಳ್ಳು, ಇವುಗಳಿಂದ ಕಾಲಂಶಕ್ಕೆ ಬತ್ತಿಸಿ ಮಾಡಿದ ಕಷಾಯವನ್ನು, ಸಕ್ಕರೆ ಮತ್ತು ತುಪ್ಪ ಕೂಡಿಸಿಕೊಂಡು, ಕುಡಿಯುವದರಿಂದ ವಾತಜ್ವರ ಪರಿಹಾರ.

(4) ಸಬ್ಬಸಿಗೆ, ಒಜೆ, ಚಂಗಲಕೋಷ್ಠ, ದೇವದಾರ, ರೇಣುಕೆಬೀಜ, ಕೊತ್ತುಂಬರಿ, ಲಾಮಂಚ, ಭದ್ರಮುಷ್ಟಿ, ಇವುಗಳ ಕಷಾಯವನ್ನು, ಜೇನು ಮತ್ತು ಸಕ್ಕರೆ ಕೂಡಿಸಿಕೊಂಡು, ವಾತಜ್ವರದಲ್ಲಿ ಪಾನಮಾಡುವದು.

(5) ದ್ರಾಕ್ಷೆ, ಅಮೃತಬಳ್ಳಿ, ಕಾಶ್ಮೀರ (ಮಲ. ಕುಮಲ್), ತ್ರಾಯಮಾಣಾ, ನಾಮದ (ಸುಗಂಧಿ)ಬೇರು, ಇವುಗಳನ್ನು ಕುದಿಸಿ ಮಾಡಿದ ಕಷಾಯವನ್ನು, ಬೆಲ್ಲ ಸಮೇತವಾಗಿ, ವಾತಜ್ವರದಲ್ಲಿ ಪಾನಮಾಡುವದು.

(6) ಅಮೃತಬಳ್ಳಿಯ ರಸವನ್ನೂ ಶತಾವರಿರಸವನ್ನೂ ಸಮಪಾಲು ಕೂಡಿಸಿ ಬೆಲ್ಲದೊಂದಿಗೆ ಪಾನಮಾಡಿದ್ದಲ್ಲಿ ವಾತಜ್ವರವು ಕೂಡಲೇ ನಾಶವಾಗುವದು.

ಇದಲ್ಲದೆ ಅವಸ್ಥೆ ನೋಡಿಕೊಂಡು ಘೃತಪಾನ, ಅಭ್ಯಂಗ, ಬೆವರಿಸುವ ವಿಧಿ ಮತ್ತು ಲೇಪ, ಇವುಗಳನ್ನು ಉಪಯೋಗಿಸಬೇಕು.

ಷರಾ: ಇವೆಲ್ಲ ದೋಷಪಾಚನಾನಂತರ ಕೊಡತಕ್ಕ ಸಂಶಮನ ಕಷಾಯಗಳು.

ಬಿಲ್ವಾದೇಃ ಪಂಚಮೂಲಸ್ಯ ಕ್ವಾಥಃ ಸ್ಯಾದ್ವಾತಿಕಜ್ವರೇ |
ಪಾಚನಂ ಪಿಪ್ಪಲೀಮೂಲಗುಡೂಚೀವಿಶ್ವಜೋ ऽಧವಾ ||
(ಚಿ. ಸಾ. ಸಂ. 20)

(7) ಬಿಲ್ವಾದಿ (ಬೃಹತ್) ಪಂಚಮೂಲಗಳ ಕಷಾಯ ಅಥವಾ ಹಿಪ್ಪಲೀಮೂಲ, ಶುಂಠಿ ಮತ್ತು ಅಮೃತಬಳ್ಳಿ, ಇವುಗಳ ಕಷಾಯ ವಾತಜ್ವರದಲ್ಲಿ ಪಾಚನೌಷಧವಾಗಿರುತ್ತದೆ.

ಕಿರಾತಾಬ್ದಾಮೃತೋದೀಚ್ಯಬೃಹತೀದ್ವಯಗೋಕ್ಷುರೈಃ |
ಸಸ್ಥಿರಾಕಲಶೀವಿಶ್ವೈಃ ಕ್ವಾಥೋ ವಾತಜ್ವರಾಪಹಃ ||
ಪಂಚಮೂಲೀ ಬಲಾ-ರಾಸ್ನಾ-ಕುಲತ್ಥೈಃ ಸಹ ಪೌಷ್ಕರೈಃ |
ಪರ್ವಭೇದಂ ಶಿರಃಕಂಪಂ ನಿಹನ್ತಿ ಪವನಜ್ವರಮ್ ||
ಪಿಪ್ಪಲೀ ಶಾರಿವಾ ದ್ರಾಕ್ಷಾ ಬಲಾ ಚಾಂಶುಮತೀ ತಥಾ |
ಏಷೋ ऽಪಿ ಪರಮಃ ಸಿದ್ಧೋ ವಾತಜ್ವರವಿನಾಶನಃ ||
(ಚಿ. ಸಾ. ಸಂ. 20)

(8) ನೆಲಬೇವು, ಭದ್ರಮುಷ್ಟಿ, ಅಮೃತಬಳ್ಳಿ, ಲಾಮಂಚ, ಗುಳ್ಳದ ಬೇರು, ಕಿರಿಗುಳ್ಳದ (ಕಲ್ಲಂಟೆ) ಬೇರು, ನೆಗ್ಗಿಲಮುಳ್ಳು, ಮೂವೆಲೆಬೇರು, ಓರೆಲೆಬೇರು, ಶುಂಠಿ, ಇವುಗಳ ಕಷಾಯವು ವಾತಜ್ವರಹರ.

(9) (ಮಹತ) ಪಂಚಮೂಲಗಳು, ಕಲ್ಲಂಗಡಲೆಬೇರು, ರಾಸ್ಮೆಗಡ್ಡೆ (ಅರತೆ), ಹುರುಳಿ, ಪುಷ್ಕರಮೂಲ, ಇವುಗಳ ಕಷಾಯದಿಂದ ವಾತಜ್ವರ, ಗಂಟುಗಳಲ್ಲಿಯ ಅಗಲಿದ ಹಾಗಿನ ನೋವು, ತಲೆನಡುಕು, ಸಹ ಪರಿಹಾರ.

(10) ಹಿಪ್ಪಲಿ, ನಾಮದ (ಸುಗಂಧಿ) ಬೇರು, ದ್ರಾಕ್ಷೆ, ಕಲ್ಲಂಗಡಲೆಬೇರು, ಮೂವೆಲೆ ಬೇರು, ಇವುಗಳ ಕಷಾಯ ಸಹ ವಾತಜ್ವರನಾಶನಕ್ಕೆ ಉತ್ತಮವಾದ್ದು.

ಶರ್ಕರಾದಾಡಿಮಾಭ್ಯಾಂ ಚ ದ್ರಾಕ್ಷಾದಾಡಿಮಯೋಸ್ತಥಾ |
ವೈರಸ್ಯೇ ಧಾರಯೇತ್ಕಲ್ಕಂ ಗಂಡೂಷಂ ಚ ತಥಾ ಹಿತಮ್ ||
(ಚಿ. ಸಾ. ಸಂ. 21)

(11) ದಾಳಿಂಬದ ಬೀಜ ಮತ್ತು ಸಕ್ಕರೆ, ಅಥವಾ ದ್ರಾಕ್ಷೆ ಮತ್ತು ದಾಳಿಂಬದ ಬೀಜ, ಇವುಗಳ ಕಲ್ಕವನ್ನು ಬಾಯಿಯಲ್ಲಿಟ್ಟುಕೊಂಡರೆ, ಅಥವಾ ಆ ಕಲ್ಕಗಳನ್ನು ಹಿಂಡಿ ತೆಗೆದ ರಸಗಳಿಂದ (ಅಥವಾ ಅವುಗಳ ಕಷಾಯದಿಂದ) ಗಂಡೂಷಮಾಡಿದರೆ, ಬಾಯಿ ಒಣಗಿರುವ ದೋಷ (ಅಥವಾ ರುಚಿಯ ವಿಕಾರ) ಪರಿಹಾರವಾಗುವದು.

ದುರಾಲಭಾನಾಗರತಿಕ್ತಪಾಠಾಶಠೀವೃಷೈರಂಡಜಟಾಕಷಾಯಃ |
ಪೀತಃ ಸಶೂಲಂ ಶಮಯೇಜ್ಜ್ವರಂ ಚ ಸಶ್ವಾಸಕಾಸಂ ಪವನಪ್ರಸೂತಮ್ ||
ಭೂನಿಂಬಮುಸ್ತಾಜಲಕಂಟಕಾರಿದ್ವಯಾಮೃತಾಗೋಕ್ಷುರನಾಗರಾ-
ಣಾಮ್ |
ಸಶಾಲಿಪರ್ಣೀದ್ವಯಪೌಷ್ಕರಾಣಾಂ ಕ್ವಾಥಂ ಪಿಬೇದ್ವಾತಭವಜ್ವರಾರ್ತಃ ||

ಗುಡೂಚೀ ಸಾರಿವಾ ದ್ರಾಕ್ಷಾ ಬಲಾ ಚಾಂಶುಮತೀ ತಥಾ |
ಏಷೋ ऽಪಿ ಪರಮಃ ಸಿದ್ಧೋ ವಾತಜ್ವರವಿನಾಶನಃ ||
ಗ್ರಂಥಿಕಂ ಪರ್ಪಟೋ ವಾಸಾ ಭಾರ್ಂಗೀ ವಿಶ್ವಾ ಗುಡೂಚಿಕಾ |
ಏಭಿಃ ಸುಸಾಧಿತಂ ತೋಯಂ ತೀವ್ರವಾತಜ್ವರಾಪಹಮ್ ||
ಅಮೃತಾ ನಾಗರಂ ಮುಸ್ತಾ ನಿಶಾಹ್ವಯಯವಾಸಕೈಃ |
ವಾತಜ್ವರೇ ಪ್ರದಾತವ್ಯಃ ಕೃಷ್ಣಾಯುಕ್ತಃ ಕಷಾಯಕಃ || (ನಿ ರ.)

(12) ಬಳ್ಳಿತುರಚನಬೇರು, ಶುಂಠಿ, ಕಹಿಪಡುವಲು, ಪಾಡಾವಳಿಗಡ್ಡೆ, ಕಚೋರ, ಆಡುಸೋಗೆ, ಹರಳುಬೇರು, ಇವುಗಳ ಕಷಾಯದ ಪಾನದಿಂದ ಶೂಲೆ-ಕೆಮ್ಮು-ಉಬ್ಬಸಗಳಿಂದ ಕೂಡಿಕೊಂಡ ವಾತಜ್ವರ ಶಾಂತವಾಗುತ್ತದೆ.

(13) ನೆಲಬೇವು, ಭದ್ರಮುಷ್ಟಿ, ಇರುವೇರಿ (ಅಥವಾ ಮುಡಿವಾಳ), ಗುಳ್ಳದ ಬೇರು, ಕಿರಿಗುಳ್ಳದ ಬೇರು, ಅಮೃತಬಳ್ಳಿ, ನೆಗ್ಗಿಲಮುಳ್ಳು, ಶುಂಠಿ, ಮೂವೆಲೆಬೇರು, ಓರೆಲೆಬೇರು, ಪುಷ್ಕರಮೂಲ, ಇವುಗಳ ಕಷಾಯವನ್ನು ವಾತಜ್ವರಪೀಡಿತನು ಕುಡಿಯಬೇಕು.

(14) ಅಮೃತಬಳ್ಳಿ, ಸುಗಂಧಿಬೇರು, ದ್ರಾಕ್ಷೆ, ಕಲ್ಲಂಗಡಲೆಬೇರು, ಮೂವೆಲೆಬೇರು, ಇವುಗಳ ಕಷಾಯ ಸಹ ವಾತಜ್ವರನಾಶನಕ್ಕೆ ಉತ್ತಮ

(15) ಹಿಪ್ಪಲಿಮೂಲ, ಪರ್ಪಾಟಕ, ಆಡುಸೋಗೆ, ನಿರ್ವಿಷದಬೇರು, ಶುಂಠಿ, ಅಮೃತಬಳ್ಳಿ, ಇವುಗಳ ಕಷಾಯವು ತೀವ್ರವಾದ ವಾತಜ್ವರವನ್ನು ಪರಿಹರಿಸುವದು.

(16) ಅಮೃತಬಳ್ಳಿ, ಶುಂಠಿ, ಭದ್ರಮುಷ್ಟಿ, ಅರಸಿನ, ಬಳ್ಳಿತುರಚನ ಬೇರು, ಇವುಗಳ ಕಷಾಯವನ್ನು, ಹಿಪ್ಪಲೀಚೂರ್ಣ ಕೂಡಿಸಿ, ವಾತಜ್ವರದಲ್ಲಿ ಕೊಡತಕ್ಕದ್ದು

69. ಶ್ರೀಪರ್ಣಿಚನ್ದನೋಶೀರಪರೂಷಕಮಧೂಕಜಃ |
ಶರ್ಕರಾಮಧುರೋ ಹನ್ತಿ ಕಷಾಯಃ ಪೈತ್ತಿಕಂ ಜ್ವರಮ್ ||
(ಪಿತ್ತಜ್ವರಕ್ಕೆ ಕಷಾಯಾದಿ) ಪೀತಂ ಪಿತ್ತಜ್ವರಂ ಹನ್ಯಾತ್ಸಾರಿವಾದ್ಯಂ ಸಶರ್ಕರಮ್ |
ಸಯಷ್ಟೀಮಧುಕಂ ಹನ್ಯಾತ್ತಥೈವೋತ್ಪಲಪೂರ್ವಕಮ್ ||
ಶೃತಶೀತಕಷಾಯಂ ವಾ ಸೋತ್ಪಲಂ ಶರ್ಕರಾಯುತಮ್ |
ಗುಡೂಚೀಪದ್ಮರೋಧ್ರಾಣಾಂ ಸಾರಿವೋತ್ಪಲಯೋಸ್ತಥಾ ||
ಶರ್ಕರಾಮಧುರಃ ಕ್ವಾಥಃ ಶೀತಃ ಪಿತ್ತಜ್ವರಾಪಹಃ |
ದ್ರಾಕ್ಷಾರಗ್ವಧಯೋಶ್ಚಾಪಿ ಕಾಶ್ಮರ್ಯಸ್ಯಾಥವಾ ಪುನಃ || (ಸು. 767)

(1) ಕಾಶ್ಮೀರ (ಮಲ. ಕುಮಲ್), ಶ್ರೀಗಂಧ, ಲಾಮಂಚ, ಪರೂಷಕ, ಜ್ಯೇಷ್ಠಮಧು, ಇವುಗಳ ಕಷಾಯವನ್ನು, ಸಕ್ಕರೆ ಕೂಡಿಸಿ, ಸಿಹಿಯಾಗಿ ಪಾನಮಾಡುವದರಿಂದ ಪಿತ್ತಜ್ವರ ನಾಶ.

(2) ಶಾರೀವಾದಿ ಗಣದ ಔಷಧಗಳ ಕಷಾಯವನ್ನು, ಸಕ್ಕರೆ ಕೂಡಿಸಿ, ಕುಡಿಯುವದರಿಂದ ಪಿತ್ತಜ್ವರಪರಿಹಾರ.

(3) ಉತ್ಪಲಾದಿ ಗಣದ ಔಷಧಗಳ ಕಷಾಯವನ್ನು ತಣಿಸಿ, ಜ್ಯೇಷ್ಠಮಧುವಿನ ಚೂರ್ಣ

ಕೂಡಿಸಿ, ಅಥವಾ ಅಮೃತಬಳ್ಳಿ, ತಾವರೆ, ಲೋಧ್ರ, ನೀಲತಾವರೆ, ಇವುಗಳ ತಣಿದ ಕಷಾಯಕ್ಕೆ ಸಕ್ಕರೆ ಕೂಡಿಸಿ, ಕೊಟ್ಟಲ್ಲಿ ಪಿತ್ತಜ್ವರನಾಶ.

(4) ಸುಗಂಧಿ (ನಾಮದ) ಬೇರು ಮತ್ತು ನೀಲತಾವರೆ, ಇವುಗಳ ಕಷಾಯಕ್ಕೆ ಸಕ್ಕರೆ ಕೂಡಿಸಿ ತಣ್ಣಗಾಗಿ ಕೊಟ್ಟಲ್ಲಿ ಪಿತ್ತಜ್ವರಪರಿಹಾರ.

(5) ದ್ರಾಕ್ಷೆ, ಕಕ್ಕೆಮರನ ಬೇರು, ಇವುಗಳ ಕಷಾಯವನ್ನು, ಅಥವಾ ಕಾಶ್ಮೀರ (ಶಿವನಿ)ದ ಕಷಾಯವನ್ನು ತಣಿಸಿ, ಸಕ್ಕರೆ ಕೂಡಿಸಿ, ಸೀಯಾಗಿ ಕೊಡುವದರಿಂದ ಪಿತ್ತಜ್ವರ ದೂರವಾಗುವದು.

ಕಲಿಂಗಂ ಕಟ್ಫಲಂ ಮುಸ್ತಂ ಪಾಠಾ ಕಟುಕರೋಹಿಣೀ |
ಪಕ್ವಂ ಸಶರ್ಕರಂ ಪೀತಂ ಪಾಚನಂ ಪೈತ್ತಿಕೇ ಜ್ವರೇ ||
ದುರಾಲಭಾ-ಪರ್ಪಟಕ-ಪ್ರಿಯಂಗು-ಭೂನಿಂಬ - ವಾಸಾ - ಕಟುರೋಹಿಣೀ-
ನಾಮ್ |
ಜಲಂ ಪಿಬೇಚ್ಛರ್ಕರಯಾವಗಾಢಂ ತೃಷ್ಣಾಸ್ರಪಿತ್ತಜ್ವರದಾಹಯುಕ್ತಃ ||
ದ್ರಾಕ್ಷಾಭಯಾಪರ್ಪಟಕಾಬ್ದತಿಕ್ತಾಕ್ವಾಥಂ ಸಸಮ್ಯಾಕಫಲಂ ವಿದಧ್ಯಾತ್ |
ಪ್ರಲಾಪಮೂರ್ಛಾಭ್ರಮದಾಹಮೋಹತೃಷ್ಣಾನ್ವಿತೇ ಪಿತ್ತಭವೇ ಜ್ವರೇ ತು ||
ಪಟೋಲಯವಧಾನ್ಯಾಕಮಧುಕಂ ಮಧುಸಂಯುತಮ್ |
ಹನ್ತಿ ಪಿತ್ತಜ್ವರಂ ದಾಹಂ ತೃಷ್ಣಾಂ ಚೈವ ಪ್ರಮಾಥಿನೀಮ್ ||
ಪಟೋಲಯವನಿಃಕ್ವಾಥೋ ಮಧುನಾ ಮಧುರೀಕೃತಃ |
ತೀವ್ರಪಿತ್ತಜ್ವರೋನ್ಮರ್ದೀ ಪಾನತೃಟ್ದಾ(?ನಾತ್ತೃಡ್ದಾ)ಹನಾಶನಃ ||
ಗುಡೂಚ್ಯಾಮಲಕೈರ್ಯುಕ್ತಃ ಕೇವಲೋ ವಾಪಿ ಪರ್ಪಟಃ |
ಪಿತ್ತಜ್ವರಂ ಹರೇತ್ತೂರ್ಣಂ ದಾಹಶೋಷಭ್ರಮಾನ್ವಿತಮ್ ||
* * *ವಿಶ್ವಪರ್ಪಟಕೋಶೀರಘನಚನ್ದನಸಾಧಿತಮ್ |
ದದ್ಯಾತ್ಸುಶೀತಲಂ ವಾರಿ ತೃಟ್ಛರ್ದಿಜ್ವರದಾಹನುತ್ ||
ಗುಡೂಚೀ ಮುಸ್ತಧನ್ಯಾಕಂ ಮಧೂಕಂ ಕಟುರೋಹಿಣೀ |
ತೃಷ್ಣಾಶೂಲಾರುಚಿಛರ್ದಿಪಿತ್ತಜ್ವರಹರೋ ಗಣಃ ||
ಕಿರಾತಾಮೃತಧಾನ್ಯಾಕಚನ್ದನೋಶೀರಪರ್ಪಟೈಃ |
ಸಪದ್ಮಕೈಃ ಕೃತಃ ಕ್ವಾಥೋ ಹನ್ತಿ ಪಿತ್ತಭವಂ ಜ್ವರಮ್ ||
ದಾಹಹೃಲ್ಲಾಸಮರುಚಿಮುತ್ಕ್ಲೇಶವಮಧೂತ್ಕಥಾನ್ |
* * *ಚನ್ದನಂ ಮಧುಕಂ ದ್ರಾಕ್ಷಾಂ(?ಕ್ಷಾ) ಕಟುಕಾಂ(?ಕಾ) ಸದುರಾಲ-
ಭಾಮ್(?ಭಾ) ||
ಚನ್ದನಾದಿಗಣಃ ಪ್ರೋಕ್ತೋ ಹನ್ಯಾದ್ದಾಹಜ್ವರಾರುಚಿಮ್ |
ಮುದ್ಗಾನಾಮಂಜಲೀಚೂರ್ಣಂ ಷಷ್ಟೀಮಧುಕಸಾಧಿತಮ್ ||
ಪಾಕ್ಯಂ ಶೀತಕಷಾಯಂ ವಾ ಪಿಬೇತ್ಪಿತ್ತಜ್ವರಾಪಹಮ್ |
ಹ್ರೀಬೇರಂ ಧಾನ್ಯಕಂ ಮುಸ್ತಂ ಚನ್ದನಂ ಮಧುಯಷ್ಟಿಕಾ ||

ವೃಷೋಶೀರಯುತಃ ಕ್ವಾಥಃ ಶರ್ಕರಾಮಧುಸಂಯುತಃ |
ರಕ್ತಪಿತ್ತಂ ಜಯತ್ಯುಗ್ರಂ ತೃಷ್ಣಾದಾಹಜ್ವರಾಪಹಃ ||
ಭೂನಿಂಬಾತಿವಿಷಾ ಲೋಧ್ರಮುಸ್ತಕೇನ್ದ್ರಯವಾಮೃತಾಃ |
ವಾಸಕಂ ನಾಗರಂ ಬಿಲ್ವಂ ಕಷಾಯೋ ಮಾಕ್ಷಿಕಾನ್ವಿತಃ ||
ಶ್ವಾಸಂ ಕಾಸಂ ಚ ವಿಡ್ಭೇದಂ ರಕ್ತಪಿತ್ತಜ್ವರಂ ಜಯೇತ್ ||
(ಚಿ. ಸಾ. ಸಂ. 21, 22, 23)

ಹ್ರೀಬೇರಚನ್ದನೋಶೀರಘನಪರ್ಪಟಸಾಧಿತಮ್ |
ದದ್ಯಾತ್ಸುಶೀತಲಂ ವಾರಿ ತೃಟ್ಛರ್ದಿಜ್ವರದಾಹನುತ್ || (ಭಾ. ಪ್ರ 278)
ಛಿನ್ನಾಸಾರಃ ಸಿತಾಯುಕ್ತಃ ಪಿತ್ತಜ್ವರನಿಷೂದನಃ || (ನಿ. ರ.)

(6) ಕೊಡಸಿಗನ ಬೀಜ, ಕಿರುಶಿಪನಿ (ಮಲ. ಚೆರುಕುಪುಳ್), ಭದ್ರಮುಷ್ಟಿ, ಪಾಡಾವಳಿ ಗಡ್ಡೆ, ಕಟುಕರೋಹಿಣೀ, ಇವುಗಳ ಕಷಾಯವನ್ನು, ಸಕ್ಕರೆ ಕೂಡಿಸಿ, ಪಾನಮಾಡುವದರಿಂದ ಪಿತ್ತಜ್ವರದಲ್ಲಿ ಪಾಚನ ಉಂಟಾಗುತ್ತದೆ.

(7) ಬಳ್ಳಿತುರಚನ ಬೇರು, ಪರ್ಪಾಟಕ, ಪ್ರಿಯಂಗು, ನೆಲಬೇವು, ಆಡುಸೋಗೆ, ಕಟುಕ ರೋಹಿಣೀ, ಇವುಗಳ ಪಾನೀಯ ಕಷಾಯವನ್ನು ಬಾಯಾರಿಕೆ, ರಕ್ತಪಿತ್ತ ಮತ್ತು ಪಿತ್ತ ಜ್ವರದ ಉರಿಯುಳ್ಳವನು, ಬೇಕಾದಷ್ಟು ಸಕ್ಕರೆ ಕೂಡಿಸಿಕೊಂಡು, ಪಾನಮಾಡಬೇಕು.

(8) ದ್ರಾಕ್ಷೆ, ಅಣಿಲೆಕಾಯಿ, ಪರ್ಪಾಟಕ, ಭದ್ರಮುಷ್ಟಿ, ಕಟುಕರೋಹಿಣೀ, ಕಕ್ಕೆ ಮರನ ಕಾಯಿ, ಇವುಗಳ ಕಷಾಯವನ್ನು ಪ್ರಲಾಪ, ಮೂರ್ಛೆ, ಭ್ರಮೆ, ಉರಿ, ತಲೆತಿರುಕು, ಬಾಯಾರಿಕೆ, ಈ ಉಪದ್ರವಗಳಿಂದ ಕೂಡಿದ ಪಿತ್ತಜ್ವರದಲ್ಲಿ ಕುಡಿಯಕೊಡಬೇಕು.

(9) ಕಹಿಪಡುವಲು, ಇಂದ್ರಜೇವಿ, ಕೊತ್ತುಂಬರಿ, ಜ್ಯೇಷ್ಠಮಧು, ಇವುಗಳ ಕಷಾಯ ವನ್ನು, ಜೇನು ಕೂಡಿಸಿಕೊಂಡು, ಕುಡಿಯುವದರಿಂದ ಉರಿ, ಬಲವಾದ ಬಾಯಾರಿಕೆ, ಮತ್ತು ಪಿತ್ತಜ್ವರ ನಾಶವಾಗುವವು.

(10) ಕಹಿಪಡುವಲು ಮತ್ತು ಇಂದ್ರಜೇವಿ, ಇವುಗಳ ಕಷಾಯವನ್ನು, ಜೇನು ಕೂಡಿಸಿ ಸಿಹಿ ಮಾಡಿಕೊಂಡು, ಪಾನಮಾಡಿದ್ದಲ್ಲಿ ತೀವ್ರವಾದ ಪಿತ್ತಜ್ವರ, ಬಾಯಾರಿಕೆ, ಮತ್ತು ಉರಿ ನಾಶವಾಗುವವು.

(11) ಅಮೃತಬಳ್ಳಿ, ನೆಲ್ಲಿಚಟ್ಟು, ಪರ್ಪಾಟಕ, ಇವುಗಳ, ಅಥವಾ ಬರೇ ಪರ್ಪಾಟಕದ, ಕಷಾಯವು ಉರಿ, ಬಾಯಿ ಒಣಗುವಿಕೆ, ಭ್ರಮೆ, ಇವುಗಳಿಂದ ಕೂಡಿಕೊಂಡ ಪಿತ್ತಜ್ವರವನ್ನು ಬೇಗನೆ ಪರಿಹರಿಸುವದು.

(12) ಶುಂಠಿ, ಪರ್ಪಾಟಕ, ಲಾಮಂಚ, ಭದ್ರಮುಷ್ಟಿ, ಶ್ರೀಗಂಧ, ಇವುಗಳ ತಣ್ಣಗಾದ ನೀರನ್ನು (ಪಾನೀಯ ಕಷಾಯವನ್ನು) ಬಾಯಾರಿಕೆ, ವಾಂತಿ, ಉರಿ, ಮತ್ತು ಜ್ವರ ನಾಶನ ಕ್ಕಾಗಿ ಕೊಡತಕ್ಕದ್ದು.

(13) ಅಮೃತಬಳ್ಳಿ, ಭದ್ರಮುಷ್ಟಿ, ಕೊತ್ತುಂಬರಿ, ಜ್ಯೇಷ್ಠಮಧು, ಕಟುಕರೋಹಿಣೀ, ಇವು ಪಿತ್ತಜ್ವರಹರವಾದ ಗಣ; ಇವುಗಳ ಕಷಾಯದಿಂದ ಬಾಯಾರಿಕೆ, ಶೂಲೆ, ಅರುಚಿ ಮತ್ತು ವಾಂತಿ, ಸಹ ಪರಿಹಾರವಾಗುವವು.

(14) ಕಿರಾತಕಡ್ಡಿ (ಅಥವಾ ನೆಲಬೇವು), ಅಮೃತಬಳ್ಳಿ, ಕೊತ್ತುಂಬರಿ, ಶ್ರೀಗಂಧ, ಲಾಮಂಚ, ಪರ್ಪಾಟಕ, ಪದ್ಮಕ, ಇವುಗಳ ಕಷಾಯದ ಸೇವನದಿಂದ ಪಿತ್ತಜ್ವರ, ಉರಿ, ಎದೆಯ ತಲ್ಲಣ, ಅರುಚಿ, ವಾಂತಿ, ವಾಕರಿಕೆ ಸಂಕಟ, ಕಫ ಬಾಯಿಂದ ಬರುವದು, ಇವು ಪರಿಹಾರವಾಗುವವು.

(15) ಶ್ರೀಗಂಧ, ಜ್ಯೇಷ್ಠಮಧು, ದ್ರಾಕ್ಷೆ, ಕಟುಕರೋಹಿಣೀ, ಬಳ್ಳಿತುರಚನ ಬೇರು, ಇವು ಚಂದನಾದಿ ಗಣ; ಇದರಿಂದ ಉರಿ, ಜ್ವರ, ಅರುಚಿ ಸಹ ನಾಶವಾಗುವವು.

(16) ಹೆಸರುಬೇಳೆಯ ಚೂರ್ಣ ಒಂದು ಪಲಕ್ಕೆ ಆರನೇ ಒಂದು ಅಂಶ (ಅರ್ಧ ತೊಲೆ) ಜ್ಯೇಷ್ಠಮಧು ಕೂಡಿಸಿ ಮಾಡಿದ ಪಕ್ವ ಕಷಾಯವನ್ನಾಗಲಿ, ಶೀತ ಕಷಾಯವನ್ನಾಗಲಿ, ಪಿತ್ತಜ್ವರಪರಿಹಾರಕ್ಕಾಗಿ ಕುಡಿಯಬೇಕು.

(17) ಮುಡಿವಾಳ, ಕೊತ್ತುಂಬರಿ, ಭದ್ರಮುಷ್ಟಿ, ಶ್ರೀಗಂಧ, ಜ್ಯೇಷ್ಠಮಧು, ಆಡುಸೋಗೆ, ಲಾಮಂಚ, ಇವುಗಳ ಕಷಾಯವನ್ನು, ಜೇನು ಮತ್ತು ಸಕ್ಕರೆ ಸಮೇತವಾಗಿ, ಪಾನ ಮಾಡಿದ್ದಲ್ಲಿ ಉಗ್ರವಾದ ರಕ್ತಪಿತ್ತ, ಉರಿ, ಜ್ವರ, ಬಾಯಾರಿಕೆ, ಸಹ ತೊಲಗುವವು.

(18) ನೆಲಬೇವು, ಅತಿವಿಡೆ, ಲೋಧ್ರ, ಭದ್ರಮುಷ್ಟಿ, ಇಂದ್ರಜೇವಿ, ಅಮೃತಬಳ್ಳಿ, ಆಡುಸೋಗೆ, ಶುಂಠಿ, ಬಿಲ್ವಪತ್ರೆಬೇರು, ಇವುಗಳ ಕಷಾಯವನ್ನು, ಜೇನು ಕೂಡಿಸಿಕೊಂಡು, ಪಾನ ಮಾಡುವದರಿಂದ ಉಬ್ಬಸ, ಕೆಮ್ಮು, ಮಲದ ಸಡಿಲಿಕೆ, ರಕ್ತಪಿತ್ತ, ಜ್ವರ ಸಹ ಜಯಿಸಲ್ಪಡುವವು.

ಷರಾ ಅತಿವಿಡೆಯಲ್ಲಿ ಅಲ್ಪ ವಿಷವಿರುವದರಿಂದ ಅದನ್ನು ಪ್ರಮಾಣದಲ್ಲಿ ತಗ್ಗಿಸಿ ಸೇರಿಸುವದು ಪ್ರಶಸ್ತ. ಅದು ಉಪವಿಷ, ಅದನ್ನು ಗೋಮಯದ ಕಷಾಯದಲ್ಲಿ ದೋಲಾಯಂತ್ರ ಕ್ರಮದಿಂದ ಬೇಯಿಸಿ, ತೊಳೆದು, ಬಿಸಿಲಿನಲ್ಲಿ ಒಣಗಿಸಿ, ಉಪಯೋಗಿಸಬೇಕೆಂತ ಧ. ನಿ (ಪು 8)

(19) ಮುಡಿವಾಳ, ಶ್ರೀಗಂಧ, ಲಾಮಂಚ, ಭದ್ರಮುಷ್ಟಿ, ಪರ್ಪಾಟಕ, ಇವುಗಳ ನೀರನ್ನು (ಪಾನೀಯ ಕಷಾಯವನ್ನು), ಒಳ್ಳೆ ತಣ್ಣಗೆ ಮಾಡಿ, ಕೊಟ್ಟಲ್ಲಿ ಬಾಯಾರಿಕೆ, ಉರಿ, ವಾಂತಿ ಮತ್ತು ಜ್ವರ ನಾಶವಾಗುವವು.

(20) ಅಮೃತಬಳ್ಳಿ ಸತ್ವವನ್ನು ಸಕ್ಕರೆ ಕೂಡಿಸಿ ತಿನ್ನುವದರಿಂದ ಪಿತ್ತಜ್ವರಪರಿಹಾರ.

ಷರಾ ಈ ಸತ್ವವನ್ನು ತೆಗೆಯುವ ಕ್ರಮಕ್ಕೆ ಹಿಂದಿನ 23ನೇ ಪುಟ ನೋಡಿ ಶುದ್ಧ ಸತ್ವದಿಂದ ಹೊತ್ತಿಗೆ ೧—೨ ಹಣತೂಕ ಕೊಟ್ಟರೆ ಸಾಕು

ಮಹಾದ್ರಾಕ್ಷಾದಿ ಕಷಾಯ.

ದ್ರಾಕ್ಷಾಚನ್ದನಪದ್ಮಾನಿ ಮುಸ್ತಾ ತಿಕ್ತಾ ऽಮೃತಾಪಿ ಚ |
ಧಾತ್ರೀ ಬಾಲಮುಶೀರಂ ಚ ಲೋಧ್ರೇನ್ದ್ರಯವಪರ್ಪಟಾಃ ||
ಪರೂಷಕಂ ಪ್ರಿಯಂಗುಶ್ಚ ಯವಾಸೋ ವಾಸಕಸ್ತಥಾ |
ಮಧುಕಂ ಕುಲಕಂ ಚಾಪಿ ಕಿರಾತೋ ಧಾನ್ಯಕಂ ತಥಾ ||
ಏಷಾಂ ಕ್ವಾಥೋ ನಿಹನ್ತ್ಯೇವ ಜ್ವರಂ ಪಿತ್ತಸಮುತ್ಥಿತಮ್ |
ತೃಷ್ಣಾಂ ದಾಹಂ ಪ್ರಲಾಪಂ ಚ ರಕ್ತಪಿತ್ತಂ ಭ್ರಮಂ ಕ್ಲಮಮ್ ||
ಮೂರ್ಚ್ಛಾಂ ಛರ್ದಿಂ ತಥಾ ಶೂಲಂ ಮುಖಶೋಷಮರೋಚಕಮ್ |
ಕಾಸಂ ಶ್ವಾಸಂ ಚ ಹೃಲ್ಲಾಸಂ ನಾಶಯೇನ್ನಾತ್ರ ಸಂಶಯಃ || (ಭಾ. ಪ್ರ. 278)

(21) ದ್ರಾಕ್ಷೆ, ಶ್ರೀಗಂಧ, ತಾವರೆಹೂವು, ಭದ್ರಮುಷ್ಟಿ, ಕಟುಕರೋಹಿಣೀ, ಅಮೃತಬಳ್ಳಿ, ನೆಲ್ಲಿಚಟ್ಟು, ಮುಡಿವಾಳ, ಲಾಮಂಚ, ಲೋಧ್ರ, ಇಂದ್ರಜೇವಿ, ಪರ್ಪಾಟಕ, ಪರೂಷಕ,

ಪ್ರಿಯಂಗು, ಬಳ್ಳಿತುರಚಿನ ಬೇರು, ಆಡುಸೋಗೆ, ಜ್ಯೇಷ್ಠಮಧು, ಕಹಿಪಡುವಲು, ಕಿರಾತ ಕಡ್ಡಿ (ಅಥವಾ ನೆಲಬೇವು), ಕೊತ್ತುಂಬರಿ, ಇವುಗಳ ಕಷಾಯವು ಪಿತ್ತಜ್ವರವನ್ನೂ, ಬಾಯಾರಿಕೆ, ಉರಿ, ಪ್ರಲಾಪ, ರಕ್ತಪಿತ್ತ, ಭ್ರಮೆ, ಆಯಾಸ, ಮೂರ್ಛೆ, ವಾಂತಿ, ಶೂಲೆ, ಬಾಯಿ ಒಣಗುವಿಕೆ, ಅರುಚಿ, ಕೆಮ್ಮು, ಉಬ್ಬಸ ಮತ್ತು ಬಿಕ್ಕಟ್ಟು, ಇವುಗಳನ್ನೂ ನಾಶಮಾಡುವದರಲ್ಲಿ ಸಂಶಯವಿಲ್ಲ.

ಪಥ್ಯಾಲೇಹ.

ಪಥ್ಯಾಂ ತೈಲಘೃತಕ್ಷೌದ್ರೈರ್ಲಿಹೇದ್ದಾಹಜ್ವರಾಪಹಾಮ್ ।
ಕಾಸಾಸೃಕ್‌ಪಿತ್ತವೀಸರ್ಪಶ್ವಾಸಾನ್ ಹನ್ತಿ ವಮೀನಪಿ ॥
(ಚಿ. ಸಾ. ಸಂ. 23)

(22) ಅಣಿಲೆಕಾಯಿಚೂರ್ಣವನ್ನು ಎಳ್ಳೆಣ್ಣೆ, ತುಪ್ಪ, ಮತ್ತು ಜೇನು, ಇವುಗಳಲ್ಲಿ ಕಲಸಿ ನೆಕ್ಕುವದರಿಂದ ಉರಿಜ್ವರ ಪರಿಹಾರವಾಗುವದಲ್ಲದೆ, ಕೆಮ್ಮು, ರಕ್ತಪಿತ್ತ, ವಿಸರ್ಪ, ಉಬ್ಬಸ, ಮತ್ತು ಜ್ವಾಲೆಗಳು ನಾಶವಾಗುವವು.

ಗಂಡೂಷಗಳು

ಕೇಸರಂ ಮಾತುಲುಂಗಸ್ಯ ಮಧುಸೈಂಧವಸಂಯುತಮ್ ।
ಶರ್ಕರಾದಾಡಿಮಾಭ್ಯಾಂ ವಾ ದ್ರಾಕ್ಷಾಖರ್ಜೂರಯೋಸ್ತಥಾ ॥
ವೈರಸ್ಯೇ ಧಾರಯೇತ್ಕಲ್ಕಂ ಗಂಡೂಷಶ್ಚ ಯಥಾಹಿತಮ್ ॥ (ಸು. 767)

(23) ಬಾಯಿ ಒಣಗುವಿಕೆ (ಅಥವಾ ರುಚಿವಿಕಾರ) ಇರುವಲ್ಲಿ, ಮಾದಳದ ಕೇಸರವನ್ನು, ಜೇನು ಮತ್ತು ಸೈಂಧವಲವಣ ಕೂಡಿಸಿಕೊಂಡು, ಅಥವಾ ದಾಳಿಂಬದ ಬೀಜ, ಸಕ್ಕರೆ, ದ್ರಾಕ್ಷೆ ಮತ್ತು ಖರ್ಜೂರ, ಇವುಗಳನ್ನು, ಒಟ್ಟಾಗಿ ಅರೆದು ಮಾಡಿದ ಕಲ್ಕವನ್ನು ಬಾಯಿಯೊಳಗೆ ಇಟ್ಟುಕೊಳ್ಳಬೇಕು; ಹಿತವಾದರೆ, (ಅವುಗಳ ರಸದಿಂದಲೊ, ಕಷಾಯದಿಂದಲೊ) ಗಂಡೂಷವನ್ನು ಮಾಡಬಹುದು

ಹರೀತಕೀ ಪ್ರಿಯಂಗುಶ್ಚ ಪಿಪ್ಪಲೀ ಲೋಧ್ರಮೇವ ಚ ।
ದಾರ್ವೀ ಹರಿದ್ರಾ ತೇಜೋಹ್ವಾ ಸಕ್ಷೌದ್ರಾ ಮುಖಧಾವನೇ ॥
ಏತೇನ ಕಟುಭಾವಾಚ್ಚ ಮುಖರೋಗಶ್ಚ ಶಾಮ್ಯತಿ ।
ವಕ್ತ್ರಂ ವಿಶದತಾಮೇತಿ ಭಕ್ತಛನ್ದಶ್ಚ ಜಾಯತೇ ॥ (ಚಿ. ಸಾ. ಸಂ. 23)

(24) ಅಣಿಲೆಕಾಯಿ, ಪ್ರಿಯಂಗು, ಹಿಪ್ಪಲಿ, ಲೋಧ್ರ, ಮರದರಸಿನ, ಅರಸಿನ, ತೇಜೋವತೀ (ಮೆಲ. ಚರುಪುನ್ನರಿ), ಇವುಗಳ ಕಷಾಯವನ್ನು, ಜೇನು ಕೂಡಿಸಿ, ಬಾಯಿ ತೊಳೆಯುವದಕ್ಕೆ ಉಪಯೋಗಿಸಬೇಕು. ಇದರಲ್ಲಿ ಕಾರವಿರುವದರಿಂದ ಬಾಯಿಯ ರೋಗಗಳು ಶಾಂತವಾಗಿ, ಬಾಯಿ ಸ್ವಚ್ಛವಾಗುತ್ತದೆ ಮತ್ತು ಹಸಿವು ಉಂಟಾಗುತ್ತದೆ.

ತಲೆಗೆ ಲೇಪ

ಪದ್ಮಕಂ ಮಧುಕಂ ದ್ರಾಕ್ಷಾ ಪುಣ್ಡರೀಕಮಥೋತ್ಪಲಮ್ ।
ಯವಾನ್ ಭೃಷ್ಟಾನುಶೀರಾಣಿ ಸಮಂಗಾಂ ಕಾಶ್ಮರೀಫಲಮ್ ॥
ಜಿಹ್ವಾ-ತಾಲು-ಗಲ-ಕ್ಲೋಮಶೋಷೇ ಮೂರ್ಧ್ನಿ ಚ ದಾಪಯೇತ್ ॥
(ಸು. 767)

ಪದ್ಮಕ, ಜ್ಯೇಷ್ಠಮಧು, ದ್ರಾಕ್ಷೆ, ಬಿಳೀತಾವರೆ, ನೀಲತಾವರೆ, ಹುರಿದ ಯವೆಧಾನ್ಯ, ಲಾಮಂಚ, ನಾಚಿಕೆಸೊಪ್ಪಿನ (ಮುಟ್ಟಿದರೆ ಮುನಿಯುವ) ಗಿಡ, ಕಾಶ್ಮೀರ(ಶಿವನಿ)ಹಣ್ಣು

(ಮಲ. ಕುಮುಳ್), ಇವುಗಳ ಲೇಪವನ್ನು ನೆತ್ತಿಯ ಮೇಲೆ ಹಾಕುವದರಿಂದ ನಾಲಿಗೆ-ತಾಲು-ಕಂಠ-ಕ್ಲೋಮಗಳ ಒಣಗುವಿಕೆ ಪರಿಹಾರವಾಗುತ್ತದೆ.

ಪರಾ: ಪಾರಾಂತರ ಪ್ರಕಾರ ಪದ್ಮಕಾದಿಗಳ ಚೂರ್ಣವನ್ನು (ಕುದಿಸಿದ) ನೀರಿನಲ್ಲಿ ಕಲಸಿ ಒಂದು ರಾತ್ರಿ ಕಾಲ ಇಟ್ಟು, ಮಾರಣೆ ದಿನ ಆ ಶೀತ ಕಷಾಯವನ್ನು, ಜೇನು ಕೂಡಿಸಿಕೊಂಡು, ಕುಡಿಯಲೂ ಬಹುದು; ಮತ್ತು ಹಾಗೆ ಕುಡಿಯುವದರಿಂದ ಜ್ವರವೂ ಉರಿಯೂ ಶಾಂತವಾಗುತ್ತವೆ ಎಂತ ಅರ್ಥವಾಗುತ್ತದೆ (ನಿ ಸಂ ವ್ಯಾ 580)

ಬಾಯಾರಿಕೆಗೆ ತಣ್ಣೀರಿನ ಉಪಯೋಗ.

ಶೀತಂ ಮಧುಯುತಂ ತೋಯಮಾಕಣ್ಠಾದ್ವಾ ಪಿಪಾಸಿತಮ್ ।
ವಾಮಯೇತ್ಪಾಯಯಿತ್ವಾ ತು ತೇನ ತೃಷ್ಣಾ ಪ್ರಶಾಮ್ಯತಿ (ಸು. 767)

ಬಾಯಾರಿದವನಿಗೆ ತಣ್ಣೀರನ್ನು ಜೇನು ಯುಕ್ತವಾಗಿ ಗಂಟಲು ವರೆಗೆ ಕುಡಿಸಿ, ಕಾರಿಸಬೇಕು; ಅದರಿಂದ ಬಾಯಾರಿಕೆ ಶಾಂತವಾಗುತ್ತದೆ.

ಅಂತರ್ದಾಹಕ್ಕೆ ಶೀತಲವಾದ ಯೋಗಗಳು

ಕ್ಷೀರೈಃ ಕ್ಷೀರಿಕಷಾಯೈಶ್ಚ ಸುಶೀತೈಶ್ಚನ್ದನಾಯುತೈಃ ।
ಅನ್ತರ್ದಾಹೇ ವಿಧಾತವ್ಯಮೇತೈಶ್ಚಾನ್ಯೈಶ್ಚ ಶೀತಲೈಃ ॥ (ಸು. 767)

ಒಳಗೆ ಉರಿ ಇರುವಲ್ಲಿ ಕರಿಸುಗಂಧಿಬೇರು ಕೂಡಿಸಿ ಕಾಯಿಸಲ್ಪಟ್ಟ ಒಳ್ಳೇ ತಣ್ಣಗಾದ ಹಾಲುಗಳಿಂದಲೂ, ಹಾಲುಮರಗಳ ಚಕ್ಕೆಗಳ ಕಷಾಯಗಳಿಂದಲೂ, ಬೇರೆ ಶೀತವೀರ್ಯದ (ಕಾಕೋಲ್ಯಾದಿ ಮುಂತಾದ) ಔಷಧಗಳ (ಸ್ಪರ್ಶಕ್ಕೆ) ಶೀತಲವಾದ ಕಷಾಯಗಳಿಂದಲೂ, (ಪಾನ-ಲೇಪ-ಪರಿಷೇಕ-ಅವಗಾಹನ) ಯೋಗಗಳನ್ನು ವಿಧಿಸತಕ್ಕದ್ದು.

ಪರಾ: ಈ ವಚನದಲ್ಲಿ ಹೇಳಲ್ಪಟ್ಟ ಶೀತಲವಾದ ಯೋಗಗಳು ಹೊರಗಿನ ಪರಿಮಾರ್ಜನ(ಒರಸುವದು ಅಥವಾ ಒತ್ತುವದು)ಕ್ಕೆ ಮಾತ್ರ ಯೋಗ್ಯವಾದವೆಂತ ಕಾರ್ತಿಕಕುಂಡನು ಹೇಳುತ್ತಾನಾಗಿ ನಿ ಸಂ. ವ್ಯಾ (ಪು 580)ದಿಂದ ಕಾಣುತ್ತದೆ ಚೊಗರು ಕಷಾಯಗಳು ಮತ್ತು ಹಾಲುಗಳು ಜೀರ್ಣ ಜ್ವರದಲ್ಲಿ ನಿಷಿದ್ಧವಲ್ಲ ಮತ್ತು ಉರಿಶಮನಗುಣವುಳ್ಳವಾದಾಗ್ಯೂ, ಅವುಗಳನ್ನು ಹೊಟ್ಟೆಗೆ ಕುಡಿಯಕೊಡುವದರಿಂದ ಕೆಲವು ಅವಸ್ಥೆಗಳಲ್ಲಿ ಬಾಧಕ ಉಂಟಾಗಬಹುದು ಪಾಶ್ಚಾತ್ಯ ವೈದ್ಯರು ತಣ್ಣೀರಿನ ಅಥವಾ ನೀರ್ಗಲ್ಲಿನ ಒತ್ತಡ ಕೊಡುವ ಕ್ರಮದಲ್ಲಿ ಈ ಕಷಾಯಗಳ ಒತ್ತಡ ಕೊಡುವದರಿಂದಲೂ ಅವುಗಳಿಂದ ಪರಿಷೇಕಾವಗಾಹನ ಮಾಡಿಸುವದರಿಂದಲೂ ಸುಖ ಕಾಣಬಹುದಾದಾಗ್ಯೂ, ಅಂಥಾ ಒತ್ತಡ ಮುಂತಾದ ಹೊರಗಿನ ಚಿಕಿತ್ಸೆಯಿಂದಲೇ ಒಳಗಿನ ಉರಿಯು ಪರಿಹಾರವಾದೀತೆನ್ನುವದಕ್ಕಾಗುವದಿಲ್ಲ ಆ ಪಾಶ್ಚಾತ್ಯ ಕ್ರಮ ಹೇಗೆಂದರೆ

ರೋಗಿಯ ಮೈಬಿಸಿಯನ್ನು ಚಾಮಕ್ಕೊಮ್ಮೆ ಉಷ್ಣಪ್ರದರ್ಶಕಕಡ್ಡಿ(ಥರ್ಮೋಮಿಟರ್)ಯ ಉಪಯೋಗದಿಂದ ಪರೀಕ್ಷಿಸುತ್ತಾ ಬರುವಲ್ಲಿ, ಬಿಸಿಯು 102 ಡಿಗ್ರಿಯಷ್ಟು ಅಥವಾ ಅದಕ್ಕೆ ಮಿಕ್ಕ ಇದೆ ಎಂತ ಕಂಡಾಗ್ಗೆ,

(a) 70 ಡಿಗ್ರಿಯಷ್ಟು ತಣ್ಣಗಿನ ನೀರು ತುಂಬಿದ ಕಟಾರದಲ್ಲಿ ರೋಗಿಯನ್ನು 10 ಅಥವಾ 15 ಮಿನಿಟುಗಳ ಕಾಲ ಇರಿಸಿ, ಹೊರಗೆ ತೆಗೆದು, ಮೈಮೇಲಿನ ನೀರನ್ನು ಮೃದುವಾಗಿ ವಸ್ತ್ರದಿಂದ ಉಜ್ಜಿ ತೆಗೆದು, ಹಾಸಿಗೆಯಲ್ಲಿ ಪುನಃ ಮಲಗಿಸುವದು

(b) ಅಥವಾ ನೀರ್ಗಲ್ಲಿ(ice) ನಷ್ಟು ತಣ್ಣಗಿರುವ ನೀರಿನಲ್ಲಿ ಒಂದು ವಸ್ತ್ರವನ್ನು ತೋಯಿಸಿ, ನೀರನ್ನು ಹಿಂಡಿ ತೆಗೆದು, ಆ ವಸ್ತ್ರವನ್ನು ರೋಗಿಯ ಸುತ್ತು 10 ಅಥವಾ 15 ಮಿನಿಟಿನ ಕಾಲ ಹೊದಿಸುವದು

(c) ನೀರ್ಗಲ್ಲಿನ ಚೀಲವನ್ನು ರೋಗಿಯ ತಲೆಯ ಮೇಲೆ, ವಿಶೇಷವಾಗಿ ತಲೆನೋವು ಇರುವ ಸಂಗತಿಯಲ್ಲಿ, ಇರಿಸುವದು ಅನೇಕ ವೇಳೆ ಪ್ರಯೋಜನಕರವಾಗುತ್ತದೆ

ನೀರ್ಗಲ್ಲುಳ್ಳ ಚೀಲಗಳನ್ನು ಸಂದರ್ಭಾನುಸಾರವಾಗಿ ಎದೆಯ ಮೇಲೆ, ಅಥವಾ ಹೊಟ್ಟೆಯ ಮೇಲೆ, ತಕ್ಕಷ್ಟು ಕಾಲ ಇಡಬಹುದು

ಆಯುರ್ವೇದ ರೀತ್ಯಾ ಚಂದನದ (ಮೇಲಿನ ವಿಧಿ ಪ್ರಕಾರ ಕರಿಸುಗಂಧಿ ಬೇರಿನ) ಶೀತವಾದ ಕಷಾಯದಲ್ಲಿ ತೋಯಿಸಲ್ಪಟ್ಟ ನಿರ್ಮಲವಾದ ಪಟ್ಟೆವಸ್ತ್ರದಲ್ಲಿ ರೋಗಿಯನ್ನು ಮಲಗಿಸುವದು, ತಣ್ಣಗಾದ ಕಮಲದ ಎಲೆಮೇಲೆ ಮಲಗಿಸುವದು, ಹಿಮದ ನೀರನ್ನು ಚಿಮುಕಿಸಿ ತಣ್ಣಗೆ ಮಾಡಲ್ಪಟ್ಟ ಕೋಣೆಯಲ್ಲಿ ರೋಗಿಯನ್ನಿರಿಸುವದು, ಇತ್ಯಾದಿ ಶೀತೋಪಚಾರಗಳನ್ನು ಪಿತ್ತಜ್ವರದಲ್ಲಿ, ಉರಿಯುಂಟಾಗಿರುವಾಗ್ಗೆ, ನಡಿಸತಕ್ಕದ್ದಾಗಿರುತ್ತದೆ ಸಾಧಾರಣವಾಗಿ ಸನ್ನಿಪಾತ ಜ್ವರದಲ್ಲಿ ಇದು ನಿಷಿದ್ಧ. ಕೆಳಗಿನ 94ನೇ ಸಂಖ್ಯೆ ನೋಡಿ. ಆದರೆ ರುಗ್ದಾಹ ಸನ್ನಿಪಾತದಲ್ಲಿ ಶೀತೋಪಚಾರ ವಿಧಿಸಲ್ಪಟ್ಟದೆ. 90ನೇ ಸಂಖ್ಯೆ ನೋಡಿ. ತಲೆಬಿಸಿ ಬಹಳವಾದಾಗ್ಗೆ, ವಿಶೇಷವಾಗಿ ಬುದ್ಧಿಭ್ರಮೆ ಇದ್ದಾಗ್ಗೆ, ಕಚೋರಾದಿ ಚೂರ್ಣವನ್ನು ತಲೆಮೇಲೆ ಇಡುವದು ಪ್ರಶಸ್ತವಾಗಿ ಮಲಯಾಳದಲ್ಲಿ ಪ್ರಸಿದ್ಧವಾಗಿದೆ ಅದರ ಯೋಗ ಹೇಗೆಂದರೆ.—

ಕಚೋರಾದಿ ಚೂರ್ಣ

ಕಚೋರ, ಚಂಗಲಕೋಷ್ಠ, ಜ್ಯೇಷ್ಠಮಧು, ಇರುವೇರಿದಂಟು, ಭದ್ರಮುಷ್ಟಿ, ಕಲ್ಲಂಗಡಲೆಬೇರಿನ ಸಿಪ್ಪೆ, ನೆಲ್ಲಿಚಟ್ಟು, ಕುಂಕುಮಕೇಸರ, ಸಹಸ್ರವೇದಿ, ಶ್ರೀಗಂಧ, ರಕ್ತಚಂದನ, ಲಾಮಂಚ, ಹುಣಸೆಎಲೆಯ ನಾರು, ಮಂಜಿಷ್ಠ, ದೇವದಾರ, ಅರಳು, ಕಲ್ಮದ (ಶಿಲಾಜಿತು), ಕಂಡಿಬೆಣ್ಣೆ (ಮುರಾ), ಕಟುಕರೋಹಿಣಿ, ಪಚ್ಚೆ ಕರ್ಪೂರ, ಇವುಗಳನ್ನು ಸಮಪಾಲು ತೆಗೆದುಕೊಂಡು ಚೂರ್ಣಿಸಿ, ಆ ಚೂರ್ಣವನ್ನು ಮೊಲೆ ಹಾಲಿನಲ್ಲಿ ಕಲಸಿ, ತಲೆಮೇಲೆ ದಪ್ಪವಾಗಿ ಇಟ್ಟು, ಅದರ ಮೇಲೆ ವೀಳ್ಯದೆಲೆ ಅಥವಾ ಅಮೃತ ಬಳ್ಳಿಯ ಎಲೆಯನ್ನು ಇಟ್ಟು, ಮುಚ್ಚುವದು. ಒಣಗಿದ ಕೂಡಲೇ ತೆಗೆದು ಪುನಃ ಪುನಃ ಇಡುತ್ತಾ ಬರಬೇಕು. ಇದರಿಂದ ಜ್ವರ, ನೇತ್ರರೋಗ, ಬುದ್ಧಿಭ್ರಮೆ, ತಲೆನೋವು ಇತ್ಯಾದಿ ಪರಿಹಾರವಾಗುತ್ತವೆ.

ಈ ಚೂರ್ಣ ದೊರೆಯದಾಗ್ಗೆ ಶ್ರೀಗಂಧ ಮತ್ತು ಬಜೆ, ಇವುಗಳ ಚೂರ್ಣವನ್ನು ಹಾಲಿನಲ್ಲಿ ಅಥವಾ ನೀರಿನಲ್ಲ ಅರೆದು ಕುದಿಸಿ ತಣಿಸಿ, ತಲೆಮೇಲೆ ಇಡಬಹುದು. ಮೊಲೆಹಾಲಿನಿಂದ ಇಡುವದಾದರೆ ಕಲ್ಕವನ್ನು ಕುದಿಸುವದು ಬೇಡ.

ಸನ್ನಿಪಾತಜ್ವರಗಳಲ್ಲಿ ಮೇಲೆ ಬರೆದ 'ಕಚೂರಾದಿ' ಚೂರ್ಣದ ದ್ರವ್ಯಗಳಲ್ಲಿ ಲಾಮಂಚ ಮತ್ತು ಕರ್ಪೂರ ಬಿಟ್ಟು ಮಿಕ್ಕವುಗಳಿಗೆ, ಕಲ್ಲುನಾರು, ಕರಿಜೀರಿಗೆ, ಅರತೆ (ರಾಸ್ಮೆಗಡ್ಡೆ), ಸುಗಂಧಿಬೇರಿನ ಸಿಪ್ಪೆ, ಚಂಚಲ್ಯ (ರಾಳ), ಕುಂದುರುಕ್ಕ (ಲೋಭಾನ), ರಕ್ತಬೋಳ, ಅಫೀಮು, ಕಾವಿಕಲ್ಲು ಮತ್ತು ಜಾಯಿಕಾಯಿ, ಇವುಗಳನ್ನು ಕೂಡಿಸಿಕೊಂಡು, ಚೂರ್ಣಿಸಿ, ಆ ಚೂರ್ಣವನ್ನು ಮೊಲೆಹಾಲಿನಲ್ಲಿ ಕಲಸಿ, ತಲೆಮೇಲೆ ಮೊದಲು ಹೇಳಿದ ರೀತಿಯಲ್ಲಿ ಇಡುತ್ತಾರೆ. ಅದರಿಂದ ವಾತಪಿತ್ತದಿಂದುಂಟಾದ ತಲೆನೋವು, ಜ್ವರ, ಬುದ್ಧಿಭ್ರಮೆ, ಹಿಧ್ಮ, ನೇತ್ರ ರೋಗ, ಪೀನಸ, ಕಫರೋಗ, ಕರ್ಣರೋಗ, ಸನ್ನಿಪಾತಗಳು, ಸಹ ಪರಿಹಾರವಾಗುವವು.

ಪರಾ ಶ್ರೀಗಂಧ, ಜ್ಯೇಷ್ಠಮಧು, ಸೀಲೀವೇರು, ದ್ರಾಕ್ಷೆ, ಹೆಗ್ಗುರುಟಿಗೆಬೇರು ಮತ್ತು ಅರಸಿನ, ಇವುಗಳನ್ನು ದಾಹ ಜ್ವರದಲ್ಲಿ ಅಭ್ಯಂಗನದ ತೈಲಕ್ಕೂ, ಸರ್ವಾಂಗ ಲೇಪ ಹಾಕುವದಕ್ಕೂ ತಲೆಲೇಪಕ್ಕೂ, ಪರಿಷೇಕ-ಅವಗಾಹನ-ಸ್ನಾನಗಳ ಕಷಾಯದ ಸಿದ್ಧಿಗೂ, ಉಪಯೋಗಿಸಬೇಕಾಗಿ ಅ ಸಂ (ಪ್ರ II-104)

ಕಫಜ್ವರಕ್ಕೆ ಕಷಾಯಾದಿ

70. ಸಪ್ತಚ್ಛದಂ ಗುಡೂಚೀಂ ಚ ನಿಮ್ಬಸ್ಫೂ(?ಂಚಾ)ರ್ಜಕಮೇವ ಚ |
ಕ್ವಾಥಯಿತ್ವಾ ಪಿಬೇತ್ ಕ್ವಾಥಂ ಸಕ್ಷೌದ್ರಂ ಕಫಜೇ ಜ್ವರೇ ||
ಕಟುತ್ರಿಕಂ ನಾಗಪುಷ್ಪಂ ಹರಿದ್ರಾ ಕಟುರೋಹಿಣೀ |
ಕೌಟಜಂ ಚ ಫಲಂ ಹನ್ಯಾತ್ಸೇವ್ಯಮಾನಂ ಕಫಜ್ವರಮ್ ||
ಹರಿದ್ರಾಂ ಚಿತ್ರಕಂ ನಿಮ್ಬಮುಶೀರಾತಿವಿಷೇ ವಚಾಮ್ |
ಕುಷ್ಠಮಿನ್ದ್ರಯವಾನ್ ಮೂರ್ವಾಂ ಪಟೋಲಂ ಚಾಪಿ ಸಾಧಿತಮ್
ಪಿಬೇನ್ಮರಿಚಸಂಯುಕ್ತಂ ಸಕ್ಷೌದ್ರಂ ಕಫಜೇ ಜ್ವರೇ |
ಸಾರಿವಾತಿವಿಷಾಕುಷ್ಠಪುರಾಖ್ಯೈಃ ಸದುರಾಲಭೈಃ ||
ಮುಸ್ತೇನ ಚ ಕೃಶಃ ಕ್ವಾಥಃ ಪೀತೋ ಹನ್ಯಾತ್ಕಫಜ್ವರಮ್ |
ಮುಸ್ತಂ ವೃಕ್ಷಕಬೀಜಾನಿ ತ್ರಿಫಲಾ ಕಟುರೋಹಿಣೀ ||
ಪರೂಷಕಾಣಿ ಚ ಕ್ವಾಥಃ ಕಫಜ್ವರವಿನಾಶನಃ || (ಸು. 767, 768)

ತ್ರಿಫಲಾ ತ್ರಿವೃತಾ ಮುಸ್ತಂ ಕಟುಕಂ ಸಕಲಿಂಗಕಮ್ ।
ಪಟೋಲಾರಗ್ವಧಂ ಚೈವ ರೋಹಿಣೀ ಚಿತ್ರಕಂ ಸಮಮ್ ॥
ಕ್ವಾಥಃ ಕ್ಷೌದ್ರಯುತಃ ಶ್ಲೇಷ್ಮಜ್ವರಕಾಸಗಲಾಮಯೇ ।
ನಿಮ್ಬವಿಶ್ವಾಮೃತಾ ಭೀರು ಶಠೀ ಭೂನಿಮ್ಬಪೌಷ್ಕರಮ್ ॥
ಪಿಪ್ಪಲೀ ಬೃಹತೀ ಚೇತಿ ಕ್ವಾಥೋ ಹನ್ತಿ ಕಫಜ್ವರಮ್ । * * *
ತ್ರಿಫಲಾ ಪಟೋಲವಾಸಾಛಿನ್ನರುಹಾತಿಕ್ತರೋಹಿಣೀಷಡ್ಗ್ರಸ್ಥಾ ।
ಮಧುನಾ ಶ್ಲೇಷ್ಮಸಮುತ್ಥೇ ದಶಮೂಲೀವಾಸಕಸ್ಯ ವಾ ಕ್ವಾಥಃ ॥ * * *
ಆಮಲಕ್ಯಾಭಯಾಕೃಷ್ಣಾ(?ಷ್ಣಾಃ) ಚಿತ್ರಕಶ್ಚೇತ್ಯಯಂ ಗಣಃ ।
ಸರ್ವಜ್ವರಕಫಾತಂಕೇ ಭೇದೀ ದೀಪನಪಾಚನಃ ॥
ತಿಕ್ತಾನಿಮ್ಬವಿಷಾವ್ಯೋಷಶಕ್ರಾಹ್ವಾಭಿಃ ಶೃತಂ ಜಲಮ್ ।
ಪಿಬೇತ್ಕಫಜ್ವರಂ ಘೋರಂ ಹನ್ತಿ ಕಾಸಸಮನ್ವಿತಮ್ ॥
ಸಿನ್ಧುವಾರದಲಕ್ವಾಥಂ ಕಣಾಢ್ಯಂ ಕಫಜೇ ಜ್ವರೇ ।
ಜಂಘಯೋಶ್ಚ ಬಲಕ್ಷೀಣೇ ಕರ್ಣೇ ಚ ಪಿಹಿತೇ ಪಿಬೇತ್ ॥
(ಚಿ. ಸಾ. ಸಂ. 23, 24)

ನಿದಿಗ್ಧಿಕಾಛಿನ್ನರುಹೋಪಕುಲ್ಯಾವಿಶ್ವೌಷಧೈಃ ಸಾಧಿತಮಮ್ಬು ಪೀತಮ್ ।
ಹನ್ತಿ ಜ್ವರಶ್ವಾಸಬಲಾಸಕಾಸಶೂಲಾಗ್ನಿಮಾಂದ್ಯಂ ಜರಠಾನಿಲಂ ಚ ॥
ಮರಿಚಂ ಪಿಪ್ಪಲೀಮೂಲಂ ನಾಗರಂ ಕಾರವೀ ಕಣಾ ।
ಚಿತ್ರಕಂ ಕಟ್ಫಲಂ ಕುಷ್ಠಂ ಸಸುಗನ್ಧಿವಚಾ ಶಿವಾ ॥
ಕಂಟಕಾರೀ ಜಟಾ ಶೃಂಗೀ ಯವಾಸೀ ಪಿಚುಮನ್ದಕಃ ।
ಏಷಾಂ ಕ್ವಾಥೋ ಹರತ್ಯೇವ ಜ್ವರಂ ಸೋಪದ್ರವಂ ಕಫಾತ್ ॥
ಪಟೋಲತ್ರಿಫಲಾತಿಕ್ತಸಠೀವಾಸಾಮೃತಾಭವಃ ।
ಕ್ವಾಥೋ ಮಧುಯುತಃ ಪೀತೋ ಹನ್ತ್ಯಾತ್ಕಫಕೃತಂ ಜ್ವರಮ್ ॥
ಭೂನಿಮ್ಬನಿಮ್ಬಪಿಪ್ಪಲ್ಯಃ ಸಠೀ ಶುಂಠೀ ಶತಾವರೀ ।
ಗುಡೂಚೀ ಬೃಹತೀ ಚೇತಿ ಕ್ವಾಥೋ ಹನ್ತ್ಯಾತ್ಕಫಜ್ವರಮ್ ॥
ತ್ರಿಕಂಟಕಬಲಾವ್ಯಾಘ್ರೀಗುಡನಾಗರಸಾಧಿತಮ್ ।
ವರ್ಚೋಮೂತ್ರವಿಬನ್ಧಘ್ನಂ ಕಫಜ್ವರಹರಂ ಪಯಃ ॥
ಕಂಟಕಾರ್ಯಮೃತಾದಾರುವೃಷವಿಶ್ವಾಸಮಾಶ್ರಿತಃ ।
ಕ್ವಾಥಃ ಕಣಾರಜೋಯುಕ್ತಃ ಸದ್ಯಃ ಶ್ಲೇಷ್ಮಜ್ವರಾಪಹಃ ।
ಮುಸ್ತಾ ದುರಾಲಭಾ ಶುಂಠೀ ಕ್ವಾಥ ಏಷಾಂ ಸಮಾಂಶಕಃ ।
ಹನ್ತಿ ಶ್ಲೇಷ್ಮಜ್ವರಂ ತೀವ್ರಂ ನಿಪೀತಃ ಪಥ್ಯಭೋಜನೇ ॥ (ನಿ. ರ.)

(1) ಏಳೆಲೆಬಾಳೆ (ಹಾಲೆಮರ), ಅಮೃತಬಳ್ಳಿ, ಕಹಿಬೇವು, ರಾಮ(ನಾಯಿ)ತುಳಸಿ, ಇವುಗಳ ಕಷಾಯವನ್ನು, ಜೇನು ಕೂಡಿಸಿಕೊಂಡು, ಪಾನಮಾಡುವದರಿಂದ ಕಫಜ್ವರಹರ.

ಷರಾ ಸ್ಫೂರ್ಜಕ ಎಂದರೆ ಕಾಡುಗೋರಟಿ ಆಕಾರದ ಮರುಗದಲ್ಲಿ ಇನ್ನೊಂದು ಜಾತಿ ಎಂತ ಸಿ ಸಂ ವ್ಯಾ., ಸಾಧಾರಣವಾಗಿ ಅದು ತಿಂದುಕ(ಬಂದದ ಮರ)ದ ಹೆಸರು. 'ಸ್ಫೂರ್ಜಕ' ಎಂಬದೇ ಸರಿಯಾದ ಪಾಠ ಎಂತ ಎಣಿಸುವ

ದಾದರೂ, ಅದರ ಬದಲಾಗಿ 'ಅರ್ಜಕ'(ರಾಮತುಳಸಿ)ವನ್ನು ಉಪಯೋಗಿಸಬಹುದು ಅದರಲ್ಲಿ ಕಫಹರಗುಣ ಮತ್ತು ಶೀತಜ್ವರಹರಗುಣ ಇರುತ್ತವೆ.

(2) ತ್ರಿಕಟು, ನಾಗಸಂಪಿಗೆಯ ಹೂವು, ಅರಸಿನ, ಕಟುಕರೋಹಿಣಿ, ಇಂದ್ರಜೀವಿ, ಇವುಗಳ ಕಷಾಯವು ಕಫಜ್ವರಹರ.

(3) ಅರಸಿನ, ಚಿತ್ರಮೂಲ, ಕಹಿಬೇವು, ಲಾಮಂಚ, ಅತಿವಿಡೆ, ಬಜೆ, ಚಂಗಲಕೋಷ್ಠ, ಇಂದ್ರಜೀವಿ, ಹೆಗ್ಗುರುಟಿಗೆ (ಮಲ. ಪೆರುಕುರುಂಬ), ಕಹಿಪಡುವಲು, ಇವುಗಳ ಕಷಾಯ ವನ್ನು, ಕಾಳುಮೆಣಸಿನ ಪುಡಿ ಮತ್ತು ಜೇನು ಕೂಡಿಸಿಕೊಂಡು, ಪಾನಮಾಡಿದ್ದಲ್ಲಿ ಕಫಜ್ವರ ಪರಿಹಾರ.

ಷರಾ ಮೇಲೆ 69ನೇ ಸಂಖ್ಯೆಯ 18ನೇ ಯೋಗದಡಿ ಷರಾ ನೋಡಿ

(4) ನಾಮದ(ಸುಗಂಧಿ)ಬೇರು, ಅತಿವಿಡೆ, ಚಂಗಲಕೋಷ್ಠ, (ಶುದ್ಧ) ಗುಗ್ಗುಳ, ಬಳ್ಳಿ ತುರಚನ ಬೇರು, ಭದ್ರಮುಷ್ಟಿ, ಇವುಗಳ ಕಷಾಯವು ಕಫಜ್ವರಹರ.

(5) ಭದ್ರಮುಷ್ಟಿ, ಕೊಡಸಿಗನ ಬೀಜ (ಇಂದ್ರಜೀವಿ), ತ್ರಿಫಲೆ, ಕಟುಕರೋಹಿಣಿ, ಪರೂಷಕ, ಇವುಗಳ ಕಷಾಯದಿಂದ ಕಫಜ್ವರನಾಶ.

(6) ತ್ರಿಫಲೆ, ತಿಗಡೆ, ಭದ್ರಮುಷ್ಟಿ, ತ್ರಿಕಟು, ಇಂದ್ರಜೀವಿ, ಕಹಿಪಡುವಲು, ಕಕ್ಕೆಮರ, ಕಟುಕರೋಹಿಣಿ, ಚಿತ್ರಮೂಲ, ಇವುಗಳ ಸಮತೂಕದ ಕಷಾಯವನ್ನು, ಜೇನು ಕೂಡಿಸಿ ಕೊಂಡು, ಪಾನಮಾಡುವದರಿಂದ ಕಫಜ್ವರ, ಕೆಮ್ಮು, ಮತ್ತು ಕಂಠರೋಗ ಪರಿಹಾರವಾಗುವವು

ಷರಾ ಚಿತ್ರಮೂಲವನ್ನು ಶುದ್ಧಮಾಡಿಕೊಳ್ಳುವದು ಈ ಕಷಾಯದಿಂದ ಭೇದಿಯಾಗಬಹುದು

(7) ಕಹಿಬೇವು, ಶುಂಠಿ, ಅಮೃತಬಳ್ಳಿ, ಶತಾವರಿ, ಕಚೋರ, ನೆಲಬೇವು, ಪುಷ್ಕರ ಮೂಲ, ಹಿಪ್ಪಲಿ, ಕಿರಿಗುಳ್ಳದ ಬೇರು, ಇವುಗಳ ಕಷಾಯ ಕಫಜ್ವರವನ್ನು ಕೊಲ್ಲುತ್ತದೆ.

(8) ತ್ರಿಫಲೆ, ಕಹಿಪಡುವಲು, ಆಡುಸೋಗೆ, ಅಮೃತಬಳ್ಳಿ, ಕಟುಕರೋಹಿಣಿ, ಬಜೆ, ಇವುಗಳ ಕಷಾಯವನ್ನು, ಜೇನು ಕೂಡಿಸಿಕೊಂಡು, ಪಾನಮಾಡಿದರೆ ಕಫಜ್ವರಪರಿಹಾರ.

(9) ದಶಮೂಲಗಳು ಮತ್ತು ಆಡುಸೋಗೆ, ಇವುಗಳ ಕಷಾಯವನ್ನು ಜೇನಿನೊಂದಿಗೆ ಕುಡಿಯುವದರಿಂದ ಕಫಜ್ವರಪರಿಹಾರ.

(10) ನೆಲ್ಲಿಚಟ್ಟು, ಆನೆಲೆಕಾಯಿ, ಹಿಪ್ಪಲಿ, (ಶುದ್ಧ) ಚಿತ್ರಮೂಲ, ಈ ಗಣವು ಸರ್ವ ವಿಧದ ಜ್ವರಗಳಲ್ಲಿಯೂ ಕಫದ ಪೀಡೆ ಇರುವಲ್ಲಿ ಹಿತವಾದದ್ದು, ದೀಪನ-ಪಾಚನ ಗುಣ ವುಳ್ಳದ್ದು ಮತ್ತು ಭೇದಿಮಾಡಿಸತಕ್ಕಂಥಾದ್ದು

(11) ಕಟುಕರೋಹಿಣಿ, ಕಹಿಬೇವು, ಅತಿವಿಡೆ, ತ್ರಿಕಟು, ಇಂದ್ರಜೀವಿ, ಇವುಗಳ ಕಷಾಯದ ಪಾನದಿಂದ ಕೆಮ್ಮು ಕೂಡಿದ ಘೋರವಾದ ಕಫಜ್ವರವು ನಾಶವಾಗುವದು.

(12) ಬಿಳೇನುಕ್ಕಿ ಎಲೆಗಳ ಕಷಾಯವನ್ನು, ಹಿಪ್ಪಲಿಪುಡಿ ಕೂಡಿಸಿಕೊಂಡು, ಪಾನ ಮಾಡುವದರಿಂದ ಕಫಜ್ವರ, ಕಾಲುಗಳ ಬಲಹೀನತೆ, ಕಿವಿ ಮುಚ್ಚಿಕೊಂಡದ್ದು ಸಹ ಪರಿ ಹಾರವಾಗುವವು.

(13) ಕಿರಿಗುಳ್ಳದ ಬೇರು, ಅಮೃತಬಳ್ಳಿ, ಹಿಪ್ಪಲಿ, ಶುಂಠಿ, ಇವುಗಳ ಕಷಾಯವನ್ನು ಕುಡಿಯುವದರಿಂದ ಜ್ವರ, ಉಬ್ಬಸ, ಕಫ, ಕೆಮ್ಮು, ಶೂಲೆ, ಅಗ್ನಿಮಾಂದ್ಯ, ಹೊಟ್ಟೆಯಲ್ಲಿ ತುಂಬಿಕೊಂಡ ವಾಯು, ಸಹ ನಾಶವಾಗುವವು.

(14) ಬಿಳೇ ಕಾಳುಮೆಣಸು, ಹಿಪ್ಪಲಿಮೂಲ, ಶುಂಠಿ, ಕರಿಜೀರಿಗೆ, ಹಿಪ್ಪಲಿ, ಚಿತ್ರಮೂಲ, ಕಟ್ಫಲ (ಕಿರುಶಿವನಿ), ಚಂಗಲಕೋಷ್ಠ, ಕೋಲಾಂಜನ, ಆಣಿಲೆಕಾಯಿ, ಕಿರಿಗುಳ್ಳದ ಬೇರು, ಈಶ್ವರೀಬೇರು, ಕರ್ಕಟಶೃಂಗಿ, ಓಮ, ಕಹಿಬೇವು, ಇವುಗಳ ಕಷಾಯವು ಉಪದ್ರವಗಳಿಂದ ಯುಕ್ತವಾದ ಕಫಜ್ವರವನ್ನು ಪರಿಹರಿಸುವದಕ್ಕೆ ಸಂದೇಹವಿಲ್ಲ.

(15) ಕಹಿಪಡುವಲು, ತ್ರಿಫಲೆ, ಕಟುಕರೋಹಿಣಿ, ಸಣ್ಣಕಚೋರ, ಆಡುಸೋಗೆ, ಅಮೃತಬಳ್ಳಿ, ಇವುಗಳ ಕಷಾಯವನ್ನು, ಜೇನು ಕೂಡಿಸಿಕೊಂಡು, ಪಾನಮಾಡುವದರಿಂದ ಕಫಜ್ವರವು ನಾಶವಾಗುವದು.

ಪರಾ 'ಸಠೀ' ಅಥವಾ 'ಶಠೀ' ಎಂಬದಕ್ಕೆ ಸಾಧಾರಣವಾಗಿ ಕಚೋರ ಎಂತ ಅರ್ಥ ಬರೆದದ್ದು ಕಾಣುತ್ತದೆ. ಆದರೆ ಕಚೋರಕ್ಕೆ ಜ್ವರಹರ ಗುಣ ಬರೆಯಲ್ಪಟ್ಟದ್ದು ಕಾಣುವದಿಲ್ಲ ಮಾತ್ರವಲ್ಲ, 'ಸಠೀ' ಶಬ್ದವನ್ನು ಕೆಲವರು ಮಾತ್ರ ಕಚೋರಕ್ಕೆ ಉಪಯೋಗಿಸುತ್ತಾರಾಗಿ ಧ ನಿ ಹೇಳುತ್ತದೆ.

(16) ನೆಲಬೇವು, ಕಹಿಬೇವು, ಹಿಪ್ಪಲಿ, ಸಣ್ಣಕಚೋರ, ಶುಂಠಿ, ಶತಾವರಿ, ಅಮೃತಬಳ್ಳಿ, ಕಿರಿಗುಳ್ಳದ ಬೇರು, ಇವುಗಳ ಕಷಾಯವು ಕಫಜ್ವರವನ್ನು ನಾಶಮಾಡುವದು.

(17) ನೆಗ್ಗಿಲಮುಳ್ಳು, ಕಲ್ಲಂಗಡಲೆಬೇರು, ಕಿರಿಗುಳ್ಳದ ಬೇರು, ಶುಂಠಿ, ಬೆಲ್ಲ, ಇವುಗಳಿಂದ ಪಕ್ವಮಾಡಿದ ಕಷಾಯವು ಮಲಮೂತ್ರಗಳ ಬದ್ಧತೆಯನ್ನೂ ಕಫಜ್ವರವನ್ನೂ ಪರಿಹರಿಸುವದು.

(18) ಕಿರಿಗುಳ್ಳದ ಬೇರು, ಅಮೃತಬಳ್ಳಿ, ದೇವದಾರ, ಆಡುಸೋಗೆ, ಶುಂಠಿ, ಇವುಗಳ ಕಷಾಯವನ್ನು, ಹಿಪ್ಪಲೀಚೂರ್ಣ ಕೂಡಿಸಿಕೊಂಡು, ಪಾನಮಾಡುವದರಿಂದ ಕಫಜ್ವರವು ಕೂಡಲೆ ತೊಲಗುವದು.

(19) ಭದ್ರಮುಷ್ಟಿ, ಬಳ್ಳಿತುರಚನ ಬೇರು, ಶುಂಠಿ, ಇವುಗಳನ್ನು ಸಮಾಂಶವಾಗಿ ಕೂಡಿಸಿ ಮಾಡಿದ ಕಷಾಯವನ್ನು ಪಾನಮಾಡಿ ಪಥ್ಯವಾದ ಭೋಜನ ಮಾಡುತ್ತಿರಲು, ತೀವ್ರವಾದ ಕಫಜ್ವರವು ನಾಶವಾಗುವದು.

ಚಾತುರ್ಭದ್ರಾವ ಲೇಹ

ಕಟ್ಫಲಂ ಪೌಷ್ಕರಂ ಕೃಷ್ಣಾ ಶೃಂಗೀ ಚ ಮಧುನಾ ಸಹ ।
ಶ್ವಾಸಕಾಸಜ್ವರಹರಃ ಶ್ರೇಷ್ಠೋ ಲೇಹಃ ಕಫಾನ್ತಕೃತ್ ॥

(ಚಿ. ಸಾ. ಸಂ. 21)

ಕಿರುಶಿವನಿ (ಮಲ. ಕರಿಂಕುಮಲ್), ಪುಷ್ಕರಮೂಲ, ಹಿಪ್ಪಲಿ, ಕರ್ಕಟಶೃಂಗಿ, ಇವುಗಳ ಚೂರ್ಣವನ್ನು ಜೇನಿನಲ್ಲಿ ಕಲಸಿ ನೆಕ್ಕುವದು, ಈ ಲೇಹವು ಉಬ್ಬಸ, ಕೆಮ್ಮು, ಜ್ವರ, ಕಫ ಸಹ ನಾಶಮಾಡುವದಕ್ಕೆ ಶ್ರೇಷ್ಠವಾದ್ದು.

ಕಟ್ಫಲಾದಿ ಲೇಹ

ಕಟ್ಫಲಂ ಪೌಷ್ಕರಂ ಶೃಂಗೀ ಮುಸ್ತಕಂ ಕಟುಕಂ ಶಟೀಮ್ ।
ಸಮಸ್ತಾನ್ಯೇಕಶೋ ವಾಪಿ ಸೂಕ್ಷ್ಮಚೂರ್ಣಾನಿ ಕಾರಯೇತ್ ॥
ಆರ್ದ್ರಕಸ್ವರಸಕ್ಷೌದ್ರೈರ್ಲಿಹ್ಯಾತ್ಕಫವಿನಾಶನಮ್ ।
ಶೂಲಾನಿಲಾರುಚಿಚ್ಛರ್ದಿಕಾಸಶ್ವಾಸಕ್ಷಯಾಪಹಮ್ ॥

(ಚಿ. ಸಾ. ಸಂ. 24)

ಕಿರುಶಿವನಿ, ಪುಷ್ಕರಮೂಲ, ಕರ್ಕಟಶೃಂಗಿ, ಭದ್ರಮುಷ್ಟಿ, ತ್ರಿಕಟು, ಸಣ್ಣಕಚೋರ, ಇವುಗಳನ್ನು ಒಟ್ಟಾಗಿಯಾಗಲಿ, ಪ್ರತ್ಯೇಕವಾಗಿಯಾಗಲಿ, ತೆಗೆದುಕೊಂಡು ಸೂಕ್ಷ್ಮವಾದ

ಚೂರ್ಣಮಾಡಿ, ಆ ಚೂರ್ಣವನ್ನು ಶುಂಠಿರಸದಲ್ಲಿ ಕಲಸಿ, ಜೇನುಕೂಡಿಸಿಕೊಂಡು, ನೆಕ್ಕಲು ಕಫ, ಶೂಲೆ, ವಾಯು, ಅರುಚಿ, ವಾಂತಿ, ಕೆಮ್ಮು, ಉಬ್ಬಸ ಮತ್ತು ಕ್ಷಯ ಪರಿಹಾರವಾಗುವವು.

ಕ್ಷೌದ್ರೋಪಕುಲ್ಯಾಸಂಯೋಗಃ ಶ್ವಾಸಕಾಸಜ್ವರಾಪಹಃ |
ಹಿಪ್ಪಲೀಚೂರ್ಣ ಪ್ಲೀಹಾನಂ ಹನ್ತಿ ಹಿಕ್ಕಾಂ ಚ ಬಾಲಾನಾಂ ಚ ಪ್ರಶಸ್ಯತೇ ||
(ಚಿ. ಸಾ. ಸಂ. 25)

ಹಿಪ್ಪಲಿಚೂರ್ಣವನ್ನು ಜೇನಿನಲ್ಲಿ ಕಲಸಿ ನೆಕ್ಕುವದರಿಂದ ಉಬ್ಬಸ, ಕೆಮ್ಮು, ಜ್ವರ, ಪ್ಲೀಹವ್ಯಾಧಿ, ಬಿಕ್ಕಟ್ಟು ಸಹ ನಾಶವಾಗುವವು. ಈ ಲೇಹ ಬಾಲಕರಿಗೂ ಪ್ರಶಸ್ತವಾದ್ದು,

ಅಜಾಜ್ಯ(?ಜೀ)ಶರ್ಕರಾಯುಕ್ತೋ ದಾಡಿಮಾಸ್ವರಸೇನ ತು |
ಕವಲ ಕದುಷ್ಣೋ ಮಧುನಾ ಯುಕ್ತಃ ಕರ್ತವ್ಯಃ ಕವಲಗ್ರಹಃ ||
(ಚಿ. ಸಾ. ಸಂ. 25)

ಜೀರಿಗೆಯ ಚೂರ್ಣಕ್ಕೆ (ಸಮಪಾಲು) ಸಕ್ಕರೆ ಕೂಡಿಸಿ (ಹುಳಿ) ದಾಳಿಂಬದ ಹಣ್ಣಿನ ರಸದಲ್ಲಿ ಕಲಸಿ, (ಕುದಿಸಿ) ಅಲ್ಪ ಬಿಸಿ ಇರುವಾಗ್ಗೆ, ಜೇನು ಕೂಡಿಸಿಕೊಂಡು, ಬಾಯಿಯೊಳಗೆ ಇಟ್ಟುಕೊಳ್ಳುವದು. (ಇದರಿಂದ ಕಫಜ್ವರಪರಿಹಾರ.)

71. ಕಿರಾತತಿಕ್ತಮಮೃತಂ ದ್ರಾಕ್ಷಾಮಾಮಲಕಂ ಶಟೀಮ್ |
ನಿಃಕ್ವಾಥ್ಯ ವಾತಪಿತ್ತೋತ್ಥೇ ತಂ ಕ್ವಾಥಂ ಸಗುಡಂ ಪಿಬೇತ್ ||
ವಾತಪಿತ್ತಜ್ವರದ ಚಿಕಿತ್ಸೆ ರಾಸ್ನಾವೃಷೋತ್ಥಸ್ತ್ರಿಫಲಾರಾಜವೃಕ್ಷಫಲೈಃ ಸಹ |
ಕಷಾಯಃ ಸಾಧಿತಃ ಪೀತೋ ವಾತಪಿತ್ತಜ್ವರಂ ಜಯೇತ್ || (ಸು. 769)
ವಿಶ್ವಾಮೃತಾಬ್ದಭೂನಿಮ್ಬೈಃ ಪಂಚಮೂಲೀಸಮನ್ವಿತೈಃ |
ಕೃತಃ ಕಷಾಯೋ ಹನ್ತ್ಯಾಶು ವಾತಪಿತ್ತೋತ್ತರಂ ಜ್ವರಮ್ ||
ಬಲಾಭಾರ್ಗ್ಯಮೃತೈರಂಡಚನ್ದನೋಶೀರಪರ್ಪಟೈಃ |
ಉಪಕುಲ್ಯಾಬ್ದಹ್ರೀಬೇರೈಃ ಕಷಾಯಂ ಚ ಪಿಬೇತ್ತತಃ ||
ಪರ್ವಭೇದಶಿರಃಕಮ್ಪಂ ವಾತಪಿತ್ತಜ್ವರಂ ಜಯೇತ್ |
ಗುಡೂಚೀ ಪರ್ಪಟಂ ಮುಸ್ತಂ ಕಿರಾತಂ ವಿಶ್ವಭೇಷಜಮ್ ||
ವಾತಪಿತ್ತಜ್ವರೇ ದೇಯಂ ಪಂಚಭದ್ರಮಿದಂ ಶುಭಮ್ |
ನೀಲೋತ್ಪಲಮುಶೀರಾಣಿ ಬಲಾಪದ್ಮಕಮೇವ ಚ ||
ಕಾಶ್ಮರೀಮಧುಕಂ ದ್ರಾಕ್ಷಾ ಮಧುಕಂ ಸಪರೂಷಕಮ್ |
ಪೇಯಃ ಶೀತಕಷಾಯೋಽಯಂ ವಾತಪಿತ್ತಜ್ವರಾಪಹಃ ||
ಸಪ್ರಲಾಪಂ ಸಮೋಹಂ ಚ ಶಮಯೇತ್ಪೈತ್ತಿಕಂ ಜ್ವರಮ್ |
ಆರಗ್ವಧಫಲಂ ಮುಸ್ತಂ ಯಷ್ಟೀಮಧುಕಮೇವ ಚ ||
ಉಶೀರಮಭಯಾ ಚೈವ ಹರಿದ್ರಾ ದಾರುಸಾಹ್ವಯಾ |
ಪಟೋಲಂ ಪಿಚುಮರ್ದಶ್ಚ ತಥಾ ಕಟುಕರೋಹಿಣೀ ||
ಏಭಿಃ ಸಿದ್ಧಃ ಕಷಾಯಃ ಸ್ಯಾದ್ವಾತಪಿತ್ತಭವೇ ಜ್ವರೇ || (ಚಿ. ಸಾ. ಸಂ. 26)

ದ್ರಾಕ್ಷಾಕಿರಾತಾಮೃತವಾಸಕಾಸಟೀಕ್ವಾಥಂ ಪಿಬೇತ್ಪಿತ್ತಮರುಜ್ಜ್ವರಂ ಹರೇತ್ ||
ದುರಾಲಭಾಮೃತಾ ಘನೋ ಜಲಂ ಚ ರೋಹಿಣೀರಜೋ |
ಜ್ವರಂ ಚ ವಾತಪಿತ್ತಜಂ ನಿಹನ್ತ್ಯಸೌ ಕಷಾಯಕಃ ||
ಭೂನಿಮ್ಬತಿಕ್ತಜಲಚನ್ದನಂ ಚ ಧಾನೇಯಪಥ್ಯಾದಶಮೂಲಸಂಘಾಃ |
ಹ್ರೀಬೇರವಿಶ್ವಾಕರಮರ್ದಕಾ ಚ ಏಷಾಂ ಶೃತಂ ಪಿತ್ತಮರುಜ್ಜ್ವರೇಷ್ಟಮ್ ||
ಜಲದಧಾನ್ಯಕಿರಾತಗುಡೂಚಿಕಾ ನಿಯಮನಂ ಕಟುಕೀ ಚ ಪಟೋಲಿಕಾ |
ಕ್ವಥಿತಮೇಭಿರಿದಂ ತು ಜಲಂ ಹರೇತ್ಪವನಪಿತ್ತಭವಂ ಜ್ವರಮುನ್ನತಮ್ ||
(ನಿ. ರ.)

(1) ಕಿರಾತಕಡ್ಡಿ, ಅಮೃತಬಳ್ಳಿ, ದ್ರಾಕ್ಷಿ, ನೆಲ್ಲಿಚಟ್ಟು, ಸಣ್ಣಕಚೋರ, ಇವುಗಳ ಕಷಾಯವನ್ನು, ಬೆಲ್ಲ ಕೂಡಿಸಿಕೊಂಡು, ವಾತಪಿತ್ತಜ್ವರದಲ್ಲಿ ಪಾನಮಾಡಬೇಕು.

(2) ರಾಸ್ಮೆಗಡ್ಡೆ (ಅರತೆ), ಆಡುಸೋಗೆ, ತ್ರಿಫಲೆ, ಕಕ್ಕೆಮರದ ಕಾಯಿ, ಇವುಗಳ ಕಷಾಯದ ಪಾನದಿಂದ ವಾತಪಿತ್ತಜ್ವರ ನಾಶವಾಗುತ್ತದೆ.

(3) ಶುಂಠಿ, ಅಮೃತಬಳ್ಳಿ, ಭದ್ರಮುಷ್ಟಿ, ನೆಲಬೇವು, ಪಂಚಮೂಲಗಳು, ಇವುಗಳ ಕಷಾಯವು ವಾತಪಿತ್ತಜ್ವರವನ್ನು ಬೇಗನೆ ನಾಶಮಾಡುತ್ತದೆ.

ಷರಾ ವಾತಪ್ರಧಾನವಾಗಿರುವಲ್ಲಿ ಬೃಹತ್ಪಂಚಮೂಲವನ್ನು ಮತ್ತು ಪಿತ್ತಪ್ರಧಾನತೆಯಲ್ಲಿ ಹ್ರಸ್ವಪಂಚಮೂಲವನ್ನು ಉಪಯೋಗಿಸುವದು

(4) ಕಲ್ಲಂಗಡಲೆಬೇರು, ನಿರ್ವಿಷದ ಬೇರು, ಅಮೃತಬಳ್ಳಿ, ಹರಳುಬೇರು, ಶ್ರೀಗಂಧ, ಲಾಮಂಚ, ಪರ್ಪಾಟಕ, ಹಿಪ್ಪಲಿ, ಭದ್ರಮುಷ್ಟಿ, ಮುಡಿವಾಳ, ಇವುಗಳ ಕಷಾಯದ ಪಾನದಿಂದ ಗಂಟುಗಳ ಒಡೆತ, ತಲೆನಡುಕು ಮತ್ತು ವಾತಪಿತ್ತಜ್ವರ ಪರಿಹಾರವಾಗುವವು

(5) ಅಮೃತಬಳ್ಳಿ, ಪರ್ಪಾಟಕ, ಭದ್ರಮುಷ್ಟಿ, ನೆಲಬೇವು, ಶುಂಠಿ, ಇವುಗಳ ಕಷಾಯವು ವಾತಪಿತ್ತಜ್ವರದಲ್ಲಿ ಕೊಡಬೇಕಾದ್ದು, 'ಪಂಚಭದ್ರ' ಎಂಬ ಹೆಸರುಳ್ಳದ್ದು ಮತ್ತು ಶುಭಕರ.

(6) ನೀಲತಾವರೆ, ಲಾಮಂಚ, ಕಲ್ಲಂಗಡಲೆಬೇರು, ಪದ್ಮಕ, ಕಾಶ್ಮೀರಿ (ಶಿವನ್ನಿ), ಜ್ಯೇಷ್ಠಮಧು, ದ್ರಾಕ್ಷಿ, ಇಪ್ಪೆಹೂವು, ಪರೂಷಕ, ಇವುಗಳ ಶೀತ ಕಷಾಯವನ್ನು ಪಾನಮಾಡಿದ್ದಲ್ಲಿ ವಾತಪಿತ್ತಜ್ವರ ಪರಿಹಾರವಾಗುವದು; ಪ್ರಲಾಪ ಮತ್ತು ಮೂರ್ಛೆಯುಳ್ಳ ಪಿತ್ತಜ್ವರ ಸಹ ಶಮನವಾಗುವದು.

(7) ಕಕ್ಕೆಕಾಯಿ, ಭದ್ರಮುಷ್ಟಿ, ಜ್ಯೇಷ್ಠಮಧು, ಲಾಮಂಚ, ಅಣಿಲೆಕಾಯಿ, ಅರಸಿನ, ಮರದರಸಿನ, ಕಹಿಪಡುವಲು, ಕಹಿಬೇವು, ಕಟುಕರೋಹಿಣಿ, ಇವುಗಳ ಕಷಾಯ ವಾತಪಿತ್ತಜ್ವರವನ್ನು ಪರಿಹರಿಸುವದು.

(8) ದ್ರಾಕ್ಷಿ, ನೆಲಬೇವು, ಅಮೃತಬಳ್ಳಿ, ಆಡುಸೋಗೆ, ಸಣ್ಣಕಚೋರ, ಇವುಗಳ ಕಷಾಯದ ಪಾನವು ವಾತಪಿತ್ತಜ್ವರವನ್ನು ಪರಿಹರಿಸುವದು.

(9) ಒಳ್ಳೆತುರಚನ ಬೇರು, ಅಮೃತಬಳ್ಳಿ, ಭದ್ರಮುಷ್ಟಿ, ಮುಡಿವಾಳ (ಅಥವಾ ಇರುವೇರಿ), ಕಟುಕರೋಹಿಣಿ, ಪರ್ಪಾಟಕ, ಇವುಗಳ ಕಷಾಯದಿಂದ ವಾತಪಿತ್ತಜ್ವರ ನಾಶವಾಗುವದು.

(10) ನೆಲಬೇವು, ಕಟುಕರೋಹಿಣಿ, ಮುಡಿವಾಳ, ಶ್ರೀಗಂಧ, ಕೊತ್ತುಂಬರಿ, ಅಣಿಲೆಕಾಯಿ, ದಶಮೂಲಗಳು, ಇರುವೇರಿ, ಶುಂಠಿ, ಕರಂಡೆಹುಳಿ (ಕವಳಿಕಾಯಿ), ಇವುಗಳ ಕಷಾಯವು ಪಿತ್ತವಾತಜ್ವರದಲ್ಲಿ ಹಿತವಾದ್ದು.

(11) ಭದ್ರಮುಷ್ಟಿ, ಕೊತ್ತುಂಬರಿ, ನೆಲಬೇವು, ಅಮೃತಬಳ್ಳಿ, ಕಹಿಬೇವು, ಕಟುಕರೋಹಿಣಿ, ಕಹಿಪಡುವಲು, ಇವುಗಳ ಕಷಾಯವು ಉಗ್ರವಾದ ವಾತಪಿತ್ತಜ್ವರವನ್ನು ಪರಿಹರಿಸುವದು.

ಮಧುಕಾದಿ ಹಿಮ

ಮಧುಕಂ ಸಾರಿವಾ ದ್ರಾಕ್ಷಾ ಮಧೂಕಂ ಚನ್ದನೋತ್ಪಲಮ್ ।
ಕಾಶ್ಮರೀಫಲಕಂ ಲೋಧ್ರಂ ತ್ರಿಫಲಾ ಪದ್ಮಕೇಸರಮ್ ॥
ಪರೂಷಕಂ ಮೃಣಾಲಂ ಚ ಕ್ಷಿಪೇತ್ಸಂಚೂರ್ಣ್ಯ ವಾರಿಣಿ ।
ನಿಶೋಷಿತಂ ಸಿತಾಕ್ಷೌದ್ರಲಾಜಯುಕ್ತಂ ತು ತತ್ಪಿಬೇತ್ ॥
ವಾತ್ತಪಿತ್ತಜ್ವರಂ ದಾಹಂ ತೃಷ್ಣಾಮೂರ್ಚ್ಛಾರುಚಿಭ್ರಮಾನ್ ।
ಶಮಯೇದ್ರಕ್ತಪಿತ್ತಂ ಚ ಜೀಮೂತಮಿವ ಮಾರುತಃ ॥ (ಭಾ. ಪ್ರ. 281)

ಜ್ಯೇಷ್ಠಮಧು, ಸುಗಂಧಿಬೇರು, ದ್ರಾಕ್ಷೆ, ಇಪ್ಪೆಹೂವು, ಶ್ರೀಗಂಧ, ನೈದಿಲೆ, ಕಾಶ್ಮೀರಿ (ಶಿವನ್ನಿ) ಫಲ, ಲೋಧ್ರ, ತ್ರಿಫಲೆ, ತಾವರೆಕೇಸರ, ಪರೂಷಕ, ತಾವರೆದಂಟು, ಇವುಗಳನ್ನು ಚೂರ್ಣಮಾಡಿ, ರಾತ್ರಿ ನೀರಿನಲ್ಲಿ ನೆನೆಸಿಟ್ಟು, ಬೆಳಿಗ್ಗೆ ಹಿಂಡಿ ಶೋಧಿಸಿದ ಕಷಾಯಕ್ಕೆ ಅರಳಿನ ಪುಡಿ, ಸಕ್ಕರೆ ಮತ್ತು ಜೇನು ಕೂಡಿಸಿಕೊಂಡು, ಪಾನಮಾಡುವದರಿಂದ ವಾತಪಿತ್ತಜ್ವರ, ಉರಿ, ಬಾಯಾರಿಕೆ, ಮೂರ್ಛೆ, ಅರುಚಿ, ಭ್ರಮೆ, ರಕ್ತಪಿತ್ತ ಸಹ, ಗಾಳಿಯಿಂದ ಮೋಡಗಳು ಹೇಗೋ ಹಾಗೆ, ಶಮನವಾಗುವವು.

ಷರಾ ಔಷಧಗಳನ್ನು ಒಟ್ಟು ಎರಡು ಪಲ ತೆಗೆದುಕೊಂಡು, ಅದರ ಚೂರ್ಣವನ್ನು ಆರು ಪಲ ನೀರಿನಲ್ಲಿ ನೆನೆಸುವದಾಗಿ ವ್ಯಾಖ್ಯಾನಕಾರ

ಪಥ್ಯದಲ್ಲಿ ವಿಶೇಷ

ಕಫಪಿತ್ತಹರಾ ಮುದ್ಗಾಃ ಕಾರವೇಲ್ಲಾದಯಸ್ತಥಾ ।
ಪ್ರಾಯೇಣ ನ ತು ತೇ ದೇಯಾ ವಾತಪಿತ್ತೋದ್ಭವೇ ಜ್ವರೇ ॥
ಶೂಲೋದಾವರ್ತವಿಷ್ಟಮ್ಭಜನಕಾಃ ಜ್ವರವರ್ಧನಾಃ ।
ದಾಡಿಮಾಮಲಮುದ್ಗಾನಾಂ ಯೂಷಸ್ತ್ವನಿಲಪೈತ್ತಿಕೇ ॥
ಮುದ್ಗಾಮಲಕಯೂಷಸ್ತು ವಾತಪಿತ್ತಾತ್ಮಕೇ ಹಿತಃ
ಮಹಾದಾಹೇ ವಿಧಾತವ್ಯೋ ಯೂಷಃ ಚಣಕಸಂಭವಃ ॥
(ಚಿ. ಸಾ. ಸಂ. 26)

ಹೆಸರು, ಹಾಗಲಕಾಯಿ ಮುಂತಾದವುಗಳು ಕಫಪಿತ್ತಹರ-ಗುಣವುಳ್ಳವು; ಅವುಗಳನ್ನು ವಾತಪಿತ್ತದಿಂದ ಉಂಟಾದ ಜ್ವರದಲ್ಲಿ ಸಾಧಾರಣವಾಗಿ ಕೊಡಬಾರದು. ಅವುಗಳನ್ನು ವಾತಪಿತ್ತಜ್ವರದಲ್ಲಿ ಉಪಯೋಗಿಸಿದರೆ ಜ್ವರ ವೃದ್ಧಿಯಾಗುವದಲ್ಲದೆ, ಶೂಲೆ, ಉದಾವರ್ತ, ವಿಷ್ಟಂಭ ಸಹ ಉಂಟಾಗುತ್ತವೆ. ಆದರೆ ದಾಳಿಂಬದ ಹುಳಿ ಮತ್ತು ನೆಲ್ಲಿಹುಳಿ ಕೂಡಿಸಿ ಮಾಡಿದ ಹೆಸರು

ಸಾರು ವಾತಪಿತ್ತರೋಗಗಳಲ್ಲಿ ಹೇಳಲ್ಪಟ್ಟದ್ದಾಗ್ಯೂ, ನೆಲ್ಲಿ ಮತ್ತು ಹೆಸರು ಕೂಡಿಸಿ ಮಾಡಿದ ಸಾರು ವಾತಪಿತ್ತಜ್ವರದಲ್ಲಿ ಹಿತವಾದ್ದು. ಮಹಾ ಉರಿ ಇರುವಲ್ಲಿ ಕಡಲೇಬೇಳೆಸಾರನ್ನು ವಿಧಿಸಬೇಕು.

ಪರಾ: ನೆಲ್ಲಿ ಕೂಡಿಸಿ ಮಾಡಿದ ಹೆಸರಿನ ಸಾರು ಭೇದಿಗುಣವುಳ್ಳದ್ದು, ಪಿತ್ತವಾತಹರ, ಬಾಯಾರಿಕೆ ಮತ್ತು ಉರಿ ಶಮನಮಾಡುವಂಥಾದ್ದು, ಮತ್ತು ಮೂರ್ಛೆ, ಶ್ರಮ ಮತ್ತು ಮದವನ್ನು ಪರಿಹರಿಸುವಂಥಾದ್ದು (ಭಾ ಪ್ರ. 270)

72. ರಾಜವೃಕ್ಷಾದಿವರ್ಗಸ್ಯ ಕಷಾಯಂ ಮಧುಸಂಯುತಮ್ ।
ಕಫವಾತಜ್ವರಂ ಹನ್ಯಾಚ್ಛೀಘ್ರಂ ಕಾಲೇಽವಚಾರಿತಮ್ ॥

ಕಫವಾತಜ್ವರದ ಚಿಕಿತ್ಸೆ

ನಾಗರಂ ಧಾನ್ಯಕಂ ಭಾರ್ಗೀಮಭಯಾಂ ಸುರದಾರು ಚ ।
ವಚಾಂ ಪರ್ಪಟಕಂ ಮುಸ್ತಂ ಭೂತೀಕಮಥ ಕಟ್ಫಲಮ್ ॥
ನಿಃಕ್ವಾಥ್ಯ ಕಫವಾತೋತ್ಥೇ ಕ್ಷೌದ್ರಹಿಂಗುಸಮನ್ವಿತಮ್ ।
ಪಾತವ್ಯಂ ಶ್ವಾಸಕಾಸಘ್ನಂ ಶ್ಲೇಷ್ಮೋತ್ಸೇಕೇ ಗಲಗ್ರಹೇ ॥
ಹಿಕ್ಕಾಸು ಕಂಠಶ್ವಯಥೌ ಶೂಲೇ ಹೃದಯಪಾರ್ಶ್ವಜೇ ॥ (ಸು. 768)
ಮುಸ್ತಾ ಪರ್ಪಟಕಂ ಶುಂಠೀ ಗುಡೂಚೀ ಸದುರಾಲಭಾ ।
ಕಫವಾತಾರುಚಿಛರ್ದಿದಾಹಶೋಷಜ್ವರಾಪಹಃ ॥
ಆರಗ್ವಧಗ್ರನ್ಥಿಕಮುಸ್ತತಿಕ್ತಾಹರೀತಕೀಭಿಃ ಕ್ವಥಿತಃ ಕಷಾಯಃ ।
ಸಾಮೇ ಸಶೂಲೇ ಕಫವಾತಯುಕ್ತೇ ಜ್ವರೇ ಹಿತೋ ದೀಪನಪಾಚನಶ್ಚ ॥
ಕಿರಾತತಿಕ್ತಕಂ ಮುಸ್ತಾ ಗುಡೂಚೀ ವಿಶ್ವಭೇಷಜಮ್ ।
ಚಾತುರ್ಭದ್ರಕಮಿತ್ಯಾಹುಃ ವಾತಶ್ಲೇಷ್ಮಜ್ವರಾಪಹಮ್ ॥
ನಿಂಬಾಮೃತಾ ವಿಶ್ವದಾರು ಕಟ್ಫಲಂ ಕಟುಕೀ ವಚಾ ।
ಕಷಾಯಂ ಪಾಯಯೇದಾಶು ವಾತಶ್ಲೇಷ್ಮಜ್ವರಾಪಹಮ್ ॥
ಪರ್ವಭೇದಃ(?ದ) ಶಿರಃಶೂಲಕಾಸಾರೋಚಕಪೀಡಿತಮ್ ।
ದಶಮೂಲೀರಸಃ ಪೀತಃ ಕಣಾಢ್ಯಶ್ಚ ಕಫಾನಿಲೇ ॥
ಅವಿಪಾಕೇಽತಿನಿದ್ರಾಯಾಂ ಪಾರ್ಶ್ವರುಕ್ ಶ್ವಾಸಕಾಸಕೇ
(ಚಿ ಸಾ. ಸಂ 29, 30)
ಸಿಂಹೀಯವಾನೀಛಿನ್ನಾನಾಂ ಕ್ವಾಥಶ್ಚ ಚಪಲಾಯುತಃ ।
ಕಫವಾತಜ್ವರಶ್ವಾಸಶೂಲಪೀನಸಕಾಸಜಿತ್ ॥
ಕ್ಷುದ್ರಾಮೃತಾನಾಗರಪುಷ್ಕರಾಹ್ವಯೈಃ ಕೃತಃ ಕಷಾಯಃ ಕಫಮಾರುತೋತ್ತರೇ ।
ಸಶ್ವಾಸಕಾಸಾರುಚಿಪಾರ್ಶ್ವಶೂಲೇ ಜ್ವರೇ ತ್ರಿದೋಷಪ್ರಭವೇಽಪಿ ಶಸ್ಯತೇ ॥
ಭೂನಿಮ್ಬಮುಸ್ತಾಕಟುಕಾಗುಡೂಚೀದುರಾಲಭಾಪರ್ಪಟನಾಗರಾಖ್ಯೈಃ ।
ಕ್ವಾಥೋಽನಿಲಶ್ಲೇಷ್ಮಹರೋ ವದನ್ತಿ ಸೂರ್ಯೋ ಯಥಾ ನಾಶಯತೇಽನ್ಧಕಾರಮ್ ॥

ಸ್ವೇದೋದ್ಗಮೇ ಭೃಷ್ಟಕುಲಿತ್ಥಚೂರ್ಣನಿಯೂರ್ತನಂ ಶಸ್ತಮಿತಿ ಬ್ರುವನ್ತಿ ||
ಮರೀಚಂ ಪಿಪ್ಪಲೀಶುಂಠಿಪಥ್ಯಾಲೋಧ್ರಶ್ಚ ಪುಷ್ಕರಮ್ |
ಭೂನಿಮ್ಬಃ ಕಟುಕಾ ಕುಷ್ಠಂ ಕರ್ಚೂರೋ ಲಿಂಗಿಕಾ ಸಟೀ ||
ಏತಾನಿ ಸಮಭಾಗಾನಿ ಸೂಕ್ಷ್ಮಚೂರ್ಣಾನಿ ಕಾರಯೇತ್ |
ಏತದುದ್ಧೂಲನಂ ಶ್ರೇಷ್ಠಂ ಸ್ರೋತೋವತ್‌ಸ್ವೇದನಿರ್ಗಮೇ ||
ಭೂನಿಮ್ಬಕಾರವೀತಿಕ್ತಾವಚಾಕಟ್ಫಲಜಂ (?ಜಾಃ) ರಜಃ (?ಜಾಃ) |
ಏಷಾಮುದ್ಧೂಲನಂ ಶ್ರೇಷ್ಠಂ ಸತತಂ ಸ್ವೇದಸಂಪ್ಲವೇ ||    (ನಿ. ರ.)

(1) ಆರಗ್ವಧಾದಿ ವರ್ಗದ ಕಷಾಯವನ್ನು, ಜೇನು ಕೂಡಿಸಿ, ಕಾಲದಲ್ಲಿ ಕೊಟ್ಟರೆ ಕಫ ವಾತಜ್ವರವು ಶೀಘ್ರವಾಗಿ ನಾಶವಾಗುವದು.

ಸಂಗ್ರಾ ಈ ಗಣದಲ್ಲಿ ಅವಸ್ಥೆಗೆ ಬೇಕಾದಾಗ್ಗೆ ಹೆಚ್ಚುಕಡಿಮೆ ಮಾಡಿಕೊಳ್ಳಬಹುದು.

(2) ಶುಂಠಿ, ಕೊತ್ತುಂಬರಿ, ನಿರ್ವಿಷದ ಬೇರು, ಅಣಿಲೆಕಾಯಿ, ದೇವದಾರ, ಬಜೆ, ಪರ್ಪಾಟಕ, ಭದ್ರಮುಷ್ಟಿ, ಸಂಬಾರಹುಲ್ಲು, ಕಟ್ಫಲ (ಕಿರುಶಿವನಿ), ಇವುಗಳ ಕಷಾಯವನ್ನು ವಾತಕಫಜ್ವರದಲ್ಲಿ, (ಹುರಿದ) ಹಿಂಗಿನ ಪುಡಿ ಮತ್ತು ಜೇನು ಕೂಡಿಸಿಕೊಂಡು, ಪಾನ ಮಾಡಬೇಕು. ಅದರಿಂದ ಉಬ್ಬಸ, ಕೆಮ್ಮು, ಕಫ ಮೇಲಕ್ಕೆ ಬರುವದು, ಗಂಟಲು ಹಿಡಕೊಂಡದ್ದು, ಬಿಕ್ಕಟ್ಟುಗಳು, ಕಂಠದ ಬಾವು, ಹೃದಯಶೂಲೆ, ಪಾರ್ಶ್ವಶೂಲೆ, ಸಹ ಪರಿಹಾರವಾಗುವವು.

ಸಂಗ್ರಾ ಜೇನು ಕರ್ಷತೂಕ ಮತ್ತು ಹಿಂಗು ಮಾಷತೂಕ ಎಂತ ಸಿ ಸಂ ವ್ಯಾ (ಪು 581)

(3) ಪರ್ಪಾಟಕ, ಭದ್ರಮುಷ್ಟಿ, ಶುಂಠಿ, ಅಮೃತಬಳ್ಳಿ, ಬಿಳಿತುರಚನ ಬೇರು, ಇವುಗಳ ಕಷಾಯದಿಂದ ಕಫವಾತ, ಅರುಚಿ, ವಾಂತಿ, ಉರಿ, ಶೋಷ ಮತ್ತು ಜ್ವರ ಪರಿಹಾರವಾಗುತ್ತವೆ.

(4) ಕಕ್ಕೆಮರ, ಹಿಪ್ಪಲಿಮೂಲ, ಭದ್ರಮುಷ್ಟಿ, ಕಟುಕರೋಹಿಣಿ, ಅಣಿಲೆಕಾಯಿ, ಇವುಗಳ ಕಷಾಯವು ಶೂಲೆಯಿರುವ ಆಮಯುಕ್ತವಾದ ಕಫವಾತಜ್ವರದಲ್ಲಿ ಹಿತ; ಮತ್ತು ದೀಪನ-ಪಾಚನ ಮಾಡತಕ್ಕಂಥಾದ್ದು.

(5) ನೆಲಬೇವು, ಭದ್ರಮುಷ್ಟಿ, ಅಮೃತಬಳ್ಳಿ, ಶುಂಠಿ, ಇವುಗಳ ಕಷಾಯಕ್ಕೆ 'ಚಾತುರ್ಭದ್ರಕ' ಎಂತ ಹೆಸರು; ಅದು ವಾತಕಫಜ್ವರಹರವಾದ್ದು.

ಚಾತುರ್ಭದ್ರಕ ಕಷಾಯ

(6) ಕಹಿಬೇವು, ಅಮೃತಬಳ್ಳಿ, ಶುಂಠಿ, ದೇವದಾರ, ಕಟ್ಫಲ (ಕಿರುಶಿವನಿ), ಕಟುಕರೋಹಿಣಿ, ಬಜೆ, ಇವುಗಳ ಕಷಾಯವನ್ನು ಗಂಟುಗಳ ನೋವು, ತಲೆಶೂಲೆ, ಕೆಮ್ಮು, ಅರುಚಿ, ಇವುಗಳ ಪೀಡೆಯುಳ್ಳ ವಾತಕಫಜ್ವರದ ಪರಿಹಾರಕ್ಕಾಗಿ ಬೇಗನೆ ಕುಡಿಸಬೇಕು.

(7) ದಶಮೂಲಗಳ ಕಷಾಯವನ್ನು, ಹಿಪ್ಪಲಿಚೂರ್ಣಸಮೇತವಾಗಿ, ಪಾನಮಾಡುವದರಿಂದ ಕಫವಾತಜ್ವರ, ಅಜೀರ್ಣ, ಅತಿನಿದ್ರೆ, ಪಾರ್ಶ್ವನೋವು, ಉಬ್ಬಸ, ಕೆಮ್ಮು ಸಹ ತೊಲಗುವವು.

(8) ಕಿರಿಗುಳ್ಳದ ಬೇರು, ಓಮ, ಅಮೃತಬಳ್ಳಿ, ಇವುಗಳ ಕಷಾಯವನ್ನು, ಹಿಪ್ಪಲಿ ಚೂರ್ಣ ಕೂಡಿಸಿ, ಕೊಡಲು ಕಫವಾತಜ್ವರ, ಉಬ್ಬಸ, ಶೂಲೆ, ಪೀನಸ, ಮತ್ತು ಕೆಮ್ಮು ತೊಲಗುವವು.

(9) ಕಿರಿಗುಳ್ಳದ ಬೇರು, ಅಮೃತಬಳ್ಳಿ, ಶುಂಠಿ, ಪುಷ್ಕರಮೂಲ, ಇವುಗಳ ಕಷಾಯವು ಕಫವಾತಜ್ವರ, ಉಬ್ಬಸ, ಕೆಮ್ಮು, ಅರುಚಿ, ಪಕ್ಕಶೂಲಿ ಮತ್ತು ತ್ರಿದೋಷಜ್ವರ, ಇವುಗಳಲ್ಲಿ ಪ್ರಶಸ್ತವಾದ್ದು.

(10) ನೆಲಬೇವು, ಭದ್ರಮುಷ್ಟಿ, ಕಟುಕರೋಹಿಣಿ, ಅಮೃತಬಳ್ಳಿ, ಬಳ್ಳಿತುರಚನ ಬೇರು, ಪರ್ಪಾಟಕ, ಶುಂಠಿ, ಇವುಗಳ ಕಷಾಯವು, ಕತ್ತಲೆಯನ್ನು ಸೂರ್ಯನು ಹೇಗೆ ಹೋಗಾಡಿಸುತ್ತಾನೋ ಹಾಗೆ, ವಾತಕಫಜ್ವರವನ್ನು ಪರಿಹರಿಸುವದು.

(11) ಅತಿಯಾದ ಬೆವರು ಹೊರಡುವಲ್ಲಿ ಹುರಿದ ಹುರುಳಿಯ ಚೂರ್ಣವನ್ನು ಹರಡಿ ಒರಸುವದು (ಅಥವಾ ತೆಳ್ಳಗಿನ ಬಟ್ಟೆಯಲ್ಲಿ ಚೂರ್ಣವನ್ನು ಸಡಿಲಾಗಿ ಕಟ್ಟಿ, ಆ ಕಟ್ಟಿನಿಂದ ಒರಸುವದು) ಪ್ರಶಸ್ತ ಎಂತ ಹೇಳುತ್ತಾರೆ.

ಅತಿಬೆವರಿಗೆ

(12) ಕಾಳುಮೆಣಸು, ಹಿಪ್ಪಲಿ, ಶುಂಠಿ, ಅಣಿಲೆಕಾಯಿ, ಲೋಧ್ರ, ಪುಷ್ಕರಮೂಲ, ನೆಲ ಬೇವು, ಕಟುಕರೋಹಿಣಿ, ಚಂಗಲಕೋಷ್ಠ, ಕಚೋರ, ಲಿಂಗತೊಂಡೆಬೇರು, ಸಣ್ಣಕಚೋರ, ಇವುಗಳನ್ನು ಸಮಪಾಲಾಗಿ ತೆಗೆದುಕೊಂಡು ನುಣ್ಣಗಿನ ಚೂರ್ಣಮಾಡಿ, ಅದರ ಧೂಳನ್ನು, ದಾರೆಯಾಗಿ ಬೆವರು ಬರುವ ಸಂಗತಿಯಲ್ಲಿ, (ರೋಮಕೂಪಗಳಿಗೆ ತಗಲುವ ಹಾಗೆ) ಹರ ಡುವದು ಮುಖ್ಯವಾದ್ದು.

(13) ನೆಲಬೇವು, ಕರಿಜೀರಿಗೆ, ಕಟುಕರೋಹಿಣಿ, ಬಜೆ, ಕಟ್ಫಲ (ಕಿರುಶಿವನಿ), ಇವು ಗಳ ಸೂಕ್ಷ್ಮವಾದ ಧೂಳನ್ನು ಬಿಡದೆ ಬೆವರುತ್ತಿರುವ ಸಂಗತಿಯಲ್ಲಿ ಹರಡುವದು ಉತ್ತಮ.

73. ಏಲಾಪಟೋಲತ್ರಿಫಲಾಯಷ್ಟ್ಯಾಹ್ವಾನಾಂ ವೃಷಸ್ಯ ಚ |
ಕ್ವಾಥೋ ಮಧುಯುತಃ ಪೀತೋ ಹನ್ತಿ ಪಿತ್ತಕಫಜ್ವರಮ್
ಕಟುಕಾವಿಜಯಾದ್ರಾಕ್ಷಾಮುಸ್ತಪರ್ಪಟಕೈಃ ಕೃತಃ |
ಕಷಾಯೋ ನಾಶಯೇತ್ಪೀತಃ ಶ್ಲೇಷ್ಮಪಿತ್ತಭವಂ ಜ್ವರಮ್ ||
ಭಾರ್ಗೀವಚಾಪರ್ಪಟಕಧಾನ್ಯಹಿಂಗ್ವಭಯಾಘನೈಃ |
ಕಾಶ್ಮರ್ಯನಾಗರೈಃ ಕ್ವಾಥಃ ಸಕ್ಷೌದ್ರಃ ಶ್ಲೇಷ್ಮಪಿತ್ತಜೇ
ಶರ್ಕರಾಮಕ್ಷಮಾತ್ರಾಂ ತು ಕಟುಕಾಮುಷ್ಣವಾರಿಣಾ |
ಪೀತ್ವಾ ಜ್ವರಂ ಜಯೇಜ್ಜನ್ತುಃ ಕಫಪಿತ್ತಸಮುದ್ಭವಮ್ ||
(ಸು. 768, 769)

ಕಫಪಿತ್ತಜ್ವರದ ಚಿಕಿತ್ಸೆ

ಗುಡೂಚೀನಿಮ್ಬಧನ್ಯಾಕಂ ಪದ್ಮಕಂ ಚನ್ದನಾನ್ವಿತಮ್ |
ತೃಷ್ಣಾದಾಹಜ್ವರಚ್ಛರ್ದಿಪಿತ್ತಶ್ಲೇಷ್ಮಜ್ವರಾಪಹಃ || * * *
ಪಟೋಲಂ ಪಿಚುಮರ್ದಶ್ಚ ತ್ರಿಫಲಾ ಮಧುಕಂ ಬಲಾ |
ಸಾಧಿತೋಽಯಂ ಕಷಾಯಶ್ಚ ಪಿತ್ತಶ್ಲೇಷ್ಮಭವೇ ಜ್ವರೇ || * * *
ಪಟೋಲಂ ಚನ್ದನಂ ಮೂರ್ವಾ ತಿಕ್ತಾ ಪಾಠಾಮೃತಾ ಗಣಃ |
ಪಿತ್ತಶ್ಲೇಷ್ಮಾರುಚಿಛರ್ದಿಜ್ವರಕಂಡೂವಿಷಾಪಹಃ || * * *
ತ್ರಿಫಲಾ ತ್ರಾಯಮಾಣಾ ಚ ಮೃದ್ವೀಕಾ ಕಟುರೋಹಿಣೀ |
ಪಿತ್ತಶ್ಲೇಷ್ಮಜ್ವರೇ ಹ್ಯಾಸಾಂ ಕಷಾಯೋ ಹ್ಯನುಲೋಮನಃ |

ವತ್ಸಕಂ ಪದ್ಮಕಾಷ್ಠಂ ಚ ನಾಗರಂ ಚನ್ದನಾಮೃತೇ |
ಪಟೋಲಂ ಧಾನ್ಯಕಂ ಚೈವ ಕ್ವಾಥೋ ಮಧುಸಮಾಯುತಃ ||
ಕಫಪಿತ್ತಜ್ವರಂ ಶೂಲಂ ದಾಹಂ ಹನ್ತ್ಯಂಘ್ರಿಪಾಣಿಷು | * * *
ಯವಂ ಪರ್ಪಟಕಂ ಧಾನ್ಯಂ ಪಟೋಲಂ ನಿಮ್ಬಸಾಧಿತಮ್ ||
ಪಿಬೇತ್ಸಶರ್ಕರಾಕ್ಷೌದ್ರಂ ಪಿತ್ತಶ್ಲೇಷ್ಮಜ್ವರಾಪಹಮ್ |
ಅಮೃತೇನ್ದ್ರಯವಾರಿಷ್ಟಂ ಪಟೋಲಂ ಕಟುರೋಹಿಣೀ ||
ನಾಗರಂ ಚನ್ದನಂ ಮುಸ್ತಂ ಪಿಪ್ಪಲೀಚೂರ್ಣಸಂಯುತಮ್ |
ಅಮೃತಾಷ್ಟಕಮಿತ್ಯೇತತ್ಪಿತ್ತಶ್ಲೇಷ್ಮಜ್ವರಾಪಹಮ್ ||
ಕಫಪಿತ್ತವಮಿಕಂಡೂಜ್ವರವಿಸರ್ಪದಾಹನುತ್ |
ಕಷಾಯಃ ಪರಿಪೀತಸ್ತು ಶೃಂಗವೇರಪಟೋಲಯೋಃ ||
ಕಂಟಕಾರ್ಯಮೃತಾ ಭಾರ್ಗೀ ನಾಗರೇನ್ದ್ರಯವಾಸಕಮ್ |
ಭೂನಿಮ್ಬಂ ಚನ್ದನಂ ಮುಸ್ತಂ ಪಟೋಲಂ ಕಟುರೋಹಿಣೀ ||
ಕಷಾಯಂ ಪಾಯಯೇದೇತತ್ಪಿತ್ತಶ್ಲೇಷ್ಮಜ್ವರಾಪಹಮ್ |
ದಾಹತೃಷ್ಣಾರುಚಿಛರ್ದಿಕಾಸಹೃದ್ರೋಗಶೂಲನುತ್ || * * *
ಭಾರ್ಗೀ ಪುಷ್ಕರಮೂಲಂ ಚ ಮುಸ್ತಕಂ ಕಂಟಕಾರಿಕಾ |
ತ್ರಿಕಂಟಕಬೃಹತ್ಯೌ ಚ ಕರ್ಣಿನೀ(?ಕಾ)ನಾಗರೈಃ ಶೃತಃ ||
ಏಷ ಭಾರ್ಗ್ಯಾದಿಕೋ ನಾಮ್ನಾ ಪಿತ್ತಶ್ಲೇಷ್ಮಜ್ವರಾಪಹಃ |
ಹೃಲ್ಲಾಸಾರೋಚಕಛರ್ದಿತೃಷ್ಣಾದಾಹವಿಬನ್ಧನುತ್ ||
ನಾಗರೇಂದ್ರಯವಂ ಮುಸ್ತಂ ಚನ್ದನಂ ಕಟುರೋಹಿಣೀ |
ಪಿಪ್ಪಲೀಚೂರ್ಣಸಂಯುಕ್ತಂ ಕಷಾಯನ್ತು ಪಿಬೇನ್ನರಃ ||
ಭ್ರಮಮೂರ್ಚ್ಛಾರುಚಿಛರ್ದಿಪಿತ್ತಶ್ಲೇಷ್ಮಜ್ವರಾಪಹಃ(?ಮ್) |
ದ್ರಾಕ್ಷಾಶಮ್ಯಾಕಧಾನ್ಯಾಕಕಟುಕಾಮುಸ್ತಗ್ರನ್ಥಿಕಃ ||
ಕ್ವಾಥೋ ಹನ್ಯಾದುದಾವರ್ತಶೂಲಂ ಪಿತ್ತಕಫಜ್ವರಮ್ |
ಪಟೋಲಯವಧಾನ್ಯಾಕಮುದ್ಗಾಮಲಕಚನ್ದನಮ್ ||
ಪೈತ್ತಿಕೇ ಶ್ಲೇಷ್ಮಪಿತ್ತೋತ್ಥೇ ಜ್ವರೇ ತೃಟ್‍ಛರ್ದಿದಾಹನುತ್ |
ಸಪತ್ರಪುಷ್ಪವಾಸಾಯಾಃ ರಸಃ ಕ್ಷೌದ್ರಸಿತಾಯುತಃ ||
ಕಫಪಿತ್ತಜ್ವರಂ ಹನ್ತಿ ಸಾಸೃಕ್ಪಿತ್ತಂ ಸಕಾಮಲಮ್ ||

(ಚಿ. ಸಾ. ಸಂ. 27, 28, 29)

(1) ಏಲಕ್ಕಿ, ಕಹಿಪಡುವಲು, ತ್ರಿಫಲೆ, ಜ್ಯೇಷ್ಠಮಧು, ಆಡುಸೋಗೆ, ಇವುಗಳ ಕಷಾಯವನ್ನು, ಜೇನು ಕೂಡಿಸಿಕೊಂಡು, ಪಾನಮಾಡುವದರಿಂದ ಪಿತ್ತಕಫಜ್ವರನಾಶ.

ಪಠಾ 'ಏಲಾ' (ಏಲಕ್ಕಿ) ಎಂಬಲ್ಲಿ 'ಬಲಾ' (ಕಲ್ಲಂಗಡಲೆ) ಎಂತ ಪಾಠಾಂತರ ಕಾಣುತ್ತದೆ

(2) ಕಟುಕರೋಹಿಣಿ, ಅಣಿಲೆಕಾಯಿ, ದ್ರಾಕ್ಷೆ, ಭದ್ರಮುಷ್ಟಿ, ಪರ್ಪಾಟಕ, ಇವುಗಳ ಕಷಾಯದ ಪಾನವು ಕಫಪಿತ್ತಜ್ವರವನ್ನು ನಾಶಮಾಡುವದು.

(3) ನಿರ್ವಿಷದ ಬೇರು, ಬಜೆ, ಪರ್ಪಾಟಕ, ಕೊತ್ತುಂಬರಿ, (ಹುರಿದ) ಹಿಂಗು, ಅಣಿಲೆ ಕಾಯಿ, ಭದ್ರಮುಷ್ಟಿ, ಶಿವನ್ನಿ (ಕಾಶ್ಮೀರ), ಶುಂಠಿ, ಇವುಗಳ ಕಷಾಯವನ್ನು, ಜೇನು ಕೂಡಿಸಿ, ಕಫಪಿತ್ತಜ್ವರದಲ್ಲಿ ಕೊಡುವದು.

ಪರಾ ಹಿಂಗಿನ ಪುಡಿಯನ್ನು ಪ್ರತಿವಾಪವಾಗಿ ಕಡಿಮೆ ಪ್ರಮಾಣದಲ್ಲಿ ಉಪಯೋಗಿಸುವದು.

(4) ಒಂದು ಕರ್ಷ ಕಟುಕರೋಹಿಣೀ-ಚೂರ್ಣವನ್ನು, ಸಮಪಾಲು ಸಕ್ಕರೆ ಕೂಡಿಸಿ, ಬಿಸಿನೀರಿನಲ್ಲಿ ಕಲಸಿ, ಪಾನಮಾಡುವದರಿಂದ ಕಫಪಿತ್ತದಿಂದುಂಟಾದ ಜ್ವರವು ಜಯಿಸಲ್ಪಡುವದು.

(5) ಅಮೃತಬಳ್ಳಿ, ಕಹಿಬೇವು, ಕೊತ್ತುಂಬರಿ, ಪದ್ಮಕ, ಶ್ರೀಗಂಧ, ಇವುಗಳ ಕಷಾಯವು ಬಾಯಾರಿಕೆ, ಉರಿ, ಜ್ವರ, ವಾಂತಿ, ಪಿತ್ತಕಫಜ್ವರ, ಇವುಗಳನ್ನು ಹೋಗಾಡಿಸುವದು.

(6) ಕಹಿಪಡುವಲು, ಕಹಿಬೇವು, ತ್ರಿಫಲೆ, ಜ್ಯೇಷ್ಠಮಧು, ಕಲ್ಲಂಗಡಲೆಬೇರು, ಇವುಗಳ ಕಷಾಯವು ಕಫಪಿತ್ತಜ್ವರದಲ್ಲಿ ಹಿತವಾದ್ದು.

(7) ಕಹಿಪಡುವಲು, ಶ್ರೀಗಂಧ, ಹೆಗ್ಗುರುಟಿಗೆ, ಕಟುಕರೋಹಿಣಿ, ಪಾಡಾವಳಿಗಡ್ಡೆ, ಅಮೃತಬಳ್ಳಿ, ಈ ಗಣವು ಪಿತ್ತಕಫ, ಅರುಚಿ, ವಾಂತಿ, ಜ್ವರ, ತುರಿ ಮತ್ತು ವಿಷ ಇವುಗಳನ್ನು ಪರಿಹರಿಸುತ್ತದೆ.

ಪಟೋಲಾದಿ

(8) ತ್ರಿಫಲೆ, ತ್ರಾಯಮಾಣಾ, ದ್ರಾಕ್ಷೆ, ಕಟುಕರೋಹಿಣಿ, ಇವುಗಳ ಕಷಾಯವು ಪಿತ್ತಕಫಜ್ವರದಲ್ಲಿ ದೋಷಗಳನ್ನು ಕ್ರಮಪಡಿಸುತ್ತದೆ.

(9) ಆಡುಸೋಗೆ, ಪದ್ಮಕಾಷ್ಠ, ಶುಂಠಿ, ಶ್ರೀಗಂಧ, ಅಮೃತಬಳ್ಳಿ, ಕಹಿಪಡುವಲು, ಕೊತ್ತುಂಬರಿ, ಇವುಗಳ ಕಷಾಯವನ್ನು, ಜೇನು ಕೂಡಿಸಿಕೊಂಡು, ಪಾನಮಾಡುವದರಿಂದ ಕಫಪಿತ್ತಜ್ವರ, ಶೂಲೆ, ಕೈಕಾಲುಗಳ ಉರಿ, ಸಹ ನಾಶವಾಗುತ್ತವೆ.

(10) ಇಂದ್ರಜೀವಿ, ಪರ್ಪಾಟಕ, ಕೊತ್ತುಂಬರಿ, ಕಹಿಪಡುವಲು, ಕಹಿಬೇವು, ಇವುಗಳ ಕಷಾಯವನ್ನು, ಜೇನು ಮತ್ತು ಸಕ್ಕರೆ ಕೂಡಿಸಿಕೊಂಡು, ಪಿತ್ತಕಫಜ್ವರ-ಪರಿಹಾರಕ್ಕಾಗಿ ಕುಡಿಯತಕ್ಕದ್ದು.

(11) ಅಮೃತಬಳ್ಳಿ, ಇಂದ್ರಜೀವಿ, ಕಹಿಬೇವು, ಕಹಿಪಡುವಲು, ಕಟುಕರೋಹಿಣಿ, ಶುಂಠಿ, ಶ್ರೀಗಂಧ, ಭದ್ರಮುಷ್ಟಿ, 'ಅಮೃತಾಷ್ಟಕ' ಎಂಬ ಇವುಗಳ ಕಷಾಯವನ್ನು, ಹಿಪ್ಪಲಿ ಚೂರ್ಣ ಕೂಡಿಸಿಕೊಂಡು, ಪಾನಮಾಡಿದ್ದಲ್ಲಿ ಪಿತ್ತಕಫಜ್ವರ ವಾಸಿಯಾಗುವದು.

ಅಮೃತಾಷ್ಟಕ

(12) ಶುಂಠಿ ಮತ್ತು ಕಹಿಪಡುವಲು, ಇವುಗಳ ಕಷಾಯದ ಪಾನದಿಂದ ಕಫಪಿತ್ತ, ವಾಂತಿ, ತುರಿ, ಜ್ವರ, ವಿಸರ್ಪ, ಮತ್ತು ಉರಿ ನಾಶವಾಗುತ್ತವೆ.

(13) ಕಿರಿಗುಳ್ಳದ ಬೇರು, ಅಮೃತಬಳ್ಳಿ, ನಿರ್ವಿಷದ ಬೇರು, ಶುಂಠಿ, ಇಂದ್ರಜೀವಿ, ಬಳ್ಳಿತುರಚನ ಬೇರು, ನೆಲಬೇವು, ಶ್ರೀಗಂಧ, ಭದ್ರಮುಷ್ಟಿ, ಕಹಿಪಡುವಲು, ಕಟುಕರೋಹಿಣಿ, ಇವುಗಳ ಕಷಾಯವನ್ನು ಪಿತ್ತಕಫಜ್ವರ, ಉರಿ, ಬಾಯಾರಿಕೆ, ಅರುಚಿ, ವಾಂತಿ, ಕೆಮ್ಮು, ಹೃದ್ರೋಗ, ಶೂಲೆ, ಇವುಗಳ ನಾಶನಕ್ಕಾಗಿ ಪಾನಮಾಡಿಸಬೇಕು.

(14) ನಿರ್ವಿಷದ ಬೇರು, ಪುಷ್ಕರಮೂಲ, ಭದ್ರಮುಷ್ಟಿ, ಕಿರಿಗುಳ್ಳದ ಬೇರು, ನೆಗ್ಗಿಲ ಮುಳ್ಳು, ಗುಳ್ಳದ ಬೇರು, ತಾವರೆಬೀಜದ ಕೋಷ, ಶುಂಠಿ, ಈ ಭಾಂಗ್ಯಾರ್ದಿ, ಎಂಬ ಹೆಸರಿನ ಔಷಧವರ್ಗದ ಕಷಾಯದಿಂದ ಪಿತ್ತಶ್ಲೇಷ್ಮಜ್ವರ, ಎದೆಯಲ್ಲಿ ತಲ್ಲಣ, ಅರುಚಿ, ವಾಂತಿ, ಬಾಯಾರಿಕೆ, ಉರಿ, ಮಲಬದ್ಧತೆ, ಸಹ ಪರಿಹಾರವಾಗುತ್ತವೆ.

ಭಾಂಗ್ಯಾರ್ದಿ

(15) ಶುಂಠಿ, ಇಂದ್ರಜೇವಿ, ಭದ್ರಮುಷ್ಟಿ, ಶ್ರೀಗಂಧ, ಕಟುಕರೋಹಿಣಿ, ಇವುಗಳ ಕಷಾಯವನ್ನು, ಹಿಪ್ಪಲಿಚೂರ್ಣ ಕೂಡಿಸಿಕೊಂಡು, ಭ್ರಮೆ, ಮೂರ್ಛೆ, ಅರುಚಿ, ವಾಂತಿ, ಪಿತ್ತಕಫಜ್ವರ, ಇವುಗಳ ಪರಿಹಾರಕ್ಕಾಗಿ ಕುಡಿಯತಕ್ಕದ್ದು.

(16) ದ್ರಾಕ್ಷೆ, ಕಕ್ಕೆಮರ, ಕೊತ್ತುಂಬರಿ, ಕಟುಕರೋಹಿಣಿ, ಭದ್ರಮುಷ್ಟಿ, ಹಿಪ್ಪಲಿ ಮೂಲ, ಇವುಗಳ ಕಷಾಯವು ಕಫಪಿತ್ತಜ್ವರವನ್ನೂ, ಉದಾವರ್ತದ ಶೂಲೆಯನ್ನೂ, ನಾಶ ಮಾಡುವದು.

(17) ಕಹಿಪಡುವಲು, ಇಂದ್ರಜೇವಿ, ಕೊತ್ತುಂಬರಿ, ಹೆಸರು, ನೆಲ್ಲಿ, ಶ್ರೀಗಂಧ, ಇವುಗಳ ಕಷಾಯವು ಪಿತ್ತದ, ಅಥವಾ ಕಫಪಿತ್ತದ ಜ್ವರದಲ್ಲಿ ಬಾಯಾರಿಕೆ, ವಾಂತಿ ಮತ್ತು ಉರಿಯನ್ನು ಪರಿಹರಿಸುವದು.

(18) ಎಲೆ ಮತ್ತು ಹೂವು ಸಹಿತವಾದ ಆಡುಸೋಗೆಯ ಸ್ವರಸವನ್ನು, ಸಕ್ಕರೆ ಮತ್ತು ಜೇನು ಕೂಡಿಸಿಕೊಂಡು, ಸೇವಿಸಿದರೆ, ಕಫಪಿತ್ತಜ್ವರ, ರಕ್ತಪಿತ್ತ ಮತ್ತು ಕಾಮಿಲೆ ನಾಶವಾಗುವವು.

74. ಬೃಹತ್ಯೌ ವತ್ಸಕಂ ಮುಸ್ತಂ ದೇವದಾರು ಮಹೌಷಧಮ್ ।
ಕೋಲವಲ್ಲೀ ಚ ಯೋಗೋಽಯಂ ಸನ್ನಿಪಾತಜ್ವರಾಪಹಃ ॥
ಶಟೀ ಪುಷ್ಕರಮೂಲಂ ಚ ವ್ಯಾಘ್ರೀ ಶೃಂಗೀ ದುರಾಲಭಾ ।
ಗುಡೂಚೀ ನಾಗರಂ ಪಾಠಾ ಕಿರಾತಂ ಕಟುರೋಹಿಣೀ ॥
ಏಷ ಶಟ್ಯಾದಿಕೋ ವರ್ಗಃ ಸನ್ನಿಪಾತಜ್ವರಾಪಹಃ ।
ಕಾಸಹೃದ್ಗ್ರಹಪಾರ್ಶ್ವಾರ್ತಿಶ್ವಾಸತನ್ದ್ರಾಸು ಶಸ್ಯತೇ
ಬೃಹತ್ಯೌ ಪುಷ್ಕರಂ ಭಾರ್ಗೀ ಶಟೀ ಶೃಂಗೀ ದುರಾಲಭಾ ।
ವತ್ಸಕಸ್ಯ ಚ ಬೀಜಾನಿ ಪಟೋಲಂ ಕಟುರೋಹಿಣೀ ॥
ಬೃಹತ್ಯಾದಿರ್ಗಣಃ ಪ್ರೋಕ್ತಃ ಸನ್ನಿಪಾತಜ್ವರಾಪಹಃ ।
ಕಾಸಾದಿಷು ಚ ಸರ್ವೇಷು ದದ್ಯಾತ್ಸೋಪದ್ರವೇಷು ಚ ।

ಸಾಮಾನ್ಯವಾಗಿ ಸನ್ನಿಪಾತಜ್ವರಕ್ಕೆ ಕಷಾಯಾದಿಗಳು

(ಚ. 462, 463)

ದಶಮೂಲಮಿದಂ ಶ್ವಾಸಸನ್ನಿಪಾತಜ್ವರಾಪಹಮ್ ।
ಅವಿಪಾಕಾನಿಲಶ್ಲೇಷ್ಮತನ್ದ್ರಾಪಾರ್ಶ್ವಾರ್ತಿಕಾಸನುತ್ ॥
ಪಿಪ್ಪಲೀಚೂರ್ಣಸಂಯುಕ್ತಂ ಹೃತ್ಕಂಠಗ್ರಹನಾಶನಮ್ ।
ದಶಮೂಲೀ ಶಠೀ ಶೃಂಗೀ ಪೌಷ್ಕರಂ ಸದುರಾಲಭಮ್ ॥

ಭಾರ್ಗೀ ಕುಟಜಬೀಜಂ ಚ ಪಟೋಲಂ ಕಟುರೋಹಿಣೀ ।
ಅಷ್ಟಾದಶಾಂಗ ಇತ್ಯೇಷಃ ಸನ್ನಿಪಾತಜ್ವರಾಪಹಃ ॥
ಕಾಸಹೃದ್ಗ್ರಹಪಾರ್ಶ್ವಾರ್ತ್ತಿಶ್ವಾಸಹಿಕ್ಕಾವಮೀಹರಃ ।
ದಶಮೂಲೀಕಷಾಯಸ್ತು ಪುಷ್ಕರಾಹ್ವಕಣಾಯುತಮ್ ॥
ಸನ್ನಿಪಾತಜ್ವರೇ ದೇಯಂ ಶ್ವಾಸಕಾಸತೃಷಾನ್ವಿತೇ ।
* * * ಶಠೀ ಪುಷ್ಕರಮೂಲಸ್ತು ಗುಡೂಚೀ ವಿಶ್ವಭೇಷಜಮ್ ॥
ತ್ರಿಕಂಟಕಂ ತ್ರಾಯಮಾಣಾ ಪಿಪ್ಪಲೀ ಸದುರಾಲಭಾ ।
ವ್ಯಾಘ್ರೀ ಪರ್ಪಟಕಂ ರಾಸ್ನಾ ಽಭಯಾ ಕಟುಕರೋಹಿಣೀ ।
ದೇವದಾರುವಚಾಭಾರ್ಗೀಸಮಭಾಗಾನಿ ಕಾರಯೇತ್ ।
ಏಷ ಶರ್ಯಾದಿಕೋ ವರ್ಗಃ ಸನ್ನಿಪಾತಜ್ವರಾಪಹಃ ॥
ಕಾಸಂ ಶ್ವಾಸಂ ದಿವಾನಿದ್ರಾಂ ರಾತ್ರೌ ಜಾಗರಣಂ ತಥಾ ।
ಮುಖಶೋಷಂ ತೃಷಾಂ ದಾಹಂ ತ್ರಿದೋಷಂ ಚ ನಿಯಚ್ಛತಿ ॥
* * * ದಾರುನಾಗರಭೂನಿಂಬಧಾನ್ಯತಿಕ್ತಾಕಲಿಂಗಜೈಃ ।
ಗಜಾಹ್ವಾ ದಶಮೂಲಾಬ್ದೈರ್ಮೃತ್ಯುಕಲ್ಪಂ ಜ್ವರಂ ಜಯೇತ್ ॥
ಅಷ್ಟಾದಶಾಂಗ ಇತ್ಯೇಷ ಸನ್ನಿಪಾತಜ್ವರಾಪಹಃ ।
ಕಾಸಹೃದ್ಗ್ರಹಪಾರ್ಶ್ವಾರ್ತ್ತಿಶ್ವಾಸಹಿಕ್ಕಾವಮೀರ್ಹರೇತ್ ॥
ಗುಡೂಚೀ ಚನ್ದನಂ ಪದ್ಮನಾಗರೇನ್ದ್ರಯವಾಸಕಮ್ ।
ಅಭಯಾರಗ್ವಧೋಶೀರಪಾಠಾ ಧಾನ್ಯಾಬ್ದರೋಹಿಣೀ ॥
ಕಷಾಯಂ ಪಾಯಯೇದೇತತ್ ಪಿಪ್ಪಲೀಚೂರ್ಣಸಂಯುತಮ್ ।
ತನ್ದ್ರಾಕಾಸಜ್ವರಶ್ವಾಸಪಿಪಾಸಾದಾಹನಾಶನಃ ॥
ವಿಣ್ಮೂತ್ರಾನಿಲವಿಷ್ಟಂಭತ್ರಿದೋಷಪ್ರಭವಸ್ಯ ಚ ।
ಗುಡೂಚ್ಯಾದಿಗಣೋ ಹ್ಯೇಷ ಪಾಚನೋ ದೀಪನಃ ಪರಃ ॥
ಅಮೃತಾದಶಮೂಲೀಭ್ಯಾಂ ಸಾಧಿತಂ ವಿಧಿವಜ್ಜಲಮ್ ।
ಸನ್ನಿಪಾತಜ್ವರಂ ಹನ್ಯಾತ್ತ್ರಯೋದಶವಿಧಂ ನೃಣಾಮ್ ॥
* * * ತ್ರೂಷಣದಶಮೂಲಶುಣ್ಠೀ(?ಶಠೀ)ಭಾರ್ಗೀಭಿನ್ನೋದ್ಭವೋದ್ಭವಃ ಕ್ವಾಥಃ ।
ಪೀತಃ ಶಮಯತಿ ಸಹಸಾ ಜ್ವರಮುಗ್ರಂ ಸನ್ನಿಪಾತಾಖ್ಯಮ್ ॥
* * * ಸಿಂಹಾಸ್ಯಪರ್ಪಟಾರಿಷ್ಟಂ ಯಷ್ಟಿಧಾನ್ಯಕನಾಗರಮ್ ।
ದಾರೂಗ್ರಗನ್ಧೇನ್ದ್ರಯವಾಃ ಶ್ವದಂಷ್ಟ್ರಾ ಗ್ರನ್ಥಿಕಂ ತಥಾ ॥
ಏಷಾಂ ಕಷಾಯಮಹನಿ ಸನ್ನಿಪಾತಜ್ವರೇ ಪಿಬೇತ್ ।
ಶ್ವಾಸಾತಿಸಾರಕಾಸಘ್ನಂ ಶೂಲಾರುಚಿಹರಂ ಪರಮ್ ॥
(ಚಿ. ಸಾ. ಸಂ. 39—42)

ಶುಂಠೀ - ದಾರು - ಶಠೀ - ರಜೋಬ್ಬೃಹತಿಕಾತಿಕ್ತಾ - ಕಿರಾತಾಮ್ಬುದಾನಂತಾ-
ಭಿರ್ಜನಿತಃ ಕಷಾಯಕವರಃ ಕೃಷ್ಣಾಮಧುಭ್ಯಾಂ ಯುತಃ |
ನಿಃಶೇಷಂ ತ್ರಿಕಯೋದ್ಭವಜ್ವರಹರೋ ಜೀರ್ಣಜ್ವರಸ್ಯಾನ್ತಕೃತ್
ಕಾಸಾರಿರ್ವಿಷಮಾಪಹೋ ನಿಗದಿತಃ ಶುಂಠ್ಯಾದಿಕಃ ಸೂರಿಭಿಃ ||
ದಾರ್ವ್ಯಮ್ಬುದಾತಿಕ್ತಫಲತ್ರಿಕಂ ಚ ಕ್ಷುದ್ರಾ ಪಟೋಲೀ ರಜನೀ
ಸನಿಮ್ಬಾ |
ಕ್ವಾಥಂ ವಿದಧ್ಯಾಜ್ಜ್ವರಸನ್ನಿಪಾತೇ ನಿಶ್ಚೇತನೇ ಪುಂಸಿ ವಿಬೋಧ-
ನಾರ್ಥಮ್ ||
ಗ್ರನ್ಥೀನ್ದ್ರಜಾಮರಪುರಕ್ರಿಮಿಶತ್ರುಭಾಂಗೀ-
ಭೃಂಗತ್ರಿಕಟ್ವನಲಕಟ್ಫಲಪೌಷ್ಕರಾಣಾಮ್ |
ರಾಸ್ನಾಭಯಾಬೃಹತಿಕಾದ್ವಯದೀಪ್ಯಭೂತ-
ಕೇಶೀಕಿರಾತಕವಚಾಚವಿಕಾವೃಕೀಣಾಮ್ ||
ಕ್ವಾಥೋ ಹನ್ಯಾತ್ಸನ್ನಿಪಾತಾನ್ಸಮುಗ್ರಾನ್ ಬುದ್ಧಿಭ್ರಂಶಸ್ವೇದಶೈತ್ಯ-
ಪ್ರಲಾಪಾನ್ |
ಶೂಲಾಧ್ಮಾನಂ ವಿದ್ರಧಿಂ ಶ್ಲೇಷ್ಮವಾತಾನ್ ವಾತವ್ಯಾಧೀನ್ ಸೂತಿಕಾನಾಂ ಚ
ತದ್ವತ್ || (ನಿ. ರ.)

(1) ಗುಳ್ಳದ ಬೇರು, ಕಿರಿಗುಳ್ಳದ ಬೇರು, ಆಡುಸೋಗೆ, ಭದ್ರಮುಷ್ಟಿ, ದೇವದಾರ, ಶುಂಠಿ, ಗಜಹಿಪ್ಪಲಿ, ಇವುಗಳ ಯೋಗವು ಸನ್ನಿಪಾತಜ್ವರಹರವಾದ್ದು.

ಶಟ್ಯಾದಿ ಕಷಾಯ.

(2) ಸಣ್ಣಕಚೋರ, ಪುಷ್ಕರಮೂಲ, ಕಿರಿಗುಳ್ಳದ ಬೇರು, ಕರ್ಕಟಶೃಂಗಿ, ಬಳ್ಳಿತುರಚನ ಬೇರು, ಅಮೃತಬಳ್ಳಿ, ಶುಂಠಿ, ಪಾಡಾವಳಿಗಡ್ಡೆ, ನೆಲಬೇವು, ಕಟುಕರೋಹಿಣಿ, ಈ 'ಶಟ್ಯಾದಿ' ವರ್ಗವು ಸನ್ನಿಪಾತಜ್ವರಹರ, ಕೆಮ್ಮು, ಎದೆ ಹಿಡಿದದ್ದು, ಪಕ್ಕದ ಶೂಲೆ, ಉಬ್ಬಸ ಮತ್ತು ತಂದ್ರೆಗಳಲ್ಲಿ ಪ್ರಶಸ್ತವಾದ್ದು.

ಬೃಹತ್ಯಾದಿ ಕಷಾಯ

(3) ಗುಳ್ಳದ ಬೇರು, ಕಿರಿಗುಳ್ಳದ ಬೇರು, ಪುಷ್ಕರಮೂಲ, ನಿರ್ವಿಷದ ಬೇರು, ಸಣ್ಣ ಕಚೋರ, ಕರ್ಕಟಶೃಂಗಿ, ಬಳ್ಳಿತುರಚನ ಬೇರು, ಇಂದ್ರಜೇವಿ, ಕಹಿಪಡುವಲು, ಕಟುಕರೋಹಿಣಿ, ಈ ಬೃಹತ್ಯಾದಿ ಗಣವು ಸನ್ನಿಪಾತಜ್ವರಹರವಾದ್ದು; ಕೆಮ್ಮು ಮುಂತಾದ ಉಪದ್ರವಗಳುಳ್ಳ ಎಲ್ಲಾ ಸಂಗತಿಗಳಲ್ಲಿಯೂ ಕೊಡಬಹುದಾದ್ದು.

(4) (ಬೃಹತ್ಪಂಚಮೂಲಗಳೂ-ಹ್ರಸ್ವಪಂಚಮೂಲಗಳೂ ಸೇರಿದ) ದಶಮೂಲಗಳ ಕಷಾಯವು ಸನ್ನಿಪಾತಜ್ವರಹರ, ಉಬ್ಬಸ, ಅಜೀರ್ಣ, ವಾಯು, ಕಫ, ತಂದ್ರೆ, ಪಕ್ಕಗಳ ಶೂಲೆ, ಕೆಮ್ಮು, ಇವುಗಳನ್ನು ಸಹ ಪರಿಹರಿಸುತ್ತದೆ. ಈ ಕಷಾಯವನ್ನು, ಹಿಪ್ಪಲಿ ಚೂರ್ಣ ಕೂಡಿಸಿಕೊಂಡು, ಸೇವಿಸಿದ್ದಲ್ಲಿ ಎದೆ ಹಿಡಿದದ್ದು ಮತ್ತು ಗಂಟಲು ಕಟ್ಟಿದ್ದು ಸಹ ಪರಿಹಾರವಾಗುವವು.

ದಶಮೂಲಾದಿ ಅಷ್ಟಾದಶಾಂಗ ಕಷಾಯ

(5) ದಶಮೂಲಗಳು, ಸಣ್ಣಕಚೋರ, ಕರ್ಕಟಶೃಂಗಿ, ಪುಷ್ಕರಮೂಲ, ಬಳ್ಳಿತುರಚನ ಬೇರು, ನಿರ್ವಿಷದ ಬೇರು, ಇಂದ್ರಜೇವಿ, ಕಹಿಪಡುವಲು, ಕಟುಕರೋಹಿಣಿ, ಈ 'ಅಷ್ಟಾದಶಾಂಗ' (೧೮ ಬಗೆ) ಎಂಬ ಕಷಾಯವು ಸನ್ನಿಪಾತ ಜ್ವರ, ಕೆಮ್ಮು, ಎದೆ ಹಿಡಕೊಂಡದ್ದು, ಪಕ್ಕದ ಶೂಲೆ, ಉಬ್ಬಸ, ಬಿಕ್ಕಟ್ಟು, ಮತ್ತು ವಾಂತಿ, ಇವುಗಳನ್ನು ಪರಿಹರಿಸುವದು.

(6) ದಶಮೂಲಗಳು, ಪುಷ್ಕರಮೂಲ, ಹಿಪ್ಪಲಿ, ಇವುಗಳ ಕಷಾಯವನ್ನು ಉಬ್ಬಸ, ಕೆಮ್ಮು ಮತ್ತು ಬಾಯಾರಿಕೆಯುಳ್ಳ ಸನ್ನಿಪಾತಜ್ವರದಲ್ಲಿ ಕೊಡತಕ್ಕದ್ದು.

ಬೃಹಚ್ಛಟ್ಯಾದಿ ಕಷಾಯ

(7) ಸಣ್ಣಕಚೋರ, ಪುಷ್ಕರಮೂಲ, ಅಮೃತಬಳ್ಳಿ, ಶುಂಠಿ, ನೆಗ್ಗಿಲಮುಳ್ಳು, ತ್ರಾಯಮಾಣಾ, ಹಿಪ್ಪಲಿ, ಬಳ್ಳಿತುರಚನ ಬೇರು, ಕಿರಿಗುಳ್ಳದ ಬೇರು, ಪರ್ಪಾಟಕ, ರಾಸ್ನೆಗಡ್ಡೆ (ಅರತೆ), ಅಣಿಲೆಕಾಯಿ, ಕಟುಕರೋಹಿಣಿ, ದೇವದಾರ, ಬಜೆ, ನಿರ್ವಿಷದ ಬೇರು, ಈ ಶಟ್ಯಾದಿ ವರ್ಗದ ಔಷಧಗಳನ್ನು ಸಮತೂಕವಾಗಿ ಕೂಡಿಸಿ ಮಾಡಿದ ಕಷಾಯವು ಸನ್ನಿಪಾತಜ್ವರ, ಕೆಮ್ಮು, ಉಬ್ಬಸ, ಹಗಲುನಿದ್ರೆ, ರಾತ್ರಿ ಜಾಗರಣ, ಬಾಯಿ ಒಣಗುವಿಕೆ, ಬಾಯಾರಿಕೆ, ಉರಿ ಮತ್ತು ತ್ರಿದೋಷ, ಇವುಗಳನ್ನೆಲ್ಲಾ ಪರಿಹರಿಸುತ್ತದೆ.

ದಾರ್ವಾದಿ ಅಷ್ಟಾದಶಾಂಗ ಕಷಾಯ

(8) ದೇವದಾರ, ಶುಂಠಿ, ನೆಲಬೇವು, ಕೊತ್ತುಂಬರಿ, ಕಟುಕರೋಹಿಣಿ, ಇಂದ್ರಜೇವಿ, ಗಜಹಿಪ್ಪಲಿ, ದಶಮೂಲಗಳು, ಭದ್ರಮುಷ್ಟಿ, ಈ (೧೮ ಬಗೆಗಳ) 'ಅಷ್ಟಾದಶಾಂಗ' ಎಂಬ ಕಷಾಯದಿಂದ ಯಮನಿಗೆ ಸದೃಶವಾದ ಜ್ವರವು ಜಯಿಸಲ್ಪಡುವದಲ್ಲದೆ, ಕೆಮ್ಮು, ಎದೆ ಹಿಡಿದದ್ದು, ಪಕ್ಕದ ಶೂಲೆ, ಉಬ್ಬಸ, ಬಿಕ್ಕಟ್ಟು ಮತ್ತು ವಾಂತಿ ಸಹ ಪರಿಹಾರವಾಗುತ್ತವೆ.

ಗುಡೂಚ್ಯಾದಿ ಕಷಾಯ

(9) ಅಮೃತಬಳ್ಳಿ, ಶ್ರೀಗಂಧ, ತಾವರೆದಂಟು, ಶುಂಠಿ, ಇಂದ್ರಜೇವಿ, ಬಳ್ಳಿತುರಚನ ಬೇರು, ಅಣಿಲೆಕಾಯಿ, ಕಕ್ಕೆಬೇರು, ಲಾಮಂಚ, ಪಾಡಾವಳಿಗಡ್ಡೆ, ಕೊತ್ತುಂಬರಿ, ಭದ್ರಮುಷ್ಟಿ, ಕಟುಕರೋಹಿಣಿ, ಇವುಗಳ ಕಷಾಯವನ್ನು, ಹಿಪ್ಪಲಿ ಚೂರ್ಣ ಕೂಡಿಸಿ, ಪಾನಮಾಡಿಸಿದ್ದಲ್ಲಿ ತ್ರಿದೋಷದಿಂದುಂಟಾದ ತಂದ್ರೆ, ಕೆಮ್ಮು, ಜ್ವರ, ಉಬ್ಬಸ, ಬಾಯಾರಿಕೆ, ಉರಿ, ಮಲ-ಮೂತ್ರ-ವಾಯುಗಳ ತಡೆ, ಸಹ ನಾಶವಾಗುವವು. ಈ 'ಗುಡೂಚ್ಯಾದಿ' ಗಣವು ದೀಪನ-ಪಾಚನ ಮಾಡುವದಕ್ಕೆ ಉತ್ತಮವಾದ್ದು.

(10) ಅಮೃತಬಳ್ಳಿ ಮತ್ತು ದಶಮೂಲಗಳನ್ನು ಸೇರಿಸಿ ವಿಧಿಪ್ರಕಾರ ಮಾಡಿದ ಕಷಾಯದ ಪಾನದಿಂದ ಹದಿಮೂರು ವಿಧವಾದ ಸನ್ನಿಪಾತಜ್ವರವು ನಾಶವಾಗುವದು.

(11) ತ್ರಿಕಟು, ದಶಮೂಲಗಳು, ಸಣ್ಣಕಚೋರ, ನಿರ್ವಿಷದ ಬೇರು, ಅಮೃತಬಳ್ಳಿ, ಇವುಗಳ ಕಷಾಯದ ಪಾನದಿಂದ ಉಗ್ರವಾದ ಸನ್ನಿಪಾತಜ್ವರವು ಒಡನೆ ಶಾಂತವಾಗುವದು.

ಪಠಾ 'ಶಠೀ' ಎಂಬಲ್ಲಿ 'ಶುಂಠೀ' ಎಂತ ಮೂಲದಲ್ಲಿರುವದು ತಪ್ಪಾಗಿರಬೇಕು ನಿ ರ.ದಲ್ಲಿ 'ಶಠೀ' ಎಂತ ಉಂಟು.

(12) ಆಡುಸೋಗೆ, ಪರ್ಪಾಟಕ, ಕಹಿಬೇವು, ಜ್ಯೇಷ್ಠಮಧು, ಕೊತ್ತುಂಬರಿ, ಶುಂಠಿ, ದೇವದಾರ, ಬಜೆ, ಇಂದ್ರಜೇವಿ, ನೆಗ್ಗಿಲಮುಳ್ಳು, ಹಿಪ್ಪಲಿಮೂಲ, ಇವುಗಳ ಕಷಾಯವನ್ನು

ಸನ್ನಿಪಾತಜ್ವರದಲ್ಲಿ ಹಗಲು ಹೊತ್ತು ಕುಡಿಯಬೇಕು. ಅದು ಉಬ್ಬಸ, ಅತಿಸಾರ, ಕೆಮ್ಮುಗಳನ್ನು ನಾಶಮಾಡುವದಲ್ಲದೆ, ಶೂಲೆ ಮತ್ತು ಅರುಚಿಗಳನ್ನು ಪರಿಹರಿಸುವದಕ್ಕೆ ಉತ್ತಮವಾದ್ದು.

ಶುಂಠ್ಯಾದಿ ಕಷಾಯ

(13) ಶುಂಠಿ, ದೇವದಾರ, ಸಣ್ಣಕಚೋರ, ಪರ್ಪಾಟಕ, ಗುಳ್ಳದ ಬೇರು, ಕಟುಕರೋಹಿಣಿ, ನೆಲಬೇವು, ಭದ್ರಮುಷ್ಟಿ, ಒಳ್ಳೆತುರಚನ ಬೇರು, ಈ ಶುಂಠ್ಯಾದಿ ಗಣದ ಔಷಧಗಳ ಉತ್ತಮವಾದ ಕಷಾಯವನ್ನು, ಹಿಪ್ಪಲಿಪುಡಿ ಮತ್ತು ಜೇನು ಕೂಡಿಸಿಕೊಂಡು, ಕುಡಿಯುವದರಿಂದ ಸಕಲ ತ್ರಿದೋಷದಿಂದುಂಟಾದ ಜ್ವರಗಳು ಮತ್ತು ಜೀರ್ಣಜ್ವರ ಪರಿಹಾರವಾಗುತ್ತವೆಂತಲೂ, ಕೆಮ್ಮು ಮತ್ತು ವಿಷಮಜ್ವರ ಸಹ ನಾಶವಾಗುತ್ತವೆಂತಲೂ, ಪಂಡಿತರಿಂದ ಹೇಳಲ್ಪಟ್ಟದೆ.

(14) ಮರದರಸಿನ, ಭದ್ರಮುಷ್ಟಿ, ಕಟುಕರೋಹಿಣಿ, ತ್ರಿಫಲೆ, ಕಿರಿಗುಳ್ಳದ ಬೇರು, ಕಹಿಪಡುವಲು, ಅರಸಿನ, ಕಹಿಬೇವು, ಇವುಗಳ ಕಷಾಯವನ್ನು ಸನ್ನಿಪಾತಜ್ವರದಲ್ಲಿ ಎಚ್ಚರ ತಪ್ಪಿದ ರೋಗಿಗೆ ಎಚ್ಚರವನ್ನುಂಟುಮಾಡುವದಕ್ಕಾಗಿ ಕೊಡತಕ್ಕದ್ದು.

(15) ಹಿಪ್ಪಲಿಮೂಲ, ಇಂದ್ರಜೀವಿ, ದೇವದಾರ, (ಶುದ್ಧ) ಗುಗ್ಗುಳ, ವಾಯುವಿಳಂಗ, ನಿರ್ವಿಷದ ಬೇರು, ಗರುಗ, ತ್ರಿಕಟು, ಚಿತ್ರಮೂಲ, ಕಟ್ಫಲ (ಕಿರುಶಿವನಿ), ಪುಷ್ಕರಮೂಲ, ರಾಸ್ಮೆಗಡ್ಡೆ (ಅರತೆ), ಅಣಿಲೆಕಾಯಿ, ಗುಳ್ಳದ ಬೇರು, ಕಿರಿಗುಳ್ಳದ ಬೇರು, ಓಮ, ಕರಿನೆಕ್ಕಿ, ನೆಲಬೇವು, ಬಜೆ, ಕಾಡುಮೆಣಸಿನ ಬೇರು, ಪಾಡಾವಳಿಗಡ್ಡೆ, ಇವುಗಳ ಕಷಾಯವು ಸಮಸ್ತ ಸನ್ನಿಪಾತಗಳನ್ನೂ, ಬುದ್ಧಿವಿಕಾರ, ಅತಿಬೆವರು, ಶೈತ್ಯ ಮತ್ತು ಪ್ರಲಾಪಗಳನ್ನೂ, ಶೂಲೆ, ಹೊಟ್ಟೆಯುಬ್ಬರ ಮತ್ತು ವಿದ್ರಧಿಗಳನ್ನೂ, ಕಫವಾತರೋಗಗಳನ್ನೂ, ಬಾಣಂತಿಯ ವಾತರೋಗಗಳನ್ನೂ ನಾಶಮಾಡುವದು.

ವಿಕದೋಷೋಲ್ಬಣ ಸನ್ನಿಪಾತಗಳಿಗೆ ಕಷಾಯಗಳು

75 ಪಿತ್ತಾಧಿಕ್ಯೇ ತು ಶರ್ವ್ಯಾದಿರ್ಬೃಹತ್ಯಾದಿಃ ಕಫಾಧಿಕೇ |
ವಾತೋತ್ತರೇ ಸನ್ನಿಪಾತೇ ಕಟ್ಫಲಾದಿಃ ಪ್ರಶಸ್ಯತೇ || (ಚಿ. ಸಾ ಸಂ 41)

ಸನ್ನಿಪಾತಜ್ವರಗಳಲ್ಲಿ ಪಿತ್ತ ಅಧಿಕವಾಗಿದ್ದರೆ ಶರ್ವ್ಯಾದಿ, ಕಫಾಧಿಕವಾಗಿದ್ದಲ್ಲಿ ಬೃಹತ್ಯಾದಿ, ವಾತಾಧಿಕವಾಗಿರುವಲ್ಲಿ ಕಟ್ಫಲಾದಿ, ವರ್ಗ(ದ ಔಷಧಗಳ ಕಷಾಯ)ವು ಪ್ರಶಸ್ತವಾಗಿರುತ್ತದೆ.

ಷರಾ ಶರ್ವ್ಯಾದಿ ಮತ್ತು ಬೃಹತ್ಯಾದಿ ಗಣಗಳ ವಿವರವು ಹಿಂದಣ 74ನೇ ಸಂಖ್ಯೆಯಲ್ಲಿ ಕೊಡಲ್ಪಟ್ಟಿದೆ

ಕಟ್ಫಲಾದಿ ಗಣ

ಕಟ್ಫಲಾಬ್ದವಚಾಪಾಠಾಪುಷ್ಕರಾಜಾಜಿಪರ್ಪಟೈಃ |
ದೇವದಾರ್ವಭಯಾಶೃಂಗೀಕಣಾಭೂನಿಮ್ಬನಾಗರೈಃ ||
ಭಾರ್ಗೀಕಲಿಂಗಕಟುಕಾಶಠಿಕತ್ತೃಣಧಾನ್ಯಕೈಃ |
ಸಮಾಂಶೈಃ ಸಾಧಿತಃ ಕ್ವಾಥೋ ಹಿಂಗ್ವಾರ್ದ್ರಕರಸೈರ್ಯುತಃ ||
ಕರ್ಣಮೂಲೋದ್ಭವಂ ಶೋಥಂ ಹನ್ತಿ ಮನ್ಯಾಗಲಾಶ್ರಯಮ್ |
ಕಫವಾತಜ್ವರಂ ಶ್ವಾಸಂ ಕಾಸಂ ಹಿಕ್ಕಾಂ ಹನುಗ್ರಹಮ್ ||
ದಶಮೂಲಯುತೋ ಹ್ಯೇಷ ಸನ್ನಿಪಾತಜ್ವರಂ ಜಯೇತ್ |
ಅಭಿನ್ಯಾಸಂ ಸಮಸ್ತಂ ಚ ಕಟ್ಫಲಾದಿರ್ನಿಯಚ್ಛತಿ || (ಚಿ. ಸಾ. ಸಂ. 41)

ಕಿರುಶಿವನಿಬೇರು (ಕಟ್ಫಲ), ಭದ್ರಮುಷ್ಟಿ, ಬಜೆ, ಪಾಡಾವಳಿಗಡ್ಡೆ, ಪುಷ್ಕರಮೂಲ, ಕರಿಜೀರಿಗೆ, ಪರ್ಪಾಟಕ, ದೇವದಾರ, ಅಣಿಲೆಕಾಯಿ, ಕರ್ಕಟಶೃಂಗಿ, ಹಿಪ್ಪಲಿ, ನೆಲಬೇವು, ಶುಂಠಿ, ನಿರ್ವಿಷದ ಬೇರು, ಕೊಡಸಿಗನ ಬೇರು (ಅಥವಾ ಇಂದ್ರಜೀವಿ), ಕಟುಕರೋಹಿಣಿ, ಸಣ್ಣಕಚೋರ, ಸಂಬಾರಹುಲ್ಲು (ಮಲ. ನಾನ್ಮುಕಪ್ಪುಲ್ಲು), ಕೊತ್ತುಂಬರಿ, ಇವುಗಳನ್ನು ಸಮಾಂಶವಾಗಿ ತೆಗೆದುಕೊಂಡು ಮಾಡಿದ ಕಷಾಯವನ್ನು, ಹುರಿದ ಹಿಂಗಿನ ಪುಡಿ ಮತ್ತು ಶುಂಠಿರಸ ಕೂಡಿಸಿ, ಪಾನಮಾಡಿಸುವದರಿಂದ ಕಿವಿಯ ಬುಡದಲ್ಲಿ ಎದ್ದಂಥ, ಅಥವಾ (ಕುತ್ತಿಗೆಯ ಹಿಂಬದಿ) ಮನ್ಯೆಗಳನ್ನಾಗಲಿ ಗಂಟಲನ್ನಾಗಲಿ ಆಶ್ರಯಿಸಿಕೊಂಡ, ಬಾವು ವಾಸಿಯಾಗುವದು; ಕಫವಾತಜ್ವರ, ಉಬ್ಬಸ, ಕೆಮ್ಮು, ಬಿಕ್ಕಟ್ಟು ಮತ್ತು ಹನುಗ್ರಹ ಪರಿಹಾರವಾಗುವವು; ಇವುಗಳೊಂದಿಗೆ ದಶಮೂಲಗಳನ್ನು ಕೂಡಿಸಿಕೊಂಡು ಮಾಡಿದ ಕಷಾಯವು ಸನ್ನಿಪಾತಜ್ವರವನ್ನು ಜಯಿಸುತ್ತದೆ; ಈ ಕಟ್ಫಲಾದಿಯು ಸಮಸ್ತವಾದ ಅಭಿನ್ಯಾಸವನ್ನು (ಮೂರು ದೋಷಗಳು ಕೆದರಿಕೊಂಡ ಸನ್ನಿಪಾತವಿಶೇಷ) ಗೆಲ್ಲುತ್ತದೆ.

ಪಂಚಮೂಲೀಕಷಾಯಂ ತು ದದ್ಯಾದ್ವಾತೋಲ್ಬಣೇ ಜ್ವರೇ ।
ಭೃಶೋಷ್ಣಂ ವಾ ಸುಖೋಷ್ಣಂ ವಾ ದೃಷ್ಟ್ವಾ ದೋಷಬಲಾಬಲಮ್ ॥
ಪರೂಷಕಂ ಚ ತ್ರಿಫಲಾ ದೇವದಾರು ಚ ಕಟ್ಫಲಮ್ ।
ಚನ್ದನಂ ಪದ್ಮಕಂ ಚೈವ ತಥಾ ಕಟುಕರೋಹಿಣೀ ॥
ಪೃಷ್ಣಿಪರ್ಣೀ ಶೃತಂ ತ್ವೇಭಿರುಷಿತಂ ಶೀತಲಂ ಜಲಮ್ ।
ಪಿತ್ತೋತ್ತರೇ ನೃಣಾಮೇತತ್ಸನ್ನಿಪಾತೇ ಚಿಕಿತ್ಸಿತಮ್ ॥
ಕಿರಾತತಿಕ್ತಕಂ ಮುಸ್ತಂ ಗುಡೂಚೀ ವಿಶ್ವಭೇಷಜಮ್ ।
ಪಾಠೋದೀಚ್ಯಂ ಮೃಣಾಲಂ ಚ ಶೃತಂ ಪಿತ್ತಾಧಿಕೇ ಪಿಬೇತ್ ॥
* * * ಬೃಹತ್ಯಾದಿಗಣಃ ಶಸ್ತಃ ಸನ್ನಿಪಾತೇ ಕಫೋತ್ತರೇ ।
ಶ್ವಾಸಾದಿಷು ಚ ಸರ್ವೇಷು ಹಿತಃ ಸೋಪದ್ರವೇಷ್ವಪಿ ॥ (ಭಾ. ಪ್ರ 297)

ವಾತಾಧಿಕ್ಯವುಳ್ಳ ಸನ್ನಿಪಾತಜ್ವರದಲ್ಲಿ (ಮಹತ್) ಪಂಚಮೂಲಗಳ ಕಷಾಯವನ್ನು ಒಳ್ಳೆ ಬಿಸಿಯಾಗಿ ಆಗಲಿ, ಸುಖೋಷ್ಣವಾಗಿ ಆಗಲಿ, ದೋಷಗಳ ಬಲಾಬಲ ನೋಡಿಕೊಂಡು ಕೊಡತಕ್ಕದ್ದು.

ಷರಾ ಈ ಪಂಚಮೂಲಗಳೊಂದಿಗೆ ಭದ್ರಮುಷ್ಟಿ ಕೂಡಿಸಬೇಕಾಗಿ ನಿ ರ.

ಪರೂಷಕ, ತ್ರಿಫಲೆ, ದೇವದಾರ, ಕಿರುಶಿವನಿ (ಕಟ್ಫಲ), ಶ್ರೀಗಂಧ, ಪದ್ಮಕಾಷ್ಠ, ಕಟುಕರೋಹಿಣಿ, ಓರೆಲೆಬೇರು, ಇವುಗಳ ಕಷಾಯವನ್ನು ಕಾಯಿಸಿ, ತಣಿಸಿ, ತಣ್ಣಗಾದ ಆ ನೀರನ್ನು ಪಿತ್ತಪ್ರಧಾನವಾದ ಸನ್ನಿಪಾತಜ್ವರದ ಪರಿಹಾರಕ್ಕಾಗಿ ಕೊಡತಕ್ಕದ್ದು.

ನೆಲಬೇವು, ಭದ್ರಮುಷ್ಟಿ, ಅಮೃತಬಳ್ಳಿ, ಶುಂಠಿ, ಪಾಡಾವಳಿಗಡ್ಡೆ, ಲಾಮಂಚ, ತಾವರೆದಂಟು, ಇವುಗಳ ಕಷಾಯವನ್ನು ಪಿತ್ತಾಧಿಕ್ಯವುಳ್ಳ ಸನ್ನಿಪಾತಜ್ವರದಲ್ಲಿ ಕುಡಿಯತಕ್ಕದ್ದು.

(ಮೇಲೆ ವರ್ಣಿಸಿರುವ) ಬೃಹತ್ಯಾದಿ ಗಣವು ಕಫಾಧಿಕ್ಯವುಳ್ಳ ಸನ್ನಿಪಾತಜ್ವರದಲ್ಲಿ ಪ್ರಶಸ್ತವಾದ್ದು; ಉಬ್ಬಸ ಮೊದಲಾದ ಉಪದ್ರವಗಳು ಕೂಡಿಕೊಂಡಿರುವಲ್ಲಿ ಸಹ ಹಿತವಾದ್ದು.

76. ಕಿರಾತತಿಕ್ತಕಂ ಮುಸ್ತಂ ಗುಡೂಚೀ ವಿಶ್ವಭೇಷಜಮ್ ।
ಚಾತುರ್ಭದ್ರಕಮಿತ್ಯಾಹುರ್ವಾತಪಿತ್ತೋಲ್ಬಣೇ ಜ್ವರೇ ॥
(ಭಾ. ಪ್ರ. 297)

ವಾತಪಿತ್ತೋಲ್ಬಣ ಸನ್ನಿಪಾತಕ್ಕೆ ಕಷಾಯಗಳು. ಚಾತುರ್ಭದ್ರಕ

ನೆಲಬೇವು, ಭದ್ರಮುಷ್ಟಿ, ಅಮೃತಬಳ್ಳಿ, ಶುಂಠಿ, ಇವುಗಳ ಕಷಾಯವು ವಾತಪಿತ್ತಾಧಿಕ್ಯವುಳ್ಳ ಸನ್ನಿಪಾತಜ್ವರದಲ್ಲಿ ಹಿತವಾದ್ದು; ಅದಕ್ಕೆ ಚಾತುರ್ಭದ್ರಕ ಎನ್ನುತ್ತಾರೆ.

ಷರಾ ಈ ಕಷಾಯವು ಹಿಂದೆ ವಾತಶ್ಲೇಷ್ಮಜ್ವರಕ್ಕೆ ಹೇಳಲ್ಪಟ್ಟದ್ದೇ

ವಾತಪಿತ್ತಹರಂ ವೃಷ್ಯಂ ಕನೀಯಃ ಪಂಚಮೂಲಕಮ್ ।
ತತ್ಕ್ವಾಥೋ ಮಧುನಾ ಹನ್ತಿ ವಾತಪಿತ್ತೋಲ್ಬಣಂ ಜ್ವರಮ್ ॥ (ನಿ. ರ.)

ಹ್ರಸ್ವಪಂಚಮೂಲವು ವಾತಪಿತ್ತಹರ ಮತ್ತು ವೃಷ್ಯಗುಣವುಳ್ಳದ್ದು; ಅದರ ಕಷಾಯವನ್ನು, ಜೇನು ಕೂಡಿಸಿಕೊಂಡು, ಪಾನಮಾಡುವದರಿಂದ ವಾತಪಿತ್ತಾಧಿಕ್ಯವುಳ್ಳ (ಸನ್ನಿಪಾತ) ಜ್ವರವು ಸಾಯುವದು.

77. ಪರ್ಪಟಃ ಕಟ್ಫಲಂ ಕುಷ್ಠಮುಶೀರಂ ಚನ್ದನಂ ಜಲಮ್ ।
ನಾಗರಂ ಮುಸ್ತಕಂ ಶೃಂಗೀ ಪಿಪ್ಪಲ್ಯೇಷಾಂ ಶೃತಂ ಹಿತಮ್ ॥
ತೃಷ್ಣಾದಾಹಾಗ್ನಿಮಾನ್ದ್ಯೇಷು ಪಿತ್ತಶ್ಲೇಷ್ಮೋಲ್ಬಣೇ ಜ್ವರೇ ॥
(ಭಾ. ಪ್ರ. 297)

ಪಿತ್ತಶ್ಲೇಷ್ಮೋಲ್ಬಣ ಸನ್ನಿಪಾತಕ್ಕೆ ಕಷಾಯ.

ಪರ್ಪಾಟಕ, ಕಿರುಶಿವನಿಬೇರು (ಕಟ್ಫಲ), ಚಂಗಲಕೋಷ್ಠ, ಲಾಮಂಚ, ಶ್ರೀಗಂಧ, ಮುಡಿವಾಳ (ಅಥವಾ ಇರುವೇರಿ), ಶುಂಠಿ, ಭದ್ರಮುಷ್ಟಿ, ಕರ್ಕಟಶೃಂಗಿ, ಹಿಪ್ಪಲಿ, ಇವುಗಳ ಕಷಾಯವು ಪಿತ್ತಕಫಾಧಿಕ್ಯವುಳ್ಳ ಸನ್ನಿಪಾತಜ್ವರದಲ್ಲಿಯೂ, ಬಾಯಾರಿಕೆ-ಉರಿ-ಅಗ್ನಿಮಾಂದ್ಯಗಳಲ್ಲಿಯೂ ಹಿತವಾದ್ದು.

78. ಕ್ಷುದ್ರಾಮೃತಾನಾಗರಪುಷ್ಕರಾಹ್ವಯೈಃ ಕೃತಃ ಕಷಾಯಃ ಕಫಮಾರುತೋತ್ತರೇ ।
ಸಶ್ವಾಸಕಾಸಾರುಚಿಪಾರ್ಶ್ವರುಕ್ಕರೇ ಜ್ವರೇ ತ್ರಿದೋಷಪ್ರಭವೇಽಪಿ ಶಸ್ಯತೇ ॥
(ಚಿ. ಸಾ. ಸಂ. 29)

ವಾತಕಫೋಲ್ಬಣ ಸನ್ನಿಪಾತಕ್ಕೆ ಕಷಾಯ

ಕಿರಿಗುಳ್ಳದ ಬೇರು, ಅಮೃತಬಳ್ಳಿ, ಶುಂಠಿ, ಪುಷ್ಕರಮೂಲ, ಇವುಗಳ ಕಷಾಯವು ಕಫವಾತಾಧಿಕ್ಯವುಳ್ಳ, ಉಬ್ಬಸ-ಕೆಮ್ಮು-ಅರುಚಿ-ಪಾರ್ಶ್ವಶೂಲೆಗಳಿಂದ ಕೂಡಿದ ಜ್ವರದಲ್ಲಿ ಮತ್ತು ತ್ರಿದೋಷದಿಂದ ಹುಟ್ಟಿದ ಜ್ವರದಲ್ಲಿ ಸಹ ಪ್ರಶಸ್ತವಾದ್ದು.

ಷರಾ ಹಿಂದೆ ವಾತಪಿತ್ತೋಲ್ಬಣಕ್ಕೆ ಉಕ್ತವಾದ ಚಾತುರ್ಭದ್ರಕ ಕಷಾಯವು ನಿ. ರ.ದಲ್ಲಿ ವಾತಕಫೋಲ್ಬಣಕ್ಕೆ ಹೇಳಲ್ಪಟ್ಟದೆ. ಅದರಲ್ಲಿ ವಾತಪಿತ್ತಹರ ಗುಣವೇ ಅಧಿಕವಾಗಿರಬೇಕು.

ವಾತಕಫೋಲ್ಬಣ ಸನ್ನಿಪಾತವು ಅಸಾಧ್ಯವಾದ್ದರಿಂದ ಅದಕ್ಕೆ ಭಾ ಪ್ರ.ದಲ್ಲಿ ಚಿಕಿತ್ಸೆ ಬರೆಯಲ್ಪಡಲಿಲ್ಲ ಎಂತ ವ್ಯಾಖ್ಯಾನಕಾರ (ಭಾ ಪ್ರ 297).

79. ಕ್ಷುದ್ರಾಮೃತಾಭ್ಯಾಂ ಸಹ ನಾಗರೇಣ, ಸಪುಷ್ಕರಂ ಚೈವ ಕಿರಾತತಿಕ್ತಮ್ |
ಪಿಬೇತ್ಕಷಾಯಂ ತ್ವಥ ಪಂಚತಿಕ್ತಂ, ಜ್ವರಂ ನಿಹನ್ತ್ಯಷ್ಟವಿಧಂ ಸಮಸ್ತಮ್ ||
(ಚಿ. ಸಾ. ಸಂ 28)

ಸಾಮಾನ್ಯವಾಗಿ ಅಷ್ಟವಿಧ ಜ್ವರಕ್ಕೆ ಕಷಾಯಗಳು

ಕಿರಿಗುಳ್ಳದ ಬೇರು, ಅಮೃತಬಳ್ಳಿ, ಶುಂಠಿ, ಪುಷ್ಕರಮೂಲ, ನೆಲಬೇವು, ಇವುಗಳ ಕಷಾಯವೂ 'ಪಂಚತಿಕ್ತ' ಕಷಾಯವೂ ಎಂಟು ವಿಧವಾದ ಸಮಸ್ತ ಜ್ವರವನ್ನು ಕೊಲ್ಲುತ್ತವೆ.

ಷರಾ 'ಪಂಚತಿಕ್ತ' ಎಂದರೆ ಕಹಿಬೇವು, ಅಮೃತಬಳ್ಳಿ, ಆಡುಸೋಗೆ, ಕಹಿಪಡುವಲು ಮತ್ತು ಕಿರಿಗುಳ್ಳದ ಬೇರು. (ಶಾ. ನಿ)

80. ನಾಗರಂ ಧಾನ್ಯಕಂ ಭಾರ್ಙೀ ಪದ್ಮಕಂ ರಕ್ತಚನ್ದನಮ್ |
ಪಟೋಲಃ ಪಿಚುಮನ್ದಶ್ಚ ತ್ರಿಫಲಾ ಮಧುಕಂ ಬಲಾ ||
ಶರ್ಕರಾ ಕಟುಕಾ ಮುಸ್ತಂ ಗಜಾಹ್ವಾ ವ್ಯಾಧಿಘಾತಕಃ |
ಕಿರಾತಸ್ತಿಕ್ತಮಮೃತಾ ದಶಮೂಲೀ ನಿದಿಗ್ಧಿಕಾ ||
ಯೋಗರಾಜೋ ನಿಹನ್ತ್ಯೇಷ ಸನ್ನಿಪಾತಂ ತ್ರಿಕೋಲ್ಬಣಮ್ |
ಸನ್ನಿಪಾತಸಮುತ್ಥಾನಂ ಮೃತ್ಯುಮಪ್ಯಾಗತಂ ಜಯೇತ್ ||
(ಭಾ. ಪ್ರ. 297)

ತ್ರಿದೋಷೋಲ್ಬಣ ಸನ್ನಿಪಾತಕ್ಕೆ ಯೋಗರಾಜ ಕಷಾಯ.

ಶುಂಠಿ, ಕೊತ್ತುಂಬರಿ, ನಿರ್ವಿಷದ ಬೇರು, ಪದ್ಮಕಾಷ್ಟ, ರಕ್ತಚಂದನ, ಕಹಿಪಡುವಲು, ಕಹಿಬೇವು, ತ್ರಿಫಲೆ, ಜ್ಯೇಷ್ಠಮಧು, ಕಲ್ಲಂಗಡಲೆಬೇರು, ಸಕ್ಕರೆ, ಕಟುಕರೋಹಿಣಿ, ಭದ್ರ ಮುಷ್ಟಿ, ಗಜಹಿಪ್ಪಲಿ, ಕಕ್ಕೆಮರ, ನೆಲಬೇವು, ಪರ್ಪಾಟಕ, ಅಮೃತಬಳ್ಳಿ, ದಶಮೂಲಗಳು, ಮತ್ತು ಏಲಕ್ಕಿ, 'ಯೋಗರಾಜ' ಎಂಬ ಈ ಯೋಗದ ಕಷಾಯವು ಮೂರು ದೋಷಗಳೂ ಕೆದರಿರುವ ಸನ್ನಿಪಾತಜ್ವರವನ್ನು ಕೊಲ್ಲುವದು; ಸನ್ನಿಪಾತಜ್ವರರೂಪವಾಗಿ ಎದ್ದುಬಂದಂಥ ಮೃತ್ಯುವನ್ನಾದರೂ ಜಯಿಸುವದು.

ಷರಾ 'ತಿಕ್ತಂ' ಎಂದರೆ ನೆಲಬೇವೇ, ಅದನ್ನು ದುಬಾರಿಯಾಗಿ ಕೂಡಿಸಬೇಕು ಎಂತ ವ್ಯಾಖ್ಯಾನಗಾರ ಆದರೆ 'ತಿಕ್ತಂ' ಎಂದರೆ ಪರ್ಪಾಟಕ ಎಂತ ನಿಘಂಟುಗಳು ಹೇಳುತ್ತವೆ. 'ನಿದಿಗ್ಧಿಕಾ' ಎಂಬ ಶಬ್ದ ಕಿರಿಗುಳ್ಳದ ಬೇರಿಗೂ ಉಂಟು ಏಲಕ್ಕಿಯನ್ನು ಬಿಟ್ಟು ಕಿರಿಗುಳ್ಳದ ಬೇರನ್ನು ದುಬಾರಿ ಕೂಡಿಸಬಹುದು.

81. ಭಾಸ್ವನ್ಮೂಲಂ ಜೀರಕವ್ಯೋಷಭಾರ್ಙೀ, ವ್ಯಾಘ್ರೀಶುಂಠೀಪುಷ್ಕರಂಗೋ-
ಜಲೇನ | ಸಿದ್ಧಂ ಸದ್ಯಃ ಶೀತಗಾತ್ರಾರ್ತಿಮೋಹ, ಶ್ವಾಸಶ್ಲೇಷ್ಮೋದ್ರೇಕ
ಕಾಸಾನ್ನಿಹನ್ತಿ || (ಭಾ. ಪ್ರ. 298)

ಶೀತಾಂಗ ಸನ್ನಿಪಾತ ಚಿಕಿತ್ಸೆ

ಎಕ್ಕೆಬೇರು, ಜೀರಿಗೆ, ತ್ರಿಕಟು, ನಿರ್ವಿಷದ ಬೇರು, ಕಿರಿಗುಳ್ಳದ ಬೇರು, ಶುಂಠಿ, ಪುಷ್ಕರ ಮೂಲ, ಇವುಗಳನ್ನು, ಗೋಮೂತ್ರ ಕೂಡಿಸಿ, ಅರೆದು ಲೇಪಿಸುವದರಿಂದ ಶರೀರದ ಶೀತತೆ, ನೋವು, ಮೂರ್ಛೆ, ಉಬ್ಬಸ, ಕಫೋದ್ರೇಕ ಮತ್ತು ಕೆಮ್ಮು ಪರಿಹಾರವಾಗುವವು.

ಲೇಪ

ಕರ್ಕೋಟಿಕಾಕಂದರಜಃಕುಲತ್ಥಃ(?ತ್ಥ), ಕೃಷ್ಣಾವಚಾಕಟ್ಫಲಕೃಷ್ಣಜೀರೈಃ|
ಕಿರಾತತಿಕ್ತಾನಲಕಟ್ಫಲಾಮ್ಬು, ಪಥ್ಯಾಭಿರುದ್ವರ್ತನಮತ್ರಶಸ್ತಮ್ ||
(ಭಾ. ಪ್ರ. 298)

ಉದ್ವರ್ತನ

ಮಥಾಗಲಗಡ್ಡೆಯ ಚೂರ್ಣ, ಹುರುಳಿ, ಹಿಪ್ಪಲಿ, ಬಜೆ, ಕಿರುಶಿವನಿ (ಕಟ್ಫಲ), ಕರಿಜೀರಿಗೆ, ಇವುಗಳ ಚೂರ್ಣದಿಂದ, ಅಥವಾ ನೆಲಬೇವು, ಚಿತ್ರಮೂಲ, ಕಿರುಶಿವನಿ (ಕಟ್ಫಲ), ಇರುವೇರಿ (ಅಥವಾ ಮುಡಿವಾಳ), ಅಣಿಲೆಕಾಯಿ, ಇವುಗಳ ಚೂರ್ಣದಿಂದ, (ತಣ್ಣಗಿರುವ ಮೈಯನ್ನು) ಉಜ್ಜುವದು ಶೀತಾಂಗ ಸನ್ನಿಪಾತದಲ್ಲಿ ಪ್ರಶಸ್ತ.

ಷರಾ ಈ ಶ್ಲೋಕದಲ್ಲಿ ಹೇಳಲ್ಪಟ್ಟದ್ದು ಒಂದೇ ಯೋಗ ಎಂತ ತಿಳಿಯಬಹುದು, ಆಗ್ಗೆ ಕಟ್ಫಲವನ್ನು ದುಬಾರಿಯಾಗಿ ಸೇರಿಸುವದರ ಬದಲಾಗಿ ಎರಡನೇ 'ಕಟ್ಫಲ' ಅಥವಾ 'ಕಟ್ಫಲಾ'ಕ್ಕೆ ಗಂಧಮೆಣಸನ್ನು, ಅಥವಾ ಕಿರಿಗುಳ್ಳವನ್ನು ಉಪಯೋಗಿಸಬಹುದು

82. ಕ್ಷುದ್ರಾsಮೃತಾಪೌಷ್ಕರನಾಗರಾಣಿ ಶೃತಾನಿ ಪೀತಾನಿ ಶಿವಾಯುತಾನಿ |
ತಂದ್ರಿಕೆಯ ಚಿಕಿತ್ಸೆ
ಶುಂಠೀಕಣಾಗಸ್ತಿರಸೋಷಣಾನಿ ನಸ್ಯೇನ ತನ್ದ್ರಾವಿಜಯೋಲ್ಬಣಾನಿ ||
ಮರಿಚಕಚವಚಂಪಚಾವಚಾರುಕ್ಕ್ರಿಮಿಹರನಾಗರಶರ್ವರೀಗವಾಕ್ಷ್ಯಃ |
ಛಗಲಕಜಲಕಲ್ಕಿತಾ ನಿತಾನ್ತಂ ನಸಿ ನಿಹಿತಾ ನನು ತನ್ದ್ರಿಕಂ ಜಯನ್ತಿ ||
ತುರಂಗಲಾಲಾಲವಣೋತ್ತಮೋನ್ಸುಮನಃಶಿಲಾಮಾಗಧಿಕಾಮಧೂನಿ |
ನಿಯೋಜಿತಾನ್ಯಕ್ಷಿಣಿ ನಿಶ್ಚಿತಂ ಚ ತನ್ದ್ರಾಂ ಚ ನಿದ್ರಾಂ ಚ ನಿವಾರಯನ್ತಿ ||
(ಭಾ. ಪ್ರ. 298)

ಕಷಾಯ

ಕಿರಿಗುಳ್ಳದ ಬೇರು, ಅಮೃತಬಳ್ಳಿ, ಪುಷ್ಕರಮೂಲ, ಶುಂಠಿ, ಅಣಿಲೆಕಾಯಿ, ಇವುಗಳ ಕಷಾಯವನ್ನು ಪಾನಮಾಡುವದು,

ನಸ್ಯಗಳು

(1) ಬಿಳೇಕಾಳುಮೆಣಸು, ಶುಂಠಿ, ಹಿಪ್ಪಲಿ, ಇವುಗಳ ವಸ್ತ್ರಗಾಲಿತ ಚೂರ್ಣವನ್ನು ಅಗಸೆರಸದಲ್ಲಿ ಅರೆದು ನಸ್ಯಮಾಡುವದು,

(2) ಬಿಳೇಕಾಳುಮೆಣಸು, ಮುಡಿವಾಳ, ಮರದರಸಿನ, ಬಜೆ, ಚಂಗಲಕೋಷ್ಠ, ವಾಯುವಿಳಂಗ, ಶುಂಠಿ, ಅರಸಿನ, ಹಾವುಮೆಕ್ಕೆಬೇರು, ಇವುಗಳ ವಸ್ತ್ರಗಾಲಿತ ಚೂರ್ಣವನ್ನು ಆಡಿನ ಮೂತ್ರದಲ್ಲಿ ಅರೆದು ಮೂಗಿನೊಳಗೆ ಬೇಕಾದಷ್ಟು ಇಡುವದು,

ಈ ಉಪಚಾರಗಳಿಂದ ತಂದ್ರೆಯು ಪರಿಹಾರವಾಗುತ್ತದೆ.

ಅಂಜನ

ಸೈಂಧವಲಣ, ಪಚ್ಚೆಕರ್ಪೂರ, ಮಣಿಶಿಲೆ, ಹಿಪ್ಪಲಿ, ಜ್ಯೇಷ್ಠಮಧು, ಇವುಗಳ ವಸ್ತ್ರಗಾಲಿತ ಚೂರ್ಣವನ್ನು ಕುದುರೆಯ ಜೊಲ್ಲಿನಲ್ಲಿ ಚನ್ನಾಗಿ ಅರೆದು, ಕಣ್ಣುಗಳೊಳಗೆ ಹಾಕುವದರಿಂದ (ಅಂಜನದಿಂದ) ತಂದ್ರೆಯೂ ಅತಿನಿದ್ರೆಯೂ ನಿಶ್ಚಯವಾಗಿ ನಿವಾರಿಸಲ್ಪಡುತ್ತವೆ.

ಭಾಂಗೀ೯ಗುಡೂಚೀಘನಕಂಟಕಾರಿಹರೀತಕೀಪೌಷ್ಕರನಾಗರಾಣಾಮ್ |
ಕಷಾಯಗಳು
ಕೃತಃ ಕಷಾಯೋ ತ್ರಿದಿನಂ ನಿಪೀತೋ ಘೋರಂ ಜಯೇತ್ತನ್ದ್ರಿಕಸನ್ನಿಪಾತಮ್ ||

ಅಮೃತಾಪಟೋಲವಾಸಾವ್ಯೋಷಯುತಸ್ತನ್ದ್ರಿಕೇ ಕ್ವಾಥಃ || (ನಿ. ರ.)

ನಿರ್ವಿಷದ ಬೇರು, ಅಮೃತಬಳ್ಳಿ, ಭದ್ರಮುಷ್ಟಿ, ಕಿರಿಗುಳ್ಳದ ಬೇರು, ಅಣಿಲೆಕಾಯಿ,

ಪುಷ್ಕರಮೂಲ, ಶುಂಠಿ, ಇವುಗಳ ಕಷಾಯವನ್ನು ಮೂರು ದಿನ ಪಾನಮಾಡಲು, ಘೋರವಾದ ತಂದ್ರಿಕೆಸನ್ನಿಪಾತವು ಜಯಿಸಲ್ಪಡುವದು.

ಅಮೃತಬಳ್ಳಿ, ಕಹಿಪಡುವಲು, ಆಡುಸೋಗೆ, ತ್ರಿಕಟು, ಇವುಗಳ ಕಷಾಯವು ತಂದ್ರಿಕೆಯಲ್ಲಿ ಪ್ರಶಸ್ತವಾದ್ದು.

83. ಸತಗರವರತಿಕ್ತಾರೇವತಾಮ್ಭೋದತಿಕ್ತಾ
ನಲದತುರಗಗನ್ಧಾ ಭಾರತೀಹಾರಹೂರಾಃ ।
ಪ್ರಲಾಪಕದ ಚಿಕಿತ್ಸೆ
ಮಲಯಜದಶಮೂಲೀ ಶಂಖಪುಷ್ಪೀ ಸುಪಕ್ವಾಃ
ಪ್ರಲಪನಮುಪಹನ್ಯುಃ ಪಾನತೋ ನಾತಿದೂರಾತ್ ॥
ಸಾಂತ್ವನೈರಂಜನೈಸ್ತೀಕ್ಷ್ಣೈರ್ನಸ್ಯೈಸ್ತಿಮಿರಸೇವನೈಃ ।
ಸರ್ವತೋ ವಿಕೃತಂ ಚಿತ್ತಮಸ್ಯ ಪ್ರಕೃತಿಮಾನಯೇತ್ ॥ (ಭಾ. ಪ್ರ. 298)

(1) ತಗರ, ಪರ್ಪಾಟಕ, ಕಕ್ಕೆಮರ, ಭದ್ರಮುಷ್ಟಿ, ಕಟುಕರೋಹಿಣಿ, ಲಾಮಂಚ, ಅಶ್ವಗಂಧಿ, ಒಂದೆಲಗ (ತಿಮರೆ), ದ್ರಾಕ್ಷೆ, ಶ್ರೀಗಂಧ, ದಶಮೂಲಗಳು, ಶಂಖಪುಷ್ಪೀ, ಇವುಗಳ (ಅಷ್ಟಾವಶೇಷ) ಕಷಾಯವನ್ನು ಪಾನಮಾಡುವದರಿಂದ ಪ್ರಲಾಪಕಸನ್ನಿಯು ಬೇಗನೆ ನಾಶವಾಗುವದು.

(2) ಸಮಾಧಾನಕರವಾದ ಮಾತುಗಳಿಂದಲೂ, ತೀಕ್ಷ್ಣವಾದ ಅಂಜನ-ನಸ್ಯಗಳಿಂದಲೂ, ಬೆಳಕು ಕಡಿಮೆ ಮಾಡುವದರಿಂದಲೂ, ಸರ್ವ ವಿಷಯಗಳಲ್ಲಿಯೂ ವಿಕಾರಹೊಂದಿದ ಆ ರೋಗಿಯ ಮನಸ್ಸನ್ನು ಸ್ವಸ್ಥ ಸ್ಥಿತಿಗೆ ತರಬೇಕು.

ಮುಸ್ತವಾರಿದಶಮೂಲನಾಗರಂ ಪರ್ಪಟೋ ಮಲಯಜಂ ಧವತ್ವಚಃ ।
ವಾಸಕಾ ಕೃತಸಮಾನಭಾಗಜಃ ಕ್ವಾಥ ಏವ ಹರತಿ ಪ್ರಲಾಪಕಮ್ ॥
ತಗರತುರಗಗನ್ಧಾ ಪರ್ಪಟೀ ಶಂಖಪುಷ್ಪೀ
ತ್ರಿದಶವಿಟಪಿತಿಕ್ತಾ ಭಾರತೀ ಭೂತಕೇಶೀ ।
ಜಲಧರಕೃತಮಾಲಶ್ಚೇತಕೀಗೋಸ್ತನಿಭ್ಯಾಂ
ಸಹ ಹರತಿ ಕಷಾಯೋ ಮಂಕ್ಷು ಪಾನಾತ್ಪ್ರಲಾಪಮ್ ॥
ಜಲಧರದಶಮೂಲಂ ವಾರಿಶುಂಠೀಸಮೇತಂ
ಮಲಯಜಕೃತಮಾಲಂ ವಾಸಕಂ ಪರ್ಪಟಂ ಚ ।
ಸಮಧರಣಧೃತಾಂಶಃ ಕ್ವಾಥ ಏಷ ಪ್ರಭಾತೇ
ಶಮಯತಿ ಸಮುದೀರ್ಣಂ ಪೀತಮಾತ್ರಃ ಪ್ರಲಾಪಮ್ ॥ (ಸಿ. ರ.)

(3) ಭದ್ರಮುಷ್ಟಿ, ಮುಡಿವಾಳ, ದಶಮೂಲಗಳು, ಶುಂಠಿ, ಪರ್ಪಾಟಕ, ಶ್ರೀಗಂಧ, ಡಿಂಡಿಗಮರನ ಚಕ್ಕೆ, ಆಡುಸೋಗೆ, ಇವುಗಳನ್ನು ಸಮಾಂಶವಾಗಿ ತೆಗೆದುಕೊಂಡು ಮಾಡಿದ ಕಷಾಯದ ಪಾನದಿಂದ 'ಪ್ರಲಾಪಕ' ಸನ್ನಿಪಾತವು ಪರಿಹಾರವಾಗುವದು.

(4) ತಗರ, ಅಶ್ವಗಂಧಿ, ಪರ್ಪಾಟಕ, ಶಂಖಪುಷ್ಪಿ, ದೇವದಾರ, ಕಟುಕರೋಹಿಣಿ,

ಒಂದೆಲಗ, ಜಟಾಮಾಂಸಿ, ಭದ್ರಮುಷ್ಟಿ, ಕಕ್ಕೆಮರ, ಅಣಿಲೆಕಾಯಿ, ದ್ರಾಕ್ಷೆ, ಇವುಗಳ ಕಷಾಯದ ಪಾನದಿಂದ ಪ್ರಲಾಪವು ಬೇಗನೆ ಪರಿಹಾರವಾಗುವದು.

(5) ಭದ್ರಮುಷ್ಟಿ, ದಶಮೂಲಗಳು, ಇರುವೇರಿ (ಅಥವಾ ಮುಡಿವಾಳ), ಶುಂಠಿ, ಶ್ರೀಗಂಧ, ಕಕ್ಕೆಮರ, ಆಡುಸೋಗೆ, ಪರ್ಪಾಟಕ, ಇವುಗಳನ್ನು ಒಂದು ಧರಣ (ಕಾಲುಕರ್ಷ) ಪ್ರಕಾರ ಸಮಾಂಶವಾಗಿ ತೆಗೆದುಕೊಂಡು ಮಾಡಿದ ಕಷಾಯವನ್ನು ಪ್ರಾತಃಕಾಲದಲ್ಲಿ ಕುಡಿದ ಮಾತ್ರದಿಂದ ಕೆದರಿಕೊಂಡಂಥ ಪ್ರಲಾಪವು ಶಾಂತವಾಗುವದು.

84. ರೋಹಿಷಧನ್ವಯವಾಸಕವಾಸಾಪರ್ಪಟಗನ್ಧಲತಾಕಟುಕಾಭಿಃ |
ಶರ್ಕರಯಾ ಸಮಮೇಷ ಕಷಾಯಃ ಕ್ಷತಜಷ್ಠೀವಿನ ಉದ್ಯದುಪಾಯಃ ||
ರಕ್ತಷ್ಠೀವಿಯ ಚಿಕಿತ್ಸೆ
ಪದ್ಮಕಚನ್ದನಪರ್ಪಟಮುಸ್ತಂ ಜಾತೀಜೀವಕಚನ್ದನವಾರಿ |
ಕ್ಲೀತಕನಿಮ್ಬಯುತಂ ಪರಿಪಕ್ವಂ ವಾರಿ ಭವೇದಿಹ ಶೋಣಿತಹಾರಿ ||
ಮಧುಕಮಧೂಕಪರೂಷಕಪಾಥಶ್ಚನ್ದನಪಲ್ಲವದಾರುಸನಾಥಃ |
ಶ್ರೀಪರ್ಣೀಫಲಶೀತಕಷಾಯಃ ಸಸಿತ ಇಹ ಸ್ಯಾದಸ್ರಜಯಾಯ ||
(ಭಾ. ಪ್ರ. 299)

(1) ಸಂಬಾರಹುಲ್ಲು (ಮಲ ನಾನ್ಮುಕಪ್ಪುಲ್ಲು), ಬಳ್ಳಿತುರಚನ ಬೇರು, ಆಡುಸೋಗೆ, ಪರ್ಪಾಟಕ, ಪ್ರಿಯಂಗು, ಕಟುಕರೋಹಿಣಿ, ಇವುಗಳನ್ನು ಸಮಪಾಲಾಗಿ ತೆಗೆದುಕೊಂಡು ಮಾಡಿದ ಕಷಾಯವನ್ನು, ಸಕ್ಕರೆ ಕೂಡಿಸಿ, ಪಾನ ಮಾಡುವದು ಕ್ಷತದಿಂದುಂಟಾದ ರಕ್ತದ ಉಗುಳನ್ನು ನಿಲ್ಲಿಸುವದಕ್ಕೆ ಎತ್ತಿದ ಉಪಾಯವಾಗಿರುತ್ತದೆ.

ಕಷಾಯಗಳು

(2) ಪದ್ಮಕ, ಶ್ರೀಗಂಧ, ಪರ್ಪಾಟಕ, ಭದ್ರಮುಷ್ಟಿ, ಜಾಜಿಕಾಯಿ, ಜೀವಕ, ರಕ್ತಚಂದನ, ಮುಡಿವಾಳ (ಅಥವಾ ಇರುವೇರಿ), ಜ್ಯೇಷ್ಠಮಧು, ಕಹಿಬೇವು, ಇವುಗಳ ಕಷಾಯವು ಈ ರೋಗದಲ್ಲಿ ರಕ್ತ ಉಗುಳುವದನ್ನು ನಿಲ್ಲಿಸುವದು.

(3) ಜ್ಯೇಷ್ಠಮಧು, ಇಪ್ಪೆಹೂವು, ಪರೂಷಕ, ಮುಡಿವಾಳ (ಅಥವಾ ಇರುವೇರಿ), ಶ್ರೀಗಂಧ, ದಾಲ್ಚೀನಿಎಲೆ, ದೇವದಾರ, ಕಾಶ್ಮೀರ(ಶಿವನಿ-ಮಲ. ಕುಮಲ್)ದ ಹಣ್ಣು, ಇವುಗಳ ಶೀತ ಕಷಾಯವನ್ನು, ಸಕ್ಕರೆ ಕೂಡಿಸಿ, ಪಾನಮಾಡುವದರಿಂದ ರಕ್ತ ನಿಲ್ಲುವದು.

ದೇಯಂ ದೂರ್ವಾರಸೈರ್ನಸ್ಯಂ ರಸೈರ್ದಾಡಿಮಪುಷ್ಪಜೈಃ |
ಅಥವಾ ತ್ರಿಫಲಾದೂರ್ವಾಜಲಂ ರಕ್ತಹರಂ ಪರಮ್ ||
ಆಮ್ರಾಸ್ಥಿ ಚ ಪಲಾಂಡುರ್ವಾ ನಾಸಿಕಾಚ್ಯುತರಕ್ತಜಿತ್ || (ನಿ. ರ.)

ದೂರ್ವೆಯ ರಸವನ್ನಾಗಲಿ, ದಾಳಿಂಬದ ಹೂವಿನ ರಸವನ್ನಾಗಲಿ, ತ್ರಿಫಲೆಯನ್ನೂ ದೂರ್ವೆಯನ್ನೂ ಒಟ್ಟಿಗೆ ಅರೆದು ಹಿಂಡಿ ತೆಗದ ರಸವನ್ನಾಗಲಿ ನಸ್ಯವಾಗಿ ಉಪಯೋಗಿಸುವದು ರಕ್ತ ಹೊರಡುವಂಥಾದ್ದನ್ನು ನಿಲ್ಲಿಸುವದಕ್ಕೆ ಉತ್ತಮ; ಅಥವಾ ಮಾವಿನಹಣ್ಣಿನ ಗೊರಟಿನ ತಿರುಳನ್ನು ನೀರುಳ್ಳಿಯ ರಸದೊಂದಿಗೆ ತೇದಿ ಆ ರಸವನ್ನು ಮೂಗಿನೊಳಗೆ ಬಿಡುವದರಿಂದ ಮೂಗಿನಿಂದ ಬರುವ ರಕ್ತವು ನಿಲ್ಲುತ್ತದೆ.

ನಸ್ಯಗಳು

85. ತುರಂಗಗನ್ಧಾಲವಣೋಗ್ರಗನ್ಧಾಮಧೂಕಸಾರೋಷಣಮಾಗಧೀಭಿಃ ।
ಬಸ್ತಾಮ್ಬುಶುಂಠೀಲಶುಶನಾನ್ವಿತಾಭಿರ್ನಸ್ಯಂ ಕೃಶಂ ಭುಗ್ನದೃಶಂ
ಭುಗ್ನನೇತ್ರ ಚಿಕಿತ್ಸೆ. ಕರೋತಿ ॥ (ಭಾ. ಪ್ರ. 299)

ನಸ್ಯ ಅಶ್ವಗಂಧಿ, ಸೈಂಧವಲವಣ, ಬಜೆ, ಇಪ್ಪೆತಿರಳು, ಬಿಳೀಕಾಳುಮೆಣಸು, ಹಿಪ್ಪಲಿ, ಶುಂಠಿ, ಇವುಗಳ ಚೂರ್ಣವನ್ನೂ ಬೆಳ್ಳುಳ್ಳಿ ಕಾಳನ್ನೂ ಆಡಿನ ಮೂತ್ರದಲ್ಲಿ ಅರೆದು ನಸ್ಯಮಾಡಲು, ಭುಗ್ನನೇತ್ರ ರೋಗವು ಕಡಿಮೆ ಯಾಗುವದು.

ದಾರ್ವೀಪಟೋಲಘನಕಂಟಕಾರೀತಿಕ್ತಾನಿಶಾನಿಮ್ಬಫಲತ್ರಿಕಾಣಾಮ್ ।
ಕ್ವಾಥೋ ನಿಯೋಜ್ಯೋ ಜ್ವರಸನ್ನಿಪಾತೇ ವಿಭುಗ್ನನೇತ್ರೇ ಪ್ರತಿಬೋಧ-
ನಾಯ ॥

ಯಷ್ಟೀಪಟೋಲಕಟುಕಾಘನನಿಮ್ಬಸುರಾಹ್ವಧಾವನ್ಯಃ ।
ಅಪಹರನ್ತಿ ಮೋಹಪಿತ್ತಂ ಜ್ವರಮುಗ್ರಂ ಸನ್ನಿಪಾತೋತ್ಥಮ್ ॥ (ನಿ. ರ.)

(1) ಮರದರಸಿನ, ಕಹಿಪಡುವಲು, ಭದ್ರಮುಷ್ಟಿ, ಕಿರಿಗುಳ್ಳದ ಬೇರು, ಕಟುಕ ರೋಹಿಣಿ, ಅರಸಿನ, ಕಹಿಬೇವು, ತ್ರಿಫಲೆ, ಇವುಗಳ ಕಷಾಯವನ್ನು ಭುಗ್ನ ನೇತ್ರ ಎಂಬ ಸನ್ನಿಪಾತಜ್ವರದಲ್ಲಿ ಎಚ್ಚರಿಕೆಯನ್ನುಂಟುಮಾಡುವದಕ್ಕಾಗಿ ಉಪಯೋಗಿಸತಕ್ಕದ್ದು.

ಕಷಾಯಗಳು.

(2) ಜ್ಯೇಷ್ಠಮಧು, ಕಹಿಪಡುವಲು, ಕಟುಕರೋಹಿಣಿ, ಭದ್ರಮುಷ್ಟಿ, ಕಹಿಬೇವು, ದೇವದಾರ, ಕಿರಿಗುಳ್ಳದ ಬೇರು, ಇವುಗಳ ಕಷಾಯವು ಸನ್ನಿಪಾತದಿಂದುಂಟಾದ ಉಗ್ರವಾದ ಜ್ವರವನ್ನೂ ಭ್ರಮೆಗೆ ಕಾರಣವಾದ ಪಿತ್ತವನ್ನೂ ಪರಿಹರಿಸುವದು.

ಸೂ. ಇದೇ ಯೋಗವನ್ನು ಜ್ಯೇಷ್ಠಮಧುವಿನ ಬದಲಾಗಿ ಹಿಪ್ಪಲಿಯನ್ನು ಕೂಡಿಸಿ ಉಪಯೋಗಿಸುವದು ಉಂಟು

86. ಶೃಂಗೀಭಾರ್ಂಗ್ಯಭಯಾಜಾಜೀಕಣಾಭೂನಿಮ್ಬಪರ್ಪಟಾಃ ।
ದೇವದಾರುವಚಾಕುಷ್ಠಯಾಸಕಟ್ಫಲನಾಗರೈಃ ॥
ಅಭಿನ್ಯಾಸ ಚಿಕಿತ್ಸೆ. ಮುಸ್ತಧಾನ್ಯಾಕತಿಕ್ತೇನ್ದ್ರಯವಪಾಠಾಹರೇಣುಭಿಃ ।
ಹಸ್ತಿಪಿಪ್ಪಲ್ಯಪಾಮಾರ್ಗಪಿಪ್ಪಲೀಮೂಲಚಿತ್ರಕೈಃ ॥
ವಿಶಾಲಾರಗ್ವಧಾರಿಷ್ಟಶಠೀವಾಕುಚಿಕಾಫಲೈಃ ।
ವಿಡಂಗರಜನೀದಾರ್ವೀಯವಾನೀದ್ವಯಸಂಯುತೈಃ ॥
ಸಮಾಂಶೈರ್ವಿಹಿತಃ ಕ್ವಾಥೋ ಹಿಂಗ್ವಾರ್ದ್ರಕರಸಾನ್ವಿತಃ ।
ಅಭಿನ್ಯಾಸಜ್ವರಂ ಘೋರಂ ಹನ್ತಿ ತನ್ದ್ರಾಂ ಚ ತತ್ಕ್ಷಣಾತ್ ॥
ಪ್ರಮೇ(?ಮೋ)ಹಂ ಕರ್ಣಶೂಲಂ ಚ ಸನ್ನಿಪಾತಾಂಸ್ತ್ರಯೋದಶ ।
ಹಿಕ್ಕಾಂ ಶ್ವಾಸಂ ಚ ಕಾಸಂ ಚ ತಥಾ ಸರ್ವಾನುಪದ್ರವಾನ್ ॥
(ಭಾ. ಪ್ರ. 299)

ಕಷಾಯ ಯೋಗ ಗಳು ಶೃಂಗ್ಯಾದಿ.

(1) ಕರ್ಕಟಶೃಂಗಿ, ನಿರ್ವಿಷದ ಬೇರು, ಅಣಿಲೆಕಾಯಿ, ಕರಿಜೀರಿಗೆ, ಹಿಪ್ಪಲಿ, ನೆಲಬೇವು, ಪರ್ಪಾಟಕ, ದೇವದಾರ, ಬಜೆ, ಚಂಗಲಕೋಷ್ಠ, ಬಳ್ಳಿತುರಚನಬೇರು, ಕಟ್ಫಲ (ಕಿರುಶಿವನಿ), ಶುಂಠಿ, ಭದ್ರಮುಷ್ಟಿ, ಕೊತ್ತುಂಬರಿ, ಕಟುಕರೋಹಿಣಿ, ಇಂದ್ರಜೇವಿ, ಪಾಡಾವಳಿಗಡ್ಡೆ, ರೇಣುಕೆಬೀಜ, ಗಜಹಿಪ್ಪಲಿ, ಉತ್ತರಣೆಬೇರು, ಹಿಪ್ಪಲಿಮೂಲ, ಚಿತ್ರಮೂಲ, ಹಾವುಮೆಕ್ಕೆಬೇರು, ಕಕ್ಕೆಮರ, ಕಹಿಬೇವು, ಸಣ್ಣಕಚೋರ, ಬಾವುಂಚಿಬೀಜ (ಮಲ. ಕಾರ್ಕೋಳರಿ), ವಾಯುವಿಳಂಗ, ಅರಸಿನ, ಮರದರಸಿನ, ಓಮ, ಅಜಮೋದ, ಇವುಗಳನ್ನು ಸಮಾಂಶವಾಗಿ ತೆಗೆದುಕೊಂಡು ಮಾಡಿದ ಕಷಾಯವನ್ನು, (ಹುರಿದ) ಹಿಂಗಿನ ಪುಡಿ ಮತ್ತು ಶುಂಠಿರಸ ಕೂಡಿಸಿ, ಪಾನಮಾಡಿಸಿದ್ದಲ್ಲಿ ಘೋರವಾದ ಅಭಿನ್ಯಾಸಜ್ವರವೂ, ತಂದ್ರೆಯೂ ತತ್ಕ್ಷಣದಲ್ಲಿ ಪರಿಹಾರವಾಗುವವು; ಭ್ರಮೆ, ಕಿವಿಶೂಲೆ, ಹದಿಮೂರು ಸನ್ನಿಪಾತಗಳು, ಬಿಕ್ಕಟ್ಟು, ಉಬ್ಬಸ, ಕೆಮ್ಮು ಮತ್ತು ಸರ್ವ ಉಪದ್ರವಗಳು ಸಹ ನಾಶವಾಗುವವು.

ಸಿಂಹೀವ್ಯಾಘ್ರ್ಯಮೃತಾದ್ರಾಕ್ಷಾಅಜಾಜೀಸಕಟುತ್ರಿಕಮ್ ।
ಶೃಂಗೀವಿಡಂಗಂ ಚ ಸಮಂ ಪಕ್ತ್ವಾ ವಿಶ್ರಾವ್ಯ ಸಾಧಯೇತ್ ॥
ಘೃತಾಕ್ತೈಸ್ತಂಡುಲೈರ್ಭ್ರಷ್ಟೈಃ ಪೇಯಾಮುಷ್ಣಾಂ ಜ್ವರೀ ಪಿಬೇತ್ ।
ಹಿಕ್ಕಾಶ್ವಾಸೀ ಚ ಕಾಸೀ ಚ ತಥಾಭಿನ್ಯಾಸಪೀಡಿತಃ ॥
ವಿಬದ್ಧವಾತವಿಣ್ಮೂತ್ರೋ ಪಾನಮಸ್ಮಿನ್ ಪ್ರಯೋಜಯೇತ್ ।
ಬೃಹತೀ ಪೌಷ್ಕರಂ ಭಾರ್ಗೀ ಸಟೀ ಶೃಂಗೀ ದುರಾಲಭಾ ॥
ಪಕ್ತ್ವಾ ಪಾನಂ ಪ್ರಶಂಸನ್ತಿ ಶ್ಲೇಷ್ಮಾ ತೇನೋಪಶಾಮ್ಯತಿ ।
ಸುರಭಿಸಲಿಲಯುಕ್ತಃ ಸಿಂಹಿಕಾತ್ರೀಫಲಾಭ್ಯಾಂ
ಪ್ರವರಲವಣಯಾಸೋ ವಿಶ್ವಪಾಷಾಣಭೇದೈಃ ।
ಪವನರಿಪುಜಟಾಭಿಃ ಸಂಯುತಃ ಕ್ವಾಥ ಏಷಾಂ
ಪ್ರತಿದಿನಮಪಿ ಪೀತೋ ಹನ್ತ್ಯಭಿನ್ಯಾಸಶೂಲವ್ ॥
ಮಾತುಲುಂಗಾಶ್ಮಭಿದ್ಬಿಲ್ವವ್ಯಾಘ್ರೀಪಾರಾರುಬೂಕಜಃ ।
ಕ್ವಾಥೋ ಲವಣಮೂತ್ರಾಢ್ಯೋಽಭಿನ್ಯಾಸಾನಾಹಶೂಲನುತ್ ॥
ಆರ್ದ್ರಕಸ್ವರಸೋಪೇತಂ ಸಿನ್ಧೂತ್ಥಂ ಸಕಟುತ್ರಿಕಮ್ ।
ಪ್ರಬೋಧಾಯ ಮುಖೇ ದದ್ಯಾನ್ನಸ್ಯಂ ವಾ ಮರಿಚೇನ ಚ ॥ (ನಿ. ರ.)

(2) ಗುಳ್ಳದ ಬೇರು, ಕಿರಿಗುಳ್ಳದ ಬೇರು, ಅಮೃತಬಳ್ಳಿ, ದ್ರಾಕ್ಷೆ, ಕರಿಜೀರಿಗೆ, ತ್ರಿಕಟು, ಕರ್ಕಟಶೃಂಗಿ, ವಾಯುವಿಳಂಗ, ಇವುಗಳನ್ನು ಸಮಾಂಶವಾಗಿ ತೆಗೆದುಕೊಂಡು ಮಾಡಿದ ಕಷಾಯವನ್ನು ಶೋಧಿಸಿ, ಅದರಲ್ಲಿ ತುಪ್ಪ ಹಚ್ಚಿ ಹುರಿದ ಅಕ್ಕಿಯನ್ನು ಹಾಕಿ, ಮಾಡಿದ ಗಂಜಿಯನ್ನು ಜ್ವರರೋಗಿಗೆ ಬಿಸಿಯಾಗಿ ಕುಡಿಸಬೇಕು; ಬಿಕ್ಕಟ್ಟು, ಉಬ್ಬಸ, ಕೆಮ್ಮು, ಅಭಿನ್ಯಾಸಸನ್ನಿಪಾತ, ಮತ್ತು ಮಲಮೂತ್ರಗಳ ಬದ್ಧತೆ, ಇವುಗಳ ಪೀಡೆಯುಳ್ಳವರಿಗೆ ಪಾನಕ್ಕೂ ಈ ಔಷಧಗಳನ್ನು ಸೇರಿಸಿ ಮಾಡಿದ ಕಷಾಯದ ನೀರನ್ನು ಪ್ರಯೋಗಿಸಬೇಕು.

(3) ಗುಳ್ಳದ ಬೇರು, ಪುಷ್ಕರಮೂಲ, ನಿರ್ವಿಷದ ಬೇರು, ಸಣ್ಣಕಚೋರ, ಕರ್ಕಟಶೃಂಗಿ, ಬಳ್ಳಿತುರಚನ ಬೇರು, ಇವುಗಳ ಕಷಾಯವನ್ನು (ಅಭಿನ್ಯಾಸಸನ್ನಿಪಾತಜ್ವರದಲ್ಲಿ) ಪಾನಮಾಡುವದು ಪ್ರಶಸ್ತ. ಇದರಿಂದ ಕಫ ಉಪಶಮನವಾಗುತ್ತದೆ.

(4) ಕಿರಿಗುಳ್ಳದ ಬೇರು, ಬಿಲ್ವಪತ್ರೆಬೇರು, ಬಳ್ಳಿತುರಚನ ಬೇರು, ಶುಂಠಿ, ಪಾಷಾಣಭೇದಿ, ಹರಳುಬೇರು, ಇವುಗಳ ಕಷಾಯವನ್ನು, ಸೈಂಧವಲವಣ ಮತ್ತು ಗೋಮೂತ್ರ ಕೂಡಿಸಿ, ಪ್ರತಿನಿತ್ಯವೂ ಪಾನಮಾಡಿಸಲು ಅಭಿನ್ಯಾಸವೂ ಶೂಲೆಯೂ ನಾಶವಾಗುವವು.

(5) ಮಾದಳಬೇರು, ಪಾಷಾಣಭೇದಿ, ಬಿಲ್ವಪತ್ರೆಬೇರು, ಕಿರಿಗುಳ್ಳದ ಬೇರು, ಪಾಡಾವಳಿ ಗಡ್ಡೆ, ಹರಳುಬೇರು, ಇವುಗಳ ಕಷಾಯವನ್ನು, ಸೈಂಧವಲವಣ ಮತ್ತು ಗೋಮೂತ್ರ ಕೂಡಿಸಿಕೊಂಡು, ಕುಡಿಯಲು ಅಭಿನ್ಯಾಸ, ಹೊಟ್ಟೆಯುಬ್ಬರ ಮತ್ತು ಶೂಲೆ ಪರಿಹಾರವಾಗುವವು.

ಕವಲ-ನಸ್ಯಗಳು.

ಅಭಿನ್ಯಾಸದಲ್ಲಿ ಎಚ್ಚರವನ್ನುಂಟುಮಾಡುವದಕ್ಕಾಗಿ, ಸೈಂಧವಲವಣ ಮತ್ತು ತ್ರಿಕಟುಗಳನ್ನು ನುಣ್ಣಗಾಗಿ ಚೂರ್ಣಿಸಿ, ಶುಂಠಿರಸದೊಂದಿಗೆ ಕಲಸಿ ಅಥವಾ ಅರೆದು, ಅದನ್ನು ಬಾಯಿಯೊಳಗಿಟ್ಟುಕೊಳ್ಳಬೇಕು; ಅಥವಾ ಬಿಳೇಕಾಳುಮೆಣಸಿನ ಚೂರ್ಣವನ್ನು ನಸ್ಯವಾಗಿ ಉಪಯೋಗಿಸಬೇಕು.

ಜಿಹ್ವಕ ಚಿಕಿತ್ಸೆ.

87. ಕಿರಾತತಿಕ್ತಾಕುಲಕೃತ್ಕುಲಿ(?ಲ)ಂಜಕಚೋರಕೃಷ್ಣಾಕಟುತೈಲಯುಕ್ತಃ |
ಅಮ್ಲದ್ರವಃ ಸಂಶಮಯೇದ್ರಸಜ್ಞಾದೋಷಾನ್ ಸ್ತುತೋ ದಾಶರಥಿರ್ಯ-
ಧಾತ್ರ ||
ಶಾಲೂರಪರ್ಣೀಮಾಲೂರಮೂಲಾಮಯಮಧುಪ್ಲುತಾ |
ಶಂಖಕಪುಷ್ಪೀಸಹಿತಾ ಸೇವ್ಯಾ ವಾಚಾಂ ವಿಶುದ್ಧಯೇ ||
ಕ್ಷುದ್ರಾನಾಗರಪುಷ್ಕರಾಮೃತಲತಾಬ್ರಾಹ್ಮೀವಚಾಸುವ್ರತಾ-
ಭಾಂಗೀರ್ವಾಸಕಯಾಸತೋಯಸುರಸಾಕ್ವಾಥೋ ಜಯೇಜ್ಜಿಹ್ವಕಮ್ |
ವಿಶ್ವಾವರ್ಮವಿಭಾವರೀಯುಗವರಾವತ್ಸಾದನೀವಾರಿದ-
ವ್ಯಾಘ್ರೀನಿಂಬಪಟೋಲಪುಷ್ಕರಜಟಾರುಗ್ದಾರುಭಿರ್ವಾ ಕೃತಃ ||
(ಭಾ. ಪ್ರ. 299)

ಕಿರಾತಾದಿ ಕವಲ.

ನೆಲಬೇವು, ಆಕಳಕರೆ, ಕೋಲಾಂಜನ (ದುಂಪರಾಷ್ಟ್ರೆ), ಕಚೋರ, ಹಿಪ್ಪಲಿ, ಇವುಗಳ ಚೂರ್ಣವನ್ನು (ಮಾದಳ ಮೊದಲಾದ) ಹುಳಿರಸದಲ್ಲಿ ಕಲಸಿ, ಸಾಸುವೆ ಎಣ್ಣೆ ಕೂಡಿಸಿ, ಬಾಯೊಳಗೆ ಕವಲವಾಗಿಟ್ಟುಕೊಳ್ಳುವದು, (ಈ ಕವಲವು) ರಾಮದೇವರು ಸ್ತುತಿಸಲ್ಪಟ್ಟವನಾಗಿ ಹೇಗೆ ಎಲ್ಲಾ ದೋಷಗಳನ್ನು (ಪಾಪಗಳನ್ನು) ಪರಿಹರಿಸುತ್ತಾನೋ ಹಾಗೆ, ನಾಲಿಗೆಸಂಬಂಧವಾದ ಎಲ್ಲಾ ದೋಷಗಳನ್ನು ಶಮನಮಾಡುವದು.

ಅವಲೇಹ ಯೋಗ.

ಒಂದೆಲಗ, ಬಿಲ್ವಪತ್ರೆಬೇರು, ಚಂಗಲಕೋಷ್ಠ, ಶಂಖಪುಷ್ಪೀ, ಇವುಗಳ ಚೂರ್ಣವನ್ನು ಜೇನಿನಲ್ಲಿ ಕಲಸಿ ನೆಕ್ಕುವದರಿಂದ ಮಾತುಗಳು ಶುದ್ಧವಾಗುತ್ತವೆ.

(1) ಕಿರಿಗುಳ್ಳದ ಬೇರು, ಶುಂಠಿ, ಪುಷ್ಕರಮೂಲ, ಅಮೃತಬಳ್ಳಿ, ಒಂದೆಲಗ, ಬಜೆ, ಸಣ್ಣಕಚೋರ, ನಿರ್ವಿಷದ ಬೇರು, ಬಳ್ಳಿತುರಚನ ಬೇರು, ಆಡುಸೋಗೆ, (ಮುಡಿವಾಳ ಅಥವಾ) ಇರುವೇರಿ, ತುಳಸಿ, ಇವುಗಳ ಕಷಾಯವು ಜಿಹ್ವಕ(ಸನ್ನಿಪಾತ)ವನ್ನು ಜಯಿಸುವದು.

ಕಷಾಯ ಯೋಗಗಳು

(2) ಶುಂಠಿ, ಪರ್ಪಾಟಕ, ಅರಸಿನ, ಮರದರಸಿನ, ತ್ರಿಫಲೆ, ಅಮೃತಬಳ್ಳಿ, ಭದ್ರಮುಷ್ಟಿ, ಕಿರಿಗುಳ್ಳದ ಬೇರು, ಕಹಿಬೇವು, ಕಹಿಪಡುವಲು, ಪುಷ್ಕರಮೂಲ, ಚಂಗಲಕೋಷ್ಠ, ದೇವದಾರ, ಇವುಗಳ ಕಷಾಯವು ಜಿಹ್ವಕಹರ.

ಉಗ್ರಾಸಿಂಹೀಯಾಸರಾಸ್ನಾಮೃತಾಹ್ವಾಶುಂಠೀತಿಕ್ತಾಶೃಂಗಿಕಾಪೌಷ್ಕ-
ರಾಣಾಮ್ ।
ಬ್ರಾಹ್ಮೀಭಾರ್ಗೀತಿಕ್ತವಾಸಾಸರೀಣಾಂ ಕ್ವಾಥೋ ಹನ್ಯಾಜ್ಜಿಹ್ವಕಂ ಸನ್ನಿ-
ಪಾತಮ್ ॥
ಸುರತರುಕಟುನಿಮ್ಬೈರಕ್ಷಪಥ್ಯಾಪಟೋಲೀ, ರಜನಿಯುಗಲವಿಶ್ವಾಸಿಂಹಿಕಾ-
ಪುಷ್ಕರಾಹ್ವೈಃ ।
ಸಲಿಲಧರಗುಡೂಚೀವಾಸಕಂ ಸರ್ವಮೇಭಿಃ, ಪ್ರಶಮಯತಿ ಕಷಾಯೋ
ಜಿಹ್ವಕಂ ಕಷ್ಟಸಾಧ್ಯಮ್ ॥ (ನಿ. ರ.)

(3) ಬಜೆ, ಗುಳ್ಳದ ಬೇರು, ಬಳ್ಳಿತುರಚನ ಬೇರು, ರಾಸ್ಮೆಗಡ್ಡೆ (ಅರತೆ), ಅಮೃತಬಳ್ಳಿ, ಶುಂಠಿ, ಕಟುಕರೋಹಿಣಿ, ಕರ್ಕಟಶೃಂಗಿ, ಪುಷ್ಕರಮೂಲ, ಒಂದೆಲಗ, ನಿರ್ವಿಷದ ಬೇರು, ನೆಲಬೇವು, ಆಡುಸೋಗೆ, ಸಣ್ಣಕಚೋರ, ಇವುಗಳ ಕಷಾಯವು ಜಿಹ್ವಕಸನ್ನಿಪಾತವನ್ನು ಕೊಲ್ಲುವದು.

(4) ದೇವದಾರ, ಕಟುಕರೋಹಿಣಿ, ಕಹಿಬೇವು, ಶಾಂತಿ(ತಾರೆ)ಕಾಯಿ, ಅಣಿಲೆಕಾಯಿ, ಕಹಿಪಡುವಲು, ಅರಸಿನ, ಮರದರಸಿನ, ಶುಂಠಿ, ಕಿರಿಗುಳ್ಳದ ಬೇರು, ಪುಷ್ಕರಮೂಲ, ಭದ್ರಮುಷ್ಟಿ, ಅಮೃತಬಳ್ಳಿ, ಆಡುಸೋಗೆ, ಇವುಗಳ ಕಷಾಯವು ಕಷ್ಟಸಾಧ್ಯವಾದ ಜಿಹ್ವಕಸನ್ನಿಪಾತವನ್ನು ಶಾಂತಮಾಡುತ್ತದೆ.

88. ಶಠೀಸುರತರೂತ್ತಮಾಸ್ಥಿರದಾರುರಾಸ್ನಾಃ ಸಮಾಃ
ಸನಾಗರಸುಧಾನ್ವಿತಾಃ ಪಿಬ ಶತಾವರೀಸಂಯುತಾಃ ।
ಮೃದುಜ್ವಲನಪಾಚಿತಾಃ ಸಹ ಪುರೇಣ ಸನ್ಧಿಗ್ರಹ-
ವ್ಯಥಾಪಹೃತಯೇ ವೃಥಾ ಶಿಶಿರಸೇವನಂ ಮಾಕೃಥಾಃ ॥
ವಚಾಕವಚಕಚ್ಛುರಾಸಹಚರಾಽಮೃತಾಭಂಗುರಾ-
ಸುರಾಹ್ವಘನನಾಗರಾಽತರುಣದಾರುರಾಸ್ನಾಪುರಾಃ ।
ವೃಷಾತರುಣಭೀರುಭಿಃ ಸಹ ಭವನ್ತಿ ಸನ್ಧಿಗ್ರಹ-
ವ್ಯಥೋರುಜಡಿಮಕ್ಲಮಭ್ರಮಣಪಕ್ಷಘಾತದ್ರುಹಃ ॥
ಸುವಹಾಶುಂಠ್ಯಮೃತಾಃ ಶೃತಾ ಜಲೇ ಸಪುರಾಃ ।
ಶಮಯನ್ತಿ ಸೇವಿತಾಃ ಸತತಂ ಸನ್ಧಿಗತಂ ಸದಾಗತಿಮ್ ॥

ಸನ್ಧಿಗ ಚಿಕಿತ್ಸೆ

ಮುಸ್ತೈರಂಡಪ್ರಾಣದಾಬಾಣದಾರು-
ಭಿನ್ನಾರಾಸ್ನಾಭೀರುಕಚೋರತಿಕ್ತಾಃ ।
ವಾಸಾವಿಶ್ವಾಪಂಚಮೂಲಾಶ್ವಗನ್ಧಾ
ಹನ್ಯುರ್ಮನ್ಯಾಸ್ತಮ್ಭಸನ್ಧಿಗ್ರಹಾರ್ತೀಃ ॥ (ಭಾ. ಪ್ರ. 299, 300)

(1) ಸಣ್ಣಕಚೋರ, ದೇವದಾರ, ತ್ರಿಫಲೆ, ವೃದ್ಧದಾರು (ಚೀನಿಪಾವು), ರಾಸ್ಮೆಗಡ್ಡೆ (ಅರತೆ), ಶುಂಠಿ, ಅಮೃತಬಳ್ಳಿ, ಹಲವುಮಕ್ಕಳತಾಯಿಬೇರು (ಶತಾವರಿ), ಇವುಗಳನ್ನು ಸಮಭಾಗವಾಗಿ ತೆಗೆದುಕೊಂಡು ಸಣ್ಣ ಉರಿಯಿಂದ ಮಾಡಿದ ಕಷಾಯವನ್ನು, (ಶುದ್ಧ) ಗುಗ್ಗುಳದ ಪುಡಿ ಕೂಡಿಸಿಕೊಂಡು, ಸಂಧಿಗ್ರಹ ವ್ಯಥೆಯ ಪರಿಹಾರಕ್ಕಾಗಿ ಕುಡಿ; ವ್ಯರ್ಥವಾಗಿ ಶೀತೋಪಚಾರದ ಸೇವನವನ್ನು ಮಾಡಬೇಡ. (ಕಷಾಯವನ್ನಾದರೂ ಬಿಸಿಯಾಗಿಯೇ ಕುಡಿಯಬೇಕು.)

(2) ಬಜೆ, ಪರ್ಪಾಟಕ, ಬಳ್ಳಿತುರಚನ ಬೇರು, ಬಿಳೀಗೋರಟೆ ಬೇರು, ಅಮೃತಬಳ್ಳಿ, ಅತಿವಿಡೆ, ದೇವದಾರ, ಭದ್ರಮುಷ್ಟಿ, ಶುಂಠಿ, ವೃದ್ಧದಾರು (ಚೀನಿಪಾವು), ರಾಸ್ಮೆಗಡ್ಡೆ (ಅರತೆ), (ಶುದ್ಧ ಮಹಿಷಾಕ್ಷ)ಗುಗ್ಗುಳ, ಕಾಡುಹರಳುಬೇರು, ಹರಳುಬೇರು, ಹಲವುಮಕ್ಕಳತಾಯಿ(ಶತಾವರಿ)ಬೇರು, ಇವುಗಳ ಕಷಾಯವು ಸಂಧಿಗ್ರಹಪೀಡೆ, ಊರುಸ್ತಂಭ, ಕ್ಲಮ, ಭ್ರಮೆ, ಪಕ್ಷವಾತ, ಇವುಗಳನ್ನು ನಾಶಮಾಡುವದು.

ಷರಾ: ಚೀನಿಪಾವಿನಲ್ಲಿ ವಿಷ ಉಂಟೆಂಬದರಿಂದ, ಅದನ್ನು ಹಾಲಿನಲ್ಲಿ ಬೇಯಿಸಿ, ಶುದ್ಧಮಾಡಿಕೊಳ್ಳುವದುಂಟು

(3) ರಾಸ್ಮೆಗಡ್ಡೆ (ಅರತೆ), ಶುಂಠಿ, ಅಮೃತಬಳ್ಳಿ, ಇವುಗಳ ಕಷಾಯವನ್ನು, (ಶುದ್ಧ ಮಹಿಷಾಕ್ಷ) ಗುಗ್ಗುಳದ ಪುಡಿ ಕೂಡಿಸಿಕೊಂಡು, ಸೇವಿಸುವದರಿಂದ ಸಂಧಿಗಳೊಳಗಿನ ನಿತ್ಯವಾದ ವಾತವು ಶಮನವಾಗುತ್ತದೆ.

(4) ಭದ್ರಮುಷ್ಟಿ, ಹರಳುಬೇರು, ಆಣೆಲೆಕಾಯಿ, ನೀಲಗೋರಟೆಬೇರು, ದೇವದಾರ, ಅಮೃತಬಳ್ಳಿ, ರಾಸ್ಮೆಗಡ್ಡೆ (ಅರತೆ), ಶತಾವರಿ, ಕಚೋರ, ಕಟುಕರೋಹಿಣಿ, ಆಡುಸೋಗೆ, ಶುಂಠಿ, (ಬೃಹತ್) ಪಂಚಮೂಲ, ಅಶ್ವಗಂಧಿ, ಇವುಗಳ ಕಷಾಯವು ಮನ್ಯಾಸ್ತಂಭವನ್ನೂ ಸಂಧಿಗ್ರಹಪೀಡೆಯನ್ನೂ ನಾಶಮಾಡುವದು.

89. ಭಿಷಗ್ಭಿರಿತಿ ನಿರ್ಣೀತಂ ಸನ್ನಿಪಾತೇಽಂತಕಾಭಿಧೇ ।
ಅಂತಕ ಚಿಕಿತ್ಸೆ. ಭೇಷಜಂ ಜಾಹ್ನವೀನೀರಂ ವೈದ್ಯೋ ಗೋವಿಂದ ಏವ ಹಿ ॥
(ಭಾ. ಪ್ರ. 300)

ಅಂತಕ ಎಂಬ ಸನ್ನಿಪಾತದಲ್ಲಿ ಗಂಗಾನದಿಯ ನೀರು ಔಷಧ, ಶ್ರೀಗೋವಿಂದನೇ ವೈದ್ಯ ಎಂತ ಪಂಡಿತರು ನಿರ್ಣಯಿಸಿದ್ದಾರೆ. (ಅಂದರೆ ಚಿಕಿತ್ಸೆಯಿಂದ ಪ್ರಯೋಜನ ದೊರಕಲಾರದು.)

ಪಥ್ಯಾವೃಷಾರಗ್ವಧದಾರುತಿಕ್ತಾರಾಸ್ನಾಗುಡೂಚೀಗದಜಃ ಕಷಾಯಃ ।
ಸೋಪದ್ರವಾಚ್ಛಾನ್ತಕನಾಮಧೇಯಾಜ್ಜ್ವರಾನ್ನರಂ ಮೋಚಯತೀತಿ ಚಿತ್ರಮ್ ॥ (ನಿ. ರ.)

ಅಣಲೆಕಾಯಿ, ಆಡುಸೋಗೆ, ಕಕ್ಕೆಮರ, ದೇವದಾರ, ಕಟುಕರೋಹಿಣಿ, ರಾಸ್ನೆಗಡ್ಡೆ (ಅರತೆ), ಅಮೃತಬಳ್ಳಿ, ಚಂಗಲಕೋಷ್ಠ, ಇವುಗಳ ಕಷಾಯವು ಉಪದ್ರವಗಳಿಂದ ಕೂಡಿಕೊಂಡ 'ಅಂತಕ' ಎಂಬ ಸನ್ನಿಪಾತಜ್ವರದಿಂದ ಜನರನ್ನು ಬಿಡಿಸುತ್ತದೆಂಬದು ವಿಚಿತ್ರ.

90. ಉಶೀರಚನ್ದನೋದೀಚ್ಯದ್ರಾಕ್ಷಾಮಲಕಪರ್ಪಟೈಃ ।
ರುಗ್ದಾಹ ಚಿಕಿತ್ಸೆ ಶೃತಂ ಶೀತಂ ಜಲಂ ದದ್ಯಾದ್ದಾಹತೃಡ್ಜ್ವರಶಾನ್ತಯೇ ॥
(ಭಾ. ಪ್ರ. 300)

(1) ಮುಡಿವಾಳ (ಅಥವಾ ಇರುವೇರಿ), ಶ್ರೀಗಂಧ, ಲಾಮಂಚ, ದ್ರಾಕ್ಷೆ, ನೆಲ್ಲಿಚಟ್ಟು, ಪರ್ಪಾಟಕ, ಇವುಗಳ ಪಾನೀಯ ಕಷಾಯವನ್ನು ತಣಿಸಿ ಪಾನಮಾಡಿಸಿದ್ದಲ್ಲಿ ಉರಿ, ಬಾಯಾರಿಕೆ, ಜ್ವರ ಸಹ ಶಾಂತವಾಗುವವು.

ಜಲಧರಮಲಯಜನಾಗರಸಬಾಲಕೋಶೀರಪರ್ಪಟೈಃ ಕ್ವಥಿತಮ್ ।
ಯಃ ಪಿಬತಿ ಪಯಃ ಸುಶೀತಂ ಶಾಮ್ಯತಿ ರುಗ್ದಾಹಕಸ್ತಸ್ಯ ॥
ಅಭಯಾಪರ್ಪಟಮುಸ್ತಾಕಟುಕೀಶಮ್ಯಾಕಗೋಸ್ತನೀಕ್ವಾಥಃ ।
ಪೀತಃ ಕರೋತಿ ನಾಶಂ ರುಗ್ದಾಹರುಜೋ ನ ಸಂದೇಹಃ ॥ (ನಿ. ರ.)

(2) ಭದ್ರಮುಷ್ಟಿ, ಶ್ರೀಗಂಧ, ಶುಂಠಿ, ಲಾಮಂಚ, ಮುಡಿವಾಳ (ಅಥವಾ ಇರುವೇರಿ), ಪರ್ಪಾಟಕ, ಇವುಗಳನ್ನು ಕೂಡಿಸಿ ಕುದಿಸಲ್ಪಟ್ಟ ನೀರನ್ನು ಒಳ್ಳೇ ತಣ್ಣಗಾಗಿ ಯಾರು ಪಾನಮಾಡುತ್ತಾನೋ, ಅವನ ರುಗ್ದಾಹ ಸನ್ನಿಪಾತವು ಶಮನವಾಗುತ್ತದೆ.

(3) ಅಣಲೆಕಾಯಿ, ಪರ್ಪಾಟಕ, ಭದ್ರಮುಷ್ಟಿ, ಕಟುಕರೋಹಿಣಿ, ಕಕ್ಕೆಮರ, ದ್ರಾಕ್ಷೆ, ಇವುಗಳ ಕಷಾಯದ ಪಾನದಿಂದ ರುಗ್ದಾಹ ವ್ಯಾಧಿಯು ನಾಶವಾಗುವದರಲ್ಲಿ ಸಂದೇಹವಿಲ್ಲ.

ಸಸಿತೋ ನಿಶಿ ಪರ್ಯುಷಿತಃ ಪ್ರಾತರ್ಧಾನ್ಯಾಕತಂಡುಲಕ್ವಾಥಃ ।
ಪೀತಃ ಶಮಯತ್ಯಚಿರಾದನ್ತರ್ದಾಹಂ ಜ್ವರಂ ಪೈತ್ತಮ್ ॥
(ಭಾ. ಪ್ರ. 300)

(4) ಕೊತ್ತುಂಬರಿ ಪುಡಿಯ ಕಷಾಯವನ್ನು ಮಾಡಿ ರಾತ್ರಿ ತಣಿಯಲಿಟ್ಟು, (ಮಾರಣೆ ದಿನ) ಬೆಳಿಗ್ಗೆ, ಸಕ್ಕರೆ ಕೂಡಿಸಿಕೊಂಡು, ಕುಡಿಯಲು ಅಂತರ್ದಾಹವುಳ್ಳ ಪಿತ್ತಜ್ವರವು ಬೇಗನೆ ಶಮನವಾಗುತ್ತದೆ.

ಪಥ್ಯಾಂ ತೈಲಘೃತಕ್ಷೌದ್ರೈರ್ಲಿಹ್ಯಾದ್ದಾಹವಿನಾಶಿನೀಮ್ ॥
(ಭಾ. ಪ್ರ. 300)

ಅಣಲೆಕಾಯಿ ಸಿಪ್ಪೆಯ ಚೂರ್ಣವನ್ನು ಎಳ್ಳೆಣ್ಣೆ, ತುಪ್ಪ ಮತ್ತು ಜೇನಿನಲ್ಲಿ ಕಲಸಿ ನೆಕ್ಕಲು ಉರಿ ನಿಲ್ಲುವದು.

ಪರಾ ಎಳ್ಳೆಣ್ಣೆ-ತುಪ್ಪ-ಜೇನುಗಳನ್ನು ಒಟ್ಟಾಗಿಯೇ ಉಪಯೋಗಿಸಬೇಕೆಂತಿಲ್ಲ ಎಂತ ವ್ಯಾಖ್ಯಾನ ಕಾಣುತ್ತದೆ

ಪ್ರಶಮಯತಿ ದಾಹಮಚಿರಾದ್ದಧಿಯುಕ್ಕರ್ಕನ್ಧುಪಲ್ಲವೈರ್ಲೇಪಃ ।
ಲೇಪೋ ಹಿಮಕರಮಲಯಜಸಿಮ್ಬದಲೈಸ್ತಕ್ರಪಿಷ್ಟೈರ್ವಾ ॥
(ಭಾ. ಪ್ರ. 300)

ಸಣ್ಣಬೊಗರಿಯ ಎಲೆಗಳನ್ನು ಮೊಸರಿನೊಂದಿಗೆ ಅರೆದು ಲೇಪಹಾಕಲು, ಅಥವಾ ಶ್ರೀಗಂಧ, ಕಹಿಬೇವಿನ ಎಲೆ, ಪಚ್ಚಕರ್ಪೂರ, ಇವುಗಳನ್ನು ಮಜ್ಜಿಗೆಯಲ್ಲಿ ಅರೆದು ಲೇಪಿಸಲು, ಉರಿಯು ಬೇಗನೆ ಶಾಂತವಾಗುತ್ತದೆ.

ಬದಲೀಪಲ್ಲವಲೇಪಃ ಶ್ರೀಖಣ್ಡಾರಿಷ್ಟಕೇನ ಸಂಯುಕ್ತಃ |
ದಾತವ್ಯಃ ಪಾದತಲಯೋಸ್ತ್ವರಯಾ ರುಗ್ದಾಹಸನ್ನಿಪಾತಘ್ನಃ || (ನಿ. ರ)

ಬೊಗರಿಯ ಎಲೆಗಳನ್ನು, ಶ್ರೀಗಂಧಾರಿಷ್ಟ ಕೂಡಿಸಿಕೊಂಡು, ಅರೆದು ಪಾದಗಳ ಅಡಿತಟ್ಟಿನ ಮೇಲೆ ಬೇಗನೆ ಲೇಪಿಸಬೇಕು; ಅದರಿಂದ ರುಗ್ದಾಹಸನ್ನಿಯು ನಾಶವಾಗುವದು.

ಪರಾ 'ಶ್ರೀಗಂಧಾರಿಷ್ಟಕ' ಎಂದರೆ ಶ್ರೀಗಂಧ ಮತ್ತು ಕಹಿಬೇವಿನ ಎಲೆ ಎಂತ ಅರ್ಥ ಮಾಡಿದರೂ ತಪ್ಪಾಗದು

ಉತ್ತಾನಸುಪ್ತಸ್ಯ ಗಭೀರತಾಮ್ರಕಾಂಸ್ಯಾದಿಪಾತ್ರೇ ನಿಹಿತೇ ಚ ನಾಭೌ |
ಶೀತಾಮ್ಬುಧಾರಾ ಬಹುಲಾ ಪತನ್ತೀ ನಿಹನ್ತಿ ದಾಹಂ ತ್ವರಿತಂ ಜ್ವರಂ ಚ ||
(ಭಾ ಪ್ರ. 300)

ರೋಗಿಯನ್ನು ಅಂಗತವಾಗಿ ಮಲಗಿಸಿ, ಹೊಕ್ಕಳ ಮೇಲೆ ಆಳವುಳ್ಳ ತಾಮ್ರ, ಕಂಚು ಮುಂತಾದ ಪಾತ್ರವನ್ನಿರಿಸಿ, ಅದರೊಳಗೆ ತಣ್ಣಗಾದ ನೀರಿನ ಧಾರೆಯನ್ನು ಬಹಳವಾಗಿ ಬೀಳಿಸುವದರಿಂದ ಉರಿಯೂ ಜ್ವರವೂ ಬೇಗನೆ ಪರಿಹಾರವಾಗುತ್ತವೆ.

ಕಾಂಜಿಕಾರ್ದ್ರಪಟೇನಾವಗುಂಠನಂ ದಾಹನಾಶನಮ್ |
ಅಥ ಗೋತಕ್ರಸಂಸ್ವಿನ್ನಶೀತಲೀಕೃತವಾಸಸಾ || (ಭಾ. ಪ್ರ. 300)

ಹುಳಿಗಂಜಿನೀರಿನಲ್ಲಿ ನೆನೆಸಿ ಒದ್ದೆಯಾದ ವಸ್ತ್ರದಿಂದ, ಅಥವಾ ದನದ ಮಜ್ಜಿಗೆಯ ಸೆಕೆಯಿಂದ ಒದ್ದೆಮಾಡಿ (ಅಥವಾ ಕುದಿಯುವ ಮಜ್ಜಿಗೆಯಲ್ಲಿ ನೆನೆಸಿ) ತಣಿಸಿದ ವಸ್ತ್ರದಿಂದ, ಹೊದಿಸುವದರಿಂದ ಉರಿನಾಶನ ಆಗುವದು.

ಪರಾ ಹಿಂದಿನ 69ನೇ ಸಂಖ್ಯೆಯನ್ನೂ ಮುಂದಿನ 114ನೇ ಸಂಖ್ಯೆಯನ್ನೂ ನೋಡಿ

ದಾಹವಮ್ಯರ್ದಿತಂ ಕ್ಷಾಮಂ ನಿರನ್ನಂ ತೃಷ್ಣಯಾನ್ವಿತಮ್ |
ಶರ್ಕರಾಮಧುಸಂಯುಕ್ತಂ ಪಾಯಯೇಲ್ಲಾಜತರ್ಪಣಮ್ ||
(ಭಾ. ಪ್ರ. 301)

ಉರಿಯಿಂದಲೂ ವಾಂತಿಯಿಂದಲೂ ಪೀಡಿತನಾದ, ಆಹಾರವಿಲ್ಲದೆ ಕಂಗೆಟ್ಟ ಮತ್ತು ಬಾಯಾರಿದ ರೋಗಿಗೆ ಅರಳಿನ ಗಂಜಿಯನ್ನು, ಸಕ್ಕರೆ ಮತ್ತು ಜೇನು ಕೂಡಿಸಿ, ಕುಡಿಸಬೇಕು.

91. ಕಣೋಷಣೋಗ್ರಾಲವಣೋತ್ತಮಾನಿ ಕರಂಜಬೀಜಂ ಪ್ರಮದಾಮಲಾನಿ |
ಚಿತ್ತವಿಭ್ರಮ ಚಿಕಿತ್ಸೆ.— ಅಂಜನ ಯೋಗ

ಪಥ್ಯಾಕ್ಷಸಿದ್ಧಾರ್ಥಕಹಿಂಗುಶುಂಠೀಯುತಾನಿ ವಸ್ತಾಮ್ಬುವಿಮಿಶ್ರಿತಾನಿ ||
ಪಿಷ್ಟ್ವಾ ಗುಟೀಯಂ ನಯನೇ ನಿಧೇಯಾ ಪ್ರಚೇತನೇ ऽತಿಪ್ರಥಿತಾನ್ವಿತಾರ್ಥಾ |
ಚಿತ್ತಭ್ರಮಾಯ ಸ್ಮೃತಿಭೂತದೋಷಶಿರೋऽಕ್ಷಿರೋಗಭ್ರಮನಾಶಹೇತುಃ ||
(ಭಾ. ಪ್ರ. 301)

(1ನೇ ಅಧ್ಯಾಯದ 38ನೇ ಸಂಖ್ಯೆಯಲ್ಲಿ ವರ್ಣಿಸಲ್ಪಟ್ಟ ತ್ರ್ಯೂಷಣಾದಿ ವಟಕದ ಯೋಗವೇ ಇದು, ಆದರೆ ನೆಲ್ಲಿಚಟ್ಟು ಮತ್ತು ಕಟುಕರೋಹಿಣಿ ಎನ್ನುವದರ ಬದಲಾಗಿ 'ಪ್ರಮದಾಮಲಾನಿ' ಎಂತ ಉಂಟು. 'ಪ್ರಮದಾ' ಎಂದರೆ 'ರೋಹಿಣೀ' ಮತ್ತು 'ಆಮಲ' ಎಂದರೆ 'ಆಮಲಕ' ಎಂಬ ಅರ್ಥವನ್ನು ಆ ಪದಕ್ಕೆ ಮಾಡಬಹುದು ಆದರೆ ಕಟುಕರೋಹಿಣಿ ಬದಲಾಗಿ ಅರಸಿನವನ್ನು ಉಪಯೋಗಿಸಬೇಕೆಂಬ ಪಾಠಾಂತರ ಉಂಟು)

ಚಿತ್ತಭ್ರಮೆಯುಳ್ಳವನಿಗೆ ಎಚ್ಚರವನ್ನುಂಟುಮಾಡುವದಕ್ಕೆ ಈ ಅಂಜನವು ಪ್ರಸಿದ್ಧ ಮತ್ತು ದೃಷ್ಟಫಲ; ಮೂರ್ಛೆ, ಭೂತದೋಷ, ಶಿರೋರೋಗ, ನೇತ್ರರೋಗ ಮತ್ತು ಭ್ರಮ, ಇವುಗಳ ನಾಶನಕ್ಕೆ ಹೇತು.

ನಸ್ಯಯೋಗ.

ಕುಮ್ಭೋದ್ಭವತರೋರಮ್ಭೋ ಗುಡವಿಶ್ವಕಣಾನ್ವಿತಮ್ |
ನಿಹಿತಂ ನಸಿ ನೂನಂ ಸ್ಯಾಚ್ಚಿತ್ತಭ್ರಮವಿನಾಶನಮ್ || (ಭಾ. ಪ್ರ. 301)

ಶುಂಠಿ ಮತ್ತು ಹಿಪ್ಪಲಿಯ ಚೂರ್ಣವನ್ನೂ ಬೆಲ್ಲವನ್ನೂ ಅಗಸೆಮರನ (ಸೊಪ್ಪಿನ ಅಥವಾ ಚಕ್ಕೆಯ) ರಸದಲ್ಲಿ ಕಲಸಿ, ಮೂಗಿನೊಳಗೆ ಇಡಲು, ಚಿತ್ತಭ್ರಮ ನಾಶವಾಗುವದು ನಿಶ್ಚಯ.

ಮುರಾಮೂರ್ಧಜಮೇಘಾಹ್ವಮಧೂಕಮಲಯೋದ್ಭವೈಃ |
ಮರುತ್ತರುಮಧೂನ್ಮಿಶ್ರೈಃ ಪುರವಾಣಿಜವಾಂಶುಭಿಃ ||
ಲೋಹಲಾಮಜ್ಜಕೈಲಾಭಿರ್ಧೂಪಶ್ಚಿತ್ತಭ್ರಮಾಪಹಃ |
ಗ್ರಹದೋಷಹರಃ ಶ್ರೀದಃ ಸೌಭಾಗ್ಯಕರ ಉತ್ತಮಃ || (ಭಾ. ಪ್ರ. 301)

ಧೂಪದಯೋಗ

ಮುರೆ (ಅಂಗಾರಕನ ಗಿಡ? ಮಲ. ಕಂಡಿ ಬೆಣ್ಣೆ), ತಲೆಕೂದಲು, ಭದ್ರಮುಷ್ಟಿ, ಇಪ್ಪೆ ತಿರುಳು, ಶ್ರೀಗಂಧ, ದೇವದಾರ, ಜ್ಯೇಷ್ಠಮಧು, ಗುಗ್ಗುಳ, ನಖ, ಪರ್ಪಾಟಕ, ಅಗಿಲುಗಂಧ, ಲಾಮಂಚ, ಏಲಕ್ಕಿ, ಇವುಗಳ ಚೂರ್ಣದಿಂದ ಧೂಪ ಹಿಡಿಯಲು, ಚಿತ್ತಭ್ರಮ ಮತ್ತು ಗ್ರಹದೋಷ ಪರಿಹಾರ. ಈ ಧೂಪವು ಸೌಭಾಗ್ಯಸಂಪತ್ತುಗಳನ್ನು ಕೊಡತಕ್ಕಂಥಾದ್ದು ಮತ್ತು ಉತ್ತಮ.

ಕಷಾಯಗಳು

ಮೃದ್ವೀಕಾಽಮರದಾರುಮತ್ಸ್ಯಶಕಲಾಮುಸ್ತಾಮಲಕ್ಯೋಽಮೃತಾ-
ಪಥ್ಯಾರೇವತರಾಮಸೇನಕರಜೋರಾಜೀಫಲೈಃ ಸಂಯುತಾಃ |
ಹನ್ತ್ಯುಶ್ಚಿತ್ತರುಜೋಽಥ ದರ್ದುರದಲಾಪಾಠಾಪಟೋಲೀಪಯಃ
ಪಥ್ಯಾಪರ್ಪಟರಾಜವೃಕ್ಷಕಟುಕಾಶಂಖೂಕಪುಷ್ಪ್ಯೈಃ ಶೃತಾಃ ||
(ಭಾ. ಪ್ರ. 301)

(1) ದ್ರಾಕ್ಷೆ, ದೇವದಾರ, ಕಟುಕರೋಹಿಣಿ, ಭದ್ರಮುಷ್ಟಿ, ನೆಲ್ಲಿಚಟ್ಟು, ಅಮೃತಬಳ್ಳಿ, ಅಣಿಲೆಕಾಯಿ, ಕಕ್ಕೆಮರ, ನೆಲಬೇವು, ಪರ್ಪಾಟಕ, ಕಹಿಪಡುವಲು, ಇವುಗಳ ಕಷಾಯವು ಚಿತ್ತದೋಷವನ್ನು ಪರಿಹರಿಸುವದು.

(2) ಒಂದೆಲಗ (ತಿಮರೆ), ಪಾಡಾವಳಿಗಡ್ಡೆ, ಕಹಿಪಡುವಲು, ಮುಡಿವಾಳ (ಅಥವಾ ಇರುವೇರಿ), ಅಣಿಲೆಕಾಯಿ, ಪರ್ಪಾಟಕ, ಕಕ್ಕೆಮರ, ಕಟುಕರೋಹಿಣಿ, ಶಂಖಪುಷ್ಪೀ ಇವುಗಳ ಕಷಾಯವು ಚಿತ್ತದೋಷವನ್ನು ನಾಶಮಾಡುವದು.

ಬ್ರಾಹ್ಮೀವಚಾಭೀರುಫಲತ್ರಿಕೇಣ ತಿಕ್ತಾಬಲಾರಗ್ವಧತಿಕ್ತಕೇನ |
ನಿಮ್ಬಾಬ್ದಹಕೋಶಾತಕಿಹಾರಹೂರಾದ್ವಿಪಂಚಮೂಲೀಭಿರಸೌ ಕಷಾಯಃ ||

ಪೀತೋ ಹಿ ಚಿತ್ತಭ್ರಮಸನ್ನಿಪಾತಂ ನಿಹನ್ತಿ ರುಗ್ದಾಹಮಪಿ ಪ್ರಭೂತಮ್ ।
ಪಥ್ಯಾಪರ್ಪಟಕಟುಕಾಮೃದ್ವೀಕಾದಾರುಜಲದಭೂನಿಮ್ಬಾಃ ॥
ಶಮ್ಯಾಕಪಟೋಲಶಿವಾಕ್ವಾಥಶ್ಚಿತ್ತಭ್ರಮಂ ಹನ್ತಿ ।
ಹರೀತಕೀಪರ್ಪಟಹಾರಹೂರಾಶಂಭೂಕಪುಷ್ಪೈಃ ಕಟುಕೀಪಯೋದೈಃ ॥
ಶಮ್ಯಾಕದೇವಾಹ್ವಯಭಾರತೀಭಿಶ್ಚಿತ್ತಭ್ರಮಂ ಹನ್ತಿ ಕೃತಃ ಕಷಾಯಃ ॥
(ನಿ. ರ)

(3) ಒಂದೆಲಗ, ಬಜೆ, ಶತಾವರಿ, ತ್ರಿಫಲೆ, ಕಟುಕರೋಹಿಣಿ, ಕಲ್ಲಂಗಡಲೆಬೇರು, ಕಕ್ಕೆಮರ, ಕಹಿಪಡುವಲು, ಕಹಿಬೇವು, ಕಹಿಹೀರೆ, ದ್ರಾಕ್ಷೆ, ದಶಮೂಲಗಳು, ಇವುಗಳ ಕಷಾಯದ ಪಾನದಿಂದ ಚಿತ್ತವಿಭ್ರಮಸನ್ನಿ ಮತ್ತು ರುಗ್ದಾಹಸನ್ನಿ ಕಠಿಣವಾಗಿದ್ದರೂ ನಾಶವಾಗುತ್ತವೆ.

(4) ಅಣಲೆಕಾಯಿ, ಪರ್ಪಾಟಕ, ಕಟುಕರೋಹಿಣಿ, ದ್ರಾಕ್ಷೆ, ದೇವದಾರ, ಭದ್ರಮುಷ್ಟಿ, ನೆಲಬೇವು, ಕಕ್ಕೆಮರ, ಕಹಿಪಡುವಲು, ನೆಲ್ಲಿಚಟ್ಟು, ಇವುಗಳ ಕಷಾಯವು ಚಿತ್ತವಿಭ್ರಮವನ್ನು ಕೊಲ್ಲುತ್ತದೆ.

(5) ಅಣಲೆಕಾಯಿ, ಪರ್ಪಾಟಕ, ದ್ರಾಕ್ಷೆ, ಶಂಖಪುಷ್ಪಿ, ಕಟುಕರೋಹಿಣಿ, ಭದ್ರಮುಷ್ಟಿ, ಕಕ್ಕೆಮರ, ದೇವದಾರ, ಒಂದೆಲಗ, ಇವುಗಳ ಕಷಾಯವು ಚಿತ್ತಭ್ರಮವನ್ನು ನಾಶಮಾಡುತ್ತದೆ.

92. ಪ್ರಲೇಪಸ್ತಮಸ್ತಂ ನಯತ್ಯನ್ತಮೇಕಃ ಸಮುದ್ರಿಕ್ತಶೋಥಂ ಚ ರಕ್ತಾವಶೇಷಃ(?ಸೇಕಃ) ।
ಪಕ್ವೇಚ ಶಸ್ತ್ರಕ್ರಿಯಾ ಪೂಯಜಿತ್ಸಾ ವ್ರಣತ್ವಂ ಗತೇ ಚೋಚಿತಾ ತಚ್ಚಿಕಿತ್ಸಾ ॥ (ಭಾ. ಪ್ರ. 301)

ಕರ್ಣಿಕೆಯ ಚಿಕಿತ್ಸೆ ಸಾಮಾನ್ಯವಿಧಿ

(ಮುಂದೆ ಹೇಳುವ) ಲೇಪ ಒಂದೇ ಮೃತ್ಯುಸ್ವರೂಪವಾದ ಅದನ್ನು (ಕಿವಿಯ ಬುಡದ ಬಾವನ್ನು) ಅಡಗಿಸುತ್ತದೆ. ಅದು ಬಹಳ ಬಾತುಕೊಂಡಿದ್ದರೆ, ಅದರಿಂದ ಸ್ವಲ್ಪ ರಕ್ತವನ್ನು ತೆಗಿಯಬೇಕು; ಅದು ಪಕ್ವವಾಗಿದ್ದರೆ, ಶಸ್ತ್ರದಿಂದ ಸಿಗಿದು, ಕೀವನ್ನು ತೆಗೆದು ಬಿಡಬೇಕು; ಮತ್ತು ವ್ರಣದ ಅವಸ್ಥೆಗೆ ಬಂದರೆ, ವ್ರಣಕ್ಕೆ ಉಚಿತವಾದ ಚಿಕಿತ್ಸೆಯನ್ನು ಮಾಡತಕ್ಕದ್ದು.

ನಿಶಾವಿಶಾಲಾಭಯಮಾಣಿಮನ್ಥದಾರ್ವೀಂಗುದೀಮೂಲಕೃತಃ ಪ್ರಲೇಪಃ ।
ಪ್ರಭಾಕರಕ್ಷೀರಯುತಃ ಪ್ರಭಾವಾದ್ವ್ಯಸ್ತಃ ಸಮಸ್ತೋಽಪ್ಯಥ ಕರ್ಣಿಕಾಘ್ನಃ ॥

ಕುಲತ್ಥಃ ಕಟ್ಫಲಂ ಶುಂಠೀ ಕಾರವೀ ಚ ಸಮಾಂಶಕೈಃ ।
ಸುಖೋಷ್ಣೈರ್ಲೇಪನಂ ಕಾರ್ಯಂ ಕರ್ಣಮೂಲೇ ಮುಹುರ್ಮುಹುಃ ॥
ಗೈರಿಕಂ ಖಟಿನೀ ಶುಂಠೀ ಕಟ್ಫಲಾರಗ್ವಧೈಃ ಸಮೈಃ ।
ಉಷ್ಣೈಃ ಕಾಂಜಿಕಸಂಪಿಷ್ಟೈರ್ಲೇಪಃ ಕರ್ಣಕಮೂಲನುತ್ ॥
ಶಿಗ್ರುರಾಜಿಕಯೋಃ ಕಲ್ಕಂ ಕರ್ಣಮೂಲೇ ಪ್ರಲೇಪಯೇತ್ ।
ಕರ್ಣಮೂಲಭವಃ ಶೋಥಸ್ತೇನ ಲೇಪೇನ ಶಾಮ್ಯತಿ ॥ (ಭಾ. ಪ್ರ. 301,302)

(1) ಅರಸಿನ, ಹಾವುಮೆಕ್ಕೆ, ಅಣಿಲೆಕಾಯಿ, ಸೈಂಧವಲವಣ, ಮರದರಸಿನ, ಇಂಗಳ
ಲೇಪಗಳು. ಮರನ ಬೇರು, ಇವುಗಳೊಳಗೆ ಒಂದನ್ನು ಅಥವಾ ಎಲ್ಲವನ್ನು ಚೂರ್ಣಿಸಿ, ಅದನ್ನು ಎಕ್ಕೆಹಾಲಿನಲ್ಲಿ ಕಲಸಿ ಬಾವಿಗೆ ಲೇಪಿಸುವದರಿಂದ ಕರ್ಣಿಕೆಯು ನಾಶವಾಗುವದು.

(2) ಹುರುಳಿ, ಕಿರುಶಿವನಿ (ಕಟ್ಫಲ), ಶುಂಠಿ, ಕರಿಜೀರಿಗೆ, ಇವುಗಳನ್ನು ಸಮಾಂಶವಾಗಿ ತೆಗೆದುಕೊಂಡು, (ನೀರಿನಲ್ಲಿ) ಅರೆದು ಕುದಿಸಿ, ಸುಖೋಷ್ಣವಾಗಿ ಪದೇಪದೇ ಕಿವಿಬುಡದ ಬಾವಿಗೆ ಲೇಪಿಸಬೇಕು.

(3) ಕಾವಿಕಲ್ಲು, ಜೇಡಿಮಣ್ಣು (ಅಥವಾ ವಿಲಾಯತಿ ಸುಣ್ಣ), ಶುಂಠಿ. ಕಿರುಶಿವನಿ (ಕಟ್ಫಲ), ಕಕ್ಕೆಮರ, ಇವುಗಳನ್ನು ಸಮಾಂಶವಾಗಿ ತೆಗೆದುಕೊಂಡು ಚೂರ್ಣಮಾಡಿ, ಹುಳಿ ಗಂಜಿನೀರಿನಲ್ಲಿ ಅರೆದು, ಬಿಸಿಯಾಗಿ ಲೇಪಿಸಲು, ಕಿವಿಬುಡದ ಬಾವು ಪರಿಹಾರವಾಗುವದು.

(4) ನುಗ್ಗೆಬೇರಿನ ಸಿಪ್ಪೆ ಮತ್ತು ಸಾಸುವೆಗಳನ್ನು ನೀರಿನಿಂದ ಅರೆದು, ಮಾಡಿದ ಕಲ್ಕವನ್ನು ಕಿವಿಯ ಬುಡಕ್ಕೆ ಲೇಪಿಸಲು, ಕಿವಿಯ ಬುಡದಲ್ಲಿ ಉಂಟಾದ ಬಾವು ಶಮನವಾಗುತ್ತದೆ.

ಅಶಿಶಿರಜಲಪರಿಮೃದಿತಂ ಮರಿಚಕಣಾಜೀರಸಿಂಧುಜಂ ತ್ವರಿತಮ್ |
ನಸ್ಯವಿಧಿಸೇವಿತಂ ನನು ಕರ್ಣಕರುಗ್ನಾಶಕೃದ್ಗದಿತಮ್ ||
(ಭಾ. ಪ್ರ. 302)

ನಸ್ಯ ಕಾಳುಮೆಣಸು, ಹಿಪ್ಪಲಿ, ಜೀರಿಗೆ, ಸೈಂಧವಲವಣ, ಇವುಗಳನ್ನು ಬಿಸಿ ನೀರಿನಿಂದ ಅರೆದು, ವಿಧಿಪ್ರಕಾರ ಬೇಗನೆ ನಸ್ಯಮಾಡಲು, ಕರ್ಣಿಕಾರೋಗವು ನಾಶವಾಗುವದು ಎಂತ ಹೇಳಲ್ಪಟ್ಟದೆ.

ಕಷಾಯ ಯೋಗಗಳು

ಭಾಂಗೀರ್ಜಯಾಪೌಷ್ಕರಕಂಟಕಾರೀಕಟುತ್ರಿಕೋಗ್ರಾಘನಕುಂಡಲೀಭಿಃ |
ಕುಲೀರಶೃಂಗೀಕಟುಕಾರಸಾಭಿಃ ಕೃತಃ ಕಷಾಯಃ ಕಿಲ ಕರ್ಣಕಷ್ನಃ ||
ದಶಮೂಲಮತ್ಸ್ಯಶಕಲಾಚಪಲಾತ್ರಿಫಲಾಮಹೌಷಧಕಿರಾತಯುತಮ್ |
ಮರಿಚಂ ಪರಿಕ್ವಥಿತಮಾಶು ಬಲಾದಪಹನ್ತಿ ಕರ್ಣರುಜಃ ಸಕಲಾಃ ||
(ಭಾ. ಪ್ರ. 302)

(1) ನಿರ್ವಿಷದ ಬೇರು, ನರುವಲು, ಪುಷ್ಕರಮೂಲ, ಕಿರಿಗುಳ್ಳದ ಬೇರು, ತ್ರಿಕಟು, ಬಜೆ, ಭದ್ರಮುಷ್ಟಿ, ಅಮೃತಬಳ್ಳಿ, ಕರ್ಕಟಶೃಂಗಿ, ಕಟುಕರೋಹಿಣಿ, ರಾಸ್ನೆಗಡ್ಡೆ (ಅರತೆ), ಇವುಗಳ ಕಷಾಯವು ಕರ್ಣಿಕರೋಗವನ್ನು ನಿಶ್ಚಯವಾಗಿ ನಾಶಮಾಡುತ್ತದೆ.

(2) ದಶಮೂಲಗಳು, ಕಟುಕರೋಹಿಣಿ, ಹಿಪ್ಪಲಿ, ತ್ರಿಫಲೆ, ಶುಂಠಿ, ನೆಲಬೇವು, ಕಾಳುಮೆಣಸು, ಇವುಗಳ ಕಷಾಯವು ಸಕಲ ಕರ್ಣಿಕರೋಗಗಳನ್ನು ಬಲಾತ್ಕಾರದಿಂದ ನಾಶಮಾಡುತ್ತದೆ.

ರಾಸ್ನಾಶ್ವಗನ್ಧಾಘನಕಂಟಕಾರಿಭಾಂಗೀರ್ವಚಾಪೌಷ್ಕರರೋಹಿಣೀನಾಮ್ |
ಕ್ವಾಥಃ ಕೃತಃ ಶೃಂಗ್ಯಭಯಾಯುತಾನಾಂ ಪೀತೋ ಜಯೇತ್ಕರ್ಣಕಸನ್ನಿಪಾತಮ್ ||
ಮರೀಚದಶಮೂಲಮಗಧಾಫಲತ್ರಯನಿಶಾಮಹೌಷಧೀತಿಕ್ತಾ- |
ಭೂನಿಮ್ಬಸೈನ್ಧವಯುತಃ ಕರ್ಣಕಹನ್ತಾ ಭವೇತ್ಕ್ವಾಥಃ || (ನಿ. ರ.)

(3) ರಾಸ್ನೆಗಡ್ಡೆ (ಅರತೆ), ಅಶ್ವಗಂಧಿ, ಭದ್ರಮುಷ್ಟಿ, ಕಿರಿಗುಳ್ಳದ ಬೇರು, ನಿರ್ವಿಷದ ಬೇರು, ಬಜೆ, ಪುಷ್ಕರಮೂಲ, ಕಟುಕರೋಹಿಣಿ, ಕರ್ಕಟಶೃಂಗಿ, ಅಣಿಲೆಕಾಯಿ, ಇವುಗಳ ಕಷಾಯದ ಪಾನದಿಂದ ಕರ್ಣಕಸನ್ನಿಪಾತವು ಜಯಿಸಲ್ಪಡುವದು.

(4) ಕಾಳುಮೆಣಸು, ದಶಮೂಲಗಳು, ಹಿಪ್ಪಲಿ, ತ್ರಿಫಲೆ, ಅರಸಿನ, ಶುಂಠಿ, ಕಟುಕ ರೋಹಿಣಿ, ನೆಲಬೇವು, ಇವುಗಳ ಕಷಾಯವನ್ನು, ಸೈಂಧವಲವಣ ಕೂಡಿಸಿ, ಪಾನಮಾಡಿಸಲು, ಕರ್ಣಕಸನ್ನಿಪಾತವು ನಾಶವಾಗುವದು.

93. ಫಲತ್ರಿಕತ್ರ್ಯೂಷಣಮುಸ್ತಕಟ್ವೀಕಲಿಂಗಸಿಂಹಾನನಶರ್ವರೀಭಿಃ |
ಕಂಠಕುಬ್ಜ-ಚಿಕಿತ್ಸೆ
ಕ್ವಾಥಃ ಕೃತಃ ಕೃನ್ತತಿ ಕಂಠಕುಬ್ಜಂ ಕಂಠೀರವಃ ಕುಂಜರಮಾಶು ತದ್ವತ್ ||
ಕಿರಾತಕಟುಕಾಕಣಾಕುಟಜಕಂಟಕಾರೀಶಟೀ-
ಕಲಿದ್ರುಕಿಲಿಮಾಭಯಾಕಟುಕಕಟ್ಫಲಾಂಭೋಧರೈಃ |
ವಿಷಾಮಲಕಪುಷ್ಕರಾನಲಕುಲೀರಶೃಂಗೀವೃಷೈಃ
ಮಹೌಷಧಸಖೈರಯಂ ಜಯತಿ ಕಂಠಕುಬ್ಜಂ ಗಣಃ || (ಭಾ. ಪ್ರ. 302)

(1) ತ್ರಿಫಲೆ, ತ್ರಿಕಟು, ಭದ್ರಮುಷ್ಟಿ, ಕಟುಕರೋಹಿಣಿ, ಇಂದ್ರಜೀವಿ, ಆಡುಸೋಗೆ,
ಕಷಾಯಗಳು
ಅರಸಿನ, ಇವುಗಳ ಕಷಾಯವು ಕಂಠಕುಬ್ಜಸನ್ನಿಪಾತವನ್ನು, ಸಿಂಹವು ಆನೆಯನ್ನು ಕೊಲ್ಲುವಂತೆ, ಬೇಗನೆ ನಾಶಮಾಡುವದು.

(2) ನೆಲಬೇವು, ಕಟುಕರೋಹಿಣಿ, ಹಿಪ್ಪಲಿ, ಕೊಡಸಿಗನ ಚಕ್ಕೆ, ಕಿರಿಗುಳ್ಳದ ಬೇರು, ಕಚೋರ, ಶಾಂತಿಕಾಯಿ, ದೇವದಾರ, ಅಣಿಲೆಕಾಯಿ, ಕಾಳುಮೆಣಸು, ಕಿರುಶಿವನಿ (ಕಟ್ಫಲ), ಭದ್ರಮುಷ್ಟಿ, ಅತಿವಿಡೆ, ನೆಲ್ಲಿಚಟ್ಟು, ಪುಷ್ಕರಮೂಲ, ಚಿತ್ರಮೂಲ, ಕರ್ಕಟಶೃಂಗಿ, ಆಡುಸೋಗೆ ಮತ್ತು ಶುಂಠಿ, ಈ ಗಣ(ದ ಕಷಾಯ)ವು ಕಂಠಕುಬ್ಜವನ್ನು ಜಯಿಸುತ್ತದೆ.

ಶೃಂಗೀವತ್ಸಕಚೇತಕೀಘನಸಠೀಭೂನಿಮ್ಬಭಾಂಗೀರ್ನಿಶಾ-
ತಿಕ್ತಾಪುಷ್ಕರಚಿತ್ರಕೈಃ ಸಮರಿಚೈರ್ವ್ಯಾಘ್ರೀವೃಷಾಮಿಶ್ರಿತೈಃ |
ಧಾತ್ರೀದಾರುವಿಭೀತಕೈಶ್ಚ ಚವಿಕಾವಿಶ್ವಾಕಣಾಕಟ್ಫಲೈಃ
ಪೀತಃ ಕೃನ್ತತಿ ಕಂಠಕುಬ್ಜಮಚಿರಾತ್ಕೋಷ್ಣಃ ಕಷಾಯಸ್ತ್ವಿಹ ||
(ನಿ. ರ.)

(3) ಕರ್ಕಟಶೃಂಗಿ, ಕೊಡಸಿಗ, ಅಣಿಲೆಕಾಯಿ, ಭದ್ರಮುಷ್ಟಿ, ಸಣ್ಣಕಚೋರ, ನೆಲಬೇವು, ನಿರ್ವಿಷದ ಬೇರು, ಅರಸಿನ, ಕಟುಕರೋಹಿಣಿ, ಪುಷ್ಕರಮೂಲ, ಚಿತ್ರಮೂಲ, ಕಾಳುಮೆಣಸು, ಕಿರಿಗುಳ್ಳದ ಬೇರು, ಆಡುಸೋಗೆ, ನೆಲ್ಲಿಚಟ್ಟು, ದೇವದಾರ, ಶಾಂತಿ(ತಾರೆ)ಕಾಯಿ, ಕಾಡುಮೆಣಸಿನ ಬೇರು, ಶುಂಠಿ, ಹಿಪ್ಪಲಿ, ಕಟ್ಫಲ (ಕಿರುಶಿವನಿ), ಇವುಗಳ ಕಷಾಯವನ್ನು ಸುಖೋಷ್ಣವಾಗಿ ಕುಡಿಯುವದರಿಂದ ಕಂಠಕುಬ್ಜವು ಬೇಗನೆ ನಾಶವಾಗುವದು.

ಅಪನಯತಿ ಕಂಠಕುಬ್ಜಂ ಕೃಷ್ಣಾಪಾಮಾರ್ಗಯುಕ್ ನಸ್ಯಮ್ || (ನಿ. ರ.)

ನಸ್ಯಯೋಗ
ಹಿಪ್ಪಲಿ ಮತ್ತು ಉತ್ತರಣೆಬೇರನ್ನು ಚೂರ್ಣಿಸಿ ನಸ್ಯಮಾಡಲು, ಕಂಠಕುಬ್ಜವು ತೊಲಗುವದು.

94\. ಸನ್ನಿಪಾತೇ ಕ್ಷುಧಾರ್ತಂ ಯೋ ಭೋಜಯೇತ್ಪಿಶಿತೌದನಮ್ ।
ಸ ಕಥಂ ಭಿಷಗಾಖ್ಯಾತಿಂ ಲಭೇನ್ಮೂಢೋ ನರಾಧಮಃ ॥
ಸನ್ನಿಪಾತೇ ತು ದಾಹಾರ್ತಂ ಯಃ ಸಿಂಚೇಚ್ಛೀತವಾರಿಣಾ ।
ಆತುರಃ ಸ ಕಥಂ ಜೀವೇದ್ಭಿಷಗ್ವಾ ಸ ಕಥಂ ಭವೇತ್ ॥
ಸನ್ನಿಪಾತೇನ ಮನುಜಂ ವಿಲಪಂತನ್ತು ಯೋ ಘೃತಮ್ ।
ಪಾಯಯೇದ್ಭೋಜಯೇದ್ವಾಪಿ ತೌ ಚ ಸ್ಯಾತಾ*ಮುಭೌ ವಧಮ್ ॥
ಸನ್ನಿಪಾತೇನ ತೃಷ್ಯನ್ತಂ ಪಾರ್ಶ್ವರುಕ್ತಾಲುಶೋಷಿಣಮ್ ।
ಯಃ ಪಾಯಯೇಜ್ಜಲಂ ಶೀತಂ ಸ ಮೃತ್ಯುರ್ನರವಿಗ್ರಹಃ ॥
ಸಮುದ್ರತರಣಂ ಹ್ಯೇತತ್ ವದನ್ತಿ ಭಿಷಗೀಶ್ವರಾಃ ।
ಮೃತ್ಯುನಾ ಸಹ ಯೋದ್ಧವ್ಯಂ ಸನ್ನಿಪಾತಂ ಚಿಕಿತ್ಸತಾ ॥
* * * ಸರ್ವೇಷು ಸನ್ನಿಪಾತೇಷು ನ ಕ್ಷೌದ್ರಮವಚಾರಯೇತ್ ।
ಶೀತೋಪಚಾರಂ ಕ್ಷೌದ್ರಂ ಸ್ಯಾಚ್ಛೀತಂ ಚಾತ್ರ ವಿರುಧ್ಯತೇ ॥
(ಚಿ. ಸಾ. ಸಂ. 35-36, 38)

ಸನ್ನಿಪಾತಜ್ವರದಲ್ಲಿ ಕೆಲವು ನಿಯಮವಿಶೇಷಗಳು

* ಈ ಪದವನ್ನಿಡಬೇಕಾದರೆ, ಆ ಚರಣವನ್ನು "ವಧ್ಯಾಸ್ಯಾತಾಮುಭೌ ಚತೇ" ಎಂತ ಓದಬೇಕಾದೀತು.

ಸನ್ನಿಪಾತಜ್ವರದಲ್ಲಿ ಹಸಿದವನಿಗೆ ಯಾವನು ಮಾಂಸದೊಂದಿಗೆ ಅನ್ನವನ್ನು ಇಕ್ಕಿಸುತ್ತಾನೋ, ಅಂಥಾ ಮೂಢನಾದ ನರಾಧಮನು ವೈದ್ಯನೆಂಬ ಹೆಸರನ್ನು ಹೇಗೆ ಪಡೆದಾನು? ಸನ್ನಿಪಾತಜ್ವರದಲ್ಲಿ ಉರಿಯಿಂದ ಪೀಡಿಸಲ್ಪಟ್ಟವನಿಗೆ (ಮೈಮೇಲೆ) ಯಾವನು ತಣ್ಣೀರು ಚಿಮುಕಿಸುತ್ತಾನೋ, ಅವನು ಹೇಗೆ ವೈದ್ಯನಾದಾನು? ಮತ್ತು ಆ ರೋಗಿಯು ಹೇಗೆ ಬದುಕಿಯಾನು? ಸನ್ನಿಪಾತದಿಂದ ನರಳುತ್ತಿರುವ ಮನುಷ್ಯನಿಗೆ ಯಾವನು ತುಪ್ಪವನ್ನು ಕುಡಿಸುತ್ತಾನೋ, ಅಥವಾ (ತುಪ್ಪದಿಂದ) ಉಣ್ಣಿಸುತ್ತಾನೋ, ಅವರಿಬ್ಬರು ವಧೆಯನ್ನು ಪಡೆಯತಕ್ಕವರು. ಸನ್ನಿಪಾತದಿಂದ ಬಾಯಾರಿಕೆಯುಂಟಾಗಿ ತಾಲು ಒಣಗಿದವನಿಗೆ, ಪಕ್ಕದ ಶೂಲೆ ಇರುವಾಗ್ಗೆ, ಯಾವನು ತಣ್ಣೀರನ್ನು ಕುಡಿಸುತ್ತಾನೋ, ಅವನು ನರದೇಹವನ್ನು ಪಡೆದ ಮೃತ್ಯು (ಯಮ) ಆಗಿರುತ್ತಾನೆ. ಸನ್ನಿಪಾತಜ್ವರವನ್ನು ವಾಸಿಮಾಡುವದೆಂದರೆ ಸಮುದ್ರವನ್ನು ದಾಟುವದು ಎಂತ ವೈದ್ಯಶಿರೋಮಣಿಗಳು ಹೇಳುತ್ತಾರೆ; ಸನ್ನಿಪಾತಕ್ಕೆ ಚಿಕಿತ್ಸೆ ಮಾಡುವಂಥವನು ಯಮನೊಂದಿಗೆ ಯುದ್ಧಮಾಡಬೇಕಾಗುತ್ತದೆ. * * * ಎಲ್ಲಾ ಸನ್ನಿಪಾತಗಳಲ್ಲಿಯೂ ಜೇನನ್ನು ರೋಗಿಗೆ ಕೊಡಬಾರದು; ಯಾಕೆಂದರೆ, ಜೇನು ಶೀತೋಪಚಾರಬೇಕಾದ್ದು (ಬಿಸಿಮಾಡದೆ ತಣ್ಣಗಿನ ಪದಾರ್ಥಗಳೊಂದಿಗೆ ಕೊಡಬೇಕಾದ್ದು) ಮತ್ತು ಶೀತ ಸನ್ನಿಪಾತಜ್ವರದಲ್ಲಿ ವಿರುದ್ಧವಾದ್ದಾಗಿರುತ್ತದೆ.

ಷರಾ ಈ ವಿಧಿಗಳೆಲ್ಲ ಮೇಲೆ ವರ್ಣಿಸಲ್ಪಟ್ಟ ಹದಿಮೂರು ಸನ್ನಿಪಾತಜ್ವರಗಳಿಗೆ ಸಂಬಂಧಪಟ್ಟು ಸಾಮಾನ್ಯವಾಗಿ ಹೇಳಲ್ಪಟ್ಟವು ಅವು ತ್ರಿದೋಷಜನ್ಯವಾದ ವಿಷಮಜ್ವರಗಳಿಗೆ ಲಗಾವಾಗುವದಿಲ್ಲ ವಿಶೇಷವಿಧಿ ಪ್ರಕಾರ ರುಗ್ದಾಹ ಸನ್ನಿಪಾತದಲ್ಲಿ ಶೀತೋಪಚಾರ ಮಾಡುವದಕ್ಕಾಗಲಿ, ಕಫಾಧಿಕ್ಯವಿರುವಲ್ಲಿ ಯೋಗಾಂಗವಾಗಿ ಜೇನನ್ನು ಉಪಯೋಗಿಸುವದಕ್ಕಾಗಲಿ ಈ ನಿಷೇಧಗಳು ಬಾಧಿಸತಕ್ಕಂಥವಲ್ಲ.

95\. ಆರ್ದ್ರಕಸ್ವರಸೋಪೇತಂ ಸೈನ್ಧವಂ ಸಕಟುತ್ರಯಮ್ ।
ಆಕಂಠಂ ಧಾರಯೇದಾಸ್ಯೇ ನಿಷ್ಠೀವೇಚ್ಚ ಪುನಃ ಪುನಃ ॥

ಕವಲ ಯೋಗಗಳು.

ತೇನಾಸ್ಯ ತಾಲುಕೋಷ್ಠಾಂಶಮನ್ಯಾಪಾರ್ಶ್ವಶಿರೋಗಲಾತ್ ।
ಲೀನೋ ಽಪ್ಯಾಕೃಷ್ಯತೇ ಶ್ಲೇಷ್ಮಾ ಲಾಘವಂ ಚಾಸ್ಯ ಜಾಯತೇ ॥
ಪರ್ವಭೇದೋ ಜ್ವರೋ ಮೂರ್ಛಾ ನಿದ್ರಾಶ್ವಾಸಗಲಾಮಯಾಃ ।
ಮುಖಾಕ್ಷಿಗೌರವಂ ಜಾಡ್ಯಂ ಕ್ಲೇಶಶ್ಚೈವೋಪಶಾಮ್ಯತಿ ॥
ಸಕೃದ್ದ್ವಿತ್ರಿಚತುಃ ಕುರ್ಯಾತ್ ದೃಷ್ಟ್ವಾ ದೋಷಬಲಾಬಲಮ್ ।
ಏತದ್ಧಿ ಪರಮಂ ಪ್ರಾಹುರ್ಭೇಷಜಂ ಸನ್ನಿಪಾತಿನಾಮ್ ॥
(ಚಿ. ಸಾ. ಸಂ. 37)

ಸೈಂಧವಲವಣವನ್ನು ಶುಂಠಿರಸದಲ್ಲಿ ಕರಗಿಸಿ, ತ್ರಿಕಟುಗಳ ಚೂರ್ಣವನ್ನು ಕೂಡಿಸಿಕೊಂಡು, ಗಂಟಲ ವರೆಗೆ ಬಾಯಿಯೊಳಗೆ ಇಟ್ಟುಕೊಂಡು, (ಹೊರಡುವ ಕಫವನ್ನು) ಪದೇ ಪದೇ ಉಗುಳಬೇಕು. ಅದರಿಂದ ತಾಲು, ಕೋಷ್ಠ (ಎದೆ ಮತ್ತು ಹೊಟ್ಟೆ), ಹೆಗಲಡಿ, ಕುತ್ತಿಗೆಯ ಹಿಂಬದಿ, ಪಕ್ಕಗಳು, ತಲೆ, ಗಂಟಲು, ಈ ಸ್ಥಾನಗಳಲ್ಲಿ ಅಂಟಿಕೊಂಡಿದ್ದದ್ದಾದರೂ ಕಫವು ಸೆಳೆಯಲ್ಪಡುತ್ತದೆ; ದೇಹ ಹಗುರವಾಗುತ್ತದೆ; ಮತ್ತು ಸಂದುಗಳ ಒಡೆತ, ಜ್ವರ, ಮೂರ್ಛೆ, ಅತಿನಿದ್ರೆ, ಉಬ್ಬಸ, ಗಂಟಲ ರೋಗಗಳು, ಮುಖವೂ ಕಣ್ಣುಗಳೂ ಭಾರವಾಗಿ ಕಾಣುವದು, ಜಡತನ ಮತ್ತು ಸಂಕಟ ಉಪಶಮನವಾಗುತ್ತವೆ. ದೋಷಗಳ ಬಲಾಬಲ ನೋಡಿಕೊಂಡು ಆ ಪ್ರಕಾರ ಒಂದು, ಎರಡು, ಮೂರು ಅಥವಾ ನಾಲ್ಕು ಸರ್ತಿ ಮಾಡಬೇಕು; ಯಾಕೆಂದರೆ ಸನ್ನಿಪಾತರೋಗದವರಿಗೆ ಇದು ಉತ್ತಮವಾದ ಔಷಧ ಎಂತ ಹೇಳುತ್ತಾರೆ.

96. ಮಧೂಕಸಾರಸಿನ್ಧೂತ್ಥವಚೋಷಣಕಣಾಃ ಸಮಾಃ ।
ನಸ್ಯಯೋಗ
ಶ್ಲಕ್ಷ್ಣಂ ಪಿಷ್ಟ್ವಾಮ್ಬುನಾ ನಸ್ಯಂ ಕುರ್ಯಾತ್ಸಂಜ್ಞಾಪ್ರಬೋಧನಮ್ ॥
(ಚಿ. ಸಾ. ಸಂ 37)

ಇಪ್ಪೆತಿರುಳು, ಸೈಂಧವಲವಣ, ಬಜೆ, ಕಾಳುಮೆಣಸು, ಹಿಪ್ಪಲಿ, ಇವುಗಳನ್ನು ಸಮಭಾಗವಾಗಿ ತೆಗೆದುಕೊಂಡು ಚೂರ್ಣಿಸಿ, ನೀರಿನಿಂದ ನುಣ್ಣಗೆ ಅರದು ನಸ್ಯಮಾಡಲು, ಸಂಜ್ಞೆಯು ಚುರುಕಾಗುವದು.

97. ಮರೀಚಂ ಪಿಪ್ಪಲೀ ಶುಂಠೀ ಪಥ್ಯಾ ಲೋಧ್ರಂ ಸಪುಷ್ಕರಮ್ ।
ಸನ್ನಿಪಾತದಲ್ಲಿ ಉದ್ಧೂಲನ ಯೋಗಗಳು
ಭೂನಿಮ್ಬಕಟುಕಾಕುಷ್ಠಂ ಯವಾನೀ ಕಟ್ಫಲಂ ತಥಾ ॥
ಏತಾನಿ ಸಮಭಾಗಾನಿ ಸೂಕ್ಷ್ಮಚೂರ್ಣಾನಿ ಕಾರಯೇತ್ ।
ಪ್ರಸ್ವೇದೇ ಕಂಠರೋಧೇ ಚ ಸನ್ಧೌ ಮರ್ದನಮಿಷ್ಯತೇ ॥
ಏತದುದ್ಧೂಲನಂ ಪ್ರೋಕ್ತಂ ಸನ್ನಿಪಾತಹರಂ ಪರಮ್ ॥
(ಚಿ. ಸಾ. ಸಂ. 38)

(1) ಕಾಳುಮೆಣಸು, ಹಿಪ್ಪಲಿ, ಶುಂಠಿ, ಅಣಿಲೆಕಾಯಿ, ಲೋಧ್ರ, ಪುಷ್ಕರಮೂಲ,
ಮರಿಚಾದಿ.
ನೆಲಬೇವು, ಕಟುಕರೋಹಿಣಿ, ಚಂಗಲಕೋಷ್ಠ, ಓಮ, ಕಿರುಶಿವನಿ (ಕಟ್ಫಲ), ಇವುಗಳನ್ನು ಸಮಭಾಗವಾಗಿ ತೆಗೆದುಕೊಂಡು, ಸೂಕ್ಷ್ಮವಾದ ಚೂರ್ಣಮಾಡಿ, ಬಹಳವಾಗಿ ಬೆವರುಬರುವ ಸಂಗತಿಯಲ್ಲಿ (ಶರೀರದ ಮೇಲೆ) ಈ ಚೂರ್ಣವನ್ನು ತೆಳ್ಳಗಾಗಿ ಹರಡುವಂತೆ ಚಲ್ಲುವದು ಮತ್ತು ಗಂಟಲಲ್ಲಿ ತಡೆಯುಂಟಾಗಿರುವ ಸಂಗತಿ

ಯಲ್ಲಿ ಸಂದಿನ ಮೇಲೆ ತಿಕ್ಕುವದು ಒಳ್ಳೇದು. ಸನ್ನಿಪಾತ ಪರಿಹಾರಕ್ಕೆ ಈ ಉದ್ಧೂಳನ ಯೋಗವು ಉತ್ತಮ ಎನ್ನಿಸಿಕೊಂಡದೆ.

ಪರಾ ತೆಳ್ಳಗಿನ ವಸ್ತ್ರದಲ್ಲಿ ಈ ಚೂರ್ಣವನ್ನು ಸಡಿಲಾಗಿ ಕಟ್ಟಿ, ಆ ಕಟ್ಟಿನಿಂದ ಬೆವರನ್ನು ಮೆಲ್ಲನೆ ಒರಸುವದು ಒಳ್ಳೇದು.

ಭೂನಿಮ್ಬಃ ಕಾರವೀ ತಿಕ್ತಾ ವಚಾ ಕಟ್ಫಲಜಂ ರಜಃ ।
ಉದ್ಧೂಲನಂ ತ್ರಿದೋಷೋತ್ಥೇ ಹ್ಯಭಿಷ್ಯನ್ದಿನಿ ಚ ಜ್ವರೇ ॥
(ಚಿ. ಸಾ. ಸಂ. 39)

ಭೂನಿಂಬಾದಿ

(2) ನೆಲಬೇವು, ಕರಿಜೀರಿಗೆ, ಕಟುಕರೋಹಿಣಿ, ಬಜೆ, ಕಟ್ಫಲ (ಕಿರುಶಿವನಿ), ಇವುಗಳ ಸೂಕ್ಷ್ಮವಾದ ಚೂರ್ಣವನ್ನು ತ್ರಿದೋಷದಿಂದುಂಟಾದ ಮತ್ತು ವಿಶೇಷವಾಗಿ ಬೆವರುತ್ತಿರುವ ಜ್ವರದಲ್ಲಿ (ಶರೀರದ ಮೇಲೆ) ತೆಳ್ಳಗಾಗಿ ಹರಡುವಂತೆ ಹಾರಿಸುವದು (ಹಿತ).

98.

ಸನ್ನಿಪಾತದಲ್ಲಿ ನಾಲಿಗೆಗೆ ಲೇಪಗಳು.

ಯದಾ ಸ್ವಲ್ಪಾನಿಲಕಫೌ ತಾಲುಕ್ಲೋಮಗತೌ ಶ್ರಿತೌ ।
ಕುರ್ಯಾತಾಮಧಿಕಂ ಶೋಷಂ ಜಿಹ್ವಾಯಾಃ ಖರತಾಂ ತಥಾ ॥
ತದಾ ತಾಂ ಸ್ಫುಟಿತಾಂ ಜಿಹ್ವಾಮುಚ್ಛ್ರೂಷ್ಕಾಂ ಮಧುಪಿಷ್ಟಯಾ ।
ದ್ರಾಕ್ಷಯಾ ಸಾಜ್ಯಯಾ ಚಾಸ್ಯಂ ಲೇಪಯೇತ್ಸನ್ನಿಪಾತಿನಃ ॥
ಘರ್ಷೇಜ್ಜಿಹ್ವಾಂ ಜಡಾಂ ಸಿನ್ಧುತ್ರ್ಯೂಷಣೈಃ ಸಾಮ್ಲವೇತಸೈಃ ॥
(ಚಿ. ಸಾ. ಸಂ. 38, 39)

ಯಾವಾಗ ಸನ್ನಿಪಾತಜ್ವರದಲ್ಲಿ ತಾಲು ಮತ್ತು ಕ್ಲೋಮಗಳಲ್ಲಿಯ ವಾತಕಫಗಳು ಅಲ್ಪವಾಗಿ (ಹೀನವಾಗಿ) ನಾಲಿಗೆಯನ್ನು ಬಹಳವಾಗಿ ಒಣಗಿಸಿ ದೊರಗುಮಾಡುತ್ತವೋ, ಆಗ್ಗೆ ಹಾಗೆ ಬಹಳವಾಗಿ ಒಣಗಿದ ಮತ್ತು ಒಡೆದ ನಾಲಿಗೆಯ ಮೇಲೆ ಮತ್ತು ಬಾಯಿಯೊಳಗೆ ಜ್ಯೇಷ್ಠಮಧುವಿನ ಚೂರ್ಣವನ್ನೂ ದ್ರಾಕ್ಷೆಯನ್ನೂ ತುಪ್ಪದಲ್ಲಿ ಅರೆದು ಲೇಪಿಸಬೇಕು; ಮತ್ತು ನಾಲಿಗೆಯು ಜಡವಾಗಿದ್ದರೆ, ಸೈಂಧವಲವಣ ಮತ್ತು ತ್ರಿಕಟುಗಳ ಚೂರ್ಣವನ್ನೂ ಆಮ್ಲವೇತಸ(ದೊರಕದಲ್ಲಿ ಪುಲ್ಲಂಪುರಚಿ)ವನ್ನೂ ಒಟ್ಟಿಗೆ ಅರೆದು, ಅದರಿಂದ ನಾಲಿಗೆಯನ್ನು ತಿಕ್ಕಬೇಕು.

99.

ಕಾಸಶ್ವಾಸಪರಿಹಾರಕ್ಕೆ ಅವಲೇಹಗಳು

ಸ್ವಿನ್ನಮಾಮಲಕಂ ಪಿಷ್ಟ್ವಾ ದ್ರಾಕ್ಷಯಾ ಸಹ ಸಂಸೃಜೇತ್ ।
ವಿಶ್ವಭೇಷಜಸಂಯುಕ್ತಂ ಮಧುನಾ ಸಹ ಲೇಹಯೇತ್ ॥
ತೇನಾಸ್ಯ ಶಾಮ್ಯತೇ ಮೂರ್ಚ್ಛಾ ಕಾಸಃ ಶ್ವಾಸಸ್ತಥೈವ ಚ ।
ಅಷ್ಟಾಂಗಂ ಮಧುನಾ ಲಿಹ್ಯಾದಾರ್ದ್ರಕಸ್ವರಸೇನ ವಾ ॥
ಸಮ್ಮೋಹಂ ದಾರುಣಂ ಹನ್ತಿ ತನ್ದ್ರಾಕಾಸಸಮನ್ವಿತಮ್ ।
ಕಟ್ಫಲಂ ಪುಷ್ಕರಂ ಶೃಂಗೀ ವ್ಯೋಷಂ ಯಾಸಶ್ಚ ಕಾರವೀ ॥
ಶ್ಲಕ್ಷ್ಣಂ ಚೂರ್ಣೀಕೃತಂ ಚೈತನ್ಮಧುನಾ ಸಹ ಲೇಹಯೇತ್ ।
ಏಷಾವಲೇಹಿಕಾ ಹನ್ತಿ ಸನ್ನಿಪಾತಂ ಸುದಾರುಣಮ್ ॥

ಹಿಕ್ಕಾಂ ಶ್ವಾಸಂ ಚ ಕಾಸಂ ಚ ಕಂಠರೋಗಂ ಚ ನಾಶಯೇತ್ ।
ಏತದ್ಯೋಜ್ಯಂ ಕಫೋದ್ರೇಕೇ ಚೂರ್ಣಮಾರ್ದ್ರಕಜೈಃ ರಸೈಃ ॥
ಊರ್ಧ್ವಜತ್ರುಗದಘ್ನೀ ಯಾ ಸಾ ಸಾಯಮವಲೇಹಿಕಾ ।
ಅಧೋರೋಗಹರೀ ಯಾ ಸಾ ಭೋಜನಾತ್ಪ್ರಾಕ್ಪ್ರಯುಜ್ಯತೇ ॥
(ಚಿ. ಸಾ. ಸಂ. 38)

(1) ಹಬೆಯಿಂದ ಬೆವರಿಸಿದ ನೆಲ್ಲಿಹಣ್ಣನ್ನೂ, ದ್ರಾಕ್ಷೆಯನ್ನೂ, ಶುಂಠಿಚೂರ್ಣವನ್ನೂ ಒಟ್ಟಾಗಿ ಅರೆದು, ಜೇನು ಕೂಡಿಸಿಕೊಂಡು, ನೆಕ್ಕುವದರಿಂದ ಮೂರ್ಛೆ, ಕೆಮ್ಮು, ಉಬ್ಬಸ ಸಹ ಶಾಂತವಾಗುತ್ತವೆ.

ಅಷ್ಟಾಂಗಾವಲೇಹ

(2) ಕಟ್ಫಲ (ಕಿರುಶಿವನಿ), ಪುಷ್ಕರಮೂಲ, ಕರ್ಕಟಶೃಂಗಿ, ತ್ರಿಕಟು, ಬಳ್ಳಿತುರಚನ ಬೇರು, ಕರಿಜೀರಿಗೆ, ಇವು ಎಂಟು ಬಗೆಗಳನ್ನು ನುಣ್ಣಗಾಗಿ ಚೂರ್ಣಿಸಿ, ಜೇನಿನಲ್ಲಿ ಕಲಸಿ ನೆಕ್ಕಿಸುವದು. ಇದರಿಂದ ಬಹು ಕಠಿಣವಾದ ಸನ್ನಿಪಾತಜ್ವರ, ಬಿಕ್ಕಟ್ಟು, ಉಬ್ಬಸ, ಕೆಮ್ಮು ಮತ್ತು ಕಂಠರೋಗ ನಾಶವಾಗುವವು; ಕಫ ಕೆದರಿಕೊಂಡಾಗ್ಗೆ ಈ ಚೂರ್ಣವನ್ನು ಶುಂಠಿರಸದಲ್ಲಿ ಕಲಸಿ ಕೊಡಬೇಕು. ಕುತ್ತಿಗೆಯ ಮೇಲಿನ ರೋಗಗಳನ್ನು ಪರಿಹರಿಸತಕ್ಕ ಅವಲೇಹವನ್ನು ಸಂಜೆಗೂ, ಕುತ್ತಿಗೆಯ ಕೆಳಭಾಗದ ರೋಗಗಳನ್ನು ಪರಿಹರಿಸತಕ್ಕಂಥಾದ್ದನ್ನು ಊಟಕ್ಕೆ ಮೊದಲಾಗಿಯೂ (ಬೆಳಿಗ್ಗೆ) ಪ್ರಯೋಗಿಸುತ್ತಾರೆ. ಈ ಅಷ್ಟಾಂಗ ಚೂರ್ಣವನ್ನು ಜೇನಿನೊಂದಿಗೆಯಾಗಲಿ, ಶುಂಠಿರಸದೊಂದಿಗೆಯಾಗಲಿ ನೆಕ್ಕುವದರಿಂದ ತಂದ್ರೆ ಮತ್ತು ಕೆಮ್ಮು ಕೂಡಿಕೊಂಡ ಕಠಿಣವಾದ ಬುದ್ಧಿಭ್ರಮೆ ವಾಸಿಯಾಗುತ್ತದೆ.

100. ನಿದಿಗ್ಧಿಕಾನಾಗರಕಾಮೃತಾನಾಂ ಕ್ವಾಥಂ ಪಿಬೇನ್ಮಿಶ್ರಿತಪಿಪ್ಪಲೀಕಮ್ ।
ಜೀರ್ಣಜ್ವರಾರೋಚಕಕಾಸಶೂಲಶ್ವಾಸಾಗ್ನಿಮಾನ್ದ್ಯಾರ್ದಿತಪೀನಸೇಷು ॥

ಜೀರ್ಣಜ್ವರಕ್ಕೆ ಕಷಾಯ-ಯೋಗಗಳು

ಪಿಪ್ಪಲೀಮಧುಸಂಯುಕ್ತಃ ಕ್ವಾಥಶ್ಛಿನ್ನೋದ್ಭವೋದ್ಭವಃ ।
ಜೀರ್ಣಜ್ವರಕಫಧ್ವಂಸೀ ಪಂಚಮೂಲಕೃತೋಽಥವಾ ॥
ಅಮೃತಾಯಾಃ ಕಷಾಯಸ್ತು ಶೀತಲೀಕೃತವಾರಿತಮ್ ।
ಮಧುಪಾದಯುತಂ ಪೀತಂ ಜೀರ್ಣಜ್ವರಹರಂ ಪರಮ್ ॥
ಪಿಪ್ಪಲೀಮಧುಸಮ್ಮಿಶ್ರಂ ಗುಡೂಚೀಸ್ವರಸಂ ಪಿಬೇತ್ ।
ಜೀರ್ಣಜ್ವರಕಫಪ್ಲೀಹಕಾಸಾರೋಚಕನಾಶನಮ್ ॥ (ಭಾ. ಪ್ರ. 312)

(1) ಕಿರಿಗುಳ್ಳದ ಬೇರು, ಶುಂಠಿ, ಅಮೃತಬಳ್ಳಿ, ಇವುಗಳ ಕಷಾಯವನ್ನು, ಹಿಪ್ಪಲೀಚೂರ್ಣ ಕೂಡಿಸಿಕೊಂಡು, ಪಾನಮಾಡುವದರಿಂದ ಜೀರ್ಣಜ್ವರ, ಅರುಚಿ, ಕೆಮ್ಮು, ಶೂಲೆ, ಉಬ್ಬಸ, ಅಗ್ನಿಮಾಂದ್ಯ, ಅರ್ದಿತ, ಪೀನಸ ಸಹ ಪರಿಹಾರವಾಗುವವು.

(2) ಅಮೃತಬಳ್ಳಿಯ ಕಷಾಯವನ್ನು, ಹಿಪ್ಪಲೀಚೂರ್ಣ ಮತ್ತು ಜೇನು ಕೂಡಿಸಿಕೊಂಡು, ಪಾನಮಾಡುವದರಿಂದ ಜೀರ್ಣಜ್ವರ ಮತ್ತು ಕಫ ಪರಿಹಾರ.

(3) (ಹ್ರಸ್ವ) ಪಂಚಮೂಲಗಳ ಕಷಾಯವನ್ನು ಅದೇ ಪ್ರಕಾರ ಪಾನಮಾಡುವದರಿಂದ ಅದೇ ಗುಣಗಳು ಸಿಕ್ಕುವವು.

(4) ಅಮೃತಬಳ್ಳಿಯ ಕಷಾಯವನ್ನು ತಣಿಸಿ, ಕಾಲಂಶ ಜೇನು ಕೂಡಿಸಿ, ಪಾನಮಾಡುವದು ಜೀರ್ಣಜ್ವರಪರಿಹಾರಕ್ಕೆ ಉತ್ತಮ ಎಂತ ಹೇಳಲ್ಪಟ್ಟದೆ.

(5) ಅಮೃತಬಳ್ಳಿಯ ಸ್ವರಸವನ್ನು, ಹಿಪ್ಪಲೀಚೂರ್ಣ ಮತ್ತು ಜೇನು ಕೂಡಿಸಿಕೊಂಡು, ಪಾನ ಮಾಡುವದರಿಂದ ಹಳೇಜ್ವರ, ಕಫ, ಪ್ಲೀಹವ್ಯಾಧಿ, ಕೆಮ್ಮು, ಅರುಚಿ ಸಹ ನಾಶವಾಗುವವು.

ದ್ರಾಕ್ಷಾದಿರಷ್ಟಾದಶಾಂಗಕಷಾಯ

ದ್ರಾಕ್ಷಾ ಽಮೃತಾ ಶಟೀ ಶೃಂಗೀ ಮುಸ್ತಕಂ ರಕ್ತಚನ್ದನಮ್ ।
ನಾಗರಂ ಕಟುಕಾ ಪಾಠಾ ಭೂನಿಮ್ಬಃ ಸದುರಾಲಭಃ ॥
ಉಶೀರಂ ಧಾನ್ಯಕಂ ಪದ್ಮಂ ಬಾಲಕಂ ಕಂಟಕಾರಿಕಾ ।
ಪುಷ್ಕರಂ ಪಿಚುಮನ್ದಂ ಚ ದಶಾಷ್ಟಾಂಗಮಿದಂ ಸ್ಮೃತಮ್ ॥
ಜೀರ್ಣಜ್ವರಾರುಚಿಶ್ವಾಸಕಾಸಶ್ವಯಥುನಾಶನಮ್ ॥ (ಭಾ. ಪ್ರ. 312)

(6) ದ್ರಾಕ್ಷೆ, ಅಮೃತಬಳ್ಳಿ, ಸಣ್ಣಕಚೋರ, ಕರ್ಕಟಶೃಂಗಿ, ಭದ್ರಮುಷ್ಟಿ, ರಕ್ತಚಂದನ, ಶುಂಠಿ, ಕಟುಕರೋಹಿಣಿ, ಪಾಡಾವಳಿಗಡ್ಡೆ, ನೆಲಬೇವು, ಬಳ್ಳಿತುರಚನ ಬೇರು, ಲಾಮಂಚ, ಕೊತ್ತುಂಬರಿ, ತಾವರೆಹೂವು, ಮುಡಿವಾಳ (ಅಥವಾ ಇರುವೇರಿ), ಕಿರಿಗುಳ್ಳದ ಬೇರು, ಪುಷ್ಕರಮೂಲ, ಕಹಿಬೇವು, ಈ ಅಷ್ಟಾದಶಾಂಗ ಎಂಬ ೧೮ ಬಗೆ ಔಷಧಗಳ ಕಷಾಯವು ಜೀರ್ಣಜ್ವರ, ಅರುಚಿ, ಉಬ್ಬಸ, ಕೆಮ್ಮು ಬಾವು, ಇವುಗಳನ್ನು ನಾಶಮಾಡುವದು.

ಹಳೇಜ್ವರಕ್ಕೆ ಚೂರ್ಣಯೋಗಗಳು

101. ಜೀರ್ಣಜ್ವರೇ ಽಗ್ನಿಮಾಂದ್ಯೇ ಚ ಶಸ್ಯತೇ ಗುಡಪಿಪ್ಪಲೀ ।
ಕಾಸಾಜೀರ್ಣಾರುಚಿಶ್ವಾಸಹೃತ್ಪಾಂಡುಕೃಮಿರೋಗನುತ್ ॥
ದ್ವಿಗುಣಃ ಪಿಪ್ಪಲೀಚೂರ್ಣಾದ್ಗುಡೋ ಽತ್ರ ಭಿಷಜಾಂ ಮತಃ ।
ಪಿಪ್ಪಲೀಮಧುಸಂಯುಕ್ತಾ ಮೇದಃಕಫವಿನಾಶಿನೀ ॥
ಶ್ವಾಸಕಾಸಜ್ವರಹರೀ ಪಾಂಡುಪ್ಲೀಹೋದರಾಪಹಾ ।
ಆಮಲಂ ಚಿತ್ರಕಂ ಪಥ್ಯಾ ಪಿಪ್ಪಲೀ ಸೈನ್ಧವಂ ತಥಾ ॥
ಚೂರ್ಣಿತೋ ಽಯಂ ಗಣೋ ಜ್ಞೇಯಃ ಸರ್ವಜ್ವರಹರಃ ಪರಃ ।
ಭೇದೀ ರುಚಿಕರಃ ಶ್ಲೇಷ್ಮಹನ್ತಾ ದೀಪನಪಾಚನಃ ॥
ತ್ರಿವೃದ್ಧ್ಯಾ ಪಂಚವೃದ್ಧ್ಯಾ ವಾ ಸಪ್ತವೃದ್ಧ್ಯಾ ಽಥವಾ ಽಪಿ ವಾ ।
ಗವ್ಯಕ್ಷೀರೇಣ ಸಂಪಿಷ್ಟ್ವಾ ಪಿಬೇದ್ದಶದಿನಾನಿ ಹಿ ॥
ತದ್ವೈವಾಪನಯೇದೇತಾ ಏವಂ ವಿಂಶತಿ ವಾಸರಾನ್ ।
ಪಿಬತಾಂ ಜ್ವರಶಾನ್ತಿಃ ಸ್ಯಾತ್ಪಾಂಡುರೋಗಶ್ಚ ಶಾಮ್ಯತಿ ॥
ಕಾಸಶ್ವಾಸೋ ಽಗ್ನಿಮಾಂದ್ಯಂ ಚ ಕಫಾಧಿಕ್ಯಂ ಚ ನಶ್ಯತಿ ॥
(ಭಾ. ಪ್ರ. 312)

ಗುಡಪಿಪ್ಪಲೀಯೋಗ

(1) ಹಿಪ್ಪಲಿಚೂರ್ಣವನ್ನು, ಅದರ ಎರಡು ಪಾಲಷ್ಟು ಹಳೇ ಬೆಲ್ಲದಲ್ಲಿ ಕಲಸಿ, ತಿನ್ನುತ್ತಾ ಬರುವದು ಹಳೇ ಜ್ವರದಲ್ಲಿಯೂ, ಅಗ್ನಿಮಾಂದ್ಯದಲ್ಲಿಯೂ ಪ್ರಶಸ್ತ; ಅದರಿಂದ ಕೆಮ್ಮು, ಅಜೀರ್ಣ, ಅರುಚಿ, ಉಬ್ಬಸ, ಪಾಂಡು, ಹೃದ್ರೋಗ ಮತ್ತು ಕ್ರಿಮಿರೋಗ ಸಹ ನಾಶವಾಗುವವು.

**ಮಧುಪಿಪ್ಪಲೀ**

(2) ಹಿಪ್ಪಲಿಚೂರ್ಣವನ್ನು ಜೇನಿನಲ್ಲಿ ಕಲಸಿ ನೆಕ್ಕುತ್ತಾ ಬಂದಲ್ಲಿ, ಮೇದಸ್ಸು ಮತ್ತು ಕಫ ನಾಶವಾಗಿ, ಉಬ್ಬಸ, ಕೆಮ್ಮು, ಜ್ವರ, ಪಾಂಡು, ಪ್ಲೀಹೋದರ ಸಹ ಪರಿಹಾರವಾಗುವವು.

**ಆಮಲಕ್ಯಾದಿ**

(3) ನೆಲ್ಲಿಚಟ್ಟು, ಚಿತ್ರಮೂಲ, ಅಣಿಲೆಕಾಯಿ, ಹಿಪ್ಪಲಿ, ಸೈಂಧವಲವಣ, ಇವುಗಳ ಚೂರ್ಣವನ್ನು (ಬಿಸಿನೀರಿನಿಂದ) ಸೇವಿಸುವದು ಸರ್ವಜ್ವರಪರಿಹಾರಕ್ಕೆ ಶ್ರೇಷ್ಠ. ಇದು ಭೇದಿಮಾಡಿಸುತ್ತದೆ, ರುಚಿಕರ, ಕಫಹರ ಮತ್ತು ದೀಪನ-ಪಾಚನಗಳನ್ನುಂಟುಮಾಡತಕ್ಕಂಥಾದ್ದು.

**ವರ್ಧಮಾನ ಪಿಪ್ಪಲೀ**

ಪ್ರಥಮದಿನ ಮೂರು, ಐದು ಅಥವಾ ಏಳು ಹಿಪ್ಪಲಿಗಳು, ೨ನೇ ದಿನದ ಲಾಗಾಯಿತು ೧೦ನೇ ದಿನದ ವರೆಗೆ ಪ್ರತಿದಿನ ಅಷ್ಟೇ ಹೆಚ್ಚಿಗೆಯಾಗಿ (೩ರಿಂದ ಆರಂಭಿಸಿದ್ದರೆ ೨ನೇ ದಿನದಿಂದ ೬, ೯, ೧೨, ೧೫, ೧೮, ೨೧, ೨೪, ೨೭, ೩೦), ೧೧ನೇ ದಿನದಿಂದ ಅದೇ ಪ್ರಮಾಣದಲ್ಲಿ ತಗ್ಗಿಸಿಕೊಂಡು ೧೦ ದಿನ (೩೦ರಿಂದ ೨೭, ೨೪, ೨೧ ಹೀಗೆ), ಈ ಮೇರೆಗೆ ೨೦ ದಿನ ಬಿಡದೆ ಹಿಪ್ಪಲಿಯನ್ನು ಚೂರ್ಣಿಸಿ, ದನದ ಹಾಲಿನಲ್ಲಿ ಅರೆದು, ಪಾನಮಾಡುತ್ತಾ ಬರುವದರಿಂದ, ಜ್ವರ ಮತ್ತು ಪಾಂಡುರೋಗ ಶಾಂತವಾಗುವದಲ್ಲದೆ, ಕೆಮ್ಮು, ಉಬ್ಬಸ, ಅಗ್ನಿಮಾಂದ್ಯ, ಕಫಾಧಿಕ್ಯ ಸಹ ನಾಶವಾಗುವವು.

ಷರಾ ಪಿಪ್ಪಲೀವರ್ಧಮಾನವನ್ನು ಪ್ರಯೋಗಿಸಿ ರೋಗಿಯು ಕ್ಷೀರಾನ್ನಪಥ್ಯದಲ್ಲಿ ಅಥವಾ ಮಾಂಸರಸಾನ್ನಪಥ್ಯದಲ್ಲಿರಬೇಕೆಂತ ಸುಶ್ರುತನು ವಿಷಮಜ್ವರದಲ್ಲಿ ಹೇಳಿರುತ್ತಾನೆ (ಪು 770)

**ಪಿಪ್ಪಲ್ಯಾದಿಘೃತ**

102. ಪಿಪ್ಪಲ್ಯಶ್ಚನ್ದನಂ ಮುಸ್ತಮುಶೀರಂ ಕಟುರೋಹಿಣೀ ।  
ಕಲಿಂಗಕಸ್ತಾಮಲಕೀ ಶಾರಿವಾತಿವಿಷಾ ಸ್ಥಿರಾ ॥  
ದ್ರಾಕ್ಷಾಮಲಕಬಿಲ್ವಾನಿ ತ್ರಾಯಮಾಣಾ ನಿದಿಗ್ಧಿಕಾ ।  
ಸಿದ್ಧಮೇತೈರ್ಘೃತಂ ಸದ್ಯೋ ಜೀರ್ಣಜ್ವರಮಪೋಹತಿ ॥  
ಕ್ಷಯಂ ಕಾಸಂ ಶಿರಃಶೂಲಂ ಪಾರ್ಶ್ವಶೂಲಂ ಹಲೀಮಕಮ್ ।  
ಅಂಸಾಭಿತಾಪಮಗ್ನಿಂ ಚ ವಿಷಮಂ ಸನ್ನಿಯಚ್ಛತಿ ॥ (ಚ. 163)

ಹಿಪ್ಪಲಿ, ಶ್ರೀಗಂಧ, ಭದ್ರಮುಷ್ಟಿ, ಲಾಮಂಚ, ಕಟುಕರೋಹಿಣಿ, ಇಂದ್ರಜೀವಿ, ನೆಲನೆಲ್ಲಿ, ಸುಗಂಧಿ(ನಾಮದ)ಬೇರು, ಅತಿವಿಡೆ, ಮೂವೆಲೆಬೇರು, ದ್ರಾಕ್ಷೆ. ನೆಲ್ಲಿಚಟ್ಟು, ಬಿಲ್ವಪತ್ರೆಬೇರು, ತ್ರಾಯಮಾಣಾ, ಕಿರಿಗುಳ್ಳದ ಬೇರು, ಇವುಗಳಿಂದ ತಯಾರಿಸಲ್ಪಟ್ಟ ತುಪ್ಪವು ಜೀರ್ಣಜ್ವರವನ್ನು ಕೂಡಲೆ ಬಿಡಿಸುತ್ತದೆ; ಮತ್ತು ಕ್ಷಯ, ಕೆಮ್ಮು, ತಲೆಶೂಲೆ, ಪಕ್ಕದ ಶೂಲೆ, ಹಲೀಮಕ, ಹೆಗಲುರಿ, ವಿಷಮವಾದ ಅಗ್ನಿ, ಇವುಗಳನ್ನು ವಾಸಿಮಾಡುತ್ತದೆ.

ಷರಾ ಮೂಲದಲ್ಲಿ 'ಕಲಿಂಗಮುಸ್ತಾಮಲಕೀ' ಎಂತ ಉಂಟು 'ಕಲಿಂಗಮು' ಎಂಬ ಪದ ಬೇರೆ ಕಡೆಯಲ್ಲಿ ಕಾಣುವದಿಲ್ಲ. 'ಕಲಿಂಗಕಾತ್ಸಾಮಲಕೀ' ಎಂತಲೂ 'ಕಲಿಂಗಮುಸ್ತಾಮಲಕೀ. ಎಂತಲೂ ಪಾಠಾಂತರಗಳು ಕಾಣುತ್ತವೆ ಅವುಗಳ ಪ್ರಕಾರ ಅರ್ಥ ಸ್ಪಷ್ಟವಾದರೂ ಔಷಧಗಳು ದ್ವಿರುಕ್ತವಾಗುತ್ತವೆ ಸು ನ ಪಿಪ್ಪಲ್ಯಾದಿಯಲ್ಲಿ 'ನೆಲನೆಲ್ಲಿ' ಸ್ಪಷ್ಟವಾಗಿ ಹೇಳಲ್ಪಟ್ಟದೆ ಅದ್ದರಿಂದ 'ಕಲಿಂಗಕಸ್ತಾಮಲಕೀ' ಎಂಬದೇ ಸರಿಯಾದ ಪಾಠವಾಗಿರಬೇಕು ಸು ನ ಯೋಗದಲ್ಲಿ ಕಿರಿಗುಳ್ಳದ ಬದಲಾಗಿ ಗುಳ್ಳ ಕಾಣುವದಲ್ಲದೆ, ಶುಂಠಿ ಮತ್ತು ಚತ್ರಮೂಲ ಹೆಚ್ಚಾಗಿ ಸೇರಿವೆ (ಸು 770) ಔಷಧಸಮುದಾಯದ ೪ ಪಾಲಷ್ಟು ತುಪ್ಪ, ತುಪ್ಪಕ್ಕೆ ೪ ಪಾಲಷ್ಟು ನೀರು ಕೂಡಿಸಿ ತುಪ್ಪ ಕಾಯಿಸುವದೆಂತ ಚಿ ಸಾ ಸಂ. (ಪು 65)

103. ವಾಸಾಂ ಗುಡೂಚೀಂ ತ್ರಿಫಲಾಂ ತ್ರಾಯಮಾಣಾಂ ಯವಾಸಕಮ್ |
ವಾಸಾದಿಘೃತ ಪಕ್ತ್ವಾ ತೇನ ಕಷಾಯೇಣ ಪಯಸಾ ದ್ವಿಗುಣೇನ ಚ ||
ಪಿಪ್ಪಲೀಮುಸ್ತಮೃದ್ವೀಕಾಚನ್ದನೋತ್ಪಲನಾಗರೈಃ |
ಕಲ್ಕೀಕೃತೈಶ್ಚ ವಿಪಚೇತ್ ಘೃತಂ ಜೀರ್ಣಜ್ವರಾಪಹಮ್ ||
(ಚ. 463, 464)

ಆಡುಸೋಗೆಬೇರು, ಅಮೃತಬಳ್ಳಿ, ತ್ರಿಫಲೆ, ತ್ರಾಯಮಾಣಾ, ಬಳ್ಳಿತುರಚನ ಬೇರು, ಇವುಗಳ ಕಷಾಯದಲ್ಲಿ, (ತುಪ್ಪಕ್ಕೆ) ೨ ಪಾಲು ಹಾಲು ಕೂಡಿಸಿಕೊಂಡು, ಹಿಪ್ಪಲಿ, ಭದ್ರಮುಷ್ಟಿ, ದ್ರಾಕ್ಷೆ, ಶ್ರೀಗಂಧ, ನೈದಿಲೆ, ಶುಂಠಿ, ಇವುಗಳ ಕಲ್ಕದಿಂದ, ಪಕ್ವಮಾಡಿದ ತುಪ್ಪವು ಹಳೇ ಜ್ವರವನ್ನು ಪರಿಹರಿಸತಕ್ಕಂಥಾದ್ದು.

ಪರಾ ಕಷಾಯ ಸಹ ತುಪ್ಪಕ್ಕೆ ೨ ಪಾಲು ಕೂಡಿಸಬೇಕೆಂತ ಚಿ. ಸಾ. ಸಂ. (ಪು 64)

104. ಗುಡೂಚೀತ್ರಿಫಲಾವಾಸಾತ್ರಾಯಮಾಣಾಯವಾಸಕೈಃ |
ಗುಡೂಚ್ಯಾದಿಘೃತ ಕ್ವಥಿತೈರ್ವಿಧಿವತ್ಪಕ್ವಮೇತೈಃ ಕಲ್ಕೀಕೃತೈಃ ಸಮೈಃ ||
ದ್ರಾಕ್ಷಾಮಾಗಧಿಕಾಮ್ಭೋದನಾಗರೋತ್ಪಲಚನ್ದನೈಃ |
ಪೀತಂ ಸರ್ಪಿಃ ಕ್ಷಯಶ್ವಾಸಕಾಸಾ(?ಸ)ಜೀರ್ಣಜ್ವರಾನ್ ಜಯೇತ್ ||
(ಸು. 770)

ಅಮೃತಬಳ್ಳಿ, ತ್ರಿಫಲೆ, ಆಡುಸೋಗೆಬೇರು, ತ್ರಾಯಮಾಣಾ, ಬಳ್ಳಿತುರಚನ ಬೇರು, ಇವುಗಳ ಕಷಾಯದಲ್ಲಿ, ದ್ರಾಕ್ಷೆ, ಹಿಪ್ಪಲಿ, ಭದ್ರಮುಷ್ಟಿ, ಶುಂಠಿ, ನೈದಿಲೆ, ಶ್ರೀಗಂಧ, ಇವುಗಳ ಕಲ್ಕದೊಂದಿಗೆ, ವಿಧಿ ಪ್ರಕಾರ ಪಕ್ವಮಾಡಲ್ಪಟ್ಟ ಘೃತವನ್ನು ಪಾನಮಾಡುವದರಿಂದ ಕ್ಷಯ, ಉಬ್ಬಸ, ಕೆಮ್ಮು, ಜೀರ್ಣಜ್ವರ ಸಹ ಜಯಿಸಲ್ಪಡುವವು.

105. ಕಲಶೀಬೃಹತೀದ್ರಾಕ್ಷಾತ್ರಾಯನ್ತೀನಿಮ್ಬಗೋಕ್ಷುರೈಃ |
ಕಲಶ್ಯಾದಿಘೃತ ಬಲಾಪರ್ಪಟಕಾಮ್ಭೋದಶಾಲಪರ್ಣೀಯವಾಸಕೈಃ ||
ಪಕ್ವಮುತ್ಕ್ವಥಿತೈಃ ಸರ್ಪಿಃ ಕಲ್ಕೈರೇಭಿಃ ಸಮನ್ವಿತೈಃ |
ಶಟೀತಾಮಲಕೀಭಾರ್ಗೀಮೇದಾಕತಕಪೌಷ್ಕರೈಃ ||
ಕ್ಷೀರದ್ವಿಗುಣಸಂಯುಕ್ತಂ ಜೀರ್ಣಜ್ವರಮಪೋಹತಿ |
ಶಿರಃಪಾರ್ಶ್ವರುಜಾಕಾಸಕ್ಷಯಪ್ರಶಮನಂ ಪರಮ್ || (ಸು. 770, 771)

ಓರೆಲೆಬೇರು, ಗುಳ್ಳದ ಬೇರು, ದ್ರಾಕ್ಷೆ, ತ್ರಾಯಾಮಾಣಾ, ಕಹಿಬೇವು, ನೆಗ್ಗಿಲು, ಕಲ್ಲಂಗಡಲೆಬೇರು, ಪರ್ಪಾಟಕ, ಭದ್ರಮುಷ್ಟಿ, ಮೂವೆಲೆಬೇರು, ಬಳ್ಳಿತುರಚನ ಬೇರು, ಇವುಗಳ ಕಷಾಯದಲ್ಲಿ, ಸಣ್ಣಕಚೋರ, ನೆಲನೆಲ್ಲಿ, ನಿರ್ವಿಷದ ಬೇರು, ಮೇದೆ, ಚಿಲ್ಲಬೀಜ, ಪುಷ್ಕರಮೂಲ, ಇವುಗಳ ಕಲ್ಕದೊಂದಿಗೆ, (ತುಪ್ಪಕ್ಕೆ) ೨ ಭಾಗ ಹಾಲು ಕೂಡಿಸಿ, ಪಕ್ವಮಾಡಲ್ಪಟ್ಟ ಘೃತವು ಹಳೆಜ್ವರವನ್ನು ಪರಿಹರಿಸುತ್ತದೆ; ಮತ್ತು ತಲೆನೋವು, ಪಕ್ಕದನೋವು, ಕೆಮ್ಮು, ಕ್ಷಯ, ಇವುಗಳ ಶಮನಕ್ಕೆ ಉತ್ತಮವಾದ್ದು.

106. ಪಟೋಲೀಪರ್ಪಟಾರಿಷ್ಟಗುಡೂಚೀತ್ರಿಫಲಾವೃಷೈಃ ।
ಪಟೋಲಾದಿಘೃತ ಕಟುಕಾಮ್ಬುದಭೂನಿಮ್ಬಯಾಸಯಷ್ಟ್ಯಾಹ್ವಚನ್ದನೈಃ ॥
ದಾರ್ವೀಶಕ್ರಯವೋಶೀರತ್ರಾಯಮಾಣಾಕಣೋತ್ಪಲೈಃ ।
ಧಾತ್ರೀಭೃಂಗರಜೋಭೀರುಕಾಕಮಾಚೀರಸೈರ್ಘೃತಮ್ ॥
ಸಿದ್ಧಮಾಶ್ವಪಚೀಕುಷ್ಠಜ್ವರಶುಕ್ರಾರ್ಜುನವ್ರಣಾನ್ ।
ಹನ್ಯಾನ್ನಯನವದನಕರ್ಣಜಾನ್ ಘ್ರಾಣಜಾನ್ ಗದಾನ್ ॥ (ಸು. 771)

ಕಹಿಪಡುವಲು, ಪರ್ಪಾಟಕ, ಕಹಿಬೇವು, ಅಮೃತಬಳ್ಳಿ, ತ್ರಿಫಲೆ, ಆಡುಸೋಗೆ, ಕಟುಕರೋಹಿಣಿ, ಭದ್ರಮುಷ್ಟಿ, ನೆಲಬೇವು, ಬಳ್ಳಿತುರಚನ ಬೇರು, ಜ್ಯೇಷ್ಠಮಧು, ಶ್ರೀಗಂಧ, ಮರದರಸಿನ, ಇಂದ್ರಜೀವಿ, ಲಾಮಂಚ, ತ್ರಾಯಮಾಣಾ, ಹಿಪ್ಪಲಿ, ನೈದಿಲೆ, ಇವುಗಳಿಂದಲೂ (ಅಂದರೆ ಇವುಗಳ ಕಲ್ಕದಿಂದ), ನೆಲ್ಲಿ, ಗರುಗ, ಶತಾವರಿ, ಕಾಕೆಹಣ್ಣುಗಿಡದ ಸೊಪ್ಪು, ಇವುಗಳ ರಸದಿಂದಲೂ, ಪಕ್ವಮಾಡಲ್ಪಟ್ಟ ತುಪ್ಪವು ಅಪಚೀ (ಕುತ್ತಿಗೆರೋಗದ ಭೇದ), ಕುಷ್ಠ, ಜ್ವರ, ಶುಕ್ರ, ಅರ್ಜುನ (ನೇತ್ರರೋಗದ ಭೇದಗಳು), ವ್ರಣ, ಇವುಗಳನ್ನೂ ಬೇರೆ ಕಣ್ಣು-ಬಾಯಿ-ಕಿವಿ-ಮೂಗುಗಳಲ್ಲಿ ಉಂಟಾದ ರೋಗಗಳನ್ನೂ ಬೇಗನೆ ನಾಶ ಮಾಡುವದು.

107. ಮುಚ್ಯತೇ ಜ್ವರಿತಃ ಪೀತ್ವಾ ಪಂಚಮೂಲಶೃತಂ ಪಯಃ ।
ಏರಂಡಮೂಲೋತ್ಕ್ವಥಿತಂ ಜ್ವರಾತ್ ಸಪರಿಕರ್ತಿಕಾತ್ ॥
ಕ್ಷೀರಯೋಗಗಳು ಪಯೋ ವಿಮುಚ್ಯತೇ ಪೀತ್ವಾ ತದ್ವದ್ಬಿಲ್ವಶಲಾಟುಭಿಃ ।
ತ್ರಿಕಂಟಕಬಲಾವ್ಯಾಘ್ರೀಗುಡನಾಗರಸಾಧಿತಮ್ ॥
ವರ್ಚೋಮೂತ್ರವಿಬನ್ಧಘ್ನಂ ಶೋಫಜ್ವರಹರಂ ಪಯಃ ।
ಸನಾಗರಂ ಸಮೃದ್ವೀಕಂ ಸಘೃತಕ್ಷೌದ್ರಶರ್ಕರಮ್ ॥
ಶೃತಂ ಪಯಃ ಸಖರ್ಜೂರಂ ಪಿಪಾಸಾಜ್ವರನಾಶನಮ್ ।
ಚತುರ್ಗುಣೇನಾಮ್ಭಸಾ ವಾ ಶೃತಂ ಜ್ವರಹರಂ ಪಯಃ ॥
ಧಾರೋಷ್ಣಂ ವಾ ಪಯಃ ಸದ್ಯೋ ವಾತಪಿತ್ತಜ್ವರಂ ಜಯೇತ್ ।
ಜೀರ್ಣಜ್ವರಾಣಾಂ ಸರ್ವೇಷಾಂ ಪಯಃ ಪ್ರಶಮನಂ ಪರಮ್ ॥
ಪೇಯಂ ತದುಷ್ಣಂ ಶೀತಂ ವಾ ಯಥಾಸ್ವಂ ಭೇಷಜೈಃ ಶೃತಮ್ ॥
(ಚ. 164, 465)

ಕಣಾಮಧುಕಮೃದ್ವೀಕಾಬಲಾಚನ್ದನಸಾರಿವಾ ।
ನಿಷ್ಕ್ವಾಥ್ಯ ಪಯಸಾ ಪೀತಾಃ ಕ್ಷೀಣಜ್ವರವಿನಾಶನಾಃ ॥ (ನಿ. ರ.)

(1) ಪಂಚಮೂಲಗಳನ್ನು ಹಾಕಿ ಕುದಿಸಿ ಬತ್ತಿಸಿದ ಹಾಲನ್ನು (ಹಾಲುಕಷಾಯವನ್ನು) ಕುಡಿಯುವದರಿಂದ ಜ್ವರವಿಮೋಚನೆಯುಂಟಾಗುತ್ತದೆ.

(2) ಹರಳುಬೇರನ್ನು ಕೂಡಿಸಿ ಕುದಿಸಿ ಬತ್ತಿಸಿದ ಹಾಲಿನ ಪಾನದಿಂದ ಜ್ವರ ಮತ್ತು ಪರಿಕರ್ತಿಕೆ (ಆಸನದಲ್ಲಿ ಕತ್ತರಿಸಿದ ಹಾಗಿನ ನೋವು) ಬಿಟ್ಟುಹೋಗುವವು.

(3) ಬಿಲ್ವಪತ್ರೆಯ ಎಳೇಕಾಯಿಗಳ ಯೋಗದಿಂದ ಪಕ್ವಮಾಡಿದ ಹಾಲಿನ ಪಾನದಿಂದಲೂ ಜ್ವರ ವಿಮೋಚನವಾಗುತ್ತದೆ.

(4) ನೆಗ್ಗಿಲಮುಳ್ಳು, ಕಲ್ಲಂಗಡಲೆಬೇರು, ಕಿರಿಗುಳ್ಳದ ಬೇರು, ಶುಂಠಿ, ಬೆಲ್ಲ, ಇವುಗಳನ್ನು ಕೂಡಿಸಿ ಪಕ್ವಮಾಡಿದ ಹಾಲು ಮಲಮೂತ್ರಗಳ ಕಟ್ಟನ್ನು ಸಡಿಲಿಸುವದು ಮತ್ತು ಶೋಫೆಯನ್ನೂ ಜ್ವರವನ್ನೂ ಪರಿಹರಿಸುವದು.

(5) ಶುಂಠಿ, ಖರ್ಜೂರ, ದ್ರಾಕ್ಷೆ, ಇವುಗಳ ಸೇರಿಕೆಯಿಂದ ಕಾಯಿಸಿ ಬತ್ತಿಸಿದ ಹಾಲನ್ನು (ತಣಿಸಿ), ಅದರಲ್ಲಿ ಸಕ್ಕರೆ, ಜೇನು ಮತ್ತು ತುಪ್ಪ ಬೆರಸಿಕೊಂಡು, ಪಾನಮಾಡುವದರಿಂದ ಬಾಯಾರಿಕೆ ಮತ್ತು ಜ್ವರ ನಾಶವಾಗುವವು.

(6) ಬರೇ ಹಾಲಿಗೆ ೪ ಪಾಲಷ್ಟು ನೀರು ಹೊಯಿದು, (ಹಾಲು ಮಾತ್ರ ಉಳಿಯುವಂತೆ) ಬತ್ತಿಸಿ, ಆ ಹಾಲನ್ನು ಪಾನಮಾಡುವದರಿಂದ ಜ್ವರ ಪರಿಹಾರವಾಗುವದು.

(7) ಧಾರೋಷ್ಣ ಹಾಲನ್ನು ಕುಡಿಯುವದರಿಂದ ವಾತಪಿತ್ತಜ್ವರವು ಕೂಡಲೆ ಬಿಟ್ಟು ಹೋಗುವದು.

(8) ಎಲ್ಲಾ ಹಳೇ ಜ್ವರಗಳಿಗೂ ಹಾಲು ಉತ್ತಮವಾದ ಶಮನೌಷಧ. ಆದರೆ ಅದನ್ನು ದೋಷಕ್ಕೆ ತಕ್ಕವಾದ ಔಷಧಗಳೊಂದಿಗೆ ಕಾಯಿಸಿಕೊಂಡು, ಉಷ್ಣಜ್ವರಕ್ಕೆ ತಣ್ಣಗಾಗಿಯೂ, ಶೀತಜ್ವರಕ್ಕೆ ಬಿಸಿಯಾಗಿಯೂ ಪಾನಮಾಡತಕ್ಕದ್ದು.

(9) ಹಿಪ್ಪಲಿ, ಜ್ಯೇಷ್ಠಮಧು, ದ್ರಾಕ್ಷೆ, ಕಲ್ಲಂಗಡಲೆಬೇರು ಶ್ರೀಗಂಧ, ಸುಗಂಧಿಬೇರು, ಇವುಗಳ ಹಾಲುಕಷಾಯಗಳ ಪಾನವು ಜೀರ್ಣಜ್ವರವನ್ನು ನಾಶಮಾಡುವದು.

108. ವಾತಪ್ರಧಾನಂ ಸರ್ಪಿರ್ಭಿರ್ವಸ್ತಿಭಿಃ ಸಾನುವಾಸನೈಃ |
ಸ್ನಿಗ್ಧೋಷ್ಣೈರನುಪಾನೈಶ್ಚ ಶಮಯೇದ್ವಿಷಮಜ್ವರಮ್ ||
ವಿರೇಚನೇನ ಪಯಸಾ ಸರ್ಪಿಷಾ ಸಂಸ್ಕೃತೇನ ಚ |
ವಿಷಮಂ ತಿಕ್ತಶೀತೈಶ್ಚ ಜ್ವರಂ ಪಿತ್ತೋತ್ತರಂ ಜಯೇತ್ ||
ವಮನಂ ಪಾಚನಂ ರೂಕ್ಷಮನ್ನಪಾನಂ ವಿಲಂಘನಮ್ |
ಕಷಾಯೋಷ್ಣಂ ಚ ವಿಷಮೇ ಜ್ವರೇ ಶಸ್ತಂ ಕಫೋತ್ತರೇ ||
(ಚ. 470-471)

ವಿಷಮಜ್ವರಚಿಕಿತ್ಸೆಯಲ್ಲಿ ಸಾಮಾನ್ಯ ವಿಧಿ

ವಾತಪ್ರಧಾನವಾಗಿರುವ ವಿಷಮಜ್ವರವನ್ನು ಘೃತಗಳಿಂದ, ವಸ್ತಿಗಳಿಂದ, ಅನುವಾಸನಗಳಿಂದ ಮತ್ತು ಸ್ನಿಗ್ಧ (ಜಿಡ್ಡುಳ್ಳ)ವೂ ಉಷ್ಣವೂ ಆಗಿರುವ ಅನುಪಾನಗಳಿಂದ ಶಮನಮಾಡತಕ್ಕದ್ದು. ಪಿತ್ತಪ್ರಧಾನವಾಗಿರುವ ವಿಷಮಜ್ವರವನ್ನು ವಿರೇಚನದಿಂದಲೂ, ಹಾಲಿನಿಂದಲೂ, ಸಂಸ್ಕಾರಮಾಡಲ್ಪಟ್ಟ (ಕಹಿ ಮತ್ತು ತಂಪು ಗುಣದ ಔಷಧಗಳ ಯೋಗದಿಂದ ಕಾಯಿಸಲ್ಪಟ್ಟ) ತುಪ್ಪದಿಂದಲೂ, ಕಹಿ ಮತ್ತು ಶೀತವೀರ್ಯದ ಕಷಾಯಾದಿ ಔಷಧೋಪಚಾರಗಳಿಂದಲೂ ಜಯಿಸತಕ್ಕದ್ದು. ಕಫಪ್ರಧಾನವಾಗಿರುವ ವಿಷಮಜ್ವರದಲ್ಲಿ ವಮನ, ಪಾಚನಕರವಾದ ಮತ್ತು ರೂಕ್ಷ ಗುಣವುಳ್ಳ ಅನ್ನಪಾನಗಳು, ಲಂಘನ ಮತ್ತು ಚೊಗರಾದ ಮತ್ತು ಉಷ್ಣವೀರ್ಯದ ಔಷಧೋಪಚಾರಗಳು ಪ್ರಶಸ್ತವಾಗಿರುತ್ತವೆ.

ಷರಾ: ಸಾಧಾರಣ ಜ್ವರಗಳಿಗೆ ಹೇಳಲ್ಪಟ್ಟ ಚಿಕಿತ್ಸಾವಿಧಾನವನ್ನು ವಿಷಮಜ್ವರಗಳಲ್ಲಿಯೂ ದೋಷಗಳಿಗೆ ಲಕ್ಷ್ಯ ವಿಟ್ಟು ನಡಿಸುವದಲ್ಲದೆ, ವಿಶೇಷವಾಗಿ ಹೇಳಲ್ಪಟ್ಟ ಕಷಾಯಾದಿ ಪ್ರತಿಕ್ರಿಯಗಳನ್ನು ಪ್ರಯೋಗಿಸತಕ್ಕದ್ದು ಎಂತ ವಾ. (ಪು 259) ಇದೇ ಚರಕನ ಮತ, ಆದರೆ ತ್ರ್ಯಾಹಿಕ ಚಾತುರ್ಥಿಕ ಜ್ವರಗಳಲ್ಲಿ ಅನುಬಂಧವಾಗಿ ಭೂತಾದಿಗಳ ಬಾಧೆ ಇರುವದರಿಂದ ಅದಕ್ಕೆ ಯುಕ್ತವಾದ ಬಲಿ ಮಂಗಲಾದಿ ಉಪಚಾರಗಳನ್ನು ಸಹ ನಡಿಸಬೇಕಾಗಿ ಹೇಳಿದ್ದಾನೆ ಆದರೆ ತೃತೀಯಕ ಚತುರ್ಥಕ ಜ್ವರಗಳಲ್ಲಿ ಸಾಧಾರಣ ಚಿಕಿತ್ಸಾಕ್ರಮವನ್ನು ಬಿಟ್ಟು, ವಿಶೇಷವಾಗಿ ಹೇಳಲ್ಪಟ್ಟ ಚಿಕಿತ್ಸಾಕ್ರಮಗಳಿಂದಲೇ ಪ್ರತಿಕಾರ ಮಾಡತಕ್ಕದ್ದು ಎಂತ ಭಾ. ಪ್ರ (ಪು. 309) ಈ ಸಂಖ್ಯೆಯಲ್ಲಿ ವರ್ಣಿಸಲ್ಪಟ್ಟ ಚಿಕಿತ್ಸಾವಿಧಾನಗಳೆಲ್ಲ ತ್ರ್ಯಾಹಿಕ-ಚತುರ್ಥಕಗಳಿಗೇನೇ ಸಂಬಂಧಪಟ್ಟವು ಎಂತ ಆ ಡೀ ವ್ಯಾಖ್ಯಾ.

ವಿಷಮಜ್ವರಗಳಿಗೆ ಕಷಾಯಾದಿಗಳು

109. ಕಲಿಂಗಕಾಃ ಪಟೋಲಸ್ಯ ಪತ್ರಂ ಕಟುಕರೋಹಿಣೀ ।
ಪಟೋಲಂ ಶಾರಿವಾ ಮುಸ್ತಂ ಪಾಠಾ ಕಟುಕರೋಹಿಣೀ ॥
ನಿಮ್ಬಃ ಪಟೋಲಸ್ತ್ರಿಫಲಾ ಮೃದ್ವೀಕಾ ಮುಸ್ತವತ್ಸಕಾಃ ।
ಕಿರಾತತಿಕ್ತಮಮೃತಾ ಚನ್ದನಂ ವಿಶ್ವಭೇಷಜಮ್ ॥
ಗುಡೂಚ್ಯಾಮಲಕಂ ಮುಸ್ತಮರ್ಧಶ್ಲೋಕಸಮಾಪನಾಃ ।
ಕಷಾಯಾಃ ಶಮಯನ್ತ್ಯಾಶು ಪಂಚ ಪಂಚವಿಧಾನ್ ಜ್ವರಾನ್ ॥
ಸನ್ತತಂ ಸತತಾನ್ಯೇದ್ಯುಸ್ತೃತೀಯಕಚತುರ್ಥಕಾನ್ ॥ (ಚ. 462)

(1) ಇಂದ್ರಜೇವಿ, ಕಹಿಪಡುವಲ ಎಲೆ, ಕಟುಕರೋಹಿಣಿ; (2) ಕಹಿಪಡುವಲು, ಸುಗಂಧಿ(ನಾಮದ)ಬೇರು, ಭದ್ರಮುಷ್ಟಿ, ಪಾಡಾವಳಿಗಡ್ಡೆ, ಕಟುಕರೋಹಿಣಿ; (3) ಕಹಿಬೇವು, ಕಹಿಪಡುವಲು, ತ್ರಿಫಲೆ, ದ್ರಾಕ್ಷೆ, ಭದ್ರಮುಷ್ಟಿ, ಇಂದ್ರಜೇವಿ; (4) ನೆಲಬೇವು, ಪರ್ಪಾಟಕ, ಅಮೃತಬಳ್ಳಿ, ಶ್ರೀಗಂಧ, ಶುಂಠಿ; (5) ಅಮೃತಬಳ್ಳಿ, ನೆಲ್ಲಿಚಟ್ಟು, ಭದ್ರಮುಷ್ಟಿ; ಈ ಐದು ಕಷಾಯಗಳು (1) ಸಂತತ, (2) ಸತತ, (3) ಅನ್ಯೇದ್ಯುಷ್ಕ, (4) ತೃತೀಯಕ, (5) ಚತುರ್ಥಕ ಎಂಬ ಐದು ವಿಧವಾದ ಜ್ವರಗಳನ್ನು (ಯಥಾಕ್ರಮವಾಗಿ) ಬೇಗನೆ ಶಮನ ಮಾಡುವವು.

ಷರಾ: ಈ ಐದು ಯೋಗಗಳೊಳಗೆ ಪ್ರತಿಯೊಂದು ಐದು ವಿಧವಾದ ವಿಷಮಜ್ವರಗಳನ್ನು ಸಾಮಾನ್ಯವಾಗಿ ನಾಶ ಮಾಡುತ್ತದೆ ಎಂತ ಭಾ ಪ್ರ ಅರ್ಥಮಾಡಿದ ಹಾಗೆ ಕಾಣುತ್ತದೆ

ತ್ರಿಚತುರ್ಭಿಃ ಪಚೇತ್ ಕ್ವಾಥಂ ಪಂಚಭಿರ್ವಾ ಸಮನ್ವಿತೈಃ ।
ಮಧುಕಸ್ಯ ಪಟೋಲಸ್ಯ ರೋಹಿಣ್ಯಾ ಮುಸ್ತಕಸ್ಯ ಚ ॥
ಹರೀತಕ್ಯಾಶ್ಚ ಸರ್ವೋಽಯಂ ತ್ರಿವಿಧೋ ಯೋಗ ಇಷ್ಯತೇ ॥
(ಸು. 770)

(1) ಜ್ಯೇಷ್ಠಮಧು, ಕಹಿಪಡುವಲು, ಕಟುಕರೋಹಿಣಿ;

(2) ಜ್ಯೇಷ್ಠಮಧು, ಕಹಿಪಡುವಲು, ಕಟುಕರೋಹಿಣಿ, ಭದ್ರಮುಷ್ಟಿ;

(3) ಜ್ಯೇಷ್ಠಮಧು, ಕಹಿಪಡುವಲು, ಕಟುಕರೋಹಿಣಿ, ಭದ್ರಮುಷ್ಟಿ, ಅಣಿಲೆಕಾಯಿ ಸಿಪ್ಪೆ; ಹೀಗೆ ಐದು ಬಗೆಗಳಿಂದ ಮೂರು ವಿಧವಾಗಿ ಕಷಾಯ ಮಾಡಿಕೊಟ್ಟಲ್ಲಿ ವಿಷಮಜ್ವರ ಪರಿಹಾರ.

ಷರಾ ವಾಗ್ಭಟದಲ್ಲಿ (ಪು 259) ೧ನೇ ಪಡುವಲು, ೨ನೇ ಕಟುಕರೋಹಿಣಿ, ೩ನೇ ಭದ್ರಮುಷ್ಟಿ, ೪ನೇ ಅಣಿಲೆಕಾಯಿ, ೫ನೇ ಜ್ಯೇಷ್ಠಮಧು, ಈ ಕ್ರಮದಲ್ಲಿ ಇದೇ ಯೋಗವು ಕಾಣುತ್ತದೆ ಇದರ ಪ್ರಕಾರ ಕಹಿಪಡುವಲು, ಕಟುಕರೋಹಿಣೀ, ಭದ್ರಮುಷ್ಟಿ, ಇವು ಮೂರು, ಮೂರು ಕಷಾಯಗಳಿಗೂ ಸಾಮಾನ್ಯವಾಗುತ್ತವೆ. ಯಾವ ಮೂರು ಬಗೆಗಳನ್ನಾ

ದರೂ ನಾಲ್ಕು ಬಗೆಗಳನ್ನಾದರೂ ತೆಗೆದುಕೊಂಡು ಒಟ್ಟು ಹದಿನಾರು ವಿಧದ ಕಷಾಯಗಳನ್ನು ಮಾಡಿ ಉಪಯೋಗಿಸ ಬಹುದೆಂಬ ಮತ ಇರುತ್ತದಂತೆ ಅಣಿಲೆಕಾಯಿ ಸೇರಿದ ಮೂರನೇ ಕಷಾಯವನ್ನು ಚನ್ನಾಗಿ ಭೇದಿಮಾಡಿಸಬೇಕಾದಲ್ಲಿ ಅಲ್ಲದೆ ಉಪಯೋಗಿಸಬಾರದು ಈ ಯೋಗಗಳೆಲ್ಲ ತ್ರ್ಯಾಹಿಕ-ಚತುರ್ಥಕಗಳಿಗೆ ಮತ್ತು ಪಿತ್ತಪ್ರಧಾನವಾಗಿರುವಲ್ಲಿ ಮಾತ್ರ ಉಪಯೋಗವುಳ್ಳವು ಎಂತ ತಿಳಿಯಬೇಕು

ಯಷ್ಟೀ ದುರಾಲಭಾ ವಾಸಾ ತ್ರಿಫಲಾ ಬಾಲಕಾಮೃತಾ |
ಮುಸ್ತಾ ಕ್ವಾಥಃ ಸಿತಾಯುಕ್ತೋ ವಿಷಮಜ್ವರನಾಶನಃ || (ನಿ. ರ.)

ಜ್ಯೇಷ್ಠಮಧು, ಬಳ್ಳಿತುರಚನ ಬೇರು, ಆಡುಸೋಗೆ, ತ್ರಿಫಲೆ, ಮುಡಿವಾಳ, ಅಮೃತಬಳ್ಳಿ, ಭದ್ರಮುಷ್ಟಿ, ಇವುಗಳ ಕಷಾಯವನ್ನು, ಸಕ್ಕರೆ ಸೇರಿಸಿ, ಕೊಡಲು ವಿಷಮಜ್ವರಗಳು ನಾಶ ವಾಗುವವು.

ಮುಸ್ತಾಕ್ಷುದ್ರಾಮೃತಾಶುಂಠೀಧಾತ್ರೀಕ್ವಾಥಃ ಸಮಾಕ್ಷಿಕಃ |
ಪಿಪ್ಪಲೀಚೂರ್ಣಸಂಯುಕ್ತೋ ವಿಷಮಜ್ವರನಾಶನಃ ||
ಪುರಾಣವಿಷಮಜ್ವರೇ ಕುಲಕನಿಮ್ಬಸಿಂಹೀನ್ದ್ರಜಾ-
ಮೃತಾಕೃತಕಷಾಯಕೋ ಮಧುಯುತೋ ವರೀವರ್ತತಿ || (ನಿ. ರ)

(1) ಭದ್ರಮುಷ್ಟಿ, ಕಿರಿಗುಳ್ಳದ ಬೇರು, ಅಮೃತಬಳ್ಳಿ, ಶುಂಠಿ, ನೆಲ್ಲಿಚಟ್ಟು, ಇವುಗಳ ಕಷಾಯವನ್ನು, ಜೇನು ಮತ್ತು ಹಿಪ್ಪಲಿಚೂರ್ಣ ಕೂಡಿಸಿಕೊಂಡು, ಪಾನಮಾಡುವದರಿಂದ ವಿಷಮಜ್ವರ ನಾಶವಾಗುವದು

(2) ಕಹಿಪಡುವಲು, ಕಹಿಬೇವು, ಆಡುಸೋಗೆ, ಇಂದ್ರಜೀವಿ, ಅಮೃತಬಳ್ಳಿ, ಇವುಗಳ ಕಷಾಯವನ್ನು, ಜೇನು ಕೂಡಿಸಿಕೊಂಡು, ಪಾನಮಾಡುವದು ಹಳೇ ವಿಷಮಜ್ವರದಲ್ಲಿ ಪ್ರಶಸ್ತ.

ಪರಾ ೧ನೇ ಕಷಾಯುವು ಕಫಪಿತ್ತ ಪ್ರಧಾನವಾದ ಜ್ವರಗಳಲ್ಲಿ ಪ್ರಶಸ್ತ

ತ್ರಾಯನ್ತೀಕಟುಕಾನನ್ತಾಸಾರಿವಾಭಿಃ ಶೃತಂ ಜಲಮ್ |
ಸನ್ತತಾದ್ಯೇ ಜ್ವರೇ ದೇಯಂ ವಾತಾದೀನಾಂ ನಿವೃತ್ತಯೇ ||
(ಚಿ. ಸಾ. ಸಂ. 49)

ತ್ರಾಯಮಾಣಾ, ಕಟುಕರೋಹಿಣಿ, ಅಮೃತಬಳ್ಳಿ, ಸುಗಂಧಿಬೇರು, ಇವುಗಳ ಕಷಾಯ ವನ್ನು ಸಂತತಾದಿ ಜ್ವರಗಳಲ್ಲಿ ವಾತಾದಿದೋಷಗಳ ಪರಿಹಾರಕ್ಕೆ ಕೊಡಬೇಕು.

ಭಾಂಗೀಪರ್ಪಟವಿಶ್ವವಾಸಕಕಣಾಭೂನಿಮ್ಬನಿಮ್ಬಾಮೃತಾ-
ಮುಸ್ತಾಧಾನ್ಯಕಭೇಷಜೈಶ್ಚ ದಶಭಿರ್ನಿಘ್ನನ್ತಿ ಸರ್ವಜ್ವರಾನ್ |
ಜೀರ್ಣಾನ್ ಧಾತುಗತಾಂಸ್ತಥಾ ಚ ವಿಷಮಾನ್ ಸೋಪದ್ರವಾನ್ದಾರುಣಾನ್
ಕ್ವಾಥೋಽಯಂ ಯದಿ ಯುಗ್ಮವಾಸರಮಿದಂ ದದ್ಯಾದ್ಯಮಾದ್ರಕ್ಷಿತಾ ||
ಭಾಂಗ್ಯರ್ಬ್ದಪರ್ಪಟಕಧನ್ವಯವಾಸವಿಶ್ವಭೂನಿಮ್ಬಕುಷ್ಠಕಣಾಸಿಂಹ್ಯ-
ಮೃತಾಕಷಾಯಃ |
ಜೀರ್ಣಜ್ವರಂ ಸತತಸನ್ತತಕೌ ನಿಹನ್ಯಾದನ್ಯೇದ್ಯುಕಂ(?)ಸಹತೃತೀಯ-
ಚತುರ್ಥಕಂ ಚ || (ನಿ. ರ.)

(1) ನಿರ್ವಿಷದ ಬೇರು, ಪರ್ಪಾಟಕ, ಶುಂಠಿ, ಆಡುಸೋಗೆ, ಹಿಪ್ಪಲಿ, ನೆಲಬೇವು, ಕಹಿಬೇವು, ಅಮೃತಬಳ್ಳಿ, ಭದ್ರಮುಷ್ಟಿ, ಕೊತ್ತುಂಬರಿ, ಈ ಹತ್ತು ಬಗೆ ಔಷಧಗಳ ಕಷಾಯವು ಹಳೇ ಜ್ವರಗಳು, ಧಾತುಗಳನ್ನು ಹೊಕ್ಕ ಜ್ವರಗಳು, ವಿಷಮಜ್ವರಗಳು, ಉಪದ್ರವಗಳಿಂದ ಕೂಡಿದಂಥ ಮತ್ತು ಕಠಿಣವಾದಂಥ ಜ್ವರಗಳು, ಮುಂತಾದ ಸರ್ವ ಜ್ವರಗಳನ್ನು ನಾಶಮಾಡುವದು. ಎರಡು ದಿನ ಈ ಕಷಾಯವನ್ನು ಯಾರು ಸೇವಿಸುತ್ತಾನೋ, ಅವನು ಯಮನ ದೆಸೆಯಿಂದ ರಕ್ಷಿಸಲ್ಪಡುವನು.

(2) ನಿರ್ವಿಷದ ಬೇರು, ಭದ್ರಮುಷ್ಟಿ, ಪರ್ಪಾಟಕ, ಬಳ್ಳಿತುರಚನ ಬೇರು, ಶುಂಠಿ, ನೆಲಬೇವು, ಚಂಗಲಕೋಷ್ಠ, ಹಿಪ್ಪಲಿ, ಆಡುಸೋಗೆ, ಅಮೃತಬಳ್ಳಿ, ಇವುಗಳ ಕಷಾಯವು ಹಳೇ ಜ್ವರವನ್ನೂ, ಸಂತತ, ಸತತ, ಅನ್ಯೇದ್ಯುಷ್ಕ, ತ್ರ್ಯಾಹಿಕ, ಮತ್ತು ಚಾತುರ್ಥಿ ಜ್ವರಗಳನ್ನೂ ಪರಿಹರಿಸುವದು.

ಕಾಲಾಜಾಜೀ ತು ಸಗುಡಾ ವಿಷಮಜ್ವರನಾಶಿನೀ |
ಮಧುನಾ ಚಾಭಯಾ ಲೀಢಾ ಹನ್ತ್ಯಾಶು ವಿಷಮಜ್ವರಮ್ ||
ಪೀತೋ ಮರಿಚಚೂರ್ಣೇನ ತುಲಸೀಪತ್ರಜೋ ರಸಃ |
ದ್ರೋಣಪುಷ್ಪೀಭವೋ ವಾಪಿ ನಿಹನ್ತಿ ವಿಷಮಜ್ವರಾನ್ ||
ಕುಮಾರೀಮೂಲಂ ಕರ್ಷೈಕಂ ಪೀತ್ವಾ ಕೋಷ್ಣಜಲೈರ್ವಮೇತ್ |
ವಿಷಮನ್ತು ಜ್ವರಂ ಹನ್ತಿ ವಾತಶ್ಲೇಷ್ಮಗದಾನಪಿ ||
ಜೀರಕಂ ಗುಡಸಂಯುಕ್ತಂ ವಿಷಮಜ್ವರನಾಶನಮ್ |
ಅಗ್ನಿಮಾಂದ್ಯಂ ಜಯೇಚ್ಛೀತಂ ವಾತರೋಗಹರಂ ಪರಮ್ || (ನಿ. ರ)

(1) ಕರಿಜೀರಿಗೆಯ ಚೂರ್ಣವನ್ನು ಬೆಲ್ಲದೊಂದಿಗೆ ಕಲಸಿ ಸೇವಿಸುವದು, (2) ಅಣಿಲೆಕಾಯಿಯ ಸಿಪ್ಪೆಯ ಚೂರ್ಣವನ್ನು ಜೇನಿನೊಂದಿಗೆ ಕಲಸಿ ನೆಕ್ಕುವದು, (3) ತುಳಸೀಎಲೆಯ ರಸವನ್ನು, ಕಾಳುಮೆಣಸಿನ ಚೂರ್ಣ ಕೂಡಿಸಿ, ಕುಡಿಯುವದು, (4) ಮತ್ತು ತುಂಬೆಸೊಪ್ಪಿನ ರಸವನ್ನು ಕಾಳುಮೆಣಸಿನ ಚೂರ್ಣಯುಕ್ತವಾಗಿ ಕುಡಿಯುವದು: ಈ ಪ್ರತಿಕ್ರಿಯೆಗಳಿಂದ ವಿಷಮಜ್ವರಗಳು ಪರಿಹಾರವಾಗುತ್ತವೆ. (5) ಒಂದು ಕರ್ಷತೂಕ ಲೋಳಿಸರದ ಬೇರನ್ನು ಸುಖೋಷ್ಣವಾದ ನೀರಿನೊಂದಿಗೆ ಅರೆದು ಕುಡಿದು ವಾಂತಿಮಾಡುವದರಿಂದ ವಿಷಮಜ್ವರ ಮತ್ತು ಕಫವಾತರೋಗಗಳು ನಾಶವಾಗುವವು. (6) ಜೀರಿಗೆಯ ಚೂರ್ಣವನ್ನು ಬೆಲ್ಲದೊಂದಿಗೆ ಕಲಸಿ ಭಕ್ಷಿಸುವದು ವಿಷಮಜ್ವರನಾಶನ, ಅಗ್ನಿಮಾಂದ್ಯವನ್ನೂ ಶೀತವನ್ನೂ ಜಯಿಸತಕ್ಕಂಥಾದ್ದು ಮತ್ತು ವಾತರೋಗಪರಿಹಾರಕ್ಕೆ ಶ್ರೇಷ್ಠವಾದದ್ದು.

ಪಟೋಲೇನ್ದ್ರಯವಾನನ್ತಾಪಥ್ಯಾರಿಷ್ಟಾಮೃತಾಜಲಮ್ |
ಜ್ವರಂ ಸತತಕಂ ಪಾನಂ(?ನೇ)ನಿಹನ್ತ್ಯಾಶು ಪ್ರಯೋಜಿತಮ್ ||
(ಚಿ. ಸಾ. ಸಂ. 50)

ಕಹಿಪಡುವಲು, ಇಂದ್ರಜೀವಿ, ಸುಗಂಧಿಬೇರು, ಅಣಿಲೆಕಾಯಿ, ಕಹಿಬೇವು ಮತ್ತು ಅಮೃತಬಳ್ಳಿ, ಇವುಗಳ ಕಷಾಯದ ಪಾನವನ್ನು ಪ್ರಯೋಗಿಸಿದ್ದಲ್ಲಿ ಸತತಜ್ವರವು ನಾಶವಾಗುತ್ತದೆ.

ಷರಾ ಇದೇ ಜ್ವರಕ್ಕೆ ಮೇಲಿನ ೬ ಬಗೆಗಳಲ್ಲಿ ಸುಗಂಧಬೇರನ್ನು ಬಿಟ್ಟು, ಆಡುಸೋಗೆ ಸೇರಿಸಿದ ಯೋಗವು ಹೇಳಲ್ಪಟ್ಟದ್ದು ಕಾಣುತ್ತದೆ (ನಿ ರ).

ದ್ರಾಕ್ಷಾಪಟೋಲನಿಮ್ಬಾಬ್ದಶಕ್ರಾಹ್ವತ್ರಿಫಲಾಶೃತಮ್ ।
ಜಲಂ ಜನ್ತುಃ ಪಿಬೇಚ್ಛೀಘ್ರಮನ್ಯೇದ್ಯುರ್ಜ್ವರಶಾನ್ತಯೇ ॥
(ಭಾ. ಪ್ರ. 309)

ದ್ರಾಕ್ಷೆ, ಕಹಿಪಡುವಲು, ಕಹಿಬೇವು, ಭದ್ರಮುಷ್ಟಿ, ಇಂದ್ರಜೇವಿ, ತ್ರಿಫಲೆ, ಇವುಗಳ ಕಷಾಯವನ್ನು ಹೊತ್ತುಬಿಟ್ಟು ಬರುವ (ಅನ್ಯೇದ್ಯುಃ) ಜ್ವರದ ಶಾಂತಿಗಾಗಿ ಮನುಷ್ಯನು ಬೇಗನೆ ಕುಡಿಯತಕ್ಕದ್ದು.

ಪಟೋಲತ್ರಿಫಲಾನಿಮ್ಬದ್ರಾಕ್ಷಾಶಮ್ಯಾಕವಾಸಕೈಃ ।
ಕ್ವಾಥಃ ಸಿತಾಮಧುಯುತೋ ಜಯೇದೇಕಾಹಿಕಂ ಜ್ವರಮ್ ॥ (ನಿ. ರ.)

ಕಹಿಪಡುವಲು, ತ್ರಿಫಲೆ, ಕಹಿಬೇವು, ದ್ರಾಕ್ಷೆ, ಕಕ್ಕೆಮರ, ಆಡುಸೋಗೆ, ಇವುಗಳ ಕಷಾಯವನ್ನು, ಜೇನು ಮತ್ತು ಸಕ್ಕರೆ ಕೂಡಿಸಿಕೊಂಡು, ಪಾನಮಾಡಲು ದಿನಕ್ಕೊಮ್ಮೆ ಬರುವ ಜ್ವರವು ಪರಿಹಾರವಾಗುವದು.

ಷರಾ ಅನ್ಯೇದ್ಯುಷ್ಕಕ್ಕೇನೇ ಏಕಾಹಿಕ ಎನ್ನುವದು.

ಉಶೀರಂ ಚನ್ದನಂ ಮುಸ್ತಂ ಗುಡೂಚೀ ಧಾನ್ಯನಾಗರಮ್ ।
ಅಮ್ಭಸಾ ಕ್ವಥಿತಂ ಪೇಯಂ ಶರ್ಕರಾಮಧುಯೋಜಿತಮ್ ॥
ಜ್ವರೇ ತೃತೀಯಕೇ ಪುಂಸಾಂ ತೃಷ್ಣಾದಾಹಸಮನ್ವಿತೇ ॥ (ಭಾ. ಪ್ರ. 309)

ಲಾಮಂಚ, ಶ್ರೀಗಂಧ, ಭದ್ರಮುಷ್ಟಿ, ಅಮೃತಬಳ್ಳಿ, ಕೊತ್ತುಂಬರಿ, ಶುಂಠಿ, ಇವುಗಳ ಕಷಾಯವನ್ನು, ಜೇನು ಮತ್ತು ಸಕ್ಕರೆ ಕೂಡಿಸಿ, ಬಾಯಾರಿಕೆ ಮತ್ತು ಉರಿಯುಳ್ಳ ತ್ರ್ಯಾಹಿಕ ಜ್ವರದಲ್ಲಿ ಕುಡಿಯಬೇಕು.

ಅಪಾಮಾರ್ಗಜಟಾ ಕಟ್ಯಾಂ ಲೋಹಿತೈಃ ಸಪ್ತತನ್ತುಭಿಃ ।
ಬದ್ಧಾ ವಾರೇ ರವೇಸ್ತೂರ್ಣಂ ಜ್ವರಂ ಹನ್ತಿ ತೃತೀಯಕಮ್ ॥
(ಭಾ. ಪ್ರ. 309)

ಉತ್ತರಣೆಬೇರನ್ನು ಏಳು ಎಳೆಗಳುಳ್ಳ ಕೆಂಪು ನೂಲಿನಿಂದ ಭಾನುವಾರದಲ್ಲಿ ಸೊಂಟದಲ್ಲಿ ಕಟ್ಟಿಕೊಂಡರೆ, ತ್ರ್ಯಾಹಿಕ ಜ್ವರವು ಬೇಗನೆ ಪರಿಹಾರವಾಗುವದು.

ಷರಾ ಈ ಗುಣವು ಯಾವುದರ ಪ್ರಭಾವದಿಂದ ಸಿಗಬಹುದೆಂತ ಊಹಿಸುವದು ಕಷ್ಟ, ಆದರೆ ಈ ಮೂಲಿಕೆಯಿಂದ ಬಹಳ ಜನರಿಗೆ ತ್ರ್ಯಾಹಿಕ-ಚಾತುರ್ಥಿಕ ಜ್ವರಗಳು ಪರಿಹಾರವಾಗಿವೆ ಎಂತ ಕಾಣುತ್ತದೆ

ಮುಸ್ತಾಪಾಠಾಶಿವಾಕ್ವಾಥಶ್ಚಾತುರ್ಥಿಕಜ್ವರಾಪಹಃ ॥ (ನಿ. ರ.)

ಭದ್ರಮುಷ್ಟಿ, ಪಾಡಾವಳಿಗಡ್ಡೆ, ಅಣಿಲೆಕಾಯಿ, ಇವುಗಳ ಕಷಾಯವು ಚಾತುರ್ಥಿ ಜ್ವರಹರವಾದ್ದು.

ಸ್ಥಿರಾತಾಮಲಕೀದಾರುಶಿವಾವೃಷಮಹೌಷಧೈಃ ।
ಸಿತಾಮಧುಯುತಃ ಕ್ವಾಥಶ್ಚತುರ್ಥಕಹರಃ ಪರಃ ॥ (ಭಾ. ಪ್ರ. 309)

ಮೂವೆಲೆಬೇರು, ನೆಲನೆಲ್ಲಿ, ದೇವದಾರ, ಅಣಿಲೆಕಾಯಿ, ಆಡುಸೋಗೆ, ಶುಂಠಿ, ಇವುಗಳ ಕಷಾಯವನ್ನು, ಜೇನು ಮತ್ತು ಸಕ್ಕರೆ ಕೂಡಿಸಿಕೊಂಡು, ಪಾನಮಾಡುವದು ಚಾತುರ್ಥಿಜ್ವರಪರಿಹಾರಕ್ಕೆ ಉತ್ತಮ.

ಷರಾ 'ನೆಲನೆಲ್ಲಿ' ಬದಲಾಗಿ 'ನೆಲ್ಲಿ' ಕೂಡಿಸಿ ಇದೇ ಯೋಗ ಚಾತುರ್ಥಿಜ್ವರಕ್ಕೆ ಬರೆದದ್ದು ಬೇರೆ ಕಡೆ ಕಾಣುತ್ತದೆ (ನಿ ರ). ಈ ತಬ್ದೀಲು ಅಲ್ಲದೆ, ಅಣಿಲೆಕಾಯಿಯ ಸ್ಥಾನದಲ್ಲಿ ಕೊತ್ತುಂಬರಿ ಕೂಡಿಸಿ ಚಾತುರ್ಥಿಜ್ವರಕ್ಕೆ ಯೋಗ ಬರೆದದ್ದು ಸಹ ಉಂಟು. ಮಲಶೋಧನವಾಗಬೇಕಾದಲ್ಲಿ ಅಣಿಲೆ ಕೂಡಿಸಿ, ಇತರ ಸಂಗತಿಗಳಲ್ಲಿ ಕೊತ್ತುಂಬರಿ ಸೇರಿಸುವದು ಒಳ್ಳೇದು

ದುಗ್ಧೇನ ತ್ರಿಫಲಾ ಪೀತಾ ಹನ್ತಿ ಚಾತುರ್ಥಿಕಂ ಜ್ವರಮ್ ॥ (ನಿ. ರ.)

ತ್ರಿಫಲೆಗಳ ಚೂರ್ಣವನ್ನು ಹಾಲಿನಲ್ಲಿ ಕಲಸಿ ಪಾನಮಾಡುವದರಿಂದ ಚಾತುರ್ಥಿಜ್ವರ ನಾಶವಾಗುತ್ತದೆ.

ಷರಾ ಚಳಿ ಇರುವಲ್ಲಿ ಇದರೊಂದಿಗೆ ಹಿಪ್ಪಲಿಚೂರ್ಣ ಕೂಡಿಸಿಕೊಳ್ಳಬಹುದು

ಅಗಸ್ತಿಪತ್ರಸ್ಯ ರಸೇನ ನಸ್ಯಂ ನಿಹನ್ತಿ ಚಾತುರ್ಥಕಮುಗ್ರವೀರ್ಯಮ್ ।
ಶಿರೀಷಪುಷ್ಪಸ್ಯ ನಿಶಾದ್ವಯಸ್ಯ ಕಲ್ಕೇನ ವಾ ತದ್ ಘೃತಸಂಯುತೇನ ॥
(ಭಾ. ಪ್ರ. 309)

(1) ಅಗಸೆಸೊಪ್ಪಿನ ರಸವನ್ನು ನಸ್ಯಮಾಡುವದರಿಂದ ಉಗ್ರವಾದ ಚಾತುರ್ಥಿಜ್ವರ ನಾಶವಾಗುತ್ತದೆ. (2) ಬಾಗೆಮರನ ಹೂವು, ಅರಸಿನ ಮತ್ತು ಮರದರಸಿನ, ಇವುಗಳ ಕಲ್ಕವನ್ನು ತುಪ್ಪ ಕೂಡಿಸಿ ನಸ್ಯಮಾಡುವದರಿಂದಲೂ ಅದೇ ಗುಣ ಸಿಕ್ಕುವದು.

ಷರಾ ಅಗಸೆಪತ್ರದ (ಎಲೆಯ) ರಸವನ್ನು ನಸ್ಯಮಾಡುವದರಿಂದ ಕೆಮ್ಮು, ಭ್ರಮೆ, ತಲೆನೋವು ಸಹ ಪರಿಹಾರವಾಗುತ್ತವೆಂತ ಹಾ (ಪು 125)

ಜ್ವರವೇಗಸ್ಯ ಕಾಲಂ ಚ ಚಿನ್ತಯನ್ ಜ್ವರ್ಯತೇ ತು ಯಃ ।
ತಸ್ಯೇಷ್ಟೈರದ್ಭುತೈರ್ವಾಪಿ ವಿಷಯೈರ್ನಾಶಯೇತ್ ಸ್ಮೃತಿಮ್ ॥
(ಚಿ. ಸಾ. ಸಂ 53)

ಜ್ವರವೇಗದ ಕಾಲವನ್ನು ಚಿಂತಿಸುತ್ತಿರುವಾಗ್ಗೆ ಯಾರಿಗೆ ಜ್ವರ ಬರುತ್ತದೋ, ಅಂಥವನಿಗೆ ಇಷ್ಟವಾದ ಅಥವಾ ಆಶ್ಚರ್ಯಕರವಾದ ವಿಷಯಗಳಿಂದ ಅದರ ನೆನಪನ್ನು ಮರಸಬೇಕು.

ಪಿಷ್ಟ್ವಾ ಶತಾವರೀಮೂಲಂ ಕೃಷ್ಣಗೋಪಯಸಾ ಪಿಬೇತ್ ।
ಚಾತುರ್ಥಿಕಂ ಪ್ರಶಮಯೇದ್ದೃಷ್ಟಮೇತದ್ವ್ಯಪೋಹತಿ ॥
(ವೈ. ಸಾ. ಸಂ. 114)

ಶತಾವರಿ(ಹಲವುಮಕ್ಕಳತಾಯಿ)ಬೇರನ್ನು ಕರೀ ದನದ ಹಾಲಿನಿಂದ ಅರೆದು ಕುಡಿಯಲು ಚಾತುರ್ಥಿಜ್ವರವು ಶಮನವಾಗುವದು. ಇದು ನೋಡಿದಂಥಾ ಪರಿಹಾರ.

ರವಿವಾರೇ ಶ್ಮಶಾನೋತ್ಥಭೃಂಗಾಪಾಮಾರ್ಗಯೋಃ ಶಿಫಾ ।
ಕರ್ಣಬದ್ಧಾ ಹರೇತ್ತೂರ್ಣಂ ಘೋರಂ ಚಾತುರ್ಥಿಕಂ ಜ್ವರಮ್ ॥
(ವೈ. ಸಾ. ಸಂ. 115)

ಶ್ಮಶಾನದಲ್ಲಿ ಹುಟ್ಟಿ ಬೆಳೆದ ಗರುಗನ ಮತ್ತು ಉತ್ತರಣೆಯ ಬೇರುಗಳನ್ನು ತಂದು, ಆದಿತ್ಯವಾರ ದಿನ ಕಿವಿಗೆ ಕಟ್ಟಲು, ಭಯಂಕರವಾದ ಚಾತುರ್ಥಿಜ್ವರ ಬೇಗನೆ ಪರಿಹಾರವಾಗುವದು.

ನಿರ್ಗುಣ್ಡ್ಯಾಸ್ಸಹದೇವ್ಯಾಶ್ಚ ಹಸ್ತಬದ್ಧಂ ಶಿಫಾದ್ವಯಮ್ |
ಪ್ರಭಾತೇ ರವಿವಾರಸ್ಯ ಸರ್ವಜ್ವರವಿನಾಶನಮ್ || (ವೈ. ಸಾ. ಸಂ. 115)
ಸುರಸಾಮೂಲಮಾಹೃತ್ಯ ಹಸ್ತೇ ಬದ್ಧಂ ಶುಭೇ ದಿನೇ |
ವೇಲಾಜ್ವರಾದಿಕಾನ್ ಹನ್ತಿ ಭೂತಜ್ವರವಿನಾಶನಮ್ || (ಹಾ. 125)

(1) ಕರಿನುಕ್ಕಿಯ ಮತ್ತು ಸಹದೇವಿಯ ಎರಡು ಬೇರುಗಳನ್ನು ತಂದು, ಆದಿತ್ಯವಾರ ಬೆಳಿಗ್ಗೆ ಕೈಗೆ ಕಟ್ಟಲು, ಸರ್ವ ಜ್ವರಗಳು ನಾಶವಾಗುವವು

(2) ತುಳಸೀಬೇರನ್ನು ತಂದು ಶುಭವಾರದಲ್ಲಿ ಕೈಗೆ ಕಟ್ಟಲು, ಸಮಸ್ತ ಕಾಲ(ವಿಷಮ) ಜ್ವರ ಮುಂತಾದವುಗಳು ಮತ್ತು ಭೂತಜ್ವರ ನಾಶವಾಗುವವು.

ಪರಾ ಸಹದೇವಿಯ ಬೇರನ್ನು ರವಿವಾರ ದಿನ ಕುತ್ತಿಗೆಗೆ ಕಟ್ಟಲು ನಾಲ್ಕು ದಿನಗಳೊಳಗೆ ಭೂತಜ್ವರ ಬಿಟ್ಟು ಹೋಗುವದೆಂತ ಚಿ ಸಾ ಸಂ (ಪು. 51)

ಗುಂಜಾಮೂಲಂ ಕರ್ಣಬದ್ಧಂ ಸರ್ವಜ್ವರನಿವಾರಣಮ್ |
ಕಾಕಮಾಚೀಶಿಫಾ ಬದ್ಧಾ ಕರ್ಣೇ ರಾತ್ರಿಜ್ವರಾಪಹಾ ||
(ವೈ. ಸಾ. ಸಂ. 115)

(1) ಗುಲಗುಂಜಿಬೇರನ್ನು ಕಿವಿಗೆ ಕಟ್ಟಲು, ಸರ್ವ ಜ್ವರಗಳ ನಿವಾರಣವಾಗುವದು.

(2) ಕಾಗೆಹಣ್ಣಿನ ಗಿಡದ ಬೇರನ್ನು ಕಿವಿಯಲ್ಲಿ ಕಟ್ಟುವದರಿಂದ ರಾತ್ರಿಕಾಲ ಬರುವ ಜ್ವರ ಬಿಟ್ಟುಹೋಗುವದು.

ಭೂತದ್ರುಮಸ್ಯ ಸ್ವರಸಃ ಪೀತಶ್ಚಾತುರ್ಥಿಕಂ ಹರೇತ್ ||
(ವೈ. ಸಾ. ಸಂ. 115)

ಚಳ್ಳೆ(ಮಣ್ಣಡಿಕೆ)ಮರನ (ಚಕ್ಕೆಯ) ಸ್ವರಸವನ್ನು ಪಾನಮಾಡಲು, ಚಾತುರ್ಥಿಜ್ವರ ಪರಿಹಾರ.

ಪರಾ 'ಭೂತದ್ರುಮ' ಎಂಬದು 'ಹೆಮ್ಮರ' ಎಂತ ಅರ್ಥ ಬರೆದದ್ದು ಕಾಣುತ್ತದೆ ಅದಕ್ಕೆ ಆಧಾರ ಕಾಣುವದಿಲ್ಲ

ಕಟ್ವಂಗವಲ್ಕಸ್ವರಸೇನ ತೈಲಂ ಪ್ರಭಾತಕಾಲೇ ಪಿಬತಾಂ ನರಾಣಾಮ್ |
ರಾಮೋ ಯಥಾ ರಾವಣಮುಗ್ರವೀರ್ಯಂ ತಥೈವ ಚಾತುರ್ಥಿಕಮಾಶು ಹನ್ಯಾತ್ || (ವೈ. ಸಾ. ಸಂ. 115)

ಆನೆಮುಂಗಿನ ಕೆತ್ತೆಯ ಸ್ವರಸದೊಂದಿಗೆ ಎಳ್ಳೆಣ್ಣೆಯನ್ನು ಹೊತ್ತಾರೆ ಕುಡಿಯುವದರಿಂದ, ಉಗ್ರವಾದ ವೀರ್ಯವುಳ್ಳ ರಾವಣನು ರಾಮನಿಂದ ಹೇಗೋ ಹಾಗೆ, ಚಾತುರ್ಥಿಜ್ವರವು ಬೇಗನೆ ನಾಶವಾಗುವದು.

ಸಿತವರ್ಷಾಭೂಮೂಲಂ ಪಯಸಾ ಪೀತಂ ಚ ಪೈತ್ತಿಕಂ ಜಯತಿ |
ಚಾತುರ್ಥಿಕಂ ಸುಚಿರಜಂ ತಾಮ್ಬೂಲೇನೈವ ಭಕ್ಷಣಾದಥವಾ ||
(ಚಿ. ಸಾ. ಸಂ. 51)

ಬಿಳೇ ಪುನರ್ನವಿಯ ಬೇರನ್ನು ಹಾಲಿನೊಂದಿಗೆ ಅರೆದು ಕುಡಿಯುವದರಿಂದ ಪಿತ್ತಪ್ರಧಾನವಾದ ಬಹುಕಾಲದ ಚಾತುರ್ಥಿಜ್ವರವು ಪರಿಹಾರವಾಗುವದು; ಅಥವಾ ಅದೇ ಗುಣ ಅದೇ ಬೇರನ್ನು ವೀಳ್ಯದೆಲೆಯೊಂದಿಗೆ ತಿನ್ನುವದರಿಂದಲೂ ಸಿಗುವದು.

ಕೃಷ್ಣಾಮಲಕೀರಾಮಠದಾರ್ವೀವಚಾರಾಜಸರ್ಷಪರಸೋನೈಃ |
ಛಾಗಲಮೂತ್ರಸುಪಿಷ್ಟೈರ್ನಸ್ಯಂ ತ್ರೈಕಾಹಿಕಾದಿಷ್ಫುವಮ್ ||
(ಚಿ. ಸಾ. ಸಂ. 51)

ಹಿಪ್ಪಲಿ, ನೆಲ್ಲಿಚಟ್ಟು, ಹಿಂಗು, ಮರದರಸಿನ, ಬಜೆ, ಕರಿಸಾಸುವೆ, ಬೆಳ್ಳುಳ್ಳಿ, ಇವುಗಳನ್ನು ಆಡಿನ ಮೂತ್ರದೊಂದಿಗೆ ಅರೆದು, ನಸ್ಯಮಾಡುವದರಿಂದ ಏಕಾಹಿಕ (ದಿನಕ್ಕೊಮ್ಮೆ ಬರುವ) ಜ್ವರ ಮೊದಲಾದ ವಿಷಮಜ್ವರಗಳು ಬಿಟ್ಟು ಹೋಗುವವು.

ಪಿಪ್ಪಲೀ ಶರ್ಕರಾ ಕ್ಷೌದ್ರಂ ಶೃತಂ ಕ್ಷೀರಂ ಘೃತಂ ನವಮ್ |
ಖಜೇನ ಮಥಿತಂ ಪೇಯಂ ವಿಷಮಜ್ವರನಾಶನಮ್ || (ಚಿ. ಸಾ. ಸಂ.)

ಪಂಚಸಾರ.

ಪಿಪ್ಪಲ್ಯಾ ಸದೃಶಂ ಸರ್ಪಿಃ ಸರ್ಪಿಷೋ ದ್ವಿಗುಣಂ ಸಿತಾ |
ಸಿತಾಯಾ ದ್ವಿಗುಣಂ ಕ್ಷೌದ್ರಂ ಕ್ಷೌದ್ರಸ್ಯಾಷ್ಟಗುಣಂ ಪಯಃ ||
ಅಮುಂ ಹಿ ಪಂಚಸಾರಸ್ಯ ಕ್ರಮಂ ವಿದ್ಯಾದ್ವಿಚಕ್ಷಣಃ |
ಪಿಪ್ಪಲ್ಯಾಃ ಕರ್ಷಮಾರಭ್ಯ ವರ್ಧಯಿತ್ವಾ ಪಯೋಽವಧಿ ||
ಸರ್ವಮೇತತ್ ಪ್ರಮಥ್ಯಾಸ್ಮಾತ್ಕುಡವಂ ಚ ಪ್ರದಾಪಯೇತ್ ||
(ವೈ. ಸಾ. ಸಂ. 112)

ಹಿಪ್ಪಲಿಚೂರ್ಣ, ಸಕ್ಕರೆ, ಜೇನು, ಕಾಯಿಸಿದ ಹಾಲು, ಹೊಸತಾದ ತುಪ್ಪ, ಇವುಗಳನ್ನು ಸಟ್ಟುಗದಿಂದ ಕಡೆದು ಕುಡಿದರೆ, ವಿಷಮಜ್ವರ ನಾಶವಾಗುವದು. ಈ ಯೋಗಕ್ಕೆ ಪಂಚಸಾರ ಎಂತ ಹೆಸರು. (ಇದು ಒಬ್ಬರ ಉಪದೇಶ.)

ಹಿಪ್ಪಲಿಚೂರ್ಣಕ್ಕೆ ಸಮಪಾಲು ತುಪ್ಪ, ತುಪ್ಪಕ್ಕೆ ೨ ಪಾಲು ಸಕ್ಕರೆ, ಸಕ್ಕರೆಗೆ ೨ ಪಾಲು ಜೇನು, ಜೇನಿಗೆ ೮ ಪಾಲು ಹಾಲು, ಇದನ್ನು ಪಂಚಸಾರದ ಕ್ರಮವೆಂದು ಬುದ್ಧಿಶಾಲಿಯು ತಿಳಿಯತಕ್ಕದ್ದು. (ಇದು ಇನ್ನೊಬ್ಬರ ಉಪದೇಶ.)

ಹಿಪ್ಪಲಿಯ ಒಂದು ಕರ್ಷ ತೂಕ ಹಿಡಿದು, ಹಾಲಿನ ವರೆಗೆ ಏರಿಸಿ, ಇವುಗಳನ್ನೆಲ್ಲಾ ಒಟ್ಟಾಗಿ ಕಡೆದು, ಆದರಿಂದ ಒಂದು ಕುಡವ(೪ ಪಲ)ವನ್ನು ಕೊಡತಕ್ಕದ್ದು. (ಇದು ಮತ್ತೊಬ್ಬರ ಉಪದೇಶ)

ಷರಾ. ಈ ಪಂಚಸಾರ ಎಂಬ ಯೋಗ ಸುಶ್ರುತದಲ್ಲಿ ಇರುವಂಥಾದ್ದು ಅಲ್ಲಿ ಅದು ಕ್ಷತಕ್ಷೀಣ, ಕ್ಷಯ, ಉಬ್ಬಸ, ಹೃದ್ರೋಗ, ಈ ವ್ಯಾಧಿಗಳಲ್ಲಿಯೂ ಪ್ರಶಸ್ತವಾದ್ದೆಂತ ಹೇಳಲ್ಪಟ್ಟದೆ ಆದರೆ ದ್ರವ್ಯಗಳ ಪ್ರಮಾಣಭೇದಗಳನ್ನು ಸುಶ್ರುತನು ಹೇಳಿರುವದಿಲ್ಲ (ಪು 773). ಮೇಲಿನ ಮೂರನೆ ಕ್ರಮದಲ್ಲಿ, ಹಿಪ್ಪಲಿಯನ್ನು ಒಂದು ಕರ್ಷ ತೂಕ ತೆಗೆದುಕೊಂಡು ಒಟ್ಟು ನಾಲ್ಕು ಪಲವಾಗುವ ಹಾಗೆ ಎಲ್ಲ ದ್ರವ್ಯಗಳನ್ನು ಬೇಕಾದಷ್ಟು ಏರಿಸಿಕೊಳ್ಳಬೇಕು ಎಂಬದು ಉಪದೇಶಕರ ಅಭಿಪ್ರಾಯವಾಗಿರಬೇಕು. ಹಿಪ್ಪಲಿ-ತುಪ್ಪ-ಸಕ್ಕರೆ-ಜೇನು-ಹಾಲುಗಳನ್ನು ಕ್ರಮವಾಗಿ 1—2—3—4—6 ಕರ್ಷ ತೆಗೆದುಕೊಂಡರೆ, ಒಟ್ಟು ಒಂದು ಕುಡವ ಆಗುತ್ತದೆ

ರಸೋನಕಲ್ಕಂ ತಿಲತೈಲಮಿಶ್ರಂ ಯೋಽಶ್ನಾತಿ ನಿತ್ಯಂ ವಿಷಮಜ್ವರಾರ್ತಃ |
ವಿಮುಚ್ಯತೇಽಸೌ ವಿಷಮಜ್ವರೇಭ್ಯೋ ವಾತಾಮಯೈಶ್ಚಾಪ್ಯತಿಘೋರರೂಪೈಃ || (ಹಾ. 125)

ಬೆಳ್ಳುಳ್ಳಿಕಾಳುಗಳನ್ನು ಎಳ್ಳೆಣ್ಣೆಯಲ್ಲಿ ಅರೆದು ಯಾವ ವಿಷಮಜ್ವರಿಯು ನಿತ್ಯದಲ್ಲು ತಿನ್ನುತ್ತಾನೋ, ಅವನು ವಿಷಮಜ್ವರಗಳಿಂದಲೂ ಅತಿಘೋರರೂಪವಾದ ವಾತರೋಗಗಳಿಂದಲೂ ವಿಮೋಚನ ಹೊಂದುತ್ತಾನೆ.

ಪರಾ ಇದು ಚರಕನ ಉಪದೇಶಾನುಸಾರವಾದ್ದು (ಪು 471) ಬೆಳ್ಳುಳ್ಳಿಯನ್ನು ತುಪ್ಪದೊಂದಿಗೆ ಪ್ರತಿದಿನ ಬೆಳಿಗ್ಗೆ ತಿನ್ನಬೇಕೆಂತ ಸು (ಪು 770)

ಸಜೀರಕಂ ಗುಡಂ ಭಕ್ಷೇತ್ ಸಗುಡಾಂ ವಾ ಹರೀತಕೀಮ್ ।
ಸಗುಡಾನ್ ವಾ ತಿಲಾನ್ ಭಕ್ಷೇತ್ ಜ್ವರೇ ಚ ವಿಷಮಾನುಗೇ ॥
ಸಗುಡಂ ತ್ರಿಫಲಾಕ್ವಾಥಂ ಭಕ್ಷಯೇದ್ವಾಗುಡಾರ್ದ್ರಕಮ್ ।
ಕ್ವಾಥೋಽಪಿ ವಿಷಮಾಣಾನ್ತು ಜ್ವರಾಣಾಂ ನಾಶಕಾರಕಃ ॥
ವಾಸಾಧಾತ್ರೀದಾರುಪಥ್ಯಾನಾಗರತ್ರಿಫಲಾಭವಃ ।
ಮಧುನಾ ಸಂಯುತಃ ಕ್ವಾಥಶ್ಚಾತುರ್ಥಕನಿವಾರಣಃ ॥ (ಹಾ. 125)

ಜೀರಿಗೆಯ ಚೂರ್ಣವನ್ನಾಗಲಿ, ಅಣಿಲೆಕಾಯಿಸಿಪ್ಪೆಯ ಚೂರ್ಣವನ್ನಾಗಲಿ, ಎಳ್ಳಿನ ಚೂರ್ಣವನ್ನಾಗಲಿ, ಬೆಲ್ಲದಲ್ಲಿ ಕಲಸಿ ವಿಷಮಜ್ವರಗಳಲ್ಲಿ ತಿನ್ನಬೇಕು. ತ್ರಿಫಲೆಗಳ ಕಷಾಯವನ್ನು ಬೆಲ್ಲ ಕೂಡಿಸಿ ಕುಡಿಯಬೇಕು; ಅಥವಾ ಶುಂಠಿಯ ಚೂರ್ಣವನ್ನು ಬೆಲ್ಲದೊಂದಿಗೆ ಕಲಸಿ ತಿನ್ನಬೇಕು; ಅಥವಾ ಶುಂಠಿಯ ಕಷಾಯವನ್ನು ಬೆಲ್ಲ ಕೂಡಿಸಿಕೊಂಡು, ಸೇವಿಸಬೇಕು; ಅದರಿಂದ ವಿಷಮಜ್ವರಗಳು ನಾಶವಾಗುವವು ಆಡುಸೋಗೆ, ನೆಲ್ಲಿ, ದೇವದಾರ, ಅಣಿಲೆಕಾಯಿ, ಶುಂಠಿ, ದ್ರಾಕ್ಷೆ, ಖರ್ಜೂರ ಮತ್ತು ಕಾಶ್ಮೀರ (ಶಿವನ್ನಿ)ಹಣ್ಣು, ಇವುಗಳ ಕಷಾಯವನ್ನು ಜೇನು ಕೂಡಿಸಿಕೊಂಡು, ಪಾನಮಾಡುವದರಿಂದ ಚಾತುರ್ಥಿಜ್ವರ ನಿವಾರಿಸಲ್ಪಡುತ್ತದೆ.

ಪಲಂಕಷಾ ನಿಮ್ಬಪತ್ರಂ ವಚಾ ಕುಷ್ಠಂ ಹರೀತಕೀ ।
ಸರ್ಷಪಾಃ ಸಯವಾಃ ಸರ್ಪಿರ್ಧೂಪನಂ ಜ್ವರನಾಶನಮ್ ॥
ಯೇ ಧೂಮಾ ಧೂಪನಂ ಯಚ್ಚ ನಾವನಂ ಚಾಂಜನಂ ಚ ಯತ್ ।
ಮನೋವಿಕಾರೇ ವ್ಯಾಖ್ಯಾತಂ ಕಾರ್ಯಂ ತದ್ವಿಷಮಜ್ವರೇ ॥
(ಚ. 471, 472)

ಗುಗ್ಗುಳ, ಕಹಿಬೇವಿನ ಸೊಪ್ಪು, ಬಜೆ, ಚಂಗಲಕೋಷ್ಠ, ಅಣಿಲೆಕಾಯಿ, ಸಾಸುವೆ, ಯವೆಗೋಧಿ, ತುಪ್ಪ, ಇವುಗಳ ಧೂಪ ಕೊಡುವದರಿಂದ ವಿಷಮಜ್ವರನಾಶ. ಮನೋವಿಕಾರದಲ್ಲಿ ಯಾವ ಹೊಗೆಗಳು, ಧೂಪಗಳು, ನಸ್ಯಗಳು ಮತ್ತು ಅಂಜನಗಳು ವರ್ಣಿಸಲ್ಪಟ್ಟಿವೆಯೋ, ಅವುಗಳನ್ನು ವಿಷಮಜ್ವರದಲ್ಲಿ ಉಪಯೋಗಿಸಬೇಕು.

110. ಗವ್ಯಂ ದಧಿ ಚ ಮೂತ್ರಂ ಚ ಕ್ಷೀರಂ ಸರ್ಪಿಃ ಶಕೃದ್ರಸಃ ।
ಪಂಚಗವ್ಯಘೃತ. ಸಮಭಾಗಾನಿ ಪಾಚ್ಯಾನಿ ಕಲ್ಕಾಂಶ್ಚೈತಾನ್ ಸಮಾವಪೇತ್ ॥
ತ್ರಿಫಲಾಂ ಚಿತ್ರಕಂ ಮುಸ್ತಂ ಹರಿದ್ರೇ ದ್ವೇ ವಿಷಾಂ ವಚಾಮ್ ।

ವಿಡಂಗಂ ತ್ರ್ಯೂಷಣಂ ಚವ್ಯಂ ಸುರದಾರು ತಥೈವ ಚ ||
ಪಂಚಗವ್ಯಮಿದಂ ಪಾನಾದ್ವಿಷಮಜ್ವರನಾಶನಮ್ || (ಸು. 772)

ದನದ ಮೊಸರು-ಮೂತ್ರ-ಹಾಲು-ತುಪ್ಪಗಳು ಮತ್ತು ಸಗಣಿಯ ರಸ, ಇವೈದನ್ನು ಸಮ ಭಾಗ ಕೂಡಿಸಿ, ತ್ರಿಫಲೆ, ಚಿತ್ರಮೂಲ, ಭದ್ರಮುಷ್ಟಿ, ಅರಸಿನ, ಮರದರಸಿನ, ಅತಿವಿಡೆ, ಬಜೆ, ವಾಯುವಿಳಂಗ, ತ್ರಿಕಟು, ಕಾಡುಮೆಣಸಿನ ಬೇರು, ದೇವದಾರ, ಇವುಗಳ ಕಲ್ಕದಿಂದ ಪಾಕ ಮಾಡಿದ ಪಂಚಗವ್ಯ ಎಂಬ ಘೃತದ ಪಾನದಿಂದ ವಿಷಮಜ್ವರವು ನಾಶವಾಗುವದು.

111. ಪಂಚಕೋಲೈಃ ಸಸಿನ್ಧೂತ್ಥೈಃ ಪಲಿಕೈಃ ಪಯಸಾ ಸಮಮ್ |
ಕ್ಷೀರಷಟ್ಪಲಘೃತ ಸರ್ಪಿಃ ಪ್ರಸ್ಥಂ ಶೃತಂ ಪ್ಲೀಹವಿಷಮಜ್ವರನಾಶನಮ್ ||
(ಚಿ. ಸಾ. ಸಂ. 65)

ಹಿಪ್ಪಲಿ, ಹಿಪ್ಪಲಿಮೂಲ, ಕಾಡುಮೆಣಸಿನ ಬೇರು, ಚಿತ್ರಮೂಲ, ಶುಂಠಿ, ಸೈಂಧವ ಲವಣ, ಇವುಗಳನ್ನು ಒಂದೊಂದು ಪಲ ಪ್ರಕಾರ ತೆಗೆದುಕೊಂಡು ಚೂರ್ಣಮಾಡಿ, ಆ ಚೂರ್ಣಕ್ಕೆ ೧ ಪ್ರಸ್ಥ ತುಪ್ಪ, ೧ ಪ್ರಸ್ಥ ಹಾಲು, (೪ ಪ್ರಸ್ಥ ನೀರು ಸಹ) ಹಾಕಿ ಕಾಯಿಸಿದ ತುಪ್ಪವು ಪ್ಲೀಹವ್ಯಾಧಿ ಮತ್ತು ವಿಷಮಜ್ವರಗಳನ್ನು ನಾಶಮಾಡತಕ್ಕಂಥಾದ್ದು.

ಷರಾ ಸೈಂಧವಲವಣ ಬಿಟ್ಟು ಯವಕ್ಷಾರ ಹಾಕಿ ಕಾಯಿಸಿದ ತುಪ್ಪಕ್ಕೆ ಷಟ್ಪಲವೆನ್ನುತ್ತಾರೆಂತಲೂ, ಅದರಿಂದ ಗುಲ್ಮ, ಜ್ವರ, ಉದರವ್ಯಾಧಿ, ಪ್ಲೀಹವ್ಯಾಧಿ, ಗ್ರಹಣಿ, ಪಾಂಡು, ಪೀನಸ, ಉಬ್ಬಸ, ಕೆಮ್ಮು, ಅಗ್ನಿಮಾಂದ್ಯ, ಮೂಲ ವ್ಯಾಧಿ, ಬಾವು, ಊರ್ಧ್ವವಾಯು ಸಹ ಪರಿಹಾರವಾಗುತ್ತವೆಂತಲೂ ಇನ್ನೊಂದು ಕಡೆ ಹೇಳಲ್ಪಟ್ಟದೆ (ವೈ. ಸಾ ಸಂ. 117) ಹಿಂದೆ ಶ್ವಾಸಕ್ಕೆ ಹೇಳಲ್ಪಟ್ಟ 'ಕುಲತ್ಥಷಟ್ಪಲಘೃತ'ದ ಯೋಗ ನೋಡಿ.

112. ವೃಷಾನಿಮ್ಬಾಮೃತಾವ್ಯಾಘ್ರೀಪಟೋಲಾನಾಂ ಶೃತೇನ ಚ |
ಪಂಚತಿಕ್ತಘೃತ ಕಲ್ಕೇನ ಪಕ್ವಂ ಸರ್ಪಿಸ್ತು ನಿಹನ್ಯಾದ್ವಿಷಮಜ್ವರಾನ್ ||
ಪಾಂಡುಂ ಕುಷ್ಠಂ ವಿಸರ್ಪಂ ಚ ಕ್ರಿಮೀನರ್ಶಾಂಸಿ ನಾಶಯೇತ್ ||
(ಶಾ. 91)

ಆಡುಸೋಗೆ, ಕಹಿಬೇವು, ಅಮೃತಬಳ್ಳಿ, ಕಿರಿಗುಳ್ಳದ ಬೇರು, ಕಹಿಪಡುವಲು, ಇವುಗಳ ಕಷಾಯದಿಂದಲೂ, ಕಲ್ಕದಿಂದಲೂ, ಪಕ್ವಮಾಡಿದ ತುಪ್ಪವು ವಿಷಮಜ್ವರಗಳನ್ನೂ, ಪಾಂಡು, ಕುಷ್ಠ, ವಿಸರ್ಪ, ಕ್ರಿಮಿಗಳು, ಅರ್ಶಸ್ಸುಗಳು, ಇವುಗಳನ್ನೂ ನಾಶಮಾಡುವದು.

ಷರಾ ತುಪ್ಪಕ್ಕೆ ೨ ಪಾಲು ಕಷಾಯ-ದ್ರವ್ಯಗಳನ್ನು ತೆಗೆದುಕೊಂಡು, ತುಪ್ಪಕ್ಕೆ ೪ ಪಾಲು ಕಷಾಯ ಮಾಡಿ ಕೂಡಿಸುವದು

113. ಅಮೃತತ್ರಿಫಲಾಪಟೋಲಯಾಸೈಃ ಸಪಯಸ್ಕಂ ವಿಧಿವತ್ ಘೃತಂ ವಿಪಕ್ವಮ್ |
ಅಮೃತಾದಿಘೃತ ವಿಷಮಜ್ವರನಾಶನಂ ಪ್ರಧಾನಂ ಕ್ಷಯಗುಲ್ಮಾರುಚಿಕಾಮಲಾಪಹಾರಿ ||
(ನಿ. ರ.)

ಅಮೃತಬಳ್ಳಿ, ತ್ರಿಫಲೆ, ಕಹಿಪಡುವಲು, ಬಳ್ಳಿತುರಚನ ಬೇರು, ಇವುಗಳಿಂದ (ಕಷಾಯ ಕಲ್ಕಗಳಿಂದ), ಹಾಲು ಕೂಡಿಸಿ, ವಿಧಿ ಪ್ರಕಾರ ಕಾಯಿಸಲ್ಪಟ್ಟ ತುಪ್ಪವು ವಿಷಮಜ್ವರನಾಶಕ್ಕೆ ಮುಖ್ಯವಾದದ್ದು; ಕ್ಷಯ, ಗುಲ್ಮ, ಅರುಚಿ, ಕಾಮಿಲೆ, ಇವುಗಳನ್ನು ಸಹ ಪರಿಹರಿಸುವದು.

114. ಅಭ್ಯಂಗಾಂಶ್ಚ ಪ್ರದೇಹಾಂಶ್ಚ ಪರಿಷೇಕಾಂಶ್ಚ ಕಾರಯೇತ್ ।
ಯಥಾಭಿಲಾಷಂ ಶೀತೋಷ್ಣಂ ವಿಭಜ್ಯ ದ್ವಿವಿಧಂ ಜ್ವರಮ್ ॥ (ಚ. 466)

ಉರಿಶೀತಜ್ವರಗಳ ಚಿಕಿತ್ಸೆ.

ಕಫವಾತೋತ್ಥಯೋಶ್ಚಾಪಿ ಜ್ವರಯೋಃ ಶೀತಪೀಡಿತಮ್ ।
ದಿಹ್ಯಾದುಷ್ಣೇನ ವರ್ಗೇಣ ಪರಶ್ಚೋಷ್ಣೋ ವಿಧಿರ್ಹಿತಃ ॥
ಸಿಂಚೇತ್ ಕೋಷ್ಣೈರಾರನಾಲಶುಕ್ತಗೋಮೂತ್ರಮಸ್ತುಭಿಃ ।
ದಿಹ್ಯಾತ್ಫಲಾಶ್ಮೈರಥವಾ ಸುರಸಾರ್ಜಕಶಿಗ್ರುಜೈಃ ॥
ಕ್ಷಾರತೈಲೇನ ಚಾಭ್ಯಂಗಃ ಸಶುಕ್ತೇನ ವಿಧೀಯತೇ ।
ಪಾನಮಾರಗ್ವಧಾದೇಶ್ಚ ಕ್ವಥಿತಸ್ಯ ವಿಶೇಷತಃ ॥
ಅವಗಾಹಃ ಸುಖೋಷ್ಣಶ್ಚ ವಾತಘ್ನಕ್ವಾಥಸಂಯುತಃ ।
ಜಿತ್ವಾ ಶೀತಂ ಕ್ರಮೈರೇಭಿಃ ಸುಖೋಷ್ಣಜಲಸೇಚಿತಮ್ ॥
ಪ್ರವೇಶ್ಯೋರ್ಣಿಕಕಾರ್ಪಾಸಕೌಶೇಯಾಮ್ಬರಸಂವೃತಮ್ ।
ಶಾಯಯೇದ್ಮ್ಲಾನದೇಹಂ ಚ ಕಾಲಾಗುರುವಿಭೂಷಿತಮ್ ॥
(ಸು. 774, 775)

ದಾಹಾಭಿಭೂತೇ ತು ವಿಧಿಂ ಕುರ್ಯಾದ್ದಾಹವಿನಾಶನಮ್ ।
ಮಧುಫಾಣಿತಯುಕ್ತೇನ ನಿಮ್ಬಪತ್ರಾಮ್ಬುನಾಽಪಿ ವಾ ॥
ದಾಹಜ್ವರಾರ್ತ್ತಂ ಮತಿಮಾನ್ ವಾಮಯೇತ್ಕ್ಷಿಪ್ರಮೇವ ಚ ।
ಶತಧೌತಘೃತಾಭ್ಯಕ್ತಂ ದಿಹ್ಯಾದ್ವಾ ಯವಶಕ್ತುಭಿಃ ॥
ಕೋಲಾಮಲಕಸಂಯುಕ್ತೈಃ ಶೂಕಧಾನ್ಯಾಮ್ಲಸಂಯುತೈಃ ।
ಅಮ್ಲಪಿಷ್ಟೈಃ ಸುಶೀತೈಶ್ಚ ಫೇಣಿಲಾಪಲ್ಲವೈಸ್ತಥಾ ।
ಅಮ್ಲಪಿಷ್ಟೈಸ್ತು ಶೀತೈರ್ವಾ ಪಲಾಶತರುಜೈರ್ದಿಹೇತ್ ॥
ಬದರೀಪಲ್ಲವೋತ್ಥೇನ ಫೇನೇನಾರಿಷ್ಟಕಸ್ಯ ಚ ।
ಲಿಪ್ತೇಽಂಗೇ ದಾಹತೃಣ್ಮೂರ್ಛಾ ಸರ್ವಥೈವ ಪ್ರಶಾಮ್ಯತಿ ॥
* * * ನ್ಯಗ್ರೋಧಾದಿರ್ಗಣೋ ಯಸ್ತು ಕಾಕೋಲ್ಯಾದಿಶ್ಚ ಯೋ ಗಣಃ ।
ಉತ್ಪಲಾದಿರ್ಗಣೋ ಯಸ್ತು ಪಿಷ್ಟೈರ್ವಾ ತೈಃ ಪ್ರಲೇಪಯೇತ್ ॥
ತತ್ಕಷಾಯಾಮ್ಲಸಂಸಿದ್ಧಾಃ ಸ್ನೇಹಾಶ್ಚಾಭ್ಯಂಜನೇ ಹಿತಾಃ ।
ತೇಷಾಂ ಶೀತಕಷಾಯೇ ವಾ ದಾಹಾರ್ತಮವಗಾಹಯೇತ್ ॥
ದಾಹವೇಗೇ ತ್ವತಿಕ್ರಾನ್ತೇ ತಸ್ಮಾದುದ್ಧೃತ್ಯ ಮಾನವಮ್ ।
ಪರಿಷಿಚ್ಯಾಮ್ಬುಭಿಃ ಶೀತೈಃ ಪ್ರಲಿಂಪೇಚ್ಚನ್ದನಾದಿಭಿಃ ॥ (ಸು. 775-6)

ಜ್ವರದಲ್ಲಿ ಉರಿಜ್ವರ, ಶೀತಜ್ವರ ಎಂಬ ಭೇದವನ್ನು ತಿಳಿದು, ಬೇಕಾದ ಹಾಗೆ (ಉರಿಜ್ವರಕ್ಕೆ ಶೀತವಾದ ಮತ್ತು ಶೀತಜ್ವರಕ್ಕೆ ಉಷ್ಣವಾದ) ಅಭ್ಯಂಗಗಳನ್ನೂ, ಲೇಪಗಳನ್ನೂ, ಪರಿಷೇಕಗಳನ್ನೂ ಮಾಡಿಸಬೇಕು.

ಕಫವಾತಗಳಿಂದ ಉತ್ಪನ್ನವಾದ ಜ್ವರಗಳಲ್ಲಿ ರೋಗಿಯು ಶೀತದಿಂದ ಪೀಡಿತನಾದ ಸಂಗತಿಯಲ್ಲಿ, (ಅವನ ಮೈಗೆ) ಉಷ್ಣವರ್ಗದ ಲೇಪಗಳನ್ನು ಹಾಕಬೇಕು; ಮತ್ತು (ದೋಷ

ವಿಚಾರದಿಂದ) ಹಿತವಾದ ಉಷ್ಣವಿಧಿಯು ಅವನಿಗೆ ಉತ್ತಮವಾದ್ದು. ಹುಳಿಗಂಜಿಯ ನೀರು, ಶುಕ್ತ, ಗೋಮೂತ್ರ ಮತ್ತು ಮೊಸರ ನೀರು, ಇವುಗಳಿಂದ ಸುಖೋಷ್ಣವಾಗಿ ಸೇಚನ ಮಾಡಬೇಕು (ಅಂದರೆ ಆ ದ್ರವಗಳನ್ನು ಚಿಮಕಿಸಬೇಕು ಅಥವಾ ಅವುಗಳ ಧಾರೆ ಹಿಡಿಯಬೇಕು; ಮೆತ್ತಗಿನ ವಸ್ತ್ರದ ತುಂಡನ್ನು ಆ ದ್ರವಗಳಲ್ಲಿ ಅದ್ದಿ ಅದರಿಂದ ಒತ್ತಡ ಕೊಟ್ಟರೂ ಆದೀತು); ಅಥವಾ ಪಲಾಶದ, ತುಳಸಿಯ, ಕಾಡುತುಳಸಿಯ ಅಥವಾ ನುಗ್ಗೆಯ ಸೊಪ್ಪುಗಳನ್ನು (ಆ ದ್ರವಗಳನ್ನು ಕೂಡಿಸಿ) ಅರೆದು ಲೇಪಿಸಬೇಕು. ಕ್ಷಾರ ಮತ್ತು ಶುಕ್ತ ಕೂಡಿಸಿ ಕಾಯಿಸಲ್ಪಟ್ಟ ತೈಲದಿಂದ ಅಭ್ಯಂಗವನ್ನೂ, ವಿಶೇಷವಾಗಿ ಆರಗ್ವಧಾದಿ ವರ್ಗದ ಔಷಧಗಳ ಕಷಾಯದ ಪಾನವನ್ನೂ, ವಾತಹರವಾದ ಕಷಾಯಯುಕ್ತವಾಗಿ ಸುಖೋಷ್ಣವಾದ ಅವಗಾಹವನ್ನೂ (ಅಂದರೆ ಆ ಕಷಾಯದ ನೀರು ತುಂಬಿದ ಪಾತ್ರದಲ್ಲಿ, ಅಥವಾ ಮರದ ದೊಡ್ಡ ಮರಿಗೆಯಲ್ಲಿ, ಕುತ್ತಿಗೆಯ ಮೇಲಿನ ಭಾಗವನ್ನು ಬಿಟ್ಟು ದೇಹವನ್ನು ಮುಳುಗಿಸುವ ಕ್ರಮವನ್ನೂ) ವಿಧಿಸುತ್ತಾರೆ. ಈ ಕ್ರಮಗಳಿಂದ ಶೀತವನ್ನು ಗೆದ್ದ ಮೇಲೆ, ಸುಖೋಷ್ಣವಾದ ನೀರಿನ ಸೇಚನಮಾಡಿ, ಒಳಗೆ ಕರತಂದು (ಅಂದರೆ ಆ ನೀರಿನಿಂದ ಮೈ ತೊಳೆದು ಒರಸಿ, ಬೀಸುವ ಗಾಳಿ ಇಲ್ಲದ ಕೋಣೆಗೆ ಕರತಂದು), ಕೃಷ್ಣಾಗರುಗಂಧವನ್ನು ಹಚ್ಚಿ, ಉಣ್ಣೆಯ, ಹತ್ತಿಯ, ಅಥವಾ ಪಟ್ಟೆಯ ವಸ್ತ್ರವನ್ನು ಹೊದಿಸಿ, ಬಳಲಿದ ಶರೀರವುಳ್ಳ ಆ ರೋಗಿಯನ್ನು ಮಲಗಿಸಬೇಕು.

ರೋಗಿಗೆ ಉರಿಯ ಪೀಡೆಯಿರುವ ಸಂಗತಿಯಲ್ಲಿ, ಉರಿಯನ್ನು ನಾಶಮಾಡತಕ್ಕ ಕ್ರಮವನ್ನು ನಡಿಸತಕ್ಕದ್ದು. (ಹೇಗೆಂದರೆ), ಕಹಿಬೇವಿನ ಎಲೆ ಹಾಕಿ ಕಾಯಿಸಿದ ನೀರಿಗೆ ಜೇನು ಮತ್ತು ರವೆಬೆಲ್ಲ ಕೂಡಿಸಿ, ಅದನ್ನು ದಾಹಜ್ವರದ ಪೀಡೆಯುಳ್ಳವನಿಗೆ ಕುಡಿಸಿ, ಬುದ್ಧಿವಂತನಾದ ವೈದ್ಯನು ಬೇಗನೆ ವಾಂತಿಮಾಡಿಸತಕ್ಕದ್ದು. ಸೂರಾವರ್ತ ತೊಳೆದ ತುಪ್ಪವನ್ನು ಹಚ್ಚಿ, ಹುರಿದ ಯವೆಯ ಹಿಟ್ಟನ್ನು, ಬೊಗರಿ ಎಲೆ ಮತ್ತು ನೆಲ್ಲಿಚಟ್ಟು ಕೂಡಿಸಿ, ಶೂಕಧಾನ್ಯದ ಹುಳಿಸಿದ ನೀರಿನೊಂದಿಗೆ ಅರೆದು, ಲೇಪಿಸತಕ್ಕದ್ದು. ಬಸಳೆ (ಬಚ್ಚಲುಸೊಪ್ಪಿನಬಳ್ಳಿಯ) ಕುಡಿಯನ್ನು ಹುಳಿರಸದಿಂದ ಅರೆದು ಒಳ್ಳೇ ತಣ್ಣಗಾದ ಲೇಪವನ್ನು ಹಾಕಬೇಕು, ಅಥವಾ ಪಲಾಶದ ಕುಡಿಯನ್ನು ಹುಳಿರಸದಿಂದ ಅರೆದು, ತಣ್ಣಗಾಗಿ ಲೇಪಿಸಬೇಕು. ಬೊಗರಿ ಚಿಗುರುಗಳ ಮತ್ತು ಕಹಿಬೇವಿನ ಚಿಗುರುಗಳ ರಸದ ನೊರೆಯನ್ನು ಅಂಗಗಳಿಗೆ ಲೇಪಿಸಿದ್ದಲ್ಲಿ, ಉರಿ, ಬಾಯಾರಿಕೆ, ಮೂರ್ಛೆ ಸಹ ಶಮನವಾಗುವದರಲ್ಲಿ ಸಂದೇಹವಿಲ್ಲ. ನ್ಯಗ್ರೋಧಾದಿಗಣ, ಕಾಕೋಲ್ಯಾದಿಗಣ, ಉತ್ಪಲಾದಿಗಣ, ಈ ವರ್ಗಗಳಿಗೆ ಸೇರಿದ ಔಷಧಗಳನ್ನು ಅರೆದು (ಉರಿಶಾಂತಿಗಾಗಿ) ಲೇಪಿಸಬೇಕು, ಅವುಗಳ ಕಷಾಯಗಳಿಂದ, ಹುಳಿಗಂಜಿನೀರನ್ನು ಕೂಡಿಸಿ, ಪಾಕಮಾಡಿದ ಸ್ನೇಹಗಳು ಅಭ್ಯಂಜನಕ್ಕೆ ಹಿತವಾದವುಗಳು; ಅಥವಾ ಆ ಔಷಧಗಳ ಶೀತಕಷಾಯದಲ್ಲಿ ಉರಿಪೀಡಿತನಾದ ರೋಗಿಯನ್ನು ಕೂತುಕೊಳ್ಳಿಸಬೇಕು; ಮತ್ತು ಉರಿಯ ವೇಗ ಕಳೆದ ಕೂಡಲೆ, ಆ ಕಷಾಯದಿಂದ ಅವನನ್ನು ಎತ್ತಿ ತೆಗೆದು, ತಣ್ಣೀರನ್ನು ಚಿಮಕಿಸಿ, (ದೇಹವನ್ನು ಒರಸಿ) ಶೀತಗುಣವುಳ್ಳ ಶ್ರೀಗಂಧಾದಿಗಳ ಲೇಪವನ್ನು ಹಾಕಬೇಕು.

ಷರಾ ಶೀತಪರಿಹಾರಕ್ಕೆ ಹಾಕುವ ಲೇಪವನ್ನು ತಯಾರಿಸುವಲ್ಲಿ ಔಷಧ ದ್ರವ್ಯಗಳನ್ನು ನುಣ್ಣಗಾಗಿ ಅರೆಯಬೇಕು ಎಂತ ವಾ (ಪು 258) ಅಗ್ಗೆ ಆ ಲೇಪವು ರೋಮಕೂಪಗಳ ದ್ವಾರವನ್ನು ತಡೆದು ಬಿಸಿಯನ್ನು ಏರಿಸುತ್ತದೆ.

ಉರಿಜ್ವರಕ್ಕೆ ತಯಾರಿಸುವ ಲೇಪವು ಅತಿನುಣ್ಣಗಾಗಬಾರದು ಎಂತ ವಾಗ್ಭಟ (ಪು 258). ರುಗ್ವಿಹ ಸನ್ನಿಪಾತ ಚಿಕಿತ್ಸೆಯಲ್ಲಿ ವರ್ಣಿಸಿದ ತಣ್ಣೀರಿನ ಧಾರೆಯ ವಿಧಿಯನ್ನು ಉರಿಜ್ವರದಲ್ಲಿ ನಡಿಸುವದು ಹಿತ (90ನೇ ಸಂಖ್ಯೆ ನೋಡಿ).

115. ದಾಡಿಮಂ ಬದರಂ ಲೋಧ್ರಂ ಕಪಿತ್ಥಂ ಬೀಜಪೂರಕಮ್ ।
ಶಿರೋಲೇಪನಗಳು. ಪಿಷ್ಟ್ವಾ ಮೂರ್ಧ್ನಿ ಪ್ರಲೇಪೋऽಯಂ ಪಿಪಾಸಾದಾಹನಾಶನಃ ॥
ಕಾಲೀಯಬದರಾನನ್ತಾಯಷ್ಟಿಚನ್ದನಕಾಂಜಿಕೈಃ ।
ಸಘೃತೈಃ ಸ್ಯಾಚ್ಛಿರೋಲೇಪಸ್ತೃಷ್ಣಾದಾಹವಿನಾಶನಃ ॥
(ಚಿ. ಸಾ. ಸಂ. 57)

ದಾಳಿಂಬದ ಹಣ್ಣು, ಬೊಗರಿಹಣ್ಣು, ಲೋಧ್ರ, ಬೇಲದ ಹಣ್ಣು, ಮಾದಳದ ಹಣ್ಣು, ಇವುಗಳನ್ನು ಅರೆದು ನೆತ್ತಿಯ ಮೇಲೆ ಲೇಪ ಹಾಕಲು, ಉರಿ ಮತ್ತು ಬಾಯಾರಿಕೆ ನಾಶವಾಗುವವು.

ಹರಿಚಂದನ (ಕುಂಕುಮಾಗರು), ಬೊಗರಿಹಣ್ಣು, ದೂರ್ವೆ, ಜ್ಯೇಷ್ಠಮಧು, ಶ್ರೀಗಂಧ, ಇವುಗಳನ್ನು ಹುಳಿಗಂಜಿನೀರಿನೊಂದಿಗೆ ಅರೆದು, ತುಪ್ಪ ಕೂಡಿಸಿ, ತಲೆಮೇಲೆ ಲೇಪಿಸಲು, ಬಾಯಾರಿಕೆಯೂ ಉರಿಯೂ ನಾಶವಾಗುವವು.

ವಿದಾರೀ ದಾಡಿಮಂ ಲೋಧ್ರಂ ಕಪಿತ್ಥಂ ಬೀಜಪೂರಕಮ್ ।
ಏಭಿಃ ಪ್ರದಿಹ್ಯಾನ್ಮೂರ್ಧಾನಂ ತೃಟ್ದಾ(?ಡ್ದಾ)ಹಾರ್ತಸ್ಯ ದೇಹಿನಃ ॥
ಕರವೀರಸ್ಯ ಪತ್ರಾಣಿ ಚನ್ದನಂ ಶಾರಿವಾಸ್ತಿಲಾಃ ।
ತೃಷ್ಣಾದಾಹೇ ಶಿರೋಲೇಪಃ ಆರನಾಲೇನ ಪೇಷಿತಃ ॥ (ರ. ರ 231)

ನೆಲಕುಂಬಳಗಡ್ಡೆ, ದಾಳಿಂಬದ ಹಣ್ಣು, ಲೋಧ್ರ, ಬೇಲದ ಹಣ್ಣು, ಮಾದಳದ ಹಣ್ಣು, ಇವುಗಳನ್ನು ಅರೆದು ನೆತ್ತಿಯ ಮೇಲೆ ಲೇಪ ಹಚ್ಚಲು, ಬಾಯಾರಿಕೆ ಮತ್ತು ಉರಿ ಶಾಂತವಾಗುವವು. ಕಣಿಗಲ ಎಲೆ, ಶ್ರೀಗಂಧ, ಸುಗಂಧಿಬೇರು, ಎಳ್ಳು, ಇವುಗಳನ್ನು ಹುಳಿಗಂಜಿ ನೀರಿನೊಂದಿಗೆ ಅರೆದು ತಲೆಮೇಲೆ ಹಚ್ಚಲು, ಬಾಯಾರಿಕೆ ಮತ್ತು ಉರಿ ಶಾಂತವಾಗುವವು.

116. ಜ್ವರೇ ರಸಸ್ಥೇ ವಮನಮುಪವಾಸಂ ಚ ಕಾರಯೇತ್ ।
ಸೇಕಪ್ರದೇಹೌ ರಕ್ತಸ್ಥೇ ತಥಾ ಸಂಶಮನಾನಿ ಚ ॥
ರಸಾದಿಧಾತುಗತ ಜ್ವರಗಳ ಚಿಕಿತ್ಸೆ ವಿರೇಚನಂ ಸೋಪವಾಸಂ ಮಾಂಸಮೇದಃಸ್ಥಿತೇ ಹಿತಮ್ ।
ಅಸ್ಥಿಮಜ್ಜಗತೇ ದೇಯಾ ನಿರೂಹಾಃ ಸಾನುವಾಸನಾಃ ॥ (ಚ. 472)

ರಸಧಾತುವಿನಲ್ಲಿ ನಿಂತ ಜ್ವರದಲ್ಲಿ ವಾಂತಿಯನ್ನೂ ಲಂಘನವನ್ನೂ ಮಾಡಿಸಬೇಕು. ರಕ್ತದಲ್ಲಿ ಜ್ವರ ನಿಂತಲ್ಲಿ ಸೇಕ(ಧಾರೆ ಅಥವಾ ಒತ್ತಡ)ಗಳು, ಲೇಪಗಳು ಮತ್ತು ಸಂಶಮನ ಯೋಗಗಳು ಹಿತ. ಜ್ವರವು ಮಾಂಸದಲ್ಲಿ ಅಥವಾ ಮೇದಸ್ಸಿನಲ್ಲಿ ನಿಂತಾಗ್ಗೆ ವಿರೇಚನ ಮಾಡಿಸುವದೂ ಉಪವಾಸ ಮಾಡಿಸುವದೂ ಹಿತ. ಎಲುಬಿನಲ್ಲಾಗಲಿ ಮಜ್ಜೆಯಲ್ಲಾಗಲಿ ಜ್ವರವು ನಿಂತಿರುವಲ್ಲಿ ನಿರೂಹವಸ್ತಿಗಳನ್ನೂ ಅನುವಾಸನವಸ್ತಿಗಳನ್ನೂ ಉಪಯೋಗಿಸತಕ್ಕದ್ದು.

ಮಾಂ ಮೇದಸ್ಸಿನಲ್ಲಿ ಜ್ವರವಿದ್ದಾಗ್ಗೆ ಮೇದೋಹರವಾದ, ಎಲುಬಿನಲ್ಲಿ ಜ್ವರವಿರುವಾಗ್ಗೆ ವಾತಹರವಾದ, ವಸ್ತಿಗಳ ಉಪಯೋಗವನ್ನು, ಅಭ್ಯಂಗವನ್ನು ಮತ್ತು ಉದ್ವರ್ತನವನ್ನು ಮಾಡಿಸಬೇಕಾಗಿಯೂ, ಮಜ್ಜೆಯಲ್ಲಿಯೂ ಶುಕ್ರ

ದಲ್ಲಿಯೂ ಜ್ವರ ನಿಂತರೆ ಮರಣ ಉಂಟಾಗುವದು ನಿಶ್ಚಯವಾದ್ದರಿಂದ ಅದಕ್ಕೆ ಪ್ರತಿಕ್ರಿಯೆ ಹೇಳಲ್ಪಟ್ಟಿರುವದಿಲ್ಲ ವೆಂತಲೂ ಚಿ ಸಾ. ಸಂ (ಪು 59). ಜ್ವರವು ಎಲುಬಿನಲ್ಲಿ ಸೇರಿಕೊಂಡರೆಯೂ ರೋಗಿಯು ಬದುಕುವದಿಲ್ಲ ಎಂತ ಇನ್ನೊಂದು ಮತ (ನಿ ರ). ರಕ್ತವನ್ನಾಶ್ರಯಿಸಿಕೊಂಡ ಜ್ವರದಲ್ಲಿ ರಕ್ತಮೋಕ್ಷಣ ಸಹ ಹಿತ ಎಂತ ಚಿ ಸಾ ಸಂ (ಪು 59)

ಕಟುಕಾರೋಹಿಣೀ ಮುಸ್ತಾ ಪಿಪ್ಪಲೀಮೂಲಮೇವ ಚ ।
ಹರೀತಕೀ ಚ ತತ್ಕ್ವಾಥೋಯಮಾಮಾಶಯಗತೇ ಜ್ವರೇ ॥ (ಚಿ. ಸಾ. ಸಂ. 59)

ಕಟುಕರೋಹಿಣಿ, ಶಿವನ್ನಿ (ಕಾಶ್ಮೀರಿ), ಭದ್ರಮುಷ್ಟಿ, ಹಿಪ್ಪಲಿಮೂಲ, ಅಣಿಲೆಕಾಯಿ, ಇವುಗಳ ಕಷಾಯವನ್ನು ಆಮಾಶಯದಲ್ಲಿ ನಿಂತ ಜ್ವರಪರಿಹಾರಕ್ಕೆ ಕೊಡುವದು.

ಗಾಯತ್ರೀ ತ್ರಿಫಲಾ ನಿಮ್ಬಪಟೋಲೀವಾಸಕಾಮೃತಾ ।
ಕ್ವಾಥೋ ಮಧುಘೃತಾಭ್ಯಾಂ ಚ ರಕ್ತದೋಷೇ ऽತಿಶಸ್ಯತೇ ॥ (ನಿ. ರ.)

ಕಾಚಿನ ತಿರುಳು, ತ್ರಿಫಲೆ, ಕಹಿಬೇವು, ಕಹಿಪಡುವಲು, ಆಡುಸೋಗೆ, ಅಮೃತಬಳ್ಳಿ, ಇವುಗಳ ಕಷಾಯವನ್ನು, ತುಪ್ಪ ಮತ್ತು ಜೇನು ಕೂಡಿಸಿ, ಪಾನಮಾಡಿಸುವದು ರಕ್ತ ದೋಷದಲ್ಲಿ (ರಕ್ತದಲ್ಲಿ ನಿಂತ ಜ್ವರದಲ್ಲಿ) ಬಹಳ ಪ್ರಶಸ್ತ.

117. ವರ್ಷಾಶರದ್ವಸನ್ತೇಷು ವಾತಾದ್ಯೈಃ ಪ್ರಾಕೃತಃ ಕ್ರಮಾತ್ ।
ವೈಕೃತೋ ऽನ್ಯಃ ಸದುಃಸಾಧ್ಯಃ ಪ್ರಾಕೃತಶ್ಚಾನಿಲೋದ್ಭವಃ
ವರ್ಷಾಸು ಮಾರುತೋ ದುಷ್ಟಃ ಪಿತ್ತಶ್ಲೇಷ್ಮಾನ್ವಿತೋ ಜ್ವರಮ್ ।
ಕುರ್ಯಾತ್ಪಿತ್ತಂ ಚ ಶರದಿ ತಸ್ಯ ಚಾನುಬಲಃ ಕಫಃ ॥
ತತ್ಪ್ರಕೃತ್ಯಾ ವಿಸರ್ಗಾಚ್ಚ ತತ್ರ ನಾನಶನಾದ್ಭಯಮ್ ।
ಕಫೋ ವಸನ್ತೇ ತಮಪಿ ವಾತಪಿತ್ತಂ ಭವೇದನು
ಕಾಲೇ ಯಥಾಸ್ವಂ ಸರ್ವೇಷಾಂ ಪ್ರವೃತ್ತಿರ್ವೃದ್ಧಿರೇವ ಚ ।
ನಿದಾನೋಕ್ತಾನುಪಶಯೋ ವಿಪರೀತೋಪಶಾಯಿತಾ ॥
(ಚಿ. ಸಾ. ಸಂ. 59, 60)

ಪ್ರಾಕೃತಜ್ವರಕ್ಕೆ ಚಿಕಿತ್ಸೆ

ವರ್ಷಋತುವಿನಲ್ಲಿ ವಾತ, ಶರದೃತುವಿನಲ್ಲಿ ಪಿತ್ತ, ವಸಂತಋತುವಿನಲ್ಲಿ ಕಫ, ಕೆದರಿ ಉಂಟುಮಾಡುವ ಜ್ವರವು ಪ್ರಾಕೃತ. ಇದಕ್ಕೆ ವ್ಯತಿರಿಕ್ತವಾದ್ದು ವೈಕೃತ ವೈಕೃತ ಜ್ವರವೂ, ವಾತದಿಂದ ಹುಟ್ಟಿದ ಪ್ರಾಕೃತ ಜ್ವರವೂ, ಕಷ್ಟದಿಂದ ಸಾಧ್ಯವಾಗತಕ್ಕವು. ವರ್ಷಋತುವಿನಲ್ಲಿ ವಾತವು ಕೆಟ್ಟು, ಪಿತ್ತಕಫಗಳೊಂದಿಗೆ ಕೂಡಿಕೊಂಡು, ಜ್ವರವನ್ನುಂಟುಮಾಡುತ್ತದೆ. ಶರದೃತುವಿನಲ್ಲಿ ಪಿತ್ತವು ಕೋಪಗೊಂಡು, ಕಫದ ಸಹಾಯದಿಂದ, ಜ್ವರವನ್ನುಂಟುಮಾಡುತ್ತದೆ, ಅವುಗಳ ಪ್ರಕೃತಿಯಿಂದಲೂ (ಪಿತ್ತಕಫಗಳು ದ್ರವಪದಾರ್ಥಗಳಾದ್ದರಿಂದಲೂ), (ಸೂರ್ಯನ) ವಿಸರ್ಗಕಾಲ(ದಕ್ಷಿಣಾಯಣ)ವಾದ್ದರಿಂದಲೂ, ಆ ಜ್ವರದಲ್ಲಿ ಉಪವಾಸ ಮಾಡುವದರಿಂದ ಭಯವಿಲ್ಲ. ವಸಂತಋತುವಿನಲ್ಲಿ ಕಫವು ಕೋಪಗೊಂಡು, ವಾತಪಿತ್ತಗಳ ಸಹಾಯ ಪಡೆದು, ಜ್ವರವನ್ನುಂಟುಮಾಡುತ್ತದೆ. ಎಲ್ಲಾ ಜ್ವರಗಳಲ್ಲಿ ಜ್ವರ ಕಾಣಿಸಿಕೊಳ್ಳುವದು ಮತ್ತು ವೃದ್ಧಿಯಾಗುವದು ಆಯಾ ದೋಷದ ಸ್ವಕಾಲದಲ್ಲಿ ಆಗಿರುತ್ತದೆ. ಆಯಾ ಜ್ವರದ ನಿದಾನ

ದಲ್ಲಿ ಹೇಳಲ್ಪಟ್ಟ ಹೇತುಗಳಿಂದ ಗುಣ ಕಾಣದೆ, ಅವುಗಳಿಗೆ ಪ್ರತಿವಿರುದ್ಧವಾದ ಕಾರಣಗಳಿಂದ ಜ್ವರವು ಉಪಶಮನವಾಗುತ್ತದೆ.

118. ಶಾಪಾಭಿಚಾರಾದ್ಭೂತಾನಾಮಭಿಷಂಗಾಚ್ಚ ಯೋ ಜ್ವರಃ ।
ದೈವವ್ಯಪಾಶ್ರಯಂ ತತ್ರ ಸರ್ವಮೌಷಧಮಿಷ್ಯತೇ ॥ (ಚ. 472)
ಅಭಿಶಾಪಾಭಿಚಾರೋತ್ಥೌ ಜ್ವರೌ ಹೋಮಾದಿನಾ ಜಯೇತ್ ।
ದಾನಸ್ವಸ್ತ್ಯಯನಾತಿಥ್ಯೈರುತ್ಪಾತಗ್ರಹಪೀಡಜೌ ॥ (ಸು. 774)
ಭೂತವಿದ್ಯಾಸಮುದ್ದಿಷ್ಟೈರ್ಬನ್ಧಾವೇಶನತಾಡನೈಃ ।
ಜಯೇದ್ಭೂತಾಭಿಷಂಗೋತ್ಥಂ ವಿಜ್ಞಾನಾದ್ಯೈಶ್ಚ ಮಾನಸಮ್ ॥
(ಸು. 774)

ಅಭಿಶಾಪಜ ಮುಂತಾದ ಆಗಂತು ಜ್ವರಗಳ ಚಿಕಿತ್ಸಾ ವಿಧಾನ.

ಶಾಪಗಳ, ಮಂತ್ರವಾದದ ಮತ್ತು ಭೂತಗಳ ಆವೇಶದ ಫಲವಾಗಿ ಯಾವ ಜ್ವರವು ಬರುತ್ತದೋ, ಅದರಲ್ಲಿ ದೈವಾಶ್ರಯವನ್ನು ಸಂಪಾದಿಸಲಿಕ್ಕೆ ಅಗತ್ಯವಾದ ಎಲ್ಲಾ ಕರ್ಮಗಳನ್ನು (ಬಲಿ, ಹರಿಕೆ, ಪ್ರಾಯಶ್ಚಿತ್ತ, ಜಪ, ದಾನ ಮುಂತಾದವು ಎಂತ ವಾ.—ಪು. 324) ಔಷಧವಾಗಿ ಉಪಯೋಗಿಸುವದು ಪ್ರಶಸ್ತವಾಗಿರುತ್ತದೆ.

ಶಾಪದ ಮತ್ತು ಮಂತ್ರವಾದದ ದೋಷಗಳಿಂದ ಉಂಟಾದ ಜ್ವರಗಳನ್ನು ಹೋಮಾದಿಗಳಿಂದಲೂ, ಉತ್ಪಾತ ಮತ್ತು ಗ್ರಹಗಳ ಪೀಡೆಯಿಂದ ಉಂಟಾದ ಜ್ವರಗಳನ್ನು ದಾನ, ಸ್ವಸ್ತ್ಯಯನ, ಅತಿಥಿಪೂಜೆಗಳಿಂದಲೂ, ಭೂತಾವೇಶದ ಜ್ವರವನ್ನು ಭೂತವಿದ್ಯೆಯಲ್ಲಿ ವಿಧಿಸಿರುವ (ಬಲಿಮಂತ್ರಾದಿಗಳ ಅಂಗಗಳಾದ) ಬಂಧ (ನೂಲು ಅಥವಾ ಮಣಿ ಕಟ್ಟುವದು ಮುಂತಾದ್ದು), ಆವೇಶಮಾಡಿಸುವದು (ಮಂತ್ರಯುಕ್ತವಾಗಿ ಸಾಸಿವೆಕಾಳು ಮುಂತಾದ್ದರಿಂದ ಹೊಡೆಯುವದು ಎಂತ ನಿ. ಸಂ. ವ್ಯಾ.), ಹೊಡೆಯುವದು, ಈ ಕ್ರಮಗಳಿಂದಲೂ, ಮನೋವ್ಯಥೆಯಿಂದುಂಟಾದ ಜ್ವರವನ್ನು (ಮನಃಶಾಂತಿಕರವಾದ) ವಿಶೇಷ ಜ್ಞಾನವನ್ನುಂಟುಮಾಡುವದು ಮುಂತಾದ ಉಪಾಯಗಳಿಂದಲೂ ಜಯಿಸತಕ್ಕದ್ದು.

119. ಮಧೂಕಸಾರಮರಿಚಂ ಸೈನ್ಧವಂ ಪಿಪ್ಪಲೀ ವಚಾ ।
ಸಂಜ್ಞಾಪ್ರಬೋಧನಂ ನಸ್ಯಂ ದೇಯಂ ಭೂತಜ್ವರೇ ಸದಾ ॥ (ನಿ. ರ.)

ಭೂತಜ್ವರದಲ್ಲಿ ನಸ್ಯಯೋಗಗಳು ಮತ್ತು ಮೂಲಿಕೆ

ಇಪ್ಪೆಮರದ ತಿರಳು, ಕಾಳುಮೆಣಸು, ಸೈಂಧವಲವಣ, ಹಿಪ್ಪಲಿ, ಬಜೆ, ಇವುಗಳ ಚೂರ್ಣವನ್ನು ಭೂತಜ್ವರದಲ್ಲಿ ಎಚ್ಚರಿಕೆ ಉಂಟಾಗುವದಕ್ಕಾಗಿ ಯಾವಾಗಲೂ ನಸ್ಯಮಾಡಿಸಬೇಕು.

ಕುರ್ಯಾದ್ಭೂತಜ್ವರೇ ನಸ್ಯಂ ವ್ಯೋಷಾಷ್ಟತುಳಸೀದಲೈಃ ॥ (ನಿ. ರ.)

ತ್ರಿಕಟುವಿನ ಚೂರ್ಣ ಮತ್ತು ಎಂಟು ತುಳಸಿ ಎಲೆ, ಇವುಗಳಿಂದ ಭೂತಜ್ವರದಲ್ಲಿ ನಸ್ಯ ಮಾಡಿಸಬೇಕು.

ಸಹದೇವಾಯಾ ಮೂಲಂ ವಿಧಿನಾ ಕಂಠೇ ನಿಬದ್ಧಮಪಹರತಿ ।
ಏಕದ್ವಿತ್ರಿಚತುರ್ಭಿರ್ದಿವಸೈರ್ಭೂತಜ್ವರಂ ಪುಂಸಾಮ್ ॥ (ನಿ. ರ.)

ಸಹದೇವಿಯ ಬೇರನ್ನು ವಿಧಿಪ್ರಕಾರ ಕುತ್ತಿಗೆಗೆ ಕಟ್ಟಿದಲ್ಲಿ, ೧, ೨, ೩, ೪ ದಿನಗಳಲ್ಲಿ ಭೂತಜ್ವರವು ತೊಲಗುವದು.

120. ಅಭಿಘಾತಜ್ವರೋ ನಶ್ಯೇತ್ಪಾನಾಭ್ಯಂಗೇನ ಸರ್ಪಿಷಃ |
ರಕ್ತಾವಸೇಕೈರ್ಮದ್ಯೈಶ್ಚ ಸಾತ್ಮ್ಯೈರ್ಮಾಂಸರಸೋದನೈಃ ||
ಸಾನಾಹೋ ಮದ್ಯಸಾತ್ಮ್ಯಾನಾಂ ಮದಿರಾರಸಭೋಜನೈಃ |
ಕ್ಷತಾನಾಂ ವ್ರಣಿತಾನಾಂ ಚ ಕ್ಷತವ್ರಣಚಿಕಿತ್ಸಯಾ || (ಚ. 472)
ಅಭಿಘಾತಜ್ವರೇ ಕುರ್ಯಾತ್ಕ್ರಿಯಾಮುಷ್ಣವಿವರ್ಜಿತಾಮ್ |
ಕಷಾಯಮಧುರಾಂ ಸ್ನಿಗ್ಧಾಂ ಯಥಾದೋಷಮಥಾಪಿ ವಾ || (ಸು. 774)

ಅಭಿಘಾತಜ, ಕ್ಷತಜ ಮತ್ತು ವ್ರಣಜ ಜ್ವರಗಳಿಗೆ ಚಿಕಿತ್ಸೆ

ಪೆಟ್ಟಿನ ದೆಸೆಯಿಂದ ಉಂಟಾದ ಜ್ವರವು (ಯುಕ್ತವಾದ ಔಷಧಗಳಿಂದ ತಯಾರಿಸಲ್ಪಟ್ಟ) ತುಪ್ಪವನ್ನು ಕುಡಿಯುವದರಿಂದಲೂ (ದೇಹಕ್ಕೆ) ಹಚ್ಚುವದರಿಂದಲೂ, (ರಕ್ತ ಕಟ್ಟಿಕೊಂಡ ಸಂಗತಿಯಲ್ಲಿ) ರಕ್ತವನ್ನು ತೆಗೆಯುವದರಿಂದಲೂ, ಸಾತ್ಮ್ಯವಾದ ಮದ್ಯಪಾನದಿಂದಲೂ, ಮಾಂಸರಸ ಕೂಡಿದ ಅನ್ನಗಳಿಂದಲೂ ನಾಶವಾಗುತ್ತದೆ. ಹೊಟ್ಟೆಯುಬ್ಬರವಿದ್ದಲ್ಲಿ, ರೋಗಿಗೆ ಮದ್ಯವು ಸಾತ್ಮ್ಯವಾಗಿದ್ದರೆ, ಮಾಂಸದ ರಸದೊಂದಿಗೆ (ದ್ರಾಕ್ಷೆಯ) ಮದ್ಯವನ್ನು ಕೂಡಿಸಿಕೊಂಡು ಭೋಜನಮಾಡುವದರಿಂದ ಜ್ವರವು ಶಾಂತವಾಗುತ್ತದೆ. ಕ್ಷತದಿಂದ ಉಂಟಾದ ಜ್ವರದಲ್ಲಿ ಕ್ಷತರೋಗದಲ್ಲಿ ಹೇಳಲ್ಪಟ್ಟ, ಮತ್ತು ವ್ರಣದಿಂದುಂಟಾದ ಜ್ವರದಲ್ಲಿ ವ್ರಣರೋಗದಲ್ಲಿ ಉಕ್ತವಾದ, ಚಿಕಿತ್ಸೆಯಿಂದ ಜ್ವರವು ಪರಿಹಾರವಾಗುತ್ತದೆ. ಅಭಿಘಾತಜ್ವರದಲ್ಲ ಉಷ್ಣವಲ್ಲದ ಪ್ರತಿಕ್ರಿಯೆಯನ್ನು ಮಾಡತಕ್ಕದ್ದು; ಅಥವಾ (ಕಫಕ್ಕೆ) ಚೊಗರು, (ಪಿತ್ತಕ್ಕೆ) ಸಿಹಿ, (ವಾತಕ್ಕೆ) ಸ್ನಿಗ್ಧಗುಣವುಳ್ಳ ಉಪಚಾರವನ್ನು ದೋಷಕ್ಕೆ ತಕ್ಕ ಹಾಗೆ ಮಾಡಬೇಕು.

ಷರಾ ಉಷ್ಣವು ವಾತಕ್ಕೆ ಪಥ್ಯವಾದರೂ ಅಭಿಘಾತಜದಲ್ಲಿ ಹೆಚ್ಚಾಗಿ ರಕ್ತವು ಕೆಟ್ಟಿರುತ್ತದೆಂಬದರಿಂದ ಉಷ್ಣವಲ್ಲದ ಪ್ರತಿಕ್ರಿಯೆ ವಿಧಿಸಲ್ಪಟ್ಟಿದೆ. ಮುಂದಿನ 125ನೇ ಸಂಖ್ಯೆ ನೋಡಿ

121. ಆಶ್ವಾಸೇನೇಷ್ಟಲಾಭೇನ ವಾಯೋಃ ಪ್ರಶಮನೇನ ಚ |
ಹರ್ಷಣೈಶ್ಚ ಶಮಂ ಯಾನ್ತಿ ಕಾಮಶೋಕಭಯಜ್ವರಾಃ ||
ಕಾಮ್ಯೈರರ್ಥೈರ್ಮನೋಜ್ಞೈಶ್ಚ ಪಿತ್ತಘ್ನೈಶ್ಚಾಪ್ಯುಪಕ್ರಮೈಃ |
ಸದ್ವಾಕ್ಯೈಃ ಶಾಮ್ಯತಿ ಹ್ಯಾಶು ಜ್ವರಃ ಕ್ರೋಧಸಮುತ್ಥಿತಃ
ಕಾಮಾತ್ಕ್ರೋಧಜ್ವರೋ ನಾಶಂ ಕ್ರೋಧಾತ್ಕಾಮಸಮುದ್ಭವಃ |
ಯಾತಿ ತಾಭ್ಯಾಮುಭಾಭ್ಯಾಂ ಚ ಭಯಶೋಕಸಮುತ್ಥಿತಃ ||
(ಚ. 472, 473)

ಕಾಮಶೋಕಾದಿಜ ಜ್ವರಗಳ ಚಿಕಿತ್ಸೆ

ಸಮಾಧಾನಕರವಾದ ಮಾತಿನಿಂದ, ಅಪೇಕ್ಷೆಯ ಪೂರ್ತಿಯಿಂದ, ವಾಯುವನ್ನು ಶಮನಮಾಡುವದರಿಂದ, ಮತ್ತು ಹರ್ಷವನ್ನುಂಟುಮಾಡುವದರಿಂದ ಕಾಮ-ಶೋಕ-ಭಯಗಳಿಂದುಂಟಾದ ಜ್ವರಗಳು ಶಮನವಾಗುತ್ತವೆ. ಕ್ರೋಧದಿಂದುಂಟಾದ ಜ್ವರವು ಮನೋಹರವಾದ ಮತ್ತು ಇಷ್ಟವಾದ ವಸ್ತುಗಳನ್ನು ಒದಗಿಸುವದರಿಂದಲೂ, ಪಿತ್ತಹರವಾದ ಉಪಕ್ರಮಗಳಿಂದಲೂ, ಒಳ್ಳೇ ಮಾತುಗಳಿಂದಲೂ, ಬೇಗನೆ ಶಮನವಾಗುತ್ತದೆ. ಕ್ರೋಧದಿಂದ

ಹುಟ್ಟಿದ ಜ್ವರವು ಕಾಮದಿಂದ, ಕಾಮದಿಂದ ಉತ್ಪನ್ನವಾದ ಜ್ವರವು ಕ್ರೋಧದಿಂದ, ಭಯ ಶೋಕಗಳಿಂದ ಉಂಟಾದ ಜ್ವರವು ಕಾಮಕ್ರೋಧಗಳೆರಡರಿಂದ ನಾಶಹೊಂದುತ್ತದೆ.

ಯದಿ ಪರ್ಯುಷಿತಂ ಧಾನ್ಯಸಲಿಲಂ ಸಿತಯಾ ಸಹ |
ಪ್ರಭಾತಸಮಯೇ ಪೀತಮನ್ತರ್ದಾಹಂ ವಿನಾಶಯೇತ್ || (ನಿ. ರ.)

ಕಾಮಜ್ವರದಲ್ಲಿ ಕೊತ್ತುಂಬರಿಯನ್ನು ರಾತ್ರಿ ನೀರಿನಲ್ಲಿ ನೆನೆಸಿ, ಮಾರಣೆ ದಿನ ಬೆಳಗ್ಗೆ ಆ ನೀರನ್ನು, ಸಕ್ಕರೆ ಕೂಡಿಸಿಕೊಂಡು, ಕುಡಿಯುವದರಿಂದ ಒಳಗಿನ ಜ್ವಾಲೆಯು ನಾಶವಾಗುವದು.

122. ತರುಣಜ್ವರಮಧ್ಯೇ ತು ಯುವತೀಸಂಗಮೇನ ಚ |
ಸ್ತ್ರೀಸಂಗದ (ಸುಖ) ಸನ್ನಿಲಕ್ಷಣ ಮತ್ತು ಚಿಕಿತ್ಸೆ
ಜಾಯತೇ ದಾರುಣೋ ದೋಷೋ ಹ್ಯಂಸವೈಕಲ್ಯಕಂಪತಾ ||
ವಕ್ಷೋಽನ್ತರೇ ಚ ಸನ್ತಾಪಃ ಪ್ರಲಾಪೋತ್ಥಾಪನಂ ಭ್ರಮಃ |
ಪಾಣಿಪಾದತಲೇ ಶೈತ್ಯಂ ದೋಷಃ ಸ್ತ್ರೀಸಂಗಮಾತ್ ಸ್ಮೃತಃ ||
ಪುತ್ರಜೀವಸ್ಯ ಮಜ್ಜಾಂ ಚ ಮಹಾಕನ್ದಂ ಚ ಜೀರಕಮ್ |
ಪಿಷ್ಟ್ವಾ ಕ್ಷೀರೇಣ ಪಾತವ್ಯಂ ದೋಷಂ ಸ್ತ್ರೀಸಂಗಜಂ ಹರೇತ್ ||
(ವೈ. ಸಾ. ಸಂ 97, 98)

ತರುಣಜ್ವರಕಾಲದ ಮಧ್ಯದಲ್ಲಿ ಸ್ತ್ರೀಸಂಗ ಮಾಡುವದರಿಂದ, ಕಠಿನವಾದ ದೋಷವು ಉಂಟಾಗುತ್ತದೆ, ಹೆಗಲಲ್ಲಿ ಬಲಹೀನತೆ, ನಡುಕು, ಎದೆಮಧ್ಯದಲ್ಲಿ ನೋವು, ಪ್ರಲಾಪ, ಆಗಾಗ್ಗೆ ಏಳುವದು, ಭ್ರಮೆ, ಹಸ್ತಪಾದಗಳ ಒಳತಟ್ಟು ಶೀತವಾಗಿರುವದು, ಇವು ಸ್ತ್ರೀಸಂಗದಿಂದುಂಟಾದ ದೋಷದ ಲಕ್ಷಣಗಳು ಎಂತ ತಿಳಿದಿದ್ದಾರೆ.

ಪುತ್ರಜೀವಿಮಣಿಯ ತಿರಳು, ಕೆಂಪು ಸೀರುಳ್ಳಿ ಮತ್ತು ಜೀರಿಗೆ. ಇವುಗಳನ್ನು ಹಾಲಿನೊಂದಿಗೆ ಅರೆದು ಕುಡಿಯಲು, ಸ್ತ್ರೀಸಂಗದಿಂದುಂಟಾದ ದೋಷವು ಪರಿಹಾರವಾಗುವದು.

123. ಜ್ವರಸ್ಸಂತಾಪದಾಹಶ್ಚ ನಾಡೀಕುಟಿಲವೇಗತಾ |
ವಿಷಮದೋಷದ (ಸನ್ನಿಯ) ಲಕ್ಷಣ ಮತ್ತು ಚಿಕಿತ್ಸೆ
ಲಕ್ಷಣ ಅಂತರ್ದಾಹೋ ಮದೋ ಮೂರ್ಚ್ಛಾ ದೋಷೇ ವಿಷಮ ಸಂಜ್ಞಿಕೇ || (ವೈ. ಸಾ. ಸಂ. 99)

ಜ್ವರ, ಸಂಕಟ, ಉರಿ, ಒಳಗೆ ಉರಿ, ಮದ, ಮೂರ್ಛೆ, ನಾಡಿಗಳು ವಕ್ರವಾಗಿ ಓಡುತ್ತಿರುವದು, ಇವು ವಿಷಮ ಎಂಬ ದೋಷದಲ್ಲಿ (ಸನ್ನಿಯಲ್ಲಿ) ಕಾಣುವ ಲಕ್ಷಣಗಳು

ಅರ್ಕಪುಷ್ಪಂ ದ್ರೋಣಪುಷ್ಪಂ ಶಿಗ್ರುಪುಷ್ಪಂ ಚ ಜೀರಕಮ್ |
ಚಿಕಿತ್ಸೆ ಧಾನ್ಯಕಂ ನಾಗರಂ ಕೋಲಾಂ ಮರಿಚಂ ಲಶುನಂ ಘನಾ (?ನಂ) ||
ಕೋ(?ಕು)ಷ್ಠಂ ಕುನಿಂಬರಾಸ್ನಾಂ ಚ ಪಿಷ್ಟ್ವಾ ಕೋಷ್ಣೇನ ವಾರಿಣಾ |
ಪಿಬೇದ್ವಿಷಮದೋಷಘ್ನಂ ಶಿಗ್ರುಮೂಲರಸೇನ ವಾ ||
(ವೈ. ಸಾ. ಸಂ. 100)

ಎಕ್ಕೆಹೂವು, ತುಂಬೆಹೂವು, ನುಗ್ಗೆಹೂವು, ಜೀರಿಗೆ, ಕೊತ್ತುಂಬರಿ, ಶುಂಠಿ, ಹಿಪ್ಪಲಿ, ಕಾಳುಮೆಣಸು, ಬೆಳ್ಳುಳ್ಳಿಕಾಳು, ಭದ್ರಮುಷ್ಟಿ, ಚಂಗಲಕೋಷ್ಟ, ನೆಲಬೇವು, ರಾಸ್ಮೆಗಡ್ಡೆ (ಅರತೆ), ಇವುಗಳನ್ನು ಬಿಸಿನೀರಿನಿಂದಾಗಲಿ, ನುಗ್ಗೆಬೇರಿನ ಕಷಾಯದಿಂದಾಗಲಿ ಅರೆದು ಸುಖೋಷ್ಣವಾಗಿ ಕುಡಿಸುವದರಿಂದ ವಿಷಮದೋಷವು ಪರಿಹಾರವಾಗುವದು.

ಷರಾ: 'ಘನಾ' ಎಂತ ಪದವಿಟ್ಟು 'ಭದ್ರಮುಷ್ಟಿ' ಎಂತ ಅರ್ಥ ಬರೆದದ್ದು ಕಾಣುತ್ತದೆ. 'ಘನಃ' ಎಂದರೆ ಕಾಡು ಉದ್ದಿನ ಗಿಡ

124. ದಿನೇ ದ್ವಿ-ತ್ರಿ-ಚತುರ್ವಾರಂ ಮುಹುಶ್ಶೀತಂ ಮುಹುರ್ಜ್ವರಃ |
ದಾಹೋ ಮೋಹಶ್ಶಿರೋರುಕ್ಸಜಿಹ್ವಾಕರಿನಕಣ್ಟಕಾ |
ದೋಷೇ ವಿಷಮಶೀತಾಖ್ಯೇ ಭವನ್ತೀತಿ ಜಗುರ್ಬುಧಾಃ ||

ವಿಷಮ ಶೀತ ಜ್ವರದ ಲಕ್ಷಣ ಮತ್ತು ಚಿಕಿತ್ಸೆ

ಲಕ್ಷಣ.

(ವೈ. ಸಾ. ಸಂ. 101)

ಒಂದು ದಿನದಲ್ಲಿ ಎರಡು, ಮೂರು, ನಾಲ್ಕು ಸರ್ತಿ ಒಮ್ಮೆ ಛಳಿ, ಒಮ್ಮೆ ಜ್ವರ, ಹೀಗೆ ಪದೇಪದೇ ಬರುವದು, ಉರಿ, ಮೂರ್ಛೆ, ತಲೆನೋವು, ನಾಲಿಗೆಯಲ್ಲಿ ಗಟ್ಟಿಯಾದ ಮುಳ್ಳುಗಳು ಏಳುವದು, ಈ ಲಕ್ಷಣಗಳು ವಿಷಮಶೀತ ಎಂಬ ದೋಷದಲ್ಲಿ ಉಂಟಾಗುತ್ತವೆ ಎಂತ ಬುದ್ಧಿವಂತರು ಹೇಳುತ್ತಾರೆ.

ಚಿಕಿತ್ಸೆ

ಶಾಬರ್ೀಪ್ಪಾಕಟುಕಾಕಟುತ್ರಯಮಿಸೀಭೂನಿಮ್ಬರಾಸ್ನಾಭಯಾ |
ಧಾನ್ಯಾಕಂ ಲಶುನಂ ಲವಂಗರಜನೀ ಕುಷ್ಠಂ ಚ ಜೀರದ್ವಯಮ್ ||
ಏಲಾದೀಪ್ಯಕಶಿಗ್ರುಮೂಲತುಲಸೀ ನಿರ್ಗುಣ್ಡಿಪತ್ರಂ ವೃಕೀ |
ಪಿಷ್ಟೈಸ್ತತ್ಸುರಸಾದ್ರವೇಣ ಪಿಬತಃ ಶೀತಂ ಹರೇದ್ವಕ್ರಗಮ್ ||

(ವೈ. ಸಾ. ಸಂ. 101)

ದೊಡ್ಡ ಹೊಂಗೆ (ಕಿರುಕಡಸಿಗೆ), ಕಟುಕರೋಹಿಣಿ, ತ್ರಿಕಟು, ಸಬ್ಬಸಿಗೆಬೀಜ, ನೆಲಬೇವು, ರಾಸ್ಮೆಗಡ್ಡೆ (ಅರತೆ), ಅಣಿಲೆಕಾಯಿಸಿಪ್ಪೆ, ಕೊತ್ತುಂಬರಿ, ಬೆಳ್ಳುಳ್ಳಿಕಾಳು, ಲವಂಗ, ಅರಸಿನ, ಚಂಗಲಕೋಷ್ಠ, ಜೀರಿಗೆ, ಕರಿಜೀರಿಗೆ, ಏಲಕ್ಕಿ, ಓಮ, ನುಗ್ಗೆಬೇರು, ತುಳಸಿ ಎಲೆ, ನೆಕ್ಕಿಸೊಪ್ಪು, ಪಾಡಾವಳಿಗಡ್ಡೆ. ಇವುಗಳನ್ನು ಚೂರ್ಣಿಸಿ, ತುಳಸೀ ರಸದಿಂದ ಅರೆದು, ಕುಡಿಯುವದರಿಂದ ವಿಷಮಶೀತವು ಪರಿಹಾರವಾಗುವದು.

ಷರಾ ಇವೆರಡೂ ಸನ್ನಿಪಾತವಿಶೇಷಗಳೆಂತ ವರ್ಣಿಸಲ್ಪಟ್ಟವೆ ಹಿಂದಿನ 8ನೇ 18ನೇ 23ನೇ ಸಂಖ್ಯೆಗಳನ್ನು ನೋಡಿದರೆ, ವಿಷಮಶೀತದಲ್ಲಿ ಪಿತ್ತವು ಕಫದ ಸಹಾಯವನ್ನು ಮತ್ತು ವಿಷಮದೋಷದಲ್ಲಿ ಪಿತ್ತವು ಪ್ರಧಾನವಾಗಿ ವಾಯುವಿನ ಸಹಾಯವನ್ನು ಪಡೆದಿರುತ್ತವೆ ಎಂತ ತಿಳಿಯಬಹುದು

ಈ ಸಂಖ್ಯೆಯ ಕಡೇ ಎರಡು ಶ್ಲೋಕಗಳಲ್ಲಿ ಕಂಡ ಸ್ಪಷ್ಟವಾದ ಅನೇಕ ತಪ್ಪುಗಳನ್ನು ತಿದ್ದಿಕೊಂಡದೆ

125. ಶ್ರಮಕ್ಷಯೇ ಚ ಭುಂಜೀತ ಘೃತಾಭ್ಯಕ್ತೋ ರಸೌದನಮ್ ||

(ಸು. 771)

ಶ್ರಮಾದಿಹೇತುಜ ಜ್ವರಗಳ ಚಿಕಿತ್ಸೆ

ವ್ಯಥಬನ್ಧಶ್ರಮಾತ್ಯಧ್ವಭಂಗಭ್ರಂಶಸಮುದ್ಭವಾನ್ ||
ಜ್ವರಾನುಪಾಚರೇತ್ಪೂರ್ವಂ ಸುಸ್ನಿಗ್ಧಕ್ಷೀರಭೋಜನೈಃ |

(ಚಿ. ಸಾ. ಸಂ. 48)

ಅಧ್ವಶ್ರಾನ್ತೇಷು ವಾಽಭ್ಯಂಗಂ ದಿವಾ ನಿದ್ರಾಂ ಚ ಕಾರಯೇತ್ ||
(ಭಾ. ಪ್ರ. 304)

ಶ್ರಮದಲ್ಲಿಯೂ, (ಧಾತು) ಕ್ಷಯದಲ್ಲಿಯೂ, ರೋಗಿಯು ತುಪ್ಪ ಹಚ್ಚಿಕೊಂಡು ಅಭ್ಯಂಗನಮಾಡಿ, ಮಾಂಸರಸದಿಂದ ಉಣ್ಣಬೇಕು.

ಷರಾ 'ಘೃತಾಭ್ಯಕ್ತಂ' ಎಂತ ಪಾಠಾಂತರ ಉಂಟು ಆಗ್ಗೆ ತುಪ್ಪ ಕೂಡಿಸಿಕೊಂಡು ಮಾಂಸರಸದಿಂದ ಉಣ್ಣಬೇಕು ಎಂತ ಅರ್ಥವಾಗುತ್ತದೆ, ಅಭ್ಯಂಗನದ ಪ್ರಸ್ತಾವ ಇಲ್ಲ ಶ್ರಮಕ್ಷಯಗಳಲ್ಲಿ ವಾತವೇ ಪ್ರಧಾನದೋಷವಾದ್ದರಿಂದ ತುಪ್ಪ ಕೂಡಿಸಿಕೊಂಡು ಸತ್ವವುಳ್ಳ ಆಹಾರವನ್ನು ತೆಗೆದುಕೊಳ್ಳಬೇಕೆಂಬದು ಸರಿಯಾದ್ದು. ಅನಂತರದ ಶ್ಲೋಕದಲ್ಲಿ ಸುಸ್ನಿಗ್ಧ ಕ್ಷೀರಭೋಜನ ವಿಧಿಸಲ್ಪಟ್ಟದೆ.

ಚುಚ್ಚಿದ್ದು, ಕಟ್ಟಿದ್ದು, ಶ್ರಮ, ಅತಿಯಾದ ದಾರಿನಡಿಕೆ, ಮುರಿದದ್ದು ಮತ್ತು ಬಿದ್ದದ್ದು, ಇವುಗಳಿಂದ ಉತ್ಪನ್ನವಾದ ಜ್ವರಗಳನ್ನು ಮುಂದಾಗಿ ಒಳ್ಳೇ ಸ್ನಿಗ್ಧವಾದ ಮತ್ತು ಹಾಲು ಕೂಡಿದ ಭೋಜನಗಳಿಂದ ಉಪಚರಿಸತಕ್ಕದ್ದು.

ಷರಾ 'ಸುಸ್ನಿಗ್ಧ ಕ್ಷೀರಭೋಜನೈಃ' ಎಂಬಲ್ಲಿ 'ಕ್ಷೀರಮಾಂಸರಸೌದನೈಃ' ಎಂತ ಪಾಠಾಂತರ ಕಾಣುತ್ತದೆ ಆಗ್ಗೆ ಅನ್ನದೊಂದಿಗೆ ಹಾಲಿನಿಂದಲೂ ಮಾಂಸರಸದಿಂದಲೂ ಉಪಚರಿಸಬೇಕೆಂತ ಅರ್ಥವಾಗುತ್ತದೆ

ದಾರಿನಡಿಕೆಯಿಂದ ಸೋತವರ ಸಂಗತಿಯಲ್ಲಿ ಅಭ್ಯಂಗನ ಮಾಡಿಸಿ, ಹಗಲುನಿದ್ರೆ ಮಾಡಿಸತಕ್ಕದ್ದು.

ಷರಾ ಹಿಂಟಿನ 120ನೇ ಸಂಖ್ಯೆ ನೋಡಿ

126. ಔಷಧೀಗನ್ಧವಿಷಜೌ ವಿಷಪಿತ್ತಪ್ರಸಾಧನೈಃ |
ಗಂಧವಿಷಜ ಜ್ವರಗಳ ಚಿಕಿತ್ಸೆ ಜಯೇತ್ಕಷಾಯಂ ಚ ಹಿತಂ ಸರ್ವಗನ್ಧಕೃತಂ ತಥಾ || (ಸು. 774)
ಚಾತುರ್ಜಾತಕಕರ್ಪೂರಂ ಕಂಕೋಲಾಗುರುಕುಂಕುಮಮ್ |
ಲವಂಗಸಹಿತಂ ಚೈವ ಸರ್ವಗನ್ಧಂ ವಿನಿರ್ದಿಶೇತ್ || (ಭಾ. ಪ್ರ. 304)

(ವಿಷವೃಕ್ಷ ಮೊದಲಾದ) ಔಷಧಿಗಳ ವಾಸನೆಯಿಂದ ಮತ್ತು ವಿಷದಿಂದ ಹುಟ್ಟಿದ ಜ್ವರಗಳನ್ನು ವಿಷವನ್ನೂ ಪಿತ್ತವನ್ನೂ ಪರಿಹರಿಸತಕ್ಕ ಪ್ರತಿಕ್ರಿಯೆಗಳನ್ನು ಮಾಡಿ ಜಯಿಸತಕ್ಕದ್ದು; ಮತ್ತು ಸರ್ವಗಂಧದಿಂದ ಮಾಡಿದ ಕಷಾಯವು ಹಿತವಾಗುವದು.

ಸರ್ವಗಂಧ ಎಂಬದು ಚಾತುರ್ಜಾತ, ಕರ್ಪೂರ, ಗಂಧಮೆಣಸು (ಬಾಲಮೆಣಸು), ಅಗಿಲುಗಂಧ, ಕುಂಕುಮಕೇಸರ, ಲವಂಗ, ಇವುಗಳ ಸಮುದಾಯಕ್ಕೆ ಆಗಿರುತ್ತದೆ.

ಷರಾ ಚಾತುರ್ಜಾತ ಎಂದರೆ ಲವಂಗಪಟ್ಟೆ, ಏಲಕ್ಕಿ, ನಾಗಕೇಸರ ಮತ್ತು ಲವಂಗಪತ್ರೆ (ದಾಲ್ಚೀನಿಎಲೆ).

127. ಮದ್ಯಾಜೀರ್ಣಂ ಸಮಾಲೋಕ್ಯ ವಾಮಯೇಚ್ಛರ್ಕರೋದಕೈಃ |
ಮದ್ಯೋದ್ಭವ ಜ್ವರ ಚಿಕಿತ್ಸೆ ಪಿತ್ತಜ್ವರೋಪಚಾರೇಣ ಮದ್ಯಜ್ವರಮುಪಾಚರೇತ್ ||
ಮದ್ಯಪಾನಜ್ವರಸ್ಯಾದೌ ಲಂಘನಂ ನೈವ ಕಾರಯೇತ್ || (ನಿ. ರ.)

ಮದ್ಯ ಜೀರ್ಣವಾಗಲಿಲ್ಲ ಎಂತ ಕಂಡರೆ ಸಕ್ಕರೆನೀರನ್ನು ಕುಡಿಸಿ ವಾಂತಿಮಾಡಿಸಬೇಕು. ಮದ್ಯಜ ಜ್ವರವನ್ನು ಪಿತ್ತಜ್ವರಕ್ಕೆ ಉಕ್ತವಾದ ಉಪಚಾರಗಳಿಂದ ಉಪಚರಿಸಬೇಕು. ಮದ್ಯಜ ಜ್ವರದ ಆರಂಭದಲ್ಲಿ ಲಂಘನವನ್ನು ಮಾಡಿಸಲೇಬಾರದು.

128. ವಿಸರ್ಪೇಣ ಜ್ವರೋ ಯಶ್ಚ ಯಶ್ಚ ವಿಸ್ಫೋಟಕಜ್ವರಃ ।
ತತ್ರಾದೌ ಸರ್ಪಿಷಃ ಪಾನಂ ಕಫಪಿತ್ತೋತ್ತರೇ ಭವೇತ್ ॥
ನಿಮ್ಬದಾರುಕಷಾಯಂ ವಾ ಹಿತಂ ಸೌಮನಸಂ ತಥಾ ।
* * * ರೋಗೋತ್ಥಾನಪ್ರಕೋಪಾಭ್ಯಾಂ ಯೋ ಜ್ವರೋ ಜಾಯತೇ ನೃಣಾಮ್ ॥
ಶಮಯೇತ್ಪಾಚಯೇದ್ವಾಪಿ ಯಥಾಯೋಗ್ಯಂ ಚಿಕಿತ್ಸಕಃ ।
ಸ್ತ್ರೀಣಾಮಪ್ಯಪ್ರಜಾತಾನಾಂ ಪ್ರಜಾತಾನಾಂ ತಥಾಽಹಿತೈಃ ॥
ಸ್ತನ್ಯಾವತರಣೇ ಚೈವ ಜ್ವರೋ ದೋಷೈಃ ಪ್ರಕುಪ್ಯತಿ ।
ತಸ್ಯ ಪ್ರಶಮನಂ ಕಾರ್ಯಂ ಯಥಾದೋಷವಿಧಾನತಃ ॥

ಇತರ ಜ್ವರಗಳ ಚಿಕಿತ್ಸೆ

(ಚಿ. ಸಾ. ಸಂ. 48)

ವಿಸರ್ಪ ರೋಗದಲ್ಲಿ ಮತ್ತು ವಿಸ್ಫೋಟಕ ರೋಗದಲ್ಲಿ ಕಫಪಿತ್ತಾಧಿಕ್ಯದಿಂದ ಯಾವ ಜ್ವರ ಉಂಟಾಗುತ್ತದೋ, ಅದಕ್ಕೆ ಆರಂಭದಲ್ಲಿ ಘೃತಪಾನ ಮಾಡಿಸುವದು, ಅಥವಾ ಕಹಿ ಬೇವು ಮತ್ತು ದೇವದಾರು, ಇವುಗಳ ಕಷಾಯ, ಅಥವಾ ಹೊಂಗೆಬೇರಿನ (ಅಥವಾ ಚಕ್ಕೆಯ) ಕಷಾಯ (ಪಾನಮಾಡುವದು) ಹಿತವಾಗುತ್ತದೆ. ರೋಗಗಳು ಹುಟ್ಟುವಾಗ್ಗೆ ಮತ್ತು ಅವುಗಳ ಪ್ರಕೋಪದಿಂದ ಉಂಟಾಗುವ ಜ್ವರಕ್ಕೆ ಯಥಾಯೋಗ್ಯವಾಗಿ ಪಾಚನವಿಧಿಯನ್ನು ಅಥವಾ ಶಮನವಿಧಿಯನ್ನು ವೈದ್ಯನು ನಡಿಸತಕ್ಕದ್ದು. ಹೆರದೆ ಕಷ್ಟಪಡುವ ಸ್ತ್ರೀಯರಿಗೆ ಮತ್ತು ಪ್ರಸೂತಿಯನಂತರ ಅವರಿಗೆ ಅಪಥ್ಯದಿಂದ ಮತ್ತು ಮೊಲೆಹಾಲು ಆಗುವಾಗ್ಗೆ ದೋಷಗಳ ಕೋಪದಿಂದ ಜ್ವರ ಉಂಟಾಗುವದುಂಟು. ಅದರ ಶಮನವನ್ನು ಆಯಾ ದೋಷಕ್ಕೆ ಉಕ್ತವಾದ ಕ್ರಮದಿಂದ ಸಂಪಾದಿಸತಕ್ಕದ್ದು.

129. ಪಟೋಲಮುಸ್ತಾಮೃತವಲ್ಲಿವಾಸಕಂ ಸನಾಗರಂ ಧಾನ್ಯಕಿರಾತತಿಕ್ತಕಮ್ ।
ಕಷಾಯಮೇಷಾಂ ಮಧುನಾ ಪಿಬೇನ್ನರೋ ನಿವಾರಯೇದ್ದುರ್ಜಲದೋಷಮುಲ್ಬಣಮ್ ॥
ಅರುಚಿಮನಲಮಾಂದ್ಯಂ ಪೀನಸಶ್ವಾಸಕಾಸಾ-
ನುದರಮುದಕದೋಷಾನಾಶು ಹನ್ಯಾದಶೇಷಾನ್ ।
ಜನಯತಿ ತನುಕಾಂತಿಂ ಚಿತ್ತನೇತ್ರಪ್ರಸಾದಂ
ಪಲಪರಿಮಿತಶುಂಠೀಕ್ಷೌದ್ರಸಿದ್ಧಃ ಕಷಾಯಃ ॥
ಕಿರಾತತಿಕ್ತಾತ್ರಿವೃದಂಬುಪಿಪ್ಪಲೀವಿಡಂಗವಿಶ್ವಾಕಟುರೋಹಿಣೀರಜಃ ।
ನಿಹನ್ತಿ ಲೀಢಂ ಮಧುನಾಽತಿಸತ್ವರಂ ಸುದುಸ್ತರಂ ದುರ್ಜಲದೋಷಜಂ ಜ್ವರಮ್ ॥
ಭೋಜನಾಗ್ರೇ ಸದೈರ್ಭುಕ್ತಂ ಶುಂಠ್ಯಜಾಜ್ಯಭಯೋತ್ಥಿತಮ್ ।
ನಾನಾದೇಶಸಮುದ್ಭೂತಂ ವಾರಿದೋಷಮಪೋಹತಿ ॥
ಹರೀತಕೀ ನಿಮ್ಬಪತ್ರಂ ನಾಗರಂ ಸೈನ್ಧವೋಽನಲಃ ।

ಕೆಟ್ಟ ನೀರಿನಿಂದ ಹುಟ್ಟಿದ ಜ್ವರಕ್ಕೆ ಕಷಾಯಾದಿಗಳು.

ಏಷಾಂ ಚೂರ್ಣಂ ಸದಾ ಖಾದೇದ್ದುರ್ಜಲಜ್ವರಶಾನ್ತಯೇ ||
(ಭಾ. ಪ್ರ. 312, 313)

ಪಟೋಲಾದಿ ಕಷಾಯ

(1) ಕಹಿಪಡುವಲು, ಭದ್ರಮುಷ್ಟಿ, ಅಮೃತಬಳ್ಳಿ, ಆಡುಸೋಗೆ, ಶುಂಠಿ, ಕೊತ್ತುಂಬರಿ, ಕಿರಾತಕಡ್ಡಿ (ಅಥವಾ ನೆಲಬೇವು), ಇವುಗಳ ಕಷಾಯವನ್ನು, ಜೇನು ಕೂಡಿಸಿಕೊಂಡು, ಪಾನಮಾಡುವದರಿಂದ ಕಠಿಣವಾದ ಕೆಟ್ಟ ನೀರಿನ ದೋಷವು ನಿವಾರಿಸಲ್ಪಡುತ್ತದೆ.

ಶುಂಠೀ ಕಷಾಯ

(2) ಒಂದು ಪಲ ಶುಂಠಿಯ ಕಷಾಯವನ್ನು, ಜೇನು ಕೂಡಿಸಿಕೊಂಡು, ಪಾನಮಾಡುವದರಿಂದ ಅರುಚಿ, ಅಗ್ನಿಮಾಂದ್ಯ, ನೆಗಡಿ, ಉಬ್ಬಸ, ಕೆಮ್ಮು, ಉದರ ವ್ಯಾಧಿ, ಮತ್ತು ಎಲ್ಲಾ ನೀರಿನ ದೋಷಗಳು ಬೇಗನೆ ನಾಶವಾಗುವವಲ್ಲದೆ, ಅದು ದೇಹದಲ್ಲಿ ಕಾಂತಿಯನ್ನೂ, ಮನಸ್ಸಿನ ಮತ್ತು ಕಣ್ಣುಗಳ ಪ್ರಸನ್ನತೆಯನ್ನೂ ಉಂಟುಮಾಡುತ್ತದೆ.

ಕಿರಾತಾದಿ ಚೂರ್ಣ

(3) ಕಿರಾತಕಡ್ಡಿ (ಅಥವಾ ನೆಲಬೇವು), ತಿಗಡೆ, ಮುಡಿವಾಳ, ಹಿಪ್ಪಲಿ, ವಾಯು ವಿಳಂಗ, ಶುಂಠಿ, ಕಟುಕರೋಹಿಣಿ, ಇವುಗಳನ್ನು ನುಣ್ಣಗಾಗಿ ಚೂರ್ಣಿಸಿ ಜೇನಿನಲ್ಲಿ ಕಲಸಿ ನೆಕ್ಕಲು, ಕೆಟ್ಟ ನೀರಿನ ದೋಷದಿಂದ ಹುಟ್ಟಿದ ಬಹು ಕಠಿಣವಾದ ಜ್ವರವು ಅತಿಬೇಗನೆ ಪರಿಹಾರವಾಗುತ್ತದೆ.

ಶುಂಠ್ಯಾದಿ ಚೂರ್ಣ

(4) ಶುಂಠಿ, ಜೀರಿಗೆ, ಅಣಿಲೆಕಾಯಿಸಿಪ್ಪೆ, ಇವುಗಳ ಚೂರ್ಣವನ್ನು ಅನ್ನದೊಂದಿಗೆ ಕಲಸಿ, ಊಟದ ಆರಂಭದಲ್ಲಿ ನಿತ್ಯದಲ್ಲು ಉಣ್ಣಲು, ನಾನಾ ದೇಶದ ನೀರಿನ ದೋಷವು ನಿವಾರಿಸಲ್ಪಡುವದು.

ಹರೀತಕ್ಯಾದಿ ಚೂರ್ಣ

(5) ಅಣಿಲೆಕಾಯಿಸಿಪ್ಪೆ, ಕಹಿಬೇವಿನ ಎಲೆ, ಶುಂಠಿ, ಸೈಂಧವಲವಣ, ಚಿತ್ರಮೂಲ, ಇವುಗಳ ಚೂರ್ಣವನ್ನು ನಿತ್ಯದಲ್ಲು ತಿನ್ನುವದರಿಂದ ಕೆಟ್ಟ ನೀರಿನಿಂದುಂಟಾದ ಜ್ವರವು ಶಾಂತವಾಗುವದು.

ಮರುಕಳಿಸಿ ಬಂದ ಜ್ವರದ ಚಿಕಿತ್ಸೆ

130. ಅಸಂಜಾತಬಲೋ ಯಸ್ತು ಜ್ವರಮುಕ್ತೋ ನಿಷೇವತೇ |
ವರ್ಜ್ಯಮೇತನ್ನವಸ್ತಸ್ಯ ಪುನರಾವರ್ತತೇ ಜ್ವರಃ ||
ದುರ್ಹೃತೇಷು ಚ ದೋಷೇಷು ಯಸ್ಯ ವಾ ವಿನಿವರ್ತತೇ |
ಸ್ವಲ್ಪೇನಾಪ್ಯಪಚಾರೇಣ ತಸ್ಯ ವ್ಯಾವರ್ತತೇ ಪುನಃ ||
ಚಿರಕಾಲಪರಿಕ್ಲಿಷ್ಟಂ ದುರ್ಬಲಂ ದೀನಚೇತಸಮ್ |
ಅಚಿರೇಣೈವ ಕಾಲೇನ ಸ ಹನ್ತಿ ಪುನರಾಗತಃ ||
ಅಥವಾಪಿ ಪರೀಪಾಕಂ ಧಾತುಷ್ವೇವ ಕ್ರಮಾನ್ಮಲಾಃ |
ಯಾನ್ತಿ ಜ್ವರಮಕುರ್ವನ್ತಸ್ತೇ ತಥಾಪ್ಯಪಕುರ್ವತೇ ||
ದೀನತಾಂ ಶ್ವಯಥುಂ ಗ್ಲಾನಿಂ ಪಾಂಡುತಾಂ ನಾನ್ನಕಾಮತಾಮ್ |
ಕಂಡೂರುತ್ಕೋಠಪಿಡಕಾಃ ಕುರ್ವನ್ತ್ಯಗ್ನಿಂ ಚ ತೇ ಮೃದುಮ್ ||

ಏವಮನ್ಯೇ ऽಪಿ ಚ ಗದಾ ವ್ಯಾವರ್ತ್ತನ್ತೇ ಪುನರ್ಗತಾಃ |
ಅನಿರ್ಘಾತೇನ ದೋಷಾಣಾಮಲ್ಪೈರಪ್ಯಹಿತೈರ್ನೃಣಾಮ್ ||
ನಿವೃತ್ತೇ ऽಪಿ ಜ್ವರೇ ತಸ್ಮಾದ್ಯಥಾವಸ್ಥಂ ಯಥಾಬಲಮ್ |
ಯಥಾಪ್ರಾಣಂ ಹರೇದ್ದೋಷಂ ಪ್ರಯೋಗೈರ್ವಾ ಶಮಂ ನಯೇತ್ ||
ಮೃದುಭಿಃ ಶೋಧನೈಃ ಶುದ್ಧಿರ್ಯಾಪನಾ ವಸ್ತಯೋ ಹಿತಾಃ |
ಹಿತಾಶ್ಚ ಲಘವೋ ಯೂಷಾ ಜಾಂಗಲಾಮಿಷಜಾ ರಸಾಃ ||
ಅಭ್ಯಂಗೋದ್ವರ್ತನಸ್ನಾನಧೂಪನಾಭ್ಯಂಜನಾನಿ ಚ |
ಹಿತಾನಿ ಪುನರಾವೃತ್ತೇ ಜ್ವರೇ ತಿಕ್ತಘೃತಾನಿ ಚ ||
ಗುರ್ವರ್ಭಿಷ್ಯನ್ದ(?ನ್ದ್ಯ)ಸಾತ್ಮ್ಯಾನಾಂ ಭೋಜನಾತ್ಪುನರಾಗತೇ |
ಲಂಘನೋಷ್ಣೋಪಚಾರಾದಿಃ ಕ್ರಮಃ ಕಾರ್ಯಶ್ಚ ಪೂರ್ವವತ್ ||
ಕಿರಾತತಿಕ್ತಕಂ ತಿಕ್ತಾ ಮುಸ್ತಂ ಪರ್ಪಟಕೋ ऽಮೃತಾ |
ಘ್ನನ್ತಿ ಪೀತಾನಿ ಚಾಭ್ಯಾಸಾತ್ಪುನರಾವರ್ತಕಂ ಜ್ವರಮ್ ||

(ಚ. 473, 474)

ಜ್ವರ ಬಿಟ್ಟ ಮೇಲೆ ಬಲ ಹುಟ್ಟುವದಕ್ಕೆ ಮೊದಲೇ, (ವಿರುದ್ಧವಾದ ಅನ್ನಪಾನ, ಮೈಥುನ, ವ್ಯಾಯಾಮ, ಸ್ನಾನ, ಅತಿಯಾದ ಊಟ, ಮುಂತಾದ) ವರ್ಜ್ಯವೆಂತ ಹೇಳಲ್ಪಟ್ಟವುಗಳನ್ನು ಯಾವಾತನು ಉಪಯೋಗಿಸುತ್ತಾನೋ, ಅವನಿಗೆ ಪುನಃ ಜ್ವರವು ಹೊಸತಾಗಿ ಬರುತ್ತದೆ; ಅಥವಾ ದೋಷಗಳು ಸರಿಯಾಗಿ ತೆಗೆಯಲ್ಪಡದಿರುವಾಗ ಯಾರಿಗೆ ಜ್ವರವು ಬಿಡುತ್ತದೋ, ಅವನಿಗೆ ಬಹು ಅಲ್ಪವಾದ ಅಪಚಾರದಿಂದ ಸಹ ಜ್ವರವು ಮರುಕಳಿಸಿ ಪುನಃ ಬರುತ್ತದೆ. ಹಾಗೆ ಮರುಕಳಿಸಿ ಬಂದ ಜ್ವರವು ಬಹುಕಾಲದ ಪೀಡೆದೆಸೆಯಿಂದ ನೊಂದು, ದುರ್ಬಲನೂ ಮನೋಬಲ ಕುಂದಿದವನೂ ಆದ ಆ ರೋಗಿಯನ್ನು ಸ್ವಲ್ಪಕಾಲದೊಳಗೆ ಕೊಲ್ಲುತ್ತದೆ, ಅಥವಾ ದೋಷಗಳು ಜ್ವರವನ್ನುಂಟುಮಾಡದೆನೇ (ರಸಾದಿ) ಧಾತುಗಳಲ್ಲಿ ಕ್ರಮದಿಂದ ಪರಿಪಾಕ ಹೊಂದುವವು; ಹಾಗಾದರೂ ಅವು ಕೆಡುಕನ್ನುಂಟುಮಾಡುತ್ತವೆ. ಅವುಗಳಿಂದ ನಿಶ್ಚೈತನ್ಯ, ಶೋಫೆ, ಗ್ಲಾನಿ, ಪಾಂಡು, ಅನ್ನರುಚಿ ಇಲ್ಲದಿರುವಿಕೆ, ತುರಿ, ಉತ್ಕೋಠ ಎಂಬ ದಡಿಕೆವ್ಯಾಧಿ (LIನೇ ಅಧ್ಯಾಯ ನೋಡಿ), ಬೊಕ್ಕೆಗಳು ಮತ್ತು ಅಗ್ನಿಮಾಂದ್ಯ ಉಂಟಾಗುತ್ತವೆ; ಮತ್ತು ಹೀಗೆಯೆ ಬೇರೆ ವಾಸಿಯಾದಂಥ ರೋಗಗಳು ಸಹ, ದೋಷಗಳು ನಾಶವಾಗದ ಕಾರಣದಿಂದ, ಅಲ್ಪವಾದ ಅಹಿತ ಸೇವನದಿಂದ ಪುನಃ ಜನರಲ್ಲಿ ಮರುಕಳಿಸುತ್ತವೆ. ಆದ್ದರಿಂದ ಜ್ವರ ನಿವೃತ್ತಿಯಾದ ಮೇಲೆಯೂ ಉಳಿದ ದೋಷವನ್ನು ಅವಸ್ಥೆ, ದೋಷದ ಬಲ ಮತ್ತು ರೋಗಿಯ ಶಕ್ತಿ ನೋಡಿಕೊಂಡು, ಯುಕ್ತವಾದ ಪ್ರಯೋಗಗಳಿಂದ ತೆಗೆದುಬಿಡಬೇಕು ಅಥವಾ ಅದರ ಶಮನವನ್ನು ಮಾಡಬೇಕು. ಮೃದುವಾದ ಶೋಧನಕ್ರಮಗಳಿಂದ ಶುದ್ಧಿ ಮತ್ತು ಯಾಪನರೂಪವಾದ ವಸ್ತಿಗಳು (1ನೇ ಭಾಗದ XXII-9 ನೋಡಿ) ಹಿತವಾಗುತ್ತವೆ. ಲಘುವಾದ ಸಾರುಗಳು, ಜಾಂಗಲಮಾಂಸದ ರಸಗಳು, ಅಭ್ಯಂಗ, ಮೈತಿಕ್ಕುವ ಕ್ರಮ, ಸ್ನಾನ, ಹೊಗೆ ಕೊಡುವದು, ಅಂಜನಗಳು, ಮತ್ತು ಕಹಿ ಔಷಧಗಳಿಂದ ತಯಾರಿಸಲ್ಪಟ್ಟ ತುಪ್ಪಗಳು ಸಹ ಮರುಕಳಿಸಿ ಬಂದ ಜ್ವರದಲ್ಲಿ ಹಿತವಾದವು. ಗುರುವಾದ ಅಭಿ

ಷ್ಯಂದ ಗುಣವುಳ್ಳ ಮತ್ತು ಸಾತ್ಮ್ಯವಲ್ಲದ ಆಹಾರಗಳನ್ನು ಉಣ್ಣುವದರಿಂದ ಮರುಕಳಿಸಿ ಬಂದ ಜ್ವರದಲ್ಲಿ ಮೊದಲಿನಂತೆ ಲಂಘನ, ಉಷ್ಣವಾದ ಉಪಚಾರ, ಮುಂತಾದ ಕ್ರಮವನ್ನು ನಡಿಸತಕ್ಕದ್ದು. ಕಿರಾತಕಡ್ಡಿ (ಅಥವಾ ನೆಲಬೇವು), ಕಟುಕರೋಹಿಣಿ, ಭದ್ರಮುಷ್ಟಿ, ಪರ್ಪಾಟಕ, ಅಮೃತಬಳ್ಳಿ, ಇವುಗಳ(ಕಷಾಯ ಅಥವಾ ತುಪ್ಪವ)ನ್ನು ಅಭ್ಯಾಸವಾಗಿ ಪಾನ ಮಾಡುವದರಿಂದ ಮರುಕಳಿಸಿ ಬಂದ ಜ್ವರವು ನಾಶವಾಗುವದು.

ತಿಕ್ತೋಶೀರಬಲಾಧಾನ್ಯಪರ್ಪಟಾಮ್ಬೋಧರೈಃ ಕೃತಃ |
ಕ್ವಾಥಃ ಪುನಃ ಸಮಾಯಾತಂ ಜ್ವರಂ ಶೀಘ್ರಂ ನಿವಾರಯೇತ್ ||
ಗುಡೂಚೀಧನಿಕಾರಿಷ್ಟಪದ್ಮಕೋ ರಕ್ತಚಂದನಮ್ |
ಗುಡೂಚ್ಯಾದಿಗಣಃ ಕ್ವಾಥಃ ಸರ್ವಜ್ವರಹರಃ ಪರಃ ||
ದೀಪನೋ ದಾಹಹೃಲ್ಲಾಸತೃಷ್ಣಾಛರ್ದ್ಯರುಚಿಂ ಜಯೇತ್ || (ನಿ. ರ.)

(೧) ಕಟುಕರೋಹಿಣಿ, ಲಾಮಂಚ, ಕಲ್ಲಂಗಡಲೆಬೇರು, ಕೊತ್ತುಂಬರಿ, ಪರ್ಪಾಟಕ, ಭದ್ರಮುಷ್ಟಿ, ಇವುಗಳ ಕಷಾಯವು ಮರುಕಳಿಸಿ ಬಂದ ಜ್ವರವನ್ನು ಬೇಗನೆ ನಿವಾರಿಸುವದು.

(೨) ಅಮೃತಬಳ್ಳಿ, ಕೊತ್ತುಂಬರಿ, ಕಹಿಬೇವು, ಪದ್ಮಕ, ರಕ್ತಚಂದನ, ಈ ಗುಡೂಚ್ಯಾದಿ ಗಣದ ಕಷಾಯವು ಸರ್ವ ಜ್ವರಗಳನ್ನು ಪರಿಹರಿಸುವದಕ್ಕೆ ಉತ್ತಮವಾದ್ದು, ಉರಿ, ಎದೆಯ ತಲ್ಲಣ, ಬಾಯಾರಿಕೆ, ವಾಂತಿ ಮತ್ತು ಅರುಚಿ, ಇವುಗಳನ್ನೂ ಜಯಿಸುವದು; ಮತ್ತು ದೀಪನಕಾರಿ.

131. ಛರ್ದಿಮೂರ್ಚ್ಛಾಪಿಪಾಸಾದೀನವಿರೋಧಾಜ್ಜ್ವರಸ್ಯ ತು |
ಉಪದ್ರವಾನ್ ಜಯೇಚ್ಚಾಪಿ ಪ್ರತ್ಯನೀಕೇನ ಹೇತುನಾ ||
ವಿಶೇಷಮಪರಂ ಚಾತ್ರ ಶೃಣೂಪದ್ರವನಾಶನಮ್ |
ಮಧುಕಂ ರಜನೀ ಮುಸ್ತಂ ದಾಡಿಮಂ ಚಾಮ್ಲವೇತಸಮ್ |
ಅಂಜನಂ ತಿನ್ತಿಡೀಕಂ ಚ ನಲದಂ ಪತ್ರಮುತ್ಪಲಮ್ |
ತ್ವಚಂ ವ್ಯಾಘ್ರನಖಂ ಚೈವ ಮಾತುಲುಂಗರಸೋ ಮಧು |
ದಿಹ್ಯಾದೇಭಿರ್ಜ್ವರಾರ್ತಸ್ಯ ಮಧುಶುಕ್ತಯುತೈಃ ಶಿರಃ |
ಶಿರೋಽಭಿತಾಪಸಮ್ಮೋಹವಮಿಹಿಕ್ಕಾಪ್ರವೇಪಥೂನ್ ||
ಪ್ರದೇಹೋ ನಾಶಯತ್ಯೇಷ ಜ್ವರಿತಾನಾಮುಪದ್ರವಾನ್ |
ಮಧೂಕಮಥ ಹ್ರೀಬೇರಮುತ್ಪಲಾನಿ ಮಧೂಲಿಕಾಮ್ ||
ಲೀಢಾ(ಢ್ವಾ) ಚೂರ್ಣಾನಿ ಮಧುನಾ ಸರ್ಪಿಷಾ ಚ ಜಯೇದ್ವಮಿಮ್ |
ಕಫಪ್ರಸೇಕಾಸ್ಯಕ್ಲಿಪ್ತಹಿಕ್ಕಾಶ್ವಾಸಾಂಶ್ಚ ದಾರುಣಾನ್ ||
ಲಿಹನ್ ಜ್ವರಾರ್ತಸ್ತ್ರಿಫಲಾಂ ಪಿಪ್ಪಲೀಂ ಚ ಸಮಾಕ್ಷಿಕಾಮ್ |
ಕಾಸೇ ಶ್ವಾಸೇ ಚ ಮಧುನಾ ಸರ್ಪಿಷಾ ಸ ಸುಖೀ ಭವೇತ್ ||
ವಿದಾರೀ ದಾಡಿಮಂ ಲೋಧ್ರಂ ದಾಧಿತ್ಥಂ ಬೀಜಪೂರಕಮ್ |
ಏಭಿಃ ಪ್ರದಿಹ್ಯಾನ್ಮೂರ್ಧಾನಂ ತೃಡ್ದಾಹಾರ್ತಸ್ಯ ದೇಹಿನಃ ||

ಜ್ವರೋಪದ್ರವಗಳ ಚಿಕಿತ್ಸೆ

ದಾಡಿಮಸ್ಯ ಸಿತಾಯಾಶ್ಚ ದ್ರಾಕ್ಷಾಮಲಕಯೋಸ್ತಥಾ ।
ವೈರಸ್ಯೇ ಧಾರಯೇತ್ಕಲ್ಕಂ ಗಂಡೂಷಂ ಚ ಯಥಾಹಿತಮ್ ॥
ಕ್ಷೀರೇಕ್ಷುರಸಮಾಧ್ವೀಕಸರ್ಪಿಸ್ತೈಲೋಷ್ಣವಾರಿಭಿಃ ।
ಶೂನ್ಯೇ ಮೂರ್ಧ್ನಿ ಹಿತಂ ನಸ್ಯಂ ಜೀವನೀಯಶೃತಂ ಘೃತಮ್ ॥
ಚೂರ್ಣಿತತ್ರಿಫಲಾಶ್ಯಾಮಾತ್ರಿವೃತ್ಪಿಪ್ಪಲಿಸಂಯುತಃ ।
ಸಕ್ಷೌದ್ರಃ ಶರ್ಕರಾಯುಕ್ತೋ ವಿರೇಕಸ್ತು ಪ್ರಶಸ್ಯತೇ ॥
ಪಕ್ವೇ ಪಿತ್ತಜ್ವರೇ ರಕ್ತೇ ಚೋರ್ಧ್ವಗೇ ವೇಪಥೌ ತಥಾ ।
ಕಫವಾತೋತ್ಥಯೋರೇವಂ ಸ್ನೇಹಾಭ್ಯಂಗೈರ್ವಿಶೋಧಯೇತ್ ॥
ಹೃತದೋಷೋ ಭ್ರಮಾರ್ತಸ್ತು ಲಿಹ್ಯಾತ್ ಕ್ಷೌದ್ರಸಿತಾಭಯಾಃ ॥

(ಸು. 776-7)

ವಾಂತಿ, ಮೂರ್ಛೆ, ಬಾಯಾರಿಕೆ, ಮುಂತಾದ ಜ್ವರದ ಉಪದ್ರವಗಳನ್ನು, ಜ್ವರಕ್ಕೆ ವಿರೋಧವಾಗದ ರೀತಿಯಲ್ಲಿ, ವಿರೋಧಕರವಾದ ಹೇತುವನ್ನು ಕಂಡುಹಿಡಿದು ಅದಕ್ಕೆ ತಕ್ಕ ಪ್ರತಿಕಾರ ಮಾಡಿ, ಜಯಿಸತಕ್ಕದ್ದು (1ನೇ ಭಾಗದ XIX-27 ನೋಡಿ). ಉಪದ್ರವಗಳನ್ನು ನಾಶಮಾಡತಕ್ಕಂಥ ಇತರ ಚಿಕಿತ್ಸಾವಿಶೇಷಗಳನ್ನು ತಿಳಿಸೋಣಾಗುತ್ತದೆ —

ತಲೆಯುರಿ ಮುಂತಾದ್ದಕ್ಕೆ ತಿರೋಲೇಪ

ಜ್ಯೇಷ್ಠಮಧು, ಅರಸಿನ, ಭದ್ರಮುಷ್ಟಿ, ದಾಳಿಂಬ, ಅಮ್ಲವೇತಸ (ಸಿಕ್ಕದಿದ್ದಾಗ ಪುಳಿಯಾರಲ್-ಪುಲ್ಲಂಪುರಚೆ), ರಸಾಂಜನ, ಹುಣಸೆ (ಎಲೆಯ ನಾರು), ಲಾಮಂಚ (ಜಟಾಮಾಂಸೀ ಎಂತ ಅ.), ದಾಲ್ಚೀನಿಎಲೆ, ನೀಲತಾವರೆ (ಅಥವಾ ನೈದಿಲೆ), ದೊಡ್ಡ ಲವಂಗಪಟ್ಟೆ, ನಖ, ಇವುಗಳ ಚೂರ್ಣವನ್ನು ಮಾದಳ ಹಣ್ಣಿನ ರಸದೊಂದಿಗೆ ಅರೆದು, ಜೇನು ಮತ್ತು ಮಧುಶುಕ್ತ ಕೂಡಿಸಿ, ತಲೆಯ ಮೇಲೆ ಲೇಪಿಸಲು, ತಲೆಯ ಜ್ವಾಲೆ, ಮೂರ್ಛೆ, ವಾಂತಿ, ಬಿಕ್ಕಟ್ಟು ಮತ್ತು ನಡುಕು, ಜ್ವರರೋಗಿಗಳ ಈ ಉಪದ್ರವಗಳು ನಾಶವಾಗುತ್ತವೆ.

ಷರಾ 'ಮಧುಶುಕ್ತ' ಎಂದರೆ ಲಿಂಬೇರಸ, ಹಿಪ್ಪಲಿ ಮತ್ತು ಜೇನು ಕೂಡಿಸಿ ಹುಳಿಸಿದ ನೀರು

ವಾಂತಿ ಮುಂತಾದ್ದಕ್ಕೆ ಮಧೂಕಾದಿ ಚೂರ್ಣ.

ಇಪ್ಪೆಹೂವು, ಲಾಮಂಚ, ನೈದಿಲೆ, ಹೆಗ್ಗುರುಟಿಗೆ (ಮಲ. ಪೆರುಸ್ಸುರುಸ್ಸ; ಜ್ಯೇಷ್ಠಮಧು ಎಂತ ಅ.), ಇವುಗಳ ಚೂರ್ಣಗಳನ್ನು ಜೇನು ಮತ್ತು ತುಪ್ಪದಲ್ಲಿ ಕಲಸಿ ನೆಕ್ಕಲು ವಾಂತಿ, ಕಠಿನವಾದ ಕಫಸುರಿಯುವಿಕೆ, ರಕ್ತಪಿತ್ತ, ಬಿಕ್ಕಟ್ಟು ಮತ್ತು ಉಬ್ಬಸ, ಇವುಗಳು ಪರಿಹಾರವಾಗುವವು.

ಕೆಮ್ಮು-ಉಬ್ಬಸಗಳಿಗೆ ತ್ರಿಫಲಾದಿ ಚೂರ್ಣ.

ಜ್ವರರೋಗಿಯು ತ್ರಿಫಲೆ ಮತ್ತು ಹಿಪ್ಪಲಿ, ಇವುಗಳ ಚೂರ್ಣವನ್ನು ಜೇನಿನಲ್ಲಿ ಕಲಸಿ ನೆಕ್ಕಲು ಕೆಮ್ಮು, ಮತ್ತು ಜೇನು-ತುಪ್ಪಗಳಲ್ಲಿ ಕಲಸಿ ನೆಕ್ಕಲು ಉಬ್ಬಸ ಸಹ, ಪರಿಹಾರವಾಗಿ ಸೌಖ್ಯವಾಗುವದು.

ಬಾಯಾರಿಕೆ ಮತ್ತು ಉರಿಗೆ ತಿರೋಲೇಪ

ನೆಲಕುಂಬಳದ ಗಡ್ಡೆ, ದಾಳಿಂಬ, ಲೋಧ್ರ, ಬೇಲದ ಹಣ್ಣು, ಮಾದಳ ಹಣ್ಣು, ಇವುಗಳನ್ನು ಅರೆದು ನೆತ್ತಿಯ ಮೇಲೆ ಲೇಪ ಹಾಕಲು ಬಾಯಾರಿಕೆ ಮತ್ತು ಉರಿಯ ಪೀಡೆ ಪರಿಹಾರವಾಗುವವು.

ದಾಳಿಂಬ, ಸಕ್ಕರೆ, ದ್ರಾಕ್ಷೆ, ನೆಲ್ಲಿ, ಇವುಗಳ ಕಲ್ಕವನ್ನು ಬಾಯಿಯೊಳಗೆ ಇಟ್ಟುಕೊಳ್ಳುವದರಿಂದ, ಹಾಗೆಯೇ ಹಾಲು, ಕಬ್ಬಿನ ಹಾಲು, ಜೇನು, ತುಪ್ಪ, ತೈಲ, ಬಿಸಿನೀರು, ಇವುಗಳೊಳಗೆ ಯಾವದು (ದೋಷವಿಚಾರದಲ್ಲಿ) ಹಿತವೋ ಅದರಲ್ಲಿ ಕಲಸಿ ಗಂಡೂಷ ಮಾಡುವದರಿಂದ, ಬಾಯಿಯ ರುಚಿವಿಕಾರವು ಪರಿಹಾರವಾಗುವದು.

ಅರುಚಿಗೆ

ಸರಾ ಜ್ವರ ಇರುವ ಕಾಲದಲ್ಲಿ ಅರುಚಿಗೆ ಪ್ರತ್ಯೇಕ ಚಿಕಿತ್ಸೆ ಅಗತ್ಯವಲ್ಲ ಜ್ವರ ಬಿಡದ ವಿನಾ ರುಚಿ ಸರಿಯಾಗದು

ತಲೆಶೂನ್ಯತೆಗೆ

ತಲೆಯು ಖಾಲಿಯಾಗಿ ಕಂಡಾಗ್ಗೆ, ಜೀವನೀಯವರ್ಗದ ಔಷಧಗಳನ್ನು ಸೇರಿಸಿ ಕಾಯಿಸಿದ ತುಪ್ಪವನ್ನು ನಸ್ಯಮಾಡುವದು ಹಿತ.

ತ್ರಿಫಲೆ, ಕಂಪುತಿಗಡ, ಹಿಪ್ಪಲಿ, ಇವುಗಳ ಚೂರ್ಣವನ್ನು, ಸಕ್ಕರೆ ಮತ್ತು ಜೇನು ಕೂಡಿಸಿ, ಕೊಟ್ಟು ವಿರೇಚನ ಮಾಡಿಸುವದು. ಪಕ್ವವಾದ ಪಿತ್ತಜ್ವರದಲ್ಲಿ ರಕ್ತವು ಊರ್ಧ್ವಮುಖವಾಗಿ ಹೋಗುತ್ತಿರುವಾಗ್ಗೆ ಪ್ರಶಸ್ತವಾಗಿರುತ್ತದೆ. ಕಫವಾತಗಳಿಂದ ಉಂಟಾದ ಜ್ವರಗಳಲ್ಲಿ ನಡುಕು ಇರುವಾಗ್ಗೆ (ಯುಕ್ತವಾದ) ಸ್ನೇಹಾಭ್ಯಂಗಗಳನ್ನು ಮಾಡಿಸಿ ಹಾಗೆಯೇ ಶೋಧನಮಾಡಿಸಬೇಕು.

ಊರ್ಧ್ವಗತ ರಕ್ತಕ್ಕೆ ಮತ್ತು ನಡುಕಿಗೆ

ಸರಾ 'ಶ್ಯಾಮಾ' ಎಂದರೆ 'ವೃದ್ಧದಾರು' (ಚೇಸಿಪಾವು) ಎಂತ ಸಿ ಸಂ ವ್ಯಾ

ತಲೆತಿರುಕಿಗೆ

ದೋಷಗಳನ್ನು ತೆಗೆದುಬಿಟ್ಟ ಮೇಲೆ ತಲೆತಿರುಕಿನ ಪೀಡೆಯುಳ್ಳವನು ಅಣಿಲೆಕಾಯಿಯ ಚೂರ್ಣವನ್ನು, ಸಕ್ಕರೆ ಮತ್ತು ಜೇನು ಕೂಡಿಸಿಕೊಂಡು, ನೆಕ್ಕಬೇಕು.

ಆರ್ದ್ರಕಸ್ಯ ರಸೈರ್ನಸ್ಯಂ ಮೂರ್ಚ್ಛಾಯಾಮಾಚರೇನ್ನರಃ ।
ಅಂಜನಂ ಚ ಪ್ರಯುಂಜೀತ ಮಧುಸಿಂಧುಶಿಲೋಷಣೈಃ
ಶೀತಾಮ್ಬುನಾ ಽಕ್ಷಿಸೇಕಃ ಸುರಭಿರ್ಧೂಪಃ ಸುಗನ್ಧಿ ಪುಷ್ಪಂ ಚ ।
ಮೃದುತಾಲವೃನ್ತವಾತಃ ಕೋಮಲಕದಲೀದಲಸ್ಪರ್ಶಃ ॥
(ಭಾ. ಪ್ರ 314)

ಮೂರ್ಚ್ಛೆಗೆ

ಹಸಿಶುಂಠಿಯ ರಸದಿಂದ ನಸ್ಯಮಾಡಿಸುವದು, ಸೈಂಧವಲವಣ, ಹಿಪ್ಪಲಿ ಮತ್ತು ಪಚ್ಚೆಕರ್ಪೂರ, ಇವುಗಳ ಚೂರ್ಣವನ್ನು ಜೇನಿನಲ್ಲಿ ಅರೆದು ಅಂಜನ ಹಾಕುವದು, ತಣ್ಣಗಿನ ನೀರನ್ನು ಕಣ್ಣಿಗೆ ಚಿಮುಕಿಸುವದು (ಅಥವಾ ಆ ನೀರಿನಲ್ಲಿ ಸ್ವಚ್ಛವಾದ ಮತ್ತು ಮೃದುವಾದ ವಸ್ತ್ರದ ಛಿಂದಿಯನ್ನು ಅದ್ದಿ ಅದರಿಂದ ಕಣ್ಣುಗಳ ಮೇಲೆ ಸಪೂರವಾಗಿ ಧಾರೆಹಿಡಿಯುವದು), ಪರಿಮಳವುಳ್ಳ ಧೂಪ ಕೊಡುವದು, ಪರಿಮಳವುಳ್ಳ ಪುಷ್ಪದ ವಾಸನೆ ಕೊಡುವದು, ಮೃದುವಾಗಿ ಬೀಸಣಿಗೆಯಿಂದ ಗಾಳಿ ಹಾಕುವದು, ಎಳೇ ಬಾಳೆಎಲೆಯಿಂದ (ಹಣೆಯನ್ನು) ಲಘುವಾಗಿ ಒತ್ತುವದು, ಈ ಉಪಾಯಗಳನ್ನು ಮೂರ್ಚ್ಛೆಯಲ್ಲಿ ಪ್ರಯೋಗಿಸತಕ್ಕದ್ದು.

ಸರಾ ಆನಂದಭೈರವಿಮಾತ್ರೆಯನ್ನು ವೀಳ್ಯದೆಲೆಯ ರಸದಲ್ಲಿ ತೇದಿ, ಅದನ್ನು ಕಣ್ಣುಗಳ ಕೆಳಗಿನ ರೆಪ್ಪೆಗಳೊಳಗೆ ಹಚ್ಚಲು ಎಚ್ಚರ ಉಂಟಾಗುವದು ಆದರೆ ಈ ಉಪಾಯಗಳನ್ನು ಉಪಯೋಗಿಸುವಲ್ಲಿ ಹಿಂದೆ ಅ. III-48ನೆಯ ಅಧಿಸರಾ(ಪು 177)ದಲ್ಲಿ ವರ್ಣಿಸಲ್ಪಟ್ಟ ಮೂರ್ಚ್ಛೆಯ ಎರಡು ಮುಖ್ಯ ಭೇದಗಳಿಗೆ ಮನಸ್ಸು ಕೊಡತಕ್ಕದ್ದು.

ಅರುಚೌ ತು ಶೃಂಗವೇರಜರಸಕೈಃ ಸೋಷ್ಣೈಃ ಸಸಿನ್ಧುಜೈಃ ಕವಲಃ |
ಸಿಂಧೂತ್ಥಮಾತುಲುಂಗೀಫಲಕೇಸರಧಾರಣಂ ವಕ್ತ್ರೇ || (ಭಾ. ಪ್ರ. 314)

ಅರುಚಿಗೆ

ಶುಂಠಿರಸದೊಂದಿಗೆ ಸೈಂಧವಲವಣವನ್ನು ಕೂಡಿಸಿ ಅದರಿಂದ ಸುಖೋಷ್ಣವಾಗಿ ಬಾಯಿಮುಕ್ಕುಳಿಸುವದರಿಂದಲೂ, ಮಾದಳಹಣ್ಣಿನೊಳಗಿನ ಕುಸುಮವನ್ನೂ ಸೈಂಧವಲವಣವನ್ನೂ ಕೂಡಿಸಿಕೊಂಡು ಬಾಯಿಯೊಳಗೆ ಇಟ್ಟುಕೊಳ್ಳುವದರಿಂದಲೂ, ಅರುಚಿ ಪರಿಹಾರ.

ವಾಂತಿಗೆ

ಕ್ವಾಥೋ ಗುಡೂಚ್ಯಾಃ ಸಮಧುಃ ಸುಶೀತಃ |
ಪೀತಃ ಪ್ರಶಾನ್ತಿಂ ವಮನಸ್ಯ ಕುರ್ಯಾತ್ || (ಭಾ. ಪ್ರ. 314)

ಅಮೃತಬಳ್ಳಿಯ ಕಷಾಯವನ್ನು ಚನ್ನಾಗಿ ತಣಿಸಿ, ಜೇನು ಕೂಡಿಸಿಕೊಂಡು, ಪಾನಮಾಡುವದರಿಂದ ವಾಂತಿಯು ಶಮನವಾಗುವದು.

ಬಾಯಾರಿಕೆಗೆ

ಶೀತಂ ಪಯಃ ಕ್ಷೌದ್ರಯುತಂ ನಿಪೀತಮಾಕಂಠಮಾಶ್ವೇವ ತದುದ್ವಮೇಚ್ಚ
ತರ್ಷಂ ಮಹಾನ್ತಂ ಶಮಯೇದ್ಧಿ ವಕ್ತ್ರೇ ಧೃತ್ವಾ ಽಥವಾ ಕ್ಷೌದ್ರವಟಾಗ್ರ-
ಲಾಜಾನ್ || (ಭಾ. ಪ್ರ. 314)

ತಣ್ಣೀರಿಗೆ ಜೇನನ್ನು ಕೂಡಿಸಿ ಅದನ್ನು ಗಂಟಲವರೆಗೆ ಕುಡಿದು ಬೇಗನೆ ವಾಂತಿ ಮಾಡುವದರಿಂದ, ಅಥವಾ ಗೋಳಿಮರದ ಚಿಗುರನ್ನೂ ಅರಳಿನ ಪುಡಿಯನ್ನೂ ಜೇನಿನೊಂದಿಗೆ ಅರೆದು ಬಾಯಿಯೊಳಗೆ ಇಟ್ಟುಕೊಳ್ಳುವದರಿಂದ, ಮಹತ್ತಾದ ಬಾಯಾರಿಕೆ ಶಮನವಾಗುವದು.

ಜ್ವರಾತಿಸಾರಗಳಿಗೆ

ಲಂಘನಮೇಕಂ ಮುಕ್ತ್ವಾ ನಾನ್ಯದಸ್ತೀಹ ಭೇಷಜಂ ಬಲಿನಃ |
ಸಮುದೀರ್ಣದೋಷನಿಚಯಂ ಶಮಯತಿ ತತ್ಪಾಚಯೇದಪಿ ಚ ||
ವತ್ಸಾದನೀವತ್ಸಕವಾರಿವಾಹವಿಶ್ವಮ್ಬುರಾನಿಮ್ಬವಿಷಾಃ ಸವಿಶ್ವಾಃ |
ಜ್ವರೇ ಽತಿಸಾರಂ ತ್ವರಿತಂ ಜಯನ್ತಿ ವಿಶ್ವಾಮೃತಾವತ್ಸಕವಾರಿವಾಹಾಃ ||
ಪಾಠಾಮೃತಾಪರ್ಪಟಮುಸ್ತವಿಶ್ವಾಕಿರಾತತಿಕ್ತೇನ್ದ್ರಯವಾನ್ ವಿಪಾಚ್ಯ |
ಪಿಬನ್ ಹರತ್ಯೇವ ಹಠೇನ ಸರ್ವಾನ್ ಜ್ವರಾತಿಸಾರಾನಪಿ ದುರ್ನಿವಾ-
ರಾನ್ || (ಭಾ. ಪ್ರ. 314)

ಜ್ವರದಲ್ಲಿ ಉಂಟಾದ ಅತಿಸಾರಕ್ಕೆ ರೋಗಿಯು ಬಲವಂತನಾಗಿದ್ದರೆ ಲಂಘನ ಒಂದನ್ನು ಬಿಟ್ಟು ಬೇರೆ ಔಷಧವಿಲ್ಲ; ಆ ಲಂಘನವು ಕೆದರಿಕೊಂಡಂಥಾ ದೋಷಸಮೂಹವನ್ನು ಶಾಂತಮಾಡುವದಲ್ಲದೆ, ಅದರ ಪಚನ ಸಹ ಮಾಡುವದು.

ಅಮೃತಬಳ್ಳಿ, ಕೊಡಸಿಗನ ಚಕ್ಕೆ, ಭದ್ರಮುಷ್ಟಿ, ನೆಲಬೇವು, ಕಹಿಬೇವು, ಅತಿವಿಷೆ, ಶುಂಠಿ, ಇವುಗಳ ಕಷಾಯ, ಅಥವಾ ಶುಂಠಿ, ಅಮೃತಬಳ್ಳಿ, ಕೊಡಸಿಗನ ಚಕ್ಕೆ, ಭದ್ರಮುಷ್ಟಿ, ಇವುಗಳ ಕಷಾಯ, ಜ್ವರದಲ್ಲಿ ಉಂಟಾದ ಅತಿಸಾರವನ್ನು ಬೇಗನೆ ಜಯಿಸುತ್ತದೆ. ಪಾಡ್ಡಾವಳಿಗಡ್ಡೆ, ಅಮೃತಬಳ್ಳಿ, ಪರ್ಪಾಟಕ, ಭದ್ರಮುಷ್ಟಿ, ಶುಂಠಿ, ನೆಲಬೇವು, ಇಂದ್ರಜೇವಿ, ಇವು

ಗಳ ಕಷಾಯವನ್ನು ಪಾನಮಾಡುವದರಿಂದ ಸಕಲ ಜ್ವರಾತಿಸಾರಗಳನ್ನು, ಅವು ಜಯಿಸಲು ಕಷ್ಟವಾದಂಥವುಗಳಾಗಿದ್ದರೂ, ಬಲಾತ್ಕಾರದಿಂದ ಪರಿಹರಿಸುವದಕ್ಕೆ ಸಂದೇಹವಿಲ್ಲ.

ಸೂ॥ ಮುಂದಿನ XVIIIನೇ ಅಧ್ಯಾಯ ನೋಡಿ

ಮಲಬದ್ಧತೆಗೆ

ವಿಡ್ಗ್ರಹೇ ವಾತಜಿತ್ಕರ್ಮ ಕುರ್ಯಾದತ್ರಾನುಲೋಮನಮ್ ।
ಮಲಂ ಪ್ರವರ್ತಯೇದಾಶು ತೀಕ್ಷ್ಣಾಭಿಃ ಫಲವರ್ತಿಭಿಃ ॥
ಪಥ್ಯಾರಗ್ವಧತಿಕ್ತಾತ್ರಿವೃದಾಮಲಕೈಃ ಶೃತಂ ತೋಯಮ್ ।
ಜೀರ್ಣಜ್ವರೇ ವಿಬನ್ಧೇ ದದ್ಯಾತ್ಸಾಶ್ವೇವ ವಿಡ್ಗ್ರಹಃ ಶಾಮ್ಯೇತ್ ॥
(ಭಾ. ಪ್ರ. 314)

ಮಲ ಬದ್ಧವಾದಲ್ಲಿ ವಾತವನ್ನು ಜಯಿಸಿ ಅದನ್ನು ಕ್ರಮಗತಿಗೆ ತರತಕ್ಕಂಥಾ ಪ್ರಯೋಗವನ್ನು ನಡಿಸತಕ್ಕದ್ದು, ಮತ್ತು ತೀಕ್ಷ್ಣವಾದ ಫಲವರ್ತಿಗಳಿಂದ ಮಲಪ್ರವೃತ್ತಿಯನ್ನು ಬೇಗನೆ ಮಾಡಿಸಬೇಕು. ಅಣಲೆಕಾಯಿ, ಕಕ್ಕೆಮರ, ಕಟುಕರೋಹಿಣಿ, ತಿಗಡೆ, ನೆಲ್ಲಿಚಟ್ಟು, ಇವುಗಳ ಕಷಾಯವನ್ನು ಮಲಬದ್ಧತೆಯುಳ್ಳ ಜೀರ್ಣಜ್ವರದಲ್ಲಿ ಕೊಟ್ಟಲ್ಲಿ ಮಲಬದ್ಧತೆಯು ಬೇಗನೆ ಶಮನವಾಗುವದು.

ಸೂ॥ ಗುದದ್ವಾರದೊಳಗೆ ತುಪ್ಪ ಹಚ್ಚಿಕೊಂಡು ಒಳಗೆ ಹೊಗಿಸುವ ನುಣ್ಣಗಾದ, ರೋಗಿಯ ಹೆಬ್ಬೆಟ್ಟಿಗೆ ಸದೃಶವಾದ ಮತ್ತು ಮಲಪ್ರವೃತ್ತಿಯನ್ನು ಮಾಡಿಸುವ ಗುಣವುಳ್ಳ ಬತ್ತಿಗೆ 'ಫಲವರ್ತಿ' ಎನ್ನುತ್ತಾರೆ (ಭಾ. ಪ್ರ. 223)

ಬಿಕ್ಕಟ್ಟಿಗೆ

ನೀರೇಣ ಸಿಂಧೂತ್ಥರಜೋಽತಿಸೂಕ್ಷ್ಮಂ ನಸ್ಯೇನ ನೂನಂ ವಿನಿಹನ್ತಿ ಹಿಕ್ಕಾಮ್ ।
ಶುಂಠೀ ಹರಾದ್ವಾ ಸಿತಯಾ ಸಮೇತಾ ಧೂಪೋಽಥವಾ ಹಿಂಗುಸಮುದ್ಭವಶ್ಚ (ಭಾ. ಪ್ರ. 311)

ಸೈಂಧವಲವಣದ ಅತಿಸೂಕ್ಷ್ಮವಾದ ಚೂರ್ಣವನ್ನು ನೀರಿನಲ್ಲಿ ಕದಡಿ ನಸ್ಯಮಾಡುವದರಿಂದಲೂ, ಶುಂಠಿಯ ಸೂಕ್ಷ್ಮವಾದ ಚೂರ್ಣವನ್ನು ಸಕ್ಕರೆಯೊಂದಿಗೆ ನಸ್ಯಮಾಡುವದರಿಂದಲೂ, ಹಿಂಗಿನ ಹೊಗೆಯನ್ನು ಕೊಡುವದರಿಂದಲೂ, ಬಿಕ್ಕಟ್ಟು ನಿಶ್ಚಯವಾಗಿ ನಾಶವಾಗುತ್ತದೆ.

ಕೆಮ್ಮಿಗೆ

ಕಾಸೇ ಕಣಾ ಕಣಾಮೂಲಂ ಕಲಿಂಗದ್ರುಫಲಂ ರಜಃ ।
ಸವಿಶ್ವಭೇಷಜಂ ಲಿಹ್ಯಾನ್ಮಧುನಾ ವಾ ವೃಷಾದ್ರಸಮ್ ॥
ಪುಷ್ಕರಮೂಲಕಟುತ್ರಿಕಶೃಂಗೀಕಟ್ಫಲಯಾಸಕಕಾರವಿಕಾಭಿಃ ।
ಮಧುಲುಲಿತಾಭಿರಯಂ ಖಲು ಲೇಹಃ ಕಾಸರಿಪುಃ ಕಫರೋಗಹರಶ್ಚ ॥
(ಭಾ. ಪ್ರ. 314, 315)

(ಜ್ವರರೋಗಿಗೆ) ಕೆಮ್ಮು ಇದ್ದಾಗ ಅವನು ಹಿಪ್ಪಲಿ, ಹಿಪ್ಪಲಿಮೂಲ, ಇಂದ್ರಜೌಪಿ, ಪರ್ಪಾಟಕ, ಶುಂಠಿ, ಇವುಗಳ ಚೂರ್ಣವನ್ನು ಜೇನಿನಲ್ಲಿ ಕಲಸಿ, ಅಥವಾ ಆಡುಸೋಗೆಯ (ಎಲೆಗಳ) ರಸವನ್ನು, ಜೇನು ಕೂಡಿಸಿಕೊಂಡು, ನೆಕ್ಕಬೇಕು.

ಅಷ್ಟಾಂಗಚೂರ್ಣ. ಪುಷ್ಕರಮೂಲ, ತ್ರಿಕಟು, ಕರ್ಕಟಶೃಂಗಿ, ಕಿರುಶಿವನಿ (ಕಟ್ಫಲ), ಬಳ್ಳಿತುರಚನ ಬೇರು, ಕರಿಜೀರಿಗೆ, ಇವುಗಳ ಚೂರ್ಣವನ್ನು ಜೇನಿನೊಂದಿಗೆ ಕಲಸಿ ನೆಕ್ಕುವದರಿಂದ ಕೆಮ್ಮು ಮತ್ತು ಕಫರೋಗ ಪರಿಹಾರವಾಗುವವು.

ಸರಾ 'ಅಷ್ಟಾಂಗ' ಎಂಬ ಈ ಲೇಹದಿಂದ ಕಠಿಣವಾದ ಸನ್ನಿಪಾತ, ಮೂರ್ಛೆ, ಉಬ್ಬಸ, ಕೆಮ್ಮು, ತಂದ್ರ, ಬಿಕ್ಕಟ್ಟು, ಗಂಟಲು ಹಿಡಿದದ್ದು ಸಹ ಪರಿಹಾರವಾಗುವವೆಂತಲೂ, ಚೂರ್ಣವನ್ನು ಜೇನಿನೊಂದಿಗೆ ಅಥವಾ ಶುಂಠರಸದಿಂದ ನೆಕ್ಕಿಸಬಹುದೆಂತಲೂ, ಉಷ್ಣವಿರುದ್ಧವಾದ ಸಂಗತಿಯಲ್ಲಿ ಈ ಚೂರ್ಣವನ್ನು ಜೇನು ಬಿಟ್ಟು ಶುಂಠರಸದಿಂದಲೇ ಕೊಡಬೇಕೆಂತಲೂ ರ ರ (ಪು 235)

ವಿಭೀತಕತ್ವಕ್ ಮರಿಚಂ ಲವಂಗಂ ಸರ್ವೈಃ ಸಮಾನಂ ಖದಿರಸ್ಯ ಸಾರಮ್ |
ಬಬ್ಬೂಲಜಕ್ವಾಥಕೃತಾ ವಟೀ ಯಾ ಮುಖಸ್ಥಿತಾ ಕಾಸಹರೀ ಕ್ಷಣೇನ ||
(ನಿ. ರ)

ತಾರೆಕಾಯಿಯ ಸಿಪ್ಪೆ, ಕಾಳುಮೆಣಸು, ಲವಂಗ, ಇವು ಮೂರು ಸಮಾಂಶ (ಒಂದೊಂದು ಪಾಲು), ಕಾಚು ಮೂರು ಪಾಲು, ಇವುಗಳ ಚೂರ್ಣವನ್ನು ಜಾಲಿಮರನ ಚಕ್ಕೆಯ ಕಷಾಯದೊಂದಿಗೆ ಅರೆದು, ವಟಕಗಳನ್ನು ಮಾಡಿ, ಆ ವಟಕವನ್ನು ಬಾಯಿಯೊಳಗೆ ಇಟ್ಟುಕೊಂಡರೆ ಕ್ಷಣದಲ್ಲಿ ಕೆಮ್ಮು ಪರಿಹಾರವಾಗುವದು.

ಉರಿಜ್ವಾಲೆಗೆ
ದಾಹಾಧಿಕಾರೇ ಲಿಖಿತಂ ದಾಹೇ ಕುರ್ಯಾಚ್ಚಿಕಿತ್ಸಿತಮ್ |
ಪರಂ ಜ್ವರೇ ವಿರುದ್ಧಂ ಯನ್ನೋಚಿತಂ ತಚ್ಚಿಕಿತ್ಸಿತಮ್ | (ಭಾ. ಪ್ರ. 315)

'ದಾಹ (ಉರಿ)' ಪ್ರಕರಣದಲ್ಲಿ ಬರೆಯಲ್ಪಟ್ಟ ಚಿಕಿತ್ಸೆಯನ್ನು ಜ್ವರದಲ್ಲ ಉಂಟಾದ ಉರಿಜ್ವಾಲೆಗೂ ನಡಿಸುವದು ಉತ್ತಮ. (ಆದರೆ) ಅದರಲ್ಲಿ ಯಾವದು ಜ್ವರಕ್ಕೆ ವಿರುದ್ಧವೋ ಆ ಚಿಕಿತ್ಸೆಯು ಉಚಿತವಲ್ಲ.

ಅನಿದ್ರೆಗೆ
ಗುಡಂ ಪಿಪ್ಪಲಿಮೂಲಸ್ಯ ಜಲೇನಾಲೋಡಿತಂ ಪಿಬೇತ್ |
ಚಿರಾದಪಿ ಚ ಸನ್ನಷ್ಟಾಂ ನಿದ್ರಾಮಾಪ್ನೋತಿ ಮಾನವಃ || (ನಿ. ರ)

ಹಿಪ್ಪಲಿಮೂಲದ ಕಷಾಯದಲ್ಲಿ ಬೆಲ್ಲವನ್ನು ಕದಡಿ ಪಾನಮಾಡುವದರಿಂದ ರೋಗಿಗೆ ದೀರ್ಘಕಾಲದಿಂದ ನಿದ್ರೆ ಬಾರದಿದ್ದ ಸಂಗತಿಯಲ್ಲಿಯೂ ನಿದ್ರೆಯು ಬರುವದು.

132. ಬಲಾಂ ಶ್ವದಂಷ್ಟ್ರಾಂ ಬೃಹತೀಂ ಕಲಸೀಂ ಧಾವನೀಂ ಸ್ಥಿರಾಮ್ |
ಬಲಾದಿಘೃತ
ನಿಮ್ಬಂ ಪರ್ಪಟಕಂ ಮುಸ್ತಂ ತ್ರಾಯಮಾಣಾಂ ದುರಾಲಭಾಮ್ ||
ಕೃತ್ವಾ ಕಷಾಯಂ ಪೇಷ್ಯಾರ್ಥೇ ದದ್ಯಾತ್ತಾಮಲಕೀಂ ಶಟೀಮ್ |
ದ್ರಾಕ್ಷಾಂ ಪುಷ್ಕರಮೂಲಂ ಚ ಮೇದಾಮಾಮಲಕಾನಿ ಚ ||
ಘೃತಂ ಪಯಶ್ಚ ತತ್ಸಿದ್ಧಂ ಸರ್ಪಿರ್ಜ್ವರಹರಂ ಪರಮ್ |
ಕ್ಷಯಕಾಸಶಿರಃಶೂಲಪಾರ್ಶ್ವಶೂಲಾಂಸತಾಪನುತ್ || (ಚ. 164)

ಕಲ್ಲಂಗಡಲೆಬೇರು, ನೆಗ್ಗಿಲು, ಗುಳ್ಳದ ಬೇರು, ಓರೆಲೆಬೇರು, ಕಿರಿಗುಳ್ಳದ ಬೇರು, ಮೂವೆಲೆ ಬೇರು, ಕಹಿಬೇವು, ಪರ್ಪಾಟಕ, ಭದ್ರಮುಷ್ಟಿ, ತ್ರಾಯಮಾಣ, ಬಳ್ಳಿತುರಚನ ಬೇರು, ಇವುಗಳ ಕಷಾಯದಿಂದಲೂ, ನೆಲನೆಲ್ಲಿ, ಸಣ್ಣ ಕಚೋರ, ದ್ರಾಕ್ಷೆ, ಪುಷ್ಕರಮೂಲ, ಮೇದೆ, ನೆಲ್ಲಿ ಚಟ್ಟು, ಇವುಗಳ ಕಲ್ಕದಿಂದಲೂ, ಹಾಲು ಕೂಡಿಸಿ, ಪಾಕಮಾಡಿದ ತುಪ್ಪವು ಜ್ವರಪರಿಹಾರಕ್ಕೆ

ಉತ್ತಮವಾದದ್ದು; ಕ್ಷಯ, ಕೆಮ್ಮು, ತಲೆಶೂಲೆ, ಪಕ್ಕದ ಶೂಲೆ, ಹೆಗಲಡಿಯ ಉರಿ, ಇವುಗಳನ್ನು ಸಹ ನಾಶಮಾಡತಕ್ಕಂಥಾದ್ದು.

ಸಂ॰ ಇಲ್ಲಿಯೂ ಕಷಾಯವನ್ನೂ ಹಾಲನ್ನೂ ತುಪ್ಪಕ್ಕೆ ಎರಡು ಪಾಲು ಸೇರಿಸತಕ್ಕದ್ದು ಎಂತಲೂ, ಕಷಾಯಕ್ಕೆ ದ್ರವ್ಯಸಮುದಾಯದ ಎಂಟು ಪಾಲು ನೀರು ಕೂಡಿಸಬೇಕೆಂತಲೂ ಚಿ ಸಾ ಸಂ (ಪು 66) ಅಷ್ಟಾವಶೇಷ ಮಾಡಿದ ಕಷಾಯ ತುಪ್ಪಕ್ಕೆ ಎರಡು ಪಾಲು ಇರಬೇಕೆಂತಾದರೆ, ಕಷಾಯದ್ರವ್ಯಗಳ ಒಟ್ಟು ತೂಕ ತುಪ್ಪಕ್ಕೆ ಎರಡು ಪಾಲು ಇರಬೇಕೆಂತಾಯಿತು

133. ಮಂಜಿಷ್ಠಾತಿವಿಷಾ ಪಥ್ಯಾ ವಚಾ ನಾಗರರೋಹಿಣೀ ।
ದೇವದಾರು ಹರಿದ್ರಾ ಚ ದ್ರೋಣೇ ऽಪಾಮ್ಭಾಲಿಕಾನ್ ಪಚೇತ್ ॥
ಮಂಜಿಷ್ಠಾದಿಘೃತ ಕ್ವಾಥೇ ऽಸ್ಮಿನ್ ಸಾಧಯೇತ್ಪಿಷ್ಟೈರ್ಘೃತಪ್ರಸ್ಥಂ ಪಿಚೂನ್ಮಿತೈಃ ।
ಶೃಂಗವೇರಕಣಾಹಿಂಗುದ್ವಿಕ್ಷಾರಪಟುಪಂಚಕೈಃ ॥
ತತ್ಕಫಾವೃತಸರ್ವೈಕಜ್ವರಿಣಾಮಮೃತೋಪಮಮ್ ।
ಒಧ್ನ(?ಬ್ರಧ್ನ)ಹಿಧ್ಮಾರುಚಿಶ್ವಾಸಪಾಂಡುರೋಗವಿಕಾರಿಣಾಮ್ ॥
ಮಲಗ್ರಹಪ್ರಮೇಹಾರ್ಶಃಪ್ಲೀಹಾಪಸ್ಮಾರಶೋಷಿಣಾಮ್ ।
ಉದಾವರ್ತಪರೀತಾನಾಂ ಮನ್ದಾಗ್ನಿಕೃಮಿಕುಷ್ಠಿನಾಮ್ ॥
(ಚಿ. ಸಾ. ಸಂ. 66, 67)

ಮಂಜಿಷ್ಠ, ಅತಿವಿಷೆ, ಅಣಿಲೆಕಾಯಿ, ಬಜೆ, ಶುಂಠಿ, ಕಟುಕರೋಹಿಣಿ, ದೇವದಾರ, ಅರಸಿನ, ಇವುಗಳನ್ನು ಒಂದು ಪಲ ಪ್ರಕಾರ ತೆಗೆದುಕೊಂಡು ಪುಡಿಮಾಡಿ ೧೬ ಪ್ರಸ್ಥ ನೀರಿನಲ್ಲಿ ಹಾಕಿ, ೪ ಪ್ರಸ್ಥಕ್ಕೆ ಬತ್ತುವ ವರೆಗೆ ಕುದಿಸಿ, ಶೋಧಿಸಿದ ಆ ಕಷಾಯದಲ್ಲಿ ಒಂದು ಪ್ರಸ್ಥ ತುಪ್ಪವನ್ನು ಹೊಯಿದು, ಶುಂಠಿ, ಹಿಪ್ಪಲಿ ಹಿಂಗು, ಸರ್ಜಕ್ಷಾರ, ಯವಕ್ಷಾರ, ಪಂಚಲವಣಗಳು, ಇವುಗಳನ್ನು ಕಾಲು ಪಲ ಪ್ರಕಾರ ತೆಗೆದುಕೊಂಡು ಚೂರ್ಣಮಾಡಿ, ಆ ಚೂರ್ಣವನ್ನು ಆ ಕಷಾಯದಲ್ಲಿ ಅರೆದು ಕೂಡಿಸಿ, ಪಾಕಮಾಡಿದ ತುಪ್ಪವು ಕಫಕಟ್ಟಿಕೊಂಡ ತ್ರಿದೋಷಜ ಅಥವಾ ಏಕದೋಷಜ ಜ್ವರದವರಿಗೂ, ಬ್ರಧ್ನ ಅಥವಾ ವೃಧ್ನ ಎಂಬ ತೊಡೆಸಂದಿನ ಬಾವು, ಬಿಕ್ಕಟ್ಟು, ಅರುಚಿ, ಉಬ್ಬಸ, ಪಾಂಡುರೋಗ, ಮಲಬದ್ಧತೆ, ಪ್ರಮೇಹ,. ಮೂಲವ್ಯಾಧಿ, ಪ್ಲೀಹವ್ಯಾಧಿ, ಅಪಸ್ಮಾರ, ಶೋಷ, ಉದಾವರ್ತ, ಮಂದಾಗ್ನಿ, ಕೃಮಿರೋಗ, ಕುಷ್ಠ, ಈ ರೋಗಗಳಿಂದ ಪೀಡಿತರಾದವರಿಗೂ ಅಮೃತಕ್ಕೆ ಸಮಾನವಾದ್ದು.

134. ಪಟೋಲಂ ಶಾರಿವಾ ಮುಸ್ತಾ ಮಧುಕಂ ಕಟುರೋಹಿಣೀ ।
ಉಶೀರಂ ಚನ್ದನಂ ಚೈವ ಪಿಪ್ಪಲೀ ತೈಶ್ಶೃತಂ ಘೃತಮ್ ॥
ಅಷ್ಟಮಂಗಲಘೃತ ಸರ್ವಜ್ವರಹರಂ ಪ್ರೋಕ್ತಂ ರಕ್ಷೋಘ್ನಂ ಪುಷ್ಟಿವರ್ಧನಮ್ ।
ಅಷ್ಟಮಂಗಲಕಂ ನಾಮ ಘೃತಂ ಸರ್ವತ್ರ ಪೂಜಿತಮ್ ॥
(ವೈ. ಸಾ. ಸಂ. 117)

ಕಹಿಪಡುವಲು, ಸುಗಂಧಿಬೇರು, ಭದ್ರಮುಷ್ಟಿ, ಜ್ಯೇಷ್ಠಮಧು, ಕಟುಕರೋಹಿಣಿ, ಲಾಮಂಚ, ಶ್ರೀಗಂಧ, ಹಿಪ್ಪಲಿ, ಇವುಗಳಿಂದ ಕಾಯಿಸಲ್ಪಟ್ಟ ತುಪ್ಪವು ಸರ್ವ ಜ್ವರಗಳನ್ನು ಪರಿ

ಹರಿಸತಕ್ಕಂಥಾದ್ದು ಎಂತ ಹೇಳಲ್ಪಟ್ಟದೆ; ಬ್ರಹ್ಮರಾಕ್ಷಸಾದಿ ಗ್ರಹಪೀಡೆಯನ್ನು ಬಿಡಿಸುವಂಥಾದ್ದು ಮತ್ತು ದೇಹದ ಪುಷ್ಟಿಯನ್ನು ಹೆಚ್ಚಿಸುವಂಥಾದ್ದು. 'ಅಷ್ಟಮಂಗಳ' ಎಂಬ ಈ ಘೃತವು ಸರ್ವತ್ರ ಪೂಜಿತವಾದ್ದು.

135. ಪಂಚಕೋಲಯವಕ್ಷಾರಷಟ್ಪಲೇನ ಪಚೇದ್ಘೃತಮ್ ।
ಪಟ್ಪಲಘೃತ ಪ್ರಸ್ಥಾನ್ವಿತಂ ಸಮಪಯಃ ಸ್ರೋತಸಾಂ ತದ್ವಿಶೋಧನಮ್ ॥
ಗುಲ್ಮಜ್ವರೋದರಪ್ಲೀಹಗ್ರಹಣೀಪಾಂಡುಪೀನಸಾನ್ ।
ಶ್ವಾಸಕಾಸಾಗ್ನಿಸಾದಾರ್ಶೇ(?ರ್ಶಃ) ಶ್ವಯಥೂರ್ಧ್ವಾನಿಲಾನ್ ಜಯೇತ್
(ವೈ. ಸಾ. ಸಂ. 117)

ಹಿಪ್ಪಲಿ, ಹಿಪ್ಪಲಿಮೂಲ, ಕಾಡುಮೆಣಸಿನ ಬೇರು, ಚಿತ್ರಮೂಲ, ಶುಂಠಿ, ಯವಕ್ಷಾರ, ಇವುಗಳು ಒಂದೊಂದು ಪಲದಂತೆ ೬ ಪಲ ಔಷಧಗಳ ಚೂರ್ಣಕ್ಕೆ ಒಂದು ಪ್ರಸ್ಥ ತುಪ್ಪ, ಒಂದು ಪ್ರಸ್ಥ ಹಾಲು, (೪ ಪ್ರಸ್ಥ ನೀರು), ಸಹ ಕೂಡಿಸಿ ಕಾಯಿಸಿದ ತುಪ್ಪವು ಸ್ರೋತಸ್ಸುಗಳನ್ನು ಶೋಧಿಸತಕ್ಕಂಥಾದ್ದು; ಮತ್ತು ಗುಲ್ಮ, ಜ್ವರ, ಉದರವ್ಯಾಧಿ, ಪ್ಲೀಹವ್ಯಾಧಿ, ಗ್ರಹಣಿ, ಪಾಂಡು, ಪೀನಸ, ಉಬ್ಬಸ, ಕೆಮ್ಮು, ಅಗ್ನಿಮಾಂದ್ಯ, ಮೂಲವ್ಯಾಧಿ, ಶ್ವಯಥು, ಊರ್ಧ್ವವಾಯು, ಇವುಗಳನ್ನು ಜಯಿಸುವದು.

136. ಲಾಕ್ಷಾರಸಸಮಂ ತೈಲಂ ತೈಲಾನ್ಮಸ್ತು ಚತುರ್ಗುಣಮ್ ।
ಲಾಕ್ಷಾದಿತೈಲ ಅಶ್ವಗಂಧಾನಿಶಾದಾರುಕೌನ್ತೀಕುಷ್ಠಾಬ್ದಚನ್ದನೈಃ ॥
ಸಮೂರ್ವಾರೋಹಿಣೀರಾಸ್ನಾಶತಾಹ್ವಾಮಧುಕೈಃ ಸಮೈಃ ।
ಸಿದ್ಧಂ ಲಾಕ್ಷಾದಿಕಂ ನಾಮ ತೈಲಮಭ್ಯಂಜನಾದಿನಾ ॥
ಸರ್ವಜ್ವರಕ್ಷಯೋನ್ಮಾದಸರ್ವಾಪಸ್ಮಾರವಾತನುತ್ ।
ಯಕ್ಷರಾಕ್ಷಸಭೂತಘ್ನಂ ಗರ್ಭಿಣೀನಾಂ ಪ್ರಶಸ್ಯತೇ
(ಚಿ. ಸಾ. ಸಂ. 68)

ತೈಲಕ್ಕೆ ಸಮಪಾಲು ಕಡ್ಡಿಅರಗಿನ ರಸ, ಅದಕ್ಕೆ ನಾಲ್ಕು ಪಾಲಷ್ಟು ಮೊಸರಿನ ನೀರು, (ಕಲ್ಕವಾಗಿ) ಅಶ್ವಗಂಧಿ, ಅರಸಿನ, ದೇವದಾರ, ರೇಣುಕೆಬೀಜ, ಚಂಗಲಕೋಷ್ಠ, ಭದ್ರಮುಷ್ಟಿ, ಶ್ರೀಗಂಧ, ಹೆಗ್ಗುರುಟಿಗೆಬೇರು (ಮಲ. ಪೆರುಂಕುರುಂಬ), ಕಟುಕರೋಹಿಣಿ, ರಾಸ್ಮೆಗಡ್ಡೆ (ಅರತೆ), ಸಬ್ಬಸಿಗೆಬೀಜ (ಸತಾಪೆ), ಜ್ಯೇಷ್ಠಮಧು, ಇವುಗಳನ್ನು ಸಮಾಂಶವಾಗಿ (ಒಟ್ಟು ತೈಲಕ್ಕೆ ಕಾಲಂಶವಾಗುವಷ್ಟು) ತೆಗೆದುಕೊಂಡು ಮಾಡಿದ ಚೂರ್ಣ ಸಹ, ಕಲಸಿ ಪಕ್ವಮಾಡಿದ 'ಲಾಕ್ಷಾದಿ' ಎಂಬ ತೈಲವನ್ನು ಅಭ್ಯಂಜನ ಮುಂತಾದ್ದಕ್ಕೆ ಉಪಯೋಗಿಸುವದರಿಂದ ಸರ್ವಜ್ವರ, ಕ್ಷಯ, ಉನ್ಮಾದ, ಸರ್ವ ಅಪಸ್ಮಾರ, ವಾತ, ಯಕ್ಷ-ರಾಕ್ಷಸ-ಭೂತಗಳ ಪೀಡೆ, ಸಹ ಪರಿಹಾರನಾಗುವವು. ಈ ತೈಲವು ಗರ್ಭಿಣಿಯರಿಗೆ ಪ್ರಶಸ್ತವಾದದ್ದು.

ಷರಾ ಬೇರೊಂದು ಪುಸ್ತಕದಲ್ಲಿ ಕಾಣುವ ಈ ತೈಲದ ಯೋಗದಲ್ಲಿ ಲವಂಗಪಟ್ಟೆಯನ್ನು ಕಲ್ಕದ್ರವ್ಯಗಳೊಳಗೆ ಹೆಚ್ಚಾಗಿ ಸೇರಿಸಿದ್ದು ಕಾಣುತ್ತದೆ ಈ ತೈಲವು ಉಬ್ಬಸದವರಿಗೆ ಹಿತವಾದ್ದು ಕಲ್ಕದ್ರವ್ಯಗಳಿಗೆ ಜೀರಿಗೆಯನ್ನು ಅಧಿಕವಾಗಿ ಕೂಡಿಸಿ, ಇದೇ ಯೋಗವನ್ನು 'ಕೌನ್ತ್ಯಾದಿತೈಲ' ಎಂಬ ಹೆಸರನ್ನಿಟ್ಟು ಬರೆದದ್ದು ಸಹ ಕಾಣುತ್ತದೆ (ವೈ. ಸಾ. ಸಂ. 120)

ಕಡ್ಡಿಅರಗನ್ನು ತೊಳೆದು ಪುಡಿಮಾಡಿ, ಸಮಪಾಲು ನೀರಿನಲ್ಲಿ ಒಂದು ದಿನ ನೆನೆಯಲಿಟ್ಟು, ಮಾರನೇ ದಿನ ಹಿಂಡಿ ತೆಗೆದ ರಸವನ್ನಾಗಲಿ, ಸಾಧಾರಣವಿಧಿಪ್ರಕಾರ ಕಷಾಯವನ್ನು ಕಾಯಿಸಿ ಶೋಧಿಸಿದ ಕಷಾಯವನ್ನಾಗಲಿ, 'ಲಾಕ್ಷಾರಸ'ದ ಸ್ಥಾನದಲ್ಲಿ ಉಪಯೋಗಿಸುತ್ತಾರೆ ಕಷಾಯ ಮಾಡುವದಾದರೆ, ಅರಗು ಕರಗಿ ಪಾತ್ರದ ಅಡಿಗೆ ಹಿಡಿಯದಂತೆ ಅದರ ಪುಡಿಯನ್ನು ವಸ್ತ್ರದಲ್ಲಿ ಸಡಿಲಾಗಿ ಕಟ್ಟಿ ಹಾಕುವದು ಒಳ್ಳೇದು

ಮೊಸರಿನಿಂದ ನೀರನ್ನು ಪ್ರತ್ಯೇಕಿಸುವದಕ್ಕೆ, ಮೊಸರನ್ನು ಒಂದು ವಸ್ತ್ರದಲ್ಲಿ ಕಟ್ಟಿ ತೂಗಹಾಕಿ, ಒಸರುವ ನೀರನ್ನು ಹಿಡಿಯುವದಕ್ಕೆ ಅಡಿಯಲ್ಲಿ ಪಾತ್ರವಿಡುವದು, ಅಥವಾ ಸಾಕಷ್ಟು ಆಳವುಳ್ಳ ಮತ್ತು ಅಗಲ ಬಾಯಿಯ ಪಾತ್ರದ ಬಾಯಿಗೆ ವಸ್ತ್ರ ಕಟ್ಟಿ, ಅದರ ಮೇಲೆ ಮೊಸರನ್ನು ಹೊಯಿದಿಡುವದು

137. ಲಾಕ್ಷೋಶೀರಬಲಾಕ್ವಾಥೇ ಜಲೇ ದ್ವಿಪ್ರಸ್ಥಮಸ್ತುಕೇ ।
ಪೃಶ್ನಿಪರ್ಣೀ ವಿಷದ್ವನ್ದ್ವ ದ್ವೇ ಹರಿದ್ರೇ ಶತಾವರೀ ॥
ಜೀವಕರ್ಷಭಕೌ ರಾಸ್ನಾ ಸರಲಂ ದೇವದಾರು ಚ ।
ಮುಸ್ತಾ ವಿದಾರೀ ಮಂಜಿಷ್ಠಾ ವಾಲಕಾಗರುವತ್ಸಕಮ್ ॥
ಕುಷ್ಠಲೋಹಿತಯಷ್ಟೀಂ ಚ ಮಧುಕಂ ದ್ವೇ ಚ ಶಾರಿಬಮ್ ।
ಅನನ್ತಾಮಲಕಾಮೂರ್ವಾಮಯೂರಶಿಶಿರದ್ವಯಮ್ ॥
ಅಶ್ವಗನ್ಧಾಕಣಾಕೌನ್ತೀತಿಕ್ತಾಶ್ಯೋನಾಕದೀಪ್ಯಕಮ್ ।
ಪಾಠಾಂ ಭಾರ್ಙ್ಗೀಂ ಚ ಸಂಪೇಷಿ(?ಪಿಷ್ಯ) ತೈಲಪ್ರಸ್ಥಂ ವಿಪಾಚಯೇತ್ ॥
ತತೋ ಮನ್ದಾಗ್ನಿನಾ ಪಕ್ವಂ ತೈಲಮಭ್ಯಂಜನಾದಿನಾ ।
ಜೀರ್ಣಜ್ವರಕ್ಷಯೋನ್ಮಾದಶ್ವಾಸಾಪಸ್ಮಾರಪಾಪ್ಮಜಿತ್ ॥
ಬಲಪುಷ್ಟ್ಯರ್ಥಿನಾಂ ನೃಣಾಂ ಗರ್ಭಿಣೀನಾಂ ಚ ಶಸ್ಯತೇ ॥
(ಸಹಸ್ರಯೋಗ)

ಲಾಕ್ಷೋಶೀರಾದಿ ತೈಲ

ಅರಗು, ಲಾಮಂಚ, ಕಲ್ಲಂಗಡಲೆಬೇರು, ಇವುಗಳ ಕಷಾಯ ೨ ಪ್ರಸ್ಥ, ಎಳ್ಳೆಣ್ಣೆ ೧ ಪ್ರಸ್ಥ, ಮೊಸರಿನ ನೀರು ೨ ಪ್ರಸ್ಥ, (ಕಲ್ಕವಾಗಿ) ಓರೆಲೆಬೇರು, ಅತಿವಿಡೆ, ವಿಡೆ*, ಅರಸಿನ, ಮರದರಸಿನ, ಶತಾವರಿಬೇರು, ಜೀವಕ, ಋಷಭಕ, ರಾಸ್ನೆಗಡ್ಡೆ (ಅರತೆ), ಸರಳದೇವದಾರ, ತುಪ್ಪದೇವದಾರ, ಭದ್ರಮುಷ್ಟಿ, ನೆಲಕುಂಬಳಗಡ್ಡೆ, ಮಂಜಿಷ್ಠ, ಇರುವೇರಿ (ಅಥವಾ ಮುಡಿವಾಳ), ಅಗಿಲುಗಂಧ, ಇಂದ್ರಜೀವಿ, ಚಂಗಲಕೋಷ್ಠ, ಪತಂಗಚಕ್ಕೆ, ಜ್ಯೇಷ್ಠಮಧು, ಇಪ್ಪೆಹೂವು, ಬಿಳೇಸುಗಂಧಿಬೇರು, ಕರೀಸುಗಂಧಿಬೇರು, ಬಳ್ಳಿತುರಚನ ಬೇರು, ನೆಲ್ಲಿಚಟ್ಟು, ಹೆಗ್ಗುರುಟಿಗೆಬೇರು, ಬಿಳೇಉತ್ತರಣೆಬೇರು, ಶ್ರೀಗಂಧ, ರಕ್ತಚಂದನ, ಅಶ್ವಗಂಧಿ, ಹಿಪ್ಪಲಿ, ರೇಣಿಕೆಬೀಜ, ಕಟುಕರೋಹಿಣಿ, ಆನೆಮುಂಗು, ಓಮ, ಪಾಡಾವಳಿಗಡ್ಡೆ, ನಿರ್ವಿಷದ ಬೇರು, ಇವುಗಳ ಚೂರ್ಣವನ್ನು ದ್ರವಗಳೊಳಗೊಂದರಿಂದ ಅರೆದು, ಆ ಕಲ್ಕ ಸಹ ಒಟ್ಟು ಕೂಡಿಸಿ, ಮಂದಾಗ್ನಿಯಿಂದ ಪಾಕಮಾಡಿದ ತೈಲವನ್ನು ಅಭ್ಯಂಗಾದಿಗಳಿಗೆ ಉಪಯೋಗಿಸುವದರಿಂದ ಜೀರ್ಣಜ್ವರ, ಕ್ಷಯ, ಉನ್ಮಾದ, ಉಬ್ಬಸ, ಅಪಸ್ಮಾರರೋಗ ಸಹ ಪರಿಹಾರವಾಗುವವು. ಈ ತೈಲವು ಬಲಪುಷ್ಟಿಯುಂಟಾಗಬೇಕಾದವರಿಗೂ ಗರ್ಭಿಣಿಯರಿಗೂ ಪ್ರಶಸ್ತವಾಗಿರುತ್ತದೆ.

*ಇದು ಅತಿವಿಡೆಯಂತೆ ಒಳಗೆ ಬಹು ಬೆಳ್ಳಗೆ ಮತ್ತು ಹಿಟ್ಟುಳ್ಳದ್ದು ಆಗಿರುವ ಗಡೆ; ಆದರೆ ಅದರಲ್ಲಿ ಕಹಿರಸವಿಲ್ಲ; ಅತಿವಿಡೆಯ ಹಾಗೆ ಸ್ವಲ್ಪ ಉದ್ದ ಮತ್ತು ಉರುಟು ಆಗಿರುತ್ತದೆ

138. ಬಲಾಶ್ವಗನ್ಧಾಲಾಕ್ಷಾಣಾಂ ಕ್ವಾಥೇ ಪಾದಾವಶೇಷಿತೇ |
ತೈಲಪ್ರಸ್ಥಂ ಪಚೇದ್ಧೀಮಾನ್ ದಧಿಮನ್ಥ(?ಸ್ತು)ಚತುರ್ಗುಣೈಃ ||

ಬಲಾಶ್ವಗಂಧಾದಿ ತೈಲ

ರಾಸ್ನಾಚನ್ದನಮಂಜಿಷ್ಠಾದೂರ್ವಾಮಧುಕಚೋರಕೈಃ |
ಶಾರಿಬೋಶೀರಜಲದಕುಷ್ಠಾಗರುಸುರದ್ರುಮೈಃ ||
ಹರಿದ್ರಾಕುಮುದಕಾನ್ತೀಶತಾಹ್ವಾಪದ್ಮಕೇಸರೈಃ |
ಕಲ್ಕೈರೇಭಿಸ್ಸುಸಂಯುಕ್ತಾ ಕಾರ್ಷಿಕೈಶ್ಚ ಸುಪೇಷಿತೈಃ ||
ಶನೈರ್ಮೃದ್ವಗ್ನಿನಾ ಪಕ್ತ್ವಾ ಗಾಲಯೇದ್ಭಾಜನೇ ಶುಭೇ |
ಪ್ರಶಸ್ತೇ ತಿಥಿನಕ್ಷತ್ರೇ ತತ್ತೈಲಂ ಶೀಲಯೇನ್ನರಃ ||
ತೇನ ಸರ್ವಜ್ವರೋನ್ಮಾದಕ್ಷಯಕಾಸಾದಯೋ ಗದಾಃ |
ನಶ್ಯನ್ತಿ ವಿವಿಧಾಶ್ಚೈವ ವಾತರೋಗಾ ನ ಸಂಶಯಃ |
ಅಶ್ವಿಭ್ಯಾಂ ನಿರ್ಮಿತಂ ತೈಲಮೇತತ್ ಪುಷ್ಟಿಕರಂ ಪರಮ್ |
(ಸಹಸ್ರಯೋಗ 19)

ಕಲ್ಲಂಗಡಲೆಬೇರು, ಅಶ್ವಗಂಧಿ, ಅರಗು, ಇವುಗಳ ಪಾದಾವಶೇಷ ಕಷಾಯದಲ್ಲಿ (೧೬ ತೊಲೆ ಪ್ರಕಾರ ಔಷಧಗಳನ್ನು ತೆಗೆದುಕೊಂಡು, ೪ ಪ್ರಸ್ಥ ನೀರಿಟ್ಟು, ೧ ಪ್ರಸ್ಥಕ್ಕೆ ಬತ್ತಿಸಿದ ಕಷಾಯದಲ್ಲಿ), ೧ ಪ್ರಸ್ಥ ಎಳ್ಳೆಣ್ಣೆಯನ್ನೂ, ೪ ಪ್ರಸ್ಥ ಮೊಸರಿನ ನೀರನ್ನೂ ಕೂಡಿಸಿ, ಅರತೆ, ಶ್ರೀಗಂಧ, ಮಂಜಿಷ್ಠ, ದೂರ್ವೆ, ಜ್ಯೇಷ್ಠಮಧು, ಚೋರಕ, ಸುಗಂಧಿ ಬೇರು (ನನ್ನಾರಿ), ಲಾಮಂಚ, ಭದ್ರಮುಷ್ಟಿ, ಚಂಗಲಕೋಷ್ಠ, ಅಗರುಗಂಧ, ದೇವದಾರ, ಅರಸಿನ, ನೈದಿಲೆ, ರೇಣಿಕೆಬೀಜ, ಸಬ್ಬಸಿಗೆ, ತಾವರೆಕೇಸರ, ಇವುಗಳನ್ನು ಒಂದು ಕರ್ಷ (|॥ ತೊಲೆ) ಪ್ರಕಾರ ತೆಗೆದುಕೊಂಡು ಮಾಡಿದ ಚೂರ್ಣವನ್ನು ಅರೆದು (ಕಲ್ಕವಾಗಿ) ಬೆರಸಿ, ಸಣ್ಣ ಉರಿಯಿಂದ ಮೆಲ್ಲನೆ ಕಾಯಿಸಿ, ಪಾಕಬಂದ ಕೂಡಲೆ ಶೋಧಿಸಿ, ಶುಭ್ರವಾದ ಪಾತ್ರದಲ್ಲಿಟ್ಟುಕೊಂಡ ತೈಲವನ್ನು ಪ್ರಶಸ್ತವಾದ ತಿಥಿನಕ್ಷತ್ರಗಳಲ್ಲಿ (ಪಾನಾಭ್ಯಂಜನಾದಿಗಳಿಗೆ) ಉಪಯೋಗಿಸುತ್ತಾ ಬಂದಲ್ಲಿ, ಸರ್ವ ಜ್ವರಗಳು, ಉನ್ಮಾದ, ಕ್ಷಯ, ಕೆಮ್ಮು, ಮುಂತಾದ ರೋಗಗಳು ಮತ್ತು ನಾನಾ ವಿಧದ ವಾತರೋಗಗಳು ನಾಶವಾಗುವದರಲ್ಲಿ ಸಂದೇಹವಿಲ್ಲ. ಅಶ್ವಿನೀದೇವತೆಗಳಿಂದ ನಿರ್ಮಿಸಲ್ಪಟ್ಟ ಈ ತೈಲವು ಪುಷ್ಟಿಯನ್ನುಂಟುಮಾಡುವದಕ್ಕೆ ಉತ್ತಮವಾದದ್ದು.

139. ಸಹದೇವ್ಯರ್ಕತುಲಸೀಚಿಂಚಾಪತ್ರರಸಾಢಕೇ |
ಕಾಂಜಿಕಸ್ಯಾಢಕಂ ದತ್ವಾ ತೈಲಪ್ರಸ್ಥಂ ವಿಪಾಚಯೇತ್ ||

ಸಹದೇವ್ಯಾದಿ ತೈಲ.

ಮುಸ್ತಾಶ್ವಗನ್ಧಾರಜನೀಮಧೂಕೋಶೀರಚನ್ದನೈಃ |
ತಿಕ್ತಾಮೃತಾಗ್ನಿಮರಿಚೈರ್ದಾರ್ವೀಮಿಸಿಮಹೌಷಧೈಃ ||
ಪಿಪ್ಪಲ್ಯಾಃ ಕಲ್ಕಿತೈಸ್ಸಿದ್ಧಂ ತೈಲಮಭ್ಯಂಜನಂ ಜಯೇತ್ |
ಸೂತಿಕಾಬಾಲವೃದ್ಧಾನಾಂ ಗರ್ಭಿಣೀನಾಂ ಚ ಶಸ್ಯತೇ ||
ಯಕ್ಷರಾಕ್ಷಸಭೂತಘ್ನಂ ಪಿಶಾಚಾನಾಂ ನಿವಾರಣೇ |
ತೈಲಾನಾಮುತ್ತಮಮಿದಂ ಶೀತಿಕಾನಾಶನಂ ಪರಮ್ ||
ಸನ್ತತಾದಿಜ್ವರಂ ಹನ್ಯಾದ್ವಿಷಮಜ್ವರನಾಶನಮ್ || (ವೈ. ಸಾ. ಸಂ. 125-6)

ಸಹದೇವಿಸಮೂಲದ ರಸ ೧ ಪ್ರಸ್ಥ, ಎಕ್ಕೆಎಲೆರಸ ೧ ಪ್ರಸ್ಥ, ತುಳಸೀಎಲೆರಸ ೧ ಪ್ರಸ್ಥ, ಹುಣಸೇಸೊಪ್ಪಿನ ರಸ ೧ ಪ್ರಸ್ಥ, ಹುಳಿಗಂಜಿನೀರು ೪ ಪ್ರಸ್ಥ, ಎಳ್ಳೆಣ್ಣೆ ೧ ಪ್ರಸ್ಥ, ಇವುಗಳನ್ನೂ, ಭದ್ರಮುಷ್ಟಿ, ಅಶ್ವಗಂಧಿ, ಅರಸಿನ, ಜ್ಯೇಷ್ಠಮಧು, ಲಾಮಂಚ, ಶ್ರೀಗಂಧ, ಕಟುಕರೋಹಿಣಿ, ಅಮೃತಬಳ್ಳಿ, ಚಿತ್ರಮೂಲ, ಕಾಳುಮೆಣಸು, ಮರದರಸಿನ, ಸಬ್ಬಸಿಗೆಬೀಜ, ಶುಂಠಿ, ಹಿಪ್ಪಲಿ, ಇವುಗಳ(ನ್ನು ಸಮತೂಕವಾಗಿ, ಒಂದು ಕರ್ಷ ಪ್ರಕಾರ, ತೆಗೆದುಕೊಂಡು ಮಾಡಿದ ಚೂರ್ಣದ) ಕಲ್ಕವನ್ನೂ, ಬೆರಸಿ ಪಾಕಮಾಡಿದ ತೈಲವು ಅಭ್ಯಂಗಕ್ಕೆ ಉತ್ತಮವಾದದ್ದು; ಬಾಣಂತಿಯರಿಗೆ, ಬಾಲಕರಿಗೆ, ಮುದುಕರಿಗೆ, ಗರ್ಭಿಣಿಯರಿಗೆ ಸಹ ಪ್ರಶಸ್ತವಾದದ್ದು, ಯಕ್ಷ-ರಾಕ್ಷಸ-ಭೂತ-ಪಿಶಾಚಗಳ ಬಾಧೆಯನ್ನು ನಿವಾರಿಸುವದಕ್ಕೆ ತೈಲಗಳಲ್ಲಿ ಇದು ಉತ್ತಮ; ಚಳಿಯನ್ನು ನಾಶಮಾಡುವದಕ್ಕೆ ಶ್ರೇಷ್ಠ; ಮತ್ತು ಸಂತತಾದಿ ಜ್ವರಗಳನ್ನೂ ವಿಷಮಜ್ವರಗಳನ್ನೂ ನಾಶಮಾಡುವದು.

140. ರಾಸ್ನಾಚನ್ದನಕುಷ್ಠನಾಗರಮಿಸೀಯಷ್ಟ್ಯಬ್ದಕೃಷ್ಣಾಬಲಾ-
ಲಾಕ್ಷಾಸೈಂಧವಶಾರಿಬಾಮಧುರಸಾದೇವದ್ರುಮೈರ್ಭೀತಕ್ಯೈಃ |
(ರಾಸ್ನಾದಿ ತೈಲ)
ಸೋಸೀರಾಂಬುಧಿಫೇನರೋಹಿಣೀಜಲ್ಯೈಸ್ತೈಲಂ ಪಚೇತ್ ಷಡ್ಗುಣೇ
ತಕ್ರೇ ತತ್ ಶಮಯೇಜ್ಜ್ವರೋಷ್ಮಸಕಲಂ ಶೀತಾದಿದಾಹಾನ್ತಕಮ್ ||
(ವೈ. ಸಾ. ಸಂ. 127)

ರಾಸ್ಮೆಗಡ್ಡೆ (ಅರತೆ), ಶ್ರೀಗಂಧ, ಚಂಗಲಕೋಷ್ಠ, ಶುಂಠಿ, ಸಬ್ಬಸಿಗೆ, ಜ್ಯೇಷ್ಠಮಧು, ಭದ್ರಮುಷ್ಟಿ, ಹಿಪ್ಪಲಿ, ಕಲ್ಲಂಗಡಲೆಬೇರು (ಅದರ ಸಿಪ್ಪೆ), ಅರಗು, ಸೈಂಧವಲವಣ, ಸುಗಂಧಿಬೇರಿನ ಸಿಪ್ಪೆ, ಹೆಗ್ಗುರುಟಿಗೆಬೇರು, ದೇವದಾರ, ಶಾಂತಿಕಾಯಿ(ತಾರೆ)ಸಿಪ್ಪೆ, ಲಾಮಂಚ, ಕಡಲನಾಲಿಗೆ, ಕಟುಕರೋಹಿಣಿ, ಇರುವೇರಿದಂಟು (ಅಥವಾ ಮುಡಿವಾಳ), ಇವುಗಳನ್ನು ಸಮಪಾಲು ತೆಗೆದುಕೊಂಡು, ಮಾಡಿದ ಚೂರ್ಣದಿಂದ (ಅದಕ್ಕೆ ೪ ಪಾಲು) ತೈಲವನ್ನು, ಅದರ ೬ ಪಾಲು ಮಜ್ಜಿಗೆಯಲ್ಲಿ, ಕಾಯಿಸಬೇಕು. ಈ ತೈಲವು ಶೀತಜ್ವರ ಮೊದಲುಗೊಂಡು ಉರಿಜ್ವರದ ವರೆಗಿನ ಸಕಲ ಜ್ವರಪ್ರಕೋಪಗಳನ್ನು ಶಮನಮಾಡುವದು.

141 ತ್ರಿಫಲಾ ರಜನೀಯುಗ್ಮಂ ಕಂಟಕಾರೀಯುಗಂ ಶಟೀ |
ತ್ರಿಕಟು ಗ್ರಂಥಿಕಂ ಮೂರ್ವಾ ಗುಡೂಚೀ ಧನ್ವಯಾಸಕಃ ||
(ಸುದರ್ಶನ ಚೂರ್ಣ.)
ಕಟುಕಾ ಪರ್ಪಟೋ ಮುಸ್ತಂ ತ್ರಾಯಮಾಣಾ ಚ ವಾಲಕಮ್ |
ನಿಂಬಃ ಪುಷ್ಕರಮೂಲಂ ಚ ಮಧುಯಷ್ಟೀ ಚ ವಾಸಕಃ ||
ಯವಾನೀಂದ್ರಯವೋ ಭಾರ್ಂಗೀ ಶಿಗ್ರುಬೀಜಂ ಸುರಾಷ್ಟ್ರಜಾ |
ವಚಾತ್ವಕ್ಪದ್ಮಕೋಶೀರಚನ್ದನಾತಿವಿಷಾಬಲಾಃ ||
ಶಾಲಿಪರ್ಣೀ ಪೃಷ್ಟಿಪರ್ಣೀ ವಿಡಂಗಂ ತಗರಂ ತಥಾ |
ಚಿತ್ರಕಂ ದೇವಕಾಷ್ಠಂ ಚ ಚವ್ಯಂ ಪತ್ರಂ ಪಟೋಲಜಮ್
ಜೀವಕರ್ಷಭಕೌ ಚೈವ ಲವಂಗಂ ವಂಶಲೋಚನಮ್ |
ಪುಂಡರೀಕಂ ಚ ಕಾಕೋಲೀ ಪತ್ರಕಂ ಜಾತಿಪತ್ರಕಮ್ ||

ತಾಲೀಸಪತ್ರಮೇತಾನಿ ಸಮಭಾಗಾನಿ ಚೂರ್ಣಯೇತ್ ।
ಅರ್ಧಾಂಶಂ ಸರ್ವಚೂರ್ಣಸ್ಯ ಕಿರಾತಂ ಪ್ರಕ್ಷಿಪೇತ್ಸುಧೀಃ ॥
ಏತತ್ಸುದರ್ಶನಂ ನಾಮ ಚೂರ್ಣಂ ದೋಷತ್ರಯಾಪಹಮ್ ।
ಜ್ವರಾಂಶ್ಚ ನಿಖಿಲಾನ್ ಹನ್ತಿ ನಾತ್ರ ಕಾರ್ಯಾ ವಿಚಾರಣಾ ॥
ದೋಷಜಾಗನ್ತುಕಾಂಶ್ಚಾಪಿ ಧಾತುಸ್ಥಾನ್ವಿಷಮಜ್ವರಾನ್ ।
ಸನ್ನಿಪಾತೋದ್ಭವಾಂಶ್ಚಾಪಿ ಮಾನಸಾನಪಿ ನಾಶಯೇತ್ ॥
ಶೀತಾದೀನಪಿ ದಾಹಾದೀನ್ಮೋಹಂ ತನ್ದ್ರಾಂ ಭ್ರಮಂ ತೃಷಾಮ್ ।
ಕಾಸಂ ಶ್ವಾಸಂ ಚ ಪಾಂಡುಂ ಚ ಹೃದ್ರೋಗಂ ಕಾಮಲಾಮಪಿ ॥
ತ್ರಿಕಪೃಷ್ಠಕಟೀಜಾನುಪಾರ್ಶ್ವಶೂಲಂ ನಿವಾರಯೇತ್ ।
ಶೀತಾಮ್ಬುನಾ ಪಿಬೇದೇತತ್ಸರ್ವಜ್ವರನಿವೃತ್ತಯೇ ॥
ಸುದರ್ಶನಂ ಯಥಾ ಚಕ್ರಂ ದಾನವಾನಾಂ ವಿನಾಶನಮ್ ।
ತಥಾ ಜ್ವರಾಣಾಂ ಸರ್ವೇಷಾಂ ಚೂರ್ಣಮೇತತ್ಪ್ರಣಾಶನಮ್ ॥
(ಭಾ. ಪ್ರ 262, 263)

ತ್ರಿಫಲೆ, ಅರಸಿನ, ಮರದರಸಿನ, ಕಿರಿಗುಳ್ಳದ ಬೇರು, ಗುಳ್ಳದ ಬೇರು, ಸಣ್ಣಕಚೋರ, ತ್ರಿಕಟು, ಹಿಪ್ಪಲಿಮೂಲ, ಹೆಗ್ಗುರುಟಿಗೆಯ ಬೇರು, ಅಮೃತಬಳ್ಳಿ, ಬಳ್ಳಿತುರಚನ ಬೇರು, ಕಟುಕರೋಹಿಣಿ, ಪರ್ಪಾಟಕ, ಭದ್ರಮುಷ್ಟಿ, ತ್ರಾಯಮಾಣ, ಮುಡಿವಾಳ (ಅಥವಾ ಇರುವೇರಿ), ಕಹಿಬೇವಿನ ಚಕ್ಕೆ, ಪುಷ್ಕರಮೂಲ, ಜ್ಯೇಷ್ಠಮಧು, ಆಡುಸೋಗೆಬೇರಿನ ಸಿಪ್ಪೆ, ಓಮ, ಇಂದ್ರಜೇವಿ, ನಿರ್ವಿಷದ ಬೇರು, ನುಗ್ಗೆಬೀಜ, ಗೋಪೀಚಂದನ (ಅಥವಾ ಪಟಿಕಾರದ ಅರಳು), ಬಜೆ, ಲವಂಗಪಟ್ಟೆ, ಪದ್ಮಕಾಷ್ಠ, ಲಾಮಂಚ, ಶ್ರೀಗಂಧ, ಅತಿವಿಡೆ, ಕಲ್ಲಂಗಡಲೆಬೇರಿನ ಸಿಪ್ಪೆ, ಮೂವೆಲೆಬೇರು, ಓರೆಲೆಬೇರು, ವಾಯುವಿಳಂಗ, ತಗರ, ಚಿತ್ರಮೂಲ, ದೇವದಾರ, ಕಾಡುಮೆಣಸಿನ ಬೇರು, ಕಹಿಪಡುವಲ ಎಲೆ, ಜೀವಕ, ಋಷಭಕ, ಲವಂಗ, ಬಿದಿರುಪ್ಪು, ತಾವರೆ ಹೂವು, ಕಾಕೋಲಿ, ದಾಲ್ಚೀನಿಎಲೆ, ಜಾಪತ್ರೆ, ತಾಳೀಸಪತ್ರೆ, ಇವುಗಳನ್ನು ಸಮಾಂಶವಾಗಿ ತೆಗೆದುಕೊಂಡು ಚೂರ್ಣಿಸಿ, ಆ ಚೂರ್ಣಕ್ಕೆ ಅರ್ಧಾಂಶ ನೆಲಬೇವಿನ (ಅಥವಾ ಕಿರಾತ ಕಡ್ಡಿಯ) ಚೂರ್ಣವನ್ನು ಕೂಡಿಸಬೇಕು. ಈ 'ಸುದರ್ಶನ' ಎಂಬ ಚೂರ್ಣದಿಂದ ತ್ರಿದೋಷ ಪರಿಹಾರ ಆಗುವದು, ಸಮಸ್ತ ಜ್ವರಗಳು ನಾಶವಾಗುವದಕ್ಕೆ ಸಂದೇಹವಿಲ್ಲ, ವಾತಾದಿ ದೋಷಗಳಿಂದುಂಟಾದ ಜ್ವರಗಳು, ಆಗಂತು ಜ್ವರಗಳು, ಧಾತುಗಳನ್ನು ಆಶ್ರಯಿಸಿ ನಿಂತು ಕೊಂಡ ಜ್ವರಗಳು, ವಿಷಮಜ್ವರಗಳು, ಸನ್ನಿಪಾತಜ್ವರಗಳು, (ಕಾಮಶೋಕಾದಿ) ಮಾನಸಿಕ ಜ್ವರಗಳು, ಶೀತಾದಿ ಜ್ವರಗಳು, ದಾಹಾದಿ ಜ್ವರಗಳು, ಮೋಹ, ತಂದ್ರೆ, ಭ್ರಮೆ, ಬಾಯಾರಿಕೆ, ಕೆಮ್ಮು, ಉಬ್ಬಸ, ಪಾಂಡು, ಹೃದ್ರೋಗ, ಕಾಮಿಲೆ, ಬೆನ್ನ ಕೋಲೆಲುಬಿನ ಬುಡದ ಶೂಲೆ, ಬೆನ್ನ ಶೂಲೆ, ಸೊಂಟದ ಶೂಲೆ, ಕಾಲ ಮೊಣಗಂಟಿನ ಶೂಲೆ, ಪಕ್ಕದ ಶೂಲೆ, ಇವುಗಳ ನಿವಾರಣೆಯಾಗುವದು; ಸರ್ವಜ್ವರನಿವೃತ್ತಿಗೂ ಈ ಚೂರ್ಣವನ್ನು ತಣ್ಣೀರಿನೊಂದಿಗೆ ಕೊಡುವದು. ವಿಷ್ಣುವಿನ ಸುದರ್ಶನ ಚಕ್ರವು ದಾನವರಿಗೆ ಹೇಗೆ ನಾಶಕರವೋ ಹಾಗೆ, ಸರ್ವ ಜ್ವರಗಳಿಗೂ ಈ ಚೂರ್ಣವು ನಾಶಕರವಾದ್ದು.

ಷರಾ 'ಪತ್ರಂ ಪಟೋಲಜಂ' ಎಂಬಲ್ಲಿ 'ದ್ರಾಕ್ಷಾಪಟೋಲಜಂ' (ಅಂದರೆ ದ್ರಾಕ್ಷಿ ಮತ್ತು ಕಹಿಪಡುವಲು) ಎಂತ ಪಾಠಾಂತರ ಕಾಣುತ್ತದೆ 'ಸುರಾಷ್ಟ್ರಜಾ' ದೊರಕದಿದ್ದಲ್ಲಿ ಪಟಿಕಾರದ ಅರಳನ್ನು ಹಾಕಬೇಕಾಗಿ ವ್ಯಾಖ್ಯಾನಕಾರ 'ಸುರಾಷ್ಟ್ರಕಂ' ಎಂದರೆ ಪಟಿಕಾರ ಎಂತಲೂ, ಅದರ ಸ್ಥಾನದಲ್ಲಿ ಕೆಲವರು 'ಶ್ವದಂಷ್ಟ್ರಕಂ' ಎಂತ ಪಾಠವಿಟ್ಟು, ನೆಗ್ಗಿಲ ಮುಳ್ಳನ್ನು ಉಪಯೋಗಿಸುತ್ತಾರಾಗಿಯೂ ದೀ ವ್ಯಾಖ್ಯಾನ (ಪು 182) ಪಟಿಕಾರವನ್ನು ಉಪಯೋಗಿಸುವಹಾಗಾದರೆ, ಅದನ್ನು ಕರಗಿಸಿ ಅರಳುಮಾಡಿಕೊಳ್ಳಬೇಕು

142. ರಸೋ ಗಂಧೋ ವಿಷಂ ಶುಂಠೀ ಪಿಪ್ಪಲೀ ಮರಿಚಾನಿ ಚ |
ಪಥ್ಯಾ ವಿಭೀತಕಂ ಧಾತ್ರೀ ದನ್ತೀಬೀಜಂ ಚ ಶೋಧಿತಮ್
ಚೂರ್ಣಮೇಷಾಂ ಸಮಾಂಶಾನಾಂ ದ್ರೋಣಪುಷ್ಪೀರಸೈಃ ಪುಟೇತ್ |
ವಟೀಂ ಮಾಷನಿಭಾಂ ಕುರ್ಯಾದ್ಭಕ್ಷಯೇನ್ನೂತನೇ ಜ್ವರೇ ||

ನವಜ್ವರಹರ ಮಾತ್ರೆ

(ಭಾ. ಪ್ರ. 265)

ಶುದ್ಧ ಪಾದರಸ, ಶುದ್ಧ ಗಂಧಕ, ಶುದ್ಧ ವತ್ಸನಾಭಿ, ಶುಂಠಿ, ಹಿಪ್ಪಲಿ, ಬಿಳೇ ಕಾಳು ಮೆಣಸು, ಅಣಲೆಕಾಯಿಸಿಪ್ಪೆ, ಶಾಂತಿ(ತಾರೆ)ಕಾಯಿಸಿಪ್ಪೆ, ನೆಲ್ಲಿಚಟ್ಟು, ಶುದ್ಧ ಜೇಪಾಳದ ಬೀಜ, ಇವುಗಳನ್ನು ಸಮಾಂಶವಾಗಿ ತೆಗೆದುಕೊಂಡು ಚೂರ್ಣಿಸಿ, ಆ ಚೂರ್ಣವನ್ನು ತುಂಬೆ ಸೊಪ್ಪಿನ ರಸದೊಂದಿಗೆ ನುಣ್ಣಗಾಗುವ ತನಕ (ನಾಲ್ಕು ಜಾಮಕಾಲ) ಅರೆದು, ಉದ್ದಿನ ಕಾಳಿನ ಗಾತ್ರದ ಮಾತ್ರೆಗಳನ್ನು ಮಾಡಿ ನೆಳಲಲ್ಲಿ ಒಣಗಿಸಿಟ್ಟುಕೊಂಡು, ಈ ಮಾತ್ರೆಯನ್ನು (ಹೊತ್ತಿಗೆ ೧ರಂತೆ ಸಾಧಾರಣವಾಗಿ ಶುಂಠಿರಸದಲ್ಲಿ ತೇದಿ) ನವಜ್ವರದಲ್ಲಿ ಸೇವಿಸುವದು.

ಷರಾ ಹಿಂದ 'ಕಾಸ' ಪ್ರಕರಣದಲ್ಲಿ (ಪು 310) ವರ್ಣಿಸಲ್ಪಟ್ಟ 'ಜ್ವರಭೈರವ' ಮಾತ್ರೆಯ ಯೋಗವನ್ನು ನೋಡಿ.

143. ಸೂತಂ ಗನ್ಧಂ ವಿಷಂ ತುಲ್ಯಂ ಧೂರ್ತಬೀಜಂ ತ್ರಿಭಿಃ ಸಮಮ್ |
ತಚ್ಚೂರ್ಣಾದ್ದ್ವಿಗುಣಂ ವ್ಯೋಷಂ ಚೂರ್ಣಂ ಗುಂಜಾದ್ವಯಂ ಹಿತಮ್
ಜಮ್ಬೀರಕಸ್ಯ ಮಜ್ಜಾಭಿರಾರ್ದ್ರಕಸ್ಯ ರಸೈರ್ಯುತಮ್ |
ಮಹಾಜ್ವರಾಂಕುಶೋ ನಾಮ ಜ್ವರಾಣಾಂ ಮೂಲಕೃನ್ತನಃ ||
ಏಕಾಹಿಕಂ ದ್ವ್ಯಾಹಿಕಂ ಚ ತೃತೀಯಕಚತುರ್ಥಕೌ |
ರಸೋ ಪತ್ಯೋಽನುಪಾನೇನ ಜ್ವರಾನ್ ಸರ್ವಾನ್ ವ್ಯಪೋಹತಿ ||

ಮಹಾಜ್ವರಾಂಕುಶ ಮಾತ್ರೆ

(ರ ಚಿ. 80)

(ಶುದ್ಧಮಾಡಲ್ಪಟ್ಟ) ಪಾದರಸ, ಗಂಧಕ ಮತ್ತು ವತ್ಸನಾಭಿ, ಇವು ಸಮತೂಕ, ಇವು ಮೂರರ ಒಟ್ಟು ತೂಕಕ್ಕೆ ಸಮತೂಕ ಶುದ್ಧ ಉಮ್ಮತ್ತದ ಬೀಜ, ಇವೆಲ್ಲಕ್ಕೆ ಎರಡು ಪಾಲಷ್ಟು ತ್ರಿಕಟು ಚೂರ್ಣ (ಅಂದರೆ ಕ್ರಮವಾಗಿ, ೧, ೧, ೧, ೩, ४, ४, ४=೧೮), ಇವುಗಳನ್ನೆಲ್ಲ ಕೂಡಿಸಿ, ಆ ಚೂರ್ಣದಿಂದ ಎರಡು ಗುಲುಗುಂಜೀ ತೂಕ ಪ್ರಕಾರ ನಿಂಬೆಹಣ್ಣಿನೊಳಗಿನ ಬೆಂಡಿನೊಂದಿಗೆ, ಶುಂಠಿರಸ ಕೂಡಿಸಿಕೊಂಡು, ಸೇವಿಸುವದು ಹಿತ. ಈ ಮಹಾಜ್ವರಾಂಕುಶ ಎಂಬ ರಸವು ಜ್ವರಗಳ ಮೂಲವನ್ನು ಕಡಿದುಬಿಡುತ್ತದೆ; ಮತ್ತು ಅನುಪಾನ ಭೇದದಿಂದ ಕೊಡಲ್ಪಟ್ಟಲ್ಲಿ, ಏಕಾಹಿಕ, ದ್ವ್ಯಾಹಿಕ, ತೃತೀಯಕ, ಚತುರ್ಥಕ, ಎಂಬ ವಿಷಮಜ್ವರಗಳು ಮುಂತಾದ ಎಲ್ಲಾ ಜ್ವರಗಳನ್ನು ಪರಿಹರಿಸುತ್ತದೆ.

ಷರಾ ಈ ರಸವನ್ನು ಚೂರ್ಣವಾಗಿಟ್ಟುಕೊಳ್ಳುವದರ ಬದಲಾಗಿ ಲಿಂಬೆಹಣ್ಣಿನ ರಸದೊಂದಿಗೆ ನುಣ್ಣಗಾಗಿ (೪ ಜಾಮು) ಮರ್ದಿಸಿ, ಗುಲುಗುಂಜಿಗಾತ್ರದ ಮಾತ್ರೆಮಾಡಿ, ನೆಳಲಲ್ಲಿ ಒಣಗಿಸಿ, ಗಾಳಿ ತಾಗದಂತೆ ಭದ್ರವಾಗಿಟ್ಟು ಕೊಂಡರೆ, ಮಾತ್ರೆಗಳು ಬಹಳ ವರ್ಷಗಳ ವರೆಗೂ ಒಳ್ಳೇ ಸ್ಥಿತಿಯಲ್ಲಿ ಉಳಿಯುವವು ಮತ್ತು ಅನುಪಾನ ಭೇದದಿಂದ ಕೊಡುವದಕ್ಕೆ ಅನುಕೂಲವಾಗುತ್ತದೆ ಇನ್ನೊಂದು ಗ್ರಂಥದಲ್ಲಿ ಚೂರ್ಣವನ್ನು ಶುಂಠಿರಸದೊಂದಿಗೆ ಅರೆಯಬೇಕೆಂಬ ಪಾಠ ಇದೆ (ವೈ ಸಾ ಸಂ. 101) ಶಾ (ಪು 123)ನ ಪಾಠಪ್ರಕಾರ ತ್ರಿಕಟುಬದಲಾಗಿ "ಹೇಮಾಹ್ವಾ" (ಅರಸಿನ ಉಮ್ಮತ್ತ)ವನ್ನು ಕೂಡಿಸುವದಾಗುತ್ತದ ಆ ಪ್ರಕಾರ ಮಾಡಿ ನೋಡಲಿಲ್ಲ ತ್ರಿಕಟು ಕೂಡಿಸಿ ಮಾಡಿದ ಮಾತ್ರೆಯನ್ನೇ ನಾನು ಉಪಯೋಗಿಸುತ್ತಾ ಬಂದದ್ದು, ಅದು ವಿಶೇಷ ಪ್ರಯೋಜನಕಾರಿಯಾಗಿ ಕಂಡದೆ

144\. ಹಿಂಗುಲಂ ಚ ವಿಷಂ ವ್ಯೋಷಂ ಟಂಕಣಂ ಗನ್ಧಕಂ ಸಮಮ್ |
ಜಂಬೀರಸ್ಯ ರಸೇನೈವ ಮರ್ದ್ಯಾದ್ಯಾಮಚತುಷ್ಟಯಮ್ ||
ಕಾಸಶ್ವಾಸೇಽಪ್ಯತೀಸಾರೇ ಗ್ರಹಣ್ಯಾಮಗ್ನಿಮಾಂದ್ಯಕೇ |
ಆಸ್ಯರೋಗೇ ಪ್ರಮೇಹೇ ಚ ಸರ್ಪವೃಶ್ಚಿಕದಷ್ಟಕೇ ||
ಗುಂಜಾಮಾತ್ರಂ ಪ್ರದಾತವ್ಯೋ ರಸೋ ಹ್ಯಾನಂದಭೈರವಃ ||
(ವೈ. ಸಾ. ಸಂ. 107)

ಆನಂದಭೈರವಿ ಮಾತ್ರೆ

(ಶುದ್ಧಮಾಡಿದ) ಇಂಗಳೀಕ, (ಶುದ್ಧ) ವತ್ಸನಾಭಿ, ತ್ರಿಕಟು. ಟಂಕಣಕಾರದ ಅರಳು, (ಶುದ್ಧ) ಗಂಧಕ, ಇವು ೭ ಬಗೆಗಳನ್ನು ಸಮಪಾಲು ತೆಗೆದುಕೊಂಡು, ಲಿಂಬೆಹಣ್ಣಿನ ರಸದಿಂದಲೇ ನಾಲ್ಕು ಜಾಮು ಅರೆದು, ಗುಲುಗುಂಜಿಗಾತ್ರದ ಮಾತ್ರೆಗಳನ್ನು ಮಾಡಿ, ನೆಳಲಲ್ಲಿ ಒಣಗಿಸಿಟ್ಟುಕೊಂಡು, ಒಂದೊಂದು ಮಾತ್ರೆಯಂತೆ (ಅನುಪಾನ ವಿಶೇಷದಿಂದ) ಕೊಟ್ಟಲ್ಲಿ, ಕೆಮ್ಮು, ಉಬ್ಬಸ, ಅತಿಸಾರ, ಗ್ರಹಣಿ, ಅಗ್ನಿಮಾಂದ್ಯ, ಆಸ್ಯ(ಬಾಯಿ)ರೋಗ, ಪ್ರಮೇಹ, ಸರ್ಪ ಕಚ್ಚಿದ ವಿಷ, ಚೇಳು ಕಡಿದ ವಿಷ, ಸಹ ಪರಿಹಾರವಾಗುವವು. ಇದು ಆನಂದಭೈರವಿ ಎಂಬ ಮಾತ್ರೆ.

ಷರಾ ಸರ್ಪನ ವಿಷ ಏರಿ ಮೂರ್ಛೆಯುಂಟಾದಾಗ್ಗೆ, ನೆತ್ತಿಯನ್ನು ಗೀರಿ, ಆ ಗಾಯದ ಮೇಲೆ ಈ ಮಾತ್ರೆಯನ್ನು ಲಿಂಬೆರಸದಿಂದ ತೇದಿ ಲೇಪಿಸುವದರಿಂದ ಪ್ರಯೋಜನ ಉಂಟು ಗಂಧಕದ ಸ್ಥಾನದಲ್ಲಿ ಲವಂಗವನ್ನು ಕೂಡಿಸುವ ಮತಾಂತರ ಉಂಟು (ಹಿಂದಿನ 330ನೇ ಪುಟ ನೋಡಿ) ಈ ಗ್ರಂಥದ ದೃಷ್ಟಫಲ ಚಿಕಿತ್ಸೆಯಲ್ಲಿ ಹೇಳಲ್ಪಟ್ಟ ಆನಂದ ಭೈರವಿ ಮಾತ್ರೆಯು ಹಾಗೆ ಲವಂಗ ಕೂಡಿಸಿ ತಯಾರಿಸಲ್ಪಟ್ಟಂಥಾದ್ದೇ ಆಗಿರುತ್ತದೆ ಕೆಲವರು ಇವೆರಡನ್ನೂ ಬಿಟ್ಟು ಉಳಿದ ಆರು ಬಗೆಗಳಿಂದಲೇ ಮಾತ್ರೆ ಮಾಡಿ ಉಪಯೋಗಿಸುತ್ತಾರೆ ಅದು ಷಡಾನಂದಭೈರವಿ ಆ ಆರು ಬಗೆಗಳೊಳಗೆ ಶುಂಠಿಯನ್ನು ಬಿಟ್ಟು ಮಾಡಿದ ಮಾತ್ರೆ ಪಂಚಾನಂದಭೈರವಿ ಸಪ್ತಾನಂದಭೈರವಿಯನ್ನು ಅನುಪಾನಭೇದದಿಂದ ಎಲ್ಲಾ ಜ್ವರಗಳಲ್ಲಿಯೂ ಉಪಯೋಗಿಸುವ ವಾಡಿಕೆ ಉಂಟು ಸಾಧಾರಣವಾಗಿ ಜ್ವರಕ್ಕೆ ಕೆಂಪು ಮಾತ್ರೆಯನ್ನೂ ಕಪ್ಪು ಮಾತ್ರೆಯನ್ನೂ ಕೂಡಿಸಿ ಕೊಡುತ್ತಾರೆ ಕೆಂಪು ಮಾತ್ರೆ ಎಂಬದು ಆನಂದಭೈರವಿ ಕಪ್ಪು ಮಾತ್ರೆ ಎನ್ನುವದು ಸನ್ನಿಪಾತಭೈರವಿ. ಅದರ ಪ್ರಯೋಗ ಹೇಗೆಂದರೆ —

ಸನ್ನಿಪಾತಭೈರವಿ ಮಾತ್ರೆಯ ಕ್ರಮ

ಶುದ್ಧ ಪಾದರಸ, ಶುದ್ಧ ಗಂಧಕ, ಶುದ್ಧ ವತ್ಸನಾಭಿ, ತ್ರಿಕಟು, ಈ ಆರು ಬಗೆಗಳನ್ನು ಆನಂದಭೈರವಿಯಂತೆ ಲಿಂಬೆ ರಸದಿಂದ ಅರೆದು ಗುಂಜಾಗಾತ್ರದ ಮಾತ್ರೆಗಳನ್ನು ಮಾಡಿ, ಆನಂದಭೈರವಿಯನ್ನು ಕೊಡುವ ಕ್ರಮದಿಂದಲೇ ಕೊಡುವದು ಈ ಮಾತ್ರೆಯಲ್ಲಿ ಗಂಧಕದೊಂದಿಗೆ ಸಂಯೋಗವಾಗದೆ ಉಳಿದ ಪಾದರಸದ ಅಂಶವಿರಬಹುದೆಂಬದರಿಂದ, ಮಾತ್ರೆಗಳು ಒಣಗಿದ ಕೂಡಲೆ, ಅವುಗಳಿಗೆ ವತ್ಸನಾಭಿಯ ಹೊಗೆಯನ್ನು ಕೊಡಬೇಕೆಂಬ ಉಪದೇಶ ಉಂಟು. ಮಾತ್ರೆಗಳನ್ನು ತೆಳ್ಳಗಿನ ವಸ್ತ್ರದ ತುಂಡಿನಲ್ಲಿ ಸಡಿಲಾಗಿ ಕಟ್ಟಿ, ಕೆಂಡ ತುಂಬಿದ ಪಾತ್ರದೊಳಗೆ ವತ್ಸನಾಭಿಯ ಚೂರ್ಣವನ್ನು ಚೆಲ್ಲುತ್ತಾ, ಅದರ ಹೊಗೆ ಮಾತ್ರೆಗಳಿಗೆ ತಗಲುವ ಹಾಗೆ ಮಾತ್ರೆಗಳ ಕಟ್ಟನ್ನು ಮೇಲೆ ಹಿಡಿಯುವದು ಈ ಸನ್ನಿಪಾತಭೈರವಿ ಮಾತ್ರೆಯಲ್ಲಿ ಮಲವನ್ನು ಬಿಗಿಯುವ ಗುಣವಿಲ್ಲ.

145. ಮರಿಚೋಗ್ರಾಕುಷ್ಠಮುಸ್ತೈಃ ಸರ್ವೈರೇವ ಸಮಂ ವಿಷಮ್ ।
ಪಿಷ್ಟ್ವಾ ಚಾರ್ದ್ರರಸೇ ಕುರ್ಯಾದ್ವಟಿಕಾ ರಕ್ತಿಕಾಮಿತಾಃ
ಅಗ್ನಿಕುಮಾರ ರಸ
ಆಮಜ್ವರೇ ಪ್ರಥಮತಃ ಶುಂಠ್ಯಾ ಚ ಮಧುಪಿಷ್ಟಯಾ ।
ಆರ್ದ್ರಕಸ್ಯ ರಸೇನಾಪಿ ನಿರ್ಗುಂಡ್ಯಾಶ್ಚ ಕಫಜ್ವರೇ
ಪೀನಸೇ ಚ ಪ್ರತಿಶ್ಯಾಯೇ ಹ್ಯಾರ್ದ್ರಕಸ್ಯ ಚ ವಾರಿಣಾ ।
ಅಗ್ನಿಮಾಂದ್ಯೇ ಲವಂಗೇನ ದಶಮೂಲ್ಯಾ ಚ ಶೋಥಕೇ ॥
ಗ್ರಹಣ್ಯಾಂ ಸಹ ಶುಂಠ್ಯಾ ಚ ದಶಮೂಲ್ಯಾಽತಿಸಾರಕೇ ।
ಸಾಮೇ ಚ ಧಾನ್ಯಶುಂಠೀಭ್ಯಾಂ ಪಕ್ವೇ ಸಕುಟಜಂ ಮಧು ॥
ಸನ್ನಿಪಾತಜ್ವರಾರಂಭೇ ಪಿಪ್ಪಲ್ಯಾರ್ದ್ರಕವಾರಿಣಾ ।
ಕಂಟಕಾರ್ಯ್ಯಾ ರಸೈಃ ಕಾಸೇ ಶ್ವಾಸೇ ತೈಲಗುಡಾನ್ವಿತಮ್ ॥
ಪೀತ್ವಾ ವಟೀದ್ವಯಂ ರೋಗೀ ಸ್ವಾಸ್ಥ್ಯಂ ಸಮುಪಗಚ್ಛತಿ ।
ಸರ್ವೇಷಾಮೇವ ರೋಗಾಣಾಮಾಮದೋಷಪ್ರಶಾನ್ತಯೇ ॥
ಅಗ್ನಿವೃದ್ಧಿಕರೋ ನಾಮ್ನಾ ವಿಖ್ಯಾತೋಽಗ್ನಿಕುಮಾರಕಃ ॥
(ರಸರಾಜಸುಂದರ).

ಬಿಳೇ ಕಾಳುಮೆಣಸು, ಬಜೆ, ಚಂಗಲಕೋಷ್ಠ, ಭದ್ರಮುಷ್ಟಿ, ಇವು ಸಮಪಾಲು, ಶುದ್ಧ ವತ್ಸನಾಭ ೪ ಪಾಲು, ಈ ಮೇರೆಗೆ ತೆಗೆದುಕೊಂಡು ಚೂರ್ಣಮಾಡಿ ಹಸಿ ಶುಂಠೀರಸ ದೊಂದಿಗೆ ಅರೆದು, ಗುಲುಗುಂಜಿಗಾತ್ರದ ಮಾತ್ರೆಗಳನ್ನು ಮಾಡಿ, ನೆರಳಲ್ಲಿ ಒಣಗಿಸಿಟ್ಟು ಕೊಂಡು, ಎರಡು ಮಾತ್ರೆಗಳನ್ನು ಆಮಜ್ವರದಲ್ಲಿ ಮೊದಲಾಗಿ ಶುಂಠಿ ಮತ್ತು ಜ್ಯೇಷ್ಠಮಧು ವಿನ ಚೂರ್ಣ(ಅಥವಾ ಕಷಾಯ)ದೊಂದಿಗೆ, ಅನಂತರ ಶುಂಠಿರಸದೊಂದಿಗೆ, ಕಫಜ್ವರದಲ್ಲಿ ಕರಿನೆಕ್ಕಿಸೊಪ್ಪಿನ ರಸದೊಂದಿಗೆ, ಪೀನಸದಲ್ಲಿಯೂ ನೆಗಡಿಯಲ್ಲಿಯೂ ಶುಂಠಿರಸದೊಂದಿಗೆ, ಅಗ್ನಿಮಾಂದ್ಯದಲ್ಲಿ ಲವಂಗದ ಚೂರ್ಣದೊಂದಿಗೆ (ಅಥವಾ ಕಷಾಯದ ನೀರಿನೊಂದಿಗೆ), ಶೋಥದಲ್ಲಿ ದಶಮೂಲಗಳ ಕಷಾಯದೊಂದಿಗೆ, ಗ್ರಹಣಿಯಲ್ಲಿ ಶುಂಠಿ ಮತ್ತು ದಶಮೂಲ ಗಳ ಕಷಾಯದೊಂದಿಗೆ, ಆಮಾತಿಸಾರದಲ್ಲಿ ಕೊತ್ತುಂಬರಿ ಮತ್ತು ಶುಂಠಿಯ ಕಷಾಯ ದೊಂದಿಗೆ, ಪಕ್ವಾತಿಸಾರದಲ್ಲಿ ಕೊಡಸಿಗನ ಚಕ್ಕೆಯ ಕಷಾಯ ಮತ್ತು ಜೇನಿನೊಂದಿಗೆ, ಸನ್ನಿ ಪಾತಜ್ವರಾರಂಭದಲ್ಲಿ ಶುಂಠಿರಸ ಮತ್ತು ಹಿಪ್ಪಲಿಚೂರ್ಣದೊಂದಿಗೆ, ಕೆಮ್ಮಿನಲ್ಲಿ ಕಿರಿಗುಳ್ಳದ ಬೇರಿನ ಕಷಾಯದೊಂದಿಗೆ, ಉಬ್ಬಸದಲ್ಲಿ ಎಳ್ಳೆಣ್ಣೆ ಮತ್ತು ಬೆಲ್ಲದೊಂದಿಗೆ ಸೇವಿಸಲು, ರೋಗಿಯು ಸ್ವಸ್ಥನಾಗುತ್ತಾನೆ. ಎಲ್ಲಾ ರೋಗಗಳಲ್ಲಿಯೂ ಆಮದೋಷವನ್ನು ಶಾಂತ ಮಾಡುವದಕ್ಕೆ ಅಗ್ನಿಯನ್ನು ಅಭಿವೃದ್ಧಿಮಾಡುವ ಗುಣವುಳ್ಳ 'ಅಗ್ನಿಕುಮಾರ' ಎಂಬ ಹೆಸ ರಿನ ಈ ಮಾತ್ರೆಯು ಪ್ರಖ್ಯಾತವಾಗಿದೆ.

ಷರಾ ವತ್ಸನಾಭಿಯನ್ನು ಸರಿಯಾಗಿ ಶುದ್ಧಿಮಾಡಿಕೊಳ್ಳಬೇಕು ಮಾತ್ರೆಯಲ್ಲ ಸುಮಾರು ಅರ್ಧಾಂಶದಷ್ಟು ವತ್ಸನಾಭಿ ಇರುವದರಿಂದ, ತೂಕದಲ್ಲಿ ಒಂದು ಗ್ರೈನಿಗಿಂತ ಹೆಚ್ಚು ಮಾತ್ರೆಯನ್ನು ಒಂದೇ ಸರ್ತಿ ಕೊಡುವದು, ವಿಶೇಷ ವಾಗಿ ಹಾಲಿನ ಪಥ್ಯವಿಲ್ಲದಿರುವಲ್ಲಿ, ಒಳ್ಳೇದಲ್ಲ ಈ ಯೋಗವು ಧನ್ವಂತರಿ ಎಂಬ ಪುಸ್ತಕದ(ಪು. 86)ಲ್ಲಿಯೂ, ಇನ್ನೊಂದು ಪುಸ್ತಕದಲ್ಲಿಯೂ ಕಾಣುತ್ತದೆ ಎರಡರಲ್ಲಿಯೂ ಕಾಣುವ ಪಾಠಾಶುದ್ಧತೆಗಳನ್ನು ಸರಿಪಡಿಸಲಿಕ್ಕೆ ಯತ್ನಿ ಸಿಯದೆ

146. ಹಿಂಗುಲಂ ಚ ವಿಷಂ ವ್ಯೋಷಂ ಟಂಕಣಂ ಮಾಗಧೀಶಿಫಾ ।
ಸಂಚೂರ್ಣ್ಯ ಭಾವಯೇತ್ತ್ರೇಧಾ ಸುರಸಾರ್ದ್ರಕಹೇಮಭಿಃ ॥
ತ್ರಿಭುವನಕೀರ್ತಿ ರಸ. ರಸೋ ಭುವನಕೀರ್ತಿಃ ಸ ಗುಂಜೈಕಾರ್ದ್ರದ್ರವೇಣ ವೈ ।
ಸರ್ವಜ್ವರಾನ್ನಿಹನ್ಯಾಚ್ಚ ಸನ್ನಿಪಾತಾಂಸ್ತ್ರಯೋದಶ ॥ (ನಿ. ರ.)

(ಶುದ್ಧ) ಇಂಗಳೀಕ, (ಶುದ್ಧ) ವತ್ಸನಾಭಿ, ತ್ರಿಕಟು, ಟಂಕಣಕಾರ(ದ ಅರಳು), ಹಿಪ್ಪಲಿ ಮೂಲ, ಇವುಗಳನ್ನು ಸಮಪಾಲು ತೆಗೆದುಕೊಂಡು ಚೂರ್ಣಮಾಡಿ, ಕರಿತುಳಸಿಯ ರಸದಲ್ಲಿಯೂ, ಹಸಿಶುಂಠಿಯ ರಸದಲ್ಲಿಯೂ, (ಕರಿ) ಉಮ್ಮತ್ತದ ಬೇರಿನ ಕಷಾಯದಿಂದಲೂ ಪ್ರತ್ಯೇಕವಾಗಿ ಅರೆದು, ಗುಲುಗುಂಜಿಪ್ರಮಾಣದ ಮಾತ್ರೆಗಳನ್ನು ಮಾಡಿ, ನೆಳಲಲ್ಲಿ ಒಣಗಿಸಿಟ್ಟುಕೊಂಡು, ಒಂದೊಂದು ಮಾತ್ರೆಯಂತೆ ಶುಂಠಿರಸದೊಂದಿಗೆ ಸೇವಿಸಲು, ಸರ್ವಜ್ವರಗಳೂ, ಹದಿಮೂರು ಸನ್ನಿಪಾತಗಳೂ, ನಾಶವಾಗುವವು. ಈ ಮಾತ್ರೆಯ ಹೆಸರು 'ಭುವನಕೀರ್ತಿ.'

ಪರಾ 2ನೇ ಶ್ಲೋಕದ ಉತ್ತರಾರ್ಧವಾಗಿ "ಸರ್ವಜ್ವರವಿನಾಶಂ ಚ ಸನ್ನಿಪಾತಾಂಸ್ತ್ರಯೋದಶ' ಎಂತ ಮೂಲದಲ್ಲಿರುವದನ್ನು ತಿದ್ದಿಕೊಂಡದೆ.

147. ಹಿಂಗುಲಂ ಚ ವಿಷಂ ಟಂಕಂ ಜಾತೀ ಕೋಷಫಲಂ ತಥಾ ।
ಮರಿಚಂ ಪಿಪ್ಪಲೀ ಚೈವ ಕಸ್ತೂರೀ ಚ ಸಮಾಂಶಿಕಾ ॥
ಸ್ವಲ್ಪಕಸ್ತೂರಿ ಮಾತ್ರೆ ರಕ್ತಿದ್ವಯಂ ತತಃ ಖಾದೇತ್ಸನ್ನಿಪಾತೇ ಸುದಾರುಣೇ ॥ (ಧ. 86-87)

(ಶುದ್ಧ) ಇಂಗಳೀಕ, (ಶುದ್ಧ) ವತ್ಸನಾಭಿ, ಟಂಕಣಕಾರ(ದ ಅರಳು), ಜಾಯಿಕಾಯಿ, ಬಾಲಮೆಣಸು (ಗಂಧಮೆಣಸು), ಬಿಳೇ ಕಾಳುಮೆಣಸು, ಹಿಪ್ಪಲಿ, ಕಸ್ತೂರಿ, ಇವುಗಳನ್ನು ಸಮಾಂಶವಾಗಿ ತೆಗೆದುಕೊಂಡು ಚೂರ್ಣಿಸಿ, ಎರಡು ಗುಲುಗುಂಜಿತೂಕ ಪ್ರಮಾಣದಲ್ಲಿ ಸೇವಿಸುವದರಿಂದ ಬಹಳ ಕಠಿನವಾದ ಸನ್ನಿಪಾತ ಜ್ವರವು ನಾಶವಾಗುವದು.

ಪರಾ 'ಜಾತೀಕೋಷಫಲಂ' ಎಂದರೆ 'ಜಾಪತ್ರೆ ಮತ್ತು ಜಾಯಿಕಾಯಿ' ಎಂತ ಅರ್ಥ ಬರೆದದ್ದು ಕಾಣುತ್ತದೆ

ಈ ಮಾತ್ರೆಯನ್ನು ಅರೆಯುವದಕ್ಕೆ ರಸವಾಗಲಿ, ಸೇವಿಸುವದಕ್ಕೆ ಅನುಪಾನವಾಗಲಿ ಯೋಗದಲ್ಲಿ ಹೇಳಲ್ಪಟ್ಟಿರುವದಿಲ್ಲ ಚೂರ್ಣವಾಗಿಯೇ ಸೇವಿಸಬಹುದೆಂಬದು ಯೋಗಕರ್ತೃಗಳ ಮತವಾಗಿರಬಹುದು ಒಬ್ಬರು ಭಾಷಾಂತರಕಾರರು ಯೋಗದ ಔಷಧಗಳನ್ನು ನೀರಿನಿಂದ ಅರೆದು ಮಾತ್ರೆ ಕಟ್ಟಬೇಕಾಗಿ ಬರೆದದ್ದು ಕಾಣುತ್ತದೆ ನೀರಿನಕ್ಕಿಂತ ದಶಮೂಲಗಳ ಕಷಾಯವು ಅರೆಯುವದಕ್ಕೆ ಒಳ್ಳೇದು ಸೇವಿಸುವದಕ್ಕೆ ದ್ರವವನ್ನು ದೋಷಬಲಾಬಲ ನೋಡಿಕೊಂಡು ನಿಶ್ಚಯಿಸಬೇಕು. ಸಾಧಾರಣವಾಗಿ ಈ ಮಾತ್ರೆಯನ್ನು ಸಹ ಶುಂಠಿರಸದಲ್ಲಿ, ಕಲ್ಲುಸಕ್ಕರೆ ಪುಡಿಯನ್ನೋ ಜೇನನ್ನೋ ಕೂಡಿಸಿ, ಕೊಡಬಹುದು

148. ಭಸ್ಮಷೋಡಶನಿಷ್ಕಂ ಸ್ಯಾದಾರಣ್ಯೋಪಲಕೋದ್ಭವಮ್ ।
ಭಸ್ಮೇಶ್ವರ ರಸ ನಿಷ್ಕತ್ರಯಂ ಚ ಮರಿಚಂ ವಿಷಂ ನಿಷ್ಕಂ ಚ ಚೂರ್ಣಯೇತ್ ॥
ಅಯಂ ಭಸ್ಮೇಶ್ವರೋ ನಾಮ್ನಾ ಸನ್ನಿಪಾತನಿಕೃನ್ತನಃ ।
ಪಂಚಗುಂಜಾಮಿತಂ ಭಕ್ಷ್ಯೇದಾರ್ದ್ರಕಸ್ಯ ರಸೇನ ಚ ॥
(ರ. ಚಿ., ರ. ರ. 91)

ಕಾಡಿನಲ್ಲಿ ಬಿದ್ದ ಗೋಮಯದ ಹೆಂಟೆಗಳನ್ನು ಹೆಕ್ಕಿ ತಂದು, ಸುಟ್ಟು ಬೂದಿಮಾಡಿ, ಶೋಧಿಸಿದ ಭಸ್ಮ ೧೬ ನಿಷ್ಕ, ಬಿಳೇ ಕಾಳುಮೆಣಸಿನ ಚೂರ್ಣ ೩ ನಿಷ್ಕ, (ಶುದ್ಧ) ವತ್ಸನಾಭಿಯ ಚೂರ್ಣ ೧ ನಿಷ್ಕ, ಇವುಗಳನ್ನು ಸರಿಯಾಗಿ (ಅರೆದು) ಬೆರಿಸುವದು. ಈ ಚೂರ್ಣವನ್ನು, ೫ ಗುಲುಗುಂಜಿತೂಕಕ್ಕೆ ಮೀರದ ಪ್ರಮಾಣದಲ್ಲಿ, ಶುಂಠಿಯ ರಸದೊಂದಿಗೆ ಸೇವಿಸಲು, ಸನ್ನಿಪಾತ ನಾಶವಾಗುವದು. ಈ ರಸದ ಹೆಸರು ಭಸ್ಮೇಶ್ವರ.

ಪರಾ ಭಾ ಪ್ರ ದಲ್ಲಿಯೂ, ಸಿ ರ ದಲ್ಲಿಯೂ 'ನಿಷ್ಕತ್ರಯಂ' ಎಂಬಲ್ಲಿ 'ನಿಷ್ಕಮಾತ್ರಂ' ಎಂತಲೂ, 'ಪಂಚಗುಂಜಾಮಿತಂ' ಎಂಬಲ್ಲಿ 'ಏಕಗುಂಜಾಮಿತಃ' ಎಂತಲೂ ಪಾಠಾಂತರ ಕಾಣುತ್ತದೆ ಅದರ ಪ್ರಕಾರ ವತ್ಸನಾಭಿಯು ಯೋಗದಲ್ಲಿ ಹದಿನೆಂಟನೇ ಒಂದು ಅಂಶವಾಗುತ್ತದೆ ಹಾಗೆ ಮಾಡಿದ ರಸದ ಒಂದು ಗುಂಜಾತೂಕ ಪ್ರಮಾಣ ಸಾಕಾಗದೆಂತ ಕಾಣುತ್ತದೆ ಮೆಣಸನ್ನು ೩ ನಿಷ್ಕ ಕೂಡಿಸಿದರೆ, ರಸದಲ್ಲಿ ನಾಭಿಯ ಅಂಶ ಇಪ್ಪತ್ತನೇ ಒಂದು ಭಾಗವಾಗುತ್ತದೆ. ಹಾಗಿನ ರಸದಿಂದ ೨ ೩ ಗುಲುಗುಂಜತೂಕ ಒಮ್ಮೆ ಕೊಡಬಹುದು ಮತ್ತು ಅತ್ಯಧಿಕ ಪ್ರಮಾಣ ೫ ಗುಲುಗುಂಜತೂಕ ಎಂಬದು ತಪ್ಪಾಗದು ಆದ್ದರಿಂದ ಕಾಳುಮೆಣಸನ್ನು ಮೂರು ನಿಷ್ಕತೂಕ ಕೂಡಿಸಬೇಕೆಂಬ ಪಕ್ಷವೇ ಸಮರ್ಪಕವಾಗಿ ಕಾಣುತ್ತದೆ

149. ವಿಷಂ ಭಾಗದ್ವಯಂ ದಗ್ಧಂ ಕಪರ್ದಂ ಪಂಚಭಾಗಕಮ್ |
ಮರಿಚಂ ನಾಗರಂ ಚೈವ ಚೂರ್ಣಂ ವಸ್ತ್ರೇಣ ಶೋಧಯೇತ್ ||
ದುರ್ಜಲಜೇತಾ ರಸ
ಆರ್ದ್ರಕಸ್ಯ ರಸೇನಾಸ್ಯ ಕುರ್ಯಾನ್ಮುದ್ಗನಿಭಾಂ ವಟೀಮ್ |
ವಾರಿಣಾ ವಟಿಕಾಯುಗ್ಮಂ ಪ್ರಾತಃ ಸಾಯಂ ಚ ಭಕ್ಷಯೇತ್ ||
ಅಯಂ ರಸೋ ಜ್ವರೇ ಯೋಜ್ಯಃ ಸಾಮೇ ದುರ್ಜಲಜೇಽಪಿ ಚ |
ಅಜೀರ್ಣಾಧ್ಮಾನವಿಷ್ಟಮ್ಭಶೂಲೇಷು ಶ್ವಾಸಕಾಸಯೋಃ ||
(ಭಾ. ಪ್ರ. 313)

(ಶುದ್ಧ) ವತ್ಸನಾಭಿ ೨ ಭಾಗ, ಕವಡೆಯ ಭಸ್ಮ ೫ ಭಾಗ, ಬಿಳೇ ಕಾಳುಮೆಣಸು ೧ ಭಾಗ, ಶುಂಠಿ ೧ ಭಾಗ, ಇವುಗಳ ಚೂರ್ಣವನ್ನು ವಸ್ತ್ರಗಾಲಿತಮಾಡಿ, ಶುಂಠಿರಸದೊಂದಿಗೆ ಅರೆದು, ಹೆಸರುಕಾಳುಗಾತ್ರದ ಮಾತ್ರೆ ಮಾಡಿಟ್ಟುಕೊಂಡು, ಎರಡು ಮಾತ್ರೆ ಪ್ರಕಾರ, ಬೆಳಿಗ್ಗೆಯೂ, ಸಂಜೆಯಲ್ಲಿಯೂ, ನೀರಿನೊಂದಿಗೆ ತೇದಿ ನೆಕ್ಕಬೇಕು. (ಅಥವಾ ಮಾತ್ರೆಯನ್ನು ತಿಂದು ನೀರನ್ನು ಕುಡಿಯಬೇಕು) ಈ ಮಾತ್ರೆಯನ್ನು ಸಾಮಜ್ವರ, ಕೆಟ್ಟ ನೀರಿನಿಂದ ಉಂಟಾದ ಜ್ವರ, ಅಜೀರ್ಣ, ಹೊಟ್ಟೆಯುಬ್ಬರ, ವಿಷ್ಟಂಭ, ಶೂಲೆ, ಉಬ್ಬಸ ಮತ್ತು ಕೆಮ್ಮು, ಈ ರೋಗಗಳಲ್ಲಿ ಉಪಯೋಗಿಸತಕ್ಕದ್ದು.

ಪರಾ 'ನಾಗರಂ ಚೈವ' ಎಂಬಲ್ಲಿ 'ನವಭಾಗಂ ಚ' ಎಂಬ ಪಾಠಾಂತರ ಕಾಣುತ್ತದೆ ಅದು ಸರಿಯಾದದ್ದಾದರೆ, ಶುಂಠಿಯನ್ನು ಬಿಟ್ಟು ಕಾಳುಮೆಣಸನ್ನು ೯ ಭಾಗ ಕೂಡಿಸಬೇಕಾಗುತ್ತದೆ (ಸಿ ರ) ಆ ಯೋಗದ ಮಾತ್ರೆಯು 'ಅಮೃತಾದಿವಟೀ' ಎಂಬ ಹೆಸರಿನಿಂದ ಭಾ. ಪ್ರ.ದಲ್ಲಿಯೇ ಪ್ರತ್ಯೇಕವಾಗಿ ಬರೆಯಲ್ಪಟ್ಟದೆ

ಅಮೃತವರಾಟಿಕಮರಿಚೈರ್ದ್ವಿಪಂಚನವಭಾಗಯೋಜಿತೈ ರಚಿತಾ |
ವಟಿಕಾ ಮುದ್ಗಸಮಾನಾ ಕಫತ್ರಿದೋಷಾಗ್ನಿಮಾಂದ್ಯಹರೀ || (ಭಾ. ಪ್ರ 295)

ಅದರ ಫಲಶ್ರುತಿಯಿಂದ ಅದು ಕಫ, ತ್ರಿದೋಷ ಮತ್ತು ಅಗ್ನಿಮಾಂದ್ಯ, ಇವುಗಳನ್ನು ಪರಿಹರಿಸುವಂಥಾದ್ದೆಂತ ಕಾಣುತ್ತದೆ ಈ 'ಅಮೃತಾದಿವಟೀ'ಯಲ್ಲಿ ವತ್ಸನಾಭಿಯ ಮತ್ತು ಕವಡೆ ಭಸ್ಮದ ಪ್ರಭಾವ ಕಡಿಮೆಯಾಗಿ ಇರುತ್ತದೆ

ಕವಡೆಗಳನ್ನು ಹುಳಿಗಂಜನೀರಿನಲ್ಲಿ ಅಥವಾ ಲಿಂಬೆರಸದಲ್ಲಿ ಒಂದು ಜಾಮುಕಾಲ ಡೋಲಾಯಂತ್ರದ ಕ್ರಮದಿಂದ ಬೇಯಿಸಿದರೆ, ಅವುಗಳು ಶುದ್ಧವಾಗುತ್ತವೆ ಶುದ್ಧವಾದ ಕವಡೆಗಳನ್ನು ಬೆಂಕಿಕೆಂಡಗಳ ಮೇಲೆ ಇಟ್ಟು ಊದಿದರೆ, ಅವು ಅರಳುತ್ತವೆ ಆಗ ಅವುಗಳನ್ನು ಬೆಂಕಿಯಿಂದ ತೆಗೆದು, ತಣಿದ ಮೇಲೆ ಅರೆದು, ವಸ್ತ್ರದಿಂದ ಗಾಳಿಸಿದ್ದಲ್ಲಿ ಸಿಕ್ಕುವ ಭಸ್ಮವು ಔಷಧಗಳಿಗೆ ಉಪಯೋಗಿಸುವದಕ್ಕೆ ಯೋಗ್ಯವಾದ್ದು

ಕವಡೆಯ ಶುದ್ಧಿ ಮತ್ತು ಭಸ್ಮದ ಕ್ರಮ

150. (1) ರೋಗಿಯ ಪ್ರಾಯ 25 ವರ್ಷ. ಜ್ವರ ಬಿಟ್ಟು 15 ದಿನ ಆಯಿತು; ಅನಿದ್ರೆ, ಅಗ್ನಿಮಾಂದ್ಯ, ಮಲಬದ್ಧತೆ, ಕೈಕಾಲು ಬತ್ತುವಿಕೆ; ನಾಡಿಗಳೊಳಗೆ ವಾತ ಸ್ಥಾನಚ್ಯುತ, ಕಫ ಅಬಲಿ.—ತುಳಸೀರಸ, ಆಡುಸೋಗೆಎಲೆ ರಸ, ಜೇನು, ಇವುಗಳಲ್ಲಿ ಜ್ವರ. ೧ರಂತೆ ೬ ದಿನ, ದಿನಕ್ಕೆರಡು ಸರ್ತಿ ಪ್ರಕಾರ, ಸೇವಿಸಿದರಿಂದ ಕ್ಷೇಮವಾಯಿತು.

ದೃಷ್ಟಫಲಚಿಕಿತ್ಸೆ

(2) ರೋಗಿಯ ಪ್ರಾಯ 40 ವರ್ಷ. 10 ದಿನಗಳಿಂದ ಪ್ರತಿ ದಿವಸ ನಡುಕು ಉಂಟಾಗಿ, ಜ್ವರ ಒಂದು ಬಿಡುವದು, ಕೆಮ್ಮು ಉಂಟು, ಮಲಮೂತ್ರ ಸರಿ — ಅಮೃತಬಳ್ಳಿ ತೊಲೆ ||, ಕಹಿಬೇವಿನ ಚಕ್ಕೆ ತೊ. |, ಕಷಾಯದ ಅರ್ಧದಲ್ಲಿ ಮ. ಜ್ವ. ೧ರಂತೆ, ಸಕ್ಕರೆ ಕೂಡಿಸಿ, ೬ ಹೊತ್ತು, ಅನಂತರ ಮಾತ್ರೆ ಬಿಟ್ಟು ಬರೇ ಕಷಾಯ ೬ ಹೊತ್ತು. ಎರಡು ಹೊತ್ತು ಮಾತ್ರೆ ಸೇವಿಸಿದ ಮೇಲೆ ಜ್ವರ ಬರಲಿಲ್ಲ.

(3) ರೋಗಿಯ ಪ್ರಾಯ 32 ವರ್ಷ. 12 ದಿನಗಳಿಂದ ಜ್ವರ, ಮೈಯಲ್ಲಿ ಸೆಕೆ, ಮಲಬದ್ಧತೆ, ತಲೆಸಿಡಿತ, ಅನಿದ್ರೆ, ಕೆಮ್ಮು, ಬೆವರುವದಿಲ್ಲ.—ಅಮೃತಬಳ್ಳಿ, ಪರ್ಪಾಟಕ, ಶ್ರೀಗಂಧ, ಹಿಪ್ಪಲಿ, ಲಾಮಂಚ, ಆಡುಸೋಗೆ (ಎಲೆ ಅಥವಾ ಬೇರು), ಹರಳುಬೇರು, ಇವುಗಳೆಲ್ಲ ತೊ. |=ರಂತೆ, ಕಷಾಯದ ಅರ್ಧದಲ್ಲಿ ಜ್ವರ. ೧ರಂತೆ, ಸಕ್ಕರೆ ಕೂಡಿಸಿ, ೧೦ ದಿನ ಸೇವಿಸಿದರಿಂದ ಪೂರ್ಣ ಕ್ಷೇಮ.

(4) ರೋಗಿಯ ಪ್ರಾಯ 44 ವರ್ಷ. ೩ ದಿನಗಳಿಂದ ಕೆಮ್ಮು, ನೆಗಡಿ, ಜ್ವರ ಮತ್ತು ಚಳಿ; ವಾತಪಿತ್ತನಾಡಿಗಳು ಹೆಚ್ಚಾಗಿ ಸ್ಥಾನಚ್ಯುತ.— ಅಮೃತಬಳ್ಳಿ ತೊ. ೧, ಬಿಳೇ ಕಾಳುಮೆಣಸು ತೊ. ||, ರ ಕಷಾಯದ ಅರ್ಧದಲ್ಲಿ ಮ. ಜ್ವ. ೧ರಂತೆ ೬ ಸರ್ತಿ; ಅನಂತರ ಅದೇ ಕಷಾಯದಲ್ಲಿ ಆ. ೧ರಂತೆ ೪ ಸರ್ತಿ. ೩ನೇ ದಿನವೇ ಜ್ವರ ಬಿಟ್ಟದೆ; ೫ ದಿನಗಳಲ್ಲಿ ಎಲ್ಲಾ ವಿಷಯದಲ್ಲಿಯೂ ಕ್ಷೇಮ.

(5) ರೋಗಿಯ ಪ್ರಾಯ 44 ವರ್ಷ. ಜ್ವರ ಬಿಟ್ಟು ೮ ದಿನಗಳ ಮೇಲೆ ಅಪಥ್ಯದಿಂದ ಪುನಃ ಬಂದ ವಿಷಮಜ್ವರ, ತಲೆಒಡೆತ, ಕೆಮ್ಮು, ಚಳಿ, ಜ್ವರ ಬಿಡುವಾಗ್ಗೆ ಬೆವರು ಬರುತ್ತದೆ.— ಅಮೃತಬಳ್ಳಿ, ಕೊತ್ತುಂಬರಿ, ಭದ್ರಮುಷ್ಟಿ, ಶುಂಠಿ, ಸಹ ತೊ. || ಪ್ರಕಾರ, ಕಷಾಯದ ಅರ್ಧದಲ್ಲಿ ಮ. ಜ್ವ. ೧ರಂತೆ ೬ ಸರ್ತಿ, ಸಕ್ಕರೆ ಮತ್ತು ಜೇನು ಕೂಡಿಸಿಕೊಂಡು; ಅನಂತರ ಆ. ೧ರಂತೆ, ಜೇನು ಕೂಡಿಸಿಕೊಂಡು, ೪ ಸರ್ತಿ. ೨ನೇ ದಿನವೇ ಜ್ವರ ಬಿಟ್ಟದೆ.

(6) ರೋಗಿಯ ಪ್ರಾಯ 38 ವರ್ಷ. ೫,೬ ದಿನಗಳಿಂದ ಜ್ವರ, ನಿನ್ನೆಯಿಂದ ಅತಿಸಾರ, ಹೊಟ್ಟೆಶೂಲೆ, ನಿನ್ನೆ ರಾತ್ರಿ ೮ ಸರ್ತಿ ಮಲಪ್ರವೃತ್ತಿ ಆಗಿದೆ.—ಬಿಲ್ವಪತ್ರೆಬೇರು ತೊ.

೧, ಭದ್ರಮುಷ್ಟಿ ತೊ. ೧, ಶುಂಠಿ ತೊ. ||, ಕಿರಾತಕಡ್ಡಿ ತೊ. ||, ರ ಕಷಾಯದ ಅರ್ಧದಲ್ಲಿ ಆ. ೧ರಂತೆ ದಿನಕ್ಕೆ ೨ ಸರ್ತಿ ಪ್ರಕಾರ ೮ ದಿನ.—ಇದರಿಂದ ಮಲ ಕ್ರಮಪಟ್ಟಿತು. ಜ್ವರ ಬಿಡ ಲಿಲ್ಲ. ಬಾಯಿಹುಣ್ಣು ಮತ್ತು ಅನಿದ್ರೆ ಉಂಟಾಯಿತು—ಶುಂಠಿ ತೊ. |ಕ್ಕೆ ತಗ್ಗಿಸಿ, ಅಮೃತ ಬಳ್ಳಿ ತೊ. | ಕೂಡಿಸಿ, ಮಾಡಿದ ಅದೇ ಕಷಾಯದಲ್ಲಿ, ಮ. ಜ್ವ. ೧ರಂತೆ, ಸಕ್ಕರೆ ಕೂಡಿಸಿ, ೪ ದಿನ.—ಇದರಿಂದ ಜ್ವರ ಬಿಟ್ಟುಬರುವದಾಯಿತು. ಸ್ವಲ್ಪ ಹೊಟ್ಟೆಶೂಲೆ ಉಂಟು—ಬಿಲ್ವಪತ್ರೆ ಬೇರನ್ನೂ ಭದ್ರಮುಷ್ಟಿಯನ್ನೂ ತೊ. ||ಗೆ ತಗ್ಗಿಸಿ, ಅಮೃತಬಳ್ಳಿ ತೊ. ||ಗೆ ಏರಿಸಿ, ಕೊತ್ತುಂಬರಿ ತೊ. || ಕೂಡಿಸಿ, ಮಾಡಿದ ಕಷಾಯದಲ್ಲಿ ಮ. ಜ್ವ. ೧ರಂತೆ ೩ ದಿನ.—ಜ್ವರ ಕಾಲ ಕಡಿಮೆಯಾಯಿತು. ಹೊಟ್ಟೆಶೂಲೆ ಹೋಗಲಿಲ್ಲ. ಮೂತ್ರ ಮಾಡುವಾಗ್ಗೆ ಉರಿ—ಕಷಾಯದ್ರವ್ಯಗಳಲ್ಲಿ ಬಿಲ್ವಪತ್ರೆ ಬಿಟ್ಟು, ಅಮೃತಬಳ್ಳಿ ತೊ. ೧ಕ್ಕೆ ಏರಿಸಿ, ಅದೇ ಮಾತ್ರೆ ೪ ದಿನ.—ಈ ಕಷಾಯ ಆರಂಭಿಸಿದ ದಿನವೇ ಜ್ವರ ನಿಃಶೇಷವಾಗಿ ಬಿಟ್ಟಿತು. ಆರಂಭದಿಂದ ಸುಮಾರು ೨೪ ದಿನ ಜ್ವರವಿತ್ತು. ಪಾಶ್ಚಾತ್ಯ ವೈದ್ಯರೀತ್ಯಾ ಇದು ಟಾಯಿಡೆ (ಟ್ಯಾಫೈಡ್) ಜ್ವರ.

(7) ರೋಗಿಗೆ 45 ವರ್ಷ ಪ್ರಾಯ ೫೫ ದಿನಗಳಿಂದ ಜ್ವರ ಬಿಡದೆ ಬರುತ್ತದೆ, ಎದೆ ನೋವು, ತಲೆಬಡೆತ, ಸ್ವಲ್ಪ ಕೆಮ್ಮು, ಮಲಪ್ರವೃತ್ತಿ ಸರಿಯಿಲ್ಲ; ವಾತನಾಡಿ ಸ್ಥಾನಚ್ಯುತ, ಪಿತ್ತಕಫಗಳು ಅಬಲ ಮತ್ತು ಅಸ್ಥಿರ—ಆಡುಸೋಗೆಎಲೆಗಳ ರಸ ೧|| ಡ್ರಾಂ, ತುಳಸೀರಸ ೧ ಡ್ರಾಂ, ಇದರಲ್ಲಿ ಮ. ಜ್ವ. ೧ರಂತೆ, ಬೆಲ್ಲ ಕೂಡಿಸಿ, ನಾಲ್ಕು ಸರ್ತಿ—ಮಾರಣೆ ದಿನದಿಂದ ಜ್ವರವಿಲ್ಲ, ಎದೆನೋವು ಕಡಿಮೆ, ಕೆಮ್ಮು ಮತ್ತು ತಲೆಬಡೆತ ಸ್ವಲ್ಪ ಉಂಟು; ವಾತ ಅಸ್ಥಿರ, ಪಿತ್ತ ಅಬಲ, ಕಫ ಅದಕ್ಕೂ ಹೆಚ್ಚು ಅಬಲ—ಅಮೃತಬಳ್ಳಿ ತೊ. ೧, ಶುಂಠಿ ತೊ. |, ಕೊತ್ತುಂಬರಿ ತೊ. |, ಭದ್ರಮುಷ್ಟಿ ತೊಲೆ ||, ಕಷಾಯದ ಅರ್ಧದಲ್ಲಿ ಅದೇ ಮಾತ್ರೆ ೪ ಸರ್ತಿ, ಬೆಲ್ಲ ಕೂಡಿಸಿ.—ಕ್ಷೇಮ.

(8) ರೋಗಿಗೆ 27 ವರ್ಷ. ೫ ತಿಂಗಳಿಂದ ಚಳಿಜ್ವರ, ಮಧ್ಯ ೨ ತಿಂಗಳು ಬಿಟ್ಟಿತ್ತಂತೆ, ೪ ದಿನ ಜ್ವರ ನಿತ್ಯ ಬಂದು, ಅನಂತರ ಕೆಲವು ದಿನ ಬಿಡುತ್ತದೆ; ಬೊಂಬಾಯಿಯ ಆಸ್ಪತ್ರೆಯ ಚಿಕಿತ್ಸೆಯಿಂದ ಗುಣವಾಗಲಿಲ್ಲವಂತೆ; ವಾತನಾಡಿ ಸ್ಥಾನದಲ್ಲಿ ಬಲ, ಪಿತ್ತಸ್ಥಾನಚ್ಯುತ, ಕಫವೂ ಹಾಗೆಯೇ, ಆದರೆ ಅದರಲ್ಲಿ ದೋಷ ಹೆಚ್ಚು—ಆಡುಸೋಗೆಎಲೆಗಳ ರಸ, ಶುಂಠಿ ರಸ, ತುಳಸಿರಸ, ಜೇನು ಸಹ ೧ ಡ್ರಾಂ. ಪ್ರಕಾರ, ಇದರಲ್ಲಿ ಮ. ಜ್ವ. ೧|| ರಂತೆ ದಿನಕ್ಕೆ ೨ ಸರ್ತಿ ಪ್ರಕಾರ ೩ ದಿನ—ಜ್ವರದ ತೀವ್ರತೆ ದಿನೇ ದಿನೇ ಕಡಿಮೆಯಾಗುತ್ತಾ ಬಂದದೆ. ನಾಡಿ ಗಳೊಳಗೆ ವಾತಕಫಗಳು ಸ್ಥಾನದಲ್ಲಿ ಬಲಿ, ಪಿತ್ತ ಸ್ವಲ್ಪ ಅಬಲಿ.—ಅದೇ ರೀತಿ ಇನ್ನು ೬ ಸರ್ತಿ, ೨ ಚಿಮಿಟಿ ಸಕ್ಕರೆ ಕೂಡಿಸಿ—ಜ್ವರವಿಲ್ಲದೆ ೫ ದಿನವಾಯಿತು. ನಾಡಿಗಳೊಳಗೆ ಕಫ ಮಾತ್ರ ಕೆಲವು ಸರ್ತಿಯಲ್ಲಿ ಜಾರುತ್ತದೆ.—'ಆಮಲಕ ಖಂಡ' ತೊ. | ರಂತೆ ೬ ಸರ್ತಿ—ಸೌಖ್ಯ. ಆದರೆ ಔಷಧಿ ಬಿಟ್ಟು ಸುಮಾರು ಒಂದು ತಿಂಗಳು ಕಳೆದಾಗ್ಗೆ ಜ್ವರ ಪುನಃ ಕಾಣಿಸಿಕೊಂಡಿತು. ಆಗ್ಗೆ ವಾತನಾಡಿ ಸ್ಥಾನ ಬಿಟ್ಟು, ಪಿತ್ತನಾಡಿ ಅಸ್ಥಿರವಾಗಿ ಇತ್ತು.—ತುಳಸಿರಸ ೨ ಡ್ರಾಂ, ಶುಂಠಿರಸ ೧ ಡ್ರಾಂ, ಆಡುಸೋಗೆಎಲೆರಸ ೧ ಡ್ರಾಂ, ಜೇನು ೧ ಡ್ರಾಂ, ಇದರಲ್ಲಿ ಮ. ಜ್ವ. ೨ರಂತೆ ೪ ಸರ್ತಿಗೆ—ಕ್ಷೇಮ.

(9) ರೋಗಿಯ ಪ್ರಾಯ 48 ವರ್ಷ. 4 ತಿಂಗಳಿಂದ ಆಗಾಗ್ಗೆ ವಿಷಮಜ್ವರ ಬಂದು

ಬಿಡುವದು, ಕ್ವಿನೀನ ಸೇವನದಿಂದ ಪ್ರಯೋಜನ ಸಿಗಲಿಲ್ಲ, ಶರೀರ ಸ್ಥೂಲ, ನಾಡಿಗಳೊಳಗೆ ಕಫವು ಪಿತ್ತದ ಕಡೆ ಸ್ಥಾನಚ್ಯುತ, ಮೈ ಬೆವರುತ್ತಿರುವದು ಬಹಳ, ಮಲ ದಿನಕ್ಕೆ 2-3 ಸರ್ತಿ—ಘೋಟಾಚೂಳಿಮಾತ್ರೆ ೧ನ್ನು ಹಾಲು-ಸಕ್ಕರೆಯಲ್ಲಿ ಕೊಟ್ಟು, ಭೇದಿ ಮಾಡಿಸಿದ ಮೇಲೆ ಬಿಲ್ವಾದಿಲೇಹವನ್ನು ಹೊತ್ತಿಗೆ ತೊ. |=(ಆರಾಣೆ ತೂಕ)ರಂತೆ ೩೪ ದಿನ ಕೊಟ್ಟದ ರಿಂದ ಸೌಖ್ಯವಾಯಿತು.

ಘೋಟಾಚೂಳಿ ಮಾತ್ರೆಯ ಯೋಗ.

ಶುದ್ಧ ಪಾದರಸ ತೊ. ||, ಶುದ್ದ ವತ್ಸನಾಭಿ ತೊ. ||, ಶುದ್ಧ ಗಂಧಕ ತೊ. ||, ಶುದ್ಧ ತಾಳಕ ತೊ. ||, ಟಂಕಣಕಾರದ ಅರಳು ತೊ. ||, ತ್ರಿಕಟುಚೂರ್ಣ ತೊ. ೧||, ತ್ರಿಫಲೆಚೂರ್ಣ ೧||, ಶುದ್ಧ ಜೇಪಾಳದ ಬೀಜ ತೊ. ೩||, ಇವುಗಳನ್ನು ಗರುಗದ ರಸದಿಂದ ನಾಲ್ಕು ಜಾಮ ಅರೆದು, ನುಣ್ಣಗಾದ ಮೇಲೆ ಗುಲುಗುಂಜಿಗಾತ್ರದ ಮಾತ್ರೆಗಳನ್ನು ಮಾಡಿ, ನೆಳಲಲ್ಲಿ ಒಣಗಿಸಿ, ಬಾಟ್ಲಿಯೊಳಗೆ ಹಾಕಿ ಇಟ್ಟುಕೊಂಡು, ಒಂದು ಮಾತ್ರೆಯನ್ನು ಹಾಲಿನಿಂದ ಅಥವಾ ಸೀಯಾಳದ ನೀರಿನಿಂದ ಕೊಟ್ಟಲ್ಲಿ ಸುಖವಾಗಿ ಭೇದಿಯಾಗುತ್ತದೆ.

ಜೇಪಾಳದ ಬೀಜವನ್ನು ಮಿಕ್ಕ ೧೧ ಬಗೆಗಳ ತೂಕಗಳ ಸಮುದಾಯಕ್ಕೆ ಸಮವಾಗಿ ತೊ. ೫|| ಕೂಡಿಸುವ ಕ್ರಮವು ಸಹ ಉಂಟು. ತೀಕ್ಷ್ಣವಾಗಿ ಭೇದಿ ಮಾಡಿಸುವ ಆಗತ್ಯ ವಿರುವ ಉದರರೋಗ ಮುಂತಾದ ವ್ಯಾಧಿಗಳಲ್ಲಿ ಹಾಗೆ ಅರ್ಧಾಂಶ ಜೇಪಾಳ ಕೂಡಿಸಿ ಮಾಡಲ್ಪಟ್ಟ ಮಾತ್ರೆಯನ್ನು ಉಪಯೋಗಿಸಬಹುದು.

ಪಾದರಸ, ವತ್ಸನಾಭಿ, ಮತ್ತು ಗಂಧಕ ಶೋಧಿಸುವ ಕ್ರಮಗಳನ್ನು ಹಿಂದೆ ವರ್ಣಿಸಿಯದೆ.

ತಾಳಕದ ಶುದ್ಧಿ

ತಾಳಕದ ಪ್ರಮಾಣವು ಅಲ್ಪವಾದ್ದರಿಂದ ಅದನ್ನು ಶುದ್ಧಮಾಡದೆ ಉಪಯೋಗಿಸುವದ ರಿಂದ ಬಾಧಕವಿಲ್ಲ ಎಂಬ ಮತದವರು ಇದ್ದಾರಾಗಿ ಕಾಣುತ್ತದೆ. ಆದರೆ ತಾಳಕದಲ್ಲಿ ೬೨ ಶತಾಂಶದಷ್ಟು ಪಾಷಾಣ (Arsenic) ಎಂಬ ತೀಕ್ಷ್ಣ ವಿಷವಿರಬಹುದೆಂತ ಕಾಣುವದರಿಂದ, ಅದನ್ನು ಶುದ್ಧಮಾಡಿಯೇ ಉಪಯೋಗಿಸುವದು ಪ್ರಶಸ್ತ. ಅದನ್ನು ಹುಡಿಮಾಡಿ ನಾಲ್ಕು ಪದರುಳ್ಳ ವಸ್ತ್ರದ ತುಂಡಿನಲ್ಲಿ ಸಡಿಲಾಗಿ ಕಟ್ಟಿ, ಆ ಕಟ್ಟನ್ನು ಒಂದು ಮಡಿಕೆಯ ಬಾಯಿಯ ಮೇಲೆ ಅಡ್ಡವಾಗಿ ನಿಲ್ಲುವದಕ್ಕೆ ಬೇಕಾದಷ್ಟು ಉದ್ದವಿರುವ ಒಂದು ಕಡ್ಡಿ ಅಥವಾ ಸರಿಗೆಗೆ, ಆ ಕಟ್ಟು ಮಡಿಕೆಯ ಬುಡಕ್ಕೆ ತಗಲದೆ ಮಧ್ಯ ಜೋತಾಡುವದಕ್ಕೆ ಬೇಕಾದಷ್ಟು ಉದ್ದದ ದಾರದಿಂದ ಬಿಗಿದು, ಆ ಕಡ್ಡಿಯನ್ನು ಮಡಿಕೆಯ ಮುಖದ ಮೇಲೆ ಅಡ್ಡವಾಗಿ ಇಟ್ಟು, ಡೋಲಾಯಂತ್ರದ ವಿಧಾನದಿಂದ ಬೂದಿ ಕುಂಬಳಕಾಯಿಯನ್ನು ಬೆವರಿಸಿ ತೆಗೆದ ರಸದಲ್ಲಿಯಾಗಲಿ, ಸುಣ್ಣದ ನೀರಿನಲ್ಲಿಯಾಗಲಿ, ಎಳ್ಳಿನ ಬೂದಿಯ ನೀರಿನಲ್ಲಿಯಾಗಲಿ ಬೆವರಿಸಿದ್ದಲ್ಲಿ, ಅದು ಶುದ್ಧವಾಗುತ್ತದೆ (ಧ. ನಿ. 315).

ಎಳ್ಳಿನ ಬೂದಿಯ ನೀರೆಂದರೆ: ಎಳ್ಳಿನ ಗಿಡಗಳನ್ನು ಸಮೂಲವಾಗಿ ಕಿತ್ತು, ಸಣ್ಣವಾಗಿ ಕತ್ತರಿಸಿ, ನೀರಿನಿಂದ ತೊಳೆದು, ಒಣಗಿಸಿ, ಸುಟ್ಟು, ಮಾಡಿದ ಬೂದಿಗೆ ಅದರ ಅಳತೆಗೆ ಆರು ಪಾಲು ನೀರು ಹೊಯಿದು ಕದಡಿ, ವಸ್ತ್ರದಿಂದ ಶೋಧಿಸಿ, ಆ ನೀರನ್ನು ಒಂದು ರಾತ್ರಿಕಾಲ ಹನಿಯಲಿಕ್ಕಿಟ್ಟು, ಮಾರಣೆ ದಿನ ತೆಗೆದುಕೊಂಡ ಮೇಲಿನ ತಿಳೀ ನೀರು.

ಸುಣ್ಣದ ನೀರು ಎಂದರೆ: ನಾಲ್ಕು ತೊಲೆ ಸುಟ್ಟ ಸುಣ್ಣದಕಲ್ಲು ಅಥವಾ ಚಿಪ್ಪಿಗೆ ಎರಡು

ಕುತ್ತಿ ನೀರು ಹೊಯಿದು, ಸೌಟಿನಿಂದ ಮಗಚಿ, ಸುಣ್ಣ ಕರಗಿದ ಮೇಲೆ ಹನಿಯಲಿಕ್ಕಿಟ್ಟು, ಹನಿದ ಮೇಲೆ ಬಗ್ಗಿಸಿ ತೆಗೆದುಕೊಂಡ ಮೇಲಿನ ತಿಳೀ ನೀರು.

ತಾಳಕವನ್ನು ಪ್ರತ್ಯೇಕವಾಗಿ, ಅಥವಾ ಹೆಚ್ಚಿನ ಪ್ರಮಾಣದಲ್ಲಿ, ಹೊಟ್ಟೆಗೆ ಕೊಡಬೇಕಾದಲ್ಲಿ ಮೇಲೆ ಹೇಳಿದ ಮೂರು ದ್ರವಗಳಲ್ಲಿಯೂ, ತ್ರಿಫಲೆ ಕಷಾಯದಲ್ಲಿಯೂ, ಪ್ರತ್ಯೇಕವಾಗಿ ಒಂದೊಂದು ಜಾಮುಕಾಲ ಬೆವರಿಸಿಕೊಳ್ಳತಕ್ಕದ್ದು. ಸುಣ್ಣದ ನೀರಿನ ಬದಲಾಗಿ ಹುಳಿಗಂಜಿನೀರಿಗೆ ಸ್ವಲ್ಪ ಸುಣ್ಣ ಅಥವಾ ಗೋಮೂತ್ರ ಕೂಡಿಸಿ ಉಪಯೋಗಿಸುವದುಂಟು.

ಪಾದರಸಕ್ಕೆ ಏಳು ಪಾಲಷ್ಟೇ ಜೇಪಾಳವನ್ನು ಸೇರಿಸಿ ಮಾಡಿದ ಮಾತ್ರೆಯು ಬಹು ಸೌಮ್ಯ; ಬಹುಪಿತ್ತವುಳ್ಳವರಲ್ಲಿ ಸ್ವಲ್ಪ ಸಂಕಟ ಕಾಣಬಹುದಾದರೂ, ಸಾಧಾರಣವಾಗಿ ಯಾವ ಸಂಕಟವನ್ನಾದರೂ ಉಂಟುಮಾಡದೆ, ತೃಪ್ತಿಕರವಾಗಿ ವಿರೇಚನ ಮಾಡಿಸುತ್ತದೆ. ಪ್ರತಿ ದಿನ ಬೆಳಿಗ್ಗೆ ಬಿಡದೆ ಕೆಲವು ಕಾಲ ಕೊಡಬಹುದು. ಮಲಸಂಚಯವಿಲ್ಲದಾಗ್ಗೆ ವಿರೇಚನವಾಗುವದಿಲ್ಲ, ನಿತ್ಯದ ಮಲ ಮಾತ್ರ ಹೋಗುತ್ತದೆ. ಮೈಯಲ್ಲಿ ನೀರು ಬಂದಿದ್ದ ಒಬ್ಬಳು ಗರ್ಭಿಣಿಗೆ ಆರು ದಿನ ಬಿಡದೆ ಬೆಳಿಗ್ಗಿನ ಹೊತ್ತು ಈ ಮಾತ್ರೆ ಕೊಟ್ಟದರಿಂದ ಗರ್ಭಕ್ಕೆ ಬಾಧಕ ಬರಲಿಲ್ಲ.

ಈ ಮಾತ್ರೆಯ ಉಪಯೋಗದಿಂದ "ಸೂತಕ ಸನ್ನಿ, ಯಳವು, ಶೂಲೆ, ಕಠಿಣವಾದ ಜ್ವರ, ಶೋಫೆ, ಯಕೃತ್‍ಪ್ಲೀಹದ ಶೋಫೆ, ಧನುರ್ವಾಯು, ಪಾರ್ಶ್ವವಾಯು, ಕಾಸ, ಶ್ವಾಸ, ಉಷ್ಣಸನ್ನಿ, ತಲೆನೋವು, ಇತ್ಯಾದಿಗಳು ಶಮನವಾಗುವವು" ಎಂತ ಮೈಸೂರು ಪಂಡಿತ ಮರಿಶೆಟ್ಟಿಯವರ ಪುಸ್ತಕದಲ್ಲಿ ಹೇಳಲ್ಪಟ್ಟಿದೆ.

(10) ರೋಗಿಯ ಪ್ರಾಯ ೬೦ ವರ್ಷ, ಹೆಂಗಸು. ಐದಾರು ದಿನಗಳಿಂದ ಜ್ವರ, ಮೈ ಬೆವರಿದರೂ ಜ್ವರ ಬಿಡುವದಿಲ್ಲ, ಆರಂಭದಲ್ಲಿ ಮೂತ್ರದ ಉರಿ ಬಹಳವಿತ್ತಂತೆ, ಈಗ ಪದೇ ಪದೇ ಅರ್ಧ ಕುಡ್ತೆಯಾಗುವಷ್ಟು ಮೂತ್ರ ಹೋಗುತ್ತದೆ, ಬಾಯಾರಿಕೆ ಉಂಟು, ಮಲ ಬದ್ಧ; ನಾಡಿಗಳೊಳಗೆ ವಾತವು ಪಿತ್ತದ ಕಡೆ ಸ್ಥಾನಚ್ಯುತ, ಪಿತ್ತಕ್ಕೆ ತಲೆಯಿಲ್ಲ, ಕಫ ಅಬಲಿ.— ನೆಲನೆಲ್ಲಿ ರಸ ‖ ಡ್ರಾಂ, ಶುಂಠಿರಸ ‖ ಡ್ರಾಂ, ಇದರಲ್ಲಿ ಜ್ವರಭೈರವ ೧ರಂತೆ, ಸಕ್ಕರೆ ಕೂಡಿಸಿ, ೬ ಸರ್ತಿ, ದಿನಕ್ಕೆ ಎರಡಾವರ್ತಿ ಪ್ರಕಾರ, ಗಂಜಿಗೆ ಕದಿಕೆಹುಲ್ಲು, ಹಸಿಶುಂಠಿ ಮತ್ತು ನೆಗ್ಗಿಲ ಮುಳ್ಳು.— ನಿನ್ನೆ ಮತ್ತು ಈ ದಿನ ಬೆಳಿಗ್ಗೆ ಮೈ ಬಿಸಿ 98·3°, ಅಪರಾಹ್ನದಲ್ಲಿ ಬಿಸಿ 101·2° ವರೆಗೆ ಏರಿ, ರಾತ್ರಿ 8 ಘಂಟೆ ವರೆಗೆ ಅಷ್ಟೇ ಇರುತ್ತದೆ, ನಿನ್ನೆ ಮಲ ಎರಡು ಸರ್ತಿ ಹೋಗಿದೆ; ನಾಡಿಗಳೊಳಗೆ ವಾತ್ತಪಿತ್ತಗಳ ದೋಷ ಕಡಿಮೆಯಾಗಿದೆ, ಕಫ ಸ್ವಲ್ಪ ಪಿತ್ತದ ಕಡೆ ಸ್ಥಾನಚ್ಯುತ— ಅದೇ ರಸಗಳಲ್ಲಿ ಮ. ಜ್ವ. ೧ ರಂತೆ ೬ ಸರ್ತಿಗೆ, ಸಕ್ಕರೆ ಕೂಡಿಸಿ; ಗಂಜಿಗೆ ಹಸಿಶುಂಠಿ ತೊ. |, ಕದಿಕೆಹುಲ್ಲು ತೊ. =, ನೆಗ್ಗಿಲಮುಳ್ಳು ತೊ. = — ನಿನ್ನೆಯಿಂದ ಮೈ ಬಿಸಿ ಇಲ್ಲ, ಬಾಯಿ ಸೀ ಕಾಣುತ್ತದಂತೆ, ಸ್ವಲ್ಪ ನೆಗಡಿ ಉಂಟು, ಹಸಿವು ಉಂಟು— ನೆಲನೆಲ್ಲಿ ರಸ ೧ ಡ್ರಾಂ, ಶುಂಠಿ ರಸ ೧ ಡ್ರಾಂ, ಇದರಲ್ಲಿ ಅದೇ ಮಾತ್ರೆ, ಸಕ್ಕರೆ ಕೂಡಿಸಿಕೊಂಡು, ೬ ಸರ್ತಿ; ಗಂಜಿಗೆ ಕದಿಕೆ ಬಿಟ್ಟು ಮಿಕ್ಕ ೨ ಬಗೆ ಸಮಾಂಶವಾಗಿ ಕೂಡಿಸುವದು— ಜ್ವರವಿಲ್ಲ, ಬಾಯಲ್ಲಿ ಹುಣ್ಣು ಉಂಟು, ರುಚಿ ಸಿಹಿತರ, ಎಂಜಲು ಮೇಣದ ಹಾಗೆ ಅನ್ನುತ್ತಾರೆ; ನಾಡಿಗಳೊಳಗೆ ವಾತಪಿತ್ತ ಸ್ತಬ್ಧತರ, ಕಫಕ್ಕೆ ತಲೆ ಇಲ್ಲ, ಮಲ ಸರಿ— ಹಾಲು । ಕುಡ್ತೆಯಲ್ಲಿ ಕಸ್ತೂರ್ಯಾದಿ ೧ರಂತೆ, ಸಕ್ಕರೆ । ಡ್ರಾಂ ಮತ್ತು ಜೇನು । ಡ್ರಾಂ ಸೇರಿಸಿ, ೮ ಸರ್ತಿಗೆ.— ಜ್ವರವಿಲ್ಲ, ಬಾಯಿ

ರುಚಿ ಇನ್ನೂ ಸಿಹಿತರ ಉಂಟಂತೆ, ಮಾಯಿಸುತ್ತಾ ಬಂದಿದ್ದಾರೆ.—ಗುಗ್ಗುಲವಟಿಕ ೧ರಂತೆ ಹಾಲು । ಕುಡ್ತೆಯಲ್ಲಿ, ಜೇನು । ಡ್ರಾಂ ಕೂಡಿಸಿ, ೪ ದಿನ (೮ ಸರ್ತಿ) ಕೊಟ್ಟಲ್ಲಿ ಕ್ಷೇಮ.

151. ಪೃಥಗ್ರೋಗೋಕ್ತೌಷಧಗಳು. ಅಣಿಲೆಕಾಯಿ, ಅಮೃತಬಳ್ಳಿ, ಅರಗು, ಅಶ್ವತ್ಥದ ಚಕ್ಕೆ, ಆಡುಸೋಗೆ, ಆಲದ ಹಣ್ಣೆಲೆ, ಇಂದ್ರಜೀವಿ, ಇಟ್ಟೇವು (ಸ್ಥೌಣೇಯಕ), ಇಪ್ಪೆಹೂವು, ಉಮ್ಮತ್ತದ ಬೀಜ, ಎತ್ತುನಾಲಿಗೆಗಿಡ (ನೆಲಮುಚ್ಚಳ), ಒಂದೆಲಗ, ಓಮ, ಓರೆಲೆ, ಕಕ್ಕೆಮರ, ಕಟುಕರೋಹಿಣಿ, ಕರಿಜೀರಿಗೆ, ಕರಿನೆಕ್ಕಿ, ಕರ್ಕಟಶೃಂಗಿ, ಕಲ್ಲಂಗಡಲೆಬೇರು, ಕಹಿಪಡುವಲು, ಕಹಿಬೇವು, ಕಾಕಜಂಘ, ಕಾಚಿನಮರ, ಕಾಚಿಹುಲ್ಲು (ಮಜ್ಜಿಗೆಹುಲ್ಲು), ಕಾಡುಉದ್ದಿನ ಬೇರು, ಕಾಡುಹೆಸರಿನ ಬೇರು, ಕಾಶ್ಮೀರ (ಶಿವನ್ನಿ), ಕಿರಾತಕಡ್ಡಿ, ಕಿರಿಗುಳ್ಳದ ಬೇರು, ಕೊತ್ತುಂಬರಿ, ಖರ್ಜೂರ, ಗಂಡು ದೂರ್ವೆ, ಗಾಂಧಾರಿಗಿಡ (ಕುಕುಂದರ), ಗುಲುಗುಂಜಿ, ಗುಳ್ಳದ ಬೇರು, ಗೇರುಕಾಯಿ, ಗೋರೋಚನ, ಚಂಗಲಕೋಷ್ಠ, ಚೋರಕ, ಜೀರಿಗೆ, ತುಳಸಿ (ಎರಡು ಜಾತಿ), ದಡ್ಡಾಲ, ದಶಮೂಲಗಳು, ದಾಳಿಂಬ, ದೇವದಾರ, ದೇವದಾಳಿ, ದ್ರಾಕ್ಷೆ, ನಖ, ನಳಿಕಾ (ಮಲ. ವೆಳಪ್ಪುಲ್ಲು), ನಾಗಕೇಸರ, ನಿರ್ವಿಷದ ಬೇರು, ನೀರುನೆಲ್ಲಿ (ಪ್ರಾಚೀನಾಮಲಕ), ನೆಲಬೇವು, ನೆಲ್ಲಿ, ನೈದಿಲೆ, ಪರೂಷಕ, ಪರ್ಪಾಟಕ, ಪಾಡಾವಳಿಗಡ್ಡೆ, ಪುಲ್ಲಂಪುರುಚೆ (ಮಲ. ಪುಳಿಯಾರಲ್), ಪುಷ್ಕರಮೂಲ, ಬಳ್ಳಿತುರಚನ ಬೇರು, ಬಾವುಂಚಿಬೀಜ (ಮಲ. ಕಾರ್ಕೋಲರಿ), ಬಿದಿರುಪ್ಪು, ಬಿದಿರೆಲೆ, ಬಿಳೇ ತಿಗಡೆ, ಬೂದಿಕುಂಬಳ, ಬೆಳ್ಳುಳ್ಳಿ, ಭದ್ರಮುಷ್ಟಿ, ಭೂನಾಗ, ಮಂಜಿಷ್ಠ, ಮರದರಸಿನ, ಮಿಶ್ರೇಯಾ (ಬಡೆಸೋಪಿ—ಮಲ. ಕಾಟ್ಟುಶತಕುಪ್ಪ), ಮುಂಡುಕಳ್ಳಿ, ಮುಡಿವಾಳ, ಮುರಾ (ಅಂಗಾರಕನಗಿಡ), ಮೂವೆಲೆ, ಮೆಂತೆ, ಮೋರಟೆಹಣ್ಣು, ರಕ್ತಚಂದನ, ರಾಸ್ಮೆಗಡ್ಡೆ (ಅರತೆ), ರುದ್ರಾಕ್ಷಿ, ಲವಂಗಪತ್ರೆ (ದಾಲ್ಚೀನಿ ಎಲೆ), ಲಾಮಂಚ, ಲೋಧ್ರ, ಲೋಭಾನ (ಮಲ. ಕುಂದುರುಕ್ಕಂ), ಲೋಳಿಸರ, ವಿಷ್ಣುಕ್ರಾಂತಿ, ಶತಾವರಿ, ಶರಪುಂಖ (ಕಾಟು ನೀಲಿ), ಶಾಂತಿ(ತಾರೆ)ಕಾಯಿ, ಶಿಲಾರಸ, ಶಿವನಾಭಿಬಳ್ಳಿ ಬೇರು (ನಾಕುಲೀ), ಶುಂಠಿ, ಶ್ರೀಗಂಧ, ಸಬ್ಬಸಿಗೆ, ಸಹದೇವಿ, ಸೀಯಾಳ, ಸುಗಂಧಿಬೇರು (ಎರಡು ಜಾತಿ), ಸೋಪಿ (ಉಪಕುಂಚಿಕಾ), ಸ್ಪೃಕ್ಕಾ (ಮಲ. ಚೋನಕಪುಲ್ಲು), ಹರಳು ಬೇರು, ಹಿಪ್ಪಲಿ, ಹಿಪ್ಪಲಿಮೂಲ ಮತ್ತು ಹೆಗ್ಗುರುಟಿಗೆಬೇರು (ಮಲ. ಪೆರುಂಕುರುಂಬ).

152. ಪಥ್ಯಾಪಥ್ಯ. **ತರುಣಜ್ವರದಲ್ಲಿ ಪಥ್ಯ:**—ಪಾಚನಕರವಾದ ಲಂಘನ, ವಾಂತಿ ಮಾಡಿಸುವದು, ಬೆವರಿಸುವದು, ಯವಾಗೂ (ಗಂಜಿಯ ಭೇದ), ಕಹಿ ಮತ್ತು ಕಾರ ರಸಗಳು (ಕೆಳಗೆ ನವಜ್ವರಕ್ಕೆ ಬರೆದ ಅಪಥ್ಯವಿಧಿ ನೋಡಿ).

**ಮಧ್ಯಮಜ್ವರದಲ್ಲಿ ಪಥ್ಯ:**—೬೦ ದಿನಗಳ ಬೆಳಿಕೆಯ ಹಳೇ ಭತ್ತದ ಅಕ್ಕಿ, ಹಳೇ ಶಾಲ್ಯಕ್ಕಿ, ಎಳೇ ಗುಳ್ಳ, ನುಗ್ಗೆಕೋಡು, ಹಾಗಲಕಾಯಿ, ಪಡುವಲಕಾಯಿ, ಹೀರೆಕಾಯಿ, ಹರುವೆಸೊಪ್ಪು, ಹೆಸರಿನ-ಮಸೂರದ (ಚನ್ನಂಗಿ ಧಾನ್ಯದ)-ಕಡಲೆಯ-ಹುರುಳಿಯ-ಮಕುಷ್ಠ (ಮಡಿಕೆ) ಧಾನ್ಯದ ಸಾರುಗಳು, ಕಾಗೆಹಣ್ಣಿನ ಗಿಡದ ಸೊಪ್ಪು, ಜೀವಂತಿಸೊಪ್ಪು, ಮತ್ತು ದ್ರಾಕ್ಷೆ-ದಾಳಿಂಬ-ಬೇಲಗಳ ಪಕ್ವವಾದ ಹಣ್ಣುಗಳು.

**ಹಳೇಜ್ವರದಲ್ಲಿ ಪಥ್ಯ:**—ವಿರೇಚನ, ವಮನ, ಅಂಜನ, ನಸ್ಯ, ಧೂಮಪಾನ, ಅನುವಾ

ಸನವಸ್ತಿ, ಸಿರೆ ಚುಚ್ಚಿ ರಕ್ತತೆಗೆಯುವದು, ಸಂಶಮನ ಚಿಕಿತ್ಸೆ, ಸೇಕ, ಅಭ್ಯಂಗ, ಮುಳುಗಿ ಸ್ನಾನ, ತಣ್ಣಗಿನ ಉಪಚಾರ, ಜಿಂಕೆ-ಮೊಲ-ಕೋಳಿ ಮುಂತಾದವುಗಳ ಮಾಂಸಗಳು, ದನದ ಹಾಲು, ಆಡಿನ ಹಾಲು, ದನದ ತುಪ್ಪ, ಆಡಿನ ತುಪ್ಪ, ಹರಳೆಣ್ಣೆ ಮತ್ತು ಬಿಳೇ ಶ್ರೀಗಂಧ.

**ನವಜ್ವರದಲ್ಲಿ ಅಪಥ್ಯ.**—ಸ್ನಾನ, ವಿರೇಚನ, ಸ್ತ್ರೀಸಂಗ, ಚೊಗರು ರಸ, ದೇಹದಂಡನ, ತೈಲಾಭ್ಯಂಗ, ಹಗಲುನಿದ್ರೆ, ಹಾಲು, ತುಪ್ಪ, ಬೇಳೆಗಳು, ಮಾಂಸಗಳು, ಮಜ್ಜಿಗೆ, ಮದ್ಯ, ಸಿಹಿಯಾದ ಮತ್ತು ಗುರುವಾದ ದ್ರವ್ಯಗಳು, ಅನ್ನ, ಬಿರುಗಾಳಿ, ಸಂಚಾರ, ಕೋಪ, ಗಂಧ-ಪುಷ್ಪ ಮೊದಲಾದ ಪರಿಮಳ ದ್ರವ್ಯಗಳು, ತಾಂಬೂಲ, ಬೆಲ್ಲ, ಎಣ್ಣೆಗಳು, ಸ್ತ್ರೀದರ್ಶನ, ಸ್ತ್ರೀ ಸ್ಪರ್ಶನ, ಚಿಂತೆ, ಮತ್ತು ಶೋಕ. ಕಹಿ-ಹುಳಿ-ಖಾರ ರಸಗಳು ಸಹ ಅಪಥ್ಯ ಎಂತ ಒಂದು ಪಕ್ಷ.

ಇಲ್ಲಿ ಬರೆದ ಪಥ್ಯಾಪಥ್ಯವಿಧಿಗಳನ್ನು ಅಧ್ಯಾಯದೊಳಗಣ ವಿಶೇಷ ಉಪದೇಶಗಳಿಗೆ ವಿರೋಧವಿಲ್ಲದಂತೆ ಸಂದರ್ಭಾನುಸಾರವಾಗಿ ಮನ್ನಿಸತಕ್ಕದ್ದು.

153. ಪಾಶ್ಚಾತ್ಯ ಡಾಕ್ಟರರ ಅನುಭವದಿಂದ ಸಾರವತ್ತಾದ ಕೆಲವು ಅಂಶಗಳನ್ನು ಸಂಗ್ರಹಿಸಿ ಇಲ್ಲಿ ಬರೆಯೋಣಾಗುತ್ತದೆ

ಜ್ವರದ ಏರು-ಇಳಿಕೆ ಕ್ರಮದಲ್ಲಿ ಸಾಧಾರಣವಾಗಿ ಮೂರು ವಿಧಗಳಿವೆ:—

ಪ್ರಕರಣಾಂತ ಟಿಪ್ಪಣಿ

(i) ಬಿಡದೆ ಬರುವಂಥಾದ್ದು, (continuous), ಇದರಲ್ಲಿ, ಆರೋಗ್ಯಸ್ಥಿತಿಯಲ್ಲಿ ಇದ್ದಂತೆ ಸಂಜೆಹೊತ್ತಿಗೆ ಬೆಳಿಗ್ಗಿನದಕ್ಕಿಂತ $1\frac{1}{2}$ ಡಿಗ್ರಿಗೆ ಮಿಕ್ಕದಷ್ಟು ಮಾತ್ರ ಬಿಸಿ ಏರುತ್ತದಷ್ಟು.

(ii) ಇಳಿ ಇರುವ ಜ್ವರ, (remittent), ಇದರಲ್ಲಿ ಬಿಸಿಯು ಸಂಜೆಯದಕ್ಕಿಂತ $1\frac{1}{2}$ ಡಿಗ್ರಿಗೆ ಮಿಕ್ಕಿ ಬೆಳಿಗ್ಗೆ ಇಳಿಯುತ್ತದೆ, 2-3 ಡಿಗ್ರಿ ಇಳಿಯಬಹುದು; ಆದರೆ ಆರೋಗ್ಯಸ್ಥಿತಿಯ ಬಿಸಿಗೆ ಮಿಕ್ಕಿಯೇ ಇರುತ್ತದೆ.

ಮತ್ತು (iii) ಬಿಟ್ಟು ಬರುವ ಜ್ವರ, (intermittent), ಇದರಲ್ಲಿ ಮೈಬಿಸಿಯು ಬೆಳಿಗ್ಗೆ ಆರೋಗ್ಯಸ್ಥಿತಿಯದಷ್ಟೇ ಅಥವಾ ಅದಕ್ಕೂ ಕಡಿಮೆ ಇದ್ದು, ಸಂಜೆಗೆ ಅದಕ್ಕಿಂತ 2, 3 ಅಥವಾ ಹೆಚ್ಚು ಡಿಗ್ರಿ ಏರುತ್ತದೆ.

ಹೇತು ಭೇದದ ಮೇಲೆಯೂ ಜ್ವರವನ್ನು ಮೂರು ವಿಧವಾಗಿ ವಿಂಗಡಿಸಬಹುದು —

(i) ಸರ್ವಾಂಗವ್ಯಾಪಿಯಾದ, ವಿಷದ ಅಥವಾ ವಿಷಜೀವಿಗಳ ಸೋಂಕಿನಿಂದ ಉತ್ಪನ್ನವಾಗುವ ರೋಗಗಳು.

(ii) ಯಾವದಾದರೊಂದು ಅಂಗವಿಶೇಷದಲ್ಲಿ ವಿದಾಹವುಳ್ಳ ಶೋಥ, ಪಿಟಕಾದಿಗಳು ಉದ್ಭವಿಸಿ, ತತ್ಸಂಬಂಧ ಉಂಟಾಗುವ ಜ್ವರಗಳು.

ಮತ್ತು (iii) ನರಮಂಡಲದ ಯಾವ ಭಾಗದಲ್ಲಿಯಾದರೂ ಉತ್ಪನ್ನವಾದ ರೋಗದ ದೆಸೆಯಿಂದ, ಅಥವಾ ನರಮಂಡಲದ ಅಧಿಕಾರಭಂಗಕ್ಕೆ ಸಂಬಂಧಪಟ್ಟು, ಉಂಟಾಗುವ ಜ್ವರಗಳು.

ಬೇರೆ ಬೇರೆ ಅಣುಜೀವಿಗಳು (Bacteria) ಅಥವಾ ಸೂಕ್ಷ್ಮಜಂತುಗಳು (micro-organisms) ದೇಹದೊಳಗೆ ಪ್ರವೇಶಿಸಿ, ರಕ್ತದಲ್ಲಿ ಅಥವಾ ಶಿರಾದಿಗಳ ಜಾಲಗಳಲ್ಲಿ (tissues) ತಮ್ಮ ಸಂತಾನಾಭಿವೃದ್ಧಿ ಮಾಡಿಕೊಳ್ಳುವದರಿಂದ, ಅವುಗಳ ವಿಷದ ಬಾಧೆಯು

ಮಿದುಳಿಗೆ ತಟ್ಟುವದರ ಪರಿಣಾಮವಾಗಿ ಒಂದನೇ ವಿಧದ ಸೋಂಕಿನ ಜ್ವರಗಳು ಸಂಭವಿಸುವದೆಂತ ತಿಳಿಯಬಹುದು. ಕೆಲವು ವನಸ್ಪತಿಸಂಬಂಧವಾದ ಅಥವಾ ಪ್ರಾಣಿಸಂಬಂಧವಾದ ವಿಷಗಳ ದೆಸೆಯಿಂದಲೂ ಮನುಷ್ಯರ ದೇಹದ ಬಿಸಿಯು ಹೆಚ್ಚುವದುಂಟು.

ಜ್ವರದ ವೇಗದ ಕಾಲವು ಕೆಲವು ತಾಸುಗಳಿಂದ ಅನೇಕ ತಿಂಗಳುಗಳ ವರೆಗೆ ಹೆಚ್ಚು-ಕಡಿಮೆಯಾಗಿ ಇರಬಹುದು. ವಾಯಿದೆಜ್ವರಗಳು (typhoid), ವಿಷಮಜ್ವರಗಳು (malarial), ರಾಜಯಕ್ಷ್ಮ(tuberculosis)ದ ಜ್ವರ, ವಿಷಮಪಾಂಡು(pernicious anaemia)ವಿನ ಜ್ವರ, ಮುಂತಾದವು ದೀರ್ಘಕಾಲದ ಜ್ವರಗಳಲ್ಲಿ ಸೇರಿದವು. ಜ್ವರವು ಅನ್ಯ ವ್ಯಾಧಿಗಳ ಲಕ್ಷಣವಲ್ಲದೆ ಒಂದು ಪ್ರಧಾನ ರೋಗವಲ್ಲ.

ಜ್ವರದಲ್ಲಿ ಅಪಾಯ ಸಂಭವಿಸುವದಕ್ಕೆ, (1) ವಿಷಗಳ ದೆಸೆಯಿಂದ ನರಮಂಡಲದಲ್ಲಿ ಉಂಟಾಗುವ ಬಾಧೆಯಿಂದ ರೋಗಿಯ ಅಂಗಗಳ ವ್ಯಾಪಾರಗಳು ನಿಂತುಹೋಗುವದಾಗಲಿ, (2) ಮೈಬಿಸಿ ಅತಿಯಾಗುವದಾಗಲಿ, (3) ಹೃದಯದ ವ್ಯಾಪಾರ ನಿಂತುಹೋಗುವದಾಗಲಿ, (4) ಶ್ವಾಸಕೋಶದಲ್ಲಿ ಸಂಭವಿಸುವ ವೈಷಮ್ಯವಾಗಲಿ, ಕಾರಣವಾಗುತ್ತದೆ.

ವಾಯಿದೆಜ್ವರಗಳಿಗೆ ಹೇತುವಾದ ಅಣುಜೀವಿಗಳಲ್ಲಿ ಮೂರು ಜಾತಿಗಳಿವೆ —(1) ಬೆಸಿಲ್ಲಸ್ ಟ್ಯಾಫೋಸಸ್ (Bacillus typhosus), (2) ಬೆಸಿಲ್ಲಸ್ ಪರ-ಟ್ಯಾಫೋಸಸ್-ಎ. (Paratyphosus-A ), (3) ಬೆಸಿಲ್ಲಸ್ ಪರ-ಟ್ಯಾಫೋಸಸ್-ಬಿ. (Paratyphosus-B.) ಇವುಗಳ ವಿಷದ ದೆಸೆಯಿಂದ ಕ್ಷುದ್ರಾಂತ್ರದ ಒಳಗಿನ ಆವರಣದಲ್ಲಿ ಅಲ್ಲಲ್ಲಿ ಶ್ವಯಥುಗಳು ಸಂಭವಿಸಿ, ಪಾಕವಾಗಿ ಹುಣ್ಣಾಗುವದು ವಾಯಿದೆಜ್ವರದ ಒಂದು ವಿಶೇಷ ಲಕ್ಷಣ. ಸಾಧಾರಣವಾಗಿ ಒಂದು ಹಪ್ತೆಯ ಅನಂತರ ಮೂರನೇ ಹಪ್ತೆ ದಾಟುವವರೆಗೆ ಹೆಚ್ಚಾಗಿ ಹೊಟ್ಟೆಯ ಮತ್ತು ಎದೆಯ ಮೇಲೆ ಗುಲಾಬಿಕೆಂಪು ವರ್ಣದ, ಮುಖವಿಲ್ಲದ ಮತ್ತು ಬೆರಳಿನಿಂದ ಬಲವಾಗಿ ಒತ್ತಿದಲ್ಲಿ ಅಡಗುವ ಸ್ವಭಾವದ ದಡಿಕೆಗಳು ಏಳುತ್ತಿರುವದು ವಾಯಿದೆಜ್ವರದ ಎರಡನೇ ವಿಶೇಷ ಲಕ್ಷಣ. ಒಮ್ಮೆ ಎದ್ದ ದಡಿಕೆಗಳು ಮೂರು ನಾಲ್ಕು ದಿನಗಳಲ್ಲಿ ತಮ್ಮಂತೆ ಅಡಗುತ್ತವೆ. ಈ ದಡಿಕೆಗಳು ಏಕಕಾಲದಲ್ಲಿ ೭ರಿಂದ ೨೦-೩೦ರ ವರೆಗೆ ಇರಬಹುದು. ೧೦-೨೦ ಶತಾಂಶದಷ್ಟು ರೋಗಿಗಳಲ್ಲಿ ಈ ದಡಿಕೆಗಳು ಏಳುವದೇ ಇಲ್ಲ.

೨ನೇ, ೩ನೇ ಜಾತಿ ವಾಯಿದೆಜ್ವರಗಳಲ್ಲಿ ಆ ದಡಿಕೆಗಳ ಕೆಂಪು ವರ್ಣವೂ ಸಂಖ್ಯೆಯೂ ಹೆಚ್ಚು ಇರುತ್ತವೆ, ಪ್ಲೀಹ ವೃದ್ಧಿಯಾಗುವದು ಸಹ ಹೆಚ್ಚು. ಆದರೆ ಮೈಬಿಸಿಯು ೧೦೦ರಿಂದ ೧೦೨° ವರೆಗೆ ಹೆಚ್ಚುಕಡಿಮೆಯಾಗಿ ಇರುತ್ತದಷ್ಟೆ, ೧೦೩ ಡಿಗ್ರಿಯನ್ನು ಮಿಕ್ಕುವದು ಅಪರೂಪ. ಒಟ್ಟಾರೆ ಈ ಜ್ವರಗಳು ೧ನೇ ವಿಧದ ವಾಯಿದೆಜ್ವರಕ್ಕಿಂತ ಸೌಮ್ಯ. ಅವುಗಳಿಂದ ಪೀಡಿತರಾದ ೧೦೦ ರೋಗಿಗಳಲ್ಲಿ ೧—೩ ಮಂದಿ ಮಾತ್ರ ಸಾಯುತ್ತಾರೆ.

೧ನೇ ವಿಧದ ವಾಯಿದೆಜ್ವರದಲ್ಲಿ ಮೈಬಿಸಿಯು ಬೆಳಿಗ್ಗಿನದಕ್ಕಿಂತ ಎರಡು ಡಿಗ್ರಿ ಹೆಚ್ಚು ಸಂಜೆಯಲ್ಲಿ ಏರಿ, ಮಾರಣೆ ದಿನ ಬೆಳಿಗ್ಗೆ ಒಂದು ಡಿಗ್ರಿ ಕಡಿಮೆಯಾಗಿ, ಅದಕ್ಕೆ ಎರಡು ಡಿಗ್ರಿ ಹೆಚ್ಚು ಆ ದಿನ ಸಂಜೆ, ಹೀಗೆ ೪, ೫ ದಿನಗಳ ವರೆಗೆ ಏರುತ್ತಾ, ೧೦೩ ಅಥವಾ ೧೦೪ ಡಿಗ್ರಿಗೆ ಏರಿದ ಮೇಲೆ, ೧೦ನೇ-೧೪ನೇ ದಿನದ ವರೆಗೆ ಬೆಳಿಗ್ಗೆ ೧೦೨ರಿಂದ ೧೦೩°, ಸಂಜೆಹೊತ್ತಿನಲ್ಲಿ ೧೦೩°-೧೦೪·೫, (104½) ಹೀಗೆ ತಗ್ಗುತ್ತಾ ಏರುತ್ತಾ ಇರುವದು. ಇತರ ಜ್ವರಗಳಲ್ಲಿ ಕಂಡ ಹಾಗೆ ಈ ಜ್ವರದಲ್ಲಿ ಮೈಬಿಸಿಯ ಏರಿಕೆಗೆ ಹೊಂದಿಕೆಯಾಗಿ ನಾಡಿಯ ಸಂಖ್ಯೆಯು

ಹೆಚ್ಚುವದಿಲ್ಲ. ೧೦೨ ಅಥವಾ ೧೦೩ ಡಿಗ್ರಿಯಷ್ಟು ಜ್ವರವಿರುವಾಗ್ಗೆ ನಾಡಿಯ ಸಂಖ್ಯೆಯು ಮಿನಿಟಿಗೆ ಎಂಭತ್ತೇ ಇರಬಹುದು; ಮತ್ತು ಯಾವಾಗಲಾದರೂ ೧೦೦ಕ್ಕೆ ಮಿಕ್ಕದಿರ ಬಹುದು. ಇತರ ಎರಡು ವಿಧದ ವಾಯಿದೆಜ್ವರಗಳಲ್ಲಿ ನಾಡಿಯ ಸಂಖ್ಯೆ ಮತ್ತಷ್ಟು ಕಡಿಮೆ; ಮಿನಿಟಿಗೆ ೫೦ರಷ್ಟು ಕಡಿಮೆಯಾಗಬಹುದು.

ಕ್ಷುದ್ರಾಂತ್ರದಲ್ಲಿ ಉತ್ಪನ್ನವಾದ ಶ್ವಯಥುಗಳು ಸಾಧಾರಣವಾಗಿ ೧೦ನೇ ದಿನ, ಅಥವಾ ಅದಕ್ಕೆ ಸ್ವಲ್ಪ ಮುಂದೆ, ಹುಣ್ಣಾಗಲಾರಂಭಿಸುತ್ತವೆ; ಸಾಧ್ಯವಾದ ಸಂಗತಿಯಲ್ಲಿ ಮೂರನೇ ಹಪ್ತೆಯ ಅಂತ್ಯಭಾಗದಲ್ಲಿ ಮಾಯುವದಕ್ಕೆ ಆರಂಭಿಸುತ್ತವೆ. ಹುಣ್ಣು ದೊಡ್ಡದಾಗಿ ಕೊರೆದು ಕ್ಷುದ್ರಾಂತ್ರದ ಗೋಡೆಯಲ್ಲಿ (ಆವರಣದಲ್ಲಿ) ರಂಧ್ರ ಉಂಟಾದರೆ, ರೋಗಿಯು ಬದುಕಲಾರನು. ಲಘುವಾದ ಜ್ವರಗಳಲ್ಲಿ ಆ ಶ್ವಯಥುಗಳು ಹುಣ್ಣಾಗದೇನೇ ಮಾಯ ಬಹುದು.

ವಾಯಿದೆಜ್ವರವು ಸಾಧಾರಣವಾಗಿ ಮೂರು ಹಪ್ತೆಕಾಲ ಇರುತ್ತದೆ; ಆ ಮೇಲೆ ಒಂದೆರಡು ಸರ್ತಿ ಮರುಕಳಿಸಿ ಬಂದು ಅಷ್ಟೇ ಕಾಲ ಇರುವದುಂಟು. ಅದು ಸೌಮ್ಯ ಸ್ಥಿತಿಯದಾದರೆ, ಬಿಸಿಯ ಪರಮಾವಧಿ ಏರಿಕೆ ೧೦ನೇ ದಿನದಿಂದ ೧೪ನೇ ದಿನದ ವರೆಗೆ; ಅದರನಂತರ ಬೆಳಿಗ್ಗಿನ ಹೊತ್ತು ಬೇಗ ಬೇಗನೇ, ಸಂಜೆಯಲ್ಲಿ ಸ್ವಲ್ಪ ಮೆಲ್ಲಗಾಗಿ, ಬಿಸಿ ಇಳಿ ಯುತ್ತದೆ. ನಾಲ್ಕೈದು ದಿನಗಳಲ್ಲಿ ಬೆಳಿಗ್ಗಿನ ಬಿಸಿಯು ೯೯° ಅಥವಾ ೯೮°ಗೆ ತಗ್ಗಿರುವಾಗ್ಗೆ, ಸಂಜೆ ಬಿಸಿಯು ೧೦೨° ಅಥವಾ ೧೦೧°ರಲ್ಲಿ ನಿಲ್ಲಬಹುದು. ಅದರನಂತರ, ಮೂರು ನಾಲ್ಕು ದಿನ ಅದು ಬಿಟ್ಟುಬರುವ ಸ್ವಭಾವದ್ದಾಗಿ ಕಾಣುತ್ತದೆ. ಅಂದರೆ ಬೆಳಿಗ್ಗೆ ಜ್ವರವಿಲ್ಲದೆ ಇದ್ದು, ಸಂಜೆಯಲ್ಲಿ ೧೦೧° ಅಥವಾ ಅದಕ್ಕೂ ಹೆಚ್ಚು ಬಿಸಿ ಇರುತ್ತದೆ ಆ ಮೇಲೆ ಸಂಜೆಯ ಜ್ವರ ಸಹ ಒಡನೆ ಬಿಡುತ್ತದೆ. ಜ್ವರವು ಕಠಿನ ಸ್ವಭಾವದ್ದಾಗಿ, ಬಲವಂತವಾದ ಉಪದ್ರವ ಗಳಿಂದ ಕೂಡಿಕೊಂಡಿದ್ದರೆ, ೧೦ನೇ ಅಥವಾ ೧೨ನೇ ದಿನದನಂತರ ಯಾವಾಗಲಾದರೂ ಮರಣ ಸಂಭವಿಸಬಹುದು; ಆದರೆ ದೀರ್ಘಕಾಲ ಎಚ್ಚರವಿಲ್ಲದೆ ಕಠಿನವಾದ ಲಕ್ಷಣಯುಕ್ತ ವಾಗಿ ಇದ್ದ ಜ್ವರರೋಗಿಗಳಲ್ಲಿ ಜ್ವರವು ನಿದಾನದಿಂದ ಇಳಿದು, ಸಾವಕಾಶದಿಂದ ವಾಸಿಯಾ ಗುವದುಂಟು. ಸಾಧಾರಣವಾಗಿ ಒಂದನೇ ಹಪ್ತೆಯಲ್ಲಿ ಜ್ವರ ಹೆಚ್ಚು ಇದ್ದಾಗ್ಯೂ, ಎರಡನೇ ಹಪ್ತೆಯಲ್ಲಿ ಬಿಸಿಯು ೧೦೩ ಡಿಗ್ರಿಗೆ ಮಿಕ್ಕದಿರುವದು ಒಳ್ಳೇ ಲಕ್ಷಣ ಎಂತ ಎಣಿಸಬಹುದು. ಎರಡನೇ ಹಪ್ತೆಯಲ್ಲಿ ಬಿಸಿಯು ೧೦೪° ಅಥವಾ ಅದಕ್ಕೂ ಏರಿ ಇರುವಲ್ಲಿ, ಭಯ ಹೆಚ್ಚು ಹತ್ತನೇ ದಿನದೊಳಗಾಗಿ ಸಹ ರೋಗಿಯು ಸಾಯುವದುಂಟು. ಒಟ್ಟಾರೆ ಈ ವಾಯಿದೆ ಜ್ವರದಲ್ಲಿ ಕಾಣುವಷ್ಟು ಭೇದಗಳು ಬೇರೆ ಯಾವ ರೋಗದಲ್ಲಿಯೂ ಕಾಣುವದಿಲ್ಲ ಎಂತ ಒಬ್ಬರು ಡಾಕ್ಟರರು ತಮ್ಮ ಪುಸ್ತಕದಲ್ಲಿ ಬರೆದಿದ್ದಾರೆ ವಾಯಿದೆಜ್ವರಗಳಿಗೆ ಕಾರಣವಾದ ಅಣುಜೀವಿಗಳು ಒಬ್ಬರಿಂದೊಬ್ಬರಲ್ಲಿ ಸೇರಿ ಅಂಟುವದು ರೋಗಿಗಳ ಮಲದ ಪರಿಮುಖ ವಾಗಿ ಆಗಿರುತ್ತದೆ.

ವಾಯಿದೆಜ್ವರದಲ್ಲಿ ರೋಗಿಗೆ ಪೂರ್ಣ ವಿಶ್ರಾಂತಿ ಇರಬೇಕು. ಮೈ ಅದರದ ಹಾಗೆ ಜಾಗ್ರತೆ ತೆಗೆದುಕೊಳ್ಳಬೇಕು. ಆಹಾರದ ನಿಯಮವೂ ಅಗತ್ಯ. ಸೌಮ್ಯ ಸ್ವಭಾವದ ಜ್ವರಗಳಲ್ಲಿ ಔಷಧಗಳ ಅಗತ್ಯವೇ ಇಲ್ಲ; ಕಠಿನ ಸ್ಥಿತಿಯಲ್ಲಿಯೂ ಜ್ವರವನ್ನು ಇಳಿಸುವ ಗುಣ ವುಳ್ಳ ಮಿಶ್ರಣ ಮುಂತಾದ ಔಷಧಗಳನ್ನು ಉಪಯೋಗಿಸಿದರಿಂದ ಜ್ವರವು, ತನ್ನ ಕಾಲದಲ್ಲಿ

ಯಲ್ಲದೆ, ಅದಕ್ಕೆ ಮುಂಚಿತವಾಗಿ ಬಿಡಲಾರದು. ಆದಾಗ್ಯೂ ರೋಗಿಗೆ ತಾತ್ಕಾಲಿಕ ಸುಖ ಉಂಟಾಗುವದೇ ಮೊದಲಾದ ಉದ್ದೇಶಗಳಿಂದ ಅವುಗಳನ್ನು ಪ್ರಯೋಗಿಸುವದು ಕೆಲವು ಸಾರಿ ಪ್ರಯೋಜನಕರವಾಗುತ್ತದೆ. ಅತ್ಯಂತ ನಿಶ್ಚೈತನ್ಯವಿರುವಲ್ಲಿಯೂ, ಹೃದಯದ ಕೆಲಸ ನಿಲ್ಲುವ ಭಯವಿದ್ದಲ್ಲಿಯೂ, ಅವುಗಳನ್ನು ಉಪಯೋಗಿಸಬಾರದು. ಪಥ್ಯದಲ್ಲಿ ಹಾಲು ಮುಖ್ಯ. ಮೃದುವಾದ ಗಟ್ಟಿ ಆಹಾರವನ್ನು ಅನೇಕ ಸಂದರ್ಭಗಳಲ್ಲಿ ಅಧಿಕವಾಗಿ ಕೊಡ ಬಹುದಾಗುತ್ತದೆ. ಆಹಾರವನ್ನು ಅಲ್ಪ ಪ್ರಮಾಣದಲ್ಲಿ ಪದೇ ಪದೇ ಕೊಡುತ್ತಿರಬೇಕು. ತಣ್ಣೀರಿನ ಅಥವಾ ನೀರ್ಗಲ್ಲಿನ ಒತ್ತಡ ಮುಂತಾದ ಕ್ರಮಗಳನ್ನು ಹಿಂದೆ (69ನೇ ಸಂಖ್ಯೆಯ ಅಡಿ) ವಿವರಿಸಿದಂತೆ ನಡಿಸಬೇಕು. ತಣ್ಣೀರಿನ ಸ್ನಾನ ಮಾಡಿಸುವದು ಮತ್ತಷ್ಟು ಒಳ್ಳೇ ದಾದರೂ, ಅಷ್ಟು ಸುಲಭವಲ್ಲ. ಅತಿಸಾರ, ಮಲಬದ್ಧತೆ, ಕೆಮ್ಮು, ಉಬ್ಬಸ ಮುಂತಾದ ಉಪದ್ರವಗಳಿಗೆ ತಕ್ಕ ಚಿಕಿತ್ಸೆಯನ್ನು ಮಾಡತಕ್ಕದ್ದು. ಒಂದು ದಿನದಲ್ಲಿ, ಅಂದರೆ ೨೪ ತಾಸು ಗಳ ಕಾಲದಲ್ಲಿ, ಮಲವಿಸರ್ಜನದ ಸರ್ತಿಗಳು ನಾಲ್ಕಕ್ಕೆ ಮೀರದಿದ್ದಲ್ಲ ಅತಿಸಾರಕ್ಕೆ ಚಿಕಿತ್ಸೆ ಅಗತ್ಯವಿಲ್ಲ. ಮಲಬದ್ಧತೆಯಲ್ಲಿ ಎರಡು-ಮೂರು ದಿನ ಮಲ ತೆಗೆಯುವದಕ್ಕೆ ಪ್ರಯತ್ನಿ ಸದೆ ಬಿಡುವದರಿಂದ ಬಾಧಕವಿಲ್ಲ. ಜ್ವರ ಬಿಟ್ಟ ಮೇಲೆ, ತ್ರಾಣ ಕೂಡುತ್ತಾ ಬರುವ ಕಾಲ ದಲ್ಲಿ ಅವನಿಗೆ ಭೇದಿ ಮಾಡಿಸುವ ಔಷಧವನ್ನು ಕೊಡಬಾರದು. ಜ್ವರಾರಂಭದಿನದಿಂದ ಮೂರು ತಿಂಗಳೊಳಗೆ ಅವನು ಕೆಲಸ ಮಾಡುವದಕ್ಕೆ ಯೋಗ್ಯನಾಗುವದು ಅಪರೂಪ ಜ್ವರ ಕಠಿನವಾದಲ್ಲಿ ಮತ್ತು ಮರುಕಳಿಸಿ ಬಂದಲ್ಲಿ, ಅವನ ನೈಜಿಕ ಶರೀರಬಲ ಮತ್ತು ಮನೋ ಬಲ ಪುನಃ ಕೂಡಿಬರುವದಕ್ಕೆ ಐದಾರು ತಿಂಗಳುಗಳ ಕಾಲ ಬೇಕಾಗಬಹುದು.

(ಮಲೇರಿಯಾ) ವಿಷಮಜ್ವರಗಳಲ್ಲಿಯೂ ಅವುಗಳಿಗೆ ಕಾರಣವಾದ ಅಣುಜೀವಿಗಳು ತ್ರಿವಿಧ ಎಂತ ಕಂಡುಹಿಡಿದಿದ್ದಾರೆ. ಈ ಅಣುಜೀವಿಗಳ ಪ್ರಥಮಾವಸ್ಥೆಯ ಬೆಳಿಕ ಒಂದು ಜಾತಿಯ ನುಸಿಗಳಲ್ಲಿ ಆಗುವದಾಗಿರುತ್ತದೆ. ಮನುಷ್ಯರ ಶರೀರದೊಳಗೆ ಅವುಗಳನ್ನು ತಂದೊಡ್ಡುವದು ಆ ನುಸಿಗಳೇ. ಅವುಗಳ ಪರಿಮುಖವಾಗಿಯೇ ಈ ಜ್ವರಗಳು ಒಬ್ಬ ರಿಂದೊಬ್ಬರಿಗೆ ಅಂಟುವದಾಗಿರುತ್ತದೆ. ಆ ಅಣುಜೀವಿಗಳು ಮನುಷ್ಯರ ರಕ್ತದಲ್ಲಿ ವಾಸ ಮಾಡಿಕೊಂಡು, ತಮ್ಮ ಸಂತಾನವನ್ನು ವೃದ್ಧಿಗೊಳಿಸಿ, ಜ್ವರವನ್ನುಂಟುಮಾಡುತ್ತವೆ. ವಾಯಿದೆ ಜ್ವರದ ಹಾಗಿನ ಲಕ್ಷಣಗಳಿಂದ ಕೂಡಿಕೊಳ್ಳುವ ವಿಷಮಜ್ವರ ಒಂದು ಉಂಟು. ಅದರಲ್ಲಿ ಬಹು ದಿನ ರೋಗಿಯ ಮೈಬಿಸಿ ಏರಿಕೊಂಡೇ ಇರುತ್ತದೆ, ತಗ್ಗುವದು ಬಹಳ ಸ್ವಲ್ಪ. ಆ ಜ್ವರದ ಸ್ವಭಾವವನ್ನು ಕಂಡುಹಿಡಿದು, ಕ್ವಿನೀನಿನಿಂದ ಸಾಕಷ್ಟು ಸಾಹಸೇನ ಚಿಕಿತ್ಸೆ ಮಾಡಿ ದರೆ, ಮೈಬಿಸಿಯು ಬೇಗನೆ ಇಳಿಯುತ್ತದೆ ಮತ್ತು ಇತರ ಲಕ್ಷಣಗಳು ಪರಿಹಾರವಾಗು ತ್ತವೆ. ಹಾಗೆ ಮಾಡದೆ ವಾಯಿದೆಜ್ವರ ಎಂತ ನೆನಸಿ ಚಿಕಿತ್ಸೆಮಾಡಿದರೆ, ಒಂದೆರಡು ಹಪ್ತೆ ವರೆಗೂ ಜ್ವರ ಇಳಿಯದೆ, ಎಚ್ಚರ ತಪ್ಪುವದು, ಪ್ರಲಾಪ ಮುಂತಾದ ದುರ್ಲಕ್ಷಣಗಳು ಉಂಟಾಗಿ, ಮರಣ ಸಂಭವಿಸಬಹುದು. ಇನ್ನೊಂದು ಜಾತಿ ವಿಷಮಜ್ವರದಲ್ಲಿ ಮೈಬಿಸಿ ಸ್ವಸ್ಥ ಸ್ಥಿತಿದಕ್ಕಿಂತಲೂ ಕೆಳಗೆ ಇಳಿದಿದ್ದು, ಮೈ ತಣ್ಣಗಾಗಿ ಬೆವರುತ್ತಾ, ರೋಗಿಯು ನಿಶ್ಚೇತನನಾಗಿ ಇರುತ್ತಾನೆ. ವಾಂತಿ ಮತ್ತು ಅತಿಸಾರ ಉಂಟಾಗಿ, ಒಮ್ಮೊಮ್ಮೆ ವಾಂತಿಯಲ್ಲಿ ಆಗಲಿ ಮಲದೊಂದಿಗೆ ಆಗಲಿ, ರಕ್ತ ಹೋಗುತ್ತದೆ. ಮೈ ಬಿಸಿ ೮೮ ಡಿಗ್ರಿಯಷ್ಟು ತಗ್ಗುವದುಂಟು. ಇಂಥಾ ರೋಗಿಯು ಕ್ವಿನೀನಿನ ಉಪಯೋಗದಿಂದಲೂ ಬದುಕುವದು ದುರ್ಲಭ. ಇನ್ನೊಂದು

ವಿಧದ ವಿಷಮಜ್ವರದ ಪರಿಣಾಮವಾಗಿ, ಸೌಖ್ಯದಲ್ಲಿರುವ ಮನುಷ್ಯನಲ್ಲಿ ಒಡನೆ ಕಠಿನವಾದ ತಲೆನೋವು, ತಲೆತಿರುಕು, ಮತ್ತು ನಿದ್ರೆಯ ಅಮಲು, ಉಂಟಾಗಿ ಬೇಗನೆ ಬೋಧ ತಪ್ಪುತ್ತದೆ, ಅಥವಾ ಅಪಸ್ಮಾರದ ಹಾಗಿನ ಚೇಷ್ಟಾವಿಕಾರಗಳು ಕಾಣುವವು, ಅಥವಾ ಪ್ರಲಾಪ ಮತ್ತು ಹುಚ್ಚು ಉಂಟಾಗುತ್ತವೆ; ಮೈ ಬಿಸಿ ಬಹಳ ಏರದಿರಬಹುದು, ಅಥವಾ ಗುದದ್ವಾರದಲ್ಲಿ ೧೧೦° ವರೆಗೆ ಏರಿರಬಹುದು. ಇವೆಲ್ಲ ವಿಷಮತ್ರ್ಯಾಹಿಕ ಜ್ವರದ ಭೇದಗಳೆಂತ ತಿಳಿದಿದ್ದಾರೆ.

ವಿಷಮಜ್ವರಗಳಲ್ಲಿ ಅತ್ಯಂತ ಸಫಲವಾದ ಔಷಧ ಕ್ವಿನೀನೇ ಅದನ್ನು ಸಾಧಾರಣವಾಗಿ ೧೦-೧೫ ಗ್ರೈನ್ ಪ್ರಕಾರ ದಿನಕ್ಕ ಮೂರು ಸರ್ತಿ ಕೊಡಬಹುದು.

ಪಾಶ್ಚಾತ್ಯ ವೈದ್ಯ ಪುಸ್ತಕಗಳಿಂದ ಸಂಗ್ರಹಿಸಲ್ಪಟ್ಟ ಈ ಮೇಲಣ ವಿವರಗಳನ್ನು ಆಯುರ್ವೇದೀಯ ಪಂಡಿತರು ತಿಳಿದಿರುವದು ಒಳ್ಳೇದು.

---

# ಅಧ್ಯಾಯ XVII.

## ಅತಿಸಾರ (Diarrhœa and Dysentery).

1. ಗುರ್ವತಿಸ್ನಿಗ್ಧರೂಕ್ಷೋಷ್ಣದ್ರವಸ್ಥೂಲಾತಿಶೀತಲೈಃ |

ಅತಿಸಾರಕ್ಕೆ ಹೇತು

ವಿರುದ್ಧಾಧ್ಯಶನಾಜೀರ್ಣೈರಸಾತ್ಮ್ಯೈಶ್ಚಾಪಿ ಭೋಜನೈಃ ||
ಸ್ನೇಹಾದ್ಯೈರತಿಯುಕ್ತೈಶ್ಚ ಮಿಥ್ಯಾಯುಕ್ತೈರ್ವಿಷಾದ್ಭಯಾತ್ |
ಶೋಕಾದ್ದುಷ್ಟಾಮ್ಬುಮದ್ಯಾತಿಪಾನಾತ್ಸಾತ್ಮ್ಯರ್ತುಪರ್ಯಯಾತ್ ||
ಜಲಾಭಿರಮಣೈರ್ವೇಗವಿಘಾತೈಃ ಕ್ರಿಮಿದೋಷತಃ |
ನೃಣಾಂ ಭವತ್ಯತೀಸಾರೋ ಲಕ್ಷಣಂ ತಸ್ಯ ವಕ್ಷ್ಯತೇ || (ಸು. 779)

ಗುರು-ಅತಿಸ್ನಿಗ್ಧ-ಅತಿರೂಕ್ಷ-ಅತ್ಯುಷ್ಣ-ಅತಿದ್ರವ-ಅತಿಸ್ಥೂಲ (ಮುದ್ದೆಯಾದ), ಅತಿಶೀತ, ಈ ಗುಣವುಳ್ಳ ಪದಾರ್ಥಗಳ ಸೇವನದಿಂದಲೂ, ವಿರುದ್ಧವಾದ, ಸಾತ್ಮ್ಯವಲ್ಲದ, ಅಜೀರ್ಣಕರವಾದ ಭೋಜನಗಳಿಂದಲೂ, ಮೊದಲಿನ ದಿನ ಉಂಡದ್ದು ಜೀರ್ಣವಾಗದಿದ್ದಾಗ ಉಣ್ಣುವದರಿಂದಲೂ, ಸ್ನೇಹಪಾನ ಮುಂತಾದವುಗಳನ್ನು (ಸ್ವೇದ-ವಮನ-ವಿರೇಚನ-ಅನುಪಾನ-ನಿರೂಹಗಳನ್ನು ಸಹ) ಅತಿಯಾಗಿ, ಅಥವಾ ಕ್ರಮತಪ್ಪಿ, ಉಪಯೋಗಿಸುವದರಿಂದಲೂ, ವಿಷದಿಂದಲೂ, ಭಯದಿಂದಲೂ, ದುಃಖದಿಂದಲೂ, ಕೆಟ್ಟ ನೀರನ್ನು ಕುಡಿಯುವದರಿಂದಲೂ, ಮದ್ಯವನ್ನು ಅತಿಯಾಗಿ ಕುಡಿಯುವದರಿಂದಲೂ, ತನ್ನ ಪ್ರಕೃತಿಗೂ ಋತುನಿಯಮಕ್ಕೂ ವ್ಯತಿಕ್ರಮವಾಗುವದರಿಂದಲೂ, ನೀರಿನಲ್ಲಿ ವಿನೋದಿಸುವದರಿಂದಲೂ, (ಮಲಮೂತ್ರಾದಿ) ವೇಗಗಳನ್ನು ತಡೆಯುವದರಿಂದಲೂ, ಕ್ರಿಮಿದೋಷದಿಂದಲೂ, ಜನರಿಗೆ ಅತಿಸಾರ ಉಂಟಾಗುತ್ತದೆ. ಅದರ ಲಕ್ಷಣಗಳು (ಮುಂದೆ) ಹೇಳಲ್ಪಡುತ್ತವೆ.

2. ಸಂಶಮ್ಯಾಪಾಂ ಧಾತುರನ್ತಃ ಕೃಶಾನುಂ ವರ್ಚೋಮಿಶ್ರೋ ಮಾರುತೇನ ಪ್ರಣುನ್ನಃ |

ಅತಿಸಾರದ ಸಂಪ್ರಾಪ್ತಿ.

ವೃದ್ಧೋಽತೀವಾಧಃ ಸರತ್ಯೇವ ಯಸ್ಮಾದ್ವ್ಯಾಧಿಂ ಘೋರಂ ತಂ ತ್ವತೀಸಾರಮಾಹುಃ || (ಸು 779)

ದೇಹದೊಳಗಿನ ಜಲಧಾತುವು ವಾಯುವಿನ ಪ್ರೇರಣೆಯಿಂದ ಅಗ್ನಿಯನ್ನು ಮಂದಮಾಡಿ, ವೃದ್ಧಿಗೊಂಡು, ಮಲದೊಂದಿಗೆ ಬೆರೆತುಕೊಂಡು, ಅತಿಯಾಗಿ ಕೆಳಗೆನೇ ಹೋಗುವದರಿಂದ, ಘೋರವಾದ ಆ ರೋಗಕ್ಕೆ 'ಅತಿಸಾರ' ಎನ್ನುತ್ತಾರೆ.

ವರಾ ವಾತಪ್ರಕೃತಿಯವನಿಗೆ ಗಾಳಿ, ಬಿಸಿಲು ಮತ್ತು ವ್ಯಾಯಾಮವನ್ನು ಅತಿಯಾಗಿ ಸೇವಿಸುವದರಿಂದಲೂ, ರೂಕ್ಷವಾದ ಮತ್ತು ಅಲ್ಪವಾದ ಆಹಾರವನ್ನು ತೆಗೆದುಕೊಳ್ಳುವದರಿಂದಲೂ, ನಿತ್ಯದಲ್ಲೂ ತೀಕ್ಷ್ಣವಾದ ಮದ್ಯವನ್ನೂ ಸ್ತ್ರೀಸಂಗವನ್ನೂ ಉಪಯೋಗಿಸುವದರಿಂದಲೂ, ಉದಾವರ್ತರೋಗದ ವೇಗದಿಂದಲೂ, ವಾಯುವು ಪ್ರಕೋಪಗೊಂಡು, ಪಚನಾಗ್ನಿಯನ್ನು ಕೆಡಿಸಿ, ಬೆವರನ್ನೂ ಮೂತ್ರವನ್ನೂ ಮಲಾಶಯಕ್ಕೆ ಒಯಿದು, ಅವುಗಳಿಂದ ಮಲವನ್ನು ತೆಳ್ಳಗೆ ಮಾಡಿ, ಅತಿಸಾರವನ್ನು ಉಂಟುಮಾಡುವದು ಇದು ವಾತಾತಿಸಾರ. ಪಿತ್ತಪ್ರಕೃತಿಯವನಿಗೆ ಹುಳಿ, ಉಪ್ಪು, ಖಾರ, ಕ್ಷಾರ, ಉಷ್ಣ, ಮತ್ತು ತೀಕ್ಷ್ಣ ಆದ ಪದಾರ್ಥಗಳನ್ನು ಅತಿಯಾಗಿ ಸೇವಿಸುವದರಿಂದಲೂ, ಹರಡಿದ ಬೆಂಕಿ, ಬಿಸಿಲಿನ ಅತಿಯಾದ ತಾಪ, ಬಿಸಿಗಾಳಿ, ಇವುಗಳು ಶರೀರಕ್ಕೆ ಹೊಡೆಯುವದರಿಂದಲೂ, ಬಹಳವಾದ ಸಿಟ್ಟು ಮತ್ತು ಹೊಟ್ಟೆಕಿಚ್ಚಿನಿಂದಲೂ, ಪಿತ್ತವು ಪ್ರಕೋಪಗೊಂಡು, ತನ್ನ ದ್ರವಗುಣದಿಂದ ಅಗ್ನಿಯನ್ನು ಕೆಡಿಸಿ, ಮಲಾಶಯದಲ್ಲಿರುವ ಮಲವನ್ನು

ತನ್ನ ಉಷ್ಣತ್ವದಿಂದಲೂ, ದ್ರವತ್ವದಿಂದಲೂ, ಸರತ್ವದಿಂದಲೂ ಒಡೆದು, ಅತಿಸಾರವನ್ನುಂಟುಮಾಡುವದು. ಇದು ಪಿತ್ತಾತಿಸಾರ ಕಫಪ್ರಕೃತಿಯವನಲ್ಲಿ ಗುರು, ಸಿಹಿ, ಶೀತ, ಸ್ನಿಗ್ಧವಾದ ಪದಾರ್ಥಗಳನ್ನು ಸೇವಿಸುತ್ತಾ, ಹೊಟ್ಟೆಯನ್ನು ಪೂರ್ಣವಾಗಿ ತುಂಬಿಸುತ್ತಾ, ಚಿಂತೆಯಿಲ್ಲದವನಾಗಿಯೂ, ಹಗಲುನಿದ್ರೆ ಮಾಡುವವನಾಗಿಯೂ, ಜಡನಾಗಿಯೂ ಇರುವದರಿಂದ, ಕಫವು ಕೋಪಗೊಂಡು, ಸ್ವಾಭಾವಿಕವಾಗಿ ಗುರು, ಮಧುರ, ಶೀತ, ಮತ್ತು ಸ್ನಿಗ್ಧವಾದ್ದರಿಂದ ಸಡಿಲಿ ಇಳಿದು, ಅಗ್ನಿಯನ್ನು ಕೆಡಿಸಿ, ಮಲಾಶಯಕ್ಕೆ ಬಂದು, ಅಲ್ಲಿರುವ ಮಲವನ್ನು ತನ್ನ ಆಪ್ಯ (ನೀರುಳ್ಳ) ಸ್ವಭಾವದಿಂದ ಕೆಡಿಸಿ, ನೀರುಮಾಡಿ, ಅತಿಸಾರವನ್ನುಂಟುಮಾಡುತ್ತದೆ ಇದು ಕಫಾತಿಸಾರ (ಚ 556, 557)

3. ಏಕೈಕಶಃ ಸರ್ವಶಶ್ಚಾಪಿ ದೋಷೈಃ ಶೋಕೇನಾನ್ಯಃ ಷಷ್ಠ ಆಮೇನ ಚೋಕ್ತಃ ।

ಅತಿಸಾರದ ವಿಧಗಳು

ಕೇಚಿತ್ಪ್ರಾಹುರ್ನೈಕರೂಪಪ್ರಕಾರಂ ನೈವೇತ್ಯೇವಂ ಕಾಶಿರಾಜಸ್ತ್ವವೋಚತ್ ॥

ದೋಷಾವಸ್ಥಾಸ್ತಸ್ಯ ನೈಕಪ್ರಕಾರಾಃ ಕಾಲೇ ಕಾಲೇ ವ್ಯಾಧಿತಸ್ಯೋದ್ಭವನ್ತಿ ॥ (ಸು. 779)

ವಾತಾದಿದೋಷಗಳಿಂದ ಪೃಥಕ್ ಮೂರು, ಒಟ್ಟಾಗಿ ಒಂದು, ಶೋಕದಿಂದ ಒಂದು, ಆಮದಿಂದ ಒಂದು, ಹೀಗೆ ಅತಿಸಾರವು ೬ ವಿಧ. ಅತಿಸಾರದ ರೂಪದ ಪ್ರಕಾರಗಳು ಬಹಳ ಇವೆ ಎಂತ ಕೆಲವರು ಹೇಳುತ್ತಾರೆ. ಆದರೆ ಅದು ಸರಿಯಲ್ಲ ಎಂತಲೂ, ದೋಷಗಳ ಅವಸ್ಥೆಗಳು ರೋಗಿಯಲ್ಲಿ ಒಂದೇ ಪ್ರಕಾರ ಇರದೆ, ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ಪ್ರಕಾರವಾಗಿ ಉದ್ಭವಿಸುವದರಿಂದ, ಲಕ್ಷಣಗಳು ಬಹು ರೂಪವಾಗಿ ಕಾಣುತ್ತವೆ ಎಂತಲೂ ಧನ್ವಂತರಿಯು ಹೇಳಿದ್ದಾನೆ.

ಷರಾ ಚರಕನ ವಿಭಾಗದಲ್ಲಿ ಆಮಜ ಪ್ರತ್ಯೇಕವಾಗಿ ಸೇರಿರುವದಿಲ್ಲ, ಅದರ ಬದಲಾಗಿ 'ಭಯ'ದಿಂದ ಉಂಟಾದ ಅತಿಸಾರವು ಕೂಡಿಸಲ್ಪಟ್ಟಿದೆ ಈ ಭಯದ ಅತಿಸಾರವು ಸುಶ್ರುತನ ವಾತಾತಿಸಾರದಲ್ಲಿ ಅಥವಾ ಶೋಕಾತಿಸಾರದಲ್ಲಿ ಅಡಗಿರುತ್ತದೆ ಜ್ವರದಲ್ಲಿದ್ದ ಹಾಗೆ ಎಲ್ಲಾ ಅತಿಸಾರಗಳಲ್ಲಿಯೂ ಆಮ-ನಿರಾಮ (ಅಥವಾ ಪಕ್ವ) ಎಂಬ ಭೇದ ನೋಡಿಕೊಂಡು ಚಿಕಿತ್ಸೆ ಮಾಡಬೇಕೆಂಬದು ಸರ್ವಸಮ್ಮತ, ಆದರೆ ಸುಶ್ರುತನ ಆಮಾತಿಸಾರ ಎಂಬ ವಿಭಾಗವು ಅದಲ್ಲ, ಉಂಡದ್ದು ಜೀರ್ಣವಾಗದದರಿಂದ ಉಂಟಾಗುವಂಥಾದ್ದು ಕೆಳಗೆ 12ನೇ ಸಂಖ್ಯೆ ನೋಡಿ ಹಾಗೆಯೇ 'ಪ್ರವಾಹಿಕಾ' ಎಂಬದು ಚರಕನ ಪ್ರಕಾರ ಕಫಾತಿಸಾರದಲ್ಲಿ ಅಡಗಿದ್ದು, ಸುಶ್ರುತನು ಅದನ್ನು ಒಂದು ಪ್ರತ್ಯೇಕ ವ್ಯಾಧಿಯಾಗಿ ವರ್ಣಿಸಿದ್ದಾನೆ ಹೇತುವಿಚಾರದಲ್ಲಿ ಚರಕನ ವಿಭಾಗವೇ ಯುಕ್ತವಾಗಿ ಕಂಡರೂ, ಚಿಕಿತ್ಸೆಗೆ ಸುಶ್ರುತನ ವಿಭಾಗವು ಪ್ರಯೋಜನಕರದ್ದಾದ್ದರಿಂದ, ಆ ಎಲ್ಲಾ ಭೇದಗಳನ್ನು ವಾಚಕರ ಗೋಚರಕ್ಕೆ ತರುವದು ಒಳ್ಳೆಯದೆಂತ ಆಲೋಚಿಸಿ, ಸುಶ್ರುತನ ಹೆಚ್ಚಿನ ವರ್ಣನೆಗಳನ್ನು ಸಹ ಇದರಲ್ಲಿ ಕಾಣಿಸುತ್ತದೆ ವಾಗ್ಭಟನು ಚರಕನ ಮತವನ್ನೇ ಅನುಸರಿಸಿದ್ದಾನೆ ಮಾಧವನಿದಾನ ಮುಂತಾದ ಅನೇಕ ಗ್ರಂಥಗಳು ಸುಶ್ರುತನನ್ನು ಆಧರಿಸಿವೆ

4. ಹೃನ್ನಾಭಿಪಾಯೂದರಕುಕ್ಷಿತೋದಗಾತ್ರಾವಸಾದಾನಿಲಸನ್ನಿರೋಧಾಃ ।

ವಿಟ್ಸಂಗ ಆಧ್ಮಾನಮಥಾವಿಪಾಕೋ ಭವಿಷ್ಯತಸ್ತಸ್ಯ ಪುರಃಸರಾಣಿ ॥

ಪೂರ್ವರೂಪ

(ಸು. 779, 780)

ಎದೆ, ಹೊಕ್ಕಳು, ಆಸನ, ಕೆಳಹೊಟ್ಟೆ, ಮೇಲಿನ ಹೊಟ್ಟೆ, ಇವುಗಳಲ್ಲಿ ನೋವು, ದೇಹದಲ್ಲಿ ಬಳಲಿಕೆ (ಸೇದುವಿಕೆ), ವಾಯು ಕಟ್ಟಿಕೊಳ್ಳುವದು, ಮಲಬದ್ಧತೆ, ಹೊಟ್ಟೆಯುಬ್ಬರ, ಅಜೀರ್ಣ, ಈ ಲಕ್ಷಣಗಳು ಬರಲಿಕ್ಕಿರುವ ಅತಿಸಾರದ ಪೂರ್ವರೂಪಗಳು.

5. ವಾತಾತ್ಪಕ್ವಂ ವಿಬದ್ಧಮಲ್ಪಾಲ್ಪಂ ಸಶಬ್ದಂ ಸಶೂಲಪಿಚ್ಛಾಪರಿಕರ್ತಿಕಂ ಹೃಷ್ಟರೋಮಾ ವಿನಿಶ್ವಸನ್ ಶುಷ್ಕಮುಖಃ ಕಟ್ಯೂರುತ್ರಿಕಜಾನುಪೃಷ್ಠ-ಪಾರ್ಶ್ವಶೂಲೀ ಭ್ರಷ್ಟಗುದೋ ಮುಹುರ್ಮುಹುರ್ವಿಗ್ರಥಿತಮುಪವೇಶ್ಯತೇ ಪುರೀಷಂ ವಾತಾತ್ತಮಾಹುಃ ಅನುಗ್ರಂಥಮಿತ್ಯೇಕೇ ವಾತಾನುಗ್ರನ್ಥಿತ-ವರ್ಚಸ್ತ್ವಾತ್ || (ಚ. 557)

ವಾತಾತಿಸಾರದ ಲಕ್ಷಣ.

ವಾತದಿಂದ ಪಕ್ವವಾದ ಮಲವು ಬದ್ಧವಾಗಿ (ತಡೆದು ತಡೆದು), ಅಲ್ಪಾಲ್ಪವಾಗಿ, ಶಬ್ದ ಕೂಡಿಕೊಂಡು, ಹೊಟ್ಟೆಶೂಲೆಯೊಡನೆ, ಗಂಟುಗಂಟಾಗಿ, ಗಂಜಿನೀರಿನ ಹಾಗಿನ ದ್ರವದಿಂದ ಕೂಡಿಕೊಂಡು, ಪದೇಪದೇ ಹೋಗುವದು, ಆಸನದಲ್ಲಿ ಕತ್ತರಿಸಿದ ಹಾಗಿನ ನೋವು ಕಾಣು ವದು; ಸೊಂಟ, ತೊಡೆ, ಕೂಟು, ಕಾಲಿನ ಮೊಣಗಂಟು, ಬೆನ್ನು, ಮತ್ತು ಪಾರ್ಶ್ವಗಳು, ಈ ಸ್ಥಾನಗಳಲ್ಲಿ ಶೂಲೆ ಉಂಟಾಗುವದು; ರೋಗಿಯು ಮಲಪ್ರವೃತ್ತಿಕಾಲದಲ್ಲಿ ರೋಮಾಂಚವುಳ್ಳ ವನಾಗಿಯೂ, ಬಾಡಿದ ಮುಖವುಳ್ಳವನಾಗಿಯೂ, ಉಬ್ಬಸ ಬಿಡುತ್ತಿರುವದು; ಮತ್ತು ಆಸ ನವು ಹೊರಗೆ ಬರುವದು, ಇವು ವಾತಜ ಪಕ್ವಾತಿಸಾರದ ಲಕ್ಷಣಗಳು. ವಾಯುವಿನ ಬಲದಿಂದ ಮಲವು ಗಂಟುಕಟ್ಟಿಕೊಳ್ಳುತ್ತದೆಂಬದರಿಂದ ಇದಕ್ಕೆ ಕೆಲವರು 'ಅನುಗ್ರಂಥ' ಎನ್ನುವರು.

6. ತಸ್ಯ ರೂಪಾಣಿ ಹರಿದ್ರಹರಿತನೀಲಕೃಷ್ಣಪಿತ್ತೋಪಹಿತಮತಿದುರ್ಗನ್ಧಮತಿ-ಸಾರ್ಯತೇ ಪುರೀಷಂ ತೃಷ್ಣಾದಾಹಸ್ವೇದಮೂರ್ಚ್ಛಾಶೂಲವ್ರಧ್ನಸನ್ತಾಪ-ಪಾಕಪರೀತ ಇತಿ ಪಿತ್ತಾತಿಸಾರಃ || (ಚ. 557)

ಪಿತ್ತಾತಿಸಾರದ ಲಕ್ಷಣ.

ಅರಸಿನ, ಹಸುರು, ನೀಲ, (ಅಥವಾ) ಕಪ್ಪು ವರ್ಣದ, ಪಿತ್ತದಿಂದ ಕೂಡಿಕೊಂಡ, ಅತಿ ದುರ್ವಾಸನೆಯುಳ್ಳ, ಮಲ ಅತಿಯಾಗಿ ಹೋಗುವದು, ಬಾಯಾರಿಕೆ, ಉರಿ, ಬೆವರು, ಮೂರ್ಛೆ, ಶೂಲೆ, ತೊಡೆಸಂಧಿಯಲ್ಲಿ ಗೆಳಲೆ, (ಆಸನವು) ಬೆಂದುಕೊಂಡಿರು ವದು ಮತ್ತು ಜ್ವಾಲೆ, ಈ ಲಕ್ಷಣಗಳಿಂದ ಪಿತ್ತಾತಿಸಾರವು ಕೂಡಿಕೊಂಡಿರುವದು.

7. ತಸ್ಯ ರೂಪಾಣಿ ಸ್ನಿಗ್ಧಂ ಶ್ವೇತಂ ಪಿಚ್ಛಿಲಂ ತನ್ತುಮದಾಮಂ ಗುರು ದುರ್ಗನ್ಧಶ್ಲೇಷ್ಮೋಪಹಿತಮನುಬನ್ಧಶೂಲಮಲ್ಪಾಲ್ಪಮಭೀಕ್ಷ್ಣಮತಿಸಾ-ರ್ಯತೇ ಸಪ್ರವಾಹಿಕಂ ಗುರೂದರಗುದವಸ್ತಿವಂಕ್ಷಣೋದ್ದೇಶಃ ಕೃತಾ-ಪಕೃತಸಂಗೋ ಭವತಿ ಸಲೋಮಹರ್ಷಃ ಸೋತ್ಕ್ಲೇಶಃ ನಿದ್ರಾಲಸ್ಯ-ಪರೀತಃ ಸಾದಸೋಽನ್ನದ್ವೇಷೀ ಚೇತಿ ಶ್ಲೇಷ್ಮಾತಿಸಾರಃ || (ಚ 557)

ಕಫಾತಿಸಾರದ ಲಕ್ಷಣ

ಜಿಡ್ಡುಳ್ಳ, ಬೆಳ್ಳಗಾದ, ಪಿಚ್ಛಿಲವಾದ (ಗಂಜಿನೀರಿನ ಹಾಗೆ ದಪ್ಪದ ದ್ರವವಾದ), ಎಳೆ ಯುಳ್ಳ, ಆಮವಾದ, ಭಾರವುಳ್ಳ, ದುರ್ವಾಸನೆಯುಳ್ಳ, ಕಫಕೂಡಿದ, ಮಲವು ಶೂಲೆಯ ಅನು ಬಂಧವುಳ್ಳದ್ದಾಗಿ, ಅಲ್ಪಾಲ್ಪವಾಗಿ, ಪದೇ ಪದೇ, ಪ್ರವಾಹಿಕೆ (ಬಿಕ್ಕುವಿಕೆ) ಯುಕ್ತವಾಗಿ, ಪ್ರವಿಸುವದು; ಹೊಟ್ಟೆ, ಆಸನ, ಮೂತ್ರಾಶಯ, ತೊಡೆಸಂದುಗಳ ಮೇಲಿನ ಭಾಗ, ಈ ಸ್ಥಾನ ಗಳಲ್ಲಿ ಭಾರ ಕಾಣುವದು; ಮಲವು ಒಮ್ಮೆ ಬದ್ಧ ಮತ್ತೊಮ್ಮೆ ಸಡಿಲು ಆಗಿರುವದು;

ರೋಮಾಂಚ, ವಾಕರಿಕೆ, ನಿದ್ರೆ, ಆಲಸ್ಯ, ಬಳಲಿಕೆ ಮತ್ತು ಅನ್ನದ್ವೇಷ; ಈ ಲಕ್ಷಣಗಳುಳ್ಳದ್ದು ಕಫಾತಿಸಾರ.

ಷರಾ ವಾ ನು 'ಕೃತೇಪ್ಯಕೃತಸಂಜ್ಞಃ' ಎಂಬ ಒಂದು ಲಕ್ಷಣವನ್ನು ಹೇಳಿದ್ದಾನೆ ಅದು 'ಕೃತಾಪಕೃತಸಂಗ', ಎಂಬದಕ್ಕೆ ಪಾಠಾಂತರವೆಂತ ಕಾಣುತ್ತದೆ ಅದಕ್ಕೆ 'ಮಲ ಹೋದ್ದು ಗೊತ್ತಾಗದಿರುವದು' ಎಂತ ಅರ್ಥ. (ಅ. ದೀ) ಪ್ರವಾಹಿಕೆಯ ವರ್ಣನಕ್ಕೆ ಕೆಳಗಿನ 14ನೇ ಸಂಖ್ಯೆ ನೋಡಿ ಅಲ್ಪಾಲ್ಪವಾಗಿ ಪದೇ ಪದೇ ಮಲ ಹೋಗುವ ಲಕ್ಷಣ ವಾತಾತಿಸಾರಕ್ಕೂ ಹೇಳಲ್ಪಟ್ಟದೆ ಅಲ್ಲಿ ಅದಕ್ಕೆ ಹೇತು ವಾತದ ತಡೆ, ಇಲ್ಲಿ ಅದಕ್ಕೆ ಮುಖ್ಯ ಕಾರಣ ಮಲದ ಗುರುತ್ವ ಎಂತ ತಿಳಿಯಬಹುದು ಆದರೆ ಪ್ರವಾಹಿಕೆಯ ಸಂಪ್ರಾಪ್ತಿಗೆ ಕಫವಾತವೇ ಪ್ರಧಾನ ಹೇತು ಎಂತ ಸು , ಅಂಥಾ ಪ್ರವಾಹಿಕೆಯು ಇದರಲ್ಲಿಯೇ ಅಡಗುವ ಹಾಗೆ ಲಕ್ಷಣ ನಿರ್ದಿಷ್ಟವಾಗಿದೆ. ಸು ನು ಈ ಲಕ್ಷಣಗಳನ್ನು ಕಫಾತಿಸಾರಕ್ಕೆ ಹೇಳದೆ, ಪ್ರವಾಹಿಕೆಯನ್ನು ಪ್ರತ್ಯೇಕವಾಗಿ ವರ್ಣಿಸಿದ್ದಾನೆ, ಆದಾಗ್ಯೂ "ವೇಗಾಶಂಕೀ ಸೃಷ್ಟವಿಟ್ಕೋಽಪಿ ಭೂಯಃ" ಅಂದರೆ "ಮಲವಿಸರ್ಜನ ಮಾಡಿದ ಮೇಲೆಯೂ ಪುನಃ ಮಲದ ವೇಗ ಉಂಟಾಗುವ ಸಂಶಯ" ಎಂಬ ಲಕ್ಷಣವನ್ನು ಆತನು ಕಫಾತಿಸಾರದ ಲಕ್ಷಣಗಳೊಳಗೆ ಹೆಚ್ಚಾಗಿ ಸೇರಿಸಿರುತ್ತಾನೆ

ತ್ರಿದೋಷಾತಿಸಾರದ ನಿದಾನ ಮತ್ತು ಲಕ್ಷಣ

8. ಅತಿಶೀತಸ್ನಿಗ್ಧರೂಕ್ಷೋಷ್ಣಗುರುಖರಕಠಿನವಿಷಮವಿರುದ್ಧಾಸಾತ್ಮ್ಯಭೋಜನಾತ್ ಅಭೋಜನಾತ್ ಕಾಲಾತೀತಭೋಜನಾದ್ ಯತ್ಕಿಂಚಿದಭ್ಯವಹರಣಾದ್ ದುಷ್ಟಮದ್ಯಪಾನೀಯಪಾನಾತ್ ಅತಿಮದ್ಯಪಾನಾತ್ ಅಸಂಶೋಧನಾತ್ ಪ್ರತಿಕರ್ಮಣಾಂ ವಿಷಮಗಮನಾತ್ ಅನುಪಚಾರಾಜ್ಜ್ವಲನಾದಿತ್ಯಪವನಸಲಿಲಾತಿಸೇವನಾತ್ ಅಸ್ವಪ್ನಾತ್ ಅತಿಸ್ವಪ್ನಾದ್ವೇಗವಿಧಾರಣಾದೃತುವಿಪರ್ಯಯಾತ್ ಅಯಥಾಬಲಮಾರಮ್ಭಾದ್ಭಯಶೋಕಚಿತ್ತೋದ್ವೇಗಾತಿಯೋಗಾತ್ ಕ್ರಿಮಿಶೋಷಜ್ವರಾರ್ಶೋವಿಕಾರಾತಿಕರ್ಶನಾದ್ವಾ ವಿಪನ್ನಾಗ್ನೇಸ್ತ್ರಯೋ ದೋಷಾಃ ಪ್ರಕುಪಿತಾ ಭೂಯ ಏವಾಗ್ನಿಮುಪಹತ್ಯ ಪಕ್ವಾಶಯಮನುಪ್ರವಿಶ್ಯ ಅತೀಸಾರಂ ಸರ್ವದೋಷಲಿಂಗಂ ಜನಯನ್ತಿ ||

ಅಪಿ ಚ ಶೋಣಿತಾದೀನ್ ಧಾತೂನತಿಪ್ರದುಷ್ಟಾನ್ ದೂಷಯನ್ತೋ ಧಾತುದೋಷಸ್ವಭಾವಕೃತಾನತೀಸಾರವರ್ಣಾನುಪದರ್ಶಯನ್ತಿ | ತತ್ರ ಶೋಣಿತಾದಿಷು ಧಾತುಷು ಅತಿಪ್ರದುಷ್ಟೇಷು ಹಾರಿದ್ರಹರಿತನೀಲಮಾಂಜಿಷ್ಠಮಾಂಸಧಾವನಸನ್ನಿಕಾಶಂ ರಕ್ತಂ ಕೃಷ್ಣಂ ಶ್ವೇತಂ ವರಾಹಮೇದಃಸದೃಶಮನುಬದ್ಧವೇದನಮವೇದನಂ ವಾ ಸಮಾಸವ್ಯತ್ಯಾಸಾದುಪವೇಶ್ಯತೇ ಶಕೃದ್ ಗ್ರಥಿತಮಾಮಂ ಸಕೃತ್ ಸಕೃದಪಿ ಪಕ್ವಮನತಿಕ್ಷೀಣಮಾಂಸಶೋಣಿತಬಲೋ ಮನ್ದಾಗ್ನಿರ್ವಿಹತಮುಖರಸಸ್ತಾದೃಶಮಾತುರಂ ಕೃಚ್ಛ್ರಸಾಧ್ಯಂ ವಿದ್ಯಾತ್ ||

(ಚ. 558)

ಶೀತ-ಸ್ನಿಗ್ಧ-ರೂಕ್ಷ-ಉಷ್ಣ-ಗುರು-ಖರ-ಕಠಿನ, ಈ ಗುಣಗಳು ಅತಿಯಾಗಿರುವ, ವಿಷಮವಾದ, (ಸಂಯೋಗ) ವಿರುದ್ಧವಾದ, (ಅಥವಾ) ಸಾತ್ಮ್ಯವಲ್ಲದ ಭೋಜನದಿಂದ, ಉಪವಾಸದಿಂದ, ಕಾಲದಾಟಿ ಊಟಮಾಡುವದರಿಂದ, (ವಿಚಾರವಿಲ್ಲದೆ ಸಿಕ್ಕಿದ) ಯಾವದನ್ನಾದರೂ ತಿನ್ನುವದರಿಂದ, ಕೆಟ್ಟ ಮದ್ಯವನ್ನು ಅಥವಾ ಪಾನೀಯವನ್ನು ಕುಡಿಯುವದರಿಂದ, ಮದ್ಯವನ್ನು ಅತಿಯಾಗಿ ಕುಡಿಯುವದರಿಂದ, ಶೋಧನಮಾಡಿಸಿಕೊಳ್ಳದರಿಂದ, ಮಾಡಿಸಿಕೊಂಡ ಪ್ರತಿಕ್ರಿಯೆಗಳು ವಿಷಮವಾಗುವದರಿಂದ, (ಅವುಗಳಲ್ಲಿ) ತಕ್ಕ ಉಪಚಾರವಿಲ್ಲದಿರುವದರಿಂದ, ಬೆಂಕಿ-ಸೂರ್ಯ-ಗಾಳಿ-ನೀರುಗಳನ್ನು ಅತಿಯಾಗಿ ಉಪಯೋಗಿಸುವದರಿಂದ, ಜಾಗರಣದಿಂದ, ಅತಿನಿದ್ರೆಯಿಂದ, (ಮಲಮೂತ್ರಾದಿಗಳ) ವೇಗಗಳನ್ನು ತಡೆಯುವದರಿಂದ, ಋತುಗಳ ಕೆಡಕಿನಿಂದ, ಬಲಕ್ಕೆ ಮೀರಿ ಸಾಹಸ ಮಾಡುವದರಿಂದ, ಅತಿಯಾದ ಭಯ, ದುಃಖ, ಅಥವಾ ಮನಸ್ಸಿನ ಕಳವಳ ಉಂಟಾಗುವದರಿಂದ, ಕ್ರಿಮಿ-ಕ್ಷಯ-ಜ್ವರ-ಮೂಲವ್ಯಾಧಿಗಳ

ದೆಸೆಯಿಂದ ಅಥವಾ ಅತಿಕ್ಷೀಣತೆಯಿಂದ, ಕೆಟ್ಟಂಥ ಅಗ್ನಿಬಲವುಳ್ಳವನಲ್ಲಿ ಮೂರು ದೋಷಗಳೂ ಕೋಪಗೊಂಡು, ಅಗ್ನಿಯನ್ನು ಮತ್ತಷ್ಟು ಕೆಡಿಸಿ, ಪಕ್ವಾಶಯವನ್ನು ಹೊಕ್ಕು, ಸರ್ವ (ತ್ರಿ)ದೋಷಗಳ ಲಕ್ಷಣಗಳುಳ್ಳಂಥಾ ಅತಿಸಾರವನ್ನುಂಟುಮಾಡುತ್ತವೆ.

ಮತ್ತು ಅತಿಯಾಗಿ ದೋಷಹೊಂದಿದ ರಕ್ತ ಮೊದಲಾದ ಧಾತುಗಳನ್ನು ಇನ್ನಷ್ಟು ಕೆಡಿಸುತ್ತಾ, ಅಂಥಾ ಧಾತುಗಳ ಮತ್ತು ದೋಷಗಳ ಸ್ವಭಾವಗುಣದಿಂದ ಹುಟ್ಟುವ ವರ್ಣಗಳನ್ನು ಅತಿಸಾರದಲ್ಲಿ ಕಾಣಿಸುತ್ತವೆ. ಆಗ್ಗೆ, ರಕ್ತಾದಿ ಧಾತುಗಳು ಅತಿಯಾಗಿ ಕೆಟ್ಟಲ್ಲಿ, ಅರಸಿನ, ಹಸುರು, ನೀಲ, ಮಂಜಿಷ್ಠದ ಹಾಗಿನ ಕೆಂಪು, ಮಾಂಸ ತೊಳದ ನೀರಿನ ವರ್ಣದ ಹಾಗಿನ, ರಕ್ತಕೆಂಪು, ಕಪ್ಪು, ಬಿಳೇ, ವರ್ಣದ್ದಾಗಿ, ಹಂದಿಯ ಮೇದಸ್ಸಿಗೆ ಸದೃಶವಾಗಿ, ವೇದನೆಯುಕ್ತವಾಗಿ ಅಥವಾ ವೇದನೆ ಇಲ್ಲದ, ಈ ಲಕ್ಷಣಗಳು ಬೇರೆಯಾಗಿ ಅಥವಾ ಒಟ್ಟಾಗಿ ಇರುವ ಮಲವು ಒಮ್ಮೆ ಕೂಡಿಕೊಂಡು, ಒಮ್ಮೆ ಆಮವಾಗಿ, ಒಮ್ಮೆ ಪಕ್ವವಾಗಿ ಹೋಗುತ್ತದೆ; ರೋಗಿಯು ಮಾಂಸದಲ್ಲಿಯೂ, ರಕ್ತದಲ್ಲಿಯೂ, ಬಲದಲ್ಲಿಯೂ, ಅತಿಯಲ್ಲದಷ್ಟು ಕ್ಷೀಣವಾಗಿರುತ್ತಾನೆ; ಅಗ್ನಿಯು ಮಂದವಾಗಿರುತ್ತದೆ; ಮತ್ತು ಮುಖದ ರಸ (ಕಲೆ) ಕೆಟ್ಟು ಇರುತ್ತದೆ. ಅಂಥಾ ರೋಗಿಯನ್ನು (ಮುಂದೆ ಹೇಳುವ ಅಸಾಧ್ಯ ಲಕ್ಷಣಗಳಿಲ್ಲವಾದರೆ) ಸುಖಪಡಿಸುವದು ಕಷ್ಟಸಾಧ್ಯವೆಂತ ತಿಳಿಯತಕ್ಕದ್ದು.

ಷರಾ: ತ್ರಿದೋಷಜದಲ್ಲಿ ಮೂರು ದೋಷಗಳ ಲಕ್ಷಣಗಳೂ ಸೇರಿರುತ್ತವೆ ಎಂತ ವಾ, ಬಾಲಕರಲ್ಲಿಯೂ ವೃದ್ಧರಲ್ಲಿಯೂ ಇದು ಅಸಾಧ್ಯ ಎಂತ ಸು. (ಪು 780)

9. ಏಭಿರ್ವರ್ಣೈರತಿಸಾರ್ಯಮಾಣಂ ಸೋಪದ್ರವಮಾತುರಮಸಾಧ್ಯೋಽಯಮಿತಿ ಪ್ರತ್ಯಾಚಕ್ಷೀತ| ತದ್ಯಥಾ: -ಕ್ವಾಥಶೋಣಿತಾಭಂ ಯಕೃತ್ಪಿಂಡೋಪಮಂ ಮಾಂಸೋದಕಸನ್ನಿಕಾಶಂ ದಧಿಘೃತಮಜ್ಜತೈಲವಸಾಕ್ಷೀರವೇಶವಾರಾಭಮತಿನೀಲಮತಿರಕ್ತಮತಿಕೃಷ್ಣಮುದಕಮಿವಾಚ್ಛಂ ಪುನರ್ಮೇಚಕಾಭಮತಿಸ್ನಿಗ್ಧಂ ಹರಿತನೀಲಕಷಾಯವರ್ಣಂ ಕರ್ಬುರಮಾವಿಲಂ ತನ್ತುಮದಾಮಂ ಚಂದ್ರಕೋಪಗತಮತಿಕುಣಪಪೂತಿಪೂಯಗಂಧಮಾಮಮತ್ಸ್ಯಗಂಧಿಮಕ್ಷಿಕಾಕ್ರಾನ್ತಂ ಕ್ವಥಿತಬಹುಧಾತುದ್ರವಮಲ್ಪಪುರೀಷಮಪುರೀಷಂ ವಾತಿಸಾರ್ಯಮಾಣಂ ತೃಷ್ಣಾದಾಹಜ್ವರಭ್ರಮತಮಕಹಿಕ್ಕಾಶ್ವಾಸಾನುಬಂಧಮತಿವೇದನಮವೇದನಂ ವಾ ಸ್ರಸ್ತಪಕ್ವಗುದಂ ಪತಿತಗುದಬಲಿಂ ಮುಕ್ತನಾಲಮತಿಕ್ಷೀಣಬಲಮಾಂಸಶೋಣಿತಂ ಸರ್ವಪಾರ್ಶ್ವಾಸ್ಥಿಶೂಲಿನಮರೋಚಕಾತಿಪ್ರಲಾಪಸಮ್ಮೋಹಪರೀತಂ ಸಹಸೋಪರತವಿಕಾರಮತಿಸಾರಿಣಮಚಿಕಿತ್ಸ್ಯಂ ವಿದ್ಯಾದಿತಿ || (ಚ. 558)

ಅಸಾಧ್ಯ ಲಕ್ಷಣ

ಮುಂದೆ ಹೇಳುವ ವರ್ಣಗಳುಳ್ಳ ಮಲಪ್ರವೃತ್ತಿಯನ್ನು ಮಾಡುವ ಮತ್ತು ಉಪದ್ರವಯುಕ್ತನಾದ ಅತಿಸಾರರೋಗಿಯನ್ನು ವಾಸಿಮಾಡುವದು ಅಸಾಧ್ಯವೆಂತ ಹೇಳತಕ್ಕದ್ದು. ಅದು ಹೇಗೆಂದರೆ:—

ಕಷಾಯದ ಅಥವಾ ರಕ್ತದ ಹಾಗಿನ, ಯಕೃತ್ಪಿಂಡಕ್ಕೆ ಸದೃಶವಾದ (ಕಪ್ಪೊತ್ತಿದ ಕೆಂಪು ವರ್ಣದ), ಮಾಂಸ ತೊಳೆದ ನೀರಿನ ಹಾಗಿನ, ಮೊಸರು-ತುಪ್ಪ-ಮಜ್ಜೆ-ತೈಲ-ವಸೆ-ಹಾಲು-ವೇಶವಾರಗಳ ಹಾಗೆ ಕಾಣುವ, ಅತಿನೀಲ, ಅತಿಕೆಂಪು, ಅಥವಾ ಅತಿ ಕಪ್ಪು ವರ್ಣದ, ನೀರಿನಂತೆ ಸ್ವಚ್ಛವಾದ, ಪುನಃ ಮೇಚಕದ ಹಾಗಿನ (ನವಿಲಿನ ಬಾಲದ

ಕಣ್ಣುಗಳ ಹಾಗೆ ಕಪ್ಪೊತ್ತಿದ ನೀಲವರ್ಣದ), ಅತಿಸ್ನಿಗ್ಧವಾದ, ಹಸುರು, ನೀಲ, (ಅಥವಾ) ಕಷಾಯ ವರ್ಣದ, ನಾನಾ ವರ್ಣದ, ದುರ್ಗಂಧವುಳ್ಳ, ಎಳೆಯಿರುವ, ಆಮವಾದ, ನವಿಲಿನ ಬಾಲದಲ್ಲಿರುವಂತೆ ಉಂಗುರಗಳುಳ್ಳ, ಅತಿಯಾದ ಹೆಣದ ದುರ್ವಾಸನೆ ಅಥವಾ ಕೀವಿನ ವಾಸನೆ ಇರುವ, ಹಸೀ ಮೀನಿನ ವಾಸನೆಯುಳ್ಳ, ನೊಣಗಳಿಂದ ತುಂಬಿದ, ಕುದಿಸಲ್ಪಟ್ಟ ಬಹು ಧಾತುಗಳ ದ್ರವಯುಕ್ತವಾದ, ಅಲ್ಪವಾಗಿ ಮಲವುಳ್ಳ, ಅಥವಾ ಮಲವಿಲ್ಲದಿರುವ, ಅತಿಸಾರಮಾಡುತ್ತಿರುವಂಥಾ, ಬಾಯಾರಿಕೆ, ಉರಿ, ಜ್ವರ, ಭ್ರಮೆ, ತಮಕಶ್ವಾಸ, ಬಿಕ್ಕಟ್ಟು, ಉಬ್ಬಸ, ಈ ಉಪದ್ರವಗಳು ಸೇರಿಕೊಂಡಿರುವಂಥ, ಅತಿಯಾದ ವೇದನೆಯುಳ್ಳ, ಅಥವಾ ವೇದನೆ ಇಲ್ಲದಿರುವ, ಗುದವು ಬೆಂದು ಕೆಳಗೆ ಜಾರಿದ, ಗುದದ ಸುಳಿ ಕೆಳಗೆ ಬಿದ್ದಂಥಾ, (ಗುದದ) ನಾಲ ಸಡಿಲಾದ, ಬಲದಲ್ಲಿಯೂ, ಮಾಂಸದಲ್ಲಿಯೂ, ರಕ್ತದಲ್ಲಿಯೂ ಅತಿ ಕ್ಷೀಣನಾದ, ಸರ್ವ ಪಕ್ಕಗಳ ಎಲುಬುಗಳಲ್ಲಿಯೂ ಶೂಲೆ ಇರುವ, ಅರುಚಿ-ಅತಿಹರಟು ವಿಕೆ-ಮೂರ್ಛೆಗಳ ಬಾಧೆಯುಳ್ಳ, ಮತ್ತು ಒಂದೇ ಸರ್ತಿ (ಫಕ್ಕನೆ) ವಿಕಾರಗಳಿಂದ ಬಿಡುಗಡೆ ಹೊಂದಿದ, ಅತಿಸಾರರೋಗಿಯು ಚಿಕಿತ್ಸೆಗೆ ಅಯೋಗ್ಯನೆಂತ ತಿಳಿಯಬೇಕು.

ಸಂ॥ ಸುಶ್ರುತನ ವಿವರಣವು ಸಂಕ್ಷೇಪವಾಗಿ ಉಂಟು. ಉಪಮೆಗಳಲ್ಲಿ ಜೇನು, ಮಸ್ತಕದ ಮಜ್ಜೆ, ಸೌವೀರಾಂಜನ, ಕೆಸರು ಸಹ ಹೇಳಲ್ಪಟ್ಟಿವೆ. ಶೀತವಾದ ಅಥವಾ ಉಷ್ಣವಾದ ಮಲ, ಮತ್ತು ಉಪದ್ರವಗಳು ಬಹಳವಾಗಿರುವದು, ಸಹ ದುರ್ಲಕ್ಷಣಗಳೊಳಗೆ ಉಕ್ತವಾಗಿವೆ. ಗುದವು ಮುಚ್ಚಿಕೊಳ್ಳದಿರುವದು, ಅಥವಾ ಬೆಂದು ಅದರ (ಉಷ್ಮಾ) ಬಿಸಿ ಹೊರಗೆ ಹೋಗಿರುವದು, ಯಾವಾಗಲೂ ಹೊಟ್ಟೆ ಉಬ್ಬಿಸಿಕೊಂಡಿರುವದು, ರೋಗಿಯು ಕ್ಷೀಣನಾಗಿರುವದು ಮತ್ತು ಉಪದ್ರವ ಯುಕ್ತನಾಗಿರುವದು ಈ ಲಕ್ಷಣಗಳುಳ್ಳ ಅತಿಸಾರರೋಗಿಯನ್ನು ಚಿಕಿತ್ಸೆಮಾಡದೆ ಬಿಟ್ಟುಬಿಡಬೇಕು ಎಂತ ಸಹ ಸು (ಪ 781)

10. ತೈಸ್ತೈರ್ಭಾವೈಃ ಶೋಚತೋಽಲ್ಪಾಶನಸ್ಯ ।
ಬಾಷ್ಪೋ(?ಷ್ಮಾ)ವೇಗಃ ಪಕ್ತಿಮಾವಿಧ್ಯ ಜನ್ತೋಃ ॥
ಕೋಷ್ಠಂ ಗತ್ವಾ ಕ್ಷೋಭಯನ್ ಯಸ್ಯ* ರಕ್ತಂ ।
ತಚ್ಚಾಧಸ್ತಾತ್ ಕಾಕನನ್ತೀಪ್ರಕಾಶಮ್ ॥
ವರ್ಚೋಮಿಶ್ರಂ ನಿಃಪುರೀಷಂ ಸಗನ್ಧಂ ।
ನಿರ್ಗನ್ಧಂ ವಾ ಸಾರ್ಯ್ಯತೇ ತೇನ ಕೋಷ್ಠಾತ್ ॥
ಶೋಕೋತ್ಪನ್ನೋ ದುಶ್ಚಿಕಿತ್ಸ್ಯೋಽತಿಮಾತ್ರಮ್ ।
ರೋಗೋ ವೈದ್ಯೈಃ ಕಷ್ಟ ಏಷ ಪ್ರದಿಷ್ಟಃ ॥ (ಸು. 780-81)

ಶೋಕಜ ಅತಿಸಾರದ ಸಂಪ್ರಾಪ್ತಿ ಮತ್ತು ಲಕ್ಷಣ

* 'ಕ್ಷೋಭಯತ್ಯಸ್ಯ' ಎಂತ ಇರಬೇಕಾದ್ದು

ಆಯಾ ಭಾವಗಳಿಂದ ಶೋಚಿಸುತ್ತಾ ಸಾಕಷ್ಟು ಉಣ್ಣದವನಲ್ಲಿ ಆವಿಯ (ಆವಿರೂಪವಾದ ಪಿತ್ತದ) ವೇಗವು ಅವನ ಪಚನಾಗ್ನಿಯನ್ನು ಕೆಡಿಸಿ, ಕೋಷ್ಠವನ್ನು (ಹೊಟ್ಟೆಯನ್ನು) ಹೊಕ್ಕು, ಅಲ್ಲಿಯ ರಕ್ತವನ್ನು ಕೆದರಿಸುವದರಿಂದ, ಆ ರಕ್ತವು ಗುಲುಗುಂಜೀವರ್ಣವಾಗಿ ಕೆಳಗೆ ಮಲಮಿಶ್ರವಾಗಿಯೋ, ಮಲವಿಲ್ಲದೆಯೋ, ವಾಸನೆಯುಕ್ತವಾಗಿಯೋ, ವಾಸನೆಯಿಲ್ಲದೆಯೋ, ಹೊಟ್ಟೆಯಿಂದ ಹೊರಗೆ ಹೋಗುತ್ತದೆ. (ಈ ಲಕ್ಷಣವುಳ್ಳ) ಶೋಕಜನ್ಯವಾದ ಅತಿಸಾರವು, ಚಿಕಿತ್ಸೆ ಮಾಡುವದಕ್ಕೆ ಅತಿ ಪ್ರಯಾಸ ಕೊಡುವಂಥಾದ್ದಾದ್ದರಿಂದ, ಕಷ್ಟಸಾಧ್ಯ ರೋಗ ಎಂತ ವೈದ್ಯರು ಹೇಳಿದ್ದಾರೆ.

ಷರಾ: ಭಯದಲ್ಲಿಯೂ ಶೋಕದಲ್ಲಿಯೂ ವಾತವು ಪಿತ್ತವನ್ನು ಕೂಡಿಕೊಂಡು ಮಲವನ್ನು ನೀರು ಮಾಡಿ, ಬಿಸಿಯಾಗಿ ವೇಗದಿಂದ ಹೊರಗೆ ಹಾಕುತ್ತದೆ, ಮತ್ತು ಆ ಅತಿಸಾರಗಳ ಲಕ್ಷಣಗಳು ವಾತಪಿತ್ತಅತಿಸಾರಗಳ ಲಕ್ಷಣಗಳಿಗೆ ಸಮಾನ ಎಂತ ವಾ. (ಪು 212) ಕೆಳಗಿನ 11ನೇ ಸಂಖ್ಯೆ ನೋಡಿ.

11. ಆಗನ್ತೂ ದ್ವಾವತೀಸಾರೌ ಮಾನಸೌ ಭಯಶೋಕಜೌ ।
ತತ್ತ್ವಯೋರ್ಲಕ್ಷಣಂ ವಾಯೋರ್ಯದತೀಸಾರಲಕ್ಷಣಮ್ ॥
ಮಾರುತೋ ಭಯಶೋಕಾಭ್ಯಾಂ ಶೀಘ್ರಂ ಹಿ ಪರಿಕುಪ್ಯತಿ ।
ತಯೋಃ ಕ್ರಿಯಾ ವಾತಹರಾ ಹರ್ಷಣಾಶ್ವಾಸನಾನಿ ಚ ॥

(ಭಯಜ ಅತಿಸಾರದ ಸಂಪ್ರಾಪ್ತಿ, ಲಕ್ಷಣ ಮತ್ತು ಚಿಕಿತ್ಸಾವಿಧಾನ.)

(ಚ. 559)

ಭಯದಿಂದ ಮತ್ತು ಶೋಕದಿಂದ ಉತ್ಪನ್ನವಾಗುವ ಅತಿಸಾರಗಳೆರಡು ಆಗಂತು (ಹೊರ ಹೇತುಗಳಿಂದ ಉಂಟಾಗುವಂಥವು): ಮನಸ್ಸಿಗೆ ಸಂಬಂಧಪಟ್ಟವು. ವಾತಾತಿಸಾರದ ಲಕ್ಷಣಗಳೇ ಅವೆರಡರ ಲಕ್ಷಣಗಳು; ಯಾಕೆಂದರೆ ಭಯದಿಂದಲೂ ಶೋಕದಿಂದಲೂ ವಾಯು ಬೇಗನೆ ಕೋಪಗೊಳ್ಳುತ್ತದೆ. ಅವುಗಳಿಗೆ ಪ್ರತಿಕ್ರಿಯೆ ವಾತಹರವಾದ ಔಷಧಗಳು ಮತ್ತು (ಶೋಕಜದಲ್ಲಿ) ಹರ್ಷಣ ಮತ್ತು (ಭಯಜದಲ್ಲಿ) ಧೈರ್ಯಪಡಿಸುವದು ಆಗಿರುತ್ತದೆ.

12. ಆಮಾಜೀರ್ಣೈಃ ಪ್ರದ್ರುತಾಃ ಕ್ಷೋಭಯನ್ತಃ
ಕೋಷ್ಠಂ ದೋಷಾಃ ಸಂಪ್ರದುಷ್ಟಾಃ ಸಭಕ್ತಮ್ ।
ನಾನಾವರ್ಣಂ ನೈಕಶಃ ಸಾರಯನ್ತಿ
ಕೃಚ್ಛ್ರಾಜ್ಜನ್ತೋಃ ಷಷ್ಠಮೇನಂ ವದನ್ತಿ ॥ (ಸು. 781)

(ಆಮಜ ಅತಿಸಾರದ ಸಂಪ್ರಾಪ್ತಿ ಮತ್ತು ಲಕ್ಷಣ)

ಮನುಷ್ಯನು ಉಂಡದ್ದು ಜೀರ್ಣವಾಗದೆ ಉಳಿದದ್ದರಿಂದ ದೋಷಗಳು ಕೋಪಗೊಂಡು, ಮಾರ್ಗಬಿಟ್ಟು ಸಂಚರಿಸಿ, ಅವನ ಕೋಷ್ಠವನ್ನು ಕದರಿಸಿ, ಅನ್ನದೊಂದಿಗೆ ಅದನ್ನು (ಆಮವನ್ನು) ನಾನಾ ವರ್ಣವಾಗಿ ಕಷ್ಟದಿಂದ ಹೊರಗೆ, ಬಹು ಸರ್ತಿಯಿಂದ, ಸುರಿಸುತ್ತವೆ. ಇದನ್ನು ಆರನೆಯ (ಆಮಜ) ಅತಿಸಾರ ಎನ್ನುತ್ತಾರೆ.

ಷರಾ 'ಆಮಾಜೀರ್ಣೈಃ' ಎಂಬಲ್ಲಿ 'ಅನ್ನಾಜೀರ್ಣೈಃ' ಎಂತ ಪಾಠಾಂತರ ಕಾಣುತ್ತದೆ ಅರ್ಥ ಒಂದೇ 'ಕಷ್ಟದಿಂದ' ಎಂಬಲ್ಲಿ 'ಶೂಲಯುಕ್ತವಾಗಿ' ಎಂಬ ಅರ್ಥದ ಪಾಠಾಂತರ ಉಂಟು. ಹಿಂದಿನ 8ನೇ ಮತ್ತು ಮುಂದಿನ 13ನೇ ಸಂಖ್ಯೆಗಳ ಅಡಿಯಲ್ಲಿ ಬರೆದ ಷರಾ ನೋಡಿ

13. ಸಂಸೃಷ್ಟಮೇಭಿರ್ದೋಷೈಸ್ತು ನ್ಯಸ್ತಮಪ್ಸ್ವವಸೀದತಿ ।
ಪುರೀಷಂ ಭೃಶದುರ್ಗನ್ಧಂ ಪಿಚ್ಛಿಲಂ ಚಾಮಸಂಜ್ಞಿತಮ್ ॥
ಏತಾನ್ಯೇವ ತು ಲಿಂಗಾನಿ ವಿಪರೀತಾನಿ ಯಸ್ಯತು ।
ಲಾಘವಂ ಚ ಮನುಷ್ಯಸ್ಯ ತಸ್ಯ ಪಕ್ವಂ ವಿನಿರ್ದಿಶೇತ್ ॥ (ಸು. 781)

(ಆಮ-ಪಕ್ವ ಎಂಬ ಭೇದ.)

ಮೇಲೆ ಹೇಳಿದ (ವಾತಾದಿ) ದೋಷಗಳಿಂದ ಕೂಡಿಕೊಂಡ ಮಲವು ಹೆಚ್ಚು ದುರ್ವಾಸನೆಯುಳ್ಳದ್ದಾಗಿ, ಕಡಿದು ನೀರಾಗಿದ್ದು, ನೀರಿನಲ್ಲಿ ಹಾಕಲ್ಪಟ್ಟಲ್ಲಿ ಮುಳುಗಿದರೆ, ಅದು 'ಆಮ' ಎಂತಲೂ, ಇವುಗಳಿಗೆ ಪ್ರತಿವಿರುದ್ಧವಾದ ಲಕ್ಷಣಗಳು ಮತ್ತು ದೇಹದಲ್ಲಿ ಹಗುರ ಕಂಡರೆ, ಅದು 'ಪಕ್ವ' ಎಂತಲೂ, ನಿಶ್ಚಯಿಸತಕ್ಕದ್ದು.

ಷರಾ ಅತಿಸಾರದಲ್ಲ ಮಲವು ರಕ್ತಮಿಶ್ರವಾಗಿರುವದು, ರಕ್ತವಿಲ್ಲದ್ದು ಎಂಬ ಭೇದವಲ್ಲದೆ, ಸಾಮ-ನಿರಾಮ ಎಂಬ ಎರಡು ವಿಧಗಳಿವೆ, ಸಾಮದಲ್ಲಿ ಮಲವು ನೀರಿನೊಳಗೆ ಮುಳುಗುವದು ಮತ್ತು ದುರ್ಗಂಧವುಳ್ಳದ್ದಾಗಿ ಸ್ರವಿಸುವದು ಮಾತ್ರವಲ್ಲದ, ಹೊಟ್ಟೆಯಲ್ಲಿ ವಾಯುವಿನ ಸಂಚಾರ, ಹೊಟ್ಟೆಯುಬ್ಬರ ಮತ್ತು ಹೊಟ್ಟೆಶೂಲೆ ಇರುತ್ತವೆ; ಆದರೆ ಕಫಾತಿಸಾರದಲ್ಲಿ ಪಕ್ವಸ್ಥಿತಿಯಲ್ಲಿಯೂ ಮಲ ನೀರಿನಲ್ಲಿ ಮುಳುಗುತ್ತದೆ, ಎಂತ ಸಹ ವಾ. (ಪು. 212). ಮೂತ್ರ ಮತ್ತು ವಾಯು ಬದ್ಧವಾಗಿ, ಮಲವು ಜಡ್ಡಿಲ್ಲದೆ, ದ್ರವವಾಗಿ ಶಬ್ದದೊಡನೆ ಅಥವಾ ಶಬ್ದವಿಲ್ಲದೆ ವಿಸರ್ಜನವಾಗುವದು, ಹೊಟ್ಟೆಯೊಳಗೆ ವಾಯು ಬಿಗಿದು, ಶಬ್ದ ಮತ್ತು ಶೂಲೆಯೊಂದಿಗೆ, ಅಷ್ಟವಾಗಿ ಸಂಚರಿಸುವದು, ಮತ್ತು ಮಲದ ನೀರು ಹಸಿ ವಾಸನೆಯುಳ್ಳದ್ದಾಗಿ, ಹರಡಿ, ಆರಿಹೋಗುವದು ಸಹ ವಾತಿಕ ಆಮಾತಿಸಾರದ ಲಕ್ಷಣ ಎಂತ ಚ (ಪು 557).

'ವಿಚ್ಛಿನ್ನಂ' ಎಂಬಲ್ಲಿ 'ಪಿಚ್ಛಿಲಂ', (ಅಂದರೆ ಗಂಜಿ ನೀರಿನ ಹಾಗೆ ದಪ್ಪದ ದ್ರವವಾದ), ಎಂತ ಪಾಠಾಂತರ ಉಂಟು.

ಸುಶ್ರುತನ ವಚನದಲ್ಲಿ ದೇಹದ ಲಘುತ್ವ ಹೇಳಲ್ಪಟ್ಟದ್ದು ಕಫಾತಿಸಾರವಲ್ಲದಲ್ಲಿ ಎಂತ ಸೂಚಿಸುವದಕ್ಕಾಗಿ ಎಂಬದು ವ್ಯಾಖ್ಯಾನಕಾರರ ಹೇಳಿಕೆ

14. ವಾಯುಃ ಪ್ರವೃದ್ಧೋ ನಿಚಿತಂ ಬಲಾಸಂ
ನುದತ್ಯಧಸ್ತಾದಹಿತಾಶನಸ್ಯ ।
ಪ್ರವಾಹಮಾಣಸ್ಯ ಮುಹುರ್ಮಲಾಕ್ತಂ
ಪ್ರವಾಹಿಕಾಂ ತಾಂ ಪ್ರವದನ್ತಿ ತಜ್ಞಾಃ ॥
ಪ್ರವಾಹಿಕಾ ವಾತಕೃತಾ ಸಶೂಲಾ, ಪಿತ್ತಾತ್ಸದಾಹಾ ಸಕಫಾ ಕಫಾಚ್ಚ ।
ಸಶೋಣಿತಾಃ ಶೋಣಿತಸಮ್ಭವಾಸ್ತು, ತಾಃ ಸ್ನೇಹರೂಕ್ಷಪ್ರಭವಾ ಮತಾಸ್ತು ॥
ತಾಸಾಮತೀಸಾರವದಾದಿಶೇಚ್ಚ, ಲಿಂಗಂ ಕ್ರಮಂ ಚಾಮವಿಪಕ್ವತಾಂಚ ॥
(ಸು. 791)

ಪ್ರವಾಹಿಕೆಯ ಸಂಪ್ರಾಪ್ತಿ, ಲಕ್ಷಣ ಮತ್ತು ಭೇದ

ಅಹಿತವಾದ ಅಶನವನ್ನು ಮಾಡುವಂಥವನಲ್ಲಿ ವಾಯುವು ಅತಿಯಾಗಿ ವೃದ್ಧಿಗೊಂಡು, (ಕರುಳುಗಳಲ್ಲಿ) ಸಂಗ್ರಹವಾದ ಕಫವನ್ನು ಮಲದ ಲಾಂಛನದೊಂದಿಗೆ ಪದೇ ಪದೇ, ರೋಗಿಯು ಬಿಕ್ಕಿದ ಹಾಗೆ, ಕೆಳಗೆ (ಗುದದ್ವಾರವಾಗಿ ಹೊರಗೆ) ತಳ್ಳುತ್ತದೆ, ಅದಕ್ಕೆ (ಆ ರೋಗಕ್ಕೆ) ಬಲ್ಲವರು ಪ್ರವಾಹಿಕೆ (ಬಿಕ್ಕುವಿಕೆಯುಳ್ಳ ಅತಿಸಾರ, ಆಮಶಂಕೆ, Dysentery) ಎನ್ನುತ್ತಾರೆ. ಪ್ರವಾಹಿಕೆಯು ವಾತಜವಾದಾಗ್ಗೆ ಶೂಲೆಯೂ, ಪಿತ್ತಜವಾದಾಗ್ಗೆ ಉರಿಯೂ, (ಆಸನದಲ್ಲಿ), ಕಫಜವಾದಾಗ್ಗೆ ಕಫವೂ, ರಕ್ತಜವಾದಾಗ್ಗೆ ರಕ್ತವೂ, (ಸ್ರಾವದೊಂದಿಗೆ) ಕಾಣುವದು ಅವುಗಳೆಲ್ಲ ಸ್ನೇಹಗಳ ಮತ್ತು ರೂಕ್ಷಪದಾರ್ಥಗಳ ಸೇವನದಿಂದ ಉಂಟಾಗುವಂಥವು ಎಂತ ತಿಳಿಯುತ್ತಾರೆ ಅವುಗಳ (ಇತರ) ಲಕ್ಷಣ, ಚಿಕಿತ್ಸಾಕ್ರಮ ಮತ್ತು ಆಮ-ಪಕ್ವ ಎಂಬ ಭೇದ ಸಹ ಅತಿಸಾರದಂತೆ ಎಂತ ತಿಳಿಯಬೇಕು.

ಷರಾ ಪಿತ್ತದಿಂದ ಉರಿ, ರಕ್ತಕೋಪದಿಂದ ರಕ್ತಸ್ರಾವ ಸಹ ಕಂಡಾಗ್ಯೂ, ಪ್ರವಾಹಿಕೆಯ ಪ್ರಧಾನ ಹೇತುಗಳಾದ ಕಫವಾತಗಳೊಳಗೆ ಕಫವು ಜಿಡ್ಡುಳ್ಳ ಪದಾರ್ಥಗಳ ಸೇವನದಿಂದ ಮತ್ತು ವಾತವು ರೂಕ್ಷ ಪದಾರ್ಥಗಳ ಸೇವನದಿಂದ ವೃದ್ಧಿಗೊಳ್ಳುವದು ಎಂತ ತಾತ್ಪರ್ಯ ತೀಕ್ಷ್ಣತೆಯಿಂದ ಪಿತ್ತಜಾ, ಉಷ್ಣತೆಯಿಂದ ರಕ್ತಜಾ, ಪ್ರವಾಹಿಕೆಯುಂಟಾಗುವದೆಂತ ಮ ವ್ಯಾ. (ಪು 57).

'ಪ್ರವಾಹಿಕಾ' ಎಂದರೆ ಗ್ರಹಣೀರೋಗ ಎಂತ ಅಮರ ಹೇಳುತ್ತದೆಂಬದರಿಂದ ಶಬ್ದಕಲ್ಪದ್ರುಮದಲ್ಲಿ ಗ್ರಹಣೀರೋಗಚಿಕಿತ್ಸೆಯು 'ಪ್ರವಾಹಿಕಾ' ಶಬ್ದದ ಕೆಳಗೆ ಬರೆಯಲ್ಪಟ್ಟಿದೆ' ಇನ್ನೊಂದು ಗ್ರಂಥದಲ್ಲಿ ಪ್ರವಾಹಿಕೆಗೆ ವಿಷೂಚೀ ಎಂತ ಅರ್ಥ ಬರೆದದ್ದು ಕಾಣುತ್ತದೆ' ವಿಲ್ಸನ್ಸ್ ಡಿಕ್ಷನರಿಯಲ್ಲಿ 'ಪ್ರವಾಹಿಕಾ' ಎಂಬದು diarrhoea (ಅತಿಸಾರ) ಎಂತ ಬರೆಯಲ್ಪಟ್ಟಿದೆ! 'ಪ್ರವಾಹ' ಎಂಬ ಶಬ್ದದ ಮೂಲಾರ್ಥ 'ಮುಂದೆ ಅಥವಾ ಹೊರಗೆ ಸಾಗುವದು' ಎಂಬದು. ಇದಕ್ಕೆ

ಸರಿಯಾಗಿ 'ಪ್ರವಾಹಿಕಾ' ಎನ್ನಬೇಕಾದಲ್ಲಿ 'ನಿರ್ವಾಹಿಕಾ' ಎಂಬ ಶಬ್ದ ಉಪಯೋಗಿಸಲ್ಪಟ್ಟ ದೃಷ್ಟಾಂತಗಳು ಚ ಸಾ ಸಂ. ದ ಕೆಲವು ಶ್ಲೋಕಗಳಲ್ಲಿ ಕಾಣುತ್ತವೆ ಚರಕಸಂಹಿತೆಯಲ್ಲಿ "ತಯಾ ಪ್ರವಾಹಿತೇ ದೋಷೇ ಪ್ರಶಾಮ್ಯತ್ಯುದರಾಮಯಃ" ಎಂಬ ವಾಕ್ಯವಿದೆ (ಪು 559) ಎಂದರೆ, 'ಅದರಿಂದ (ಅಣಿಲೆಕಾಯಿಯಿಂದ) ದೋಷವು ಹೊರಗೆ ಹಾಕಲ್ಪಟ್ಟಲ್ಲಿ ಹೊಟ್ಟೆಯಲ್ಲಿಯ ರೋಗವು ಶಾಂತವಾಗುತ್ತದೆ' 'ಪ್ರವಾಹಿಕೆ'ಗೆ 'ವಿಸ್ರಂಸೀ', 'ಅನ್ತರ್ಗ್ರನ್ಥಿ', 'ನಿಶ್ಚಾರಕಃ', ಎಂಬ ಹೆಸರುಗಳು ಸಹ ಇವೆ ಎಂತ ಮ. ವ್ಯಾ ಹೇಳುತ್ತದೆ (ಪು 56). ಅತಿಸಾರದಲ್ಲಿ ನಾನಾವಿಧ ದ್ರವರೂಪವಾದ ಧಾತುಗಳು, ಪ್ರವಾಹಿಕೆಯಲ್ಲಿ ಕಫ ಮಾತ್ರ, ಸ್ರವಿಸುತ್ತವೆ ಎಂಬದು ಅವುಗಳೊಳಗೆ ಭೇದ ಎಂತ ಅದೇ ಮ ವ್ಯಾ ವೈದ್ಯಸಾರ ಸಂಗ್ರಹದಲ್ಲಿ ಈ ಕೆಳಗಣ ವರ್ಣನ ಇದೆ:—

ಸೃತೇ ವಿಟ್ಕಫರಕ್ತೇ ತು ವಾಯುನಾ ವಿಪ್ರವರ್ಜಿತಮ್ ।
ಪ್ರವಾಹಿಕೇತಿ ತತ್ ಖ್ಯಾತಂ ಯತ್ಫೇನಾಮ್ಭಃ ಪ್ರವರ್ತತೇ ॥ (ಪು 226-7)

ಅಂದರೆ, "ವಾಯುವಿಂದ ಮಲ-ಕಫ-ರಕ್ತ ಸಹ ಹೊರಟಲ್ಲಿ ಮಲಹೊರತಾದ ಬರೇ ನೊರೆ-ನೀರು ಪ್ರವರ್ತಿಸುವ ವ್ಯಾಧಿಯು 'ಪ್ರವಾಹಿಕಾ' ಎಂತ ಖ್ಯಾತಿಗೊಂಡದೆ ಈ ರೋಗಕ್ಕೆ ಕನ್ನಡ ಭಾಷೆಯಲ್ಲಿ 'ನೀರುಕೊಂಬೆ' ಎನ್ನುತ್ತಾರೆ ಎಂತ ವ್ಯಾಖ್ಯೆ ಬರೆದದ್ದು ಕಾಣುತ್ತದೆ ಇದನ್ನೆಲ್ಲಾ ಕಂಡರೆ, 'ಪ್ರವಾಹಿಕೆ' ಎಂಬದು ಯಾವ ವ್ಯಾಧಿ ಎಂಬದನ್ನು ಕುರಿತು ಸಂದೇಹ ಹುಟ್ಟುತ್ತದೆ ಆದರೆ ಪ್ರವಾಹಿಕೆ ಎಂಬದು ಬಿಕ್ಕುವಿಕೆಯುಳ್ಳ ಅತಿಸಾರ, ಆಮಶಂಕೆ ಎಂತ ನಿಶ್ಚಯಿಸಬೇಕು ಮಲ ಬರುತ್ತದೆಂಬ ಶಂಕೆಯಿಂದ ವಿಸರ್ಜನಕ್ಕೆ ಕೂತು, ಬಹಳ ಹೊತ್ತು ಬಿಕ್ಕುತ್ತಾ, ವೇದನೆಪಡುತ್ತಾ, ಪ್ರಯತ್ನಿಸಿದಾಗ್ಯೂ, ಸಿಂಬಳದ ಹಾಗಿನ ಆಮ ಅಥವಾ ಕಫ ಬರೇವಾಗಿ, ಅಥವಾ ಮಲದ ನೀರು, ರಕ್ತ ಮುಂತಾದ್ದರ ಲಾಂಛನದಿಂದ ಕೂಡಿಕೊಂಡು, ಹೋಗುವದು (Straining and tenesmus) ಆಮಶಂಕೆಯ (Dysentery) ಪ್ರಧಾನ ಲಕ್ಷಣ ಮತ್ತು ಇತರ ಬರೇ ಅತಿಸಾರ (Diarrhoea)ದಲ್ಲಿ ಆ ಲಕ್ಷಣವಿರುವದಿಲ್ಲ ಎಂತ ಪಾಶ್ಚಾತ್ಯ ವೈದ್ಯ ಗ್ರಂಥಗಳು ಹೇಳುತ್ತವೆ ಸುಶ್ರುತನ ಉಪದೇಶವು ಅದಕ್ಕನುಸಾರವಾಗಿ ಉಂಟು ಆಮಶಂಕೆಯ ಆರಂಭದ ಎರಡು ಮೂರು ದಿನಗಳಲ್ಲಿ ಬರೇ ಅತಿಸಾರವೇ ಕಾಣುತ್ತದೆ ಆದ್ದರಿಂದಲೂ, ಆಮಶಂಕೆಯಲ್ಲಿ ಬರೇ ಅತಿಸಾರಾನಂತರ ಕಫ ಹೋಗುವದೇ ಪ್ರಧಾನ ಲಕ್ಷಣವಾದ್ದರಿಂದಲೂ, ಚರಕನು ಕಫಾತಿಸಾರದ ಲಕ್ಷಣಗಳೊಳಗೆ ಪ್ರವಾಹಿಕೆಯು ಒಂದೆಂತ ಬರೆದದ್ದಾಗಿರಬಹುದು ಆಮಶಂಕೆ ಮತ್ತು ಬರೇ ಅತಿಸಾರ, ಇವುಗಳೊಳಗಿನ ಭೇದವನ್ನು ತಿಳಿವಿರುವದು ಚಿಕಿತ್ಸೆಗೆ ಆವಶ್ಯಕ. ಆಮಶಂಕೆ ಆರಂಭವಾದ ಕೂಡಲೇ ಅತಿಸಾರವನ್ನು ನಿಲ್ಲಿಸುವ ಔಷಧಗಳನ್ನು ಕೊಟ್ಟರೆ, ಅದು ವಿಷಮವಾಗಿ ಪರಿಣಮಿಸಬಹುದು ಆದ್ದರಿಂದಲೇ ಆಮಾತಿಸಾರದಲ್ಲಿ ತನ್ನಂತೆ ಹೋಗುತ್ತಿರುವ ಮಲವನ್ನು ಕಟ್ಟಿಸಬಾರದು ಮತ್ತು ಮಲ ಸರಿಯಾಗಿ ಹೋಗುವದಿಲ್ಲವಾದರೆ ಅಲ್ಪ ಪ್ರಮಾಣದಲ್ಲಿ ಹರಳೆಣ್ಣೆಯನ್ನೋ ಅಣಿಲೆಕಾಯಿಯನ್ನೋ ಕೊಟ್ಟು ದೋಷವನ್ನು ಹೊರಗೆ ಹಾಕಬೇಕು ಎನ್ನುವದು ಸ್ಥೂಲಾಂತ್ರದಲ್ಲಿ—ವಿಶೇಷವಾಗಿ ಗುದದಲ್ಲಿ ಮತ್ತು ಅದಕ್ಕೆ ಹಿಂದೆ ಕೆಳಮುಖವಾಗಿರುವ (Rectum and descending colon) ಭಾಗದಲ್ಲಿ—ವಿಪಾಕ ಮತ್ತು ಆ ಸ್ರೋತಸ್ಸಿನ ಕಫಾವರಣದಲ್ಲಿ ಹುಣ್ಣು ಇರುವದು ಆಮಶಂಕೆಯ ವಿಶೇಷ ಲಕ್ಷಣ ಆ ವಿಪಾಕದ ದೆಸೆಯಿಂದಲೇ ಆಮಶಂಕೆಯ ಆರಂಭದಲ್ಲಿ ಮೈಕಾವು ಕಾಣುವದಾಗಿರುತ್ತದೆ ಚರಕನು ಪ್ರವಾಹಿಕೆಯನ್ನು ಕಫಾತಿಸಾರದ ಲಕ್ಷಣಗಳೊಳಗೆ ಸೇರಿಸಿದಾಗ್ಯೂ, ಅದಕ್ಕೆ ವಿಶೇಷ ಚಿಕಿತ್ಸೆಯನ್ನು ಬರೆದಿದ್ದಾನೆ

15. ಪಿತ್ತಾತಿಸಾರೀ ಯಸ್ತ್ವೇತಾಂ ಕ್ರಿಯಾಂ ಮುಕ್ತ್ವಾ ನಿಷೇವತೇ ।
ಪಿತ್ತಲಾನ್ಯನ್ನಪಾನಾನಿ ತಸ್ಯ ಪಿತ್ತಂ ಮಹಾಬಲಮ್ ॥
ಕುರ್ಯಾದ್ರಕ್ತಾತಿಸಾರನ್ತು ರಕ್ತಮಾಶು ಪ್ರದೂಷಯತ್ ।
ತೃಷ್ಣಾಂ ಶೂಲಂ ವಿದಾಹಂ ಚ ಗುದಪಾಕಂ ಚ ದಾರುಣಮ್ ॥
(ಚ 564)

ರಕ್ತಾತಿಸಾರದ ನಿದಾನ ಮತ್ತು ಲಕ್ಷಣ

ಪಿತ್ತಾತಿಸಾರದಿಂದ ಪೀಡಿತನಾಗಿದ್ದಾಗ್ಗೆ, ಅದಕ್ಕೆ ಹೇಳಲ್ಪಟ್ಟ ಪ್ರತಿಕ್ರಿಯೆಯನ್ನು ಬಿಟ್ಟು, ಪಿತ್ತವೃದ್ಧಿಕರವಾದ ಅನ್ನಪಾನಗಳನ್ನು ಯಾವನು ಸೇವಿಸುತ್ತಾನೋ, ಅವನಲ್ಲಿ ಪಿತ್ತಮಹಾಬಲವನ್ನು ಹೊಂದಿ, ಬೇಗನೆ ರಕ್ತವನ್ನು ಕೆಡಿಸಿ, ರಕ್ತಾತಿಸಾರವನ್ನುಂಟುಮಾಡುತ್ತದೆ. ರಕ್ತಾತಿಸಾರದಲ್ಲಿ ಬಾಯಾರಿಕೆ, ಶೂಲೆ, ವಿಶೇಷವಾದ ಉರಿ, ಮತ್ತು ಕಠಿಣವಾದ ಆಸನದ ಬೇಯುವಿಕೆ, ಈ ಲಕ್ಷಣಗಳು ಕಾಣುವವು.

ಪಕಾ: ಜ್ವರ ಸಹ ರಕ್ತಾತಿಸಾರದ ಲಕ್ಷಣಗಳೊಳಗೊಂದು ಎಂತ ಸು. (ಪು. 789)

16. ಶರೀರಿಣಾಮತೀಸಾರಃ ಸಮ್ಭೂತೋ ಯೇನ ಕೇನಚಿತ್ ।
ದೋಷಾಣಾಮೇವ ಲಿಂಗಾನಿ ಕದಾಚಿನ್ನಾತಿವರ್ತ್ತತೇ ॥
ಇತರ ಅತಿಸಾರಗಳು
ಸ್ನೇಹಾಜೀರ್ಣನಿಮಿತ್ತಸ್ತು ಬಹುಶೂಲಪ್ರವಾಹಿಕಃ ।
ವಿಸೂಚಿಕಾನಿಮಿತ್ತಸ್ತು ಚಾನ್ಯೋಽಜೀರ್ಣನಿಮಿತ್ತಜಃ ॥
ವಿಷಾರ್ಶಃಕ್ರಿಮಿಸಮ್ಭೂತೋ ಯಥಾಸ್ವಂ ದೋಷಲಕ್ಷಣಃ ॥
(ಸು. 781, 782)

ಜನರಲ್ಲಿ ಯಾವ ಕಾರಣದಿಂದ ಉಂಟಾದ ಅತಿಸಾರವಾದರೂ (ವಾತಾದಿ) ದೋಷಗಳ ಲಕ್ಷಣಗಳನ್ನು ಯಾವಾಗಲಾದರೂ ಮಿಕ್ಕುವದಿಲ್ಲ. ಪಾನಮಾಡಿದ ಸ್ನೇಹವು ಜೀರ್ಣವಾಗದರಿಂದ ಉಂಟಾಗುವ ಬಹಳ ಶೂಲೆ ಮತ್ತು ಪ್ರವಾಹಿಕೆ ಇರುವ ಅತಿಸಾರ, ವಿಷೂಚಿಕೆನಿಮಿತ್ತವಾದ ಅತಿಸಾರ, ಅಜೀರ್ಣನಿಮಿತ್ತವಾದ ಅತಿಸಾರ, ವಿಷದಿಂದುಂಟಾದ ಅತಿಸಾರ, ಅರ್ಶಸ್ಸು ರೋಗದಿಂದುಂಟಾದ ಅತಿಸಾರ, ಕ್ರಿಮಿಯಿಂದುಂಟಾದ ಅತಿಸಾರ, ಇವುಗಳಲ್ಲಿಯೂ ಯಾವದಕ್ಕೆ ಯಾವ (ವಾತಾದಿ) ದೋಷಗಳು ಕಾರಣಗಳೋ ಆ ದೋಷಗಳ ಲಕ್ಷಣಗಳು ಆ ಅತಿಸಾರದಲ್ಲಿ ಕಾಣುವವು.

ಸೂ: ವಾತಪಿತ್ತ-ಪಿತ್ತಕಫ-ಕಫವಾತ ಎಂಬ ಮೂರು ಅತಿಸಾರಗಳು ಬೇರೆ ಇದ್ದಾಗ್ಯೂ, ಅವುಗಳ ಲಕ್ಷಣಗಳೊಳಗೆ ಆಯಾ ದೋಷಗಳಿಗೆ ಅನುರೂಪವಾದ ಲಕ್ಷಣಗಳಲ್ಲದೆ ವಿಶೇಷ ಲಕ್ಷಣಗಳು ಇಲ್ಲದರಿಂದ, "ಪ್ರಕೃತಿಸಮಸಮವಾಯ" ನ್ಯಾಯದಲ್ಲಿ ಅವುಗಳನ್ನು ಪ್ರತ್ಯೇಕ ಭೇದಗಳಾಗಿ ಅತಿಸಾರವಿಭಾಗದಲ್ಲಿ ಕಾಣಿಸಿರುವದಿಲ್ಲ. ದ್ವಂದ್ವದೋಷಗಳಿಂದ 'ವಿಕೃತಿ-ವಿಷಮ-ಸಮವಾಯ' ಲಕ್ಷಣಗಳು ಕಂಡರೆ ಮಾತ್ರ ಅವುಗಳನ್ನು ಪ್ರತ್ಯೇಕ ಜಾತಿಗಳಾಗಿ ಕಾಣಿಸುವದು ಕ್ರಮವಾಗಿರುತ್ತದೆ

17. ಆಮ-ಪಕ್ವಕ್ರಮಂ ಹಿತ್ವಾ ನಾತಿಸಾರೇ ಕ್ರಿಯಾ ಯತಃ ।
ಅತಃ ಸರ್ವಾತಿಸಾರಾಸ್ತು ಜ್ಞೇಯಾಃ ಪಕ್ವಾಮಲಕ್ಷಣೈಃ ॥ (ಸು. 782)
ಸಾಧಾರಣ ಚಿಕಿತ್ಸಾ ವಿಧಾನ
ದೋಷಾಃ ಸನ್ನಿಚಿತಾ ಯಸ್ಯ ವಿದಗ್ಧಾಹಾರಮೂರ್ಚ್ಛಿತಾಃ ।
ಅತಿಸಾರಾಯ ಕಲ್ಪನ್ತೇ ಭೂಯಸ್ತಾನ್ ಸಂಪ್ರವರ್ತಯೇತ್ ॥
ನ ತು ಸಂಗ್ರಹಣಂ ದೇಯಂ ಪೂರ್ವಮಾಮಾತಿಸಾರಿಣೇ ।
ವಿಬಧ್ಯಮಾನಾಃ ಪ್ರಾಗ್ದೋಷಾ ಜನಯನ್ತ್ಯಾಮಯಾನ್ ಬಹೂನ್ ॥
ದಂಡಕಾಲಸಕಾಧ್ಮಾನಗ್ರಹಣ್ಯರ್ಶೋಗದಾಂ ಸ್ತಥಾ ।
ಶೋಥಪಾಂಡ್ವಾಮಯಪ್ಲೀಹಕುಷ್ಠಗುಲ್ಮೋದರಜ್ವರಾನ್ ॥
ತಸ್ಮಾದುಪೇಕ್ಷೇತೋತ್ಕ್ಲಿಷ್ಟಾನ್ ವರ್ತಮಾನಾನ್ ಸ್ವಯಂ ಮಲಾನ್ ।
ಕೃಚ್ಛ್ರಂ ವಾ ವಹತಾನ್ ದದ್ಯಾದಭಯಾಂ ಸಂಪ್ರವರ್ತಿನೀಮ್ ॥
ತಯಾ ಪ್ರವಾಹಿತೇ ದೋಷೇ ಪ್ರಶಾಮ್ಯತ್ಯುದರಾಮಯಃ ।
ಜಾಯತೇ ದೇಹಲಘುತಾ ಜಠರಾಗ್ನಿಶ್ಚ ವರ್ಧತೇ ॥
ಪ್ರಮಥ್ಯಾಂ ಮಧ್ಯದೋಷಾಣಾಂ ದದ್ಯಾದ್ದೀಪನಪಾಚನೀಮ್ ।
ಲಂಘನಂ ಚಾಲ್ಪದೋಷಾಣಾಂ ಪ್ರಶಸ್ತಮತಿಸಾರಿಣಾಮ್ ॥
(ಚ. 559)

ಯೋಽತಿದ್ರವಂ ಪ್ರಭೂತಂ ಚ ಪುರೀಷಮತಿಸಾರ್ಯತೇ ।
ತಸ್ಯಾದೌ ವಮನಂ ಕುರ್ಯಾತ್ಪಶ್ಚಾಲ್ಲಂಘನಪಾಚನಮ್ ॥
(ಸು. 782)

ಅತಿಸಾರದಲ್ಲಿ ಆಮವೋ, ಪಕ್ವವೋ ಎಂಬ ವಿಚಾರವಿಲ್ಲದೆ ಪ್ರತಿಕ್ರಿಯೆಗಳು ಇಲ್ಲವಾದ್ದರಿಂದ, ಎಲ್ಲಾ ಅತಿಸಾರಗಳಲ್ಲಿಯೂ ಲಕ್ಷಣಗಳಿಂದ ಇದು ಆಮ, ಇದು ಪಕ್ವ ಎಂಬ ಭೇದವನ್ನು ತಿಳಿದುಕೊಳ್ಳಬೇಕು. ಕ್ರಮವಾಗಿ ಪಚನವಾಗದ ಆಹಾರಗಳಿಂದ ಕೆದರಿಕೊಂಡ ದೋಷಗಳು ಯಾವನಲ್ಲಿ ಸಂಗ್ರಹವಾಗುತ್ತವೋ, ಅವನಲ್ಲಿ ಅವು ಅತಿಸಾರವನ್ನುಂಟುಮಾಡುವದಕ್ಕೆ ಕಾರಣವಾಗುತ್ತವೆ. ಆದ್ದರಿಂದ ಆ ದೋಷಗಳು ಮತ್ತಷ್ಟು ಸರಿಯಾಗಿ ಪ್ರವೃತ್ತಿಯಾಗುವ ಹಾಗಿನ ಕ್ರಿಯೆಯನ್ನು ನಡಿಸತಕ್ಕದ್ದಲ್ಲದೆ, ಆಮಾತಿಸಾರದಲ್ಲಿ ಮುಂದಾಗಿ ಮಲಪ್ರವೃತ್ತಿಯನ್ನು ಕಟ್ಟಿಸತಕ್ಕ ಔಷಧಾದಿಗಳನ್ನು ಕೊಡಕೂಡದು. ಇದಕ್ಕೆ ವಿರೋಧವಾಗಿ ದೋಷಗಳು ಮುಂದಾಗಿ ಬದ್ಧಿಸ(ಬಿಗಿಯ)ಲ್ಪಟ್ಟಲ್ಲಿ, ಅವು ದಂಡಕ, ಅಲಸಕ, ಹೊಟ್ಟೆಯುಬ್ಬರ, ಗ್ರಹಣಿ, ಅರ್ಶಸ್ಸು, ಬಾಕು, ಪಾಂಡು, ಪ್ಲೀಹವ್ಯಾಧಿ, ಕುಷ್ಠ, ಗುಲ್ಮ, ಉದರವ್ಯಾಧಿ, ಜರ ಮುಂತಾದ ಬಹು ವ್ಯಾಧಿಗಳನ್ನು ಹುಟ್ಟಿಸುತ್ತವೆ. ಆದ್ದರಿಂದ ಸಡಿಲಾಗಿ ತನ್ನಂತೆ ಹೋಗುತ್ತಿರುವ ಮಲಗಳನ್ನು ಉಪೇಕ್ಷಿಸತಕ್ಕದ್ದು; ಅಥವಾ ಕಷ್ಟದಿಂದ ಹೋಗುತ್ತವಾದರೆ, ಅವು ಸರಿಯಾಗಿ ಹೋಗುವದಕ್ಕಾಗಿ ಅಣಿಲೆಕಾಯನ್ನು ಕೊಡತಕ್ಕದ್ದು, ಅದರಿಂದ ದೋಷವು ಹೊರಗೆ ಹಾಕಲ್ಪಟ್ಟಲ್ಲಿ ಹೊಟ್ಟೆಯಲ್ಲಿರುವ ವ್ಯಾಧಿಯು ಶಾಂತವಾಗುತ್ತದೆ, ದೇಹದಲ್ಲಿ ಲಘುತ್ವ ಉಂಟಾಗುತ್ತದೆ ಮತ್ತು ಹೊಟ್ಟೆಯೊಳಗಣ ಪಚನಾಗ್ನಿಯು ವೃದ್ಧಿಗೊಳ್ಳುತ್ತದೆ. ದೋಷವು ಮಧ್ಯತರದ್ದಾಗಿರುವಲ್ಲಿ ರೋಗಿಗೆ ದೀಪನ-ಪಾಚನಕರವಾದ ಪ್ರಮಥ್ಯೆಯನ್ನು (ಮುಂದಿನ 18ನೇ ಸಂಖ್ಯೆ ನೋಡಿ) ಕೊಡಬೇಕು; ಮತ್ತು ದೋಷವು ಅಲ್ಪವಾಗಿರುವಲ್ಲಿ ಲಂಘನವು ಅತಿಸಾರರೋಗಿಗಳಿಗೆ ಪ್ರಶಸ್ತವಾಗಿರುತ್ತದೆ.

ಅತಿನೀರಾಗಿ ಮತ್ತು ಪ್ರಮಾಣದಲ್ಲಿ ಅಧಿಕವಾಗಿ ಯಾರಲ್ಲಿ ಮಲವು ಅತಿಯಾಗಿ ಸ್ರವಿಸುತ್ತದೋ, ಅವನಿಗೆ ಪ್ರಥಮತಃ ವಾಂತಿ ಮಾಡಿಸಿ, ಅನಂತರ ಲಂಘನಪಾಚನಗಳನ್ನು ಮಾಡಿಸತಕ್ಕದ್ದು.

ಚರಕ ಅತಿಸಾರದ ಪೂರ್ವರೂಪ ಕಂಡಕೂಡಲೇ ಲಂಘನ ಮಾಡಿಸಬೇಕೆಂತಲೂ, ಅನಂತರ ಪಾಚನಕರವಾದ ಔಷಧಗಳೊಂದಿಗೆ ತಯಾರಿಸಿದ ಯವಾಗೂ ಗಂಜಿ ಮುಂತಾದ ಕ್ರಮವು ಹಿತ ಎಂತಲೂ, ಶೂಲೆ ಮತ್ತು ಹೊಟ್ಟೆಯುಬ್ಬರ ಪೀಡಿಸುತ್ತಿರುವ ಸಂಗತಿಯಲ್ಲಿ ಹಿಪ್ಪಲಿ ಮತ್ತು ಸೈಂಧವಲವಣ ಕೂಡಿಸಿದ ನೀರನ್ನು ಕೊಟ್ಟು ವಾಂತಿ ಮಾಡಿಸಿದ ಮೇಲೆ ಲಂಘನಾದಿ ಕ್ರಮಗಳಿಂದ ಉಪಚಾರ ಮಾಡತಕ್ಕದ್ದೆಂತಲೂ, ಹೆಚ್ಚಾಗಿ ವಮನಾನಂತರ ಲಘುವಾದ ಭೋಜನ ಕೊಡಬೇಕೆಂತಲೂ, ಅಲ್ಪವಾಗಿ, ಬದ್ಧವಾಗಿ, ಅಥವಾ ಶೂಲೆಯೊಡನೆ, ಯಾರಿಗೆ ಅತಿಸಾರವಾಗುತ್ತದೋ ಅವನಿಗೆ ಅಣಿಲೆಕಾಯಿ ಮತ್ತು ಹಿಪ್ಪಲಿಯ ಕಲ್ಕವನ್ನು ಸುಖೋಷ್ಣವಾಗಿ ಕೊಟ್ಟು ವಿರೇಚನ ಮಾಡಿಸಬೇಕೆಂತಲೂ, ಸು (ಪು 782) ರೋಗಿಯು ಬಲವಂತನಾಗಿದ್ದರೆ, ಅತಿಸಾರದಲ್ಲಿ ಲಂಘನವಲ್ಲದೆ ಬೇರೆ ಔಷಧವಿಲ್ಲ, ಅದರಿಂದಲೇ ಕೆದರಿದಂಥ ದೋಷಸಮೂಹವು ಪಚನವಾಗುತ್ತದೆ ಮತ್ತು ಶಾಂತವಾಗುತ್ತದೆ ಎಂತ ಭಾ ಪ್ರ (ಪು 817) ಅತಿಸಾರವು ಹೆಚ್ಚಾಗಿ ಆಮಾಶಯಕ್ಕೆ ಸಂಬಂಧಪಟ್ಟದ್ದಾದ್ದರಿಂದ ಮತ್ತು ಅಗ್ನಿ ಕೆಟ್ಟು ಸಂಭವಿಸುವಂಥಾದ್ದಾದ್ದರಿಂದ, ವಾತಜ ಅತಿಸಾರದಲ್ಲಿ ಸಹ, ಮೊದಲಾಗಿ ಲಂಘನ ಮಾಡಿಸುವದು ಹಿತವಾಗುತ್ತದೆ (ವಾ. 320)

ಆಮಶಂಕೆ(ಪ್ರವಾಹಿಕೆ)ಯ ಆರಂಭಾವಸ್ಥೆಯಲ್ಲಿ ಗುದದೊಳಗೆ ಹಿಡಿದು ನಿಂತಿದ್ದ ಮಲವು ಸಡಿಲಿ ಹೊರಗೆ ಹೋಗುವ ಹಾಗೆ, ರೋಗಿಗೆ ಒಂದೆರಡು ಟಾಚಮಚೆಯಷ್ಟು ಹರಳೆಣ್ಣೆಯನ್ನು ಅಷ್ಟೇ ಹಾಲಿನಲ್ಲಿ ಕಲಸಿ, ಒಂದು ಚಿಮಿಟಿ ಸಕ್ಕರೆ ಕೂಡಿಸಿ, ಕುಡಿಯಕೊಟ್ಟು, ಗಂಜಿಯ ನೀರು ಮುಂತಾದ ದ್ರವಾಹಾರದ ಪಥ್ಯದಲಿ ಒಂದೆರಡು ದಿನ ಇರಿಸಿದರೆ, ಅದರಿಂದಲೇ ಅವನ ರೋಗ ಪ್ರಾಯಶಃ ಪರಿಹಾರವಾಗುತ್ತದೆ ಮತ್ತು ಹೊಟ್ಟೆನೋವು ಇದ್ದಲ್ಲಿ ಅದು ಒಡನೇ ನಿಲ್ಲುತ್ತದೆ.

18. ಪಿಪ್ಪಲೀ ನಾಗರಂ ಧಾನ್ಯಂ ಭೂತೀಕಮಭಯಾ ವಚಾ ।
ಹ್ರೀಬೇರಂ ಭದ್ರಮುಸ್ತಾನಿ ಬಿಲ್ವಂ ನಾಗರಧಾನ್ಯಕಮ್ ॥
ಪೃಶ್ನಿಪರ್ಣೀ ಶ್ವದಂಷ್ಟ್ರಾ ಚ ಸಮಾಂಶಾ ಕಂಟಕಾರಿಕಾ ।
ತಿಸ್ರಃ ಪ್ರಮಥ್ಯಾ ವಿಹಿತಾಃ ಶ್ಲೋಕಾರ್ಧೇಷ್ವತಿಸಾರಿಣಾಮ್ ॥
ವಚಾಪ್ರತಿವಿಷಾಭ್ಯಾಂ ವಾ ಮುಸ್ತಪರ್ಪಟಕೇನ ವಾ ।
ಹ್ರೀಬೇರಶೃಂಗಬೇರಾಭ್ಯಾಂ ಪಕ್ವಂ ವಾ ಪಾಯಯೇಜ್ಜಲಮ್ ॥
(ಚ. 559.)

ಮಧ್ಯದೋಷದ ಅತಿಸಾರಕ್ಕೆ ಚಿಕಿತ್ಸೆ

(1) ಹಿಪ್ಪಲಿ, ಶುಂಠಿ, ಕೊತ್ತುಂಬರಿ, ಮಚ್ಚಿಗೆಹುಲ್ಲು, ಅಣಿಲೆಕಾಯಿ ಮತ್ತು ಬಜೆ; (2) ಲಾಮಂಚ, ಭದ್ರಮುಷ್ಟಿ, ಬಿಲ್ವಪತ್ರೆ, ಶುಂಠಿ, ಮತ್ತು ಕೊತ್ತುಂಬರಿ, (3) ಓರೆಲೆಬೇರು, ನೆಗ್ಗಿಲಮುಳ್ಳು, ಇವೆರಡರ ಸಮಾಂಶ ಕಿರಿಗುಳ್ಳದ ಬೇರು; ಇವು ಮೂರು ಅತಿಸಾರರೋಗಿಗಳಿಗೆ ವಿಹಿತವಾದ ಪ್ರಮಥ್ಯೆಗಳು. ಬಜೆ ಮತ್ತು ಅತಿವಿಡೆ, ಅಥವಾ ಭದ್ರಮುಷ್ಟಿ ಮತ್ತು ಪರ್ಪಾಟಕ, ಅಥವಾ ಲಾಮಂಚ ಮತ್ತು ಶುಂಠಿ, ಇವುಗಳನ್ನು ಕೂಡಿಸಿ ಮಾಡಿದ ಕಷಾಯದ ನೀರನ್ನು ರೋಗಿಗೆ ಕುಡಿಸಬೇಕು.

ಷರಾ 'ಪ್ರಮಥ್ಯಾ' ಶಬ್ದ ನಿಘಂಟುಗಳಲ್ಲಿ ಕಾಣುವದಿಲ್ಲ. ವೈದ್ಯಶಾಸ್ತ್ರದಲ್ಲಿ 'ಪ್ರಮಥ್ಯಾ' ಎಂಬದು 'ಪಾಚನ ದೀಪನ ಕಷಾಯ' ಎಂಬ ಅರ್ಥದಲ್ಲಿ ಎಂತ ವೃದ್ಧಪರಂಪರೆಯಿಂದ ತಿಳಿದುಬರುತ್ತದೆ ಎಂತ ಆ ದೀ (ಪು 434). ವಾಗ್ಭಟನ ಅಷ್ಟಾಂಗ ಸಂಹಿತೆಯಲ್ಲಿ ಪ್ರಮಥ್ಯೆ ಯೋಗಗಳು ಮೂರರೊಳಗೆ 1ನೇ 2ನೇಯವು ಕಾಣುತ್ತವೆ. ಆ ಯೋಗಗಳ ಔಷಧಗಳನ್ನು ನೀರಿನಲ್ಲಿ ಚನ್ನಾಗಿ ಕುದಿಸಿ ಕುಡಿಯಬೇಕೆಂತ ಹೇಳಲ್ಪಟ್ಟಿದೆಯಲ್ಲದೆ, ಆ ಯೋಗಗಳು ಪ್ರಮಥ್ಯೆಗಳು ಎಂತ ಬರೆಯಲ್ಪಟ್ಟಿರುವದಿಲ್ಲ. ಅ. ಸಂ. ನಲ್ಲಿ ಆ ಎರಡು ವರ್ಗಗಳ ಔಷಧಗಳ ಕಷಾಯಗಳನ್ನು ಕುಡಿಯಬೇಕಾಗಿ ಸ್ಪಷ್ಟ ಹೇಳಲ್ಪಟ್ಟಿರುವದಲ್ಲದೆ, ಎರಡು ಪ್ರಮಥ್ಯೆ ಎಂಬ ಹೆಸರುಳ್ಳವು ಎಂತಲೂ ಬರೆಯಲ್ಪಟ್ಟಿದೆ. ಆದರ ಇಂ. ವ್ಯಾಖ್ಯೆಯು ಪ್ರಮಥ್ಯೆಯ ಉಪಯೋಗವು ಎಲ್ಲಿ ಹೇಳಲ್ಪಟ್ಟಿದೆಯೋ, ಅಲ್ಲಿ 1ನೇ ಪಿಪ್ಪಲ್ಯಾದಿ ಯೋಗವನ್ನಾಗಲಿ 2ನೇ ಹ್ರೀಬೇರಾದಿಯನ್ನಾಗಲಿ ಉಪಯೋಗಿಸಬೇಕೆಂತ ತಿಳಿಯಬೇಕೆಂತ ಹೇಳುತ್ತದೆ. ಚರಕನು ಹೇಳಿದ 3ನೇ ಪ್ರಮಥ್ಯೆಯ ಪ್ರಸ್ತಾಪವಿಲ್ಲ (ಅ ಸಂ II 191-192). ಈ ವ್ಯಾಖ್ಯೆಗಳು ಸಮರ್ಪಕವಾಗಿಲ್ಲ. ವಾಗ್ಭಟನ ವಚನದಿಂದ ಪ್ರಮಥ್ಯಾ ಎಂಬದು ಮೋಲ, ಅಥವಾ ಎಂಟಲಿ ಔಷಧಗಳನ್ನು ನುಣ್ಣಗಾಗಿ ಚೂರ್ಣಿಸಿ ಕಷಾಯ ಕಾಯಿಸಿದಂತೆ ನೀರಿನಲ್ಲಿ ಕುದಿಸಿ ನೀರು ಸಾಕಷ್ಟು ಬತ್ತಿದ ಮೇಲೆ ಚೂರ್ಣದ ಅಂಶವಾದ ಮುದ್ದು ಕಷಾಯದೊಂದಿಗೆ ಸರಿಯಾಗಿ ಬೆರಕೆಯಾಗುವಂತೆ ಸಟ್ಟುಗದಿಂದ ಕಡೆದು, ಹಾಗೆ ಕುಡಿಯಬೇಕಾದ ಔಷಧವೇ ಪ್ರಮಥ್ಯಾ ಎಂತ ಕಾಣುತ್ತದೆ. ಆ ಪ್ರಮಥ್ಯೆಯು ಬೇಗ ಜೀರ್ಣವಾಗದು ಎಂಬದರಿಂದ, ಅದನ್ನು ಸೇವಿಸಿ ಲಂಘನಮಾಡಬೇಕೆಂತ ವಾಗ್ಭಟನು ಹೇಳಿದ್ದಾಗಿರಬೇಕು.

19. ದೇವದಾರುವಚಾಮುಸ್ತಾನಾಗರಾತಿವಿಷಾಭಯಾಃ ।
ಕಲಿಂಗಾತಿವಿಷಾ ಹಿಂಗು ಸೌವರ್ಚಲವಚಾಭಯಾಃ ॥
ಅಭಯಾಧಾನ್ಯಕಂ ಮುಸ್ತಂ ಬಾಲಕಂ ಬಿಲ್ವಮೇವ ಚ ।
ಮುಸ್ತಂ ಪರ್ಪಟಕಂ ಶುಂಠೀವಚಾಸಾತಿವಿಷಾಭಯಾಃ ॥
ಅಭಯಾತಿವಿಷಾಹಿಂಗುವಚಾಸೌವರ್ಚಲಂ ತಥಾ ।
ಚಿತ್ರಕಂ ಪಿಪ್ಪಲೀಮೂಲಂ ವಚಾಕಟುಕರೋಹಿಣೀ ॥
ಪಾಠಾವತ್ಸಕಬೀಜಾನಿ ಹರೀತಕ್ಯೋ ಮಹೌಷಧಮ್ ।
ಮೂರ್ವಾ ನಿರ್ದಹನೀ ಪಾಠಾ ತ್ರ್ಯೂಷಣಂ ಗಜಪಿಪ್ಪಲೀ
ಸಿದ್ಧಾರ್ಥಕಾ ಭದ್ರದಾರು ಶತಾಹ್ವಾ ಕಟುರೋಹಿಣೀ ।
ಏಲಾ ಸಾವರಕಂ ಕುಷ್ಠಂ ಹರಿದ್ರೇ ಕೌಟಜಾ ಯವಾಃ ॥

ಕಫವಾತಶಮ ಪಾಚನಯೋಗಗಳು

ಮೇಷಶೃಂಗೀ ತ್ವಗೇಲೇ ಚ ಕೃಮಿಘ್ನಂ ವೃಕ್ಷಕಾಣಿ ಚ |
ವೃಕ್ಷಾದನೀ ವೀರತರುರ್ಬೃಹತ್ಯೌ ದ್ವೇ ಸಹೇ ತಥಾ ||
ಏರಂಡತ್ವಕ್ಚ ತ್ರೈನ್ದುಕೀ ದಾಡಿಮೀ ಕೌಟಜೀ ಶಮೀ |
ಪಾಠಾ ತೇಜೋವತೀ ಮುಸ್ತಂ ಪಿಪ್ಪಲೀ ಕೌಟಜಂ ಫಲಮ್ ||
ಪಟೋಲದೀಪ್ಯಕೋ ಬಿಲ್ವಂ ಹರಿದ್ರೇ ದೇವದಾರು ಚ |
ವಿಡಂಗಮಭಯಾ ಪಾಠಾ ಶೃಂಗವೇರಂ ಘನಂ ವಚಾ ||
ವಚಾ ವತ್ಸಕಬೀಜಾನಿ ಸೈನ್ಧವಂ ಕಟುರೋಹಿಣೀ |
ಹಿಂಗುವತ್ಸಕಬೀಜಾನಿ ವಚಾ ಬಿಲ್ವಶಲಾಟು ಚ ||
ನಾಗರಾತಿವಿಷಾ ಮುಸ್ತಂ ಪಿಪ್ಪಲ್ಯೋ ವಾತ್ಸಕಂ ಫಲಮ್ |
ಮಹೌಷಧಂ ಪ್ರತಿವಿಷಾ ಮುಸ್ತಂ ಚೇತ್ಯಾಮಪಾಚನಾಃ ||
ಪ್ರಯೋಜ್ಯಾ ವಿಂಶತಿರ್ಯೋಗಾಃ ಶ್ಲೋಕಾರ್ಧವಿಹಿತಾಸ್ತ್ವಮೀ ||
(ಸು. 783.)

(1) ದೇವದಾರ, ಬಜೆ, ಭದ್ರಮುಷ್ಟಿ, ಶುಂಠಿ, ಅತಿವಿಡ, ಅಣಿಲೆಕಾಯಿ,—
(2) ಇಂದ್ರಜೇವಿ, ಅತಿವಿಡೆ, (ಹುರಿದ) ಇಂಗು, ಸೌವರ್ಚಲಲವಣ, ಒಜೆ, ಅಣಿಲೆಕಾಯಿ;—
(3) ಅಣಿಲೆಕಾಯಿ, ಕೊತ್ತುಂಬರಿ, ಭದ್ರಮುಷ್ಟಿ, ಮುಡಿವಾಳ, ಬಿಲ್ವಪತ್ರೆ;—
(4) ಭದ್ರಮುಷ್ಟಿ, ಪರ್ಪಾಟಕ, ಶುಂಠಿ, ಒಜೆ, ಅತಿವಿಡೆ, ಅಣಿಲೆಕಾಯಿ;—
(5) ಅಣಿಲೆಕಾಯಿ, ಅತಿವಿಡೆ, (ಹುರಿದ) ಇಂಗು, ಒಜೆ, ಸೌವರ್ಚಲಲವಣ;—
(6) ಚಿತ್ರಮೂಲ, ಹಿಪ್ಪಲಿಮೂಲ, ಒಜೆ, ಕಟುಕರೋಹಿಣಿ;—
(7) ಪಾಡಾವಳಿಗಡ್ಡೆ, ಇಂದ್ರಜೇವಿ, ಅಣಿಲೆಕಾಯಿ, ಶುಂಠಿ,—
(8) ಹೆಗ್ಗುರುಟಿಗೆಬೇರು (ಮಲ. ಪೆರುಕುರುಂಬ) ೨ ಪಾಲು, ಪಾಡಾವಳಿಗಡ್ಡೆ, ತ್ರಿಕಟು, ಗಜಹಿಪ್ಪಲಿ;—
(9) ಬಿಳೇಸಾಸುವೆ, ದೇವದಾರ, ಸಬ್ಬಸಿಗೆ, ಕಟುಕರೋಹಿಣಿ;—
(10) ಏಲಕ್ಕಿ, (ಸಾಬರ) ಲೋಧ್ರ, ಚಂಗಲಕೋಷ್ಠ, ಅರಸಿನ, ಮರದರಸಿನ, ಇಂದ್ರಜೇವಿ;—
(11) ಮೇಷಶೃಂಗಿ, ಲವಂಗಪಟ್ಟೆ, ಏಲಕ್ಕಿ, ವಾಯುವಿಳಂಗ, ಇಂದ್ರಜೇವಿ,—
(12) ನೆಲಕುಂಬಳಗಡ್ಡೆ, ಬಿಲ್ಲಪತ್ರೆಬೇರು, ಗುಳ್ಳದ ಬೇರು, ಕಿರಿಗುಳ್ಳದ ಬೇರು, ಕಾಡುಉದ್ದಿನ ಬೇರು, ಕಾಡುಹೆಸರಿನ ಬೇರು;—
(13) ಹರಳಚಕ್ಕೆ, ಬಂದದ ಮರದ ಚಕ್ಕೆ, ದಾಳಿಂಬದ ಕಾಯಿಯ ಸಿಪ್ಪೆ, ಕೊಡಸಿಗನ ಮರನ ಚಕ್ಕೆ, ಶಮಿಚಕ್ಕೆ,—
(14) ಪಾಡಾವಳಿಗಡ್ಡೆ, ತೇಜೋವತಿ (ಮಲ. ಚರುಪುನ್ನರಿ), ಭದ್ರಮುಷ್ಟಿ, ಹಿಪ್ಪಲಿ, ಇಂದ್ರಜೇವಿ;—
(15) ಕಹಿಪಡುವಲು, ಓಮ, ಬಿಲ್ವಪತ್ರೆಬೇರು, ಅರಸಿನ ಮರದರಸಿನ, ದೇವದಾರ;—

(16) ವಾಯುವಿಳಂಗ, ಅಣಿಲೆಕಾಯಿ, ಪಾಡಾವಳಿಗಡ್ಡೆ, ಶುಂಠಿ, ಭದ್ರಮುಷ್ಟಿ, ಬಜೆ;—

(17) ಬಜೆ, ಇಂದ್ರಜೀವಿ, ಸೈಂಧವಲವಣ, ಕಟುಕರೋಹಿಣಿ;—

(18) (ಹುರಿದ) ಇಂಗು, ಇಂದ್ರಜೀವಿ, ಬಜೆ, ಬಿಲ್ವಪತ್ರೆಯ ಎಳೇಕಾಯಿ;—

(19) ಶುಂಠಿ, ಅತಿವಿಡೆ, ಭದ್ರಮುಷ್ಟಿ, ಹಿಪ್ಪಲಿ, ಇಂದ್ರಜೀವಿ;—

(20) ಶುಂಠಿ, ಅತಿವಿಡೆ, ಭದ್ರಮುಷ್ಟಿ;—

ಇವು ಇಪ್ಪತ್ತು ಆಮಪಾಚನಕ್ಕೆ ಪ್ರಯೋಗಿಸಬೇಕಾದ ಯೋಗಗಳಾಗಿರುತ್ತವೆ

ಸೂ. ಈ ಯೋಗಗಳಲ್ಲಿ ತೀಕ್ಷ್ಣಕರವಾದ ಪದಾರ್ಥಗಳು ಹೆಚ್ಚು ಇರುವದರಿಂದ, ಆಮಶಂಕೆಯ ಲಕ್ಷಣಗಳು ಕಾಣುವ ಸಂದರ್ಭಗಳಲ್ಲಿ ಮತ್ತು ಪಿತ್ತಾತಿಸಾರದಲ್ಲಿ ಅವು ಹಿತವಾಗವು, ಕಫಾತಿಸಾರದಲ್ಲಿ ಅಜೀರ್ಣಪರಿಹಾರಕ್ಕೆ ಉತ್ತಮ. ಇದರನಂತರದ ಸಂಖ್ಯೆ ನೋಡಿ.

ಐದನೇ ಯೋಗದಲ್ಲಿ ಕಾಣುವ ೫ ಬಗೆಗಳಿಗೆ ಸೈಂಧವಲವಣವನ್ನು ಕೂಡಿಸಿ ಬಿಸಿ ನೀರಿನಿಂದ ಅರೆದು ಕುಡಿಸಿದರೆ, ಪಾಚನ ಉಂಟುಮಾಡಿ ಆಮಾತಿಸಾರವನ್ನು ನಾಶಮಾಡುತ್ತದೆ, ಮತ್ತು ಅದು ಅದರಿಂದ ಗುಣವಾಗದಿದ್ದರೆ, ಬೇರೆ ನೂರು ಯೋಗಗಳಿಂದಲೂ ಗುಣವಾಗದು ಎಂತ ಚಿ ಸಾ ಸಂ (ಪು 78) ಎರಡನೇ ಯೋಗದಲ್ಲಿ ಕಾಣುವ ಕಲಿಂಗಾದಿ [illegible] ಬಗೆಗಳ ಚೂರ್ಣವನ್ನು ಬಿಸಿ ನೀರಿನಲ್ಲಿ ಕದಡಿ ಪಾನಮಾಡುವದರಿಂದ ಶೂಲೆ, ಹೊಟ್ಟೆಯುಬ್ಬರ, ಮಲಬದ್ಧತೆ ಸಹ ಹೋಗಿ, ದೀಪನಪಾಚನ ಉಂಟಾಗುವವು ಎಂತ ಚಿ ಸಾ ಸಂ (ಪು. 79) ೬ನೇ ಯೋಗದಲ್ಲಿ 'ಸಿರ್ದಹಸೀ' ಎಂಬದಕ್ಕೆ 'ಸಿರ್ದಹನ' ಎಂತ ಪಾಠ ಇಟ್ಟು ಚಿತ್ರಮೂಲ ಎಂತ ಸಿ ಸಂ ವ್ಯಾ ಅರ್ಥ ಬರೆದದ್ದು ಕಾಣುತ್ತದೆ 'ಸಿರ್ದಹನ' ಎಂದರೆ ಗೇರುಕಾಯಿ, ಚಿತ್ರಮೂಲ ಅಲ್ಲ 'ಸಿರ್ದಹಸೀ' ಎಂಬದು ಮೂರ್ವಾಕ್ಕೇನೇ 'ಮೂರ್ವಾ' ಪ್ರತ್ಯೇಕ ಹೇಳಲ್ಪಟ್ಟಿರುವದರಿಂದ ಅದನ್ನು ಎರಡು ಸಾರಿ ಹಾಕಬೇಕಾಗುತ್ತದೆ ಗೇರುಕಾಯಿಯನ್ನು ಉಪಯೋಗಿಸುವವಾದರೆ ಅದನ್ನು ಶುದ್ಧಮಾಡಿಕೊಳ್ಳಬೇಕು ೯ನೇ ಯೋಗದಲ್ಲಿಯ 'ವೃಕ್ಷಾದನೀ' ಎಂಬದು ಅಶೋಕ, 'ವೀರತರು' ಎಂದರೆ 'ಶರ', ೧೪ನೇ ಯೋಗದ 'ತೇಜೋವತೀ'ಯು 'ಕಾಕಮರ್ದನಿಕಾ', ಎಂತ ಸಹ ಅದೇ ವ್ಯಾಖ್ಯೆ ಇದಕ್ಕೆಲ್ಲ ಆಧಾರ ತಿಳಿಯಲಿಲ್ಲ

20. ಡಿಮ್ಭೋ ಯಃ ಸ್ಥವಿರೋ ವಾಪಿ ವಾತಪಿತ್ತಾತ್ಮಕಶ್ಚ ಯಃ |
ಆಮಪಾಚನವಿಧಿಗೆ ಅರ್ಹರಲ್ಲದವರು ಕ್ಷೀಣಧಾತುಬಲಶ್ಚಾಪಿ ಬಹುದೋಷೋ ऽತಿವಿಸ್ರುತಃ ||
ಆಮೋ ऽಪಿ ಸ್ತಮ್ಭನೀಯಃ ಸ್ಯಾತ್ಪಾಚನಾನ್ಮರಣಂ ವ್ರಜೇತ್ ||
(ಚಿ. ಸಾ. ಸಂ. 77)

ಬಾಲಕ ಅಥವಾ ಮುದುಕ, ವಾತಪಿತ್ತಪ್ರಕೃತಿಯವ, ಧಾತು ಮತ್ತು ಬಲ ಕ್ಷೀಣವಾದವ, ಬಹು ದೋಷಗಳುಳ್ಳವ, ಅತಿಯಾಗಿ ಅತಿಸಾರವಾದವ, ಇವರ ಸಂಗತಿಯಲ್ಲಿ ಆಮವನ್ನಾದರೂ ಸ್ತಮ್ಭನಮಾಡತಕ್ಕದ್ದಲ್ಲದೆ, ಪಾಚನ ಮಾಡಿಸಿದರ ಮರಣ ಉಂಟಾಗುವದು.

21. ಯುಕ್ತೇ ऽನ್ನಕಾಲೇ ಕ್ಷುತ್‍ಕ್ಷಾಮಂ ಲಘೂನ್ಯನ್ನಾನಿ ಭೋಜಯೇತ್ |
ಅನ್ನಪಾನ ತಥಾ ಸ ಶೀಘ್ರಮಾಪ್ನೋತಿ ರುಚಿಮಗ್ನಿಬಲಂ ಬಲಮ್ ||
ನಿಯಮ. ತಕ್ರೇಣಾವನ್ತಿಸೋಮೇನ ಯವಾಗ್ವಾ ತರ್ಪಣೇನ ವಾ |
ಸುರಯಾ ಮಧುನಾ ಚಾದೌ ಯಥಾಸಾತ್ಮ್ಯಮುಪಾಚರೇತ್ ||
ಯವಾಗೂಭಿರ್ವಿಲೇಪೀಭಿಃ ಖಡ್ಯೈರ್ಯೂಷೈರಸೋದನೈಃ |
ದೀಪನಗ್ರಾಹಿಸಂಯುಕ್ತೈಃ ಕ್ರಮಶ್ಚ ಸ್ಯಾದತಃ ಪರಮ್ |
ಶಾಲಿಪರ್ಣೀಂ ಪೃಶ್ನಿಪರ್ಣೀಂ ಬೃಹತೀಂ ಕಣ್ಟಕಾರಿಕಾಮ್ |
ಬಲಾಂ ಶ್ವದಂಷ್ಟ್ರಾಂ ಬಿಲ್ವಾನಿ ಪಾಠಾಂ ನಾಗರಧಾನ್ಯಕಮ್ ||

ಶಟೀಂ ಪಲಾಶಂ ಹಪುಷಾಂ ವಚಾಂ ಜೀರಕಪಿಪ್ಪಲೀಮ್ ।
ಯವಾನೀಂ ಪಿಪ್ಪಲೀಮೂಲಂ ಚಿತ್ರಕಂ ಹಸ್ತಿಪಿಪ್ಪಲೀಮ್ ॥
ವೃಕ್ಷಾಮ್ಲಂ ದಾಡಿಮಾಮ್ಲಂ ಚ ಸಹಿಂಗುವಿಡಸೈಂಧವಮ್ ।
ಪ್ರಯೋಜಯೇದನ್ನಪಾನೇ ವಿಧಿನಾ ಸೂಪಕಲ್ಪಿತಮ್ ॥
ವಾತಶ್ಲೇಷ್ಮಹರೋ ಹ್ಯೇಷ ಗಣೋ ದೀಪನಪಾಚನಃ ।
ಗ್ರಾಹೀ ಬಲ್ಯೋ ರೋಚನಶ್ಚ ತಸ್ಮಾಚ್ಛಸ್ತೋಽತಿಸಾರಿಣಾಮ್ ॥ (ಚ. 560)

(ಲಂಘನಾದಿ ಆದ್ಯ ಉಪಚಾರಗಳಿಂದ) ಹಸಿವೆಯುಂಟಾಗಿ ಒಳಲಿದವನಿಗೆ ಯುಕ್ತವಾದ ಉಣ್ಣುವ ಹೊತ್ತಿನಲ್ಲಿ ಲಘುವಾದ ಅನ್ನಗಳನ್ನು ಕೊಟ್ಟು ಉಣ್ಣಿಸತಕ್ಕದ್ದು, ಅದರಿಂದ ಅವನಿಗೆ ಬೇಗನೆ ರುಚಿ, ಅಗ್ನಿಬಲ ಮತ್ತು ಬಲ ಉಂಟಾಗುತ್ತವೆ. ಅವನಿಗೆ ಮುಂದಾಗಿ (ಬಾಯಾರಿಕೆಗೆ) ಮಜ್ಜಿಗೆ (ವಸ್ತ್ರದಿಂದ ಶೋಧಿಸಿದ ಮಜ್ಜಿಗೆ ಎಂತ ಅ. ಸಂ. II-192), ಹುಳಿ ಗಂಜಿನೀರು, ಯವಾಗೂಗಂಜಿಯ ನೀರು, ಅಥವಾ ಕಳ್ಳು ಮತ್ತು ದ್ರಾಕ್ಷೆಯ ಮದ್ಯ, ಇವುಗಳೊಳಗೆ ಯಾವದು ಅವನಿಗೆ ಒಗ್ಗುತ್ತದೋ ಅದನ್ನು ಕೊಟ್ಟು ಉಪಚಾರಮಾಡತಕ್ಕದ್ದು, ಅನಂತರ ದೀಪನ ಮತ್ತು ಗ್ರಾಹಿ ಗುಣಗಳುಳ್ಳ ಔಷಧಗಳನ್ನು ಕೂಡಿಸಿ ತಯಾರಿಸಲ್ಪಟ್ಟ ಯವಾಗೂಗಳಿಂದ ಅಥವಾ ವಿಲೇಪಿಗಳಿಂದ (ಇವೆರಡು ಗಂಜಿಭೇದಗಳು), ಮತ್ತು ಆ ಔಷಧಗಳನ್ನು ಸೇರಿಸಿ ಮಾಡಿದ ಖಡಗಳು (ಪಳಿದ್ಯಗಳು), ಸಾರುಗಳು, ಮಾಂಸರಸಗಳು, ಇವುಗಳೊಂದಿಗೆ ಅನ್ನಗಳನ್ನು ಕೊಟ್ಟು, ಉಪಚರಿಸುವದು ಕ್ರಮವಾಗಿರುತ್ತದೆ. ಮೂವೆಲೆ ಬೇರು, ಓರೆಲೆಬೇರು ಗುಳ್ಳದ ಬೇರು, ಕಿರಿಗುಳ್ಳದ ಬೇರು, ಕಲ್ಲಂಗಡಲೆಬೇರು, ನೆಗ್ಗಿಲ ಮುಳ್ಳು, ಬಿಲ್ವಪತ್ರೆಯ ಎಳೇ ಕಾಯಿಗಳು, ಪಾಡಾವಳಿಗಡ್ಡೆ, ಶುಂಠಿ, ಕೊತ್ತುಂಬರಿ, ಸಣ್ಣ ಕಚೋರ, ಪಲಾಶದ ಬೇರು, ಹಬುಷ (ಹಬ್ಬೆ), ಬಜೆ, ಜೀರಿಗೆ, ಹಿಪ್ಪಲಿ, ಓಮ ಹಿಪ್ಪಲಿ ಮೂಲ, ಚಿತ್ರಮೂಲ, ಗಜಹಿಪ್ಪಲಿ, ಮುರುಗಿನಹುಳಿ, ದಾಳಿಂಬದ ಹುಳಿ, ಇಂಗು, ವಿಡಲವಣ, ಸೈಂಧವಲವಣ, ಇವುಗಳನ್ನು ಸೇರಿಸಿ ವಿಧಿಪ್ರಕಾರ ತೋವೆ (ಸೂಪ) ಮಾಡಿ ಅನ್ನಪಾನಗಳಿಗೆ ಪ್ರಯೋಗಿಸತಕ್ಕದ್ದು. ಈ ಗಣವು ವಾತಕಫಹರವಾದ್ದು, ದೀಪನಪಾಚನಗಳನ್ನು ಮಾಡತಕ್ಕಂಥಾದ್ದು, ಗ್ರಾಹೀ (ಮಲ ಕಟ್ಟಿಸುವಂಥಾದ್ದು), ಬಲಕಾರಿ ಮತ್ತು ರುಚಿಕರ; ಆದ್ದರಿಂದ ಅದು ಅತಿಸಾರರೋಗಿಗಳಿಗೆ ಪ್ರಶಸ್ತವಾದ್ದು.

ಪರಾ ಖಡ(ಪಳಿದ್ಯ)ದ ವರ್ಣನಕ್ಕೆ ಮುಂದಿನ 22ನೇ ಸಂಖ್ಯೆ ನೋಡಿ

ಭೋಜನಕ್ಕೆ ಮೊದಲು ಕೊಡಬೇಕಾಗಿ ಹೇಳಲ್ಪಟ್ಟ ಯವಾಗೂತರ್ಪಣಕ್ಕೆ ಔಷಧ ಹೇಳಲ್ಪಡದ್ದರಿಂದ ಅದರೊಂದಿಗೆ ಮಜ್ಜಿಗೆ ಮೊದಲಾದ ಹುಳಿ ದ್ರವಗಳೊಳಗೊಂದನ್ನು ಕೂಡಿಸಿಯೇ ಕೊಡಬೇಕಾದ್ದು ಎಂತ ತಿಳಿಯಬೇಕು ತೋವೆಯು ತಳ್ಳಗಾಗಿ ಮಾಡಲ್ಪಟ್ಟಾಗ್ಯೂ ಕುಡಿಯಲಿಕ್ಕೆ ಯೋಗ್ಯವಲ್ಲದ್ದರಿಂದ ಶಾಲಪರ್ಣ್ಯಾದಿಗಣದ ಔಷಧಗಳಿಂದ ಪಾನೀಯಕಷಾಯವನ್ನು ಮಾಡಿ ಆ ಕಷಾಯವನ್ನು ಪಾನಕ್ಕೂ, ತೋವೆಮಾಡುವದಕ್ಕೂ ಉಪಯೋಗಿಸಬೇಕೆಂಬದೇ ತಾತ್ಪರ್ಯವಾಗಿರಬೇಕು ಅದಲ್ಲದೆ ಹಿಂದೆ ಯವಾಗ್ವಾದಿಗಳಿಗೆ ಉಪಯೋಗಿಸಬೇಕಾಗಿ ಹೇಳಲ್ಪಟ್ಟ ದೀಪನ ಗ್ರಾಹಿ ದ್ರವ್ಯಗಳಿಗೆ ಉದಾಹರಣವಾಗಿ ಶಾಲಪರ್ಣ್ಯಾದಿಗಣವು ಉಕ್ತವಾಗಿದೆ ಎಂತ ತಿಳಿಯಬೇಕು ಈ ಗಣದ ಔಷಧಗಳನ್ನೆಲ್ಲ ಒಟ್ಟಾಗಿ, ಅಥವಾ ದೋಷಾದಿ ವಿಚಾರದ ಮೇಲೆ ಅವುಗಳೊಳಗೆ ಬೇಕಾದವುಗಳನ್ನು ಮಾತ್ರ, ಗಂಜಿ, ಸಾರು, ತೋವೆ, ಪಳಿದ್ಯ, ಮಾಂಸರಸ, ಮುಂತಾದ ಕಲ್ಪನಗಳಿಗೆ ಯುಕ್ತವಾದ ಕ್ರಮಗಳಿಂದ ಮತ್ತು ಪ್ರಮಾಣಗಳಿಂದ ಉಪಯೋಗಿಸುವದು. ತಕ್ರಾದಿಗಳನ್ನು ಊಟದನಂತರ ಬಾಯಾರಿಕೆಗೆ ಕೊಡುವದಕ್ಕೆ ಹೇಳಿದ್ದೆಂಬ ಇಂದು ವ್ಯಾಖ್ಯೆಯು (ಅ. ಸಂ II-182) ಮೂಲವಚನಕ್ಕೆ ವಿರುದ್ಧವಾಗಿ ಕಾಣುತ್ತದೆ

22. ಮುದ್ಗಯೂಷರಸಂ ತಕ್ರಂ ಧಾನ್ಯಜೀರಕಸಂಯುತಮ್ ।
ಖಡಯೂಷಮಿತಿ ಪ್ರೋಕ್ತಂ ಸೈನ್ಧವೇನ ಸಮನ್ವಿತಮ್ ॥
ಅಗ್ನಿಸಂದೀಪನಂ ಪ್ರೋಕ್ತಂ ಗ್ರಹಣೀದೋಷನಾಶನಮ್ ।
ಅರೋಚಕೇ ಜ್ವರೇ ಚೈವ ಶ್ರೇಷ್ಠಮೇತತ್ಪ್ರವಾಹಿಕೇ ॥
(ಚಿ. ಸಾ. ಸಂ. 76)

ಖಡಯೂಷದ ಕ್ರಮ

ಹೆಸರಿನ ಸಾರಿನ ಕಟ್ಟಿಗೆ ಮಜ್ಜಿಗೆ, ಕೊತ್ತುಂಬರಿ, ಜೀರಿಗೆ, ಸೈಂಧವಲವಣ ಕೂಡಿಸಿ ಮಾಡಿದ ಪಳಿದ್ಯಕ್ಕೆ ಖಡಯೂಷ ಎನ್ನುತ್ತಾರೆ. ಅದು ಅಗ್ನಿಯನ್ನು ಚುರುಕುಮಾಡಿ, ಗ್ರಹಣೀದೋಷವನ್ನು ನಾಶಮಾಡುತ್ತದೆ; ಅರುಚಿ, ಜ್ವರ, ಪ್ರವಾಹಿಕೆ, ಇವುಗಳಲ್ಲಿ ಶ್ರೇಷ್ಠವಾದ್ದು.

23. ಪಯಸ್ಯುತ್ಕ್ವಾಥ್ಯ ಮುಸ್ತಾನಾಂ ವಿಂಶತಿಂ ತ್ರಿಗುಣಾಂಭಸಿ ।
ಕ್ಷೀರಾವಶಿಷ್ಟಂ ತತ್ಪೀತಂ ಹನ್ತ್ಯಾಮಂ ಶೂಲಮೇವ ಚ ॥ (ಸು. 784)

ಭದ್ರಮುಷ್ಟಿಯ ಹಾಲುಕಷಾಯ

ಇಪ್ಪತ್ತು ಭದ್ರಮುಷ್ಟಿಗಡ್ಡೆಗಳನ್ನು ಹಾಲಿನಲ್ಲಿ ಹಾಕಿ, ಮೂರು ಪಾಲಷ್ಟು ನೀರು ಕೂಡಿಸಿ, ಹಾಲು ಮಾತ್ರ ಉಳಿಯುವಂತೆ, ಕುದಿಸಲ್ಪಟ್ಟ ಹಾಲುಕಷಾಯವು ಆಮವನ್ನೂ, ಶೂಲೆಯನ್ನೂ ನಾಶಮಾಡುವದು

ಸೂಚನೆ: ಚಿ ಸಾ ಸಂ ದಲ್ಲಿ ಇದು ಪಿತ್ತಾನುಬಂಧವುಳ್ಳ ಆಮದ ಪಾಚನಗಳೊಳಗೆ ಸೇರಿಸಲ್ಪಟ್ಟಿದೆ. ಭದ್ರಮುಷ್ಟಿ ೧ಕ್ಕೆ ಹಾಲು ೮ ಪಲ, ನೀರು ೨೪ ಪಲ ಕೂಡಿಸುವದು

24. ನಿವೃತ್ತೇಷ್ವಾಮಶೂಲೇಷು ಯಸ್ಯ ನ ಪ್ರಗುಣೋಽನಿಲಃ ।
ಸ್ತೋಕಂ ಸ್ತೋಕಂ ರುಜಾವಚ್ಚ ಸಶೂಲಂ ಯೋಽತಿಸಾರ್ಯತೇ ॥
ಸಕ್ಷಾರಲವಣೈರ್ಯುಕ್ತಂ ಮನ್ದಾಗ್ನಿಃ ಪ್ರಪಿಬೇದ್ ಘೃತಮ್ ।
ಕ್ಷೀ(’ಕ್ಷಾ)ರನಾಗರಚಾಂಗೇರೀಕೋಲದಧ್ಯಮ್ಲಸಾಧಿತಮ್ ॥
ಸರ್ಪಿರಚ್ಛಂ ಪಿಬೇದ್ವಾಪಿ ಶೂಲಾತಿಸಾರಶಾಂತಯೇ ॥ (ಸು. 784)

ಪಕ್ವಾತಿಸಾರದ ಶೂಲೆಗೆ ಘೃತದ ಉಪಯೋಗ

ಆಮಶೂಲೆಗಳು ನಿವೃತ್ತಿಯಾದ ಮೇಲೆ ವಾಯುವು ಸರಿಯಾಗದೆ, ಶೂಲೆ ಮತ್ತು ನೋವಿನೊಂದಿಗೆ ಅಲ್ಪಾಲ್ಪವಾಗಿ ಯಾವನಿಗೆ ಅತಿಸಾರವಾಗುತ್ತದೋ, ಅಂಥಾ ಮಂದಾಗ್ನಿಯುಳ್ಳ ರೋಗಿಗೆ ಯವಕ್ಷಾರ ಮತ್ತು ಸೈಂಧವಲವಣ ಕೂಡಿಸಿದ ತುಪ್ಪವನ್ನು, ಅಥವಾ ಯವಕ್ಷಾರ, ಶುಂಠಿ, ಪುಲ್ಲಂಪುರಚಿ, ಬೊಗರಿಹಣ್ಣು, ಮೊಸರಿನ ಹುಳಿ, ಇವುಗಳಿಂದ ಕಾಯಿಸಿದ ತುಪ್ಪವನ್ನು ಕುಡಿಸಬೇಕು, ಅಥವಾ, ಶೂಲೆಯುಳ್ಳ ಅತಿಸಾರ ಶಾಂತವಾಗುವದಕ್ಕಾಗಿ ಸ್ವಚ್ಛ ತುಪ್ಪವನ್ನೇ ಕುಡಿಸುವದು.

ಸೂಚನೆ: ೨ನೇ ಯೋಗದಲ್ಲಿ ಪಾಲಿನ ಸ್ಥಾನದಲ್ಲಿ ಕ್ಷಾರ (ಯವಕ್ಷಾರ, ಹೇಳಿ, ಶುಂಠಿ ಮತ್ತು ಯವಕ್ಷಾರವನ್ನು ಕಲ್ಕವಾಗಿ ಉಪಯೋಗಿಸಬೇಕಾಗಿ ಚಿ ಸಾ ಸಂ (ಪು 70-80) 'ಕ್ಷಾರ' ಎಂಬ ಪದವನ್ನೇ ಇಟ್ಟರೆ, ೧ನೇ ಯೋಗದ ಕ್ಷಾರಲವಣಗಳನ್ನು ಮತ್ತು ೨ನೇ ಯೋಗದ ನಾಗರಾದಿಗಳನ್ನು ಹಾಲಿನೊಂದಿಗೆ ಕೂಡಿಸಿ, ಒಟ್ಟಾಗಿ ಒಂದೇ ತುಪ್ಪವನ್ನು ಕಾಯಿಸಬೇಕಾಗುತ್ತದೆ ಉಪ್ಪು ಮತ್ತು ಹುಳಿಗಳು ಕೂಡಿದ ಯೋಗದಲ್ಲಿ ಹಾಲನ್ನು ಸೇರಿಸಿರುವದು ಅಸಂಭವವಾಗಿ ಕಾಣುತ್ತದೆ. ಮುಂದಿನ 29ನೇ ಸಂಖ್ಯೆ ನೋಡಿ

25. ನಿಖಿಲೋ ವಿಧಿರುಕ್ತೋಽಯಂ ವಾತಶ್ಲೇಷ್ಮೋಪಶಾಂತಯೇ |
ತೀಕ್ಷ್ಣೋಷ್ಣವರ್ಜ್ಯಮೇನನ್ತು ವಿದಧ್ಯಾತ್ಪಿತ್ತಜೇ ಭಿಷಕ್ ||
ಯಥೋಕ್ತಮುಪವಾಸಾನ್ತೇ ಯವಾಗೂಶ್ಚ ಪ್ರಶಸ್ಯತೇ |
ಬಲಯೋರಂಶುಮತ್ಯಾಂ ಚ ಶ್ವದಂಷ್ಟ್ರಾಬೃಹತೀಷು ಚ ||
ಶತಾವರ್ಯಾಂ ಚ ಸಂಸಿದ್ಧಾಃ ಸುಶೀತಾ ಮಧುಸಂಯುತಾಃ |
ಮುದ್ಗಾದಿಷು ಚ ಯೂಷಾಃ ಸ್ಯುರ್ದೀಪನೈಃ(?ಶ್ಚ) ಸುಸಂಸ್ಕೃತಾಃ ||
ಮೃದುಭಿರ್ದೀಪನೈಸ್ತಿಕ್ತೈರ್ದ್ರವ್ಯೈಃ ಸ್ಯಾದಾಮಪಾಚನಮ್ |
ಹರಿದ್ರಾತಿವಿಷಾಪಾಠಾವತ್ಸಬೀಜರಸಾಂಜನಮ್ ||
ರಸಾಂಜನಂ ಹರಿದ್ರೇ ದ್ವೇ ಬೀಜಾನಿ ಕುಟಜಸ್ಯ ಚ |
ಪಾಠಾ ಗುಡೂಚೀ ಭೂನಿಮ್ಬಸ್ತಥೈವ ಕಟುರೋಹಿಣೀ ||
ಏತೈಃ ಶ್ಲೋಕಾರ್ಧನಿರ್ದಿಷ್ಟೈಃ ಕ್ವಾಥಾಃ ಸ್ಯುಃ ಪಿತ್ತಪಾಚನಾಃ ||
(ಸು. 784, 785)

ಪೈತ್ತಿಕ ಆಮಪಾಚನಕ್ಕೆ ಯೋಗಗಳು.

ಈ ಮೊದಲು ಹೇಳಲ್ಪಟ್ಟ ವಿಧಿ ಪೂರಾ ವಾತಕಫಗಳ ಶಾಂತಿಗೆ ಯುಕ್ತವಾದ್ದು. ಪೈತ್ತಿಕ ಅತಿಸಾರದಲ್ಲಿ ತೀಕ್ಷ್ಣೋಷ್ಣ ಔಷಧಗಳನ್ನು ಬಿಟ್ಟು ಅದೇ ವಿಧಿಯನ್ನು ಹೇಳಿದ ಪ್ರಕಾರ ವೈದ್ಯನು ನಡಿಸತಕ್ಕದ್ದು ಉಪವಾಸ ಮಾಡಿಸಿದ ಮೇಲೆ, ಕಲ್ಲಂಗಡಲೆಬೇರು, ಆನೆ ಕಲ್ಲಂಗಡಲೆಬೇರು, ಮತ್ತು ಮೂವೆಲೆಬೇರು, ಅಥವಾ ನೆಗ್ಗಿಲು, ಗುಳ್ಳದ ಬೇರು, ಮತ್ತು ಕಿರಿಗುಳ್ಳದ ಬೇರು, ಅಥವಾ ಶತಾವರಿಬೇರು, (ಅಥವಾ ಇವುಗಳೆಲ್ಲವನ್ನು) ಹಾಕಿ ಮಾಡಿದ ಯವಾಗೂಗಂಜಿಯನ್ನು ಚನ್ನಾಗಿ ತಣಿಸಿ, ಜೇನು ಕೂಡಿಸಿ, ಕೊಡುವದು ಪ್ರಶಸ್ತವಾಗಿರುತ್ತದೆ. ಹೆಸರುಬೇಳೆ ಮುಂತಾದವುಗಳ ಸಾರುಗಳನ್ನು ದೀಪನಕರವಾದ (ಇದೇ) ದ್ರವ್ಯಗಳಿಂದ ಪರಿಷ್ಕರಿಸಿ ಕೊಡುವದು. ಮೃದುವಾಗಿ ದೀಪನಕರವಾದ ಮತ್ತು ಕಹಿಯಾದ ದ್ರವ್ಯಗಳಿಂದ ಆಮ ಪಾಚನವಾಗಬೇಕು. (೧) ಅರಸಿನ, ಅತಿವಿಷೆ, ಪಾಡಾವಳಿಗಡ್ಡೆ, ಇಂದ್ರಜೇವಿ, ರಸಾಂಜನ; (೨) ರಸಾಂಜನ, ಅರಸಿನ, ಮರದರಸಿನ, ಇಂದ್ರಜೇವಿ, (೩) ಪಾಡಾವಳಿ ಗಡ್ಡೆ, ಅಮೃತಬಳ್ಳಿ, ನೆಲಬೇವು, ಕಟುಕರೋಹಿಣಿ, ಈ ಮೂರು ಕಷಾಯಯೋಗಗಳು ಪಿತ್ತ(ಅತಿಸಾರ)ವನ್ನು ಪಾಚನಮಾಡುವಂಥವು.

ಪಠಾ: ೬ನೇ ಶ್ಲೋಕದ ಕೊನೆಯ ಚರಣಕ್ಕೆ 'ದ್ರವ್ಯೈರೇತೈಃ ಸುಸಂಸ್ಕೃತಾಃ' ಎಂಬದು ಪಾಠಾಂತರ

ದಲೋತ್ಥಃ ಸ್ವರಸಃ ಪೇಯೋ ಹಿಜ್ಜಲಸ್ಯ ಸಮಾಕ್ಷಿಕಃ |
ಜಯತ್ಯಾಮಮತೀಸಾರಂ ಕ್ವಾಥೋ ವಾ ಕುಟಜತ್ವಚಃ ||
(ಚಿ. ಸಾ. ಸಂ. 79)

ಸಮುದ್ರಫಲ(?)ದ ಮರನ ಎಲೆಗಳ ರಸವನ್ನಾಗಲಿ, ಕೊಡಸಿಗನ ಚಕ್ಕೆಯ ಕಷಾಯವನ್ನಾಗಲಿ, ಜೇನು ಕೂಡಿಸಿಕೊಂಡು, ಪಾನಮಾಡುವದರಿಂದ ಆಮಾತಿಸಾರವು ಶಾಂತವಾಗುವದು.

ಪಠಾ: ಪಿತ್ತಾತಿಸಾರದಲ್ಲಿ ನಿದಾನ, ಉಪಶಯ ಮತ್ತು ಲಕ್ಷಣಗಳಿಂದ ಆಮಯುಕ್ತವಾದ್ದನ್ನು ತಿಳಿದು, ಅದಕ್ಕೆ ಬಲ ನೋಡಿಕೊಂಡು, ಲಂಘನ ಪಾಚನ ಕ್ರಮಗಳಿಂದ ಉಪಚಾರ ಮಾಡತಕ್ಕದು ಎಂತ ಚ. (ಪು 562)

26. ಏರಂಡರಸಸಂಪಿಷ್ಟಂ ಪಕ್ವಮಾಮಂ ಚ ನಾಗರಮ್ ।
ಆಮಾತಿಸಾರಶೂಲಘ್ನಂ ದೀಪನಂ ಪಾಚನಂ ತಥಾ ॥
(ಚಿ. ಸಾ. ಸಂ. 78)

ಆಮಾತಿಸಾರದ ಶೂಲಿಗೆ ಪ್ರತಿಕ್ರಿಯೆ

ಹಸೀ ಶುಂಠಿಯನ್ನು ಪುಟಕ್ಕಿಟ್ಟು ಪಕ್ವಮಾಡಿ, ಹರಳುಬೇರಿನ ಕಷಾಯದೊಂದಿಗೆ ಅರೆದು ಪಾನಮಾಡಲು, ಆಮಾತಿಸಾರದ ಶೂಲೆ ಪರಿಹಾರವಾಗುವದು ಮತ್ತು ದೀಪನ-ಪಾಚನ ಉಂಟಾಗುವದು.

ಚಿತ್ರಕಂ ಪಿಪ್ಪಲೀಮೂಲಂ ವಚಾ ಕಟುಕರೋಹಿಣೀ ।
ಪಾಠಾ ವತ್ಸಕಬೀಜಾನಿ ಹರೀತಕ್ಯೋ ಮಹೌಷಧಮ್ ॥
ಏತದಾಮಸಮುತ್ಥಾನಮತೀಸಾರಂ ಸವೇದನಮ್ ।
ಕಫಾತ್ಮಕಂ ಸಪಿತ್ತಂ ಚ ಸವಾತಂ ಹನ್ತಿ ವೈ ಧ್ರುವಮ್ ।
(ಚಿ. ಸಾ. ಸಂ. 78)

ಚಿತ್ರಮೂಲ, ಹಿಪ್ಪಲಿಮೂಲ, ಬಜೆ, ಕಟುಕರೋಹಿಣಿ, ಪಾಡಾವಳಿಗಡ್ಡೆ, ಇಂದ್ರಜೀವಿ, ಅಣಿಲೆಕಾಯಿ, ಶುಂಠಿ, ಈ ಔಷಧಗಳ ಯೋಗವು ವೇದನೆಯುಳ್ಳ ಕಫಾತ್ಮಕವಾದ ಆಮಾತಿಸಾರವನ್ನು, ವಾತ ಮತ್ತು ಪಿತ್ತ ಕೂಡಿರುವಂಥಾದ್ದಾದಾಗ್ಯೂ, ನಿಶ್ಚಯವಾಗಿ ನಾಶ ಮಾಡುತ್ತದೆ.

ಸಂ॰ ಈ ಯೋಗದ ಔಷಧಗಳನ್ನು ಕಷಾಯವಾಗಿ, ಕಲ್ಕವಾಗಿ, ಅಥವಾ ಲೇಹವಾಗಿ ಉಪಯೋಗಿಸಬಹುದು

ಧಾನ್ಯನಾಗರಮುಸ್ತಂ ಚ ಬಾಲಕಂ ಬಿಲ್ವಮೇವ ಚ ।
ಆಮಶೂಲವಿಬಂಧಘ್ನಂ ಪಾಚನಂ ವಹ್ನಿದೀಪನಮ್ ॥
ಪಿತ್ತೇ ಧಾನ್ಯಚತುಷ್ಕಂ ಚ ಶುಂಠೀತ್ಯಾಗಾದ್ವದನ್ತಿ ಹಿ ॥
(ಚಿ. ಸಾ. ಸಂ. 78)

ಕೊತ್ತುಂಬರಿ, ಶುಂಠಿ, ಭದ್ರಮುಷ್ಟಿ, ಮುಡಿವಾಳ ಮತ್ತು ಬಿಲ್ವಪತ್ರೆಯ ಎಳೇಕಾಯಿ, ಇವುಗಳ ಉಪಯೋಗವು ಆಮದ ಶೂಲೆಯನ್ನೂ, ಬದ್ಧತೆಯನ್ನೂ, ನಾಶಮಾಡುವದು, ಪಾಚನಕಾರಿ, ಮತ್ತು ಅಗ್ನಿದೀಪನವನ್ನುಂಟುಮಾಡುವದು ಪೈತ್ತಿಕ ಆಮಾತಿಸಾರದಲ್ಲಿ ಶುಂಠಿಯನ್ನು ಬಿಟ್ಟು, ಉಳಿದ ನಾಲ್ಕು ಬಗೆಗಳನ್ನು ಉಪಯೋಗಿಸಬೇಕಾಗಿ ಹೇಳುತ್ತಾರೆ.

ಸಂ॰ ಈ ಯೋಗದ ಔಷಧಗಳನ್ನು ಗಂಜಿಗೂ ಉಪಯೋಗಿಸಬಹುದು

27. ಅಭಯಾ ನಾಗರಂ ಮುಸ್ತಂ ಗುಡೇನ ಸಹ ಯೋಜಿತಮ್ ।
ಚತುಃಸಮೇಯಂ ಗುಟಿಕಾ ತ್ರಿದೋಷಘ್ನೀ ಪ್ರಕೀರ್ತಿತಾ ॥
ಆಮಾತಿಸಾರಮಾನಾಹಂ ಸವಿಬನ್ಧಂ ವಿಸೂಚಿಕಾಮ್ ।
ಕೃಮಿಪಾನರೋಚಕಂ ಹನ್ಯಾದ್ದೀಪಯತ್ಯಾಶು ಚಾನಲಮ್ ॥
(ಚಿ. ಸಾ. ಸಂ. 79)

ಚತುಃಸಮಾ ಗುಟಿಕಾ

ಅಣಿಲೆಕಾಯಿಯ ಸಿಪ್ಪೆ, ಶುಂಠಿ, ಭದ್ರಮುಷ್ಟಿ, ಬೆಲ್ಲ, ಸಹ ಸಮಾಂಶವಾಗಿ ತೆಗೆದುಕೊಂಡು, ಅವುಗಳೊಳಗೆ ಬೆಲ್ಲ ಬಿಟ್ಟು ಉಳಿದ ಮೂರು ಬಗೆಗಳನ್ನು ವಸ್ತ್ರಗಾಲಿತ ಚೂರ್ಣ

ಮಾಡಿ, ಆ ಚೂರ್ಣವನ್ನು ಆ ಬೆಲ್ಲದೊಂದಿಗೆ ಅರೆದು ಗುಳಿಗೆ ಮಾಡಿಟ್ಟುಕೊಂಡು, ಸೇವಿಸುವದು. ಇದು ತ್ರಿದೋಷಹರವಾದ್ದೆಂತ ಕೀರ್ತಿಗೊಂಡದೆ; ಆಮಾತಿಸಾರ, ಆನಾಹ, ಮಲಬದ್ಧತೆ, ವಿಸೂಚಿಕೆ, ಕೃಮಿ, ಅರುಚಿ, ಇವುಗಳನ್ನು ನಾಶಮಾಡುವದು; ಮತ್ತು ಅಗ್ನಿಯನ್ನು ಬೇಗನೆ ಚುರುಕುಮಾಡುತ್ತದೆ.

28. ಗುದನಿಃಸರಣೇ ಶೂಲೇ ಪಾನಮಮ್ಲಸ್ಯ ಸರ್ಪಿಷಃ |
ಪ್ರಶಸ್ಯತೇ ನಿರಾಮಾಣಾಮಥವಾಪ್ಯನುವಾಸನಮ್ || (ಚ. 561)

ಗುದ ಹೊರಗೆ ಬಂದದ್ದಕ್ಕೆ ಪ್ರತಿಕ್ರಿಯೆ.

ಆಸನ ಹೊರಗೆ ಬಂದ ಶೂಲೆಗೆ, ಅತಿಸಾರದಲ್ಲಿ ಆಮಲಕ್ಷಣವಿಲ್ಲದಿದ್ದರೆ, ಹುಳಿರಸಗಳನ್ನು ಸೇರಿಸಿ ಕಾಯಿಸಿದ ತುಪ್ಪವನ್ನು ಪಾನಮಾಡಿಸುವದು, ಅಥವಾ ಅದರಿಂದ ಅನುವಾಸನ ಮಾಡಿಸುವದು ಸಹ, ಪ್ರಶಸ್ತವಾಗಿರುತ್ತದೆ.

ಷರಾ ಹುಳಿರಸಗಳು ಎಂದರೆ ಚಾಂಗೇರಿ ಮೊದಲಾದವುಗಳ ರಸಗಳು (29ನೇ ಸಂಖ್ಯೆ ನೋಡಿ) ಈ ಘೃತವನ್ನು ಗುದಕ್ಕೆ ತೊಡೆಯುವದಕ್ಕೂ ಉಪಯೋಗಿಸಬಹುದು 31ನೇ ಸಂಖ್ಯೆ ನೋಡಿ

29. ಚಾಂಗೇರೀಕೋಲದಧ್ಯಮ್ಲನಾಗರಕ್ಷಾರಸಂಯುತಮ್ |
ಘೃತಮುತ್ಕ್ವಥಿಕಂ ಪೇಯಂ ಗುದಭ್ರಂಶರುಜಾಪಹಮ್ || (ಚ. 561)

ಗುದಭ್ರಂಶಕ್ಕೆ ಚಾಂಗೇರೀಘೃತ.

ಪುಲ್ಲಂಪುರುಚೆಯ (ಮ.ಲ. ಪುಳಿಯಾರಲ್) ರಸ, (ಹುಳಿ) ಬೊಗರಿರಸ, ಮೊಸರಿನ ಹುಳಿನೀರು, ಇವುಗಳಲ್ಲಿ ಶುಂಠಿ ಮತ್ತು ಯವಕ್ಷಾರ(ದ ಕಲ್ಕ)ದೊಂದಿಗೆ ಕಾಯಿಸಲ್ಪಟ್ಟ ತುಪ್ಪವನ್ನು ಪಾನಮಾಡುವದರಿಂದ ಗುದಭ್ರಂಶವ್ಯಾಧಿಯು ತೊಲಗುವದು.

ಷರಾ ಬೊಗರಿಹಣ್ಣಿನ ರಸವಿಲ್ಲದಲ್ಲಿ ಒಣಗಿಸಿಟ್ಟ ಬೊಗರಿಹಣ್ಣಿನ ಸಿಪ್ಪೆಯ ಕಷಾಯವನ್ನು, ಅದೂ ಇಲ್ಲದಾಗ್ಗೆ ಬೊಗರಿಮರನ ಚಕ್ಕೆಯ ಕಷಾಯವನ್ನು, ಉಪಯೋಗಿಸುವದು ಹುಳಿ ದ್ರವಗಳು ಮೂರು ಸೇರಿ ತುಪ್ಪಕ್ಕೆ ಸಮಪಾಲು ಎಂತ ಇಂ ವ್ಯಾ (ಅ. ಸಂ II-194)

30. ಸಚವ್ಯಪಿಪ್ಪಲೀಮೂಲಂ ಸವ್ಯೋಷಬಿಡದಾಡಿಮಮ್ |
ಪೇಯಮಮ್ಲಂ ಘೃತಂ ಯುಕ್ತ್ಯಾ ಸಧಾನ್ಯಾಜಾಜಿಚಿತ್ರಕಮ್ ||
(ಚ. 561)

ಗುದಭ್ರಂಶಕ್ಕೆ ಚವ್ಯಾದಿಘೃತ.

ಕಾಡುಮೆಣಸಿನ ಬೇರು, ಹಿಪ್ಪಲಿಮೂಲ, ತ್ರಿಕಟು, ವಿಡಲವಣ, ದಾಳಿಂಬದ ಸಿಪ್ಪೆ, ಕೊತ್ತುಂಬರಿ, ಜೀರಿಗೆ, ಚಿತ್ರಮೂಲ, ಇವುಗಳಿಂದ (ಕಲ್ಕ), ಹುಳಿರಸಗಳೊಂದಿಗೆ, ಕಾಯಿಸಲ್ಪಟ್ಟ ತುಪ್ಪವನ್ನು (ಪ್ರಮಾಣ) ಯುಕ್ತಿಯಿಂದ ಪಾನಮಾಡುವದು (ಅದರಿಂದ ಗುದಭ್ರಂಶ ಪರಿಹಾರ).

ಷರಾ. ಹುಳಿರಸಗಳೆಂದರೆ ಚಾಂಗೇರೀ ಮೊದಲಾದ ಮೂರು ರಸಗಳು (ಹಿಂದಿನ 29ನೇ ಸಂಖ್ಯೆ ನೋಡಿ).

31. ದಶಮೂಲೋಪಸಿದ್ಧಂ ವಾ ಸಪಿಲ್ವಮನುವಾಸನಮ್ |
ಶತಾಹ್ವಾಶಟಿಬಿಲ್ವೈರ್ವಾ ವಚಯಾ ಚಿತ್ರಕೇಣ ವಾ ||
ಸ್ತಬ್ಧಭ್ರಷ್ಟಗುದೇ ಪೂರ್ವಂ ಸ್ನೇಹಸ್ವೇದೌ ಪ್ರಯೋಜಯೇತ್ |
ಸುಸ್ವಿನ್ನಂ ಚ ಮೃದುಭೂತಂ ಪಿಚುನಾ ಸಂಪ್ರವೇಶಯೇತ್ ||
(ಚ. 561)

ಗುದಭ್ರಂಶಕ್ಕೆ ಸ್ವೇದನಾನುವಾಸನಯೋಗಗಳು

ದಶಮೂಲಗಳು ಮತ್ತು ಬಿಲ್ವಪತ್ರೆಕಾಯಿ, ಇವುಗಳಿಂದ ಆಗಲಿ, ಸಬ್ಬಸಿಗೆ, ಕಚೋರ ಮತ್ತು ಬಿಲ್ವ, ಇವುಗಳಿಂದ ಆಗಲಿ, ಬಜೆಯಿಂದ ಆಗಲಿ, ಚಿತ್ರಮೂಲದಿಂದ ಆಗಲಿ, ಕಾಯಿಸಲ್ಪಟ್ಟ ತುಪ್ಪದಿಂದ ಅನುವಾಸನವಸ್ತಿಯನ್ನು ಪ್ರಯೋಗಿಸಬೇಕು ಹೊರಗೆ ಜಾರಿ ಸ್ತಬ್ಧವಾಗಿ ನಿಂತ ಆಸನಕ್ಕೆ ಸ್ನೇಹವನ್ನು ಹಚ್ಚಿ, ಬಿಸಿಕೊಟ್ಟು ಬೆವರಿಸಿ, ಅದು ಬೆವರಿ ಮೃದುವಾದ ಮೇಲೆ, ಅದನ್ನು ಹತ್ತಿಯಿಂದ ಒಳಗೆ ಹೊಗಿಸಬೇಕು.

ಟಿಪ್ಪಣಿ ಆಸನಕ್ಕೆ ಹಚ್ಚುವದಕ್ಕೆ ಸ್ನೇಹ ಎಂದರೆ ಅನುವಾಸನಕ್ಕೆ ಹೇಳಲ್ಪಟ್ಟ ಘೃತ ಆ ಘೃತಯೋಗಗಳಲ್ಲಿ ಕಾಣುವ ಔಷಧಗಳಿಂದಲೇ ಎಳ್ಳೆಣ್ಣೆಯನ್ನು ಕಾಯಿಸಿ ಹಚ್ಚುವದೆಂಬ ಪಕ್ಷ ಉಂಟು. ಮುಂದಿನ ಯೋಗ ನೋಡಿ.

ಶಂಬೂಕಮಾಂಸಂ ಸುಸ್ವಿನ್ನಂ ಸತೈಲಲವಣಾನ್ವಿತಮ್ ।
ಈಷದ್ಘೃತೇನ ಚಾಭ್ಯಜ್ಯ ಸ್ವೇದಯೇತ್ತೇನ ಯತ್ನತಃ ॥
ಗುದಭ್ರಂಶಮಶೇಷೇಣ ನಾಶಯೇತ್ ಕ್ಷಿಪ್ರಮೇವ ವಾ ॥
(ಚಿ. ಸಾ. ಸಂ. 86)

ಚಿಪ್ಪುಹುಳದ (ತುಳು—ಮುರ್ವಾಯಿ) ಮಾಂಸವನ್ನು, ಸೈಂಧವಲವಣ ಕೂಡಿಸಿಕೊಂಡು, ಎಳ್ಳೆಣ್ಣೆಯಲ್ಲಿ ಬೇಯಿಸಿ, ಗುದಕ್ಕೆ ಅಲ್ಪವಾಗಿ ತುಪ್ಪವನ್ನು ಹಚ್ಚಿಕೊಂಡು, ಆ ಬೆಂದ ಮಾಂಸದಿಂದ ಗುದವನ್ನು ಯತ್ನದಿಂದ ಬೆವರಿಸಬೇಕು. ಅದರಿಂದ ಗುದಭ್ರಂಶವು ನಿಃಶೇಷವಾಗಿ ಬೇಗನೇ ನಾಶವಾಗುವದು.

32. ಮೂಷಿಕಸ್ಯಾಥ ವಸಯಾ ಪಾಯುಂ ಸಮ್ಯಕ್ಪ್ರಲೇಪಯೇತ್ ।
ಗುದಭ್ರಂಶಾಭಿಧೋ ವ್ಯಾಧಿಃ ಪ್ರಣಶ್ಯತಿ ನ ಸಂಶಯಃ ॥ (ಭಾ. ಪ್ರ. 321)

ಗುದಭ್ರಂಶಕ್ಕೆ ಲೇಪಗಳು

ಇಲಿಯ ಚರಬಿ(ವಸೆ)ಯನ್ನು ಆಸನಕ್ಕೆ ಚೆನ್ನಾಗಿ ಲೇಪಿಸುವದರಿಂದ ಗುದಭ್ರಂಶ ಎಂಬ ವ್ಯಾಧಿಯು ನಾಶವಾಗುವದಕ್ಕೆ ಸಂದೇಹವಿಲ್ಲ.

ಟಿಪ್ಪಣಿ. ಅರಶಿನ ಗೋರಟೆ, ಕಡೀರು, ಇವುಗಳ ಸೊಪ್ಪಿನ ರಸದಿಂದ, ಹಾಲು ಕೂಡಿಸಿ, ಕಾಯಿಸಿದ ತುಪ್ಪವನ್ನು ಲೇಪಿಸುವದರಿಂದ ಗುದಭ್ರಂಶ ಪರಿಹಾರವಾಗುತ್ತದೆ ಎಂತ ಹಾ (ಶ್ಲೋ 135)

33. ಸರ್ವೇಷು ಮಲಭೇದೇಷು ಲವಣಂ ನ ಪ್ರಯೋಜಯೇತ್ ।
ತದ್ಧಿ ತೈಕ್ಷ್ಣ್ಯಾತ್ಸರತ್ವಾಚ್ಚ ದೋಷಃ(?ಷ)ಕ್ಷೋಭಾಯ ಕಲ್ಪತೇ ॥
(ಚಿ. ಸಾ. ಸಂ. 81)

ಅತಿಸಾರಗಳಲ್ಲಿ ಲವಣದ ನಿಷೇಧ

ಎಲ್ಲಾ ಮಲಪಡಲಿಕೆ(ಅತಿಸಾರ)ಗಳಲ್ಲಿ ಉಪ್ಪನ್ನು ಉಪಯೋಗಿಸಬಾರದು. ಅದು ತೀಕ್ಷ್ಣವಾದ್ದರಿಂದಲೂ, ಸರತ್ವಗುಣವುಳ್ಳದ್ದಾದ್ದರಿಂದಲೂ, ದೋಷಗಳನ್ನು ಕೆದರಿಸುವದಕ್ಕೆ ಕಾರಣವಾಗುತ್ತದೆ.

34. ವಚಾ ಚಾತಿವಿಷಾ ಮುಸ್ತಂ ಬೀಜಾನಿ ಕುಟಜಸ್ಯ ಚ ।
ಶ್ರೇಷ್ಠೋ ವಾತಾತಿಸಾರೇ ಚ ಯೋಗೋ ವೈದ್ಯೇನ ಯೋಜಿತಃ ॥
(ಚಿ. ಸಾ. ಸಂ. 82)

ಪಕ್ವ ವಾತಾತಿಸಾರದ ಚಿಕಿತ್ಸೆ.

ಬಜೆ, ಅತಿವಿಡೆ, ಭದ್ರಮುಷ್ಟಿ ಮತ್ತು ಇಂದ್ರಜೇವಿ, ಇದು ವೈದ್ಯರಿಂದ ವಾತಾತಿಸಾರದಲ್ಲಿ (ಚೂರ್ಣ ಅಥವಾ ಕಷಾಯವಾಗಿ) ಉಪಯೋಗಿಸಲ್ಪಡುವ ಯೋಗಗಳೊಳಗೆ ಶ್ರೇಷ್ಠವಾದದ್ದು.

ಪೂತಿಕಂ ಮಾಗಧೀ ಶುಂಠೀ ಬಲಾ ಧಾನ್ಯಂ ಹರೀತಕೀ ।
ಪಕ್ತ್ವಾಮ್ಬುನಾ ಪಿಬೇತ್ಸಾಯಂ ವಾತಾತಿಸಾರಶಾನ್ತಯೇ ॥

(ಚಿ. ಸಾ. ಸಂ. 82)

ಮುಳ್ಳು (ಬಿಳೀ) ಹೊಂಗೆ, ಹಿಪ್ಪಲಿ, ಶುಂಠಿ, ಕಲ್ಲಂಗಡಲೆ, ಕೊತ್ತುಂಬರಿ, ಅಣಿಲೆಕಾಯಿ, ಇವುಗಳ ಕಷಾಯವನ್ನು ವಾತಾತಿಸಾರದ ಶಾಂತಿಗಾಗಿ ಸಂಜೆಹೊತ್ತಿನಲ್ಲಿ ಕುಡಿಯತಕ್ಕದ್ದು.

ಸಮಂಗಾಧಾತಕೀವಿಶ್ವಾಬಿಲ್ವಗ್ರನ್ಥಿಕಮುಸ್ತಕೈಃ ।
ಪಕ್ವಮಮ್ಬುಃ ಪ್ರಶಮಯೇದ್ವಾತಾತೀಸಾರಮುಲ್ಬಣಮ್ ॥

(ವೈ. ಸಾ. ಸಂ. 213)

ಮುಟ್ಟಿದರೆಮುನಿವ (ನಾಚಿಕೆಸೊಪ್ಪಿನ ಗಿಡ), ಧಾತಕೀಕುಸುಮ, ಶುಂಠಿ, ಬಿಲ್ವಪತ್ರೆ ಕಾಯಿ, ಹಿಪ್ಪಲಿಮೂಲ, ಭದ್ರಮುಷ್ಟಿ, ಇವುಗಳ ಕಷಾಯದ ಪಾನದಿಂದ ಕಠಿಣವಾದ ವಾತಾತಿಸಾರವು ಶಾಂತವಾಗುವದು.

ವತ್ಸಕದೀಪ್ಯಕನಾಗರಪಾಠಾಬಿಲ್ವಬಲಾಚಪಲಾಪರಿಪಕ್ವಮ್ ।
ತೋಯಮಿದಂ ಹಿ ಸದಾಗತಿಜಾತಮಾಶ್ವತಿಸಾರವಿಕಾರಮುದಸ್ಯೇತ್ ॥

(ವೈ. ಸಾ. ಸಂ 213)

ಇಂದ್ರಜೇವಿ, ಓಮ, ಶುಂಠಿ, ಪಾಡಾವಳಿಗಡ್ಡೆ, ಬಿಲ್ವಪತ್ರೆ, ಕಲ್ಲಂಗಡಲೆಬೇರು, ಹಿಪ್ಪಲಿ, ಇವುಗಳ ಕಷಾಯವು ವಾತದಿಂದುಂಟಾದ ಅತಿಸಾರರೋಗವನ್ನು ಬೇಗನೆ ನಿಶ್ಚಯವಾಗಿ ನಿಲ್ಲಿಸುವದು.

ಶ್ಲೇಷ್ಮಾತಿಸಾರವಿಹಿತಂ ಕರ್ಮ ವಾತೇಽಪಿ ಶಸ್ಯತೇ ॥

(ವೈ. ಸಾ. ಸಂ. 213)

ಕಫಾತಿಸಾರಕ್ಕೆ ಹೇಳಲ್ಪಟ್ಟ ಪ್ರಯೋಗಗಳು ವಾತಾತಿಸಾರದಲ್ಲಿಯೂ ಪ್ರಶಸ್ತವಾಗಿರುತ್ತವೆ.

ಷರಾ ವಾತಾತಿಸಾರದಲ್ಲಿ, ಮುಖ್ಯವಾಗಿ ಆಮಾತಿಸಾರದಲ್ಲ, ಹೇಳಲ್ಪಟ್ಟ ಪ್ರತಿಕ್ರಿಯೆಯು ಕಫಾತಿಸಾರದಲ್ಲಿಯೂ ಉಪಯುಕ್ತವಾದ್ದೆಂತ ಇನ್ನೊಂದು ಕಡೆ ಹೇಳಲ್ಪಟ್ಟದೆ ವಾತದಿಂದ ಉಂಟಾದ ಶೂಲೆ, ಮಲಬದ್ಧತೆ, ಪ್ರವಾಹಿಕೆ, ಗುದಭ್ರಂಶ, ಮುಂತಾದ ವಿಶೇಷಲಕ್ಷಣಗಳಿಗೆ ಪ್ರತ್ಯೇಕವಾಗಿ ಹೇಳಲ್ಪಟ್ಟ ವಿಧಿಪ್ರಕಾರ ಉಪಚಾರ ಮಾಡಬೇಕು

(ಪಕ್ವ) ಪಿತ್ತಾತಿಸಾರಚಿಕಿತ್ಸೆ

35. ಮುಸ್ತಂ ಕುಟಜಬೀಜಾನಿ ಭೂನಿಮ್ಬಂ ಸರಸಾಂಜನಮ್ ।
ದಾರ್ವೀ ದುರಾಲಭಾ ಬಿಲ್ವಂ ಬಾಲಕಂ ರಕ್ತಚನ್ದನಮ್ ॥
ಚನ್ದನಂ ಬಾಲಕಂ ಮುಸ್ತಂ ಭೂನಿಮ್ಬಂ ಸದುರಾಲಭಮ್ ।
ಮೃಣಾಲಂ ಚನ್ದನಂ ಲೋಧ್ರಂ ನಾಗರಂ ನೀಲಮುತ್ಪಲಮ್ ॥
ಪಾಠಾ ಮುಸ್ತಂ ಹರಿದ್ರೇ ದ್ವೇ ಪಿಪ್ಪಲೀ ಕೌಟಜಂ ಫಲಮ್ ।
ಫಲತ್ವಚಂ ವತ್ಸಕಸ್ಯ ಶೃಂಗವೇರಘೃತೇ ವಚಾ ॥
ಷಡೇತೇಽಭಿಹಿತಾ ಯೋಗಾಃ ಪಿತ್ತಾತಿಸಾರನಾಶನಾಃ ॥ (ಸು. 785)

(1) ಭದ್ರಮುಷ್ಟಿ, ಇಂದ್ರಜೇವಿ, ನೆಲಬೇವು, ರಸಾಂಜನ;
(2) ಮರದರಸಿನ, ಬಳ್ಳಿತುರಚ, ಬಿಲ್ವಪತ್ರೆ, ಮುಡಿವಾಳ, ರಕ್ತಚಂದನ;
(3) ಶ್ರೀಗಂಧ, ಮುಡಿವಾಳ, ಭದ್ರಮುಷ್ಟಿ, ನೆಲಬೇವು, ಬಳ್ಳಿತುರಚ;
(4) ತಾವರೆದಂಟು, ಶ್ರೀಗಂಧ, ಲೋಧ್ರದ ಚಕ್ಕೆ, ಶುಂಠಿ, ನೀಲತಾವರೆ;
(5) ಪಾಡಾವಳಿಗಡ್ಡೆ, ಭದ್ರಮುಷ್ಟಿ, ಅರಸಿನ, ಮರದರಸಿನ, ಹಿಪ್ಪಲಿ, ಇಂದ್ರಜೇವಿ;
(6) ಇಂದ್ರಜೇವಿ, ಕೊಡಸಿಗನ ಚಕ್ಕೆ, ಶುಂಠಿ, ಬಜೆ, ತುಪ್ಪ;
ಈ ಆರು ಯೋಗಗಳು ಪಿತ್ತಾತಿಸಾರನಾಶನಕ್ಕೆ ಉಕ್ತವಾಗಿವೆ.

ಬಿಲ್ವಶಕ್ರಯವಾಮ್ಭೋದಬಾಲಕಾತಿವಿಷಾಕೃತಃ ।
ಕಷಾಯೋ ಹನ್ತ್ಯತೀಸಾರಂ ಸಾಮಂ ಪಿತ್ತಸಮುದ್ಭವಮ್ ॥

(ಸು. 785)

ಬಿಲ್ವಪತ್ರೆ, ಇಂದ್ರಜೇವಿ, ಭದ್ರಮುಷ್ಟಿ, ಮುಡಿವಾಳ, ಅತಿವಿಡೆ, ಇವುಗಳ ಕಷಾಯವು ಆಮಯುಕ್ತವಾದ ಪಿತ್ತಾತಿಸಾರವನ್ನು ನಾಶಮಾಡುತ್ತದೆ.

ಮಧುಕೋತ್ಪಲಬಿಲ್ವಾಮ್ರಹ್ರೀವೇರೋಶೀರನಾಗರೈಃ ।
ಕೃತಃ ಕ್ವಾಥೋ ಮಧುಯುತಃ ಪಿತ್ತಾತಿಸಾರನಾಶನಃ ॥ (ಸು. 785)

ಜ್ಯೇಷ್ಠಮಧು, ನೈದಿಲೆ, ಬಿಲ್ವಪತ್ರೆ, ಮಾವಿನಹಣ್ಣಿನ ಗೊರಟು (ಅಥವಾ ಕೆತ್ತೆ), ಮುಡಿವಾಳ, ಲಾಮಂಚ, ಶುಂಠಿ, ಇವುಗಳ ಕಷಾಯವನ್ನು, ಜೇನು ಕೂಡಿಸಿಕೊಂಡು, ಪಾನಮಾಡುವದರಿಂದ ಪಿತ್ತಾತಿಸಾರವು ನಾಶವಾಗುತ್ತದೆ.

ಸಕ್ಷೌದ್ರಾತಿವಿಷಂ ಪಿಷ್ಟ್ವಾ ವತ್ಸಕಸ್ಯ ಫಲತ್ವಚಮ್ ।
ಪಿಬೇತ್ಪಿತ್ತಾತಿಸಾರಘ್ನಂ ತಂಡುಲೋದಕಸಂಯುತಮ್ ॥ (ಚ. 562)

ಅತಿವಿಡೆ, ಕೊಡಸಿಗನ ಚಕ್ಕೆ ಮತ್ತು ಇಂದ್ರಜೇವಿ, ಇವುಗಳನ್ನು ಅಕ್ಕಚ್ಚಿನೊಂದಿಗೆ ಅರೆದು, ಜೇನು ಕೂಡಿಸಿಕೊಂಡು, ಪಾನಮಾಡುವದರಿಂದ ಪಿತ್ತಾತಿಸಾರವು ನಾಶವಾಗುವದು.

*** ಬಿಲ್ವಂ ದಾರುಹರಿದ್ರಾಂ ಚ ತ್ವಕ್ ಹ್ರೀಬೇರಂ ದುರಾಲಭಾಮ್ ।
*** ತಿಲಾ ಮೋಚರಸೋ ಲೋಧ್ರಂ ಸಮಂಗಾ ಕಮಲೋತ್ಪಲಮ್ ॥
ಉತ್ಪಲಂ ಧಾತಕೀಪುಷ್ಪಂ ದಾಡಿಮತ್ವಕ್ ಮಹೌಷಧಮ್ ।
ಕಟ್ಫಲಂ ನಾಗರಂ ಪಾಠಾ ಜಂಬ್ವಾಮ್ರಾಸ್ಥಿದುರಾಲಭಾಃ ॥
ಯೋಗಾಃ ಷಡೇತೇ ಸಕ್ಷೌದ್ರಾಸ್ತಂಡುಲೋದಕಸಂಯುತಾಃ ।
ಪೇಯಾಃ ಪಿತ್ತಾತಿಸಾರಘ್ನಾಃ ಶ್ಲೋಕಾರ್ಧೇನ ನಿದರ್ಶಿತಾಃ ॥

(ಚ. 562-3)

(1), (3)ನೇ ಯೋಗಗಳು ಸುಶ್ರುತನ ಆರು ಯೋಗಗಳೊಳಗೆ ೧, ೪ನೇಯವು;
(2) ಬಿಲ್ವಪತ್ರೆ, ಮರದರಸಿನ, ಲವಂಗಪಟ್ಟೆ, ಮುಡಿವಾಳ ಮತ್ತು ಬಳ್ಳಿತುರಚನ ಬೇರು;
(4) ಎಳ್ಳು, ಬೂರುಗದ ಮೇಣ, ಲೋಧ್ರ, ನಾಚಿಕೆಸೊಪ್ಪಿನ ಗಿಡ (ಮುಟ್ಟಿದರೆ ಮುನಿವ), ತಾವರೆ ಮತ್ತು ನೈದಿಲೆ;
(5) ನೈದಿಲೆ, ಧಾತಕೀಪುಷ್ಪ, ದಾಳಿಂಬದ ಸಿಪ್ಪೆ ಮತ್ತು ಶುಂಠಿ;

(6) ಕಟ್ಫಲ (ಕಿರುಶಿವನಿ), ಶುಂಠಿ, ಪಾಡಾವಳಿಗಡ್ಡೆ, ನೇರಳೆಚಕ್ಕೆ, ಮಾವಿನಹಣ್ಣಿನ ಗೊರಟು ಮತ್ತು ಬಳ್ಳಿತುರಚನ ಬೇರು;

ಈ ೬ ಯೋಗಗಳ ಔಷಧಗಳನ್ನು ಅಕ್ಕಚ್ಚಿನಲ್ಲಿ ಅರೆದು, ಜೇನು ಕೂಡಿಸಿಕೊಂಡು, ಪಾನಮಾಡುವದರಿಂದ ಪಿತ್ತಾತಿಸಾರವು ನಾಶವಾಗುವದು.

ಯದಾ ಪಕ್ವೋಽಪ್ಯತೀಸಾರಃ ಸರತ್ಯೇವ ಮುಹುರ್ಮುಹುಃ ।
ಗ್ರಹಣ್ಯಾ ಮಾರ್ದವಾಜ್ಜನ್ತೋಸ್ತತ್ರ ಸಂಸ್ತಂಭನಂ ಹಿತಮ್ ॥
ಸಮಂಗಾ ಧಾತಕೀಪುಷ್ಪಂ ಮಂಜಿಷ್ಠಾ ಲೋಧ್ರಮುಸ್ತಕಮ್ ।
ಶಾಲ್ಮಲೀವೇಷ್ಟಕಂ ಲೋಧ್ರಂ ವೃಕ್ಷದಾಡಿಮಯೋಸ್ತ್ವಚೌ ॥
ಆಮ್ರಾಸ್ಥಿಮಧ್ಯಂ ಲೋಧ್ರಂ ಚ ಬಿಲ್ವಮಧ್ಯಂ ಪ್ರಿಯಂಗವಃ ।
ಮಧುಕಂ ಶೃಂಗವೇರಂ ಚ ದೀರ್ಘವೃನ್ತತ್ವಗೇವ ಚ ॥
ಚತ್ವಾರ ಏತೇ ಯೋಗಾಃ ಸ್ಯುಃ ಪಕ್ವಾತೀಸಾರನಾಶನಾಃ ।
ಉಕ್ತಾ ಯ ಉಪಯೋಜ್ಯಾಸ್ತೇ ಸಕ್ಷೌದ್ರಾಸ್ತಂಡುಲಾಮ್ಬುನಾ ॥
ಮಾಸ್ತಂ ಕಷಾಯಮೇಕಂ ವಾ ಪೇಯಂ ಮಧುಸಮಾಯುತಮ್ ॥
(ಸು. 785, 786)

ಅತಿಸಾರವು ಪಕ್ವವಾದ ಮೇಲೆಯೂ ಗ್ರಹಣಿಯ ದುರ್ಬಲತೆಯಿಂದ ಪದೇ ಪದೇ ಅತಿಸಾರವಾಗುತ್ತಾ ಇರುವ ಸಂಗತಿಯಲ್ಲಿ ಸಂಸ್ತಂಭನಕರವಾದ ಯೋಗಗಳು ಹಿತವಾಗುತ್ತವೆ.

(1) ನಾಚಿಕೆಸೊಪ್ಪಿನ ಗಿಡದ ಬೇರು, ಧಾತಕೀಪುಷ್ಪ, ಮಂಜಿಷ್ಠ, ಲೋಧ್ರ ಮತ್ತು ಭದ್ರಮುಷ್ಟಿ;

(2) ಬೂರುಗದ ಮೇಣ, ಲೋಧ್ರ, ಕೊಡಸಿಗನ ಕೆತ್ತೆ ಮತ್ತು ದಾಳಿಂಬದ ಹಣ್ಣಿನ ಸಿಪ್ಪೆ,

(3) ಮಾವಿನಹಣ್ಣಿನ ಗೊರಟಿನ ತಿರಳು, ಲೋಧ್ರ, ಬಿಲ್ವದ ಕಾಯಿಯ ತಿರಳು ಮತ್ತು ಪ್ರಿಯಂಗು;

(4) ಜ್ಯೇಷ್ಠಮಧು, ಶುಂಠಿ ಮತ್ತು ಆನೆಮುಂಗಿನ ಕೆತ್ತೆ;

ಈ ನಾಲ್ಕು ಯೋಗಗಳು ಪಕ್ವಾತಿಸಾರವನ್ನು ನಾಶಮಾಡತಕ್ಕಂಥವು. ಅವುಗಳನ್ನು ಅಕ್ಕಚ್ಚಿನೀರಿನಲ್ಲಿ ಅರೆದು, ಜೇನು ಕೂಡಿಸಿಕೊಂಡು, ಪಾನಮಾಡತಕ್ಕದ್ದು. ಅಥವಾ ಭದ್ರಮುಷ್ಟಿ ಒಂದರದೇ ಕಷಾಯವನ್ನು, ಜೇನು ಕೂಡಿಸಿಕೊಂಡು, ಕುಡಿಯಬೇಕು.

36. ತೃಷ್ಯತಸ್ತು ಮುಸ್ತಪರ್ಪಟಕೋಶೀರಶಾರಿವಾಚನ್ದನಕಿರಾತತಿಕ್ತಕೋದೀಚ್ಯವಾರಿಭಿರುಪಚಾರಃ ॥ (ಚ. 562)

ಪಿತ್ತಾತಿಸಾರಿಯ ಬಾಯಾರಿಕೆಗೆ

(ಪಿತ್ತಾತಿಸಾರಿಗೆ) ಬಾಯಾರಿಕೆಯುಂಟಾದಾಗ್ಗೆ, ಭದ್ರಮುಷ್ಟಿ, ಪರ್ಪಾಟಕ, ಲಾಮಂಚ, ಸುಗಂಧಿಬೇರು, ಶ್ರೀಗಂಧ, ನೆಲಬೇವು, ಮುಡಿವಾಳ, ಇವುಗಳನ್ನು ಕೂಡಿಸಿ ಕಾಯಿಸಿದ ನೀರನ್ನು ಕೊಟ್ಟು, ಉಪಚರಿಸಬೇಕು.

ಷರಾ ಪಾನದ ಕಷಾಯದ ಕ್ರಮ 1ನೇ ಭಾಗದ XX-30ರಲ್ಲಿ ಇದೆ. ಕೊತ್ತುಂಬರಿ ಮತ್ತು ಲಾಮಂಚ ಹಾಕಿ ಕಾಯಿಸಿದ ನೀರನ್ನು ಕೊಡುವದರಿಂದ ಬಾಯಾರಿಕೆ, ಉರಿ ಮತ್ತು ಅತಿಸಾರ ಶಾಂತವಾಗುತ್ತವೆ, ಮತ್ತು ಗಂಜಿಗೆ ಅವೆರಡನ್ನೂ ಪಾಡಾವಳಿಗಡ್ಡೆಯನ್ನೂ ಕೂಡಿಸಿಕೊಳ್ಳಬೇಕು, ಎಂತ ಚಿ ಸಾ. ಸಂ. (ಪು 86)

37. ಲಂಘಿತಸ್ಯ ಚಾಹಾರಕಾಲೇ ಬಲಾತಿಬಲಾ-ಸೂರ್ಪ್ಯ-ಶಾಲಪರ್ಣಿ-ಪೃಶ್ನಿಪರ್ಣೀ-ಬೃಹತೀ-ಕಂಟಕಾರಿಕಾ-ಶತಾವರೀ-ಶ್ವದಂಷ್ಟ್ರಾ-ನಿರ್ಯೂಹಸಂಯುಕ್ತೇನ ಯಥಾಸಾತ್ಮ್ಯಂ ಯವಾಗೂಮಂಡಾದಿನಾ ತರ್ಪಣಾದಿನಾ ವಾ ಕ್ರಮೇಣೋಪಚಾರಃ || ಮುದ್ಗಮಸೂರಹರೇಣುಮಕುಷ್ಠಕಯೂಷೈರ್ವಾ . . . . ಈಷದಮ್ಲೈರಸಮ್ಲೈರ್ವಾ ಕ್ರಮಶೋऽಗ್ನಿಂ ಸಂಧುಕ್ಷಯೇತ್ || (ಚ. 562)

ಪಿತ್ತಾತಿಸಾರಿಗೆ ಆಹಾರಾದಿ ಉಪಚಾರಕ್ರಮ

(ವಿಧಿಪ್ರಕಾರ) ಲಂಘನ ಮಾಡಿಸಿದ ಮೇಲೆ ಆಹಾರಕಾಲದಲ್ಲಿ ಕಡೀರು(ಕಲ್ಲಂಗಡಲೆ) ಬೇರು, ಆನೆಕಡೀರುಬೇರು, ಕಾಡುಹೆಸರುಬೇರು, ಮೂವೆಲೆಬೇರು, ಓರೆಲೆಬೇರು, ಗುಳ್ಳದ ಬೇರು, ಕಿರಿಗುಳ್ಳದ ಬೇರು, ಶತಾವರಿಬೇರು, ನೆಗ್ಗಿಲ ಬೇರು, ಇವುಗಳ ಕಷಾಯವನ್ನು ಕೂಡಿಸಿ ಮಾಡಿದ ಯವಾಗೂಗಂಜಿಯ ನೀರು, ಮಂಡ ಮುಂತಾದ್ದನ್ನು, ಅಥವಾ ತರ್ಪಣ ಮುಂತಾದ್ದನ್ನು, ಸಾತ್ಮ್ಯ ಇದ್ದ ಹಾಗೆ. ಕ್ರಮದಿಂದ ಕೊಟ್ಟು, ಉಪಚರಿಸತಕ್ಕದ್ದು. ಅಥವಾ (ಅದೇ ಕಷಾಯದಲ್ಲಿ) ಹೆಸರು, ಮಸೂರ (ಚನ್ನಂಗಿ), ಒಟಾಣಿ, ಮಕುಷ್ಟಕಧಾನ್ಯ, ಇವುಗಳ ಸಾರುಗಳನ್ನು, ಅಲ್ಪವಾಗಿ ಹುಳಿ ಕೂಡಿಸಿ, ಅಥವಾ ಹುಳಿ ಕೂಡಿಸದೆ, ಮಾಡಿ ಕೊಟ್ಟು, ಕ್ರಮದಿಂದ ಅಗ್ನಿಯನ್ನು ಚುರುಕುಮಾಡಬೇಕು.

ಷರಾ 'ತರ್ಪಣ' ಎಂದರೆ ಗಂಜಿ, ಹಿಟ್ಟು, ಸಾರು, ಮಾಂಸರಸ ಮುಂತಾದ ತೃಪ್ತಿಕರವಾದ ಆಹಾರ

ಅನುಬಂಧತ್ವೇ ತು ತಸ್ಯ ದೀಪನೀಯಪಾಚನೀಯೋಪಶಮನೀಯಸಂಗ್ರಹಣೀಯಾನ್ ಯೋಗಾನ್ ಪ್ರಯೋಜಯೇದಿತಿ || (ಚ. 562)

ಪಿತ್ತಾತಿಸಾರದಲ್ಲಿ (ಮೇಲೆ ಹೇಳಿದಂತೆ) ಲಂಘನಾದಿ ಉಪಚಾರ ನಡಿಸಿದನಂತರವೂ ರೋಗವು ವಾಸಿಯಾಗದೆ ಉಳಿದರೆ, ರೋಗಿಗೆ (ಹಿಂದೆ 35ನೇ ಸಂಖ್ಯೆಯಲ್ಲಿ ಕಾಣುವ) ದೀಪನಕರ, ಪಾಚನಕರ, ಉಪಶಮನಕರ. ಮತ್ತು ಸಂಗ್ರಹಣಕರ, ಗುಣವುಳ್ಳ ಯೋಗಗಳನ್ನು ಪ್ರಯೋಗಿಸತಕ್ಕದ್ದು.

38. ಪಿತ್ತಾತಿಸಾರೋ ದೀಪ್ತಾಗ್ನೇಃ ಕ್ಷಿಪ್ರಂ ಸಮುಪಶಾಮ್ಯತಿ |
ಅಜಕ್ಷೀರಪ್ರಯೋಗೇಣ ಬಲಂ ವರ್ಣಶ್ಚ ವರ್ಧತೇ ||
ಬಹುದೋಷಸ್ಯ ದೀಪ್ತಾಗ್ನೇಃ ಸಪ್ರಾಣಸ್ಯ ನ ತಿಷ್ಠತಿ |
ಪೈತ್ತಿಕೋ ಯದ್ಯತೀಸಾರಃ ಪಯಸಾ ತಂ ವಿರೇಚಯೇತ್ ||
ಪಲಾಶಫಲನಿರ್ಯೂಹಂ ಪಯಸಾ ಪಾಯಯೇತ ತಮ್ |
ತತೋऽನುಪಾಯಯೇತ್ಕೋಷ್ಣಂ ಕ್ಷೀರಮೇವ ಯಥಾಬಲಮ್ ||
ಪ್ರವಾಹಿತೇ ತೇನ ಮಲೇ ಪ್ರಶಾಮ್ಯತ್ಯುದರಾಮಯಃ |
ಪಲಾಶವತ್ಪ್ರಯೋಜ್ಯಾ ವಾ ತ್ರಾಯಮಾಣಾ ವಿಶೋಧಿನೀ || (ಚ. 563)

ಹಾಲಿನ ಪ್ರಯೋಗ.

ರೋಗಿಯ ಜಠರಾಗ್ನಿಯು ಚುರುಕಾಗಿದ್ದರೆ, ಆಡಿನ ಹಾಲಿನ ಉಪಯೋಗದಿಂದ ಪಿತ್ತಾತಿಸಾರ ಬೇಗನೆ ವಾಸಿಯಾಗುತ್ತದೆ ಮತ್ತು ಬಲವೂ ವರ್ಣವೂ ವೃದ್ಧಿಯಾಗುವವು.

ರೋಗಿಯು ಬಲವಂತನಾಗಿ, ಅವನ ಅಗ್ನಿಯು ಚುರುಕಾಗಿ ಮತ್ತು ದೋಷಗಳು ಬಹಳವಾಗಿ, ಇರುವ ಸಂಗತಿಯಲ್ಲಿ, ಪಿತ್ತಾತಿಸಾರವು (ಲಂಘನಾದಿ ಉಪಚಾರಗಳಿಂದ) ನಿಲ್ಲದಿದ್ದರೆ, ಅವನಿಗೆ ಹಾಲಿನಿಂದ ವಿರೇಚನ ಮಾಡಿಸಬೇಕು. ಪಲಾಶದ ಬೀಜದ ಕಷಾಯವನ್ನು ಹಾಲು ಕೂಡಿಸಿ ಕುಡಿಸಿ, ಅನುಪಾನವಾಗಿ ಸುಖೋಷ್ಣವಾದ ಹಾಲನ್ನೇ, ಬಲ ನೋಡಿಕೊಂಡು, ಕುಡಿಸಬೇಕು; ಅದರಿಂದ ಮಲವು ಹೊರಗೆ ಸಾಗಿಸಲ್ಪಟ್ಟಲ್ಲಿ ಅವನ ಉದರದೊಳಗಿನ ವ್ಯಾಧಿಯು ಪ್ರಶಮನವಾಗುತ್ತದೆ; ಅಥವಾ ಪಲಾಶದಂತೆ ವಿಶೋಧನ ಗುಣವುಳ್ಳ ತ್ರಾಯಮಾಣವನ್ನು ಪ್ರಯೋಗಿಸಬೇಕು.

ಷರಾ ತ್ರಾಯಮಾಣ ಎಂಬುವದಕ್ಕೆ ಕೆಲವರು ಬ್ರಾಹ್ಮೀಯನ್ನೂ, ಬೇರೆ ಕೆಲವರು ಕಹಿದರಸಿಯನ್ನೂ ಉಪಯೋಗಿಸುತ್ತಾರಾಗಿ ಕಾಣುತ್ತದೆ ತ್ರಾಯಮಾಣವು ಹಿಮಾಲಯಾದಿ ಪರ್ವತಗಳಲ್ಲಿ ಬೆಳೆಯುವ ಒಂದು ಜಾತಿ ಗಿಡ ಎಂತ ನಾ ನಿ (ಪು. 851)

39. ಛಾಗಂ ತತ್ರ ಪಯಃ ಶಸ್ತಂ ಶೀತಂ ಸಮಧುಶರ್ಕರಮ್ ।
ಪಾನಾರ್ಥೇ ವ್ಯಂಜನಾರ್ಥೇ ಚ ಗುದಪ್ರಕ್ಷಾಲನಂ ತಥಾ ॥
ರಕ್ತಾತಿಸಾರ ಚಿಕಿತ್ಸೆ. ಭೋಜನಂ ರಕ್ತಶಾಲೀನಾಂ ಪಯಸಾ ತೇನ ಭೋಜಯೇತ್ ।
ರಸೈಃ ಪಾರಾವತಾದೀನಾಂ ಘೃತಭೃಷ್ಟೈಃ ಸಶರ್ಕರೈಃ ॥
ಶಶಪಕ್ಷಿಮೃಗಾಣಾಂ ಚ ಶೀತಾನಾಂ ವನಚಾರಿಣಾಮ್ ।
ರಸೈರನಮ್ಲೈಃ ಸಘೃತೈರ್ಭೋಜಯೇತ್ತಂ ಸಶರ್ಕರೈಃ ॥
* * * ನೀಲೋತ್ಪಲಂ ಮೋಚರಸೋ ಸಮಂಗಾ ಪದ್ಮಕೇಸರಮ್ ।
ಅಜಾಕ್ಷೀರಯುತಂ ದದ್ಯಾಜ್ಜೀರ್ಣೇ ಚ ಪಯಸೌದನಮ್ ॥
ದುರ್ಬಲಂ ಪಾಯಯಿತ್ವಾ ವಾ ತಸ್ಯೈವೋಪರಿ ಭೋಜಯೇತ್ ।
ಪ್ರಾಗುಕ್ತಂ ನವನೀತಂ ವಾ ದದ್ಯಾತ್ಸಮಧುಶರ್ಕರಮ್ ॥
ಪ್ರಾಶ್ಯ ಕ್ಷೀರೋತ್ಥಿತಂ ಸರ್ಪಿಃ ಕಪಿಂಜಲರಸಾಶನಃ ।
ತ್ರ್ಯಹಾದಾರೋಗ್ಯಮಾಪ್ನೋತಿ ಪಯಸಾ ಕ್ಷೀರಭುಕ್ತಥಾ ॥
ಪೀತ್ವಾ ಶತಾವರೀಕಲ್ಕಂ ಪಯಸಾ ಕ್ಷೀರಭುಗ್ಜಯೇತ್ ।
ರಕ್ತಾತಿಸಾರಂ ಪೀತ್ವಾ ವಾ ತಥಾ ಸಿದ್ಧಂ ಘೃತಂ ನರಃ ॥ (ಚ. 564)

ರಕ್ತಾತಿಸಾರದಲ್ಲಿ ಆಡಿನ ಹಾಲನ್ನು ಕಾಯಿಸಿ ತಣಿಸಿ, ಜೇನು ಮತ್ತು ಸಕ್ಕರೆ ಕೂಡಿಸಿಕೊಂಡು, ಕುಡಿಯುವದಕ್ಕೂ, ಊಟಕ್ಕೂ, ಆಸನವನ್ನು ತೊಳೆಯುವದಕ್ಕೂ ಉಪಯೋಗಿಸುವದು ಪ್ರಶಸ್ತವಾಗಿರುತ್ತದೆ. ಕೆಂಪು ಶಾಲ್ಯಕ್ಕಿಯ ಅನ್ನವನ್ನು ಆ ಹಾಲಿನಿಂದ ಉಣ್ಣಬೇಕು. (ಅಥವಾ) ಪಾರಿವಾಳ ಮುಂತಾದವುಗಳ ಮಾಂಸರಸಗಳಿಗೆ ತುಪ್ಪದಿಂದ ಒಗ್ಗರಿಸಿ, ಸಕ್ಕರೆ ಕೂಡಿಸಿ, ಅಥವಾ ವನಚಾರಿಗಳಾದ ಮತ್ತು ಶೀತವೀರ್ಯವುಳ್ಳ ಮೊಲ-ಪಕ್ಷಿ-ಮೃಗಗಳ ಮಾಂಸಗಳಿಂದ, ಹುಳಿ ಕೂಡಿಸದೆ, ಮಾಡಿದ ರಸಗಳಿಗೆ ತುಪ್ಪ ಮತ್ತು ಸಕ್ಕರೆ ಕೂಡಿಸಿ, ಅವುಗಳಿಂದ ಭೋಜನಮಾಡತಕ್ಕದ್ದು.

ನೀಲತಾವರೆ, ಬೂರುಗದ ಮೇಣ, ನಾಚಿಕೆಸೊಪ್ಪು (ಮುಟ್ಟಿದರೆ ಮುನಿವ), ತಾವರೆ ಕೇಸರ, ಇವುಗಳನ್ನು ಆಡಿನ ಹಾಲಿನೊಂದಿಗೆ ಅರೆದು ಕುಡಿಸಿ, ಅದು ಜೀರ್ಣವಾದ ಮೇಲೆ

ಹಾಲಿನಿಂದ ಅನ್ನವನ್ನು ಉಣ್ಣಿಸಬೇಕು; ಅಥವಾ ರೋಗಿಯು ದುರ್ಬಲನಾಗಿದ್ದರೆ ಆ ಔಷಧವನ್ನು ಕುಡಿದ ಮೇಲಿಗೇನೇ ಉಣ್ಣಿಸಬೇಕು. ಅಧವಾ ಹಿಂದೆ ಹೇಳಿದ (ಆಡಿನ) ಬೆಣ್ಣೆಯನ್ನು ಸಕ್ಕರೆ ಮತ್ತು ಜೇನು ಕೂಡಿಸಿ ತಿನ್ನಲಿಕ್ಕೆ ಕೊಡಬೇಕು. (ಆಡಿನ) ಹಾಲಿನಿಂದ ತೆಗೆದ ತುಪ್ಪವನ್ನು ಸೇವಿಸಿ ಬಿಳೀ ತಿತ್ತಿರಿಪಕ್ಷಿಯ ಮಾಂಸರಸ ಮತ್ತು ಹಾಲಿನಿಂದ, ಅಥವಾ ಹಾಲಿನಿಂದಲೇ, ಉಣ್ಣುತ್ತಾ ಬಂದಲ್ಲಿ, ಮೂರು ದಿನಗಳೊಳಗೆ ಆರೋಗ್ಯವುಂಟಾಗುತ್ತದೆ. ಶತಾವರಿಬೇರಿನ ಕಲ್ಕವನ್ನು ಹಾಲು ಕೂಡಿಸಿ ಪಾನಮಾಡಿ, ಅಧವಾ ಶತಾವರಿ ಕಲ್ಕದಿಂದ ಕಾಯಿಸಿದ ತುಪ್ಪವನ್ನು ಪಾನಮಾಡಿ, ಹಾಲನ್ನ ಉಣ್ಣುತ್ತಾ ಬರುವದರಿಂದ ರಕ್ತಾತಿಸಾರವು ವಾಸಿಯಾಗುವದು.

ಸಂ॰ ಬಿಳೀ ತಿತ್ತಿರಿಯ ಮಾಂಸರಸದ ಸ್ಥಾನದಲ್ಲಿ ಜೇನನ್ನು ಪಯೋಗಿಸಬಹುದಾಗಿ ಆ ದೀ (ಪು 537).

ಕಲ್ಕಸ್ತಿಲಾನಾಂ ಕೃಷ್ಣಾನಾಂ ಶರ್ಕರಾಪಂಚಭಾಗಿಕಃ |
ಆಜೇನ ಪಯಸಾ ಪೀತಃ ಸದ್ಯೋ ರಕ್ತಂ ನಿಯಚ್ಛತಿ || (ಚ. 565)

ಕರೀ ಎಳ್ಳಿನ ಕಲ್ಕವನ್ನೂ, ಅದರ ಐದು ಪಾಲು ಸಕ್ಕರೆಯನ್ನೂ, ಆಡಿನ ಹಾಲಲ್ಲಿ ಕದಡಿ ಪಾನಮಾಡುವದರಿಂದ ರಕ್ತಾತಿಸಾರವು ಕೂಡಲೆ ನಿಲ್ಲುತ್ತದೆ.

ಪೀತ್ವಾ ಸಶರ್ಕರಾಕ್ಷೌದ್ರಂ ಚಂದನಂ ತಂಡುಲಾಮ್ಬುಸಾ |
ದಾಹತೃಷ್ಣಾಪ್ರಮೇಹೇಭ್ಯೋ ರಕ್ತಸ್ರಾವಾದ್ವಿಮುಚ್ಯತೇ || (ಚ. 565)

ಶ್ರೀಗಂಧವನ್ನು ಅಕ್ಕಚ್ಚಿನ ನೀರಿನಲ್ಲಿ ತೇದಿ, ಸಕ್ಕರೆ ಮತ್ತು ಜೇನು ಕೂಡಿಸಿಕೊಂಡು, ಪಾನಮಾಡುವದರಿಂದ ಉರಿ-ಬಾಯಾರಿಕೆ-ಪ್ರಮೇಹಗಳಿಂದಲೂ ರಕ್ತಸ್ರಾವದಿಂದಲೂ ವಿಮೋಚನೆಯುಂಟಾಗುತ್ತದೆ.

ರಕ್ತಂ ವಿಟ್ಸಹಿತಂ ಪೂರ್ವಂ ಪಶ್ಚಾದ್ವಾ ಯೋ ಽತಿಸಾರ್ಯತೇ |
ಶತಾವರೀಘೃತಂ ತಸ್ಯ ಲೇಹಾರ್ಥಮುಪಕಲ್ಪಯೇತ್ ||
ಶರ್ಕರಾರ್ಧಾಂಶಿಕಂ ಲೀಢಂ ನವನೀತಂ ನವೋದ್ಧೃತಮ್ |
ಕ್ಷೌದ್ರಪಾದಂ ಜಯೇಚ್ಛೀಘ್ರಂ ತಂ ವಿಕಾರಂ ಹಿತಾಶಿನಃ ||
ನ್ಯಗ್ರೋಧೋದುಂಬರಾಶ್ವತ್ಥಶುಂಗಾನಾಪೋಥ್ಯ ವಾಸಯೇತ್ |
ಅಹೋರಾತ್ರಂ ಜಲೇ ತಪ್ತೇ ಘೃತಂ ತೇನಾಂಭಸಾ ಪಚೇತ್ ||
ತದರ್ಧಂ ಶರ್ಕರಾಯುಕ್ತಂ ಲಿಹ್ಯಾತ್ಸಕ್ಷೌದ್ರಪಾದಿಕಮ್ |
ಅಧೋ ವಾ ಯದಿ ವಾಪ್ಯೂರ್ಧ್ವಂ ಯಸ್ಯ ರಕ್ತಂ ಪ್ರವರ್ತತೇ ||
ಯಸ್ತ್ವೇವಂ ದುರ್ಬಲೋ ಮೋಹಾತ್ಪಿತ್ತಲಾನ್ಯೇವ ಸೇವತೇ |
ಶೀಘ್ರಂ ವಿಪದ್ಯತೇ ಪ್ರಾಪ್ಯ ಬಲೀಪಾಕಂ ಸುದಾರುಣಮ್ || (ಚ. 566)

ಮಲಸಹಿತವಾಗಿ, ಮಲಕ್ಕೆ ಮುಂಚಿತವಾಗಿ, ಅಧವಾ ಮಲಾನಂತರ ಯಾವನಲ್ಲಿ ರಕ್ತವು ಸುರಿದು ಹೋಗುತ್ತದೋ, ಅವನಿಗೆ ಶತಾವರಿಘೃತವನ್ನು ತಯಾರಿಸಿ, ನೆಕ್ಕಿಸಬೇಕು. ಹೊಸತಾಗಿ ತೆಗೆದ ಬೆಣ್ಣೆಯನ್ನು, ಅರ್ಧ ಪಾಲು ಸಕ್ಕರೆ ಮತ್ತು ಕಾಲು ಪಾಲು ಜೇನು ಕೂಡಿಸಿಕೊಂಡು, ನೆಕ್ಕಿ, ಪಥ್ಯದ ಭೋಜನವನ್ನು ಮಾಡುವದರಿಂದ ಆ ವಿಕಾರವು ಬೇಗನೆ ತೊಲಗುವದು.

**ಗೋಳಿ, ಅತ್ತಿ, ಅಶ್ವತ್ಥ, ಇವುಗಳ ಕುಡಿಗಳನ್ನು ಜಜ್ಜಿ, ಕುದಿಸಿದಂಥಾ ನೀರಿನಲ್ಲಿ ಒಂದು ಹಗಲೂರಾತ್ರೆ ನೆನೆಯಿಟ್ಟು, ಆ ನೀರಿನೊಂದಿಗೆ ತುಪ್ಪವನ್ನು ಕಾಯಿಸಿ, ಆ ತುಪ್ಪವನ್ನು, ಅರ್ಧಾಂಶ ಸಕ್ಕರೆ ಮತ್ತು ಕಾಲಂಶ ಜೇನು ಕೂಡಿಸಿಕೊಂಡು, ಯಾವನಲ್ಲಿ ಕೆಳಮುಖವಾಗಿ ಯಾಗಲಿ ಊರ್ಧ್ವಮುಖವಾಗಿಯಾಗಲಿ ರಕ್ತಪ್ರವರ್ತನೆ ಆಗುತ್ತದೋ, ಅವನು ನೆಕ್ಕಬೇಕು.** ಹಾಗೆ ರಕ್ತಹೋಗಿ ದುರ್ಬಲನಾದ ಯಾವ ರೋಗಿಯು ಅಜ್ಞಾನದಿಂದ ಪಿತ್ತವೃದ್ಧಿಕರವಾದ ಪದಾರ್ಥಗಳನ್ನೇ ಸೇವಿಸುತ್ತಾನೋ, ಅವನಿಗೆ, ಗುದದ ಸುಳಿಗಳಲ್ಲಿ ಕಠಿಣವಾದ ಪಾಕ (ಜೆಂದಸ್ಥಿತಿ) ಉಂಟಾಗಿ, ಬೇಗನೆ ವಿಪತ್ತು ಉಂಟಾಗುತ್ತದೆ.

ಷರಾ 1ನೇ ಭಾಗದ II-77ನೆಯ ಅಡಿಯಲ್ಲಿ ಗುದದ ಸುಳಿಗಳ ವರ್ಣನವಿದೆ

ಯೋ ರಕ್ತಂ ಶಕೃತಃ ಪೂರ್ವಂ ಪಶ್ಚಾದ್ವಾ ಪ್ರತಿಸಾರ್ಯತೇ |
ಸ ಪಲ್ಲವೈರ್ವಟಾದೀನಾಂ ಸಸರ್ಪಿಃ ಸಾಧಿತಂ ಪಯಃ ||
ಪಿಬೇತ್ಸಶರ್ಕರಾಕ್ಷೌದ್ರಮಥವಾಪ್ಯಭಿಮಥ್ಯ ತತ್ |
ನವನೀತಮಥೋ ಲಿಹ್ಯಾತ್ತಕ್ರಂ ಚಾನುಪಿಬೇತ್ತತಃ || (ಸು. 789)

ಮಲದ ಹಿಂದಾಗಲಿ ಮುಂದಾಗಲಿ ರಕ್ತವನ್ನು ಯಾರು ಸ್ರವಿಸುತ್ತಾನೋ ಅವನು ಗೋಳಿ ಮುಂತಾದ ಹಾಲುಮರಗಳ ಕುಡಿಗಳೊಂದಿಗೆ ಕಾಯಿಸಿದ ಹಾಲನ್ನು (ಹಾಲು ಕಷಾಯವನ್ನು), ಜೇನು, ಸಕ್ಕರೆ, ಮತ್ತು ತುಪ್ಪವನ್ನು ಕೂಡಿಸಿಕೊಂಡು, ಕುಡಿಯಬೇಕು. ಅಥವಾ ಆ ಹಾಲನ್ನು ಕಡೆದು ಬಂದ ಬೆಣ್ಣೆಯನ್ನು (ಜೇನು ಮತ್ತು ಸಕ್ಕರೆ ಕೂಡಿಸಿಕೊಂಡು) ನೆಕ್ಕಿ ಅನುಪಾನವಾಗಿ ಮಜ್ಜಿಗೆಯನ್ನು ಕುಡಿಯತಕ್ಕದ್ದು.

ಷರಾ ಕುಡಿಗಳು ಅರ್ಧಪಲ, ಹಾಲು ೪ ಪಲ, ನೀರು ೧೬ ಪಲ, ಕೂಡಿಸಿ, ಹಾಲು ಮಾತ್ರ ಉಳಿಯುವವರೆಗೆ ಬತ್ತಿಸುವದು ಎಂತ ನಿ ಸಂ ವ್ಯಾ (ಪು 599)

ಮಧುಕಂ ಶರ್ಕರಾಂ ಲೋಧ್ರಂ ಪಯಸ್ಯಾಮಥ ಸಾರಿವಾಮ್ |
ಪಿಬೇಚ್ಛಾಗೇನ ಪಯಸಾ ಸಕ್ಷೌದ್ರಾಂ ರಕ್ತನಾಶಿನೀಮ್ || (ಸು. 790)

ಜ್ಯೇಷ್ಠಮಧು, ಸಕ್ಕರೆ, ಲೋಧ್ರ, ಕ್ಷೀರಕಾಕೋಲಿ, ಸುಗಂಧಿಬೇರು, ಇವುಗಳ ಚೂರ್ಣ ವನ್ನು ಆಡಿನ ಹಾಲಿನಲ್ಲಿ ಕಲಸಿ, ಜೇನು ಕೂಡಿಸಿಕೊಂಡು, ಪಾನ ಮಾಡುವದರಿಂದ ರಕ್ತ ಸ್ರಾವವು ನಿಲ್ಲುವದು.

ಷರಾ 'ಪಯಸ್ಯಾ' ಎಂದರೆ 'ಅರ್ಕಪುಷ್ಪೀ' ಎಂತ ನಿ. ಸಂ ವ್ಯಾ. (ಪು 599) 'ಅರ್ಕಪುಷ್ಪೀ' ಎಂಬದು ತಿಲೋಣಿ, ತಿರಿಕಾಳ ಎಂತ ಕೆಲವರು, ಸಿಂಧುನದಿಯ ಸಮೀಪದ ಕಣಿವೆಯಲ್ಲಿ ಬೆಳೆಯುವ ಒಂದು ಔಷಧದ ಗಿಡ ಎಂತ ನಾ. ನಿ (ಪು 217)

ದ್ರವೇ ಸರಕ್ತೇ ಸ್ರವತಿ ಬಾಲಬಿಲ್ವಂ ಸಫಾಣಿತಮ್ |
ಸಕ್ಷೌದ್ರತೈಲಂ ಪ್ರಾಗೇವ ಲಿಹ್ಯಾದಾಶು ಹಿತಂ ಹಿ ತತ್ || (ಸು. 790)

**ಮಲವು ರಕ್ತಕೂಡಿಕೊಂಡು ತೆಳ್ಳಗಾಗಿ ಹೋಗುವ ಸಂಗತಿಯಲ್ಲಿ, ಎಳೇ ಬಿಲ್ವಪತ್ರೆ ಕಾಯಿಯನ್ನು ಅರೆದು, ರವೆಬೆಲ್ಲ, ಜೇನು ಮತ್ತು ಎಳ್ಳೆಣ್ಣೆ ಕೂಡಿಸಿಕೊಂಡು, ಊಟಕ್ಕೆ ಮೊದಲೇ ಬೇಗನೆ ನೆಕ್ಕಬೇಕು; ಅದು ಹಿತವಾಗುತ್ತದೆ.**

ರಕ್ತವಿಡ್ದೋಷಬಹುಲಂ ದೀಪ್ತಾಗ್ನಿರ್ಯೋಽತಿಸಾರ್ಯತೇ |
ವಿಡಂಗತ್ರಿಫಲಾಕೃಷ್ಣಾಕಷಾಯೈಸ್ತಂ ವಿರೇಚಯೇತ್ ||
ಅಥವೈರಂಡಸಿದ್ಧೇನ ಪಯಸಾ ಕೇವಲೇನ ವಾ |
ಯವಾಗೂರ್ವಿತರೇತ್ತಸ್ಯ ವಾತಘ್ನೈರ್ದೀಪನೈಃ ಕೃತಾಃ || (ಸು. 790)

ಬಹು ದೋಷಯುಕ್ತವಾಗಿ ರಕ್ತವನ್ನೂ ಮಲವನ್ನೂ ಅತಿಸಾರಮಾಡುವ ರೋಗಿಯ ಅಗ್ನಿಯು ಚುರುಕಾಗಿದ್ದರೆ, ಅವನಿಗೆ ವಾಯುವಿಳಂಗ, ತ್ರಿಫಲೆ, ಹಿಪ್ಪಲಿ, ಇವುಗಳ ಕಷಾಯಗಳನ್ನು ಕೊಟ್ಟು, ಅಥವಾ ಹರಳುಗಿಡದ ಬೇರಿನೊಂದಿಗೆ ಕಾಯಿಸಿದ ಹಾಲನ್ನು ಮಾತ್ರವೇ ಕೊಟ್ಟು, ವಿರೇಚನ ಮಾಡಿಸಬೇಕು; (ಅನಂತರ) ವಾತಹರವಾಗಿಯೂ, ದೀಪನಕರವಾಗಿಯೂ, ಇರುವ ದ್ರವ್ಯಗಳೊಂದಿಗೆ ತಯಾರಿಸಿದ ಯವಾಗೂಗಂಜಿಗಳನ್ನು ಕೊಡಬೇಕು.

ಷರಾ 'ರಕ್ತವಿಡ್' ಎಂಬಲ್ಲಿ ಸಕ್ತವಿಡ್' ಎಂತ ಪಾಠಾಂತರ ಉಂಟು, ಆಗ್ಗೆ, ಮಲಬದ್ಧವಾಗಿ ಬಹಳ ದೋಷ ಅತಿಸಾರವಾಗುವ ಸಂಗತಿಯಲ್ಲಿ ಎಂತ ಅರ್ಥವಾಗುತ್ತದೆ

ಧಾತಕ್ಯತಿವಿಷಾಮ್ಭೋದಚಿಂಚಾಂಘ್ರ್ಯರಳುವತ್ಸಕಮ್ |
ಸಾಮ್ರಾಸ್ಥಿಶಾಲ್ಮಲೀವೃಂತಂ ರಕ್ತಾತೀಸಾರಭೇಷಜಮ್ ||
(ವೈ. ಸಾ. ಸಂ. 222)

ಧಾತಕೀ, ಅತಿವಿಡೆ, ಭದ್ರಮುಷ್ಟಿ, ಹುಣಸೆಬೇರು, ಆನೆಮುಂಗಿನ ಚಕ್ಕೆ, ಕೊಡಸಿಗನ ಚಕ್ಕೆ, ಮಾವಿನಹಣ್ಣಿನ ಗೊರಟಿನ ತಿರಳು, ಬೂರುಗದ ಎಲೆಗಳ ಕಡ್ಡಿ, ಇವು(ಗಳ ಕಷಾಯ) ರಕ್ತಾತಿಸಾರಕ್ಕೆ ಔಷಧವಾಗಿರುತ್ತದ.

ಗೋದುಗ್ಧಂ ನವನೀತಂ ಚ ಮಧುನಾ ಸಿತಯಾ ಸಹ |
ಲೀಢಂ ರಕ್ತಾತಿಸಾರೇ ತು ಗ್ರಾಹಕಂ ಪರಮಂ ಮತಮ್ ||

ದನದ ಹಾಲು, ಬೆಣ್ಣೆ, ಜೇನು ಮತ್ತು ಸಕ್ಕರೆ, ಇವುಗಳನ್ನು ಕಲಸಿ ನೆಕ್ಕುವದು ರಕ್ತಾತಿಸಾರದಲ್ಲಿ ಉತ್ತಮವಾದ ಗ್ರಾಹಕ (ಗ್ರಾಹಿ, ಹಿಡಿದು ನಿಲ್ಲಿಸತಕ್ಕಂಥಾ ಗುಣವುಳ್ಳದ್ದು) ಎಂತ ತಿಳಿದಿದ್ದಾರೆ.

ಧನ್ವನಾಗರಮುಸ್ತಾ ಚ ಬಾಲಕಂ ಬಾಲಬಿಲ್ವಕಮ್ |
ಬಲಾ ನಾಗರಬಲಾ ಚೇತಿ ಕ್ವಾಥೋ ರಕ್ತಾತಿಸಾರಿಣಾಮ್ || (ಹಾ. 131)

ಬಳ್ಳಿತುರಚನ ಬೇರು, ಶುಂಠಿ, ಭದ್ರಮುಷ್ಟಿ, ಮುಡಿವಾಳ, ಎಳೇ ಬಿಲ್ವಪತ್ರೆಕಾಯಿ, ಕಲ್ಲಂಗಡಲೆ(ಕಡೀರು)ಬೇರು ಮತ್ತು ಆನೆಕಡೀರುಬೇರು, ಈ ಕಷಾಯಯೋಗವು ರಕ್ತಾತಿಸಾರದವರಿಗೆ ಹಿತವಾದ್ದು.

40. ಗುದಪಾಕಸ್ತು ಪಿತ್ತೇನ ಯಸ್ಯ ಸ್ಯಾದಹಿತಾಶಿನಃ |
ತತ್ರ ಪಿತ್ತಹರಾಃ ಸೇಕಾಸ್ತತ್ಸಿದ್ಧಾಃ ಶ್ಚಾನುವಾಸನಾಃ || (ಸು. 789)

ಗುದಪಾಕಚಿಕಿತ್ಸೆ

ಅಹಿತವಾದ ಆಹಾರವನ್ನು ಸೇವಿಸುವ ಅತಿಸಾರರೋಗಿಗೆ ಪಿತ್ತದಿಂದುಂಟಾಗುವ ಗುದಪಾಕ(ಆಸನ ಬೆಂದುಹೋಗುವದ)ಕ್ಕೆ ಪಿತ್ತಹರವಾದ ಕಷಾಯಗಳಿಂದ ಧಾರೆಗಳು ಮತ್ತು ಪಿತ್ತಹರವಾದ ಔಷಧಗಳಿಂದ ತಯಾರಿಸಲ್ಪಟ್ಟ ಘೃತಗಳಿಂದ ಅನುವಾಸನವಸ್ತಿಗಳು ಹಿತವಾಗಿರುತ್ತವೆ

ಗುದೋ ಬಹುಭಿರುತ್ಥಾನೈರ್ಯಸ್ಯ ಪಿತ್ತೇನ ಪಚ್ಯತೇ ।
ಸೇಚಯೇತ್ತಂ ಸುಶೀತೇನ ಪಟೋಲಮಧುಕಾಮ್ಬುನಾ ॥
ಪಂಚವಲ್ಕಮಧೂಕಾನಾಂ ರಸೈರಿಕ್ಷುರಸೈರ್ಘೃತೈಃ ।
ಛಾಗೈರ್ಗವ್ಯೈಃ ಪಯೋಭಿರ್ವಾ ಶರ್ಕರಾಕ್ಷೌದ್ರಸಂಯುತೈಃ ॥
ಪ್ರಕ್ಷಾಲನಾನಾಂ ಕಲ್ಕೈರ್ವಾ ಸಸರ್ಪಿಷ್ಕೈಃ ಪ್ರಲೇಪಯೇತ್ ।
ಏಷಾಂ ವಾ ಸುಕೃತೈಶ್ಚೂರ್ಣೈಸ್ತಂ ಗುದಂ ಪ್ರತಿಸಾರಯೇತ್ ॥
ಧಾತಕೀಲೋಧ್ರಚೂರ್ಣೈರ್ವಾ ಸಮಾಂಶೈಃ ಪ್ರತಿಸಾರಯೇತ್ ।
ತಥಾ ತತ್ರ ಸ್ರವತ್ಯಸ್ರಂ ಗುದಂ ತೈಃ ಪ್ರತಿಸಾರಿತಮ್ ॥
ಪಕ್ವತಾ ಪ್ರಶಮಂ ಯಾತಿ ವೇದನಾ ಚೋಪಶಾಮ್ಯತಿ ।
ಯಥೋಕ್ತೈಃ ಸೇಚನೈಃ ಶೀತೈಃ ಶೋಣಿತೇ ನಿಃಸ್ರವತ್ಯಪಿ ॥
ಗುದವಂಕ್ಷಣಕಟ್ಯೂರು ಸೇಚಯೇದ್ಘೃತಭಾವಿತಮ್ ।
ಚಂದನಾದ್ಯೇನ ತೈಲೇನ ಶತಧೌತೇನ ಸರ್ಪಿಷಾ ॥
ಕಾರ್ಪಾಸಸಹಯೋಗೇನ ಸೇಚಯೇದ್ಗುದವಂಕ್ಷಣೌ ॥ (ಚ. 565)

ಬಹಳ ಸರ್ತಿ ಮಲವಿಸರ್ಜನೆಯಾದ ದೆಸೆಯಿಂದ ಗುದವು ಪಿತ್ತದಿಂದ ಬೇಯಿಸಲ್ಪಡುತ್ತದೆ. ಅದಕ್ಕೆ ಕಹಿಪಡುವಲು ಮತ್ತು ಜ್ಯೇಷ್ಠಮಧುವಿನ ಕಷಾಯದ ನೀರಿನಿಂದ ಬಹು ಶೀತವಾಗಿ ಧಾರೆ ಕೊಡಬೇಕು. ಐದು (ಹಾಲು)ಮರಗಳ ಚಕ್ಕೆಗಳು (ಗೋಳಿ ಮುಂತಾದವು) ಮತ್ತು ಇಪ್ಪೆಮರನ ತಿರಳು, ಇವುಗಳ ಕಷಾಯಗಳಿಂದಾಗಲಿ, ಕಬ್ಬುಗಳ ಹಾಲುಗಳಿಂದಾಗಲಿ, ತುಪ್ಪಗಳಿಂದಾಗಲಿ, ಸಕ್ಕರೆ ಮತ್ತು ಜೇನು ಕೂಡಿಸಿಕೊಂಡು ಆಡಿನ ಅಥವಾ ದನದ ಹಾಲುಗಳಿಂದಾಗಲಿ, ಗುದವನ್ನು ಚಿಮುಕಿಸಿ ತೊಳೆಯಬೇಕು. ಅಥವಾ ಪ್ರಕ್ಷಾಲನಗಳಿಗೆ ಹೇಳಲ್ಪಟ್ಟ ಔಷಧಗಳನ್ನು, ತುಪ್ಪ ಕೂಡಿಸಿಕೊಂಡು, ನುಣ್ಣಗಾಗಿ ಅರೆದ ಕಲ್ಕಗಳನ್ನು ಗುದಕ್ಕೆ ಲೇಪಿಸಬೇಕು. ಅಥವಾ ಇದೇ ಔಷಧಗಳ ನುಣ್ಣಗಿನ ಚೂರ್ಣಗಳಿಂದಾಗಲಿ, ಧಾತಕೀ ಕುಸುಮ ಮತ್ತು ಲೋಧ್ರ, ಇವುಗಳನ್ನು ಸಮಾಂಶವಾಗಿ ತೆಗೆದುಕೊಂಡು ಮಾಡಿದ ಚೂರ್ಣಗಳಿಂದಾಗಲಿ, ಗುದವನ್ನು ಸಾರಿಸಬೇಕು; ಹೀಗೆ ಅವುಗಳಿಂದ ಪ್ರತಿಸಾರಣಮಾಡಲ್ಪಟ್ಟ ಗುದದಿಂದ (ಕಟ್ಟಿಕೊಂಡಿದ್ದ) ರಕ್ತವು ಸ್ರವಿಸಿ ಹೋಗಿ, ಬೆಂದಿರುವ ಸ್ಥಿತಿ ವಾಸಿಯಾಗುತ್ತದೆ ಮತ್ತು ನೋವು ಉಪಶಮನವಾಗುತ್ತದೆ. ರಕ್ತ ಸ್ರವಿಸುವ ಸ್ಥಿತಿಯಲ್ಲಿಯೂ ಗುದಕ್ಕೂ, ತೊಡೆ ಸಂದುಗಳಿಗೂ, ಸೊಂಟಕ್ಕೂ, ತೊಡೆಗಳಿಗೂ, ತುಪ್ಪ ಸವರಿಕೊಂಡು, ಮೇಲೆ ಹೇಳಲ್ಪಟ್ಟ ತಣ್ಣಗಿನ ಧಾರೆಯ ಔಷಧಗಳಿಂದ ಅದೇ ಪ್ರಕಾರ ಸೇಚನ ಮಾಡತಕ್ಕದ್ದು. ಚನ್ದನಾದಿ ತೈಲವನ್ನಾಗಲಿ, ನೂರಾವರ್ತಿ ತೊಳೆದ ತುಪ್ಪವನ್ನಾಗಲಿ, ಗುದಕ್ಕೂ (ಸುತ್ತಲಿನ) ತೊಡೆ ಸಂದಿಗೂ ಹತ್ತಿಯಿಂದ (ಹತ್ತಿಯನ್ನು ಸ್ನೇಹದಲ್ಲಿ ನೆನೆಸಿ ಹಿಂಡುವದರಿಂದ) ಸೇಚನ ಮಾಡಬೇಕು.

41. ಶ್ಲೇಷ್ಮಾತಿಸಾರೇ ಪ್ರಥಮಂ ಹಿತಂ ಲಂಘನಪಾಚನಮ್ ।
ಯೋಜ್ಯಶ್ಚಾಮಾತಿಸಾರಘ್ನೋ ಯಥೋಕ್ತೋ ದೀಪನೋ ಗಣಃ ॥

ಕಫಾತಿಸಾರದ ಚಿಕಿತ್ಸೆ

ಲಂಘಿತಸ್ಯಾನುಪೂರ್ವ್ಯಾಂ ಚ ಕೃತಾಯಾಂ ನ ನಿವರ್ತತೇ ।
ಕಫಜೋ ಯದ್ಯತೀಸಾರಃ ಕಫಘ್ನೈಸ್ತಮುಪಾಚರೇತ್ ॥
ಬಿಲ್ವಕರ್ಕೋಟಕಾಮುಸ್ತಮಭಯಾ ವಿಶ್ವಭೇಷಜಮ್ ।
ವಚಾ ವಿಡಂಗಂ ಭೂತೀಕಂ ಧಾನ್ಯಕಂ ದೇವದಾರು ಚ ॥
ಕುಷ್ಠಂ ಸಾತಿವಿಷಾ ಪಾಠಾ ಚವ್ಯಂ ಕಟುಕರೋಹಿಣೀ ।
ಪಿಪ್ಪಲೀ ಪಿಪ್ಪಲೀಮೂಲಂ ಚಿತ್ರಕಂ ಹಸ್ತಿಪಿಪ್ಪಲೀ ॥
ಯೋಗಾನ್ ಶ್ಲೋಕಾರ್ಧವಿಹಿತಾಂಶ್ಚತುರಸ್ತಾನ್ ಪ್ರಯೋಜಯೇತ್ ।
ಶೃತಾನ್ ಶ್ಲೇಷ್ಮಾತಿಸಾರೇಷು ಕಾಯಾಗ್ನಿಬಲವರ್ಧನಾನ್ ॥
ಅಜಾಜೀಂ ಸಸಿತಾಂ ಪಾಠಾಂ ನಾಗರಂ ಮರಿಚಾನಿ ಚ ।
ಧಾತಕೀದ್ವಿಗುಣಂ ದದ್ಯಾನ್ಮಾತುಲುಂಗರಸಾಪ್ಲುತಮ್ ॥ (ಚ. 566-7)

ಕಫಾತಿಸಾರದಲ್ಲಿ ಪ್ರಥಮತಃ ಲಂಘನ-ಪಾಚನ-ಕ್ರಮಗಳನ್ನು ನಡಿಸುವದು ಹಿತವಾಗುತ್ತದೆ; ಮತ್ತು ಆಮಾತಿಸಾರಕ್ಕೆ ಹೇಳಲ್ಪಟ್ಟ ದೀಪನ ಗುಣದ ಔಷಧಗಳ ಗಣವನ್ನು ಪ್ರಯೋಗಿಸಬೇಕು. ಲಂಘನ ಮತ್ತು ಅದರನಂತರದ ಉಪಚಾರಗಳನ್ನು ನಡಿಸಿದಾಗ್ಯೂ, ಕಫಾತಿಸಾರವು ನಿಲ್ಲದಿದ್ದರೆ, ಅದಕ್ಕೆ ಕಫನಾಶನಕರವಾದ ಔಷಧಗಳಿಂದ ಉಪಚಾರಮಾಡತಕ್ಕದ್ದು:

(1) ಬಿಲ್ವಪತ್ರೆ(ಕಾಯಿ ಅಥವಾ ಬೇರು), ಮಧಾಗಲಗಡ್ಡೆ, ಭದ್ರಮುಷ್ಟಿ, ಅಣಿಲೆಕಾಯಿ, ಶುಂಠಿ;

(2) ಬಜೆ, ವಾಯುವಿಳಂಗ, ಸಂಬಾರಹುಲ್ಲು (ಮಲ. ನಾನ್ಮುಕಪ್ಪುಲ್ಲು), ಕೊತ್ತುಂಬರಿ, ದೇವದಾರ;

(3) ಚಂಗಲಕೋಷ್ಠ, ಅತಿವಿಷೆ, ಪಾಡಾವಳಿಗಡ್ಡೆ, ಕಾಡುಮೆಣಸಿನ ಬೇರು, ಕಟುಕರೋಹಿಣಿ,

(4) ಹಿಪ್ಪಲಿ, ಹಿಪ್ಪಲಿಮೂಲ, ಚಿತ್ರಮೂಲ, ಗಜಹಿಪ್ಪಲಿ;

ಈ ನಾಲ್ಕು ಯೋಗಗಳ ಔಷಧಗಳ ಕಷಾಯಗಳನ್ನು ಕಫಾತಿಸಾರಗಳಲ್ಲಿ ಉಪಯೋಗಿಸತಕ್ಕದ್ದು. ಅವುಗಳಿಂದ ದೇಹದ ಬಲವೂ, ಅಗ್ನಿಬಲವೂ ವೃದ್ಧಿಯಾಗುತ್ತವೆ.

(5) ಜೀರಿಗೆ, ಸಕ್ಕರೆ, ಪಾಡಾವಳಿಗಡ್ಡೆ, ಶುಂಠಿ, ಕಾಳುಮೆಣಸು, ಇವುಗಳನ್ನು ಸಮಾಂಶವಾಗಿ, ಧಾತಕೀಕುಸುಮ ಎರಡು ಪಾಲು, ಸೇರಿಸಿ ಮಾಡಿದ ಚೂರ್ಣವನ್ನು (ಹುಳಿ) ಮಾದಳ ಹಣ್ಣಿನ ರಸದಲ್ಲಿ ಕಲಸಿ ಕೊಡಬೇಕು.

ಪಠಾ 'ಸಸಿತಾಂ' ಎಂಬಲ್ಲಿ 'ಅಸಿತಾಂ' ಎಂತ ಪಾಠವಿಟ್ಟು, ಹಿಪ್ಪಲಿಯನ್ನು ಸಕ್ಕರೆ ಬದಲಾಗಿ ಉಪಯೋಗಿಸುವದುಂಟೆಂತ ಕಾಣುತ್ತದೆ

ಧಾತಕೀ ನಾಗರಂ ಬಿಲ್ವಂ ಲೋಧ್ರಂ ಪದ್ಮಸ್ಯ ಕೇಸರಮ್ ।
ಜಂಬೂತ್ವಕ್ ನಾಗರಂ ಧಾನ್ಯಂ ಪಾಠಾ ಮೋಚರಸಂ ಬಲಾ ॥
ಸಮಂಗಾ ಧಾತಕೀ ಬಿಲ್ವಮಧ್ಯಂ ಜಂಬ್ವಾಮ್ರಯೋಸ್ತ್ವಚಾ ।
ಕಪಿತ್ಥಾನಿ ವಿಡಂಗಾನಿ ನಾಗರಂ ಮರಿಚಾನಿ ಚ ॥
ಚಾಂಗೇರೀಕೋಲತಕ್ರಾಮ್ಲಾಂಶ್ಚತುರಸ್ತಾನ್ ಕಫಾತುರೇ ।
ಶ್ಲೋಕಾರ್ಧವಿಹಿತಾನ್ದದ್ಯಾತ್ಸಸ್ನೇಹಲವಣಾನ್ ಖಡಾನ್ ॥ (ಚ. 567)

(1) ಧಾತಕೀಕುಸುಮ, ಶುಂಠಿ, ಬಿಲ್ವಪತ್ರೆ(ಕಾಯಿ ಅಥವಾ ಬೇರು), ಲೋಧ್ರ ಮತ್ತು ತಾವರೆಕುಸುಮ;

(2) ನೇರಳೆಕೆತ್ತೆ, ಶುಂಠಿ, ಕೊತ್ತುಂಬರಿ, ಪಾಡಾವಳಿಗಡ್ಡೆ, ಬೂರುಗದ ಮೇಣ ಮತ್ತು ಕಲ್ಲಂಗಡಲೆಬೇರು;

(3) ನಾಚಿಕೆಸೊಪ್ಪಿನ ಗಿಡದ ಬೇರು, ಧಾತಕೀಕುಸುಮ, ಬಿಲ್ವಪತ್ರೆಕಾಯಿಯ ತಿರಳು, ನೇರಳೆಕೆತ್ತೆ ಮತ್ತು ಮಾವಿನ ಕೆತ್ತೆ;

(4) ಬೇಲದ ಕಾಯಿ, ವಾಯುವಿಳಂಗ, ಶುಂಠಿ, ಮತ್ತು ಕಾಳುಮೆಣಸು;

ಈ ನಾಲ್ಕು ಯೋಗಗಳ ಔಷಧಗಳಿಂದ, ಪುಲ್ಲಂಪುರಚೆ(ಮಲ ಪುಳಿಯಾರಲ)ಹುಳಿ, ಬೊಗರೀಹುಳಿ, ಹುಳಿಮಜ್ಜಿಗೆ, ಉಪ್ಪು, ಎಳ್ಳೆಣ್ಣೆ, ಇವುಗಳನ್ನು ಕೂಡಿಸಿ, ಮಾಡಿದ ನಾಲ್ಕು ವಿಧವಾದ (ಪಳಿದ್ಯ ಅಥವಾ) ತಂಬುಳಿಗಳನ್ನು ಕಫಾತಿಸಾರರೋಗಿಗೆ ಕೊಡತಕ್ಕದ್ದು.

ಭ್ರಷ್ಟಂ ಪಥ್ಯಾಕುಬೇರಾಕ್ಷಿಶುಂಠೀಕೈಡರ್ಯದೀಪ್ಯಕಮ್ ।
ಚೂರ್ಣಿತಂ ಪಂಚಚೂರ್ಣಂ ತು ಶ್ಲೇಷ್ಮಘ್ನಂ ದೀಪನಂ ಪರಮ್ ॥
(ವೈ. ಸಾ. ಸಂ. 215)

ಅಣಿಲೆಕಾಯಿ, ಗಜ್ಜಿಗದ ಕಾಯಿಯ ತಿರಳು, ಶುಂಠಿ, ಕರಿಬೇವಿನ ಸೊಪ್ಪು, ಓಮ, ಇವು ಐದು ಬಗೆಗಳನ್ನು ಹುರಿದು ಚೂರ್ಣಿಸಿ, (ಜೇನಿನೊಂದಿಗೆ) ಸೇವಿಸಲು ಕಫಾತಿಸಾರ ಪರಿಹಾರವಾಗುವದು; ಅದು ಅಗ್ನಿದೀಪನಕ್ಕೆ ಉತ್ತಮವಾದ್ದು.

42. ಕಟ್ವಾದಿಭೀರಸ್ಯೈಃ ಕ್ರುದ್ಧೈಃ(?ದ್ಧೌ) ಪ್ರವೃದ್ಧೌ ಪಿತ್ತಮಾರುತೌ ।
ವ್ಯಾಸಾದ್ಯ ಗ್ರಹಣೀಂ ನ್ನೄಣಾಮತೀಸಾರಕರೌ ಸ್ಮೃತೌ ॥
ಸಶಬ್ದಂ ಫೇನಿಲಂ ರೂಕ್ಷಂ ಕಷಾಯೋದಕಸನ್ನಿಭಮ್ ।
ಪಕ್ವಾಮ್ಲರಸವರ್ಣಾಭಂ ಹರಿದ್ರಾಪ್ರತಿಮಂ ಘನಮ್ ॥
ವಿಣ್ಮೂತ್ರಕೃಷ್ಣಂ ಸೃಜತಿ ಸಶೂಲಂ ದಾಹಪಾಕವಾನ್ ।
ವಿದ್ಯಾತ್ತದ್ದಾಹಶೋಷಾನ್ತಂ ವಾತಪಿತ್ತಾತಿಸಾರಿಣಾಮ್ ॥
(ಚಿ. ಸಾ. ಸಂ. 95)

ವಾತಪಿತ್ತಾತಿಸಾರದ ನಿದಾನ ಮತ್ತು ಲಕ್ಷಣ

ಕಾರ ಮುಂತಾದ (ವಾತಪಿತ್ತಪ್ರಕೋಪಕರವಾದ) ರಸಗಳ ಉಪಯೋಗದಿಂದ ಅತಿಯಾಗಿ ಬೆಳೆದು ಕೋಪಗೊಂಡಂಥ ಪಿತ್ತವಾಯುಗಳು ಗ್ರಹಣಿಯನ್ನು ವಶಮಾಡಿಕೊಂಡು, ಮನುಷ್ಯರಲ್ಲಿ ಅತಿಸಾರವನ್ನುಂಟುಮಾಡುತ್ತವೆ. ಆ ವಾತಪಿತ್ತಾತಿಸಾರದಲ್ಲಿ ರೋಗಿಯು ಶಬ್ದದೊಡನೆ, ನೊರೆ ಕೂಡಿಕೊಂಡ, ಜಿಡ್ಡಿಲ್ಲದ, ಕಷಾಯದ ನೀರಿನ ಹಾಗಿನ, ಹುಣಸೆಹಣ್ಣಿನ ರಸದ ವರ್ಣದ, ಅರಸಿನದ ವರ್ಣದ, (ಅಥವಾ) ಕಪ್ಪಾದ ಮತ್ತು ಭಾರವುಳ್ಳ ಮಲಮೂತ್ರಗಳನ್ನು, ಶೂಲೆಯುಕ್ತವಾಗಿ, ಮತ್ತು ಉರಿ ಮತ್ತು ಪಾಕವುಳ್ಳವನಾಗಿ, ವಿಸರ್ಜನೆಮಾಡುತ್ತಾನೆ. ಅದರಿಂದ ಕೊನೆಗೆ ದಾಹರೋಗ ಮತ್ತು ಶೋಷರೋಗ ಉಂಟಾಗುತ್ತವೆ.

ಪರಾ ಅತಿಸಾರ ಅತಿಯಾಗಿ ವಾಯು ತನ್ನ ಸ್ಥಾನದಲ್ಲಿ ಬಹಳ ವೃದ್ಧಿಗೊಂಡು ಪಿತ್ತದ ಸಹಾಯವನ್ನು ಪಡೆದಾಗೆ ಜಯಿಸುವದಕ್ಕೆ ಕಷ್ಟವಾಗುತ್ತದೆ (ಅ ಸಂ II-197).

43. ಲಘುನಾ ಪಂಚಮೂಲೇನ ಪಿಪ್ಪಲ್ಯಾ ಸಹ ಧಾನ್ಯಯಾ ।
ಆಹಾರೋ ಭಿಷಜಾ ಯೋಜ್ಯಃ ಸರ್ವದಾ ಹಿತಮಿಚ್ಛತಾ ॥

ವಾತಪಿತ್ತಾತಿಸಾರದ ಚಿಕಿತ್ಸೆ.

ಕಟ್ಫಲಂ ಮಧುಕಂ ಲೋಧ್ರಂ ತ್ವಗ್ದಾಡಿಮಫಲಸ್ಯ ಚ ।
ವಾತಪಿತ್ತಾತಿಸಾರಘ್ನಂ ಪಿಬೇತ್ತಂಡುಲವಾರಿಣಾ ॥
ಕಲಿಂಗಕಂ ವಚಾ ಮುಸ್ತಂ ದಾರು ಸಾತಿವಿಷಾ ಸಮಮ್ ।
ಕಲ್ಕಂ ತಂಡುಲತೋಯೇನ ಪಿಬೇತ್ಪಿತ್ತಾನಿಲಾಮಯಿ ॥
ಫೇನಿಲಂ ಬಹುಶೋ ರಕ್ತಂ ಸಕಲಂ ವೇದನಾನ್ವಿತಮ್ ।
ವಿವಿಧಂ ಸಾರ್ಯಮಾಣಂಚ(?ಶ್ಚ) ವಾತಪಿತ್ತಾತಿಸಾರಿಣಾಮ್ ॥

(ಚಿ. ಸಾ. ಸಂ. 95, 96)

ಹ್ರಸ್ವಪಂಚಮೂಲಗಳು, ಹಿಪ್ಪಲಿ, ಕೊತ್ತುಂಬರಿ, ಇವುಗಳನ್ನು ಕೂಡಿಸಿ ಮಾಡಿದ (ಯವಾಗೂಗಂಜಿ ಮುಂತಾದ) ಆಹಾರವನ್ನು ಯಾವಾಗಲೂ ರೋಗಿಯ ಹಿತವನ್ನು ಬಯಸುವ ವೈದ್ಯನು ವಿಧಿಸತಕ್ಕದ್ದು. (೧) ಕಿರುಶಿವನಿ, ಜ್ಯೇಷ್ಠಮಧು, ಲೋಧ್ರ, ದಾಳಿಂಬದ ಹಣ್ಣಿನ ಸಿಪ್ಪೆ, ಇವುಗಳ ಚೂರ್ಣವನ್ನು ಅಕ್ಕಚ್ಚಿನ ನೀರಿನಲ್ಲಿ ಅರೆದು ಪಾನ ಮಾಡಿದ್ದಲ್ಲಿ ವಾತಪಿತ್ತಾತಿಸಾರವು ನಾಶವಾಗುವದು (೨) ಇಂದ್ರಜೀವಿ, ಬಜೆ, ಭದ್ರ ಮುಷ್ಟಿ, ದೇವದಾರ, ಅತಿವಿಡೆ, ಇವುಗಳನ್ನು ಸಮಪಾಲಾಗಿ ಕೂಡಿಸಿ ಚೂರ್ಣಿಸಿ, ಅಕ್ಕಚ್ಚಿನೊಂದಿಗೆ ಅರೆದು, ಪಾನಮಾಡುವದರಿಂದ ಪಿತ್ತವಾತರೋಗವು ಮತ್ತು ನೊರೆಯುಕ್ತವಾಗಿ ರಕ್ತವನ್ನೇ, ಅಥವಾ ಬೇರೆ ನಾನಾ ವಿಧವಾಗಿ, ನೋವಿನೊಂದಿಗೆ, ಬಹಳ ಸರ್ತಿ ವಿಸರ್ಜನ ಮಾಡುವ ವಾತಪಿತ್ತಾತಿಸಾರವು ವಾಸಿಯಾಗುವವು.

44 ಕಟ್ವಮ್ಲಲವಣಸ್ನಿಗ್ಧಗುರುಮಿಷ್ಟೋಪಸೇವನಾತ್ ।
ಶ್ಲೇಷ್ಮಪಿತ್ತೇ ಪ್ರಕುಪಿತೇ ವಹ್ನಿಂ ಸಂಛಾದ್ಯ ದೇಹಿನಾಮ್ ॥

ಕಫಪಿತ್ತಾತಿಸಾರದ ನಿದಾನ ಮತ್ತು ಲಕ್ಷಣ

ಕಷಾಯಸ್ತಂ (?ಸಾರಯತೋ) ದ್ರವಂ ಸ್ನಿಗ್ಧಂ ಮನ್ದವೇಗಂ ಸವೇದನಮ್ ।
ಘನಂ ಶಾಲ್ಮಲಿ-ಪಿಚ್ಛಾಭಂ ಪದ್ಮಪತ್ರನಿಭಂ ಕ್ವಚಿತ್ ॥
ಪಿಚ್ಛಿಲಂ ಶಂಖವರ್ಣಾಭಂ ರಕ್ತಬಿಂದುಭಿರಾಚಿತಮ್ ।
ಕ್ಷುತ್ತೃಷ್ಣೇ ಚಾತಿಬಹುಲೇ ಶ್ಲೇಷ್ಮಪಿತ್ತಾತಿಸಾರಿಣಾಮ್ ॥

(ಚಿ. ಸಾ. ಸಂ. 96)

ಕಾರ, ಹುಳಿ, ಉಪ್ಪು, ಸ್ನಿಗ್ಧ, ಗುರು, ಸಿಹಿ, ಪದಾರ್ಥಗಳನ್ನು (ಅತಿಯಾಗಿ) ಸೇವಿಸುವದರಿಂದ ಕಫಪಿತ್ತಗಳು ಪ್ರಕೋಪಗೊಂಡು, ಜನರ ಅಗ್ನಿಯನ್ನು ಅಡಗಿಸಿ, ತೆಳ್ಳಗಾದ, ಸ್ನಿಗ್ಧವಾದ, ಮಂದವಾದ ವೇಗವುಳ್ಳ, ನೋವು ಸಹಿತವಾದ, ಗುರುವಾದ, ಬೂರುಗದ ಮೇಣದ ಹಾಗಿನ, ಕೆಲವು ಸಂಗತಿಯಲ್ಲಿ ತಾವರೆ ಎಲೆಗೆ ಸದೃಶವಾದ ವರ್ಣದ, ಪಿಚ್ಛಿಲವಾದ (ಉಕ್ಕುತೆಳಿನೀರಿನ ಹಾಗಿನ), ಶಂಖದ ಹಾಗಿನ (ಬೆಳ್ಳಗಿನ) ವರ್ಣದ, ರಕ್ತದ ಬಿಂದುಗಳುಳ್ಳ, ಅತಿಸಾರವನ್ನುಂಟುಮಾಡುತ್ತವೆ; ಮತ್ತು ಈ ಕಫಪಿತ್ತಾತಿಸಾರದ ರೋಗಿಗಳಿಗೆ ಹಸಿವೆ ಮತ್ತು ಬಾಯಾರಿಕೆ ಅತಿಹೆಚ್ಚಾಗಿರುವವು.

45\. ಶಾಲಿಪರ್ಣೀಬಲಾಬಿಲ್ವೈಃ ಪೃಥಕ್ಪರ್ಣ್ಯಾ ಚ ಸಾಧಿತಾ |
ದಾಡಿಮಾಮ್ಲಯುತಾ ಪೇಯಾ ಶ್ಲೇಷ್ಮಪಿತ್ತಾತಿಸಾರಿಣಾಮ್ ||

ಕಫಪಿತ್ತಾತಿಸಾರದ ಚಿಕಿತ್ಸೆ

ಕುಟಜಾತಿವಿಷಾ ಮುಸ್ತಂ ಹರಿದ್ರಾ ಪರ್ಣಿನೀದ್ವಯಮ್ |
ಸಕ್ಷೌದ್ರಶರ್ಕರಂ ಶಸ್ತಂ ಶ್ಲೇಷ್ಮಪಿತ್ತಾತಿಸಾರಿಣಾಮ್ ||
ಮುಸ್ತಾ ಸಾತಿವಿಷಾ ಮೂರ್ವಾ ವಚಾ ಚ ಕುಟಜೈಃ ಸಮಾಃ |
ಏಷಾಂ ಕಷಾಯಃ ಸಕ್ಷೌದ್ರಃ ಶ್ಲೇಷ್ಮಪಿತ್ತಾತಿಸಾರಹೃತ್ ||
ಮುಸ್ತಂ ಹರಿದ್ರೇ ಮಧುಕಂ ಪೃಶ್ನಿಪರ್ಣೀ ಸವೃಕ್ಷಕಮ್ |
ಮಧುಯುಕ್ತಂ ನಿಹನ್ತ್ಯಾಶು ಶ್ಲೇಷ್ಮಪಿತ್ತಸಮುದ್ಭವಮ್ ||
*** ಪಾಠಾ ವತ್ಸಕಬೀಜಾನಿ ಚಿತ್ರಕಂ ವಿಶ್ವಭೇಷಜಮ್ |
ಪಿಬೇನ್ನಿಃಕ್ವಾಥ್ಯ ಚೂರ್ಣಾನಿ ಕೃತ್ವಾ ಚೋಷ್ಣೇನ ವಾರಿಣಾ ||
ಪಿತ್ತಶ್ಲೇಷ್ಮಾತಿಸಾರಘ್ನಂ ಗ್ರಹಣ್ಯಾಂ ಶೂಲನುದ್ಧಿತಮ್ ||
(ಚಿ. ಸಾ. ಸಂ. 96)

(1) ಮೂವೆಲೆಬೇರು, ಕಲ್ಲಂಗಡಲೆಬೇರು, ಬಿಲ್ವಪತ್ರೆಬೇರು, ಓರೆಲೆಬೇರು, ಇವುಗಳನ್ನು ಕೂಡಿಸಿ ಮಾಡಿದ ಗಂಜಿಯನ್ನು, ದಾಳಿಂಬದ ಹುಳಿ ಕೂಡಿಸಿಕೊಂಡು, ಪಾನಮಾಡುವದು ಕಫಪಿತ್ತಾತಿಸಾರಿಗಳಿಗೆ ಹಿತವಾದ್ದು.

(2) ಕೊಡಸಿಗನ ಕೆತ್ತೆ, ಅತಿವಿಡೆ, ಭದ್ರಮುಷ್ಟಿ, ಅರಸಿನ, ಕಾಡುಹೆಸರಿನ ಬೇರು, ಕಾಡುಉದ್ದಿನ ಬೇರು, ಇವುಗಳ ಕಷಾಯವನ್ನು, ಜೇನು ಮತ್ತು ಸಕ್ಕರೆ ಕೂಡಿಸಿಕೊಂಡು, ಪಾನಮಾಡುವದು ಕಫಪಿತ್ತಾತಿಸಾರಿಗಳಿಗೆ ಪ್ರಶಸ್ತ.

(3) ಭದ್ರಮುಷ್ಟಿ, ಅತಿವಿಡೆ, ಹೆಗ್ಗುರಟೆಗೆ (ಮಲ ಪೆರುಂಕುರುಂಬ), ಬಜೆ, ಇವುಗಳ ನಾಲ್ಕಕ್ಕೆ ಸಮಪಾಲು ಕೊಡಸಿಗನ ಬೀಜ, ಇವುಗಳ ಕಷಾಯವನ್ನು, ಜೇನು ಕೂಡಿಸಿಕೊಂಡು, ಪಾನಮಾಡುವದರಿಂದ ಕಫಪಿತ್ತಾತಿಸಾರವು ಪರಿಹಾರವಾಗುವದು

ಷರಾ 'ಕುಟಜೈಃ' ಎಂಬಲ್ಲಿ 'ಕುಟಜಃ' ಎಂತ ಪಾಠಾಂತರ ಕಾಣುತ್ತದೆ ಅದರ ಪ್ರಕಾರ ಐದು ಬಗೆಗಳು ಸಮ ತೂಕ ಎಂತ ಅರ್ಥವಾಗುವದು. ಕಫವೇ ಅಧಿಕವಾಗಿದ್ದಲ್ಲಿ ಹಾಗೆ ಮಾಡಬಹುದು

(4) ಭದ್ರಮುಷ್ಟಿ, ಅರಸಿನ, ಮರದರಸಿನ, ಜ್ಯೇಷ್ಠಮಧು, ಓರೆಲೆಬೇರು, ಕೊಡಸಿಗನ ಕೆತ್ತೆ, ಇವುಗಳ ಕಷಾಯವನ್ನು, ಜೇನು ಕೂಡಿಸಿಕೊಂಡು, ಪಾನಮಾಡುವದರಿಂದ ಕಫ ಪಿತ್ತಾತಿಸಾರವು ಬೇಗನೆ ನಾಶವಾಗುತ್ತದೆ.

(5) ಪಾಡಾವಳಿಗಡ್ಡೆ, ಇಂದ್ರಜೀವಿ, ಚಿತ್ರಮೂಲ, ಶುಂಠಿ, ಇವುಗಳ ಕಷಾಯವನ್ನಾಗಲಿ, ಅವುಗಳ ಚೂರ್ಣವನ್ನು ಬಿಸಿನೀರಿನೊಂದಿಗಾಗಲಿ, ಪಾನಮಾಡುವದರಿಂದ ಪಿತ್ತ ಕಫಾತಿಸಾರ ನಾಶವಾಗುವದು; ಅದು ಗ್ರಹಣಿಯಲ್ಲಿಯೂ ಹಿತ; ಮತ್ತು ಶೂಲೆಯನ್ನು ಪರಿಹರಿಸತಕ್ಕಂಥಾದ್ದು.

46. ರಸ್ಯೈಃ ಸ್ವಾದುಕಟುಪ್ರಾಯೈರುಭೌ ವಾತಕಫೌ ನೃಣಾಮ್ |
ಕುರುತಸ್ತಾವತೀಸಾರಂ ಕ್ರುದ್ಧೌ ವಹ್ನಿಂ ನಿರಸ್ಯ ಚ ||
ದ್ರವಂ ಸಫೇನಂ ಪುರೀಷಂ ತತ್ತುಲ್ಯವಷಾಮಗನ್ಧಿಕಮ್ |
ಸಶಬ್ದಂ ವೇದನಾವನ್ತಂ ನ ಚಾಮಂ ಪರಿಪಚ್ಯತೇ ||
ನಿತ್ಯಂ ಗುಡಗುಡಾಯನ್ತಂ ತನ್ದ್ರಾಮೂರ್ಛಾಭ್ರಮಕ್ಲಮೈಃ |
ಪ್ರಸಕ್ತಂ ಸನ್ಧಿಕಟ್ಯೋರುಜಾನುಪೃಷ್ಠಾಸ್ಥಿಶೂಲಿನಃ || (ಚಿ. ಸಾ. ಸಂ. 97)

ವಾತಶ್ಲೇಷ್ಮಾತಿಸಾರದ ನಿದಾನ ಮತ್ತು ಲಕ್ಷಣ.

ಸಿಹಿರಸ ಮತ್ತು ಕಾರರಸ ಹೆಚ್ಚಾಗಿರುವ ಪದಾರ್ಥಗಳನ್ನು ಅತಿಯಾಗಿ ಸೇವಿಸುವದರಿಂದ ವಾತಕಫಗಳು ಕೋಪಗೊಂಡು ಜನರ ಅಗ್ನಿಯನ್ನು ನೊಂದಿಸಿ, ಅತಿಸಾರವನ್ನುಂಟುಮಾಡುತ್ತವೆ. ಆಗ್ಗೆ ನೀರಾದ ಮತ್ತು ಸಮಪಾಲು ನೊರೆಯುಳ್ಳ ಮಲ ಆಮವಾಸನೆಯುಳ್ಳದ್ದಾಗಿ, ಶಬ್ದದಿಂದ ಕೂಡಿಕೊಂಡು, ಮತ್ತು ವೇದನೆಯುಕ್ತವಾಗಿ ಸ್ರವಿಸುತ್ತದೆ ಮತ್ತು ಆಮವು ಪಚನವಾಗುವದಿಲ್ಲ; ನಿತ್ಯವಾಗಿ ಹೊಟ್ಟೆಯೊಳಗೆ ಗುಡುಗುಡು ಶಬ್ದ, ತಂದ್ರೆ, ಮೂರ್ಛೆ, ಭ್ರಮೆ, ಆಯಾಸ ಮತ್ತು ಸಂದುಗಳಲ್ಲಿಯೂ, ಸೊಂಟದಲ್ಲಿಯೂ, ತೊಡೆಗಳಲ್ಲಿಯೂ, ಕಾಲ ಮೊಣಗಂಟುಗಳಲ್ಲಿಯೂ, ಬೆನ್ನೆಲುಬಿನಲ್ಲಿಯೂ ಬಿಡದ ಶೂಲೆ ಸಹ ಉಂಟಾಗುವವು.

47. ಧಾನ್ಯಪಂಚಕಸಂಸಿದ್ಧೋ ಧಾನ್ಯವಿಶ್ವಕೃತೋಽಥವಾ |
ಆಹಾರೋ ಭಿಷಜಾ ಯೋಜ್ಯೋ ವಾತಶ್ಲೇಷ್ಮಾತಿಸಾರಿಣಾಮ್ ||
*** ಬಿಲ್ವಂ ವತ್ಸಕಬೀಜಾನಿ ಷಠಾ ಹಿಂಗುಶಿವಾನ್ವಿತಾ |
ವಾತಶ್ಲೇಷ್ಮಾತಿಸಾರೇಷು ಕಷಾಯಂ ಪಾಚನಂ ಪಿಬೇತ್ ||
ಚಿತ್ರಕಾತಿವಿಷಾಮುಸ್ತಂ ಬಾಲಬಿಲ್ವಂ ಸನಾಗರಮ್ |
ವತ್ಸಕತ್ವಕ್ಫಲಂ ಪಥ್ಯಾ ವಾತಶ್ಲೇಷ್ಮಾತಿಸಾರನುತ್ ||
ಪೂತಿ ದಾರು ತ್ವಚಂ ಲೋಧ್ರಂ ಕಟ್ವಂಗಮಥ ನಾಗರಮ್ |
ಪಾಡಿಮಾಮ್ಲಯುತಂ ದದ್ಯಾದ್ವಾತಶ್ಲೇಷ್ಮಾತಿಸಾರಿಣಾಮ್ ||
ವಾತಾತಿಸಾರೇ ಯಚ್ಚೋಕ್ತಂ ಪಾಚನಂ ಗ್ರಾಹಿ ಭೇಷಜಮ್ |
ತದತ್ರಾಪಿ ಪ್ರಯುಂಜೀತ ಸಪಿತ್ತಕಫಮಾರುತೇ || (ಚಿ. ಸಾ. ಸಂ. 97)

ವಾತಶ್ಲೇಷ್ಮಾತಿಸಾರದ ಚಿಕಿತ್ಸೆ.

ಕಫವಾತಾತಿಸಾರದಲ್ಲಿ ಕೊತ್ತುಂಬರಿ, ಶುಂಠಿ, ಭದ್ರಮುಷ್ಟಿ, ಮುಡಿವಾಳ ಮತ್ತು ಬಿಲ್ವಪತ್ರೆಕಾಯಿ, ಇವುಗಳನ್ನು, ಅಥವಾ ಕೊತ್ತುಂಬರಿ ಮತ್ತು ಶುಂಠಿಯನ್ನು, ಸೇರಿಸಿ ತಯಾರಿಸಲ್ಪಟ್ಟ (ಗಂಜಿ ಮುಂತಾದ) ಆಹಾರವನ್ನು ರೋಗಿಗೆ ವೈದ್ಯನು ಕೊಡಿಸಬೇಕು.

(1) ಬಿಲ್ವಪತ್ರೆಯ ಎಳೇ ಕಾಯಿ, ಇಂದ್ರಜೀವಿ, ಪಾಡಾವಳಿಗಡ್ಡೆ, (ಹುರಿದ) ಹಿಂಗು, ಅಣಿಲೆಕಾಯಿ, ಇವುಗಳ ಕಷಾಯವನ್ನು ಶ್ಲೇಷ್ಮವಾತಾತಿಸಾರಗಳಲ್ಲಿ ಪಾಚನಕ್ಕಾಗಿ ಕುಡಿಯಬೇಕು.

*** ಷಠಾ ಹಿಂಗನ್ನು ಪ್ರಕ್ಷೇಪವಾಗಿ ಅಲ್ಪ ಪ್ರಮಾಣದಲ್ಲಿ (೭ ಗುಂಜಾತೂಕಕ್ಕೆ ಮಿಕ್ಕದ) ಸೇರಿಸಬೇಕು

(2) ಚಿತ್ರಮೂಲ, ಅತಿವಿಡೆ, ಭದ್ರಮುಷ್ಟಿ, ಎಳೇ ಬಿಲ್ವಪತ್ರೆಕಾಯಿ, ಶುಂಠಿ, ಕೊಡಸಿಗನ ತೊಗಟು, ಇಂದ್ರಜೀವಿ, ಅಣಿಲೆಕಾಯಿ, ಇವುಗಳಿಂದ (ಕಷಾಯ ಅಥವಾ ಚೂರ್ಣವಾಗಿ ಉಪಯೋಗಿಸಲ್ಪಟ್ಟಲ್ಲಿ) ವಾತಕಫಾತಿಸಾರ ನಾಶವಾಗುತ್ತದೆ.

(3) ಸಂಬಾರಹುಲ್ಲು (ಮಲ. ನಾನ್ಮುಕಪ್ಪುಲ್ಲು), ದೇವದಾರ, ಲವಂಗಪಟ್ಟೆ, ಲೋಧ್ರ, ಆನೆಮುಂಗು, ಶುಂಠಿ, ಇವುಗಳ(ಕಷಾಯ ಅಥವಾ ಚೂರ್ಣವ)ನ್ನು, ದಾಳಿಂಬದ ಹುಳಿ ಕೂಡಿಸಿ, ವಾತಕಫಾತಿಸಾರಿಗಳಿಗೆ ಕೊಡತಕ್ಕದ್ದು.

ವಾತಾತಿಸಾರದಲ್ಲಿ ಉಕ್ತವಾದ ಔಷಧಗಳೊಳಗೆ ಪಾಚನ ಮತ್ತು ಗ್ರಾಹಿ ಗುಣಗಳುಳ್ಳಂಥವುಗಳನ್ನು ವಾತಕಫಾತಿಸಾರದಲ್ಲಿಯೂ, ಪಿತ್ತಯುಕ್ತವಾದ ವಾತಕಫಾತಿಸಾರ (ತ್ರಿದೋಷಜ)ದಲ್ಲಿಯೂ ಪ್ರಯೋಗಿಸತಕ್ಕದ್ದು.

ಪರಾ ಹಿಂದಿನ 21ನೇ ಸಂಖ್ಯೆ ನೋಡಿ

48. ಸ್ವೇ ಸ್ಥಾನೇ ಮಾರುತೋಽವಶ್ಯಂ ವರ್ಧತೇ ಕಫಸಂಕ್ಷಯೇ |
ಸ ವೃದ್ಧಃ ಸಹಸಾ ಹನ್ಯಾತ್ ತಸ್ಮಾತ್ತಂ ತ್ವರಯಾ ಜಯೇತ್ ||
ವಾತಸ್ಯಾನುಜಯೇತ್ಪಿತ್ತಂ ಪಿತ್ತಸ್ಯಾನುಜಯೇತ್ಕಫಮ್ |
ತ್ರಯಾಣಾಂ ವಾ ಜಯೇತ್ಪೂರ್ವಂ ಯೋ ಭವೇದ್ಬಲವತ್ತಮಃ ||
(ಚ. 568)

ಸನ್ನಿಪಾತಾತಿಸಾರದ ಚಿಕಿತ್ಸೆ.

ಅತಿಸಾರದಲ್ಲಿ ಕಫ ಕ್ಷಯವಾದ ಹಾಗೆ ವಾತವು ತನ್ನ ಸ್ಥಾನದಲ್ಲಿ (ಪಕ್ವಾಶಯದಲ್ಲಿ) ಅವಶ್ಯವಾಗಿ ವೃದ್ಧಿಯಾಗುತ್ತದೆ. ಹಾಗೆ ವೃದ್ಧಿಯಾದ ವಾತದ ದೆಸೆಯಿಂದ ಒಡನೆ ಮರಣ ಉಂಟಾಗಬಹುದಾದ್ದರಿಂದ, ಆ ವಾತವನ್ನು ತ್ವರೆಯಿಂದ ಜಯಿಸತಕ್ಕದ್ದು. ವಾತದ ಬೆನ್ನಿಗೆ ಪಿತ್ತವನ್ನು, ಪಿತ್ತದ ಬೆನ್ನಿಗೆ ಕಫವನ್ನು ಜಯಿಸತಕ್ಕದ್ದು; ಅಥವಾ ಮೂರು ದೋಷಗಳೊಳಗೆ ಯಾವದಕ್ಕೆ ಅತ್ಯಂತ ಬಲವುಂಟಾಗಿದೆಯೋ, ಅದನ್ನು ಮುಂದಾಗಿ ಜಯಿಸತಕ್ಕದ್ದು.

ಪರಾ ಮೂರು ದೋಷಗಳು ಸಮಬಲವಾಗಿರುವ ಸನ್ನಿಪಾತದಲ್ಲಿ ಜ್ವರಕ್ಕೆ ವಿಧಿಸಿದ ಪ್ರಕಾರ ಅತಿಸಾರದಲ್ಲಿಯೂ ಮುಂದಾಗಿ ಕಫಕ್ಕೆ ಚಿಕಿತ್ಸೆ ಮಾಡತಕ್ಕದ್ದಲ್ಲ, ವಾತವನ್ನು ಪ್ರಥಮತಃ ಜಯಿಸಬೇಕು ಎಂತ ತಾತ್ಪರ್ಯ ಮುಂದಿನ ವಚನದ ಅಡಿಯಲ್ಲಿ ಬರೆದ ಪರಾವನ್ನು ನೋಡಿ

ಸಮವಾಯೇ ತು ದೋಷಾಣಾಂ ಪೂರ್ವಂ ಪಿತ್ತಮುಪಾಚರೇತ್ |
ಜ್ವರೇ ಚೈವಾತಿಸಾರೇ ಚ ಸರ್ವತ್ರಾನ್ಯತ್ರ ಮಾರುತಮ್ || (ಸು. 791)

ಮೂರು ದೋಷಗಳು ಕೂಡಿಕೊಂಡಾಗ್ಗೆ ಜ್ವರದಲ್ಲಿಯೂ ಅತಿಸಾರದಲ್ಲಿಯೂ ಪಿತ್ತಕ್ಕೆ ಮುಂದಾಗಿ ಉಪಚಾರ ಮಾಡತಕ್ಕದ್ದು. ಬೇರೆ ಸರ್ವತ್ರ (ಎಲ್ಲಾ ರೋಗಗಳಲ್ಲಿಯೂ) ವಾತಕ್ಕೆ ಮುಂದಾಗಿ ಉಪಚಾರ ಮಾಡತಕ್ಕದ್ದು.

ಪರಾ ಸಾಧಾರಣವಾಗಿ ಜ್ವರದಲ್ಲಿ ಹೇಗೋ ಹಾಗೆ ಅತಿಸಾರದಲ್ಲಿ ಆಮಾಶಯದಲ್ಲಿಯ ಪಿತ್ತದ ಕೆಲಸ ಕೆಟ್ಟಿರುವದೇ ಪ್ರಧಾನ ದೋಷವಾದ್ದರಿಂದ, ಅದಕ್ಕೆ ಮುಂದಾಗಿ ಉಪಚಾರ ಮಾಡಬೇಕೆಂಬದು ಸು ನ ಅಭಿಪ್ರಾಯ ಅತಿಸಾರವು (ಮಲಪ್ರವೃತ್ತಿ) ಬಹಳವಾಗಿ, ವಾತವು ಅತಿಯಾಗಿ ಬೆಳೆದರೆ, ಕೂಡಲೆ ಮರಣ ಸಂಭವಿಸಬಹುದಾದ್ದರಿಂದ, ಅಂಥಾ ಸಂಗತಿಯಲ್ಲಿ ವಾತಕ್ಕೆ ಮುಂದಾಗಿ ಉಪಚಾರ ಮಾಡತಕ್ಕದ್ದೆಂಬ ಚ. ನ ಮತವು ಸು. ನ ವಚನಕ್ಕೆ ವಿರುದ್ಧವಲ್ಲ ಚ. ನ ವಾತದೋಷದಲ್ಲಿ ಅಶಕ್ತಿ (ನರಗಳ ದುರ್ಬಲತೆ) ಅಡಗಿಯದೆ ಪಕ್ವಾತಿಸಾರದಲ್ಲಿ ಅಶಕ್ತಿ ಅತಿಯಾಗದಂತೆ ಮುಂಜಾಗ್ರತೆ ತೆಗೆದುಕೊಳ್ಳಬೇಕೆಂಬದು ಸರಿಯಾದ್ದು. ಅಗ್ನಿಯನ್ನು ಕ್ರಮಪಡಿಸದೆ ಅತಿಸಾರ ಪರಿಹಾರವಾಗದೆಂಬ ಸು ನ ಹೇಳಿಕೆಯೂ ನಿರಾಕ್ಷೇಪವಾದ್ದು ಪಿತ್ತಕ್ಕೆ ಉಪಚಾರ ಮಾಡಬೇಕೆಂತಲ್ಲದೆ, ಪಿತ್ತವನ್ನು ಶಮನ ಮಾಡತಕ್ಕದ್ದೆಂತ ಸು. ಹೇಳಿರುವದಿಲ್ಲ ಮಲ ಸಂಗ್ರಹವಾಗುವದು ಪಕ್ವಾಶಯದಲ್ಲಿ, ಆ ಪಕ್ವಾಶಯವು ವಾತಕ್ಕೆ ಪ್ರಧಾನಸ್ಥಾನ, ಮತ್ತು ಮಲವನ್ನು ಅಲ್ಲಿ ನಿಲ್ಲಲಿಕ್ಕೆ ಬಿಡದೆ, ಕೆಳಗೆ ತಳ್ಳುವದು ವಾಯು, ಈ ವಿಚಾರದಿಂದ, ಇತರ ದೋಷಗಳು ವಾತಕ್ಕಿಂತಲೂ ಹೆಚ್ಚು ಬಲವಂತವಾಗಿರುವ ಸಂಗತಿಯಲ್ಲಿ ಹೊರತು, ಸಮಬಲ ದೋಷಗಳೊಳಗೆ ವಾತವನ್ನು ಮುಂದಾಗಿ ಜಯಿಸಬೇಕೆಂತ ಚ ಉಪದೇಶಮಾಡಿರುವವಾಗಿರುತ್ತದೆ.

ಶಾಲಿಪರ್ಣೀ ಪೃಶ್ನಿಪರ್ಣೀ ಬೃಹತೀ ಕಂಟಕಾರಿಕಾ |
ಬಲಾಶ್ವದಂಷ್ಟ್ರಾಬಿಲ್ವಾನಿ ಪಾಠಾ ನಾಗರಧಾನ್ಯಕಮ್ ||
ಏತದಾಹಾರಸಂಯೋಗೇ ಹಿತಂ ಸರ್ವಾತಿಸಾರಿಣಾಮ್ ||

(ಚಿ. ಸಾ. ಸಂ. 88)

ಮೂವೆಲೆ, ಓರೆಲೆ, ಗುಳ್ಳ, ಕಿರಿಗುಳ್ಳ, ಕಲ್ಲಂಗಡಲೆ, ನೆಗ್ಗಿಲು, ಬಿಲ್ವಪತ್ರೆ, ಇವುಗಳ ಬೇರುಗಳು, ಪಾಡಾವಳಿಗಡ್ಡೆ, ಶುಂಠಿ, ಕೊತ್ತುಂಬರಿ, ಇವುಗಳು ಸರ್ವ ಲಕ್ಷಣಗಳುಳ್ಳ (ತ್ರಿದೋಷಜ) ಅತಿಸಾರರೋಗಿಗಳಿಗೆ ಆಹಾರದಲ್ಲಿ (ಗಂಜಿ ಮುಂತಾದವುಗಳಿಗೆ) ಸೇರಿಸುವದಕ್ಕೆ ಹಿತವಾದವು.

ಪಂಚಮೂಲೀಬಲಾಬಿಲ್ವಗುಡೂಚೀಮುಸ್ತನಾಗರೈಃ |
ಪಾಠಾಭೂನಿಮ್ಬಬರ್ಹಿಷ್ಟಕುಟಜತ್ವಕ್ಫಲೈಃ ಶೃತಮ್ ||
ಸರ್ವಜಂ ಹನ್ತ್ಯತೀಸಾರಂ ಜ್ವರಂ ಚಾಪಿ ತಥಾ ವಮಿಮ್ |
ಸಶೂಲೋಪದ್ರವಂ ಶ್ವಾಸಂ ಕಾಸಂ ಚಾಪಿ ಸುದುಸ್ತರಮ್ ||
ಪಂಚಮೂಲೀ ಚ ಸಾಮಾನ್ಯ(? ನ್ಯಾತ್)ಪಿತ್ತೇ ಯೋಜ್ಯಾ ಕನೀಯಸೀ |
ವಾತೇ ಪುನರ್ಬಲಾಸೇ ಚ ಸಾ ಯೋಜ್ಯಾ ಮಹತೀ ಮತಾ ||

(ಭಾ. ಪ್ರ. 322)

ಪಂಚಮೂಲಗಳು, ಕಲ್ಲಂಗಡಲೆಬೇರು, ಬಿಲ್ವಪತ್ರೆಬೇರು (ಅಥವಾ ಎಳೇ ಕಾಯಿ), ಅಮೃತಬಳ್ಳಿ, ಭದ್ರಮುಷ್ಟಿ, ಶುಂಠಿ, ಪಾಡಾವಳಿಗಡ್ಡೆ, ನೆಲಬೇವು, ಮುಡಿವಾಳ, ಕೊಡಸಿಗನ ಕೆತ್ತೆ, ಇಂದ್ರಜೇವಿ, ಇವುಗಳ ಕಷಾಯದ ಪಾನದಿಂದ ತ್ರಿದೋಷಾತಿಸಾರ, ಜ್ವರ, ವಾಂತಿ, ಶೂಲೆಯ ಉಪದ್ರವ, ಉಬ್ಬಸ, ಕಠಿಣವಾದ ಕೆಮ್ಮು ಸಹ, ಪರಿಹಾರವಾಗುವವು. ಪಂಚಮೂಲ ಎಂದಲ್ಲಿ ಸಾಮಾನ್ಯವಾಗಿ ಪಿತ್ತದ ದೋಷವೇ ಅಧಿಕವಾದಾಗ್ಗೆ, ಹ್ರಸ್ವಪಂಚಮೂಲವನ್ನೂ, ವಾತವಾಗಲಿ ಕಫವಾಗಲಿ ಅಧಿಕ ಬಲವುಳ್ಳದ್ದಾದಾಗ್ಗೆ ಬೃಹತ್ಪಂಚಮೂಲವನ್ನೂ, ಉಪಯೋಗಿಸತಕ್ಕದ್ದು.

ಕಟ್ವಂಗಮೋಚಾಹ್ವಘನಾಮ್ಬುಬಿಲ್ವೈಃ ಸಸಾರಿವಾವತ್ಸಕನಾಗರೈಶ್ಚ |
ಜಲಂ ಶೃತಂ ಸರ್ವಭವಂ ನರಾಣಾಂ ನಿಹನ್ತ್ಯತೀಸಾರಮಸಕ್ತ(?ಹ್ಯ) ವೇಗಮ್ || (ಚಿ. ಸಾ. ಸಂ. 89)

ಆನೆಮುಂಗು, ಬೂರುಗದ ಮೇಣ, ಭದ್ರಮುಷ್ಟಿ, ಮುಡಿವಾಳ, ಬಿಲ್ವಪತ್ರೆ, ಸುಗಂಧಿ ಬೇರು, ಕೊಡಸಿಗ, ಶುಂಠಿ, ಇವುಗಳ ಕಷಾಯದ ಪಾನದಿಂದ ಜನರಲ್ಲಿ ತ್ರಿದೋಷಗಳಿಂದ ಹುಟ್ಟಿದ ಸಹಿಸಲಾರದ ವೇಗವುಳ್ಳ ಅತಿಸಾರವು ನಾಶವಾಗುತ್ತದೆ.

ತ್ವಕ್ಚ ದಾರುಹರಿದ್ರಾಯಾಃ ಕುಟಜಸ್ಯ ಫಲಾನಿ ಚ |
ಪಿಪ್ಪಲೀ ಶೃಂಗವೇರಂ ಚ ದ್ರಾಕ್ಷಾ ಕಟುಕರೋಹಿಣೀ ||
ಷಡ್ಭಿರೇತೈರ್ಘೃತಂ ಸಿದ್ಧಂ ಪೇಯಾಮಂಡಾವಚಾರಿತಮ್ |
ಅತೀಸಾರಂ ಜಯೇಚ್ಛೀಘ್ರಂ ತ್ರಿದೋಷಮಪಿ ದಾರುಣಮ್|| (ಚ.564-65)

ಮರದರಸಿನದ ಸಿಪ್ಪೆ, ಇಂದ್ರಜೇವಿ, ಹಿಪ್ಪಲಿ, ಶುಂಠಿ, ದ್ರಾಕ್ಷೆ, ಕಟುಕರೋಹಿಣಿ, ಇವು ಆರು ಬಗೆಗಳೊಂದಿಗೆ ಕಾಯಿಸಿದ ತುಪ್ಪವನ್ನು ಪೇಯಾ ಮತ್ತು ಮಂಡ ಎಂಬ ಗಂಜಿ

ಗಳೊಂದಿಗೆ (1ನೇ ಭಾಗದ XIV-4 ನೋಡಿ) ಕೊಟ್ಟಲ್ಲಿ, ಅತಿಸಾರವು, ತ್ರಿದೋಷಗಳಿಂದ ಕೂಡಿಕೊಂಡು ಕಠಿಣವಾಗಿದ್ದರೂ, ಬೇಗನೆ ವಾಸಿಯಾಗುವದು.

ದಾರ್ವೀಬಿಲ್ವಕಣಾದ್ರಾಕ್ಷಾಕಟುಕೇನ್ದ್ರಯವೈರ್ಘೃತಮ್ ।
ಸಾಧಿತಂ ಹನ್ತ್ಯತೀಸಾರಂ ವಾತಪಿತ್ತಕಫಾತ್ಮಕಮ್ ॥ (ಸು. 786)

ಮರದರಸಿನ, ಬಿಲ್ವಪತ್ರಿಕಾಯಿ, ಹಿಪ್ಪಲಿ, ದ್ರಾಕ್ಷೆ, ಕಟುಕರೋಹಿಣಿ, ಇಂದ್ರಜೀವಿ, ಇವುಗಳಿಂದ ಕಾಯಿಸಲ್ಪಟ್ಟ ತುಪ್ಪವು ತ್ರಿದೋಷಯುಕ್ತವಾದ ಅತಿಸಾರವನ್ನು ನಾಶ ಮಾಡುತ್ತದೆ.

ಷರಾ ಮುಂದಿನ 54ನೇ ಸಂಖ್ಯೆ ನೋಡಿ

49. ನ ಶಾನ್ತಿಮಾಯಾತಿ ವಿಲಂಘನೈರ್ಯಾ ಯೋಗೈರುದೀರ್ಣಾ ಯದಿ ಪಾಚನೈರ್ವಾ ।

ಪ್ರವಾಹಿಕೆಯು ಚಿಕಿತ್ಸೆ.

ತಾಂ ಕ್ಷೀರಮೇವಾಶು ಶೃತಂ ನಿಹನ್ತಿ ತೈಲಂ ತಿಲಾಃ ಪಿಚ್ಛಿಲವಸ್ತಯಶ್ಚ ॥ (ಸು. 791)

ಬೆಳೆದಂಥಾ ಪ್ರವಾಹಿಕೆಯು ಲಂಘನಗಳಿಂದಾಗಲಿ ಪಾಚನಕರವಾದ ಯೋಗಗಳಿಂದಾಗಲಿ ಯಾವಾಗ ಶಾಂತವಾಗುವದಿಲ್ಲವೋ, ಆಗ್ಗೆ ಕಾಯಿಸಲ್ಪಟ್ಟ ಹಾಲಿನಿಂದಲೇ ಮತ್ತು ಎಳ್ಳೆಣ್ಣೆಯನ್ನೂ, ಎಳ್ಳನ್ನೂ, ಪಿಚ್ಛಿಲವಸ್ತಿಗಳನ್ನೂ ಉಪಯೋಗಿಸುವದರಿಂದ ಅಂತಹ ಪ್ರವಾಹಿಕೆಯು ಬೇಗನೆ ಪರಿಹಾರವಾಗುತ್ತದೆ.

ಷರಾ' ಧಾರೋಷ್ಣ ಹಾಲು ಪ್ರವಾಹಿಕೆಯಲ್ಲಿ ಪಥ್ಯ ಎಂತ ಇನ್ನೊಂದು ಕಡೆ ಸು ಹೇಳಿದ್ದಾನೆ (ಪು 794)

'ಪಿಚ್ಛಿಲ' ಎಂದರೆ ನೆಲಕುಂಬಳ (ಪಾಠಾಂತರ ಪ್ರಕಾರ ಮೊಗರಿ), ಆನೆಕಲ್ಲಂಗಡಲೆ, ಚಳ್ಳೆ (ಮಣ್ಣಡಿಕೆ), ಬೂರುಗ, ತಡಸಲು, ಇವುಗಳ ಚಿಗುರುಗಳನ್ನು ಕೂಡಿಸಿ ತಯಾರಿಸಿದ ಹಾಲುಕಷಾಯಕ್ಕೆ ಜೇನು ಮತ್ತು ರಕ್ತ ಮಿಶ್ರಮಾಡಿದ್ದು ಕಾಡುಹಂದಿ, ಕೋಣ, ಕುರಿ, ಬೆಕ್ಕು, ಕರಿ ಜಿಂಕೆ (ಕೃಷ್ಣಮೃಗ), ಕೋಳಿ, ಇವುಗಳಿಂದ ಆಗಲೇ ತೆಗೆದ ರಕ್ತವನ್ನು ಅಥವಾ ಅಂಡವನ್ನು ಪಿಚ್ಛಿಲವಸ್ತಿಗಳಿಗೆ ಕೂಡಿಸತಕ್ಕದ್ದು (ಸು. 585).

ಕುಡಿಗಳು ೭ ಪಲ, ಹಾಲು ೨೪ ಪಲ, ನೀರು ಹಾಲಿನ ೪ ಪಾಲು, ಕೂಡಿಸಿ ಹಾಲು ಮಾತ್ರ ಉಳಿಯುವಷ್ಟಕ್ಕೆ ಕುದಿಸಿ ಬತ್ತಿಸಿದ ಹಾಲುಕಷಾಯ ೨೪ ಪಲ, ಜೇನು ೪ ಪಲ, ರಕ್ತ ೪ ಪಲ, ಸೇರಿ ಆಗುವ ೭ ಪಲ ಪಿಚ್ಛಿಲವಸ್ತಿಯ ಒಂದು ಪ್ರಸ್ಥ ಎಂತ ನಿ. ಸಂ ವ್ಯಾ (ಪು 444)

ಕಲ್ಕಃ ಸ್ಯಾದ್ಬಾಲಬಿಲ್ವಾನಾಂ ತಿಲಕಲ್ಕಶ್ಚ ತತ್ಸಮಃ ।
ದಧ್ನಃ ಸರೋಽಮ್ಲಸ್ನೇಹಾದ್ಯಃ ಖಡೋ ಹನ್ಯಾತ್ಪ್ರವಾಹಿಕಾಮ್ ॥ (ಚ. 560)

ಎಳೇ ಬಿಲ್ವಪತ್ರಿಕಾಯಿಯ ಕಲ್ಕ ಮತ್ತು ಅದಕ್ಕೆ ಸಮಪಾಲು ಎಳ್ಳಿನ ಕಲ್ಕ, ಇವುಗಳಿಗೆ ಮೊಸರಿನ ಕೆನೆ, ಹುಳಿ, ಸ್ನೇಹ (ಎಳ್ಳೆಣ್ಣೆ ಅಥವಾ ತುಪ್ಪ) ಮುಂತಾದವುಗಳನ್ನು ಕೂಡಿಸಿ ಮಾಡಿದ ಖಡವು (ಪಳಿದ್ಯ ಅಥವಾ ತಂಬುಳಿ) ಪ್ರವಾಹಿಕೆಯನ್ನು ನಾಶಮಾಡುವದು.

ಷರಾ 'ಖಡಃ' ಎಂಬಲ್ಲಿ 'ಸದ್ಯಃ' ಎಂತ ಪಾಠಾಂತರ ಕಾಣುತ್ತದೆ 'ಸದ್ಯಃ' ಎಂದರೆ 'ಕೂಡಲೇ'

ತೈಲಂ ಸರ್ಪಿರ್ದಧಿಕ್ಷೌದ್ರಂ ಸಿತಾ ವಿಶ್ವಂ ಸಫಾಣಿತಮ್ ।
ಸರ್ವಮಾಲೋಡ್ಯ ಪಾತವ್ಯಂ ಸದ್ಯೋ ನಿರ್ವಾಹಿಕಾಂ ಜಯೇತ್ ॥ (ಚಿ. ಸಾ. ಸಂ. 100)

ಎಳ್ಳೆಣ್ಣೆ, ತುಪ್ಪ, ಮೊಸರು, ಜೇನು, ಸಕ್ಕರೆ, ಶುಂಠಿಯ ಚೂರ್ಣ, ರವೆಬೆಲ್ಲ, ಇವುಗಳನ್ನೆಲ್ಲ ಒಟ್ಟಾಗಿ ಕಲಸಿ ಕುಡಿಯುವದರಿಂದ ಪ್ರವಾಹಿಕೆಯು ಕೂಡಲೆ ಜಯಿಸಲ್ಪಡುವದು.

ಬಾಲಬಿಲ್ವಂ ಗುಡಂ ತೈಲಂ ಪಿಪ್ಪಲೀಂ ವಿಶ್ವಭೇಷಜಮ್ |
ಲಿಹ್ಯಾದ್ವಾತೇ ಪ್ರತಿಹತೇ ಸಶೂಲಃ ಸಪ್ರವಾಹಿಕಃ || (ಚ. 567)

ಎಳೇ ಬಿಲ್ವಪತ್ರೆಕಾಯಿ, ಬೆಲ್ಲ, ಎಳ್ಳೆಣ್ಣೆ, ಹಿಪ್ಪಲಿಚೂರ್ಣ, ಶುಂಠಿಚೂರ್ಣ, ಇವುಗಳನ್ನು ಒಟ್ಟಾಗಿ ಅರೆದು ನೆಕ್ಕುವದರಿಂದ ಶೂಲೆಗೂ ಪ್ರವಾಹಿಕೆಗೂ ಕಾರಣವಾದ ವಾತಗತಿಯ ತಡೆಯು ಪರಿಹಾರವಾಗುವದು.

ಬಿಲ್ವಪೇಶೀ ಗುಡಂ ಲೋಧ್ರಂ ತೈಲಂ ಮರಿಚಯೋಜಿತಮ್ |
ಲೀಢ್ವಾ ಪ್ರವಾಹಿಕಾಕ್ರಾನ್ತಃ ಕ್ಷಿಪ್ರಂ ಸುಖಮವಾಪ್ನುಯಾತ್ ||
(ಚಿ. ಸಾ. ಸಂ. 100)

ಬಿಲ್ವಪತ್ರೆಯ ಎಳೇ ಕಾಯಿ, ಬೆಲ್ಲ, ಲೋಧ್ರದ ಚೂರ್ಣ, ಎಳ್ಳೆಣ್ಣೆ, ಕಾಳುಮೆಣಸಿನ ಚೂರ್ಣ, ಇವುಗಳನ್ನು ಒಟ್ಟಾಗಿ ಅರೆದು, ನೆಕ್ಕಲು ಪ್ರವಾಹಿಕೆಯ ಪೀಡೆಯುಳ್ಳವನು ಬೇಗನೆ ಸುಖವನ್ನು ಪಡೆಯುವನು.

ಪಯಸಾ ಪಿಪ್ಪಲೀಕಲ್ಕಃ ಪೀತೋ ವಾ ಮರಿಚೋದ್ಭವಃ |
ತ್ರ್ಯಹಾನ್ನಿರ್ವಾಹಿಕಾಂ ಹನ್ತಿ ಚಿರಕಾಲಾನುಬನ್ಧಿನೀಮ್ ||
(ಚಿ. ಸಾ. ಸಂ. 100)

ಹಿಪ್ಪಲಿಕಲ್ಕವನ್ನು, ಅಥವಾ ಕಾಳುಮೆಣಸಿನ ಕಲ್ಕವನ್ನು, ಹಾಲಿನೊಂದಿಗೆ ಪಾನಮಾಡುವದರಿಂದ ದೀರ್ಘಕಾಲ ಹಿಡಿದುಕೊಂಡಿದ್ದ ಪ್ರವಾಹಿಕೆಯು ಮೂರು ದಿನಗಳಲ್ಲಿ ನಾಶವಾಗುತ್ತದೆ.

ದಧ್ನಾ ಸಸಾರೇಣ ಸಮಾಕ್ಷಿಕೇಣ ಭುಂಜೀತ ನಿಃಸಾರಕಪೀಡಿತಸ್ತು |
ಸುತಪ್ತಕುಪ್ಯಕ್ವಥಿತೇನ ವಾಪಿ ಕ್ಷೀರೇಣ ಶೀತೇನ ಮಧುಪ್ಲುತೇನ ||
ಶೂಲಾರ್ದಿತೋ ವ್ಯೋಷವಿದಾರಿಗನ್ಧಾಸಿದ್ಧೇನ ದುಗ್ಧೇನ ಹಿತಾಯ ಭೋಜ್ಯಃ |
ವಾತಘ್ನಸಂಗ್ರಾಹಕದೀಪನೀಯೈಃ ಕೃತಾನ್ರಸಾಂಶ್ಚಾಪ್ಯುಪಭೋಜಯೇಚ್ಚ || (ಸು. 792)

ಮಲವಿಲ್ಲದ ಪ್ರವಾಹಿಕೆಯಿಂದ ಪೀಡಿತನಾದವನು ಕೆನೆಸಮೇತವಾದ ಮೊಸರಿನೊಂದಿಗೆ, ಜೇನು ಕೂಡಿಸಿಕೊಂಡು, ಉಣ್ಣಬೇಕು, ಅಥವಾ ಚನ್ನಾಗಿ ಕಾಯಿಸಲ್ಪಟ್ಟ ಬೆಳ್ಳಿಯನ್ನು ಹಾಕಿ ಕುದಿಸಲ್ಪಟ್ಟ ಹಾಲನ್ನು ತಣಿಸಿ, ಅದರಿಂದ, ಜೇನು ಕೂಡಿಸಿಕೊಂಡು, ಉಣ್ಣತಕ್ಕದ್ದು. ಶೂಲೆಯ ಪೀಡೆಯುಳ್ಳವನು ತ್ರಿಕಟು ಮತ್ತು ಮೂವೆಲೆಬೇರುಗಳಿಂದ ತಯಾರಿಸಿದ ಹಾಲುಕಷಾಯದಿಂದ ಭೋಜನ ಮಾಡಿದಲ್ಲಿ ಹಿತವಾಗುತ್ತದೆ; ಮತ್ತು ಭೋಜನಕ್ಕೆ ವಾತಹರವಾದ, ಸಂಗ್ರಾಹಕಗುಣವುಳ್ಳ ಮತ್ತು ದೀಪನಕರವಾದ ಔಷಧಗಳೊಂದಿಗೆ ತಯಾರಿಸಲ್ಪಟ್ಟ (ಮಾಂಸ) ರಸಗಳನ್ನು ಉಪಯೋಗಿಸತಕ್ಕದ್ದು.

ಪರಾ. 'ವಿದಾರಿಗನ್ಧಾ' ಎಂತ ಇರುವದು 'ವಿದಾರಿಗನ್ಧಾದಿಗಣ' ಎಂಬ ಅರ್ಥದಲ್ಲಿ ಎಂತ ನಿ. ಸಂ ವ್ಯಾ. (ಪು 601) 'ರಸಾನ್' ಎಂಬಲ್ಲಿ 'ಷಡಾನ್' ಎಂತ ಪಾಠಾಂತರ ಉಂಟು. 'ಷಡ' ಅಥವಾ ಖಡ ಎಂದರೆ ಪಳಿದ್ಯ ಅಥವಾ ಮಜ್ಜಿಗೆ

ಸೇರಿಸಿ ಮಾಡಿದ ತಂಬುಳಿ 'ಕುಪ್ಯ' ಎಂದರೆ ಭಂಗಾರ ಮತ್ತು ಬೆಳ್ಳಿ ಬಿಟ್ಟು ಇತರ ಲೋಹ ಎಂತ ಅಮರಕೋಶ ಹೇಳುವ ಅರ್ಥವನ್ನೇ ಬರೆದು, ಕೆಲವರು 'ಕುಪ್ಯ' ಎಂಬಲ್ಲಿ 'ಕೂರ್ಪ' ಎಂತ ಪಾಠವಿಟ್ಟು ಬಿಳೇ ರಂಗವಲ್ಲಿಕಲ್ಲು ಎಂತ ಅರ್ಥ ಹೇಳುತ್ತಾರೆಂತ ನಿ ಸಂ ವ್ಯಾ ಹೇಳುತ್ತದಾದರೂ, ಬೆಳ್ಳಿಗೇನೇ 'ಕುಪ್ಯ' ಎಂಬ ಹೆಸರು ಉಂಟೆಂತ ಧ ನಿ (ಪು. 206)ನಿಂದ ಕಾಣುತ್ತದೆ, ಮತ್ತು ಬೆಳ್ಳಿಯು ಅತಿಸಾರದಲ್ಲಿ ಗುಣಕರವಾದ್ದೆಂತ ಅದರ ಗುಣಪಾಠದಿಂದ ತೋರುತ್ತದೆ ಹೀಗಿರುತ್ತಾ ಬೆಳ್ಳಿ ಮತ್ತು ಭಂಗಾರ ಬಿಟ್ಟು ಇತರ ಯಾವ ಲೋಹವಾದರೂ ಹಿತಕರ ಎಂತ ಸುಶ್ರುತ ಹೇಳಲಿಕ್ಕೆ ಕಾರಣವಿಲ್ಲ.

ಮಧುರೌಷಧಸಿದ್ಧಂ ಚ ಹಿತಂ ತಸ್ಯಾನುವಾಸನಮ್ ।
ರಾತ್ರಾವಹನಿ ವಾ ನಿತ್ಯಂ ರುಜಾರ್ತೋ ಯೋ ಭವೇನ್ನರಃ ॥
ಯಥಾ ಯಥಾ ಸತೈಲಃ ಸ್ಯಾದ್ವಾತಶಾನ್ತಿಸ್ತಥಾ ತಥಾ ।
ಪ್ರಶಾನ್ತೇ ಮಾರುತೇ ವಾಪಿ ಶಾನ್ತಿಂ ಯಾತಿ ಪ್ರವಾಹಿಕಾ ॥
ತಸ್ಮಾತ್ ಪ್ರವಾಹಿಕಾರೋಗೇ ಮಾರುತಂ ಶಮಯೇದ್ಭಿಷಕ್ ॥ (ಸು. 793)

ಯಾರಿಗೆ ನೋವು ಬಿಡದೆ ಪೀಡಿಸುತ್ತದೋ, ಅವನಿಗೆ ಮಧುರವರ್ಗದ ಔಷಧಗಳಿಂದ ತಯಾರಿಸಲ್ಪಟ್ಟ ಅನುವಾಸನವಸ್ತಿಯನ್ನು ರಾತ್ರಿಯಲ್ಲಿ ಆಗಲಿ ಹಗಲಿನಲ್ಲಿ ಆಗಲಿ ಉಪಯೋಗಿಸುವದು ಹಿತವಾಗುತ್ತದೆ. (ಹಾಗೆ ಅನುವಾಸನ ಮುಖಾಂತರ) ಅವನಿಗೆ ತೈಲವನ್ನು ಕೊಟ್ಟ ಹಾಗೆ ವಾತವು ಶಾಂತವಾಗುತ್ತಾ ಬರುವದು; ಮತ್ತು ವಾಯುವು ಶಾಂತವಾಗುತ್ತಲೆ, ಪ್ರವಾಹಿಕೆಯು ಶಾಂತವಾಗುತ್ತದೆ. ಆದ್ದರಿಂದ ಪ್ರವಾಹಿಕೆರೋಗದಲ್ಲಿ ವೈದ್ಯನು ವಾತವನ್ನು ಶಮನಮಾಡತಕ್ಕದ್ದು.

ಷರಾ. ರಾತ್ರಿಯಲ್ಲಿ ಸಹ ಅನುವಾಸನವನ್ನು ಮಾಡಬಹುದೆಂಬದು ಸಾಧಾರಣ ವಿಧಿಗೆ ಅಪವಾದ

ಲಘೂನಿ ಪಥ್ಯಾನ್ಯಥ ದೀಪನಾನಿ ಸ್ನಿಗ್ಧಾನಿ ಭೋಜ್ಯಾನ್ಯುದರಾಮಯೇಷು ।
ಹಿತಾಯ ನಿತ್ಯಂ ವಿತರೇದ್ಧಿ ಭೋಜ್ಯಂ (?) ಯೋಗಾಂಶ್ಚ ತಾಂಸ್ತಾನ್
ಭಿಷಗಪ್ರಮತ್ತಃ ॥ (ಸು. 794)

ಷರಾ 'ಹಿ ಭೋಜ್ಯಂ' ಎಂಬಲ್ಲಿ 'ವಿಭಜ್ಯ' ಎಂತ ಪಾಠಾಂತರವಿರುವದೇ ಸರಿಯಾದ್ದೆಂತ ಕಾಣುತ್ತದೆ

ಉದರವ್ಯಾಧಿಗಳಲ್ಲಿ (ಅತಿಸಾರ ಮತ್ತು ಪ್ರವಾಹಿಕೆಯಲ್ಲಿ) ಲಘುವಾದ, ಪಥ್ಯವಾದ, ದೀಪನಕರವಾದ ಮತ್ತು ಸ್ನಿಗ್ಧವಾದ, ಆಹಾರಗಳಲ್ಲಿ ಮತ್ತು ಅದೇ ಗುಣಗಳುಳ್ಳ ಔಷಧಯೋಗಗಳಲ್ಲಿ ರೋಗಿಗೆ ಯಾವದು ಹಿತ ಎಂಬದನ್ನು ಅವಸ್ಥಾಭೇದದ ವಿಚಾರದ ಮೇಲೆ ವೈದ್ಯನು ನಿರ್ಧರಿಸಿ, ಆಯಾ ಆಹಾರಗಳನ್ನೂ ಔಷಧಗಳನ್ನೂ ಜಾಗ್ರತೆಯಿಂದ ನಿತ್ಯದಲ್ಲು ಕೊಡತಕ್ಕದ್ದು.

50. ತೃಷ್ಣಾಪನಯನೀ ಲಘ್ವೀ ದೀಪನೀ ವಸ್ತಿಶೋಧನೀ ।
ಜ್ವರೇ ಚೈವಾತಿಸಾರೇ ಚ ಯವಾಗೂ ಸರ್ವದಾ ಹಿತಾ ॥
ರೌಕ್ಷ್ಯಜಾತೇ ಕ್ರಿಯಾ ಸ್ನಿಗ್ಧಾ ರೂಕ್ಷಾ ಸ್ನೇಹನಿಮಿತ್ತಜೇ ।
ಭಯಜೇ ಸಾನ್ತ್ವನಾಪೂರ್ವಾ ಶೋಕಜೇ ಶೋಕನಾಶನೀ ॥
ವಿಷಾರ್ಶಃಕ್ರಿಮಿಸಮ್ಭೂತೇ ಹಿತಾ ಚೋಭಯಶರ್ಮದಾ ।
ಛರ್ದಿಮೂರ್ಛಾತೃಡಾದ್ಯಾಂಶ್ಚ ಸಾಧಯೇದವಿರೋಧತಃ ॥ (ಸು. 794)

ಉಪದ್ರವಗಳ ಮತ್ತು ಅನ್ಯ ಅತಿಸಾರಗಳ ಚಿಕಿತ್ಸಾ ವಿಧಾನ.

ಬಾಯಾರಿಕೆಯನ್ನು ಪರಿಹರಿಸತಕ್ಕ ಮತ್ತು ಲಘು, ದೀಪನಕಾರಿ ಮತ್ತು ಮೂತ್ರಕಾರಿಯಾದ ಯವಾಗೂಗಂಜಿಯು ಜ್ವರದಲ್ಲಿಯೂ, ಅತಿಸಾರದಲ್ಲಿಯೂ, ಯಾವಾಗಲೂ ಹಿತ.

ರೂಕ್ಷತೆಯಿಂದುಂಟಾದ ಅತಿಸಾರದಲ್ಲಿ ಸ್ನಿಗ್ಧ ಪ್ರತಿಕ್ರಿಯೆ, ಮತ್ತು ಸ್ನೇಹವು ಕಾರಣವಾದ ಅತಿಸಾರದಲ್ಲಿ ರೂಕ್ಷಗುಣದ ಪ್ರತಿಕ್ರಿಯೆ, ಹಿತವಾದ್ದು. ಭಯದಿಂದುಂಟಾದ್ದರಲ್ಲಿ ಮುಂದಾಗಿ ಭಯವನ್ನು ಶಾಂತಗೊಳಿಸಬೇಕು ಮತ್ತು ಶೋಕದಿಂದುಂಟಾದ ಅತಿಸಾರದಲ್ಲಿ ಆ ಶೋಕವನ್ನು ಪರಿಹರಿಸುವ ಉಪಾಯ ಮಾಡಬೇಕು. ವಿಷದಿಂದ ಮತ್ತು ಅರ್ಶಸ್ಸಿನ ಕ್ರಿಮಿಯಿಂದ ಉಂಟಾದ ಅತಿಸಾರಗಳಲ್ಲಿ ಎರಡಕ್ಕೂ ಸುಖಕರವಾದ ಪ್ರತಿಕ್ರಿಯೆ ಹಿತವಾದ್ದು. ವಾಂತಿ, ಮೂರ್ಛೆ, ಬಾಯಾರಿಕೆ, ಮುಂತಾದ ಉಪದ್ರವಗಳನ್ನು, ಅತಿಸಾರಕ್ಕೆ ವಿರೋಧವಾಗದ ರೀತಿಯಿಂದ ತಕ್ಕ ಚಿಕಿತ್ಸೆ ಮಾಡಿ, ವಾಸಿಮಾಡತಕ್ಕದ್ದು.

ಕಲ್ಯಾಣಕಾವಲೇಹ.

ಶರ್ಕರಾಧಾತಕೀಲೋಧ್ರೈಃ ಪಾಠಾರಲುಕಪಿಪ್ಪಲೀ ।
ಸಮಂಗಾಭಿರ್ಮೋಚರಸಪದ್ಮಕೇಸರಸಂಯುತೈಃ ॥
ಅರ್ಶಃಪ್ರಭಾವಕೃಮಿಜಂ ವಿರುದ್ಧಪಾನಾನ್ನದೋಷಸಮ್ಭೂತಮ್ ।
ಅತಿಸಾರಭಯಂ ಶಮಯತಿ ಲೇಹಃ ಕಲ್ಯಾಣಕೋ ನಾಮ್ನಾ ॥
(ಚಿ. ಸಾ. ಸಂ. 99)

ಸಕ್ಕರೆ, ಧಾತಕೀಪುಷ್ಪ, ಲೋಧ್ರ, ಪಾಡಾವಳಿಗಡ್ಡೆ, ಆನೆಮುಂಗು, ಹಿಪ್ಪಲಿ, ನಾಚಿಕೆ ಸೊಪ್ಪಿನ ಗಿಡದ ಬೇರು, ಬೂರುಗದ ಮೇಣ, ತಾವರೆಕೇಸರ, ಇವುಗಳಿಂದ ತಯಾರಿಸಿದ ಲೇಹವು ಅರ್ಶಸ್ಸಿನ ಪ್ರಭಾವದಿಂದುತ್ಪನ್ನವಾದ ಕ್ರಿಮಿಗಳಿಂದಾಗಲಿ, ವಿರುದ್ಧವಾದ ಅನ್ನಪಾನಗಳ ದೋಷದಿಂದಾಗಲಿ ಉಂಟಾದ ಅತಿಸಾರದ ಭಯವನ್ನು ಶಾಂತಮಾಡುತ್ತದೆ. ಇದು 'ಕಲ್ಯಾಣಕ' ಎಂಬ ಹೆಸರುಳ್ಳ ಲೇಹ.

51. ಬಿಲ್ವಮಧ್ಯಂ ಸಮಧುಕಂ ಶರ್ಕರಾಕ್ಷೌದ್ರಸಂಯುತಮ್ ।
ರಕ್ತಪಿತ್ತಾತಿಸಾರದ ಚಿಕಿತ್ಸೆ
ತಣ್ಡುಲಾಮ್ಬುಯುತೋ ಯೋಗಃ ಪಿತ್ತರಕ್ತೋತ್ಥಿತಂ ಜಯೇತ್ ॥
(ಸು. 790)

ಬಿಲ್ಲಪತ್ರೆಕಾಯಿಯ ತಿರಳು, ಜ್ಯೇಷ್ಠಮಧುವಿನ ಚೂರ್ಣ, ಇವುಗಳನ್ನು ಅಕ್ಕಚ್ಚಿನಲ್ಲಿ ಅರೆದು, ಜೇನು ಮತ್ತು ಸಕ್ಕರೆ ಕೂಡಿಸಿಕೊಂಡು, ಪಾನಮಾಡಿದಲ್ಲಿ ರಕ್ತಪಿತ್ತದಿಂದುಂಟಾದ ಅತಿಸಾರವು ಪರಿಹಾರವಾಗುವದು.

52. ದೀಪ್ತಾಗ್ನಿರ್ನಿಃಪುರೀಷೋ ಯಃ ಸಾರ್ಯತೇ ಫೇನಿಲಂ ಶಕೃತ್ ।
ಸ ಪಿಬೇತ್ಫಾಣಿತಂ ಶುಂಠೀದಧಿತೈಲಪಯೋಘೃತಮ್ ॥ (ಸು. 790)
ಪುರೀಷಕ್ಷಯದ ಚಿಕಿತ್ಸೆ
ಸಶೂಲಾಂ ಕ್ಷೀಣವರ್ಚಾ ಯೋ ದೀಪ್ತಾಗ್ನಿರತಿಸಾರ್ಯತೇ ।
ಸ ಪಿಬೇದ್ದೀಪನೈರ್ಯುಕ್ತಂ ಸರ್ಪಿಃ ಸಂಗ್ರಾಹಕೈಃ ಸಹ ॥ (ಸು. 791)

(1) ಮಲವಿಲ್ಲದೆ ನೊರೆಯುಕ್ತವಾದ ಕಶ್ಮಲವನ್ನು ಅತಿಸಾರಮಾಡುವವನಿಗೆ, ಅವನ ಅಗ್ನಿ ಚುರುಕಾಗಿದ್ದರೆ, ಶುಂಠಿಚೂರ್ಣ, ಮೊಸರು, ಎಳ್ಳೆಣ್ಣೆ, ಹಾಲು ಮತ್ತು ತುಪ್ಪ, ಇವುಗಳನ್ನೂ ರವೆಬೆಲ್ಲವನ್ನೂ ಕಲಸಿ ಕುಡಿಸಬೇಕು.

(2) ಮಲ ಕ್ಷೀಣವಾಗಿ (ಕಡಿಮೆಯಾಗಿ), ಶೂಲೆಯಿಂದ ಕೂಡಿಕೊಂಡು, ಯಾವನು **ಅತಿಸಾರ ಮಾಡುತ್ತಾನೋ** ಅವನಿಗೆ, ಅಗ್ನಿಯು ಚುರುಕಾಗಿದ್ದರೆ, ದೀಪನಕರವಾದ ಮತ್ತು **ಸಂಗ್ರಾಹಕವಾದ** (ಗ್ರಾಹಿಗುಣವುಳ್ಳ) ಔಷಧಗಳನ್ನು ಕೂಡಿಸಿ ತಯಾರಿಸಿದ ತುಪ್ಪವನ್ನು **ಕುಡಿಸಬೇಕು.**

**ಸೂಚನಾ: ಹಿಂದೆ 48ನೇ ಸಂಖ್ಯೆಯಲ್ಲಿ ನಿಸ್ಸಾರಕ ಪ್ರವಾಹಿಕೆಗೆ ಬರೆದ ಚಿಕಿತ್ಸೆ ನೋಡಿರಿ**

ಬಲಾಬಿಲ್ವಶೃತಂ ಕ್ಷೀರಂ ಗುಡತೈಲಾನುಯೋಜಿತಮ್ ।
ದೀಪ್ತಾಗ್ನಿಂ ಪಾಯಯೇತ್ಪ್ರಾತಃ ಸುಖದಂ ವರ್ಚಸಃ ಕ್ಷಯೇ ॥
(ಚಿ. ಸಾ. ಸಂ. 101)

ಕಲ್ಲಂಗಡಲೆಬೇರು ಮತ್ತು ಬಿಲ್ಲಪತ್ರೆ ಕೂಡಿಸಿ ಕಾಯಿಸಲ್ಪಟ್ಟ ಹಾಲಿಗೆ, ಬೆಲ್ಲ ಮತ್ತು ಎಳ್ಳೆಣ್ಣೆ ಬೆರಸಿ, ಅದನ್ನು, ಅಗ್ನಿ ಚುರುಕುಳ್ಳವನಿಗೆ, ಬೆಳಿಗ್ಗೆ ಕುಡಿಸುವದರಿಂದ ಪುರೀಷಕ್ಷಯ ಪರಿಹಾರವಾಗಿ ಸುಖವುಂಟಾಗುವದು.

53. **ಛರ್ದಿಯುಕ್ತ ಅತಿಸಾರಕ್ಕೆ ಚಿಕಿತ್ಸೆ**

ಆಮ್ರಾಸ್ಥಿಮಧ್ಯಮಾಲೂರಫಲಕ್ವಾಥಃ ಸಮಾಕ್ಷಿಕಃ ।
ಶರ್ಕರಾಸಹಿತೋ ಹನ್ಯಾಚ್ಛರ್ದ್ಯತೀಸಾರಮುಲ್ಬಣಮ್ ॥
ಕಷಾಯೋ ಭೃಷ್ಟಮುದ್ಗಸ್ಯ ಸಲಾಜಮಧುಶರ್ಕರಃ ।
ನಿಹನ್ಯಾಚ್ಛರ್ದ್ಯತೀಸಾರಂ ತೃಷ್ಣಾಂ ದಾಹಂ ಜ್ವರಂ ಭ್ರಮಮ್ ॥
(ಭಾ. ಪ್ರ. 324)

(1) ಮಾವಿನಹಣ್ಣಿನ ಗೊರಟಿನ ತಿರಳು, ಬಿಲ್ಲಪತ್ರೆಕಾಯಿ, ಇವುಗಳ ಕಷಾಯವು, ಜೇನು ಮತ್ತು ಸಕ್ಕರೆಯೊಂದಿಗೆ, ಪಾನಮಾಡಲ್ಪಟ್ಟಲ್ಲಿ ಕಠಿಣವಾದ ವಾಂತಿಯುಳ್ಳ ಅತಿಸಾರವನ್ನು ನಾಶಮಾಡುವದು.

(2) ಹುರಿದ ಹೆಸರಿನ ಕಷಾಯವನ್ನು, ಅರಳಿನ ಪುಡಿ, ಜೇನು ಮತ್ತು ಸಕ್ಕರೆಯೊಂದಿಗೆ, ಪಾನಮಾಡುವದರಿಂದ ವಾಂತಿಯುಕ್ತವಾದ ಅತಿಸಾರ, ಬಾಯಾರಿಕೆ, ಉರಿ, ಜ್ವರ, ಭ್ರಮೆ ಸಹ ಪರಿಹಾರವಾಗುವವು.

ಪಟೋಲಯವಧಾನ್ಯಾಕಕ್ವಾಥಃ ಪೇಯಃ ಸುಶೀತಲಃ ।
ಶರ್ಕರಾಮಧುಸಂಯುಕ್ತಃ ಛರ್ದ್ಯತೀಸಾರನಾಶನಃ ॥
(ಚಿ. ಸಾ. ಸಂ. 98)

ಕಹಿಪಡುವಲು, ಇಂದ್ರಜೀವಿ, ಕೊತ್ತುಂಬರಿ, ಇವುಗಳ ಕಷಾಯವನ್ನು ಚನ್ನಾಗಿ ತಣಿಸಿ, ಜೇನು ಮತ್ತು ಸಕ್ಕರೆ ಕೂಡಿಸಿಕೊಂಡು, ಪಾನಮಾಡುವದರಿಂದ ವಾಂತಿಯುಳ್ಳ ಅತಿಸಾರವು ನಾಶವಾಗುತ್ತದೆ.

ಜಮ್ಬ್ವಾಮ್ರಪಲ್ಲವೋಶೀರವಟಶುಂಗಾವರೋಹಕಮ್ ।
ರಸಃ ಕ್ವಾಥೋಽಥವಾ ಚೂರ್ಣಂ ಕ್ಷೌದ್ರೇಣ ಸಹ ಯೋಜಿತಮ್ ॥
ಛರ್ದಿಜ್ವರಮತೀಸಾರಂ ಮೂರ್ಚ್ಛಾಂ ತೃಷ್ಣಾಂ ಚ ದುರ್ಜಯಾಮ್ ।
ನಿಯಚ್ಛತ್ಯಚಿರಾದ್ರಕ್ತಚ್ಯುತಿಂ ವಾಽನೇಕಹೇತುಕಾಮ್ ॥
(ಚಿ. ಸಾ. ಸಂ. 98)

ನೇರಳೆಕುಡಿ, ಮಾವಿನ ಕುಡಿ, ಲಾಮಂಚ, ಗೋಳೀ ಚಿಗುರು ಮತ್ತು ಜಲ್ಲಿ (ಕೊಂಬೆಗಳಿಂದ ಇಳಿದ ಬೇರು), ಇವುಗಳ ರಸವನ್ನಾಗಲಿ, ಕಷಾಯವನ್ನಾಲಿ, ಚೂರ್ಣವನ್ನಾಗಲಿ, ಜೇನು ಕೂಡಿಸಿಕೊಂಡು, ಸೇವಿಸುವದರಿಂದ ವಾಂತಿ, ಜ್ವರ, ಅತಿಸಾರ, ಮೂರ್ಛೆ, ತಡೆಯುಲಾರದ ಬಾಯಾರಿಕೆ, ಮತ್ತು ಅನೇಕ ಕಾರಣಗಳಿಂದ ಹುಟ್ಟಿದ ರಕ್ತಸ್ರಾವ ಬೇಗನೆ ವಾಸಿಯಾಗುವವು.

54. ವಿಡಂಗಾತಿವಿಷಾಮುಸ್ತಂ ದಾರುಪಾಠಾಕಲಿಂಗಕಮ್ |
ಶೋಥಾತಿಸಾರದ ಚಿಕಿತ್ಸೆ
ಮರಿಚೇನ ಸಮಾಯುಕ್ತಂ ಶೋಥಾತೀಸಾರನಾಶನಮ್ ||
ಕಿರಾತಾಬ್ದಾಮೃತೋದೀಚ್ಯಮುಸ್ತಚನ್ದನಧಾನ್ಯಕೈಃ |
ಶೋಥಾತಿಸಾರಹೃಲ್ಲಾಸತೃಟ್ದಾ(?ಡ್ದಾ)ಹಜ್ವರನಾಶನಃ ||
ವಿಶ್ವೌಷಧಸ್ಯ ಗರ್ಭೇಣ ದಶಮೂಲಜಲೇ ಶೃತಮ್ |
ಘೃತಂ ನಿಹನ್ತ್ಯತೀಸಾರಂ ಗ್ರಹಣೀಂ ಪಾಂಡುಕಾಮಲಾಮ್ ||
(ಚಿ. ಸಾ. ಸಂ. 98)

(1) ವಾಯುವಿಳಂಗ, ಅತಿವಿಡೆ, ಭದ್ರಮುಷ್ಟಿ, ದೇವದಾರ, ಪಾಡಾವಳಿಗಡ್ಡೆ, ಇಂದ್ರಜೀವಿ, ಕಾಳುಮೆಣಸು, ಇವು(ಗಳ ಚೂರ್ಣ, ಅಥವಾ ಕಷಾಯ) ಶೋಫೆಯುಕ್ತವಾದ ಅತಿಸಾರವನ್ನು ನಾಶಮಾಡುತ್ತವೆ.

(2) ನೆಲಬೇವು, ಭದ್ರಮುಷ್ಟಿ, ಅಮೃತಬಳ್ಳಿ, ಮುಡಿವಾಳ, ಶ್ರೀಗಂಧ, ಕೊತ್ತುಂಬರಿ, ಇವುಗಳ ಕಷಾಯವು ಶೋಫಯುಳ್ಳ ಅತಿಸಾರ, ಬಿಕ್ಕಟ್ಟು, ಬಾಯಾರಿಕೆ, ಉರಿ, ಜ್ವರ, ಇವುಗಳನ್ನು ನಾಶಮಾಡುವದು.

ಷರಾ ಯೋಗದಲ್ಲಿ ಭದ್ರಮುಷ್ಟಿ ಎರಡು ಸರ್ತಿ ಕಾಣುವದರಿಂದ, ಅದನ್ನು ಸೂತ್ರ ಪ್ರಕಾರ ಎರಡು ಪಾಲು ಕೂಡಿಸತಕ್ಕದ್ದು

(3) ದಶಮೂಲಗಳ ಕಷಾಯದಲ್ಲಿ ಶುಂಠಿಯ ಕಲ್ಕದಿಂದ ಕಾಯಿಸಿದ ತುಪ್ಪವು (ಶೋಫೆಯುಕ್ತವಾದ) ಅತಿಸಾರ, ಗ್ರಹಣಿ, ಪಾಂಡು, ಕಾಮಿಲೆ, ಇವುಗಳನ್ನು ನಾಶಮಾಡುತ್ತದೆ.

55. ಸಮಂಗಾತಿವಿಷಾಮುಸ್ತಂ ಹ್ರೀಬೇರಂ ವಿಶ್ವಧಾತು(?ತ)ಕೀ |
ಕುಟಜತ್ವಕ್ಫಲಂ ಬಿಲ್ವಂ ಕ್ವಾಥಃ ಸರ್ವಾತಿಸಾರನುತ್ ||
ಸರ್ವಾತಿಸಾರಗಳಿಗೆ ಸಾಮಾನ್ಯ ಚಿಕಿತ್ಸೆ.
(ಚಿ. ಸಾ. ಸಂ. 89)

ನಾಚಿಕೆಸೊಪ್ಪಿನ ಗಿಡದ ಬೇರು, ಅತಿವಿಡೆ, ಭದ್ರಮುಷ್ಟಿ, ಮುಡಿವಾಳ, ಶುಂಠಿ, ಧಾತಕೀಕುಸುಮ, ಕೊಡಸಿಗನ ಕೆತ್ತೆ, ಇಂದ್ರಜೀವಿ, ಬಿಲ್ವಪತ್ರೆಕಾಯಿ, ಇವುಗಳ ಕಷಾಯವು ಸರ್ವಾತಿಸಾರಗಳನ್ನು ನಾಶಮಾಡುತ್ತದೆ.

ಷರಾ ಸರ್ವಾತಿಸಾರ ಎಂಬದು ಹೆಚ್ಚಾಗಿ ತ್ರಿದೋಷಜ ಅತಿಸಾರಕ್ಕೆ.

ಪಲಮಂಕೋಟಮೂಲಸ್ಯ ಪಾಠಾದಾರ್ವ್ಯೋಶ್ಚ ಪೇಷಯೇತ್ |
ಅಂಕೋಟವಟೀ
ಯವಾಪ್ಯಮ್ಬುನಾಕ್ಷಮಾತ್ರಸ್ಯ ವಟೀ ಸರ್ವಾತಿಸಾರಹಾ ||
(ಚಿ. ಸಾ. ಸಂ. 89)

೧ ಪಲ ಅಂಕೋಲೆಬೇರು, ೧ ಪಲ ಪಾಡಾವಳಿಗಡ್ಡೆ, ೧ ಪಲ ಮರದರಸಿನದ ಸಿಪ್ಪೆ, ಇವುಗಳನ್ನು ಜ್ಯೇಷ್ಠಮಧುವಿನ ಕಷಾಯದೊಂದಿಗೆ ಅರೆದು, ಗಜ್ಜಿಗದ ಗಾತ್ರದ ವಟಕಗಳನ್ನು ಮಾಡಿಟ್ಟುಕೊಂಡು, ಸರ್ತಿಗೆ ಒಂದೊಂದು ವಟಕದಂತೆ ಉಪಯೋಗಿಸಿದ್ದಲ್ಲಿ ಸರ್ವಾತಿಸಾರಗಳು ಪರಿಹಾರವಾಗುವವು.

ಷರಾ ಅಂಕೋಲಾದಿ ಮೂರು ಬಗೆ ಔಷಧಗಳನ್ನು ಅಕ್ಕಚ್ಚಿನಲ್ಲಿ ಅರೆದು, ವಟಕಗಳನ್ನು ಮಾಡಿ ಒಣಗಿಸಿ, ಒಂದೊಂದು ವಟಕದಂತೆ ಅಕ್ಕಚ್ಚಿನೀರಿನೊಂದಿಗೆ ಕೊಡಲು, ವಾತಜ, ಪಿತ್ತಜ, ಕಫಜ, ದ್ವಂದ್ವಜ ಮತ್ತು ಸನ್ನಿಪಾತಜ ಅತಿಸಾರಗಳು ಪರಿಹಾರವಾಗುವವು ಎಂತ ಇನ್ನೊಂದು ಯೋಗ (ಚಿ ಸಾ ಸಂ 94)

ಅಂಕೋಟಮೂಲಂ ತಕ್ರೇಣ ಹ್ಯತೀಸಾರಹರಂ ಪರವ್ |
ಮಾಹಿಷೇಣ ತು ತಕ್ರೇಣ ಪಾಠಾಪತ್ರಂ ತಥೈವ ಚ ||

(ಚಿ. ಸಾ. ಸಂ. 89-90)

ಅಂಕೋಲೆಬೇರನ್ನು ಮಜ್ಜಿಗೆಯೊಂದಿಗೆ, ಅಥವಾ ಪಾಠಾವಳಿಯ ಎಲೆಯನ್ನು ಎಮ್ಮೆಯ ಮಜ್ಜಿಗೆಯೊಂದಿಗೆ, ಅರೆದು ಪಾನಮಾಡುವದು ಅತಿಸಾರಪರಿಹಾರಕ್ಕೆ ಉತ್ತಮ.

ಕುಟಜತ್ವಕ್ಫಲಂ ಮುಸ್ತಂ ಕ್ವಾಥಯಿತ್ವಾ ಜಲಂ ಪಿಬೇತ್ |
ಅತಿಸಾರಂ ಜಯತ್ಯಾಶು ಶರ್ಕರಾಮಧುಸಂಯುತಮ್ ||

(ಚಿ. ಸಾ. ಸಂ. 90)

ಕೊಡಸಿಗನ ತೊಗಟು ಮತ್ತು ಫಲ (ಇಂದ್ರಜೀವಿ), ಭದ್ರಮುಷ್ಟಿ, ಇವುಗಳ ಕಷಾಯವು, ಜೇನು ಮತ್ತು ಸಕ್ಕರೆ ಸಮೇತ, ಪಾನಮಾಡಲ್ಪಟ್ಟಲ್ಲಿ, ಅತಿಸಾರವನ್ನು ಬೇಗನೆ ಜಯಿಸುತ್ತದೆ.

ವಿಭೀತಕಫಲಂ ದಗ್ಧಂ ಹನ್ಯಾಲ್ಲವಣಸಂಯುತಮ್ |
ಮಹಾನ್ತಮಪ್ಯತೀಸಾರಂ ಚಕ್ರಪಾಣಿರಿವಾऽಸುರಾನ್ ||

(ಚಿ. ಸಾ. ಸಂ. 90)

ತಾರೇ(ಶಾಂತಿ)ಕಾಯಿಯನ್ನು ಸುಟ್ಟು ಚೂರ್ಣಿಸಿ, ಆ ಚೂರ್ಣವನ್ನು ಸೈಂಧವಲವಣದೊಂದಿಗೆ ಸೇವಿಸುವದರಿಂದ, ಅಸುರರು ವಿಷ್ಣುವಿನಿಂದ ಹೇಗೋ ಹಾಗೆ, ಅತಿಸಾರವು ಮಹತ್ತಾದದ್ದಾದರೂ ನಾಶಮಾಡಲ್ಪಡುವದು.

ಕಟ್ವಂಗತ್ವಕ್ ಘೃತಯುತಾ ಸ್ವೇದಿತಾ ಸಲಿಲೋಷ್ಮಣಾ |
ಸಕ್ಷೌದ್ರಾ ಹನ್ತ್ಯತೀಸಾರಂ ಬಲವಂತಮುಪದ್ರವಮ್ ||
ಏವಂ ಜಂಬ್ವಜಿನಂ ಚೈವ ರಂಭಾಪುಷ್ಪಂ ಚ ಯೋಜಿತಮ್ |
ಮಧುನಾ ಸಿತಯಾ ಯುಕ್ತಂ ಸರ್ವಾತೀಸಾರಸೂದನಮ್ ||

(ವೈ. ಸಾ. ಸಂ. 224, 225)

(ಹಸೀ) ಆನೆಮುಂಗಿನ ತೊಗಟನ್ನು (ಪುಡಿಮಾಡಿ), ತುಪ್ಪ ಕೂಡಿಸಿ, ನೀರಿನ ಸೆಕೆಯ ಮೇಲೆ ಇರಿಸಿ ಬೆವರಿಸಿ, ಜೇನು ಕೂಡಿಸಿಕೊಂಡು ಅರೆದು, ಸೇವಿಸಿದ್ದಲ್ಲಿ, ಬಲವಂತವಾದ ಉಪದ್ರವಗಳುಳ್ಳ ಅತಿಸಾರವು ನಾಶವಾಗುತ್ತದೆ. ನೇರಳೆಯ ತೊಗಟನ್ನೂ ಬಾಳೆಯ ಹೂವನ್ನೂ ಹಾಗೆಯೇ ಬೆವರಿಸಿ, ಜೇನು ಮತ್ತು ಸಕ್ಕರೆ ಕೂಡಿಸಿಕೊಂಡು ಅರೆದು, ಸೇವಿಸಿದಲ್ಲಿ ಸರ್ವಾತಿಸಾರ ನಾಶವಾಗುವದು.

ವಟಪ್ರರೋಹಂ ಸಂಪೇಷ್ಯ ಶ್ಲಕ್ಷ್ಣಂ ತಂಡುಲವಾರಿಣಾ |
ತಂ ಪಿಬೇತ್ತಕ್ರಸಂಯುಕ್ತಮತಿಸಾರಹರಂ ಪರಮ್ || (ಚಿ. ಸಾ. ಸಂ. 90)

ಗೋಳಿಯ ಚಿಗುರನ್ನು ಅಕ್ಕಚ್ಚಿನೊಂದಿಗೆ ನುಣ್ಣಗೆ ಅರೆದು, ಮಜ್ಜಿಗೆ ಕೂಡಿಸಿಕೊಂಡು, ಪಾನಮಾಡುವದು ಅತಿಸಾರಪರಿಹಾರಕ್ಕೆ ಉತ್ತಮ.

ಶ್ಯೋನಾಕ (ಆನೆ ಮುಂಗಿನ) ಪುಟ ಪಾಕ

ಅವೇದನಂ ಸುಸಂಪಕ್ವಂ ದೀಪ್ತಾಗ್ನೇಃ ಸುಚಿರೋತ್ಥಿತಮ್ |
ನಾನಾವರ್ಣಮತೀಸಾರಂ ಪುಟಪಾಕೈರುಪಾಚರೇತ್ ||
ತ್ವಕ್ಪಿಂಡಂ ದೀರ್ಘವೃಂತಸ್ಯ ಪದ್ಮಕೇಸರಸಂಯುತಮ್ |
ಕಾಶ್ಮರೀಪದ್ಮಪತ್ರೈಶ್ಚಾವೇಷ್ಟ್ಯ ಸೂತ್ರೇಣ ತಂ ದೃಢಮ್ ||
ಮೃದಾವಲಿಪ್ತಂ ಸುಕೃತಮಂಗಾರೇಷ್ವವಕೂಲಯೇತ್ |
ಸ್ವಿನ್ನಮುದ್ಧೃತ್ಯ ನಿಷ್ಪೀಡ್ಯ ರಸಮಾದಾಯ ತಂ ತತಃ ||
ಶೀತಂ ಮಧುಯುತಂ ಕೃತ್ವಾ ಪಾಯಯೇತೋದರಾಮಯೇ ||
(ಸು. 786)

ದೀರ್ಘಕಾಲದ ಮತ್ತು ಒಳ್ಳೇ ಪಕ್ವವಾದ ಅತಿಸಾರದಲ್ಲಿ ನೋವಿಲ್ಲದೆ ನಾನಾ ವರ್ಣವಾಗಿ ಮಲವಿಸರ್ಜನ ಮಾಡುತ್ತಿರುವ ರೋಗಿಗೆ, ಅಗ್ನಿಯು ಚುರುಕಾಗಿದ್ದರೆ, ಪುಟಪಾಕಗಳಿಂದ ಉಪಚಾರ ನಡಿಸತಕ್ಕದ್ದು. ಆನೆಮುಂಗಿನ (ಹಸೀ) ತೊಗಟನ್ನು, ತಾವರೆಕೇಸರ ಕೂಡಿಸಿಕೊಂಡು, ಅರೆದು ಮುದ್ದೆಮಾಡಿಕೊಂಡು, ಕಾಶ್ಮೀರದ (ಶಿವನ್ನಿಯ) ಮತ್ತು ತಾವರೆಯ ಎಲೆಗಳಿಂದ ಆ ಮುದ್ದೆಯನ್ನು ಮುಚ್ಚಿ, ಹಗ್ಗದಿಂದ ಬಲವಾಗಿ ಕಟ್ಟಿದ ಮೇಲೆ ಮಣ್ಣು ಮೆತ್ತಿ ಪರಿಷ್ಕಾರಮಾಡಿ, ಕೆಂಡದೊಳಗೆ ಇಟ್ಟು ಸುಟ್ಟು, ಅದು ಬೆಂದ ಮೇಲೆ, ಕೆಂಡದೊಳಗಿಂದ ತೆಗೆದು, ಆವರಣವನ್ನು ಒಡೆದು, ಒಳಗಿನ ಮುದ್ದೆಯನ್ನು ಹಿಂಡಿ ತೆಗೆದ ರಸವನ್ನು ತಣಿಸಿ, ಜೇನು ಕೂಡಿಸಿ, ಕುಡಿಸಲು ಹೊಟ್ಟೆರೋಗ(ಅತಿಸಾರ)ಗಳು ಪರಿಹಾರವಾಗುವವು.

ಕುಟಜಪುಟಪಾಕ

ತತ್ಕಾಲಾಕೃಷ್ಟಕುಟಜತ್ವಚಂ ತಂಡುಲವಾರಿಣಾ |
ಪಿಷ್ಟ್ವಾ ಚತುಃಪಲಮಿತಾಂ ಜಂಬೂಪತ್ರೇಣ ವೇಷ್ಟಿತಾಮ್ ||
ಸೂತ್ರೇಣ ಬಧ್ವಾ ಗೋಧೂಮಪಿಷ್ಟೇನ ಪರಿವೇಷ್ಟಿತಾಮ್ |
ಲಿಪ್ತಾಂ ಚ ಘನಪಂಕೇನ ನಿರ್ದಹೇದ್ಗೋಮಯಾಗ್ನಿನಾ ||
ಅಂಗಾರವರ್ಣಾಂ ಚ ಮೃದಂ ದೃಷ್ಟ್ವಾ ವಹ್ನೇಃ ಸಮುದ್ಧರೇತ್ |
ತತೋ ರಸಂ ಸಮಾದಾಯ ಶೀತಂ ಕ್ಷೌದ್ರಯುತಂ ಪಿಬೇತ್ ||
ಉಕ್ತಃ ಕೃಷ್ಣಾತ್ರಿಪುತ್ರೇಣ ಪುಟಪಾಕಸ್ತು ಕೌಟಜಃ |
ಜಯೇತ್ಸರ್ವಾನತೀಸಾರಾನ್ರಕ್ತಜಾನ್ ಸುಚಿರೋತ್ಥಿತಾನ್ ||
(ಭಾ. ಪ್ರ. 322)

ಆಗಲೇ ತೆಗೆದ ಕೊಡಸಿಗನ ತೊಗಟನ್ನು ನಾಲ್ಕು ಪಲದಷ್ಟು ತೆಗೆದುಕೊಂಡು, ಅಕ್ಕಚ್ಚಿ ನೀರಿನೊಂದಿಗೆ ಅರೆದು ಮುದ್ದೆಮಾಡಿ, ಆ ಮುದ್ದೆಗೆ ನೇರಳೆ ಎಲೆಗಳನ್ನು ಸುತ್ತಿ ಮುಚ್ಚಿ, ಹಗ್ಗದಿಂದ ಕಟ್ಟಿದ ಮೇಲೆ, ಗೋದಿಹಿಟ್ಟನ್ನು ಸುತ್ತಲು ಹಚ್ಚಿ, (ಅದು ಒಣಗಿದ ಮೇಲೆ) ಹೊರಗಿನಿಂದ ದಪ್ಪವಾದ ಕೆಸರುಮಣ್ಣನ್ನು ಲೇಪಿಸಿ, ಕುರುಳಿನ ಬೆಂಕಿಯಿಂದ ಸುಡುವದು. ಮಣ್ಣಿನ

ಲೇಪವು ಕಪ್ಪಾದ ಕೂಡಲೆ ಉಂಡೆಯನ್ನು ಬೆಂಕಿಯಿಂದ ಹೊರಗೆ ತೆಗೆದು, ಪುಟವನ್ನು ಒಡೆದು, ಒಳಗಿನ ಮುದ್ದೆಯನ್ನು ಹಿಂಡಿ, ರಸ ತೆಗೆಯುವದು. ಆ ರಸವನ್ನು, ತಣ್ಣಗಾದ ಮೇಲೆ ಜೇನನ್ನು ಕೂಡಿಸಿ, ಪಾನಮಾಡಿಸುವದು. ಕೃಷ್ಣಾತ್ರಿಮುನಿಗಳ ಪುತ್ರರಿಂದ ಉಕ್ತವಾದ ಈ ಕೊಡಸಿಗನ ಪುಟಪಾಕವು ದೀರ್ಘಕಾಲದಿಂದ ಪೀಡಿಸುತ್ತಿರುವ ಸರ್ವ ರಕ್ತಜ ಅತಿಸಾರಗಳನ್ನು ಜಯಿಸುವದು.

ಶುಂಠೀಮಲ್ಪಘೃತಾನ್ವಿತಾಂ ಪರಿವೃತಾಂ ಗೋಧೂಮಪಿಷ್ಟೈಸ್ತತಃ
ಶುಂಠಿಪುಟಪಾಕ ಸದ್ಯೋ ಗೋಮಯವೇಷ್ಟಿತಾನ್ತು ವಿಪಚೇನ್ಮಂದಾಗ್ನಿನಾ ಚಾತುರಃ ।
ಶೀತೀಕೃತ್ಯ ಸಿತಾಸಮಾಂ ಪ್ರತಿದಿನಂ ಭಕ್ಷೇನ್ನರಃ ಪಥ್ಯಭುಕ್
ಸರ್ವೋಪದ್ರವಸಂಯುತಾನಪಿ ಜಯೇದ್ದೀರ್ಘಾತಿಸಾರಾಮಯಾನ್ ॥
(ಚಿ. ಸಾ. ಸಂ. 91)

(ಹಸೀ) ಶುಂಠಿಯನ್ನು, ಅಲ್ಪವಾಗಿ ತುಪ್ಪ ಸವರಿ, ಗೋದಿಹಿಟ್ಟಿನ ಕೊಳವೆಯೊಳಗಿಟ್ಟು ಬಾಯಿ ಮುಚ್ಚಿ, ಹೊರಗಿನಿಂದ ಗೋಮಯವನ್ನು ಮೆತ್ತಿ, ಕೂಡಲೆ ಆ ಉಂಡೆಯನ್ನು ಮಂದಾಗ್ನಿಯಲ್ಲಿ ಹುಗಿದು ಸುಡಬೇಕು. (ಗೋಮಯದ ಆವರಣ ಸುಟ್ಟಕೂಡಲೇ ಅಗ್ನಿಯಿಂದ ಹೊರಗೆ ತೆಗೆದಿಟ್ಟು) ಅದು ತಣಿದ ಮೇಲೆ ಅದನ್ನು ಒಡೆದು, ಒಳಗಿನ ಶುಂಠಿಯನ್ನು (ಸಿಪ್ಪೆ ತೆಗೆದು, ಅರೆದು) ಸಮಾಂಶ ಸಕ್ಕರೆಯೊಂದಿಗೆ, ರೋಗಿಯು ಪ್ರತಿ ದಿನ ತಿಂದು, ಪಥ್ಯದಿಂದ ಉಣ್ಣುತ್ತಾ ಬರಲು, ದೀರ್ಘಕಾಲದ ಅತಿಸಾರಗಳು, ಸರ್ವ ಉಪದ್ರವಗಳಿಂದ ಕೂಡಿಕೊಂಡಿದ್ದಾಗ್ಯೂ, ಪರಿಹಾರವಾಗುವವು.

ಗವ್ಯೇನ ತಕ್ರೇಣ ಸಹಸ್ರ(?ಹಾವ)ಪೇಷ್ಯ ನ್ಯಗ್ರೋಧಪಾದಃ ಪರಿಪೀಯಮಾನಃ ।
ನವೋದ್ಭವಂ ಹನ್ತ್ಯತಿಸಾರಮಾಶು ಯಥಾ ತಮಿಸ್ರಾಣಿ ಸಿತಾಂಶುಮಾಲೀ ॥ (ವೈ. ಸಾ. ಸಂ. 223, 24)

ಗೋಳಿಯ (ಕೊಂಬೆಗಳಿಂದ ಇಳಿದ) ಬೇರನ್ನು ದನದ ಮಜ್ಜಿಗೆಯೊಂದಿಗೆ ಅರೆದು, ಕುಡಿಯುತ್ತಾ ಬರುವದರಿಂದ ಹೊಸತಾಗಿ ಉಂಟಾದ ಅತಿಸಾರವು, ಚಂದ್ರೋದಯದಿಂದ ಕತ್ತಲೆಯು ಹೇಗೋ ಹಾಗೆ, ನಾಶವಾಗುತ್ತದೆ.

ಸದಾಫಲಭವಂ ಕ್ಷೀರಂ ಸತೈಲಂ ಪ್ರಪಿಬೇನ್ನರಃ ।
ಸರ್ವಾತಿಸಾರಶಮನಂ ಗ್ರಹಣೀನಾಶನಂ ಪರಮ್ ॥
(ವೈ. ಸಾ. ಸಂ. 225)

ಅತ್ತಿಮರದ ಹಾಲನ್ನು ಎಳ್ಳೆಣ್ಣೆಯೊಂದಿಗೆ ಪಾನಮಾಡುವದು ಸರ್ವಾತಿಸಾರಗಳ ಶಮನಕ್ಕೂ ಗ್ರಹಣಿಯ ನಾಶನಕ್ಕೂ ಉತ್ತಮವಾದ್ದು.

ಶಿಗ್ರುಮೂಲೋಷಣಾಜಾಜಿ(?ಜೀಃ) ಪಿಬೇತ್ಪಿಷ್ಟ್ವಾ ಸುಖಾಮ್ಬುನಾ ।
ಆಜೇನ ದಧ್ನಾ ಲಿಹ್ಯಾದ್ವಾ ಅತೀಸಾರನಿವೃತ್ತಯೇ ॥
(ವೈ. ಸಾ. ಸಂ. 228)

ಸುಗ್ಗೆಬೇರಿನ ಸಿಪ್ಪೆ, ಹಿಪ್ಪಲಿ, ಜೀರಿಗೆ, ಇವುಗಳನ್ನು ಸುಖವಾದ ಬಿಸಿನೀರಿನೊಂದಿಗೆ ಅರೆದು ಕುಡಿಯುವದರಿಂದ, ಅಥವಾ ಆಡಿನ ಮೊಸರಿನೊಂದಿಗೆ ಅರೆದು ನೆಕ್ಕುವದರಿಂದ, ಅತಿಸಾರ ನಿವೃತ್ತಿಯಾಗುವದು.

ಕುಟಜಾವಲೇಹ

ಕುಟಜತ್ವಕ್ಫ(?ಕ್ಪ)ಲಶತಂ ಕಷಾಯಮುಪಕಲ್ಪಯೇತ್ |
ವಸ್ತ್ರಪೂತಂ ಪುನಃ ಕ್ವಾಥ್ಯಂ ಯದಾ ಲೇಹತ್ವಮಾಗತಮ್ ||
ಭಲ್ಲಾತಕಂ ವಿಡಂಗಾನಿ ತ್ರಿಫಲಾ ತ್ರಿಕಟು ತಥಾ |
ರಸಾಂಜನಂ ಚಿತ್ರಕಂ ಚ ಕುಟಜಸ್ಯ ಫಲಾನಿ ಚ ||
ವಚಾ ಸಾತಿವಿಷಾ ಬಿಲ್ವಂ ಪಾಠಾ ಮೋಚರಸಸ್ತಥಾ |
ಬಾಲಕಂ ಚ ಸಮಂಗಾ ಚ ಪ್ರತ್ಯೇಕಂ ತು ಪಲಂ ಪಲಮ್ ||
ತ್ರಿಂಶತ್ಪಲಂ ಗುಡಸ್ಯಾಥ ಚೂರ್ಣೀಕೃತ್ಯ ಪ್ರದಾಪಯೇತ್ |
ಮಧುನಃ ಕುಡವಂ ದತ್ವಾ ಘೃತಸ್ಯ ಕುಡವಂ ತಥಾ ||
ಏಷ ಲೇಹಸ್ತು ಶಮಯೇದರ್ಶೋ ರಕ್ತಸಮುದ್ಭವಮ್ |
ವಾತಿಕಂ ಪೈತ್ತಿಕಂ ಚೈವ ಶ್ಲೈಷ್ಮಿಕಂ ಸಾನ್ನಿಪಾತಿಕಮ್ ||
ಯೇ ಚ ದುರ್ನಾಮಜಾ ರೋಗಾಸ್ತಾಂಸ್ತು ಸರ್ವಾನ್ ವ್ಯಪೋಹತಿ |
ರಕ್ತಪಿತ್ತಮತೀಸಾರಂ ಪಾಂಡುರೋಗಮರೋಚಕಮ್ ||
ಗ್ರಹಣೀಮಾರ್ದವಂ ಕಾರ್ಶ್ಯಂ ಶ್ವಯಥುಂ ಕಾಮಲಾಮಪಿ |
ಅನುಪಾನೇ ಚ ತಂ ದದ್ಯಾದ್ದಧಿ ತಕ್ರಂ ಘೃತಂ ಪಯಃ ||

(ಚಿ. ಸಾ. ಸಂ. 92)

೧೦೦ ಪಲ ಕೊಡಸಿಗನ ತೊಗಟನ್ನು ಜಜ್ಜಿ (೧೬ ಪ್ರಸ್ಥ ನೀರಿಟ್ಟು ೪ ಪ್ರಸ್ಥ) ಕಷಾಯ ಮಾಡಿ, ವಸ್ತ್ರದಿಂದ ಶೋಧಿಸಿ, ೩೦ ಪಲ ಬೆಲ್ಲವನ್ನು ಕೂಡಿಸಿ, ಪುನಃ ಕುದಿಸಿ, ಲೇಹದ ಪಾಕ ಬರುವ ಸಮಯದಲ್ಲಿ ಮುಂದೆ ಹೇಳುವ ಚೂರ್ಣವನ್ನೂ ೫ ಪಲ ತುಪ್ಪವನ್ನೂ ಬೆರಸಿ, ಸರಿಯಾದ ಪಾಕದಲ್ಲಿ ಕೆಳಗೆ ಇಳಿಸಿ, ಅದು ಸ್ವಲ್ಪ ತಣಿದ ಮೇಲೆ ೪ ಪಲ ಜೇನನ್ನು ಬೆರಸಿಟ್ಟುಕೊಳ್ಳುವದು. ಚೂರ್ಣಕ್ಕೆ ಗೇರುಕಾಯಿಸಿಪ್ಪೆ, ವಾಯುವಿಳಂಗ, ತ್ರಿಫಲೆ, ತ್ರಿಕಟು, ರಸಾಂಜನ, ಚಿತ್ರಮೂಲದ ಬೇರಿನ ಸಿಪ್ಪೆ, ಇಂದ್ರಜೀವಿ, ಬಜೆ, ಅತಿವಿಡೆ, ಬಿಲ್ವಪತ್ರೆಯ ಎಳೇ ಕಾಯಿ, ಪಾಡಾವಳಿಗಡ್ಡೆ, ಬೂರುಗದ ಮೇಣ, ಮುಡಿವಾಳ, ನಾಚಿಕೆಸೊಪ್ಪಿನ ಗಿಡದ ಬೇರು, ಇವುಗಳನ್ನು ಒಂದೊಂದು ಪಲ ಪ್ರಕಾರ ತೆಗೆದುಕೊಂಡು, ವಸ್ತ್ರಗಾಲಿತ ಚೂರ್ಣಮಾಡಿ ಕೂಡಿಸುವದು. ಈ ಲೇಹವು ರಕ್ತದಿಂದ ಹುಟ್ಟಿದ ವಾತಿಕ, ಪೈತ್ತಿಕ, ಕಫಜ ಮತ್ತು ಸನ್ನಿಪಾತಿಕ, ಮೂಲವ್ಯಾಧಿ, ಮೂಲವ್ಯಾಧಿಯಿಂದ ಹುಟ್ಟಿದ ಸರ್ವ ರೋಗಗಳು, ರಕ್ತಪಿತ್ತ, ಅತಿಸಾರ, ಪಾಂಡುರೋಗ, ಅರುಚಿ, ಗ್ರಹಣಿಯ ಮಂದತೆ, ದೇಹದ ಕೃಶತೆ, ಶೋಫೆ, ಕಾಮಿಲೆ, ಇವುಗಳನ್ನೆಲ್ಲ ಪರಿಹರಿಸುತ್ತದೆ. ಅನುಪಾನಕ್ಕೆ ಮೊಸರು, ಮಜ್ಜಿಗೆ, ತುಪ್ಪ, ಹಾಲು, ಇವುಗಳನ್ನು (ದೋಷ ನೋಡಿಕೊಂಡು) ಉಪಯೋಗಿಸುವದು.

ಷರಾ ಗೇರುಕಾಯಿಯು ತೈಲ ತಗಲಿದ ಬಾಯಿಯೊಳಗಿನ ನಾಲಿಗೆ ಮುಂತಾದ ಭಾಗಗಳಲ್ಲಿ ಹುಣ್ಣಾಗುವದಾದ್ದರಿಂದ, ಗೇರುಕಾಯಿಯ ಕಷಾಯ ಪಾನಮಾಡುವಾಗ್ಗೆ ಬಾಯಿಯೊಳಗಿನ ಭಾಗಗಳಿಗೆ ತುಪ್ಪ ಸವರಿಕೊಳ್ಳಬೇಕೆಂತ ವಿಧಿ ಇರುತ್ತದೆ. ಈ ಯೋಗದಲ್ಲಿ ಗೇರುಕಾಯಿ ಅಲ್ಪ ಪ್ರಮಾಣದಲ್ಲಿ ಸೇರುತ್ತಹಾದ್ದರಿಂದಲೂ, ತುಪ್ಪವು ಸೇರುವದ

ರಿಂದಲೂ, ಆ ಭಯವಿಲ್ಲ. ಗೇರುಕಾಯಿಗಳೊಳಗೆ ನೀರಲ್ಲಿ ಮುಳುಗುವಂಥವುಗಳನ್ನೇ ಉಪಯೋಗಿಸತಕ್ಕದ್ದಾಗಿಯೂ, ಅವುಗಳನ್ನು ಇಟ್ಟಿಗೆಯ ಪುಡಿಯಿಂದ ತಿಕ್ಕಿದಲ್ಲಿ ಅವು ನಿರ್ವಿಷವಾಗುತ್ತವೆಂತಲೂ, ಧನ್ವಂತರಿ ನಿಘಂಟಿನಲ್ಲಿ ವ್ಯಾಖ್ಯಾನ ಕಾಣುತ್ತದೆ ಸಾಧಾರಣವಾಗಿ ಗೇರುಕಾಯಿಯನ್ನು ಗೋಮೂತ್ರದಲ್ಲಿ ಬೇಯಿಸಿ, ದ್ರವವನ್ನು ಚಲ್ಲಿ, ಕಾಯಿಯನ್ನು ಬಿಸಿ ನೀರಿನಿಂದ ತೊಳೆದು, ಒಣಗಿಸಿ ಉಪಯೋಗಿಸುತ್ತಾರೆ ಹಾಗೆ ಮಾಡುವದರಿಂದ ಅದರ ಶಕ್ತಿ ಕಡಿಮೆಯಾಗುತ್ತದೆ ಅನುಪಾನವಾಗಿ ಹಾಲುತುಪ್ಪಗಳನ್ನು ಉಪಯೋಗಿಸುವಲ್ಲಿಂತೂ ಗೇರುಕಾಯಿಯ ದೋಷ ಕಾಣಲಾರದು ಅನುಪಾನದ ಹಾಲು, ಮಜ್ಜಿಗೆ. ಮುಂತಾದವು ಅಡಿನದು ಆಗಬೇಕೆಂತ ಶಾ (ಪು 84)

ಸಪ್ತಾಂಗಘೃತ

ದಾರ್ವೀ ಸಲಾಕ್ಷಾ ಕಟುಕಾ ಸವಿಶ್ವಾ ತ್ವಕ್ಕೌಟಜಾಃ(?ಜಾ) ಶಕ್ರಯವಃ ಸಕೃಷ್ಣಃ |
ಏಭಿರ್ವಿಪಕ್ವಂ ಘೃತಮಾಶು ಹನ್ತಿ ಮಂಡೇನ ಪೀತಂ ಸಕಲಾತಿಸಾರಮ್ |
(ಚಿ. ಸಾ. ಸಂ. 95)

ಮರದರಸಿನ, ಕಡ್ಡಿಅರಗು, ಕಟುಕರೋಹಿಣಿ, ಶುಂಠಿ, ಕೊಡಸಿಗನ ತೊಗಟು, ಇಂದ್ರಜೀವಿ, ಹಿಪ್ಪಲಿ, ಈ ಏಳು ಬಗೆ ಔಷಧಗಳಿಂದ ಕಾಯಿಸಿದ ತುಪ್ಪವು, ಮಂಡ (ಗಂಜಿ ವಿಶೇಷ) ದೊಂದಿಗೆ ಪಾನಮಾಡಲ್ಪಟ್ಟಲ್ಲಿ, ಸಕಲ ಅತಿಸಾರಗಳನ್ನು ಬೇಗನೆ ನಾಶಮಾಡುತ್ತದೆ.

ಲವಂಗ ಚತುಃಸಮ ಚೂರ್ಣ

ಜಾತೀಫಲಂ ತ್ರಿದಶಪುಷ್ಪಸಮನ್ವಿತೇನ
ಜೀರಂ ಚ ಟಂಕಣಯುತಂ ಚರಕೈಃ ಪ್ರಯುಕ್ತಮ್ |
ಚೂರ್ಣಾನಿ ಮಾಕ್ಷಿಕಸಿತಾಸಹಿತಾನಿ ಲೀಢ್ವಾ
ಸಾಮಾತಿಸಾರಮಖಿಲಂ ಗುರು ಹನ್ತಿ ಶೂಲಮ್ || (ರ. ರ. 255)

ಜಾಯಿಕಾಯಿ, ಲವಂಗ, ಜೀರಿಗೆ, ಬಿಳಿಗಾರ (ಟಂಕಣದ ಅರಳು), ಇವುಗಳನ್ನು ಸಮಪಾಲು ತೆಗೆದುಕೊಂಡು ಚೂರ್ಣಿಸಿ, ಆ ಚೂರ್ಣವನ್ನು, ಸಕ್ಕರೆ ಮತ್ತು ಜೇನು ಕೂಡಿಸಿಕೊಂಡು, ನೆಕ್ಕುವದರಿಂದ ಆಮಾತಿಸಾರ ಮುಂತಾದ ಸಕಲ ಅತಿಸಾರಗಳು ಮತ್ತು ಬಲವಾದ ಶೂಲೆ ಪರಿಹಾರವಾಗುವವು.

ಕನಕಸುಂದರ ರಸ

ಹಿಂಗುಲಂ ಮರಿಚಂ ಗನ್ಧಂ ಪಿಪ್ಪಲೀ ಟಂಕಣಂ ವಿಷಮ್ |
ಕನಕಸ್ಯ ಚ ಬೀಜಾನಿ ಸಮಾಂಶಂ ವಿಜಯಾದ್ರವೈಃ ||
ಮರ್ದಯೇದ್ಯಾಮಮಾತ್ರನ್ತು ಚಣಮಾತ್ರಾ ವಟೀ ಕೃತಾ |
ಭಕ್ಷಣಾದ್ಗ್ರಹಣೀಂ ಹನ್ತಿ ರಸಃ ಕನಕಸುಂದರಃ ||
ಅಗ್ನಿಮಾಂದ್ಯಂ ಜ್ವರಂ ತೀವ್ರಮತೀಸಾರಂ ಚ ನಾಶಯೇತ್ |
ದಧ್ಯನ್ನಂ ದಾಪಯೇತ್ಪಥ್ಯಂ ಮಹಾತಕ್ರೌದನಂ ಚರೇತ್ ||
(ರಸೇಂದ್ರ ಚಿಂತಾಮಣಿ 97-98)

(ಶುದ್ಧ) ಇಂಗಳೀಕ, ಬಿಳೇ ಕಾಳುಮೆಣಸು, (ಶುದ್ಧ) ಗಂಧಕ, ಹಿಪ್ಪಲಿ, ಟಂಕಣಕಾರ(ದ ಅರಳು), (ಶುದ್ಧ) ವತ್ಸನಾಭಿ, (ಶುದ್ಧ) ಉಮ್ಮತ್ತದ ಬೀಜ, ಇವು ಏಳು ಬಗೆಗಳನ್ನು ಸಮಾಂಶವಾಗಿ ತೆಗೆದುಕೊಂಡು ಚೂರ್ಣಿಸಿ, ಭಂಗಿಸೊಪ್ಪಿನ ರಸದೊಂದಿಗೆ ಒಂದು ಜಾಮಕಾಲ ಅರೆದು, ನುಣ್ಣಗಾದ ಮೇಲೆ ಕಡಲೆಗಾತ್ರದ ಮಾತ್ರೆಗಳನ್ನು ಕಟ್ಟಿ, (ನೆಳಲಲ್ಲಿ ಒಣಗಿಸಿಟ್ಟುಕೊಂಡು) ಒಂದೊಂದು ಮಾತ್ರೆಯಂತೆ (ಅನುಪಾನಭೇದದಿಂದ) ಸೇವಿಸಲು, ಗ್ರಹಣಿ,

ಅಗ್ನಿಮಾಂದ್ಯ, ಜ್ವರ, ಕಠಿಣವಾದ ಅತಿಸಾರ, ಸಹ ನಾಶವಾಗುವವು. ಮೊಸರಿನಿಂದ ಅಥವಾ ದನದ ಮಜ್ಜಿಗೆಯಿಂದ ಪಥ್ಯ ಕೊಡಬೇಕು. ಈ ಮಾತ್ರೆಯು 'ಕನಕಸುಂದರ' ಎಂಬ ಹೆಸರನ್ನು ಪಡದಿರುತ್ತದೆ.

ಷರಾ ಯೋಗದಲ್ಲಿ ಉಕ್ತವಾದ ಪಥ್ಯವು ಗ್ರಹಣೀ-ಅತಿಸಾರಗಳಲ್ಲಿಯೂ, ಅಗ್ನಿಮಾಂದ್ಯದಲ್ಲಿಯೂ ಯುಕ್ತವಾದ್ದಲ್ಲದೆ, ಜ್ವರದಲ್ಲಿ ಅಲ್ಲ ಶಾ ದಲ್ಲಿ (ಪು 131) ಕಾಣುವ ಇದೇ ಹೆಸರಿನ ರಸ ಬೇರೆ

ರತಿಲೀಲಾ ರಸ.

ಜಾತಿಪಿಪ್ಪಲ್ಯಫೇನಂ ಚ ವಿಜಯಾಚೂರ್ಣಸಂಯುತಮ್ |
*ಲವಂಗಂ ಧೂರ್ತಬೀಜಂ ಚ ತ್ರುಟಿ ವಾರಿಧಿಶೋಕಕಮ್ ||
ಸಾಮ್ಯಾಂಶಂ ನಿಕ್ಷಿಪೇತ್ಖಲ್ವೇ ಯಾಮೈಕಂ ವಿಜಯಾದ್ರವೈಃ |
ಸಮ್ಮರ್ದ್ಯ ವಟಕಾನ್ ಕೃತ್ವಾ ಗುಂಜಾಮಾ(?ಗಾ)ತ್ರಪ್ರಮಾಣತಃ ||
ರತಿಲೀಲಾರಸಃ ಸೋ ऽಯಂ ದ್ವಿಗುಂಜಸ್ತು ಮಧುಪ್ಲುತಮ್ |
ಖಾದಯೇದ್ಗ್ರಹಣೀರೋಗಮತಿಸಾರಂ ಚ ನಾಶಯೇತ್ ||
(ವೃ. ಸಾ. ಸಂ. 218)

* ಮೂಲದಲ್ಲಿ 'ವರಾಳಂ' ಎಂತ ಪದವಿಟ್ಟು 'ಲವಂಗ' ಎಂತ ಅರ್ಥ ಬರೆದಿದೆ ಅದಕ್ಕೆ ಆಧಾರ ಕಾಣುವದಿಲ್ಲ

ಜಾಯಿಕಾಯಿ, ಹಿಪ್ಪಲಿ, (ಶುದ್ಧ) ಅಫೀಮು, (ಶುದ್ಧ) ಭಂಗಿಚೂರ್ಣ, ಲವಂಗ, (ಶುದ್ಧ) ಉಮ್ಮತ್ತದಬೀಜ, ಏಲಕ್ಕಿ, ಸಮುದ್ರಶೋಕಿಬೀಜ, ಇವು ೮ ಬಗೆಗಳನ್ನು ಸಮಾಂಶವಾಗಿ ತೆಗೆದುಕೊಂಡು ಚೂರ್ಣಿಸಿ, ಕಲಬತ್ತಿನಲ್ಲಿ ಹಾಕಿ ಭಂಗಿಸೊಪ್ಪಿನ ರಸದೊಂದಿಗೆ ಒಂದು ಜಾಮ ಕಾಲ ಚೆನ್ನಾಗಿ ಅರೆದು, ನುಣ್ಣಗಾದ ಮೇಲೆ, ಗುಲುಗುಂಜಿಗಾತ್ರದ ಮಾತ್ರೆಗಳನ್ನು ಮಾಡಿ, (ನೆಳಲಲ್ಲಿ ಒಣಗಿಸಿಟ್ಟುಕೊಂಡು) ಎರಡು ಮಾತ್ರೆ ಪ್ರಕಾರ ಜೇನಿನಲ್ಲಿ ತೇದಿ ನೆಕ್ಕಲು, ಗ್ರಹಣಿ ರೋಗ, ಅತಿಸಾರ ಸಹ ನಾಶವಾಗುವವು. ಇದು 'ರತಿಲೀಲಾರಸ' ಎಂಬ ಹೆಸರಿನ ಮಾತ್ರೆ.

ಷರಾ ಕನಕಸುಂದರ ಮತ್ತು ರತಿಲೀಲಾ ಎಂಬ ಮಾತ್ರೆಗಳಲ್ಲಿರುವ ಅಮಲು ಪದಾರ್ಥಗಳಾದ ಭಂಗಿ ಮತ್ತು ಅಫೀಮಿನ ಗುಣದೋಷಗಳನ್ನು ಆಲೋಚಿಸಿಕೊಂಡು ಮಾತ್ರೆಗಳನ್ನು ಉಪಯೋಗಿಸತಕ್ಕದ್ದು ಈ ಮಾತ್ರೆಯು ಉಬ್ಬಸ ವ್ಯಾಧಿಯಲ್ಲಿಯೂ ಹೆಚ್ಚು ಉಪಯೋಗವುಳ್ಳದ್ದು

ಹಿಂದೆ 266ನೇ ಪುಟದಲ್ಲಿ ವಿವರಿಸಲ್ಪಟ್ಟ ಅತಿಸಾರಮೂಲಘ್ನ ಮಾತ್ರೆ, ಮತ್ತು 330ನೇ ಪುಟದಲ್ಲಿ ವ್ಯಾಖ್ಯಾನವಾದ ಆನಂದಭೈರವಿ ಮಾತ್ರೆ, ಮತ್ತು ಗ್ರಹಣೀ ಅಧ್ಯಾಯದಲ್ಲಿಯೂ 'ವಿಷೂಚೀ' ಅಧ್ಯಾಯದಲ್ಲಿಯೂ ಹೇಳಲ್ಪಟ್ಟ ಮಾತ್ರೆಗಳು ಅತಿಸಾರದಲ್ಲಿ ಸಹ ಫಲಕಾರಿಯಾಗುತ್ತವೆ ಅನುಪಾನದಲ್ಲಿ ಬೇಕಾದ ಹಾಗೆ ಭೇದ ಮಾಡಿಕೊಳ್ಳಬೇಕು ಭಂಗಿಯ ಶುದ್ಧಿಕ್ರಮಕ್ಕೆ ಅ XIX 17 ನೋಡಿ ಇತರ ವಿಷವಸ್ತುಗಳ ಶುದ್ಧಿಕ್ರಮಗಳು ಹಿಂದೆ ವರ್ಣಿಸಲ್ಪಟ್ಟಿವೆ

56. ಯಸ್ಯೋಚ್ಚಾರಂ ವಿನಾ ಮೂತ್ರಂ ಸಮ್ಯಗ್ವಾಯುಶ್ಚ ಗಚ್ಛತಿ |
ದೀಪ್ತಾಗ್ನೇರ್ಲಘುಕೋಷ್ಠಸ್ಯ ಸ್ಥಿತಸ್ತಸ್ಯೋದರಾಮಯಃ || (ಸು. 794)

ಅತಿಸಾರವಿಮೋಚನದ ಲಕ್ಷಣ

ಯಾವನಿಗೆ ಮಲವಿನಾ ಮೂತ್ರ ಮತ್ತು ವಾಯು ಸರಿಯಾಗಿ ಹೋಗುತ್ತವೋ ಮತ್ತು ಅಗ್ನಿ ಚುರುಕಾಗಿ ಹೊಟ್ಟೆ ಲಘುವಾಗುತ್ತದೋ, ಅಂಥವನ ಹೊಟ್ಟೆರೋಗವು (ಅತಿಸಾರವು) ನಿಂತಿತು (ಎಂತ ತಿಳಿಯಬೇಕು).

ಕರ್ಮಜಾ ವ್ಯಾಧಯಃ ಕೇಚಿದ್ದೋಷಜಾಃ ಸನ್ತಿ ಚಾಪರೇ |
ಕರ್ಮದೋಷೋದ್ಭವಾಶ್ಚಾನ್ಯೇ ಕರ್ಮಜಾಸ್ತೇಷ್ವಹೇತುಕಾಃ ||

ವ್ಯಾಧಿಗಳಲ್ಲಿ ಕರ್ಮಜ ದೋಷಜ ಭೇದಗಳು.

ನಶ್ಯನ್ತಿ ತ್ವಕ್ರಿಯಾಭಿಸ್ತೇ ಕ್ರಿಯಾಭಿಃ ಕರ್ಮಸಂಕ್ಷಯೇ ।
ಶಾಮ್ಯನ್ತಿ ದೋಷಸಂಭೂತಾ ದೋಷಸಂಕ್ಷಯಹೇತುಭಿಃ ॥
ತೇಷಾಮಲ್ಪನಿದಾನಾ ಯೇ ಪ್ರತಿಕಷ್ಟಾ ಭವನ್ತಿ ಚ ।
ಮೃದವಾ(?ವೋ) ಬಹುದೋಷಾ ವಾ ಕರ್ಮದೋಷೋದ್ಭವಾಸ್ತು ತೇ ॥
ಕರ್ಮದೋಷಕ್ಷಯಕೃತಾ ತೇಷಾಂ ಸಿದ್ಧಿರ್ವಿಧೀಯತೇ ॥ (ಸು. 794)

ಕೆಲವು ರೋಗಗಳು ದುಷ್ಕರ್ಮದ ಫಲವಾಗಿಯೂ, ಕೆಲವು ರೋಗಗಳು ವಾತಾದಿ ದೋಷಪ್ರಕೋಪದ ಫಲವಾಗಿಯೂ, ಬೇರೆ ಕೆಲವು ಕರ್ಮ ಮತ್ತು ದೋಷ, ಇವೆರಡರಿಂದ ಉದ್ಭವಿಸುವವಾಗಿಯೂ, ಇರುತ್ತವೆ. ಅವುಗಳೊಳಗೆ ಕರ್ಮಜ ವ್ಯಾಧಿಗಳಿಗೆ ಹೇತುಗಳು ಇರುವದಿಲ್ಲ; ಮತ್ತು ಅವು ಪುಣ್ಯಕರ್ಮಗಳಿಂದ ವ್ಯಾಧಿಗೆ ಕಾರಣವಾದ ಕರ್ಮ ಕ್ಷಯವಾದ ಕೂಡಲೇ ಪ್ರತಿಕ್ರಿಯೆ ಇಲ್ಲದೆನೇ ನಾಶವಾಗುತ್ತವೆ. ದೋಷಜ ವ್ಯಾಧಿಗಳು ದೋಷಪರಿಹಾರ ಕರವಾದ ಪ್ರತಿಕ್ರಿಯೆಗಳಿಂದ, ಶಮನವಾಗುತ್ತವೆ. ಅವುಗಳೊಳಗೆ ಯಾವ ವ್ಯಾಧಿಗಳು ಅಲ್ಪನಿದಾನವುಳ್ಳವಾಗಿದ್ದು ವಾಸಿಮಾಡುವದಕ್ಕೆ ಕಷ್ಟವಾಗುತ್ತವೋ, ಅಥವಾ ಬಹು ದೋಷ ಗಳುಳ್ಳವಾಗಿದ್ದು ಮೃದುವಾಗುತ್ತವೋ ಅವು ಕರ್ಮ ಮತ್ತು ದೋಷ, ಇವೆರಡು ಹೇತುಗಳಿಂದ ಹುಟ್ಟಿದಂಥವು ಎಂತ ತಿಳಿಯಬೇಕು; ಅವುಗಳು ಪರಿಹಾರವಾಗಬೇಕಾದರೆ (ದುಷ್ಟ) ಕರ್ಮ ಗಳನ್ನು ಕ್ಷಯಿಸತಕ್ಕಂಥಾ (ಪುಣ್ಯ) ಕರ್ಮಗಳನ್ನು ಮತ್ತು (ವಾತಾದಿ) ದೋಷಕ್ಷಯಕರ ವಾದ ಕರ್ಮ(ಔಷಧ)ಗಳನ್ನು ನಡಿಸತಕ್ಕದ್ದು; ಅದರಿಂದ ಸಿದ್ಧಿಯಾಗುತ್ತದೆ.

ದೃಷ್ಟಫಲ ಚಿಕಿತ್ಸೆ.

57. (1) ಪ್ರಾಯ ೧೯ ವರ್ಷ. ಹಳೇ ರಕ್ತಾತಿಸಾರ, ೬ ತಿಂಗಳಿಂದ ಉಂಟು, ಈಗ ದಿನಕ್ಕೆ ೪-೫ ಸರ್ತಿ ರಕ್ತಮಿಶ್ರವಾಗಿ ಶಬ್ದದೊಡನೆ ಮಲ ಪ್ರವೃತ್ತಿ ಯಾಗುತ್ತದೆ, ಹಸಿವೆ ಮತ್ತು ಬಾಯಿರುಚಿ ಸರಿ.— ಭದ್ರಮುಷ್ಟಿ ತೊ. ೧, ಬಿಲ್ವಪತ್ರೆಬೇರು ತೊ. ॥, ಇವುಗಳ ಕಷಾಯದ ಅರ್ಧದಲ್ಲಿ ಅತಿ. ೧ರಂತೆ, ಜೇನು ಕೂಡಿಸಿ, ೬ ದಿನ, ದಿನಕ್ಕೆ ೨ ಸರ್ತಿ — ಮಲಪ್ರವೃತ್ತಿ ೨ ಸರ್ತಿಗೆ ತಗ್ಗಿದೆ. — ಅದೇ ಪ್ರಕಾರ ಇನ್ನು ೪ ದಿನ— ಮಲಪ್ರವೃತ್ತಿ ದಿನ ೧ರ ಒಂದೇ ಸರ್ತಿ ಹೋಗುತ್ತನಾದಾಗ್ಯೂ, ಮಲದಲ್ಲಿ ರಕ್ತದ ಲಾಂಛನ ಇನ್ನೂ ಕಾಣುತ್ತದೆ; ನಾಡಿಗಳು ಕ್ಷೀಣ, ಪಿತ್ತಸ್ಥಾನಚ್ಯುತ, ದೇಹದಲ್ಲಿ ರಕ್ತ ಕಡಿಮೆ ಯಾಗಿದೆ— ಕಲ್ಲಂಗಡಲೆಬೇರು ತೊ. ॥, ಭದ್ರಮುಷ್ಟಿ ತೊ. ॥, ಸುಗಂಧಿಬೇರಿನ ಒಳಸಿಪ್ಪೆ ತೊ. ॥, ಬಿಲ್ವಪತ್ರೆಬೇರು ತೊ. ॥, ಇವುಗಳ ಕಷಾಯದ ಅರ್ಧದಲ್ಲಿ ಅತಿ. ೧, ಕಸ್ತೂ ರ್ಯಾದಿ ೧, ರಂತೆ, ಜೇನು ಕೂಡಿಸಿ, ೧೨ ದಿನ— ರಕ್ತದ ಲಾಂಛನ ಇನ್ನೂ ಉಂಟು.—ಕಷಾಯ ದ್ರವ್ಯಗಳೊಳಗೆ ಬಿಲ್ವ. ತೊ. । ಕ್ಕೆ ತಗ್ಗಿಸಿ, ಲವಂಗಪಟ್ಟೆ ತೊ. ।. ಕೂಡಿಸಿ, ಅತಿ. ೧ರಂತೆ, ಜೇನು ಕೂಡಿಸಿ, ೬ ದಿನ. ಇದರಿಂದ ಪೂರ್ಣ ಸೌಖ್ಯವಾಯಿತು.

(2) ಪ್ರಾಯ ೭ ವರ್ಷ. ನಿನ್ನೆ ರಾತ್ರಿ ೩ ಸರ್ತಿ ವಾಂತಿ, ಈ ಹೊತ್ತು ಬೆಳ್ಳಗಾಗಿಯೂ, ತೆಳ್ಳಗಾಗಿಯೂ ಅತಿಸಾರ; ನಾಡಿಗಳಲ್ಲಿ ವಾತಪಿತ್ತಗಳ ದೋಷ ಹೆಚ್ಚು — ನೀರುಳ್ಳಿ ರಸ । ಡ್ರಾಂ, ಶುಂಠಿರಸ । ಡ್ರಾಂ, ಜೇನು । ಡ್ರಾಂ, ಇದರಲ್ಲಿ ಅತಿ. ॥ ರಂತೆ—೩-೪ ದಿನಗಳಲ್ಲಿ ಪೂರ್ಣ ಕ್ಷೇಮವಾಯಿತು.

(3) ಪ್ರಾಯ ೧೮ ವರ್ಷ. ಅಜೀರ್ತಿಯ ಅತಿಸಾರ—ಬೆಳಿಗ್ಗೆ ಹರಳೆಣ್ಣೆ ೧ ಡ್ರಾಂ ಕಾಯಿಸಿದ ಹಾಲಿನೊಂದಿಗೆ ಕೊಟ್ಟು, ಸಂಜೆಗೆ ಆ. ೧ನ್ನು ಜೀರಿಗೆ ಕಷಾಯದಲ್ಲಿ, ಸಕ್ಕರೆ ಕೂಡಿಸಿ, ಕೊಟ್ಟದರಿಂದ ಕ್ಷೇಮ.

(4) ಪ್ರಾಯ ೪೬ ವರ್ಷ. ನಿನ್ನೆಯಿಂದ ಅತಿಸಾರ; ಪಿತ್ತ-ಕಫ ನಾಡಿಗಳು ಸ್ಥಾನಚ್ಯುತ, ವಾತ ಸ್ವಸ್ಥಾನದಲ್ಲಿ ಬಲ—ಆ. |||, ಅತಿ. ||ರಂತೆ, ಶುಂಠಿರಸ ಮತ್ತು ಜೇನಿನಲ್ಲಿ, ೨ ಸರ್ತಿ ಕೊಟ್ಟದರಿಂದ ಕ್ಷೇಮ.

(5) ಪ್ರಾಯ ೨೦ ವರ್ಷ. ನಾಲ್ಕು ದಿನಗಳಿಂದ ಅತಿಸಾರ, ಅಜೀರ್ತಿದು—ಶುಂಠಿ ವಟಕ ೨ನ್ನು ಬಿಸಿನೀರಿನಲ್ಲಿ ಕರಗಿಸಿ ಪಾನಮಾಡಿದ್ದರಿಂದ ಕ್ಷೇಮ.

ಶುಂಠಿವಟಕದ ಕ್ರಮ

ಒಂದು ಕಂಚಿಹಣ್ಣನ್ನೂ ೪ ತೊಲೆ ಹಸಿಶುಂಠಿಯನ್ನೂ ಬೇರೆಬೇರೆಯಾಗಿ ಪುಟಪಾಕ ಕ್ರಮದಿಂದ ಬೇಯಿಸಿ, ತಣಿದ ಮೇಲೆ, ಶುಂಠಿಯ ಸಿಪ್ಪೆಯನ್ನೂ, ಹಣ್ಣಿನೊಳಗಿನ ಬೀಜಗಳನ್ನೂ, ತೆಗೆದು ಬಿಟ್ಟು, ಸಣ್ಣವಾಗಿ ಹಚ್ಚಿ, ಅವುಗಳನ್ನೂ ೪ ತೊಲೆ ಹುರಿದ ಜೀರಿಗೆಯ ಪುಡಿಯನ್ನೂ, ೨ ತೊಲೆ ಸೈಂಧವಲವಣವನ್ನೂ, ಬೇಕಾದಷ್ಟು ಬಿಸಿನೀರನ್ನು ಕೂಡಿಸಿಕೊಂಡು, ಒಟ್ಟಾಗಿ ನುಣ್ಣಗೆ ಅರೆದು, ಗಜ್ಜಿಗದ ಗಾತ್ರ ವಟಕಗಳನ್ನು ಮಾಡಿ, ಬಿಸಿಲಿನಲ್ಲಿ ಒಣಗಿಸಿ, ಗಾಳಿ ತಾಗದಂತೆ ಇಟ್ಟುಕೊಳ್ಳುವದು. ಈ ವಟಕಗಳೊಳಗೆ ೧-೨ನ್ನು ಬಿಸಿನೀರಿನೊಂದಿಗೆ, ಅಥವಾ ಮಜ್ಜಿಗೆಯೊಂದಿಗೆ, ಅಥವಾ ಮೊಸರಿನೊಂದಿಗೆ, ಕೊಟ್ಟಲ್ಲಿ ಹೊಟ್ಟೆಶೂಲೆ, ಅಜೀರ್ತಿ, ಅತಿಸಾರ, ಹೊಟ್ಟೆಯುಬ್ಬರ, ವಾಂತಿ, ಕ್ರಿಮಿಉಪದ್ರವ, ಮುಂತಾದವು ಪರಿಹಾರವಾಗುವವು.

(6) ಪ್ರಾಯ ೨೦ ವರ್ಷ. ೨೦ ದಿನಗಳಿಂದ ಅತಿಸಾರ; ಆರಂಭದಲ್ಲಿ ರಕ್ತ ಹೋಗುತ್ತಿತ್ತು; ಈಗ ನಾನಾ ವರ್ಣವಾಗಿ ಹಗಲು ೪ ಸರ್ತಿ, ರಾತ್ರಿ ೪ ಸರ್ತಿ ಮಲ ಹೋಗುತ್ತದೆ.—ಸುಟ್ಟ ನೀರುಳ್ಳಿಯ ರಸ ೧ ಡ್ರಾಂ, ಜೇನು ೧ ಡ್ರಾಂ, ಇದರಲ್ಲಿ ಆ. |||, ಅತಿ. |||ರಂತೆ ೨ ಸರ್ತಿ ಕೊಟ್ಟದರಿಂದ ಮಲ ಸ್ವಲ್ಪ ಗಟ್ಟಿಯಾಯಿತು ಮತ್ತು ಒಂದು ಹುಳ ಹೋಯಿತು—ಆ ಮೇಲೆ ಭದ್ರಮುಷ್ಟಿ ತೊ. ೧, ಹುರಿದ ಓಮ ತೊ. ||,ರ ಕಷಾಯದ ಅರ್ಧದಲ್ಲಿ ಅತಿ. ೧ರಂತೆ ೬ ಸರ್ತಿ ಸೇವಿಸಿದರಿಂದ ಕ್ಷೇಮವಾಯಿತು.

(7) ಪ್ರಾಯ ೧೬ ವರ್ಷ. ನಿನ್ನೆಯಿಂದ ಅತಿಸಾರ ಉಂಡಮೇಲೆ, ಮೇಲಿನ ಹೊಟ್ಟೆಯಲ್ಲಿ ಶೂಲೆ; ಪಿತ್ತ ಸ್ಥಾನಚ್ಯುತ, ಕಫ ಸ್ವಲ್ಪ ಕಡಿಮೆಯಾಗಿ ಹಾಗೆಯೆ ಮತ್ತು ಕ್ಷೀಣ—ಶುಂಠಿರಸ ೧ ಡ್ರಾಂ, ಜೇನು || ಡ್ರಾಂ, ಇದರಲ್ಲಿ ಆ. ೧ರಂತೆ, ೨ ಚಿಮಿಟಿ ಸಕ್ಕರೆ ಕೂಡಿಸಿ, ೪ ಸರ್ತಿ—ನಾಡಿಗಳು ಸ್ಥಾನದಲ್ಲಿ, ಆದರೆ ಪಿತ್ತಕ್ಕೆ ತಲೆಯಿಲ್ಲ, ಕಫ ಕ್ಷೀಣವಾಗಿಯೆ ಉಂಟು, ಹೊಟ್ಟೆಶೂಲೆ ಇಲ್ಲ; ಅತಿಸಾರ ಕಡಿಮೆ—ಅದೇ ಅನುಪಾನದಲ್ಲಿ ಅತಿ. ೧ರಂತೆ ೬ ಸರ್ತಿ. ಇದರಿಂದ ಕ್ಷೇಮ.

(8) ಪ್ರಾಯ ೫೦ ವರ್ಷ. ಒಂದು ತಿಂಗಳಿಂದ ಅತಿಸಾರ, ಹಗಲು ೫ ಸರ್ತಿ, ರಾತ್ರಿ ಒಮ್ಮೆ, ಹೋಗುವದು; ಹೊಟ್ಟೆಶೂಲೆ; ಸಂಜೆಗೆ ಮೈಕಾವು—ಸುಟ್ಟ ನೀರುಳ್ಳಿಯ ರಸ ೧ ಡ್ರಾಂ, ಜೇನು | ಡ್ರಾಂ, ನಲ್ಲಿ ಅತಿ. ೧ರಂತೆ ೪ ಸರ್ತಿ ಕೊಟ್ಟದರಿಂದ ಶೂಲೆ ಕಡಿಮೆ, ಮತ್ತು ರಾತ್ರೆಯ ಮಲ ನಿಂತಿದೆ; ಸಂಜೆಗೆ ಚಳಿ ಉಂಟಾಗಿ ಮೈಕಾಯುತ್ತದೆ—ಕೊತ್ತುಂಬರಿ ತೊ. ||, ಬಿಲ್ವ

ಪತ್ರೆಬೇರು ತೊ. ||ರ ಕಷಾಯದ ಅರ್ಧದಲ್ಲಿ ಕರ್ಪೂರಾದಿ ೧ರಂತೆ, ಜೇನು ಕೂಡಿಸಿ, ೮ ಸರ್ತಿ. ಇದರಿಂದ ಕ್ಷೇಮ.

(9) ಪ್ರಾಯ ೨೭ ವರ್ಷ. ರಕ್ತಾತಿಸಾರ; ರಾತ್ರಿ ೮ ಸರ್ತಿ ಆಗಿದೆ; ಹೊಟ್ಟೆಶೂಲೆ ಉಂಟು—ಸುಟ್ಟ ನೀರುಳ್ಳಿಯ ರಸ ೨ ಡ್ರಾಂ, ಜೇನು ೧ ಡ್ರಾಂ, ಇದರಲ್ಲಿ ಅತಿ. ೧ರಂತೆ ೬ ಸರ್ತಿ. ಕ್ಷೇಮ.

(10) ಉಪೋದ್ಘಾತದ 13ನೇ ಪುಟ ನೋಡಿರಿ.

58. ಪೃಥಗ್ರೋಗೋಕ್ತ ಔಷಧಗಳು. ಅಗಳುಶುಂಠಿ (ಪಾಡಾವಳಿಗಡ್ಡೆ), ಅಜಮೋದ, ಅತಿವಿಡೆ, ಅಫೀಮು, ಆಡಿನ ಮೊಸರು, ಆನೆಬೇಲ (ಬೆಳವಲ ಹಣ್ಣು), ಆನೆಮುಂಗಿನ ಕೆತ್ತೆ (ತೊಗಟು), ಇಂದ್ರಜೇವಿ (ಕೊಡಸಿಗನ ಬೀಜ), ಎಳ್ಳೆಣ್ಣೆ, ಓರೆಲೆಬೇರು, ಕರಿಜೀರಿಗೆ, ಕಹಿಬೇವಿನ ಚಿಗುರು, ಕಾಚು, ಕಾಡುಹೆಸರಿನ ಬೇರು, ಕೊಡಸಿಗನ ಕೆತ್ತೆ, ಕೊಳವಳಿಕೆಬೀಜ, ಖರ್ಜೂರ, ಗಜಹಿಪ್ಪಲಿ, ಗಜ್ಜಿಗದ ಕಾಯಿ, ಗೇರುಮರನ ಮೇಣ, ಜಾಯಿಕಾಯಿ, ಜೀರಿಗೆ, ಜೇನು, ತೆಂಗಿನ ಹೂವು, ದಾಳಿಂಬದ ಹಣ್ಣಿನ ತೊಗಟು, ದೊಡ್ಡ ಕರಿಜೀರಿಗೆ ಅಥವಾ ಸೋಪಿ (ಉಪಕುಂಚೀ), ಧಾತಕಿಕುಸುಮ, ನಾಚಿಕೆಸೊಪ್ಪಿನ ಗಿಡದ ಬೇರು, ನೆಲಗುಳ್ಳ(ಬಿಳೇ)ದ ಬೇರು, ನೆಲನೆಲ್ಲಿ, ನೇರಳೆಯ ಕೆತ್ತೆ, ಪಾದರಿಮರದ ಬೇರು, ಬಡೇಸೋಪಿ, ಬಳ್ಳಿತುರಚಿಗಿಡದ ಬೇರು, ಬಾಳೆಮೋತಿ, ಬಿಲ್ವಪತ್ರೆ (ಬೇರು ಅಥವಾ ಎಳೇ ಕಾಯಿ), ಬೂರುಗದ ಮೇಣ, ಭಂಗಿ, ಭದ್ರಮುಷ್ಟಿ, ಮಂಜಿಷ್ಠ, ಮಯೂರಶಿಖೆ, ಮಾಚಿಕೆ (ಅಗ್ರದ)ಕಾಯಿ, ಮಾವಿನ ಚಿಗುರು, ಮಾವಿನ ಬೀಜ (ಗೊರಟು), ಮಾವಿನ ಹೂವು, ಮುಡಿವಾಳ, ಮೂವೆಲೆಬೇರು, ರಾಳ (ಸರ್ಜರಸ), ಲವಂಗ, ಲೋಧ್ರ, ಶತಾವರಿಯ ಬೇರು, ಶಾಖೋಟ (ಮಿಟ್ಲೆಮರ), ಶುಂಠಿ, ಸಬ್ಬಸಿಗೆ, ಸುಗಂಧಿ(ನಾಮದ)ಬೇರು, ಹಂಸಪಾದಿ, ಹಾಲುಮರಗಳ (ಆಲ, ಅಶ್ವತ್ಥ, ಅತ್ತಿ, ಬಸುರಿ ಮತ್ತು ಹೂವರಸಿ. ಮಲ. ಕಲ್ಲಾಲ;) ಕೆತ್ತೆಗಳು, ಹಿಪ್ಪಲಿ ಮತ್ತು ಹುಣಸೆಬೀಜ.

59. ಪಥ್ಯವರ್ಗ ವಮನ, ಲಂಘನ, ನಿದ್ರೆ, ಅರ್ವತ್ತು ದಿನಗಳ ಬೆಳಿಕೆಯ ಹಳೇ ಅಕ್ಕಿಯ ಅನ್ನ, ವಿಲೇಪೀ (ಗಂಜಭೇದ), ಅರಳಿನ ಗಂಜಿಯ ನೀರು (ಮಂಡ), ತೊಗರಿಯ ಸಾರು, ಚನ್ನಂಗಿ(ಮಸೂರ)ಬೇಳೆಸಾರು, ಮೊಲ ಅಥವಾ ಜಿಂಕೆಯ ಮಾಂಸದ ರಸ, ಸಣ್ಣ ಜಾತಿಯ ಮೀನುಗಳು, ಎಳ್ಳೆಣ್ಣೆ, ಆಡಿನ ತುಪ್ಪ ಮತ್ತು ಹಾಲು, ದನದ ಮೊಸರು ಮತ್ತು ಮಜ್ಜಿಗೆ, ಆಡಿನ ಹಾಲಿನಿಂದ, ದನದ ಹಾಲಿನಿಂದ ಅಥವಾ ಮೊಸರಿನಿಂದ, ತೆಗೆದ ಬೆಣ್ಣೆ, ಹೊಸ ಬಾಳೆಹೂವು, ಹೊಸ (ಎಳೇ) ಬಾಳೆಕಾಯಿ, ಜೇನು, ನೇರಳೆ ಹಣ್ಣು, ಕಾಡುಶುಂಠಿ (ಮಹಾರ್ದ್ರಕಂ), ಲಿಂಬೆಹಣ್ಣು, ನೈದಿಲೆಯ ಗಡ್ಡೆ, ಬೇಲದ ಹಣ್ಣು, ರೆಂಜೆಯ ಹಣ್ಣು, ಬಿಲ್ವಪತ್ರೆಕಾಯಿ, ದಾಳಿಂಬ (ಸಿಹಿ ಮತ್ತು ಹುಳಿ), ಪುಲ್ಲಂಪುರಚೆ, (ಮಲ ಪುಳಿಯಾರಲ), ಜೀರಿಗೆ, ಕೊತ್ತುಂಬರಿ, ಎಲ್ಲಾ ಚೊಗರುರಸಗಳು, ದೀಪನಕರ ಮತ್ತು ಲಘು ಆದ ಅನ್ನಪಾನಗಳು, ಪಡುವಲಕಾಯಿ ಮತ್ತು ಕರಿಬೇವು.

60. ಅಪಥ್ಯವರ್ಗ ಬೆವರಿಸುವದು, ಅಂಜನ ಹಾಕುವದು, ರಕ್ತ ತೆಗೆಯುವದು, ನೀರು ಕುಡಿಯುವದು, ಸ್ನಾನ, ಮೈಥುನ, ಜಾಗರಣ, ಹೊಗೆ ಸೇದುವದು, ನಸ್ಯ, ಅಭ್ಯಂಗ, ಸಕಲ ವೇಗಗಳ ತಡೆ, ರೂಕ್ಷದ್ರವ್ಯಗಳು, ಸಾತ್ಮ್ಯವಲ್ಲದ ಊಟ, ವಿರುದ್ಧಾನ್ನ, ಗೋದಿ, ಉದ್ದು, ಯವೆಗೋದಿ, ಚಕ್ರೋತಸೊಪ್ಪು (ವಾಸ್ತುಕ), ಕಾಗೆ ಹಣ್ಣಿನ ಗಿಡದ (ಗಣಿಕೆಯ) ಸೊಪ್ಪು, ಅವರೆ, ಗಡ್ಡೆಗಳು, ನುಗ್ಗೆ, ಅಡಿಕೆ, ಬೂದಿಕುಂಬಳ, ತೊಂಡೆ, ಬೊಗರಿಹಣ್ಣು, ಗುರುವಾದ ಅನ್ನಪಾನಗಳು, ವೀಳ್ಯದೆಲೆ, ಕಬ್ಬು, ಬೆಲ್ಲ, ಮದ್ಯ, ಬಸಳೆ(ಬಚ್ಚಲು)ಸೊಪ್ಪು, ದ್ರಾಕ್ಷೆಹಣ್ಣು, ಅಮ್ಲವೇತಸದ ಫಲ, ಬೆಳ್ಳುಳ್ಳಿ, ನೆಲ್ಲಿ, ಮೊಸರಿನ ನೀರು, ತೆಂಗಿನಕಾಯಿ, ಸ್ನೇಹನಕ್ರಮ, ಕಸ್ತೂರಿ, ಎಲ್ಲಾ ಸೊಪ್ಪುಗಳು, ಕ್ಷಾರ, ಪುನರ್ನವಿ, ಮುಳ್ಳುಸವುತೆಕಾಯಿ, ಹುಳಿ, ಉಪ್ಪು, ಎಳ್ಳು ಮತ್ತು ಸೋರೆಕಾಯಿ.

---

# ಅಧ್ಯಾಯ XVIII.

## ಜ್ವರಾತಿಸಾರ (Fever complicated with diarrhoea or dysentery)

1. ಯುಗಪಜ್ಜಾಯತೇ ಯಸ್ಯ ಜ್ವರಶ್ಚೈವಾತಿಸಾರಕಃ |
ಜ್ವರಾತಿಸಾರೋ ಘೋರೋ ಽಸೌ ಕಷ್ಟಸಾಧ್ಯೋ ಮನೀಷಿಣಾಮ್ ||
(ಹಾ. 130)

ಜ್ವರಾತಿಸಾರದ ಲಕ್ಷಣ

ಜ್ವರ ಮತ್ತು ಅತಿಸಾರ ಯಾರಿಗೆ ಒಟ್ಟಾಗಿ ಉಂಟಾಗುತ್ತವೋ, ಅವನ ರೋಗವು ಜ್ವರಾತಿಸಾರ. ಅದು ಕಠಿಣವಾದ್ದು ಮತ್ತು ಪಂಡಿತರಿಗೆ ವಾಸಿಮಾಡುವದಕ್ಕೆ ಕಷ್ಟವಾದ್ದು.

2. ಜ್ವರಾತಿಸಾರಯೋರುಕ್ತಂ ನಿದಾನಂ ಯತ್ಪೃಥಕ್ ಪೃಥಕ್ |
ತಸ್ಮಾಜ್ಜ್ವರಾತಿಸಾರಸ್ಯ ನಿದಾನಂ ನೋದಿತಂ ಪುನಃ || (ಭಾ. ಪ್ರ. 326)

ನಿದಾನ.

ಜ್ವರಕ್ಕೂ ಅತಿಸಾರಕ್ಕೂ ಬೇರೆ ಬೇರೆಯಾಗಿ ನಿದಾನವು ಹೇಳಲ್ಪಟ್ಟಿರುವದರಿಂದ, ಜ್ವರಾತಿಸಾರಕ್ಕೆ ಪುನಃ ನಿದಾನವು ಹೇಳಲ್ಪಟ್ಟಿರುವದಿಲ್ಲ.—(ಅಂದರೆ ಜ್ವರದ ಹೇತುಗಳಿಂದ ಜ್ವರ ಮತ್ತು ಅತಿಸಾರದ ಹೇತುಗಳಿಂದ ಅತಿಸಾರ ಉಂಟಾಗುವಂಥಾದ್ದು.)

ನ ಪಿತ್ತೇನ ವಿನಾ ಸೋ ಽಪಿ ಜಾಯತೇ ಶೃಣು ಪುತ್ರಕ | (ಹಾ. 130)

ಜ್ವರಾತಿಸಾರ ಸಹ ಪಿತ್ತ ವಿನಾ ಉಂಟಾಗುವದಿಲ್ಲ.

ಷರಾ ಜ್ವರದಲ್ಲಿ ಹೇಗೆ ಪಿತ್ತವು ಪ್ರಧಾನದೋಷವೋ, ಹಾಗೆ ಜ್ವರಾತಿಸಾರದಲ್ಲಿಯೂ ಪಿತ್ತ ಪ್ರಧಾನ
"ಪೈತ್ತಿಕ ಜ್ವರದಲ್ಲಿ ಪಿತ್ತದಿಂದುಂಟಾದ ಅತಿಸಾರ, ಹಾಗೆಯೇ ಅತಿಸಾರದಲ್ಲಿ ಜ್ವರ ಸಂಭವಿಸಿ, ದೋಷವೂ ದೂಷ್ಯವೂ ಸಮಭಾವವಾಗಿದ್ದದ್ದಕ್ಕೆ ಜ್ವರಾತಿಸಾರ ಎಂತ ಮುನಿಗಳು ಹೇಳಿದ್ದಾರೆ" ಎಂಬ ರ ರ (ಪು ?50)ದಲ್ಲಿರುವ ವರ್ಣನವು ಸಮರ್ಪಕವಾಗಿ ಕಾಣುವದಿಲ್ಲ ಈ ಪ್ರಕರಣಾಂತ ಟಿಪ್ಪಣಿ ನೋಡಿ

3. ಜ್ವರಾತಿಸಾರಯೋರುಕ್ತಂ ಭೇಷಜಂ ಯತ್ಪೃಥಕ್ ಪೃಥಕ್ |
ನ ತನ್ಮಿಲಿತಯೋಃ ಕಾರ್ಯಮನ್ಯೋನ್ಯಂ ವರ್ಧಯೇದ್ಯತಃ ||
ಅತಸ್ತೌ ಪ್ರತಿಕುರ್ವೀತ ವಿಶೇಷೋಕ್ತಚಿಕಿತ್ಸಿತೈಃ |
ಲಂಘನಮೇಕಂ ಮುಕ್ತ್ವಾ ನಚಾನ್ಯದಸ್ತೀಹ ಭೇಷಜಂ ಬಲಿನಃ ||
ಸಮುದೀರ್ಣದೋಷನಿಚಯಂ ತತ್ಪಾಚಯೇತ್ತಥಾ ಶಮಯೇತ್ |
ಲಂಘನಮುಭಯೋರುಕ್ತಂ ಮಿಲಿತೇ ಕಾರ್ಯಂ ವಿಶೇಷತಸ್ತದನು ||
ಉತ್ಪಲಷಷ್ಟಕಸಿದ್ಧಂ ಲಾಜಮಂಡಾದಿಕಂ ಸಕಲಮ್ |
ಪೃಷ್ಠಪರ್ಣೀಬಲಾಬಿಲ್ವಧನಿಕಾನಾಗರೋತ್ಪಲೈಃ ||
ಜ್ವರಾತಿಸಾರಯೋರ್ವಾಪಿ ಪಿಬೇತ್ಸಾಮ್ಲಂ ಶೃತಂ ನರಃ ||
(ಭಾ. ಪ್ರ. 326-27)

ಚಿಕಿತ್ಸಾವಿಧಾನ

ಜ್ವರಕ್ಕೆ ಪ್ರತ್ಯೇಕವಾಗಿ ಹೇಳಲ್ಪಟ್ಟ ಔಷಧವನ್ನಾಗಲಿ, ಅತಿಸಾರಕ್ಕೆ ಪ್ರತ್ಯೇಕವಾಗಿ ಹೇಳಲ್ಪಟ್ಟ ಔಷಧವನ್ನಾಗಲಿ, ಜ್ವರಾತಿಸಾರಗಳು ಕೂಡಿಕೊಂಡಿರುವಲ್ಲಿ ಪ್ರಯೋಗಿಸಬಾರದು; ಯಾಕೆಂದರೆ ಅವು ಪರಸ್ಪರ ವೃದ್ಧಿಮಾಡತಕ್ಕಂಥವಾಗಿರುತ್ತವೆ. ಆದ್ದರಿಂದ ಜ್ವರಾತಿಸಾರಕ್ಕೆ ವಿಶೇಷವಾಗಿ ಹೇಳಲ್ಪಟ್ಟ ಚಿಕಿತ್ಸೆಗಳಿಂದಲೇ ಪ್ರತೀಕಾರ ಮಾಡತಕ್ಕದ್ದು. ರೋಗಿಯು ಬಲವಂತನಾಗಿರುವಲ್ಲಿ ಲಂಘನ ಒಂದನ್ನು ಬಿಟ್ಟರೆ, ಬೇರೆ ಔಷಧ ಇರುವದಿಲ್ಲ. ಲಂಘನವು ಕೆದರಿದಂಥಾ ದೋಷಸಮೂಹವನ್ನು ಪಚನಮಾಡುತ್ತದೆ ಮತ್ತು ಆ ಪಾಚನದಿಂದ ಶಮನಮಾಡುತ್ತದೆ. ಲಂಘನವು ಜ್ವರಾತಿಸಾರಗಳೆರಡಕ್ಕೂ ಹೇಳಲ್ಪಟ್ಟಂಥಾದ್ದು. ಆದ್ದರಿಂದ ಅದನ್ನು ಅವೆರಡು ಕೂಡಿಕೊಂಡಿರುವಲ್ಲಿ ವಿಶೇಷವಾಗಿ ಮಾಡಿಸಬೇಕು. ಆ ಮೇಲೆ 'ಉತ್ಪಲಷಷ್ಟಕ' ಎಂಬ (ಮುಂದೆ ವರ್ಣಿಸುವ) ಔಷಧಯೋಗದಿಂದ ತಯಾರಿಸಲ್ಪಟ್ಟ ಅರಳಿನ ಗಂಜಿಯ ನೀರು ಮುಂತಾದ ಸಕಲ(ಪಥ್ಯ)ವನ್ನು ಕೊಡಬೇಕು.

ಉತ್ಪಲಷಷ್ಟಕ ಯೋಗ

ಒರೆಲೆಬೇರು, ಕಲ್ಲಂಗಡಲೆಬೇರು, ಬಿಲ್ವಪತ್ರೆ (ಬೇರು ಅಥವಾ ಎಳೇಕಾಯಿ), ಕೊತ್ತುಂಬರಿ, ಶುಂಠಿ, ನೀಲತಾವರೆ, ಇವುಗಳನ್ನು ಸೇರಿಸಿ ಮಾಡಿದ ಕಷಾಯವನ್ನು ಅಥವಾ ಗಂಜಿಯನ್ನು, (ದಾಳಿಂಬದ) ಹುಳಿ ಕೂಡಿಸಿಕೊಂಡು, ಜ್ವರದಲ್ಲಾಗಲಿ ಅತಿಸಾರದಲ್ಲಾಗಲಿ ರೋಗಿಯು ಕುಡಿಯತಕ್ಕದ್ದು.

ಷರಾ. ಹೆಚ್ಚಾಗಿ ಜ್ವರಹರವಾದ್ದೆಲ್ಲ ಭೇದಿಮಾಡಿಸುವ ಗುಣವುಳ್ಳವಾದ್ದರಿಂದ, ಅತಿಸಾರಕ್ಕೆ ವಿರುದ್ಧ, ಮತ್ತು ಅತಿಸಾರಹರವಾದ್ದು ಸ್ತಂಭನಗುಣವುಳ್ಳದ್ದಾದ್ದರಿಂದ, ಜ್ವರವನ್ನು ವೃದ್ಧಿಮಾಡುತ್ತದೆ (ರ ರ 250) ಇದೇ ತಾತ್ಪರ್ಯದಿಂದ 'ಅನುಲೋಮನಗುಣವುಳ್ಳದ್ದು ಜ್ವರಹರ, ಗ್ರಾಹಿಗುಣವುಳ್ಳದ್ದು ಅತಿಸಾರಹರ ಇವೆರಡು ಪರಸ್ಪರ ವಿರುದ್ಧವಾದ್ದರಿಂದ ಜ್ವರಾತಿಸಾರಗಳಿಗೆ ಬೇರೆಬೇರೆಯಾಗಿ ಹೇಳಲ್ಪಟ್ಟ ಔಷಧವನ್ನು ಅವೆರಡು ರೋಗಗಳು ಕೂಡಿಕೊಂಡಿರುವಲ್ಲಿ ಪ್ರಯೋಗಿಸಬಾರದು' ಎಂತ ಇನ್ನೊಬ್ಬರು ಹೇಳಿದ್ದಾರೆ (ಭಾ ಪ್ರ ವ್ಯಾಖ್ಯಾ 327) ಜ್ವರವಾಗಲಿ, ಅತಿಸಾರವಾಗಲಿ, ಹೆಚ್ಚಾಗಿ ಆಮ ಸಂಬಂಧವಿದ್ದು ಉಂಟಾಗುವವಾದ್ದರಿಂದ, ಲಂಘನದಿಂದ ಆ ಆಮ ಪಚನವಾಗಿ ಸೌಖ್ಯವಾಗುತ್ತದೆ (ರ ರ 250)

ಬಿಲ್ವಪತ್ರೆಯ ಎಳೇ ಕಾಯಿ ಮತ್ತು ವಿಕ್ಕ ಐದು ಬಗೆಗಳ ಚೂರ್ಣವನ್ನು, ಕುಪಿಯುತ್ತಿರುವ ಮಜ್ಜಿಗೆ ಕೂಡಿಸಿಕೊಂಡು, ಅರೆದು, ಅರಳಿನ ಮಂಡದಲ್ಲಿ ಕಲಸಿ, ತಣ್ಣಗಾಗಿ ಕುಡಿಯುವದರಿಂದ ಜ್ವರಾತಿಸಾರವು ಪರಿಹಾರವಾಗಿ ಅಗ್ನಿಯೂ ಬಲವೂ ಉಂಟಾಗುತ್ತವೆ ಎಂತ ಹಾ. (ಪು 130)

ಜ್ವರದೊಂದಿಗೆ ಅತಿಸಾರವಿರುವಲ್ಲಿ ಪೃಶ್ನಿಪರ್ಣ್ಯಾದಿ (ಉತ್ಪಲಷಷ್ಟಕ) ಔಷಧಗಳನ್ನು ಸೇರಿಸಿ ತಯಾರಿಸಲ್ಪಟ್ಟ ಪೇಯಾ ಎಂಬ ಗಂಜಿಯನ್ನು, ಹುಳಿ ಕೂಡಿಸಿಕೊಂಡು, ರೋಗಿಯು ಕುಡಿಯಬೇಕೆಂತ ಚ (ಪು. 460)

4. ನಾಗರಾತಿವಿಷಾಮುಸ್ತಾಮೃತಾಭೂನಿಮ್ಬವತ್ಸಕೈಃ |
ಕ್ವಾಥಃ ಸರ್ವಜ್ವರಾನ್ ಹನ್ತಿ ಚಾತಿಸಾರಂ ಸುದಾರುಣಮ್

(ಭಾ. ಪ್ರ. 327)

ನಾಗರಾದಿ ಕಷಾಯ

ಶುಂಠಿ, ಅತಿವಿಷೆ, ಭದ್ರಮುಷ್ಟಿ, ಅಮೃತಬಳ್ಳಿ, ನೆಲಬೇವು, ಕೊಡಸಿಗನ ಕೆತ್ತೆ, ಇವುಗಳ ಕಷಾಯವು ಸರ್ವ ಜ್ವರಗಳನ್ನೂ, ಬಹಳ ಕಠಿನವಾದ ಅತಿಸಾರವನ್ನೂ ಕೊಲ್ಲುತ್ತದೆ.

5. ಕಣಾಕಠಿಕಣಾಲಾಜಕ್ವಾಥೋ ಮಧುಸಿತಾಯುತಃ |
ಪೀತೋ ಜ್ವರಾತಿಸಾರಸ್ಯ ತೃಷ್ಣಾಮಾಶು ವಿನಾಶಯೇತ್ ||

ಕಣಾದಿ ಕಷಾಯ

(ಭಾ. ಪ್ರ. 327)

ಹಿಪ್ಪಲಿ, ಗಜಹಿಪ್ಪಲಿ, ಅರಳು, ಇವುಗಳ ಕಷಾಯವನ್ನು, ಜೇನು ಮತ್ತು ಸಕ್ಕರೆ ಸಮೇತವಾಗಿ, ಕುಡಿಯುವದರಿಂದ ಜ್ವರಾತಿಸಾರದ ಬಾಯಾರಿಕೆಯು ಬೇಗನೆ ನಾಶವಾಗುವದು.

6. ಗುಡೂಚ್ಯತಿವಿಷಾಧಾನ್ಯಶುಂಠೀಬಿಲ್ವಾಬ್ದಬಾಲಕೈಃ |
ಪಾಠಾಭೂನಿಮ್ಬಕುಟಜಚನ್ದನೋಶೀರಪರ್ಪಟೈಃ ||
ಪಿಬೇತ್ಕಷಾಯಂ ಸಕ್ಷೌದ್ರಂ ಜ್ವರಾತಿಸಾರನಾಶನಮ್ |
ಹೃಲ್ಲಾಸಾರುಚಿತೃಡ್ದಾಹವಮೀನಾಂ ಚ ನಿವೃತ್ತಯೇ|| (ಭಾ.ಪ್ರ. 327)

ಗುಡೂಚ್ಯಾದಿ ಕಷಾಯ

ಅಮೃತಬಳ್ಳಿ, ಅತಿವಿಡೆ, ಕೊತ್ತುಂಬರಿ, ಶುಂಠಿ, ಬಿಲ್ವಪತ್ರೆ, ಭದ್ರಮುಷ್ಟಿ, ಮುಡಿವಾಳ, ಪಾಡಾವಳಿಗಡ್ಡೆ, ನೆಲಬೇವು, ಕೊಡಸಿಗನ ತೊಗಟು, ಶ್ರೀಗಂಧ, ಲಾಮಂಚ, ಪರ್ಪಾಟಕ, ಇವುಗಳ ಕಷಾಯವನ್ನು, ಜೇನು ಕೂಡಿಸಿಕೊಂಡು, ಪಾನಮಾಡುವದರಿಂದ ಜ್ವರಾತಿಸಾರ ನಾಶವಾಗುವದಲ್ಲದೆ, ಹೃಲ್ಲಾಸ, ಅರುಚಿ, ಬಾಯಾರಿಕೆ, ಉರಿ ಮತ್ತು ವಾಂತಿ ನಿವೃತ್ತಿಯಾಗುವವು.

ಪಠಾ 'ಪರ್ಪಟೈಃ' ಎಂಬಲ್ಲಿ 'ಪದ್ಮಕೈಃ' (ಪದ್ಮಕಾಷ್ಠ) ಎಂತ ಪಾಠಾಂತರ ಉಂಟು

7. ಬಿಲ್ವಬಾಲಕಭೂನಿಮ್ಬಗುಡೂಚೀಮುಸ್ತವತ್ಸಕೈಃ |
ಕಷಾಯಃ ಪಾಚನಃ ಶೋಥಜ್ವರಾತಿಸಾರನಾಶನಃ || (ಭಾ. ಪ್ರ 327)

ಬಿಲ್ವಾದಿ ಕಷಾಯ

ಬಿಲ್ವಪತ್ರೆ, ಮುಡಿವಾಳ, ನೆಲಬೇವು, ಅಮೃತಬಳ್ಳಿ, ಭದ್ರಮುಷ್ಟಿ, ಕೊಡಸಿಗನ ತೊಗಟು, ಇವುಗಳ ಕಷಾಯವು ಪಾಚನಕಾರಿ ಮತ್ತು ಶೋಫವನ್ನೂ ಜ್ವರಾತಿಸಾರವನ್ನೂ ನಾಶಮಾಡುವಂಥಾದ್ದು.

8. ನಾಗರಾತಿವಿಷಾಬಿಲ್ವಗುಡೂಚೀಮುಸ್ತವತ್ಸಕೈಃ |
ಕಷಾಯಃ ಪಾಚನಃ ಶೋಥಜ್ವರಾತೀಸಾರನಾಶನಃ || (ಭಾ. ಪ್ರ. 327)

ನಾಗರಬಿಲ್ವಾದಿ ಕಷಾಯ

ಶುಂಠಿ, ಅತಿವಿಡೆ, ಬಿಲ್ವಪತ್ರೆ, ಅಮೃತಬಳ್ಳಿ, ಭದ್ರಮುಷ್ಟಿ, ಕೊಡಸಿಗನ ತೊಗಟು, ಇವುಗಳ ಕಷಾಯವು ಪಾಚನಕರ ಮತ್ತು ಶೋಫ-ಜ್ವರ-ಅತಿಸಾರಗಳ ನಾಶನಕಾರಿ.

9. ದಶಮೂಲೀಕಷಾಯೇಣ ವಿಶ್ವಮಕ್ಷಸಮಂ ಪಿಬೇತ್ |
ಜ್ವರೇ ಚೈವಾತಿಸಾರೇ ಚ ಸಶೋಥೇ ಗ್ರಹಣೀಗದೇ || (ಧ. 102)

ದಶಮೂಲಾದಿ ಕಷಾಯ

ದಶಮೂಲಗಳ ಕಷಾಯದೊಂದಿಗೆ ಎರಡು ವರಹತೂಕ ಶುಂಠಿಚೂರ್ಣವನ್ನು ಕಲಸಿ, ಜ್ವರ, ಅತಿಸಾರ, ಶೋಫ ಮತ್ತು ಗ್ರಹಣೀರೋಗಗಳಲ್ಲಿ ಕುಡಿಯಬೇಕು.

ಪಠಾ 'ವಿಶ್ವಾಮಕ್ಷಸಮಾಂ' ಎಂತ ಪಾಠಾಂತರ (ಭಾ ಪ್ರ. 327). "ವಿಶ್ವಾ" ಎಂದರೆ ಅತಿವಿಡೆ ಅದರಲ್ಲಿ ವಿಷವಿಲ್ಲ ಎಂದಾಗ್ಯೂ, ಅದು ತೀವ್ರತೆಯುಳ್ಳ ಔಷಧ ಪಾಶ್ಚಾತ್ಯ ವೈದ್ಯದ ಅನುಭವವುಳ್ಳವರೊಳಗೆ ಯಾರಾದರೂ ಹೊತ್ತಿಗೆ ಅದರ ಚೂರ್ಣದಲ್ಲಿ 30 ಗ್ರೈನ್ (೨೦ ಗುಲಗುಂಜೀತೂಕ)ಕ್ಕಿಂತ ಹೆಚ್ಚು ಕೊಡಲು ಹೇಳುವದಿಲ್ಲ ಡೋಲಾಯಂತ್ರ ಕ್ರಮದಿಂದ ದನದ ಸಗಣಿನೀರಿನಲ್ಲಿ ಬೇಯಿಸಿ, ಬಿಸಿಲಿನಲ್ಲಿ ಒಣಗಿಸಿ ಶುದ್ಧಮಾಡಿಕೊಂಡು, ಅತಿವಿಡೆಯನ್ನು ಉಪ

ಯೋಗಿಸಬೇಕೆಂತ ಉಪದೇಶ ಕಾಣುತ್ತದೆ (ಧ ನಿ. 8) ಹಾಗೆ ಶುದ್ಧ ಮೂಡಿದ ಅತಿವಿಡೆಯದ ಚೂರ್ಣವನ್ನಾದರೂ ಅಲ್ಪ ಪ್ರಮಾಣದಲ್ಲಿ (ಸುಮಾರು ಅರ್ಧ ವರಹ ತೂಕದಷ್ಟು) ಕೊಟ್ಟು ನೋಡಿ, ಕ್ರಮೇಣ ಅದರ ಪ್ರಮಾಣವನ್ನು ಏರಿಸು ವದು ಒಳ್ಳೆಯದು ಅದು ಜ್ವರಕ್ಕೂ ಅತಿಸಾರಕ್ಕೂ ಉತ್ತಮವಾದ ಔಷಧ ಎಂಬದರಲ್ಲಿ ಸಂದೇಹವಿಲ್ಲ.

10. ಪಾಠೇನ್ದ್ರಯವಭೂನಿಮ್ಬಮುಸ್ತಪರ್ಪಟಕಾಮೃತಾ ।
ಪಾಠಾದಿ ಕಷಾಯ ಜಯತ್ಯಾಮಮತೀಸಾರಂ ಜ್ವರಂ ಚ ಸಮಹೌಷಧಮ್ ॥
(ಚಿ. ಸಾ. ಸಂ. 103)

ಪಾಡಾವಳಿಗಡ್ಡೆ, ಇಂದ್ರಜೇವಿ, ನೆಲಬೇವು, ಭದ್ರಮುಷ್ಟಿ, ಪರ್ಪಾಟಕ, ಅಮೃತಬಳ್ಳಿ, ಶುಂಠಿ, ಇವುಗಳ ಕಷಾಯವು ಆಮಾತಿಸಾರವನ್ನೂ ಜ್ವರವನ್ನೂ ಜಯಿಸುತ್ತದೆ.

ಪರಾ ಹಾ ನು ಈ ಯೋಗದಲ್ಲಿ ಶುಂಠಿಯನ್ನು ಬಿಟ್ಟು ಬರೆದು, ಅದರ ಕಷಾಯದಿಂದ ತೀವ್ರವಾದ ಬರೇ ಆಮಾ ತಿಸಾರ ಮತ್ತು ಜ್ವರಾತಿಸಾರ ಪರಿಹಾರವಾಗುತ್ತವೆ ಎಂತ ಹೇಳಿದ್ದಾನೆ (ಪು 130).

11 ಹ್ರೀಬೇರಾತಿವಿಷಾಮುಸ್ತಂ ಬಿಲ್ವನಾಗರಧಾನ್ಯಕಮ್ ।
ಪಿಬೇತ್ಪಿಚ್ಛಾವಿಬನ್ಧಘ್ನಂ ಶೂಲದೋಷಾಮಪಾಚನಮ್ ॥
ಹ್ರೀಬೇರಾದಿ ಕಷಾಯ ಸರಕ್ತಂ ಹನ್ತ್ಯತೀಸಾರಂ ಸಜ್ವರಂ ವಾಥ ವಿಜ್ವರಮ್ ॥
(ಚಿ. ಸಾ. ಸಂ. 104)

ಮುಡಿವಾಳ, ಅತಿವಿಡೆ, ಭದ್ರಮುಷ್ಟಿ, ಬಿಲ್ವಪತ್ರೆ, ಶುಂಠಿ, ಕೊತ್ತುಂಬರಿ, ಇವುಗಳ ಕಷಾಯದ ಪಾನದಿಂದ ಶೂಲೆಯುಳ್ಳ ಆಮದೋಷವು ಪಚನವಾಗುತ್ತದೆ, ಗಂಜಿನೀರಿನ ಹಾಗಿನ ಮಲ, ಮಲಬದ್ಧತೆ, ರಕ್ತಯುಕ್ತವಾದ ಅತಿಸಾರ, ಜ್ವರವಿದ್ದದ್ದಾಗಲಿ, ಜ್ವರವಿಲ್ಲ ದ್ದಾಗಲಿ, ನಾಶವಾಗುತ್ತವೆ.

12. ವತ್ಸಕಸ್ಯ ಫಲಂ ದಾರು ರೋಹಿಣೀ ಗಜಪಿಪ್ಪಲೀ ।
ಶ್ವದಂಷ್ಟ್ರಾ ಪಿಪ್ಪಲೀ ಧಾನ್ಯಂ ಬಿಲ್ವಂ ಪಾಠಾ ಯವಾನಿಕಾ ॥
ವತ್ಸಕಾದಿ ಮತ್ತು ಶ್ವದಂಷ್ಟ್ರಾದಿ ಕಷಾಯಗಳು. ದ್ವಾವೇತೌ ಸಿದ್ಧಯೋಗೌ ತೌ ಶ್ಲೋಕಾರ್ಧೇನಾಭಿಭಾಷಿತೌ ।
ಜ್ವರಾತಿಸಾರಶಮನೌ ವಿಶೇಷಾದ್ದಾಹನಾಶನೌ ॥ (ಚಿ. ಸಾ. ಸಂ. 104)

(1) ಇಂದ್ರಜೇವಿ, ದೇವದಾರ, ಕಟುಕರೋಹಿಣಿ ಮತ್ತು ಗಜ ಹಿಪ್ಪಲಿ;

(2) ನೆಗ್ಗಿಲಮುಳ್ಳು, ಹಿಪ್ಪಲಿ, ಕೊತ್ತುಂಬರಿ, ಬಿಲ್ವಪತ್ರೆ, ಪಾಡಾವಳಿಗಡ್ಡೆ, ಮತ್ತು ಓಮ; ಇವುಗಳ ಕಷಾಯಗಳು ಜ್ವರಾತಿಸಾರವನ್ನು ಶಮನಮಾಡುವಂಥವು, ವಿಶೇಷವಾಗಿ ಉರಿ ಯನ್ನು ನಾಶಮಾಡತಕ್ಕಂಥವು. ಇವೆರಡೂ ಸಿದ್ಧಯೋಗಗಳು.

13. ಉಶೀರಂ ಬಾಲಕಂ ಮುಸ್ತಂ ಧಾನ್ಯಕಂ ವಿಶ್ವಮೇವ ಚ ।
ಸಮಂಗಾ ಧಾತಕೀ ಲೋಧ್ರಂ ಬಿಲ್ವಂ ದೀಪನಪಾಚನಮ್ ॥
ಉಶೀರಾದಿ ಕಷಾಯ ಹನ್ತ್ಯರೋಚಕಪಿಚ್ಛಾಮಂ ವಿವಿಧಂ ಸಾತಿವೇದನಮ್ ।
ಸಶೋಣಿತಮತೀಸಾರಂ ಸಜ್ವರಂ ವಾಥ ವಿಜ್ವರಮ್ ॥
(ಚಿ. ಸಾ. ಸಂ. 104)

ಲಾಮಂಚ, ಮುಡಿವಾಳ, ಭದ್ರಮುಷ್ಟಿ, ಕೊತ್ತುಂಬರಿ, ಶುಂಠಿ, ನಾಚಿಕೆಸೊಪ್ಪಿನ ಗಿಡದ ಬೇರು, ಧಾತಕೀಕುಸುಮ, ಲೋಧ್ರದ ಚಕ್ಕೆ, ಬಿಲ್ವಪತ್ರೆಕಾಯಿ, ಇವುಗಳ ಕಷಾಯವು ದೀಪನ-ಪಾಚನ ಗುಣಗಳುಳ್ಳದ್ದು; ಅರುಚಿ, ಗಂಜಿನೀರಿನ ಹಾಗಿನ ಮಲ ಹೋಗುವ ಆಮ, ಅತಿಯಾದ ವೇದನೆಯುಳ್ಳ, ರಕ್ತಮಿಶ್ರವುಳ್ಳ, ಜ್ವರಯುಕ್ತವಾದ ಅಥವಾ ಜ್ವರವಿಲ್ಲದ, ನಾನಾ ವಿಧವಾದ ಅತಿಸಾರ, ಇವುಗಳನ್ನು ನಾಶಮಾಡುತ್ತದೆ.

14. ಮುಸ್ತಕಾತಿವಿಷಾಶುಂಠೀವತ್ಸಕಾಭಯತಿಕ್ತಕೈಃ ।
ಸರ್ವಾತಿಸಾರಹೃಲ್ಲಾಸ ಸರ್ವಶೋಫಜ್ವರಾಪಹಃ ॥ (ಚಿ. ಸಾ. ಸಂ. 105)

ಮುಸ್ತಕಾದಿ ಕಷಾಯ

ಭದ್ರಮುಷ್ಟಿ, ಅತಿವಿಷೆ, ಶುಂಠಿ, ಕೊಡಸಿಗನ ತೊಗಟು, ಅಣಿಲೆಕಾಯಿ, ನೆಲಬೇವು, ಇವುಗಳ ಕಷಾಯವು ಸರ್ವ ಅತಿಸಾರಗಳನ್ನೂ, ಹೃಲ್ಲಾಸವನ್ನೂ, ಸರ್ವ ಶೋಫವನ್ನೂ, ಜ್ವರವನ್ನೂ ಪರಿಹರಿಸುವಂಥಾದ್ದು.

15. ಕಲಿಂಗಾತಿವಿಷಾಶುಂಠೀಕಿರಾತಾಮ್ಬುಯವಾಸಕಮ್ ।
ಜ್ವರಾತೀಸಾರಸನ್ತಾಪಂ ನಾಶಯೇದವಿಕಲ್ಪಿ(?ಲ್ಪ)ತಃ ॥ (ಧ. 100)

ಕಲಿಂಗಾದಿ ಕಷಾಯ

ಇಂದ್ರಜೇವಿ, ಅತಿವಿಷೆ, ಶುಂಠಿ, ನೆಲಬೇವು, ಮುಡಿವಾಳ, ಬಳ್ಳಿತುರಚಿಯ ಬೇರು, ಇವುಗಳ ಕಷಾಯವು ಜ್ವರಾತಿಸಾರದ ಸಂಕಷ್ಟವನ್ನು ತಪ್ಪದೆ ನಾಶಮಾಡುವದು.

16. ಘನಜಲಪಾಠಾತಿವಿಷಾಪಥ್ಯೋತ್ಪಲಧಾನ್ಯರೋಹಿಣೀವಿಶ್ವೈಃ ।
ಸೇನ್ದ್ರಯವೈಃ ಕೃತಮಮ್ಭಃಸಾತೀಸಾರಂ ಜ್ವರಂ ಜಯತಿ ॥ (ಧ. 100)

ಘನಾದಿ ಕಷಾಯ.

ಭದ್ರಮುಷ್ಟಿ, ಮುಡಿವಾಳ, ಪಾಡಾವಳಿಗಡ್ಡೆ, ಅತಿವಿಷೆ, ಅಣಿಲೆಕಾಯಿ, ನೀಲತಾವರೆ, ಕೊತ್ತುಂಬರಿ, ಮಂಜಿಷ್ಠ, ಶುಂಠಿ, ಇಂದ್ರಜೇವಿ, ಇವುಗಳ ಕಷಾಯವು ಅತಿಸಾರಸಹಿತವಾದ ಜ್ವರವನ್ನು ಜಯಿಸುತ್ತದೆ.

17. ಮುಸ್ತಕವಿಶ್ವಾತಿವಿಷಾಪಾಠಾಭೂನಿಮ್ಬವತ್ಸಕೈಃ ಕ್ವಾಥಃ ।
ಮಕರನ್ದಗರ್ಭಯುಕ್ತೋ ಜ್ವರಾತಿಸಾರೌ ಜಯೇದ್ ಘೋರೌ ॥
(ಧ. 100)

ಮುಸ್ತಕವಿಶ್ವಾದಿ ಕಷಾಯ.

ಭದ್ರಮುಷ್ಟಿ, ಶುಂಠಿ, ಅತಿವಿಷೆ, ಪಾಡಾವಳಿಗಡ್ಡೆ, ನೆಲಬೇವು, ಕೊಡಸಿಗನ ತೊಗಟು, ಇವುಗಳ ಕಷಾಯವನ್ನು, ಜೇನು ಬೆರಸಿಕೊಂಡು, ಪಾನಮಾಡುವದರಿಂದ ಘೋರವಾದ ಜ್ವರಾತಿಸಾರಗಳು ಜಯಿಸಲ್ಪಡುವವು.

ಪಠಾ: 'ಪಾಠಾ' ಎಂಬಲ್ಲಿ 'ಗೋಷೀ' (ಕರಿ ಸುಗಂಧಿಬೇರು) ಎಂತ ಪಾಠಾಂತರ ಕಾಣುತ್ತದೆ

18. ನಾಗರಾಮೃತಭೂನಿಮ್ಬಬಿಲ್ವಬಾಲಕವತ್ಸಕೈಃ ।
ಸಮುಸ್ತಾತಿವಿಷೋಶೀರೈರ್ಜ್ವರಾತೀಸಾರಹೃಜ್ಜಲಮ್ ॥ (ಧ. 100)

ನಾಗರಾಮೃತಾದಿ ಕಷಾಯ.

ಶುಂಠಿ, ಅಮೃತಬಳ್ಳಿ, ನೆಲಬೇವು, ಬಿಲ್ವಪತ್ರೆ, ಮುಡಿವಾಳ, ಕೊಡಸಿಗನ ತೊಗಟು, ಭದ್ರಮುಷ್ಟಿ, ಅತಿವಿಡೆ, ಲಾಮಂಚ, ಇವುಗಳ ಕಷಾಯವು ಜ್ವರಾತಿಸಾರವನ್ನು ಪರಿಹರಿಸುವಂಥಾದ್ದು.

ಷರಾ 'ಬಾಲಕ' ಎಂಬಲ್ಲಿ 'ಆಮಲಕ' (ನೆಲ್ಲಿಚಟ್ಟು) ಎಂತ ಪಾಠಾಂತರ ಉಂಟು

19. ಪಂಚಮೂಲೀಬಲಾಬಿಲ್ವಗುಡೂಚೀಮುಸ್ತನಾಗರೈಃ ।
ಪಾಠಾಭೂನಿಮ್ಬಹ್ರೀಬೇರಕುಟಜತ್ವಕ್ಫಲೈಃ ಶೃತಮ್ ॥
ಹನ್ತಿ ಸರ್ವಾನತೀಸಾರಾನ್ ಜ್ವರದೋಷಂ ವಮಿಂ ತಥಾ ।
ಸಶೂಲೋಪದ್ರವಂ ಶ್ವಾಸಂ ಕಾಸಂ ಹನ್ಯಾತ್ ಸುದಾರುಣಮ್ ॥
(ಧ. 100)

ಪಂಚಮೂಲಾದಿ ಕಷಾಯ

ಪಂಚಮೂಲಗಳು, ಕಲ್ಲಂಗಡಲೆಬೇರು, ಬಿಲ್ವಪತ್ರೆ, ಅಮೃತಬಳ್ಳಿ. ಭದ್ರಮುಷ್ಟಿ, ಶುಂಠಿ, ಪಾಡಾವಳಿಗಡ್ಡೆ, ನೆಲಬೇವು, ಮುಡಿವಾಳ, ಕೊಡಸಿಗನ ತೊಗಟು, ಇಂದ್ರಜೀವಿ, ಇವುಗಳ ಕಷಾಯದ ಪಾನದಿಂದ ಸರ್ವ ಅತಿಸಾರಗಳು, ಜ್ವರದೋಷ, ವಾಂತಿ, ಶೂಲೆಯ ಉಪದ್ರವವುಳ್ಳ ಉಬ್ಬಸ ಮತ್ತು ಬಹು ಕಠಿನವಾದ ಕೆಮ್ಮು ನಾಶವಾಗುತ್ತವೆ.

ಷರಾ ಪಿತ್ತಾಧಿಕ್ಯದಲ್ಲಿ ಹ್ರಸ್ವಪಂಚಮೂಲವನ್ನು ಮತ್ತು ವಾತಕಫಾಧಿಕ್ಯದಲ್ಲಿ ಮಹತ್ಪಂಚಮೂಲವನ್ನು ಉಪಯೋಗಿಸತಕ್ಕದ್ದು (ಹಾ 131)

20. ಉಶೀರಂ ಧಾನ್ಯಕಂ ಮುಸ್ತಂ ಸಬಿಲ್ವಂ ಬಾಲಕಂ ಬಲಾ ।
ತಥಾ ಚ ಧಾತಕೀಪುಷ್ಪಂ ಕಷಾಯಸ್ಯ ಪ್ರಶಸ್ಯತೇ ॥
ಜ್ವರಾತಿಸಾರಶಮನಂ ಸಶೋಣಿತಂ ಸಪೈತ್ತಿಕಮ್ ।
ನಿಹನ್ತಿ ಶೋಫಂ ಸಕಲಂ ರುಚಿಪ್ರದಂ ವಿಪಾಚನಮ್ ॥ (ಹಾ. 131)

ಉಶೀರಧಾನ್ಯಕಾದಿ ಕಷಾಯ

ಲಾಮಂಚ, ಕೊತ್ತುಂಬರಿ, ಭದ್ರಮುಷ್ಟಿ, ಬಿಲ್ವಪತ್ರೆ, ಮುಡಿವಾಳ, ಕಲ್ಲಂಗಡಲೆಬೇರು, ಧಾತಕೀಕುಸುಮ, ಇವುಗಳ ಕಷಾಯದಿಂದ ಜ್ವರಾತಿಸಾರ ಶಮನವಾಗುತ್ತದೆ; ಅದು ರಕ್ತಯುಕ್ತವಾದದ್ದು ಮತ್ತು ಪೈತ್ತಿಕವಾದದ್ದು ಸಹ ಸಕಲ ಶೋಫವನ್ನು ಅದು ನಾಶಮಾಡುತ್ತದೆ; ರುಚಿಯನ್ನು ಕೊಡುತ್ತದೆ, ಮತ್ತು ಒಳ್ಳೇ ಪಾಚನಕಾರಿ.

21. ಉತ್ಪಲಂ ದಾಡಿಮತ್ವಕ್ಚ ಪದ್ಮಕೇಸರಮೇವ ಚ ।
ಪೀತಂ ತಣ್ಡುಲತೋಯೇನ ಜ್ವರಾತೀಸಾರನಾಶನಮ್ ॥
(ಭಾ. ಪ್ರ. 327)

ಉತ್ಪಲಾದಿ ಚೂರ್ಣ

ನೀಲತಾವರೆ, ದಾಳಿಂಬದ ಹಣ್ಣಿನ ತೊಗಟು, ತಾವರೆಕೇಸರ, ಇವುಗಳ ಚೂರ್ಣವನ್ನು ಅಕ್ಕಚ್ಚಿನೀರಿನೊಂದಿಗೆ (ಅರೆದು) ಕುಡಿಯುವದರಿಂದ ಜ್ವರಾತಿಸಾರ ನಾಶವಾಗುವದು.

22. ಸಮಂಗಾ ಧಾತಕೀಪುಷ್ಪಂ ಕೇಸರಂ ನೀಲಮುತ್ಪಲಮ್ |
ತಣ್ಡುಲೋದಕಸಂಯುಕ್ತಂ ಜ್ವರಾತಿಸಾರನಾಶನಮ್ ||

ಸಮಂಗಾದಿ ಚೂರ್ಣ.

(ಚಿ. ಸಾ. ಸಂ. 104)

ನಾಚಿಕೆಸೊಪ್ಪಿನ ಗಿಡದ ಬೇರು, ಧಾತಕೀಕುಸುಮ, ನಾಗಕೇಸರ, ಮತ್ತು ನೀಲತಾವರೆ, ಇವುಗಳ ಚೂರ್ಣವನ್ನು ಅಕ್ಕಚ್ಚಿನೀರಿನೊಂದಿಗೆ (ಅರೆದು) ಸೇವಿಸುವದರಿಂದ ಜ್ವರಾತಿಸಾರ ನಾಶವಾಗುವದು.

23. ವ್ಯೋಷಂ ವತ್ಸಕಬೀಜಂ ಚ ನಿಮ್ಬಭೂನಿಮ್ಬಮಾರ್ಕವಮ್ |
ಚಿತ್ರಕಂ ರೋಹಿಣೀಂ ಪಾಠಾಂ ದಾರ್ವೀಮತಿವಿಷಾಂ ವಚಾಮ್ ||
ಶ್ಲಕ್ಷ್ಣಂ ಚೂರ್ಣೀಕೃತಂ ಸರ್ವಂ ತತ್ತುಲ್ಯಾಂ ವತ್ಸಕತ್ವಚಮ್ |
ಸರ್ವಮೇಕತ್ರ ಸಂಯೋಜ್ಯ ಪ್ರಪಿಬೇತ್ತಣ್ಡುಲಾಮ್ಬುನಾ |
ಸಕ್ಷೌದ್ರಂ ವಾ ಪಿಬೇದೇತತ್ಪಾಚನಂ ಗ್ರಾಹಿದೀಪನಮ್ |
ತೃಷ್ಣಾರುಚಿಪ್ರಶಮನಂ ಜ್ವರಾತಿಸಾರನಾಶನಮ್ ||
ಕಾಮಲಾಗ್ರಹಣೀದೋಷಾನ್ ಗುಲ್ಮಂ ಪ್ಲೀಹಾನಮೇವ ಚ |
ಪ್ರಮೇಹಂ ಪಾಣ್ಡುರೋಗಂ ಚ ಶ್ವಯಥುಂ ಚಾಪಕರ್ಷತಿ ||

ವ್ಯೋಷಾದಿ ಚೂರ್ಣ

(ಚಿ. ಸಾ. ಸಂ. 105)

ತ್ರಿಕಟು, ಇಂದ್ರಜೀವಿ, ಕಹಿಬೇವು, ನೆಲಬೇವು, ಗರುಗ, ಚಿತ್ರಮೂಲ, ಕಟುಕರೋಹಿಣಿ, ಪಾಡಾವಳಿಗಡ್ಡೆ, ಮರದರಸಿನ, ಅತಿವಿಡೆ, ಬಜೆ, ಇವುಗಳನ್ನೆಲ್ಲ ಕುಟ್ಟಿ ನುಣ್ಣಗಿನ (ವಸ್ತ್ರಗಾಲಿತ) ಚೂರ್ಣವನ್ನು ಮಾಡಿ, ಅದಕ್ಕೆ ಸಮತೂಕ ಕೊಡಸಿಗನ ತೊಗಟೆಸ ಚೂರ್ಣವನ್ನು ಮಾಡಿ, ಎಲ್ಲವನ್ನು ಒಟ್ಟಾಗಿ ಬೆರಸಿಟ್ಟುಕೊಂಡು, (ತಕ್ಕ ಪ್ರಮಾಣದಲ್ಲಿ) ಅಕ್ಕಚ್ಚಿನೀರಿನೊಂದಿಗೆ ಕುಡಿಯಬೇಕು, ಅಥವಾ ಜೇನು ಕೂಡಿಸಿಕೊಂಡು ಕುಡಿಯಬೇಕು. ಈ ಚೂರ್ಣವು ಗ್ರಾಹಿಗುಣವುಳ್ಳದ್ದು, ಪಾಚನಕಾರಿ, ದೀಪನಕಾರಿ, ಬಾಯಾರಿಕೆಯನ್ನೂ ಅರುಚಿಯನ್ನೂ ಶಮನ ಮಾಡುವಂಥಾದ್ದು, ಜ್ವರಾತಿಸಾರವನ್ನು ನಾಶಮಾಡುತ್ತದೆ ಮತ್ತು ಕಾಮಿಲೆ, ಗ್ರಹಣಿ, ಗುಲ್ಮ, ಪ್ಲೀಹವ್ಯಾಧಿ, ಪ್ರಮೇಹ, ಪಾಂಡುರೋಗ ಮತ್ತು ಶೋಫೆ, ಇವುಗಳನ್ನು ತೊಲಗಿಸುತ್ತದೆ.

ಷರಾ 'ವಚಾಂ' ಎಂಬಲ್ಲಿ 'ಸಮಾಂ' ಎಂತ ಪಾಠಾಂತರ ಕಾಣುತ್ತದೆ (ಧ 100) ಅದರ ಪ್ರಕಾರ ಬಜೆಯನ್ನು ಬಿಡಬೇಕಾಗುತ್ತದೆ. ಆದರೆ, ಬಜೆಗೆ ಜ್ವರಾತಿಸಾರಹರಗುಣ ವಿಶೇಷವಾಗಿ ರಾ ನಿ ಹೇಳುತ್ತದೆ (ಧ ನಿ. 70)

24. ಪಾಠಾ ಮ(?ಹ್ಯ)ತಿವಿಷಾ ನಿಮ್ಬ(?ಮ್ಬಃ) ಸಮಂಗಾ ಚನ್ದನಂ ಜಲಮ್ |
ಧಾತಕೀ ಮುಸ್ತಭೂನಿಮ್ಬಜಟಾಮಾಂಸೀ ಸನಾಗರಮ್(?ರಾ)
ದಾರ್ವೀ ಚ ಸಮಭಾಗಾನಿ ಘೃತಪ್ರಸ್ಥಂ ವಿಪಾಚಯೇತ್ |
ಸಜ್ವರೇ ಽಸ್ಮಿನ್ನತೀಸಾರೇ ಗ್ರಹಣ್ಯಾಂ ಪಾಣ್ಡುರೋಗಿಣಿ ||
ಮೂತ್ರಕೃಚ್ಛ್ರೇ ಗುದಸ್ರಾವೇ ವಿಷೂಚ್ಯಾಮಲಸೇ ಹಿತಃ ||

ಪಾಠಾದಿಘೃತ

(ಚಿ. ಸಾ. ಸಂ. 105-6)

ಪಾಡಾವಳಿಗಡ್ಡೆ, ಅತಿವಿಡೆ, ಕಹಿಬೇವು, ನಾಚಿಕೆಸೊಪ್ಪಿನ ಗಿಡದ ಬೇರು, ಶ್ರೀಗಂಧ, ಮುಡಿವಾಳ, ಧಾತಕೀಕುಸುಮ, ಭದ್ರಮುಷ್ಟಿ, ನೆಲಬೇವು, ಜಟಾಮಾಂಸಿ, ಶುಂಠಿ, ಮರದರಸಿನ, ಇವುಗಳನ್ನು ಸಮಭಾಗವಾಗಿ (ಒಂದು ತೊಲೆ ಪ್ರಕಾರ) ತೆಗೆದುಕೊಂಡು ಮಾಡಿದ ಚೂರ್ಣದ ಕಲ್ಕದಿಂದ ಒಂದು ಪ್ರಸ್ಥ ತುಪ್ಪವನ್ನು (೪ ಪ್ರಸ್ಥ ನೀರು ಕೂಡಿಸಿ) ಕಾಯಿಸಿ, (ಶೋಧಿಸಿ) ಇಟ್ಟುಕೊಂಡು (ತಕ್ಕ ಪ್ರಮಾಣದಲ್ಲಿ) ಸೇವಿಸುವದು. ಈ ಘೃತವು ಜ್ವರಾತಿಸಾರ, ಅತಿಸಾರ, ಗ್ರಹಣಿ, ಪಾಂಡುರೋಗ, ಮೂತ್ರಕೃಚ್ಛ್ರ, ಗುದಸ್ರಾವ, ವಿಷೂಚೀ, ಮತ್ತು ಅಲಸ, ಈ ರೋಗಗಳಲ್ಲಿ ಹಿತವಾದ್ದು.

25. ಕಲಿಂಗಬಿಲ್ವಜಮ್ಬ್ವಾಮ್ರಕಪಿತ್ಥಂ ಸರಸಾಂಜನಮ್ |

ಕಲಿಂಗಾದಿ ವಟಕ

ಲಾಕ್ಷಾಹರಿದ್ರೇ ಹ್ರೀಬೇರಂ ಕಟ್ಫಲಂ ಶುಕನಾಸಿಕಾಮ್ ।
ಲೋಧ್ರಂ ಮೋಚರಸಂ ಶಂಖಂ ಧಾತಕೀಂ ವಟಶುಂಗಕಮ್ |
ಪಿಷ್ಟ್ವಾ ತಣ್ಡುಲತೋಯೇನ ವಟಕಾನಕ್ಷಸಮ್ಮಿತಾನ್ ||
ಛಾಯಾಶುಷ್ಕಾನ್ ಪಿಬೇಚ್ಛೀಘ್ರಂ ಜ್ವರಾತೀಸಾರಶಾನ್ತಯೇ |
ರಕ್ತಪ್ರಸಾದನಾಶ್ಚೈತೇ ಶೂಲಾತೀಸಾರನಾಶನಾಃ || (ಧ. 101)

ಇಂದ್ರಜೇವಿ, ಬಿಲ್ವಪತ್ರೆಕಾಯಿ, ನೇರಳೆಬೀಜದ ತಿರಳು, ಮಾವಿನ ಗೊರಟಿನ ತಿರಳು, ಬೇಲದಹಣ್ಣಿನ ತಿರಳು, ರಸಾಂಜನ, ಅರಗು, ಅರಸಿನ, ಮುಡಿವಾಳ, ಕಟ್ಫಲ (ಕಿರುಶಿವನಿ ಮ. ಚೆರುಕುಮಳ್), ಆನೆಮುಂಗು, ಲೋಧ್ರ, ಬೂರುಗದ ಮೇಣ, ಶಂಖಭಸ್ಮ, ಧಾತಕೀಕುಸುಮ, ಗೋಳಿಯ ಚಿಗುರು, ಇವುಗಳನ್ನು ಅಕ್ಕಚ್ಚಿನೀರಿನಿಂದ ಅರೆದು, ತಾರೆಕಾಯಿ (ಅಥವಾ ಕರ್ಷ) ಪ್ರಮಾಣದ ವಟಕಗಳನ್ನು ಮಾಡಿ, ನೆರಳಲ್ಲಿ ಒಣಗಿಸಿ ಇಟ್ಟುಕೊಂಡು, (ಒಂದೊಂದು ಗುಳಿಗೆ ಪ್ರಕಾರ ಕಾಯಿಸಿದ ನೀರಿನ ಅನುಪಾನದಿಂದ) ಬೇಗನೆ (ಪ್ರಾತಃಕಾಲದಲ್ಲಿ) ಕುಡಿಯಬೇಕು, ಅದರಿಂದ ಜ್ವರಾತಿಸಾರ ಶಮನವಾಗುತ್ತದೆ, ರಕ್ತ ಶುದ್ಧವಾಗುತ್ತದೆ ಮತ್ತು ಶೂಲೆಯುಳ್ಳ ಅತಿಸಾರ ನಾಶವಾಗುತ್ತದೆ.

ಪಿಬೇಚ್ಛೀಘ್ರಂ' ಎಂಬಲ್ಲಿ 'ಪ್ರಾತಃ' ಎಂತ ಇರುವ ಪಾಠ(ಚ ಸಾ ಸಂ 105)ವೇ ಸರಿಯಾಗಿ ಕಾಣುತ್ತದೆ 'ರಕ್ತಪ್ರಸಾದನಾಶ್ಚೈತೇ' ಎಂಬಲ್ಲಿ 'ರಕ್ತಪಿತ್ತಜ್ವರಾನ್' 'ಅಥವಾ 'ರಕ್ತಪಿತ್ತಜ್ವರಾಪಹಃ' ಎಂತ ಇರುವ ಪಾಠಪ್ರಕಾರ ರಕ್ತಪಿತ್ತದ ಜ್ವರಗಳು ಪರಿಹಾರವಾಗುತ್ತವೆಂತ ಅರ್ಥವಾಗುತ್ತದೆ 'ಕಲಿಂಗ' ಎಂಬಲ್ಲಿ 'ಕಟ್ವಂಗ' ಎಂತ ಇರುವ ಪಾಠ ತಪ್ಪಾಗಿರಬೇಕು ಆನೆಮುಂಗು ಮುಂದೆ ಪ್ರತ್ಯೇಕವಾಗಿ ಹೇಳಲ್ಪಟ್ಟಿರುತ್ತದೆ

ಶಂಖಭಸ್ಮದ ಕ್ರಮ

ಸಣ್ಣ ಶಂಖಗಳನ್ನು ಹುಳಿಕಲಗಚ್ಚಿಯಿಂದ, ಅಥವಾ ಲಿಂಬೆಹಣ್ಣಿನ ರಸದಿಂದ, ಅಥವಾ ಹುಣಸೆಸೊಪ್ಪಿನ ರಸದಿಂದ ಒಂದು ಜಾವಕಾಲ ದೋಲಾಯಂತ್ರರೀತ್ಯಾ ಬೇಯಿಸಿ, ಶುದ್ಧಮಾಡಿದ ಮೇಲೆ, ಕೆಂಡದ ಮೇಲೆ ಇಟ್ಟು ಊದುತ್ತಾ ಬಂದಲ್ಲಿ, ಅವು ಅರಳುತ್ತವೆ ಆನಂತರ ಅವುಗಳನ್ನು ಬೆಂಕಿ ಮೇಲಿಂದ ಹೊರಗೆ ತೆಗೆದಿಟ್ಟು, ಆರಿದ ಮೇಲೆ ಅರೆದು, ವಸ್ತ್ರಗಾಲಿತ ಮಾಡಿದ ಭಸ್ಮವನ್ನು ಉಪಯೋಗಿಸುವದು. ಹಿಂದೆ 562ನೇ ಪುಟದಲ್ಲಿ ವರ್ಣಿಸಿರುವ ಕವಡೆಭಸ್ಮದ ಕ್ರಮವನ್ನು ನೋಡಿ

26. ಈ ಅಧ್ಯಾಯದ 3ನೇ ಸಂಖ್ಯೆಯಲ್ಲಿ ಬೋಧಿಸಲ್ಪಟ್ಟಂತೆ ಜ್ವರಾತಿಸಾರಕ್ಕೆ ವಿಶೇಷ ಚಿಕಿತ್ಸೆಯನ್ನೇ ಮಾಡತಕ್ಕದ್ದೆಂತ ಚರಕನಾಗಲಿ, ಸುಶ್ರುತನಾಗಲಿ, ವಾಗ್ಭಟನಾಗಲಿ, ಉಪದೇಶ ಮಾಡಿದ್ದು ಕಾಣುವದಿಲ್ಲ. ವಂಗಸೇನ ಪ್ರಭೃತಿ ಅರ್ವಾಚೀನ ಗ್ರಂಥಕಾರರೊಳಗೆ ಕೆಲವರು ಜ್ವರಪ್ರಕರಣದ ಕೊನೆ

ಪ್ರಕರಣಾನ್ತ ಟಿಪ್ಪಣಿ.

ಯಲ್ಲಿ, ಬೇರೆಯವರು ಅತಿಸಾರಪ್ರಕರಣದ ಕೊನೆಯಲ್ಲಿ, ಜ್ವರಾತಿಸಾರಕ್ಕೆ ಈ ಅಧ್ಯಾಯದಲ್ಲಿ ಉಕ್ತವಾದ ರೀತಿಯಲ್ಲಿ ಚಿಕಿತ್ಸೆಮಾಡಬೇಕೆಂತ ಪ್ರತ್ಯೇಕವಾಗಿ ಬರೆದಿರುತ್ತಾರೆ.

ಜ್ವರಾತಿಸಾರ ಎಂಬದು ಶಾ.ನ ರೋಗಗಣನದಲ್ಲಿ ಕಾಣುವದಿಲ್ಲ; ಅದು ಒಂದು ಪ್ರತ್ಯೇಕ ವ್ಯಾಧಿ ಅಲ್ಲ, ಜ್ವರ ಮತ್ತು ಅತಿಸಾರ ಎಂಬ ವ್ಯಾಧಿಗಳೆರಡು ಒಟ್ಟಾಗಿ ಕಾಣುವಂಥಾದ್ದು. ಅವು ನಿದಾನವಿಶೇಷಗಳಿಂದ ಸ್ವತಂತ್ರವಾಗಿ ಉತ್ಪನ್ನವಾಗಿರಬಹುದು ಅಥವಾ ಒಂದರ ಲಕ್ಷಣವಾಗಿ ಇನ್ನೊಂದು ಉಂಟಾಗಿರಬಹುದು. ಪಿತ್ತಜ್ವರದ ಲಕ್ಷಣಗಳೊಳಗೆ ಒಂದಾಗಿ ಅತಿಸಾರವು ಹೇಳಲ್ಪಟ್ಟದೆ; ಹಾಗೆಯೆ ಪಿತ್ತಾತಿಸಾರದ ಲಕ್ಷಣಗಳೊಳಗೆ ಜ್ವರ ಒಂದಾಗಿರುತ್ತದೆ.

ಒಂದು ವ್ಯಾಧಿ ಇನ್ನೊಂದರ ಲಕ್ಷಣವಾಗಿರುವಲ್ಲಿ, ಲಕ್ಷಣರೂಪವಾದ ವ್ಯಾಧಿಗೆ ಪ್ರತ್ಯೇಕ ಚಿಕಿತ್ಸೆ ಅಗತ್ಯವಲ್ಲ; ಪ್ರಧಾನವ್ಯಾಧಿ ಉಪಶಮನವಾಗುವಾಗ್ಗೆ ಅದೂ ಪರಿಹಾರವಾಗುತ್ತದೆ. ಆದರೆ, ಲಕ್ಷಣವಾಗಿ ಉಂಟಾದ ವ್ಯಾಧಿಯೇ ಬಲವಂತವಾದರೆ ಅದಕ್ಕೆ ಚಿಕಿತ್ಸೆಮಾಡಬೇಕು. ಆದ್ದರಿಂದಲೇ ಜ್ವರದಲ್ಲಿ ಅತಿಸಾರ ಅತಿಯಾದರೆ, ಅದಕ್ಕೆ ಅತಿಸಾರದಂತೆ ಚಿಕಿತ್ಸೆ ಮಾಡಬೇಕೆಂತ ಸುಶ್ರುತ ಹೇಳಿದ್ದಾನೆ. ಆದರೆ, ಎರಡು ವ್ಯಾಧಿಗಳಿರುವಲ್ಲಿ ಒಂದಕ್ಕೆ ಚಿಕಿತ್ಸೆ ಮಾಡುವದಾದರೆ, ಇನ್ನೊಂದಕ್ಕೆ ಬಾಧಕವಾಗದಂತೆ ನೋಡಿಕೊಳ್ಳತಕ್ಕದ್ದು ಎಂಬದು ಸಾಮಾನ್ಯವಿಧಿ. ಇದಕ್ಕೆ ಲಕ್ಷ್ಯವಿಟ್ಟು ಜ್ವರದಲ್ಲಿ ಅತಿಯಾದ ಮಲಪ್ರವರ್ತನಕ್ಕೆ ಅತಿಸಾರದಂತೆ ಚಿಕಿತ್ಸೆ ಮಾಡಬೇಕೆಂಬ ಸುಶ್ರುತನ ಹೇಳಿಕೆಯನ್ನು ಬದಲಾಯಿಸಿ, ಅಂಥಾ ಮಲವನ್ನು ಪಾಚನಮಾಡಿ ಕಟ್ಟಿಸಬೇಕೆಂತ ವಾಗ್ಭಟನು ಬರೆದಿದ್ದಾನೆ; ಸ್ತಂಭನಗುಣದ ಔಷಧಗಳು ಜ್ವರಕ್ಕೆ ವಿರುದ್ಧ ಎಂಬದರಿಂದ.

ಸ್ತಂಭನಗುಣ ವಿಶೇಷವಾಗಿರುವದು ಚೊಗರುರುಚಿಯುಳ್ಳ ದ್ರವ್ಯಗಳಲ್ಲಿ. ಅಂಥಾ ದ್ರವ್ಯಗಳು ತರುಣ ಜ್ವರದಲ್ಲಿ ಮಾತ್ರ ಕೇವಲ ನಿಷಿದ್ಧ ಎಂತ ಚರಕ ಹೇಳಿದ್ದಾಗ್ಯೂ, ಅವು ಸಾಧಾರಣವಾಗಿ ಜ್ವರದ ಯಾವ ಸ್ಥಿತಿಯಲ್ಲಾದರೂ ಹಿತವಲ್ಲ. ಜೀರ್ಣಜ್ವರದಲ್ಲಿ ಸಹ ಬಹುದೋಷಗಳುಳ್ಳವರಿಗೆ ಶೋಧನಔಷಧವನ್ನು ಕೊಡಬೇಕಾಗಿ ಚರಕ ಹೇಳಿರುತ್ತಾನೆ. ಆಮದ (ಅಜೀರ್ಣದ) ಲಕ್ಷಣ ಕಾಣುವವರೆಗೆ ಲಂಘನ-ಪಾಚನಗಳು ಜ್ವರಕ್ಕಾಗಲಿ ಅತಿಸಾರಕ್ಕಾಗಲಿ ಪ್ರಶಸ್ತವಾದ ಪ್ರತೀಕಾರ; ಅನಂತರ ಸಾಧಾರಣವಾಗಿ ಅನುಲೋಮನಗುಣವುಳ್ಳ ಔಷಧಗಳು ಜ್ವರಕ್ಕೆ, ಮತ್ತು ಸ್ತಂಭನಗುಣವುಳ್ಳ ಔಷಧಗಳು ಅತಿಸಾರಕ್ಕೆ ಯುಕ್ತವಾದವು. ಇವೆರಡು ವರ್ಗಗಳ ಔಷಧಗಳು ಪರಸ್ಪರ ವಿರುದ್ಧವಾದ್ದರಿಂದ ಗ್ರಾಹಿಗುಣವುಳ್ಳ ಔಷಧಗಳಲ್ಲಿ ಜ್ವರಕ್ಕೆ ಅಹಿತವಲ್ಲದ ಮತ್ತು ಅನುಲೋಮನಗುಣವುಳ್ಳವುಗಳಲ್ಲಿ ಮಲವನ್ನು ವಿಶೇಷವಾಗಿ ಸಡಿಲಿಸದ, ಅಥವಾ ಆ ಎರಡು ರೋಗಗಳನ್ನೂ ಪರಿಹರಿಸುವ ಗುಣವುಳ್ಳವಾಗಿ ವರ್ಣಿಸಲ್ಪಟ್ಟಿರುವ, ದ್ರವ್ಯಗಳನ್ನು ಆರಿಸಿ ತೆಗೆದು, ಅಥವಾ ಯೋಜಿಸಿ, ಜ್ವರಾತಿಸಾರಕ್ಕೆ ಚಿಕಿತ್ಸೆ ಮಾಡಬೇಕು. ಅಂಥಾ ಸಂಗತಿಯಲ್ಲಿ ಈ ಅಧ್ಯಾಯವು ಬಹು ಪ್ರಯೋಜನಕರವಾದ್ದು. ಬರೇ ಪಾಚನಔಷಧಗಳನ್ನು ಕೊಡುವಲ್ಲಿಯಾದರೂ ಎರಡು ವ್ಯಾಧಿಗಳಿಗೂ ಉಪಯುಕ್ತವಾದ ಯೋಗವನ್ನು ಕಲ್ಪಿಸಿ ಉಪಯೋಗಿಸಬೇಕೆಂಬದರಿಂದ ಪಿತ್ತದ ಜ್ವರಾತಿಸಾರಕ್ಕೆ ವಿಶೇಷಪಥ್ಯವನ್ನು ಚರಕನು ಉಪದೇಶಮಾಡಿದ್ದಾನೆ. ಅತಿಸಾರದಲ್ಲಿ ಉಪಯುಕ್ತವಾದ ಮಜ್ಜಿಗೆ, ಮೊಸರು, ತುಪ್ಪ ಮುಂತಾದವುಗಳನ್ನು ಜ್ವರವಿರುವಲ್ಲಿ ಉಪಯೋಗಿಸಬಾರದು.

ಈ ಅಧ್ಯಾಯದಲ್ಲಿ ಕಾಣುವ ಔಷಧಗಳು ದೋಷಭೇದದ ಮೇಲೆ ಹೇಳಲ್ಪಟ್ಟಿರುವದಿಲ್ಲ. ಸಾಧಾರಣವಾಗಿ ಅವುಗಳೆಲ್ಲ ಪಿತ್ತಕಫಹರವಾಗಿ, ಅಂದರೆ ಪಿತ್ತಶಮನ ಮತ್ತು ಆಮಪಾಚನ ಮಾಡುವಂಥವಾಗಿ ಇರುವದಲ್ಲದೆ, ಗ್ರಾಹಿಗುಣವುಳ್ಳವು. ಅವು ವಾಯಿದೆ ಜ್ವರದಲ್ಲಿ ಮತ್ತು ಕ್ಷುದ್ರಮಸೂರಿಕೆಯಲ್ಲಿ ಕಾಣುವ ಹೊಟ್ಟೆಯ ಅಕ್ರಮಕ್ಕೂ ಉಪಯುಕ್ತವಾದವಾದರೂ, ಕರುಳಿನಲ್ಲಿ ಅಥವಾ ಶ್ವಾಸನಾಳದಲ್ಲಿ ಕ್ಷಯಧುವಿನ ಪಾಕ ಇರಬಹುದಾದಾಗ್ಗೆ, ಕಣಾದಿ ಅಥವಾ ದಶಮೂಲಾದಿ ಕಷಾಯದ ಮತ್ತು ವ್ಯೋಷಾದಿ ಚೂರ್ಣದ ಹಾಗಿನ ತೀಕ್ಷ್ಣ ಔಷಧಗಳನ್ನು, ವ್ಯತ್ಯಾಸ ಮಾಡಿಕೊಳ್ಳದ ವಿನಾ, ಉಪಯೋಗಿಸಬಾರದು.

# ಅಧ್ಯಾಯ XIX.

## ಗ್ರಹಣೀರೋಗ (Lientery, Disorder of the Intestinal Digestion, Chronic Diarrhoea).

ಷರಾ' ಈ ರೋಗದ ಹೆಸರನ್ನು 'ರಿಕ್ಕೆಟ್ಸ್' (Rickets) ಎಂತ ಒಬ್ಬರು ಗ್ರಂಥಕಾರರು, 'ಸ್ಪ್ರೂ' (sprue) ಎಂತ ಇನ್ನೊಬ್ಬರು, ಭಾಷಾಂತರಿಸಿದ್ದು ಕಾಣುತ್ತದೆ ಗ್ರಹಣಿಯು ಅವೆರಡೂ ಅಲ್ಲ ಯಾಕೆಂಬದು ಕೆಳಗಿನ 1ನೇ ಸಂಖ್ಯೆಯ ವಿವರಣದಿಂದ ಸ್ಪಷ್ಟವಾಗುವದು

1. ಯದನ್ನಂ ದೇಹಧಾತ್ವೋಜೋಬಲವರ್ಣಾದಿಪೋಷಕಮ್ |
ತತ್ರಾಗ್ನಿರ್ಹೇತುರಾಹಾರಾನ್ನ ಹ್ಯಪಕ್ವಾದ್ರಸಾದಯಃ ||
ಗ್ರಹಣಿಯ ವರ್ಣನ
ಅನ್ನಮಾದಾನಕರ್ಮಾ ತು ಪ್ರಾಣಃ ಕೋಷ್ಠಂ ಪ್ರಕರ್ಷತಿ |
ತದ್ದ್ರವೈರ್ಭಿನ್ನಸಂಘಾತಂ ಸ್ನೇಹೇನ ಮೃದುತಾಂ ಗತಮ್ ||
ಸಮಾನೇನಾವಧೂತೋಽಗ್ನಿರುದರ್ಯಃ ಪವನೇನ ತು |
ಕಾಲೇ ಭುಕ್ತಂ ಸಮಂ ಸಮ್ಯಕ್ ಪಚತ್ಯಾಯುರ್ವಿವೃದ್ಧಯೇ ||
ಏವಂ ರಸಮಲಾಯಾನ್ನಮಾಶಯಸ್ಥಮಧಃಸ್ಥಿತಃ |
ಪಚತ್ಯಗ್ನಿರ್ಯಥಾ ಸ್ಥಾಲ್ಯಾಮೋದನಾಯಾಮ್ಬುತಣ್ಡುಲಮ್ ||
(ಚ. 655)

ಅಗ್ನ್ಯಧಿಷ್ಠಾನಮನ್ನಸ್ಯ ಗ್ರಹಣಾತ್ ಗ್ರಹಣೀ ಮತಾ |
ನಾಭೇರುಪರಿ ಸಾ ಹ್ಯಗ್ನಿಬಲೋಪಸ್ತಮ್ಭವೃಂಹಿತಾ ||
ಅಪಕ್ವಂ ಧಾರಯತ್ಯನ್ನಂ ಪಕ್ವಂ ಸೃಜತಿ ಪಾರ್ಶ್ವತಃ |
ದುರ್ಬಲಾಗ್ನ್ಯಬಲಾದ್ ದುಷ್ಟಾದಾಮಮೇವ ವಿಮುಂಚತಿ || (ಚ 659)

ದುರ್ಬಲೋ ವಿದಹತ್ಯನ್ನಂ ತದ್ಯಾತ್ಯೂರ್ಧ್ವಮಧೋಽಪಿ ವಾ |
ಅಧಶ್ಚ ಪಕ್ವಮಾಮಂ ವಾ ಪ್ರವೃತ್ತಂ ಗ್ರಹಣೀಗದಃ ||
ಉಚ್ಯತೇ ಸರ್ವಮೇವಾನ್ನಂ ಪ್ರಾಯೋ ಹ್ಯಸ್ಯ ವಿದಹ್ಯತೇ |
ಅತಿಸೃಷ್ಟಂ ವಿಬದ್ಧಂ ವಾ ದ್ರವಂ ತದುಪವೇಶ್ಯತೇ ||
ತೃಷ್ಣಾರೋಚಕವೈರಸ್ಯಪ್ರಸೇಕತಮಕಾನ್ವಿತಃ |
ಶೂನಪಾದಕರಃ ಸಾಸ್ಥಿಪರ್ವರುಕ್ ಛರ್ದನಂ ಜ್ವರಃ ||
ಲೋಹಾಮಗನ್ಧಿಸ್ತಿಕ್ತಾಮ್ಲ ಉದ್ಗಾರಶ್ಚಾಸ್ಯ ಜಾಯತೇ|| (ಚ. 658-59)

ಆಹಾರವು ದೇಹದ ಧಾತು-ಓಜಸ್ಸು-ಬಲ-ವರ್ಣ ಮುಂತಾದವುಗಳನ್ನು ಪೋಷಿಸುವದಕ್ಕೆ ಹೇತು ಅಗ್ನಿಯಾಗಿರುತ್ತದೆ. ಯಾಕೆಂದರೆ, ಪಕ್ವವಾಗದ ಆಹಾರದಿಂದ (ಆ ಪೋಷಣಕ್ಕೆ ಕಾರಣವಾದ) ರಸಾದಿಗಳು ಉಂಟಾಗುವದಿಲ್ಲ. ಎಳೆದುಕೊಳ್ಳುವ ಶಕ್ತಿಯುಳ್ಳ ಪ್ರಾಣ ವಾಯು ಆಹಾರವನ್ನು ಹೊಟ್ಟೆಗೆ ಒಯ್ಯುತ್ತದೆ. ಅಲ್ಲಿಯ ದ್ರವಗಳಿಂದ ಗಟ್ಟಿಯಾದ ಆಹಾರವು ಒಡೆದು, ಜಿಡ್ಡಿನಿಂದ ಮೃದುವಾದ ಮೇಲೆ, ಸಮಾನವಾಯುವಿನ ಬೀಸುವಿಕೆಯಿಂದ ಅಗ್ನಿಯು ಚುರುಕಾಗಿ, ಯುಕ್ತಕಾಲದಲ್ಲಿ ಉಂಡಂಥಾ ಸಮವಾದ ಆಹಾರವನ್ನು ಚನ್ನಾಗಿ

ಪಚನಮಾಡಿ, ಆಯುಸ್ಸನ್ನು ವೃದ್ಧಿಮಾಡುತ್ತದೆ. ಹೀಗೆ, ಥಾಲಿಯಲ್ಲಿರುವ ಅಕ್ಕಿ ಮತ್ತು ನೀರನ್ನು ಅಡಿಯಲ್ಲಿರುವ ಬೆಂಕಿಯು ಬೇಯಿಸಿ ಅನ್ನವನ್ನು ಮಾಡುವಪ್ರಕಾರ ಆಮಾಶಯದಲ್ಲಿ ಬಂದು ಸೇರಿದ ಆಹಾರವನ್ನು ರಸವಾಗಿಯೂ ಮಲವಾಗಿಯೂ ವಿಂಗಡಿಸುವದಕ್ಕಾಗಿ ಅಡಿಯಲ್ಲಿರುವ ಅಗ್ನಿಯು ಪಚನಮಾಡುತ್ತದೆ. ಈ ಅಗ್ನಿಯ ಸ್ಥಾನಕ್ಕೆ ಅನ್ನವನ್ನು ಹಿಡಕೊಳ್ಳುವ (ತಡೆದು ನಿಲ್ಲಿಸುವ) ಶಕ್ತಿ ಇರುವದರಿಂದ ಗ್ರಹಣೀ ಎನ್ನುತ್ತಾರೆ. ನಾಭಿಯ ಮೇಲ್ಗಡೆ ಇರುವ ಆ ಗ್ರಹಣೀಯು ಅಗ್ನಿಬಲ ಎಂಬ ಜೀವಾಧಾರದಿಂದ ಪುಷ್ಟಿಗೊಂಡು, ಪಕ್ವವಾಗದ ಆಹಾರವನ್ನು ಹಿಡಿದು ನಿಲ್ಲಿಸುತ್ತದೆ ಮತ್ತು ಪಕ್ವವಾದ್ದನ್ನು ಪಾರ್ಶ್ವದಿಂದ ಕೆಳಗೆ ಬಿಡುತ್ತದೆ. ಅಗ್ನಿಯು ಕೆಟ್ಟು ಬಲಹೀನವಾದರೆ ಅದೂ ಅಬಲಿಯಾಗಿ ಆಹಾರವನ್ನು ಪಚನಮಾಡದೇನೇ ಬಿಟ್ಟುಬಿಡುತ್ತದೆ. ದುರ್ಬಲವಾದ ಅಗ್ನಿಯು ಆಹಾರವನ್ನು ಕ್ರಮ ತಪ್ಪಿ ಪಚನಮಾಡುತ್ತದೆ; ಆ ಆಹಾರವು ಮೇಲಕ್ಕಾಗಲಿ (ವಾಂತಿಯಾಗಿ ಆಗಲಿ) ಕೆಳಕ್ಕಾಗಲಿ ಹೋಗುತ್ತದೆ. ಹಾಗೆ ಪಕ್ವವಾಗಿಯಾಗಲಿ, ಅಪಕ್ವವಾಗಿಯಾಗಲಿ (ಒಮ್ಮೆ ಪಕ್ವವಾಗಿ ಒಮ್ಮೆ ಅಪಕ್ವವಾಗಿ, ಕೆಲವು ಅಂಶ ಪಕ್ವ, ಕೆಲವು ಅಂಶ ಅಪಕ್ವವಾಗಿ) ಕೆಳಗೆ ಹೋಗುವಂಥಾದ್ದಕ್ಕೆ ಗ್ರಹಣೀರೋಗ ಎನ್ನುತ್ತಾರೆ. ಆ ರೋಗದಲ್ಲಿ ಪ್ರಾಯಶಃ ಎಲ್ಲಾ ಆಹಾರವು ಕ್ರಮತಪ್ಪಿ ಪಚನಮಾಡಲ್ಪಡುತ್ತದೆ. ಆದ್ದರಿಂದ ಅತಿಸಡಿಲಾಗಿಯಾಗಲಿ, ಒದ್ದವಾಗಿಯಾಗಲಿ, ನೀರಾಗಿ ಮಲ ಹೋಗುತ್ತದೆ. ರೋಗಿಗೆ ಬಾಯಾರಿಕೆ, ಅರುಚಿ, ಬಾಯಿಯ ರಸದಲ್ಲಿ ವಿಕಾರ, ಬಾಯಿಯಿಂದ ನೀರು ಬರುವದು, ತಮಕಶ್ವಾಸ, ಕೈಕಾಲುಗಳಲ್ಲಿ ಊದು, ಎಲುಬುಗಳಲ್ಲಿಯೂ ಗಂಟುಗಳಲ್ಲಿಯೂ ನೋವು, ವಾಂತಿ, ಜ್ವರ, ಮತ್ತು ಕಬ್ಬಿಣದ ಅಥವಾ ಆಮದ ವಾಸನೆಯುಳ್ಳ ಕಹಿ-ಹುಳಿ ತೇಗು, ಈ ವಿಕಾರಗಳು ಉಂಟಾಗುತ್ತವೆ.

ಪಠಾ 1ನೇ ಭಾಗದ II-120ನೇ ಸಂಖ್ಯೆಯ ಅಡಿಯ ಪಠಾವನ್ನು ನೋಡಿ

ಅತಿಸಾರರೋಗದ ದಶೆಯಲ್ಲಿಯಾಗಲಿ, ಅತಿಸಾರ ನಿಂತಮೇಲಾಗಲಿ, ಅಗ್ನಿ ಬಲವಾಗುವದಕ್ಕೆ ಮುಂದಾಗಿ ಅಹಿತವಾದ (ಅಗ್ನಿಮಾಂದ್ಯಕರವಾದ) ಆಹಾರವನ್ನು ಸೇವಿಸುವದರಿಂದ ಗ್ರಹಣೀಯು ಕೆಟ್ಟು, ಗ್ರಹಣೀರೋಗ ಉಂಟಾಗುವದೆಂಬ ಅಭಿಪ್ರಾಯದಿಂದ ಸುಶ್ರುತನು ಅತಿಸಾರ ಅಧ್ಯಾಯದ ಕೊನೆಯಲ್ಲಿ ಗ್ರಹಣೀರೋಗದ ಚಿಕಿತ್ಸೆಯನ್ನೆಲ್ಲ ೧೪ ಶ್ಲೋಕಗಳಲ್ಲಿ ಮುಗಿಸಿದ್ದಾನೆ. ಚರಕಸಂಹಿತೆಯಲ್ಲಿ ಆ ರೋಗದ ಚಿಕಿತ್ಸೆಗೆ ೬೪ ಶ್ಲೋಕಗಳ ಒಂದು ಪ್ರತ್ಯೇಕ ಅಧ್ಯಾಯ ಉಪಯೋಗಿಸಲ್ಪಟ್ಟಿದೆ. ಮಲ ಹೆಚ್ಚುಕಡಿಮೆ ತೆಳ್ಳಗಾಗಿಯೂ ಅತಿಯಾಗಿಯೂ ಹೋಗುವ ಲಕ್ಷಣಗಳು ಅತಿಸಾರಕ್ಕೂ, ಗ್ರಹಣೀರೋಗಕ್ಕೂ ಸಾಮಾನ್ಯವಾದರೂ, ಅತಿಸಾರಕ್ಕೆ ಸಾಕಲ್ಯವಾಗಿ ಚಿಕಿತ್ಸೆ ನಡಿಸದೆ ಅಸಡ್ಡೆಮಾಡುವದರಿಂದ ಗ್ರಹಣೀರೋಗ ಉಂಟಾಗಬಹುದೆಂಬದು ನಿಜವಾದರೂ, ಗ್ರಹಣೀರೋಗವು ಆಗ್ನ್ಯಾಶಯದ ಮೇದೋಜೀರಕ ರಸವೂ ಪಿತ್ತಾಶಯದಿಂದ ಪಿತ್ತನಾಳದ್ವಾರವಾಗಿ ಬರುವ ರಸವೂ ಪಕ್ವಾಶಯಕ್ಕೆ ಬಂದು ಸೇರುವ, ಮತ್ತು ಪಾಚಕಾಗ್ನಿಯ ಮುಖ್ಯಸ್ಥಾನವಾದ, ಗ್ರಹಣೀ ಎಂಬ ಕ್ಷುದ್ರಾಂತ್ರದ ಆದಿಭಾಗಕ್ಕೆ ಸಂಬಂಧಪಟ್ಟದ್ದು. ಸರ್ವಾಂಗಸಂಶ್ರಿತ ವ್ಯಾಧಿಗಳೊಳಗೊಂದಾದ ಅತಿಸಾರವ್ಯಾಧಿಯು ವಿಶೇಷವಾಗಿ ಆಮಾಶಯಕ್ಕೂ ಸ್ಥೂಲಾಂತ್ರಕ್ಕೂ ಸಂಬಂಧಪಟ್ಟದ್ದು. ಬೆಂಕಿಕೆಂಡದ ಶಕ್ತಿಗೆ ತಕ್ಕಷ್ಟೇ ಮತ್ತು ಯುಕ್ತವಾದ ಕಟ್ಟಿಗೆಯನ್ನು ಹಾಕುವದರಿಂದ ಆ ಅಗ್ನಿಯು ಬೆಳೆಯುವದು ಮತ್ತು ಅತಿ ಗುರುವಾದ, ಹಸಿಯಾದ, ಅಥವಾ ಪ್ರಮಾಣದಲ್ಲಿ ಅತಿಯಾದ ಕಟ್ಟಿಗೆ ಅಥವಾ ಬೇರೆ ಇಂಧನವನ್ನು ಹಾಕುವದರಿಂದ, ಅಥವಾ ಇಂಧನಹಾಕದೆ ಹೆಚ್ಚುಕಾಲ ಬಿಟ್ಟುಬಿಡುವದರಿಂದ ಆ ಅಗ್ನಿ ನೊಂದುಹೋಗುವದು ಎಲ್ಲರೂ ತಿಳಿದ ವಿಷಯ, ಹೀಗಿನ ಸಂಬಂಧ ಗ್ರಹಣೀಗೂ ಆಹಾರಕ್ಕೂ ಇರುವಂಥಾದ್ದು.

ಪದಾರ್ಥಗಳು ಸಂಯೋಗ ವಿಯೋಗವಾಗುವ ಕಾಲದಲ್ಲಿ ಅಗ್ನಿ ಉತ್ಪನ್ನವಾಗುತ್ತದೆಂತ ಹಿಂದೆ ಸೂಚಿಸಿಯದೆ — 1ನೇ ಭಾಗದ V-18ನೇ ಸಂಖ್ಯೆಯ ಅಡಿಯಲ್ಲಿ ಬರೆಯಲ್ಪಟ್ಟಿರುವ ಪಠಾ ನೋಡಿ — ಅಂಥಾ ಸಂಯೋಗ-ವಿಯೋಗಗಳು ಆರಂಭವಾಗುವದಕ್ಕೂ ತಕ್ಕಷ್ಟು ಬಿಸಿ ಬೇಕಾಗುತ್ತದೆ. ಆದ್ದರಿಂದ,

"ಗ್ರಹಣ್ಯಾ ಬಲಮಗ್ನಿರ್ಹಿ ಸ ಚಾಪಿ ಗ್ರಹಣೀಶ್ರಿತಃ |
ತಸ್ಮಾತ್ ಸಂದೂಷಿತೇ ವಹ್ನೌ ಗ್ರಹಣೀ ಸಂಪ್ರದುಷ್ಯತಿ || (ಸು. 795)

"ಗ್ರಹಣೀಗೆ ಬಲ ಅಗ್ನಿ, ಅಗ್ನಿಗೆ ಬಲ ಗ್ರಹಣೀ, ಆದ್ದರಿಂದ ಅಗ್ನಿಯು ಬಹಳವಾಗಿ ಕೆಟ್ಟರೆ, ಗ್ರಹಣೀಯು ಬಹಳ ವಾಗಿ ಕೆಡುತ್ತದೆ" ಎಂತ ಸುಶ್ರುತ ಹೇಳಿದ್ದಾನೆ

ಈ ವಿವರಗಳನ್ನೆಲ್ಲಾ ನೆನಪಿನಲ್ಲಿಟ್ಟುಕೊಂಡರೆ, ಗ್ರಹಣಿಗೂ ಅತಿಸಾರಕ್ಕೂ ಇರುವ ಭೇದವು ಸ್ಪಷ್ಟವಾಗುವದು

ರಿಕ್ಕೆಟ್ಸ್ ಎಂಬದು ಎಲುಬುಗಳು ಪೂರ್ಣವಾಗಿ ಬೆಳೆಯದೆ ಮೃದುವಾಗಿಯೇ ಇರುವ ಕಾರಣದಿಂದ ಉತ್ಪನ್ನ ವಾಗುವ ವ್ಯಾಧಿ. ಅದು ಹೆಚ್ಚಾಗಿ ಚಿಕ್ಕ ಮಕ್ಕಳಲ್ಲಿ ಕಾಣುವ ರೋಗ. ಅದು ಮಗುವಿನ ಜನನ ಕಾಲದಿಂದಲೇ ಇರ ಬಹುದು. ಸ್ಪ್ರೂ ಎಂಬದು ಪಿತ್ತಾಶಯದ ದ್ರವ ಸಾಕಷ್ಟು ಸೇರದರಿಂದ ಮಲ ಬೆಳ್ಳಗಾಗಿ ಹೋಗುವ ಅತಿಸಾರ ಅದು ಬೆಟ್ಟಗಳಿಗೆ ಹೊಸತಾಗಿ ಹೋಗಿ ವಾಸಿಸುವದು, ಮಳೆಗಾಲದ ಆರಂಭ, ಮುಂತಾದ ತಾತ್ಕಾಲಿಕ ಹೇತುಗಳಿಂದ, ಆಹಾರದಲ್ಲಿ ವ್ಯತಿಕ್ರಮವಿಲ್ಲದೆ, ಸಂಭವಿಸಬಹುದಾದ್ದು ಮಲ ಬೆಳ್ಳಗಾಗಿ ಹೋಗುವ ಲಕ್ಷಣ ಗ್ರಹಣಿಯಲ್ಲಿ ಹೆಚ್ಚಾಗಿ ಇರುತ್ತದಾದರೂ, 'ಸ್ಪ್ರೂ' ಎಂಬ ವ್ಯಾಧಿಯೇ ಗ್ರಹಣೀರೋಗವಲ್ಲ

2. ಪೂರ್ವರೂಪ.

ಪೂರ್ವರೂಪಮಸ್ತು ತಸ್ಯೇದಂ ತೃಷ್ಣಾಲಸ್ಯಂ ಬಲಕ್ಷಯಃ ।
ವಿದಾಹೋಽನ್ನಸ್ಯ ಪಾಕಶ್ಚ ಚಿರಾತ್ ಕಾಯಸ್ಯ ಗೌರವಮ್

(ಚ. 659)

ಬಾಯಾರಿಕೆ, ಆಲಸ್ಯ, ಬಲದ ಕುಂದುವಿಕೆ, ವಿಕಾರವಾದ ವಿಳಂಬದಿಂದ ಅನ್ನಪಚನ ಜೀರ್ಣ, ದೇಹಭಾರ, ಇವು ಗ್ರಹಣಿಯ ಪೂರ್ವರೂಪ.

3. ಗ್ರಹಣಿಭೇದಗಳು

ವಾತಾತ್ಪಿತ್ತಾತ್ಕಫಾತ್ಸರ್ವಾದ್ಗ್ರಹಣೀದೋಷ ಉಚ್ಯತೇ ॥ (ಚ. 659)

ವಾತದಿಂದ, ಪಿತ್ತದಿಂದ, ಕಫದಿಂದ, ತ್ರಿದೋಷಗಳಿಂದ, ಹೀಗೆ ಗ್ರಹಣೀ ರೋಗ ನಾಲ್ಕು ವಿಧ.

4. ವಾತಗ್ರಹಣಿಯ ನಿದಾನ ಮತ್ತು ರೂಪ

ಕಟುತಿಕ್ತಕಷಾಯಾತಿರೂಕ್ಷಶೀತಲಭೋಜನೈಃ ।
ಪ್ರಮಿತಾನಶನಾತ್ಯಧ್ವವೇಗನಿಗ್ರಹಮೈಥುನೈಃ ॥
ಕರೋತಿ ಕುಪಿತೋ ಮನ್ದಮಗ್ನಿಂ ಸಂಛಾದ್ಯ ಮಾರುತಃ ।
ತಸ್ಯಾನ್ನಂ ಪಚ್ಯತೇ ದುಃಖಂ ಶುಕ್ತಪಾಕಂ ಖರಾಂಗತಾ ॥
ಕಂಠಾಸ್ಯಶೋಷಃ ಕ್ಷುತ್ತೃಷ್ಣಾ ತಿಮಿರಂ ಕರ್ಣಯೋಃ ಸ್ವನಃ ।
ಪಾರ್ಶ್ವೋರುವಂಕ್ಷಣಗ್ರೀವಾರುಜೋಽಭೀಕ್ಷ್ಣಂ ವಿಸೂಚಿಕಾ ॥
ಹೃತ್ಪೀಡಾ ಕಾರ್ಶ್ಯದೌರ್ಬಲ್ಯಂ ವೈರಸ್ಯಂ ಪರಿಕರ್ತಿಕಾ ।
ಗೃದ್ಧಿಃ ಸರ್ವರಸಾನಾಂ ಚ ಮನಸಃ ಸದನಂ ತಥಾ ॥
ಜೀರ್ಣೇ ಜೀರ್ಯತಿ ಚಾಧ್ಮಾನಂ ಭುಕ್ತೇ ಸ್ವಾಸ್ಥ್ಯಮುಪೈತಿ ಚ ।
ಸವಾತಗುಲ್ಮಹೃದ್ರೋಗಪ್ಲೀಹಾಶಂಕೀ ಚ ಮಾನವಃ ॥
ಚಿರಾದ್ದುಃಖಂ ದ್ರವಂ ಶುಷ್ಕಂ ತನ್ವಾಮಂ ಶಬ್ದಫೇನವತ್ ।
ಪುನಃ ಪುನಃ ಸೃಜೇದ್ವರ್ಚ(?ರ್ಚಃ) ಕಾಸಶ್ವಾಸಾನ್ವಿತೋಽನಿಲಾತ್ ॥

(ಚ. 659)

ಕಾರ, ಕಹಿ, ಚೊಗರು, ಅತಿರೂಕ್ಷ. ಅತಿಶೀತಲ, ಈ ಗುಣವುಳ್ಳ ಆಹಾರಗಳಿಂದಲೂ, ಆಹಾರವನ್ನು ಬೇಕಾದಷ್ಟಕ್ಕಿಂತ ಕಡಿಮೆಯಾಗಿ ಸೇವಿಸುವದರಿಂದಲೂ, ಉಪವಾಸದಿಂದಲೂ, ಅತಿಯಾಗಿ ದಾರಿ ನಡೆಯುವದರಿಂದಲೂ, (ಮಲಮೂತ್ರಾದಿಗಳ) ವೇಗಗಳನ್ನು ತಡೆಯುವದ

ರಿಂದಲೂ, ಮೈಥುನದಿಂದಲೂ, ವಾತವು ಕೋಪಗೊಂಡು ಅಗ್ನಿಯನ್ನು ಮುಚ್ಚಿ, ಮಂದ ಮಾಡುತ್ತದೆ. ಅಂಥವನಿಗೆ ಅನ್ನವು ಕಷ್ಟದಿಂದ ಪಚನವಾಗುತ್ತದೆ. ಶುಕ್ತದ ಹಾಗಿನ ಆಹಾರಪಾಕ, ದೊರಗಾದ ಅಂಗಗಳು, ಕಂಠ ಮತ್ತು ಬಾಯಿ ಒಣಗುವಿಕೆ, ಹಸಿವೆ, ಬಾಯಾರಿಕೆ, ದೃಷ್ಟಿಮಂದತೆ, ಕಿವಿಗಳೊಳಗೆ ಸ್ವರ, ಪಾರ್ಶ್ವಗಳಲ್ಲಿಯೂ, ತೊಡೆಗಳಲ್ಲಿಯೂ, ತೊಡೆಸಂದುಗಳಲ್ಲಿಯೂ, ಕುತ್ತಿಗೆಯ ಹಿಂಬದಿಯಲ್ಲಿಯೂ ಪದೇಪದೇ ನೋವು, ವಿಸೂಚಿಕೆ ಎಂಬ ಶೂಲೆ, ಎದೆನೋವು, ಕೃಶತೆ, ದುರ್ಬಲತೆ, ರುಚಿಕೆಡುವದು, ಪರಿಕರ್ತ್ರಿಕಾ (ಕತ್ತರಿಸಿದ ಹಾಗಿನ) ಶೂಲೆ, ಷಡ್ರಸಗಳಲ್ಲಿಯೂ ಆಶೆ, ಉದಾಸೀನತೆ, ಉಂಡ ಅನ್ನ ಜೀರ್ಣವಾಗುವ ಕಾಲದಲ್ಲಿ ಮತ್ತು ಜೀರ್ಣವಾದ ಮೇಲೆ ಹೊಟ್ಟೆಯುಬ್ಬರ, ಉಂಡಕೂಡಲೆ ಸುಖಕಾಣು ವದು, ವಾತಗುಲ್ಮ, ಹೃದ್ರೋಗ, ಪ್ಲೀಹವ್ಯಾಧಿ, ಈ ರೋಗಗಳು ಉಂಟಾಗಿವೆಯೋ ಎಂಬ ಸಂದೇಹ, ವಿಳಂಬದಿಂದ, ಕಷ್ಟವಾಗಿ, ಒಣಗಿದ, (ಅಥವಾ) ದ್ರವವಾದ, ಅಲ್ಪವಾದ, ಆಮವುಳ್ಳ, ನೊರೆಯುಕ್ತವಾದ ಮತ್ತು ಶಬ್ದಕೂಡಿದ ಮಲ ಪುನಃಪುನಃ ಹೋಗುವದು, ಕೆಮ್ಮು, ಮತ್ತು ಉಬ್ಬಸ, ಈ ಲಕ್ಷಣಗಳು ವಾತಗ್ರಹಣಿಯಲ್ಲಿ ಸಂಭವಿಸುವಂಥವು.

ಪರಾ ನಾಲ್ಕು ಅಗ್ನಿಗಳೊಳಗೆ ಸಮಾಗ್ನಿ ಬಿಟ್ಟು ಮಿಕ್ಕ ಮಂದಾಗ್ನಿ, ಅತ್ಯಗ್ನಿ ಮತ್ತು ವಿಷಮಾಗ್ನಿ ಎಂಬವು ಗ್ರಹಣೀ ದೋಷವನ್ನು ಸೂಚಿಸುತ್ತವೆ (ಚ 660)

5. ಕಟ್ವಜೀರ್ಣವಿದಾಹ್ಯಮ್ಲಕ್ಷಾರಾದ್ಯೈಃ ಪಿತ್ತಮುಲ್ಬಣಮ್ ।
ಅಗ್ನಿಮಾಪ್ಲಾವಯದ್ಧನ್ತಿ ಜಲಂ ತಪ್ತಮಿವಾನಲಮ್ ॥
ಸೋಽಜೀರ್ಣಂ ನೀಲಪೀತಾಭಂ ಪೀತಾಭಃ ಸಾರ್ಯತೇ ದ್ರವಮ್ ।
ಪೂತ್ಯಮ್ಲೋದ್ಗಾರಹೃತ್ಕಂಠದಾಹಾರುಚಿತೃಷಾರ್ದಿತಃ ॥ (ಚ. 659)

ಪಿತ್ತಗ್ರಹಣಿಯ ನಿದಾನ ಮತ್ತು ರೂಪ

ಕಾರ, ಅಜೀರ್ತಿಕರ, ಉರಿಯನ್ನುಂಟುಮಾಡತಕ್ಕ ಮತ್ತು ಹುಳಿ ಪದಾರ್ಥಗಳು, ಕ್ಷಾರ, ಮುಂತಾದವುಗಳ ಸೇವನದಿಂದ ಕೆದರಿಕೊಂಡ ಪಿತ್ತವು ಅಗ್ನಿಯನ್ನು ಮುಳುಗಿಸಿ, ಅದನ್ನು, ಕಾದ ನೀರು ಬೆಂಕಿಯನ್ನು ನೊಂದಿಸುವಂತೆ, ನಾಶಮಾಡುತ್ತದೆ. ಆಗ್ಗೆ ರೋಗಿಯು ನೀಲ ಮತ್ತು ಅರಸಿನವರ್ಣದ, ತೆಳುವಾದ ಮತ್ತು ಅಜೀರ್ಣದ ಮಲವನ್ನು ವಿಸರ್ಜನಮಾಡುವನು, ಅವನ ದೇಹವು ಅರಸಿನ ಛಾಯೆಯುಳ್ಳದ್ದಾಗುವದು, ದುರ್ವಾಸನೆಯುಳ್ಳ ಮತ್ತು ಹುಳಿ ಯಾದ ತೇಗು, ಎದೆ-ಕಂಠಗಳಲ್ಲಿ ಉರಿ, ಅರುಚಿ, ಬಾಯಾರಿಕೆ, ಇವುಗಳ ಪೀಡೆ ಸಹ ಉಂಟಾಗುವದು.

6. ಗುರ್ವತಿಸ್ನಿಗ್ಧಶೀತಾನ್ನಭೋಜನಾದತಿಭೋಜನಾತ್ ।
ಭುಕ್ತಮಾತ್ರಸ್ಯ ಚ ಸ್ವಪ್ನಾದ್ಧನ್ತ್ಯಗ್ನಿಂ ಕುಪಿತಃ ಕಫಃ
ತಸ್ಯಾನ್ನಂ ಪಚ್ಯತೇ ದುಃಖಂ ಹೃಲ್ಲಾಸಛರ್ದ್ಯರೋಚಕಾಃ ।
ಆಸ್ಯೋಪದೇಹಮಾಧುರ್ಯಕಾಸಷ್ಠೀವನಪೀನಸಾಃ ॥
ಹೃದಯಂ ಮನ್ಯತೇ ಸ್ತ್ಯಾನಮುದರಂ ಸ್ತಿಮಿತಂ ಗುರು ।
ದುಷ್ಟೋ ಮಧುರ ಉದ್ಗಾರಃ ಸದನಂ ಸ್ತ್ರೀಷ್ವಹರ್ಷಣಮ್ ॥
ಭಿನ್ನಾಮಶ್ಲೇಷ್ಮಸಂಸೃಷ್ಟಗುರುವರ್ಚಃಪ್ರವರ್ತನಮ್ ।
ಅಕೃಶಸ್ಯಾಪಿ ದೌರ್ಬಲ್ಯಮಾಲಸ್ಯಂ ಚ ಕಫಾತ್ಮಕೇ ॥ (ಚ. 660)

ಕಫಗ್ರಹಣಿಯ ನಿದಾನ ಮತ್ತು ರೂಪ

ಗುರುವಾದ, ಅತಿಸ್ನಿಗ್ಧವಾದ, ಅಥವಾ ಅತಿಶೀತವಾದ ಅನ್ನದ ಭೋಜನದಿಂದಲೂ, ಅತಿಯಾಗಿ ಉಣ್ಣುವದರಿಂದಲೂ, ಉಂಡಕ್ಷಣದಲ್ಲಿ ನಿದ್ರೆಗೈಯುವದರಿಂದಲೂ, ಕಫವು ಕೋಪಗೊಂಡು ಅಗ್ನಿಯನ್ನು ನಾಶಮಾಡುತ್ತದೆ. ಆಗ್ಗೆ ಅವನಿಗೆ ಅನ್ನವು ಕಷ್ಟದಿಂದ ಪಚನವಾಗುತ್ತದೆ. ಹೃಲ್ಲಾಸ, ವಾಂತಿ, ಅರುಚಿ, ಬಾಯಿಯಲ್ಲಿ ಅಗ್ರ ಮತ್ತು ಸಿಹಿರುಚಿ, ಕೆಮ್ಮು, ಉಗುಳುವಿಕೆ, ನೆಗಡಿ, ಎದೆ ಗಟ್ಟಿಕಟ್ಟಿದ ಹಾಗೆ ಕಾಣುವದು, ಹೊಟ್ಟೆ ಭಾರವುಳ್ಳದ್ದಾಗಿ ತುಳುಕುವದು, ಸಿಹಿಯಾದ ಕೆಟ್ಟ ತೇಗು, ಅಗ್ನಿಮಾಂದ್ಯ, ಸ್ತ್ರೀಯರಲ್ಲಿ ಹರ್ಷವಿಲ್ಲದಿರೋಣ, ಆಮ ಮತ್ತು ಕಫ ಮಿಶ್ರವುಳ್ಳ, ಒಡೆದ ಮತ್ತು ಭಾರವುಳ್ಳ ಮಲದ ಪ್ರವೃತ್ತಿ, ದೇಹ ಬತ್ತದೇನೇ ಅಶಕ್ತಿ, ಆಲಸ್ಯ, ಈ ಲಕ್ಷಣಗಳು ಕಫಾತ್ಮಕವಾದ ಗ್ರಹಣಿಯಲ್ಲಿ ಕಾಣುವವು.

ಪಠಾ 'ಶೀತಾನ್ನ' ಎಂಬಲ್ಲಿ 'ಶೀತಾದಿ' ಎಂಬ ಪಾಠಾಂತರವಿರುವದೇ ಸರಿಯಾದ್ದೆಂತ ಕಾಣುತ್ತದೆ ಯಾಕೆಂದರೆ, ಸಿಹಿ, ಪಿಚ್ಛಿಲ, ಮುಂತಾದ ಕಫವೃದ್ಧಿಕರವಾದ ಬೇರೆ ಭೋಜನಗಳಿಂದಲೂ ಕಫವು ಕೋಪಗೊಳ್ಳಬಹುದು

7. ಪೃಥಗ್ವಾತಾದಿನಿರ್ದಿಷ್ಟಹೇತುಲಿಂಗಸಮಾಗಮೇ ।
ತ್ರಿದೋಷಂ ನಿರ್ದಿಶೇತ್ . . . . . (ಚ 660)

ತ್ರಿದೋಷಗ್ರಹಣಿಯ ನಿದಾನ ಮತ್ತು ರೂಪ

ವಾತಾದಿಗ್ರಹಣೀರೋಗಗಳಿಗೆ ಬೇರೆ ಬೇರೆಯಾಗಿ ಹೇಳಲ್ಪಟ್ಟ ನಿದಾನ ಮತ್ತು ಲಕ್ಷಣಗಳು ಯಾವಾಗ ಕೂಡಿಕೊಳ್ಳುತ್ತವೋ, ಆಗ್ಗೆ ಅದು ತ್ರಿದೋಷದಿಂದ ಉಂಟಾದ 'ಗ್ರಹಣೀರೋಗ' ಎಂತ ಹೇಳತಕ್ಕದ್ದು.

8. ಅನ್ತ್ರಕೂಜನಮಾಲಸ್ಯಂ ದೌರ್ಬಲ್ಯಂ ಸದನಂ ತಥಾ ।
ದ್ರವಂ ಶೀತಂ ಘನಂ ಸ್ನಿಗ್ಧಂ ಸಕಟೀವೇದನಂ ಶಕೃತ್ ॥
ಆಮಂ ಬಹು ಸಪೈಚ್ಛಿಲ್ಯಂ ಸಶಬ್ದಂ ಮಂದವೇದನಮ್ ।
ಪಕ್ಷಾನ್ಮಾಸಾದ್ದಶಾಹಾದ್ವಾ ನಿತ್ಯಂ ವಾಪ್ಯಥ ಮುಂಚತಿ
ದಿವಾ ಪ್ರಕೋಪೋ ಭವತಿ ರಾತ್ರೌ ಶಾನ್ತಿಂ ವ್ರಜೇಚ್ಚ ಸಾ ।
ದುರ್ವಿಜ್ಞೇಯಾ ದುಶ್ಚಿಕಿತ್ಸ್ಯಾ ಚಿರಕಾಲಾನುಬನ್ಧಿನೀ ॥
ಸಾ ಭವೇದಾಮವಾತೇನ ಸಂಗ್ರಹಗ್ರಹಣೀ ಮತಾ ॥ (ಮಾ. ನಿ. 60)

ಸಂಗ್ರಹಗ್ರಹಣೀ.

ಕರುಳಿನಲ್ಲಿ ಕೂಗು, ಆಲಸ್ಯ, ಬಲಹೀನತೆ, ಅಗ್ನಿಮಾಂದ್ಯ, ಸೊಂಟದಲ್ಲಿ ನೋವು, ತೆಳ್ಳಗಾದ, ಶೀತವಾದ, ಭಾರವುಳ್ಳ, ಸ್ನೇಹಯುಕ್ತವಾದ, ಅಪಕ್ವವಾದ, ಬಹಳವಾದ ಮತ್ತು ಬೊಂಪುಳ್ಳ ಮಲವನ್ನು, ಅಲ್ಪವಾದ ನೋವು ಮತ್ತು ಶಬ್ದಯುಕ್ತವಾಗಿ, ಪಕ್ಷಬಿಟ್ಟು, ತಿಂಗಳು ಬಿಟ್ಟು, ಹತ್ತುದಿನ ಬಿಟ್ಟು, ಅಥವಾ ನಿತ್ಯದಲ್ಲಿ ವಿಸರ್ಜನೆಮಾಡುವದು, ಮತ್ತು ಹಗಲು ಕಾಲ ಹೆಚ್ಚಾಗಿ, ರಾತ್ರಿಯಲ್ಲಿ ಶಾಂತವಾಗುವದು, ಈ ಲಕ್ಷಣಗಳುಳ್ಳ, ತಿಳಿಯಲು ಮತ್ತು ಚಿಕಿತ್ಸೆ ಮಾಡಲು ಕಷ್ಟವಾದ ಮತ್ತು ದೀರ್ಘಕಾಲದ ವರೆಗೆ ಹಿಡಿದು ಪೀಡಿಸುವ, ವ್ಯಾಧಿಗೆ 'ಸಂಗ್ರಹಗ್ರಹಣೀ' ಎನ್ನುತ್ತಾರೆ. ಅದು ಆಮವಾತದಿಂದ ಹುಟ್ಟುವದು.

9. ವರ್ಜಯೇದ್ಗ್ರಹಣೀರೋಗಾತ್ ಕ್ಷೀಯಮಾಣಬಲಾನಲಮ್ ॥
(ವೈ. ಸಾ. ಸಂ. 234)

ಅಸಾಧ್ಯಲಕ್ಷಣ.

ಗ್ರಹಣೀರೋಗದಿಂದ ದಿನೇ ದಿನೇ ಬಲವೂ ಅಗ್ನಿಯೂ ಕ್ಷಯಿಸುತ್ತಾ ಬರುವ ರೋಗಿಯನ್ನು ಚಿಕಿತ್ಸೆಮಾಡದೆ ಬಿಡತಕ್ಕದ್ದು.

ಷರಾ ಅಸಾಧ್ಯ ಅತಿಸಾರಕ್ಕೆ ಹೇಳಲ್ಪಟ್ಟ ಲಕ್ಷಣಗಳೇ ಅಸಾಧ್ಯ ಗ್ರಹಣೀರೋಗದಲ್ಲಿ ಕಾಣುವವು ಎಂತ ಮಾ ನಿ. (ಪು 61)

ಆಮಗ್ರಹಣಿಯ ಚಿಕಿತ್ಸಾವಿಧಾನ

10. ಗ್ರಹಣೀಮಾಶ್ರಿತಂ ದೋಷಂ ವಿದಗ್ಧಾಹಾರಮೂರ್ಛಿತಮ್ |
ಸವಿಷ್ಟಮ್ಭಪ್ರಸೇಕಾರ್ತಿವಿದಾಹಾರುಚಿಗೌರವಮ್ ||
ಆಮಲಿಂಗಾನ್ವಿತಂ ದೃಷ್ಟ್ವಾ ಸುಖೋಷ್ಣೇನಾಮ್ಬುನೋದ್ಧರೇತ್ |
ಫಲಾನಾಂ ವಾ ಕಷಾಯೇಣ ಪಿಪ್ಪಲೀಸರ್ಷಪೈಸ್ತಥಾ ||
ಲೀನಂ ಪಕ್ವಾಶಯಸ್ಥಂ ವಾಪ್ಯಾಮಂ ಸ್ರಾವ್ಯಂ ಸದೀಪನೈಃ |
ಶರೀರಾನುಗತೇ ಸಾಮೇ ರಸೇ ಲಂಘನಪಾಚನಮ್ |
ವಿಶುದ್ಧಾಮಾಶಯಾಯಾಸ್ಮೈ ಪಂಚಕೋಲಾದಿಭಿರ್ಯುತಮ್ ||
ದದ್ಯಾತ್ಪೇಯಾದಿ ಲಘ್ವನ್ನಂ ಪುನರ್ಯೋಗಾಂಶ್ಚ ದೀಪನಾನ್ ||
(ಚ. 660)

ಗ್ರಹಣೀಯನ್ನು ಆಶ್ರಯಿಸಿಕೊಂಡ ದೋಷವು ಕ್ರಮವಾಗಿ ಪಾಚನವಾಡಲ್ಪಡದ (ಜೀರ್ಣವಾಗದ) ಆಹಾರದ ದೆಸೆಯಿಂದ ಕೆದರಿ, ಮಲಮೂತ್ರ ಕಟ್ಟಿಕೊಳ್ಳುವಿಕೆ, ಬಾಯಿಯಿಂದ ನೀರು ಸ್ರವಿಸುವದು, ಹೊಟ್ಟೆನೋವು, ಉರಿ, ಅರುಚಿ, ಮೈಭಾರ, (ಈ) ಆಮದ ಲಕ್ಷಣಗಳೊಂದಿಗೆ ಕೂಡಿಕೊಂಡದ್ದನ್ನು ನೋಡಿ, ರೋಗಿಗೆ ಸುಖವಾದ ಬಿಸಿಯುಳ್ಳ ನೀರನ್ನು ಅಥವಾ ಫಲಗಳ (ಮಂಗಾರೆಕಾಯಿ) ಕಷಾಯವನ್ನು, ಅಥವಾ ಹಿಪ್ಪಲಿ ಸಾಸುವೆಗಳ ನೀರನ್ನು ಕುಡಿಸಿ, ಆ ದೋಷವನ್ನು ವಾಂತಿಮಾಡಿಸತಕ್ಕದ್ದು; ಅಥವಾ ಆಮದೋಷವು ಪಕ್ವಾಶಯವನ್ನು ಹಿಡಿದು ನಿಂತಿದ್ದರೆ, ಅದನ್ನು ದೀಪನಕರವಾದ ವಿರೇಚನಯೋಗಗಳಿಂದ ಝಾಡಿಸಬೇಕು; ಆಮದ ರಸವು ಇಡೀ ಶರೀರವನ್ನು ವ್ಯಾಪಿಸಿಕೊಂಡಿದ್ದರೆ ಲಂಘನ-ಪಾಚನಕ್ರಮಗಳನ್ನು ನಡಿಸಬೇಕು. ಈ ಕ್ರಮಗಳಿಂದ ಆಮಾಶಯವು ಶುದ್ಧವಾದ ಮೇಲೆ ರೋಗಿಗೆ ಪಂಚಕೋಲ ಮುಂತಾದವುಗಳನ್ನು ಕೂಡಿಸಿ ಮಾಡಿದ ಪೇಯಾ (ಗಂಜಿವಿಶೇಷ) ಮುಂತಾದ ಲಘುವಾದ ಆಹಾರವನ್ನು ಕೊಟ್ಟು, ಪುನಃ ದೀಪನಯೋಗಗಳನ್ನು ಉಪಯೋಗಿಸತಕ್ಕದ್ದು.

ಷರಾ 'ಸಾಮ', 'ನಿರಾಮ', ಎಂಬ ಭೇದವನ್ನು ಅತಿಸಾರರೋಗದಲ್ಲಿ ಹೇಳಲ್ಪಟ್ಟ ಕ್ರಮದಿಂದ ತಿಳಿದು, ಅಲ್ಲಿ ಉಕ್ತವಾದ ಉಪದೇಶ ಪ್ರಕಾರ ಆಮವನ್ನು ಪಾಚನಮಾಡಿಸತಕ್ಕದ್ದು (ಚಿ ಸಾ ಸಂ 107). ಅಲ್ಲಿ ಸೂಚಿಸಿದಂತೆ ಸಾಮದ ಮಲವು ನೀರಿನಲ್ಲಿ ಮುಳುಗುತ್ತದೆ ಮತ್ತು ನಿರಾಮದ್ದು ತೇಲುತ್ತದೆ (ಚ 662)

ಯಥಾದೋಷೋಚ್ಛ್ರಯನ್ತಸ್ಯ ವಿಶುದ್ಧಸ್ಯ ಯಥಾಕ್ರಮಮ್ |
ಪೇಯಾದಿಂ ವಿತರೇತ್ಸಮ್ಯಗ್ದೀಪನೀಯೋಪಸಂಭೃತಮ್
ತತಃ ಪಾಚನಸಂಗ್ರಾಹಿದೀಪನೀಯಗಣತ್ರಯಮ್ |
ಪಿಬೇತ್ಪ್ರಾತಃ ಸುರಾರಿಷ್ಟಸ್ನೇಹಮೂತ್ರಸುಖಾಮ್ಬುಭಿಃ ||
ತಕ್ರೇಣ ವಾಥ ತಕ್ರಂ ವಾ ಕೇವಲಂ ಹಿತಮುಚ್ಯತೇ |
ಕ್ರಿಮಿಗುಲ್ಮೋದರಾಶೋರ್ಘ್ನೀಃ ಕ್ರಿಯಾಶ್ಚಾತ್ರಾವಚಾರಯೇತ್ ||
* * * ಸರ್ವಥಾ ದೀಪನಂ ಸರ್ವಂ ಗ್ರಹಣೀರೋಗಿಣಾಂ ಹಿತಮ್ |
ಜ್ವರಾದೀನವಿರೋಧಾಚ್ಚ ಸಾಧಯೇತ್ ಸ್ವೈಶ್ಚಿಕಿತ್ಸಿತೈಃ || (ಸು. 796)

ವೃದ್ಧಿಗೊಂಡ ದೋಷಕ್ಕೆ ಯುಕ್ತವಾದ ಕ್ರಮ(ವಾತಕ್ಕೆ ನಿರೂಹವಸ್ತಿ, ಪಿತ್ತಕ್ಕೆ ವಿರೇಚನ, ಕಫಕ್ಕೆ ವಮನ)ಗಳಿಂದ ಶೋಧನಮಾಡಿಸಿದ ಮೇಲೆ, ದೀಪನಕರವಾದ ಔಷಧಗಳನ್ನು ಕೂಡಿಸಿ ಮಾಡಿದ ಪೇಯಾ (ಗಂಜಿವಿಶೇಷ) ಮುಂತಾದ್ದನ್ನು ಚನ್ನಾಗಿ ಕೊಡತಕ್ಕದ್ದು. ಆ ಮೇಲೆ ಪಾಚನವರ್ಗ, ಸಂಗ್ರಾಹಿವರ್ಗ, ದೀಪನವರ್ಗ, ಈ ಮೂರು ಗಣಗಳಿಗೆ ಸೇರಿದ ಔಷಧಗಳ ಚೂರ್ಣವನ್ನು ಮದ್ಯ, ಅರಿಷ್ಟ, ಸ್ನೇಹ, ಮೂತ್ರ, ಸುಖವಾದ ಬಿಸಿನೀರು, ಮಜ್ಜಿಗೆ, ಇವುಗಳೊಳಗೊಂದರಲ್ಲಿ ಕಲಸಿ ಬೆಳಿಗ್ಗೆ ಕುಡಿಸತಕ್ಕದ್ದು; ಅಥವಾ ಬರೇ ಮಜ್ಜಿಗೆ ಹಿತ ಎಂತ ಹೇಳಲ್ಪಡುತ್ತದೆ; ಮತ್ತು ಕ್ರಿಮಿರೋಗ, ಗುಲ್ಮ, ಉದರವ್ಯಾಧಿ, ಅರ್ಶಸ್ಸು, ಇವುಗಳ ಪರಿಹಾರಕ್ಕೆ ಹೇಳಲ್ಪಟ್ಟ ಪ್ರತಿಕ್ರಿಯೆಗಳನ್ನು ಸಹ ಈ ರೋಗದಲ್ಲಿ ನಡಿಸಬೇಕು. ಗ್ರಹಣೀ ರೋಗಿಗಳಿಗೆ ಸರ್ವ ಅವಸ್ಥೆಯಲ್ಲಿಯೂ ದೀಪನಕರವಾದ್ದೆಲ್ಲ ಹಿತವು. ಜ್ವರ ಮುಂತಾದ ಉಪದ್ರವಗಳನ್ನು, ಗ್ರಹಣೀರೋಗಕ್ಕೆ ವಿರೋಧವಾಗದಂತೆ, ಆಯಾ ರೋಗಕ್ಕೆ ಉಕ್ತವಾದ ಚಿಕಿತ್ಸೆಗಳನ್ನು ನಡಿಸಿ, ಪರಿಹರಿಸತಕ್ಕದ್ದು.

ಷರಾ ಗ್ರಹಣಿಯಲ್ಲಿಯೂ ಅತಿಸಾರದಲ್ಲಿಯೂ ಆರಂಭದಲ್ಲಿ ಪಾಚನ, ಮಧ್ಯದಲ್ಲಿ ಲಂಘನಪಾಚನಗಳು ಮತ್ತು ಅಂತ್ಯದಲ್ಲಿ ದೀಪನ ನಡಿಸಬೇಕಾದ ಕ್ರಮಗಳಾಗಿರುತ್ತವೆ (ವೈ ಸಾ. ಸಂ 234). ಅಂಬಷ್ಠಾದಿಯು ಸಂಗ್ರಾಹಿ ವರ್ಗ, ಹರಿದ್ರಾದಿ ಪಾಚನವರ್ಗ, ಮತ್ತು ಪಿಪ್ಪಲ್ಯಾದಿ ದೀಪನವರ್ಗ ಎಂತ ಸಿ ಸಂ ವ್ಯಾ (ಪು 601) ಕ್ರಿಮ್ಯಾದಿಗಳಿಗೆ ಔಷಧಗಳನ್ನು ಉಪಯೋಗಿಸುವಾಗಲೂ ವಾತಾದಿದೋಷವಿಚಾರ ಅಗತ್ಯ

ಆಮಪಾಚನಕ್ಕೆ ಕಷಾಯಾದಿ ಯೋಗಗಳು.

11. ಶುಂಠೀಸಮುಸ್ತಾತಿವಿಷಾಂ ಗುಡೂಚೀಂ ಪಿಬೇತ್ಸಮಾಂಶಾಂ ಕ್ವಥಿತಂ ಜಲೇನ |
ಮನ್ದಾನಲತ್ವೇ ಸತತಾಮತಾಯಾಮಾಮಾನುಬನ್ಧೇ ಗ್ರಹಣೀಗದೇ ಚ ||
(ಚಿ. ಸಾ. ಸಂ. 108)

ಶುಂಠಿ, ಭದ್ರಮುಷ್ಟಿ, ಅತಿವಿಡೆ, ಅಮೃತಬಳ್ಳಿ, ಇವುಗಳನ್ನು ಸಮಾಂಶವಾಗಿ ತೆಗೆದುಕೊಂಡು ಕಷಾಯಮಾಡಿ ಅಗ್ನಿಮಾಂದ್ಯದಲ್ಲಿಯೂ, ಬಿಡದೆ ಹಿಡಕೊಂಡಿರುವ ಆಮತ್ವ(ಅಜೀರ್ತಿ)ದಲ್ಲಿಯೂ, ಆಮಯುಕ್ತವಾದ ಗ್ರಹಣೀರೋಗದಲ್ಲಿಯೂ ಕುಡಿಸತಕ್ಕದ್ದು.

ನಾಗರಾತಿವಿಷಾಮುಸ್ತಕ್ವಾಥಃ ಸ್ಯಾದಾಮಪಾಚನಃ |
ಮುಸ್ತಾನ್ತಕಲ್ಕಃ ಪಥ್ಯಾ ವಾ ನಾಗರಂ ಚೋಷ್ಣವಾರಿಣಾ || (ಚ. 662)

ಶುಂಠಿ, ಅತಿವಿಡೆ, ಭದ್ರಮುಷ್ಟಿ, ಇವುಗಳ ಕಷಾಯವನ್ನಾಗಲಿ, ಅವುಗಳ ಕಲ್ಕವನ್ನು, ಅಥವಾ ಅಣಿಲೆಕಾಯಿಯ ಚೂರ್ಣವನ್ನು, ಅಥವಾ ಶುಂಠಿಯ ಚೂರ್ಣವನ್ನು, ಬಿಸಿನೀರಿನೊಂದಿಗೆ ಆಗಲಿ, ಪಾನಮಾಡುವದರಿಂದ ಆಮಪಾಚನ ಆಗುತ್ತದೆ.

ಚಿತ್ರಕಾದಿ ಗುಳಿಗೆ

ಚಿತ್ರಕಂ ಪಿಪ್ಪಲೀಮೂಲಂ ದ್ವೌ ಕ್ಷಾರೌ ಲವಣಾನಿ ಚ |
ವ್ಯೋಷಂ ಹಿಂಗ್ವಜಮೋದಾಂ ಚ ಚವ್ಯಂ ಚೈಕತ್ರ ಚೂರ್ಣಯೇತ್ ||
ಗುಟಿಕಾ ಮಾತುಲುಂಗಸ್ಯ ದಾಡಿಮಸ್ಯ ರಸೇನ ವಾ |
ಕೃತಾ ವಿಪಾಚಯನ್ತ್ಯಾಮಂ ದೀಪಯನ್ತ್ಯಾಶು ಚಾನಲಮ್ ||
(ಚ. 662)

ಚಿತ್ರಮೂಲ, ಹಿಪ್ಪಲಿಮೂಲ, ಎರಡು ಕ್ಷಾರಗಳು (ಸೌವರ್ಚಲ ಮತ್ತು ಯವ), ಐದು ಲವಣಗಳು, ತ್ರಿಕಟು, (ಹುರಿದ) ಹಿಂಗು, ಅಜಮೋದ, ಕಾಡುಮೆಣಸಿನ ಬೇರು, ಇವುಗಳನ್ನೆಲ್ಲ

ಒಟ್ಟಾಗಿ ಚೂರ್ಣಿಸಿ, (ಹುಳಿ) ಮಾದಳಹಣ್ಣಿನ ರಸದಿಂದಾಗಲಿ (ಹುಳಿ) ದಾಳಿಂಬದ ರಸ ದಿಂದಾಗಲಿ ಅರೆದುಮಾಡಿದ ಗುಳಿಗೆಗಳು ಆಮವನ್ನು ಒಳ್ಳೇದಾಗಿ ಪಾಚನಮಾಡಿ, ಬೇಗನೆ ಅಗ್ನಿದೀಪನವನ್ನುಂಟುಮಾಡುತ್ತವೆ.

ಪಂಚ ಐದು ಲವಣಗಳೆಂದರೆ, ಕಾಚ, ಸೈಂಧವ, ಸಾಮುದ್ರ, ಬಿಡ, ಸೌವರ್ಚಲ (ಗ. ಸ.) ವ. ೭ ನಲ್ಲಿ ಕಾಚದ ಬದಲಾಗಿ 'ರೋಮಕ' ಹೇಳಲ್ಪಟ್ಟಿದೆ (ಪ 306)

12\. ಜ್ಞಾತ್ವಾ ತು ಪರಿಪಕ್ವಾಮಂ ಮಾರುತಗ್ರಹಣೀಗದಮ್ ।
ದೀಪನೀಯಯುತಂ ಸರ್ಪಿಃ ಪಾಯಯೇತಾಲ್ಪಶೋ ಭಿಷಕ್ ।
ಕಿಂಚಿತ್ಸಂಧುಕ್ಷಿತೇ ತ್ವಗ್ನೌ ಸಕ್ತವಿಣ್ಮೂತ್ರಮಾರುತಮ್ ।
ದ್ವಿತ್ರೀಣ್ಯಹಾನಿ ಸಸ್ನೇಹಂ ಸ್ನೇಹಾಭ್ಯಕ್ತಂ ನಿರೂಹಯೇತ್ ।
ತತ ಏರಣ್ಡತೈಲೇನ ಸರ್ಪಿಷಾ ತೈಲಕೇನ ವಾ ।
ಸಕ್ಷಾರೇಣಾನಿಲೇ ಶಾನ್ತೇ ಸ್ರಸ್ತದೋಷಂ ವಿರೇಚಯೇತ್ ।
ಶುದ್ಧಂ ರೂಕ್ಷಾಶಯಂ ಬದ್ಧವರ್ಚಸಂ ಚಾನುವಾಸಯೇತ್ ।
ದೀಪನೀಯಾಮ್ಲವಾತಘ್ನಸಿದ್ಧತೈಲೇನ ಮಾತ್ರಯಾ ।
ನಿರೂಢಶ್ಚ ವಿರಿಕ್ತಶ್ಚ ಸಮ್ಯಕ್ ಚೈವಾನುವಾಸಿತಃ ।
ಲಘ್ವನ್ನಪ್ರತಿಸಂಭುಕ್ತಃ ಸರ್ಪಿರಭ್ಯಾಸಯೇತ್ಪುನಃ । (ಚ. 660-61)

ವಾತಗ್ರಹಣೀ ಚಿಕಿತ್ಸೆ.

ವೈದ್ಯನು ಆಮ ಪಕ್ವವಾಯಿತೆಂತ ತಿಳಿದಮೇಲೆ, ವಾತಗ್ರಹಣಿಯಲ್ಲಿ ದೀಪನಕರವಾದ ಔಷಧಗಳನ್ನು ಸೇರಿಸಿ ತಯಾರಿಸಲ್ಪಟ್ಟ ಘೃತವನ್ನು ಅಲ್ಪಪ್ರಮಾಣದಲ್ಲಿ ಕುಡಿಸಬೇಕು. ಅಗ್ನಿ ಸ್ವಲ್ಪ ಚುರುಕಾದ ಮೇಲೆ ರೋಗಿಯಲ್ಲಿ ಹಿಡಕೊಂಡಿದ್ದ ಮಲಮೂತ್ರವಾಯುಗಳನ್ನು ಸಡಿಲಿಸುವದಕ್ಕಾಗಿ, ಆವನಿಗೆ ಸ್ನೇಹಾಭ್ಯಂಜನ ಮಾಡಿಸಿ, ಸ್ನೇಹಯುಕ್ತವಾದ ನಿರೂಹವಸ್ತಿಯನ್ನು ಎರಡು ಮೂರು ದಿನ ಕೊಡತಕ್ಕದ್ದು. ಆ ನಿರೂಹವಸ್ತಿಯಿಂದ ವಾಯು ಶಾಂತವಾಗಿ ದೋಷವು ಸಡಿಲಾದ ಮೇಲೆ ಹರಳೆಣ್ಣೆಯನ್ನಾಗಲಿ, (ವಿರೇಚನ ಔಷಧಗಳು ಸೇರಿದ) ಘೃತ ಅಥವಾ ತೈಲವನ್ನಾಗಲಿ, ಕ್ಷಾರಯುಕ್ತವಾಗಿ ಕೊಟ್ಟು, ವಿರೇಚನ ಮಾಡಿಸತಕ್ಕದ್ದು. ಶೋಧನ ಮಾಡಿಸಿದ ಮೇಲೆ ಪಕ್ವಾಶಯವು ಒಣಗಿ ಮಲ ಬದ್ಧವಾದರೆ, ದೀಪನಕರವಾದ ಮತ್ತು ವಾತ ನಾಶಕವಾದ ಔಷಧಗಳಿಂದಲೂ ಹುಳಿರಸಗಳಿಂದಲೂ ತಯಾರಿಸಲ್ಪಟ್ಟ ತೈಲದಿಂದ, ತಕ್ಕ ಪ್ರಮಾಣದಲ್ಲಿ, ಅನುವಾಸನವಸ್ತಿಯನ್ನು ಉಪಯೋಗಿಸಬೇಕು. ನಿರೂಹವಸ್ತಿಯನ್ನೂ ವಿರೇಚನವನ್ನೂ ಅನುವಾಸನವನ್ನೂ ಚನ್ನಾಗಿ ಉಪಯೋಗಿಸಿದನಂತರ, ಲಘುವಾದ ಭೋಜನ ವನ್ನು ಕೊಟ್ಟು, ಪುನಃ ಘೃತದ ಅಭ್ಯಾಸವನ್ನು ಮಾಡಿಸತಕ್ಕದ್ದು.

ವಾತೇಽಮ್ಲಂ ಸೈನ್ಧವೋಪೇತಂ ಪಿತ್ತೇ ಸ್ವಾದ್ವಮ್ಲಶರ್ಕರಮ್ ।
ಪಿಬೇತ್ತಕ್ರಂ ಕಫೇ ಚಾಪಿ ಕ್ಷಾರತ್ರಿಕಟುಸಂಯುತಮ್ ॥
ಹಿಂಗುಜೀರಯುತಂ ಘೋಲಂ ಸೈನ್ಧವೇನಾವಧೂಲಿತಮ್ ।
ಗ್ರಹಣ್ಯಶೋಽತಿಸಾರಘ್ನಂ ಭವೇದ್ವಾತಹರಂ ಪರಮ್ ॥
ರೋಚನಂ ಪುಷ್ಟಿದಂ ಬಲ್ಯಂ ಬಸ್ತಿಶೂಲವಿನಾಶನಮ್ ॥ (ಭಾ. ಪ್ರ. 330)

ಮಜ್ಜಿಗೆಯನ್ನು ಉಪಯೋಗಿಸುವ ವಿಧಾನ

ವಾತದಲ್ಲಿ ಮಜ್ಜಿಗೆಯು ಹುಳಿಯಾಗಿರಬೇಕು ಮತ್ತು ಅದರೊಂದಿಗೆ ಸೈಂಧವಲವಣ ವನ್ನು ಕೂಡಿಸಿಕೊಳ್ಳಬೇಕು. ಪಿತ್ತದಲ್ಲಿ ಮಜ್ಜಿಗೆ ಸಿಹಿಯುಕ್ತವಾದ ಹುಳಿಯಾಗಿರಬೇಕು ಮತ್ತು ಅದರೊಂದಿಗೆ ಸಕ್ಕರೆ ಕೂಡಿಸಿಕೊಳ್ಳಬೇಕು. ಕಫದಲ್ಲಿ ಮಜ್ಜಿಗೆಯೊಂದಿಗೆ ಯವ ಕ್ಷಾರ ಮತ್ತು ತ್ರಿಕಟುವಿನ ಚೂರ್ಣ ಕೂಡಿಸಿಕೊಳ್ಳಬೇಕು. ಕೆನೆ (ಬಾವೆ) ತೆಗೆಯದೆ ಮತ್ತು ನೀರು ಕೂಡಿಸದೆ ಕಡೆದ 'ಘೋಲ' ಎಂಬ ಮಜ್ಜಿಗೆಯನ್ನು, ಹುರಿದ ಇಂಗು, ಜೀರಿಗೆ, ಇವು ಗಳ ನುಣ್ಣಗಿನ ಚೂರ್ಣವನ್ನು ಮತ್ತು ಸೈಂಧವಲವಣದ ಪುಡಿಯನ್ನು ಕೂಡಿಸಿ, ಉಪಯೋಗಿ ಸುವದರಿಂದ ಗ್ರಹಣಿ, ಮೂಲವ್ಯಾಧಿ, ಅತಿಸಾರ, ಮೂತ್ರಾಶಯದ ಶೂಲೆ, ಇವುಗಳು ನಾಶವಾಗುವವು; ಅದು ವಾತಹರಗುಣದಲ್ಲಿ ಶ್ರೇಷ್ಠ, ರುಚಿಕರ, ಪುಷ್ಟಿಕರ, ಮತ್ತು ಬಲಕರ.

ಷರಾ ಹಸೀಮಜ್ಜಿಗೆಯ ಉಪಯೋಗದಿಂದ ಹೊಟ್ಟೆಯ ಕಫ ನಾಶವಾದರೂ ಕಂಠದಲ್ಲಿ ಕಫವುಂಟಾಗಿ, ಪೀನಸ-ಶ್ವಾಸ-ಕಾಸಾದಿ ರೋಗಗಳು ಸಂಭವಿಸುತ್ತವೆ, ಅದ್ದರಿಂದ ಮಜ್ಜಿಗೆಯನ್ನು ಕಾಯಿಸಿ ಉಪಯೋಗಿಸತಕ್ಕದ್ದು (ಭಾ ಪ್ರ 330)

ಪಿಪ್ಪಲೀ ಬೃಹತೀ ವ್ಯಾಘ್ರೀ ಯವಕ್ಷಾರಕಲಿಂಗಕಾಃ |
ಚಿತ್ರಕಂ ಶಾರಿವಾ ಪಾಠಾ ಶಟೀ ಲವಣಪಂಚಕಮ್ ||
ಪಿಪ್ಪಲ್ಯಾದಿ ಚೂರ್ಣ — ತಚ್ಚೂರ್ಣಂ ಪಾಯಯೇದ್ದಧ್ನಾ ಸುರಯೋಷ್ಣಾಮ್ಬುನಾ ಽಪಿ ವಾ |
ಮಾರುತಗ್ರಹಣೀದೋಷೇ ಶಮನಂ ಪರಮಂ ಮತಮ್ ||

(ಚಿ. ಸಾ. ಸಂ. 108)

ಹಿಪ್ಪಲಿ, ಗುಳ್ಳದ ಬೇರು, ಕಿರಿಗುಳ್ಳದ ಬೇರು, ಯವಕ್ಷಾರ, ಕೊಡಸಿಗನ ಬೀಜ (ಇಂದ್ರ ಜೀವಿ), ಚಿತ್ರಮೂಲ, ಸುಗಂಧಿಬೇರಿನ ಒಳಸಿಪ್ಪೆ, ಪಾಡಾವಳಿಗಡ್ಡೆ, ಸಣ್ಣಕಚೋರ ಮತ್ತು ಪಂಚಲವಣಗಳು, ಇವುಗಳ ಚೂರ್ಣವನ್ನು ಮೊಸರಿನೊಂದಿಗೆಯಾಗಲಿ, ಹೆಂಡದೊಂದಿಗೆ ಯಾಗಲಿ, ಬಿಸಿನೀರಿನೊಂದಿಗೆಯಾಗಲಿ ಪಾನಮಾಡಿಸುವದು ವಾತಗ್ರಹಣೀದೋಷದ ಶಮ ನಕ್ಕೆ ಉತ್ತಮವಾದ್ದು ಎಂತ ತಿಳಿದಿದ್ದಾರೆ.

ಷರಾ ಚರಕಸಂಹಿತೆಯಲ್ಲಿ ಇದೇ ಯೋಗವು ಕಾಣುತ್ತದ ಅದರಲ್ಲಿ ಶಟೀಸ್ಥಾನದಲ್ಲಿ ತುಂಬೆ ಉಂಟು, ಮತ್ತು ಅದರ ಉಪಯೋಗದಿಂದ ಕೋಷ್ಠವಾತ ಪರಿಹಾರವಾಗಿ ಅಗ್ನಿ ವೃದ್ಧಿಯಾಗುತ್ತದೆಂತ ಹೇಳಲ್ಪಟ್ಟಿದೆ (ಪು 663)

ತ್ರ್ಯೂಷಣತ್ರಿಫಲಾಕಲ್ಕೇ ಬಿಲ್ವಮಾತ್ರೇ ಗುಡಾತ್ಪಲೇ |
ತ್ರ್ಯೂಷಣಾದಿಘೃತ — ಸರ್ಪಿಷೋ ಽಷ್ಟಪಲಂ ಪಕ್ತ್ವಾ ಮಾತ್ರಾಂ ಮನ್ದಾನಲಃ ಪಿಬೇತ್ ||

(ಚ. 661)

ತ್ರಿಕಟು, ತ್ರಿಫಲೆ, ಇವು (ಅರ್ಧ ತೊಲೆ ಪ್ರಕಾರ) ಒಂದು ಪಲ, ಬೆಲ್ಲ ಒಂದು ಪಲ, ತುಪ್ಪ ಲ ಪಲ, ಇವುಗಳನ್ನು ಕೂಡಿಸಿ ಕಾಯಿಸಿದ ತುಪ್ಪವನ್ನು ಅಗ್ನಿಮಾಂದ್ಯವುಳ್ಳವನು ತಕ್ಕ ಪ್ರಮಾಣದಲ್ಲ ಪಾನಮಾಡತಕ್ಕದ್ದು.

ಷರಾ: ದ್ರವ ಉಕ್ತವಾಗದ್ದರಿಂದ ೩೨ ಪಲ ನೀರನ್ನು ಕೂಡಿಸಿ ಪಾಕಮಾಡುವದು

ಯವಾನೀವ್ಯೋಷಸಿನ್ಧೂತ್ಥಜೀರಕದ್ವಯಹಿಂಗುಜಮ್ |
ಹಿಂಗ್ವಷ್ಟಕ ಚೂರ್ಣ — ಆದ್ಯಗ್ರಾಸಾಶಿತಂ ಸಾಜ್ಯಂ ಚೂರ್ಣಂ ವಾತನುದಗ್ನಿಕೃತ್ ||

(ಚಿ. ಸಾ. ಸಂ. 108)

ಓಮ, ತ್ರಿಕಟು, ಸೈಂಧವಲವಣ, ಜೀರಿಗೆ, ಕರಿಜೀರಿಗೆ. (ಹುರಿದ)

ಇಂಗು, ಇವುಗಳ ಚೂರ್ಣವನ್ನು ಭೋಜನಕಾಲದಲ್ಲಿ ಪ್ರಥಮ ಕವಲದೊಂದಿಗೆ, ತುಪ್ಪ ಸಮೇತವಾಗಿ, ಸೇವಿಸಿದಲ್ಲಿ ವಾತ ಪರಿಹಾರವಾಗುವದಲ್ಲದೆ, ಅಗ್ನಿ ಉಂಟಾಗುವದು.

ವಲಾ XXನೇ ಅಧ್ಯಾಯದ 22ನೇ ಸಂಖ್ಯೆ ನೋಡಿ

ಧಾನ್ಯಾದಿ ಕಷಾಯ

ಧಾನ್ಯಬಿಲ್ವಬಲಾಶುಂಠೀತಾಲಪರ್ಣೀಶ್ಶೃತಂ ಜಲಮ್ |
ಸ್ಯಾದ್ವಾತಗ್ರಹಣೀದೋಷೇ ಸಾನಾಹೇ ಸಪರಿಗ್ರಹೇ ||

(ಚಿ. ಸಾ ಸಂ. 109)

ಕೊತ್ತುಂಬರಿ, ಬಿಲ್ವಪತ್ರೆಯ ಕಾಯಿ (ಅಥವಾ ಬೇರು), ಕಲ್ಲಂಗಡಲೆ ಬೇರು, ಶುಂಠಿ, ಒಡೇಸೋಪಿ, ಇವುಗಳ ಕಷಾಯವು ಆನಾಹಯುಕ್ತವಾದ ಮತ್ತು ಉಪ ದ್ರವಗಳಿಂದ ಕೂಡಿಕೊಂಡ ವಾತಗ್ರಹಣೀದೋಷದಲ್ಲಿ ಹಿತವಾದ್ದು.

ಶುಂಠೀಘೃತಗಳು

ಘೃತಂ ನಾಗರಕಲ್ಕೇನ ಸಿದ್ಧಂ ವಾತಾನುಲೋಮನಮ್ |
ಗ್ರಹಣೀಪಾಂಡುರೋಗಘ್ನಂ ಪ್ಲೀಹಕಾಸಜ್ವರಾಪಹಮ್ ||
ಏತ್ತ್ವೌಷಧಸ್ಯ ಗರ್ಭೇಣ ದಶಮೂಲಜಲೇ ಘೃತಮ್ |
ಘೃತಂ ಸಿಹನ್ತ್ಯಾಚ್ಛ್ವಯಥುಂ ಗ್ರಹಣೀಂ ಸಾಮವಾತಜಾಮ್ ||

(ಚಿ. ಸಾ. ಸಂ 111)

ಶುಂಠಿಯ ಕಲ್ಕದಿಂದ (ನೀರು ಕೂಡಿಸಿ) ಕಾಯಿಸಿದ ತುಪ್ಪವನ್ನು ಸೇವಿಸುವದರಿಂದ ವಾತದ ಗತಿಯು ಕ್ರಮಕ್ಕೆ ಬರುವದು ಮತ್ತು ಗ್ರಹಣಿ, ಪಾಂಡುರೋಗ, ಪ್ಲೀಹ, ಕೆಮ್ಮು, ಜ್ವರ, ಸಹ ಪರಿಹಾರವಾಗುವವು. ಶುಂಠಿಕಲ್ಕದಿಂದ ದಶಮೂಲಗಳ ಕಷಾಯದಲ್ಲಿ ಪಾಕ ಮಾಡಿದ ಘೃತವು ಶೋಫೆಯನ್ನೂ ಆಮವುಳ್ಳ ವಾತಗ್ರಹಣಿಯನ್ನೂ ನಾಶಮಾಡುವದು.

ಬೃಹಚ್ಚಾಂಗೇರಿ ಘೃತ

ನಾಗರಂ ಪಿಪ್ಪಲೀಮೂಲಂ ಚಿತ್ರಕಂ ಹಸ್ತಿಪಿಪ್ಪಲೀ |
ಶ್ವದಂಷ್ಟ್ರಾ ಪಿಪ್ಪಲೀ ಧಾನ್ಯಂ ಬಿಲ್ವಂ ಪಾಠಾ ಯವಾನಿಕಾ ||
ಚಾಂಗೇರೀಸ್ವರಸೇ ಸರ್ಪಿಃ ಕಲ್ಕೈರೇತೈರ್ವಿಪಾಚಯೇತ್ |
ಚತುರ್ಗುಣೇನ ದಧ್ನಾ ಚ ತದ್ಘೃತಂ ಕಫವಾತನುತ್ ||
ಅರ್ಶಾಂಸಿ ಗ್ರಹಣೀದೋಷಂ ಮೂತ್ರಕೃಚ್ಛ್ರಂ ಪ್ರವಾಹಿಕಾಮ್ |
ಗುದಭ್ರಂಶಾರ್ತಿಮಾನಾಹಮೇತತ್ಸರ್ಪಿರ್ವ್ಯಪೋಹತಿ ||

(ಚಿ. ಸಾ. ಸಂ. 111)

ಶುಂಠಿ, ಹಿಪ್ಪಲಿಮೂಲ, ಚಿತ್ರಮೂಲ, ಗಜಹಿಪ್ಪಲಿ, ನೆಗ್ಗಿಲಮುಳ್ಳು, ಹಿಪ್ಪಲಿ, ಕೊತ್ತುಂಬರಿ, ಬಿಲ್ವಪತ್ರೆ, ಪಾಡಾವಳಿಗಡ್ಡೆ, ಓಮ, ಇವುಗಳ ಕಲ್ಕದಿಂದ, ಪುಲ್ಲಂಪುರಚೆ(ಪುಳಿ ಯಾರ್ಲ)ಯ ರಸದಲ್ಲಿ, ನಾಲ್ಕು ಪಾಲು ಮೊಸರು ಕೂಡಿಸಿಕೊಂಡು, ಕಾಯಿಸಿದ ತುಪ್ಪವು ಕಫವಾತವನ್ನು ನಾಶಮಾಡುವದಲ್ಲದೆ, ಅರ್ಶಸ್ಸುಗಳು, ಗ್ರಹಣೀದೋಷ, ಮೂತ್ರಕೃಚ್ಛ್ರ, ಪ್ರವಾಹಿಕೆ, ಗುದಭ್ರಂಶದ ಪೀಡೆ, ಆನಾಹ, ಇವುಗಳನ್ನು ಪರಿಹರಿಸುವದು.

ವರಾ ಪುಲ್ಲಂಪುರಚೆಯ ರಸ ಸಹ ೪ ಪಾಲು ಸೇರಿಸಬೇಕೆಂತ (ರ. ರ 270)

ತಕ್ರಾರಿಷ್ಟ

ಯವಾನ್ಯಾಮಲಕೇ ಪಥ್ಯಾ ಮರಿಚಂ ತ್ರಿಪಲಾಂಶಿಕಮ್ ।
ಲವಣಾನಿ ಪಲಾಂಶಾನಿ ಪಂಚ ಚೈಕತ್ರ ಚೂರ್ಣಯೇತ್ ॥
ತಕ್ರಕಂಸಾಸುತಂ ಜಾತಂ ತಕ್ರಾರಿಷ್ಟಂ ಪಿಬೇನ್ನರಃ ।
ದೀಪನಂ ಶೋಥಗುಲ್ಮಾರ್ಶಃಕ್ರಿಮಿಮೇಹೋದರಾಪಹಮ್ ॥

(ಚ. 6?4)

ಓಮ, ನೆಲ್ಲಿಚಟ್ಟು, ಅಣಿಲೆಕಾಯಿ, ಕಾಳುಮೆಣಸು, ಇವು ನಾಲ್ಕು ಮೂರು ಪಲ ಪ್ರಕಾರ, ಐದು ಲವಣಗಳು ಒಂದೊಂದು ಪಲ ಪ್ರಕಾರ, ಕೂಡಿಸಿ ಚೂರ್ಣಿಸಿ, ಅದನ್ನು ಒಂದು ಆಢಕ (ಆಗಲೇ ಕಡೆದ ಸಿಹಿ) ಮಜ್ಜಿಗೆಯಲ್ಲಿ ಕದಡಿ, (ಗಡಿಗೆಯೊಳಗೆ ಹೊಯಿದು, ಬಾಯಿ ಕಟ್ಟಿ ಆರು ದಿನ ಇಟ್ಟು) ಹುಳಿಸಿದ ತಕ್ರಾರಿಷ್ಟವನ್ನು (ಪ್ರಮಾಣವರಿತು) ಪಾನಮಾಡುತ್ತಾ ಬಂದಲ್ಲಿ ಅಗ್ನಿದೀಪನ ಉಂಟಾಗುವದು, ಶೋಫೆ, ಗುಲ್ಮ, ಅರ್ಶಸ್ಸು, ಕ್ರಿಮಿ, ಪ್ರಮೇಹ, ಮತ್ತು ಉದರವ್ಯಾಧಿ ತೊಲಗುವವು.

ಪರಾ ಮಜ್ಜಿಗೆ ದ್ರವಪದಾರ್ಥವಾದ್ದರಿಂದ ಕಂಸ (ಆಢಕ) ಎಂದರೆ 128 ಪಲ (ಶಾಂ ನಾ. II-290)

13. ಸ್ವಸ್ಥಾನಗತಮುತ್ಕ್ಲಿಷ್ಟಮಗ್ನಿನಿರ್ವಾಪಕಂ ಭಿಷಕ್ ।
ಪಿತ್ತಂ ಜ್ಞಾತ್ವಾ ವಿರೇಕೇಣ ನಿರ್ಹರೇದ್ವಮನೇನ ವಾ ॥
ಅವಿದಾಹಿಭಿರನ್ನೈಶ್ಚ ಲಘುಭಿಸ್ತಿಕ್ತಸಂಯುತೈಃ ।
ಜಾಂಗಲಾನಾಂ ರಸೈರ್ಯೂಷೈರ್ಮುದ್ಗಾದೀನಾಂ ಖಿಡ್ವೈರಪಿ ॥
ದಾಡಿಮಾಮ್ಲೈಃ ಸಸರ್ಪಿಷ್ಕೈರ್ದೀಪನಗ್ರಾಹಿಸಂಯುತೈಃ ।
ತಸ್ಯಾಗ್ನಿಂ ದೀಪಯೇಚ್ಚೂರ್ಣೈಃ ಸರ್ಪಿರ್ಭಿರ್ವಾ ಸತಿಕ್ತಕೈಃ ।

ಪಿತ್ತಗ್ರಹಣೀ ಚಿಕಿತ್ಸೆ

(ಚ 664)

ಕೆದರಿ ಉಪದ್ರವಕಾರಿಯಾದ ಪಿತ್ತವು ತನ್ನ ಸ್ಥಾನಕ್ಕೆ ಹೋಗಿ ಅಗ್ನಿಯನ್ನು ನೊಂದಿಸುವದನ್ನು ತಿಳಿದು, ವೈದ್ಯನು ಆ ಪಿತ್ತವನ್ನು ವಿರೇಚನದಿಂದ ಹೊರಗೆ ಹಾಕಬೇಕು, ಅಥವಾ (ಊರ್ಧ್ವಮುಖವಾಗಿದ್ದರೆ) ವಾಂತಿಮಾಡಿಸಿ ತೆಗೆದುಬಿಡಬೇಕು. ಆ ಮೇಲೆ ವಿದಾಹಿಯಲ್ಲದ, ಲಘುವಾದ ಮತ್ತು ಕಹಿರಸ ಯುಕ್ತವಾದ (ಗಂಜಿ ಮುಂತಾದ) ಆಹಾರಗಳನ್ನು, ಜಾಂಗಲ ಪ್ರಾಣಿಗಳ ಮಾಂಸರಸಗಳನ್ನೂ ಹೆಸರು ಮುಂತಾದವುಗಳ ಸಾರುಗಳನ್ನೂ ಪಳಿದ್ಯಗಳನ್ನೂ ದಾಳಿಂಬದ ಹುಳಿ ಮತ್ತು ತುಪ್ಪಗಳೊಂದಿಗೆ, ಅಥವಾ ದೀಪನ ಮತ್ತು ಗ್ರಾಹಿಗುಣಗಳುಳ್ಳ ದ್ರವ್ಯಗಳ ಚೂರ್ಣಗಳನ್ನು, ಅಥವಾ (ಅದೇ ಗುಣಗಳುಳ್ಳ) ಕಹಿದ್ರವ್ಯಗಳ ಸೇರಿಕೆಯಿಂದ ತಯಾರಿಸಲ್ಪಟ್ಟ ತುಪ್ಪಗಳನ್ನು, ಕೊಟ್ಟು ಆ ರೋಗಿಯ ಅಗ್ನಿಯನ್ನು ಚುರುಕುಮಾಡತಕ್ಕದ್ದು.

ಪರಾ: ಚೂರ್ಣಗಳನ್ನು ಜೇನಿನಲ್ಲಿ ಕಲಸಿ ನೆಕ್ಕುವದು ಅಥವಾ ಬಿಸಿನೀರಿನೊಂದಿಗೆ ಕುಡಿಯುವದು

ರಸಾಂಜನಾದಿ ಚೂರ್ಣ

ರಸಾಂಜನಮತಿವಿಷಾ ವತ್ಸಕಸ್ಯ ಫಲತ್ವಚಮ್ ।
ನಾಗರಂ ಧಾತಕೀ ಚೈವ ಸಕ್ಷೌದ್ರಂ ತಂಡುಲಾಮ್ಬುನಾ ॥
ಪಿತ್ತಗ್ರಹಣೀದೋಷಾರ್ಶೋರಕ್ತಪಿತ್ತಾತಿಸಾರನುತ್ ॥

(ಚಿ. ಸಾ. ಸಂ. 111-112)

ರಸಾಂಜನ, ಅತಿವಿಡೆ, ಕೊಡಸಿಗನ ಬೀಜ ಮತ್ತು ತೊಗಟು, ಶುಂಠಿ, ಧಾತಕೀ ಕುಸುಮ, ಇವುಗಳ ಚೂರ್ಣವನ್ನು ಅಕ್ಕಚ್ಚಿ*ನೊಂದಿಗೆ, ಜೇನು ಸಮೇತವಾಗಿ, ಪಾನಮಾಡುವದರಿಂದ ಪಿತ್ತಗ್ರಹಣೀದೋಷ, ಅರ್ಶಸ್ಸು, ರಕ್ತಪಿತ್ತ ಮತ್ತು ಅತಿಸಾರ ನಾಶವಾಗುವವು.

* ೧ ಪಲ ಅಕ್ಕಿಕಡಿಗೆ ೮ ಪಲ ನೀರು ಹಾಕಿ ತಿಕ್ಕಿ ಶೋಧಿಸಿದ ನೀರು (ಚಿ ಸಾ ಸಂ 112)

ಪಾಠಾದಿ ಕಷಾಯ ಮತ್ತು ಚೂರ್ಣ

ಪಾಠಾವತ್ಸಕಬೀಜಾನಿ ಚಿತ್ರಕಂ ವಿಶ್ವಭೇಷಜಮ್ ।
ಪಿಬೇನ್ನಿಷ್ಕ್ವಾಥ್ಯ ಚೂರ್ಣಾನಿ ಕೃತ್ವಾ ಚೋಷ್ಣೇನ ವಾರಿಣಾ ॥
ಪಿತ್ತಶ್ಲೇಷ್ಮಾಭಿಭೂತಾನಾಂ ಗ್ರಹಣ್ಯಾಂ ಶೂಲಸುದ್ಧಿತಮ್ ॥
(ಚಿ. ಸಾ. ಸಂ. 112)

ಪಾಡಾವಳಿಗಡ್ಡೆ ಇಂದ್ರಜೇವಿ, ಚಿತ್ರಮೂಲ, ಶುಂಠಿ, ಇವುಗಳ ಕಷಾಯವನ್ನು, ಅಥವಾ ಅವುಗಳ ಚೂರ್ಣವನ್ನು ಬಿಸಿನೀರಿನೊಂದಿಗೆ, ಪಿತ್ತಶ್ಲೇಷ್ಮಗಳ ದೋಷ ಅಧಿಕವಾಗಿರುವ ಗ್ರಹಣಿಯಲ್ಲಿ ಪಾನಮಾಡಬೇಕು, ಅದರಿಂದ ಶೂಲೆ ಪರಿಹಾರವಾಗಿ ಹಿತವಾಗುವದು.

ನಾಗರಾದಿ ಚೂರ್ಣ

ನಾಗರಾತಿವಿಷೇ ಮುಸ್ತಂ ಧಾತಕೀಂ ಸರಸಾಂಜನಮ್ ।
ವತ್ಸಕತ್ವಕ್ಫಲಂ ಬಿಲ್ವಂ ಪಾಠಾಂ ಕಟುಕರೋಹಿಣೀಮ್ ॥
ಪಿಬೇತ್ಸಮಾಂಶಂ ತಚ್ಚೂರ್ಣಂ ಸಕ್ಷೌದ್ರಂ ತಂಡುಲಾಂಬುನಾ ।
ಪೈತ್ತಿಕೇ ಗ್ರಹಣೀದೋಷೇ ರಕ್ತಂ ಯಚ್ಚೋಪವೇಶ್ಯತೇ ॥
ಅರ್ಶಾಂಸಿ ಚ ಗುದೇ ಶೂಲಂ ಜಯೇಚ್ಚೈವ ಪ್ರವಾಹಿಕಾಮ್ ।
ನಾಗರಾದ್ಯಮಿದಂ ಚೂರ್ಣಂ ಕೃಷ್ಣಾತ್ರೇಯೇಣ ಪೂಜಿತಮ್ ॥
(ಚ. 665)

ಶುಂಠಿ ಅತಿವಿಡ, ಭದ್ರಮುಷ್ಟಿ, ಧಾತಕೀಕುಸುಮ, ರಸಾಂಜನ, ಇಂದ್ರಜೇವಿ, ಕೊಡಸಿಗನ ತೊಗಟು, ಬಿಲ್ವಪತ್ರೆ, ಪಾಡಾವಳಿಗಡ್ಡೆ, ಕಟುಕರೋಹಿಣಿ, ಇವುಗಳನ್ನು ಸಮಾಂಶವಾಗಿ ತೆಗೆದುಕೊಂಡು ಚೂರ್ಣಿಸಿ, ಆ ಚೂರ್ಣವನ್ನು ಅಕ್ಕಚ್ಚಿನೊಂದಿಗೆ, ಜೇನು ಕೂಡಿಸಿಕೊಂಡು, ಪಾನಮಾಡುವದರಿಂದ ಪಿತ್ತಗ್ರಹಣೀದೋಷ, ರಕ್ತಬೆರತ ಮಲ ಅರ್ಶಸ್ಸುಗಳು, ಆಸನದ ಶೂಲೆ, ಪ್ರವಾಹಿಕೆ ಸಹ ಜಯಿಸಲ್ಪಡುವವು. ಈ ನಾಗರಾದಿ ಚೂರ್ಣವು ಕೃಷ್ಣಾತ್ರೇಯರಿಂದ ಮನ್ನಿಸಲ್ಪಟ್ಟಂಥಾದ್ದು.

ಭೂನಿಂಬಾದಿ ಚೂರ್ಣ

ಭೂನಿಂಬಂ ಕಟುಕಂ ವ್ಯೋಷಂ ಮುಸ್ತಮಿನ್ದ್ರಯವಾನ್ಸಮಾನ್ ।
ದ್ವೌ ಚಿತ್ರಕಾದ್ವತ್ಸಕತ್ವಗ್ಭಾಗಾನ್ ಷೋಡಶ ಚೂರ್ಣಯೇತ್ ॥
ಗುಡಶೀತಾಮ್ಬುನಾ ಪೀತಂ ಗ್ರಹಣೀದೋಷಗುಲ್ಮನುತ್ ।
ಕಾಮಲಾಜ್ವರಪಾಂಡುತ್ವಮೇಹಾರುಚ್ಯತಿಸಾರನುತ್ ॥ (ಚ. 665)

ನೆಲಬೇವು, ಕಟುಕರೋಹಿಣಿ, ತ್ರಿಕಟು, ಭದ್ರಮುಷ್ಟಿ, ಇಂದ್ರಜೇವಿ, ಇವು ಸರೀತೂಕ, ಚಿತ್ರಮೂಲ ೨ ಭಾಗ, ಕೊಡಸಿಗನ ತೊಗಟು ೧೬ ಭಾಗ, ಈ ಪ್ರಮಾಣದಲ್ಲಿ ತೆಗೆದುಕೊಂಡು ಚೂರ್ಣಿಸಿ. ಆ ಚೂರ್ಣವನ್ನು ತಣ್ಣಗಾದ ಬೆಲ್ಲದ ನೀರಿನಿಂದ ಪಾನಮಾಡಿದಲ್ಲಿ,

ಗ್ರಹಣೀದೋಷ, ಗುಲ್ಮ, ಕಾಮಿಲೆ, ಜ್ವರ, ಪಾಂಡು, ಮೇಹ, ಅರುಚಿ, ಮತ್ತು ಅತಿಸಾರ ನಾಶವಾಗುವವು.

ಗುಡಾಂಬು ಕ್ರಮ

ಷರಾ ಬೆಲ್ಲದ ವರ್ಣ ಮತ್ತು ಸಿಹಿ ಬರುವಷ್ಟು ನೀರಿನಲ್ಲಿ ಬೆಲ್ಲವನ್ನು ಕದಡಿದ್ದು ಬೆಲ್ಲದ ನೀರು ಎಂತ ಚಿ ಸಾ ಸಂ (ಪು 112) ತೂಕದಲ್ಲಿ ನೀರಿನ ಎಂಟನೇ ಒಂದಂಶ ಬೆಲ್ಲ ಕೂಡಿಸಿದರೆ ಸಾಕು

ಪಾಠಾದಿಚೂರ್ಣ

ಪಾಠಾಬಿಲ್ವಾನಲವ್ಯೋಷಜಮ್ಬೂದಾಡಿಮಧಾತಕೀ |
ಕಟುಕಾತಿವಿಷಾಮುಸ್ತಾದಾರ್ವೀಭೂನಿಮ್ಬವತ್ಸಕೈಃ ||
ಸರ್ವೈರೇತೈಃ ಸಮಂ ಚೂರ್ಣಂ ಕೌಟಜಂ ತಂಡುಲಾಮ್ಬುನಾ |
ಸಕ್ಷೌದ್ರಂ ಚ ಪಿಬೇಚ್ಛರ್ದಿಜ್ವರಾತಿಸಾರಶೂಲವಾನ್ ||
ತೃಡ್ದಾಹಗ್ರಹಣೀದೋಷಾರೋಚಕಾನಲಸಾದಜಿತ್ |
(ಚಿ. ಸಾ. ಸಂ 112)

ಪಾಡಾವಳಿಗಡ್ಡೆ, ಬಿಲ್ವಪತ್ರೆಕಾಯಿ, ಚಿತ್ರಮೂಲ, ತ್ರಿಕಟು, ನೇರಳೆಮರದ ತೊಗಟೆ, ದಾಳಿಂಬದ ಹೀಚು, ಧಾತಕೀಕುಸುಮ, ಕಟುಕರೋಹಿಣಿ, ಅತಿವಿಷೆ, ಭದ್ರಮುಷ್ಟಿ, ಮರದರಿಸಿನ, ನೆಲಬೇವು, ಇಂದ್ರಜೀವಿ, ಇವುಗಳನ್ನು ಸಮಪಾಲಾಗಿ, ಮತ್ತು ಅವುಗಳ ಒಟ್ಟಕ್ಕೆ ಸರೀಪಾಲು ಕೊಡಸಿಗನ ತೊಗಟು, ತೆಗೆದುಕೊಂಡು ಚೂರ್ಣಿಸಿ, ಅಕ್ಕಚ್ಚಿನೊಂದಿಗೆ ಆ ಚೂರ್ಣವನ್ನು, ಜೇನು ಕೂಡಿಸಿಕೊಂಡು, ಪಾನಮಾಡಿದಲ್ಲಿ, ವಾಂತಿ, ಜ್ವರ, ಅತಿಸಾರ, ಶೂಲೆ ಬಾಯಾರಿಕೆ, ಉರಿ, ಗ್ರಹಣೀದೋಷ, ಅರುಚಿ, ಅಗ್ನಿಮಾಂದ್ಯ ಸಹ ನಾಶಿಯಾಗುವವು

ಚಂದನಾದಿಘೃತ

ಚನ್ದನಂ ಪದ್ಮಕೋಶೀರಂ ಪಾಠಾಂ ಮೂರ್ವಾಂ ಕುಟನ್ನಟಮ್ |
ಷಡ್ಗ್ರನ್ಥಾಶಾರಿವಾಸ್ಫೋತಾಸಪ್ತಪರ್ಣಾಟರೂಷಕಾನ್ ||
ಪಟೋಲೋದುಂಬರಾಶ್ವತ್ಥವಟಪ್ಲಕ್ಷಕಪೀತನಾನ್ |
ಕಟುಕಾರೋಹಿಣೀಂ ಮುಸ್ತಂ ನಿಮ್ಬಂ ಚ ದ್ವಿಪಲಾಂಶಿಕಮ್ ||
ದ್ರೋಣೇಽಪಾಂ ಸಾಧಯೇತ್ಪಾದಶೇಷೇ ಪ್ರಸ್ಥಂ ಘೃತಾತ್ಪಚೇತ್ |
ಕಿರಾತತಿಕ್ತೇನ್ದ್ರಯವವೀರಾಮಾಗಧಿಕೋತ್ಪಲೈಃ ||
ಕಲ್ಕೈರಕ್ಷಸಮೈಃ ಪೇಯಂ ತತ್ಪಿತ್ತಗ್ರಹಣೀಗದೇ |
ತಿಕ್ತಕಂ ಯದ್ಘೃತಂ ಚೋಕ್ತಂ ಕೌಷ್ಠಿಕೇ ತಚ್ಚ ದಾಪಯೇತ್ ||
(ಚ. 664, 665)

ಶ್ರೀಗಂಧ, ಪದ್ಮಕ, ಲಾಮಂಚ, ಪಾಡಾವಳಿಗಡ್ಡೆ, ಹಗ್ಗುರುಟಿಗೆಬೇರು (ಮಲ ಪೆರುಂ ಕುರುಂಬ), ಆನೆಮುಂಗು, ಬಜೆ, ಕರೀ ಸುಗಂಧಿಬೇರು, ಬಿಳೀ ಸುಗಂಧಿಬೇರು, ಏಳೆಲೆಬಾಳೆ (ಹಾಲೆ)ಯ ಕೆತ್ತೆ, ಆಡುಸೋಗೆಬೇರು, ಕಹಿಪಡುವಲು, ಅತ್ತಿ, ಅಶ್ವತ್ಥ, ಗೋಳಿ, ಬಸುರಿ, ಕಿರುಗೋಳಿ, ಈ ಐದು ಮರಗಳ ಚಕ್ಕೆಗಳು, ಕಟುಕರೋಹಿಣಿ, ಭದ್ರಮುಷ್ಟಿ, ಕಹಿಬೇವಿನ ಕೆತ್ತೆ, ಇವುಗಳನ್ನು ೨ ಪಲ ಪ್ರಕಾರ ತೆಗೆದುಕೊಂಡು ಕುಟ್ಟಿ, ೧೬ ಪ್ರಸ್ಥ ನೀರಿಟ್ಟು, ೪ ಪ್ರಸ್ಥಕ್ಕೆ ಬತ್ತಿಸಿ, ಶೋಧಿಸಿದ ಕಷಾಯದಲ್ಲಿ ೧ ಪ್ರಸ್ಥ ತುಪ್ಪವನ್ನು ಹೊಯಿದು, (ಕಲ್ಕವಾಗಿ) ನೆಲಬೇವು, ಇಂದ್ರಜೀವಿ, ಒರೆಲೆ, ಹಿಪ್ಪಲಿ, ನೀಲತಾವರೆ (ಅಥವಾ ನೈದಿಲೆ), ಇವುಗಳನ್ನು ೧ ಕರ್ಷ

ಪ್ರಕಾರ ತೆಗೆದುಕೊಂಡು ಮಾಡಿದ ಚೂರ್ಣವನ್ನು ಕಲಸಿ, ಪಾಕಮಾಡಿ ಶೋಧಿಸಿಟ್ಟುಕೊಂಡ ತುಪ್ಪವನ್ನು ಪಿತ್ತಗ್ರಹಣೀರೋಗದಲ್ಲಿ ಪಾನಮಾಡಬೇಕು. ಕುಷ್ಠರೋಗಕ್ಕೆ ಉಕ್ತವಾದ ತಿಕ್ತ ಘೃತವನ್ನು ಸಹ ಈ ರೋಗದಲ್ಲಿ ಕೊಡಬಹುದು.

14. ಗ್ರಹಣ್ಯಾಂ ಶ್ಲೇಷ್ಮದುಷ್ಟಾಯಾಂ ವಮಿತಸ್ಯ ಯಥಾವಿಧಿ |
ಕಟ್ವಮ್ಲಲವಣಕ್ಷಾರೈಸ್ತಿಕ್ತೈಶ್ಚಾಗ್ನಿಂ ವಿವರ್ಧಯೇತ್ | (ಚ. 666)

ಶ್ಲೇಷ್ಮಗ್ರಹಣಿಯ ಚಿಕಿತ್ಸೆ

ಕಫದೋಷದಿಂದ ಉಂಟಾದ ಗ್ರಹಣಿಯಲ್ಲಿ, ವಿಧಿಪ್ರಕಾರ ವಾಂತಿ ಮಾಡಿಸಿ, ಕಾರ, ಹುಳಿ, ಉಪ್ಪು, ಕಹಿ ಮತ್ತು ಕ್ಷಾರಗಳ ಉಪಯೋಗದಿಂದ ರೋಗಿಯ ಅಗ್ನಿಯನ್ನು ಹೆಚ್ಚಿಸಬೇಕು.

ಪರಾ ಉಪ್ಪು-ಕ್ಷಾರ-ಹುಳಿವಿಕಾರಗಳನ್ನು ಅನ್ನಪಾನಗಳಿಗೂ, ಔಷಧಗಳಿಗೂ ಹೆಚ್ಚಾಗಿ ಉಪಯೋಗಿಸಿ ಅಗ್ನಿಯನ್ನು ವೃದ್ಧಿಮಾಡುವದು (ಅ ಸಂ. II-202)

ಶುಂಠೀ ಮುಸ್ತಂ ವಿಡಂಗಂ ಚ ಸುರಾತಕ್ರೋಷ್ಣವಾರಿಣಾ |
ಶ್ಲೈಷ್ಮಿಕಂ ಗ್ರಹಣೀದೋಷಂ ಪೀತಂ ಹನ್ತ್ಯಗ್ನಿವರ್ಧನಮ್
(ಚಿ. ಸಾ. ಸಂ. 114)

ಶುಂಠ್ಯಾದಿಚೂರ್ಣ

ಶುಂಠಿ, ಭದ್ರಮುಷ್ಟಿ, ವಾಯುವಿಳಂಗ, ಇವುಗಳ ಚೂರ್ಣವನ್ನು ಹೆಂಡದೊಂದಿಗೆ, ಮಜ್ಜಿಗೆಯೊಂದಿಗೆ, (ಅಥವಾ) ಬಿಸಿನೀರಿನೊಂದಿಗೆ (ಕಲಸಿ) ಪಾನಮಾಡಿದಲ್ಲಿ ಕಫಗ್ರಹಣೀದೋಷ ಪರಿಹಾರವಾಗುವದು ಮತ್ತು ಅಗ್ನಿ ವೃದ್ಧಿಯಾಗುವದು

ದ್ರೋಣಂ ಮಧೂಕಪುಷ್ಪಾಣಾಂ ವಿಡಂಗಾನಾಂ ತತೋಽರ್ಧತಃ |
ಚಿತ್ರಕಸ್ಯ ತತೋಽರ್ಧಂ ಸ್ಯಾತ್ತಥಾ ಭಲ್ಲಾತಕಾಢಕಮ್ ||
ಮಂಜಿಷ್ಠಾತ್ರಿಪಲಂ ಚೈವ ತ್ರಿದ್ರೋಣೇಽಪಾಂ ವಿಪಾಚಯೇತ್ |
ದ್ರೋಣಶೇಷೇ ತು ತಚ್ಛೀತಂ ಮಧ್ವರ್ಧಾಢಕಸಂಯುತಮ್ |
ಏಲಾಮೃಣಾಲಾಗುರುಭಿಶ್ಚನ್ದನೇನ ಚ ರೂಷಿತೇ |
ಕುಂಭೇ ಮಾಸಸ್ಥಿತಂ ಜಾತಮಾಸವಂ ತಂ ಪ್ರಯೋಜಯೇತ್
ಗ್ರಹಣೀಂ ದೀಪಯತ್ಯೇಷ ಬೃಂಹಣಃ ಕಫಪಿತ್ತಜಿತ್ |
ಶೋಥಂ ಕುಷ್ಠಂ ಕಿಲಾಸಂ ಚ ಪ್ರಮೇಹಾಂಶ್ಚ ಪ್ರಣಾಶಯೇತ್
(ಚ. 666)

ಮಧ್ವಾಸವ

ಇಪ್ಪೆಹೂವು ೧೬ ಪ್ರಸ್ಥ, ವಾಯುವಿಳಂಗ ೮ ಪ್ರಸ್ಥ, ಚಿತ್ರಮೂಲ ೪ ಪ್ರಸ್ಥ, (ಶುದ್ಧ) ಗೇರುಕಾಯಿಯ ಸಿಪ್ಪೆ (ಚಟ್ಟು) ೪ ಪ್ರಸ್ಥ, ಮಂಜಿಷ್ಠ ೩ ಪಲ, ಇವುಗಳನ್ನು ಮೂರು ದ್ರೋಣ (೪೮ ಪ್ರಸ್ಥ) ನೀರಿನಲ್ಲಿ ಬೇಯಿಸಿ, ೧ ದ್ರೋಣಕ್ಕೆ ಬತ್ತುತ್ತಲೇ ಆ ಕಷಾಯವನ್ನು ಶೋಧಿಸಿ, ಅದು ತಣಿದ ಮೇಲೆ ೨ ಪ್ರಸ್ಥ ಜೇನನ್ನು ಬೆರಸಿ, ಏಲಕ್ಕಿ, ತಾವರೆದಂಟು, ಅಗಲುಗಂಧ ಮತ್ತು ಚಂದನ, ಇವುಗಳ ಚೂರ್ಣವನ್ನು (ನೀರಿನಿಂದರೆದು) ಒಂದು (ಮಣ್ಣಿನ) ಬಾನೆಯೊಳಗೆ ಲೇಪಿಸಿ, ಅದರಲ್ಲಿ ಆ ಕಷಾಯವನ್ನು ಹೊಯಿದು, ಬಾಯಿ ಕಟ್ಟಿ, ಒಂದು ತಿಂಗಳಕಾಲ ಇರಿಸಿದ್ದಲ್ಲಿ, ಅದು ಆಸವ ಆಗುವದು, ಅದನ್ನು (ಪ್ರಮಾಣವರಿತು) ಪ್ರಯೋಗಿಸುತ್ತಾ ಬಂದಲ್ಲಿ

ಗ್ರಹಣಿಯ (ಅಗ್ನಿಯ) ದೀಪನ ಉಂಟಾಗುವದು, ಕಫಪಿತ್ತ ಪರಿಹಾರವಾಗುವದು, ಮತ್ತು ಶೋಫ, ಕುಷ್ಠ, ಕಿಲಾಸ (ಬಿಳೀಕುಷ್ಠ), ಪ್ರಮೇಹ, ಈ ರೋಗಗಳು ನಾಶವಾಗುವವು. ಈ ಆಸವವು ಪುಷ್ಟಿಕರ.

ಷರಾ ಮಂಜಿಷ್ಠವನ್ನು ೭ ಪಲ ಕೂಡಿಸುವದಾಗಿ ವಾ. (ಪು. 333)

ಲಘುಮಧ್ವಾಸವ.

ಮಧೂಕಪುಷ್ಪಸ್ವರಸಂ ಶೃತಮರ್ದ್ಧಕ್ಷಯಿಾಕೃತಮ್ ।
ಕ್ಷೌದ್ರಪಾದಯುತಂ ಶೀತಂ ಪೂರ್ವವತ್ಸನ್ನಿಧಾಪಯೇತ್
ತಂ ಪಿಬನ್ ಗ್ರಹಣೀದೋಷಾನ್ ಜಯೇತ್ಸರ್ವಾನ್ ಹಿತಾಶನಃ ॥

(ಚ. 666, 667)

ಇಪ್ಪೆಹೂವಿನ ಸ್ವರಸವನ್ನು ಅರ್ಧಕ್ಕೆ ಬತ್ತಿಸಿ, ಅದು ತಣಿದ ಮೇಲೆ ಕಾಲಂಶ ಜೇನು ಕೂಡಿಸಿ, ಹಿಂದಿನ ಯೋಗದಲ್ಲಿ ಹೇಳಿದಂತೆ (ಏಲಾದಿಯ ಲೇಪಯುಕ್ತವಾದ ಬಾನೆಯಲ್ಲಿ ಒಂದು ತಿಂಗಳ ವರೆಗೆ) ಇರಿಸಿದ್ದಲ್ಲಿ, ಉಂಟಾಗುವ ಆಸವವನ್ನು ಕುಡಿಯುತ್ತಾ, ಪಥ್ಯದಲ್ಲಿ ಇರಲು, ಸರ್ವ ಗ್ರಹಣೀದೋಷಗಳು ಜಯಿಸಲ್ಪಡುವವು.

ಷರಾ ಸ್ವರಸ ಸಿಕ್ಕದಾಗ್ಗೆ ಒಣಗಿದ ಹೂವಿನ ಕಷಾಯವನ್ನು ಉಪಯೋಗಿಸುವದು

ದ್ರಾಕ್ಷೇಕ್ಷು-ಖರ್ಜೂರಗಳ ಆಸವ

ತದ್ವದ್ದ್ರಾಕ್ಷೇಕ್ಷುಖರ್ಜೂರಸ್ವರಸಾನಾಸುತಾನ್ ಪಿಬೇತ್ ॥ (ಚ. 667)

ಹಿಂದೆ ಹೇಳಿದ ಕ್ರಮದಲ್ಲಿ ದ್ರಾಕ್ಷೆರಸ, ಕಬ್ಬಿನ ರಸ, ಖರ್ಜೂರದ ರಸ, ಇವುಗಳ ಆಸವಗಳನ್ನು ತಯಾರಿಸಿ ಕುಡಿಯಬೇಕು.

ಪಿಂಡಾಸವ

ಪ್ರಾಸ್ಥಿಕಂ ಪಿಪ್ಪಲೀಂ ಪಿಷ್ಟ್ವಾ ಗುಡಂ ಮಧ್ವಂ ವಿಭೀತಕಾತ್ ।
ಉದಕಪ್ರಸ್ಥಸಂಯುಕ್ತಂ ಯವಪಲ್ಲೇ ನಿಧಾಪಯೇತ್ ॥
ತಸ್ಮಾತ್ಪಲಂ ಸುಜಾತಾತ್ತು ಸಲಿಲಾಂಜಲಿಸಂಯುತಮ್ ।
ಪಿಬೇತ್ಪಿಂಡಾಸವೋ ಹ್ಯೇಷ ರೋಗಾನೀಕವಿನಾಶನಃ ॥
ಸ್ವಸ್ಥೋಽಪ್ಯೇನಂ ಪಿಬೇನ್ಮಾಸಂ ನರಃ ಸಿದ್ಧಂ ರಸಾಯನಮ್ ।
ಇಚ್ಛಂಸ್ತೇಷಾಮನುತ್ಪತ್ತಿಂ ರೋಗಾಣಾಂ ಯೇ ಪ್ರಕೀರ್ತಿತಾಃ ॥

(ಚ. 667, 668)

೧ ಪ್ರಸ್ಥ ಹಿಪ್ಪಲಿಪುಡಿ, ೧ ಪ್ರಸ್ಥ ಬೆಲ್ಲ, ೧ ಪ್ರಸ್ಥ ಶಾಂತಿಕಾಯಿಯೊಳಗಿನ ತಿರುಳಿನ ಚೂರ್ಣ, ಇವುಗಳನ್ನು ೧ ಪ್ರಸ್ಥ ನೀರು ಕೂಡಿಸಿಕೊಂಡು ಅರೆದು, (ಗಡಿಗೆಯೊಳಗೆ ಹಾಕಿ) ಯವೆಯ (ಇಲ್ಲದಲ್ಲಿ ಭತ್ತದ) ರಾಶಿಯೊಳಗೆ ಹುಗಿದಿಡಬೇಕು (ಹಿಂದೆ ಹೇಳಿದ ಕ್ರಮದಲ್ಲಿ ಒಂದು ತಿಂಗಳು ಹುಗಿದಿಟ್ಟು, ಆಸವಮಾಡಿಟ್ಟುಕೊಳ್ಳಬೇಕು). ಆ ಆಸವದಿಂದ ೧ ಪಲವನ್ನು ೧ ಕುಡತೆ ನೀರಿನೊಂದಿಗೆ ಬೆರಸಿ, ಪಾನಮಾಡಬೇಕು. ಈ ಪಿಂಡಾಸವವು ರೋಗಸಮೂಹವನ್ನೇ ನಾಶ ಮಾಡುವದು. ಈ ರಸಾಯನವನ್ನು ಸ್ವಸ್ಥನಾಗಿರುವವನಾದರೂ, ಹಿಂದೆ ಹೇಳಲ್ಪಟ್ಟ ರೋಗಗಳು (ಗ್ರಹಣಿ, ರಕ್ತಪಿತ್ತ, ಆನಾಹ, ಕಫಹೃದ್ರೋಗ, ಪಾಂಡು ಮತ್ತು ಅಗ್ನಿಮಾಂದ್ಯ) ಹುಟ್ಟಬಾರದೆಂಬ ಇಚ್ಛೆಯುಳ್ಳವನು ಒಂದು ತಿಂಗಳ ಕಾಲ ಕುಡಿಯಬೇಕು.

ಮಧ್ವರಿಷ್ಟ

ನವೇ ಪಿಪ್ಪಲಿಮಧ್ವಾಕ್ತೇ ಕಲಸೇ ಽಗುರುಧೂಪಿತೇ ।
ಮಧ್ವಾಢಕಂ ಜಲಸಮಂ ಚೂರ್ಣಾನೀಮಾನಿ ದಾಪಯೇತ್ ॥
ಕುಡವಾರ್ಧಂ ವಿಡಂಗಾನಾಂ ಪಿಪ್ಪಲ್ಯಾಃ ಕುಡವಂ ತಥಾ ।
ಚತುರ್ಥಕಾಂಶಾನ್ ತ್ವಕ್‌ಕ್ಷೀರ್ಯೋಃ ಕೇಶರಂ ಮರಿಚಾನಿ ಚ ॥
ತ್ವಗೇಲಾಪತ್ರಕಶಟೀಕ್ರಮುಕಾತಿವಿಷಾಘನಮ್ ।
ಹರೇಣ್ವೇನು(?ಣ್ವಾಲು)ಕತೇಜೋಹ್ವಾಪಿಪ್ಪಲೀಮೂಲಚಿತ್ರಕಾನ್ ॥
ಕರ್ಷಿಕಾಂಸ್ತಾನ್ ಸ್ಥಿತಂ ಮಾಸಮತ ಊರ್ಧ್ವಂ ಪ್ರಯೋಜಯೇತ್ ।
ಮಂದಂ ಸಂದೀಪಯತ್ಯಗ್ನಿಂ ಕರೋತಿ ವಿಷಮಂ ಸಮಮ್ ॥
ಹೃತ್ಪಾಂಡುಗ್ರಹಣೀರೋಗಕುಷ್ಠಾರ್ಶಃಶ್ವಯಥುಜ್ವರಾನ್ ।
ವಾತಶ್ಲೇಷ್ಮಾಮಯಾಂಶ್ಚಾನ್ಯಾನ್ ಮಧ್ವರಿಷ್ಟೋ ವ್ಯಪೋಹತಿ

(ಚ. 668)

ಹಿಪ್ಪಲಿಪುಡಿ ಮತ್ತು ಜೇನನ್ನು ಕಲಸಿ ಹೊಸ ಗಡಿಗೆಯೊಳಗೆ ಲೇಪಿಸಿ. ಅಗಿಲುಗಂಧದ ಧೂಪಕೊಟ್ಟು, ಆ ಗಡಿಗೆಯೊಳಗೆ ೧ ಆಢಕ ಜೇನು, ೧ ಆಢಕ ನೀರು ಹೊಯಿದು, ಮುಂದೆ ಹೇಳುವ ಚೂರ್ಣಗಳನ್ನು ಅದರೊಂದಿಗೆ ಕಲಸಿ, ಅದರ ಬಾಯಿಯನ್ನು ಮುಚ್ಚಿ, ಕಟ್ಟಿ, ಧಾನ್ಯ ರಾಶಿಯೊಳಗೆ ೧ ತಿಂಗಳ ಪರ್ಯಂತ ಇಟ್ಟನಂತರ, ಆ ಅರಿಷ್ಟವನ್ನು ಪಾನಮಾಡುವದರಿಂದ ಮಂದವಾಗಿದ್ದ ಅಗ್ನಿಯು ಚುರುಕಾಗುವದು; ವಿಷಮವಾಗಿದ್ದ ಅಗ್ನಿಯು ಸಮವಾಗುವದು ಈ ಮಧ್ವರಿಷ್ಟವು ಹೃದ್ರೋಗ, ಪಾಂಡು, ಗ್ರಹಣೀರೋಗ, ಕುಷ್ಠ, ಮೂಲವ್ಯಾಧಿ, ಶೋಫ, ಜ್ವರ ಮತ್ತು ಬೇರೆ ವಾತಕಫಗಳಿಂದುಂಟಾದ ರೋಗಗಳನ್ನು ಪರಿಹರಿಸುವದು. ಚೂರ್ಣ ದ್ರವ್ಯಗಳು — ವಾಯುವಿಳಂಗ ಅರ್ಧ ಕುಡವ, ಹಿಪ್ಪಲಿ ೧ ಕುಡವ, ಬಿದಿರುಪ್ಪು, ನಾಗ ಕೇಸರ ಮತ್ತು ಕಾಳುಮೆಣಸು ೧ ಪಲ ಪ್ರಕಾರ, ಲವಂಗಪಟ್ಟೆ, ಏಲಕ್ಕಿ, ದಾಲ್ಚಿನಿಎಲೆ, ಸಣ್ಣಕಚೋರ ಲೋಧ್ರದ ಪಟ್ಟೆ, ಅತಿವಿಷೆ, ಭದ್ರಮುಷ್ಟಿ, ರೇಣಿಕೆಬೀಜ, ಸುರಸುರಿಕೆ, ಭವಂಗ ಬೀಜ (ಮಲ. ಚರುಪುನ್ನರಿ), ಹಿಪ್ಪಲಿಮೂಲ, ಚಿತ್ರಮೂಲ, ಇವು ೧ ಕರ್ಷ ಪ್ರಕಾರ, ತೆಗೆದು ಕೊಂಡು ಚೂರ್ಣಿಸಿ ಸೇರಿಸುವದು.

ಸಂ॰ 'ಹರೇಣ್ವೇನುಕ' ಎಂಬಲ್ಲಿ 'ಹರೇಣ್ವೇಲುಕ' ಎಂತ ಬಹಳರು ಸ್ವೀಕರಿಸಿಕೊಂಡದ್ದು ಕಾಣುತ್ತದೆ. ತಿ ಸಾ ಸಂ ದಲ್ಲಿ "ಹರೇಣ್ವೇಲೀತ್ರು" ಎಂತ ಕಾಣುತ್ತದೆ (ಪು 110)

ಪಿಪ್ಪಲೀಮೂಲಾದಿ ಚೂರ್ಣ, ಘೃತ ಮುಂತಾದ್ದು

ಸಮೂಲಾಂ ಪಿಪ್ಪಲೀಂ ಕ್ಷಾರೌ ದ್ವೌ ಪಂಚ ಲವಣಾನಿ ಚ ।
ಮಾತುಲುಂಗಾಭಯಾರಾಸ್ನಾಶಟೀಮರಿಚನಾಗರಮ್ ॥
ಕೃತ್ವಾ ಸಮಾಂಶಂ ತಚ್ಚೂರ್ಣಂ ಪಿಬೇತ್ಪ್ರಾತಃ ಸುಖಾಮ್ಬುನಾ ।
ಶ್ಲೈಷ್ಮಿಕೇ ಗ್ರಹಣೀದೋಷೇ ಬಲವರ್ಣಾಗ್ನಿವರ್ಧನಮ್ ॥
ಏತೈರೇವೌಷಧೈಃ ಸಿದ್ಧಂ ಸರ್ಪಿಃ ಪೇಯಂ ಸಮಾರುತೇ ।
ಗೌಲ್ಮಿಕೇ ಷಟ್ಪಲಂ ಪ್ರೋಕ್ತಂ ಭಲ್ಲಾತಕಘೃತಂ ಚ ಯತ್ ॥

(ಚ. 668)

ಹಿಪ್ಪಲಿಮೂಲ, ಹಿಪ್ಪಲಿ, ಎರಡು ಕ್ಷಾರಗಳು, ಐದು ಲವಣಗಳು, ಮಾದಳ*, ಆಣಿಲೆಕಾಯಿ, ರಾಸ್ಮೆಗಡ್ಡೆ (ಅರತೆ), ಸಣ್ಣಕಚೋರ, ಕಾಳುಮೆಣಸು, ಶುಂಠಿ, ಇವುಗಳನ್ನು ಸಮಾಂಶವಾಗಿ ತೆಗೆದುಕೊಂಡು ನುಣ್ಣಗಿನ ಚೂರ್ಣ ಮಾಡಿ, ಆ ಚೂರ್ಣವನ್ನು ಪ್ರತಿ ದಿನ ಬೆಳಿಗ್ಗೆ ಸುಖವಾದ ಬಿಸಿನೀರಿನಿಂದ ಪಾನಮಾಡುತ್ತಾ ಬರಲು, ಕಫಗ್ರಹಣೀದೋಷವು ಪರಿಹಾರವಾಗುವದು, ಬಲ, ವರ್ಣ ಮತ್ತು ಅಗ್ನಿ ವೃದ್ಧಿಯಾಗುವವು. ವಾತಕೂಡಿಕೊಂಡಲ್ಲಿ ಈ ಔಷಧಗಳಿಂದಲೇ ಘೃತವನ್ನು ಕಾಯಿಸಿ ಪಾನಮಾಡಬೇಕು, ಅಥವಾ ಗುಲ್ಮರೋಗದಲ್ಲಿ ಉಕ್ತವಾದ ಷಟ್ಪಲಘೃತವನ್ನಾಗಲಿ, ಭಲ್ಲಾತಕಘೃತವನ್ನಾಗಲಿ ಪಾನಮಾಡತಕ್ಕದ್ದು.

* ಮಾದಳದ ಹೂವಿನಲ್ಲಿಯೂ ಕೇಸರದಲ್ಲಿಯೂ ಗ್ರಾಹಿಗುಣ ಹೆಚ್ಚಾದಾಗ್ಯೂ, ಅವುಗಳನ್ನು ಬೇಕಾದಷ್ಟು ಸಂಗ್ರಹಿಸುವದು ಕಷ್ಟವಾದ್ದರಿಂದ, ಅದರ ಬೇರನ್ನು ಉಪಯೋಗಿಸಬಹುದು ಕೆಲವರು ಅದರ ಎಲೆಗಳ ನಾರನ್ನೂ, ಕೆಲವರು ಚಿಗುರುಗಳನ್ನೂ ಉಪಯೋಗಿಸುತ್ತಾರೆಂತ ಕಾಣುತ್ತದೆ

ತ್ರಿಫಲಾದಿಕ್ಷಾರ.

ತ್ರಿಫಲಾಂ ಕಟಭೀಂ ಚವ್ಯಂ ಬಿಲ್ವಮಧ್ಯಮಯೋರಜಃ ।
ರೋಹಿಣೀಂ ಕಟುಕಾಂ ಮುಸ್ತಂ ಕುಷ್ಠಂ ಪಾಠಾಂ ಚ ಹಿಂಗು ಚ ॥
ಮಧುಕಂ ಮುಷ್ಕಕಯವಕ್ಷಾರೌ ತ್ರಿಕಟುಕಂ ವಚಾಮ್ ।
ವಿಡಂಗಂ ಪಿಪ್ಪಲೀಮೂಲಂ ಸ್ವರ್ಜಿಕಾಂ ನಿಮ್ಬಚಿತ್ರಕೌ ।
ಮೂರ್ವಾಜಮೋದೇನ್ದ್ರಯವಾನ್ ಗುಡೂಚೀಂ ದೇವದಾರು ಚ ।
ಕಾರ್ಷಿಕಂ ಲವಣಾನಾಂ ಚ ಪಂಚಾನಾಂ ಪಲಿಕಾನ್ ಪೃಥಕ್ ॥
ಭಾಗಾನ್ ದಧ್ನಿ ತ್ರಿಕುಡವೇ ಘೃತತೈಲೇನ ಮೂರ್ಛಿತಾನ್ ।
ಅನ್ತರ್ಧೂಮಂ ಶನೈರ್ದಗ್ಧ್ವಾ ತಸ್ಮಾತ್ಪಾಣಿತಲಂ ಪಿಬೇತ್ ॥
ಸರ್ಪಿಷಾ ಕಫವಾತಾರ್ಶೋಗ್ರಹಣೀಪಾಂಡುರೋಗವಾನ್ ।
ಪ್ಲೀಹಮೂತ್ರಗ್ರಹಶ್ವಾಸಹಿಕ್ಕಾಕಾಸಕ್ರಿಮಿಜ್ವರಾನ್ ॥
ಶೋಷಾತಿಸಾರೌ ಶ್ವಯಥುಂ ಪ್ರಮೇಹಾನಾಹಹೃದ್ಗ್ರಹಾನ್ ।
ಹನ್ಯಾತ್ಸರ್ವವಿಷಂ ಚೈವ ಕ್ಷಾರೋಽಗ್ನಿಜನನೋ ವರಃ ॥
ಜೀರ್ಣೈ(?ರ್ಣೇ)ರಸ್ಮೈವಾರ್ ಮಧುರೈರನ್ನಂ ಸ್ಯಾತ್ಪಯಸಾಪಿ ವಾ ।
(ಚ. ೬೭೦)

ತ್ರಿಫಲೆ, ದದ್ದಾಲದ ಚಕ್ಕೆ, ಕಾಡುಮೆಣಸಿನ ಬೇರು, ಬಿಲ್ವಪತ್ರೆಕಾಯಿಯ ತಿರಳು, ಕಬ್ಬಿಣದ ದೂಳು, ನೇರಳೆಕೆತ್ತೆ, ಕಟುಕರೋಹಿಣಿ, ಭದ್ರಮುಷ್ಟಿ, ಚಂಗಲಕೋಷ್ಠ, ಪಾಡಾವಳಿಗಡ್ಡೆ, ಹಿಂಗು, ಜ್ಯೇಷ್ಠಮಧು, ಮಗ್ಗಾರ್ತಿಚಕ್ಕೆ, ಯವಕ್ಷಾರ, ತ್ರಿಕಟು, ಬಜೆ, ವಾಯುವಿಳಂಗ, ಹಿಪ್ಪಲಿಮೂಲ, ಸ್ವರ್ಜಿಕಾಕ್ಷಾರ, ಕಹಿಬೇವಿನ ನಾರು, ಚಿತ್ರಮೂಲ, ಹೆಗ್ಗುರುಟಿಗೆ (ಮಲ ಪೆರುಂಕುರುಂಬ), ಅಜಮೋದ, ಇಂದ್ರಜೇವಿ, ಅಮೃತಬಳ್ಳಿ, ದೇವದಾರ, ಇವು ಒಂದೊಂದು ಕರ್ಷ ಪ್ರಕಾರ, ಪಂಚ ಲವಣಗಳು ಒಂದೊಂದು ಪಲ ಪ್ರಕಾರ, ಕೂಡಿಸಿ ಮಾಡಿದ ಚೂರ್ಣವನ್ನು, ತುಪ್ಪ ಮತ್ತು ಎಳ್ಳೆಣ್ಣೆ (ಒಂದೂವರೆ ಕುಡತೆ ಪ್ರಕಾರ) ಕೂಡಿಸಿಕೊಂಡು, ಮೂರು ಕುಡತೆ ಮೊಸರಿನೊಂದಿಗೆ ಕಲಸಿ, ಗಡಿಗೆಯಲ್ಲಿ ಹಾಕಿ ಒಲೆ ಮೇಲೆ ಇಟ್ಟು (ಮೊಸರಿನ ನೀರು ಆರಿ (ಕರಟುವ ಲಕ್ಷಣವಾದ) ಹೊಗೆ ಹೊರಡಲಿಕ್ಕೆ ಆರಂಭವಾದ ಕೂಡಲೆ), ಹೊಗೆ

ಹೊರಗೆ ಹೋಗದಂತೆ ಸರಿಯಾಗಿ ಬಾಯಿಮುಚ್ಚಿ, ಮೆಲ್ಲನೆ ಸುಟ್ಟು, ಬಿಸಿಯಾರಿದ ಮೇಲೆ ಅರದು ಪುಡಿಮಾಡಿಟ್ಟುಕೊಂಡು, ಆ ಕ್ಷಾರವನ್ನು, ೧ ಕರ್ಷ ಪ್ರಕಾರ, ತುಪ್ಪದೊಂದಿಗೆ ಕಲಸಿ ಪಾನಮಾಡುತ್ತಾ ಬರಲು, ಕಫವಾತ, ಅರ್ಶಸ್ಸು, ಗ್ರಹಣಿ, ಪಾಂಡು, ಪ್ಲೀಹ ವ್ಯಾಧಿ, ಮೂತ್ರಕಟ್ಟು, ಉಬ್ಬಸ, ಬಿಕ್ಕಟ್ಟು, ಕೆಮ್ಮು, ಕೃಮಿ, ಜ್ವರ, ಕ್ಷಯ, ಅತಿಸಾರ, ಶೋಫೆ, ಪ್ರಮೇಹ, ಹೊಟ್ಟೆಯುಬ್ಬರ, ಎದೆ ಹಿಡಕೊಳ್ಳುವದು, ಮತ್ತು ಸರ್ವ ವಿಷಗಳು ಪರಿಹಾರವಾಗುವವು. ಈ ಕ್ಷಾರವು ಅಗ್ನಿಯನ್ನುಂಟುಮಾಡುವದಕ್ಕೆ ಶ್ರೇಷ್ಠವಾದದ್ದು. ಔಷಧ ಜೀರ್ಣವಾದಾಗ್ಗೆ (ಹಸಿವು ಉಂಟಾದಾಗ್ಗೆ) ರೋಗಿಯು ಸಿಹಿಯಾದ ರಸಗಳಿಂದ ಅಥವಾ ಹಾಲಿಸಿಂದ ಉಣ್ಣತಕ್ಕದ್ದು.

ಸರಾ 'ಅಯೋರಜಃ' ಎಂದರೆ 'ಕಬ್ಬಿಣದ ಭಸ್ಮ' ಎಂತ ಅರ್ಥ ಬರೆಯುತ್ತಾರೆ. ಆದರೆ ಚರಕನ ಕಾಲದಲ್ಲಿ ಈಗಿನ ಭಸ್ಮಕ್ರಮು ಇದ್ದ ಹಾಗೆ ಕಾಣುವದಿಲ್ಲ. ಅದಲ್ಲದ ಯೋಗದಲ್ಲಿ ಪಂಚಲವಣಗಳು, ಕ್ಷಾರಗಳು ಮುಂತಾದ ದ್ರವ್ಯಗಳು ಇರುವದರಿಂದ, ಶುದ್ಧಮಾಡಿಕೊಂಡ ಕಬ್ಬಿಣವನ್ನು ಅರದಿಂದ ಉಜ್ಜಿ ತೆಗೆದ ನುಣ್ಣಗಿನ ಚೂರ್ಣವನ್ನೇ ಉಪಯೋಗಿಸಬಹುದೆಂತ ಕಾಣುತ್ತದೆ. ಭಸ್ಮವನ್ನು ಉಪಯೋಗಿಸುವದಕ್ಕೆ ಆಕ್ಷೇಪವಿಲ್ಲ.

15 ತ್ರಿದೋಷೇ ವಿಧಿವದ್ವೈದ್ಯಃ ಪಂಚ ಕರ್ಮಾಣಿ ಕಾರಯೇತ್ |
ಘೃತಕ್ಷಾರಾಸವಾರಿಷ್ಟಾನ್ ದದ್ಯಾಚ್ಚಾಗ್ನಿವಿವರ್ಧನಾನ್ ||
ಕ್ರಿಯಾ ಯಾ ಚಾನಿಲಾದೀನಾಂ ನಿರ್ದಿಷ್ಟಾ ಗ್ರಹಣೀಂ ಪ್ರತಿ |
ವ್ಯತ್ಯಾಸಾತ್ತಾಂ ಸಮಸ್ತಾಂ ಚ ಕುರ್ಯಾದ್ದೋಷವಿಶೇಷವಿತ್
ಸ್ನೇಹನಂ ಸ್ವೇದನಂ ಶುದ್ಧಿರ್ಲಂಘನಂ ದೀಪನಂ ಚ ಯತ್ |
ಚೂರ್ಣಾನಿ ಲವಣಕ್ಷಾರಮಧ್ವರಿಷ್ಟಸುರಾಸವಾಃ ||
ವಿವಿಧಾಸ್ತಕ್ರಯೋಗಾಶ್ಚ ದೀಪನಾನಾಂ ಚ ಸರ್ಪಿಷಾಮ್
ಗ್ರಹಣೀರೋಗಿಭಿಃ ಸೇವ್ಯಾಃ ಕ್ರಿಯಾಂ ಚಾವಸ್ಥಿಕೀಂ ಶೃಣು |
ಷ್ಠೀವನಂ ಶ್ಲೈಷ್ಮಿಕೇ ರೂಕ್ಷಂ ದೀಪನಂ ತಿಕ್ತಸಂಯುತಮ್ |
ಸಕೃದ್ರೂಕ್ಷಂ ಸಕೃತ್ಸ್ನಿಗ್ಧಂ ಕೃಶೇ ಬಹುಕಫೇ ಹಿತಮ್
ಪರೀಕ್ಷ್ಯಾಮಂ ಶರೀರಸ್ಯ ದೀಪನಂ ಸ್ನೇಹಸಂಯುತಮ್
ದೀಪನಂ ಬಹುಪಿತ್ತಸ್ಯ ತಿಕ್ತಂ ಮಧುರಸಂಯುತಮ್ |
ಬಹುವಾತಸ್ಯ ತು ಸ್ನೇಹಲವಣಾಮ್ಲಯುತಂ ಹಿತಮ್
(ಚ. 670, 671)

ತ್ರಿದೋಷಜ
ಗ್ರಹಣೀಚಿಕಿತ್ಸೆ

ತ್ರಿದೋಷಜಗ್ರಹಣಿಯಲ್ಲಿ ವೈದ್ಯನು (ವಮನ-ವಿರೇಚನ-ಅನುವಾಸನ-ನಿರೂಹಣ-ನಸ್ಯ ಎಂಬ) ಪಂಚಕರ್ಮಗಳನ್ನು (ರೋಗಿಯ ಬಲವನ್ನೂ ದೋಷಗಳನ್ನೂ ನೋಡಿಕೊಂಡು) ವಿಧಿಪ್ರಕಾರ ಮಾಡಿಸಿದನಂತರ, ಅಗ್ನಿಯನ್ನು ವೃದ್ಧಿಮಾಡತಕ್ಕ ತುಪ್ಪ-ಕ್ಷಾರ-ಆಸವ-ಅರಿಷ್ಟ ಗಳನ್ನು ಕೊಡತಕ್ಕದ್ದು, ಮತ್ತು ವಾತಾದಿದೋಷಭೇದದ ಮೇಲೆ ಗ್ರಹಣೀರೋಗಕ್ಕೆ ಪ್ರತ್ಯೇಕವಾಗಿ ಹೇಳಲ್ಪಟ್ಟ ಕ್ರಿಯೆಗಳನ್ನೇ ದೋಷಗಳ ಬಲಾಬಲಕ್ಕೆ ತಕ್ಕ ಹಾಗೆ ಬೆರಿಸಿ ನಡಿಸತಕ್ಕದ್ದು. ಸ್ನೇಹನ, ಸ್ವೇದನ, ಶೋಧನ, ಲಂಘನ, ಮತ್ತು ದೀಪನ ಗುಣವುಳ್ಳ ಚೂರ್ಣ ಗಳು, ಉಪ್ಪು, ಕ್ಷಾರ, ಮಧ್ವರಿಷ್ಟ, ಮದ್ಯ, ಆಸವ, ದೀಪನಕರವಾದ ಘೃತಗಳ ಯೋಗ

ಗಳು ಮತ್ತು ನಾನಾ ತಕ್ರಯೋಗಗಳು (ಮಜ್ಜಿಗೆಯ ಉಪಯೋಗಕ್ರಮಗಳು), ಇವುಗಳನ್ನೆಲ್ಲ ಗ್ರಹಣೀರೋಗಿಗಳು ಸೇವಿಸತಕ್ಕದ್ದು ಅವಸ್ಥಾವಿಶೇಷದಲ್ಲಿ ನಡಿಸತಕ್ಕ ಪ್ರತಿಕ್ರಿಯೆಯು ಹೇಳಲ್ಪಡುತ್ತದೆ:— ಕಫ ಪ್ರಬಲವಾಗಿರುವಲ್ಲಿ ಕಫ ಉಗುಳಿಸುವ ಕ್ರಮ ಮತ್ತು ಕಹಿದ್ರವ್ಯಗಳಿಂದ ಯುಕ್ತವಾದ ರೂಕ್ಷಗುಣವುಳ್ಳ ದೀಪನಯೋಗಗಳು; ಕಫ ಬಹಳವಾಗಿರುವ ರೋಗಿಯು ಕೃಶನಾಗಿದ್ದರೆ ಒಮ್ಮೆ ರೂಕ್ಷ, ಒಮ್ಮೆ ಸ್ನಿಗ್ಧ; ಶರೀರದಲ್ಲಿ ಆಮವಿಲ್ಲದ್ದನ್ನು ತಿಳಿದು, ಸ್ನೇಹಯುಕ್ತವಾದ ದೀಪನ; ಪಿತ್ತವು ಬಹಳವಾದಾಗ್ಗೆ ಸಿಹಿಕೂಡಿದ ಕಹಿಯಾದ ದೀಪನ; ವಾತವು ಅಧಿಕವಾಗಿದ್ದಾಗ್ಗೆ ಸ್ನೇಹ, ಉಪ್ಪು, ಮತ್ತು ಹುಳಿ ಕೂಡಿದ ದೀಪನ (ಹುಳಿ-ಉಪ್ಪು ಕೂಡಿದ ಸ್ನೇಹ ಎಂತ ವಾ. 314); ಈ ಕ್ರಮದಲ್ಲಿ ಚಿಕಿತ್ಸೆ ನಡಿಸುವದು ಹಿತವಾಗುತ್ತದೆ.

ಶತಾವರ್ಯಾದಿ ಘೃತ

ಶತಾವರೀ ಚನ್ದನಪದ್ಮಕೋತ್ಪಲಂ ಪ್ರಿಯಂಗುಪಾಠಾಮಗಧಾಸ್ಥಿರಾಭಿಃ ।
ಬಿಲ್ವಾಜಮೋದಾತಿವಿಷಾ ಸಮಂಗಾ ಜೀವನ್ತಿವಹ್ನೀನ್ದ್ರಯವೈಃ ಸುಪಿಷ್ಟೈಃ
ಘೃತಂ ಕಷಾಯೇ ತು ಕಲಿಂಗಕಾನಾಂ ಪಕ್ವಂ ನಿಹನ್ಯಾದ್ಗ್ರಹಣೀಂ ತ್ರಿದೋಷಾಮ್ ।
ಪಿತ್ತಾತಿಸಾರಂ ರುಧಿರಪ್ರವಾಹಂ ತಥಾರ್ಶಸೋ ದೋಷಸಮೂಹಬನ್ಧಮ್ ॥
(ಚಿ. ಸಾ ಸಂ 118)

ಶತಾವರಿ, ಶ್ರೀಗಂಧ, ಪದ್ಮಕ, ನೀಲತಾವರೆ, ಪ್ರಿಯಂಗು, ಪಾಡಾವಳಿಗಡ್ಡೆ, ಹಿಪ್ಪಲಿ, ಮೂವೆಲೆ, ಬಿಲ್ವ, ಅಜಮೋದ, ಅತಿವಿಷ, ನಾಚಿಕೆಸೊಪ್ಪಿನ ಗಿಡ, ಜೀವನ್ತಿ, ಚಿತ್ರಮೂಲ, ಇಂದ್ರಜೀವಿ, ಇವುಗಳನ್ನು ಚನ್ನಾಗಿ ಚೂರ್ಣಿಸಿ, ಆ ಕಲ್ಕದೊಂದಿಗೆ ಇಂದ್ರಜೀವಿಯ ಕಷಾಯದಲ್ಲಿ ಕಾಯಿಸಿದ ಘೃತವು ತ್ರಿದೋಷವುಳ್ಳ ಗ್ರಹಣಿಯನ್ನೂ, ಪಿತ್ತಾತಿಸಾರ, ರಕ್ತಪ್ರವಾಹ, ಅರ್ಶಸ್ಸಿನ ದೋಷಗಳ ಸನ್ನಿಪಾತ, ಇವುಗಳನ್ನೂ ಪರಿಹರಿಸುವದು.

ಮುಸ್ತಕಾದಿ ಚೂರ್ಣ

ಮುಸ್ತಕಾತಿವಿಷಾಬಿಲ್ವಕೌಟಜಂ ಸೂಕ್ಷ್ಮಚೂರ್ಣಿತಮ್ ।
ಮಧುನಾ ಚ ಸಮಾಲೀಢಂ ಗ್ರಹಣೀಂ ಸರ್ವಜಾಂ ಜಯೇತ್ ॥
(ಭಾ. ಪ್ರ. 331)

ಭದ್ರಮುಷ್ಟಿ, ಅತಿವಿಷೆ, ಬಿಲ್ವಪತ್ರೆಕಾಯಿ, ಇಂದ್ರಜೀವಿ, ಇವುಗಳ ಸೂಕ್ಷ್ಮಚೂರ್ಣವನ್ನು ಜೇನಿನೊಂದಿಗೆ ಕಲಸಿ ನೆಕ್ಕುವದರಿಂದ ತ್ರಿದೋಷಜ ಗ್ರಹಣಿಯು ಜಯಿಸಲ್ಪಡುವದು.

ಬಿಲ್ವಾದಿಕ್ಷೀರ

ಬಿಲ್ವಾಬ್ದಶಕ್ರಯವಬಾಲಕಮೋಚಸಿದ್ಧ-
ಮಾಜಂ ಪಯಃ ಪಿಬತಿ ಯೋ ದಿವಸತ್ರಯಂ ನಾ ।
ಸೋಽತಿಪ್ರವೃದ್ಧಚಿರಜಂ ಗ್ರಹಣೀವಿಕಾರಂ
ಸಾಮಂ ಸಶೋಣಿತಮಸಾಧ್ಯಮಪಿ ಕ್ಷಿಣೋತಿ ॥ (ಭಾ. ಪ್ರ. 331)

ಬಿಲ್ವಪತ್ರೆಕಾಯಿ, ಭದ್ರಮುಷ್ಟಿ, ಇಂದ್ರಜೇವಿ, ಮುಡಿವಾಳ, ಬೂರುಗದ ಮೇಣ (ಮಲ. ಇಲವಿನೆಪಶ), ಇವುಗಳೊಂದಿಗೆ ಕಾಯಿಸಲ್ಪಟ್ಟ ಆಡಿನ ಹಾಲನ್ನು ಮೂರು ದಿನ ಪಾನಮಾಡು ವದರಿಂದ, ಅತಿಯಾಗಿ ಬೆಳೆದು ಬಹು ಕಾಲದಿಂದ ಪೀಡಿಸುತ್ತಿರುವ ಗ್ರಹಣೀರೋಗವು, ಆಮ ಮತ್ತು ರಕ್ತ ಕೂಡಿಕೊಂಡು ಅಸಾಧ್ಯವಾಗಿದ್ದರೂ, ನಾಶವಾಗುವದು.

16. ಮಸೂರಯೂಷಃ ಸಂಪೀತಃ ಕ್ವಾಥೋ ನಾಗರಬಿಲ್ವಜಃ ।
ಸಂಗ್ರಹಗ್ರಹಣೀಂ ಹನ್ತಿ ತಕ್ರೇಣ ಬೃಹತೀ ತಥಾ ॥
ಪಿಶ್ವಾಜಾಜೀಬಿಲ್ವಪೇಶೀಕಲ್ಕಸಿದ್ಧಂ ಘೃತಂ ಹರೇತ್ ।
ಮಸೂರಸ್ಯ ಕಷಾಯೇಣ ಸಂಗ್ರಹಗ್ರಹಣೀಗದಮ್ ॥

ಸಂಗ್ರಹಗ್ರಹಣೀ ಚಿಕಿತ್ಸೆ

(ಚಿ ಸಾ ಸಂ 119)

ಚನ್ನಂಗಿಬೇಳೆಯ ಸಾರು, ಶುಂಠಿ ಮತ್ತು ಬಿಲ್ವಪತ್ರೆಯ ಕಷಾಯ, ಗುಳ್ಳದ ಬೇರಿನ ಸಿಪ್ಪೆಯ ಚೂರ್ಣ ಕಲಸಿದ ಮಜ್ಜಿಗೆ, ಇವುಗಳ ಪಾನದಿಂದ ಸಂಗ್ರಹಗ್ರಹಣೀರೋಗವು ನಾಶ ವಾಗುತ್ತದೆ. ಶುಂಠಿ, ಜೀರಿಗೆ, ಬಿಲ್ವಪತ್ರೆಯ ಚಿಗುರು, ಇವುಗಳ ಕಲ್ಕದಿಂದ ಚನ್ನಂಗಿಯ ಕಷಾಯದಲ್ಲಿ ಪಾಕಮಾಡಿದ ತುಪ್ಪದ ಸೇವನದಿಂದ ಸಂಗ್ರಹಗ್ರಹಣೀರೋಗವು ಪರಿಹಾರ ವಾಗುವದು.

ಲವಂಗಾತಿವಿಷಾ ಮುಸ್ತಂ ಬಿಲ್ವಂ ಪಾಠಾಥ ಶಾಲ್ಮಲೀ ।
ಜೀರಕಂ ಧಾತಕೀಪುಷ್ಪಂ ಲೋಧ್ರೇನ್ದ್ರಯವಬಾಲಕಮ್ ॥
ಧಾನ್ಯಕಂ ಸರ್ಜಕಂ(?ಕಃ) ಶೃಂಗೀ ಪಿಪ್ಪಲೀ ವಿಶ್ವಭೇಷಜಮ್
ಸಮಂಗಾ ಯಾವಶೂಕಂ ಚ ಸೈನ್ಧವಂ ಸರಸಾಂಜನಮ್ ॥
ಸಮಭಾಗಾನಿ ಚೈತಾನಿ ಭಕ್ಷಯೇತ್ಪ್ರಾತರುತ್ಥಿತಃ ।
ಶಮಯೇದಗ್ನಿಮಾಂದ್ಯಂ ಚ ಸಂಗ್ರಹಗ್ರಹಣೀಗದಮ್ ॥
ನಾನಾವರ್ಣಮತೀಸಾರಂ ಸಶೋಥಂ ಪಾಂಡುಕಾಮಲಮ್ ।
ವಾತಮಷ್ಠೀಲಕಾಂ ಹನ್ತಿ ಕುಷ್ಠಂ ಕೋಷ್ಠಗತಂ ಜ್ವರಮ್ ॥ (ಧ 125)

ಲವಂಗಾದಿ ಚೂರ್ಣ

ಲವಂಗ, ಅತಿವಿಡೆ, ಭದ್ರಮುಷ್ಟಿ, ಬಿಲ್ವಪತ್ರೆಕಾಯಿ, ಪಾಡಾವಳಿಗಡ್ಡ, ಬೂರುಗ, ಜೀರಿಗೆ, ಧಾತಕೀಕುಸುಮ, ಲೋಧ್ರ, ಇಂದ್ರಜೇವಿ, ಮುಡಿವಾಳ, ಕೊತ್ತುಂಬರಿ, ರಾಳ, ಕರ್ಕಟ ಶೃಂಗಿ, ಹಿಪ್ಪಲಿ, ಶುಂಠಿ, ನಾಚಿಕೆಸೊಪ್ಪಿನ ಗಿಡ, ಯವಕ್ಷಾರ, ಸೈಂಧವಲವಣ, ರಸಾಂಜನ, ಇವುಗಳನ್ನು ಸಮಭಾಗವಾಗಿ ತೆಗೆದುಕೊಂಡು ಚೂರ್ಣಿಸಿಟ್ಟುಕೊಂಡು, ಆ ಚೂರ್ಣವನ್ನು ಬೆಳಿಗ್ಗೆ ಎದ್ದಕೂಡಲೆ ಭಕ್ಷಿಸುತ್ತಾ ಬಂದಲ್ಲಿ, ಅಗ್ನಿಮಾಂದ್ಯ, ಸಂಗ್ರಹಗ್ರಹಣೀರೋಗ, ನಾನಾ ವರ್ಣದ ಅತಿಸಾರ, ಶೋಫೆಯುಳ್ಳ ಪಾಂಡು ಮತ್ತು ಕಾಮಿಲೆ, ವಾತ, ಅಷ್ಠೀಲಕ, ಕುಷ್ಠ, ಹೊಟ್ಟೆಯಲ್ಲಿಯ ಜ್ವರ, ಇವೆಲ್ಲ ನಾಶವಾಗುವವು.

ಪಂಠಾ ಬಿಸಿನೀರು, ಮದ್ಯ, ಅಕ್ಕಚ್ಚು, ಜೇನು, ಮಜ್ಜಿಗೆ ಮುಂತಾದ, ದೋಷಕ್ಕೂ ಅವಸ್ಥೆಗೂ ತಕ್ಕ, ಅನುಪಾನ ವನ್ನು ಹೇಳತಕ್ಕದ್ದು

ಮೃತಸಂಜೀವನ ಚೂರ್ಣ.

ನಾಗರಾತಿವಿಷಾ ಮುಸ್ತದೇವದಾರುಕಣಾ ವಚಾ |
ಯವಾನೀ ವಾಲಕೋ ಧಾನ್ಯಂ ಕುಟಜಸ್ಯ ತ್ವಚಾಭಯಾ ||
ಧಾತಕೀನ್ದ್ರಯವಂ ಬಿಲ್ವಂ ಪಾಠಾ ಮೋಚರಸಂ ಸಮಮ್ |
ಚೂರ್ಣಂ ಸಮಧುನಾ ಲೇಹ್ಯಮನುಪಾನಂ ಸುಖಾವಹಮ್ ||
(ಧ. 125)

ಶುಂಠಿ, ಅತಿವಿಡೆ, ಭದ್ರಮುಷ್ಟಿ, ದೇವದಾರ, ಹಿಪ್ಪಲಿ, ಒಜೆ, ಓಮು, ಮುಡಿವಾಳ, ಕೊತ್ತುಂಬರಿ, ಕೊಡಸಿಗನ ಚಕ್ಕೆ, ಅಣಿಲೆಕಾಯಿ, ಧಾತಕೀಕುಸುಮ, ಇಂದ್ರಜೀವಿ, ಬಿಲ್ವಪತ್ರೆ ಕಾಯಿ, ಪಾಡಾವಳಿಗಡ್ಡೆ, ಬೂರುಗದ ಮೇಣ, ಇವುಗಳನ್ನು ಸಮಪಾಲು ತೆಗೆದುಕೊಂಡು ಚೂರ್ಣಿಸಿಟ್ಟುಕೊಂಡು, ಆ ಚೂರ್ಣವನ್ನು ಜೇನಿನೊಂದಿಗೆ ಕಲಸಿ, ನೆಕ್ಕಿ, ಸುಖಕರವಾದ ಅನುಪಾನವನ್ನುಪಯೋಗಿಸುವದು (ಅದರಿಂದ ಸಂಗ್ರಹಗ್ರಹಣೀರೋಗವು ಪರಿಹಾರವಾಗುತ್ತದೆ).

ಗ್ರಹಣಿಗೆ ಸಾಮಾನ್ಯ ಚಿಕಿತ್ಸೆ

17. ಆಮ್ರಾತಕಾಮ್ರಜಮ್ಬೂತ್ಥೇ ಕಷಾಯೇ ಪಾದಶೇಷಿತೇ |
ಶಾಲಿಸಿದ್ಧಾಂ ಯವಾಗೂಂ ತು ಭುಕ್ತ್ವಾ ಕುಕ್ಷ್ಯಾಮಯಂ ಜಯೇತ್ ||
(ಚಿ ಸಾ. ಸಂ. 121)

ಅಂಬಟೆಕೆತ್ತೆ, ಮಾವಿನ ಕೆತ್ತೆ, ಮತ್ತು ನೇರಳೆಕೆತ್ತೆ, ಇವುಗಳಿಂದ ನಾಲ್ಕನೇ ಒಂದಂಶಕ್ಕೆ ಬತ್ತಿಸಿ ಮಾಡಿದ ಕಷಾಯದಲ್ಲ ಶಾಲ್ಯಕ್ಕಿ ಬೇಯಿಸಿ ಮಾಡಿದ ಯವಾಗೂಗಂಜಿಯನ್ನು ಉಣ್ಣುವದರಿಂದ ಹೊಟ್ಟೆಯ ರೋಗಗಳು ಜಯಿಸಲ್ಪಡುವವು.

ಷರಾ ಶ್ಲೋಕದಲ್ಲಿ ಹೇಳಲ್ಪಟ್ಟ ಕೆತ್ತೆಗಳನ್ನು ಹಾಕಿ ಸಾಧಾರಣವಾದ ಕ್ರಮದಿಂದ ಮಾಡಿದ ತೆಳ್ಳಗಿನ ಗಂಜಿಯನ್ನು ಉಂಡರೂ ಅತಿಸಾರಾದಿ ರೋಗಗಳು ಪರಿಹಾರವಾಗುವವು ನೇರಳೆಗಿಂತ ಮಾವು, ಮಾವಿಗಿಂತ ಅಂಬಟೆ, ಉಷ್ಣವೆಂತ ತಿಳಿದಿರಬೇಕು ಗಂಜಿಗೆ ಕಷಾಯವನ್ನು ಪ್ರತ್ಯೇಕವಾಗಿ ಮಾಡಿಕೊಳ್ಳುವ ಸಂದರ್ಭದಲ್ಲಿ, ಕುದಿಯುವ ಕಷಾಯಕ್ಕೆ ಉಕ್ತವಾದ (1ನೇ ಭಾಗದ XX-30) ಕ್ರಮದಂತೆ ಔಷಧಕ್ಕೆ 16 ಪಾಲು ನೀರನ್ನು ಇಟ್ಟರೆ ಸಾಕು ಅದನ್ನು ಕಾಲಂಶಕ್ಕೆ ಬತ್ತಿಸಿದ ಮೇಲೆ ಮುಗುಳಕ್ಕಿ ಅನ್ನವನ್ನು ಅದರಲ್ಲಿ ಹಾಕಿ, ಚೆನ್ನಾಗಿ ಬೇಯಿಸಿದರೆ, ಗಂಜಿಯು ಪಾನಕ್ಕೆ ಸರಿಯಾಗುವದು ಅಂಥಾ ಸಂಗತಿಯಲ್ಲಿಯೂ ಔಷಧವನ್ನು ಜಜ್ಜಿ, ಮಡಿಯಾದ ವಸ್ತ್ರದ ತುಂಡಿನಲ್ಲಿಟ್ಟು ಸಡಿಲಾಗಿ ಕಟ್ಟಿ, ಹಾಕುವ ಪದ್ಧತಿ ಒಳ್ಳೇದು

ಬಾಲಬಿಲ್ವಾದಿ ಗಂಜಿ

ಬಾಲಬಿಲ್ವಬಲಾಶುಂಠೀಧಾತಕೀಮುಸ್ತಧಾನ್ಯಕೈಃ |
ಕಷಾಯೈಃ ಸಾಧಿತಾ ಹನ್ತಿ ಯವಾಗೂರ್ಗ್ರಹಣೀಗದಮ್ ||
(ಚಿ. ಸಾ. ಸಂ. 121)

ಬಿಲ್ವಪತ್ರೆಮಿಡಿ, ಕಲ್ಲಂಗಡಲೆ(ಕಡೀರು)ಬೇರು, ಶುಂಠಿ, ಧಾತಕೀ ಕುಸುಮ, ಭದ್ರಮುಷ್ಟಿ, ಕೊತ್ತುಂಬರಿ, ಇವುಗಳ ಕಷಾಯಗಳಲ್ಲಿ ಮಾಡಿದ ಯವಾಗೂ ಗಂಜಿಯು ಗ್ರಹಣೀರೋಗವನ್ನು ನಾಶಮಾಡುತ್ತದೆ.

ಷರಾ 'ಕಷಾಯೈಃ' ಎಂತ ಬಹುವಚನವಿರುವದರಿಂದ ಬಿಲ್ವ ಮೊದಲಾದ ಔಷಧಗಳಲ್ಲಿ ಬೇಕಾದವುಗಳನ್ನು ಮಾತ್ರ, ಅಥವಾ ಅವುಗಳನ್ನು ಹೆಚ್ಚುಕಡಿಮೆ ಮಾಡಿಕೊಂಡು, ಉಪಯೋಗಿಸಬಹುದೆಂತ ಅರ್ಥವಾಗುತ್ತದೆ

ಶುಂಠಿಯ ಉಪಯೋಗ

ಶರಪುಂಖಕಷಾಯೇಣ ಶಾಬರ್ೀಷ್ಟುಕ್ವಥಿತೇನ ವಾ |
ಪೀತಮಕ್ಷಮಿತಂ ವಿಶ್ವಂ ಭುಕ್ತಾದೌ ಗ್ರಹಣೀಂ ಹರೇತ್ ||
(ವೈ. ಸಾ. ಸಂ. 235)

ಪಠಾ ಪೀತಂ' ಎಂಬದಕ್ಕೆ ಮೂಲದಲ್ಲ 'ಪಿಬೇತ್' ಎಂತ ಇದೆ.

ಕಾಲು ಪಲದಷ್ಟು ಶುಂಠೀಚೂರ್ಣವನ್ನು ಶರಪುಂಖದ ಕಷಾಯದೊಂದಿಗೆ, ಅಥವಾ ದೊಡ್ಡಹೊಂಗೆಚಕ್ಕೆಯ ಕಷಾಯದೊಂದಿಗೆ ಕಲಸಿ, ಊಟದ ಆರಂಭದಲ್ಲಿ ಕುಡಿಯಲು ಗ್ರಹಣಿಯು ಪರಿಹಾರವಾಗುವದು.

ಪುನರ್ನವಾದಿ ಕಷಾಯ

ಪುನರ್ನವಾವೇಲ್ಲಜಬಾಣಪುಂಖಾವಿಶ್ವಾಗ್ನಿಪಥ್ಯಾಚಿರಬಿಲ್ವಬಿಲ್ವೈಃ |
ಕೃತಃ ಕಷಾಯಃ ಶಮಯೇದಶೇಷಾನ್ ದುರ್ನಾಮಗುಲ್ಮಗ್ರಹಣೀ
ವಿಕಾರಾನ್ (ವೈ. ಜೀ. ದೀ. 16)

ಪುನರ್ನವಿಬೇರು, ಕಾಳುಮೆಣಸು, ಶರಪುಂಖ (ಕೊಗ್ಗಿ, ಕಾಡುನೀಲೀ) ಬೇರು, ಶುಂಠಿ, ಚಿತ್ರಮೂಲ, ಅಣಿಲೆಕಾಯಿ, ಹೊಂಗೆ(ನಾಯಿಪಲ್ಲೆ)ಬೇರು, ಬಿಲ್ವಪತ್ರೆ ಬೇರು, ಇವುಗಳ ಕಷಾಯದ ಪಾನದಿಂದ ಎಲ್ಲಾ ವಿಧದ ಮೂಲವ್ಯಾಧಿ, ಗುಲ್ಮ ಮತ್ತು ಗ್ರಹಣೀರೋಗಗಳು ಶಾಂತವಾಗುವವು.

ಜಾತೀಫಲಾದಿ ಚೂರ್ಣ

ಜಾತೀಫಲಲವಂಗೈಲಾಪತ್ರತ್ವಙ್ನಾಗಕೇಶರೈಃ |
ಕರ್ಪೂರಚನ್ದನತಿಲತ್ವಕ್ಕ್ಷೀರೀತಗರಾಮಲೈಃ ||
ತಾಲೀಸಪಿಪ್ಪಲೀಪಥ್ಯಾಸ್ಥೂಲಜೀರಕಚಿತ್ರಕೈಃ |
ಶುಂಠೀವಿಡಂಗಮರಿಚೈಃ ಸಮಭಾಗಂ ವಿಚೂರ್ಣಿತೈಃ ||
ಯಾವನ್ತ್ಯೇತಾನಿ ಸರ್ವಾಣಿ ದದ್ಯಾದ್ಭಂಗಾಂ ಚ ತಾವತೀಮ್ |
ಸರ್ವಚೂರ್ಣಸಮಂ ಕೃತ್ವಾ ಪ್ರದೇಯಾ ಶುಭ್ರಶರ್ಕರಾ |
ಕರ್ಷಮಾತ್ರಮಿದಂ ಖಾದೇನ್ಮಧುನಾ ಪ್ಲಾವಿತಂ ಜನಃ |
ನಾಶಯೇದ್ಗ್ರಹಣೀಂ ಶ್ವಾಸಂ ಕ್ಷಯಂ ಕಾಸಮರೋಚಕಮ್ ||
(ಭಾ. ಪ್ರ. 331)

ಜಾಯಿಕಾಯಿ, ಲವಂಗ, ಏಲಕ್ಕಿ, ದಾಲ್ಚೀಸಿಎಲೆ, ಲವಂಗಪಟ್ಟೆ, ನಾಗಕೇಸರ, ಪಚ್ಚೆಕರ್ಪೂರ, ಶ್ರೀಗಂಧ, ಎಳ್ಳು, ಬಿದಿರುಪ್ಪು, ತಗರ, ನೆಲ್ಲಿಚಟ್ಟು, ತಾಳೀಸಪತ್ರೆ, ಹಿಪ್ಪಲಿ, ಅಣಿಲೆಕಾಯಿ, ಸೋಪಿ (ದೊಡ್ಡ ಕರಿಜೀರಿಗೆ), ಚಿತ್ರಮೂಲ, ಶುಂಠಿ, ವಾಯುವಿಳಂಗ, ಕಾಳುಮೆಣಸು, ಇವು ಸಮಭಾಗ, ಇವುಗಳ ಒಟ್ಟು ತೂಕಕ್ಕೆ ಸಮ ಭಂಗಿ, ಇವುಗಳನ್ನೆಲ್ಲಾ ಚೂರ್ಣಿಸಿ, ಆ ಚೂರ್ಣದ ಮೊತ್ತಕ್ಕೆ ಸರೀ ಪಾಲು ಬಿಳೇಸಕ್ಕರೆ ಬೆರಸಿಟ್ಟುಕೊಂಡು, ೧ ಕರ್ಷ ಪ್ರಮಾಣ, ಜೇನಿನೊಂದಿಗೆ ಕಲಸಿ, ತಿನ್ನುತ್ತಾ ಬಂದಲ್ಲಿ ಗ್ರಹಣಿ, ಉಬ್ಬಸ, ಕ್ಷಯ, ಕೆಮ್ಮು, ಮತ್ತು ಅರುಚಿ ನಾಶವಾಗುವವು.

ಭಂಗಿಯ ಶುದ್ಧಿ

ಪಠಾ ಜಾಲಿಮರನ ಚಕ್ಕೆಯ ಕಷಾಯಮಾಡಿ, ಆ ಕಷಾಯದ ಗಡಿಗೆಯ ಬಾಯಿಯನ್ನು ವಸ್ತ್ರದಿಂದ ಸರಿಯಾಗಿ ಮುಚ್ಚಿ, ಸುತ್ತು ಬಿಗಿದು, ಆ ವಸ್ತ್ರದ ಮೇಲೆ ಭಂಗಿಯನ್ನು ಹಾಕಿ, ಬೇರೊಂದು ಪಾತ್ರವನ್ನು ಮುಚ್ಚಿ, ಬೇಯಿಸುವದು ಆ ಮೇಲೆ ಆ ಭಂಗಿಯನ್ನು ತೆಗೆದು ಬಿಸಿಲಿನಲ್ಲಿ ಒಣಗಿಸಿ, ಹಾಲಿನಲ್ಲಿ ಒಂದು ರಾತ್ರಿ ಮುಳುಗಿಸಿಟ್ಟು, ಮಾರನೇ ದಿನ ಪುನಃ ಒಣಗಿಸಿದಲ್ಲಿ ಆದು ಶುದ್ಧವಾಗುತ್ತದೆ ಚೂರ್ಣದಲ್ಲಿ ಕಾಲಂಶ

ಭಂಗಿ ಇರುತ್ತದೆ. ಅಲ್ಪಪ್ರಮಾಣದಲ್ಲಿ ಕೊಟ್ಟು, ದೇಹಪ್ರಕೃತಿ ತಿಳಿದು, ಈ ಚೂರ್ಣವನ್ನು ಉಪಯೋಗಿಸತಕ್ಕದ್ದು ಕಫವಾತದ ನೆಗಡಿಗಳು ಸಹ ಬೇಗನೆ ಶಾಂತವಾಗುತ್ತವೆ ಎಂತ ಶಾ. (ಪು 65) ದೊಡ್ಡ ಜಾತಿಯ ಕರಿಜೀರಿಗೆ ಸಾಧಾರಣವಾಗಿ ಅಂಗಡಿಗಳಲ್ಲಿ ಸಿಗುವದಿಲ್ಲ 'ಸ್ಥೂಲಜೀರಕ' ಎಂದರೆ ಬಿಳೀ ಜೀರಿಗೆ ಎಂತ ಗ. ನಿ ದಿ° (ಪು 187)

ಮಹಾಕಲ್ಯಾಣಕ ಗುಡ

ಪಿಪ್ಪಲೀ ಪಿಪ್ಪಲೀಮೂಲಂ ಚಿತ್ರಕಂ ಹಸ್ತಿಪಿಪ್ಪಲೀ |
ಧಾನ್ಯಕಂ ಚ ವಿಡಂಗಾನಿ ಯವಾನೀ ಮರಿಚಾನಿ ಚ ||
ತ್ರಿಫಲಾ ಚಾಜಮೋದಾ ಚ ನೀಲಿನೀ ಜೀರಕಂ ತಥಾ |
ಸೌವರ್ಚಲಂ ಸೈನ್ಧವಂ ಚ ಸಾಮುದ್ರಂ ರುಚಕಂ ವಿಡಮ್ |
ಆರಗ್ವಧಶ್ಚ ತ್ವಕ್ಪತ್ರಂ ಸೂಕ್ಷ್ಮೈಲಾ ಚೋಪಕುಂಚಿಕಾ ।
ನಾಗರೇನ್ದ್ರಯವಾಶ್ಚೈವ ಷಡ್ತ್ರಿಂಶತ್ಯೇಕಕಾರ್ಷಿಕಮ್ ||
ಮೃದ್ವೀಕಾಯಾಃ ಪ್ರಧಾನಾಯಾ ದದ್ಯಾತ್ಪಲಚತುಷ್ಟಯಮ್ |
ತ್ರಿವೃತಾಯಾಃ ಪಲಾನ್ಯಷ್ಟೌ ಗುಡಸ್ಯಾರ್ಧ್ಧಂ ತುಲಾಂ ತಥಾ ||
ತಿಲತೈಲಪಲಾನ್ಯಷ್ಟಾವಾಮಲಕ್ಯಾ ರಸಸ್ಯ ತು |
ಪ್ರಸ್ಥತ್ರಯಮಿದಂ ಸರ್ವಂ ಶನೈರ್ಮೃದ್ವಗ್ನಿನಾ ಪಚೇತ್ ||
ಔದುಂಬರಂ ಚಾಮಲಕಂ ಬಾದರಂ ವಾ ಯಥಾ ಫಲಮ್ |
ತಾವನ್ಮಾತ್ರಂ ಪ್ರಯುಂಜೀತ ಭಿಷಕ್ ದೃಷ್ಟ್ವಾ ಯಥಾ ಬಲಮ್ ||
ಸರ್ವಾಂಶ್ಚ ಗ್ರಹಣೀರೋಗಾನ್ ಪ್ರಮೇಹಾಂಶ್ಚೈಕವಿಂಶತಿಮ್
ಉರೋಘಾತಂ ಪ್ರತಿಶ್ಯಾಯಂ ದೌರ್ಬಲ್ಯಂ ವಹ್ನಿಸಂಕ್ಷಯಮ್ ।
ಜ್ವರಾನಪಿ ಹರೇತ್ಸರ್ವಾನ್ ಕುರ್ಯಾತ್ಪುಷ್ಟಿಂ ಮತಿಂ ಸ್ವರಮ್ |
ಪಾಂಡುರೋಗಾನ್ ಜಯಾದ್ಧಸ್ತಿ ರಕ್ತಪಿತ್ತಂ ಚ ವಿಡ್ಗ್ರಹಮ್ ।
ಧಾತುಕ್ಷೀಣೋ ವಯಃಕ್ಷೀಣಃ ಕ್ಷೀಣಃ ಸ್ತ್ರೀಭಿಃ ಕ್ಷಯೀ ತಥಾ ।
ತೇಭ್ಯೋ ಹಿತಶ್ಚ ಸರ್ವೇಭ್ಯೋ ವನ್ಧ್ಯಾನಾಂ ಚೈವ ಪುತ್ರದಮ್ ।
ರೂಪೌದಾರ್ಯಂ ಸ್ವರೌದಾರ್ಯಂ ಮೇಧಾಮಾವಹತಿ ಸ್ಥಿರಾಮ್ |
ಮಹಾಕಲ್ಯಾಣಕಂ ನಾಮ ರಸಾಯನಮನುತ್ತಮಮ್ ||

(ಚ. ಸಾ. ಸಂ. 125)

ಹಿಪ್ಪಲಿ, ಹಿಪ್ಪಲಿಮೂಲ, ಚಿತ್ರಮೂಲ, ಗಜಹಿಪ್ಪಲಿ, ಕೊತ್ತುಂಬರಿ, ವಾಯುವಿಳಂಗ, ಓಮ, ಕಾಳುಮೆಣಸು, ತ್ರಿಫಲೆ, ಅಜಮೋದ, ನೀಲಿಗಿಡದ ಬೇರು, ಜೀರಿಗೆ, ಸೌವರ್ಚಲ ಲವಣ (ಕರಿ ಉಪ್ಪು), ಸೈಂಧವಲವಣ, ಸಮುದ್ರಉಪ್ಪು, ಔದ್ಭಿದಲವಣ, ವಿಡಲವಣ, ಕಕ್ಕೆಮರ, ಲವಂಗಪಟ್ಟೆ, ದೊಡ್ಡ ಲವಂಗದ ಎಲೆ (ದಾಲ್ಚೀಸಿ ಎಲೆ), ಸಣ್ಣ ಏಲಕ್ಕಿ (ಮಲ ಚಿಟ್ಟೇಲಂ), ಸೋಪಿ (ದೊಡ್ಡ ಕರಿಜೀರಿಗೆ), ಶುಂಠಿ, ಇಂದ್ರಜೇವಿ, ಇವು ೩೬ ಬಗೆಗಳನ್ನು ೧ ಕರ್ಷ ಪ್ರಕಾರ ತೆಗೆದು ಕೊಂಡು ಚೂರ್ಣಿಸಿ, ಆ ಚೂರ್ಣದೊಂದಿಗೆ (ಕಿಸ್ಮಿಸ್) ದ್ರಾಕ್ಷೆ ೪ ಪಲವನ್ನು ಅರೆದು ಕೂಡಿಸಿದ ನಂತರ, ೮ ಪಲ ತಿಗಡೆಯ ಚೂರ್ಣವನ್ನೂ, ೫೦ ಪಲ ಬೆಲ್ಲವನ್ನೂ, ೮ ಪಲ ಎಳ್ಳೆಣ್ಣೆಯನ್ನೂ, ೩ ಪ್ರಸ್ಥ ನೆಲ್ಲಿರಸವನ್ನೂ ಕಲಸಿ, ಸಣ್ಣ ಬೆಂಕಿಯಿಂದ ಮೆಲ್ಲನೆ ಪಾಕಮಾಡಿಟ್ಟುಕೊಂಡು, ಅದರಿಂದ ಅತ್ತಿಹಣ್ಣಿನಷ್ಟು, ನೆಲ್ಲಿಹಣ್ಣಿನಷ್ಟು, ಅಥವಾ ಬೊಗರಿಹಣ್ಣಿನಷ್ಟು, ರೋಗಿಯ ಬಲವನ್ನು ಲಕ್ಷಿಸಿ, ಅದಕ್ಕೆ ತಕ್ಕ ಹಾಗೆ ವೈದ್ಯನು ಪ್ರಯೋಗಿಸತಕ್ಕದ್ದು. ಅದರ ಉಪಯೋಗದಿಂದ ಸರ್ವ ಗ್ರಹಣೀ

ರೋಗಗಳು, ಇಪ್ಪತ್ತೊಂದು ವಿಧವಾದ ಪ್ರಮೇಹಗಳು, ಉರಃಕ್ಷತ, ನೆಗಡಿ, ದುರ್ಬಲತೆ, ಅಗ್ನಿ ಮಾಂದ್ಯ, ಸರ್ವಜ್ವರಗಳು ಸಹ ಪರಿಹಾರವಾಗುವವು; ಕಾಂತಿ, ಬುದ್ಧಿ ಮತ್ತು ಸ್ವರ ಉಂಟಾಗುವವು; ಪಾಂಡುರೋಗಗಳು, ರಕ್ತಪಿತ್ತ ಮತ್ತು ಮಲಬದ್ಧತೆ ಬೇಗನೆ ವಾಸಿಯಾಗುವವು; ಧಾತುಕ್ಷೀಣನಾದವ, ವೃದ್ಧಾಪ್ಯದಿಂದ ಕ್ಷೀಣನಾದವ, ಸ್ತ್ರೀಸಂಗದಿಂದ ಕ್ಷೀಣನಾದವ, ಕ್ಷಯರೋಗಿ, ಇವರೆಲ್ಲರಿಗೂ ಅದು ಹಿತವಾದ್ದು; ಬಂಜೆಯರಿಗೆ ಅದರ ಸೇವನದಿಂದ ಪುತ್ರೋತ್ಪತ್ತಿಯಾಗುತ್ತದೆ; ಅದು ರೂಪದಲ್ಲಿಯೂ ಸ್ವರದಲ್ಲಿಯೂ ಉದಾರತೆಯನ್ನುಂಟುಮಾಡುವಂಥಾದ್ದು; ಮತ್ತು (ಮಿದುಳಿನ) ಗ್ರಹಣಶಕ್ತಿಯನ್ನು ಸ್ಥಿರಮಾಡುತ್ತದೆ. ಈ 'ಮಹಾ ಕಲ್ಯಾಣಕ' ಎಂಬ ಗುಡವು ಅತ್ಯುತ್ತಮವಾದ ರಸಾಯನವಾಗಿರುತ್ತದೆ.

ಮುಸ್ತಾಚಾಂಗೇರಿ ಘೃತ

ಮುಸ್ತಾಕಷಾಯಕಂಸೇ ಚ ಶಾಙ್ಗೇರ(?ಚಾಙ್ಗೇ)ರೀಸ್ವರಸೇನ ಚ |
ಕಲ್ಕಿತೈರ್ಧಾತಕೀಪುಷ್ಪವರಾಳಗದಚನ್ದನೈಃ ||
ಪಿಪ್ಪಲ್ಯತಿವಿಷಾಲೋಧ್ರಚವ್ಯಚಿತ್ರಕವತ್ಸಕೈಃ |
ದಾರ್ವೀಸುರದ್ರುಸಾರಾ(?ಪಾರಾ)ಮ್ಬುಬಿಲ್ವೋತ್ಪಲಮಹೌಷಧೈಃ ||
ಸರ್ಪಿರ್ಗವ್ಯಂ ಪಚೇದ್ಧನ್ತಿ ಗ್ರಹಣೀಂ ತತ್ರವಾಹಿಕಾಮ್ |
ಚಿರೋತ್ಥಿತಮತೀಸಾರಂ ಶ್ಲೇಷ್ಮಾಣಂರ(?ಶ್ಲೈಷ್ಮಿಕಂ ಚ) ಸಶೋಣಿತಮ್ |
(ವೈ. ಸಾ. ಸಂ. 244-5)

ಭದ್ರಮುಷ್ಟಿಯ (೬೪ ಪಲಕ್ಕೆ ೧೬ ಪ್ರಸ್ಥ ನೀರಿಟ್ಟು ಮಾಡಿದ) ಕಷಾಯ ೪ ಪ್ರಸ್ಥದಲ್ಲಿ, ಪುಲ್ಲಂಪುರಚೆ(ಮಲ. ಪುಳಿಯಾರಲ)ರಸ ೪ ಪ್ರಸ್ಥ ಕೂಡಿಸಿಕೊಂಡು, ಧಾತಕೀಕುಸುಮ, ಲವಂಗ, ಚಂಗಲಕೋಷ್ಠ, ಶ್ರೀಗಂಧ, ಹಿಪ್ಪಲಿ, ಅತಿವಿಷೆ, ಲೋಧ್ರ, ಕಾಡುಮೆಣಸಿನ ಬೇರು, ಚಿತ್ರಮೂಲ, ಕೊಡಸಿಗನ ಚಕ್ಕೆ, ಮರದರಸಿನ, ದೇವದಾರ, ಪಾಡಾವಳಿಗಡ್ಡೆ, ಮುಡಿವಾಳ, ಬಿಲ್ವಪತ್ರೆಕಾಯಿ, ನೀಲತಾವರೆ, ಶುಂಠಿ, ಇವುಗಳ(ನ್ನು ೧ ಕರ್ಷ ಪ್ರಕಾರ ತೆಗೆದುಕೊಂಡು ಮಾಡಿದ) ಚೂರ್ಣದ ಕಲ್ಕದಿಂದ, ದನದ ತುಪ್ಪವನ್ನು ಪಾಕಮಾಡಿ, ಶೋಧಿಸಿಟ್ಟುಕೊಂಡ ಘೃತದ ಸೇವಸದಿಂದ ಗ್ರಹಣಿ, ಆಮಶಂಕೆ, ದೀರ್ಘಕಾಲದ ಕಫಾತಿಸಾರ ಮತ್ತು ರಕ್ತಮಿಶ್ರ ಅತಿಸಾರ ಸಹ ನಾಶವಾಗುವವು.

ಪರಾ 'ಸುರದ್ರುಸಾರ' ಎಂಬ ಪಾಠವನ್ನೇ ಇಟ್ಟುಕೊಂಡರೆ, ಪಾಡಾವಳಿಗಡ್ಡೆಯನ್ನು ಬಿಡಬೇಕಾಗುತ್ತದೆ ಆದರೆ ವೈ ಸಾ ಸಂ ದಲ್ಲಿ ಅರ್ಥ ಬರೆಯುವವರು 'ಸುರದ್ರುಪಾರಾ' ಎಂತ ಓದಿಕೊಂಡಿದ್ದಾರೆ

ಕಪಿತ್ಥಾಷ್ಟಕ ಚೂರ್ಣ

ಯವಾನೀಪಿಪ್ಪಲೀಮೂಲಚಾತುರ್ಜಾತಕನಾಗರೈಃ |
ಮರೀಚಾಗ್ನಿಜಲಾಜಾಜೀಧಾನ್ಯಸೌವರ್ಚಲೈಃ ಸಮೈಃ ||
ವೃಕ್ಷಾಮ್ಲಧಾತಕೀಕೃಷ್ಣಾಬಿಲ್ವದಾಡಿಮದೀಪ್ಯಕೈಃ |
ತ್ರಿಗುಣೈಃ ಷಡ್ಗುಣಸಿತೈಃ ಕಪಿತ್ಥಾಷ್ಟಗುಣೈಃ ಕೃತಃ
ಚೂರ್ಣೋಽತಿಸಾರಗ್ರಹಣೀಕ್ಷಯಗುಲ್ಮೋದರಾಮಯಾನ್ |
ಕಾಸಶ್ವಾಸಾಗ್ನಿಸಾದಾರ್ಶಃಪೀನಸಾರೋಚಕಾನ್ ಜಯೇತ್ ||
(ವಾ. 328)

ಓಮ, ಹಿಪ್ಪಲಿಮೂಲ, ಏಲಕ್ಕಿ, ಲವಂಗಪತ್ರೆ (ದಾಲ್ಚೀನಿಎಲೆ), ಲವಂಗಪಟ್ಟೆ, ನಾಗಕೇಸರ, ಶುಂಠಿ, ಕಾಳುಮೆಣಸು, ಚಿತ್ರಮೂಲ, ಮುಡಿವಾಳ, ಜೀರಿಗೆ, ಕೊತ್ತುಂಬರಿ, ಸೌವರ್ಚಲಲವಣ, ಇವು ಸಮಪಾಲು, ಮುರ್ಗಿನಹುಳಿ, ಧಾತಕೀಕುಸುಮ, ಪಿಪ್ಪಲಿ, ಬಿಲ್ವಪತ್ರೆಕಾಯಿ, ದಾಳಿಂಬ (ಎಳೇಕಾಯಿ ಅಥವಾ ಹಣ್ಣಿನ ಸಿಪ್ಪೆ), ಅಜಮೋದ, ಇವು ಮೂರು ಭಾಗ ಪ್ರಕಾರ, ಬೇಲದ ಹಣ್ಣಿನ ತಿರಳು ೮ ಪಾಲು, ಸಕ್ಕರೆ ೬ ಪಾಲು, ಇವುಗಳ ಚೂರ್ಣವು ಅತಿಸಾರ, ಗ್ರಹಣಿ, ಕ್ಷಯ, ಗುಲ್ಮ, ಹೊಟ್ಟೆಯ ಅಕ್ರಮಗಳು, ಕೆಮ್ಮು, ಉಬ್ಬಸ, ಅಗ್ನಿಮಾಂದ್ಯ, ಮೂಲವ್ಯಾಧಿ, ಪೀನಸ, ಅರುಚಿ, ಈ ರೋಗಗಳನ್ನು ಪರಿಹರಿಸುವದು.

ಪರಾ ಮೂರು ಪಾಲಾಗಿ ಸೇರಿಸತಕ್ಕ ವೃಕ್ಷಾಮ್ಲಾದಿ ೬ ಬಗೆಗಳ ಒಟ್ಟು ತೂಕ ೧೫ ಭಾಗಗಳ ೬ ಭಾಗ, ಎಂದರೆ ೧೦೮ ಭಾಗ, ಸಕ್ಕರೆ ಕೂಡಿಸಬೇಕೆಂತಲೂ, ಬೇಲದ ಹಣ್ಣಿನ ೮ ಭಾಗಗಳ ೬ ಭಾಗ, ಎಂದರೆ ೪೮ ಭಾಗ, ಸಕ್ಕರೆ ಕೂಡಿಸಬೇಕೆಂಬ ಬೇರೊಂದು ಪಕ್ಷ ಉಂಟೆಂತಲೂ ಅ. ವೈದ್ಯಸಾರಸಂಗ್ರಹದಲ್ಲಿ ಅರ್ಥ ಬರೆದವರು ವೃಕ್ಷಾಮ್ಲಾದಿಗಳಿಗೆ ಹೇಳಲ್ಪಟ್ಟ ೩ ಪಾಲಿನ ೬ ಭಾಗ, ಅಂದರೆ ೧೮ ಭಾಗ, ಸಕ್ಕರೆ ಮತ್ತು ಸಕ್ಕರೆಯ ೮ ಪಾಲು, ಎಂದರೆ ೧೪೪ ಪಾಲು, ಬೇಲದ ಹಣ್ಣು ಎಂತ ಹೇಳಿ, ಯವಾನ್ಯಾದಿ ೧೩ ಭಾಗಗಳ ೩ ಪಾಲು, ಎಂದರೆ ೩೯ ಪಾಲು, ವೃಕ್ಷಾಮ್ಲಾದಿ ೬ ಬಗೆಗಳು, ಎಂದರೆ ಇವುಗಳೊಳಗೆ ಪ್ರತಿಯೊಂದು ೬½ ಭಾಗ, ಸಕ್ಕರೆ ೧೧೬ ಭಾಗ, ಬೇಲದ ಹಣ್ಣು ೩೪೯ ಭಾಗ, ಆಗ ಬೇಕೆಂಬ ಪಕ್ಷವಿರುತ್ತದೆಂತ ಸೂಚಿಸಿದ್ದಾರೆ ಈ ವಿಶೇಷ ಅರ್ಥಗಳಿಗೆಲ್ಲ ಮೂಲದಲ್ಲಿ ಎಡೆ ಕಾಣುವದಿಲ್ಲ.

ಇದೇ ಯೋಗವು ಭಾಷಾಭೇದದಿಂದ ಶಾ ದಲ್ಲಿ (ಪು 63) ಕಾಣುತ್ತದೆ ಅದರ ಪ್ರಕಾರ ಬೇಲ ೮, ಸಕ್ಕರೆ ೬, ವೃಕ್ಷಾಮ್ಲಾದಿ ೬ ಬಗೆಗಳು ಸೇರಿ ೧೮, ಯವಾನ್ಯಾದಿ ೧೩ ಬಗೆಗಳು ಸೇರಿ ೧೩, ಹೀಗೆ ಒಟ್ಟು ೪೫ ಭಾಗಗಳೆಂತ ಸ್ಪಷ್ಟವಾಗುತ್ತದೆ.

ಉಪ್ಪು, ಹುಳಿ ಮತ್ತು ಸಕ್ಕರೆ ಚೂರ್ಣದಲ್ಲಿ ಸೇರುವದರಿಂದ ಅದಕ್ಕೆ 'ಖಾಂಡವ' ಎನ್ನುತ್ತಾರೆಂತ ವೀ (ಪು 185) ಹೇಳುತ್ತದೆ ಅಲ್ಲಿ ವೃಕ್ಷಾಮ್ಲದ ಸ್ಥಾನದಲ್ಲಿ ಹುಣಸೆಹುಳಿ ಹೇಳಲ್ಪಟ್ಟಿದೆ ದಾಳಿಂಬ ಎಂದರೆ ಹುಳಿದಾಳಿಂಬ ಎಂತ ವೀ

'ಉದರಾಮಯಾನ್' ಎಂಬಲ್ಲಿ 'ಗಲಾಮಯಾನ್ (ಕಂಠರೋಗಗಳು) ಎಂಬ ಪಾಠವೇ ಹೆಚ್ಚಾಗಿ ಕಾಣುತ್ತದೆ

ಬೃಹದ್ದಾಡಿಮಾಷ್ಟಕ ಚೂರ್ಣ.

ಕರ್ಷೋನ್ಮಿತಾ ತುಗಾಕ್ಷೀರೀ ಚಾತುರ್ಜಾತಂ ದ್ವಿಕಾರ್ಷಿಕಮ್ ।
ಯವಾನೀಧಾನ್ಯಕಾಜಾಜೀಗ್ರನ್ಥಿವ್ಯೋಷಂ ಪಲಾಂಶಕಮ್ ॥
ಪಲಾನಿ ದಾಡಿಮಾದಷ್ಟೌ ಸಿತಾಯಾಶ್ಚೈಕತಃ ಕೃತಃ ।
ಗುಣೈಃ ಕಪಿತ್ಥಾಷ್ಟಕವಚ್ಚೂರ್ಣೋಽಯಂ ದಾಡಿಮಾಷ್ಟಕಃ ॥
ಭೋಜ್ಯೋ ವಾತಾತಿಸಾರೋಕ್ತೈರ್ಯಥಾವಸ್ಥಂ ಖಲಾದಿಭಿಃ ।

(ವಾ. 328)

ಬಿದಿರುಪ್ಪು ೧ ಕರ್ಷ, ಚಾತುರ್ಜಾತ ೪ ಬಗೆಗಳು ಕೂಡಿ ೨ ಕರ್ಷ, ಓಮ ೧ ಪಲ, ಕೊತ್ತುಂಬರಿ ೧ ಪಲ, ಜೀರಿಗೆ ೧ ಪಲ, ಹಿಪ್ಪಲಿಮೂಲ ೧ ಪಲ, ತ್ರಿಕಟು ೩ ಸೇರಿ ೧ ಪಲ, ದಾಳಿಂಬ ೮ ಪಲ, ಸಕ್ಕರೆ ೮ ಪಲ, ಇವುಗಳ ಚೂರ್ಣಕ್ಕೆ 'ದಾಡಿಮಾಷ್ಟಕ' ಎಂತ ಹೆಸರು. ಇದರಲ್ಲಿ 'ಕಪಿತ್ಥಾಷ್ಟಕ'ದ ಗುಣಗಳೇ ಇರುತ್ತವೆ ಅದನ್ನು ವಾತಾತಿಸಾರಚಿಕಿತ್ಸೆಯಲ್ಲಿ ಹೇಳಲ್ಪಟ್ಟ ಪ್ರಕಾರ ಅವಸ್ಥೆಗೆ ತಕ್ಕ ಹಾಗೆ 'ಖಲ' (ಪಳಿದ್ಯ) ಮುಂತಾದವುಗಳೊಂದಿಗೆ ಭೋಜನಕ್ಕೆ ಉಪಯೋಗಿಸಬಹುದು.

18. (1) ಪ್ರಾಯ 12 ವರ್ಷ. ೨-೩ ವರ್ಷಗಳಿಂದ ದಿನಕ್ಕೆ ೪-೬ ಸರ್ತಿ ಮಲಪ್ರವೃತ್ತಿ, ಆಸನ ಹೊರಗೆ ಬರುವದು, ಅಜೀರ್ತಿ ಮತ್ತು ಬಾಯಾರಿಕೆ.—

ದೃಷ್ಟಫಲ ಚಿಕಿತ್ಸೆ

ಬೊಗರಿಕೆತ್ತೆ ತೊ. ೧, ಶುಂಠಿ ತೊ. ¼, ಹುರಿದ ಜೀರಿಗೆ ತೊ. ¼, ಇವುಗಳ

ಕಷಾಯದ ಕಾಲಂಶದಲ್ಲಿ ಅತಿ. ||, ಪ್ರಕಾರ, ಜೇನು ಕೂಡಿಸಿ, ದಿನಕ್ಕೆ ೨ ಸರ್ತಿ. ಇದರಿಂದ ಪೂರ್ಣಗುಣ.

(2) ಪ್ರಾಯ 55 ವರ್ಷ ೫-೬ ತಿಂಗಳಿಂದ ಗ್ರಹಣಿ, ಈಗ ದಿನಕ್ಕೆ ೧೦-೧೫ ಸರ್ತಿ ತೆಳ್ಳಗಾಗಿ ಮಲ ಹೋಗುತ್ತದೆ.—ಹುರಿದ ಕೊತ್ತುಂಬರಿ, ಹುರಿದ ಜೀರಿಗೆ, ಹುರಿದ ಓಮ, ಬಿಲ್ವಪತ್ರೆಬೇರು, ಸಹ ತೊ. || ರಂತೆ, ಕಷಾಯದ ಅರ್ಧದಲ್ಲಿ ಕ. ೧ರಂತೆ ೬ ದಿನ.—ಮಲ ಪ್ರವೃತ್ತಿ ಸರಿಯಾದರೂ ರುಚಿ ಹುಟ್ಟಲಿಲ್ಲ, ಹಸಿವೆ ಕಡಿಮೆ.—ಅದೇ ಕಷಾಯದಲ್ಲಿ ಆ. ||, ಅತಿ. || ರಂತೆ ೩ ದಿನ.—ಇದರಿಂದ ಕ್ಷೇಮ.

(3) ಪ್ರಾಯ 65 ವರ್ಷ. ದಿನಕ್ಕೆ ೨-೩ ಸರ್ತಿ, ಹೆಚ್ಚಾಗಿ ಬೆಳಿಗ್ಗೆ, ಗೊಬ್ಬುಮಾದರಿಯಾಗಿ ಮಲಪ್ರವೃತ್ತಿ, ಮಲದಲ್ಲಿ ಹೊಳಪು ಉಂಟಂತೆ, ಅಶಕ್ತಿ, ದೀರ್ಘಕಾಲದ ರೋಗ; ನಾಡಿಗಳೊಳಗೆ ವಾತ ಬಲಿ, ಒಂದೊಂದಕ್ಕೆ ತಲೆ ಇಲ್ಲ, ಪಿತ್ತ ಸದಾ ಸ್ಥಾನಚ್ಯುತ, ಕಫದಲ್ಲಿ ಅದೇ ದೋಷ ಸ್ವಲ್ಪ ಕಡಿಮೆಯಾಗಿ ಉಂಟು.—ನೇರಳೆಕೆತ್ತೆ ತೊ. ೧ರ ಕಷಾಯದ ಅರ್ಧದಲ್ಲಿ ಅತಿ. ೧ರಂತೆ, ಜೇನು | ಡ್ರಾಂ ಕೂಡಿಸಿ, ಪ್ರತಿದಿನ ಬೆಳಿಗ್ಗೆ, ಸಂಜೆಯಲ್ಲ ಮಾತ್ರೆ ಬಿಟ್ಟು ಕಷಾಯವನ್ನು ಮಾತ್ರ, ಜೇನು ಕೂಡಿಸಿಕೊಂಡು, ಕುಡಿಯುವದು. ಹೀಗೆ ೧೨ ದಿನ ಮಾಡಿದ್ದರಿಂದ ಕ್ಷೇಮವಾಯಿತು.

19. ಅಂಕೋಲೆ, ಅಣಿಲೆಕಾಯಿ, ಅಫೀಮು, ಕರಿಬೇವು, ಕಾಚಲವಣ, ಕಾಡುಮೆಣಸಿನ ಬೇರು, ಕಾಡುಹೆಸರ ಬೇರು, ಕಾಳುಮೆಣಸು, ಕೊಡಸಿಗ, ಕೊತ್ತುಂಬರಿ, ಗೇರುಕಾಯಿ, ಚಿತ್ರಮೂಲದ ಬೇರು, ಜಾಯಿಕಾಯಿ, ಜೀರಿಗೆ, ಟಂಕಣಕಾರ, ದೊಡ್ಡ (ಹುಚ್ಚು) ಬೇವು, ನೇರಳೆ, ಪಲಾಶದ ಚಕ್ಕ, ಪಾಡಾವಳಿಗಡ್ಡೆ, ಪುನರ್ನವಿಬೇರು, ಪುಲ್ಲಂಪುರಚೆ (ಮ.ಲ. ಪುಳಿಯಾರಲ್), ಬಿಲ್ವಪತ್ರೆ (ಕಾಯಿ ಅಥವಾ ಬೇರು), ಭಂಗಿ, ಭದ್ರಮುಷ್ಟಿ (ಸಣ್ಣಿ), ಮಜ್ಜಿಗೆ, ಮಹಾಶತಾವರಿ (ಊರ್ಧ್ವಮುಖದ ಮುಳ್ಳುಳ್ಳದ್ದು), ಮುರ್ಗಿನಹುಳಿ (ಹುಣಸೆಹುಳಿ ಎಂತ ಕೆಲವರ ಮತ, ವೃಕ್ಷಾಮ್ಲ), ಯವಕ್ಷಾರ, ಬಿಡಲವಣ, ಶರಪುಂಖದ (ಕಾಡುನೀಲಿ) ಬೇರು, ಶುಂಠಿ, ಸಮುದ್ರಉಪ್ಪು, ಸರ್ಜಕ್ಷಾರ, ಸೈಂಧವಲವಣ, ಸೌವರ್ಚಲಲವಣ (ಕರಿಉಪ್ಪು), ಹಬ್ಬೆ (ಹಬುಷಾ, ಇದರ ಸ್ಥಾನದಲ್ಲಿ ಕರಂಡೆ ಬೇರನ್ನು ಕೆಲವರು ಉಪಯೋಗಿಸುತ್ತಾರೆ), ಹಿಂಗು, ಹಿಪ್ಪಲಿ, ಹಿಪ್ಪಲಿಮೂಲ, ಮತ್ತು ಹೊಂಗೆ (ನಾಯಿಪಲ್ಲೆ).

ಪೃಥಗೊಂಗೋಕ್ತ ಷಧಗಳು

20. ನಿದ್ರೆ, ವಮನ, ಲಂಘನ, ಹಳೇ ಶಾಲ್ಯಕ್ಕಿಗಳು, ಹಳೇ ೬೦ ದಿನಗಳ ಬೆಳೆಕೆಯ ಅಕ್ಕಿಗಳು, ಅರಳುಗಂಜಿ, ಚನ್ನಂಗಿಯ, ತೊಗರಿಯ, ಅಥವಾ ಹೆಸರಿನ ಸಾರು, ಕೆನೆ ಪೂರ್ಣವಾಗಿ ತೆಗೆದ ದನದ ಮೊಸರು, ದನದ ಅಥವಾ ಆಡಿನ ಹಾಲಿನಿಂದ ತೆಗೆದ ಬೆಣ್ಣೆ, ಆಡಿನ ತುಪ್ಪ-ಹಾಲು ಮತ್ತು ಮೊಸರು, ಎಳ್ಳೆಣ್ಣೆ, ಹೆಂಡ, ಜೇನು, ಹುಳಿ ಮತ್ತು ಸಿಹಿ ದಾಳಿಂಬಗಳು, ಬಾಳೆಹೂವು, ಬಾಳೆಕಾಯಿ, ಬೇಲದ ಹಣ್ಣು, ಎಳೇ ಬಿಲ್ವಪತ್ರೆಕಾಯಿ, ಪುಲ್ಲಂಪುರಚೆ, ಜೀರಿಗೆ, ಮಜ್ಜಿಗೆ, ನೇರಳೆಹಣ್ಣು, ಲಾವ-ಮೊಲ-ಜಿಂಕೆ-

ಪಥ್ಯವರ್ಗ

ತಿತ್ತಿರಿಗಳ ಮಾಂಸಗಳ ಸಾರುಗಳು, ಸಣ್ಣ ಜಾತಿಯ ಮೀನುಗಳು, ಮತ್ತು ಎಲ್ಲಾ ಚೊಗರು ಪದಾರ್ಥಗಳು.

ಅಪಥ್ಯವರ್ಗ

21. ರಕ್ತ ತೆಗೆಯುವಿಕೆ, ಜಾಗರ, ನೀರು ಕುಡಿಯುವದು, ಸ್ನಾನ, ಸ್ತ್ರೀಸಂಗ, ವೇಗಗಳ ತಡೆ, ನಸ್ಯ, ಅಂಜನ, ಬೆವರಿಸುವಿಕೆ, ಹೊಗೆ ಸೇದುವದು, ಶ್ರಮ, ವಿರುದ್ಧಾಶನ, ಬಿಸಿಲು, ಗೋಧಿ, ಅವರೆ, ಕಲಾಯಧಾನ್ಯ, ಉದ್ದು, ಯವೆ ಗೋಧಿ, ಹಸೀ ಶುಂಠಿ, ಮಜ್ಜಿಗೆಹುಲ್ಲು, ಅಲಸಂಡೆ, ಬಚ್ಚಲ (ಬಸಳೆ)ಸೊಪ್ಪು, ಗಣಿಕೆ(ಕಾಗೆ ಹಣ್ಣಿನ ಗಿಡ), ಬೂದಿಕುಂಬಳಕಾಯಿ, ಸೋರೆಕಾಯಿ, ನುಗ್ಗೆಕೋಡು, ಗಡ್ಡೆಗಳು, ವೀಳ್ಯದೆಲೆ, ಕಬ್ಬು, ಬೊಗರಿಹಣ್ಣು, ಹಲಸಿನ ಹಣ್ಣು, ಸೌತೆಕಾಯಿ, ಅಡಿಕೆ, ಬೆಳ್ಳುಳ್ಳಿ, ಧಾನ್ಯಾಮ್ಲ, ಯವೆಯ ಹುಳಿಗಂಜಿ ನೀರು, ಅಕ್ಕಿಯ ಹುಳಿಗಂಜಿನೀರು, ಹಾಲು, ಬೆಲ್ಲ, ಮೊಸರನೀರು, ತೆಂಗಿನಕಾಯಿ, ಪುನರ್ನವಿ, ಬಿದಿರಮೊಳಕೆ, ಎಲ್ಲಾ ಪತ್ರಶಾಕಗಳು(ಸೊಪ್ಪುಗಳು), ಗೋಮೂತ್ರ, ಕಸ್ತೂರಿ, ಕ್ಷಾರ, ಸರಗುಣವುಳ್ಳ ಎಲ್ಲಾ ಪದಾರ್ಥಗಳು, ದ್ರಾಕ್ಷೆ, ಹುಳಿ, ಉಪ್ಪು ರಸ, ಗುರುವಾದ ಅನ್ನಪಾನಗಳು ಮತ್ತು ಎಲ್ಲಾ ರೊಟ್ಟಿಗಳು.

# ಅಧ್ಯಾಯ XX.

## ಅಗ್ನಿಮಾಂದ್ಯಾಜೀರ್ಣ.

### a. ಅಗ್ನಿಮಾಂದ್ಯ (Anorexy, Weak appetite)

1. ಮನ್ದಸ್ತೀಕ್ಷ್ಣೋಽಥ ವಿಷಮಃ ಸಮಶ್ಚೇತಿ ಚತುರ್ವಿಧಃ ।
ಕಫಪಿತ್ತಾನಿಲಾಧಿಕ್ಯಾತ್ತತ್ಸಾಮ್ಯಾಜ್ಜಾಠರೋಽನಲಃ ॥ (ಮಾ. ನಿ. 69)

ಜಠರಾಗ್ನಿ ಭೇದಗಳು

ಜಠರಾಗ್ನಿಯು ಮಂದ, ತೀಕ್ಷ್ಣ, ವಿಷಮ ಮತ್ತು ಸಮ ಎಂತ ನಾಲ್ಕು ವಿಧ. ಕಫಾಧಿಕ್ಯವು ಮಂದಾಗ್ನಿಗೆ, ಪಿತ್ತಾಧಿಕ್ಯವು ತೀಕ್ಷ್ಣಾಗ್ನಿಗೆ, ವಾತಾಧಿಕ್ಯವು ವಿಷಮಾಗ್ನಿಗೆ, ಮತ್ತು ಮೂರು ದೋಷಗಳು ಸಮವಾಗಿ(ಪ್ರಕೃತಿಸ್ಥಿತಿಯಲ್ಲಿ)ರುವದು ಸಮಾಗ್ನಿಗೆ, ಹೇತುಗಳಾಗಿರುತ್ತವೆ.

2. ವಿಷಮೋ ವಾತಜಾನ್ ರೋಗಾನ್ ತೀಕ್ಷ್ಣಃ ಪಿತ್ತನಿಮಿತ್ತಜಾನ್ ।
ಕರೋತ್ಯಗ್ನಿಸ್ತಥಾ ಮನ್ದೋ ವಿಕಾರಾನ್ ಕಫಸಂಭವಾನ್ ॥
ಸಮಾ ಸಮಾಗ್ನೇರಶಿತಾ ಮಾತ್ರಾ ಸಮ್ಯಗ್ವಿಪಚ್ಯತೇ ।
ಸ್ವಲ್ಪಾಪಿ ನೈವ ಮನ್ದಾಗ್ನೇರ್ವಿಷಮಾಗ್ನೇಸ್ತು ದೇಹಿನಃ ॥
ಕದಾಚಿತ್ಪಚ್ಯತೇ ಸಮ್ಯಕ್ಕದಾಚಿನ್ನ ವಿಪಚ್ಯತೇ ।
ಮಾತ್ರಾತಿಮಾತ್ರಾಪ್ಯಶಿತಾ ಸುಖಂ ಯಸ್ಯ ವಿಪಚ್ಯತೇ ॥
ತೀಕ್ಷ್ಣಾಗ್ನಿರಿತಿ ತಂ ವಿದ್ಯಾತ್ಸಮಾಗ್ನಿಃ ಶ್ರೇಷ್ಠ ಉಚ್ಯತೇ ॥
(ಮಾ. ನಿ. 69)

ಅಗ್ನಿದೋಷಗಳ ಲಕ್ಷಣಗಳು.

ವಿಷಮಾಗ್ನಿಯಿಂದ ವಾತಜರೋಗಗಳೂ, ತೀಕ್ಷ್ಣಾಗ್ನಿಯಿಂದ ಪೈತ್ತಿಕರೋಗಗಳೂ, ಮಂದಾಗ್ನಿಯಿಂದ ಕಫಜರೋಗಗಳೂ ಉಂಟಾಗುತ್ತವೆ. ಸಮಾಗ್ನಿಯುಳ್ಳವನು ತಕ್ಕ ಪ್ರಮಾಣದಲ್ಲಿ ಉಂಡ ಉಚಿತವಾದ ಆಹಾರವು ಚನ್ನಾಗಿ ಪಚನವಾಗುತ್ತದೆ. ಅಗ್ನಿ ಮಂದವಾಗಿರುವ ಮನುಷ್ಯನು ಸ್ವಲ್ಪವಾಗಿ ಉಂಡಾಗ್ಯೂ ಅದು ಪಚನವಾಗುವದೇ ಇಲ್ಲ. ವಿಷಮಾಗ್ನಿಯವನು ಉಂಡದ್ದು ಕೆಲವು ಸಮಯ ಚನ್ನಾಗಿ ಪಚನವಾಗುತ್ತದೆ ಮತ್ತು ಕೆಲವು ಸಮಯ ಚನ್ನಾಗಿ ಪಚನವಾಗುವದಿಲ್ಲ. ತಕ್ಕ ಪ್ರಮಾಣದಲ್ಲಿಯಾಗಲಿ, ಅತಿಯಾಗಿಯಾಗಲಿ ಉಂಡದ್ದು ಯಾರಲ್ಲಿ ಸುಲಭನಾಗಿ ಪಚನವಾಗುತ್ತದೋ, ಅವನು ತೀಕ್ಷ್ಣಾಗ್ನಿಯುಳ್ಳವನೆಂದು ತಿಳಿಯತಕ್ಕದ್ದು. ಸಮಾಗ್ನಿಯು ಶ್ರೇಷ್ಠವಾಗಿರುತ್ತದೆ.

ಷರಾ ಮಂದಾಗ್ನಿಯ ದೆಸೆಯಿಂದ ವಾಂತಿ, ಜಡತನ, ಉಗುಳು, ತಲೆಭಾರ ಮತ್ತು ಹೊಟ್ಟೆಭಾರ, ಮತ್ತು ವಿಷಮಾಗ್ನಿಯ ದೆಸೆಯಿಂದ ಹೊಟ್ಟೆಯುಬ್ಬರ, ಉದಾವರ್ತ, ಶೂಲೆ, ಹೊಟ್ಟೆಭಾರ, ಆಮತಂಕೆ, ಅತಿಸಾರ, ಮತ್ತು ಕರುಳು ಕೂಗುವಿಕೆ ಸಹ ಉಂಟಾಗುತ್ತವೆ ಎಂತ ಭಾ ಪ್ರ (ಪು 343)

3. ಸಮಾಗ್ನಿಂ ರಕ್ಷಯೇನ್ನಿತ್ಯಮನ್ನಪಾನೇನ್ಧನೈರ್ಹಿತೈಃ ।
ಮನ್ದಾಗ್ನಿಂ ಕಟುತಿಕ್ತೈಶ್ಚ ಕಷಾಯೈರ್ವಮನೈರ್ಹಿತೈಃ ॥
ಅಗ್ನಿದೋಷಗಳ ಚಿಕಿತ್ಸಾವಿಧಾನ
ತೀಕ್ಷ್ಣಾಗ್ನಿಂ ಮಧುರಸ್ನಿಗ್ಧೈಃ ವಿರೇಕಗುರುಶೀತಲೈಃ ।
ಸ್ನೇಹಾಮ್ಲಲವಣಾದ್ಯೈಶ್ಚ ವಿಷಮಾಗ್ನಿಮುಪಾಚರೇತ್ ॥
(ಚಿ. ಸಾ. ಸಂ. 169)

ಸಮವಾಗಿರುವ ಅಗ್ನಿಯನ್ನು ನಿತ್ಯದಲ್ಲು (ಸಕಾಲದಲ್ಲಿ) ಹಿತವಾದ ಅನ್ನಪಾನಗಳೆಂಬ ಉರುವಲಗಳಿಂದ ರಕ್ಷಿಸತಕ್ಕದ್ದು. ಮಂದವಾದ ಅಗ್ನಿಯನ್ನು ಕಾರ ಮತ್ತು ಕಹಿದ್ರವ್ಯಗಳಿಂದ ತಯಾರಿಸಲ್ಪಟ್ಟ ಹಿತವಾದ ಕಷಾಯಗಳಿಂದಲೂ, ವಮನಗಳಿಂದಲೂ ಚುರುಕು ಮಾಡಬೇಕು. ತೀಕ್ಷ್ಣವಾದ ಅಗ್ನಿಯುಳ್ಳವನಿಗೆ ಸಿಹಿಯಾದ, ಸ್ನಿಗ್ಧವಾದ, ಗುರುವಾದ, ಮತ್ತು ತಣ್ಣಗಿನ ಕಷಾಯ ಮತ್ತು ವಿರೇಚನಗಳಿಂದ, ಮತ್ತು ವಿಷಮಾಗ್ನಿಯವನಿಗೆ ಸ್ನೇಹ, ಹುಳಿ, ಉಪ್ಪು ಮುಂತಾದವುಗಳಿಂದ, ಉಪಚಾರ ಮಾಡತಕ್ಕದ್ದು.

4. ಅನ್ನಂ ಮಂಡಂ ಪಿಬೇದುಷ್ಣಂ ಹಿಂಗುಸೌವರ್ಚಲಾನ್ವಿತಮ್ ।
ಗಂಜಿಗೆ ಯೋಗಗಳು
ವಿಷಮೋಽಪಿ ಸಮಸ್ತೇನ ಮನ್ದೋ ದೀಪ್ಯೇತ ಪಾವಕಃ ॥
ಸುತಣ್ಡುಲಾನಾಂ ಪ್ರಸೃತದ್ವಯಂ ಚ ತದರ್ಧಮುದ್ಗಃ ಕಟುಕತ್ರಯಂ ಚ ।
ಕುಸ್ತುಮ್ಬುರುಸೈನ್ಧವಹಿಂಗುತೈಲೈರೇಭಿಶ್ಚ ಸರ್ವೈಃ ಕ್ರಿಯತೇ ಚ ಮಣ್ಡಃ ॥
ಕ್ಷುದ್ಬೋಧನೋ ವಸ್ತಿವಿಶೋಧನಶ್ಚ ಪ್ರಾಣಪ್ರದಃ ಶೋಣಿತವರ್ಧನಶ್ಚ ।
ಜ್ವರಾಪಹಾರೀ ಕಫಪಿತ್ತಹನ್ತಾ ವಾಯುಂ ಜಯೇದಷ್ಟಗುಣೋ ಹಿ ಮಣ್ಡಃ ॥ (ಚಿ. ಸಾ. ಸಂ. 169-70)

(1) (ಹುರಿದ) ಹಿಂಗಿನ ಪುಡಿ ಮತ್ತು ಕರಿ(ಸೌವರ್ಚಲ)ಉಪ್ಪನ್ನು ಕೂಡಿಸಿದ ಬಿಸಿಮಂಡ(ಗಂಜಿನೀರು)ವನ್ನು ಆಹಾರವಾಗಿ ಕುಡಿಯಬೇಕು; ಅದರಿಂದ ವಿಷಮವಾದ ಅಗ್ನಿಯು ಸಮವಾಗುತ್ತದೆ ಮತ್ತು ಮಂದವಾದ ಅಗ್ನಿಯು ಚುರುಕಾಗುತ್ತದೆ.

(2) ಒಳ್ಳೇ (ಜೀರ್ಣಕ್ಕೆ ಸುಲಭವಾದ) ಅಕ್ಕಿ ೪ ಪಲ, ಹೆಸರುಬೇಳೆ ೨ ಪಲ, ಕೂಡಿಸಿ ತಯಾರಿಸಿದ ಮಂಡವನ್ನು, ಎಳ್ಳೆಣ್ಣೆಯಲ್ಲಿ ಹುರಿದ ಕೊತ್ತುಂಬರಿ ಮತ್ತು ಹಿಂಗಿನ ಪುಡಿಗಳನ್ನೂ, ಸೈಂಧವಲವಣವನ್ನೂ, ತ್ರಿಕಟುವಿನ ಚೂರ್ಣವನ್ನೂ (ತಕ್ಕಷ್ಟು) ಬೆರಸಿಕೊಂಡು, ಪಾನಮಾಡುವದರಿಂದ ಹಸಿವೆ ಚುರುಕಾಗುವದು, ಮೂತ್ರ ಧಾರಾಳವಾಗಿ ಹೋಗುವದು, ಬಲ ಉಂಟಾಗುವದು, ರಕ್ತ ವೃದ್ಧಿಯಾಗುತ್ತದೆ, ಜ್ವರ ಪರಿಹಾರವಾಗುತ್ತದೆ, ಕಫವೂ ಪಿತ್ತವೂ ನಾಶವಾಗುತ್ತವೆ, ಮತ್ತು ವಾಯು ಜಯಿಸಲ್ಪಡುತ್ತದೆ, ಹೀಗೆ ಈ ಮಂಡದಲ್ಲ ಎಂಟು ಗುಣಗಳಿವೆ.

5. ಹರೀತಕೀ ಭಕ್ಷ್ಯಮಾಣಾ ನಾಗರೇಣ ಗುಡೇನ ವಾ ।
ಅಣಲೆಕಾಯಿಯ ಉಪಯೋಗ
ಸೈನ್ಧವೋಪಹಿತಾ ವಾಽಪಿ ಸಾತತ್ಯೇನಾಗ್ನಿದೀಪನೀ ॥
(ಚಿ. ಸಾ. ಸಂ. 170)

ಅಣಿಲೆಕಾಯಿಯ ಚೂರ್ಣವನ್ನು, (ಹಸೀ) ಶುಂಠಿಯೊಂದಿಗೆ, ಬೆಲ್ಲದೊಂದಿಗೆ, ಅಥವಾ ಸೈಂಧವಲವಣದೊಂದಿಗೆ (ಕಫ-ಪಿತ್ತ-ವಾತ ದೋಷಗಳಲ್ಲಿ ಕ್ರಮವಾಗಿ), ನಿತ್ಯದಲ್ಲಿ ತಿನ್ನುವದರಿಂದ ಅಗ್ನಿದೀಪನ ಉಂಟಾಗುತ್ತದೆ.

6. ಸಿನ್ಧೂತ್ಥಹಿಂಗುತ್ರಿಫಲಾಯವಾನೀವ್ಯೋಷೈರ್ಗುಡಾಂಶೈರ್ಗುಡಕಾನ್ಪ್ರಕು-ರ್ಯಾತ್ ।

ಸೈಂಧವಾದಿ ಚೂರ್ಣ

ತೈರ್ಭಕ್ಷಿತೈಸ್ತೃಪ್ತಿಮವಾ(?ನಾ)ಪ್ನುವನ್ನಾ ಭುಂಜೀತ ಮನ್ದಾಗ್ನಿರಪಿ ಪ್ರಭೂತಮ್ । (ಚಿ. ಸಾ. ಸಂ. 170)

ಸೈಂಧವಲವಣ, (ಹುರಿದ) ಹಿಂಗು, ತ್ರಿಫಲೆ, ಓಮ, ತ್ರಿಕಟು, ಇವುಗಳ ಚೂರ್ಣಕ್ಕೆ ಸಮಾಂಶ ಬೆಲ್ಲವನ್ನು ಕೂಡಿಸಿ, ಗುಳಿಗೆಗಳನ್ನು ಮಾಡಿಟ್ಟುಕೊಂಡು, ಭಕ್ಷಿಸುತ್ತಾ ಬಂದಲ್ಲಿ, ಮನುಷ್ಯನು, ಮಂದಾಗ್ನಿಯವನಾದರೂ, ತೃಪ್ತಿಯಿಲ್ಲದೆ ಹೆಚ್ಚು ಉಣ್ಣುವನು.

7. ವಿಡಂಗಭಲ್ಲಾತಕಚಿತ್ರಕಾಮೃತಾ(?) ಸನಾಗರಾ(?) ತುಲ್ಯಗುಡೇನ ಸರ್ಪಿಷಾ ।

ವಿಡಂಗಾದಿ ಲೇಹ

ಲಿಹನ್ತಿ ಯೇ ಮನ್ದಹುತಾಶನಾ ನರಾ ಭವನ್ತಿ ತೇ ಬಾಡವತುಲ್ಯವಹ್ನಯಃ॥ (ಚಿ. ಸಾ. ಸಂ. 170)

ವಾಯುವಿಳಂಗ, (ಶುದ್ಧ) ಗೇರುಕಾಯಿ, (ಶುದ್ಧ) ಚಿತ್ರಮೂಲ, ಅಮೃತಬಳ್ಳಿ, ಶುಂಠಿ, ಇವುಗಳ ಚೂರ್ಣಕ್ಕೆ ಸಮಪಾಲು ಬೆಲ್ಲವನ್ನೂ, ತುಪ್ಪವನ್ನೂ ಕೂಡಿಸಿ, ನೆಕ್ಕಲು, ಮಂದಾಗ್ನಿಯವರ ಜಠರಾಗ್ನಿಗಳು ಬಡವಾಗ್ನಿಗೆ ಸದೃಶವಾಗುತ್ತವೆ.

8. ಶುಂಠೀಚೂರ್ಣಸಮಾಯುಕ್ತಂ ಯವಕ್ಷಾರಂ ಸಮಾಲಿಹೇತ್ ।

ಶುಂಠೀಚೂರ್ಣ

ಸರ್ಪಿಷಾ ಪ್ರಾತರುತ್ಥಾಯ ತತೋ ವಹ್ನಿಪ್ರದೀಪನಮ್ ॥ (ಚಿ. ಸಾ. ಸಂ. 170)

ಶುಂಠೀಚೂರ್ಣದೊಂದಿಗೆ ಯವಕ್ಷಾರವನ್ನು ತುಪ್ಪದಲ್ಲಿ ಕಲಸಿ ಉದಯಕಾಲದಲ್ಲಿ ಎದ್ದ ಕೂಡಲೆ ನೆಕ್ಕುವದರಿಂದ ಅಗ್ನಿದೀಪನ ಉಂಟಾಗುತ್ತದೆ.

9. ವಿಜಯಾ ಪಿಪ್ಪಲೀ ಶುಂಠೀ ತ್ರಿಸಮಂ ಪರಿಕೀರ್ತಿತಮ್ ।

ತ್ರಿಸಮಚೂರ್ಣ

ಅಗ್ನಿಸನ್ದೀಪನಂ ನೄಣಾಂ ತೃಟ್‌ದೋಷಮಯನಾಶನಮ್ ॥ (ಚಿ. ಸಾ ಸಂ. 170)

ಅಣಿಲೆಕಾಯಿ, ಹಿಪ್ಪಲಿ, ಶುಂಠಿ, ಇವುಗಳ ಚೂರ್ಣಗಳು ಮೂರು ಸಮವಾಗಿ ಕೂಡಿದ್ದಕ್ಕೆ ತ್ರಿಸಮ ಎಂಬ ಹೆಸರು ಪ್ರಸಿದ್ಧ. ಅದರ ಉಪಯೋಗದಿಂದ ಜನರಿಗೆ ಅಗ್ನಿ ಚೆನ್ನಾಗಿ ಚುರುಕಾಗುತ್ತದೆ ಮತ್ತು ಬಾಯಾರಿಕೆಯ ದೋಷದ ಪೀಡೆ ನಾಶವಾಗುತ್ತದೆ.

ಪರಾ ಅಣಿಲೆಕಾಯಿ, ಶುಂಠಿ ಮತ್ತು ಬೆಲ್ಲ, ಈ ಮೂರರ ಯೋಗಕ್ಕೆ 'ತ್ರಿಸಮ' ಎಂಬ ಹೆಸರು ಎಂತ ರಾಜನಿಘಂಟು (ಪು. 419)

10. ಉಪವಾಸಾದಿಮನ್ದಾಗ್ನಿರ್ಯವಾಗೂಭಿಃ ಪಿಬೇದ್ಘೃತಮ್ ।
ರೌಕ್ಷ್ಯೇ ಮನ್ದೇ ಪಿಬೇತ್ಸರ್ಪಿಃ ತೈಲಂ ವಾ ದೀಪನೈರ್ಯುತಮ್ ॥
ಚೂರ್ಣಾರಿಷ್ಟಾಸವೈರ್ಮನ್ದಮಭಿಸ್ನೇಹಾದುಪಾಚರೇತ್ ।
ಭಿನ್ನೇ ಗುದೋಪಲೇಪಾಸ್ತು ಮಲೇ ತೈಲಸುರಾಸವಾಃ ॥
ಉದಾವರ್ತೇ ತು ಮನ್ದಾಗ್ನೌ ನಿರೂಹಾಃ ಸಾನುವಾಸನಾಃ ।
ವ್ಯಾಧಿಯುಕ್ತಸ್ಯ ಮನ್ದಾಗ್ನೌ ಸರ್ಪಿರೇವಾಗ್ನಿದೀಪನಮ್ ॥

ಕಾರಣವಿಶೇಷಗಳಿಂದುಂಟಾದ ಮಂದಾಗ್ನಿಯ ಚಿಕಿತ್ಸಾವಿಧಾನ

(ಚಿ. ಸಾ. ಸಂ. 171)

ಉಪವಾಸ ಮುಂತಾದ ಹೇತುಗಳಿಂದ ಉಂಟಾದ ಅಗ್ನಿಮಾಂದ್ಯದಲ್ಲಿ ಯವಾಗೂ ಎಂಬ ಗಂಜಿಗಳೊಂದಿಗೆ ತುಪ್ಪವನ್ನು ಕುಡಿಯಬೇಕು. ರೂಕ್ಷಪದಾರ್ಥಗಳ ಸೇವನದಿಂದ ಅಗ್ನಿಮಾಂದ್ಯ ಉಂಟಾದಲ್ಲಿ ಅಗ್ನಿದೀಪನಕರವಾದ ಔಷಧಗಳ ಸೇರಿಕೆಯಿಂದ ತಯಾರಿಸಲ್ಪಟ್ಟ ತುಪ್ಪ ಅಥವಾ ತೈಲವನ್ನು ಪಾನಮಾಡತಕ್ಕದ್ದು. ಸ್ನೇಹವನ್ನು ಅತಿಯಾಗಿ ಉಪಯೋಗಿಸಿ ಅಗ್ನಿಮಾಂದ್ಯ ಉಂಟಾದ ಸಂಗತಿಯಲ್ಲಿ ತಕ್ಕ ಚೂರ್ಣ-ಅರಿಷ್ಟ-ಆಸವಗಳನ್ನು ಕೊಟ್ಟು ಉಪಚರಿಸಬೇಕು. ಮಲ ಒಡೆದಿರುವ ಸಂದರ್ಭದಲ್ಲಿ ತೈಲ-ಹೆಂಡ-ಆಸವಗಳನ್ನೂ, ಗುದಕ್ಕೆ ಲೇಪಗಳನ್ನೂ ಉಪಯೋಗಿಸುವದು. ಉದಾವರ್ತರೋಗದ ಮಂದಾಗ್ನಿಗೆ ನಿರೂಹ-ಮತ್ತು ಅನುವಾಸನ-ವಸ್ತಿಗಳು ಹಿತ. (ಬೇರೆ) ವ್ಯಾಧಿಯುಳ್ಳವನ ಮಂದಾಗ್ನಿಯನ್ನು ಚುರುಕುಮಾಡುವದಕ್ಕೂ (ತಕ್ಕ ಔಷಧಗಳಿಂದ ಕಾಯಿಸಲ್ಪಟ್ಟ) ತುಪ್ಪವೇ ಹಿತವಾದ್ದು.

11. ಹಿಂಗುವ್ಯೋಷಾಜಮೋದಾದ್ವಿಜರಣಲವಣಂ ಪ್ರಾಗ್ಘೃತೇನಾಜ್ಯಭಕ್ತಂ ।
ಕುರ್ಯಾಜ್ಜಾಜ್ವಲ್ಯಮಾನಂ ಜ್ವಲನಮನಿಲಜಂ ಗುಲ್ಮಮೇತನ್ನಿಹನ್ತಿ ॥

ಹಿಂಗ್ವಾದಿಚೂರ್ಣ

(ವೈ. ಜೀ. ದೀ. 78)

(ಹುರಿದ) ಹಿಂಗು, ತ್ರಿಕಟು, ಅಜಮೋದ, ಜೀರಿಗೆ, ಕರಿಜೀರಿಗೆ, ಸೈಂಧವಲವಣ, ಇವುಗಳ ಚೂರ್ಣವನ್ನು ಊಟದ ಆರಂಭದಲ್ಲಿ ತುಪ್ಪಾನ್ನದೊಂದಿಗೆ ಭುಂಜಿಸಲು, ಅಗ್ನಿಯು ಚೆನ್ನಾಗಿ ಪುಟವಾಗುವದು. ಈ ಚೂರ್ಣದಿಂದ ವಾತದ ಗುಲ್ಮ ಸಹ ನಾಶವಾಗುತ್ತದೆ.

12. ವೃಕ್ಷಾಮ್ಲಾಮ್ಲಾಗ್ನಿಪಥ್ಯಾತ್ರಿಕಟುಪಟುಬಿಡಂ ಜನ್ತುಜಿಜ್ಜೀರಯುಗ್ಮಂ ।
ದೀಪ್ಯಃ ಸೌವರ್ಚಲಂ ಚಾಚಲಮಪಿ ಸಕಲಂ ಭಸ್ಮಸಾಚ್ಚ ಕರೀತಿ ॥

ವೃಕ್ಷಾಮ್ಲಾದಿ ಚೂರ್ಣ.

(ವೈ. ಜೀ. ದೀ. 78)

ಮುರ್ಗಿನಹುಳಿ (ಅಥವಾ ಹುಣಸೆಹುಳಿ), ಪುಲ್ಲಂಪುರಚೆ, ಚಿತ್ರಮೂಲ ಅಣಿಲೆಕಾಯಿ, ತ್ರಿಕಟು, ಸೈಂಧವಲವಣ, ಬಿಡಲವಣ, ವಾಯುವಿಳಂಗ, ಜೇರಿಗೆ, ಕರಿಜೀರಿಗೆ ಓಮ, ಸೌವರ್ಚಲಲವಣ, ಇವುಗಳ ಚೂರ್ಣವನ್ನು (ಹಿಂದಿನ ಹಿಂಗ್ವಾದಿಚೂರ್ಣಕ್ಕೆ ಹೇಳಲ್ಪಟ್ಟಂತೆ) ಸೇವಿಸಿದರೆ ಅದು ಪರ್ವತವನ್ನಾದರೂ ಭಸ್ಮಮಾಡುವದು (ಅಗ್ನಿಯು ಒಳ್ಳೆ ಚುರಕಾಗುವದು).

## b. ಅಜೀರ್ಣ (Indigestion, Dyspepsia).

13. ಆಮಂ ವಿದಗ್ಧಂ ವಿಷ್ಟಬ್ಧಂ ಕಫಪಿತ್ತಾನಿಲೈಸ್ತ್ರಿಭಿಃ ।
ಅಜೀರ್ಣಂ ಕೇಚಿದಿಚ್ಛನ್ತಿ ಚತುರ್ಥಂ ರಸಶೇಷತಃ ॥ (ಸು. 239)

ಅಜೀರ್ಣದಲ್ಲಿ ಭೇದಗಳು

ಕಫದಿಂದ ಆಮಾಜೀರ್ಣ, ಪಿತ್ತದಿಂದ ವಿದಗ್ಧಾಜೀರ್ಣ, ವಾತದಿಂದ ವಿಷ್ಟಬ್ಧಾಜೀರ್ಣ, ಹೀಗೆ ಅಜೀರ್ಣ ಮೂರು ವಿಧ. ಕೆಲವರ ಮತದಲ್ಲಿ ರಸಶೇಷದಿಂದ ಉಂಟಾಗುವ ಅಜೀರ್ಣ ಬೇರೆ, ಒನೇದು, ಇದೆ.

ಷರಾ ಪ್ರಥಮ ಮೂರು ಅಜೀರ್ಣಗಳು ಉಂಡ ಆಹಾರ ಜೀರ್ಣವಾಗದೆ ಉಳಿಯುವದರಿಂದ ಉಂಟಾಗುವಂಥವು, ನಾಲ್ಕನೇದು ಆಹಾರಪಾಕದಿಂದ ರಸ ಉತ್ಪನ್ನವಾದ ಮೇಲೆ ಅದು ಧಾತ್ವಂತರವಾಗದೆ ಉಳಿದುದರಿಂದ ಸಂಭವಿಸುವಂಥಾದ್ದು, ಇದು ವಿಷಾಜೀರ್ಣ ಎಂತ ಶಾ (1ನೇ ಭಾಗದ VII - 6 ನೋಡಿ). ಒಂದು ದಿನ ಉಳಿದು ಮರುದಿನ ಪಾಕವಾಗುವದೊಂದು, ಪ್ರತಿದಿನ ಸ್ವಾಭಾವಿಕ ಪಾಕ ಆಗುವವರೆಗಿನ ಅಜೀರ್ಣ ಒಂದು, ಹೀಗೆ ಬೇರೆ ಎರಡು ಅಜೀರ್ಣಗಳಿವೆ ಎಂತ ಕೆಲವರು ಹೇಳಿದ್ದಾರೆ (ಮಾ ಸಿ 70) ಅವು ರೋಗಗಳಲ್ಲವಾದ್ದರಿಂದ, ಸುಶ್ರುತನ ಅಜೀರ್ಣವಿಭಾಗದಲ್ಲಿ ಅವುಗಳನ್ನು ಸೇರಿಸದೆ ಬಿಟ್ಟಿದ್ದಾಗಿರಬೇಕು

14. ಅತ್ಯಮ್ಬುಪಾನಾದ್ವಿಷಮಾಶನಾದ್ವಾ ಸನ್ಧಾರಣಾತ್ಸ್ವಪ್ನವಿಪರ್ಯಯಾಚ್ಚ ।
ಕಾಲೇಽಪಿ ಸಾತ್ಮ್ಯಂ ಲಘು ಚಾಪಿ ಭುಕ್ತಮನ್ನಂ ನ ಪಾಕಂ ಭಜತೇ ನರಸ್ಯ ॥
ಈರ್ಷ್ಯಾಭಯಕ್ರೋಧಪರಿಕ್ಷತೇನ ಲುಬ್ಧೇನ ರುಗ್ದೈನ್ಯನಿಪೀಡಿತೇನ ।
ಪ್ರದ್ವೇಷಯುಕ್ತೇನ ಚ ಸೇವ್ಯಮಾನಮನ್ನಂ ನ ಸಮ್ಯಕ್ಪರಿಣಾಮಮೇತಿ ॥
ಮಾಧುರ್ಯಮನ್ನಂ ಗತಮಾಮಸಂಜ್ಞಂ ವಿದಗ್ಧಸಂಜ್ಞಂ ಗತಮಮ್ಲಭಾವಮ್ ।
ಕಿಂಚಿದ್ವಿಪಕ್ವಂ ಭೃಶತೋದಶೂಲಂ ವಿಷ್ಟಬ್ಧಮಾಬದ್ಧವಿರುದ್ಧವಾತಮ್ ॥
ಉದ್ಗಾರಶುದ್ಧಾವಪಿ ಭುಕ್ತಕಾಂಕ್ಷಾ ನ ಜಾಯತೇ ಹೃದ್ಗುರುತಾ ಚ ಯಸ್ಯ ।
ರಸಾವಶೇಷೇಣ ತು ಸಪ್ರಸೇಕಂ ಚತುರ್ಥಮೇತತ್ಪ್ರವದನ್ತ್ಯಜೀರ್ಣಮ್ ॥
(ಸು. 239)

ಅಜೀರ್ಣದ ನಿದಾನ ಮತ್ತು ಲಕ್ಷಣ

ಅತಿಯಾಗಿ ನೀರು ಕುಡಿಯುವದರಿಂದ, ವಿಷಮವಾದ ಭೋಜನ ಮಾಡುವದರಿಂದ, (ಮಲಮೂತ್ರಾದಿ) ವೇಗಗಳನ್ನು ತಡೆಯುವದರಿಂದ, ಅಥವಾ ನಿದ್ರೆಮಾಡುವದರಲ್ಲಿ ಕ್ರಮತಪ್ಪುವದರಿಂದ (ರಾತ್ರಿ ಜಾಗರಣ ಹಗಲು ನಿದ್ರೆ ಮುಂತಾದ್ದು), ಮನುಷ್ಯರು ತಕ್ಕ ಕಾಲದಲ್ಲಿ ಸಾತ್ಮ್ಯವಾದ ಮತ್ತು ಲಘುವಾದ ಭೋಜನವನ್ನು ಮಾಡಿದಾಗ್ಗೆ ಸಹ, ಆಹಾರವು ಪಾಕವಾಗುವದಿಲ್ಲ, ಹಾಗೆಯೇ ಹೊಟ್ಟೆಕಿಚ್ಚು, ಭಯ, ಸಿಟ್ಟು, ಲೋಭ, ಇವುಗಳಿಗಾಧೀನನಾದ, ರೋಗದ ಹೈರಾಣದಿಂದ ಪೀಡಿತನಾದ ಮತ್ತು ವಿಶೇಷವಾದ ದ್ವೇಷ ಉಂಟಾಗಿರುವ, ಮನುಷ್ಯನು ಉಣ್ಣುವ ಆಹಾರವು ಚನ್ನಾಗಿ ಪಾಕವಾಗುವದಿಲ್ಲ.

ಸಿಹಿ ಭಾವವನ್ನು ಪಡೆದ ಆಹಾರಕ್ಕೆ 'ಆಮ', ಅಲ್ಪವಾದ ಪಾಕ ಉಂಟಾಗಿ ಹುಳಿ ಭಾವವನ್ನು (ಪರಿವರ್ತನೆಯನ್ನು) ಹೊಂದಿದ ಆಹಾರಕ್ಕೆ 'ವಿದಗ್ಧ', ವಾತವು ಸಂಚಾರವಿಲ್ಲದೆ, ಬಹಳವಾಗಿ ಬಿಗಿದಿದ್ದು, ಹೆಚ್ಚು ನೋವೂ ಶೂಲೆಯೂ ಉಂಟಾಗಿರುವದಕ್ಕೆ ವಿಷ್ಟಬ್ಧ, ಎನ್ನುವ

ದಾಗಿರುತ್ತದೆ. ತೇಗು ಶುದ್ಧವಾಗಿದ್ದರೂ, ಆಹಾರದ ಇಚ್ಛೆ ಇಲ್ಲದಿರುವಿಕೆ, ಎದೆಭಾರ, ಮತ್ತು ಬಾಯಿಯಿಂದ ನೀರು ಬರುವದು, ಈ ಲಕ್ಷಣಗಳುಳ್ಳ ಅಜೀರ್ಣವು ನಾಲ್ಕನೆಯದಾದ 'ರಸಶೇಷ'ದಿಂದುಂಟಾದಂಥಾದ್ದೆಂತ ಹೇಳುತ್ತಾರೆ.

ಪರಾ 'ವಿಷಮಾಶನ'ದ ವಿವರಣಕ್ಕೆ 1ನೇ ಭಾಗದ X-26 ನೋಡಿ.

ಅನಾತ್ಮವನ್ತಃ ಪಶುವದ್ಭುಂಜತೇ ಯೇ ಽಪ್ರಮಾಣತಃ ।
ರೋಗಾನೀಕಸ್ಯ ತೇ ಮೂಲಮಜೀರ್ಣಂ ಪ್ರಾಪ್ನುವನ್ತಿ ಹಿ ॥
(ಮಾ. ನ. 72)

ಪಶುಗಳಂತೆ ಧೃತಿಯಿಲ್ಲದೆ, ಪ್ರಮಾಣ ತಪ್ಪಿ, ಯಾರು ಉಣ್ಣುತ್ತಾರೋ, ಅವರು ರೋಗಗಳ ಸಮೂಹಕ್ಕೆ ಕಾರಣವಾದ ಅಜೀರ್ಣವನ್ನು ನಿಶ್ಚಯವಾಗಿ ಪಡೆಯುತ್ತಾರೆ.

ಗ್ಲಾನಿರ್ಗೌರವಮಾಟೋಪಂ ಭ್ರಮೋ ಮಾರುತಮೂಢತಾ ।
ವಿಬನ್ಧೋಽತಿಪ್ರವೃತ್ತಿರ್ವಾ ಸಾಮಾನ್ಯಾಜೀರ್ಣಲಕ್ಷಣಮ್ ॥
(ಚಿ. ಸಾ. ಸಂ. 171)

ತತ್ರಾಮೇ ಗುರುತೋತ್ಕ್ಲೇದಃ ಶೋಥೋ ಗಂಡಾಕ್ಷಿಕೂಟಗಃ ।
ಉದ್ಗಾರಶ್ಚ ಯಥಾಭುಕ್ತಮವಿದಗ್ಧಃ ಪ್ರವರ್ತತೇ ॥
ವಿದಗ್ಧೇ ಭ್ರಮತೃಣ್ಮೂರ್ಛಾಃ ಪಿತ್ತಾಚ್ಚ ವಿವಿಧಾ ರುಜಃ ।
ಉದ್ಗಾರಶ್ಚ ಸಧೂಮಾಮ್ಲಃ ಸ್ವೇದೋ ದಾಹಶ್ಚ ಜಾಯತೇ ॥
ವಿಷ್ಟಬ್ಧೇ ಶೂಲಮಾಧ್ಮಾನಂ ವಿವಿಧಾ ವಾತವೇದನಾಃ ।
ಮಲವಾತಾಪ್ರವೃತ್ತಿಶ್ಚ ಸ್ತಮ್ಭೋ ಮೋಹಾಂಗಪೀಡನಮ್ ॥
ರಸಶೇಷೇ ಽನ್ನವಿದ್ವೇಷೋ ಹೃದಯಾಶುದ್ಧಿಗೌರವೇ ॥
(ಮಾ. ನಿ. 71-72)

ಆಯಾಸ, ದೇಹಭಾರ, ಹೊಟ್ಟೆಯಲ್ಲಿ ಶಬ್ದ, ತಲೆತಿರುಕು, ವಾಯುವಿನ ಸ್ತಬ್ಧತೆ, ಮಲದ ಬದ್ಧತೆ ಅಥವಾ ಅತಿಯಾದ ಪ್ರವೃತ್ತಿ, ಇವು ಸಾಮಾನ್ಯವಾಗಿ ಅಜೀರ್ಣದ ಲಕ್ಷಣಗಳು.

ಆಮಾಜೀರ್ಣದಲ್ಲಿ ಮೈಭಾರ, ವಾಂತಿ ಬರುವ ಹಾಗಿನ ಸಂಕಟ, ಕಪೋಲ ಮತ್ತು ಕಣ್ಣಿನ ಸ್ಥಾನಗಳಲ್ಲಿ ಶೋಫೆ (ಊದು), ಉಂಡಂತೆ ತೇಗು ಬರುವದು ಮತ್ತು ಅದು ಅಜೀರ್ಣದ್ದಾಗಿರುವದು, ಈ ಲಕ್ಷಣಗಳು ಹೊರಡುತ್ತವೆ. ವಿದಗ್ಧಾಜೀರ್ಣದಲ್ಲಿ ತಲೆತಿರುಕು, ಬಾಯಾರಿಕೆ, ಮೂರ್ಛೆ, ಪಿತ್ತದಿಂದ ನಾನಾ ವಿಧದ ಸಂಕಟಗಳು, ಹೊಗೆಯುಳ್ಳ ಹುಳಿತೇಗು, ಬೆವರು, ಮತ್ತು ಉರಿ ಉಂಟಾಗುತ್ತವೆ. ವಿಷ್ಟಬ್ಧಾಜೀರ್ಣದಲ್ಲಿ ಶೂಲೆ, ಹೊಟ್ಟೆಯುಬ್ಬರ, ವಾತದ ನಾನಾ ವಿಧದ ವೇದನೆಗಳು, ಮಲ ಮತ್ತು ವಾಯು ಪ್ರವೃತ್ತಿಯಾಗದಿರುವಿಕೆ, ಜಡತ್ವ, ಭ್ರಮೆ ಮತ್ತು ಅಂಗಗಳಲ್ಲಿ ಪೀಡೆ ಸಂಭವಿಸುವವು. ರಸಶೇಷದ ಅಜೀರ್ಣದಲ್ಲಿ ಅನ್ನದ ಮೇಲೆ ವಿಶೇಷವಾದ ದ್ವೇಷ, ಎದೆಯ ಅಶುದ್ಧತೆ ಮತ್ತು ಮೈಭಾರ ಉಂಟಾಗುತ್ತವೆ.

15. ಮೂರ್ಚ್ಛಾ ಪ್ರಲಾಪೋ ವಮಥುಃ ಪ್ರಸೇಕಃ ಸದನಂ ಭ್ರಮಃ ।
ಉಪದ್ರವಾ ಭವನ್ತ್ಯೇತೇ ಮರಣಂ ಚಾಪ್ಯಜೀರ್ಣತಃ ॥ (ಸು. 239)

ಅಜೀರ್ಣದ ಉಪದ್ರವಗಳು

ಮೂರ್ಛೆ, ಅಸಂಬದ್ಧಮಾತು, (ಪ್ರಲಾಪ), ವಾಂತಿ, ಬಾಯಿಯಲ್ಲಿ ಜೊಲ್ಲು, ಆಯಾಸ, ಭ್ರಮೆ, ಈ ಉಪದ್ರವಗಳು ಮತ್ತು ಮರಣ ಸಹ ಅಜೀರ್ಣದಿಂದ ಉಂಟಾಗುತ್ತವೆ.

16. ತತ್ರಾಮೇ ಲಂಘನಂ ಕಾರ್ಯಂ ವಿದಗ್ಧೇ ವಮನಂ ಹಿತಮ್ ।
ವಿಷ್ಟಬ್ಧೇ ಸ್ವೇದನಂ ಪಥ್ಯಂ ರಸಶೇಷೇ ಶಯೀತ ಚ ॥ (ಸು. 239)

ಸಾಮಾನ್ಯ ಚಿಕಿತ್ಸಾ ವಿಧಾನ

ಆಮಾಜೀರ್ಣದಲ್ಲಿ ಲಂಘನವೂ, ವಿದಗ್ಧಾಜೀರ್ಣದಲ್ಲಿ ವಮನವೂ, ವಿಷ್ಟಬ್ಧಾಜೀರ್ಣದಲ್ಲಿ ಬೆವರಿಸುವದೂ (ಕಾವುಕೊಡುವದು), ರಸಶೇಷದಲ್ಲಿ ನಿದ್ರೆ ಮಾಡಿಸುವದೂ ಹಿತ.

ಷರಾ ಆಮದಲ್ಲಿ ವಮನ ಮತ್ತು ವಿದಗ್ಧದಲ್ಲಿ ಲಂಘನ ಹಿತವಾಗುತ್ತವೆ ಎಂಬ ಅರ್ಥದ ಪಾಠಾಂತರ ಉಂಟೆಂತ ಕಾಣುತ್ತದೆ ಆಮವು ಕಫಜನ್ಯವಾದ್ದರಿಂದ ವಮನ ಅದಕ್ಕೆ ಉಚಿತವಾಗಬೇಕು ಸಾಧಾರಣವಾಗಿ ಪಿತ್ತಕ್ಕೆ ವಮನ ಹಿತವಲ್ಲ ಈ ವಿಚಾರದಲ್ಲಿ ಆ ಪಾಠಾಂತರ ಸಮಕಾಣುತ್ತದೆ. ಮುಂದಿನ 17ನೇ ಸಂಖ್ಯೆ ನೋಡಿ.

ವಾಮಯೇದಾಶು ತಂ ತಸ್ಮಾದುಷ್ಣೇನ ಲವಣಾಮ್ಬುನಾ ।
ಕಾರ್ಯಂ ಚಾನಶನಂ ತಾವದ್ಯಾವನ್ನ ಪ್ರಕೃತಿಂ ಭಜೇತ್ ॥
ಲಘುಕಾಯಮತಶ್ಚೈನಂ ಲಂಘನೈಃ ಸಮುಪಾಚರೇತ್ ।
ಯಾವನ್ನ ಪ್ರಕೃತಿಸ್ಥಃ ಸ್ಯಾದ್ದೋಷತಃ ಪ್ರಾಣತಸ್ತಥಾ ॥ (ಸು. 239)

ಆದ್ದರಿಂದ ಅವನಿಗೆ (ಅಜೀರ್ಣರೋಗಿಗೆ) ಉಪ್ಪು ಕೂಡಿಸಿದ ಬಿಸಿನೀರನ್ನು (ವಾಂತಿ ಮಾಡಿಸಬೇಕಾದಲ್ಲಿ) ಬೇಗನೆ ಕೊಟ್ಟು ವಾಂತಿ ಮಾಡಿಸಬೇಕು, ಮತ್ತು (ಲಂಘನ ಮಾಡಬೇಕಾದಲ್ಲಿ) ಅವನು ಸ್ವಾಭಾವಿಕ ಸ್ಥಿತಿಗೆ ಬರುವ ವರೆಗೆ ಉಪವಾಸ ಮಾಡಿಸಬೇಕು. ಈ ಕ್ರಮಗಳಿಂದ ಅವನ ದೇಹವು ಲಘುವಾದ ಮೇಲೆ, ಅವನು ದೋಷವಿಚಾರದಲ್ಲಿಯೂ ಬಲದಲ್ಲಿಯೂ ಸ್ವಾಭಾವಿಕಸ್ಥಿತಿಗೆ ಬಂದು ನಿಲ್ಲುವತನಕ (ದಶವಿಧವಾದ) ಲಂಘನಗಳಿಂದ ಅವನನ್ನು ಉಪಚರಿಸತಕ್ಕದ್ದು.

ಷರಾ: ದಶವಿಧ ಲಂಘನದ ವಿವರಣಕ್ಕೆ 1ನೇ ಭಾಗದ XIX-38 ನೋಡಿ

17. ವಚಾಲವಣತೋಯೇನ ವಾನ್ತಿರಾಮೇ ಪ್ರಶಸ್ಯತೇ ।
ಧಾನ್ಯನಾಗರಸಿದ್ಧಂ ವಾ ತೋಯಂ ದದ್ಯಾದ್ವಿಚಕ್ಷಣಃ ॥
ಆಮಾಜೀರ್ಣಪ್ರಶಮನಂ ಶೂಲಘ್ನಂ ವಸ್ತಿಶೋಧನಮ್ ॥
(ಚಿ. ಸಾ. ಸಂ. 172)

ಆಮಾಜೀರ್ಣದ ಚಿಕಿತ್ಸೆ

ಆಮಾಜೀರ್ಣದಲ್ಲಿ ಬಜೆಯ ಚೂರ್ಣ ಮತ್ತು ಉಪ್ಪು ಕೂಡಿಸಿದ (ಸುಖೋಷ್ಣವಾದ) ನೀರನ್ನು ಕುಡಿಸಿ ವಾಂತಿ ಮಾಡಿಸುವದು ಪ್ರಶಸ್ತ. ಅಥವಾ ಕೊತ್ತುಂಬರಿ ಮತ್ತು ಶುಂಠಿ ಕೂಡಿಸಿ ಕಾಯಿಸಿದ ನೀರನ್ನು ಬುದ್ಧಿಶಾಲಿಯು ಅವನಿಗೆ ಕುಡಿಯಕೊಡಬೇಕು; ಅದರಿಂದ ಆಮಾಜೀರ್ಣ ಶಮನವಾಗುವದಲ್ಲದೆ. ಶೂಲೆಯು ನಾಶವಾಗುತ್ತದೆ ಮತ್ತು ವಸ್ತಿಶೋಧನವಾಗುತ್ತದೆ (ಮೂತ್ರ ಧಾರಾಳವಾಗಿ ಹೋಗುತ್ತದೆ).

18. ಅನ್ನಂ ವಿದಗ್ಧಂ ಹಿ ನರಸ್ಯ ಶೀಘ್ರಂ ಶೀತಾಮ್ಬುನಾ ವೈ ಪರಿಪಾಕಮೇತಿ |
ತದ್ಧ್ಯಸ್ಯ ಶೈತ್ಯೇನ ನಿಹನ್ತಿ ಪಿತ್ತಮಾಕ್ಲೇದಿಭಾವಾಚ್ಚ ನಯತ್ಯಧಸ್ತಾತ್ ||
ವಿದಗ್ಧಾಜೀರ್ಣದ ಚಿಕಿತ್ಸೆ
ವಿದಹ್ಯತೇ ಯಸ್ಯ ತು ಭುಕ್ತಮಾತ್ರೇ ದಹ್ಯೇತ ಹೃತ್ಕಂಠಗಲಂ ಚ ಯಸ್ಯ |
ದ್ರಾಕ್ಷಾಭಯಾಂ ಮಾಕ್ಷಿಕಸಂಪ್ರಯುಕ್ತಾಂ ಲೀಢ್ವಾಭಯಾಂ ವಾ ಸ ಸುಖಂ ಲಭೇತ || (ಸು. 240)

ಮನುಷ್ಯನಲ್ಲಿ ವಿದಗ್ಧವಾದ ಆಹಾರವು ತಣ್ಣಗಾದ ನೀರನ್ನು ಪಾನಮಾಡುವದರಿಂದ ಬೇಗನೆ ನಿಶ್ಚಯವಾಗಿ ಸರಿಯಾದ ಪಾಕವನ್ನು ಹೊಂದುತ್ತದೆ; ಯಾಕೆಂದರೆ, ಅದು ತನ್ನ ಶೀತ ಗುಣದಿಂದ ಅವನ ಪಿತ್ತವನ್ನು ನಾಶಮಾಡುತ್ತದೆ ಮತ್ತು ಒದ್ದೆಮಾಡುವ (ನೆನೆಸುವ) ಗುಣದಿಂದ ಆಹಾರವನ್ನು ಕೆಳಗೆ ಸಾಗಿಸುತ್ತದೆ. ಯಾರಲ್ಲಿ ಅನ್ನವು ಉಂಡಕೂಡಲೆ ವಿದಗ್ಧವಾಗಿ, ಎದೆಯಲ್ಲಿಯೂ, ಕಂಠದಲ್ಲಿಯೂ, ಗಂಟಲಲ್ಲಿಯೂ ಉರಿ ಉಂಟಾಗುತ್ತದೋ, ಅಂಥವನು ದ್ರಾಕ್ಷೆ ಮತ್ತು ಅಣಿಲೆಕಾಯಿಯ ಚೂರ್ಣವನ್ನು ಒಟ್ಟಾಗಿ ಅರೆದು, ಅಥವಾ ಅಣಿಲೆಕಾಯಿಯ ಚೂರ್ಣ ಒಂದನ್ನೇ, ಜೇನಿನೊಂದಿಗೆ ಕಲಸಿ, ನೆಕ್ಕುವದರಿಂದ ಸುಖವನ್ನು ಪಡೆಯುವನು.

19. ವಿಷ್ಟಬ್ಧೇ ಸ್ವೇದನಂ ಕಾರ್ಯಂ ಪೇಯಂ ವಾ ಲವಣೋದಕಮ್ |
ರಸಶೇಷೇ ದಿವಾಸ್ವಪ್ನಂ ಲಂಘನಂ ವಾತವರ್ಜನಮ್ ||
ವಿಷ್ಟಬ್ಧ-ರಸಶೇಷಾಜೀರ್ಣಗಳ ಚಿಕಿತ್ಸೆ
ಆಲಿಪ್ಯ ಜಠರಂ ಪ್ರಾಜ್ಞೋ ಹಿಂಗೂತ್ರ್ಯೂಷಣಸೈಂಧವೈಃ |
ದಿವಾಸ್ವಪ್ನಂ ಪ್ರಕುರ್ವೀತ ಸರ್ವಾಜೀರ್ಣಪ್ರಣಾಶನಮ್ ||
(ಚಿ. ಸಾ. ಸಂ. 172)

ವಿಷ್ಟಬ್ಧದಲ್ಲಿ ರೋಗಿಯನ್ನು (ಮುಖ್ಯವಾಗಿ ಹೊಟ್ಟೆಯನ್ನು) ಬೆವರಿಸಬೇಕು, ಅಥವಾ ಅವನಿಗೆ ಉಪ್ಪುನೀರನ್ನು (ಬಿಸಿಯಾಗಿ) ಕುಡಿಸಬೇಕು. ರಸಶೇಷದಲ್ಲಿ ಹಗಲುನಿದ್ರೆ, ಲಂಘನ, ಮತ್ತು ಗಾಳಿಯನ್ನು ವರ್ಜ್ಯಮಾಡುವದು ಹಿತ. ಹಿಂಗು, ತ್ರಿಕಟು, ಸೈಂಧವಲವಣ, ಇವುಗಳ ಚೂರ್ಣವನ್ನು (ನೀರಿನೊಂದಿಗೆ ಅರೆದು ಬಿಸಿಮಾಡಿ) ಹೊಟ್ಟೆಗೆ ಲೇಪಿಸಿಕೊಂಡು, ಹಗಲು ನಿದ್ರೆಯನ್ನು ಮಾಡುವದರಿಂದ ಎಲ್ಲಾ ಅಜೀರ್ಣಗಳು ನಾಶವಾಗುವವು.

20. ಪಥ್ಯಾಪಿಪ್ಪಲೀಸಂಯುಕ್ತಂ ಚೂರ್ಣಂ ಸೌವರ್ಚಲಂ ಪಿಬೇತ್ |
ಮಸ್ತುನೋಷ್ಣೋದಕೇನಾಥ ಮತ್ವಾ ದೋಷಗತಿಂ ಭಿಷಕ್ ||
ಅಜೀರ್ಣಗಳಿಗೆ ಸಾಮಾನ್ಯ ಚಿಕಿತ್ಸೆ
ಚತುರ್ವಿಧಮಜೀರ್ಣಂ ಚ ಮನ್ದಾನಲಮಥಾರುಚಿಮ್ |
ಆಧ್ಮಾನಂ ವಾತಗುಲ್ಮಂ ಚ ಶೂಲಂ ಚಾಶು ನಿಯಚ್ಛತಿ ||
(ಚಿ. ಸಾ. ಸಂ. 172)

ಅಣಿಲೆಕಾಯಿ ಮತ್ತು ಹಿಪ್ಪಲಿ, ಇವುಗಳ ಚೂರ್ಣದೊಂದಿಗೆ ಕರಿಉಪ್ಪ(ಸೌವರ್ಚಲ ಲವಣವ)ನ್ನು ವೈದ್ಯನು, ದೋಷಗತಿಯನ್ನು ಆಲೋಚಿಸಿಕೊಂಡು, ಮೊಸರಿನ ನೀರಿನಲ್ಲಿ ಯಾಗಲಿ, ಬಿಸಿನೀರಿನಲ್ಲಿಯಾಗಲಿ ಕದಡಿ, ಪಾನಮಾಡಿಸಿದಲ್ಲಿ, ನಾಲ್ಕು ವಿಧವಾದ ಅಜೀರ್ಣ, ಅಗ್ನಿಮಾಂದ್ಯ, ಅರುಚಿ, ಹೊಟ್ಟೆಯುಬ್ಬರ, ವಾತಗುಲ್ಮ, ಶೂಲೆ ಸಹ ಬೇಗನೆ ಪರಿಹಾರ ವಾಗುತ್ತವೆ.

21. ಭವೇದಜೀರ್ಣಂ ಪ್ರತಿ ಯಸ್ಯ ಶಂಕಾ ಸ್ನಿಗ್ಧಸ್ಯ ಜನ್ತೋರ್ಬಲಿನೋಽನ್ನ-
ಕಾಲೇ |

ಸ್ನೇಹಾಜೀರ್ಣಕ್ಕೆ ಚಿಕಿತ್ಸೆ

ಪ್ರಾತಃ ಸ ಶುಂಠೀಮಭಯಾಮಶಂಕೋ ಭುಂಜೀತ ಸಂಪ್ರಾಶ್ಯ ಹಿತಂ
ಹಿತಾರ್ಥೀ || (ಸು. 240)

ಹಿತಾಪೇಕ್ಷೆಯುಳ್ಳ ಮನುಷ್ಯನು ಬಲವಂತನಾಗಿದ್ದು ತನಗೆ ಸ್ನೇಹವನ್ನುಪಯೋಗಿಸಿ ಅಜೀರ್ಣ ಉಂಟಾಗಿದೆ ಎಂಬ ಸಂದೇಹ ಕಂಡರೆ, ಬೆಳಿಗ್ಗೆ ಭೋಜನಕಾಲದಲ್ಲಿ ಶುಂಠಿ ಮತ್ತು ಅಣಿಲೆಕಾಯಿಯ ಚೂರ್ಣವನ್ನು ತಿಂದು ಹಿತವಾದ ಭೋಜನವನ್ನು, ನಿಃಸಂದೇಹವಾಗಿ, ಮಾಡಬಹುದು.

22. ತ್ರಿಕಟುಕಮಜಮೋದಾ ಸೈನ್ಧವಂ ಜೀರಕೇ ದ್ವೇ
ಸಮಧರಣಧೃತಾನಾಮಷ್ಟಮೋ ಹಿಂಗುಭಾಗಃ |

ಹಿಂಗ್ವಷ್ಟಕ ಚೂರ್ಣ

ಪ್ರಥಮಕವಲಭುಕ್ತಂ ಸರ್ಪಿಷಾ ಚೂರ್ಣಮೇತತ್
ಜನಯತಿ ಜಠರಾಗ್ನಿಂ ವಾತರೋಗಾಂಶ್ಚ ಹನ್ತಿ | (ಭಾ. ಪ್ರ. 346)

ತ್ರಿಕಟು, ಅಜಮೋದ, ಸೈಂಧವಲವಣ, ಜೀರಿಗೆ, ಕರಿಜೀರಿಗೆ, ಇವುಗಳಲ್ಲಿ ಪ್ರತಿಯೊಂದು ೧ ಶಾಣ (ಕಾಲುಕರ್ಷ) ತೂಕ, (ಹುರಿದ) ಹಿಂಗು ಶಾಣದ ಎಂಟನೇ ಒಂದು ಭಾಗ, ಈ ಪ್ರಮಾಣದಲ್ಲಿ ೮ ಜಿನಸುಗಳನ್ನು ಕೂಡಿಸಿ ಮಾಡಿದ ಚೂರ್ಣವನ್ನು ತುಪ್ಪಾನ್ನದೊಂದಿಗೆ ಕಲಸಿ, ಊಟದ ಆರಂಭದಲ್ಲಿ ಉಣ್ಣುವದರಿಂದ ಜಠರಾಗ್ನಿಯುಂಟಾಗುವದಲ್ಲದೆ, ವಾತರೋಗಗಳು ನಾಶವಾಗುವವು.

23. ಹಿಂಗುಭಾಗೋ ಭವೇದೇಕೋ ವಚಾ ಚ ದ್ವಿಗುಣಾ ಭವೇತ್ |
ಪಿಪ್ಪಲೀ ತ್ರಿಗುಣಾ ದೇಯಾ ಶೃಂಗವೇರಂ ಚತುರ್ಗುಣಮ್ ||

ಅಗ್ನಿಮುಖ ಚೂರ್ಣ

ಯವಾನಿಕಾ ಪಂಚಗುಣಾ ಷಡ್ಗುಣಾ ಚ ಹರೀತಕೀ |
ಚಿತ್ರಕಂ ಸಪ್ತಗುಣಿತಂ ಕುಷ್ಠಂ ಚಾಷ್ಟಗುಣಂ ಭವೇತ್
ಏತದ್ವಾತಹರಂ ಚೂರ್ಣಂ ಪೀತಮಾತ್ರಂ ಪ್ರಶಸ್ಯತೇ |
ಪಿಬೇದ್ದಧ್ನಾ ಮಸ್ತುನಾ ವಾ ಸುರಯಾ ಕೋಷ್ಣವಾರಿಣಾ |
ಅಂಗಾನಿ ಯಸ್ಯ ಶೀರ್ಯನ್ತಿ ವಿಷಂ ವಾ ಯೇನ ಭಕ್ಷಿತಮ್ |
ಸೋದಾವರ್ತಮಜೀರ್ಣಂ ಚ ಪ್ಲೀಹಾನಮುದರಂ ಜಯೇತ್ ||
ಅರ್ಶೋಹರೋ ದೀಪನಶ್ಚ ಶ್ಲೇಷ್ಮಘ್ನೋ ಗುಲ್ಮನಾಶನಃ |
ಚೂರ್ಣೋ ಹ್ಯಗ್ನಿಮುಖೋ ನಾಮ್ನಾ ನ ಕ್ವಚಿತ್ಪ್ರತಿಹನ್ಯತೇ ||
(ಚಿ. ಸಾ. ಸಂ. 173. 174)

ಪಠಾ ೪ನೇ ಶ್ಲೋಕದ ಪೂರ್ವಾರ್ಧವು ಉತ್ತರಾರ್ಧವಾಗಿಯೂ, ಅದರ ಕೊನೆಯ 'ಜಯೇತ್' ಎಂಬಲ್ಲಿ 'ತಥಾ' ಎಂತಲೂ, ಮೂಲದಲ್ಲಿ ಇದೆ

(ಹುರಿದ) ಹಿಂಗು ೧ ಭಾಗ, ಬಜೆ ೨ ಭಾಗ, ಹಿಪ್ಪಲಿ ೩ ಭಾಗ, ಶುಂಠಿ ೪ ಭಾಗ, ಓಮ ೫ ಭಾಗ, ಅಣಿಲೆಕಾಯಿ ೬ ಭಾಗ, ಚಿತ್ರಮೂಲ ೭ ಭಾಗ, ಚಂಗಲಕೋಷ್ಠ ೮ ಭಾಗ,

ಇವುಗಳ ಚೂರ್ಣವನ್ನು (ತಕ್ಕ ಪ್ರಮಾಣದಲ್ಲಿ) ಮೊಸರನೀರಿನೊಂದಿಗೆ, ಮೊಸರಿನೊಂದಿಗೆ, ಮದ್ಯದೊಂದಿಗೆ, ಅಥವಾ ಸುಖೋಷ್ಣವಾದ ನೀರಿನೊಂದಿಗೆ, ಕಲಸಿ ಪಾನಮಾಡುವದರಿಂದ ವಾತ, ಉದಾವರ್ತ, ಅಜೀರ್ಣ, ಪ್ಲೀಹ, ಉದರವ್ಯಾಧಿ, ಮೂಲವ್ಯಾಧಿ, ಗುಲ್ಮ, ಅಂಗಗಳ ಬತ್ತುವಿಕೆ, ವಿಷಸೇವನದ ದೋಷ ಸಹ ಪರಿಹಾರವಾಗುವವು. ಇದು ಅಗ್ನಿದೀಪನಕಾರಿ, ಕಫಹರ. 'ಅಗ್ನಿಮುಖ' ಎಂಬ ಹೆಸರಿನ ಈ ಪ್ರಶಸ್ತವಾದ ಚೂರ್ಣವು ಎಲ್ಲಿಯೂ ನಿರರ್ಥಕವಾಗುವದಿಲ್ಲ.

ಶರಾ. ರ. ರ ದ ಪಾಠ ಪ್ರಕಾರ ಕೆಮ್ಮು, ಉಬ್ಬಸ, ಕ್ಷಯ, ಸಹ ಇದರಿಂದ ಬೇಗನೆ ನಾಶವಾಗುತ್ತವೆ

24. ಭಾಸ್ಕರಲವಣ

ಸಾಮುದ್ರಲವಣಂ ಕಾರ್ಯಮಷ್ಟಕರ್ಷಮಿತಂ ಬುಧೈಃ ।
ಸೌವರ್ಚಲಂ ಪಂಚಕರ್ಷಂ ವಿಡಸೈನ್ಧವಧಾನ್ಯಕಮ್ ॥
ಪಿಪ್ಪಲೀ ಪಿಪ್ಪಲೀಮೂಲಂ ಪತ್ರಕಂ ಕೃಷ್ಣಜೀರಕಮ್ ।
ತಾಲೀಸಂ ಕೇಸರಂ ಚವ್ಯಮಮ್ಲವೇತಸಕಂ ತಥಾ ॥
ದ್ವಿಕರ್ಷಮಾತ್ರಾಣ್ಯೇತಾನಿ ಪ್ರತ್ಯೇಕಂ ಕಾರಯೇದ್ಬುಧಃ ।
ಮರಿಚಂ ಜೀರಕಂ ವಿಶ್ವಮೇಕೈಕಂ ಕರ್ಷಮಾತ್ರಕಮ್ ॥
ದಾಡಿಮಂ ಸ್ಯಾಚ್ಚತುಃಕರ್ಷಂ ತ್ವಗೇಲಾ ಚಾರ್ಧಕರ್ಷಿಕಾ ।
ಏತಚ್ಚೂರ್ಣೀಕೃತಂ ಸರ್ವಂ ಲವಣಂ ಭಾಸ್ಕರಾಭಿಧಮ್ ॥
ಭಕ್ಷಯೇಚ್ಛಾಣಮಾನನ್ತು ತಕ್ರಮಸ್ತುಕಕಾಂಜಿಕೈಃ ।
ವಾತಶ್ಲೇಷ್ಮಭವಂ ಗುಲ್ಮಂ ಪ್ಲೀಹಾನಮುದರಂ ಕ್ಷಯಮ್ ॥
ಅರ್ಶಾಂಸಿ ಗ್ರಹಣೀಂ ಕುಷ್ಠಂ ವಿಬನ್ಧಂ ಚ ಭಗನ್ದರಮ್ ।
ಶೂಲಂ ಶೋಥಂ ಶ್ವಾಸಕಾಸಾಮದೋಷಾಂಶ್ಚಾಪಿ ಹೃದ್ರುಜಮ್ ॥
ಅಶ್ಮರೀಂ ಶರ್ಕರಾಂ ಚಾಪಿ ಪಾಂಡುರೋಗಂ ಕ್ರಿಮೀನಪಿ ।
ಮನ್ದಾಗ್ನಿಂ ನಾಶಯೇದೇತದ್ದೀಪನಂ ಪಾಚನಂ ಪರಮ್ ॥
ಹಿತಾಯ ಸರ್ವಲೋಕಾನಾಂ ಭಾಸ್ಕರೇಣ ವಿನಿರ್ಮಿತಮ್ ।
ಹನ್ಯಾತ್ಸರ್ವಾಣ್ಯಜೀರ್ಣಾನಿ ಭುಕ್ತಮಾತ್ರಮಸಂಶಯಮ್ ॥

(ಭಾ. ಪ್ರ. 347)

ಸಮುದ್ರದ ಉಪ್ಪು ೨ ಪಲ, ಕರಿಉಪ್ಪು (ಸೌವರ್ಚಲ) ೧। ಪಲ, ಬಿಡಲವಣ, ಸೈಂಧವಲವಣ, ಕೊತ್ತುಂಬರಿ, ಹಿಪ್ಪಲಿ, ಹಿಪ್ಪಲಿಮೂಲ, ದಾಲ್ಚೀನಿಎಲೆ, ಕರಿಜೀರಿಗೆ, ತಾಲೀಸಪತ್ರೆ, ನಾಗಕೇಸರ, ಕಾಡುಮೆಣಸಿನ ಬೇರು, ಆಮ್ಲವೇತಸ (ಇಲ್ಲದಲ್ಲಿ ಪುಲ್ಲಂಪುರಚೆ), ಇವು ಪ್ರತ್ಯೇಕ ॥ ಪಲ, ಬಿಳೀ ಕಾಳುಮೆಣಸು, ಜೀರಿಗೆ, ಶುಂಠಿ, ಇವು ಮೂರು । ಪಲ ಪ್ರಕಾರ, ದಾಳಿಂಬ ೧ ಪಲ, ಲವಂಗಪಟ್ಟೆ ಮತ್ತು ಏಲಕ್ಕಿ ಅರ್ಧ ಕರ್ಷ, ಇವುಗಳ ಚೂರ್ಣಕ್ಕೆ 'ಭಾಸ್ಕರಲವಣ' ಎಂತ ಹೆಸರು. ಈ ಚೂರ್ಣವನ್ನು ಒಂದು ಶಾಣ (ಕಾಲು ಕರ್ಷ) ತೂಕ ಪ್ರಕಾರ ಮಜ್ಜಿಗೆ, ಮೊಸರನೀರು, ಅಥವಾ ಹುಳಿಗಂಜಿನೀರಿನೊಂದಿಗೆ ಸೇವಿಸುವದರಿಂದ, ಕಫವಾತದಿಂದುಂಟಾದ ಗುಲ್ಮ, ಪ್ಲೀಹವ್ಯಾಧಿ, ಉದರರೋಗ, ಕ್ಷಯ, ಅರ್ಶಸ್ಸುಗಳು, ಗ್ರಹಣಿ, ಕುಷ್ಠ, ಮಲಬದ್ಧತೆ, ಭಗಂದರ, ಶೂಲೆ, ಶೋಫೆ, ಉಬ್ಬಸ, ಕೆಮ್ಮು, ಆಮದೋಷ,

ಎದೆನೋವು, ಅಶ್ಮರಿ, ಶರ್ಕರಾಮೇಹ, ಪಾಂಡುರೋಗ, ಕ್ರಿಮಿ, ಅಗ್ನಿಮಾಂದ್ಯ, ಇವು ನಾಶವಾಗುವವು. ಇದು ದೀಪನಕ್ಕೂ, ಪಾಚನಕ್ಕೂ ಉತ್ತಮ. ಇದನ್ನು ಸರ್ವ ಜನರ ಹಿತಕ್ಕಾಗಿ ಭಾಸ್ಕರನು ನಿರ್ಮಿಸಿದ್ದು. ಇದನ್ನು ತಿಂದ ಮಾತ್ರದಿಂದ ಸರ್ವ ಅಜೀರ್ಣಗಳು ನಾಶವಾಗುವದಕ್ಕೆ ಸಂದೇಹವಿಲ್ಲ.

ಪರಾ ದಾಳಿಂಬದ ಬೀಜ ೪ ಕರ್ಷ ಕೂಡಿಸದೇಕೆಂತ ವ್ಯಾಖ್ಯಾನಕಾರ ಅದು ಸಾಧ್ಯವಾಗದಲ್ಲಿ ದಾಳಿಂಬದ ಸಿಪ್ಪೆಯನ್ನು ಬೀಜದ ಬದಲಾಗಿ ಉಪಯೋಗಿಸುವದು. ಇದೇ ಯೋಗವು ಶಾ ಯಲ್ಲಿ (ಪು 70) ಮತ್ತು ಬೇರೆ ಶ್ಲೋಕಗಳಿಂದ ಚಿ ಸಾ ಸಂ ದಲ್ಲಿ (ಪು 174), ಬರೆಯಲ್ಪಟ್ಟದ್ದು ಕಾಣುತ್ತದೆ ಆವೆರಡರಲ್ಲಿಯೂ ಭವ್ಯ ಕಾಣುವದಿಲ್ಲ.

25. ಸೈಂಧವಸಮೂಲಮಗಧಾಚವ್ಯಾನಲನಾಗರಂ ಪಥ್ಯಾ ।
ಕ್ರಮವೃದ್ಧಮಗ್ನಿವೃದ್ಧೌ ವಡವಾನಲನಾಮ ಚೂರ್ಣಂ ಸ್ಯಾತ್ ॥
(ಭಾ. ಪ್ರ. 347)

ವಡವಾನಲ ಚೂರ್ಣ

ಸೈಂಧವಲವಣ ೧ ಭಾಗ, ಹಿಪ್ಪಲಿಮೂಲ ೨ ಭಾಗ, ಹಿಪ್ಪಲಿ ೩ ಭಾಗ, ಕಾಡುಮೆಣಸಿನ ಬೇರು ೪ ಭಾಗ, ಚಿತ್ರಮೂಲ ೫ ಭಾಗ, ಶುಂಠಿ ೬ ಭಾಗ, ಅಣಿಲೆಕಾಯಿ ೭ ಭಾಗ, ಈ ರೀತಿಯಾಗಿ ಕೂಡಿಸಿಕೊಂಡು ಮಾಡಿದ ಚೂರ್ಣವು ಅಗ್ನಿವೃದ್ಧಿಗೆ ಪ್ರಶಸ್ತವಾದದ್ದು. ಇದಕ್ಕೆ 'ವಡವಾನಲ ಚೂರ್ಣ' ಎಂತ ಹೆಸರು.

ಪರಾ ಈ ಯೋಗ ಸಹ ಶಾ ಲ್ಲಿ (ಪು 68) ಇರುವಂಥಾದ್ದು ಕ್ರಮವೃದ್ಧಿ ಎಂದರೆ ದುಬಾರಿ ಎಂತ ಗೂ ದೀ (ಪು 191)

26. ಪಿಪ್ಪಲ್ಯತಿವಿಷಾ ಹಿಂಗು ನಾಗರೇಂದ್ರಯವಾ ವಚಾ ।
ಪಾಠಾಜಮೋದಕಟುಕಾ ವೃಷಸೌವರ್ಚಲಾಭಯಾಃ ॥
ವೃಷದ್ವಾದಶಕಂ ಚೂರ್ಣಮಜೀರ್ಣಾನಾಹಗುಲ್ಮನುತ್ ।
ಭಗನ್ದರಶ್ವಾಸಕಾಸಮೂತ್ರಕೃಚ್ಛ್ರಾರ್ಶಸಾಂ ಹಿತಮ್ ॥
(ಚಿ. ಸಾ. ಸಂ. 176)

ವೃಷದ್ವಾದಶಕ ಚೂರ್ಣ

ಹಿಪ್ಪಲಿ, ಅತಿವಿಡೆ, (ಹುರಿದ) ಹಿಂಗು, ಶುಂಠಿ, ಇಂದ್ರಜೇವಿ, ಬಜೆ, ಪಾಡಾವಳಿಗಡ್ಡೆ, ಅಜಮೋದ, ಕಟುಕರೋಹಿಣಿ, ಆಡುಸೋಗೆ, ಕರಿಉಪ್ಪು (ಸೌವರ್ಚಲ), ಅಣಿಲೆಕಾಯಿ, ಈ ೧೨ ಬಗೆಗಳ ವೃಷದ್ವಾದಶಕ ಎಂಬ ಚೂರ್ಣವು ಅಜೀರ್ಣ, ಹೊಟ್ಟೆಯುಬ್ಬರ, ಗುಲ್ಮ, ಇವುಗಳನ್ನು ನಾಶಮಾಡುವದಲ್ಲದೆ, ಭಗಂದರ, ಉಬ್ಬಸ, ಕೆಮ್ಮು, ಮೂತ್ರಕೃಚ್ಛ್ರ, ಮೂಲವ್ಯಾಧಿ, ಈ ರೋಗಗಳಲ್ಲಿಯೂ ಹಿತವಾದ್ದು.

27. ಸ್ನುಹ್ಯರ್ಕಚಿತ್ರಕೈರಂಡವರುಣಂ ಸಪುನರ್ನವಮ್ ।
ತಿಲಾಪಾಮಾರ್ಗಕದಲೀಪಲಾಶಂ ತಿನ್ತಿಡೀ ತಥಾ ॥
ಗೃಹೀತ್ವಾ ಜ್ವಾಲಯೇದೇತತ್ಪ್ರಸ್ಥಂ ಭಸ್ಮಾಖಿಲಂ ಯಥಾ ।
ಜಲಾಢಕೇ ವಿಪಕ್ತವ್ಯಂ ಯಾವತ್ಪಾದಾವಶೇಷಿತಮ್ ॥
ಸುಪ್ರಸನ್ನಂ ವಿನಿಸ್ರಾವ್ಯ ಲವಣಪ್ರಸ್ಥಸಂಯುತಮ್ ।
ಪಕ್ವಂ ನಿರ್ಧೂಮಕಠಿನಂ ಸೂಕ್ಷ್ಮಚೂರ್ಣೀಕೃತಂ ಪುನಃ ॥

ವೈಶ್ವಾನರಕ್ಷಾರ

ಯವಾನೀಜೀರಕವ್ಯೋಷಸ್ಥೂಲಜೀರಕಹಿಂಗುಭಿಃ |
ಶೀತೋದಕೇನ ತಚ್ಚೂರ್ಣಂ ಪಿಬೇತ್ಪ್ರಾತರ್ಹಿ ಮಾತ್ರಯಾ ||
ತಸ್ಮಿನ್ ಜೀರ್ಣೇ ಽನ್ನಮಶ್ನೀಯಾದ್ಯೂಷೈರ್ಜಾಂಗಲಜೈ ರಸೈಃ |
ಈಷದಮ್ಲೈಃ ಸಲವಣೈಃ ಸುಖೋಷ್ಣೈರ್ವಹ್ನಿದೀಪನೈಃ ||
ಏತೇನಾಗ್ನಿರ್ವಿವರ್ಧೇತ ಬಲಮಾರೋಗ್ಯಮೇವ ಚ |
ತತ್ರಾನುಪಾನಂ ಶಸ್ತಂ ಹಿ ತಕ್ರಂ ವಾ ಭೋಜನೇ ಹಿತಮ್ ||
ಮನ್ದಾಗ್ನ್ಯರ್ಶೋವಿಕಾರೇಷು ವಾತಶ್ಲೇಷ್ಮಾಮಯೇಷು ಚ |
ಸರ್ವಾಂಗಶೋಥರೋಗೇಷು ಶೂಲಗುಲ್ಮೋದರೇಷು ಚ |
ಅಶ್ಮರ್ಯಾಂ ಶರ್ಕರಾಯಾಂ ಚ ವಿಣ್ಮೂತ್ರಾನಿಲರೋಗಿಷು ||
(ಭಾ. ಪ್ರ. 347)

ಜಡೆ(ಬೊಂತೆ)ಕಳ್ಳಿ, ಎಕ್ಕೆ, ಚಿತ್ರಮೂಲ, ಹರಳುಗಿಡ, ವರುಣ (ನೀರ್ಮಾದಳ, ಹೊಳೆನೆಕ್ಕಿ), ಪುನರ್ನವಿ, ಎಳ್ಳು, ಉತ್ತರಣೆ, ಬಾಳೆ, ಪಲಾಶ, ಹುಣಸೆ, ಇವುಗಳನ್ನೆಲ್ಲ, ೧೬ ಪಲ ಭಸ್ಮ ಸಿಕ್ಕುವಷ್ಟು ತೆಗೆದುಕೊಂಡು, ಸುಟ್ಟು, ಆ ಬೂದಿಯನ್ನು ೪ ಪ್ರಸ್ಥ ನೀರಿನಲ್ಲಿ ಕದಡಿ ಕುದಿಸಿ, ೧ ಪ್ರಸ್ಥಕ್ಕೆ ಬತ್ತುತ್ತಲೆ ಒಲೆ ಮೇಲಿಂದ ಕೆಳಗೆ ಇಳಿಸಿ, ವಸ್ತ್ರದಿಂದ ಶೋಧಿಸಿ ಹನಿಸಿ, ಮೇಲಿನ ತಿಳೀನೀರನ್ನು ಒಂದು ಪ್ರಸ್ಥ ಉಪ್ಪನ್ನು ಕೂಡಿಸಿ, ಹೊಗೆಯಿಲ್ಲದ ಬೆಂಕಿಯಿಂದ ಅದು ಗಟ್ಟಿಯಾಗುವತನಕ ಕುದಿಸಿ, ಆ ಗಟ್ಟಿಯಾದ ಕ್ಷಾರವನ್ನು (ಒಣಗಿಸಿ) ಪುನಃ ಸೂಕ್ಷ್ಮವಾಗಿ ಚೂರ್ಣಮಾಡಿ, ಅದನ್ನು, ತಕ್ಕ ಪ್ರಮಾಣದಲ್ಲಿ, ತಣ್ಣಗಾದ ನೀರಿನಲ್ಲಿ ಕದಡಿ, ಓಮ, ಜೀರಿಗೆ, ತ್ರಿಕಟು, ದೊಡ್ಡ (ಕರಿ)ಜೀರಿಗೆ, (ಹುರಿದ) ಹಿಂಗು, ಇವುಗಳ ಚೂರ್ಣವನ್ನು ಕೂಡಿಸಿಕೊಂಡು, ಪ್ರಾತಃಕಾಲದಲ್ಲಿ ಕುಡಿಯಬೇಕು; ಅದು ಜೀರ್ಣವಾದ ಮೇಲೆ ಅನ್ನವನ್ನು, ಸ್ವಲ್ಪ ಹುಳಿ, ಉಪ್ಪು, ಮತ್ತು ಅಗ್ನಿದೀಪನಕರವಾದ ದ್ರವ್ಯಗಳನ್ನು ಕೂಡಿಸಿ ಮಾಡಿದ ಸುಖೋಷ್ಣವಾದ ಸಾರುಗಳೊಂದಿಗೆ ಅಥವಾ ಜಾಂಗಲ ಮಾಂಸರಸಗಳೊಂದಿಗೆ, ಉಣ್ಣತಕ್ಕದ್ದು; ಇದರಿಂದ ಅಗ್ನಿ ವೃದ್ಧಿಯಾಗುವದಲ್ಲದೆ, ಬಲ ಮತ್ತು ಆರೋಗ್ಯ ಉಂಟಾಗುತ್ತವೆ. ಮಜ್ಜಿಗೆಯನ್ನು ಅನುಪಾನವಾಗಿ ಅಥವಾ ಭೋಜನದಲ್ಲಿ ಉಪಯೋಗಿಸುವದು ಪ್ರಶಸ್ತ. ಈ ಕ್ಷಾರವು ಅಗ್ನಿಮಾಂದ್ಯ, ಮೂಲವ್ಯಾಧಿಯ ವಿಕಾರಗಳು, ಕಫವಾತರೋಗಗಳು, ಸರ್ವಾಂಗ ಶೋಫೆಯುಳ್ಳ ರೋಗಗಳು, ಶೂಲೆ, ಗುಲ್ಮ, ಉದರವ್ಯಾಧಿ, ಅಶ್ಮರಿ, ಶರ್ಕರಾಮೇಹ, ಮಲ ಮೂತ್ರ ಸಂಬಂಧವಾದ ವಾತರೋಗಗಳು, ಇವುಗಳಲ್ಲಿ ಹಿತವಾದ್ದು.

28. ಮರಿಚಂ ಪಿಪ್ಪಲೀಮೂಲಂ ನಾಗರಂ ಪಿಪ್ಪಲೀ ತಥಾ |
ಭಲ್ಲಾತಕಂ ಯವಾನೀಂ(?ನೀ) ಚ ವಿಡಂಗಂ ಹಸ್ತಿಪಿಪ್ಪಲೀ ||
ಮರೀಚಾದಿ ಘೃತ ಹಿಂಗು ಸೌವರ್ಚಲಂ ಚೈವ ವಿಡಸೈನ್ಧವಚವ್ಯಕಮ್ |
ಸಾಮುದ್ರಂ ಚ ಯವಕ್ಷಾರಂ ಚಿತ್ರಕೋ ವಚಯಾ ಸಹ ||
ಏತೈರರ್ಧಪಲೈರ್ಭಾಗೈರ್ಘೃತಪ್ರಸ್ಥಂ ವಿಪಾಚಯೇತ್ |
ದಶಮೂಲರಸೇ ಸಿದ್ಧಂ ಪಯಸಾ ದ್ವಿಗುಣೇನ ಚ ||

ಮನ್ದಾಗ್ನೀನಾಂ ಹಿತಂ ಸಿದ್ಧಂ ಗ್ರಹಣೀದೋಷನಾಶನಮ್ ।
ವಿಷ್ಟಮ್ಭಮಾಮದೌರ್ಬಲ್ಯಂ ಪ್ಲೀಹಾನಮುಪಕರ್ಷತಿ ॥
ಕಾಸಂ ಶ್ವಾಸಂ ಕ್ಷಯಂ ಚಾಪಿ ದುರ್ನಾಮ ಸಭಗಂದರಮ್ ।
ಕಫಜಾನ್ ಹನ್ತಿ ರೋಗಾಂಶ್ಚ ವಾತಜಾನ್ ಕೃಮಿಸಮ್ಭವಾನ್ ॥
ತಾನ್ಸರ್ವಾನ್ನಾಶಯತ್ಯಾಶು ಶುಷ್ಕಂ ದಾವಾನಲೋ ಯಥಾ ॥
(ಚಿ ಸಾ ಸಂ. 177, 178)

ಕಾಳುಮೆಣಸು, ಹಿಪ್ಪಲಿಮೂಲ, ಶುಂಠಿ, ಹಿಪ್ಪಲಿ, (ಶುದ್ಧ) ಗೇರುಕಾಯಿ, ಓಮ, ವಾಯುವಿಳಂಗ, ಗಜಹಿಪ್ಪಲಿ, ಹಿಂಗು, ಕರಿಉಪ್ಪು (ಸೌವರ್ಚಲ), ಬಿಡಲವಣ, ಸೈಂಧವ ಲವಣ, ಕಾಡುಮೆಣಸಿನ ಬೇರು, ಸಮುದ್ರಉಪ್ಪು, ಯವಕ್ಷಾರ, ಚಿತ್ರಮೂಲ, ಒಜೆ, ಇವುಗಳನ್ನು ಪ್ರತ್ಯೇಕ ಅರ್ಧ ಪಲ ಪ್ರಕಾರ ತೆಗೆದುಕೊಂಡು ಮಾಡಿದ ಚೂರ್ಣಕ್ಕೆ ತುಪ್ಪ ೧ ಪ್ರಸ್ಥ, ದಶಮೂಲಗಳ ಕಷಾಯ ೨ ಪ್ರಸ್ಥ, ಹಾಲು ೨ ಪ್ರಸ್ಥ ಸಹ ಕೂಡಿಸಿ ಪಾಕಮಾಡಿ, ಶೋಧಿಸಿಟ್ಟುಕೊಂಡ ತುಪ್ಪವು ಅಗ್ನಿಮಾಂದ್ಯವುಳ್ಳವರಿಗೆ ಹಿತ್ತವಾದ್ದೆಂತ ಪ್ರಸಿದ್ಧ; ಗ್ರಹಣೀದೋಷವನ್ನು ನಾಶಮಾಡುತ್ತದೆ; ವಿಷ್ಟಂಭ, ಆಮದೋಷ, ಬಲಹೀನತೆ, ಪ್ಲೀಹವ್ಯಾಧಿ, ಇವುಗಳನ್ನು ತೊಲಗಿಸುತ್ತದೆ; ಕೆಮ್ಮು, ಉಬ್ಬಸ, ಕ್ಷಯ, ಮೂಲವ್ಯಾಧಿ, ಭಗಂದರ, ಕಫದಿಂದ ಹುಟ್ಟಿದ ರೋಗಗಳು, ವಾತದಿಂದ ಉತ್ಪನ್ನವಾದವು, ಕ್ರಿಮಿಗಳಿಂದ ಹುಟ್ಟಿದ ರೋಗಗಳು, ಇವುಗಳನ್ನೆಲ್ಲ ಈ ಘೃತವು, ಕಾಡಕಿಚ್ಚು ಒಣಗಿದ ಕಾಡನ್ನು ಹೇಗೋ ಹಾಗೆ, ಬೇಗನೆ ನಾಶಮಾಡುತ್ತದೆ.

29. ಧಾನ್ಯಜೀರಕಸಂಸಿದ್ಧಂ ಘೃತಮಗ್ನಿವಿವರ್ಧನಮ್ ।
ಧಾನ್ಯಜೀರಕ ಘೃತ
ರೋಚನಂ ದೋಷಶಮನಂ ಛರ್ದಿದಾಹವಿನಾಶನಮ್ ॥
(ಚಿ ಸಾ. ಸಂ 178)

ಕೊತ್ತುಂಬರಿ ಮತ್ತು ಜೀರಿಗೆಯಿಂದ ಪಾಕಮಾಡಿದ ತುಪ್ಪವು ಅಗ್ನಿಯನ್ನು ವೃದ್ಧಿಮಾಡುವದು, ರುಚಿಕರ, ದೋಷಗಳನ್ನು ಶಮನಮಾಡುವದು, ಮತ್ತು ವಾಂತಿಯನ್ನೂ ಉರಿಯನ್ನೂ ನಾಶಮಾಡುವದು.

ಸರಾ ಕೊತ್ತುಂಬರಿ ಮತ್ತು ಜೀರಿಗೆಯ ಅಸ್ವಾವಶೇಷ ಕಷಾಯ ಮತ್ತು ಕಲ್ಕದಿಂದ ತುಪ್ಪವನ್ನು ಕಾಯಿಸುವದು

30. ಧಾನ್ಯಕಸ್ಯ ತು ಶುದ್ಧಸ್ಯ ಚತುಃಷಷ್ಟಿಪಲಾನಿ ಚ ।
ಧಾನ್ಯಕಘೃತ.
ಜಲದ್ರೋಣೇ ವಿಪಕ್ತವ್ಯಂ ಯಾವತ್ಪಾದಾವಶೇಷಿತಮ್ ॥
ಘೃತಪ್ರಸ್ಥಂ ಪಚೇತ್ತೇನ ಶನೈರ್ಮೃದ್ವಗ್ನಿನಾ ಭಿಷಕ್ ।
ಜೀರಕಸ್ಯ ಪಲಾನ್ಯಷ್ಟೌ ಕಲ್ಕೀಕೃತ್ಯ ನಿಧಾಪಯೇತ್ ॥
ಅಗ್ನಿಸನ್ದೀಪನಂ ಹೃದ್ಯಂ ಪಿಬೇಚ್ಛ್ಲೇಷ್ಮನಿಬರ್ಹಣಮ್ ।
ಆಮಶೂಲಂ ಗುದೇ ಶೂಲಂ ಶೂಲಂ ವಂಕ್ಷಣಯೋನಿಜಮ್ ॥
ಆಮವಾತಮುದಾವರ್ತಮರ್ಶರೋಗಾಂಶ್ಚ ನಾಶಯೇತ್ ॥
(ಚಿ. ಸಾ. ಸಂ. 178, 179)

ಶುದ್ಧವಾದ ಕೊತ್ತುಂಬರಿ ೬೪ ಪಲಕ್ಕೆ ೧೬ ಪ್ರಸ್ಥ ನೀರಿಟ್ಟು ೪ ಪ್ರಸ್ಥ ಕಷಾಯ ಮಾಡಿ, (ಶೋಧಿಸಿದ) ಆ ಕಷಾಯಕ್ಕೆ ೧ ಪ್ರಸ್ಥ ತುಪ್ಪವನ್ನೂ, ೮ ಪಲ ಜೀರಿಗೆಯ ಚೂರ್ಣದ ಕಲ್ಕವನ್ನೂ ಕೂಡಿಸಿ, ಸಣ್ಣ ಉರಿಯಿಂದ ಮೆಲ್ಲನೆ ಕಾಯಿಸಿ, ಶೋಧಿಸಿಟ್ಟುಕೊಂಡ, ಅಗ್ನಿಯನ್ನು ಚನ್ನಾಗಿ ಚುರುಕುಮಾಡತಕ್ಕ, ಹಿತವಾದ ಮತ್ತು ಕಫಹರವಾದ, ತುಪ್ಪವನ್ನು ಪಾನಮಾಡಬೇಕು. ಅದು ಆಮಶೂಲೆ, ಗುದಶೂಲೆ, ತೊಡೆಸಂದುಗಳ ಶೂಲೆ, ಯೋನಿಶೂಲೆ, ಆಮವಾತ, ಉದಾವರ್ತ, ಮೂಲವ್ಯಾಧಿ, ಇವುಗಳನ್ನು ಸಹ ನಾಶಮಾಡುವದು.

31. ದ್ವೇ ಪಂಚಮೂಲೇ ತ್ರಿಫಲಾಂ ತ್ರಿವೃನ್ಮೂಲಂ ಶತಾವರೀಮ್ ।
ಕ್ಷಾರಗುಡ ದನ್ತೀಂ ಚಿತ್ರಕಮಾಸ್ಫೋತಾಂ ರಾಸ್ನಾಂ ಪಾಠಾಂ ಸುಧಾಂ ಶಟೀಮ್ ॥
ಪೃಥಗ್ದಶಪಲಾನ್ ಭಾಗಾನ್ ದಗ್ಧ್ವಾ ಭಸ್ಮ ಸಮಾಹರೇತ್ ।
ತ್ರಿಸಪ್ತಕೃತ್ವಸ್ತದ್ಭಸ್ಮ ಜಲದ್ರೋಣೇನ ಗಾಲಯೇತ್ ॥
ತದ್ದ್ರೋಣಂ ಸಾಧಯೇದಗ್ನೌ ಚತುರ್ಭಾಗಾವಶೇಷಿತಮ್ ।
ತತೋ ಗುಡತುಲಾಂ ದತ್ವಾ ಸಾಧಯೇನ್ಮೃದುನಾಗ್ನಿನಾ
ಸಿದ್ಧಂ ಗುಡಸ್ತು ವಿಜ್ಞಾಯ ಚೂರ್ಣಾನೀಮಾನಿ ದಾಪಯೇತ್ ।
ವೃಶ್ಚಿಕಾಲೀಂ ದ್ವಿಕಾಕೋಲ್ಯೌ ಯವಕ್ಷಾರಂ ಸಮಾವಪೇತ್ ॥
ಏತತ್ಪಂಚಪಲಾನ್ ಭಾಗಾನ್ ಪೃಥಕ್ಪಂಚ ಪಲಾನಿ ಚ ।
ಹರೀತಕೀಂ ತ್ರಿಕಟುಕಂ ಸ್ವರ್ಜಿಕಾಂ ಚಿತ್ರಕಂ ವಚಾಮ್
ಹಿಂಗ್ವಮ್ಲವೇತಸಾಭ್ಯಾಂ ಚ ದ್ವೇ ಪಲೇ ತತ್ರ ದಾಪಯೇತ್ ।
ಅಕ್ಷಪ್ರಮಾಣಾಂ ಗುಟಿಕಾಂ ಕೃತ್ವಾ ಖಾದೇದ್ಯಥಾಬಲಮ್
ಅಜೀರ್ಣಂ ಜರಯತ್ಯೇಷ ಜೀರ್ಣಂ ಸನ್ದೀಪಯತ್ಯಪಿ ।
ಭುಕ್ತಂ ಮುಕ್ತಂ ಚ ಜೀರ್ಯೇತ ಪಾಂಡುತ್ವಮುಪಕರ್ಷತಿ
ಪ್ಲೀಹಾರ್ಶಃಶ್ವಯಥುಂ ಚೈವ ಶ್ಲೇಷ್ಮಕಾಸಮರೋಚಕಮ್ ।
ಮನ್ದಾಗ್ನಿವಿಷಮಾಗ್ನೀನಾಂ ಕಫೇ ಕಂಠೋರಸಿ ಸ್ಥಿತೇ ॥
ಕುಷ್ಠಾನಿ ಚ ಪ್ರಮೇಹಾಂಶ್ಚ ಗುಲ್ಮಂ ಚಾಶು ವ್ಯಪೋಹತಿ ।
ಖ್ಯಾತಃ ಕ್ಷಾರಗುಡೋ ಹ್ಯೇಷ ರೋಗಗ್ರಸ್ತೇ ಪ್ರಯೋಜಯೇತ್ ॥
(ಚಿ. ಸಾ. ಸಂ. 181)

ದಶಮೂಲಗಳು, ತ್ರಿಫಲೆ, ತಿಗಡೆ, ಶತಾವರಿ, ದಂತಿಬೇರು, ಚಿತ್ರಮೂಲ, ಶಂಖಪುಷ್ಪದ ಬೇರು, ರಾಸ್ನೆ (ಅರತೆ), ಪಾಡಾವಳಿಗಡ್ಡೆ, ಜಡೆಕಳ್ಳಿ, ಕಚೋರ, ಇವುಗಳನ್ನು ಪ್ರತ್ಯೇಕ ೧೦ ಪಲದಂತೆ ತೆಗೆದುಕೊಂಡು ಸುಟ್ಟು ಭಸ್ಮಮಾಡಿ, ಆ ಭಸ್ಮಕ್ಕೆ ೧೬ ಪ್ರಸ್ಥ ನೀರು ಹೊಯಿದು ಕಲಸಿ, (ವಸ್ತ್ರದಿಂದ) ೨೧ ಸರ್ತಿ ಗಾಳಿಸಿ, ತೆಗೆದುಕೊಂಡ ನೀರು ಒಂದು ದ್ರೋಣವನ್ನು ಕಾಲುಭಾಗ ಉಳಿಯುವಷ್ಟರತನಕ ಕುದಿಸಿದ ಮೇಲೆ, ಅದರಲ್ಲಿ ೧೦೦ ಪಲ ಹಳೇ ಬೆಲ್ಲವನ್ನು ಕದಡಿ, ಸಣ್ಣ ಉರಿಯಿಂದ ಪಾಕಮಾಡುವದು. ಬೆಲ್ಲವು ಪಾಕಕ್ಕೆ ಬಂದ ಸಮಯದಲ್ಲಿ ಚೇಳುಬಾಲದ ಗಿಡ (ಮಲ. ತೇಲ್‌ಕಡ), ಕಾಕೋಲಿ, ಕ್ಷೀರಕಾಕೋಲಿ, ಯವಕ್ಷಾರ, ಇವು ನಾಲ್ಕು ಸೇರಿ ೫ ಪಲ,

ಆನೆಲೆಕಾಯಿ, ತ್ರಿಕಟು, ಸ್ವರ್ಜಿಕಾಕ್ಷಾರ, ಚಿತ್ರಮೂಲ, ಬಜೆ, ಇವು ಐದೈದು ಪಲ ಪ್ರಕಾರ, (ಹುರಿದ) ಹಿಂಗು ಮತ್ತು ಅಮ್ಲವೇತಸ (ಇಲ್ಲದಲ್ಲಿ ಪುಲ್ಲಂಪುರಚಿ), ಇವು (ಎರಡು ಸೇರಿ) ಎರಡು ಪಲ, ಇವುಗಳ ಸೂಕ್ಷ್ಮಚೂರ್ಣವನ್ನು ಕಲಸಿ, (ಸ್ವಲ್ಪ ತಣಿದ ಮೇಲೆ) ಒಂದು ಕರ್ಷ ಪ್ರಮಾಣದ ಗುಳಿಗೆಗಳನ್ನು ಮಾಡಿಟ್ಟುಕೊಂಡು, ದೇಹಬಲ ನೋಡಿಕೊಂಡು, ತಿನ್ನಬೇಕು. ಅದು ಜೀರ್ಣವಾಗದೆ ಉಳಿದದ್ದನ್ನು ಕರಗಿಸುವದಲ್ಲದೆ, ಜೀರ್ಣಶಕ್ತಿಯನ್ನು ಚೆನ್ನಾಗಿ ಚುರುಕು ಮಾಡುತ್ತದೆ, ಉಂಡದ್ದನ್ನೂ ಮಲವನ್ನೂ ಜೀರ್ಣಮಾಡುವದು; ಪಾಂಡುರೋಗ, ಪ್ಲೀಹ, ಅರ್ಶಸ್ಸು, ಶೋಫ, ಕಫದ ಕೆಮ್ಮು, ಅರುಚಿ, ಅಗ್ನಿಮಾಂದ್ಯ, ವಿಷಮಾಗ್ನಿ, ಕಂಠದಲ್ಲಿ ಅಥವಾ ಎದೆಯಲ್ಲಿ ನಿಂತ ಕಫ, ಕುಷ್ಠಗಳು, ಪ್ರಮೇಹಗಳು, ಗುಲ್ಮ, ಈ ರೋಗಗಳನ್ನು ಬೇಗನೆ ಪರಿಹರಿಸುತ್ತದೆ. ಕ್ಷಾರಗುಡ ಎಂಬ ಪ್ರಸಿದ್ಧವಾದ ಈ ಔಷಧವನ್ನು ರೋಗಾಧೀನರಾದವರಿಗೆ ಪ್ರಯೋಗಿಸತಕ್ಕದ್ದು.

32. ಪಾರದಾಮೃತಲವಂಗಗಂಧಕಂ ಭಾಗಯುಗ್ಮಮರಿಚೇನ ಮಿಶ್ರಿತಮ್ ।
ತತ್ರ ಜಾತಿಫಲಮರ್ಧಭಾಗಿಕಂ ತಿಂತ್ರಿಡೀಫಲರಸೇನ ಮರ್ದಿತಮ್ ॥
ರಾಮಬಾಣ ರಸ ವಹ್ನಿಮಾಂದ್ಯದಶವಕ್ತ್ರನಾಶನೋ ರಾಮಬಾಣ ಇತಿ ವಿಶ್ರುತೋ ರಸಃ ।
ಸಂಗ್ರಹಗ್ರಹಣಿಕುಂಭಕರ್ಣಕಮಾಮವಾತಖರದೂಷಣಂ ಜಯೇತ್ ॥
ದೀಯತೇ ತು ಮರಿಚಾನುಪಾನತಃ ಸದ್ಯ ಏವ ಜಠರಾಗ್ನಿದೀಪನಃ ।
ರೋಚನಃ ಕಫಕುಲಾಂತಕಾರಕಃ ಶ್ವಾಸಕಾಸವಮಿಜಂತುನಾಶನಃ ॥
(ಭಾ. ಪ್ರ. 348-49)

(ಶುದ್ಧ) ಪಾದರಸ, (ಶುದ್ಧ) ವತ್ಸನಾಭಿ, ಲವಂಗ, (ಶುದ್ಧ) ಗಂಧಕ, (ಇವು ನಾಲ್ಕು) ಒಂದೊಂದು ಭಾಗ, ಬಿಳೇ ಕಾಳುಮೆಣಸು ೨ ಭಾಗ, ಜಾಯಿಕಾಯಿ ॥ ಭಾಗ, ಈ ಪ್ರಮಾಣದಲ್ಲಿ ತೆಗೆದುಕೊಂಡ ಆ ಔಷಧಗಳನ್ನು ಹುಣಸೆಸೊಪ್ಪಿನ ರಸದಿಂದ ಅರೆದು, ಮಾತ್ರೆಮಾಡಿ (ನೆಳಲಲ್ಲಿ ಒಣಗಿಸಿ)ಟ್ಟುಕೊಂಡು, (ಅನುಪಾನಭೇದದಿಂದ) ಕೊಡುವದು. 'ರಾಮಬಾಣ' ಎಂತ ಖ್ಯಾತಿಗೊಂಡ ಈ ಮಾತ್ರೆಯು ಅಗ್ನಿಮಾಂದ್ಯ ಎಂಬ ರಾವಣನನ್ನು ಕೊಲ್ಲುತ್ತದೆ; ಅದಲ್ಲದೆ ಸಂಗ್ರಹಗ್ರಹಣಿ ಎಂಬ ಕುಂಭಕರ್ಣನನ್ನೂ, ಆಮವಾತ ಎಂಬ ಖರದೂಷಣರನ್ನೂ ಜಯಿಸುತ್ತದೆ. ಅದನ್ನು ಕಾಳುಮೆಣಸಿನ (ಕಷಾಯದ) ಅನುಪಾನದಿಂದ ಕೊಟ್ಟಲ್ಲಿ ಜಠರಾಗ್ನಿಯು ಕೂಡಲೆ ದೀಪನವಾಗುತ್ತದೆ, ರುಚಿಯುಂಟಾಗುತ್ತದೆ, ಕಫದ ಕುಲವನ್ನು ಅದು ಅಂತ್ಯಮಾಡುತ್ತದೆ, ಮತ್ತು ಉಬ್ಬಸ, ಕೆಮ್ಮು, ವಾಂತಿ, ಕೃಮಿ, ಇವುಗಳನ್ನು ನಾಶಮಾಡುತ್ತದೆ.

ಸೂಚನಾ ಮೂಲದಲ್ಲಿ ಮಾತ್ರೆಯ ಪ್ರಮಾಣ ಕಾಣುವದಿಲ್ಲ. ಧ (ಪು 157)ಯಲ್ಲಿ "ಮರಿಚಾನುಪಾನತಃ" ಎಂಬಲ್ಲಿ "ಚಣಕಾನುಮಾನತಃ" ಎಂತ ಪಾಠವಿಟ್ಟು, ಕಡಲೆಗಾತ್ರದ ಮಾತ್ರೆಗಳನ್ನು ಮಾಡಬೇಕಾಗಿ ಅರ್ಥ ಬರೆದದ್ದು ಕಾಣುತ್ತದೆ ಯೋಗಪ್ರಕಾರ ಮಾತ್ರೆಯಲ್ಲಿ ಇಪ್ಪತ್ತಮೂರನೇ ಎರಡು ಅಂಶದಷ್ಟು ಪಾದರಸ ಇರುತದರಿಂದ, ರಸೇಂದ್ರ ಚಿನ್ತಾಮಣಿ (ಗ. ದ. 107) ಹೇಳುವಂತೆ ಉದ್ದಿನ ಗಾತ್ರದ ಮಾತ್ರೆಗಳನ್ನು ಮಾಡುವದೇ ಯುಕ್ತವಾಗಿ ಕಾಣುತ್ತದೆ ಅಲ್ಲಿ ಈ ಮಾತ್ರೆಯು ರಸಾಯನಗುಣವುಳ್ಳದ್ದೆಂತ ಹೇಳಲ್ಪಟ್ಟಿರುವದಲ್ಲದೆ, ಅದನ್ನು ಅಗ್ನಿವೃದ್ಧಿಗೆ ವೀಳ್ಯದೆಲೆ ಮತ್ತು ಮೆಣಸಿನ ಕಾಳಿನ ಸಮೇತ ಭಕ್ಷಿಸಬೇಕಾಗಿಯೂ, ಶುಂಠಿರಸದೊಂದಿಗೆ ಕಫದ ನಾಶಕ್ಕೆ, ಕರಿನೆಕ್ಕಿಯ ರಸದೊಂದಿಗೆ ವಾತವರಿ

ಹಾರಕ್ಕೆ, ಕೊತ್ತುಂಬರಿಯ ಕಷಾಯದೊಂದಿಗೆ ಪಿತ್ತಶಮನಕ್ಕೆ, ಆಡುಸೋಗೆಯ ರಸದಿಂದ ತ್ರಿದೋಷಪರಿಹಾರಕ್ಕೆ, ಶುಂಠಿ ಮತ್ತು ಅಣಿಲೆಕಾಯಿಯ ಕಷಾಯದಲ್ಲಿ, ಸೈಂಧವಲವಣ ಕೂಡಿಸಿ, ಉದರವ್ಯಾಧಿಗೆ, ಪುನರ್ನವಿಬೇರಿನ ಕಷಾಯದಿಂದ ಪಾಂಡುವಿನ ಮೇಲೆ ಉಂಟಾದ ಶೋಫೆಗೆ, ಸಹ ಕೊಡಬೇಕಾಗಿಯೂ ಉಪದೇಶಮಾಡಲ್ಪಟ್ಟದೆ.

'ಮಹಾಜ್ವರಾಂಕುಶ' ಮಾತ್ರೆಯ ಔಷಧಗಳನ್ನೇ ಗುಲಗುಂಜಿಸೊಪ್ಪಿನ ರಸದಿಂದ ಅರೆದ ಮಾತ್ರೆಗೂ, ಅನುಪಾನಭೇದದಿಂದ ಸರ್ವ ರೋಗಗಳಲ್ಲಿಯೂ ಉಪಯುಕ್ತವಾದ್ದಂತ ವರ್ಣಿಸಲ್ಪಟ್ಟ, ಜೇಪಾಳಬೀಜ ಸೇರಿದ, ಒಂದು ಮಾತ್ರೆಗೂ, ಇದೇ 'ರಾಮಬಾಣ' ಎಂಬ ಹೆಸರಿಟ್ಟಿರುವದು ಕಾಣುತ್ತದೆ

33. ಏಕೈಕಂ ವಿಷಸೂತಂ ಚ ಜಾತೀಟಂಕಂ ದ್ವಿಕಂ ದ್ವಿಕಮ್ ।
ಕೃಷ್ಣಾತ್ರಿಕಂ ವಿಶ್ವಷಟ್ಕಂ ದಗ್ಧಂ ಕಪರ್ದಕಂ ತಥಾ ॥
ಮಹೋದಧಿ ಮಾತ್ರೆ — ದೇವಪುಷ್ಪಂ ಬಾಣಮಿತಂ ಸರ್ವಂ ಸಮ್ಮರ್ದ್ಯ ಯತ್ನತಃ ।
ಮಹೋದಧೀ(?ಧಿ)ವಟೀ ನಾಮ್ನಾ ನಷ್ಟಮಗ್ನಿಂ ಪ್ರದೀಪಯೇತ್ ॥
ರ. ಚಿ. (ರ. ರ. 108)

(ಶುದ್ಧ) ವತ್ಸನಾಭಿ ಮತ್ತು (ಶುದ್ಧ) ಪಾದರಸ ಒಂದೊಂದು ಭಾಗ, ಜಾಯಿಕಾಯಿ ಮತ್ತು ಟಂಕಣ ಎರಡೆರಡು ಭಾಗ, ಹಿಪ್ಪಲಿ ೩ ಭಾಗ, ಶುಂಠಿ ೬ ಭಾಗ, ಕವಡೆಭಸ್ಮ ೬ ಭಾಗ, ಲವಂಗ ೫ ಭಾಗ, ಈ ಪ್ರಮಾಣದಲ್ಲಿ ತೆಗೆದುಕೊಂಡ ಆ ಔಷಧಗಳನ್ನೆಲ್ಲ ಪ್ರಯತ್ನಪಟ್ಟು ಅರೆದು ಮಾಡಿದ ಮಹೋದಧಿ ಎಂಬ ಮಾತ್ರೆಯು ನಷ್ಟವಾದ ಅಗ್ನಿಯನ್ನು ಹೊತ್ತಿಸುವದು.

ಪರಾ ಕವಡೆಯನ್ನು ಶುದ್ಧಮಾಡಿಕೊಂಡು ಭಸ್ಮಮಾಡುವ ಕ್ರಮವು ಹಿಂದಿನ XVIನೇ ಅಧ್ಯಾಯದ 149ನೇ ಸಂಖ್ಯೆಯಲ್ಲಿ ವಿವರಿಸಲ್ಪಟ್ಟದೆ.

ಮಾತ್ರೆಯನ್ನು ಅರೆಯುವದಕ್ಕೆ ರಸವಾಗಲಿ, ಅದರ ಪ್ರಮಾಣವಾಗಲಿ, ಅದನ್ನು ಕೊಡುವದಕ್ಕೆ ಅನುಪಾನವಾಗಲಿ, ಯೋಗದಲ್ಲಿ ಹೇಳಲ್ಪಟ್ಟಿರುವದಿಲ್ಲ. ಯೋಗದ ಔಷಧಗಳನ್ನು ಲಿಂಬೆಹಣ್ಣಿನ ರಸದಿಂದ ಅರೆದು, ಗುಂಜಾಗಾತ್ರದ ಮಾತ್ರೆಗಳನ್ನು ಮಾಡಿ ನೆಳಲಲ್ಲಿ ಒಣಗಿಸಿಟ್ಟುಕೊಂಡು, ಒಂದೆರಡು ಮಾತ್ರೆಗಳನ್ನು ಶುಂಠಿರಸ, ಜೀರಿಗೆ ಅಥವಾ ಕೊತ್ತುಂಬರಿಯ ಕಷಾಯ, ಮುಂತಾದ ಅನುಪಾನಭೇದದಿಂದ ಕೊಡಬಹುದು.

34. (1) ರೋಗಿಯ ಪ್ರಾಯ 21 ವರ್ಷ. ಅಜೀರ್ಣ, ಬಾಯಿಹುಣ್ಣು ಮತ್ತು ಅಶಕ್ತಿ; ಪಿತ್ತಕಫನಾಡಿಗಳು ಸ್ಥಾನದಲ್ಲಿ ಅಬಲಿಯಾಗಿವೆ.—ಬಿಲ್ವಪತ್ರೆಬೇರು ತೊ. ೧, ಅಮೃತಬಳ್ಳಿ ತೊಲೆ. ೧, ಶುಂಠಿ ತೊ. ||, ಇವುಗಳ ಕಷಾಯದ ಅರ್ಧದಲ್ಲಿ ಅತಿ. ೧ರಂತೆ, ಜೇನು ಕೂಡಿಸಿ, ೭ ದಿನ ಕೊಟ್ಟದರಿಂದ ಅಗ್ನಿಮಾಂದ್ಯ ಮತ್ತು ಬಾಯಿಹುಣ್ಣು ವಾಸಿಯಾದವು.

ದೃಷ್ಟಫಲ ಚಿಕಿತ್ಸೆ

(2) ಪ್ರಾಯ 22 ವರ್ಷ. ಅಗ್ನಿಮಾಂದ್ಯ, ಮಲಪ್ರವೃತ್ತಿ ಸರಿ ಇಲ್ಲ, ಅಶಕ್ತಿ, ಕೂತರೆ ಏಳಲಿಕ್ಕೆ ಪ್ರಯಾಸ; ನಾಡಿಗಳೊಳಗೆ ವಾತ ಬಲವಂತ, ಪಿತ್ತ-ಕಫಗಳು ಸ್ಥಾನಚ್ಯುತ, ವೇಗ ಕೆಲ ಸಮಯ ಹೆಚ್ಚು, ಕೆಲ ಸಮಯ ಕಡಿಮೆ.—ಕದೀರು(ಕಲ್ಲಂಗಡಲೆ)ಬೇರು ತೊ. ||, ಆನೆಕದೀರು ತೊ. ||, ಅಮೃತಬಳ್ಳಿ ತೊ. ||, ತುಪ್ಪದೇವದಾರ ತೊ. |, ಶುಂಠಿ ತೊ. |, ಬಿಲ್ವಪತ್ರೆಬೇರು ತೊ. |, ಆಡುಸೋಗೆಯ ಹಸೀ ಎಲೆ ತೊ. ||. ಕಷಾಯದ

ಅರ್ಧದಲ್ಲಿ ವಾ. ಗ. ೧ರಂತೆ, ಜೇನು ಮತ್ತು ಕಲ್ಲುಸಕ್ಕರಪುಡಿ ಕೂಡಿಸಿ, ೭ ದಿನ ಸೇವಿಸಿದ್ದರಿಂದ ಕೂತು ಏಳುವಾಗೆ ಕಾಲುಗಳಲ್ಲಿ ಜುಮ್ಮು ಉಂಟಾಗುವ ಲಕ್ಷಣ ಒಂದಲ್ಲದೆ, ಮಿಕ್ಕವುಗಳೆಲ್ಲ ವಾಸಿಯಾದವು; ನಾಡಿಗಳೊಳಗೆ ಪಿತ್ತದಕ್ಕಿಂತ ಕಫದಲ್ಲಿ ದೋಷ ಹೆಚ್ಚು.—ಕಾಸೀಸಾದಿ ಮಾತ್ರೆ ೧ರಂತೆ ಜೇನಿನಲ್ಲಿ.—೭ ದಿನಗಳಲ್ಲಿ ಕಫನಾಡಿ ಸರಿ ಆಯಿತು, ವಾತ ಕುಪಿತ-ಪಿತ್ತ ಬೊಗ್ಗುತ್ತದೆ.—ಕಸ್ತೂರ್ಯಾದಿ ಮಾತ್ರೆ ೧ರಂತೆ ಹಾಲಿನಲ್ಲಿ, ಕಲ್ಲುಸಕ್ಕರೆ ಕೂಡಿಸಿಕೊಂಡು, ಕೆಲವು ದಿನ ಸೇವಿಸಿದ್ದರಿಂದ ಪೂರ್ಣ ಸೌಖ್ಯವಾಯಿತು.

(3) ಪ್ರಾಯ 19 ವರ್ಷ. ಅಜೀರ್ತಿ ಮತ್ತು ಸ್ವಲ್ಪ ಅತಿಸಾರ, ೩-೪ ದಿನಗಳಿಂದ.—ಶುಂಠಿವಟಕ ೨ರಂತೆ ಬಿಸಿನೀರಿನಿಂದ ಎರಡೇ ಸರ್ತಿ ಸೇವಿಸಿದ್ದರಿಂದ ಸೌಖ್ಯ.

(4) ಪ್ರಾಯ 17 ವರ್ಷ. ಅಗ್ನಿಮಾಂದ್ಯ, ಮಲಬದ್ಧತೆ; ನಾಡಿಗಳು ಸೂಕ್ಷ್ಮ ಮತ್ತು ಅಸ್ಥಿರ, ವಾತ-ಪಿತ್ತಗಳಲ್ಲಿ ದೋಷ ಹೆಚ್ಚು.—ಶತಾವರಿರಸ ‖ ಡ್ರಾಂ, ಶುಂಠಿರಸ | ಡ್ರಾಂ, ಇದರಲ್ಲಿ ಮ. ಜ್ವ. |||ರಂತೆ ೮ ದಿನ ಸೇವಿಸಿದ್ದಲ್ಲಿ ಸ್ವಲ್ಪ ಅಶಕ್ತಿ ಮಾತ್ರ ಉಳಿದದ್ದಲ್ಲದೆ ಮಿಕ್ಕ ಲಕ್ಷಣಗಳು ಪರಿಹಾರವಾದವು—ಕೂಷ್ಮಾಂಡರಸಾಯನ ೧ ಡ್ರಾಂ ಪ್ರಕಾರ ದಿನಕ್ಕೆ ೨ ಸರ್ತಿ ಸೇವಿಸಿ, ಅನುಪಾನವಾಗಿ | ಕುಡ್ತೆ ಹಾಲು ಕುಡಿಯುವದು.—ಇದರಿಂದ ಪೂರ್ಣ ಸೌಖ್ಯವಾಯಿತು.

(5) ಪ್ರಾಯ 21 ವರ್ಷ. ೨ ತಿಂಗಳಿಂದ ಹೊಟ್ಟೆಯಲ್ಲಿ ನಾಭಿಯ ಕೆಳಗೆ, ಉಂಡು ೨ ಘಂಟೆವರೆಗೆ, ಶೂಲೆ; ಹೊಟ್ಟೆ ಖಾಲಿಯಾದಾಗ್ಗೆ ಶೂಲೆ ಇಲ್ಲ; ಮಲಮೂತ್ರ ಸರಿ; ನಾಡಿಗಳು ಸೂಕ್ಷ್ಮ, ವಾತ-ಪಿತ್ತಗಳಲ್ಲಿ ಕೆಲವು ಮಾತ್ರ ಸ್ಥಾನದಲ್ಲಿರುತ್ತವೆ, ಕಫ ಸ್ತಬ್ಧ ಅಥವಾ ಸ್ಥಾನಚ್ಯುತ.—ಅತಿ. ೧ರಂತೆ ಜೇನಿನಲ್ಲಿ ತೇದಿ ನೆಕ್ಕುವದು ಉಂಡ ಮೇಲೆ.—೫ ದಿನಗಳಲ್ಲಿ (೧೦ ಸರ್ತಿಗಳ ಔಷಧ ಸೇವನದಿಂದ) ಸೌಖ್ಯವಾಯಿತು.

35. ಅಡಿಕೆ, ಅತಿವಿಷ, ಅಮೃತಬಳ್ಳಿ, ಆನೆಮುಂಗು, ಉಮ್ಮತ್ತ, ಎಕ್ಕೆಹೂವು, ಓಮ, ಕಟುಕರೋಹಿಣಿ, ಕಾಡುಮೆಣಸಿನ ಬೇರು, ಕಾಶ್ಮರಿ, ಕಿತ್ತಳೆಹಣ್ಣು, ಕಿರಿಗುಳ್ಳದ ಬೇರು, ಕೊಡಸಿಗನ ಬೀಜ (ಇಂದ್ರಜೀವಿ), ಕೊತ್ತುಂಬರಿ, ಖುರಾಸಾನಿಓಮ, ಗಜಹಿಪ್ಪಲಿ, ಗೇರುಕಾಯಿ, ಗ್ರಂಥಿಪರ್ಣ, ಚಿತ್ರಮೂಲ, ಟಂಕಣಕಾರ, ತಾಳೀಸಪತ್ರೆ, ತೇಜೋವತಿ (ಮಲ. ಚೆರುಪುನ್ನರಿ), ದಂತಿ(ಎರಡು ವಿಧದ)ಬೇರು, ದಾಳಿಂಬದ ಹುಳಿ, ದೊಡ್ಡಿಹುಳಿ, ನರುವಲುಬೇರು, ನಿರ್ವಿಷದ (ಭಾಂಗೀರ್) ಬೇರು, ನೆಗ್ಗಿಲಮುಳ್ಳು, ಪುಲ್ಲಂಪುರಚೆ (ಮಲ. ಪುಳಿಯಾರಲ್), ಬಿಡಲವಣ, ಬಿಲ್ವಪತ್ರೆ, ಬೆಳ್ಳುಳ್ಳಿ, ಭಂಗಿ, ಭದ್ರಮುಷ್ಟಿ, ಮಾದಳಹುಳಿ, ಮುಡಿವಾಳ (ಅಥವಾ ಇರುವೇರಿದಂಟು), ಮುರ್ಗಿನಹುಳಿ, ರೇಣುಕೆಬೀಜ, ಲವಂಗ, ವರುಣ (?ನೀರ್ಮಾದಳ, ಹೊಳೆನೆಕ್ಕಿ), ಶುಂಠಿ, ಸಬ್ಬಸಿಗೆಬೀಜ, ಸೈಂಧವಲವಣ, ಸೋಪಿ, ಹಿಂಗು ಮತ್ತು ಹಿಪ್ಪಲಿಮೂಲ. (ಅತಿಸಾರಪರಿಹಾರಕವಾದ ಮತ್ತು ಗ್ರಹಣೀರೋಗಹರವಾದ ಬೇರೆ ಔಷಧಗಳು ಸಹ ಎಂತ ಶತಶ್ಲೋಕಿ-ಪು. 11.)

ಪೃಥಗ್ರೋಗೌಷಧಗಳು

36. ಕಫದಿಂದುಂಟಾದ್ದರಲ್ಲಿ ಮುಂದಾಗಿ ವಮನ, ಪೈತ್ತಿಕದಲ್ಲಿ ಮೃದುವಾದ ವಿರೇಚನ, ವಾತಿಕದಲ್ಲಿ ಬೆವರಿಸುವದು, (ಕೆಳಗೆ ಬರೆದವುಗಳೊಳಗೆ) ಆಯಾ ಅವಸ್ಥೆಯಲ್ಲಿ

ಪಥ್ಯವರ್ಗ

ಹಿತವಾದ ವಸ್ತುಗಳು, ನಾನಾ ಪ್ರಕಾರದ ವ್ಯಾಯಾಮಗಳು, ದೀಪನಕಾರಿಗಳು, ಲಘುವಾದ ವಸ್ತುಗಳು, ಬಹುಕಾಲದ ಹಿಂದಿನ ಹೆಸರುಬೇಳೆ ಮತ್ತು ಕೆಂಪು ಶಾಲ್ಯಕ್ಕಿಗಳು, ವಿಲೇಪಿ (ಗಂಜಿ ವಿಶೇಷ), ಅರಳಿನ ಗಂಜಿಯ ನೀರು, ಹೆಸರುಬೇಳೆಯ ತಿಳೀಸಾರು, ಹೆಂಡ, ಜಿಂಕೆ-ನವಿಲು-ಮೊಲ-ಲಾವಪಕ್ಷಿಗಳ ಮತ್ತು ಎಲ್ಲಾ ಜಾತಿ ಸಣ್ಣ ಮೀನುಗಳ ಮಾಂಸ, ಬೆತ್ತದ ಕುಡಿ, ಚಕ್ಕೋತಸೊಪ್ಪು, ಎಳೇ ಮೂಲಂಗಿ, ಬೆಳ್ಳುಳ್ಳಿ, ಹಳೇ ಬೂದಿ ಕುಂಬಳಕಾಯಿ, ಹೊಸ (ಎಳೇ) ಬಾಳೆಕಾಯಿ, ನುಗ್ಗೆಕೋಡು, ಪಡುವಲಕಾಯಿ, ಬದನೆಕಾಯಿ, ಕರಿಬೇವು, ಮಧಾಗಲಕಾಯಿ, ಹಾಗಲಕಾಯಿ, ಗುಳ್ಳದಕಾಯಿ, ಕಲ್ಲು(ಕಾಡು) ಶುಂಠಿ, ಕಾಗೆಹಣ್ಣಿನಗಿಡದ ಸೊಪ್ಪು (ಗಣಿಕೆ), ಪುಲ್ಲಂಪುರಚ (ಮಲ ಪುಳಿಯಾರಲ್), ನೆಲ್ಲಿಹಣ್ಣು, (ಹುಳಿ) ಮಾದಳಹಣ್ಣು, (ಹುಳಿ) ದಾಳಿಂಬ, ಯವೆಗೋಧಿ, ಪರ್ಪಾಟಕ, ಅಮ್ಲವೇತಸ, ದೊಡ್ಡಿಹುಳಿ, ಕಿತ್ತಳೆಹಣ್ಣು, ಜೇನು, ಬೆಣ್ಣೆ, ತುಪ್ಪ, ಮಜ್ಜಿಗೆ, ಸೌವೀರ (ಹುಳಿಸಿದ ಗಂಜಿನೀರು), ಅಕ್ಕಚ್ಚು (ಅಕ್ಕಿತೊಳೆದ ನೀರು), ಧಾನ್ಯದಹುಳಿ, ಸಾಸುವೆಎಣ್ಣೆ, ಹಿಂಗು, ಶುಂಠಿ-ಉಪ್ಪಿನ ಚಟ್ಣಿ, ಓಮ, ಕಾಳುಮೆಣಸು, ಮೆಂತೆ, ಕೊತ್ತುಂಬರಿ, ಜೀರಿಗೆ, ನೊಸರು, ವೀಳ್ಯದೆಲೆ (ತಾಂಬೂಲ), ಕಾಯಿಸಿದ ನೀರು, ಕಾರರಸ ಮತ್ತು ಕಹಿರಸ.

37. ವಿರೇಚನ, ಮಲ-ಮೂತ್ರ-ವಾಯುಗಳ ವೇಗದ ತಡೆ, ಅತಿಯಾದ ಭೋಜನ,

ಅಪಥ್ಯವರ್ಗ

ಉಂಡದ್ದು ಜೀರ್ಣವಾಗುವದಕ್ಕೆ ಮೊದಲು ಉಣ್ಣುವದು, ಜಾಗರಣೆ, ವಿಷಮವಾದ ಊಟ, ರಕ್ತ ತೆಗೆಯುವದು, ಶಿಂಬೀ (ಕೋಡುಳ್ಳ) ಧಾನ್ಯ, ಮೀನು, ಮಾಂಸ, ಬಸಳೆ(ಬಚ್ಚಲ)ಸೊಪ್ಪು, ನೀರು ಕುಡಿಯುವದು, ಹಿಟ್ಟಿನ ಆಹಾರ, ಜಂಬುನೇರಳೆಹಣ್ಣು, ಎಲ್ಲಾ ಗಡ್ಡೆಗಳು, ಹಾಲು, ತಾಳಿಕೊಂಬು, ಎಳೇ ತಾಳಿಕಾಯಿ, ಸ್ನೇಹನ ಕ್ರಮ, ದೋಷವುಳ್ಳ ನೀರು, (ಪರಸ್ಪರ ಸಂಯೋಗ) ವಿರುದ್ಧವಾದ ಅನ್ನಪಾನಗಳು, ಸಾತ್ಮ್ಯವಲ್ಲದ ಅನ್ನಪಾನಗಳು, ವಿಷ್ಟಂಭಕರವಾದ ಮತ್ತು ಗುರುವಾದ ಪದಾರ್ಥಗಳು.

38. "ಗ್ರಹಣೀಗೆ ಅಗ್ನಿ ಎಂಬ ಹೆಸರುಳ್ಳಪಿತ್ತವೇ ಬಲ; ಅಗ್ನಿಗೂ ಗ್ರಹಣೀಗೂ ಯೋಗಕ್ಷೇಮ ಒಂದೇ; ಗ್ರಹಣೀಯು ಅಗ್ನಿಯನ್ನು ಆಧರಿಸಿಕೊಂಡಿರುವಂಥಾದ್ದು ಮತ್ತು ಅಗ್ನಿಯಿಂದ

ಪ್ರಕರಣಾಂತ ಟಿಪ್ಪಣಿ

ಪೋಷಿಸಲ್ಪಡುತ್ತದೆ; ಆ ಗ್ರಹಣೀಯು ಶರೀರವನ್ನು ಬದುಕಿಸುತ್ತದೆ." (ಅ. ಸಂ. I-319). "ಅಗ್ನಿಯು ಕೆಟ್ಟರೆ ಗ್ರಹಣೀಯು ಕೆಡುತ್ತದೆ" (ಹಿಂದಿನ XIXನೇ ಅ.ದ 1ನೇ ಸಂ. ಯಡಿ ಷರಾ ನೋಡಿ). "ಅನ್ನಾವಹ ಸ್ರೋತಸ್ಸಿನಲ್ಲಿ ಪಿತ್ತವು ಪಂಕ್ತಿಸ್ಥಾನದಲ್ಲಿ ನಿಂತರೆ, ವಿದಾಹಿಕರವಲ್ಲದ ಆಹಾರ ಸಹ ವಿದಗ್ಧವಾಗುತ್ತದೆ" (ಸು. 239). "ಅಗ್ನಿಯನ್ನು ನೊಂದಿಸುವ ಹೇತುಗಳಿಂದ ಗ್ರಹಣೀಯು ಕೆಡುತ್ತದೆ" (ಸು. 795). "ಮಂದ, ತೀಕ್ಷ್ಣ, ವಿಷಮ ಎಂಬ ಅಗ್ನಿಯ ವಿಕಾರಗಳು ಗ್ರಹಣೀಯ ದೋಷಗಳೇ" (ವಾ. 213). ಹೀಗೆ ಗ್ರಂಥಗಳಲ್ಲಿ ಪಿತ್ತ, ಅಗ್ನಿ ಮತ್ತು ಗ್ರಹಣೀ

ಎಂಬ ಶಬ್ದಗಳು ಬೇರೆ ಬೇರೆ ಅರ್ಥಗಳಲ್ಲಿ ಉಪಯೋಗಿಸಲ್ಪಟ್ಟಿರುವದರಿಂದ, ಗ್ರಹಣಿ, ಅಗ್ನಿಮಾಂದ್ಯ ಮತ್ತು ಅಜೀರ್ಣ ಎಂಬ ವಿಕಾರಗಳ ಭೇದವನ್ನು ತಿಳಿಯಲು ಯತ್ನಿಸುವಲ್ಲಿ ಗಲಿಬಿಲಿ ಉಂಟಾಗಬಹುದು. ಈ ವಿಚಾರದಲ್ಲಿ 1ನೇ ಭಾಗದ II-117, 118, 119ನೇ ಸಂಖ್ಯೆಗಳಲ್ಲಿಯೂ, ಆ 119ನೇ ಸಂಖ್ಯೆಯಡಿಯ ಷರಾದಲ್ಲಿಯೂ ಸವಿಸ್ತಾರವಾಗಿ ವರ್ಣಿಸಲ್ಪಟ್ಟಿರುವ ಆಹಾರಪಾಕದ ರೀತಿಯನ್ನು ನೆನಪಿನಲ್ಲಿಟ್ಟುಕೊಳ್ಳುವದು ಆವಶ್ಯಕ.

ಆಹಾರದಲ್ಲಿಯ ಸಾರ-ಕಿಟ್ಟಗಳನ್ನು ಪ್ರತ್ಯೇಕಿಸಿ, ಸಾರವು ರಸಾದಿ ಸಪ್ತಧಾತುಗಳೊಳಗೆ ಸೇರಿ ಅವುಗಳನ್ನು ಪೋಷಿಸುವ ಹಾಗೆ ದೇಹದೊಳಗೆ ನಡೆಯುವ ಪರಿವರ್ತನಗಳಿಗೆ ಪಾಕ ಎನ್ನುವದು. ಆ ಪಾಕವಿಶೇಷಗಳಿಗೆಲ್ಲ ಅಗ್ನಿ(ಬಿಸಿ)ಯು ಮುಖ್ಯ ಮತ್ತು ಅವುಗಳಿಂದ ಬಿಸಿ ಉಂಟಾಗಿ ಜಠರಾಗ್ನಿಯು ಪುಷ್ಟಿಗೊಳ್ಳುತ್ತದೆ. ಆ ಅಗ್ನಿಗೆ ಪಿತ್ತದ ತೇಜೋಗುಣವು ಮುಖ್ಯ. ಆ ಪರಿವರ್ತನಗಳು ಚನ್ನಾಗಿ ನಡೆಯದ ದೋಷಯುಕ್ತವಾದ ಸಾರವು ಬೇರೆ ಬೇರೆ ಅಂಗಃಭಾಗಗಳಲ್ಲ ಅಥವಾ ಧಾತುಗಳಲ್ಲಿ ಸೇರಿಕೊಂಡು ನಿಂತರೆ, ನಾನಾ ರೂಪದ ಬೇರೆ ಬೇರೆ ವ್ಯಾಧಿಸಮೂಹಗಳು ಉತ್ಪನ್ನವಾಗುತ್ತವೆ. ಆ ಪಾಕಗಳೊಳಗೆ (ಮೊದಲನೇ ಪಾದ) ಆಹಾರದ ಪಾಕವೇ ಅಧಿಕ(ಶ್ರೇಷ್ಠ)ವಾದ್ದು (ಚ. 657). ಅದಕ್ಕೆ ಜೀರ್ಣ ಎನ್ನುವದು; ಅದು ಅನ್ನನಾಳದಲ್ಲಿ ಆಗುವಂಥಾದ್ದು. ಅದಕ್ಕೆ ಸಂಬಂಧಪಟ್ಟವು ಅಗ್ನಿಮಾಂದ್ಯ, ಅಜೀರ್ಣ, ಮತ್ತು ಗ್ರಹಣಿ ಎಂಬ ರೋಗಗಳು. ಆ ಆಹಾರಪಾಕದಲ್ಲಿಯೂ ಅನ್ನನಾಳದ ಒಂದು ವಿಭಾಗವಾದ ಗ್ರಹಣೀಯಲ್ಲಿ ಆಗುವ ಪರಿವರ್ತನವು ಮುಖ್ಯವಾದ್ದು. ಆದ್ದರಿಂದ ಅಂತರಗ್ನಿಯ ಅಧಿಷ್ಠಾನ (ಮನೆ) ಗ್ರಹಣೀ ಎಂತ ಕೆಲವು ಗ್ರಂಥಗಳು ಹೇಳಿವೆ. ಗ್ರಹಣೀಯಲ್ಲಿ ನಡೆಯತಕ್ಕ ಪಾಕವು ವಾತಾದಿ ದೋಷಗಳ ದೆಸೆಯಿಂದ ಸರಿಯಾಗಿ ಆಗದೆ, ಮಲ ತೆಳ್ಳಗಾಗಿ ಹೋಗುವ ರೋಗಕ್ಕೆ ಗ್ರಹಣಿ ಎನ್ನುವದಾಗಿರುತ್ತದೆ. ಅದು ಪ್ರಾಯಶಃ ಚಿರಸ್ಥಾಯಿರೋಗ. ಆಹಾರವು ಗ್ರಹಣೀ ಎಂಬ ಅಂಗವಿಭಾಗಕ್ಕೆ ತಲ್ಪುವದಕ್ಕೆ ಮೊದಲೇ ಅನ್ನನಾಳದ ಮೇಲಿನ ಭಾಗಗಳಲ್ಲಿ, ಅಥವಾ ಗ್ರಹಣೀಯನ್ನು ದಾಟಿದನಂತರ ಪಕ್ವಾಶಯದಲ್ಲಿ, ನಡೆಯತಕ್ಕ ಪರಿವರ್ತನಗಳು ಸರಿಯಾಗಿ ನಡೆಯದ ದೆಸೆಯಿಂದಲೂ ಮಲ ತೆಳ್ಳಗಾಗಿ ಹೋಗಬಹುದು. ಅದು ಗ್ರಹಣಿರೋಗವಲ್ಲ. ಪಾಕಕ್ಕೆ ಅರ್ಹವಲ್ಲದ ಆಹಾರವನ್ನು ಗ್ರಹಣೀಯು ಪಾಕಮಾಡದೇನೇ ಕೆಳಗೆ ಬಿಡುವದು ಗ್ರಹಣೀಯ ದೋಷವಲ್ಲ. ಅಂಥಾದ್ದಕ್ಕೆ ಅಜೀರ್ತಿ ಅಥವಾ ಅಜೀರ್ಣ ಎನ್ನುವದು. ಜೀರ್ಣ(ಅಂದರೆ ಪಚನ)ಕ್ಕೆ ಅಗ್ನಿ ಮುಖ್ಯ ಎಂಬದರಿಂದ ಅಜೀರ್ಣಕ್ಕೂ ಅಗ್ನಿಮಾಂದ್ಯಾದಿ ಅಗ್ನಿಯ ದೋಷವೇ ಕಾರಣ ಎನ್ನಬಹುದಾದರೂ, ಅಗ್ನಿಯು ಪ್ರಕೃತಿಸ್ಥಿತಿಯಲ್ಲ ಇದ್ದಾಗ್ಗೆ ಸಹ ಆಹಾರದ ದೋಷ ಮುಂತಾದ ಕಾರಣಗಳಿಂದ ಅಜೀರ್ಣ ಉಂಟಾಗುತ್ತದೆ. ಆಹಾರದ್ರವ್ಯಗಳಲ್ಲಿ ಗುರು-ಲಘು ಎಂಬ ಎರಡು ವಿಧಗಳಿವೆಯಷ್ಟೆ. ಲಘುವಾದವು ಅಗ್ನಿಯನ್ನು ಚುರುಕುಮಾಡುವ ಗುಣವುಳ್ಳವು. ಮತ್ತು ಗುರುಪದಾರ್ಥಗಳು ಅಗ್ನಿಯನ್ನು ಮಂದಮಾಡುವಂಥವು. ಅಂಥಾ ಗುರುಪದಾರ್ಥಗಳನ್ನಾದರೂ, ಅಗ್ನಿಯ ಬಲಕ್ಕೆ ಮಿಕ್ಕದ ಹಾಗೆ, ಮಿತವಾಗಿ ಸೇವಿಸಿದರೆ ಅಗ್ನಿಗೆ ಬಾಧಕ ಬರುವದಿಲ್ಲ ಮತ್ತು ಅಜೀರ್ಣ ಉಂಟಾಗುವದಿಲ್ಲ. (ಕ್ರಮ ತಪ್ಪಿ ಅಥವಾ ಮಿತಿಮೀರಿ ಸೇವಿಸಲ್ಪಟ್ಟ ಕೆಲವು ಪದಾರ್ಥಗಳಿಂದ ಉಂಟಾದ ಅಜೀರ್ತಿಗಳಿಗೆ ದ್ರವ್ಯವಿಶೇಷಕ್ಕೆ ತಕ್ಕದಾದ ಪಾಚನದ್ರವ್ಯವಿಶೇಷವನ್ನು ತೋರಿಸುವ ಒಂದು ಪಟ್ಟಿಯನ್ನು ಈ

ಸಂಖ್ಯೆಯ ಕೊನೆಯಲ್ಲಿ ಕೊಡೋಣಾಗುತ್ತದೆ.) ಪ್ರಕೃತಿಸ್ಥಿತಿಯಾಗಿಯೇ ಅಗ್ನಿಯು ಕೆಲವರಲ್ಲಿ ಸ್ವಲ್ಪ ಮಂದವಾಗಿ ಮತ್ತು ಕೆಲವರಲ್ಲಿ ಸ್ವಲ್ಪ ಹೆಚ್ಚು ಚುರುಕಾಗಿ ಇರುತ್ತದೆ; ಎಲ್ಲರಲ್ಲಿಯೂ ಅದು ಏಕರೀತಿಯಾಗಿ ಇರುವದಿಲ್ಲ. ಅಂಥಾ ಮಂದಾಗ್ನಿಯಾಗಲಿ, ತೀಕ್ಷ್ಣಾಗ್ನಿಯಾಗಲಿ ರೋಗವೆಂತ ಎಣಿಸಲಿಕ್ಕಾಗುವದಿಲ್ಲ. ದ್ರವ್ಯಗಳಲ್ಲಿಯೂ ಕೆಲವು ದೀಪನಗಳು, ಕೆಲವು ಪಾಚನಗಳು, ಮತ್ತು ಕೆಲವು ದೀಪನ-ಪಾಚನಗಳು, ಇವೆ. ಅಗ್ನಿಮಾಂದ್ಯದಲ್ಲಿ ದೀಪನಕಾರಿಗಳು, ಅಗ್ನಿಮಾಂದ್ಯವಿಲ್ಲದ ಅಜೀರ್ಣದಲ್ಲಿ ಪಾಚನಕಾರಿಗಳು, ಅಗ್ನಿಮಾಂದ್ಯಾಜೀರ್ಣಗಳೆರಡೂ ಇರುವಲ್ಲಿ ದೀಪನ-ಪಾಚನಕಾರಿಗಳು ಉಪಯುಕ್ತವಾದವು. ಅಜೀರ್ಣದಲ್ಲಿ ವಾಯುವಿನ ಪ್ರಕೋಪದಿಂದ ಉಂಟಾಗುವ ವಿಷ್ಟಬ್ಧ, ಮತ್ತು ರಸಶೇಷ ಎಂಬದು ಸಹ, ಪ್ರಾಯಶಃ ಆಹಾರವು ಗ್ರಹಣೀಯನ್ನು ದಾಟಿ ಪಕ್ವಾಶಯದಲ್ಲಿರುವಾಗ್ಗೆ ನಡೆಯತಕ್ಕ ಪಾಕಗಳಲ್ಲಿ ಉಂಟಾಗುವ ದೋಷಕ್ಕೆ ಸಂಬಂಧಪಟ್ಟವು. ಪಕ್ವಾಶಯದಲ್ಲಿರುವ ಸಮಾನವಾಯು ಕೋಪಗೊಂಡು ವಿಷ್ಟಬ್ಧವನ್ನುಂಟುಮಾಡುವದಾಗಿರುತ್ತದೆ. ರಸಶೇಷದಲ್ಲಿ ತೇಗು ಶುದ್ಧವಾಗಿರುವದಕ್ಕೆ ದೋಷವು ಗ್ರಹಣೀಗಿಂತ ಕೆಳಗೆ ಇರುವದು ಕಾರಣವಾಗಿರಬೇಕು.

ಎಲ್ಲಾ ಜ್ವರಗಳಲ್ಲಿ ಮತ್ತು ಸಾಧಾರಣವಾಗಿ ಎಲ್ಲಾ ಕಠಿಣವ್ಯಾಧಿಗಳಲ್ಲಿ ಅಗ್ನಿಮಾಂದ್ಯ ಉಂಟಾಗುತ್ತದೆ. ಅಂಥಾ ಅಗ್ನಿಮಾಂದ್ಯಕ್ಕೆ ಆಯಾ ವ್ಯಾಧ್ಯುಕ್ತ ಚಿಕಿತ್ಸೆಯನ್ನೇ ಮಾಡಿದರೆ ಸಾಕಾಗುತ್ತದೆ. ಅನ್ಯರೋಗದ ಲಕ್ಷಣವಲ್ಲದ, ಪ್ರಕೃತಿಸ್ಥಿತಿದಲ್ಲದ ಮತ್ತು ತ್ರಿವಿಧ ಗ್ರಹಣೀರೋಗಕ್ಕೆ ಹೇಳಲ್ಪಟ್ಟ ನಿದಾನಗಳಿಂದ ಉತ್ಪನ್ನವಾದ ಅಗ್ನಿಮಾಂದ್ಯಕ್ಕೆ ಈ ಅಧ್ಯಾಯದಲ್ಲಿಯ ಉಪದೇಶಾನುಸಾರವಾಗಿ ಉಪಚಾರಮಾಡತಕ್ಕದ್ದಾಗಿರುತ್ತದೆ.

ಆಮಾಶಯದಲ್ಲಿ ಆಹಾರದೊಂದಿಗೆ ಸೇರತಕ್ಕ ಹುಳಿರಸವು (gastric juice) ಪಿತ್ತದ ದುರ್ಬಲತೆಯಿಂದ ಕಡಿಮೆಯಾಗಿ, ಆಹಾರಪಾಕದ ಪ್ರಥಮಾವಸ್ಥೆಯಾದ ಮಧುರರಸವು ಪರಿವರ್ತವಾಗದೆ ನಿಂತು ಉಂಟಾಗುವ ಅಜೀರ್ಣವು ಆಮಾಜೀರ್ಣ, ಪಿತ್ತಪ್ರಕೋಪದ ಫಲವಾಗಿ ಆ ಹುಳಿರಸವು ಅತಿಯಾಗಿ ಪ್ರವಿಸುವ ದೆಸೆಯಿಂದ ಕ್ರಮವಾದ ಆಹಾರದ ಪರಿವರ್ತನಕ್ಕೆ ಆತಂಕವಾಗಿ ಸಂಭವಿಸುವ ಅಜೀರ್ಣವು ವಿದಗ್ಧಾಜೀರ್ಣ, ಮತ್ತು ಕಣಿಯದಲ್ಲಿ (1ನೇ ಭಾಗದ II-138 ನೋಡಿ) ಸಂಗ್ರಹವಾಗುವ ಕಾರರಸವು ಆಹಾರರಸದೊಂದಿಗೆ ಅನ್ನನಾಳದಲ್ಲಿ, ವಿಶೇಷವಾಗಿ ಗ್ರಹಣೀಯಲ್ಲಿ, ಕೂಡುವದು ಅತಿಯಾದ್ದರಿಂದ, ಅಥವಾ ಆಹಾರದೋಷದಿಂದ, ಆಮ-ಪಕ್ವಾಶಯಗಳಲ್ಲಿರುವ ಸಮಾನವಾಯು ಕೋಪಗೊಂಡು ಕ್ರಮವಾದ ಪಚನಕ್ಕೆ ಅಡ್ಡಿಮಾಡುವದರಿಂದ ಉಂಟಾಗುವ ಅಜೀರ್ಣಗಳು ವಿಷ್ಟಬ್ಧಾಜೀರ್ಣ ಮತ್ತು ರಸಶೇಷಾಜೀರ್ಣ.

ಅಮ್ಲಪಿತ್ತವು ದುಷ್ಟವಾದ ಅಗ್ನಿಯೊಂದಿಗೆ ಪಿತ್ತ ಸೇರಿಕೊಳ್ಳುವದರಿಂದ ಉತ್ಪನ್ನವಾಗುವ ರೋಗಗಳೊಳಗೆ ಒಂದೆಂತ ಚ. ಹೇಳಿದ್ದಾನೆ (ಪು. 658). ಪಾಶ್ಚಾತ್ಯವೈದ್ಯದಲ್ಲಿ ಸಹ ಅದು ಅಜೀರ್ಣ (Dyspepsia)ದ ಒಂದು ಭೇದವಾಗಿ ವರ್ಣಿಸಲ್ಪಟ್ಟದೆ. ಆದರೆ ಸಾಧಾರಣವಾದ ಅಗ್ನಿಮಾಂದ್ಯಾಜೀರ್ಣಗಳಿಗೂ ಅಮ್ಲಪಿತ್ತಕ್ಕೂ ಲಕ್ಷಣಗಳಲ್ಲಿಯೂ ಚಿಕಿತ್ಸಾಕ್ರಮದಲ್ಲಿಯೂ ಬಹಳ ಭೇದವಿರುವದರಿಂದ, ಅಮ್ಲಪಿತ್ತದ ಚಿಕಿತ್ಸೆಯನ್ನು ಆಯುರ್ವೇದದಲ್ಲಿ ಪ್ರತ್ಯೇಕವಾಗಿ ವರ್ಣಿಸುವ ವಾಡಿಕೆ ಹೆಚ್ಚು.

## ಅಜೀರ್ಣಕ್ಕೆ ಕಾರಣವಾದ ದ್ರವ್ಯವಿಶೇಷಗಳಿಗೆ ತಕ್ಕ ಪರಿಹಾರವಿಶೇಷಗಳನ್ನು ತೋರಿಸುವ ಪಟ್ಟಿ.

| ಅಜೀರ್ಣಕ್ಕೆ ಕಾರಣವಾದ ದ್ರವ್ಯವಿಶೇಷ | ತಕ್ಕ ಪರಿಹಾರ (ಪಾಚನ) ದ್ರವ್ಯ |
|---|---|
| ಅಕ್ಕಿಗಳು — | ಹಾಲಿನ ನೀರು |
| ಅತ್ತಿಹಣ್ಣು — | ತಣ್ಣೀರು |
| ಅವಲಕ್ಕಿ — | ಹಿಪ್ಪಲಿ ಮತ್ತು ಓಮ |
| ಅಶ್ವತ್ಥದ ಹಣ್ಣು — | ತಣ್ಣೀರು |
| ಆಮೆಯ ಮಾಂಸ — | ಯವಕ್ಷಾರ |
| ಇಪ್ಪೆಹಣ್ಣು — | ಕಹಿಬೇವಿನ ಬೀಜವನ್ನು ತುಪ್ಪದಲ್ಲಿ ಅಥವಾ ಮಜ್ಜಿಗೆಯಲ್ಲಿ ಕುಡಿಯುವದು |
| ಈಚಲ ಹಣ್ಣು — | ,, ,, |
| ಉದ್ದು — | ಉಮ್ಮತ್ತದ ಫಲ |
| ಉಪ್ಪು — | ಅಕ್ಕಚ್ಚಿನ ನೀರು |
| ಉಷ್ಣ — | ಶೀತ |
| ಎಮ್ಮೆಮಜ್ಜಿಗೆ — | ಸೈಂಧವಲವಣ |
| ಎಮ್ಮೆಮೊಸರು — | ಶಂಖಭಸ್ಮ |
| ಎಳ್ಳೆಣ್ಣೆ — | ಹುಳಿಗಂಜಿನೀರು |
| ಕಂಗು (ನವಣೆ ಧಾನ್ಯ) — | ಮೊಸರನೀರು |
| ಕಕ್ಕೆಕಾಯಿ — | ಇಪ್ಪೆಹಣ್ಣಿನ ಎದುರಿಗ ಬರೆದದ್ದು |
| ಕಡಲೆ — | ಉಮ್ಮತ್ತದ ಫಲ |
| ಕಬ್ಬು — | ಶುಂಠಿರಸ |
| ಕಲ್ಲುಸಕ್ಕರೆ — | ಶುಂಠಿ |
| ಕೃಶರಾ (ಕಿಚಡಿ) — | ಸೈಂಧವಲವಣ |
| ಕ್ಷಾರಗಳು — | ಹುಳಿಗಳು |
| ಖರ್ಜೂರ — | ಶುಂಠಿ, ಭದ್ರಮುಷ್ಟಿ |
| ಗೆಣಸು (ಆಲುಕ) — | ಅಕ್ಕಚ್ಚು |
| ಗೋಧಿ — | ಉಮ್ಮತ್ತದ ಫಲ |
| ಗೋದಿರೊಟ್ಟಿ (ಕರಿದ) — | ಹಿಪ್ಪಲಿಮೂಲ |
| ಚಕ್ಕೋತಸೊಪ್ಪು — | ಖದಿರೆತಿರುಳಿನ ಕಷಾಯ |
| ತಾಳೇಹಣ್ಣಿನ ಬೀಜ — | ಅಕ್ಕಿ (ತಂಡುಲ) |
| ತುಪ್ಪ — | ದೊಡ್ಡ ಮೊದಲಾದ ಹುಳಿ |
| ತೆಂಗಿನಕಾಯಿ — | ಅಕ್ಕಿ (ತಂಡುಲ) |
| ದನದ ಮಜ್ಜಿಗೆ — | ಸುಖೋಷ್ಣವಾದ ಮಂಡ (ಗಂಜನೀರು) |

| ಅಜೀರ್ಣಕ್ಕೆ ಕಾರಣವಾದ ದ್ರವ್ಯವಿಶೇಷ | ತಕ್ಕ ಪರಿಹಾರ (ಪಾಚನ) ದ್ರವ್ಯ |
|---|---|
| ನವಿಲಿನ ಮಾಂಸ — | ಪಾರಿವಾಳದ ಮಾಂಸಕ್ಕೆ ಎದುರು ಬರೆದದ್ದೇ |
| ನೀರಿನ ಅಜೀರ್ಣ — | ಬೆಳ್ಳಿ ಅಥವಾ ಭಂಗಾರವನ್ನು ಏಳು ಸರ್ತಿ ಕಾಯಿಸಿ ಅದ್ದಿದ ನೀರು, ಭದ್ರಮುಷ್ಟಿ ಯುಕ್ತವಾದ ಜೇನು ವಿಶೇಷವಾಗಿ |
| ಪಡುವಲಕಾಯಿ — | ಮುಳ್ಳು (ಅಥವಾ ಕೈ) ಹರವೆಸೊಪ್ಪು ಮತ್ತು ಸಾಸುವೆಸೊಪ್ಪು |
| ಪರೂಷಕ — | ಇಪ್ಪೆಹಣ್ಣಿನ ಎದುರು ಬರೆದದ್ದೇ |
| ಪಾಯಸ — | ಹೆಸರುಸಾರುಗಳು |
| ಪಾರಿವಾಳದ ಮಾಂಸ — | ಕಾಶದರ್ಭೆಯ ಬೇರನ್ನು ನೀರಿನಿಂದ ಅರೆದು ಕುಡಿಯುವದು |
| ಬಟಾಣಿ — | ಉಮ್ಮತ್ತದ ಫಲ. |
| ಬದನೆ — | ಪಡುವಲಕಾಯಿ ಎದುರು ಬರೆದದ್ದೇ |
| ಬಸಲೆ (ಬಚ್ಚಲಸೊಪ್ಪು) — | ,, ,, |
| ಬಸುರಿಹಣ್ಣು — | ಹಳೇ ನೀರು |
| ಬಾಳೆಹಣ್ಣು — | ತುಪ್ಪ |
| ಬಿದಿರ ಮೊಳಕೆ — | ಪಡುವಲಕಾಯಿ ಎದುರು ಬರೆದದ್ದೇ |
| ಬಿಲ್ವಪತ್ರಕಾಯಿ — | ಇಪ್ಪೆಹಣ್ಣಿನ ಎದುರು ಬರೆದದ್ದೇ |
| ಬಿಳೇ ಸಕ್ಕರೆ — | ಭದ್ರಮುಷ್ಟಿ |
| ಬಿಳೇಸಾಸುವೆಸೊಪ್ಪು — | ಖದಿರೆತಿರುಳಿನ ಕಷಾಯ |
| ಬೇಲದಹಣ್ಣು — | ಇಪ್ಪೆಹಣ್ಣಿನ ಎದುರು ಬರೆದದ್ದೇ |
| ಬೇಳೆಧಾನ್ಯ (ಮೈದಲ) — | (ಹುಳಿ) ಗಂಜಿನೀರು |
| ಮಂಡಿಗೆ ಭಕ್ಷ್ಯ — | ಹಿಪ್ಪಲಿಮೂಲ |
| ಮಾಂಸ — | ಮಾವಿನ ಬೀಜ |

| ಅಜೀರ್ಣಕ್ಕೆ ಕಾರಣವಾದ ದ್ರವ್ಯವಿಶೇಷ. | ತಕ್ಕ ಪರಿಹಾರ (ಪಾಚನ) ದ್ರವ್ಯ | ಅಜೀರ್ಣಕ್ಕೆ ಕಾರಣವಾದ ದ್ರವ್ಯವಿಶೇಷ | ತಕ್ಕ ಪರಿಹಾರ (ಪಾಚನ) ದ್ರವ್ಯ |
|---|---|---|---|
| ಮಾವಿನಹಣ್ಣು — | ಹಾಲು | ಸಾಮೆ ಅಕ್ಕಿ — | ಮೊಸರನೀರು |
| ಮೀನಿನ ಮಾಂಸ— | ಹುಳಿಗಂಜಿನೀರು ಮತ್ತು ಮಾವಿನ ಬೀಜ | ಸೂರಣ ಗಡ್ಡೆ — | ಬೆಲ್ಲ |
| | | ಸೋರೆಕಾಯಿ — | 'ಪಡುವಲಕಾಯಿ' ಎದುರು ಬರೆದದ್ದೇ |
| ಮೀನು (ಕೆಂಡದಲ್ಲಿ ಕಾಯಿಸಲ್ಪಟ್ಟ)— | ಮಾಂಸ ಮತ್ತು ಎಳೇ (ಹಣ್ಣಾಗದ) ಮಾವಿನ ಕಾಯಿ | ಹಲಸಿನಹಣ್ಣು * — | ಬಾಳೆಹಣ್ಣು |
| | | ಹಸಿಶುಂಠಿ— | ತುಪ್ಪ |
| ಮಾದಲಂಗಿ — | 'ಪಡುವಲಕಾಯಿ' ಎದುರಿಗೆ ಬರೆದದ್ದೇ | ಹಳೇ ಮದ್ಯ — | ಕಾವಿಕಲ್ಲು (ಗೈರಿಕ), ಚಂದನ |
| ಮೊರವೆಬೀಜ — | ಅಣಿಲೆಕಾಯಿ | ಹಾಗಲಕಾಯಿ— | 'ಪಡುವಲಕಾಯಿ' ಎದುರು ಬರೆದದ್ದೇ |
| ರಸಾಲ— | ತ್ರಿಕಟು | | |
| ಲಡ್ಡು ಅಥವಾ ಲಾಡು— | ಹಿಪ್ಪಲಿಮೂಲ | ಹಾಲು— | ಮಜ್ಜಿಗೆ |
| ಶಾಕಗಳು(ಪಲ್ಯಕಾಯಿ)— | ಎಳ್ಳಿನ ದಂಟುಗಳ ಕ್ಷಾರ | ಹಿಟ್ಟಿನ ಅನ್ನ — | ತಣ್ಣೀರು |
| ಶೀತ— | ಉಷ್ಣ | ಹುರುಳಿ — | ಮೊಸರನೀರು, ಎಳ್ಳೆಣ್ಣೆ |
| ಷಷ್ಟಿಕ ಅಕ್ಕಿ— | ಮೊಸರನೀರು | ಹೆಸರು— | ಉಮ್ಮತ್ತದ ಫಲ |
| ಸವತೆಕಾಯಿ — | ಗೋಧಿ | | (ಭಾ ಪ್ರ. 350-51) |

* ಇದಕ್ಕೆ ಶುಂಠಿಪರಿಹಾರ ಎಂತ ಊರಲ್ಲಿ ಪ್ರಸಿದ್ಧಿ ಇಲ್ಲಿ 'ಫಲಂ ಕನ್ದಲಸಂಭವಮ್' ಎಂತ ಉಂಟು 'ಕಂದಲ' ಎಂಬ ಹೆಸರು ಶುಂಠಿಗೂ ಇದ್ದಾಗ್ಯೂ, 'ಕಂದಲದ' ಫಲ ಎಂತ ಹೇಳಿದ್ದರಿಂದ ಬಾಳೆಹಣ್ಣೆಂತಲೇ ಅರ್ಥವಾಗುತ್ತದೆ

ಸಕಲಗುಣಯುತಾಯುರ್ವೇದಸಾರಸ್ಯ ಭಾಗೇ ।
ಭುವನಗಣವಿಭಕ್ತೇ ಪೂರ್ವಖಣ್ಡೋ ದ್ವಿತೀಯೇ ॥
ನಿಖಿಲನರವರಾಣಾಂ ಸತ್ವಬುದ್ಧಿಪ್ರಭಾನಾಮ್ ।
ಹೃದಯಕಮಲವಾಸಾಯಾಚ್ಯುತಾಯಾರ್ಪಿತೋಽಯಮ್ ॥

ಸಮಸ್ತ ಗುಣಗಳಿಂದ ಕೂಡಿದ ಆಯುರ್ವೇದಸಾರ ಎಂಬ ಗ್ರಂಥದ ಎರಡನೇ ಭಾಗದ ಮೂರು ಖಂಡಗಳೊಳಗೆ ಪೂರ್ವಖಂಡವಾದ ಇದು ಸತ್ವಗುಣದ ಮತ್ತು ಬುದ್ಧಿಯ ಪ್ರಭೆಯುಳ್ಳವರಾದ ಪುರುಷಶ್ರೇಷ್ಠರುಗಳ ಹೃದಯಕಮಲದಲ್ಲಿ ನೆಲಸಿರುವ ನಾಶರಹಿತನಾದ ಪರಮಾತ್ಮನಿಗೆ ಅರ್ಪಿಸಲ್ಪಟ್ಟಿದೆ.



# ಆಯುರ್ವೇದಸಾರ ದ್ವಿತೀಯ ಭಾಗ–ಪೂರ್ವಖಂಡದ ವಿಷಯಗಳ ಅಕಾರಾದಿ ಸೂಚೀಪತ್ರ.